# “ವಿಷ್ಣುಶರ್ಮರ ಪಂಚತಂತ್ರದಲ್ಲಿ ಶೈಕ್ಷಣಿಕ ಮನೋವಿಜ್ಞಾನ ಮತ್ತು ವ್ಯಕ್ತಿತ್ವ ನಿರ್ಮಾಣ ಕಲೆ- ಒಂದು ವಿಮರ್ಶಾತ್ಮಕ ಅಧ್ಯಯನ”

## विष्णुशर्मणः पञ्चतन्त्रे शैक्षणिकमनोविज्ञानं तथा व्यक्तित्वनिर्माणकला – एकं विमर्शात्मकम् अध्ययनम् ।

Ph.D. ಪದವಿಗಾಗಿ ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ

ಸಂಶೋಧನಾ ಮಹಾಪ್ರಬಂಧ




ಸಂಶೋಧಕರು :

**ನಾಗರಾಜ ಎನ್. ಡಿ.**

ಶ್ರೀ ದುರ್ಗಾ ಸ್ನಾತಕೋತ್ತರ ಸಂಸ್ಕೃತ ಅಧ್ಯಯನ

ಮತ್ತು ಸಂಶೋಧನಾ ಕೇಂದ್ರ

ಕಟೀಲು–574148, ದಕ್ಷಿಣ ಕನ್ನಡ ಜಿಲ್ಲೆ

ಮಂಗಳೂರು ವಿಶ್ವವಿದ್ಯಾನಿಲಯ

ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು :

**ಡಾ| ನಾಗರಾಜ ಬಿ.**

ಶ್ರೀ ದುರ್ಗಾ ಸ್ನಾತಕೋತ್ತರ ಸಂಸ್ಕೃತ ಅಧ್ಯಯನ

ಮತ್ತು ಸಂಶೋಧನಾ ಕೇಂದ್ರ

ಕಟೀಲು–574148, ದಕ್ಷಿಣ ಕನ್ನಡ ಜಿಲ್ಲೆ

ಮಂಗಳೂರು ವಿಶ್ವವಿದ್ಯಾನಿಲಯ






**ಶ್ರೀ ದುರ್ಗಾ ಸ್ನಾತಕೋತ್ತರ ಸಂಸ್ಕೃತ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ**

ಕಟೀಲು–574148, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ವಿಶ್ವವಿದ್ಯಾನಿಲಯ.

**2021**

# “ವಿಷ್ಣುಶರ್ಮರ ಪಂಚತಂತ್ರದಲ್ಲಿ ಶೈಕ್ಷಣಿಕ ಮನೋವಿಜ್ಞಾನ ಮತ್ತು ವ್ಯಕ್ತಿತ್ವ ನಿರ್ಮಾಣ ಕಲೆ– ಒಂದು ವಿಮರ್ಶಾತ್ಮಕ ಅಧ್ಯಯನ”

## “ विष्णुशर्मणः पञ्चतन्त्रे शैक्षणिकमनोविज्ञानं तथा व्यक्तित्वनिर्माणकला – एकं विमर्शात्मकमध्ययनम् ।”

Ph.D. ಪದವಿಗಾಗಿ ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಸಂಶೋಧನಾ ಮಹಾಪ್ರಬಂಧ

**ನಾಗರಾಜ ಎನ್. ಡಿ.**
ಸಂಶೋಧಕರು
**ಶ್ರೀ ದುರ್ಗಾ ಸ್ನಾತಕೋತ್ತರ ಸಂಸ್ಕೃತ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ**
**ಕಟೀಲು–574148,** ದಕ್ಷಿಣ ಕನ್ನಡ ಜಿಲ್ಲೆ
ಮಂಗಳೂರು ವಿಶ್ವವಿದ್ಯಾನಿಲಯ

**ಡಾ। ನಾಗರಾಜ ಬಿ.**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
**ಶ್ರೀ ದುರ್ಗಾ ಸ್ನಾತಕೋತ್ತರ ಸಂಸ್ಕೃತ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ**
**ಕಟೀಲು–574148,** ದಕ್ಷಿಣ ಕನ್ನಡ ಜಿಲ್ಲೆ
ಮಂಗಳೂರು ವಿಶ್ವವಿದ್ಯಾನಿಲಯ




**2021**

**ಶ್ರೀ ದುರ್ಗಾ ಸ್ನಾತಕೋತ್ತರ ಸಂಸ್ಕೃತ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ**
**ಕಟೀಲು–574148,** ದಕ್ಷಿಣ ಕನ್ನಡ ಜಿಲ್ಲೆ
ಮಂಗಳೂರು ವಿಶ್ವವಿದ್ಯಾನಿಲಯ.



ಪೂಜ್ಯ ಮಾತಾಪಿತರಿಗೆ ಅರ್ಪಣೆ



सर्वतीर्थमयी माता सर्वदेवमयः पिता ।

मातरं पितरं तस्मात् सर्वयत्नेन पूजयेत्॥

–पद्मपुराण सृष्टिखंड – 47–11

# ಘೋಷಣಾ ಪ್ರಮಾಣ ಪತ್ರ

**"ವಿಷ್ಣುಶರ್ಮರ ಪಂಚತಂತ್ರದಲ್ಲಿ ಶೈಕ್ಷಣಿಕ ಮನೋವಿಜ್ಞಾನ ಮತ್ತು ವ್ಯಕ್ತಿತ್ವ ನಿರ್ಮಾಣ ಕಲೆ- ಒಂದು ವಿಮರ್ಶಾತ್ಮಕ ಅಧ್ಯಯನ"** ಎಂಬ ವಿಷಯವನ್ನು ಕುರಿತು ಈ ಸಂಶೋಧನಾ ಮಹಾಪ್ರಬಂಧವನ್ನು... ಶ್ರೀ ದುರ್ಗಾ ಸ್ನಾತಕೋತ್ತರ ಸಂಸ್ಕೃತ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ಕಟೀಲು-574148, ದಕ್ಷಿಣ ಕನ್ನಡ ಜಿಲ್ಲೆ. (ಮಂಗಳೂರು ವಿಶ್ವವಿದ್ಯಾಲಯ)ದಲ್ಲಿ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸುತ್ತಿರುವ... ಡಾ। ನಾಗರಾಜ ಬಿ. ಇವರ ಸಮರ್ಥ ಮಾರ್ಗದರ್ಶನದಲ್ಲಿ Ph.D. ಪದವಿಗಾಗಿ ಸಿದ್ಧಪಡಿಸಿದ್ದೇನೆಂದು ಈ ಮೂಲಕ ಪ್ರಾಮಾಣೀಕರಿಸಿ ಘೋಷಿಸುತ್ತಿದ್ದೇನೆ.

ಈ ನನ್ನ ಮಹಾಪ್ರಬಂಧದ ವಿಷಯವನ್ನು ನಾನು ಇದುವರೆಗೂ, ಇಡಿಯಾಗಿ ಅಥವಾ ಬಿಡಿಯಾಗಿ ಯಾವುದೇ ಪದವಿಗಾಗಲಿ, ಡಿಪ್ಲೊಮಾಕ್ಕಾಗಲೀ ಇಲ್ಲವೇ ಅನ್ಯರೀತಿಯಿಂದಾಗಲೀ ಬಳಸಿಕೊಂಡಿರುವುದಿಲ್ಲ ಎಂಬುದನ್ನೂ ಈ ಮೂಲಕ ಪ್ರಮಾಣೀಕರಿಸಿ ಘೋಷಿಸುತ್ತೇನೆ.

**ನಾಗರಾಜ ಎನ್. ಡಿ.**
ಸಂಶೋಧನಾರ್ಥಿ
ಶ್ರೀ ದುರ್ಗಾ ಸ್ನಾತಕೋತ್ತರ ಸಂಸ್ಕೃತ
ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ಕಟೀಲು-574148
ದ.ಕ. ಜಿಲ್ಲೆ, ಮಂಗಳೂರು ವಿಶ್ವವಿದ್ಯಾನಿಲಯ.

ದಿನಾಂಕ:

# ಮಾರ್ಗದರ್ಶಕರ ಶಿಫಾರಸು ಪತ್ರ

**"ವಿಷ್ಣುಶರ್ಮರ ಪಂಚತಂತ್ರದಲ್ಲಿ ಶೈಕ್ಷಣಿಕ ಮನೋವಿಜ್ಞಾನ ಮತ್ತು ವ್ಯಕ್ತಿತ್ವ ನಿರ್ಮಾಣ ಕಲೆ–** ಒಂದು ವಿಮರ್ಶಾತ್ಮಕ ಅಧ್ಯಯನ" ಎಂಬ ವಿಷಯವನ್ನು ಕುರಿತ ಈ ಸಂಶೋಧನಾ ಮಹಾಪ್ರಬಂಧವನ್ನು ಶ್ರೀ ದುರ್ಗಾ ಸ್ನಾತಕೋತ್ತರ ಸಂಸ್ಕೃತ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, **ಕಟೀಲು–574148,** ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ವಿಶ್ವವಿದ್ಯಾಲಯ ಇಲ್ಲಿ ಪೂರ್ಣಕಾಲಿಕ ಸಂಶೋಧನಾರ್ಥಿಯಾಗಿರುವ **ನಾಗರಾಜ ಎನ್.ಡಿ.** ಇವರು Ph.D. ಪದವಿಗಾಗಿ ನನ್ನ ಸೂಕ್ತ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆಂದು ನಾನು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಹಾಗೂ ಪ್ರಸ್ತುತ ವಿಷಯವನ್ನು ಇದುವರೆಗೂ, ಇಡಿಯಾಗಲೀ, ಬಿಡಿಯಾಗಲೀ, ಯಾವುದೇ ಪದವಿ–ಡಿಪ್ಲೊಮಾ ಅಥವಾ ಅನ್ಯತರಹ ಬಳಸಲಾಗಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

**ಡಾ। ನಾಗರಾಜ ಬಿ.**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು,
ಶ್ರೀ ದುರ್ಗಾ ಸ್ನಾತಕೋತ್ತರ ಸಂಸ್ಕೃತ
ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ಕಟೀಲು–574148
ದ.ಕ. ಜಿಲ್ಲೆ, ಮಂಗಳೂರು ವಿಶ್ವವಿದ್ಯಾನಿಲಯ.

ದಿನಾಂಕ:

# A TRIBUTE TO THE UNKNOWN TEACHER

- a Poem by Henry Van Dyke (1852 - 1933)

*I sing the praise of the **Unknown Teacher.***

*Great generals win campaigns, but it is the **unknown soldier who wins the war.***

*Famous educators plan new system of pedagogy, but it is the **Unknown Teacher who delivers and guides the young.***

*He lives in obscurity and contents with hardship. For him no trumpets blare, no chariots wait, no golden decorations are decreed.*

*He keeps the watch along the border of darkness and leads the attack on the trenches of ignorance and folly.*

***Patient in his duty. He strives to conquer the evil powers which are the enemies of youth. He awakes sleeping spirits.***

*He quickens the indolent, encourages the eager and steadies the unstable.*

*He communicates his own joy in learning and shares with boys and girls the best treasures of his mind.*

*He lights many candles which in later years will shine back to cheer him. This is his reward.*

***Knowledge may be gained from books, but the love of knowledge is transmitted only by personal contact.***

*No one has deserved better of Republic than the Unknown Teacher,*
*No one is more worthy to be enrolled in a democratic aristocracy, **" King of himself and servant of mankind ".***

# ಪರಿವಿಡಿ

# ಮಂಗಲಾಚರಣೆ ಮತ್ತು ಮೊದಲ ಮಾತು

दिक्कालाद्यानवच्छिन्नानन्तचिन्मात्रमूर्तये ।

स्वानुभूत्येकनामाय नमः शान्ताय तेजसे ॥[1]

ಅಷ್ಟದಿಕ್ಕುಗಳು ವ್ಯಾಪಿಸಿರುವ ಪ್ರದೇಶಗಳಿಂದಾಗಲೀ, ಭೂತ, ವರ್ತಮಾನ, ಭವಿಷ್ಯತ್ ಕಾಲಗಳಿಂದಾಗಲೀ ಪರಿಗಣಿಸಲಾಗದ ಅಪರಿಮಿತ ಮತ್ತು ಜ್ಞಾನಸ್ವರೂಪಿಯಾದ ಪರಮಾತ್ಮನಿಗೆ ನಮಸ್ಕಾರವು. ಅವನನ್ನು ಸ್ವಾನುಭವದಿಂದ ಮಾತ್ರ ಅರಿಯಲು ಸಾಧ್ಯ. ಎಣಿಸಲಾರದಷ್ಟು ನಕ್ಷತ್ರಗಳು ಆಗಸದಲ್ಲಿದ್ದರೂ ಭರವಸೆಯ ಬೆಳಕನ್ನು ಧ್ರುವತಾರೆಯಷ್ಟೇ ಬೀರಲು ಸಾಧ್ಯ. ಅದೇರೀತಿ ನಮ್ಮ ಸುತ್ತಲೂ ಇರುವ ಬಂಧುಬಳಗದ ನೆಂಟರು ಎಂಬ ಸ್ವಾರ್ಥದ ಜೀವನದಲ್ಲಿ ಬೆಳಕು ತುಂಬಿ ಮುನ್ನಡೆಸುವವನು ಸರ್ವಶಕ್ತನಾದ ಭಗವಂತನೊಬ್ಬನೆ. ಈ ಕಾರಣದಿಂದಲೇ ಹೇಳುವುದು तेनविना तृणमपि न चलति ಅಂದರೆ, ಆ ಭಗವಂತನ ಪ್ರೇರಣೆಯಿಲ್ಲದಿದ್ದರೆ ಒಂದು ಹುಲ್ಲುಕಡ್ಡಿಯೂ ಚಲಿಸಲಾರದು. ಹೀಗೆ ಸೃಷ್ಟಿಯ ಅಣುರೇಣುತೃಣಕಾಷ್ಟಗಳಲ್ಲಿಯೂ ಪ್ರತಿಷ್ಠಿತನಾದ, ಸಕಲಜೀವಿಗಳಲ್ಲೂ ಜೀವಾತ್ಮ ರೂಪದಲ್ಲಿ ಚೇತನ ಶಕ್ತಿಯಾಗಿರುವ ದೇವದೇವನನ್ನು ಸ್ಮರಣೆ ಮಾಡಿಕೊಳ್ಳುತ್ತಾ, ಮಾವಿನಕೆರೆ ಶ್ರೀರಂಗನಾಥ ಸ್ವಾಮಿಯ ಅನುಗ್ರಹ ಹಾಗೂ ಶ್ರೀ ಕಟೀಲು ದುರ್ಗಾಪರಮೇಶ್ವರಿ ದೇವಿಯ ಕೃಪಾಕಟಾಕ್ಷದಿಂದ" ಪ್ರಯತ್ನವೇ ಪರಮೇಶ್ವರ, ಪರಿಶ್ರಮವೇ ಪರಮಪೂಜೆ' ಎಂದು ನಂಬಿ, ಈ ಒಂದು ಸಂಶೋಧನಾ ಮಹಾಪ್ರಬಂಧವನ್ನು ರಚಿಸಲು ಭಗವತ್ಪ್ರೇರಣೆ ಉಂಟಾಯಿತು. ಕೃಪೆಮಾಡಿದ ಶ್ರೀಹರಿ ದೇವತಾ ಗುರುಚರಣಾರವಿಂದಗಳಿಗೆ ನನ್ನ ಭಕ್ತಿಪೂರ್ವಕ ಪ್ರಣಾಮಗಳು.

जननी जन्मभूमिश्च स्वर्गादपि गरीयसी [2] ತಾಯಿ ಮತ್ತು ತಾಯ್ನಾಡು ಸ್ವರ್ಗಕ್ಕಿಂತ ಮಿಗಿಲಾದದ್ದು. ಸನಾತನ ಸಂಸ್ಕೃತಿಯ ಬೀಡಾದ ಈ ಭಾರತದಲ್ಲಿ ಜನ್ಮ ತಾಳುವ ಸೌಭಾಗ್ಯವನ್ನು ಕರುಣಿಸಿ, ಸತ್ಕುಲಪ್ರಸೂತನನ್ನಾಗಿಸಿ, ಜನನದಾರಭ್ಯ ಕಾಲಕಾಲಕ್ಕೆ ಒದಗಿಸಬೇಕಾದ ಉತ್ತಮ ಸಂಸ್ಕಾರಗಳನ್ನು ನೀಡಿ ವಿದ್ಯಾಬುದ್ಧಿ ಬೆಳೆಸಿ, ಇಂದಿನವರೆಗೂ ಪ್ರೀತಿವಾತ್ಸಲ್ಯಗಳಿಂದ ನನ್ನ ಸರ್ವತೋಮುಖ ಬೆಳವಣಿಗೆಗೆ ಪ್ರೋತ್ಸಾಹಿಸಿ ಸಲಹಿದ, ವಿಶ್ರಾಂತ ಶಿಕ್ಷಕರಾದ, ನನ್ನಲ್ಲೂ ಶಿಕ್ಷಕವೃತ್ತಿಯ ಪ್ರೀತಿಯನ್ನು ಬೆಳೆಸಿ ಬೆಂಬಲಿಸಿದ ನನ್ನ ಪೂಜ್ಯ ತಂದೆ ಕೀರ್ತಿಶೇಷ ಶ್ರೀ ಎನ್. ಡಿ. ಅನಂತರಾಮಯ್ಯನವರಿಗೆ ಮತ್ತು ಮಾತೃಶ್ರೀ ಲಲಿತಮ್ಮನವರಿಗೆ ಪ್ರಣಾಮಗಳು. ಅವರು ಕೊಡಮಾಡಿದ ಸಂಸ್ಕಾರದ ಫಲವೇ ಈ ಮಹಾಪ್ರಬಂಧ ರಚಿಸಲು ಸ್ಫೂರ್ತಿಯಾಗಿದೆ.

ಭಾರತದ ಪ್ರತಿಷ್ಠೆ ಎರಡು ಮುಖ್ಯ ವಿಚಾರಗಳಲ್ಲಿದೆ– 'ಸಂಸ್ಕೃತ ಮತ್ತು ಸಂಸ್ಕೃತಿ'. ಸಂಸ್ಕೃತದ ತಾಯಿಬೇರು ಸನಾತನ ಸಂಸ್ಕೃತಿಯಾಗಿದೆ. ನಮ್ಮ ಭಾರತೀಯ ಸಂಸ್ಕೃತಿಯು ಪ್ರಾಚೀನ ಕಾಲದಿಂದ ಪ್ರಸ್ತುತದವರೆಗೂ

---

1. **ಭರ್ತೃಹರಿಯ ನೀತಿಶತಕ,** ಶ್ಲೋ–1.
2. **ಒಂದು ಪ್ರಸಿದ್ಧ ಸಂಸ್ಕೃತ ಸಂಗ್ರಹೀತ ಶ್ಲೋಕದ ಅಂತ್ಯದ ಅರ್ಧ ಭಾಗವಾಗಿದ್ದು, ನೇಪಾಳದ ರಾಷ್ಟ್ರೀಯ ಧ್ಯೇಯ ವಾಕ್ಯವಾಗಿದೆ. ಈ ಶ್ಲೋಕವು ವಾಲ್ಮೀಕಿ ರಾಮಾಯಣದ ಕೆಲವು ಪಾಂಡುಲಿಪಿಗಳಲ್ಲಿ ಲಭ್ಯವಾಗಿರುತ್ತದೆ.** अपि स्वर्णमयी लङ्का न मे लक्ष्मण रोचते । जननी जन्मभूमिश्च स्वर्गादपि गरीयसी ॥

ಅವಿಚ್ಛಿನ್ನವಾಗಿ, ಅವ್ಯಾಹತವಾಗಿ ಹರಿದು ಬರಲು ಸಂಸ್ಕೃತವೇ ಒಂದು ಅದಮ್ಯ ಚೇತನವಾಗಿದೆ.

भाषासु मुख्या मधुरा दिव्या गीर्वाणभारती ।

तस्माद्धि काव्यम् मधुरं तस्मादपि सुभाषितम् ॥[3]

ಭಾಷೆಗಳಲ್ಲಿ ಮುಖ್ಯವೂ, ಮಧುರವೂ ದಿವ್ಯವೂ ಆದುದು ಸಂಸ್ಕೃತ ಭಾಷೆ. ಅದರಿಂದ ಆ ಭಾಷೆಯ ಕಾವ್ಯ ಮಧುರ. ಅದಕ್ಕಿಂತಲೂ ಸುಭಾಷಿತ ಇನ್ನೂ ಮಧುರ. ಒಬ್ಬ ವ್ಯಕ್ತಿ ಮಾನಸಿಕವಾಗಿ, ಬೌದ್ಧಿಕವಾಗಿ, ಶ್ರದ್ಧಾವಂತನಾಗಿ ಸಕಲಗುಣ ಸಂಪನ್ನನಾಗಬೇಕಾದರೆ ಸಂಸ್ಕೃತ ಬೇಕೇಬೇಕು. ಕಾರಣ ಸಂಸ್ಕೃತದಲ್ಲಿ ಸಂಸ್ಕೃತಿ ಅಡಗಿದೆ. ಸರ್ವಸ್ವವನ್ನೂ ತನ್ನಲ್ಲಿ ಅಡಗಿಸಿಕೊಂಡಿರುವ ವಿಶ್ವಕೋಶ. ವೇದ-ವೇದಾಂಗ, ಉಪನಿಷತ್ತು, ಪುರಾಣ, ರಾಮಾಯಣ, ಮಹಾಭಾರತ ಮತ್ತು ಪಂಚತಂತ್ರ ಇವುಗಳಿರುವುದು ಸಂಸ್ಕೃತದಲ್ಲಿ. ಇದು ಬಹುಭಾಷೆಗಳ ಜನನಿ. ಸಂಸ್ಕೃತವು ಸುಲಲಿತವಾದ, ಸುಮಧುರವಾದ ಮತ್ತು ವಿಶಿಷ್ಟವಾದ ಭಾಷೆ. ಇದರ ಜನನಿ-ಜನ್ಮಭೂಮಿ ಭಾರತ. ಇಲ್ಲಿ ಜನ್ಮಪಡೆದ ನಾವೇ ಧನ್ಯರು.

अज्ञानतिमिरान्धस्य ज्ञानाञ्जनशलाकया ।

चक्षुरुन्मीलितं येन तस्मै श्री गुरवे नमः॥[4]

ಪ್ರಾಥಮಿಕ ಶಾಲೆಯಿಂದ ಸ್ನಾತಕೋತ್ತರ ಪದವಿವರೆಗೂ  ಪೂರ್ವ ಜನ್ಮದ ಸುಕೃತವೆಂಬಂತೆ, ಬಹಳ ಪ್ರತಿಭಾವಂತ ಗುರುವೃಂದ ನನಗೆ ಲಭ್ಯವಾಯಿತು. ಅವರೆಲ್ಲರ ಪ್ರೋತ್ಸಾಹ, ಮಾರ್ಗದರ್ಶನ ನನ್ನ ಬೌದ್ಧಿಕ ಬೆಳವಣಿಗೆಗೆ ಮೂಲ ಕಾರಣ ಹಾಗೂ ನಾನು ಈ ಪ್ರಬಂಧ ರಚನಾ ಕಾರ್ಯದಲ್ಲಿ ತೊಡಗಲು ಪ್ರೇರಕವಾಗಿದೆ. ಪ್ರೌಢಶಾಲಾ ಶಿಕ್ಷಕ ವೃತ್ತಿಯಿಂದ ಪ್ರಾರಂಭಿಸಿ, ಪದವಿಪೂರ್ವಕಾಲೇಜು ಉಪನ್ಯಾಸಕ, ಪ್ರಾಂಶುಪಾಲರವರೆಗೂ ಸುಮಾರು ನಲವತ್ತು ವರ್ಷಗಳ ಬೋಧನಾ ಸೇವೆಯನ್ನು ಸಮರ್ಪಕವಾಗಿ ಸಲ್ಲಿಸಿ ತೃಪ್ತಿಯಿಂದ ನಿವೃತ್ತಿ ಹೊಂದಿದೆನು. ನಂತರದಲ್ಲಿ ಕುವೆಂಪು ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ಸ್ನಾತಕೋತ್ತರ ಪದವಿ ಅಧ್ಯಯನವನ್ನು. ಮಾಡಿದೆನು. ಹೀಗೆ ಅಭ್ಯಾಸ ಮುಂದುವರಿಸಬೇಕೆಂಬ ಹಂಬಲ ಪ್ರೌಢಶಾಲೆಯಲ್ಲಿ ಹಾಗೂ ಪದವಿ ತರಗತಿಯಲ್ಲಿ ಸಂಸ್ಕೃತ ದ್ವಿತೀಯ ಭಾಷೆಯಾಗಿ ವ್ಯಾಸಂಗ ನಡೆಸುತ್ತಿದ್ದಾಗಿನಿಂದಲೂ ನನ್ನ ಗುರುಗಳ ಸ್ಫೂರ್ತಿಯಿಂದ ಅಂಕುರಗೊಂಡಿತ್ತು. ಇನ್ನು ಸಂಸ್ಕೃತ ಸ್ನಾತಕೋತ್ತರ ಪದವಿ ತರಗತಿಯಲ್ಲಿ ನನಗೆ ದೊರಕಿದ  ಸಹೃದಯಿ ಗುರುವೃಂದ  ನಿಜಕ್ಕೂ ಅವಿಸ್ಮರಣೀಯ. ನನಗೆ ಯಾವ ಮಟ್ಟದ ಪ್ರೋತ್ಸಾಹ ದೊರಕಿತೆಂದರೆ, ಸಂಸ್ಕೃತ ಭಾಷೆಯನ್ನೂ ಪ್ರೀತಿಯಿಂದ ಕಲಿಸಿದರು ಹಾಗೆಯೇ ನೀವು ಏನಾದರೊಂದು ನಿಮ್ಮ ಆಸಕ್ತಿಯ ವಿಷಯ ಆಯ್ಕೆ ಮಾಡಿಕೊಂಡು ಒಂದು ಸಂಶೋಧನಾ ಮಹಾಪ್ರಬಂಧವನ್ನು ಏಕೆ

3. **ಸುಭಾಷಿತಮಂಜರೀ,** ಸುಭಾಷಿತಪ್ರಶಂಸೆ ಶ್ಲೋ-6, ಪು-2.(2001) ಸುಭಾಷಿತರತ್ನಭಾಂಡಾಗಾರ. ಕ.ಸಾ.ಪ, ಚಾಮರಾಜಪೇಟೆ. ಬೆಂಗಳೂರು-18

4. **ರಂಗನಾಥ ಶರ್ಮಾ,** ಎನ್. ಶ್ರೀಗುರುಪರಂಪರಾಚರಿತಮ್, ಮಂಗಳ ಶ್ಲೋಕಗಳು-ಶ್ಲೋ-6, ಪು-2, ಪ್ರ-ಶ್ರೀಪತಿ, ವ್ಯಾಪಾರಿಗಳು, ಸೊರಬ, ಶಿವಮೊಗ್ಗ ಜಿಲ್ಲೆ, ಆಗಸ್ಟ್ 1969.

ರಚಿಸಬಾರದು ಎಂದು ಬೆಂಬಲಿಸಿ ಆತ್ಮಸ್ಥೈರ್ಯ ತುಂಬುತ್ತಿದ್ದರು. ಅದರ ಫಲವೇ ವಿಷ್ಣುಶರ್ಮ ವಿರಚಿತ ಪಂಚತಂತ್ರ ಕುರಿತು ಒಂದು ವಿಷಯದ ಮೇಲೆ, ಅದರಲ್ಲೂ ನಾನು ಸಲ್ಲಿಸಿದ ಬೋಧನಾ ವೃತ್ತಿಯಲ್ಲಿ ಕಂಡುಕೊಂಡಿದ್ದ ಶೈಕ್ಷಣಿಕ ಮನೋವಿಜ್ಞಾನ ಹಾಗೂ ವ್ಯಕ್ತಿತ್ವ ನಿರ್ಮಾಣದ ಮಹತ್ವದ ಬಗ್ಗೆ ಸಂಶೋಧನಾ ಮಹಾಪ್ರಬಂಧ ಸಿದ್ಧಪಡಿಸಲು ಆಲೋಚನೆ ಉಂಟಾಯಿತು. ಅಷ್ಟೇ ಅಲ್ಲದೆ ಸಂಸ್ಕೃತ ಸ್ನಾತಕೋತ್ತರ ಅಧ್ಯಯನ ನಡೆಸುತ್ತಿದ್ದ ಸಂದರ್ಭದಲ್ಲಿ ನನ್ನ ನೆಚ್ಚಿನ ಗುರುಗಳಾದ ಡಾ. ನಾಗಭೂಷಣ ಐತಾಳರು ಮಂಗಳೂರು ವಿಶ್ವವಿದ್ಯಾಲಯದ ಪರಿಚಯವನ್ನೂ ಮಾಡಿಕೊಟ್ಟು, ಸಂಶೋಧನಾ ಮಹತ್ಕಾರ್ಯಕ್ಕೆ ದಾರಿತೋರಿದುದನ್ನು ಸ್ಮರಿಸದಿದ್ದರೆ ಅಪರಾಧವಾದೀತು. ಶ್ರೀ ದುರ್ಗಾಪರಮೇಶ್ವರಿ ಅಮ್ಮನವರ ಸುಕ್ಷೇತ್ರ ಕಟೀಲಿನಲ್ಲಿರುವ ಶ್ರೀ ದುರ್ಗಾ ಸಂಸ್ಕೃತ ಸ್ನಾತಕೋತ್ತರ ಅಧ್ಯಯನ ಮತ್ತು ಸಂಶೋಧನಾ ಕೇಂದ್ರದಲ್ಲಿ ಪೂರ್ಣಾವಧಿ ಸಂಶೋಧನಾ ವಿದ್ಯಾರ್ಥಿಯಾಗಿ ಆಯ್ಕೆಯೂ ಲಭ್ಯವಾಯಿತು. ಈ ಸಂಸ್ಥೆಯು ಅಧ್ಯಯನಕ್ಕೆ ಬಹಳ ವ್ಯವಸ್ಥಿತವಾಗಿದ್ದು, ಉತ್ತಮ ಸಂಸ್ಕೃತ ಮಾರ್ಗದರ್ಶಿ ಪ್ರಾಧ್ಯಾಪಕರಾದ ಡಾ.ಬಿ. ನಾಗರಾಜರವರು ನನಗೆ ದೊರೆತದ್ದು ನನ್ನ ಸೌಭಾಗ್ಯ ಹಾಗೂ ದೇವಿಯ ಕೃಪಾಕಟಾಕ್ಷ ಎಂದು ಭಾವಿಸುತ್ತೇನೆ. ನಾನು ಆಯ್ಕೆ ಮಾಡಿಕೊಂಡಿರುವ ವಿಷಯವನ್ನು ಅವರೊಡನೆ ಪ್ರಸ್ತಾಪ ಮಾಡಿದಾಗ, "ಬಹಳ ಒಳ್ಳೆಯ ವಿಚಾರ ಆಯ್ಕೆಮಾಡಿದ್ದೀರಿ, ನೀವು ನಿವೃತ್ತ ಅಧ್ಯಾಪಕರೇ ಆಗಿರುವಾಗ ನಿಮ್ಮ ಅನುಭವಗಳನ್ನು ಚೆನ್ನಾಗಿ ಉಪಯೋಗಿಸಿಕೊಳ್ಳಬಹುದು, ನೀವು ಮಾಡಿದ ಸಂಶೋಧನೆ ನಾಲ್ಕು ಜನರಿಗೆ ಪ್ರಯೋಜನಕಾರಿ ಆಗಿರಬೇಕು, ವಿಷಯ ಶೀರ್ಷಿಕೆಯನ್ನು ಹೀಗೆ ಮಾಡಿಕೊಳ್ಳಿ" ಎಂದೆಲ್ಲಾ ತಿಳಿಸಿ ಬಹಳ ಉತ್ತಮ ಪ್ರೋತ್ಸಾಹ ಹಾಗೂ ಮಾರ್ಗದರ್ಶನ ನೀಡಿಯೇ ಬಿಟ್ಟರು. ಪ್ರಥಮ ಭೇಟಿಯಿಂದ ಇಂದಿನವರೆಗೂ ಸಹೃದಯಿ ವಿದ್ಯಾಗುರುಗಳಾಗಿ ಪ್ರತಿಹಂತದಲ್ಲೂ ಸುಮಧುರ ಸಂಕಲ್ಪದಿಂದ ನನಗೆ ಮಾರ್ಗದರ್ಶನ ಮಾಡುತ್ತಾ, ನಾನು ಈ ಸಂಶೋಧನೆಗೆ ತೊಡಗಲು ಕಾರಣೀಭೂತರಾಗಿದ್ದಾರೆ. ನನ್ನ ನೆಚ್ಚಿನ ಗುರುಗಳಾದ ಡಾ.ಬಿ. ನಾಗರಾಜ ಇವರು ಸಂಸ್ಕೃತ ವಿದ್ವಾಂಸರು, ಸರಳಸಜ್ಜನರು, ಅನುಭವಿಗಳು, ಪ್ರಾಮಾಣಿಕ ಸಂಶೋಧಕರು, ಅಧ್ಯಯನಶೀಲರು, ಉತ್ತಮ ಪ್ರವಾಚಕರೆಂದು ಪ್ರಖ್ಯಾತರಾಗಿರುವವರು. ಬಹಳಷ್ಟು ಸಂಶೋಧನಾ ವಿದ್ಯಾರ್ಥಿಗಳಿಗೆ ಉತ್ತಮ ಮಾರ್ಗದರ್ಶನ ನೀಡಿ ಪಿ.ಎಚ್.ಡಿ. ಪದವಿ ಹೊಂದಲು ಸಮರ್ಥರನ್ನಾಗಿ ಮಾಡಿರುತ್ತಾರೆ. ಇಂತಹ ವಿದ್ವಾಂಸರ ಮಾರ್ಗದರ್ಶನದಲ್ಲಿ ಈ ಸಂಶೋಧನಾ ಕಾರ್ಯದಲ್ಲಿ ತೊಡಗಿಕೊಳ್ಳುವ ಭಾಗ್ಯ ನನಗೆ ಲಭ್ಯವಾದದ್ದು ನನ್ನ ಪುಣ್ಯವೇ ಸರಿ. ಇವರಿಗೆ ಸದಾ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತದೆ. ಕಾಲೇಜಿನ ಆಡಳಿತ ಮಂಡಳಿ, ಗುರುವೃಂದ, ಪ್ರಾಚಾರ್ಯರು ಮತ್ತು ಸಿಬ್ಬಂದಿವರ್ಗದ ಸಹಾಯ-ಸಹಕಾರಗಳು ಅಪಾರವಾಗಿ ದೊರೆತಿದೆ. ಅವರೆಲ್ಲರಿಗೂ ನನ್ನ ವಿನಮ್ರ ವಂದನೆಗಳು.

ಪ್ರಾರಂಭದಿಂದ ನನ್ನ ಸಂಶೋಧನಾ ಕಾರ್ಯದ ಪ್ರತಿ ಹಂತದಲ್ಲೂ ಕಾಲಕಾಲಕ್ಕೆ ಸೂಕ್ತ ಸಲಹೆ–ಸೂಚನೆಗಳನ್ನು ಒದಗಿಸಿ, ನನ್ನ ವಿಷಯದ ಮಹಾಪ್ರಬಂಧವನ್ನು ಸಲ್ಲಿಸಲು ಅನುಮತಿಸಿ ಪ್ರೋತ್ಸಾಹಿಸಿದ ಪ್ರತಿಷ್ಠಿತ ಮಂಗಳೂರು ವಿಶ್ವವಿದ್ಯಾನಿಲಯದ ಅಧಿಕಾರಿವರ್ಗದವರಿಗೂ, ನನ್ನ ವಿಷಯವಸ್ತುವನ್ನು ವಿದ್ವತ್ಪೂರ್ಣ ಸಲಹೆಗಳೊಂದಿಗೆ ಸ್ಪಷ್ಟಗೊಳಿಸಿ ಮುನ್ನಡೆಸಿದ ಡಾಕ್ಟೊರಲ್ ಸಮಿತಿಯ ಎಲ್ಲ ಪ್ರಾಧ್ಯಾಪಕರಿಗೂ, ವಿಷಯಕ್ಕೆ ಸಂಬಂಧಿಸಿದ ವಿಚಾರ – ಸಂಪನ್ಮೂಲ ಗ್ರಂಥಗಳನ್ನೊದಗಿಸಿ ಸಹಕರಿಸಿದ ಗ್ರಂಥಾಲಯದ ಅಧಿಕಾರಿ ವರ್ಗದವರಿಗೂ ನನ್ನ ವಿನಯಪೂರ್ವಕ ನಮನಗಳನ್ನು ಹಾಗೂ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ಈ ಮಹಾಪ್ರಬಂಧದ ಕಾರ್ಯಯೋಜನೆಯ ಎಲ್ಲಾ ಸಂದರ್ಭದಲ್ಲಿ ಜೊತೆಯಲ್ಲಿದ್ದು ನನಗೆ ನೈತಿಕ ಬೆಂಬಲ ನೀಡಿ ಮುನ್ನಡೆಸಿದ ನನ್ನ ಪ್ರೀತಿಯ ಮಡದಿ ಶ್ರೀಮತಿ ರಾಜೇಶ್ವರಿ T. S. ಮತ್ತು ಮಹಾಪ್ರಬಂಧದ ಮುಖಪುಟ ವಿನ್ಯಾಸಕ್ಕೆ ಹೆಮ್ಮೆಯಿಂದ ಸಹಕರಿಸಿದ ನನ್ನ ಪ್ರೀತಿಯ ಪುತ್ರಿ ಕು. ಶ್ರೀಪ್ರಿಯ N. D. ಹಾಗೂ ಕುಟುಂಬ ವರ್ಗದವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲಲೇಬೇಕು.

ಈ ಮಹಾಪ್ರಬಂಧವನ್ನು ಬಹಳ ಅಂದವಾಗಿ, ಅಚ್ಚುಕಟ್ಟಾಗಿ, ದೋಷರಹಿತವಾಗಿ, ಸಕಾಲದಲ್ಲಿ ಕಂಪ್ಯೂಟರ್ ಮೂಲಕ ಸುವ್ಯವಸ್ಥೆಗೊಳಿಸಿ, ಸುಂದರ ರೂಪವನ್ನೊದಗಿಸಿಕೊಟ್ಟ ಸಹೃದಯಿ ಮಿತ್ರರಾದ ಶ್ರೀ ಆದಿತ್ಯಪ್ರಸಾದ್ ಎಂ. ಅವರಿಗೆ ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ. ಇನ್ನು ಪ್ರತ್ಯಕ್ಷವಾಗಿ–ಪರೋಕ್ಷವಾಗಿ ಈ ನನ್ನ ಮಹತ್ಕಾರ್ಯಕ್ಕೆ ಸಲಹೆ–ಸಹಕಾರ ನೀಡಿ ಪ್ರೋತ್ಸಾಹಿಸಿದ ಸರ್ವರಿಗೂ ಕೃತಜ್ಞತಾಪೂರ್ವಕ ನಮನಗಳು.

लक्ष्मी सविभ्रमालोक सुभ्रूविभ्रम चक्षुषे ।
चक्षुषे सर्वलोकानां वेङ्कटेशाय मङ्गलम् ॥[5]

**– ನಾಗರಾಜ N. D.**
ಸಂಶೋಧನಾರ್ಥಿ



5. श्री वेङ्कटेश मङ्गलाशासनम् – श्लो. – 2

# ಸಂಕ್ಷೇಪ ಸೂಚಿ

| | |
|---|---|
| ಅ. | ಅಧ್ಯಾಯ |
| ಅ.ನಂ. | ಅಧ್ಯಾಯದ ನಂಬರ್ |
| ಅನು. | ಅನುವಾದಕರು |
| ಅ–ಸಂ | ಅಧ್ಯಾಯದ ಸಂಖ್ಯೆ |
| ಉ.ಕು. | ಉಪ ಕುಲಪತಿಗಳು |
| ಕ.ಸಾ.ಪ. | ಕನ್ನಡ ಸಾಹಿತ್ಯ ಪರಿಷತ್ತು |
| ಕ.ವಿ.ವಿ. | ಕರ್ನಾಟಕ ವಿಶ್ವವಿದ್ಯಾಲಯ |
| ಚ.ತಂ. | ಚತುರ್ಥ ತಂತ್ರ |
| ಜಿ. | ಜಿಲ್ಲೆ |
| ತಂ. | ತಂತ್ರ |
| ತೃ.ತಂ. | ತೃತೀಯ ತಂತ್ರ |
| ದ್ವಿ.ತಂ. | ದ್ವಿತೀಯ ತಂತ್ರ |
| ದ್ವಿ.ವ. | ದ್ವಿತೀಯ ವಲ್ಲಿ |
| ದೂ.ಶಿ.ನಿ. | ದೂರ ಶಿಕ್ಷಣ ನಿರ್ದೇಶನಾಲಯ |
| ನ.ರಾ.ಮೊಹಲ್ಲಾ | ನರಸಿಂಹರಾಜ ಮೊಹಲ್ಲಾ |
| ನೀ.ಕಾ. | ನೀತಿಕಾವ್ಯ |
| ಪಠ್ಯ.ಪು.ನಿ. | ಪಠ್ಯಪುಸ್ತಕ ನಿರ್ದೇಶನಾಲಯ |
| ಪ್ರ. | ಪ್ರಕಾಶಕರು |
| ಪ್ರ.ತಂ | ಪ್ರಥಮ ತಂತ್ರ |

| | |
|---|---|
| ಪ್ರೈ.ಲಿ. | ಪ್ರೈವೇಟ್ ಲಿಮಿಟೆಡ್ |
| ಪೀ. | ಪೀಠಿಕೆ. |
| ಪಿ.ಬಿ.ನಂ. | ಪೋಸ್ಟ್ ಬಾಕ್ಸ್ ನಂಬರ್ |
| ಪು | ಪುಟ |
| ಪು.ಸಂ. | ಪುಟ ಸಂಖ್ಯೆ |
| ಪಂ. | ಪಂಡಿತ್ |
| ಪಂ.ತಂ. | ಪಂಚಮ ತಂತ್ರ |
| ಬೆಂ.ವಿ.ವಿ | ಬೆಂಗಳೂರು ವಿಶ್ವವಿದ್ಯಾನಿಲಯ |
| ಭಾ. | ಭಾಗ |
| ಮಿ.ಲಾ. | ಮಿತ್ರಲಾಭ |
| ಮೈ.ವಿ.ವಿ. | ಮೈಸೂರು ವಿಶ್ವವಿದ್ಯಾನಿಲಯ |
| ವ. | ವಲ್ಲೀ |
| ವ.ಜೀ | ವಕ್ರೋಕ್ತಿ ಜೀವಿತ |
| ವಿ.ವಿ. | ವಿಶ್ವವಿದ್ಯಾಲಯ |
| ಶ್ಲೋ. | ಶ್ಲೋಕ. |
| ಸಂ. | ಸಂಪಾದಕರು |
| ಸಂಪಾ. | ಸಂಪಾದಕರು |
| ಸಂ.ಸ. | ಸಂಪಾದಕ ಸಮಿತಿ |
| सू.स्था | सूत्रस्थान |
| BSK | Banashankari |
| D.D.E | Directorate Of Distance Education. |

| | |
|---|---|
| Edi | Editor |
| ICC & CE. | Institute of Correspondence Course and Continuing Education |
| intr. | Introduction |
| Kan.tran. | Kannada translation |
| P. | Page. |
| P.B.No. | Post Box Number |
| PP. | Page. |
| Pvt.Ltd. | private Limited |
| (P) Ltd. | Private Limited |
| tran. | Translation |

| | |
|---|---|
| अनु. | अनुवादक |
| पो.बा.नं. | पोस्ट बाक्स नमबर |
| प्रै.लि. | प्रैवेट लिमिटेड |
| ले. | लेखक |
| व.जी. | वक्रोक्तिजीवित |
| व्याख्या. | व्याख्यानकार |
| श्लो. | श्लोक |
| सं. | संपादक |
| स.ले. | सहलेखक |
| सं.टी | संस्कृत टीका |
| सू.स्था | सूत्रस्थान |
| हि.टी. | हिन्दी टीका |

# ಶೋಧ ಮಹಾಪ್ರಬಂಧದ ಪರಿಚಯಾತ್ಮಕ ಪಕ್ಷಿನೋಟ

आनो भद्राः क्रतवो यन्तु विश्वतः ।

(Let noble thoughts come to us from every side.)
RigVeda. 1-89-i

ವಿಷ್ಣುಶರ್ಮ ವಿರಚಿತ ಸಂಸ್ಕೃತ ಪಂಚತಂತ್ರ ಕೃತಿಯನ್ನು ಸಮಗ್ರವಾಗಿ ಅಧ್ಯಯನ ಮಾಡಿದರೆ ಹತ್ತಾರು ಶೋಧ ಪ್ರಬಂಧಗಳಿಗೆ ವಿಷಯಗಳಾಗುವಷ್ಟು ಇದರ ವಿಶಾಲ ವ್ಯಾಪ್ತಿ ಇರುತ್ತದೆ. ಪ್ರಸ್ತುತ ವಿಷಯ- 'ಪಂಚತಂತ್ರದಲ್ಲಿ ಶೈಕ್ಷಣಿಕ-ಮನೋವಿಜ್ಞಾನ ಮತ್ತು ವ್ಯಕ್ತಿತ್ವ ನಿರ್ಮಾಣ ಕಲೆ' ಒಂದು ವಿಮರ್ಶಾತ್ಮಕ ಅಧ್ಯಯನ? ಎಂಬುದರ ಬಗ್ಗೆ ವಿಶೇಷ ಅಧ್ಯಯನ ನಡೆಸಿ ಈ ಮಹಾಪ್ರಬಂಧವನ್ನು ರಚಿಸುವ ಪ್ರಯತ್ನ ಮಾಡಲಾಗಿದೆ.

**ಅ)-ಪ್ರಾಸ್ತಾವಿಕ-ವಿಭಾಗ. ಬ)-ಅಧ್ಯಾಯ-ವಿಭಾಗ. ಕ)-ಉಪಸಂಹಾರ-ವಿಭಾಗ**

**ಅ - ಪ್ರಾಸ್ತಾವಿಕ ವಿಭಾಗ**

ಈ ವಿಭಾಗದಲ್ಲಿ 1. ಪ್ರಸ್ತಾವನೆ, ವಿಷಯಾಸಕ್ತಿ, ವಿಷಯದವ್ಯಾಪ್ತಿ, ಉದ್ದೇಶ, ಪ್ರಯೋಜನ,

2. ಪೀಠಿಕೆ-ವಿಶ್ವಸಾಹಿತ್ಯದಲ್ಲಿ ಸಂಸ್ಕೃತ ಸಾಹಿತ್ಯದ ಸ್ಥಾನಮಾನ ಅಧ್ಯಯನದ ಉದ್ದೇಶ-ವ್ಯಾಪ್ತಿ-ಮಿತಿಗಳು ಮತ್ತು ವಿಷಯ ಪ್ರವೇಶ-ಇತ್ಯಾದಿಗಳ ವಿವೇಚನೆ ಮಾಡಲಾಗಿದೆ.

**ಬ - ಅಧ್ಯಾಯ - ವಿಭಾಗ**

ಅಧ್ಯಾಯಗಳ ವಿಭಾಗದಲ್ಲಿ ಒಟ್ಟು ಎಂಟು ಅಧ್ಯಾಯಗಳಲ್ಲಿ ಪಂಚತಂತ್ರ ನೀತಿಕಥಾಗುಚ್ಛದ ಕಥೆಗಳನ್ನು ಶೈಕ್ಷಣಿಕ ಮನೋವಿಜ್ಞಾನದ ಪರಿಕಲ್ಪನೆಗಳೊಂದಿಗೆ ವಿಶ್ಲೇಷಣೆ ಮಾಡಲಾಗಿದೆ. ಪಂಚತಂತ್ರದ ಆಂತರಿಕ ವಿಷಯಗಳನ್ನು ಪರಿಚಯಿಸುತ್ತಾ, ಪರಿಶೀಲಿಸುತ್ತಾ, ವಿಷಯದ ಸೂಕ್ಷ್ಮತೆ ಹಾಗೂ ಇತಿಮಿತಿಗಳನ್ನರಿತು ವಿಚಾರಗಳನ್ನು ಮಂಡಿಸಲಾಗಿದೆ.

ಒಂದನೇ ಅಧ್ಯಾಯದಲ್ಲಿ, ಅನುಕ್ರಮವಾಗಿ ಸಂಸ್ಕೃತ ಕಥಾಸಾಹಿತ್ಯ-ಇದರ ಪ್ರಾಚೀನತೆ ಮತ್ತು ವಿಶಿಷ್ಟತೆ- ಸಂಸ್ಕೃತ ಸಾಹಿತ್ಯದಲ್ಲಿ ನೀತಿಕಾವ್ಯಗಳು-ಇದರ ಉದ್ಭವ ಮತ್ತು ವಿಕಾಸ- ನೀತಿಬೋಧಕ ಕಥಾಸಾಹಿತ್ಯ - ಪಂಚತಂತ್ರ - ನೀತಿಕಥೆಗಳು- ಇದರ ವಿಶಿಷ್ಟ ಲಕ್ಷಣಗಳು. ಇದರ ಕಾಲ-ಕರ್ತೃ-ದೇಶ-ವಿಚಾರ -ಪಂಚತಂತ್ರದ ವಿಶ್ವವ್ಯಾಪಿ ಪ್ರಭಾವ- ಇದರ ಜ್ಞಾನಾತ್ಮಕ, ಉಪದೇಶಾತ್ಮಕ, ಶಿಕ್ಷಣಾತ್ಮಕ ಮತ್ತು ಪ್ರತಿಪಾದಕ ಲಕ್ಷಣಗಳು ಮುಂತಾದ ವಿಚಾರಗಳನ್ನು ವಿವೇಚಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಅನುಕ್ರಮವಾಗಿ ಮೊದಲು ಮನೋವಿಜ್ಞಾನದ ಪೀಠಿಕೆ-ಅರ್ಥ ಮತ್ತು ವ್ಯಾಪ್ತಿ; ನಂತರದಲ್ಲಿ ಅನ್ವಯಿಕ-ವಿಜ್ಞಾನ, ಶೈಕ್ಷಣಿಕ-ಮನೋವಿಜ್ಞಾನ-ಇದರ ಅರ್ಥ-ವ್ಯಾಖ್ಯೆ-ವ್ಯಾಪ್ತಿ ಬಗ್ಗೆ ವಿಶ್ಲೇಷಿಸಲಾಗಿದೆ. ನಂತರ ಶಿಕ್ಷಣದಲ್ಲಿ ಮನೋವಿಜ್ಞಾನದ ಮಹತ್ವ ಕುರಿತು ವಿಚಾರ ಮಾಡಲಾಗಿದೆ. ಅಂತ್ಯ

ಭಾಗದಲ್ಲಿ ಪಂಚತಂತ್ರ ನೀತಿಕಥೆಗಳಲ್ಲಿ ಕಂಡುಬರುವ ಶೈಕ್ಷಣಿಕ ಮನೋವಿಜ್ಞಾನದ ಕೆಲವು ಅಂಶಗಳು ಎಷ್ಟರಮಟ್ಟಿಗೆ ಪರಿಣಾಮಕಾರಿಯಾಗಿದೆ ಎಂಬುದನ್ನು ವಿಶ್ಲೇಷಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಅನುಕ್ರಮವಾಗಿ ವ್ಯಕ್ತಿ ಬೆಳವಣಿಗೆಯಲ್ಲಿ **ಮೂಲ ಸ್ವಭಾವ–ವೈಯಕ್ತಿಕ ಭಿನ್ನತೆಗಳು (Individual differences)** ಈ ಬಗ್ಗೆ ಚರ್ಚಿಸಲಾಗಿದೆ. ಮನುಷ್ಯನ ಸರ್ವತೋಮುಖ ವಿಕಾಸವೇ ಶಿಕ್ಷಣದ ಪರಮ ಗುರಿ– ಹಾಗೆಂದರೆ ವ್ಯಕ್ತಿಯ **ಶಾರೀರಿಕ, ಮಾನಸಿಕ, ಬೌದ್ಧಿಕ, ಸಾಮಾಜಿಕ, ನೈತಿಕ ಮತ್ತು ಆಧ್ಯಾತ್ಮಿಕ ವಿಕಾಸ**ವೇ ಶಿಕ್ಷಣದ ಗುರಿ. ಬೆಳವಣಿಗೆ ಮತ್ತು ವಿಕಾಸ ಕಾರ್ಯದಲ್ಲಿ ಅನುವಂಶೀಯತೆ ಮತ್ತು ಪರಿಸರದ ಪ್ರಭಾವ ಕುರಿತು ವಿಶ್ಲೇಷಣೆ. ನಂತರದಲ್ಲಿ ಕಲಿಕೆ ಅದರ ಅರ್ಥ–ಸ್ವರೂಪ–ವ್ಯಾಖ್ಯೆ– ಮನೋವಿಜ್ಞಾನದಲ್ಲಿ ಕಲಿವೇ ಪ್ರಧಾನ, ವ್ಯಕ್ತಿಯ ವರ್ತನೆಯಲ್ಲಿ ಬದಲಾವಣೆ ತರುವುದೇ ಕಲಿಕೆ. ಕಲಿಕೆಯಮೇಲೆ ಪ್ರಭಾವ ಬೀರುವ ಅಂಶಗಳು–**ಅಭಿಪ್ರೇರಣೆ–(Motivation) ಅವಧಾನ(Attention)–** ಇವುಗಳ ಮನೋವೈಜ್ಞಾನಿಕ ಪ್ರಾಮುಖ್ಯತೆಯನ್ನು ಸ್ಪಷ್ಟಪಡಿಸಿದೆ. ಮುಂದೆ **ಸ್ಮೃತಿ(Memory) ವಿಸ್ಮೃತಿ (Forgetting) ಕಲಿಕೆಯ ವರ್ಗಾವಣೆ (Transfer of Learning)** ಇವುಗಳ ಬಗ್ಗೆ ಪರಿಶೀಲಿಸಿದೆ. ಅಂತ್ಯದಲ್ಲಿ ಪ್ರಥಮ ತಂತ್ರವಾದ मित्रभेदದಲ್ಲಿ ಕಂಡುಬರುವ ಕಥೆಗಳ ವಿಶ್ಲೇಷಣೆ ಮಾಡುತ್ತಾ, ವಿಷ್ಣುಶರ್ಮರು ಹೇಗೆ ಶೈಕ್ಷಣಿಕ ಕ್ರಮಗಳನ್ನು ಅನುಸರಿಸಿ ಮಂದಮತಿಗಳಾದ ಅರಸುಕುಮಾರರಲ್ಲಿ ಅಭಿಪ್ರೇರಣೆ ಅವಧಾನವನ್ನು ಹಿಡಿದಿಟ್ಟು, ನೈಸರ್ಗಿಕ ಜಗತ್ತನ್ನು ಮಾನವ ಜಗತ್ತಿಗೆ ಸ್ಥಳಾಂತರಿಸುವ ಒಂದು ಚಮತ್ಕಾರವನ್ನುಪಯೋಗಿಸಿ ವಿಶೇಷ ಆಕರ್ಷಣೆ ಹಾಗೂ ಆಸಕ್ತಿಯನ್ನು ಮೂಡಿಸಿ, ಕಲಿಕೆಯನ್ನು ಪರಿಣಾಮಕಾರಿಗೊಳಿಸಿರುವುದನ್ನು ಗುರುತಿಸಲಾಗಿದೆ.

**ನಾಲ್ಕನೇ** ಅಧ್ಯಾಯದಲ್ಲಿ ಅನುಕ್ರಮವಾಗಿ ಉನ್ನತ ಮಟ್ಟದ ಮನೋವ್ಯಾಪಾರಗಳ ಪರಿಚಯ; ಮಾನವಶಕ್ತಿಯ ಮಹೋನ್ನತಿಗೆ ಮೂಲ ಕಾರಣ ಮನಸ್ಸು; ಮನಸ್ಸಿನಲ್ಲಿ ಉಂಟಾಗುವ **ಕಲ್ಪನೆ, ನೆನಪು, ಆಲೋಚನೆ ಮತ್ತು ಉನ್ನತ ಮನಶ್ಶಕ್ತಿ** ಹಾಗೂ ಇನ್ನಿತರ ಮನೋವ್ಯಾಪಾರಗಳಾದ **ದೃಷ್ಟಿ–ಧ್ಯೇಯಗಳು, ಅರ್ಜಿತ ಆಸಕ್ತಿಗಳು, ಮನೋಭಾವನೆಗಳು, ಸಂವೇದನೆಯ ಸ್ವರೂಪ** ನಂತರದಲ್ಲಿ **ಆಲೋಚನೆ(Thought)** ಅದರ ಅರ್ಥ–ವಿಧಗಳು–ವಿವೇಚನೆ–ವಿವೇಚನೆಯ ಪಂಚಸೋಪಾನಗಳು ಮುಂತಾದ ವಿಚಾರಗಳ ಬಗ್ಗೆ ವಿವೇಚಿಸಲಾಗಿದೆ. ಮುಂದೆ **ಮನೋಧೋರಣೆಗಳು (Attitudes)- ವರ್ತನೆಗಳು –ಪರಿವರ್ತನೆ (Transformation)** ಹಾಗೂ **ಶೀಲಸಂಪನ್ನತೆ (Character building)** ಇವುಗಳ ಪರಿಕಲ್ಪನೆಯನ್ನು ಮತ್ತು ವ್ಯಕ್ತಿತ್ವ ನಿರ್ಮಾಣದಲ್ಲಿ ಅವುಗಳ ಪ್ರಾಮುಖ್ಯತೆ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ಅಂತ್ಯದಲ್ಲಿ ಪ್ರಥಮ ತಂತ್ರವಾದ मित्रभेदದಲ್ಲಿ ಕಂಡುಬರುವ ಕಥೆಗಳ ಮುಂದುವರಿದ ಭಾಗದ ವಿಶ್ಲೇಷಣೆ ಮಾಡುತ್ತಾ, ವಿಷ್ಣುಶರ್ಮರು ಈ ತಂತ್ರದಲ್ಲಿ ಹೇಗೆ ಸ್ವಾರಸ್ಯಕರ ನೀತಿಕಥೆಗಳ ನಿರೂಪಣೆಯಿಂದ ರಾಜಕುಮಾರರ ಆಸಕ್ತಿಯನ್ನು ಪ್ರೇರೇಪಿಸಿ, ಒಳ್ಳೆಯ ಶಿಕ್ಷಣ ನೀಡಿದ್ದಾರೆ ಎಂಬುದನ್ನು ಗುರುತಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಅನುಕ್ರಮವಾಗಿ **ಸೃಜನಶೀಲತೆ(Creativity)**– ಇದರ ಅರ್ಥ–ಸ್ವರೂಪ–ವ್ಯಾಖ್ಯಾನ–ಸೃಜನಶೀಲತೆಯ ವಿಕಾಸದ ಹಂತಗಳು ಮುಂತಾದವನ್ನು ವ್ಯಕ್ತಿ–ವಿಕಾಸದ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ನಂತರದಲ್ಲಿ **ವ್ಯಕ್ತಿತ್ವ ಮತ್ತು ವ್ಯಕ್ತಿತ್ವ ವಿಕಾಸ**ದ ಅರ್ಥ–ವ್ಯಾಖ್ಯಾನಗಳು; ವ್ಯಕ್ತಿತ್ವ ನಿರ್ಧರಿಸುವ ಅಂಶಗಳು; ಬಹು ಮುಖ್ಯವಾಗಿ ಅನುವಂಶೀಯತೆ ಮತ್ತು ಪರಿಸರದ ಪಾತ್ರ; ವ್ಯಕ್ತಿತ್ವ ರೂಪಿಸುವಲ್ಲಿ ಶಾಲೆ ಮತ್ತು ಶಿಕ್ಷಕರ–ಪಾತ್ರ–ಇತ್ಯಾದಿ ಶೈಕ್ಷಣಿಕ ಮನೋವಿಜ್ಞಾನದ ವಿಚಾರಗಳನ್ನು ಚರ್ಚಿಸಲಾಗಿದೆ. ನಂತರದಲ್ಲಿ ಉತ್ತಮ ಅಭ್ಯಾಸಗಳ ಬೆಳವಣಿಗೆ ಮತ್ತು ನಾಯಕತ್ವದ ಬಗ್ಗೆ ವಿವೇಚಿಸಲಾಗಿದೆ ಅಂತ್ಯ ಭಾಗದಲ್ಲಿ ದ್ವಿತೀಯ ತಂತ್ರವಾದ मित्रसंप्राप्तिಯಲ್ಲಿ ಕಂಡುಬರುವ ಕಥೆಗಳನ್ನು ಪರಿಶೀಲಿಸಿ ಮೇಲಿನ ಅಂಶಗಳು ಎಷ್ಟರಮಟ್ಟಿಗೆ ಈ ಕಥೆಗಳಲ್ಲಿ ಅಡಕಗೊಂಡಿದೆ ಎಂಬುದನ್ನು ಗುರುತಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ಅನುಕ್ರಮವಾಗಿ ಮೊದಲು ಅರಿವಿನ ಅರ್ಥ ಮತ್ತು ವ್ಯಾಪ್ತಿಯ ಸ್ಪಷ್ಟ ವಿವರಣೆ ಇರುತ್ತದೆ. ಶಿಕ್ಷಣ ಕ್ಷೇತ್ರದಲ್ಲಿ ಅರಿವಿನ ಮಹತ್ವ, ವ್ಯಕ್ತಿ–ನಿರ್ಮಾಣ ಕಾರ್ಯದಲ್ಲಿ ಅರಿವಿನ ಪ್ರಾಮುಖ್ಯತೆ, ಮಾನವನ ಮಹೋನ್ನತಿ ಮನಶ್ಶಕ್ತಿಯಲ್ಲಿ: ಮಾನವನು ತನ್ನ ಪೂರ್ವಾಶ್ರಮದ ಮಂಗ ಪೂರ್ವಜರ ಸುಳಿಯಿಂದ ವಿಕಸನ ಹೊಂದಿ ಮಹೋನ್ನತ ಪ್ರಾಣಿಯಾಗಿರುವುದು ಅವನ ಮನಶ್ಶಕ್ತಿಯಿಂದ– ಬೆಳವಣಿಗೆಯಿಂದ. ಈ ಮನೋವ್ಯಾಪಾರವೇ **ರಚನಾತ್ಮಕ ಬಿಂಬಕಲೆ**. ಮುಂದೆ **ಜೀವನ ಮೌಲ್ಯಗಳನ್ನು ಬೆಳೆಸುವಿಕೆ**: ಚಿಂತನ–ಮಂಥನ ಮಾನವನಿಗೆ ಒಂದು ಅಗತ್ಯ ಗುಣ; ಒಂದು ವ್ಯವಸ್ಥಿತ ಸ್ವರೂಪದಲ್ಲಿ ಹಲವಾರು ಮೌಲ್ಯಗಳನ್ನು ಹಾಗೂ ಆದರ್ಶಗಳನ್ನು ರೂಡಿಸಿಕೊಂಡು ಜೀವನ ನಡೆಸಬೇಕು–ಈ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ಅಂತ್ಯ ಭಾಗದಲ್ಲಿ ತೃತೀಯ ತಂತ್ರವಾದ काकोलूकीयम्ನಲ್ಲಿ ಹೆಣೆದಿರುವ ಕಥೆಗಳನ್ನು ವಿಶ್ಲೇಷಣೆ ಮಾಡುತ್ತಾ, ವಿಷ್ಣುಶರ್ಮರು ಅರಸುಕುಮಾರರಿಗೆ ಶಿಕ್ಷಣನೀಡುವಲ್ಲಿ ಹೇಗೆ ಸುವ್ಯವಸ್ಥಿತ ಸನ್ನಿವೇಶಗಳನ್ನೂ, ದೃಷ್ಟಾಂತಗಳನ್ನೂ ಮನೋವೈಜ್ಞಾನಿಕವಾಗಿ ಹಾಗೂ ಅರ್ಥಪೂರ್ಣವಾಗಿ ಪಂಚತಂತ್ರ ಕಥೆಗಳ ಮೂಲಕ ಒದಗಿಸಿಕೊಟ್ಟು, ಬದುಕಿನ ಮಂತ್ರಗಳನ್ನು, ನೀತಿ–ಶಿಕ್ಷಣದಲ್ಲಿ ಬೋಧಿಸಿದ್ದಾರೆಂಬುದನ್ನು ಗುರುತಿಸಲಾಗಿದೆ.

ಏಳನೇ ಅಧ್ಯಾಯದಲ್ಲಿ ಆರಂಭಿಕವಾಗಿ ಉತ್ತಮ ಬದುಕಿಗೆ ಬೇಕಾದ ನೀತಿಬೋಧೆಗಳ ಪರಿಚಯ ಮಾಡಿಕೊಡಲಾಗಿದೆ. ಅದು ಜೀವನದ ಮೇಲೆ ಪ್ರಭಾವ ಬೀರಬೇಕು. ಕಲಿವು ಕಾರ್ಯಪ್ರದವೂ, ಜೀವನಕ್ಕೆ ಅನ್ವಯಿಸುವಂಥಹುದೂ ಆದ ಸನ್ನಿವೇಶದಲ್ಲಿ ಸಾಗಬೇಕು. **'ಶಿಕ್ಷಣವೇ ಜೀವನ, ಜೀವನವೇ ಶಿಕ್ಷಣ'** ಎಂದು ತಜ್ಞರು ವ್ಯಾಖ್ಯಾನಿಸಿರುವುದನ್ನು ವಿವರವಾಗಿ ವಿಶ್ಲೇಷಿಸಿದೆ. ಆನಂತರದಲ್ಲಿ **ವಿದ್ಯೆ–ಬುದ್ಧಿ–ಸಾಮಾನ್ಯಜ್ಞಾನ** ಇವುಗಳ ವಿಚಾರವಾಗಿ ಅರ್ಥ–ವ್ಯತ್ಯಾಸ– ಮತ್ತು ಮಹತ್ವವನ್ನು ಕುರಿತು ವಿವೇಚಿಸಲಾಗಿದೆ. ಶೃತಿಸ್ಮೃತಿಪುರಾಣೇತಿಹಾಸಗಳಲ್ಲಿ ಬುದ್ಧಿಶಕ್ತಿಯ ಬಗ್ಗೆ ಏನು ವಿಚಾರಗಳಿವೆ? ಮನೋವಿಜ್ಞಾನಿಗಳು ಬುದ್ಧಿಶಕ್ತಿಯ ಬಗ್ಗೆ ಏನು ಪ್ರತಿಪಾದಿಸಿದ್ದಾರೆಂಬ ಬಗ್ಗೆ ಪರಿಶೀಲಿಸಲಾಗಿದೆ. ಇನ್ನು ಸಾಮಾನ್ಯ ಜ್ಞಾನ ಎಷ್ಟು ಮುಖ್ಯ? ಶಾಸ್ತ್ರ ವ್ಯವಹಾರಗಳಲ್ಲಿ ಕುಶಲರಾಗಿದ್ದರೂ ಲೋಕ ವ್ಯವಹಾರ ತಿಳಿಯದ ಮೂರ್ಖ ಪಂಡಿತರು ಹೇಗೆ ಅಪಹಾಸ್ಯಕ್ಕೆ

ಗುರಿಯಾಗುತ್ತಾರೆ? ಇಂಥಹ ವಿಚಾರಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಅಂತ್ಯದಲ್ಲಿ ನಾಲ್ಕನೇ ತಂತ್ರವಾದ लब्धप्रणाशम्‌ನಲ್ಲಿ ಅಡಕಗೊಂಡಿರುವ ಕಥೆಗಳ ವಿಶ್ಲೇಷಣೆಯೊಂದಿಗೆ ಶೈಕ್ಷಣಿಕ ಮನೋವಿಜ್ಞಾನದ ಪರಿಕಲ್ಪನೆಗಳು ಎಷ್ಟರಮಟ್ಟಿಗೆ ಅನ್ವಯವಾಗಿವೆ ಎಂಬುದನ್ನು ಗುರುತಿಸಲಾಗಿದೆ.

ಎಂಟನೇ ಅಧ್ಯಾಯದಲ್ಲಿ ಮಾರ್ಗದರ್ಶನದ ಮತ್ತು ಸಲಹೆಯ ಅರ್ಥ–ವ್ಯಾಖ್ಯೆ–ವಿಧಗಳು ಮುಂತಾದ ವಿಚಾರಗಳನ್ನು ವಿವೇಚಿಸಲಾಗಿದೆ. ಹಾಗೆಯೇ, ಸಾಮಾನ್ಯ ಜ್ಞಾನದ ಕೊರತೆಯಿಂದ ಉಂಟಾಗುವ ಪರಿಣಾಮಗಳು– ಕೊನೆಯ ತಂತ್ರದ ಹೆಸರೇ ಹೇಳುವಂತೆ ಪರೀಕ್ಷಿಸದೆ ಕೆಲಸ ಮಾಡುವುದು ಮತ್ತು ಅದರ ಪರಿಣಾಮ ಇವುಗಳ ಬಗ್ಗೆ ವಿಚಾರ ಮಾಡಲಾಗಿದೆ. ಅಂತ್ಯದಲ್ಲಿ ಐದನೇಯ ತಂತ್ರವಾದ अपरीक्षितकारकम्‌ನಲ್ಲಿ ಹೆಣೆದಿರುವ ಕಥೆಗಳನ್ನು ವಿಶ್ಲೇಷಣೆಮಾಡಿ, ಅದರಲ್ಲಿ ಕಂಡುಬರುವ ಶೈಕ್ಷಣಿಕ ಹಾಗೂ ಮನೋವೈಜ್ಞಾನಿಕ ಅಂಶಗಳನ್ನು ಗುರುತಿಸಲಾಗಿದೆ.

**ಕ)–ಉಪಸಂಹಾರ ವಿಭಾಗ**

ಈ ವಿಭಾಗದಲ್ಲಿ ಸಮಗ್ರ ಮಹಾಪ್ರಬಂಧವನ್ನು ಪರಿಶೀಲಿಸಿದ ನಂತರದಲ್ಲಿ ಗ್ರಂಥದ ನಿಲುವನ್ನು ಸ್ಪಷ್ಟೀಕರಣಗೊಳಿಸಿ ವಿಷಯಗಳನ್ನು ಉಪಸಂಹರಿಸಿದೆ.



# ಪ್ರಸ್ತಾವನೆ

ಸಕಲ ಜೀವಿಗಳಲ್ಲಿ ಮನುಷ್ಯ ಜನ್ಮವೇ ಶ್ರೇಷ್ಠವಾದದ್ದು. ಮನುಷ್ಯನಿಗೆ ಮಾತ್ರ ಬುದ್ಧಿ ಶಕ್ತಿ, ಯೋಚನಾ ಶಕ್ತಿ ಮತ್ತು ಮಾತನಾಡುವ ಶಕ್ತಿ. ಇಷ್ಟಲ್ಲದೆ ಅವುಗಳನ್ನು ಕಾರ್ಯರೂಪಕ್ಕೆ ತರುವ ಇಚ್ಛಾಶಕ್ತಿ, ಕ್ರಿಯಾಶಕ್ತಿ ಮತ್ತು ಜ್ಞಾನಶಕ್ತಿ ಇರುವುದು. ಆದ್ದರಿಂದ ಈ ಜನ್ಮದ ಶ್ರೇಷ್ಠತೆಯನ್ನು ಮಾನವ ಅರ್ಥಮಾಡಿಕೊಂಡು ಇದರಲ್ಲಿ ಸಾರ್ಥಕತೆ ಹೊಂದಬೇಕು. ಮನುಷ್ಯ ಇತರ ಮಾನವರೊಂದಿಗೆ, ಸಮಾಜದೊಂದಿಗೆ ಮತ್ತು ಪ್ರಕೃತಿಯೊಂದಿಗೆ ಬದುಕಿದರೆ ಜೀವನ ಪಾವನವಾಗುವುದು. ಹೀಗೆ ಮಾನವ ಜನಾಂಗದ ಭವಿಷ್ಯವನ್ನು ರೂಪಿಸುವಲ್ಲಿ ಮತ್ತು ಪರಿಸರವನ್ನವಲಂಬಿಸಿ ವ್ಯಕ್ತಿಯ ಬಹುಮುಖವಾದ ವ್ಯಕ್ತಿತ್ವವನ್ನು ವಿಕಾಸಗೊಳಿಸಲು ಶಿಕ್ಷಣದ ಪಾತ್ರವು ಮಹತ್ತರವಾದುದಾಗಿದೆ.

परिवर्तिनि संसारे मृतः को वा न जायते ।

स जातो येन जातेन याति वंशः समुन्नतिम् ॥[1]

ಜನನ-ಮರಣಗಳಿಂದ ಕೂಡಿ ಸುತ್ತುತ್ತಿರುವ ಈ ಜಗತ್ತಿನಲ್ಲಿ ಯಾವನು ಮತ್ತೆ ಹುಟ್ಟಿಬರುವುದಿಲ್ಲ? ಆದರೆ ಯಾವನು ಹುಟ್ಟಿದ್ದರಿಂದ ಅವನ ಮನೆತನವು ಉನ್ನತಿ ಪಡೆಯುವುದೋ ಅಂಥವನ ಹುಟ್ಟೇ ಸಾರ್ಥಕ. ಉತ್ತಮ ಶಿಕ್ಷಣದಿಂದ ವ್ಯಕ್ತಿಯ ಶಾರೀರಿಕ, ಮಾನಸಿಕ, ಬೌದ್ಧಿಕ, ಭಾವನಾತ್ಮಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕ ಶಕ್ತಿಗಳ ಪೂರ್ಣ ವಿಕಾಸ ಉಂಟಾಗುತ್ತದೆ.[2]

ಈ ಒಂದು ಬೆಳವಣಿಗೆ ಮತ್ತು ವಿಕಾಸಕಾರ್ಯದಲ್ಲಿ ಶೈಕ್ಷಣಿಕ ಮಾರ್ಗದರ್ಶನದ ಆಧಾರ ಸ್ಥಂಭವೇ ಗುರುವಿನ ಪಾತ್ರವೆನ್ನಬಹುದು. ಅತಿ ಪ್ರಾಚೀನ ಕಾಲದಿಂದಲೂ ಭಾರತವು ಸನಾತನ ಸಂಸ್ಕೃತಿಗೆ ಇಡೀ ಜಗತ್ತಿಗೇ ಕೈದೀವಿಗೆಯಾಗಿರುತ್ತದೆ. ಜ್ಞಾನರವಿಯ ಕಿರಣಗಳು ಪೌರ್ವಾತ್ಯ ರಾಷ್ಟ್ರಗಳಿಂದಲೇ ಪಶ್ಚಿಮಕ್ಕೆ ಪ್ರಸಾರವಾದವು. ಅಂದಿನ ಜನರ ದೈಹಿಕ, ಮಾನಸಿಕ ಮತ್ತು ನೈತಿಕ ಮಟ್ಟವು ಅಪೇಕ್ಷಿತ ಸ್ಥಿತಿಯಲ್ಲಿದ್ದು ಸಮಾಜದಲ್ಲಿ ಸ್ಥಿರತೆಯಿತ್ತು. ಸಹಕಾರ ಮತ್ತು ಸೌಹಾರ್ದತೆ ನೆಲೆಸಿತ್ತು. ಆ ಕಾಲದಿಂದಲೂ ಗುರುವಿಗೆ ಶ್ರೇಷ್ಠಸ್ಥಾನವಿತ್ತು. ಸರಳ ಜೀವನ, ಉದಾತ್ತ ವಿಚಾರಗಳು, ವಿದ್ಯಾರ್ಜನೆ, ಸತ್ಯಾನ್ವೇಷಣೆ, ವೈಯಕ್ತಿಕ ಮತ್ತು ಸಾಮಾಜಿಕ ಜೀವನದಲ್ಲಿ ಮೇಲ್ಮಟ್ಟದ ನೀತಿತತ್ವಗಳ ಆಚರಣೆ- ಇವುಗಳೇ ಗುರುವಿನ ಜೀವನದ ಜೀವಾಳವಾಗಿದ್ದವು. ಇವುಗಳಿಂದಾಗಿ ಪ್ರಾಚೀನ ದೇಶದಲ್ಲಿ ಗುರುವು ಶ್ರೇಷ್ಠ ಸ್ಥಾನವನ್ನು ಗಳಿಸಿ, ಉಳಿಸಿಕೊಂಡು ಬಂದಿದ್ದಾನೆ.[3]

---

1. **ಭರ್ತೃಹರಿಯ ನೀತಿಶತಕ,** ಮಾನಶೌರ್ಯ ಪದ್ಧತಿ-ಶ್ಲೋ-32.
2. **ವಾಮದೇವಪ್ಪ ಎಚ್. ವಿ.,** ಶೈಕ್ಷಣಿಕ ಮನೋವಿಜ್ಞಾನ, ಪೀ-ಪು-6,ಶ್ರೇಯಸ್ ಪಬ್ಲಿಕೇಶನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005
3. **ಸಂಪದ್ಗಿರಿರಾಯರು ನಿ.ಪ್ರಾ. ಗೋಕಾಕ್ ವಿ. ಕೆ.,** ಉ.ಕು.,ಬೆಂ ವಿ ವಿ,ಮೈಸೂರು ರಾಜ್ಯ ಎಜ್ಯುಕೇಷನ್ ಫೆಡರೇಷನ್ 22ನೇ ಶಿಕ್ಷಣ ಮಹಾಸಮ್ಮೇಳನದಲ್ಲಿ ಹೊರಡಿಸಿದ ಸೌವಿನೀರ್, ಪು-xxii,xxiv,xxvi (1969)

मनसि, वचसि काये पुण्यपीयूषपूर्णाः त्रिभुवनं उपकारश्रेणिभिः प्रीणयन्तः ।

परगुणपरमाणून् पर्वतीकृत्य नित्यं निजहृदि विकसन्तः सन्ति सन्तः कियन्तः ॥[4]

ಮನಸ್ಸು ಮಾತು ದೇಹಗಳಲ್ಲಿ ಸತ್ಕೃತಿಗಳೆಂಬ ಅಮೃತವನ್ನು ತುಂಬಿಕೊಂಡು, ಪರೋಪಕಾರಗಳ ಸರಣಿಯಿಂದ ಮೂರೂ ಜಗತ್ತುಗಳನ್ನು ಖುಷಿಪಡಿಸುವ, ಪರರ ಉತ್ತಮವಾದ ಸಣ್ಣ ಗುಣಗಳನ್ನೂ ಬೆಟ್ಟದಷ್ಟು ದೊಡ್ಡದಾಗಿ ತೋರಿಸುವ, ಯಾವಾಗಲೂ ತಮ್ಮ ಹೃದಯಗಳಲ್ಲಿ ಸಂತುಷ್ಟರಾಗಿರುವ ಸಜ್ಜನರು ಎಷ್ಟಿದ್ದಾರೆ?

ವೃತ್ತಿ ಘನತೆ, ಅಪಾರಶ್ರದ್ಧೆ, ವಿದ್ವತ್ತು, ದೃಢವಾದ ನಿರ್ಧಾರ ಕೈಗೊಳ್ಳುವ ಸಾಮರ್ಥ್ಯ, ಬೋಧನಾ ಕೌಶಲ್ಯ, ಸತ್ಯಸಂಧತೆ ಮುಂತಾದ ವಿಚಾರಗಳಲ್ಲಿ ಪರಿಣಿತರಾದ ಅನೇಕ ಗುರುಗಳನ್ನು ಕಾಣಬಹುದು. ಅಂಥಹವರ ಸಾಲಿನಲ್ಲಿ– ಆದರ್ಶ, ಪ್ರತಿಭಾನ್ವಿತ, ಹಿರಿಯ ಅನುಭವೀ ಶಿಕ್ಷಕರಾದ ಪಂಡಿತ "ವಿಷ್ಣುಶರ್ಮರ" ಬಗ್ಗೆ ಹಾಗೂ ಅವರು ರಚಿಸಿದ ಅಪೂರ್ವ ನೀತಿಶಾಸ್ತ್ರ ಕೃತಿ "ಪಂಚತಂತ್ರದ" ವಿಚಾರದಲ್ಲಿ ಅಧ್ಯಯನ ಮಾಡುವುದೆಂದರೆ, ಸಂಸ್ಕೃತ ಸಾಹಿತ್ಯಪ್ರಿಯ ವಿದ್ಯಾರ್ಥಿಗಳಿಗೆ ಒಂದು ಸಂತಸದ ವಿಷಯ. ಅದರಲ್ಲೂ ಶಿಕ್ಷಣ ಕ್ಷೇತ್ರದಲ್ಲಿ ಭೋಧನಾ ವೃತ್ತಿಯಲ್ಲಿ ತೊಡಗಿಸಿಕೊಂಡಿರುವವರಿಗೆ ಮತ್ತು ವೃತ್ತಿಶಿಕ್ಷಣ ಮಾರ್ಗದರ್ಶನ ಕ್ಷೇತ್ರದಲ್ಲಿ ಸೇವೆ ಸಲ್ಲಿಸುವವರಿಗೆ ಆದರ್ಶಪ್ರಾಯವಾದುದು.

ಉತ್ತಮ ಕಥಾನಿರೂಪಣಾ ಬೋಧನಾ ಮಾಧ್ಯಮವನ್ನನುಸರಿಸಿ, ಕಲಿಕಾ ಆಸಕ್ತಿಯನ್ನು ಪ್ರಚೋದಿಸಿ, ಉತ್ತಮ ಸನ್ನಿವೇಷಗಳನ್ನು ಒದಗಿಸಿ,ಜ್ಞಾನ ಬೋಧನೆಯ ಜೊತೆಗೆ ಚಟುವಟಿಕೆಗಳ ಮೂಲಕ ಶೀಲಸಂಪನ್ನತೆ, ಸ್ವಾವಲಂಬನೆ, ಶಾರೀರಿಕ ದುಡಿಮೆಯಲ್ಲಿ ಆಸಕ್ತಿ ಮೂಡಿಸಿ, ಉತ್ತಮ ಪೌರರೂ, ರಾಜನೀತಿ ನಿಪುಣರೂ, ಸಮಾಜ ಸೇವಾಕಾಂಕ್ಷಿಗಳು ಬದುಕಿನನೀತಿ ಬಲ್ಲವರೂ ಆಗುವಂತೆ ಪ್ರೇರೇಪಿಸಿ, ಮಂದಮತಿಗಳನ್ನು ಸುಜ್ಞಾನಮತಿಗಳನ್ನಾಗಿ ಪರಿವರ್ತಿಸಿ, ಸುಂದರ ವ್ಯಕ್ತಿ ನಿರ್ಮಾಣ ಮಾಡುವ ಸಾಧನೆ ನಿಜಕ್ಕೂ ಅಪೂರ್ವ ಹಾಗೂ ಅದ್ವಿತೀಯವಾದುದು. ಪಂಚತಂತ್ರದ ಮೂಲಕ ಇಂಥಹ ಸಾಧನೆಗೈದವರೇ ಈ ವಿಷ್ಣುಶರ್ಮರು, ಹಿರಿಯ ಪಂಡಿತೋತ್ತಮರು, ಸಜ್ಜನರು.

आदौ चित्ते ततः काये सतां सम्पद्यते जरा ।

असतां तु पुनः काये नैव चित्ते कदाचन ॥[5]

ಒಂದು ಮಾತಿದೆ:– ಸಜ್ಜನರ ವಿಷಯದಲ್ಲಿ, ಮೊದಲು ಮನಸ್ಸಿನಲ್ಲಿ, ತದನಂತರ ಶರೀರದಲ್ಲಿ ಮುಪ್ಪು ಮೈದೋರುತ್ತದೆ. ಆದರೆ ಇತರರಿಗೆ ಶರೀರದಲ್ಲಿ ಮುಪ್ಪು ತೋರಿದರೂ ಚಿತ್ತದಲ್ಲಿ ಎಂದೂ ಮುಪ್ಪುಂಟಾಗುವುದೇ ಇಲ್ಲ. ಅಂದರೆ ಸಜ್ಜನರಲ್ಲಿ ಮನಸ್ಸಿನ ಮುಪ್ಪೆಂದರೆ ಚಿಂತನೆ ಹಾಗೂ ಜ್ಞಾನದ ಪರಿಪಕ್ವತೆ.

---

4. **ಭರ್ತೃಹರಿಯ ನೀತಿಶತಕ,** ಪರೋಪಕಾರ ಪದ್ಧತಿ–ಶ್ಲೋ–79.
5. **ಸುಧಾಕರಮಾಲವೀಯ,** ಶ್ರೀವಿಷ್ಣುಶರ್ಮವಿರಚಿತಪಂಚತಂತ್ರಮ್,ಸಂಪಾ,ವ್ಯಾಖ್ಯಾ,ಪ್ರ.ತಂ.ಶ್ಲೋ–177,ಪು–100,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ಓರಿಯಂಟಲ್ ಪಬ್ಲಿಷರ್ಸ& ಡಿಸ್ಟ್ರಿಬ್ಯೂಟರ್ಸ್,ಏ.37/118, ಗೋಪಾಲ್ ಮಂದಿರ್ ಲೇನ್, ಪಿ.ಬಿ.ನಂ–1118, ವಾರಣಾಸಿ–221001.

ಪಂಚತಂತ್ರವು ಆ ಪ್ರಾಚೀನ ಕಾಲದಲ್ಲಿಯೇ ಪರಿಣಾಮಕಾರಿಯಾದ ಶೈಕ್ಷಣಿಕ ಮನೋವಿಜ್ಞಾನದ ಬಹಳಷ್ಟು ಪರಿಕಲ್ಪನೆಯನ್ನು ನೀತಿಶಿಕ್ಷಣದಲ್ಲಿ ಅಳವಡಿಸಿಕೊಂಡಿತ್ತು. "ಶೀಲ-ಸಚ್ಚಾರಿತ್ರ್ಯವಿಲ್ಲದ ಶಿಕ್ಷಣ ಸಮಾಜ ಘಾತುಕ" ಎಂದು ಗಾಂಧೀಜಿಯವರು ಸಾರಿದ್ದಾರೆ. ಶಿಕ್ಷಿತರೆಂದು ಹೇಳಿಕೊಳ್ಳುವವರು ಅನೀತಿವಂತರಾದರೆ ಅವರ ಬುದ್ಧಿ-ಜ್ಞಾನಗಳೆಲ್ಲ ತಪ್ಪುದಾರಿ ಹಿಡಿದು ಜನರಿಗೆ ಹಾಗೂ ಸಮಾಜಕ್ಕೆ ಅದರಿಂದ ಕೇಡುಂಟಾಗುತ್ತದೆ. ಆದ್ದರಿಂದ ಶಿಕ್ಷಕನಾದವನು ತಾನು ಕಲಿಸಬೇಕಾದ ವಿಷಯದಲ್ಲಿ ಪ್ರಾವೀಣ್ಯತೆ ಪಡೆದಿರಬೇಕು, ಪಾರಂಗತನಾಗಿರಬೇಕು. ಆಯಾ ವಿಷಯಗಳನ್ನು-ಬೋಧಿಸುವಕ್ರಮ-ವಿಧಾನಗಳನ್ನು ಅರಿತಿರಬೇಕು.

ವಿದ್ಯಾರ್ಥಿಗಳ ನಡತೆ, ಬುದ್ಧಿಶಕ್ತಿ, ವರ್ತನೆ, ಆಸಕ್ತಿ ಇತ್ಯಾದಿಗಳ ಬಗ್ಗೆ ಪರಿಶೀಲಿಸುವ ಪರಿಜ್ಞಾನ ಇರಬೇಕು. ಶಿಕ್ಷಣ ಸಾಧನಗಳು, ಶಿಕ್ಷಣಕ್ರಮ, ಪರೀಕ್ಷಾ ತಂತ್ರಗಳು, ಮೌಲ್ಯಮಾಪನ ಇವುಗಳ ಬಗ್ಗೆ ವಿಶೇಷ ಜ್ಞಾನವಿರಬೇಕು ಎಂಬೆಲ್ಲ ವೈಜ್ಞಾನಿಕ ಕ್ರಮಗಳನ್ನು ಶೈಕ್ಷಣಿಕ ಮನೋವಿಜ್ಞಾನವು ಸೂಚಿಸುತ್ತದೆ. ಪಂಚತಂತ್ರವು ಈ ಎಲ್ಲ ಆದರ್ಶಗಳನ್ನು ಬಹಳ ಅಚ್ಚುಕಟ್ಟಾಗಿ ನಿರೂಪಿಸುತ್ತದೆ.

ಸಾಮಾನ್ಯ ವಿಜ್ಞಾನಗಳಂತೆಯೇ ಮನೋವಿಜ್ಞಾನಕ್ಕೂ ಎರಡು ಅಂಶಗಳಿವೆ. ಅವುಗಳೆಂದರೆ, ಒಂದು-ಶುದ್ಧ ಅಥವಾ ಶಾಸ್ತ್ರೀಯ ವಿಜ್ಞಾನ, ಎರಡು-ಅನ್ವಯಿಕ ವಿಜ್ಞಾನ. ಶೈಕ್ಷಣಿಕ ಮನೋವಿಜ್ಞಾನವು ಅನ್ವಯಿಕ ಮನೋ ವಿಜ್ಞಾನದ ಒಂದು ಶಾಖೆಯಾಗಿದೆ. ಅರ್ಥಾತ್ ಮನೋವಿಜ್ಞಾನದ ಜ್ಞಾನವನ್ನು ಶೈಕ್ಷಣಿಕ ಕ್ಷೇತ್ರಕ್ಕೆ ಅನ್ವಯಿಸುವ ಪ್ರಯತ್ನ. ಮನೋವೈಜ್ಞಾನಿಕ ತತ್ವಗಳು ಹಾಗೂ ತಂತ್ರಗಳನ್ನು ಶೈಕ್ಷಣಿಕ ಸನ್ನಿವೇಶಗಳಲ್ಲಿ ವ್ಯಕ್ತಿಯ ಅಥವಾ ಮಾನವನ ವರ್ತನೆಗೆ ಅನ್ವಯಿಸುವುದಾಗಿರುತ್ತದೆ. ಶೈಕ್ಷಣಿಕ ಪರಿಸರಕ್ಕೆ ಸಂಬಂಧಿಸಿದಂತೆ ಕಲಿಯುವವನ ಅನುಭವ ಮತ್ತು ವರ್ತನೆಗಳನ್ನು ಅಭ್ಯಾಸ ಮಾಡುವುದೇ ಶೈಕ್ಷಣಿಕ-ಮನೋವಿಜ್ಞಾನ. ಶೈಕ್ಷಣಿಕ-ಮನೋವಿಜ್ಞಾನವು ಶಿಕ್ಷಣದ ಗುರಿಗಳು ಮತ್ತು ಉದ್ದೇಶಗಳನ್ನು ಕುರಿತು ಚರ್ಚಿಸುವುದಿಲ್ಲ. ಏಕೆಂದರೆ ಅದು ಶೈಕ್ಷಣಿಕ ತತ್ವಜ್ಞಾನದ ಕೆಲಸ. ಬೋಧನೆ, ಕಲಿಕೆಯ ಸಮಸ್ಯೆಗಳು, ಶೈಕ್ಷಣಿಕ ಸನ್ನಿವೇಶಗಳು, ವರ್ತನೆಗಳು- ಪರಿವರ್ತನೆಗಳು ಹಾಗೂ ವ್ಯಕ್ತಿತ್ವದ ಬೆಳವಣಿಗೆ ಮತ್ತು ವಿಕಾಸಗಳನ್ನು ಕುರಿತು ಅಧ್ಯಯನ ನಡೆಸುವುದಾಗಿರುತ್ತದೆ ಪ್ರಸ್ತುತ ಮಹಾಪ್ರಬಂಧದಲ್ಲಿ ಶಾಸ್ತ್ರೀಯವಾಗಿ ಮನೋವಿಜ್ಞಾನವನ್ನು ಪರಿಗಣಿಸಿರುವುದಿಲ್ಲ. ಅಂದರೆ ಅನ್ವಯಿಕ ಮನೋವಿಜ್ಞಾನದ ಒಂದು ಶಾಖೆಯಾಗಿರುವ ಶೈಕ್ಷಣಿಕ ಮನೋವಿಜ್ಞಾನದ ಸಾಮಾನ್ಯವಾಗಿ ಅನುಭವಗಳಿಂದ ಕಂಡುಕೊಂಡಿರುವ ಪರಿಕಲ್ಪನೆಗಳನ್ನು ಮಾತ್ರ ಅನ್ವಯಿಸಿ, ಸಂಶೋಧನಾ ಕಾರ್ಯವನ್ನು ನಡೆಸಲಾಗಿದೆ. ಶಿಕ್ಷಣ ಕ್ಷೇತ್ರದಲ್ಲಿ ಮನೋವಿಜ್ಞಾನದ ಅವಿನಾಭಾವ ಸಂಬಂಧ ಏನಿದೆಯೋ ಅದನ್ನು ಗಮನದಲ್ಲಿಟ್ಟುಕೊಂಡು ವಿಶ್ಲೇಷಣೆ ಮಾಡಲಾಗಿದೆ. ಶಿಕ್ಷಣ ಮನೋವಿಜ್ಞಾನವೆಂದರೆ ಶಿಕ್ಷಣದಲ್ಲಿ

ಮಾನವ ಸ್ವಭಾವ ವಹಿಸುವ ಪಾತ್ರವನ್ನು ಕುರಿತ ಜ್ಞಾನವೇ ಆಗಿರುತ್ತದೆ. ಕಲಿವು ಹಾಗೂ ಬೋಧನೆ ಇವೆರಡಕ್ಕೂ ನಿಕಟವಾಗಿ ಸಂಬಂಧಿಸಿರುವ ಆಧಾರ ಜ್ಞಾನ. ಡಾಡ್ಸನ್ ಎಂಬ ಪಂಡಿತರು "ವ್ಯಕ್ತಿ ಸಮಾಜ ಜೀವನದಲ್ಲಿ ಸುರಕ್ಷತೆ ಮತ್ತು ತೃಪ್ತಿಗಳಿಂದ ಭಾಗವಹಿಸಲು ನೆರವಾಗುವಂತೆ ನಿರ್ದೇಶನ ನೀಡಲು ಅವನ ಕಲಿವಿಗೂ ಉಪಾಧ್ಯಾಯರ ಬೋಧನೆಗೂ ಹಲವಾರು ಮುಖಗಳಲ್ಲಿ ನೆರವಾಗುವ ಜ್ಞಾನ"[6] ಎಂದು ವ್ಯಾಖ್ಯಾನಿಸಿರುತ್ತಾರೆ. ಇತ್ತೀಚೆಗೆ, ಶಿಕ್ಷಣದ ಉದ್ದೇಶ, ವ್ಯಾಪ್ತಿ ಮತ್ತು ವೈವಿಧ್ಯತೆಗಳಲ್ಲಿ ಸಂಕೀರ್ಣತೆ ಹೆಚ್ಚಿದಂತೆ ಶಿಕ್ಷಣ ಮನೋವಿಜ್ಞಾನದ ವ್ಯಾಪ್ತಿಯು ವಿಸ್ತಾರವಾಗುತ್ತಿದ್ದು ನವನವೀನ ಸಾಧನೆಗಳು ಜರುಗುತ್ತಿವೆ. ಇದರಲ್ಲಿ ಶಿಕ್ಷಕರ ಪಾತ್ರದ ಮಹತ್ವವನ್ನು ಚರ್ಚಿಸಲಾಗಿದೆ.

ಶಿಕ್ಷಣ ಪ್ರಕ್ರಿಯೆಯಲ್ಲಿ ಸರಿಯಾದ ಶಿಕ್ಷಕನ ಪಾತ್ರವನ್ನು, ಅವನ ಘರ್ಷಣೆಗಳು, ಪ್ರೇರಣೆ, ಆತಂಕ, ಗುರು-ಶಿಷ್ಯರ-ಬಾಂಧವ್ಯ, ಅನುಭೂತಿ, ಹೊಂದಾಣಿಕೆ, ಮಹತ್ವಾಕಾಂಕ್ಷೆ, ವೃತ್ತಿ-ಘನತೆ ಮತ್ತು ವೃತ್ತಿಕೌಶಲ್ಯ, ನೀತಿಬೋಧನೆ, ಬೋಧನಾ ಮಾಧ್ಯಮ, ಪಠ್ಯಕ್ರಮ, ಮೌಲ್ಯಮಾಪನ ಇತ್ಯಾದಿಗಳ ಬಗ್ಗೆ ಶಿಕ್ಷಕರಾದವರಿಗೆ-ಶಿಕ್ಷಕರಾಗುವವರಿಗೆ ಸ್ಫೂರ್ತಿಯನ್ನು ನೀಡುವುದಾಗಿದೆ. ಪರಿಣಾಮಕಾರಿಬೋಧನೆ, ಕಲಿಕೆಯವರ್ಗಾವಣೆ, ಅಗತ್ಯ ಆದರ್ಶ ವ್ಯಕ್ತಿತ್ವ, ಆಸಕ್ತಿಗಳು, ಅಭಿಪ್ರೇರಣೆ, ಅವಧಾನ, ವಿಷಯಜ್ಞಾನ, ಶ್ರದ್ಧೆ, ಸೇವಾ ಮನೋಭಾವನೆ ಇತ್ಯಾದಿ ಗುಣಲಕ್ಷಣಗಳ ಮೇಲೆ ಬೆಳಕನ್ನು ಚೆಲ್ಲುವುದಾಗಿರುತ್ತದೆ. ಇಷ್ಟಲ್ಲದೆ ನೀತಿಪಾಠವು ಕಿರಿಯರಿಂದ ಹಿಡಿದು ಹಿರಿಯರ ತನಕ ಪ್ರತಿಯೊಬ್ಬರಿಗೂ ಅವಶ್ಯಕವಾಗಿ ಬೇಕಾಗಿರುವುದು. ಇಲ್ಲಿ ಮೌಲ್ಯಮಾಪನ ಎಂದರೆ ಮಾಡಿದ ತಪ್ಪುಗಳನ್ನು ಗುರುತಿಸಿ, ಅದನ್ನು ಸರಿಪಡಿಸಿಕೊಳ್ಳುವಂತೆ ಜಾಗೃತಿಯನ್ನುಂಟುಮಾಡುವುದು. ಅದಕ್ಕೆ ತಕ್ಕಂತೆ ಸೂಕ್ತ ಸನ್ನಿವೇಶಗಳನ್ನು ಒದಗಿಸಿ, ತಿಳುವಳಿಕೆಯನ್ನು ಬೆಳೆಸುವುದು. ಇದು ಪ್ರತಿಯೊಬ್ಬರಿಗೂ ಅವಶ್ಯಕ ಹಾಗೂ ಸಾರ್ವಕಾಲಿಕ. ಸುಮಾರು 2000 ವರ್ಷಗಳ ಹಿಂದೆಯೇ ಇಂಥಹ ಸುಧಾರಿತ ಚಿಂತನೆಯನ್ನು ಮಾಡಿ ವಿಷ್ಣುಶರ್ಮರು ಪಂಚತಂತ್ರ ರಚನೆ ಮಾಡಿದ್ದಾರೆ ಎಂಬುದು ಒಂದು ಹೆಮ್ಮೆಯ ವಿಚಾರ. ಭರತಖಂಡವು ಇಂಥಹ ಒಬ್ಬ ಪ್ರತಿಭಾವಂತ ಶಿಕ್ಷಕರನ್ನು ಕೊಡುಗೆಯಾಗಿ ನೀಡಿರುವುದು ಇನ್ನೂ ಪ್ರತಿಷ್ಠೆಯ ವಿಷಯವಾಗಿದೆ. ಮತ್ತೊಂದು ವಿಶೇಷವೆಂದರೆ, ನಮ್ಮ ದೇಶದ ಕೇಂದ್ರ ಘನ ಸರ್ಕಾರ 2020 ರ ಹೊಸ ಶಿಕ್ಷಣ ನೀತಿಯನ್ನು ಜಾರಿಗೊಳಿಸಿ-**Multi disciplinary and holistic education** ಹಾಗೂ **Universalization of Education**. (ಶಿಕ್ಷಣದ ಸಾರ್ವತ್ರೀಕರಣ, ವಿಶ್ವವ್ಯಾಪಕಗೊಳಿಸುವಿಕೆ) ಸನಾತನ ಹಾಗೂ ಸಾಂಸ್ಕೃತಿಕ ಪರಂಪರೆಯ ರಕ್ಷಣೆ) ಆದೇಶಿಸಿರುವುದು ಒಂದು ಸಂಭ್ರಮದ ವಿಚಾರವಾಗಿದೆ.

ಪಂಚತಂತ್ರದ ಕಥಾಮುಖದಲ್ಲಿ ತಿಳಿಸಿರುವಂತೆ, "ಈ ಜೀವನವು ಶಾಶ್ವತವಲ್ಲ ಮತ್ತು ಶಾಸ್ತ್ರಗಳನ್ನೆಲ್ಲಾ ದೀರ್ಘಕಾಲದಿಂದ ಅಭ್ಯಾಸಮಾಡಬೇಕು. ಶಾಸ್ತ್ರಗಳೆಲ್ಲವನ್ನೂ ಅಭ್ಯಾಸಮಾಡಲು ಒಂದು ಜನ್ಮ ಸಾಕಾಗುವುದಿಲ್ಲ.

---

6. **ವೀರಪ್ಪ ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ,ಅಧ್ಯಾಯ-2,ಪು-19-20,(1962),ಡಿ.ವಿ.ಕೆ ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

ಆದ್ದರಿಂದ ಶಾಸ್ತ್ರವನ್ನು ಸಂಕ್ಷೇಪದಲ್ಲಿ ಬೋಧಿಸುವುದಕ್ಕಾಗುತ್ತದೆಯೇ ಎಂದು ವಿಚಾರ ಮಾಡಬೇಕು. ಶಾಸ್ತ್ರಗಳ ಸಾರಮಾತ್ರವನ್ನು ತಿಳಿದುಕೊಳ್ಳಬೇಕು. ಇದಕ್ಕೆ ಸೂಕ್ತವಾದವರೆಂದರೆ, ವಿದ್ಯಾರ್ಥಿ ಸಮುದಾಯದಲ್ಲಿ ಹೆಸರುವಾಸಿಯಾದ, ಸಕಲಶಾಸ್ತ್ರ ಪಾರಂಗತರಾದ ವಿಷ್ಣುಶರ್ಮರು. ಖಂಡಿತವಾಗಿಯೂ ಮಂದಮತಿಗಳಾದ ರಾಜಕುಮಾರರನ್ನು ಬೇಗನೆ ಬುದ್ಧಿವಂತರನ್ನಾಗಿ ಮಾಡುವರು.[7] ಹೀಗೆ ಅಮರಶಕ್ತಿ ಆಸ್ಥಾನದಲ್ಲಿದ್ದ ಸಚಿವರ ಗುಂಪಿನಲ್ಲೊಬ್ಬರಾದ ಸುಮತಿ ಎಂಬುವವರು ಸಲಹೆ ಮಾಡುತ್ತಾರೆ. ಒಬ್ಬ ಶಿಕ್ಷಕನ ಬಗ್ಗೆ ಹೀಗೆ ಒಂದು ವಿಶ್ವಾಸಾರ್ಹತೆ ಅಥವಾ ಭರವಸೆ ಮೂಡಿಬರಬೇಕು. ಇನ್ನು ಇಲ್ಲಿ ಇವರ ಶಿಷ್ಯರನ್ನೂ ಪ್ರಶಂಸಿಸಲೇಬೇಕು. ಏಕೆಂದರೆ ಅವರು ಗುರುಗಳಲ್ಲಿ ಅಷ್ಟೇ ನಂಬಿಕೆ, ಶ್ರದ್ಧಾಭಕ್ತಿ ಹಾಗೂ ವಿಶ್ವಾಸವನ್ನು ಬೆಳೆಸಿಕೊಂಡಿದ್ದರು. ಒಂದು ಸುಭಾಷಿತ ಹೀಗೆ ಹೇಳುತ್ತದೆ:–

वाच्यं श्रद्धासमेतस्य पृच्छकस्य विशेषतः ।

प्रोक्तं श्रद्धाविहीनाय ह्यरण्यरुदितं भवेत् ॥[8]

ಅಂದರೆ, ಯಾರಿಗೆ (ನಮ್ಮ ಮೇಲೆ) ವಿಶ್ವಾಸವಿದೆಯೋ ಮತ್ತು ಹೆಚ್ಚಾಗಿ ಅವರು ನಮ್ಮಲ್ಲಿ (ಅದರ) ಬಗ್ಗೆ ವಿಚಾರಿಸುತ್ತಾರೆಯೋ ಅವರಿಗೆ ಉಪದೇಶಿಸಬೇಕು(ಮಾರ್ಗದರ್ಶನ ಮಾಡಬೇಕು). ಆದರೆ ವಿಶ್ವಾಸವಿಲ್ಲದೇ ಇದ್ದವರಿಗೆ ಹೇಳಿದರೆ ನಮ್ಮ ಪರಿಶ್ರಮ ನಷ್ಟ ಅಥವಾ ವ್ಯರ್ಥವಾಗುತ್ತದೆ.

ಭಾಷೆ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಸಂಶೋಧನೆ ನಡೆಸುವಾಗ ಬಹಳ ಮುಖ್ಯವಾದುದು ಭಾಷಾ ಸಾಮಗ್ರಿ ಹಾಗೂ ಜ್ಞಾನಸಾಮಗ್ರಿ. ಜ್ಞಾನವು ಕ್ರಿಯೆಯಲ್ಲಿ ಘಟಿಸುವುದು. ಹಾಗೆಯೇ ವಸ್ತು, ಭಾಷೆಗಳಲ್ಲಿ ಘನೀಭೂತಗೊಳ್ಳುವುದು. ಜ್ಞಾನವೂ ಒಳಗೊಂಡಂತೆ ಅದರ ಶೋಧಕ್ಕೆ ನೆರವಾಗುವುದು ಭಾಷೆ. ಸಂಶೋಧಕನು ತನ್ನ ಜ್ಞಾನ ಮತ್ತು ಕ್ರಿಯೆಗಳನ್ನು ಮೂರ್ತಗೊಳಿಸುವುದು ಭಾಷೆಯಿಂದ. ಆದ್ದರಿಂದ ಸಂಶೋಧನಾ ಸಂದರ್ಭದಲ್ಲಿ ಭಾಷಾಕ್ಷೇತ್ರವು ಬಹುಮುಖ್ಯ ಆಕರ ಸಾಮಗ್ರಿಯಾಗಿರುತ್ತದೆ. ಇದನ್ನು ಲಿಖಿತ ಮತ್ತು ಮೌಖಿಕ ಎಂಬುದಾಗಿ ವಿಭಾಗಿಸಬಹುದು. ಲಿಖಿತ ಸಾಮಗ್ರಿಯನ್ನು ದಾಖಲು ಸಾಮಗ್ರಿ ಮತ್ತು ಸಾಹಿತ್ಯ ಸಾಮಗ್ರಿಯೆಂದು ವಿಂಗಡಿಸಬಹುದು. ದಾಖಲು ಸಾಮಗ್ರಿಗಳನ್ನು ಶಾಸನ ಮತ್ತು ದಾಖಲೆಯೆಂದೂ, ಸಾಹಿತ್ಯವನ್ನು ಕಾವ್ಯ ಮತ್ತು ಶಾಸ್ತ್ರವೆಂದೂ ವರ್ಗೀಕರಣ ಮಾಡಲಾಗಿದೆ. ಸಾಹಿತ್ಯ ಸಂಸ್ಕೃತಿಯ ಸಂಶೋಧನ ಕಾರ್ಯದಲ್ಲಿ ಗ್ರಂಥಗಳು, ಮೌಖಿಕ ವ್ಯಾಖ್ಯಾನಗಳು ಬಹಳ ಮುಖ್ಯ ಸಾಮಗ್ರಿಗಳಾಗಿವೆ.[9] ಭರ್ತೃಹರಿಯ ನೀತಿಶತಕದಲ್ಲಿ ಹೀಗೆ ಹೇಳಿರುವುದನ್ನು ಈ ಸಂದರ್ಭದಲ್ಲಿ ಸ್ಮರಣೆ ಮಾಡಿಕೊಳ್ಳಬಹುದು:

---

7. **ಸುಧಾಕರಮಾಲವೀಯ,** ಶ್ರೀವಿಷ್ಣುಶರ್ಮವಿರಚಿತಪಂಚತಂತ್ರಮ್, ಸಂಪಾ, ವ್ಯಾಖ್ಯಾ, ಕಥಾಮುಖಮ್–ಪು.–7,8,9,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ಓರಿಯಂಟಲ್ ಪಬ್ಲಿಷರ್ಸ& ಡಿಸ್ಟ್ರಿಬ್ಯೂಟರ್ಸ್,ಏ.37/118, ಗೋಪಾಲ್ ಮಂದಿರ್ ಲೇನ್, ಪಿ.ಬಿ.ನಂ–1118, ವಾರಣಾಸಿ–221001.
8. **ಸುಭಾಷಿತಭಾಂಡಾಗಾರಂ,** बालसंस्कार– संस्कृत सुभाषिते : १
9. **ಕಲಬುರ್ಗಿ. ಎಂ.ಎಂ.** ಕನ್ನಡ ಸಂಶೋಧನ ಶಾಸ್ತ್ರ, ಅ–2, ಪು–21–25, ಸಪ್ನ ಬುಕ್ ಹೌಸ್ ಪ್ರೈ.ಲಿ.3ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು–560009.–(2015)

नैवाकृतिः फलतिनैवकुलं न शीलं

विद्यापि नैव न च यत्नकृतापि सेवा ।

भाग्यानि पूर्वतपसा खलु सञ्चितानि

काले फलन्ति पुरुषस्य यथैव वृक्षाः॥[10]

ಅಂದರೆ, ಆಕಾರವೂ, ಕುಲವೂ, ಶೀಲವೂ, ಪ್ರಯತ್ನಪೂರ್ವಕ ಮಾಡಿದ ಸೇವೆಯು ಫಲಿಸುವುದಿಲ್ಲ. ಹಿಂದಿನ ಜನ್ಮದಲ್ಲಿ ಆಚರಿಸಿದ ತಪಸ್ಸಿನಿಂದ ಸಂಗ್ರಹವಾದ ಭಾಗ್ಯಗಳು ಸಕಾಲದಲ್ಲಿ ವೃಕ್ಷಗಳಂತೆ ಫಲಕೊಡುತ್ತವೆ. ಈ ಮಹಾ ಪ್ರಬಂಧವನ್ನು ರಚಿಸಲು ಬಹಳಷ್ಟು ಮಹತ್ವಪೂರ್ಣ ವಿಚಾರಗಳ ಪ್ರಭೆಯನ್ನೊದಗಿಸಿದ ಗ್ರಂಥಗಳು ಅಪಾರ. ಅವುಗಳಲ್ಲಿ ಕೆಲವು ಆಕರ ಗ್ರಂಥಗಳಾಗಿ ನನ್ನ ಕಾರ್ಯಕ್ಕೆ ಪ್ರೇರಣಾದಾಯಕವಾಗಿವೆ. ಇನ್ನು ಕೆಲವು ಸಂಶೋಧನಾಕಾರ್ಯಕ್ಕೆ ಪುಷ್ಟಿಯನ್ನೊದಗಿಸಿವೆ. ಈ ಮಹಾಪ್ರಬಂಧ ರಚನೆಗೆ ಜ್ಞಾನದಕಿರಣಗಳನ್ನು ಒದಗಿಸಿ ವಿವಿಧ ವಿಚಾರಗಳ ಅರಿವು ಮೂಡಿಸಿ ಸಹಾಯ ಮಾಡಿದ ಗ್ರಂಥಗಳನ್ನು ಅನುಬಂಧದಲ್ಲಿ ಹೆಸರಿಸಿ ಸೂಚಿಸಲಾಗಿದೆ. ಗ್ರಂಥ ಕರ್ತೃಗಳಾದ ವಿದ್ವಾಂಸರುಗಳಿಗೆ ಕೃತಜ್ಞತೆಗಳನ್ನು ವಿನಮ್ರನಾಗಿ ಸಲ್ಲಿಸುವುದು ನನ್ನ ಕರ್ತವ್ಯವಾಗಿರುತ್ತದೆ.

अपि प्रभूतं विदुषां मतिभ्यः

महाखनिभ्यः खलु काव्यरत्नम्।

सभासु संचारितमुत्तमानां

अनर्घतामंचति मंजुतां च ॥[11]

ಅಂದರೆ, "ದೊಡ್ಡ ಗಣಿಯಿಂದ ರತ್ನವು ಹೊರಬರುವಂತೆ, ವಿದ್ವಾಂಸರ ಪ್ರತಿಭೆಯಿಂದ ರಸಪೂರ್ಣವಾದ ಕಾವ್ಯವು ಹುಟ್ಟಿದರೂ ಸಹ ರಸಿಕರ ಸಭೆಯಲ್ಲಿ ಮೆರೆದಾಗ ಆ ಕಾವ್ಯಕ್ಕೆ ಬೆಲೆ ಹೆಚ್ಚುತ್ತದೆ. ಅಲ್ಲದೆ ಮತ್ತಷ್ಟು ಸುಂದರವೂ ಆಗುತ್ತದೆ" ಎಂಬುವಂತೆ ಸಾಹಿತ್ಯ ಗೋಷ್ಠಿಯಲ್ಲಿ ವಿದ್ವಾಂಸರು ತಮ್ಮ ವಿದ್ವತ್ಪೂರ್ಣ ವ್ಯಾಖ್ಯಾನ ಶೈಲಿಯಲ್ಲಿ ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಹೆಚ್ಚು ಬೆಲೆಯನ್ನೂ, ಸೌಂದರ್ಯವನ್ನೂ ಒದಗಿಸುತ್ತಾರೆ. ಮತ್ತೊಂದು ಸುಸಂದರ್ಭ ಒದಗಿದ್ದೆಂದರೆ, ಕರೋನ-19 ಸರ್ವವ್ಯಾಪಿ ವ್ಯಾಧಿಯ ಸನ್ನಿವೇಶದಲ್ಲಿ ಭೌತಿಕ ಕಮ್ಮಟಗಳೆಲ್ಲ **(Offline Seminars)**

10. **ಭರ್ತೃಹರಿಯ ನೀತಿಶತಕ,** 10-ಕರ್ಮಪದ್ಧತಿ, ಶ್ಲೋ-97
11. **ಸುಭಾಷಿತಮಂಜರೀ,** ಕವಿಕಾವ್ಯಪ್ರಶಂಸೆ-ಶ್ಲೋ-4,ಪು-4, ಅನ್ಯೋಕ್ತಿಸ್ತಬಕ-3,ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು-18-(2001)

ಮಿಂಗಮ್ಮಟಗಳಾಗಿ **(On-line Webinars)** ಪರಿವರ್ತನೆಗೊಂಡದ್ದು ನಮಗೆ ಒಂದು ಅನಿರೀಕ್ಷಿತ ಅವಕಾಶವೊದಗಿತು ಮನೆಯಲ್ಲೇ ಕೂತು ರಾಜ್ಯ/ರಾಷ್ಟ್ರೀಯ/ ಅಂತರರಾಷ್ಟ್ರೀಯ ಸಂಗೋಷ್ಠಿಗಳು –ಕಾರ್ಯಶಾಲಾಗಳು– ಮಿಂಗಮ್ಮಟಗಳಲ್ಲಿ ಭಾಗವಹಿಸಿ, ದೇಶವಿದೇಶಗಳ ಪ್ರತಿಭಾನ್ವಿತ ವಿದ್ವಾಂಸರುಗಳ ವ್ಯಾಖ್ಯಾನಗಳನ್ನು ಕೇಳುತ್ತಾ ಜ್ಞಾನದ ರಸದೌತಣವನ್ನು ಸವಿಯುವಂತಾಯಿತು. ಅನೇಕ ಹೊಸ ವಿಚಾರಗಳನ್ನು ತಿಳಿದು ನನ್ನ ಸಂಶೋಧನಾ ಕಾರ್ಯಕ್ಕೆ ಬಹಳಷ್ಟು ಪ್ರೋತ್ಸಾಹದಾಯಕವಾಯಿತು. ಪ್ರತ್ಯಕ್ಷವಾಗಿ ಆ ಎಲ್ಲ ಕಾರ್ಯಕ್ರಮಗಳಲ್ಲಿ ಭಾಗವಹಿಸಲಸಾಧ್ಯವಾದುದು.

ನನಗೆ ಸುಮಾರು ಒಂದುನೂರ ಎಪ್ಪತ್ತೈದಕ್ಕೂ ಹೆಚ್ಚು ರಾಜ್ಯ/ರಾಷ್ಟ್ರೀಯ/ಅಂತರರಾಷ್ಟ್ರೀಯ ಮಿಂಗಮ್ಮಟಗಳು/ ಕಾರ್ಯಶಾಲಾಗಳಲ್ಲಿ ಭಾಗವಹಿಸಲು ಅವಕಾಶ ಒದಗಿತು. ಸಂಸ್ಕೃತ ವಾಙ್ಮಯದಲ್ಲಿನ ಅನೇಕ ವಿಶಿಷ್ಟ ಹಾಗೂ ವಿನೂತನ ವಿಚಾರಗಳು, ಚಿಂತನೆಗಳು, ಸಂಸ್ಕೃತಭಾಷೆ, ಸಾಹಿತ್ಯ, ಕಥಾಸಾಹಿತ್ಯ, ಕಥಾ ನಿರೂಪಣೆಯ ವೈಶಿಷ್ಟ್ಯ, ವ್ಯಕ್ತಿನಿರ್ಮಾಣದಲ್ಲಿ ನೀತಿಕಥೆಗಳ ಪ್ರಾಮುಖ್ಯತೆ, ಪಂಚತಂತ್ರದ ವಿಶ್ವವ್ಯಾಪಿ ಪ್ರಭಾವ ಇತ್ಯಾದಿ ಅನೇಕ ವಿಚಾರಗಳು ಲಭ್ಯವಾದವು.

ಹಾಗೆಯೇ ಸುಮಾರು ಐದಾರು ಸಂಶೋಧನಾ ಲೇಖನಗಳನ್ನು ವ್ಯಾಖ್ಯಾನಿಸುವ ಸದವಕಾಶವೂ ದೊರಕಿತು ಹಾಗೂ ಕೆಲವು ಲೇಖನಗಳು ಪ್ರಕಟಗೊಂಡವು ಕೂಡ. ಇದಕ್ಕೆ ಸಂಬಂಧಿಸಿದ ವಿವರಗಳ ಒಂದು ಪಟ್ಟಿಯನ್ನು ಅನುಬಂಧದಲ್ಲಿ ಕಾಣಿಸಿದ್ದೇನೆ. ಆ ಎಲ್ಲ ಅಂತರ್ಜಾಲ ಕಾರ್ಯಕ್ರಮ ವ್ಯವಸ್ಥಾಪಕರುಗಳಗೂ, ಜ್ಞಾನದ ಪ್ರಭೆಯನ್ನು ಸುಮಧುರವಾಗಿ ಸೂಸಿದ ಸಕಲ ವಿದ್ವಾಂಸರಿಗೂ ನನ್ನ ಅಭಾರ ಕೃತಜ್ಞತೆಗಳನ್ನು ಸಲ್ಲಿಸಬಯಸುತ್ತೇನೆ.



# “ವಿಷ್ಣುಷ್ಣುಶರ್ಮರ ಪಂಚತಂತ್ರದಲ್ಲಿ ಶೈಕ್ಷಣಿಕ ಮನೋವಿಜ್ಞಾನ ಮತ್ತು ವ್ಯಕ್ತಿತ್ವ ನಿರ್ಮಾಣ ಕಲೆ” ಒಂದು ವಿಮರ್ಶಾತ್ಮಕ ಅಧ್ಯಯನ

## 1. ಪೀಠಿಕೆ

येषां न विद्या न तपो न दानं ज्ञानं न शीलं न गुणो न धर्मः ।

ते मर्त्यलोके भुवि भारभूताः मनुष्यरूपेण मृगाश्चरन्ति ॥[1]

ಯಾರಲ್ಲಿ ವಿದ್ಯೆಯಾಗಲಿ, ತಪಸ್ಸಾಗಲಿ, ದಾನವಾಗಲಿ, ಜ್ಞಾನವಾಗಲಿ, ಶೀಲವಾಗಲಿ, ಗುಣವಾಗಲಿ, ಧರ್ಮವಾಗಲಿ ಇಲ್ಲವೋ ಅಂಥವರು ಈ ಮನುಷ್ಯಲೋಕದಲ್ಲಿ, ಭೂಮಿಗೆ ಭಾರವಾಗಿ ಮನುಷ್ಯ ರೂಪದಲ್ಲಿ ಸಂಚರಿಸುವ ಮೃಗಗಳು ಮಾತ್ರ. ಮಹಾಕವಿ ಭರ್ತೃಹರಿಯು ಸಾಹಿತ್ಯದ ಅಧ್ಯಯನವನ್ನು ಪುಷ್ಟೀಕರಿಸಿ ಹೇಳುವ ಸಂದರ್ಭದಲ್ಲಿ ಒಂದು ಶ್ಲೋಕದಲ್ಲಿ ಈ ಉಪಯುಕ್ತ ಟಿಪ್ಪಣಿಯನ್ನು ನೀಡಿರುತ್ತಾನೆ.

‘साहित्यसङ्गीतकलाविहीनः साक्षात्पशुः पुच्छविषाणहीनः।

तृणं न खादन्नपि जीवमानः तद्भागधेयं परमं पशूनाम् ॥[2]

ಅಂದರೆ ಸಂಗೀತ ಹಾಗೂ ಸಾಹಿತ್ಯ ಕಲೆ ತಿಳಿಯದ ವ್ಯಕ್ತಿಯು ಮೃಗಗಳಲ್ಲೂ ಸಾಕ್ಷಾತ್ ಕೊಂಬು–ಬಾಲ ವಿಹೀನ (ಇಲ್ಲದ)ಪಶುವಿನಂತೆ. ಅವನು ಹುಲ್ಲನೊಂದು ತಿನ್ನದೆ ಬದುಕುತ್ತಿರುವುದು ಪಶುಗಳ ಪರಮ ಪುಣ್ಯ. ಕವಿ ಭರ್ತೃಹರಿ ಇಲ್ಲಿ ಸಾಹಿತ್ಯ, ಸಂಗೀತ, ಕಲೆಗಳ ಅರಿವಿನ ಮಹತ್ವವನ್ನು ವಿವರಿಸಿದ್ದಾನೆ. ಮಾನವ ಜನ್ಮ ದೊಡ್ಡದು. ಈ ಜನ್ಮಭಾಗ್ಯ ಪಡೆದ ಬಳಿಕ ಸಾಹಿತ್ಯಾಭಿರುಚಿ, ಸಂಗೀತಾಭಿರುಚಿ, ಕಲಾಭಿರುಚಿಗಳನ್ನು ಬೆಳೆಸಿಕೊಳ್ಳಬೇಕು.

ಸಮಗ್ರ ವಿಶ್ವದ ಸಾಹಿತ್ಯಗಳಲ್ಲೆಲ್ಲಾ ಸಂಸ್ಕೃತ ಸಾಹಿತ್ಯವು ಒಂದು ವಿಶೇಷ ಸ್ಥಾನಮಾನವನ್ನು ಹೊಂದಿದೆ. ಭಾರತೀಯ ಸಂಸ್ಕೃತಿಯ ಸ್ಪಷ್ಟ ದರ್ಶನವನ್ನು ಪಡೆಯಬೇಕಾದರೆ ಅದು ಸಂಸ್ಕೃತ ಭಾಷೆಯ ಅಧ್ಯಯನದಿಂದ ಮಾತ್ರ ಸಾಧ್ಯವೆಂದರೆ ಅತಿಶಯೋಕ್ತಿಯೇನಲ್ಲ. ಇಲ್ಲವಾದಲ್ಲಿ, ಅವರ ಜ್ಞಾನವು ಸರ್ವಥಾ ಅಪೂರ್ಣವೆನ್ನಬಹುದು. ಸಮಸ್ತ ಭಾರತೀಯ ಭಾಷೆಗಳಿಗೆ ಸಂಸ್ಕೃತ ಭಾಷೆಯು ಜನನಿಯಾಗಿದೆ. ಸಂಸ್ಕೃತವು ಭಾರತೀಯ ಧಾರ್ಮಿಕ ಜೀವನದ ಪ್ರಾಣಸ್ವರೂಪದಲ್ಲಿ ಒಂದು ಸಂಪದ್ಭರಿತ ಭಾಷೆಯಾಗಿದೆ. ಸಂಸ್ಕೃತಭಾಷೆ ಎಷ್ಟು ಪ್ರಾಚೀನ? ಇದಕ್ಕೆ ಬಹುತೇಕ ಒಂದೇ ಉತ್ತರ. “ಇದರ ಪ್ರಾಚೀನತೆಯನ್ನು ಅಳೆಯಲಾಗದಷ್ಟು ಇದು

1. **ಭರ್ತೃಹರಿಯ ನೀತಿಶತಕ** –1–ಮೂರ್ಖ ಪದ್ಧತಿ, ಶ್ಲೋ–13
2. **ಭರ್ತೃಹರಿಯ ನೀತಿಶತಕ,** 1–ಮೂರ್ಖಪದ್ಧತಿ ಶ್ಲೋ–12.

ಪ್ರಾಚೀನ. ಸಂಸ್ಕೃತ ವಾಙ್ಮಯ ಒಂದು ಮಹಾ ಸಮುದ್ರವಿದ್ದಂತೆ ಬಹಳ ವಿಸ್ತಾರವಾದ ವ್ಯಾಪ್ತಿಯನ್ನು ಹೊಂದಿದೆ.

रत्नगर्भा वसुंधरा । बहुरत्नजननी भारती । ಎಂಬಂತೆ ಈ ಭೂಮಿತಾಯಿ ತನ್ನ ಗರ್ಭದಲ್ಲಿ ನಾನಾ ಶಿಲಾರತ್ನಗಳನ್ನೂ ಹಾಗೂ ಮಾನವ ರತ್ನಗಳನ್ನೂ ಧರಿಸಿದ್ದಾಳೆ. ಭಾರತ ಮಾತೆಯು ಅಪಾರ ಸ್ತ್ರೀ ಪುರುಷ ರತ್ನಗಳಿಗೆ ಜನ್ಮ ನೀಡಿದ್ದಾಳೆ. ಅವಳು ಸೇವಿಸಬಲ್ಲವರಿಗೆ ಬಂಗಾರದ ಮೊಟ್ಟೆಯನ್ನೇ ಕೊಡಬಲ್ಲಳು.[3] ಅವರಲ್ಲಿ ಕವಿರತ್ನರನೇಕರು ಅಸಂಖ್ಯಾತ ಕಾವ್ಯಗಳನ್ನು ರಚಿಸಿ ಈ ವಾಙ್ಮಯದ ಹಿರಿಮೆಯನ್ನು ಪ್ರಕಾಶಗೊಳಿಸಿದ್ದಾರೆ. ಋಷಿಗಳ ದರ್ಶನರೂಪವಾದ ವೇದಗಳು, ಅವುಗಳಿಗೆ ಸಹಕಾರಿಯಾದ ವೇದಾಂಗಗಳು, ಅಷ್ಟಾದಶ ಪುರಾಣ – ಉಪಪುರಾಣಗಳು ಅಗಾಧ ಸಾಹಿತ್ಯರಾಶಿ ಒಂದೆಡೆಯಾದರೆ, ಮಹಾಕಾವ್ಯಗಳ ರಚನೆಗೆ ಪ್ರೇರಕವೂ, ಪೂರಕವೂ ಆದ ರಾಮಾಯಣ ಮಹಾಭಾರತಗಳು ಈ ವಾಙ್ಮಯದ ಕಿರೀಟಗಳಾಗಿ ಶೋಭಿಸುತ್ತಿವೆ. ಕಾಳಿದಾಸ, ಭಾಸ, ಮಾಘ, ಭಾರವಿ, ಶೂದ್ರಕ, ವಿಶಾಕದತ್ತರಂತಹ ಶ್ರೇಷ್ಠ ಕವಿಗಳ ಅನನ್ಯ ಕೃತಿಗಳು ಅತ್ಯಮೂಲ್ಯ ಹಾಗೂ ಜನಪ್ರಿಯವಾಗಿ ಉಳಿದಿವೆ.

ಈ ಮಹಾಕವಿಗಳಷ್ಟೇ ಅಲ್ಲದೆ ಅದೆಷ್ಟೋ ಬೆಳಕಿಗೆ ಬಾರದ ಬೂದಿಮುಚ್ಚಿದ ಕೆಂಡದಂತಿರುವ ಉಳಿದ ಅಜ್ಞಾತ ಕವಿಗಳು ಸಾಹಿತ್ಯ ಕೃಷಿಯಲ್ಲಿ ಪರಿಶ್ರಮಿಸಿ ಅಮೂಲ್ಯ ಕೊಡುಗೆಗಳನ್ನು ಸಾಹಿತ್ಯ ಜಗತ್ತಿಗೆ ಸಮರ್ಪಣೆ ಮಾಡಿರುತ್ತಾರೆ. ನಮ್ಮ ಭಾರತೀಯ ಸನಾತನ ಧರ್ಮ, ಸಂಸ್ಕೃತಿಯ ಪ್ರಚಾರ, ಪ್ರಸಾರ ಕಾರ್ಯದಲ್ಲಿ ಅವುಗಳ ಪಾತ್ರವೂ ಮಹತ್ವಪೂರ್ಣ. ಸಂಸ್ಕೃತ ಸಾಹಿತ್ಯ ಚರಿತ್ರೆಯನ್ನು ವಿವರಿಸುವ ಗ್ರಂಥಗಳಲ್ಲಿ ಅಜ್ಞಾತನೆಂದು ಪರಿಗಣಿಸಿದ ಯಾವ ಕವಿಯನ್ನೂ ಉದಾಸೀನ ಮಾಡದೆ, ಅವರ ಮಹತ್ಕಾರ್ಯಕ್ಕೆ ಗೌರವಾದರಗಳನ್ನು ಸಲ್ಲಿಸಿ, ಆ ಕೃತಿ ರಚನೆಯನ್ನು ಕುರಿತು ಉಲ್ಲೇಖ ಮಾಡುವುದು ಬಹಳ ಮುಖ್ಯ.[4]

उपेयुषामपि दिवं सन्निबंधविधायिनां ।

आस्त एव निरातंकं कान्तं काव्यमयं वपुः ॥[5]

---

3. **ಭಟ್.ವಿ.ಎನ್,** ಜ್ಞಾನದೀಪ, ಅ.ಸಂ–104,ಪು – 205,(1993),ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ–577201
4. **ವೆಂಕಣ್ಣಯ್ಯ. ತ.ಶಾ,** ಗುಮಾನಿ ಕವಿಯ ಉಪದೇಶಶತಕಂ (ಕನ್ನಡಾನುವಾದ) 1989. ಶ್ರೀ ಶಾರದಾ ಟ್ರಸ್ಟ್, 4581, ಗೋಮತಿ, ನ.ರಾ.ಮೊಹಲ್ಲಾ, ಮೈಸೂರು. 570007. ಪು.ಸಂ–13
5. **ಸುಭಾಷಿತಮಂಜರೀ,** ಕವಿಕಾವ್ಯಪ್ರಶಂಸೆ –ಶ್ಲೋ–9, ಪು–6, ಲೋಚನ–1. ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18(2001)

ಉತ್ತಮ ಕಾವ್ಯವನ್ನು ರಚಿಸಿದವರು ಸ್ವರ್ಗವನ್ನಡರಿದರೂ, ಅವರ ಸುಂದರವಾದ ಕಾವ್ಯಮಯ ಶರೀರವು ನಿರಾತಂಕವಾಗಿ ಇಲ್ಲಿ ಇದ್ದೇ ಇರುತ್ತದೆ.

ವಿಷಯ ವ್ಯಾಪಕತೆ ಹಾಗೂ ರಚನಾ ಕೌಶಲ್ಯಕ್ಕೆ ಸಂಸ್ಕೃತ ಸಾಹಿತ್ಯವು ಅಗ್ರಗಣ್ಯ ಸ್ಥಾನವನ್ನು ಪಡೆದಿದೆ. ಸಂಸ್ಕೃತ ಸಾಹಿತ್ಯದ ವ್ಯಾಪಕ ಅರ್ಥದಲ್ಲಿ ನಾಟಕ, ಮಹಾಕಾವ್ಯ, ಖಂಡಕಾವ್ಯ, ಆಖ್ಯಾಯಿಕಾ, ಕಥೆ, ಲಕ್ಷಣಗ್ರಂಥ ಮುಂತಾದ ಸಾಹಿತ್ಯ ಪ್ರಕಾರಗಳೂ ವಿದ್ಯಮಾನಗೊಂಡಿವೆ. ಇಷ್ಟೇ ಅಲ್ಲದೆ ಜ್ಯೋತಿಷ, ಗಣಿತ, ಆಯುರ್ವೇದ, ರಾಜನೀತಿ, ಸಂಗೀತ ಮುಂತಾದ ವಿಷಯಗಳ ಬಗ್ಗೆಯೂ ಅನೇಕಾನೇಕ ಗ್ರಂಥಗಳು ಲಭ್ಯವಿವೆ. ಧರ್ಮವೇ ಮುಂತಾದ ದರ್ಶನದ ದೃಷ್ಟಿಯಿಂದ ಸಂಸ್ಕೃತ ಸಾಹಿತ್ಯ ಬಹೂಪಯೋಗಿಯಾಗಿದೆ. ಮೆಕ್ಡೋನೆಲ್ ಬರೆಯುತ್ತಾರೆ "ಭಾರತೀಯರು ಸ್ವತಂತ್ರವಾಗಿ ಅನೇಕ ದರ್ಶನ ಸಂಪ್ರದಾಯಗಳನ್ನು ವಿಕಸಿತಗೊಳಸಿದ್ದಾರೆ. ಇದರಿಂದ ಅವರ ಶ್ರೇಷ್ಠ ಚಿಂತನಾಶಕ್ತಿಯ ಪ್ರಮಾಣ ತಿಳಿಯುತ್ತದೆ. ಪಂಚತಂತ್ರದ ಪಶುಪಕ್ಷಿಗಳ ನೀತಿಕಥೆಗಳಲ್ಲಿ ಎಂತಹ ಚಮತ್ಕಾರದ ಜೊತೆಗೆ ಸುಂದರ ಉಪದೇಶಗಳು ಭೋದಿಸಲ್ಪಟ್ಟಿವೆ! ಪಾಣಿನಿಯ ವ್ಯಾಕರಣ ಸೂತ್ರಗಳಲ್ಲಿ ಎಂಥಹ ಭಂಡಾರ ತುಂಬಿದ ಸಾಗರವಾಗಿದೆ! ಇದೆಲ್ಲವೂ ಸಂಸ್ಕೃತ ಸಾಹಿತ್ಯದ ವಿಶಿಷ್ಟತೆಯ ನಿದರ್ಶನವಾಗಿದೆ." ಸಂಸ್ಕೃತ ಸಾಹಿತ್ಯದಲ್ಲಿ ಶಬ್ದಚಮತ್ಕಾರ, ಅರ್ಥ ಚಮತ್ಕಾರಗಳ ಮೂಲಕ ಕಾವ್ಯಚಮತ್ಕಾರ ತೋರಿಸುವ ವಿಶಿಷ್ಟ ಸಂಪ್ರದಾಯ ಕಂಡುಬರುತ್ತದೆ. ಉದಾಹರಣೆಗೆ:

भारतं चेक्षुदण्डञ्च सिन्धुमिन्दुञ्च वर्णय । कालिदास कविर्ब्रूते प्रतिपर्वरसोदयम् ॥[6]

ಒಮ್ಮೆ ವಿದ್ವತ್ಸಭೆಯೊಂದರಲ್ಲಿ ಮಹಾಭಾರತ, ಕಬ್ಬು, ಸಮುದ್ರ ಮತ್ತು ಚಂದ್ರ ಈ ನಾಲ್ಕರ ವೈಶಿಷ್ಟ್ಯವನ್ನು ಒಂದೇ ವಾಕ್ಯದಲ್ಲಿ ಹೇಳುವಂತೆ ಕೇಳಲಾಯಿತು. ಎಲ್ಲಾಕವಿಗಳು "ಹೇಗೆ ಹೇಳಲು ಸಾಧ್ಯ" ಎಂದು ಅತ್ತಿತ್ತನೋಡುತ್ತಿರಲು, ಕಾಳಿದಾಸ ಮಹಾಕವಿ, "ಪ್ರತಿಪರ್ವರಸೋದಯಂ-ಪ್ರತಿಪರ್ವದಲ್ಲೂ ರಸವಿರುವಿಕೆ ಇವುಗಳ ವೈಶಿಷ್ಟ್ಯ" ಎಂದು ಹೇಳಿದಾಗ ಇಡೀ ಸಭೆಯೇ ತಬ್ಬಿಬ್ಬಾಗಿ ಕೆಲಕ್ಷಣ ಸ್ಥಬ್ಧವಾಯಿತಂತೆ. ನಾಲ್ಕರಲ್ಲೂ ಈ ವಾಕ್ಯವು ಹೇಗೆ ಅನ್ವಯಿಸಬಹುದೆಂದರೆ ಮೊದಲನೆಯದಾಗಿ ಮಹಾಭಾರತ-18 ಪರ್ವಗಳಿವೆ. ನವರಸಭರಿತವಾದ ಈ ಮಹಾಕಾವ್ಯ ಓದಲು ಪ್ರಾರಂಭಿಸಿದರೆ ಒಂದೊಂದು ಪರ್ವದಲ್ಲೂ ಒಂದೊಂದು ರಸ ಪುಟಿದೇಳುತ್ತದೆ. ಎರಡನೆಯದಾಗಿ ಇಕ್ಷುದಂಡ ಅಂದರೆ ಕಬ್ಬು. ಇದರಲ್ಲಿ ಪ್ರತಿಪರ್ವ ಎಂದರೆ ಪ್ರತಿ ಗೆಣ್ಣು ಎಂದರ್ಥ. ಕಬ್ಬಿನ ಒಂದೊಂದು ಗೆಣ್ಣು ದಾಟಿದಾಗಲೂ ರಸ ಚಿಮ್ಮುತ್ತದೆ. ಮೂರನೆಯದಾಗಿ

6. **ಭಟ್.ವಿ.ಎನ್,** ಜ್ಞಾನದೀಪ, ಅ.ಸಂ-70, ಪು -136, (1993), ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿನಗರ, ಶಿವಮೊಗ್ಗ-577201

ಸಮುದ್ರ. ಇಲ್ಲಿ ಪ್ರತಿಪರ್ವ ಎಂದರೆ ಹುಣ್ಣಿಮೆ ಎಂದರ್ಥ. ಪೂರ್ಣಚಂದ್ರನ ಸ್ವಾಗತಕ್ಕಾಗಿ ಸಮುದ್ರ ಪ್ರತಿ ಪರ್ವದಲ್ಲೂ ಕೊಬ್ಬಿ-ಉಬ್ಬಿ ಭೋರ್ಗರೆಯುವ ಸಂದರ್ಭ ಹೃದಯಂಗಮವಾಗಿರುತ್ತದೆ. ನಾಲ್ಕನೆಯದಾಗಿ ಚಂದ್ರನೂ ಹಾಗೆ. ಇಲ್ಲಿಯೂ ಪ್ರತಿಪರ್ವ ಎಂದರೆ ಹುಣ್ಣಿಮೆ ಎಂದರ್ಥ. ಹುಣ್ಣಿಮೆ ಬಂತೆಂದರೆ ಚಂದ್ರ ಮೈತುಂಬಿಕೊಂಡು ರಸರಾಜನಾಗಿ ಷೋಡಶಕಲೆಗಳಂದ ಮೆರೆಯುವನು. ವಿಷ್ಣುಶರ್ಮರ ಪಂಚತಂತ್ರದಲ್ಲೂ ಪ್ರಾಣಿಪಶುಪಕ್ಷಿಗಳ ನೀತಿ ಕಥೆಗಳಲ್ಲಿ ಎಂತಹ ವ್ಯಕ್ತಿತ್ವ ನಿರ್ಮಾಣ ಚಮತ್ಕಾರ ನಡೆದಿದೆ. ಇವೆಲ್ಲವೂ ಸಂಸ್ಕೃತ ಭಾಷಾವೈವಿಧ್ಯತೆಯನ್ನೂ, ಸಾಹಿತ್ಯ ಸಂಸ್ಕೃತಿಯ ಶ್ರೇಷ್ಠತೆಯನ್ನೂ ಪ್ರತಿಬಿಂಬಿಸುತ್ತದೆ. संस्कृतिः संस्कृताश्रिता ಸಂಸ್ಕೃತಿಯು ಸಂಸ್ಕೃತವನ್ನಾಶ್ರಯಿಸಿದೆ ಎಂಬುದು ಒಂದು ಪ್ರಸಿದ್ಧ ನಾಣ್ಣುಡಿಯಾಗಿರುತ್ತದೆ.

द्वे वर्त्मनिगिरो देव्याः शास्त्रं च कविकर्म च ।

प्रज्योपज्ञं तयोराद्यं प्रतिभोद्भवमन्तिमम् ॥[7]

ವಾಗ್ದೇವಿಯ ಮಾರ್ಗಗಳು ಎರಡು. ಒಂದು ಶಾಸ್ತ್ರ; ಮತ್ತೊಂದು ಕಾವ್ಯ. ಮೊದಲನೆಯದು ಬುದ್ಧಿಸಾಮರ್ಥ್ಯದಿಂದ ಹುಟ್ಟುತ್ತದೆ. ಎರಡನೆಯದು ಪ್ರತಿಭೆಯಿಂದಾಗುತ್ತದೆ. ಬಹಳ ಸಂಕ್ಷಿಪ್ತವಾಗಿ ಸಾಹಿತ್ಯದ ವಿವಿಧ ಪ್ರಕಾರಗಳ ಬಗ್ಗೆ ಸೂಕ್ಷ್ಮವಾಗಿ ವಿಚಾರಮಾಡಿದರೆ, ಶಾಸ್ತ್ರಗಳು, ವೇದಗಳು, ಕಾವ್ಯ ಇತ್ಯಾದಿಗಳನ್ನು ಸಾಮಾನ್ಯ ಜನರು ಅರ್ಥೈಸಿಕೊಂಡು ಸಂತಸಪಡುವುದು ಕಷ್ಟ ಸಾಧ್ಯವೇ ಸರಿ. ಇದನ್ನು ವಿಶ್ಲೇಷಣೆ ಮಾಡಲು, ಸಂಸ್ಕೃತಿ ಸಾಹಿತ್ಯದಲ್ಲಿ ಶಾಸ್ತ್ರ ಪ್ರಕಾರಗಳ ಒಂದು ಪಕ್ಷಿನೋಟವನ್ನು ಹಾಯಿಸೋಣ.

ಸಂಸ್ಕೃತ ಸಾಹಿತ್ಯವು ವಿಶ್ವದಲ್ಲಿಯೇ ಅತ್ಯಂತ ಪ್ರಾಚೀನವಾದುದು. ವೇದ ಪುರಾಣಶಾಸ್ತ್ರ ಮುಂತಾದ ಗ್ರಂಥ ಪ್ರಕಾರಗಳಲ್ಲಿ ಋಗ್ವೇದವು ಭಾಗಶಃ "ಪ್ರಾಚೀನತಮ"ಎಂದು ನಿಶ್ಚಯಿಸಲಾಗಿದೆ. ಧರ್ಮ ಉಪಾಸನೆ, ಬ್ರಹ್ಮ ಮುಂತಾದ ವಿಷಯಗಳನ್ನು ಮುಖ್ಯವಾಗಿ ಈ ಗ್ರಂಥಗಳಲ್ಲಿ ವಿವೇಚಿಸಲಾಗಿದೆ. ಇವುಗಳ ಜೊತೆಗೆ ಇವುಗಳಗಿಂತ ಭಿನ್ನವಾದ ಶೈಲಿಯೂ, ವಿಷಯವೂ, ವಾಲ್ಮೀಕಿರಾಮಾಯಣ, ವೇದವ್ಯಾಸರ ಮಹಾಭಾರತ, ಕಾಳಿದಾಸನ ಶಾಕುಂತಲ ಮುಂತಾದ ಗ್ರಂಥಗಳಲ್ಲಿ ಕಾಣಬರುತ್ತದೆ. ಅತ್ಯಂತ ಪ್ರಾಚೀನತೆಯ ಕಾರಣದಿಂದ ಸಂಸ್ಕೃತ ಸಾಹಿತ್ಯವು ಅಧ್ಯಯನಾಸಕ್ತರಿಗೆ, ಸಂಶೋಧನಾರ್ಥಿಗಳಗೆ ಹಾಗೂ ಇತಿಹಾಸ ಶಾಸ್ತ್ರಜ್ಞರಿಗೆ ಬಹಳ ಶ್ರೇಷ್ಠ ಉಪಕಾರಿಯೂ, ಉಪಯೋಗಿಯೂ ಆಗಿರುತ್ತದೆ.

ಸಂಸ್ಕೃತ ವಾಙ್ಮಯದಲ್ಲಿ ನಾಲ್ಕೂ ಪುರುಷಾರ್ಥಗಳನ್ನು ಕುರಿತ ಶಾಸ್ತ್ರಗಳವೆ. ಒಂದೊಂದು ಪುರುಷಾರ್ಥವೂ ಅತಿ ಹೆಚ್ಚಿನ ಮಹತ್ವ ಪಡೆದಿವೆ. ಇತಿಹಾಸದ ಉದ್ದಕ್ಕೂ ಧರ್ಮ ಶಾಸ್ತ್ರಗಳವೆ. ಹಾಗೆಯೇ ಮೋಕ್ಷ

7. **ಸುಭಾಷಿತಮಂಜರೀ,** ಕವಿಕಾವ್ಯಪ್ರಶಂಸೆ- ಶ್ಲೋ-21, ಪು-8, ಕವಿಕಂಠಾಭರಣದಿಂದ, ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು -18 (2001)

ಶಾಸ್ತ್ರಗ್ರಂಥಗಳು ಅಥವಾ ದಾರ್ಶನಿಕ ಗ್ರಂಥಗಳಿವೆ. ಅರ್ಥ–ಕಾಮಗಳು ಮಾತ್ರ ಹೆಚ್ಚಿನ ಗಮನ ಪಡೆದಿಲ್ಲ. ಧರ್ಮಕ್ಕೆ ಪ್ರಾಧಾನ್ಯವಿದ್ದು ಅರ್ಥವಾಗಲೀ, ಕಾಮವಾಗಲೀ ಧರ್ಮಾನುಬಂಧಿ ಆಗಿರಲೇಬೇಕಾದ್ದರಿಂದ, ಇವೆರಡು ಸ್ವತಂತ್ರವಾಗಿ ವಿಶೇಷ ಚರ್ಚೆಗೆ ವಿಷಯಗಳಾಗಿಲ್ಲ. ಪ್ರಧಾನ ಅಥವಾ ಮೂಲಭೂತ ಗ್ರಂಥಗಳು ಇವೆರಡೂ ಶಾಸ್ತ್ರಗಳಿಗೆ ಒಂದೆರಡು ವ್ಯಾಖ್ಯೆಗಳು. ಒಂದೆರಡು ಸ್ವತಂತ್ರ ಕೃತಿಗಳು ಮಾತ್ರ ವಾಙ್ಮಯದ ಇತಿಹಾಸದಲ್ಲಿ ಅಲ್ಲಲ್ಲಿ ಮಿನುಗುತ್ತವೆ. ಒಂದೆರಡು ಶಾಸ್ತ್ರೇತರ ಗ್ರಂಥಗಳಲ್ಲಿಯೂ ಈ ವಿಚಾರಗಳು ಕಂಡುಬರುತ್ತವೆ. ಉದಾಹರಣೆಗೆ: **ಪಂಚತಂತ್ರ, ಶುಕಸಪ್ತಸತಿ**.

ಪ್ರಾಚೀನ ಸಂಪ್ರದಾಯದಲ್ಲಿ ಅರ್ಥಶಾಸ್ತ್ರವು ಧರ್ಮಶಾಸ್ತ್ರದ ಒಂದು ಭಾಗವಾಗಿದ್ದು ನೀತಿಶಾಸ್ತ್ರ ರೂಪದಲ್ಲಿಯೂ ಕಾಣಸಿಗುತ್ತದೆ. ಧರ್ಮಶಾಸ್ತ್ರವು ಸಮಾಜದ ವ್ಯಕ್ತಿಗಳ ಧರ್ಮಗಳನ್ನು ತೋರಿಸಿಕೊಡುತ್ತದೆ. ಸಮಾಜದ ವ್ಯಕ್ತಿಯಾಗಿ ರಾಜನ ಧರ್ಮಗಳೂ ಅವುಗಳಲ್ಲಿ ವಿಸ್ತೃತವಾಗಿವೆ. ಮುಂದೆ ಕೌಟಿಲ್ಯನ ಕೃತಿಯಲ್ಲಿ ಸ್ವತಂತ್ರ ಅರ್ಥಶಾಸ್ತ್ರವಾಗಿ ನಿರೂಪಿತವಾದರೂ ಅದು ರಾಜಧರ್ಮ ಅಥವಾ ರಾಜನೀತಿ ಶಾಸ್ತ್ರವೆಂದೇ ಯೋಚಿಸಿದ್ದಿರಬಹುದು.

सर्वशास्त्राण्यनुक्रम्य प्रयोगमुपलभ्यच ।

कौटिल्येन नरेन्द्रार्थे शासनस्य विधिः कृतः ॥[8]

ಕಾಮಾರ್ಥಗಳನ್ನು ಕಡೆಗಣಿಸಿ ಧರ್ಮವೊಂದನ್ನೇ ಅನುಸರಿಸುವುದೆಂದರೆ ಫಲವತ್ತಾದ ಭೂಮಿಯನ್ನು ಉಳುವುದನ್ನು ಬಿಟ್ಟು ಬರಡು ಭೂಮಿಯನ್ನು ಉಳುವಂತೆ ಎಂದು ಕೌಟಿಲ್ಯನು ತಾನು ನಡೆದದ್ದನ್ನೇ ನುಡಿದಿದ್ದಾನೆ.

ವೇದಾಂಗ ಕಲ್ಪದ ಧರ್ಮಸೂತ್ರಗಳಲ್ಲಿ ರಾಜಧರ್ಮದ ನಿರೂಪಣೆ ಕಂಡುಬರುತ್ತದೆ. ಬೌಧಾಯನ ಧರ್ಮಸೂತ್ರ, ಆಪಸ್ತಂಭ ಧರ್ಮಸೂತ್ರ ಮತ್ತು ಗೌತಮ ಧರ್ಮಸೂತ್ರಗಳನ್ನು ನೋಡಬಹುದು. ಇವುಗಳಲ್ಲಿ ರಾಜನ ವರ್ತನೆ, ವ್ಯವಹಾರ, ಇದಕ್ಕೆ ಬೇಕಾದ ದಾಯಭಾಗ, ದಂಡನೆ ಮೊದಲಾದ ವಿಷಯಗಳು ಪ್ರಸ್ತಾವಿತವಾಗಿವೆ.

ಮುಂದಿನ ಮನು, ಯಾಜ್ಞವಲ್ಕ್ಯ ಮೊದಲಾದ ಸ್ಮೃತಿಗಳು ಇದೇ ಕ್ರಮವನ್ನೇ ಅನುಸರಿಸಿವೆ. ಧರ್ಮ

---

೮. **ಭಟ್ಟ ಗಂಗಾಧರ ವಿ.**, ಕೌಟಿಲ್ಯನ ಅರ್ಥಶಾಸ್ತ್ರ, ಜ್ಞಾನಸುಮ ೨೫, hareraama.in

ಸೂತ್ರಗಳನ್ನು ಬಿಟ್ಟರೆ, ಈ ಶಾಸ್ತ್ರದ ಅಂಶಗಳು ರಾಮಾಯಣದಲ್ಲಿ ಪರೋಕ್ಷವಾಗಿ ವಿವೃತವಾಗಿರುವುದನ್ನು ಕಾಣಬಹುದು. ಮಹಾಭಾರತದಲ್ಲಿ ನೇರವಾದ ಉಪದೇಶವೇ ಕಂಡುಬರುತ್ತದೆ. ಶಾಂತಿಪರ್ವದ ಬಹು ಪಾಲು ರಾಜಧರ್ಮದ ನಿರೂಪಣೆಗೆ ಮೀಸಲಾಗಿದೆ. ಶರಕಲ್ಪದಲ್ಲಿ ಮಲಗಿದ್ದ ಭೀಷ್ಮ ಯುದ್ಧಾನಂತರ ಯುಧಿಷ್ಠಿರನಿಗೆ ಉಪದೇಶ ಮಾಡಿದಂತೆ ಅಲ್ಲಿದೆ. ದುರ್ಯೋಧನನಿಗೆ ವಿದುರ ಬೋಧಿಸಿದ ನೀತಿಯೂ. "ವಿದುರನೀತಿ" ಎಂದು ಪ್ರಸಿದ್ಧವಾಗಿದೆ.

ಸಾಮಾನ್ಯ ವ್ಯಕ್ತಿಗಳ ದೃಷ್ಟಿಯಿಂದ ಉಪನಿಷತ್ತಿನಲ್ಲಿ ಬರುವ ವ್ಯಕ್ತಿಗಳೆಲ್ಲರೂ ಆಧ್ಯಾತ್ಮ ಅನುಭವಗಳನ್ನು ಸಾಕ್ಷಾತ್ಕಾರ ಮಾಡಿಕೊಂಡವರು. ಇವರನ್ನು "ಮಂತ್ರದೃಷ್ಟ" ಎಂದು ಕರೆಯುತ್ತಾರೆ. ಅಂದರೆ ಮಂತ್ರದಲ್ಲಿರುವ ಸತ್ಯವನ್ನು ಕಂಡುಕೊಂಡವರು, ಸಾಕ್ಷಾತ್ಕಾರಮಾಡಿಕೊಂಡವರು. ಆಧ್ಯಾತ್ಮಿಕ ಸತ್ಯಗಳು ಸದಾಕಾಲವೂ ವಿಶ್ವದಲ್ಲಿ ಸ್ಪಂದಿಸುವಂತಹವು. ಯಾರು ತಮ್ಮ ಶುದ್ಧ ಚಿತ್ತದಿಂದ ಅದರ ಮೇಲೆ ಮನಸ್ಸನ್ನು ಕೇಂದ್ರೀಕರಿಸುವರೋ ಅವರಿಗೆಲ್ಲ ಅದು ಲಭ್ಯವಾಗುವುದು.

ज्ञानमेव परंब्रह्म ज्ञानंबन्धाय कल्पते ।

ज्ञानात्मकमिदम् विश्वं न ज्ञानाद्विद्यते परम् ॥[९]

ಅಂದರೆ ಜ್ಞಾನವೇ ಪರಬ್ರಹ್ಮ. ಜ್ಞಾನದಿಂದಲೇ ಬಂಧನ. ಇಡೀಜಗತ್ತು ಜ್ಞಾನಸ್ವರೂಪ. ಜ್ಞಾನವನ್ನು ಬಿಟ್ಟು ಬೇರೆ ಇಲ್ಲ. ಜ್ಞಾನದಿಂದ ಮೋಕ್ಷವು ಲಭ್ಯವಾಗುತ್ತದೆ. ಮೋಕ್ಷವೇ ಪರಮಪುರುಷಾರ್ಥ. ಇದೇ ಎಲ್ಲರ ಚರಮ ಗುರಿಯಾಗಿರುತ್ತದೆ. ಅದಕ್ಕಾಗಿ ಎಲ್ಲರೂ ಆಧ್ಯಾತ್ಮಿಕ ಜ್ಞಾನವನ್ನು ಸಂಪಾದಿಸಬೇಕು. ಈ ಜ್ಞಾನವನ್ನು ಸಂಪಾದಿಸುವ ವಿಧಿವಿಧಾನಗಳನ್ನು ಕ್ರಮವಾಗಿ ತಿಳಿಸಿಕೊಡುವ ಗ್ರಂಥವೇ "ಪ್ರಸ್ಥಾನ" ಎಂದು ಕರೆಯಲ್ಪಟ್ಟಿದೆ. ಇಂತಹ ಜ್ಞಾನ ಮಾರ್ಗಗಳನ್ನು ತಿಳಿಸಿಕೊಡುವ ಗ್ರಂಥಗಳು-ಉಪನಿಷತ್ತುಗಳು, ಬ್ರಹ್ಮಸೂತ್ರಗಳು ಹಾಗೂ ಭಗವದ್ಗೀತೆಗಳಾಗಿವೆ. ಈ ತ್ರಿವಿಧ ಗ್ರಂಥಗಳನ್ನೇ "ಪ್ರಸ್ಥಾನತ್ರಯ"ಎಂದು ಹೆಸರಿಸಲಾಗಿದೆ.

ಪ್ರಸ್ಥಾನತ್ರಯಗಳಲ್ಲಿ ಉಪನಿಷತ್ತುಗಳು ಅತೀ ಮುಖ್ಯವಾದುದು. ಏಕೆಂದರೆ, ಬ್ರಹ್ಮಸೂತ್ರ ಹಾಗೂ ಭಗವದ್ಗೀತೆಗಳಿಗೆ ಉಪನಿಷತ್ತುಗಳೇ ಆಧಾರ ಗ್ರಂಥಗಳು. ಉಪನಿಷತ್ತುಗಳು, ಬ್ರಹ್ಮಸೂತ್ರ ಭಗವದ್ಗೀತೆಗಳಿಗಿಂತ ಪ್ರಾಚೀನವಾದವುಗಳೂ ಹೌದು. ಇವುಗಳು ಭಾರತೀಯ ಅಧ್ಯಾತ್ಮ ಶಾಸ್ತ್ರಕ್ಕೆ ಬುನಾದಿಯೂ ಹೌದು. ಪ್ರಾಚೀನ

---

9. **ಸುಭಾಷಿತಮಂಜರೀ,** ವಿವೇಕ-ಶ್ಲೋ-39, ಪು.-274, ವಿಷ್ಣುಪುರಾಣ, 2-6-48, ಕ.ಸಾ.ಪ. ಚಾಮರಾಜಪೇಟೆ,ಬೆಂಗಳೂರು-18, (2001)

ಋಷಿ ಮುನಿಗಳು ಸತ್ಯಾನ್ವೇಷಣೆಗಾಗಿ ನಡೆಸಿದ ಜಿಜ್ಞಾಸೆಗಳೂ ಇವುಗಳಲ್ಲಿ ಕಂಡುಬರುತ್ತವೆ. ಇವುಗಳ ವೈಚಾರಿಕ ದೃಷ್ಟಿ ಅತ್ಯಂತ ಮಹತ್ವಪೂರ್ಣವಾದದ್ದು. ಇಡೀ ಜಗತ್ತಿನ ಆಗು ಹೋಗುಗಳಿಗೆ ಕಾರಣವನ್ನು ಹುಡುಕುವ ಅನಾದಿ, ಅನಂತ ಶಕ್ತಿಯಸ್ವರೂಪವನ್ನು ತಿಳಿಸುವುದರೊಡನೆ, ಅದಕ್ಕೆ ಸಮಯೋಚಿತವೂ, ಸಮಂಜಸವೂ ಆದ ಅನೇಕ-ಕಥೆಗಳು, ಸಂಭಾಷಣೆಗಳು ಮನೋಜ್ಞವೂ, ಆಕರ್ಷಣೀಯವೂ ಆಗಿದ್ದು ಒಳ್ಳೆಯ ಜೀವನ ಶಿಕ್ಷಣದ ಬೋಧನೆಯಿಂದ ಕೂಡಿರುತ್ತದೆ. ಸತ್ಯಶೋಧನೆಯೇ ಉಪನಿಷತ್ತುಗಳ ಮುಖ್ಯ ಗುರಿ.[10]

ब्रह्मसत्यं जगन्मिथ्या जीवो ब्रह्मैव नापरः ।

ಬ್ರಹ್ಮವು ಸತ್ಯ, ಜಗತ್ತು ಮಿಥ್ಯಾ ಜೀವವು ಬ್ರಹ್ಮಕ್ಕಿಂತ ಬೇರೆಯಲ್ಲ. ಬ್ರಹ್ಮಸೂತ್ರಗಳನ್ನು ವೇದಾಂತ ಸೂತ್ರಗಳೆಂದೂ, ಶಾರೀರಿಕ ಸೂತ್ರಗಳೆಂದೂ ಹೆಸರಿಸಲ್ಪಟ್ಟಿದೆ. ಈ ಸೂತ್ರಗಳು ವೇದಾಂತ ದರ್ಶನದ ಕೈಪಿಡಿಯಾಗಿದ್ದು, ವೇದಾಂತ ಸೂತ್ರಗಳೆಂದೂ ಕರೆದಿದ್ದಾರೆ. ಶರೀರದಲ್ಲಿರುವ ಬ್ರಹ್ಮತತ್ವವನ್ನು ಕುರಿತು ವಿಚಾರ ಮಾಡುವುದರಿಂದ "ಶಾರೀರಿಕ ಸೂತ್ರಗಳೆಂದು" ಹೆಸರಿಸಿದ್ದಾರೆ. ಬ್ರಹ್ಮಸೂತ್ರ ಉಪನಿಷತ್ತಿನ ಮೇಲೆ ಜೀವಿಸುವ "ಉಪಜೀವಿ"ಎಂದು ಹೇಳಬಹುದು.

ಮಹಾಭಾರತದಲ್ಲಿ ಭಗವದ್ಗೀತೆಯನ್ನು "सर्वशास्त्रमयी गीता" ಎಂದು ಹೇಳಲಾಗಿದೆ. "ಭಗವದ್ಗೀತೆ" ಯು ಭಾರತೀಯರ ಶ್ರೇಷ್ಠವಾದ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಗ್ರಂಥವಾಗಿದೆ. ಇದು ಪ್ರಸ್ಥಾನತ್ರಯದಲ್ಲಿ ಎರಡನೆಯದೆಂಬ ಮಹತ್ವವನ್ನು ಪಡೆದಿದೆ. "ಭಗವದ್ಗೀತೆ" ಅತ್ಯಂತ ಜನಪ್ರಿಯವೂ, ಹೆಚ್ಚಿನ ಗೌರವಾದರಗಳಿಗೆ ಪಾತ್ರವಾದದ್ದೂ ಆಗಿರುತ್ತದೆ. "ಸರ್ವಗ್ರಾಹಿ" ಹಾಗೂ "ಸರ್ವಜನೋಪಯೋಗೀ" ಪಾವನ ಉಪದೇಶವನ್ನು ಗೀತೆಯದ್ವಾರದಿಂದ ಪರಮಾತ್ಮನು ಅಮೃತಧಾರೆಯಾಗಿ ಹರಿಸಿರುವನು. ಪರಿಮಿತ ಶಬ್ದಗಳಲ್ಲಿ ಇಡೀ ಜೀವನಶಾಸ್ತ್ರವನ್ನೇ ತಿಳಿಸಲಾಗಿದೆ. ಪಂಚಮವೇದ ಎಂದು ಕರೆಸಿಕೊಂಡ ಮಹಾಭಾರತದ ಭೀಷ್ಮ ಪರ್ವದಲ್ಲಿ "ಭಗವದ್ಗೀತೆ" ಎಂಬ ಪ್ರಸ್ಥಾನವು ನಿರೂಪಿತವಾಗಿರುವುದು. ಇದು ಏಳುನೂರು ಶ್ಲೋಕಗಳನ್ನೊಳಗೊಂಡ ಹದಿನೆಂಟು ಅಧ್ಯಾಯಗಳಲ್ಲಿ ವಿಭಾಗಿಸಲ್ಪಟ್ಟ ಪವಿತ್ರ ಗ್ರಂಥ. ಮೊದಲಿನ ಆರು ಅಧ್ಯಾಯಗಳಲ್ಲಿ ಕರ್ಮ ಮಾರ್ಗವನ್ನೂ, ಮುಂದಿನ ಆರು ಅಧ್ಯಾಯಗಳಲ್ಲಿ ಭಕ್ತಿ ಮಾರ್ಗವನ್ನೂ, ಕೊನೆಯ ಷಟ್ಕದಲ್ಲಿ ಜ್ಞಾನಮಾರ್ಗವನ್ನೂ ಪ್ರತಿಪಾದಿಸಿದೆ. ಭಗವದ್ಗೀತೆಯು ಸುಲಭವೂ, ಮನೋಹರವೂ, ಲಲಿತವೂ, ಹೃದಯಸ್ಪರ್ಶಿಯೂ ಆದ ದರ್ಶನಶಾಸ್ತ್ರ ಎನ್ನಬಹುದು. ಒಂದು ವಿಶಿಷ್ಟ ಶ್ಲೋಕವನ್ನು ಗಮನಿಸೋಣ:

10. **ಸೋಮನಾಥಾನಂದ,** ಉಪನಿಷತ್ ಪರಿಚಯ, (1973), ಪು.ಸಂ- 3,4,5. ಪ್ರಸಾರಾಂಗ, ಮೈ.ವಿ.ವಿ., ಮೈಸೂರು.

ध्यायतो विषयान्पुंसः सङ्गस्तेषूपजायते ।

सङ्गात्सञ्जायते कामः कामात्क्रोधोऽभिजायते ॥

क्रोधाद्भवति सम्मोहः सम्मोहात्स्मृतिविभ्रमः ।

स्मृतिभ्रंशाद्बुद्धिनाशो बुद्धिनाशात्प्रणश्यति ॥[11]

ಅಂದರೆ, ವಿಷಯಗಳನ್ನೇ ಚಿಂತಿಸತಕ್ಕ ಮನುಷ್ಯನಿಗೆ ಅವುಗಳಲ್ಲಿ ಆಸಕ್ತಿ ಉಂಟಾಗುತ್ತದೆ. ಆಸಕ್ತಿಯಿಂದ ಅದನ್ನು ಪಡೆತಬೇಕೆಂಬ ಹಂಬಲ ಹುಟ್ಟುತ್ತದೆ. ಆಸೆಯಿಂದ(ಅದಕ್ಕೆ ಅಡ್ಡಿಯಾದರೆ) ಕೋಪ ಜನಿಸುತ್ತದೆ. ಕ್ರೋಧದಿಂದ ಅವಿವೇಕ ಹುಟ್ಟುತ್ತದೆ. ಅದರಿಂದ ಸ್ಮರಣಶಕ್ತಿ ನಷ್ಟವಾಗುತ್ತದೆ. ಅದರಿಂದ ಬುದ್ಧಿಗೆಟ್ಟು ಮನುಷ್ಯನು ನಷ್ಟವಾಗಿ ಹೋಗುತ್ತಾನೆ. ಈ ಎಲ್ಲ ಅಂಶಗಳನ್ನೂ ಸೂಕ್ಷ್ಮವಾಗಿ ಗಮನಿಸಿದರೆ ಇಡೀ ಮನೋವಿಜ್ಞಾನವೇ ಇಲ್ಲಿ ಅಡಗಿರುವಂತೆ ತೋರುತ್ತದೆ.

ನಾಡಿನ ಗಣ್ಯವ್ಯಕ್ತಿಗಳಾಗಿದ್ದ ಅರವಿಂದ ಘೋಷ್, ಬಾಲಗಂಗಾಧರ ತಿಲಕ್, ಗಾಂಧೀಜಿ, ಡಿ.ವಿ.ಜಿ. ಮೊದಲಾದವರು "ಭಗವದ್ಗೀತೆ ಕೇವಲ ಆಧ್ಯಾತ್ಮ ಶಾಸ್ತ್ರವಷ್ಟೇ ಅಲ್ಲ; ಅದು ಜೀವನಶಾಸ್ತ್ರವೂ ಹೌದು" ಎಂದು ಪ್ರತಿಪಾದಿಸಿದ್ದಾರೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಉಪನಿಷತ್ತು, ಬ್ರಹ್ಮಸೂತ್ರ ಹಾಗೂ ಭಗವದ್ಗೀತೆಗಳು ಬಹು ಮುಖ್ಯವಾದ ಆಧ್ಯಾತ್ಮಶಾಸ್ತ್ರಗಳು. ಬ್ರಹ್ಮಸೂತ್ರ ಹಾಗೂ ಭಗವದ್ಗೀತೆಗಳು ಉಪನಿಷತ್ತುಗಳನ್ನೇ ಆಧಾರವಾಗಿ ಇಟ್ಟುಕೊಂಡು ಜೀವನಶಾಸ್ತ್ರದ ಮಹತ್ವಪೂರ್ಣ ವಿಷಯಗಳನ್ನು ಮಂಡಿಸಿವೆ. ವೇದದ ಒಂದು ಭಾಗವಾದ ಉಪನಿಷತ್ತುಗಳು ಸಮಸ್ತ ವೇದಗಳ ಸಾರರೂಪದಲ್ಲಿ ಬಂದಿವೆ. ಉಪನಿಷತ್ತುಗಳ ಸಾರಸಂಗ್ರಹವೇ ಭಗವದ್ಗೀತೆ.

गीता सुगीता कर्तव्या किमन्यैः शास्त्रसंग्रहैः ।

या स्वयं पद्मनाभस्य मुखपद्माद्विनिःसृता ॥[12]

ಗೀತೆಯು ಒಂದು ಪರಮರಹಸ್ಯಮಯ ಗ್ರಂಥವಾಗಿದೆ. ಇದರ ರಚನೆಯು ಎಷ್ಟು ಸರಳ ಮತ್ತು ಸುಂದರವಾಗಿದೆ ಎಂದರೆ ಸ್ವಲ್ಪ ಅಭ್ಯಾಸ ಮಾಡುವುದರಿಂದಲೂ ಕೂಡ ಮನುಷ್ಯನು ಇದನ್ನು ಸಹಜವಾಗಿ ತಿಳಿಯಬಲ್ಲನು. ಆದರೆ ಇದರ ಆಶಯವು ಜೀವನವಿಡೀ ನಿರಂತರ ಅಭ್ಯಾಸ ಮಾಡುತ್ತಾ ಇದ್ದರೂ ಕೂಡ ಅದರ ಕೊನೆ ಮುಟ್ಟಲಾರದಷ್ಟು ಗೂಢ ಮತ್ತು ಗಂಭೀರವಾಗಿದೆ. ಇನ್ನು ಉಪನಿಷತ್ತುಗಳು ಮತ್ತು ಬ್ರಹ್ಮಸೂತ್ರಗಳು

11. **ಭಗವದ್ಗೀತಾ,** 2-ಶ್ಲೋ-62,63.
12. **Goyandka Jayadayal,** Srimad Bhagavad-Gita, Gita Press, Gorakhpur,(1997), Glory of Gita,pp (I),(ii),(iii)

ಅತ್ಯಂತ ಕಠಿಣವೂ, ತರ್ಕಮಯವೂ ಆಗಿದ್ದು ಜನಸಾಮಾನ್ಯರಿಗೆ ಅರ್ಥೈಸಿಕೊಳ್ಳುವುದು ಕಷ್ಟವೇ ಸರಿ. ಆದ್ದರಿಂದ ಅವುಗಳು ಭಗವದ್ಗೀತೆಯಷ್ಟು ಜನಪ್ರಿಯವಾಗಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು. ಒಟ್ಟಿನಲ್ಲಿ ಹೇಳುವುದಾದರೆ, ಇವುಗಳನ್ನೆಲ್ಲಾ ಅಧ್ಯಯನಮಾಡಿ ಅರ್ಥೈಸಿಕೊಳ್ಳಬೇಕಾದರೆ ಒಂದು ನಿರ್ದಿಷ್ಟವಾದ ಮೂಲಜ್ಞಾನದ ಹಿನ್ನೆಲೆ ಅಥವ ಸಂಸ್ಕಾರವಿರಬೇಕೆಂದು ಯೋಚಿಸಿದರೆ ತಪ್ಪಾಗಲಾರದು. ಈ ನಿಟ್ಟಿನಲ್ಲಿ ಪರಿಶೀಲಿಸಿದರೆ, "ಪಂಚತಂತ್ರ" ನೀತಿಕಥೆಗಳು ಸಾಮಾನ್ಯವಾಗಿ ಎಲ್ಲರಿಗೂ ಚಿರಪರಿಚಿತ ಆಗಿದ್ದು, ಜೀವನದ ಮೌಲ್ಯಗಳನ್ನು ಸರಳವಾಗಿ ಪರಿಚಯಿಸುವ ಹಾಗೂ ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ ಒಳ್ಳೆಯ ಬೋಧಪ್ರದವಾದ, ಮನೋವೈಜ್ಞಾನಿಕ ಲಕ್ಷಣಗಳನ್ನು ಹೊಂದಿರುವ ನೀತಿಶಾಸ್ತ್ರ ಕೃತಿರತ್ನವಾಗಿದೆ. ಭಾರತೀಯ ಸಾಹಿತ್ಯಭಂಡಾರದಲ್ಲಿ, ಅದರಲ್ಲೂ ಸಂಸ್ಕೃತ ಸಾಹಿತ್ಯಕ್ಷೇತ್ರದಲ್ಲಿ, ಪಂಚತಂತ್ರವು ಅತ್ಯಂತ ಮುಖ್ಯವೂ, ಸ್ವಾರಸ್ಯ ಪೂರ್ಣವೂ ಆದ ಉಪದೇಶಾತ್ಮಕ ಕಲ್ಪಿತ ಕಥೆ.

आयुः कर्म च वित्तञ्च विद्या निधनमेव च ।

पञ्चैतानि हि सृज्यन्ते गर्भस्थस्यैव देहिनः॥[13]

ಆಯುಷ್ಯ, ಹಿಂದಿನ ಜನ್ಮದಿಂದ ಬರುವ ಕರ್ಮಫಲ, ಹಣ, ಗಳಿಸಬಹುದಾದ ವಿದ್ಯೆ ಮತ್ತು ಮರಣ ಈ ಐದು ವಿಷಯಗಳು ಶಿಶು ತಾಯಿಯ ಗರ್ಭದಲ್ಲಿರುವಾಗಲೇ ನಿರ್ಣಯವಾಗಿರುತ್ತದೆ. ಇಲ್ಲಿ ಪೂರ್ವ ಜನ್ಮದ ಸುಕೃತಗಳ ಕುರಿತ ಉತ್ತಮ ಜಾಗೃತಿ.

"ಪಂಚತಂತ್ರ" ಯಾರಿಗೆ ತಿಳಿದಿಲ್ಲ ಈ ಹೆಸರು? ಇಲ್ಲಿನ ಕಥೆಗಳು? ಜಾವಾದಿಂದ ಐರ್ಲೆಂಡ್ ವರೆಗೆ ವಿಶ್ವದ ಅಪಿಯಿರುವ ಎಪ್ಪತ್ತಕ್ಕೂ ಹೆಚ್ಚಿನ ಭಾಷೆಗಳಲ್ಲಿ ಪಂಚತಂತ್ರದ ಆಧಾರದ ಮೇಲೆ ಇನ್ನೂರಕ್ಕೂ ಹೆಚ್ಚು ಪ್ರಭೇದಗಳ ಕೃತಿಗಳು ರಚನೆಗೊಂಡಿವೆ. ಇದೇ ಇದರ ಹೆಚ್ಚುಗಾರಿಕೆ. ಪೈಶಾಚೀ ಭಾಷೆಯಲ್ಲಿ ಗುಣಾಢ್ಯನೆಂಬುವನು ಬರೆದ ಬೃಹತ್ಕಥೆಯನ್ನು ಆಧಾರವಾಗಿಟ್ಟುಕೊಂಡು ಸಂಸ್ಕೃತ ಪಂಚತಂತ್ರವನ್ನು ರಚಿಸಿದ ಮೇಧಾವಿ ಪಂಡಿತ "ವಿಷ್ಣುಶರ್ಮರು" (ಕಾಲ ಸುಮಾರು ಮೂರನೆಯ ಶತಮಾನ).[14] ಸಾಮಾನ್ಯವಾಗಿ ಸಂಸ್ಕೃತ ಕವಿಗಳ ಕೃತಿಗಳೆಂದರೆ ಜನರಲ್ಲಿ ಒಂದು ಅಭಿಪ್ರಾಯ ಉಂಟು. ಸಂಸ್ಕೃತ

---

13. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತ ಪಂಚತಂತ್ರ, ದ್ವಿ.ತಂ –ಶ್ಲೋ–84, ಪು–357, ಚೌಕಾಂಬ ಕೃಷ್ಣದಾಸ್ ಅಕಾಡೆಮಿ, PB. no: 1118, Oriental Publishers, K37/118 Gopalmandir Lane, Varanasi-221001(INDIA)1993.
14. ಉಪೇಂದ್ರ ಸೋಮಯಾಜಿ, ಬದುಕಿನ ಮಂತ್ರ ಪಂಚತಂತ್ರ,(2015).ಮುನ್ನುಡಿ ಪು.2.ವರ್ನಿಲ,39/2–11, Kalyani Garden, BSK 1st stage, Bangalore.

ಸಾಹಿತ್ಯವೆಂದರೆ ವೇದಾಂತ ವಿಚಾರಗಳು, ಆಧ್ಯಾತ್ಮ ಚಿಂತನೆಗಳು, ತಾತ್ವಿಕ ವಿಚಾರಗಳು, ಸೂಕ್ತಿಗಳು ಹಾಗೂ ಸುಭಾಷಿತ ಶ್ಲೋಕಗಳಿಂದ ಕೂಡಿದ್ದು, ಸ್ಮೃತಿಪುರಾಣೇತಿಹಾಸದ ವಿಷಯಗಳಿಂದ ಕೂಡಿರುವುದು, ಅತ್ಯಂತ ಶಾಸ್ತ್ರೋಕ್ತವಾಗಿ ರಚನೆಯಾಗಿರುವುದು ಎಂಬುದಾಗಿದೆ. ಇನ್ನು ಕಥೆಗಳು ಲೌಕಿಕ ವಿಚಾರಗಳಿಂದ ಕೂಡಿದ ಕೃತಿಗಳೆಂದರೆ, ಅಷ್ಟೊಂದು ಶ್ರೇಷ್ಠವಲ್ಲ, ಕೇವಲ ಮಕ್ಕಳ ಮನೋರಂಜನೆಗಾಗಿ ರಚನೆಯಾಗಿರುವಂತಹವು ಎಂಬ ಭಾವನೆಯೂ ಉಂಟು.

ಸಕಲಶಾಸ್ತ್ರ ಪಾರಂಗತ ವಿಷ್ಣುಶರ್ಮರ ಪಂಚತಂತ್ರ ನೀತಿ ಕಥೆಗಳನ್ನು ಮಕ್ಕಳಿಗಾಗಿ ಅಥವಾ ಬಾಲಬೋಧೆಗಾಗಿ ರಚಿತವಾಗಿರುವ ಗ್ರಂಥವೆಂಬ ವಿಚಾರ ಪ್ರಚಲಿತವಾಗಿದೆ. ಇದು ಮಕ್ಕಳ ಓದಿನ ಪುಸ್ತಕ, ಮಕ್ಕಳಲ್ಲಿ ಓದಿನ ಆಸಕ್ತಿಯನ್ನು ಬೆಳೆಸಲು ನೆರವಾಗುವ ಪುಸ್ತಕವೆಂಬುದು ಬಹಳ ಹಿಂದಿನಿಂದಲೂ ಬಂದಿದ್ದ ನಂಬಿಕೆಯಾಗಿದೆ. ಇತ್ತೀಚೆಗೂ ರೈಲ್ವೆ ಬುಕ್ ಸ್ಟಾಲ್, ಇತರೆ ಪುಸ್ತಕ ಮಳಿಗೆಗಳು, ಲೈಬ್ರರಿ ಇಂಥಹ ಕಡೆಗಳಲ್ಲಿ ಬೇಸರದ ಸಮಯ ಕಳೆಯಲು, ಮನೋರಂಜನೆಗಾಗಿ "ಚಂದಮಾಮ, ಪಂಚತಂತ್ರ", ಇತ್ಯಾದಿ ಕಥೆ ಪುಸ್ತಕಗಳನ್ನು ಕೊಂಡು ಓದುವುದುಂಟು. ಆದರೆ ಅದರಲ್ಲಿ ಅಷ್ಟು ಸರಳವಾಗಿ ಸುಂದರ ಬದುಕಿನ ಶಿಕ್ಷಣ ಅಡಗಿದೆ ಎಂಬುದನ್ನು ಅರಿಯಲು ಬಹುಶಃ ತಾಳ್ಮೆಯಿಂದ ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ. ಕೇವಲ ಪ್ರಾಣಿ ಪಶುಪಕ್ಷಿಗಳನ್ನು ಮನುಷ್ಯರಂತೆಯೇ ವರ್ತಿಸುವಂತೆ ಮಾಡಿ(ಆಕಾರ ಮಾತ್ರ ಬೇರೆ) ಕಥಾ ಮಾಧ್ಯಮದಲ್ಲಿ ಅದ್ಭುತವಾಗಿ ರಾಜನೀತಿ ಶಿಕ್ಷಣವನ್ನೂ, ಸಾರ್ಥಕ ಬದುಕಿನ ನೀತಿಯನ್ನೂ, ಪ್ರಭುತ್ವ ನಡೆಸಲು ಬೇಕಾದ ನಾಯಕತ್ವದ ಕೌಶಲಗಳನ್ನೂ, ವ್ಯಕ್ತಿತ್ವದ ಸರ್ವತೋಮುಖ ಬೆಳವಣಿಗೆಗೆ ಬೇಕಾದ ದಿನನಿತ್ಯದ ವ್ಯಾವಹಾರಿಕ ಚತುರತೆಯನ್ನೂ ಬೆಳೆಸುವ ಅದ್ಭುತವಾದ ಬೋಧಕವೇ ಈ "ಪಂಚತಂತ್ರ" ಎಂಬುದನ್ನು ಬಹುಶಃ ಬಹಳಷ್ಟು ಜನರು ಗುರುತಿಸಿಯೇ ಇರಲಿಲ್ಲವೇನೋ ಅನ್ನಿಸುತ್ತದೆ. ಒಂದು ಅಂಶ ಬಹಳ ಮುಖ್ಯವಾದುದೆಂದರೆ, ಈ ಎಲ್ಲವನ್ನೂ ಅರಿಯಬೇಕಾದರೆ, ಅತ್ಯಂತ ಸೂಕ್ಷ್ಮವಾಗಿ ರೇಖೆಗಳ ನಡುವೆ ಓದಿದಾಗ ಮಾತ್ರ, ಎಲ್ಲ ಗೂಡಾರ್ಥಗಳನ್ನೂ ಗ್ರಹಿಸಿಕೊಂಡಾಗ ಮಾತ್ರ ಎಂದು ಹೇಳಬಹುದು.

सकलार्थशास्त्रसारं जगति समालोक्य विष्णुशर्मेदम्।

तन्त्रैः पञ्चभिरेतच्चकार सुमनोहरं शास्त्रम् ॥[15]

ಪಂಚತಂತ್ರವು ಕೇವಲ ಮನರಂಜನೆಗಾಗಿ ಒಂದು ಕಾಲ್ಪನಿಕ ಕೆಲಸವಾಗಿದ್ದು, ಹೆಚ್ಚು

---

15. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತ ಪಂಚತಂತ್ರ, ಅವತರಣಿಕಾ–ಶ್ಲೋ–2, ಚೌಕಾಂಬ ಕೃಷ್ಣದಾಸ್ ಅಕಾಡೆಮಿ, PB. no: 1118, Oriental Publishers,K37/118 Gopalmandir Lane, Varanasi- 221001(INDIA)1993.

ಜನಪ್ರಿಯವಾಗಿರುವುದಷ್ಟೇ ಅಲ್ಲ, ಬೇರೆ ಯಾವುದೇ ಭಾರತೀಯ ಸಾಹಿತ್ಯಕ್ಕಿಂತ ಹೆಚ್ಚಿನ ಪ್ರಭಾವವನ್ನು ವಿಶ್ವ ಸಾಹಿತ್ಯದ ಮೇಲೆ ಬೀರಿರುವುದಾಗಿದೆ. ಆರ್ಥರ್ ಮ್ಯಾಕ್ಡೊನಿಲ್ ಹೇಳಿರುವಂತೆ "ಯೂರೋಪಿನ ಸಂಪೂರ್ಣ ಮಧ್ಯಯುಗದ ಕಥಾ ನಿರೂಪಣಾ ಕಾರ್ಯದ ಮೇಲೆ ಪಂಚತಂತ್ರ ನೀತಿಕಥೆಗಳು ಅಸಾಧಾರಣ ಪ್ರಭಾವವನ್ನು ಬೀರಿರುವುದಲ್ಲದೆ, ಆ ಭಾಷೆಗಳ ಸಾಹಿತ್ಯ ಕ್ಷೇತ್ರದಲ್ಲಿ ಒಂದು ರೀತಿಯ ಪುಷ್ಟೀಕರಣವನ್ನೊದಗಿಸಿದೆ. ಇದರಿಂದ ಅನೇಕ ಆವೃತ್ತಿಗಳಲ್ಲಿ ಬೆಳವಣಿಗೆಗೆ ಸಹಕಾರಿಯಾಗಿದೆ.[16]

ಜನರ ನಡವಳಿಕೆ, ಸ್ವಭಾವ, ಮನಸ್ಥಿತಿ, ಕಾರ್ಯಸಾಧನೆಯ ನೈಪುಣ್ಯ ಇತ್ಯಾದಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದ್ದ ವಿಷ್ಣುಶರ್ಮರು ಬದುಕನ್ನು ಕಟ್ಟುವಲ್ಲಿ, ಇವುಗಳ ಅಗತ್ಯತೆಯನ್ನು ಮನಗಂಡು, ಮಾನವನ ಈ ಬಗೆಯ ವರ್ತನೆಯನ್ನು ಪಶುಪಕ್ಷಿ ಹಾಗೂ ಪ್ರಾಣಿಗಳಿಗೆ ಆರೋಪಿಸಿ ಕಥೆಕಟ್ಟಿದ ಪರಿಯು ನಿಜಕ್ಕೂ ಅದ್ಭುತವಾದುದು. ಪ್ರಾಣಿಪಕ್ಷಿಗಳೂ ಮಾತನಾಡುತ್ತವೆ ಎಂಬುದೇ ಮಕ್ಕಳಿಗೆ ಒಂದು ವಿಸ್ಮಯ. ಕುತೂಹಲದಿಂದ ಕಥೆಗಳನ್ನು ಕೇಳುತ್ತಾರೆ. ಅರ್ಥೈಸಿಕೊಂಡು ಹೃದ್ಯವಾದ ಕಥೆಗಳಿಂದ ಗುಣಶೀಲಗಳನ್ನು ಗ್ರಹಿಸುತ್ತಾರೆ.[17] ಒಟ್ಟಿನಲ್ಲಿ ಕಥೆಗಳು ಕೇಳುವವರಿಗೆ, ಅದರಲ್ಲಿನ ಆಸಕ್ತಿಯನ್ನು ಪ್ರೇರೇಪಿಸುವಂತಿರಬೇಕು. ಸಮಾಜದಲ್ಲಿ ಸೂಕ್ಷ್ಮಪ್ರಜ್ಞೆಯ, ಸಂಸ್ಕಾರವಂತ, ಸುಸಂಸ್ಕೃತ, ನೀತಿವಂತ ವ್ಯಕ್ತಿಯಾಗಿ ಬದುಕುವ ಕಲೆಯನ್ನು ಸರಳವಾಗಿ ತಿಳಿಸಿ, ಸಹೃದಯತೆಯ ಸತ್ಪ್ರಜೆಯಾಗಿ, ಮಾನವ ಜನ್ಮದ ಸಾರ್ಥಕತೆಯನ್ನು ಅರಿಯುವ ಪಾಠವನ್ನು ಸರಳ ಉದಾಹರಣೆಗಳ ಮೂಲಕ ಬೋಧಿಸುವಂತಿರಬೇಕು.

यावन्नयौवनप्राप्तः शिक्ष्यते तावदात्मजः।
व्यतीतकाले केदारे कर्षणैः किं करिष्यते ॥[18]

ಅದರಲ್ಲೂ ಮಕ್ಕಳಿಗೆ ಯೌವನ ಬರುವುದರೊಳಗೆ ಶಿಕ್ಷಣವನ್ನು ಕೊಡಬೇಕು. ಕಾಲ ಮೀರಿದ ಮೇಲೆ ಗದ್ದೆಯನ್ನು ಉತ್ತರೆ ಏನಾದೀತು? ಪಂಚತಂತ್ರ ಕಥೆಗಳು ಈ ಕಾರ್ಯದಲ್ಲಿ ಗೆದ್ದಿವೆಯೆಂದು ನಿಖರವಾಗಿ ಹೇಳಬಹುದು. ಹೆಚ್ಚಾಗಿ ಪಂಚತಂತ್ರ ಕಥೆಗಳು ಮಕ್ಕಳಿಗೆಂದೇ ರಚಿಸಲ್ಪಟ್ಟಿದೆಯೆಂದು ಅನೇಕರು ಅಭಿಪ್ರಾಯಪಟ್ಟಿದ್ದಾರೆ. ಆದರೆ, ಗಂಭೀರವಾಗಿ ಚಿಂತಿಸಿ ಅದರಲ್ಲಿ ಕಾಣಬರುವ ಬದುಕಿನ ನೀತಿನಿಯಮಗಳನ್ನೂ, ಸರ್ವತೋಮುಖ ವ್ಯಕ್ತಿತ್ವದ ಬೆಳವಣಿಗೆಗೆ ಲಭ್ಯವಾಗುವ ವ್ಯಕ್ತಿವಿಕಸನ ಮಾರ್ಗದರ್ಶನವನ್ನೂ ಗಮನಿಸಿದರೆ ದೊಡ್ಡವರಿಗೂ ಈ ಕಥೆಗಳು ಮಾರ್ಗದರ್ಶಕವೇ ಆಗಿದೆ ಎಂಬುದರಲ್ಲಿ ಯಾವುದೇ ಉತ್ಪ್ರೇಕ್ಷೆ ಕಂಡುಬರುವುದಿಲ್ಲ.

---

16. **ಮ್ಯಾಕ್ಡೊನಿಲ್ರವರ ಅಭಿಪ್ರಾಯ**. (http://en.wikipedia.org/wiki/Panchatantra)
17. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಮುನ್ನುಡಿ, ಪು.2, ವರ್ನಿಲ, 39/2-11, ಕಲ್ಯಾಣಿ ಗಾರ್ಡನ್. BSK 1st stage, Bangalore.(2015)
18. **ಸುಭಾಷಿತಮಂಜರೀ, ಸಂಸಾರ** ಶ್ಲೋ-70, ಪು-29, ಹರಿಹರಸುಭಾಷಿತ, 2-54.(2001) ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18.

ಇಂದು ಎಲ್ಲವುದಕ್ಕೂ ತರಬೇತಿಯನ್ನು ನೀಡುವ ಹಾಗೂ ಪಡೆಯುವ ಯುಗವಾಗಿದೆ. ಸಮಯಪಾಲನೆ, ಕಾರ್ಯಕ್ಷಮತೆ, ವ್ಯಕ್ತಿನಿರ್ಮಾಣ ಹೀಗೆ ಹಲವು ಹತ್ತು ವಿಚಾರಗಳ ಕುರಿತು ಮಾಹಿತಿ ನೀಡುವ ಪರಿಪಾಠ ಇರುವುದು ಈ ಕಾಲ. ಬಹು ಸೂಕ್ಷ್ಮವಾಗಿ ಗಮನಿಸಿದರೆ ಪಂಚತಂತ್ರ ಕಥೆಗಳು ಆ ಕಾಲದಿಂದಲೇ ನಿರಂತರವಾಗಿ ಒಂದು ರೀತಿಯಲ್ಲಿ ತರಬೇತಿ ಕಾರ್ಯಾಗಾರವನ್ನು ನಡೆಸಿಕೊಂಡು ಬರುತ್ತಿರುವಂತಿದೆ. ವ್ಯಕ್ತಿತ್ವ ನಿರ್ಮಾಣಕ್ಕೆ ಬೇಕಾದ ಮನೋವಿಜ್ಞಾನ ಹಾಗೂ ಶಿಕ್ಷಣ, ಪಂಚತಂತ್ರದಲ್ಲಿ ಬಹಳ ಅಚ್ಚುಕಟ್ಟಾಗಿ ಹೆಣೆದುಕೊಂಡಿದೆ. ಒಬ್ಬ ವ್ಯಕ್ತಿಯ ಯಶಸ್ಸಿನ ಹಿಂದೆ ಅವನ ಕಾರ್ಯಕ್ಷಮತೆಯ ಬದ್ಧತೆಯಿದೆ. ಆ ಬದ್ಧತೆಯಿಂದ ತನಗೆದುರಾದ ವಿಷಮ ಸಂದರ್ಭಗಳನ್ನು, ಸನ್ನಿವೇಶಗಳನ್ನು ತನಗನುಕೂಲವಾಗುವಂತೆ ಹೊಂದಿಸಿಕೊಳ್ಳುತ್ತಾನೆ. ಹತ್ತು ಹಲವು ಮನೋಭಾವದ ವ್ಯಕ್ತಿಗಳೊಂದಿಗೆ ವ್ಯವಹರಿಸುವ ಕಾಲದಲ್ಲಿ, ತನ್ನದೇ ಆದ ಸ್ಥಿತಪ್ರಜ್ಞತೆಯನ್ನೂ, ಕೌಶಲವನ್ನೂ, ಮಾತುಗಾರಿಕೆಯನ್ನೂ ಮುಂದಿರಿಸಿ ಜಯಶಾಲಿಯಾಗುತ್ತಾನೆ. ಸಾಮ, ದಾನ ಭೇದಗಳನ್ನು ಯೋಜಿಸುತ್ತಾನೆ. ಎಲ್ಲರ ಮಾತನ್ನೂ ತದೇಕಚಿತ್ತದಿಂದ ಆಲಿಸುತ್ತಾನೆ. ಕೊನೆಗೆ ತನ್ನದೇ ಆದ ನಿರ್ಧಾರವನ್ನು ಕೈಗೆತ್ತಿಕೊಳ್ಳುತ್ತಾನೆ. ಆಳೂ ಆಗುತ್ತಾನೆ, ಆರಸನೂ ಆಗುತ್ತಾನೆ, ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಾನೆ, ಸಲಹೆಯನ್ನು ಪಡೆಯುತ್ತಾನೆ, ಆದೇಶವನ್ನೂ ನೀಡುತ್ತಾನೆ. ಉಪಾಯದಿಂದ ಬರಲಿರುವ ಅಪಾಯವನ್ನು ಹೋಗಲಾಡಿಸಿಕೊಳ್ಳುತ್ತಾನೆ.[19] ಹೀಗೆಲ್ಲಾ ಮಾಡಬೇಕಾದರೆ ಅವನಿಗೆ ಆ ಬಗ್ಗೆ ಸಂಪೂರ್ಣ ಜ್ಞಾನ ಇರಬೇಕು. ಇದೆಲ್ಲದಕ್ಕೂ ಒಳ್ಳೆಯ ಶಿಕ್ಷಣ ಬೇಕು. ಇಂಥಹ ಶಿಕ್ಷಣವನ್ನು – ಪಂಚತಂತ್ರ ನೀತಿಕಥೆಗಳು ಮನೋವಿಜ್ಞಾನ ಸಮೇತ, ಮನೋಜ್ಞವಾಗಿ, ಮನೋರಂಜಕವಾಗಿ ಬೋಧಿಸುತ್ತವೆ.

शीलं शौर्यं अनालस्यं पाण्डित्यं मित्रसंग्रहः।

अचोरहरणीयानि पंचैतानि अक्षयोनिधिः॥[20]

ಶುದ್ಧ ಚಾರಿತ್ರ್ಯ, ಪರಾಕ್ರಮ, ಚುರುಕುತನ, ವಿದ್ವತ್ತು, ಗೆಳೆಯರ ಸಂಗ್ರಹ ಈ ಐದೂ ಕಳ್ಳರು ಕದಿಯದ ಅಕ್ಷಯ ಸಂಪತ್ತು. ಇಲ್ಲಿ ಎಂಥಹ ಸೊಗಸಾದ ತಿಳುವಳಿಕೆ ಸೂಚಿಸಲಾಗಿದೆ.

ಇಂದಿನ ಪ್ರಗತಿಪರ ಸಮಾಜಲ್ಲಿ ನಾವು ಕೆಲವು ಸವಾಲುಗಳನ್ನು ಎದುರಿಸಲು ಸಾಧ್ಯತೆ ಇದೆ ಎಂದು,

---

19. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಮುನ್ನುಡಿ, ಪು.2,3, ವರ್ಣಿಲ, 39/2-11, ಕಲ್ಯಾಣಿ ಗಾರ್ಡನ್ BSK 1st stage, Bangalore.(2015)

20. **ಭಟ್.ವಿ.ಎನ್,** ಜ್ಞಾನದೀಪ, ಅ.ಸಂ-97, ಪು -191, (1993), ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿನಗರ, ಶಿವಮೊಗ್ಗ-577201

ಅದಕ್ಕೆ ತಕ್ಕಂತೆ ಶೈಕ್ಷಣಿಕ ಮಾರ್ಗದರ್ಶನ ಇರಬೇಕೆಂಬುದನ್ನು ಈ ವ್ಯಾಖ್ಯಾನಗಳು ಬೆಂಬಲಿಸುತ್ತವೆ. ಇಂದಿನ ದಿನಗಳಲ್ಲಿ ಅದರಲ್ಲೂ ತಂತ್ರಜ್ಞಾನ ಮುಂದುವರೆದಿರುವ ಸಂದರ್ಭದಲ್ಲಿ ಬೇರೆ ಬೇರೆ ಮ್ಯಾನೇಜ್ಮೆಂಟ್ ಹೆಸರಲ್ಲಿ ತರಬೇತಿಗಳಿವೆ. ಆದರೆ ಹಿಂದೆ ಇಂತಹುದು ಇದ್ದಿರಲಿಲ್ಲ ತಂದೆಯ ಕಾರ್ಯಕ್ಷಮತೆಯನ್ನು ಕಂಡೋ, ಅವರೊಂದಿಗೆ ಸೇರಿಕೊಂಡೋ, ಗುರೂಪದೇಶದಿಂದಲೋ, ಪಡೆದ ಅನುಭವಗಳಿಂದ ಗೆಲ್ಲುವುದೋ, ಎದುರಾಳಿ ಪ್ರಬಲನಾಗಿದ್ದಾಗ ಸೋಲುವುದೋ ಆಗುತ್ತಿತ್ತು. ಆದರೆ ಪಂಚತಂತ್ರದಲ್ಲಿನ ವ್ಯವಸ್ಥಿತ, ಆಕರ್ಷಕ ಕಥೆಗಳನ್ನು ಆಳವಾಗಿ ಅಭ್ಯಾಸ ಮಾಡಿದರೆ, ಅದರ ಸೂಕ್ಷ್ಮಗಳನ್ನು ಮಂಥನಮಾಡಿದರೆ, ಶಿಕ್ಷಣದ ಅರ್ಥ, ಮಹತ್ವ, ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ ಬೇಕಾದ ಮಾರ್ಗದರ್ಶನ, ಜೀವನಶಿಕ್ಷಣ, ನಾಯಕತ್ವದ ಲಕ್ಷಣ, ಯಶಸ್ವೀ ಬದುಕಿನ ಹಲವು ಹತ್ತು ನೀತಿಬೋಧಕ ಉಪದೇಶಗಳು ಇಂದಿಗೂ ಪ್ರಸ್ತುತವಾಗಿದೆ. ರಾಜಕೀಯದಲ್ಲಿ, ಅಧಿಕಾರದಲ್ಲಿ, ಯಾವುದೇ ವೃತ್ತಿಶಿಕ್ಷಣ ಮಾರ್ಗದರ್ಶನದಲ್ಲಿ ಯಶಸ್ಸು ಶತಃಸಿದ್ಧ. ಹಾಗೆಯೇ ಸ್ನೇಹಿತ ಬಂಧುಗಳೊಡನೆ ವ್ಯವಹರಿಸುವಲ್ಲಿ ಪಂಚತಂತ್ರಗಳು ನೆರವಾಗುತ್ತವೆ. ಇವುಗಳ ಹಿಂದೆ ಎಂಥಹ ನೈಜ ಶೈಕ್ಷಣಿಕ ಮನೋವಿಜ್ಞಾನ ಅಡಗಿದೆ! ಹಾಗೂ ಇದನ್ನು ಬರೆದ ವಿಷ್ಣುಶರ್ಮನೆಂಬ ಬ್ರಾಹ್ಮಣ, ಶೃತಿಸ್ಮೃತಿ ಪುರಾಣೇತಿಹಾಸಗಳಲ್ಲಿ ಎಂಥಹ ನಿಷ್ಣಾತರು! ಅರ್ಥಶಾಸ್ತ್ರ ಪರಿಣಿತರು! ದೈವದತ್ತವಾಗಿ ಪಡೆದ ಅವರ ಮೇಧಾವಿತ್ವಕ್ಕೆ, ಒಳ್ಳೆಯ ಶೈಕ್ಷಣಿಕ ಮನೋವಿಜ್ಞಾನ ಅದೆಷ್ಟು ಸೊಗಸಾಗಿ ಲೇಪನವಾಗಿತ್ತು! ಎಂಬ ಕುತೂಹಲ ಮತ್ತು ಆಶ್ಚರ್ಯವು "ಪಂಚತಂತ್ರ" ಅಧ್ಯಯನ ಮಾಡಿದ ಯಾರಿಗೂ ಬರದಿರಲಾರದು. ನಿಜಕ್ಕೂ ವಿಷ್ಣುಶರ್ಮರ ಪಂಚತಂತ್ರಗಳು ನೀತಿಶಾಸ್ತ್ರಕ್ಕೊಂದು ಕೈದೀವಿಗೆಯಾಗಿದೆ. ಲೌಕಿಕಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ವೈದಿಕ ಸಾಹಿತ್ಯ, ಪುರಾಣಗಳು, ರಾಮಾಯಣ ಹಾಗೂ ಮಹಾಭಾರತ ಇವುಗಳ ಸ್ಥೂಲ ಪ್ರಸ್ತಾಪವಿದೆ. ನಂತರ ಮಹಾಕಾವ್ಯಗಳು, ಲಘುಕಾವ್ಯಗಳು, ಐತಿಹಾಸಿಕ ಕಾವ್ಯಗಳು, ಗದ್ಯ ಸಾಹಿತ್ಯ, ಜನಪ್ರಿಯ ಹಾಗೂ ನೀತಿಬೋಧಕ ಕಥೆಗಳು, ಚಂಪೂ ಹಾಗೂ ನಾಟಕಗಳು ಮುಂತಾದ ಸಂಸ್ಕೃತ ಸಾಹಿತ್ಯದ ವಿವಿಧ ಪ್ರಕಾರಗಳು ಜ್ಞಾನ ಸಾಗರದಲ್ಲಿ ಸಮೃದ್ಧವಾಗಿವೆ. ಭರ್ತೃಹರಿಯ **"ನೀತಿಶತಕ"** ದಂತಹ ಕೃತಿಗಳು ಸುಲಭವಾದ ಮಾತುಗಳಲ್ಲಿ ಸಾಮಾನ್ಯ ನೀತಿಯನ್ನು ಬೋಧಿಸುತ್ತವೆ. **ಪಂಚತಂತ್ರ, ಹಿತೋಪದೇಶ, ದ್ಯಾದ್ವಿವೇದನ ನೀತಿಮಂಜರಿ** ಮುಂತಾದ ಕೃತಿಗಳು ಕಥೆಗಳ ಮೂಲಕ ರಾಜನೀತಿ ತತ್ವಗಳನ್ನು ವಿಶದಪಡಿಸುತ್ತವೆ. ಪಂಚತಂತ್ರದಲ್ಲಂತೂ ಇದು ಹೆಚ್ಚು ಸರಳ ಮತ್ತು ಸ್ಪಷ್ಟ. ಉದಾ: ಕಾಕೋಲುಕೀಯದ ಪ್ರಾರಂಭ ಒಂದು ನಿರ್ದಿಷ್ಟ ಸಂದರ್ಭಕ್ಕೆ ಅಳವಡಿಸಿದಂತೆ ಷಾಡ್ಗುಣ್ಯವನ್ನು ಕುರಿತು ಒಂದು ಲಘು

ಪ್ರಬಂಧವೆನ್ನಬಹುದು.

ಪಂಚತಂತ್ರದಲ್ಲಿ ಅರಸುಕುಮಾರರಿಗೆ ವಿದ್ಯಾಬುದ್ಧಿಯ ಕಡೆಗೆ ಕಲಿಯುವ ಮನಸ್ಸನ್ನು ಪ್ರೇರೇಪಿಸುವಂತಿರುವ ಒಂದು ವಿಶೇಷ ಶ್ರುತಿಯನ್ನು ಕಥೆಗಳ ಮೂಲಕ ಉತ್ತಮ ತಂತ್ರಗಾರಿಕೆಯಿಂದ ವಿಷ್ಣುಶರ್ಮರು ಒಂದು ರೀತಿಯ ಚಮತ್ಕಾರವನ್ನು ನಡೆಸಿದ್ದಾರೆ. ಅಂದರೆ ಈ ಮಂದಗಾಮಿಗಳು ಸಂಪೂರ್ಣ ಪರಿವರ್ತನೆ ಹೊಂದಿ ಚುರುಕಿನ ಮುರುಕಾಗುವಂತೆ ಉತ್ತಮ ಸನ್ನಿವೇಶದಲ್ಲಿ ನೀತಿ ಬೋಧನೆ ಮಾಡಿದ್ದಾರೆ. ಒಂದು ಮನೋಹರ ಶ್ಲೋಕದಲ್ಲಿ ಪರಿವರ್ತನೆಯ ಲಕ್ಷಣಗಳನ್ನು ಬಹಳ ಚೆನ್ನಾಗಿ ಹೇಳಲಾಗಿದೆ.

वाग्देव्या सह सख्यमाचर वह ब्राह्मण माविष्कुरु

प्रावीण्यं गतिषु प्रदर्शय निजं विद्याबलं निर्मलम् ।

मीनं मा स्पृशमौक्तिकं कवलय क्रीड द्रुतं द्यौस्तले

चेदव्रीड बकाधम प्रतिभया हंसत्वमाकांक्षसि ॥[21]

ಅಂದರೆ, ಎಲೈ ಕೊಕ್ಕರೆ! ನಿನಗೆ ಹಂಸವಾಗಬೇಕೆಂಬ ಹಂಬಲವಿದೆ. ಆದರೆ ಅದಕ್ಕಾಗಿ ನೀನು ಏನೇನು ಮಾಡಬೇಕು ಗೊತ್ತೆ? ಸರಸ್ವತಿಯೊಡನೆ ಸ್ನೇಹ ಬೆಳೆಸಿಕೊಳ್ಳಬೇಕು. ಬ್ರಹ್ಮನನ್ನು ಬೆನ್ನಿನ ಮೇಲೆ ಹೊತ್ತುಕೊಳ್ಳಬೇಕು. ನಿನ್ನ ನಡಿಗೆಯಲ್ಲಿ ಕುಶಲತೆಯನ್ನು ತೋರಬೇಕು. ನಿನ್ನ ವಿದ್ಯಾಬಲವನ್ನು ಹೆಚ್ಚಿಸಿಕೊಳ್ಳಬೇಕು, ಮೀನನ್ನು ತಿನ್ನಬಾರದು, ಮುತ್ತನ್ನು ತಿನ್ನಬೇಕು. ಆಕಾಶದಲ್ಲಿ ವಿಹರಿಸಬೇಕು. ನಾಚಿಕೆಯಿಲ್ಲದ ಅಧಮ ಕೊಕ್ಕರೆಯೆ, ಈ ರೀತಿಯಾದ ಪ್ರತಿಭೆಯಿದ್ದರೆ ಹಂಸವಾಗಲು ಬಯಸು. ಹೀಗೆ ಪರಿವರ್ತನೆಯಾಗುವ ಹಂಬಲವಿದ್ದಲ್ಲಿ ಕೆಲವು ನೀತಿನಿಯಮಗಳಿಗೆ ಬದ್ಧರಾಗಿರಬೇಕಾಗುತ್ತದೆ.



21. **ಸುಭಾಷಿತಮಂಜರೀ,** ಸದ್ಗುಣ-ದುರ್ಗುಣ-ಶ್ಲೋ-278, ಪು-190, ಅನ್ಯೋಕ್ತಿಸ್ತಬಕ-71.
ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು-18 (2001)

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಸಂಸ್ಕೃತ ಸಾಹಿತ್ಯ ಕ್ಷೇತ್ರದಲ್ಲಿ ಅಧ್ಯಯನ ನಡೆಸುತ್ತಿರುವ, ಅದರಲ್ಲೂ ಸ್ನಾತಕೋತ್ತರ ಪದವಿ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದ ಸಮಯದಲ್ಲೇ ಭಾರತೀಯ ಕಥಾಸಾಹಿತ್ಯವು ವಿಶ್ವಸಾಹಿತ್ಯ ಪ್ರಪಂಚದಲ್ಲಿ ಅತ್ಯಂತ ಉತ್ಕೃಷ್ಟ ಸ್ಥಾನ ಹೊಂದಿರುವ ವಿಷಯದಲ್ಲಿ ಒಂದು ವಿಶೇಷ ಆಸಕ್ತಿ ನನ್ನಲ್ಲಿ ಮೂಡಿತ್ತು. ಸಂಸ್ಕೃತ ಕಥಾಸಾಹಿತ್ಯವು ರೋಚಕತೆ, ಸರಳತೆ, ಮಧುರತೆ, ಬಾವಾಭಿವ್ಯಕ್ತಿ ಮತ್ತು ಉಪದೇಶಾತ್ಮಕತೆಯ ಕಾರಣ ವಿಶ್ವದ ಎಲ್ಲ ವಿದ್ವಾಂಸರಿಂದ ಪ್ರಶಂಸಿಸಲ್ಪಟ್ಟಿರುವುದು ಗಮನಾರ್ಹ. ಪ್ರಸ್ತುತ ಭಾರತೀಯ ಕಥಾಸಾಹಿತ್ಯವು ವಿಶ್ವಕಥಾ ಸಾಹಿತ್ಯದ ಜನಕನೆಂದು ಪರಿಗಣಿಸಲಾಗಿದೆ. ಇದರಲ್ಲಿ ಭಾರತೀಯ ಜನಜೀವನ, ಸಂಸ್ಕೃತಿ ವಿಚಾರಧಾರೆ, ಕಾರ್ಯಕಲಾಪಗಳು ಮತ್ತು ನೈತಿಕತೆಯ ಪರಕಾಷ್ಟತೆ ಪ್ರಾಪ್ತವಾಗುವುದು.

ಸ್ವಾರಸ್ಯವೇ ಕಥೆಯ ಜೀವ,

"कथायां सरसं वस्तु गद्यैरेव विनिर्मितम्

क्वचिदत्र भवेदार्या क्वचिद्वक्त्रापवक्त्रके ।

आदौ पद्यैर्नमस्कारः खलादेर्वृत्तकीर्तनम् ॥[22]

ಅನೇಕ ಸಹಸ್ರ ವರ್ಷಗಳಿಂದಲೂ ಕಥೆಗಳು ಪ್ರಚಲಿತವಾಗಿವೆ. ಅವು ದೇಶವಿದೇಶಗಳಿಗೆ ಹರಡುತ್ತಾ ಸಾಗಿವೆ. ಭರತ ಖಂಡವು ಕಥೆಗಳ ಅದಿರು. ಕಥೆಗಳು ಭಾರತವು ವಿಶ್ವಕ್ಕೆ ಕೊಟ್ಟ ದೊಡ್ಡ ಕೊಡುಗೆಯಾಗಿವೆ. ಪಂಚತಂತ್ರದ ವಿಶ್ವಪರ್ಯಟನ ಕ್ರಿ.ಶ. 533ರಿಂದ ಸತತವಾಗಿ ನಡೆದಿದೆ. "ಕಥೆಗಳ ಮೂಲಕ ಶಿಕ್ಷಣ ನೀಡುವುದು ಭಾರತದ ವೈಶಿಷ್ಟ್ಯ" ಎಂದು ವಿಲಿಯಂ ಜೋನ್ಸರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕ್ರಿಸ್ತಪೂರ್ವದಷ್ಟು ಪ್ರಾಚೀನವಾದ ಕಥೆಗಳು ಭಾರತದಿಂದ ಯೂರೋಪಿನ ನಾನಾ ಭಾಗಗಳಿಗೆ ಬಂದಿವೆಯೆಂದು ಪಾಶ್ಚಾತ್ಯ ವಿಮರ್ಶಕರೂ ಅಭಿಪ್ರಾಯಪಟ್ಟಿದ್ದಾರೆ.[23] ಮನುಸ್ಮೃತಿಯಲ್ಲಿ ಒಂದು ಮಾತಿದೆ:-

बुद्धिवृद्धिकराण्याशु धनानि च हितानि च ।

नित्यं शास्त्राण्यवेक्षेत निगमांश्चैव वैदिकान् ॥[24]

---

22. **ವಿಶ್ವನಾಥನ ಸಾಹಿತ್ಯದರ್ಪಣ,** VI परिच्छेद 332-333.
(ಕಥೆಯಲ್ಲಿ ಸ್ವಾರಸ್ಯವಾದ ವಸ್ತುವನ್ನು ಗದ್ಯದಿಂದಲೇ ರಚಿಸಲಾಗುವುದು)

23. **ಕೃಷ್ಣಮೂರ್ತಿ ಕೆ, ರಂಗನಾಥ ಶರ್ಮ ಎನ್, ಸಿದ್ಧಗಂಗಯ್ಯ.ಎಚ್.ಕೆ,** ಸಂಸ್ಕೃತ ಭಾಷಾಶಾಸ್ತ್ರ ಮತ್ತು ಸಾಹಿತ್ಯಚರಿತ್ರೆ, ಸಹನಿರ್ದೇಶಕರು ಕರ್ನಾಟಕ ಸರ್ಕಾರ- ಪಠ್ಯಪುಸ್ತಕಗಳ ಮುದ್ರಣಾಲಯ,1993 (Da.Rhys Davids;ottokeller. ಅರೇಬಿಯನ್ನೈಟ್ಸ್ ಮತ್ತು ಈಸೋಪನ ಕಥೆಗಳ ಮೇಲೂ ಭಾರತೀಯ ಕಥೆಗಳ ಸಾಕಷ್ಟು ಪ್ರಭಾವವಿದೆ).

24. **ಸುಭಾಷಿತಮಂಜರೀ,** ವಿವೇಕ-ಶ್ಲೋ-72, ಮನುಸ್ಮೃತಿ, 3-19.ಪು-281,(2001)
ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18.

ಬುದ್ಧಿಯನ್ನು ಹೆಚ್ಚಿಸುವ, ವೇದಗಳಿಗೆ ವಿರುದ್ಧವಲ್ಲದ, ವ್ಯಾಕರಣ ಮೀಮಾಂಸಾ ಮೊದಲಾದ ಶಾಸ್ತ್ರಗಳನ್ನೂ, ಹಣವನ್ನು ತರುವ ಅರ್ಥಶಾಸ್ತ್ರ ಮೊದಲಾದವುಗಳನ್ನೂ, ಜನರಿಗೆ ಉಪಕಾರವಾಗುವ ವೈದ್ಯ, ಜ್ಯೋತಿಷ್ಯ ಮೊದಲಾದವುಗಳನ್ನೂ, ವೇದಾರ್ಥವನ್ನು ತಿಳಿಸುವ ಶಾಸ್ತ್ರಗಳನ್ನೂ ನಿತ್ಯವೂ ಓದಬೇಕು. ಇವುಗಳ ವಿವರಣೆಯಲ್ಲೂ ಅನೇಕ ಕಥೆಗಳು ಕಂಡುಬರುತ್ತವೆ. ಸಂಹಿತೆಗಳ ಕಾಲದಿಂದಲೂ ಭಾರತದಲ್ಲಿ ನಾನಾ ರೂಪದ ಕಥೆಗಳು ಪ್ರಚಲಿತವಾಗಿವೆ. ಸಂವಾದ ಸೂಕ್ತ, ದಾನಸ್ತುತಿ ಸೂಕ್ತ, ವಿವಾಹ ಸೂಕ್ತ ಮುಂತಾದ ಋಗ್ವೇದದ ಸೂಕ್ತಗಳಲ್ಲಿಯೇ ಉಲ್ಲೇಖವಿದೆ. ಯಮಯಮೀ ಸಂವಾದ ಸೋಮ ಮತ್ತು ಸೂರ್ಯೆಯರ ವಿವಾಹ ವೃತ್ತಾಂತವು ಕಥಾರೂಪವಾಗಿವೆ. ವೃತ್ರನೊಡನೆ ಇಂದ್ರನು ನಡೆಸುವ ಹೋರಾಟವೂ ಕಥಾರೂಪವನ್ನು ಪಡೆದಿದೆ. ಬ್ರಾಹ್ಮಣಗಳ ಉಪಾಖ್ಯಾನಗಳಲ್ಲಿರುವ ಪುರೂರವೋರ್ವಶೀ, ಶುನಃಶೇಪ ಮುಂತಾದ ಕಥೆಗಳ ಆಧಾರದಿಂದಲೇ ಶಾಕುಂತಲ ಮೊದಲಾದ ಉತ್ತಮ ಕೃತಿಗಳು ರಚನೆಯಾಗಿರುವ ವಿಚಾರ ಸರ್ವವಿದಿತ. ಉಪನಿಷತ್ತುಗಳಲ್ಲಂತೂ ಕಥೆಗಳು ಸಮೃದ್ಧವಾಗಿವೆ. ನಾಯಿಗಳು ತಮಗೊಬ್ಬ ನಾಯಕನನ್ನು ಹುಡುಕುತ್ತವೆ. ಪಕ್ಷಿಗಳ ಮಾತಿನಿಂದ ರೈಕ್ವನು ಜಾಗೃತಿಗೊಳ್ಳುತ್ತಾನೆ. ಸತ್ಯಕಾಮನು ಮೊದಲು ಎತ್ತಿನಿಂದ, ನಂತರ ಪಕ್ಷಿಗಳಿಂದ ಉಪದೇಶ ಪಡೆಯುತ್ತಾನೆ. ಪುರಾಣಗಳಲ್ಲಿಯೂ ಸಾಕಷ್ಟು ಕಥೆಗಳಿವೆ. ಮನು ಮತ್ತು ಮೀನಿನ ಕಥೆ, ಇಂದ್ರನು ಮರ್ಕಟ ಮತ್ತು ಕಪೋತ ಪಕ್ಷಿಗಳಾಗಿ ರೂಪಾಂತರಗೊಳ್ಳುವುದು ಋಗ್ವೇದದಲ್ಲಿಯೇ ಬಂದಿದೆ.ಪಶುಪಕ್ಷಿಗಳ ಕಥೆಗಳನ್ನುಳ್ಳ ಪಂಚತಂತ್ರವೇ ಮೊದಲಾದ ಪ್ರಸಿದ್ಧ ಕೃತಿಗಳಿಗೆ ಇದೆಲ್ಲವೂ ಹಿನ್ನೆಲೆಯಾಗಿದೆ. ಹೀಗೆ ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಬೆಳೆದು ಬಂದಿರುವ ಕಥೆಗಳ ರಾಶಿಯಲ್ಲಿ ದಂತಕಥೆ, ಕಟ್ಟುಕಥೆ, ಪುರಾಣ ಕಥೆ, ಮಾಯಾಕಥೆ, ಧರ್ಮಕಥೆ– ಮುಂತಾದ ಸಕಲ ಕಥಾಪ್ರಕಾರಗಳೂ ಇವೆ.[25]

ಮನುಷ್ಯನ ನಡವಳಿಕೆ ವೈಯಕ್ತಿಕವಾಗಿ ಹಾಗೂ ಸಾಮಾಜಿಕವಾಗಿ ಹೇಗಿರಬೇಕು? ಅದರಲ್ಲಿ ತಪ್ಪಾವುದು? ಸರಿಯಾವುದು? ಎಂದು ತಿಳಿಸುವುದೇ ನೀತಿಶಾಸ್ತ್ರದ ಗುರಿ. ಜೀವನಕ್ಕೆ ನೇರವಾಗಿ ಸಂಬಂಧಿಸಿದಂತೆ ಇರುವ ನೀತಿ ಶಾಸ್ತ್ರ, ಕರ್ತವ್ಯಗಳೆಂದರೇನು? ಅವು ಯಾವುವು? ಅವು ಅನಿವಾರ್ಯವೇ? ಅವನ್ನು ಸಡಿಲಿಸಬಹುದೇ? ಮುಂತಾದ ಸಮಸ್ಯೆಗಳನ್ನು ಕುರಿತು ಸಮಗ್ರವಾಗಿ, ಶಾಸ್ತ್ರೀಯವಾಗಿ ಚರ್ಚಿಸುತ್ತದೆ. ನೈತಿಕ ಮಾನವನ್ನು ಮುಂದಿರಿಸಿ, ಮಾನವನ ನಡತೆ ಅದಕ್ಕೆ ಅನುಸಾರವಾಗಿರಬೇಕೆಂದು ತಿಳಿಸುತ್ತದೆ. ಹೀಗೆ ವಿಧಿ–ನಿಷೇಧ ಗಳ ಮೂಲಕ ಮಾನವನ ನಡುವಳಿಕೆಗಳಿಗೆ ನೀತಿಶಾಸ್ತ್ರ ಮಾರ್ಗದರ್ಶನ

---

**25. A.B.Keith,"**From the earliest times of the life of the Vedic Indians in India tales of all sorts passed current among the people, however useless it may be to discriminate them as fairy tales,Marchan, or Myths or fables in the earlier stages of their development."

ನೀಡುತ್ತದೆ.[26] ಮಹಾಭಾರತದಲ್ಲಿನ ಒಂದು ನೀತಿ ಮಾರ್ಗದರ್ಶನ ಹೀಗೆ ಸೂಚಿಸುವುದನ್ನು ಕಾಣಬಹುದು:

प्रज्ञावृद्धं, धर्मवृद्धं, स्वबन्धुं, विद्यावृद्धं वयसा चापि वृद्धम् ।

कार्याकार्ये पूजयित्वा प्रसाद्य यः संपृच्छेन्न स मुह्येत् कदाचित् ॥[27]

ಬುದ್ಧಿಶಕ್ತಿಯಲ್ಲಿ ಹಿರಿಯ, ಧರ್ಮಾಚರಣೆಯಲ್ಲಿ ಹಿರಿಯ, ಆಪ್ತನಾದ ಬಂಧು, ವಿದ್ಯಾವೃದ್ಧ ಮತ್ತು ವಯೋವೃದ್ಧ-ಇವರನ್ನು ಗೌರವಿಸಿ ಸಂತೋಷಪಡಿಸಿ ಯಾವಾತನು ಕಾರ್ಯಾಕಾರ್ಯಗಳ ವಿಚಾರದಲ್ಲಿ ಅವರ ಸಲಹೆಯನ್ನು ಪಡೆಯುವನೋ ಅವನು ಎಂದಿಗೂ ಮೌಢ್ಯದಿಂದ ತಪ್ಪುದಾರಿಯನ್ನು ಹಿಡಿಯುವುದಿಲ್ಲ.

ನೀತಿಯನ್ನು ಜನಪ್ರಿಯಗೊಳಿಸುವ, ಜನರಿಗೆ ಆಪ್ಯಾಯಮಾನವಾದ ಕಥಾ ಮಾಧ್ಯಮದಿಂದ ಸರಳವಾಗಿ ಹೇಳುವ ಸದುದ್ದೇಶದಿಂದ ಹುಟ್ಟಿಕೊಂಡ ಕಾವ್ಯ ಪ್ರಕಾರವೇ ನೀತಿಕಾವ್ಯ. ನೀತಿ ಬೋಧೆಯೇ ಇವುಗಳ ಮುಖ್ಯಧ್ಯೇಯ. ಇಲ್ಲಿ ವಿಧಿಯಾಗಲಿ, ನಿಷೇಧವಾಗಲಿ ನೇರವಾಗಿ ವ್ಯಕ್ತವಾಗುವ ಬದಲು ಪರೋಕ್ಷವಾಗಿ, ಸೂಕ್ಷ್ಮವಾಗಿ, ಪ್ರಿಯವಾಗಿ ವ್ಯಕ್ತವಾಗುತ್ತವೆ. ಇಲ್ಲಿನೀತಿ, ಉಪದೇಶ, ತತ್ವಬೋಧನೆಗಳಿದ್ದರೂ, ಶುಷ್ಕಬೋಧನೆ ಅಥವಾ ಹೊರೆ ಎನಿಸುವುದಿಲ್ಲ. ಏಕೆಂದರೆ ಅವು ಕಥೆಯ ಒಂದು ಅಂಗವಾಗಿ ಬರುವುದರಿಂದ ಮನಸ್ಸಿಗೆ ಅಪ್ರಿಯವಾಗುವುದಿಲ್ಲ. ನೇರವಾದ ನಿರೂಪಣೆ, ಸರಳವಾದ ಭಾಷೆ, ಮೃದು ಮಧುರವಾದ ಪದಗಳ ಬಳಕೆ, ಮನಸ್ಸನ್ನು ಹಿಡಿದಿಟ್ಟು ಕೊಳ್ಳುವ ರಚನಾ ಕ್ರಮ ಸುಲಭ ಶೈಲಿ – ಈ ಗುಣಗಳೇ ನೀತಿಕಾವ್ಯಗಳ ಜನಪ್ರಿಯತೆಯ ಗುಟ್ಟು.[28]ಈ ಎಲ್ಲ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ವಿಶೇಷವಾಗಿ ಪರಿಗಣಿಸಿದಾಗ, ನೀತಿ ಕಾವ್ಯಗಳ ಸಾಲಿನಲ್ಲಿ ಅತ್ಯಂತ ಜನಪ್ರಿಯ ಕೃತಿಗಳೆಂದರೆ ಪಂಚತಂತ್ರ ಮತ್ತು ಹಿತೋಪದೇಶ. ಒಂದು ದೃಷ್ಟಿಯಿಂದ ಈ ಎರಡು ಕೃತಿಗಳನ್ನು ನೀತಿಕಾವ್ಯ ಎಂದು ಕರೆಯುವುದಕ್ಕಿಂತ ನೀತಿಕಥೆ ಎಂದು ಕರೆಯುವುದೇ ಹೆಚ್ಚು ಸಮಂಜಸವೇನೊ! ಇಲ್ಲಿ ಪ್ರಾಣಿ ಪಶುಪಕ್ಷಿ ಕಥೆಗಳ ಮೂಲಕ ರಾಜನೀತಿ, ವ್ಯಕ್ತಿ ನೀತಿಗಳನ್ನು ಬೋಧನೆ ಮಾಡಲಾಗಿದೆ. ಇಲ್ಲಿನ ಕಥೆಗಳಲ್ಲಿ ಮನುಷ್ಯನ ಸ್ವಭಾವ, ಮನೋಧರ್ಮ, ಮಾತು, ನಡತೆಗಳನ್ನು ಪ್ರಾಣಿಗಳಿಗೆ ಆರೋಪಿಸಲಾಗಿದೆ. ನೀತಿಕಥೆಗಳಿಗೂ ಗಾದೆಗಳಿಗೂ ಸಂಬಂಧವಿದೆ. ಕೆಲವೊಮ್ಮೆ ಗಾದೆಗಳು ನೀತಿಕಥೆಗಳ ಸಂಕ್ಷಿಪ್ತ ರೂಪವಾಗಿ ಇರುವುದೂ ಉಂಟು.

---

26. **ವೆಂಕಣ್ಣಯ್ಯ. ತ.ಶಾ,** ಗುಮಾನಿ ಕವಿಯ ಉಪದೇಶಶತಕಂ, (1989), ಪು.14, ಶ್ರೀ ಶಾರದಾ ಟ್ರಸ್ಟ್, 4581, "ಗೋಮತಿ" ನ.ರಾ.ಮೊ. ಮೈಸೂರು.570007.
27. **ಸುಭಾಷಿತಮಂಜರೀ,** ರಾಜನೀತಿ-ಶ್ಲೋ-37, ಪು-214, ಮಹಾಭಾರತ-ಉದ್ಯೋಗ ಪರ್ವ-40-23. ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು-18 (2001)
28. **ತ ಶಾ ವೆಂಕಣ್ಣಯ್ಯ,** ಗುಮಾನಿಕವಿಯ ಉಪದೇಶ ಶತಕಂ,(1989) ಪು.14, ಶ್ರೀ ಶಾರದಾ ಟ್ರಸ್ಟ್, 4581, ಗೋಮತಿ, ಎನ್ ಆರ್ ಮೊಹಲ್ಲಾ, ಮೈಸೂರು 7

ಸಂಸ್ಕೃತ ಸಾಹಿತ್ಯದಲ್ಲಿ ಪ್ರತ್ಯೇಕವಾಗಿ ನೀತಿಕಾವ್ಯಗಳನ್ನೇ ಹೇರಳವಾಗಿ ನೋಡಬಹುದು. ವಿವಿಧ ನಾಣ್ಣುಡಿ, ಜಾಣ್ನುಡಿಗಳನ್ನುಳ್ಳ "ಚಾಣಕ್ಯನೀತಿಶತಕ" ಈ ಬಗೆಯ ಕಾವ್ಯಗಳಲ್ಲಿ ಮೊದಲಿಗೆ ಹೆಸರಿಸಬೇಕಾದ ಕೃತಿ. ಚಾಣಕ್ಯನೀತಿಶಾಸ್ತ್ರ, ವೃದ್ಧಚಾಣಕ್ಯ ಇತ್ಯಾದಿ ಹೆಸರುಗಳನ್ನುಳ್ಳ ಈ ಕೃತಿ ಮೂರನೇ ಶತಮಾನಕ್ಕೆ ಸೇರಿದುದು. ಆರ್ಯದೇವನ ಚತುಃಶತಕ ಆರ್ಯಶೂರನ "ಜಾತಕಮಾಲಾ", ವಸುಬಂಧುವಿನ "ಅಭಿಧರ್ಮಾದೇಶ" ರಾಜಧರ್ಮವನ್ನು ಬೋಧಿಸುವ ಕೃತಿಗಳು "ಕಾಮಂದಕನೀತಿ," ಶುಕ್ರನೀತಿಸಾರ"ಗಳಲ್ಲಿ ಕಾವ್ಯಗುಣಕ್ಕಿಂತ ಶಾಸ್ತ್ರಗುಣವೇ ಹೆಚ್ಚಾಗಿರುವಂತೆ ತೋರುತ್ತದೆ.[29] ಕಾವ್ಯರಚನೆಯಲ್ಲಿ ಆಹ್ಲಾದವನ್ನುಂಟುಮಾಡುವ ಕವಿಯ ವಕ್ರವ್ಯಾಪಾರದಿಂದ ಕೂಡಿದ ಶಬ್ದಾರ್ಥಗಳಲ್ಲಿ ವ್ಯವಸ್ಥಿತವಾಗಿರುವುದೇ ಕಾವ್ಯ.

शब्दार्थौ सहितौ वक्रकविव्यापारशालिनि ।
बन्धेव्यवस्थितौ काव्यं तद्विह्लादकारिणि ।।[30]

ಕೇವಲ ಶಬ್ದಾರ್ಥಗಳ ರಚನೆಯು ಕಾವ್ಯವಾಗಲಾರದು. ಆ ಶಬ್ದಾರ್ಥಗಳಲ್ಲಿ ಮನಸ್ಸನ್ನು ಸೆಳೆಯುವ ಶಕ್ತಿ ಇರಬೇಕು. ಈ ಶಕ್ತಿಯು ಕವಿಯ ವ್ಯಾಪಾರ ವಕ್ರತೆಯಿಂದ ಉಂಟಾಗುತ್ತದೆ ಎಂಬ ಅಭಿಪ್ರಾಯವನ್ನು ಕುಂತಕನು ತನ್ನ "ವಕ್ರೋಕ್ತಿಜೀವಿತ"ದಲ್ಲಿ ವ್ಯಕ್ತಪಡಿಸಿದ್ದಾನೆ. ಮತ್ತೊಂದೆಡೆ ಶಾಸ್ತ್ರ ಮತ್ತು ಕಾವ್ಯ ವಿಚಾರದಲ್ಲಿ ಕುಂತಕನು ಈ ಸುಂದರವಾದ ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ.

कटुकौषधवत् शास्त्रमविद्या व्याधिनाशनम् ।
आह्लाद्यमृतवत् काव्यमविवेकगदापहम् ।।[31]

ಅಂದರೆ ಶಾಸ್ತ್ರವು ಕಹಿಯಾದ ಔಷಧಿಯ ಹಾಗೆ ಅವಿದ್ಯೆ ಎಂಬ ರೋಗವನ್ನು ನಾಶಮಾಡುತ್ತದೆ. ಕಾವ್ಯವು ಆಹ್ಲಾದವೆಂಬ ಅಮೃತದ ಹಾಗೆ ಅದೇ ಅಜ್ಞಾನವೆಂಬ ರೋಗವನ್ನು ನಾಶಮಾಡುತ್ತದೆ. ಹಾಗೆಯೇ ಪಂಚತಂತ್ರ ನೀತಿ ಶಾಸ್ತ್ರ ಕಾವ್ಯ ಅತ್ಯಂತ ಸರಳವಾಗಿ, ಆಕರ್ಷಕ ಕಥಾ ಮಾಧ್ಯಮದ ಮೂಲಕ ಪರಿಣಾಮಕಾರಿಯಾಗಿ ದುರ್ವಿನೀತರಾದ ರಾಜಕುಮಾರರ ಅವಿದ್ಯೆ, ಅಜ್ಞಾನದ ಅಂಧಕಾರವನ್ನು ನಾಶಪಡಿಸಿ,

---

29. **ತ. ಶಾ. ವೆಂಕಣ್ಣಯ್ಯ,** ಗುಮಾನಿಕವಿಯ ಉಪದೇಶ ಶತಕಂ,(1989) ಪು.15, ಶ್ರೀ ಶಾರದಾ ಟ್ರಸ್ಟ್, 4581, ಗೋಮತಿ, ಎನ್ ಆರ್ ಮೊಹಲ್ಲಾ, ಮೈಸೂರು 7
30. कुन्तकस्य व. जी. 1–7.
31. कुन्तकस्य व. जी. 1–7ನೇ ಅಂತಶ್ಲೋಕ.

ರಾಜನೀತಿ ನಿಪುಣರನ್ನೂ, ಬದುಕಿನ ವ್ಯವಹಾರ ಚತುರರನ್ನಾಗಿ ಮಾಡಿದೆ ಎಂಬುದು ಗಮನಾರ್ಹ ಅಂಶವಾಗಿದೆ. ರಾಜನೀತಿ ಶಿಕ್ಷಣದ ಒಂದೊಂದು ಸೂಕ್ತಿಗಳು ಅದೆಷ್ಟು ಸರಳವಾಗಿದ್ದು ಎಂಥಹವರಿಗೂ ಅರ್ಥವಾಗುವಂತಿರುತ್ತದೆ. ಉದಾಹರಣೆಗೆ:-

य उपेक्षेत शत्रुं स्वं प्रसरन्तं यदृच्छया ।

रोगं चाऽलस्यसम्युक्तः स शनैस्तेन हन्यते ॥[32]

ಅಂದರೆ, ಸ್ವೇಚ್ಛೆಯಾಗಿ ಬೆಳೆಯುತ್ತಿರುವ ಶತ್ರುವನ್ನು ಯಾರು ಉದಾಸೀನಮಾಡುವನೋ, ಯಾವನು ಸೋಮಾರಿತನದಿಂದ ಕೂಡಿ ರೋಗವನ್ನು ಉದಾಸೀನಮಾಡುವನೋ, ಅವನು ಅದರಿಂದಲೇ ಕ್ರಮಕ್ರಮವಾಗಿ ಕೊಲ್ಲಲ್ಪಡುತ್ತಾನೆ.

ನೀತಿ ಕಾವ್ಯಗಳಲ್ಲಿ ಅತ್ಯಂತ ಪ್ರಸಿದ್ಧವಾದ (ಕ್ರಿ.ಶ. 7ನೇ) ಭರ್ತೃಹರಿಯ "ನೀತಿಶತಕ" ಜನರ ಪ್ರವೃತ್ತಿಗಳನ್ನು ಮೂರ್ಖಪದ್ಧತಿ, ಅರ್ಥ ಪದ್ಧತಿ, ಮಾನಶೌರ್ಯ ಪದ್ಧತಿ ಮುಂತಾದ ಹತ್ತು ಪದ್ಧತಿಗಳಾಗಿ ವಿಭಾಗಿಸಿ, ಪ್ರತಿಯೊಂದು ಪದ್ಧತಿಗೂ ಹತ್ತು ಶ್ಲೋಕಗಳನ್ನು ಮೀಸಲಾಗಿರಿಸಿ, ಒಟ್ಟು ನೂರು ಶ್ಲೋಕಗಳಲ್ಲಿ ಕಾವ್ಯವನ್ನು ಸುಂದರವಾದ ಶೈಲಿಯಲ್ಲಿ ಭರ್ತೃಹರಿಯು ರಚಿಸಿದ್ದಾನೆ. ಕ್ರಿ.ಶ. 9ನೇ ಶತಮಾನದ ಭಲ್ಲಟನ "ಭಲ್ಲಟಶತಕವೂ" 108 ನುಡಿಗಳನ್ನುಳ್ಳ ಅಚ್ಚುಕಟ್ಟಾಗದ ಕೃತಿ. ಸಿಲ್ಹಣನ(ಕ್ರಿ.ಶ. 12ನೇ) "ಶಾಂತಿಶತಕ" ನಾಲ್ಕು ಅಧ್ಯಾಯಗಳ ಗ್ರಂಥ. ಭರ್ತೃಹರಿಯ "ವೈರಾಗ್ಯಶತಕ"ದಿಂದ ಸ್ಪೂರ್ತಿ ಪಡೆದು ಈ ಗ್ರಂಥವನ್ನು ರಚಿಸಿರುವಂತೆ ತೋರುತ್ತದೆ. ವೈರಾಗ್ಯಶತಕದಲ್ಲಿ ತೃಷ್ಣಾದೂಷಣ, ಯಾಚ್ನಾದೈನ್ಯದೂಷಣ, ಭೋಗಾಸ್ಥೈರ್ಯವರ್ಣನಾ ಮುಂತಾದ ಹತ್ತು ವಿಭಾಗಗಳಲ್ಲಿ ನೈತಿಕಾಂಶಗಳ ವಿವರಣೆ ಇದೆ. 108 ನುಡಿಗಳನ್ನುಳ್ಳ ಶಂಭುವಿನ "ಅನ್ಯೋಕ್ತಿಮುಕ್ತಾ ಲತಾ", ಕುಸುಮದೇವನ "ದೃಷ್ಟಾಂತಕ ಲತಾಶತಕ", ಗುಮಾನಿಯ "ಉಪದೇಶ ಶತಕಂ" ಹಾಗೂ ನಾಗರಾಜನ "ಭಾವಶತಕ"- ಈ ಕೃತಿಗಳೆಲ್ಲ ನೀತಿಕಾವ್ಯಗಳ ಕಕ್ಷೆಯಲ್ಲಿ ಬರುತ್ತವೆ.[33] ಈ ಸಂದರ್ಭದಲ್ಲಿ ಒಂದು ಉತ್ತಮವಾದ ಉದಾಹರಣೆಯಾಗಿ, ಪಂಚತಂತ್ರವನ್ನು ಹೋಲುವ, ಉದಾಸೀನತೆಗೆ ಪಕ್ಕಾಗಿ ಅಜ್ಞಾತವಾಗಿ ಉಳಿದಿರುವ ಕೃತಿಗಳಲ್ಲಿ ಕವಿ ಗುಮಾನಿಯ ಕೃತಿಗಳನ್ನು

---

31. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತ ಪಂಚತಂತ್ರ, ಕಾಕೋಲೂಕೀಯ-ಶ್ಲೋ-2.ಪು-437, ಚೌಕಾಂಬ ಕೃಷ್ಣದಾಸ್ ಅಕಾಡೆಮಿ, PB.no:1118, Oriental Publishers, K37/118 Gopalmandir Lane, Varanasi-221001(INDIA)1993.
33. **ತ. ಶಾ. ವೆಂಕಣ್ಣಯ್ಯ,** ಗುಮಾನಿಕವಿಯ ಉಪದೇಶ ಶತಕಂ,(1989) ಪು.15, ಶ್ರೀ ಶಾರದಾ ಟ್ರಸ್ಟ್, 4581, ಗೋಮತಿ, ಎನ್ ಆರ್ ಮೊಹಲ್ಲಾ, ಮೈಸೂರು 7

ಸ್ಮರಣೆಗೆ ತಂದು ಕೊಳ್ಳಬಹುದು, ವಿಶೇಷವಾಗಿ "ಉಪದೇಶಶತಕಂ". ಕವಿಯು ತನ್ನ ಕಾವ್ಯದ ಕೊನೆಯಲ್ಲಿ ಹೇಳಿಕೊಂಡಿರುವಂತೆ, "ಆರ್ಯಾ" ಛಂದಸ್ಸಿನಲ್ಲಿ ರಚಿತವಾಗಿರುವ ನೂರು ಶ್ಲೋಕಗಳ ನೀತಿಬೋಧಕ ಕೃತಿಯಾಗಿರುತ್ತದೆ. ಮಂದಮತಿಗಳಿಗೆ ಮಹದುಪಕಾರವಾಗಬೇಕೆಂಬುದು ಕವಿಯ ಮಹದಾಶಯ. ಇಲ್ಲಿನ ಪ್ರತಿಯೊಂದು ಪದ್ಯದ ಮೂರು ಪಾದಗಳು ಕಥಾಂಶವೊಂದನ್ನು ರೂಪಿಸಿದ್ದು, ಅದರ ನಾಲ್ಕನೆಯ ಪಾದ ಆ ಕಥಾಂಶದಿಂದ ಮೂಡಿಬರುವ ನೀತಿವಾಕ್ಯವನ್ನೊಳಗೊಂಡಿದೆ. ರಾಮಾಯಣ, ಮಹಾಭಾರತ, ಪುರಾಣ ಹಾಗೂ ಭಾಗವತಾದಿ ಕಥೆಗಳಿಂದ ಇಲ್ಲಿನ ಶ್ಲೋಕಗಳು ಪ್ರೇರಣೆಗೊಂಡು ರಚತವಾಗಿರುತ್ತವೆ. ಕಥೆ ಹಾಗೂ ನೀತಿಯನ್ನು ಜೋಡಿಸುವಲ್ಲಿ ಕವಿಯ ಜಾಣ್ಮೆಯು ಅಸದೃಶವಾದುದು. ಕೃತಿಯ ರಚನಾ ತಂತ್ರ ವಿಶಿಷ್ಟವಾದುದು.

ನೀತಿಶಾಸ್ತ್ರದ ವಿಧಿ-ನಿಷೇಧ ಮಾರ್ಗಗಳೆರಡನ್ನೂ ಕವಿ ಚಾಣಾಕ್ಷತನದಿಂದ ಬಳಸಿದ್ದಾನೆ. "धीरः समयम् प्रतीक्षेत" "जनापवादाद्धजेद्धीतिम्", "साम्ना मूर्खम् वशे कुर्यात्",[34] ಇತ್ಯಾದಿ ವಾಕ್ಯಗಳಲ್ಲಿ ವಿಧಿ ಮಾರ್ಗದಿಂದ ನೀತಿಯನ್ನು ಬೋಧಿಸಿದ್ದರೆ, "न सङ्कटेऽपित्यजेद्धेर्मम्", "न हि निजबन्धुर्विरोद्धव्यः", "प्राप्तैश्वर्योनदृप्तःस्यात्" ಇತ್ಯಾದಿ ವಾಕ್ಯಗಳಲ್ಲಿ ನಿಷೇಧಮಾರ್ಗದ ಅನುಸರಣೆಯನ್ನು ಕಾಣಬಹುದು. ಆದರ್ಶರಾದ ವ್ಯಕ್ತಿಗಳ ಆಚಾರ-ವಿಚಾರ, ತ್ಯಾಗ-ಔದಾರ್ಯಗಳನ್ನು, ಶೌರ್ಯ-ಸ್ಥೈರ್ಯಗಳನ್ನು ನಿರೂಪಿಸಿ ಆ ಬಳಿಕ ನೀತಿಯನ್ನು ಬೋಧಿಸಿರುವುದು ಒಂದು ವಿಶಿಷ್ಟ ಅಂಶವಾಗಿರುತ್ತದೆ. ಸಾಮಾನ್ಯವಾಗಿ ನೀತಿಬೋಧೆ ಮಾಡಿ ಅದಕ್ಕೆ ಪೂರಕವಾಗಿ ಸಾಧುಸಂತರ ಕಥೆ ಹೇಳುವುದು ವಾಡಿಕೆ. ಆದರೆ ಇಲ್ಲಿ ಮೊದಲಿಗೆ ಮಹನೀಯರ ಉದಾತ್ತ ನಡೆಯ ನಿರೂಪಣೆ, ನಂತರ ಅವರ ಆಚರಣೆಯಿಂದ ಮೂಡಿಬರುವ ನೀತಿಯ ಅಭಿವ್ಯಕ್ತಿ. ಅಲಂಕಾರಗಳ ಹೊರೆಯಿಲ್ಲದೆ, ಬೆಡಗಿಲ್ಲದ, ಕಠಿಣ ಪದಗಳ ಬೆದರಿಕೆಯಿಲ್ಲದ ಸರಳ ಸುಂದರ ನಿರೂಪಣೆ ಸರ್ವಜನ ಮನೋನಂದಕವಾದುದು.

कुतुकाय कोविदानां मूढमतीनां महोपकाराय ।

निरमात्कविर्गुमानिः शतोपदेशप्रबंधममुम् ॥[35]

---

34. **ತ. ಶಾ. ವೆಂಕಣ್ಣಯ್ಯ,** ಗುಮಾನಿಕವಿಯ ಉಪದೇಶ ಶತಕಂ,(1989) ಪು.20, ಶ್ರೀ ಶಾರದಾ ಟ್ರಸ್ಟ್, 4581, ಗೋಮತಿ, ಎನ್. ಆರ್. ಮೊಹಲ್ಲಾ, ಮೈಸೂರು 7
35. **ತ. ಶಾ. ವೆಂಕಣ್ಣಯ್ಯ,** ಗುಮಾನಿಕವಿಯ ಉಪದೇಶ ಶತಕಂ,(1989) ಶ್ಲೋಕ-102, ಶ್ರೀ ಶಾರದಾ ಟ್ರಸ್ಟ್,4581,ಗೋಮತಿ, ಎನ್ ಆರ್ ಮೊಹಲ್ಲಾ, ಮೈಸೂರು 7

ಅಂದರೆ, ನೂರು ಉಪದೇಶಗಳನ್ನೊಳಗೊಂಡ ಈ ಕೃತಿಯನ್ನು ವಿದ್ವಾಂಸರ ಕುತೂಹಲಕ್ಕಾಗಿಯೂ, ಮಂದಮತಿಗಳ ಮಹದುಪಕಾರವಾಗಲೆಂದೂ ಗುಮಾನಿ ಕವಿಯು ರಚಿಸಿದನು.

ಇದೇ ಮಾದರಿಯಲ್ಲಿ ಮಂದಮತಿಗಳಾದ ಅಮರಶಕ್ತಿ ರಾಜನ ಮೂವರು ರಾಜಕುಮಾರರಿಗೆ ಮಹದುಪಕಾರವಾಗಲೆಂದು, ಬದುಕಿನ ನೀತಿನಿಯಮಗಳು, ರಾಜನೀತಿನೈಪುಣ್ಯ, ಅರ್ಥಶಾಸ್ತ್ರ, ನೀತಿಶಾಸ್ತ್ರ ನಿಪುಣರಾಗಲೆಂದು, ರಾಜವಂಶದ ಮುಂದಿನ ರಾಜ್ಯಭಾರ ನಡೆಸಲು ಯೋಗ್ಯರನ್ನಾಗಿ ಮಾಡುವ ಸದುದ್ದೇಶದಿಂದ ಪಂಚತಂತ್ರವನ್ನು ವಿಷ್ಣುಶರ್ಮರು ರಚಿಸಿದರು. ಪಂಚತಂತ್ರ ನೀತಿಕಾವ್ಯದಲ್ಲಿ ಕಥೆಗಳ ಸರಳತೆ, ಬದುಕಿನ ಸ್ಥಿತಿ–ಗತಿಗಳ ಕುರಿತು ಮನಮುಟ್ಟುವಂತೆ ವರ್ಣನೆ ಹಾಗೂ ಕಥೆಗಳ ತಾತ್ಪರ್ಯಕ್ಕೆ ಸೂಕ್ತವಾದ ಜಾಣ್ನುಡಿಗಳು, ನಾಣ್ನುಡಿಗಳು, ಸುಭಾಷಿತಗಳು, ಸೂಕ್ತಿಗಳು, ಗಾದೆಗಳು ಮುಂತಾದವುಗಳು ಬಹಳ ಕರಾರುವಾಕ್ಕಾಗಿ ಸಂಯೋಜಿಸಲಾಗಿದೆ.ಉತ್ತಮ ಶಿಕ್ಷಣ ಮತ್ತು ವ್ಯಕ್ತಿತ್ವ ವಿಕಸನ ಮಾರ್ಗದರ್ಶನ ಸರ್ವಜನ ಮನೋನಂದಕವಾಗಿದೆ. ಅಂದರೆ ಇದು ಕೇವಲ ರಾಜಕುಮಾರರಿಗೆ ಮಾತ್ರವಲ್ಲ. ನೀತಿನಿಯಮಗಳು, ಬದುಕಿನ ಸ್ಥಿತಿ–ಗತಿಗಳ ಒಂದು ನೋಟ, ಬದುಕಿನ ಸಾರ್ಥಕತೆಗೆ ಪಾಲಿಸಬೇಕಾದ ಆಚಾರವಿಚಾರಗಳು, ಬುದ್ಧಿವಂತಿಕೆಯ ಸದುಪಯೋಗ, ಪಡೆದದ್ದನ್ನು ಮೂರ್ಖತನದಿಂದ ಕಳೆದು ಕೊಳ್ಳುವುದು, ಪರಿಕ್ಷಿಸದೆ ಅಥವಾ ಸರಿಯಾಗಿ ವಿಚಾರಮಾಡದೆ ಕೈಗೊಂಡ ಕಾರ್ಯಗಳಿಂದ ಆಗುವ ಅನಾಹುತಗಳು, ಮೈತ್ರಿಯನ್ನು ಒಡೆದುಕೊಳ್ಳುವಿಕೆ, ಒಳ್ಳೆಯ ಮಿತ್ರರನ್ನು ಗಳಿಸುವಿಕೆ ಮುಂತಾದ ವಿಚಾರಗಳು ಸಕಲರಿಗೂ ಬೇಕಾದ ತಿಳುವಳಿಕೆಯೇ ಹೌದು. ಇಂತಹ ಬದುಕಿನ ಮಂತ್ರಗಳನ್ನು, ರಾಜನೀತಿಶಿಕ್ಷಣವನ್ನು ಪಂಚತಂತ್ರದಲ್ಲಿ ಐದು ಸೂತ್ರ ಕಥೆಗಳ, ಇತರ ಎಪ್ಪತ್ತು ವಿವಿಧ ಉಪಕಥೆಗಳ ಮೂಲಕ ಆಕರ್ಷಕವಾಗಿ ಸಕಲಶಾಸ್ತ್ರ ಪಾರಂಗತರಾದ ವಿಷ್ಣುಶರ್ಮರು ನಿರೂಪಿಸಿದ್ದಾರೆ. ಪಂಚತಂತ್ರದಲ್ಲಿ ಬರುವ ಎಲ್ಲ ವಿಚಾರಗಳು, ಸಾಮಾನ್ಯ ಜ್ಞಾನ, ಬದುಕಿನ ನೀತಿಪಾಠ ಪ್ರತಿಯೊಬ್ಬರಿಗೂ ಒಂದಲ್ಲೊಂದು ರೀತಿಯಲ್ಲಿ ಅವಶ್ಯಕವಾದದ್ದು ಹಾಗೂ ಸಾರ್ವತ್ರಿಕ ಸತ್ಯವಿದ್ದಂತೆ. (Universal truth )

ಉದಾಹರಣೆಗೆ:–1. **ಸೂರ್ಯನು ಪೂರ್ವದಿಕ್ಕಿನಲ್ಲಿ ಉದಯಿಸುತ್ತಾನೆ. (Sun rises in the east)**

**2. ನಾಯಿಗಳು ಅಪರಿಚಿತರನ್ನು ಕಂಡಾಗ ಬೊಗಳುತ್ತವೆ. (Dogs bark at strangers)**

**3. ಎಸ್ಕಿಮೋಗಳು ಮಂಜು ಗುಡಿಸಲಿನಲ್ಲಿ ವಾಸಿಸುತ್ತಾರೆ.(Eskimos live in Igloos.)**

ಇವುಗಳೆಷ್ಟು ಸತ್ಯದ ವಿಚಾರಗಳೋ ಹಾಗೆಯೇ, ಯಾವುದೇ ದೇಶ, ಜನ ಹಾಗೂ ಸಮಾಜದ ಸಾರ್ವತ್ರಿಕ ಸತ್ಯದ ವಿಚಾರಗಳನ್ನೊಳಗೊಂಡಿರುವುದೇ ನೀತಿಬೋಧೆ. ಪಂಚತಂತ್ರದಲ್ಲಿ ಅಳವಡಿಸಿರುವ ಸುಭಾಷಿತಗಳು, ನೀತಿಬೋಧಕಗಳು, ಗಾದೆಗಳು ಸರ್ವಕಾಲಿಕವಾದವು. ಬದುಕಿನ ಸಾರ್ಥಕತೆಗೆ ಎಂದೆಂದೂ ಪಾಲಿಸಬೇಕಾದ ತಿಳುವಳಿಕೆಗಳು. ಬದ್ಧತೆಯ ಬದುಕಿಗೆ ಅವಶ್ಯಕವಾದ ಎಚ್ಚರಿಕೆ, ಸೂಕ್ತ ಶಿಕ್ಷಣ ಹಾಗೂ ಮಾರ್ಗದರ್ಶನ ಇವುಗಳಿಂದ ಪ್ರಾಪ್ತವಾಗುವುದು. ಜೀವದ ಹೊರಗಿನ ಹೊದಿಕೆಯೇ ಈ ಶರೀರ. ಈ ಜೀವನಿಗೆ ಐದು ಕೋಶಗಳಿವೆ ಎಂದು ಉಪನಿಷತ್ತುಗಳು ಹೇಳುತ್ತವೆ:-

जीवस्य बाह्यः अच्छादकः देहः ऐतस्य जीवस्य ।
पञ्चकोशाः भवन्ति इति उपनिषदः वदन्ति ॥[36]

ಅನ್ನಮಯಕೋಶ(ದೇಹ), ಪ್ರಾಣಮಯಕೋಶ(ಉಸಿರು), ಮನೋಮಯಕೋಶ(ಮನಸ್ಸು), ವಿಜ್ಞಾನಮಯಕೋಶ(ಜ್ಞಾನ), ಆನಂದಮಯಕೋಶ(ಸಂತೋಷ). ಜೀವನು ಜೀವಂತವಾಗಿ ಚಟುವಟಿಕೆಯಿಂದ ಗೆಲುವಾಗಿ ಇರಬೇಕಾದರೆ ಈ ಪಂಚಕೋಶಗಳು ಅತ್ಯಂತ ಮುಖ್ಯವಾದುದು. ಹಾಗೆಯೇ "ಪಂಚತಂತ್ರಗಳು- ಮಿತ್ರಭೇದ- ಮಿತ್ರಸಂಪ್ರಾಪ್ತಿ - ಕಾಕೋಲೂಕೀಯ - ಲಬ್ಧಪ್ರಣಾಶ ಮತ್ತು ಅಪರೀಕ್ಷಿತಕಾರಕ - ನೀತಿಕಥೆಗಳ ಮೂಲಕ ಎಷ್ಟರಮಟ್ಟಿಗೆ ಸ್ವಾರಸ್ಯಕರವಾಗಿದೆಯೆಂದರೆ, ಪಂಚಾಮೃತದಂತೆ ಪಾವನ ಜ್ಞಾನತೀರ್ಥವಾಗಿದ್ದು, ಸಾರ್ಥಕ ಬದುಕಿನ ರೀತಿ - ನೀತಿಗಳ ಸುಜ್ಞಾನ, ರಾಜನೀತಿಶಿಕ್ಷಣ ಮತ್ತು ಸುಮನೋಹರ ವ್ಯಕ್ತಿತ್ವ - ವಿಕಸನ ಪ್ರಾಪ್ತಿಯಾಗುವುದು. ಅದೇ ಅಜ್ಞಾನ, ಆಲಸ್ಯ, ಮೂರ್ಖತನ ಮತ್ತು ಸ್ವೇಚ್ಛಾಪ್ರವೃತ್ತಿಗೆ ಕುಂತಕನು ಹೇಳಿರುವಂತೆ ಕಟುಕೌಷಧವಾಗಿ ಅಂದರೆ "ಪಂಚಗವ್ಯತೀರ್ಥವಾಗಿ- ಶುದ್ಧಗೊಳಿಸುವ ಕಹಿಯಾದ ಔಷಧವಾಗಿ ಅವಿದ್ಯೆ, ಅಜ್ಞಾನದ ಅಂಧಕಾರವನ್ನು ನಾಶಪಡಿಸಿ ರಾಜನೀತಿ ನಿಪುಣರನ್ನೂ, ಬದುಕಿನ ವ್ಯವಹಾರ ಚತುರರನ್ನೂ ಮಾಡುವಂತಹುದು.

ಕ್ರಿ.ಶ.17ನೇ ಶತಮಾನದ ಪಂಡಿತರಾಜ ಜಗನ್ನಾಥನ "ಭಾಮಿನೀವಿಲಾಸ"ದಲ್ಲಿಯೂ, ಪದ್ಮಾನಂದ, ಅಪ್ಪಯ್ಯ ದೀಕ್ಷಿತರುಗಳ "ವೈರಾಗ್ಯಶತಕ"ದಲ್ಲಿಯೂ ನೀತಿಯ ಉಪದೇಶವಿದೆ. ಇವೆಲ್ಲಾ ನೀತಿಶಾಸ್ತ್ರ ಬೋಧಕಗಳು ಸಂದೇಹವಿಲ್ಲ. ನೀತಿ ಶಾಸ್ತ್ರ ಹಾಗೂ ಆಧ್ಯಾತ್ಮ ನಿಕಟಸಂಬಂಧವುಳ್ಳವು. ಆದರೆ ಕೇವಲ ಶುಷ್ಕ ಹಾಗೂ ನೀರಸವಾಗಿರುವಂತೆ ತೋರುವ ಶಾಸ್ತ್ರದ ಅಧ್ಯಯನ ಪಂಡಿತಪ್ರಿಯವಾಗಬಹುದೇ ಹೊರತು

---

36. **ತೈತ್ತರೀಯ ಉಪನಿಷತ್ ಹಾಗೂ ಆದಿಶಂಕರವಿರಚಿತ ವಿವೇಕಚೂಡಾಮಣಿಯಲ್ಲಿ ಪಂಚಕೋಶ**ಗಳ ಬಗ್ಗೆ ಶ್ಲೋಕ.

ಸಾಮಾನ್ಯರು ಅದನ್ನು ಅಧ್ಯಯನಮಾಡಿ ಅರ್ಥಮಾಡಿಕೊಂಡು ಆನಂದಿಸಲಾರರು. ಆದರೆ ಪಂಚತಂತ್ರ ನೀತಿಕಥೆಗಳನ್ನು ಅವಲೋಕನ ಮಾಡಿ ಪರಿಶೀಲಿಸಿದರೆ ಕುಂತಕನು ಹೇಳಿರುವಂತೆ, ಈ ನೀತಿಶಾಸ್ತ್ರಕಾವ್ಯವು ಅತ್ಯಂತ ಪರಿಣಾಮಕಾರಿಯಾಗಿ, ಸರಳ ಸಣ್ಣಸಣ್ಣ ಕುತೂಹಲ ಮೂಡಿಸುವ ಕಥಾ ನಿರೂಪಣೆಯ ಮೂಲಕ ದುರ್ವಿನೀತರಾದ ರಾಜಕುಮಾರರ ಅವಿದ್ಯೆ, ಅಜ್ಞಾನದ ಅಂಧಕಾರವನ್ನು ನಾಶಪಡಿಸಿ, ರಾಜನೀತಿ ನಿಪುಣರನ್ನೂ, ಬದುಕಿನ ವ್ಯವಹಾರ ಚತುರರನ್ನೂ ಮಾಡಿದೆ ಎಂಬುದು ನಿಜಕ್ಕೂ ಒಂದು ಗಮನಾರ್ಹ ಸಂಗತಿಯಾಗಿದೆ. ರಾಜನೀತಿ ಶಿಕ್ಷಣ ನೀಡುವಲ್ಲಿ ದೈನಂದಿನ ಬದುಕಿನ ವ್ಯವಹಾರಗಳನ್ನು ನಿದರ್ಶನಗಳಾಗಿ ಆಯ್ಕೆಮಾಡಿಕೊಂಡು ಅತ್ಯಂತ ಸರಳವಾಗಿ ವಿಷ್ಣುಶರ್ಮರು ಬೋಧಿಸಿದ್ದಾರೆ. ಇದು ಕೇವಲ ರಾಜಕುಮಾರರಿಗೆ ಶಿಕ್ಷಣ ಎಂದು ಕಂಡುಬಂದರೂ, ಪ್ರತಿಯೊಬ್ಬ ಸಾಮಾನ್ಯನಿಗೂ ಉತ್ತಮ ತಿಳುವಳಿಕೆ ಲಭ್ಯವಾಗುತ್ತದೆ. ಇದೇ ಪಂಚತಂತ್ರದಲ್ಲಿ ಅಡಕವಾಗಿರುವ ಶೈಕ್ಷಣಿಕ ಮನೋವಿಜ್ಞಾನದ ಲಕ್ಷಣಗಳು. ಉದಾಹರಣೆಗೆ ಒಂದು ಸೂಕ್ತಿ ಹೀಗೆ ಸೂಚಿಸುತ್ತದೆ:–

> लुब्धस्य नश्यति यशः पिशुनस्य मैत्री नष्टक्रियस्य कुलमर्थपरस्य धर्मः ।
> विद्याफलं व्यसनिनः कृपणस्य सौख्यं राज्यं प्रमत्तसचिवस्य नराधिपस्य ॥[37]

ಲೋಭಿಯ ಯಶಸ್ಸು ನಾಶವಾಗುತ್ತದೆ. ಚಾಡಿಹೇಳುವವನಿಗೆ ಸ್ನೇಹ ನಷ್ಟವಾಗುತ್ತದೆ. ವಿಹಿತವಾದಕ್ರಿಯೆಗಳನ್ನು ಮಾಡದವನ ಕುಲ ನಾಶವಾಗುತ್ತದೆ. ದುರ್ವ್ಯಸನಗಳಿಗೆ ತುತ್ತಾದವನಿಗೆ ವಿದ್ಯೆಯಫಲ ಸಿಗುವುದಿಲ್ಲ. ಜಿಪುಣನಿಗೆ ಸೌಖ್ಯ ಸಿಗುವುದಿಲ್ಲ. ಅದೇ ರೀತಿಯಲ್ಲಿ ಮೈಮರೆತ ಮಂತ್ರಿಯನ್ನು ಹೊಂದಿರುವ ರಾಜನ ರಾಜ್ಯವು ನಾಶವಾಗುತ್ತದೆ.

ಈ ದೃಷ್ಟಿಯಿಂದ ಪಂಚತಂತ್ರದ ಪರಮ ಗುರಿ ಶಿಕ್ಷಣ. ಸೂತ್ರರೂಪವಾದ ಪ್ರಧಾನ ಕಥೆಯೊಂದಿದ್ದು, ಅದರೊಡನೆ ಕಥೆ–ಉಪಕಥೆಗಳು ವಿಚಾರ ಕೊಂಡಿಗಳಿಂದ ಕೂಡಿ ಕಥೆಯ ಬೆಳವಣಿಗೆ ಆಗುತ್ತದೆ. ಒಂದೇ ಕಥೆ ಬಹು ದೀರ್ಘವಾಗಿ ಸಾಗುವುದರಿಂದ ಆಗುವ ಬೇಸರ ಇದರಿಂದ ಪರಿಹಾರವಾಗುತ್ತದೆ, ವಿಭಿನ್ನ ಸ್ವಾರಸ್ಯ ಸಿಕ್ಕುತ್ತದೆ. ಮಕ್ಕಳಿಗಂತೂ ಸಣ್ಣ ಕಥೆಗಳೇ ಬೇಕು, ಅವೂ ಪಶುಪಕ್ಷಿಗಳ ಕಥೆಗಳಾದರೆ ಇನ್ನೂ ಆಕರ್ಷಕ. "ಪಂಚತಂತ್ರ"ದಲ್ಲಿ ಮೊದಲಬಾರಿಗೆ ರೂಪತಾಳಿರುವ ಈ ಕಥಾಸಂವಿಧಾನ ಲೋಕಪ್ರಿಯವಾಗಿದೆ. ಕುತೂಹಲವನ್ನು ಕೆರಳಿಸಿ ಮನೋರಂಜನೆಯನ್ನು ಒದಗಿಸುವುದಷ್ಟೇ ಕಥೆಯ ಗುರಿಯಲ್ಲ, ನೀತಿ, ಆಚಾರ ಧರ್ಮಾದಿಗಳ ಬೋಧನೆಯೂ ಪಂಚತಂತ್ರಾಕಾರನ ಆಶಯವಾಗಿರುತ್ತದೆ. ಇದರಿಂದಾಗಿ ನಾವು

---

37. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತ ಪಂಚತಂತ್ರ, ಕಾಕೋಲೂಕೀಯ–ಶ್ಲೋ–232, ಪು–593, ಚೌಕಾಂಬ ಕೃಷ್ಣದಾಸ್ ಅಕಾಡೆಮಿ, PB.no:1118, Oriental Publishers, K37/118 Gopalmandir Lane, Varanasi-221001(INDIA)1993.

ಅರ್ಥೈಸಿಕೊಳ್ಳಬಹುದೇನೆಂದರೆ, ಪಂಚತಂತ್ರವು ಎಂಥಹ ಶೈಕ್ಷಣಿಕ ಹಾಗೂ ಮನೋವೈಜ್ಞಾನಿಕ ಅಂಶಗಳನ್ನು ತನ್ನ ಕಥಾಗುಚ್ಛದಲ್ಲಿ ಲೇಪನಮಾಡಿಕೊಂಡಿದೆ! ಎಂಬುದು.

यौवनं धनसंपत्तिः प्रभुत्वमविवेकता।

ऐकैकमप्यनर्थाय किमु यत्र चतुश्टयम् ॥[38]

ಯೌವನ, ಧನಸಂಪತ್ತು, ದೊರೆತನ, ಅವಿವೇಕ ಎಂಬ ಈ ನಾಲ್ಕರಲ್ಲಿ ಒಂದೊಂದೇ ಅನರ್ಥವನ್ನು ಹುಟ್ಟಿಸುತ್ತದೆ. ಈ ನಾಲ್ಕೂಉಳ್ಳ ಸ್ಥಳದಲ್ಲಿ ಹೇಳಬೇಕಾದುದೇನು? ವಿವೇಕವಿಲ್ಲದೆ ದುರ್ಮಾರ್ಗರಾಗಿರುವ ನನ್ನ ಪುತ್ರರಿಗೆ ನೀತಿಶಾಸ್ತ್ರವನ್ನೋದಿಸಿ ವಿವೇಕವನ್ನುಂಟುಮಾಡುವುದರಿಂದ ಅವರನ್ನು ಪುನರ್ಜನ್ಮ ಸಂಭೂತರಾಗಿ ಮಾಡತಕ್ಕ ಪುಣ್ಯಾತ್ಮರು ಯಾರಾದರೂ ಇದ್ದಾರೆಯೇ ಎಂದು ಅಮರಶಕ್ತಿ ರಾಜನು ಬಹಳ ಚಿಂತಾಕ್ರಾಂತನಾಗಿರುವ ಸಂದರ್ಭದಲ್ಲಿ, ದೇವಗುರುವಾದ ಬೃಹಸ್ಪತಿಯ ಹಾಗೆ ಸಮಸ್ತ ನೀತಿಶಾಸ್ತ್ರಗಳನ್ನೂ ತಿಳಿದ ವಿಷ್ಣುಶರ್ಮರು ಅದೃಷ್ಟವಶಾತ್ ಲಭ್ಯವಾದರು. ಆ ಮಂದಮತಿಗಳಾದ ಅರಸುಕುಮಾರರಿಗೆ ನೀತಿಶಾಸ್ತ್ರ ಶಿಕ್ಷಣ ನೀಡಲೆಂದೇ ವಿಷ್ಣುಶರ್ಮರು ಈ ಪಂಚತಂತ್ರಗಳನ್ನುಳ್ಳ ಗ್ರಂಥವನ್ನು ರಚಿಸಿದರು.

ಪಂಚತಂತ್ರ ನೀತಿಕಥೆಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ, ನಿಜಕ್ಕೂ ಕೇವಲ ಆರು ತಿಂಗಳುಗಳಲ್ಲಿ ಅಮರಶಕ್ತಿ ರಾಜನ ಮೂವರೂ ಪುತ್ರರು ಮೂರ್ಖ, ಆಲಸಿ, ಬುದ್ಧಿ ಶೂನ್ಯರಾಗಿದ್ದವರನ್ನು ಗಮನಿಸಿ ಅವರ ಮಾನಸಿಕ ಸ್ಥಿತಿಗತಿಗಳನ್ನು ಗ್ರಹಿಸಿ, ಸುಶಿಕ್ಷಿತರನ್ನಾಗಿ ಪರಿವರ್ತನೆ ಮಾಡಿ, ಜೀವನ ಶಿಕ್ಷಣ ನೀಡಿದ ಪಂಡಿತ ವಿಷ್ಣಶರ್ಮರ ವಿಚಾರ ಕುತೂಹಲಕಾರಿಯಾಗಿದೆ. ಈ ದುರ್ವಿನೀತ ರಾಜಕುಮಾರರಿಗೆ ಏನನ್ನು ಭೋದಿಸಬೇಕು? ಯಾವಾಗ ಭೋದಿಸಬೇಕು? ಹೇಗೆ ಭೋದಿಸಬೇಕು? ಹಾಗೆಯೇ ಅವರುಗಳು ಏನನ್ನು ಕಲಿಯಬೇಕು? ಏಕೆ ಕಲಿಯಬೇಕು? ಹೇಗೆ ಕಲಿಯಬೇಕು? ಎಂಬುದನ್ನೆಲ್ಲಾ ವಿಶ್ಲೇಷಣೆಗೈದು, ಈ ಜವಾಬ್ದಾರಿ ನಿರ್ವಹಿಸುವ ದೃಢ ವಿಶ್ವಾಸಹೊಂದಿ, ವಿಶಿಷ್ಟವಾದ ಐದು ತಂತ್ರಗಳ ಮೂಲಕ ಸರಣಿ ಕಥೆಗಳನ್ನು ಅತ್ಯಾಕರ್ಷಕವಾಗಿ ಹೆಣೆದು, ಪ್ರತಿಯೊಂದು ಕಥೆಗೂ ಒಂದುರಾಜನೀತಿ ಹಾಗೂ ಜೀವನಾದರ್ಶ ನೀತಿಯನ್ನು ಲೇಪಿಸಿ, ರಾಜಪುತ್ರರ ಕುತೂಹಲನ್ನು ಕೆರಳಿಸಿ ಭೋಧಿಸಿದ ಬಗೆ, ಮೇಧಾವಿ ವಿಷ್ಣುಶರ್ಮರ ನೈಜ ಮನೋವೈಜ್ಞಾನಿಕ ಕೌಶಲ್ಯವನ್ನು, ವ್ಯಕ್ತಿತ್ವ ನಿರ್ಮಾಣ ಕಲೆಯನ್ನು ಪ್ರತಿಬಿಂಬಿಸುವುದರಲ್ಲಿ ಯಾವುದೇ ಸಂದೇಹವಿಲ್ಲ. ಇವರು ಎಂಥಹ ದೃಢ ಸಂಕಲ್ಪಮಾಡಿ ದಡ್ಡ ರಾಜಕುಮಾರರನ್ನು ರಾಜನೀತಿ ನಿಪುಣರು, ಬುದ್ಧಿವಂತರು ಮತ್ತು ನಾಯಕತ್ವ ಹೊಂದಿದವರನ್ನಾಗಿ ಪರಿವರ್ತನೆ ಮಾಡಿ ಸಾಧನೆಗೈದಿದ್ದಾರೆ! ಇದರ ಹಿಂದೆ ಎಂಥಹ ಶೈಕ್ಷಣಿಕ ಮನೋವಿಜ್ಞಾನ ಅಡಗಿದೆ! ಎಷ್ಟು ಮನೋಜ್ಞವಾಗಿ ಒಂದು ಸುಂದರ ವ್ಯಕ್ತಿತ್ವ ನಿರ್ಮಾಣ

---

**38. The panchatantra or Panchopakhyana,** ಪಂಚತಂತ್ರೋತ್ಪತ್ತಿ,ಪು–2,ಶ್ಲೋ–1, Mysore Government Branch Press,1910

ಕಲೆಯನ್ನು ಈ ಶ್ಲೋಕದಲ್ಲಿ ಬೋಧಿಸಲಾಗಿದೆ ಎಂಬುದನ್ನು ಗಮನಿಸಿದರೆ ಒಂದು ಸರ್ವತೋಮುಖ ಬೆಳವಣಿಗೆಯ ಲಕ್ಷಣಗಳನ್ನು ಸರಳವಾಗಿ ತಿಳಿಹೇಳಲಾಗಿದೆಯೆಂಬುದು ಸುಸ್ಪಷ್ಟ.

उत्साहसम्पन्नमदीर्घसूत्रं क्रियाविधिज्ञं व्यसनेष्वसक्तम् ।

शूरं कृतज्ञं दृढसौहृदं च लक्ष्मीः स्वयं मार्गति वासहेतोः ॥[39]

ಉತ್ಸಾಹಸಹಿತನೂ ವ್ಯಸನಗಳಲ್ಲಿ ಆಸಕ್ತನೂ ಆಗಿ ತಿಳಿವಳಿಕೆಯನ್ನು ಪಡೆದು ಕೆಲಸಗಳಲ್ಲಿ ಪ್ರಗಲ್ಭನಾಗಿ ಬೇಸರವಿಲ್ಲದೆ ಸ್ಥಿರಚಿತ್ತನಾಗಿ, ಚಿರಕ್ರಿಯನಲ್ಲದೆ, ಸರ್ವಭೂತಸಮನೂ, ಮಿತಸತ್ಯಭಾಷಿಯೂ, ಪುಣ್ಯಕರ್ಮಗಳ ಮೇಲೆ ಬುದ್ಧಿಯುಳ್ಳವನೂ ಆಶ್ರಿತರಕ್ಷಕನೂ, ಶೂರನೂ ಕೃತಜ್ಞನೂ ಆದ ಪುರುಷನನ್ನು ಲಕ್ಷ್ಮಿ ತನ್ನಿಷ್ಟಕ್ಕೆ ತಾನೇ ಹೊಂದುವಳು. ಅಂದರೆ "ಕೆಲಸ ಮಾಡದೇ ಮೈಗಳ್ಳತನವುಳ್ಳ, ಸಾಹಸವಿಲ್ಲದ ಪುರುಷನನ್ನು ಲಕ್ಷ್ಮಿ ಒಲಿಯಳು" ಎಂದು ತಿಳಿಯುವುದು. ಪಂಚತಂತ್ರದಲ್ಲಿ ಐದು ಭಾಗಗಳಲ್ಲೊಂದೊಂದೂ ನೀತಿ ಶಾಸ್ತ್ರದ ತಂತ್ರಗಳನ್ನು ನಿರೂಪಿಸುತ್ತದೆ. ಮೊದಲನೆಯ ಭಾಗವಾದ ಮಿತ್ರ ಭೇದವು ಕರಟಕ ದಮನಕ ಎಂಬ ಎರಡು ನರಿಗಳು ಗಾಢ ಮಿತ್ರರಾಗಿದ್ದ ಒಂದು ಸಿಂಹ ಮತ್ತು ವೃಷಭಗಳಿಗೆ ವೈಮನಸ್ಸನ್ನು ತಂದು ಹಾಕಿ ತಾವು ಸುಖವಾಗಿದ್ದ ಕಥೆಯ ಮೂಲಕ ಭೇದ ತಂತ್ರವನ್ನು ಪ್ರತಿಪಾದಿಸುತ್ತದೆ. ಎರಡನೆಯ ಮಿತ್ರಲಾಭವು ಒಳ್ಳೆಯ ಸ್ನೇಹದ ಫಲವನ್ನು ಆಮೆ, ಜಿಂಕೆ, ಕಾಗೆ ಮತ್ತು ಇಲಿ ಇವುಗಳ ಕಥೆಯನ್ನು ಹೇಳಿ ವಿವರಿಸುತ್ತದೆ. ಮೂರನೇ ಕಾಕೋಲುಕೀಯವು ಕಾಗೆ ಮತ್ತು ಗೂಬೆ ಕಥೆಗಳ ಮೂಲಕ ನಮ್ಮ ಶತ್ರುಗಳಾದವರ ಸ್ನೇಹಬಂಧನದ ಅಪಾಯವನ್ನು ತಿಳಿಸುತ್ತದೆ. ನಾಲ್ಕನೇ ಲಬ್ಧಪ್ರಣಾಶವು ಕಪಿ ಮತ್ತು ಮೊಸಳೆಯ ಕಥೆಯಮೂಲಕ ನಮ್ಮ ಲೋಪದೋಷಗಳಿಂದ ನಾವು ನಮ್ಮಲ್ಲಿದ್ದುದನ್ನು ಹೇಗೆ ಕಳೆದುಕೊಳ್ಳಬೇಕಾಗುತ್ತದೆಂದು. ಐದನೆಯ ಅಪರೀಕ್ಷಿತ ಕಾರಕವು ಎಲ್ಲಾ ಪೂರ್ವಾಪರ ವಿಚಾರಗಳನ್ನು ಕೂಲಂಕಷವಾಗಿ ಪರಿಶೀಲಿಸದೆ ಯಾವ ಕೆಲಸವನ್ನೇ ಆಗಲಿ ದುಡುಕಿ ಮಾಡಿದರೆ ಉಂಟಾಗುವ ಕಷ್ಟನಷ್ಟಗಳನ್ನು ಅನೇಕ ಕಥೆಗಳ ಮೂಲಕ ಪ್ರತಿಪಾದಿಸಿ ತೋರಿಸುತ್ತದೆ. ಇದು ನಿಜಕ್ಕೂ ಮನೋರಂಜಕವೂ ಬದುಕಿನ ನೀತಿ ಶಿಕ್ಷಣ ಮಾರ್ಗದರ್ಶಿಯೂ ಆಗಿದೆ. ಮಾನವನ ಉತ್ತಮವಾದ ಮತ್ತು ಸಾರ್ಥಕವಾದ ಇಹಪರಗಳ ಹೊಂದಾಣಿಕೆಯಿಂದ ಕೂಡಿದ ಸುಖೀ ಜೀವನದ ಬದುಕು ಬಾಳುಗಳ ಕೈದೀವಿಗೆಯಾಗಿ ಅರ್ಥಶಾಸ್ತ್ರವೆಂಬ ಒಂದು ಉತ್ತಮ ಗ್ರಂಥರತ್ನವನ್ನು ಕೌಟಿಲ್ಯನು ರಚಿಸಿರುವುದು ಸರ್ವವೇದ್ಯವಾದ ವಿಷಯವಾಗಿದೆ. ಅದು ರಾಜ್ಯಶಾಸ್ತ್ರವೂ ಹೌದು. ಹಾಗೆಯೆ ಪ್ರತಿ

39. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತ ಪಂಚತಂತ್ರ, ಮಿತ್ರಸಂಪ್ರಾಪ್ತಿ-ಶ್ಲೋ-126ಪು-387, ಚೌಕಾಂಬ ಕೃಷ್ಣದಾಸ್ ಅಕಾಡೆಮಿ, PB.no:1118, Oriental Publishers, K37/118 Gopalmandir Lane, Varanasi-221001(INDIA)1993.

ಮಾನವನೂ ತನ್ನ ಅಮೂಲ್ಯವಾದ ಜೀವನವನ್ನು ಉತ್ತಮಪಡಿಸಿಕೊಳ್ಳುವ ಮತ್ತು ಹೆಜ್ಜೆ ಹೆಜ್ಜೆಗೂ ನಮ್ಮನ್ನು ಎಚ್ಚರಗೊಳಿಸಿ ಶಿಕ್ಷಣ ಕೊಟ್ಟು ಕಾಪಾಡುವ ಉತ್ತಮ ಸಂಗಾತಿಯೂ ಹೌದು ಎಂದರೆ ಅತಿಶಯೋಕ್ತಿಯೇನಲ್ಲ. ಇದರ ಆಧಾರದಲ್ಲಿಯೇ ಈ ಪಂಚತಂತ್ರವೂ ಉದಯವಾಗಿದೆ.

ಸಾಹಿತ್ಯದ ಪ್ರಯೋಜನಗಳನ್ನು ಹೇಳುವಾಗ ಭಾರತೀಯ ವಿಚಾರವಂತರ ಅಭಿಪ್ರಾಯವು ಹೀಗಿದೆ. “ಜನಸಾಮಾನ್ಯರಿಗೆ ಆಕರ್ಷಕ ರೀತಿಯಲ್ಲಿ ನೀತಿಯನ್ನು ಬೋಧಿಸುವುದೂ ಒಂದೆಂದು. ಮಮ್ಮಟನು ತನ್ನ ‘ಕಾವ್ಯ ಪ್ರಕಾಶ’ ದಲ್ಲಿ ಸಾಹಿತ್ಯದ ಆರು ಪ್ರಯೋಜನಗಳನ್ನು ಉಲ್ಲೇಖಿಸಿರುತ್ತಾನೆ.

काव्यं यशसेर्थकृते व्यवहारविदे शिवेतरक्षतये ।
सद्यः परनिर्वृत्तये कान्तासम्मिततयोपदेशयुजे ॥[40]

ಅಂದರೆ ಕೀರ್ತಿ, ಹಣ, ಲೌಕಿಕ ವ್ಯವಹಾರಜ್ಞಾನ, ಸಂಕಟನಿವಾರಣೆ, ತತ್ಕ್ಷಣ ಪರಮಾನಂದದ ಅನುಭವ ಮತ್ತು ಇನಿಯಳಂತೆ ಮಧುರವಾಗಿ ಉಪದೇಶ ಪ್ರದಾನ ಇವು ಆರು ಕಾವ್ಯ(ಸಾಹಿತ್ಯ) ದ ಪ್ರಯೋಜನಗಳು. ಯಾವುದಾದರೂ ಒಂದು ವಿಚಾರ ಅಥವಾ ಮಾತನ್ನು ಮೂರು ವಿಧವಾಗಿ ಹೇಳಬಹುದು. ಅವುಗಳೆಂದರೆ, ಪ್ರಭುಸಮ್ಮಿತ – ಒಡೆಯನಂತೆ ಅಪ್ಪಣೆ ಮಾಡುವುದು, ಮಿತ್ರಸಮ್ಮಿತ–ಗೆಳೆಯನಂತೆ ಒಳಿತು–ಕೆಡಕುಗಳನ್ನು ತೋರಿಸುವುದು, ಕಾಂತಾಸಮ್ಮಿತ–ಪ್ರೀತಿಯ ಹೆಂಡತಿಯಂತೆ ಮೊದಲು ಮನಸ್ಸನ್ನು ಆಕರ್ಷಿಸಿಕೊಂಡು ಅನಂತರ ಹೇಳಬೇಕಾದ ವಿಷಯವನ್ನು ಸೂಚಿಸುವುದು. ಸಾಹಿತ್ಯವು ನೀತಿಯನ್ನು ಬೋಧಿಸುವಲ್ಲಿ ಕಾಂತಾಸಮ್ಮಿತದ ಹಾದಿಯನ್ನು ಅವಲಂಬಿಸುತ್ತದೆ. ಅದು ರಸದ ಮೂಲಕ ಓದುಗರ ಮನಸ್ಸು ಹೃದಯಗಳನ್ನು ತನ್ನೆಡೆಗೆ ಆಕರ್ಷಿಸಿಕೊಂಡು ಅನಂತರ ಬೇಕು– ಬೇಡಗಳನ್ನು ಸೂಚಿಸುತ್ತದೆ. ಇನ್ನೂ ಒಂದು ವಿಶೇಷವೆಂದರೆ, ಪ್ರತಿಭಾನ್ವಿತ ಬೋಧಕರು ಮನಸೆಳೆಯುವ ಕಥೆಗಳನ್ನು ಹೇಳುತ್ತ ಹೋಗುತ್ತಾರೆ. ಕಥೆಗಳನ್ನು ಓದುವ ಅಥವಾ ಕೇಳುವ ಲವಲವಿಕೆಯಿಂದ ಅವನ್ನು ಓದತೊಡಗಿದಂತೆ ಅಥವಾ ಕೇಳತೊಡಗಿದಂತೆ ಅವುಗಳಲ್ಲಿ ಅಡಕವಾದ ನೀತಿಯ ಮಾತುಗಳು ಓದುಗನ ಅಥವಾ ಕೇಳುಗನ ಮನಸ್ಸಿನ ಮೇಲೆ ಅವನರಿವಿಲ್ಲದಂತೆ ಮೂಡುತ್ತವೆ. ನೀತಿಯ ಮಾತುಗಳನ್ನು ಹೇಳುವ ಸದುದ್ದೇಶದಿಂದಲೇ ರಚಿತವಾದ ಸಾಹಿತ್ಯಕ್ಕೆ “ನೀತಿಬೋಧಕ ಸಾಹಿತ್ಯ ಹಾಗೂ ಈ ಮಾದರಿಯಲ್ಲಿ ನೀತಿಯನ್ನು ಬೋಧಿಸುವ ಕಥಾಸಾಹಿತ್ಯಕ್ಕೆ ನೀತಿಬೋಧಕ ಕಥೆಗಳು ಎಂಬ ಹೆಸರಿದೆ. ಕಥೆಗಳಲ್ಲಿ ಪ್ರಾಣಿಗಳು ಮಹತ್ವದ

---

40. ಮಮ್ಮಟನ ಕಾವ್ಯಪ್ರಕಾಶ –1–2.

ಪಾತ್ರವನ್ನು ವಹಿಸಿ, ಮಾನವರಂತೆಯೇ ವರ್ತಿಸುವುದರಿಂದ "ಪ್ರಾಣಿಕಥೆಗಳು" ಎಂದು ಕರೆಯುತ್ತಾರೆ. ಸಂಸ್ಕೃತ ಸಾಹಿತ್ಯದಲ್ಲಿ, ಅದರಲ್ಲೂ ಸಂಸ್ಕೃತ ನೀತಿಬೋಧಕ ಪ್ರಾಣಿಕಥೆಗಳಲ್ಲಿ "ಪಂಚತಂತ್ರ" ಮತ್ತು "ಹಿತೋಪದೇಶ" ಎಂಬೀ ಎರಡು ಗ್ರಂಥಗಳು ಬಹಳ ಜನಪ್ರಿಯವಾಗಿವೆ. ಈ ಕಥೆಗಳನ್ನು ಮೂಲದಲ್ಲಿ ಅರಸುಕುವರರಿಗೆ ಹೇಳಿರುವುದರಿಂದ ಇವುಗಳಲ್ಲಿ ಅರಸನು ಹೇಗೆ ಆಳ್ವಿಕೆ ನಡೆಸಬೇಕೆಂಬುದರ ವಿವರಗಳಿವೆ ಆದುದರಿಂದ ಇವುಗಳನ್ನು "ನೀತಿಶಾಸ್ತ್ರ" ಎಂದರೆ "ರಾಜನೀತಿಯನ್ನು ಬೋಧಿಸುವ ಶಾಸ್ತ್ರ"ವೆಂದೂ ಕರೆಯುತ್ತಾರೆ. ಒಂದು ಸೂಕ್ತಿಯಲ್ಲಿ ದೂತನ ಲಕ್ಷಣವನ್ನು ಎಷ್ಟು ಸೊಗಸಾಗಿ ತಿಳಿಹೇಳಲಾಗಿದೆಯೆಂಬುದು ಹೀಗಿದೆ–

साकारो निःस्पृहो वाग्मी नानाशास्त्रविचक्षणः ।
परचित्तावगन्ता च राज्ञो दूतः स इष्यते ॥[41]

ಒಳ್ಳೆಯ ರೂಪವಂತನೂ, ನಿಃಸ್ಪೃಹನೂ, ವಾಗ್ಮಿಯೂ, ಅನೇಕಶಾಸ್ತ್ರಗಳಲ್ಲಿ ಪರಿಣಿತನೂ, ಮತ್ತೊಬ್ಬರ ಮನಸ್ಸನ್ನು ಅರಿಯ ಬಲ್ಲವನೂ ಆದಂತಹ ದೂತನನ್ನು ರಾಜನು ಬಯಸುತ್ತಾನೆ.

ಒಂದು ಉತ್ತಮವಾದ ಅಭಿರುಚಿಯನ್ನು ಹುಟ್ಟಿಸಬೇಕಾದರೆ, ಸೃಷ್ಟಿಸಹಜವಾದ ಮತ್ತು ಪ್ರಕೃತಿಸಿದ್ಧವಾದ, ಮನೋಬುದ್ಧೀಂದ್ರಿಯಗಳ ಧರ್ಮಗಳನ್ನೂ, ಅವುಗಳ ಅನಿವಾರ್ಯತೆಯನ್ನೂ, ಸದಸತ್ಪರಿಣಾಮಗಳನ್ನೂ, ವ್ಯವಹಾರಿಕವಾಗಿಯೂ, ಕಾರ್ಯಕಾರಣಬದ್ಧವಾಗಿಯೂ ತಿಳಿಸಬೇಕಾಗಿದೆ. ನಂತರದ ಮುಂದಿನ ಕಾಲದಲ್ಲಿ ವಿಶೇಷವಾಗಿ ಬೆಳೆಯುವ ಮಕ್ಕಳ ನವೋನವವಾದ ಧೀಪಟಲದಲ್ಲಿ ಈ ಅಂಶಗಳನ್ನು ತಿಳಿಯಪಡಿಸಿ ನಂಬುವ ರೀತಿಯಲ್ಲಿ ಚಿತ್ರಿಸಿದಾಗ ಮಾತ್ರ, ಅವುಗಳು ಸತ್ಪರಿಣಾಮಕಾರಿಯಾಗಿ ಮುಂದಿನ ಹೆಜ್ಜೆಯಲ್ಲಿ ವಿವೇಕಯುತವೂ, ಕಾರ್ಯಕಾರಣಬದ್ಧವೂ, ಸ್ವಪರಹಿತವೂ, ಸಾಮಾಜಿಕವೂ ಆದ ರೀತಿಯಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದಮಾತ್ಸರ್ಯಗಳ ವಿಷಪೂರಿತ ವಾತಾವರಣದಿಂದ ಹೊರಬರಲು ಸಾಧ್ಯ. ಹೀಗೆ ನಿರ್ಮಲವಾದ ಆಸ್ತಿಕರು ಪರಿಪೂರ್ಣವಾದ ಮನೋಧರ್ಮದೊಂದಿಗೆ ಉತ್ತಮ ಜೀವನವನ್ನು, ನಡೆಸಲು ಸಾದ್ಯವೆಂಬುದನ್ನು ಈ ವಿಷ್ಣುಶರ್ಮನೆಂಬ ಮಹಾಮೇಧಾವಿ, ನೀತಿಶಾಸ್ತ್ರಜ್ಞ, ಮನೋವಿಜ್ಞಾನಿ ಪಂಡಿತನೊಬ್ಬನು ಕಂಡುಕೊಂಡನು. ಹೀಗಾಗಿ ಆ ವಿಷ್ಣುಶರ್ಮನು ಈ ಭಾರತೀಯ ಅರ್ಥಶಾಸ್ತ್ರದ ಸಾರಸರ್ವಸ್ವವನ್ನೂ ಎಳೆಯರಾದ ನಮ್ಮ ಮಕ್ಕಳ ಮನೋಧರ್ಮ ಮತ್ತು ಬುದ್ಧಿಶಕ್ತಿಯ

---

41. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತ ಪಂಚತಂತ್ರ,ಕಾಕೋಲೂಕೀಯ–ಶ್ಲೋ–87,ಪು–480, ಚೌಕಾಂಬ ಕೃಷ್ಣದಾಸ್ ಅಕಾಡೆಮಿ, PB.no:118, Oriental Publishers, K37/118 Gopalmandir Lane, Varanasi-221001(INDIA)1993.

ಬೆಳವಣಿಗೆಗಳ ಮಟ್ಟದಲ್ಲಿ ರಂಜಕವಾಗಿಯೂ, ಕುತೂಹಲಕಾರಿಯಾಗಿಯೂ ಕಥಾರೂಪದಲ್ಲಿ ಚಿತ್ರಿಸಿದ ಒಂದು ಅದ್ಭುತವಾದ ಗ್ರಂಥರತ್ನವೇ ಈ ಪಂಚತಂತ್ರವಾಗಿದೆ.[42] ಪಂಚತಂತ್ರದ ವಿಶಿಷ್ಟತೆಯೆಂದರೆ,

पात्रविशेषे न्यस्तं गुणान्तरं व्रजति शिल्पमाधातुः ।

जलमिव समुद्रशुक्तौ मुक्ताफलतां पयोदस्य ॥[43]

ಅಂದರೆ, ಯೋಗ್ಯತೆಯನ್ನರಿತು ಗುರುವು ಕಲಿಸಿದ ವಿದ್ಯೆಯು ಬಹು ಉನ್ನತ ಮಟ್ಟವನ್ನೇರುತ್ತದೆ. ಮೋಡವು ಸುರಿದ ನೀರು ಕಡಲಿನ ಮುತ್ತಿನ ಚಿಪ್ಪಿನಲ್ಲಿ ಬಿದ್ದರೆ ಒಳ್ಳೆಯ ಮುತ್ತಾಗುತ್ತದೆ. ಹೀಗೆಯೇ ಬಹಳ ಮೇಧಾವಿ ಗುರುಗಳಾದ ಪಂಡಿತ ವಿಷ್ಣುಶರ್ಮರು ಅಮರಶಕ್ತಿ ರಾಜನ ಪುತ್ರರಿಗೆ ದೊರೆತು ಬಹಳ ಲಾಭವಾಯಿತು. ಅವರು ತಮ್ಮ ನೈಜ ಮನೋವೈಜ್ಞಾನಿಕ ಜ್ಞಾನದಿಂದ ಈ ಅರಸುಕುಮಾರರ ಯೋಗ್ಯತೆಯನ್ನು ಪರೀಕ್ಷಿಸಿ ಅವರಿಗೆ ಯಾವುದು ಸೂಕ್ತವಾಗಿದೆಯೋ, ಅಂತಹ ವಿದ್ಯೆಯನ್ನು ಉತ್ತಮ ಸನ್ನಿವೇಶಗಳನ್ನು ಆಕರ್ಷಕ ಕಥೆಗಳ ಮೂಲಕ ಸೊಗಸಾಗಿ ಕಲಿಸಿರುವ ರೀತಿ, ಕ್ರಮ, ಬೋಧನಾ ಕೌಶಲ್ಯ ಬಹಳ ಆದರ್ಶಪ್ರಾಯವಾಗಿದೆ.

ಈ ಬಗ್ಗೆ ಏಕೆ ಒಂದು ವಿಶೇಷ ಅಧ್ಯಯನವನ್ನು ನಡೆಸಬಾರದೆಂಬ ಆಲೋಚನೆ ನನ್ನ ಮನಸ್ಸಿನಲ್ಲಿ ಮೂಡಿತು. ಇದರಿಂದ ಭೋದನಾವೃತ್ತಿಯಲ್ಲಿ ಹಾಗೂ ವ್ಯಕ್ತಿವಿಕಸನ ಕ್ಷೇತ್ರದಲ್ಲಿ ಪರಿಶ್ರಮಿಸುವ ಅನೇಕರಿಗೆ ಉಪಯುಕ್ತವಾದೀತೆಂಬ ಬಾವನೆ ಗೋಚರಿಸಿತು. "ದಡ್ಡ ಮಕ್ಕಳಗೆ ಶಿಕ್ಷಣ ನೀಡುವುದರ ಬಗ್ಗೆ, ಅವರ ಆಸಕ್ತಿಯನ್ನು ಹಿಡಿದಿಟ್ಟು ಕಲಿಯಲು ಹೇಗೆ ಪ್ರೀತಿಯನ್ನುಂಟುಮಾಡಬಹುದು" ಈ ಬಗ್ಗೆ ಅನೇಕ ಶಿಕ್ಷಕರಿಗೆ ಮಾದರಿಯಾಗಿ ಉಪಯುಕ್ತವಾಗಬಹುದು. ಗಿಡಮರಗಳು, ಪಶುಪಕ್ಷಿಗಳು ಮನುಷ್ಯರಂತೆ ವರ್ತಿಸಿ ಮಾತನಾಡುವಂತೆ ಕುತೂಹಲಕರ ಪ್ರಸಂಗಗಳನ್ನು ಸೃಷ್ಟಿಮಾಡಿ ವರ್ತನೆಯ ಪರಿವರ್ತನೆಯನ್ನು ಜೀವಂತಿಕೆಗೊಳಸಬಹುದು ಎಂಬ ಶೈಕ್ಷಣಿಕ ಸನ್ನಿವೇಶಗಳನ್ನು ಪಂಚತಂತ್ರ ಕಥೆಗಳಲ್ಲಿ ಆಕರ್ಷಕವಾಗಿ ನಿರೂಪಿಸಿದ್ದಾರೆ. ಪಂಡಿತ ವಿಷ್ಣುಶರ್ಮರು.

ಈ ದಿಸೆಯಲ್ಲಿ ಪಂಚತಂತ್ರದ ಒಂದು ಸಮಗ್ರ ಅಧ್ಯಯನ ನಡೆಸಿ, ಅದರಲ್ಲಿ ಅಡಕವಾಗಿರುವ ಭೋದನಾ ವಿಧಾನದಗುಟ್ಟು, ಶೈಕ್ಷಣಿಕಮನೋವಿಜ್ಞಾನದ ಅವಲೋಕನ, ಜನರನಡವಳಿಕೆ, ಸ್ವಭಾವ, ಮನಸ್ಥಿತಿ, ಕಾರ್ಯಸಾಧನೆಯ ನೈಪುಣ್ಯ, ಜೀವನಶಿಕ್ಷಣ, ತಾತ್ವಿಕ ವ್ಯಕ್ತಿತ್ವನಿರ್ಮಾಣ, ನೀತಿಕುಶಲತೆ, ಸಾಮಾನ್ಯ ಜ್ಞಾನ

42. **"ಪಂಚತಂತ್ರ",** 1chapter, ಮಿತ್ರಭೇದ(kan translation with original Sanskrit prose and verse) by Venkatanathacharya and Shivakumaraswamy. M, P

43. **ಸುಭಾಷಿತಮಂಜರೀ,** ಸದ್ಗುಣ-ದುರ್ಗುಣ-ಶ್ಲೋ-196, ಪು-171,(2001) ಕ.ಸಾ.ಪ, ಚಾಮರಾಜಪೇಟೆ, ಬೆಂಗಳೂರು-18, ಮಾಳವಿಕಾಗ್ನಿಮಿತ್ರ, 1-6.

ಇತ್ಯಾದಿಗಳನ್ನು ಕುರಿತು ಒಂದು ಮಹಾ ಪ್ರಬಂಧವನ್ನು ರಚಿಸಲು ಆಸಕ್ತಿ ಉಂಟಾಯಿತು. ಹೀಗೆ ವಿಷಯ ಪ್ರವೇಶ ಮಾಡಲಾಗಿದೆ.

ಶಿಕ್ಷಣದ ಉದ್ದೇಶ ಮತ್ತು ಗುರಿ ವ್ಯಕ್ತಿಯ ಸರ್ವಾಂಗೀಣ ವಿಕಾಸವನ್ನು ಗೈಯುವುದಾಗಿದೆ. ಮಹಾತ್ಮ ಗಾಂಧೀಜಿಯವರು ಶಿಕ್ಷಣದ ಬಗ್ಗೆ ಒಂದು ಸುಂದರವಾದ ವ್ಯಾಖ್ಯಾನ ನೀಡಿದ್ದಾರೆ. "An all-round drawing out of the best in Child and Man-Body, Mind and Spirit. All round development- Physical- Mental-Intellectual- Aesthetic-Moral and Spiritual" ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗಾಗಿ ಎಲ್ಲ ರೀತಿಯ ಮಾರ್ಗದರ್ಶನ ನೀಡುವುದೇ "ಶಿಕ್ಷಣ"ದ ಮೂಲ ಗುರಿಯಾಗಿರುತ್ತದೆ. ಹಾಗೆಯೇ ಸುಸಂಸ್ಕೃತ ಸಮಾಜವನ್ನು ನಿರ್ಮಿಸುವುದು. ಶಿಕ್ಷಣವು ಕಲಿಯುವಿಕೆಯನ್ನು ಕುರಿತದ್ದಾಗಿದೆ. ಕಲಿಯುವ ವ್ಯಕ್ತಿ, ವಿಧಾನ ಮತ್ತು ಕಲಿಯಲು ಬೇಕಾಗುವ ಸನ್ನಿವೇಶಗಳು ಶಿಕ್ಷಣ ಕ್ಷೇತ್ರದ ಆಧಾರ ಸ್ಥಂಭಗಳು. ಈ ಎಲ್ಲವುಗಳನ್ನು ಶೋಧಿಸಿ, ವಿಶ್ಲೇಷಿಸಿ ವಿವರಿಸುವ ಕೆಲಸ ಮನೋವಿಜ್ಞಾನದ್ದಾಗಿದೆ. ಮಕ್ಕಳಲ್ಲಿ ಜನ್ಮತಃ ಹಲವು ಗುಣಧರ್ಮಗಳು ಅಡಗಿದ್ದರೂ ಅವು ಕಾರ್ಯರೂಪಕ್ಕೆ ಬರುವುದು ಸನ್ನಿವೇಶದ ಪ್ರಭಾವದಿಂದ. ಈ ಕ್ರಿಯಾಪ್ರತಿಕ್ರಿಯೆಗಳ ಸ್ವರೂಪವೇ ಮಕ್ಕಳು ಸನ್ನಿವೇಶಗಳೊಡನೆ ವರ್ತಿಸುವ ರೀತಿ.

ಈ ವ್ಯವಸ್ಥೆಯನ್ನು ಹುಟ್ಟು ಶಿಕ್ಷಕನೋಪಾದಿಯ ಮಹಾ ಮೇಧಾವಿ ವಿಷ್ಣುಶರ್ಮರು ಬದುಕಿನ ನೀತಿರತ್ನ "ಪಂಚತಂತ್ರ"ದಲ್ಲಿ ಉತ್ತಮ ಕಲಿಕಾ ಸನ್ನಿವೇಶಗಳನ್ನು ಆಕರ್ಷಕ ಕಥೆಗಳ ಮೂಲಕ ಕಲ್ಪಿಸಿ, ಮೂರ್ಖ ರಾಜಕುಮಾರರನ್ನು ಸುಶಿಕ್ಷಿತರನ್ನೂ, ನೀತಿಶಾಸ್ತ್ರ ನಿಪುಣರನ್ನೂ, ಬದುಕಿನ ವ್ಯವಹಾರ ಕುಶಲರನ್ನಾಗಿ ಪರಿವರ್ತಿಸಿದರು.



# ಅಧ್ಯಾಯ – 1

## ಸಂಸ್ಕೃತ ಕಥಾ ಸಾಹಿತ್ಯ – ನೀತಿಕಾವ್ಯಗಳು – ನೀತಿ ಕಥೆಗಳು

ಅಧ್ಯಾಯ –1–1. ಸಂಸ್ಕೃತ ಕಥಾ ಸಾಹಿತ್ಯದ– ಪ್ರಾಚೀನತೆ ಮತ್ತು ವೈಶಿಷ್ಟ್ಯ

ಅಧ್ಯಾಯ –1–2. ಸಂಸ್ಕೃತಸಾಹಿತ್ಯದಲ್ಲಿ ನೀತಿ ಕಾವ್ಯಗಳು– ಇದರ ಉದ್ಭವ ಮತ್ತು ವಿಕಾಸ

ಅಧ್ಯಾಯ –1–3. ನೀತಿ ಬೋಧಕ ಕಥಾ ಸಾಹಿತ್ಯ –

ಪಂಚತಂತ್ರ ನೀತಿ ಕಥೆಗಳು –

ಇದರ ವಿಶಿಷ್ಟ ಲಕ್ಷಣಗಳು

ಅಧ್ಯಾಯ –1–4. ಇದರ ಕಾಲ–ಕರ್ತೃ–ದೇಶ–ವಿಚಾರ.

ಅಧ್ಯಾಯ –1–5. ಪಂಚತಂತ್ರದ ವಿಶ್ವವ್ಯಾಪಿ ಪ್ರಭಾವ.

**ಅಧ್ಯಾಯ–1–1. ಸಂಸ್ಕೃತ–ಕಥಾಸಾಹಿತ್ಯ– ಇದರ ಪ್ರಾಚೀನತೆ ಮತ್ತು ವೈಶಿಷ್ಟ್ಯ:–**

ಭರತವರ್ಷದಲ್ಲಿ ಅನಾದಿಕಾಲದಿಂದಲೂ ನಮ್ಮ ಧಾರ್ಮಿಕ ಮನೋವ್ಯಾಪಾರವೇ ಅಲ್ಲದೆ ಲೌಕಿಕದಲ್ಲಿಯೂ ಬಹಳ ಹೆಚ್ಚಾಗಿ ಉಪಯೋಗವಾಗುತ್ತಿದ್ದ ಭಾಷೆಯೇ ಸಂಸ್ಕೃತ. ಈ ಭಾಷೆಯಲ್ಲಿಯೇ ನಮ್ಮ ಸಮಸ್ತ ಐತಿಹಾಸಿಕ, ಧಾರ್ಮಿಕ, ರಾಜನೀತಿ, ಸಾಹಿತ್ಯ ಹಾಗೂ ಸಾಂಸ್ಕೃತಿಕ ಜೀವನ ಅಭಿವ್ಯಕ್ತವಾಗುತ್ತಿತ್ತು. ಸಂಸ್ಕೃತ ಭಾಷೆಯು ಭಾರತದ ಪ್ರಾಚೀನ ಸಾಹಿತ್ಯ ಮತ್ತು ವಿಜ್ಞಾನದ ಆಕರವಾಗಿದ್ದು, ವೇದ, ಉಪನಿಷತ್ತು, ಭಗವದ್ಗೀತೆ ಮತ್ತು ವೈದಿಕ ಸಾಹಿತ್ಯದ ಚರಿತ್ರೆಯನ್ನೊಳಗೊಂಡಿರುತ್ತದೆ. ಇದು ಸಂಸ್ಕೃತ ಭಾಷೆಯ ಪ್ರಾಚೀನತೆಗೆ ಒಂದು ದ್ಯೋತಕವಾಗಿದೆ. ಇದರ ಪ್ರಾಚೀನ ಹೆಸರು **ದೇವಭಾಷೆ** ಅಥವಾ **ದೇವವಾಣಿ** ಎಂಬುದಾಗಿತ್ತು. ಕಾವ್ಯ ಮಿಮಾಂಸೆಯನ್ನು ರಚಿಸಿದ ರಾಜಶೇಖರನು ಸಂಸ್ಕೃತ ಭಾಷೆಯನ್ನು ಪಂಚಮವೇದ ಎಂದು ಸೂಚಿಸುತ್ತಾ ಹೀಗೆ ಹೇಳಿದ್ದಾನೆ.

पञ्चमीसाहित्य विद्यातियाया वरीयः।

सा हि चतुसृणां विद्यानामपि निष्पन्दः॥[1]

ಸಾಹಿತ್ಯ ವಿದ್ಯೆಯನ್ನು ಪಂಚಮವೇದ ಎಂದು ಸೂಚಿಸುತ್ತಾ, ಅನ್ವೀಕ್ಷಿಕೀ, ತ್ರಯೀ ಅರ್ಥಾತ್ ಧರ್ಮಶಾಸ್ತ್ರ, ವಾರ್ತಾ ತಥಾ ದಂಡನೀತಿ ಈ ನಾಲ್ಕು ವಿದ್ಯೆಗಳ ಜೊತೆ ಐದನೆಯದು ಸಾಹಿತ್ಯ ವಿದ್ಯೆ ಎಂದಿದ್ದಾನೆ. ಇದು ಬಹಳ ಉಪಯುಕ್ತವಾಗಿದ್ದು, ನಾಲ್ಕೂ ವಿದ್ಯೆಗಳ ಸಾರತತ್ವವೇ ಆಗಿರುತ್ತದೆ. ಆದರೆ ಕಾವ್ಯ ಮಿಮಾಂಸಕಾರರು ಅತ್ಯಂತ ಸೂಕ್ಷ್ಮ ಗ್ರಹಿಕೆಯಿಂದ ಹೇಳುವುದೇನೆಂದರೆ, "ಸಾಹಿತ್ಯ"ಎಂಬ ಶಬ್ದದ ಅರ್ಥವು ಕೇವಲ ನಾಟಕ ಕಾವ್ಯಾದಿ ಕೆಲವು ವಿಷಯಗಳ ಬೋಧನೆಯಿರುವುದನ್ನು ಮಾತ್ರವಲ್ಲ ಹಾಗೆಯೇ ಶಬ್ದಾರ್ಥ ಸಹಿತ ಭಾವವನ್ನೂ ಸಾಹಿತ್ಯ ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಅದನ್ನೇ ಕುಂತಕ सहितयोर्भावः[2] ಎಂದಿದ್ದಾನೆ.

ಸಂಸ್ಕೃತಸಾಹಿತ್ಯದಲ್ಲಿ ಎರಡು ಬಗೆ – ವೈದಿಕ – ಲೌಕಿಕ ಎಂದು. ವೈದಿಕಸಾಹಿತ್ಯದಲ್ಲಿ – ಋಗ್ವೇದ – ಯಜುರ್ವೇದ – ಸಾಮವೇದ, ಅಥರ್ವಣ ವೇದ ಎಂದು ಪ್ರಮುಖವಾಗಿ ನಾಲ್ಕು ವೇದಗಳು. ಒಂದೊಂದು ವೇದವೂ – ಸಂಹಿತೆ – ಬ್ರಾಹ್ಮಣ – ಅರಣ್ಯಕ ಎಂದು ಮೂರು ಭಾಗಗಳಿವೆ. ಎಷ್ಟು ವೇದಶಾಖೆಗಳಿವೆಯೋ ಅಷ್ಟು ಬ್ರಾಹ್ಮಣ. ಅರಣ್ಯಕ ಗ್ರಂಥಗಳು. ಅದೇ ರೀತಿ ಹಲವಾರು ಉಪನಿಷತ್ತಗಳು – ಅವುಗಳನ್ನರಿಯಲು

1. **ರಾಜಶೇಖರ,** ಕಾವ್ಯಮೀಮಾಂಸೆಯ ಶ್ಲೋ – द्वितियोध्यायः – शास्त्रनिर्देशः

2. कुन्तकस्य व.जी, 1–17 ನೇ ಕಾರಿಕೆ ವೃತ್ತಿಭಾಗ –177

ಭಾಷ್ಯಗಳು. ದ್ವೈತಾದ್ವೈತಾದಿ ಮತಕ್ಕನುಗುಣ ಹಲವು ವಿಧದ ಭಾಷ್ಯಗಳು. ವೇದಾರ್ಥವನ್ನರಿಯಲು – ನಿರುಕ್ತ – ನಿಘಂಟು, ಪ್ರಾತಿಶಾಖ್ಯ ಮುಂತಾದ ಗ್ರಂಥಗಳು. ಉಪಾಸನಾ ವಿವೇಚನೆಗಾಗಿ ಆಗಮತಂತ್ರಶಾಸ್ತ್ರ ಗ್ರಂಥಗಳಿವೆ. ವೇದಪರಂಪರೆಯ ರಕ್ಷಣೆಗಾಗಿ – ಪದ – ಕ್ರಮ – ಘನ, ಜಟೆ ಮುಂತಾದ ಪಾಠಗಳಿವೆ.

शिक्षा व्याकरणं छन्दोनिरुक्तं ज्यौतिषं तथा।

कल्पश्चेति षडङ्गानि वेदस्याहुर्मनीषिणः॥[3]

ಎಂಬ ಶ್ಲೋಕವು ತಿಳಿಸುವಂತ ಶಿಕ್ಷಾ – ವ್ಯಾಕರಣ – ಛಂದಸ್ಸು – ನಿರುಕ್ತ – ಜ್ಯೋತಿಷ ಹಾಗೂ ಕಲ್ಪಗಳೆಂದು ಆರು ವೇದಾಂಗಗಳಿವೆ. ಎಲ್ಲ ವೇದಗಳಿಗೂ ಭಾಷ್ಯಗಳನ್ನರಿಯಲು ವ್ಯಾಖ್ಯಾನ ಗ್ರಂಥಗಳಿವೆ. ಇವನ್ನೆಲ್ಲ ತಿಳಿಯಬೇಕಾದರೆ ಮಾನವನು ಅನೇಕ ಜನ್ಮಗಳಲ್ಲಿ ಅವಿರತ ಪ್ರಯತ್ನ ಮಾಡಬೇಕಾಗುತ್ತದೆ. ಲೌಕಿಕ ಸಂಸ್ಕೃತ ಸಾಹಿತ್ಯದ ಕಡೆಗೆ ಗಮನ ಹರಿಸಿದರೆ, ಪುರಾಣ, ಇತಿಹಾಸ, ಕಾವ್ಯ, ಶಾಸ್ತ್ರ ಮುಂತಾಗಿ ಸಾಹಿತ್ಯವು ಹಲವು ವಿಧ. ಆಯುರ್ವೇದವೇ ಮೊದಲಾದ ಉಪವೇದಗಳೂ ಇಲ್ಲಿವೆ. ಪುರಾಣಗಳು ಉಪ ಪುರಾಣಗಳು ಹಲವಾರು. ಪ್ರತಿಯೊಂದು ಪುರಾಣವೂ ಹತ್ತಿಪ್ಪತ್ತು ಸಾವಿರ ಶ್ಲೋಕಗಳುಳ್ಳದ್ದು. ಸರಳ ಶೈಲಿಯಲ್ಲಿ ಕಥಾನಿರೂಪಣೆಯೂ ಇವುಗಳ ವೈಶಿಷ್ಟ್ಯ. ಇತಿಹಾಸಗಳಾದ **ರಾಮಾಯಣ, ಮಹಾಭಾರತ**ಗಳು ಬಹಳ ಜನಪ್ರಿಯ. ಜನಸಾಮಾನ್ಯರಿಗೆಲ್ಲಾ ಆದರಣೀಯವಾಗಿದೆ. "कवेःकर्मकाव्यम्" – ಕವಿಯು ರಚಿಸಿದುದು ಕಾವ್ಯ. ಇಂತಹ ರಚನೆ ಶ್ರವ್ಯವಾಗಿರಬಹುದು, ದೃಶ್ಯವಾಗಿರಲೂ ಬಹುದು. ದೃಶ್ಯ ಕಾವ್ಯಗಳು ನಾಟಕಾದಿ ರೂಪಕಗಳು. ಶ್ರವ್ಯ ಕಾವ್ಯಗಳು ಗದ್ಯದಲ್ಲೂ, ಪದ್ಯದಲ್ಲೂ, ಪದ್ಯಮಿಶ್ರಿತವಾದ ಗದ್ಯದಲ್ಲೂ ರಚಿತವಾದ ಪ್ರಬಂಧಗಳು. ಪದ್ಯ ಕಾವ್ಯಗಳಲ್ಲಿ ಅವುಗಳ ದೈರ್ಘ್ಯಕ್ಕನುಗುಣವಾಗಿ ಮಹಾಕಾವ್ಯ, ಖಂಡಕಾವ್ಯ ಎಂಬ ಪ್ರಭೇದಗಳಿವೆ. ಪದ್ಯ ಕಾವ್ಯಗಳೆಲ್ಲಾ ಪ್ರಾಯಃ ರಾಮಾಯಣದ ಕಾವ್ಯ ಶೈಲಿಯಲ್ಲೇ ರಚಿತವಾದವು. ರಾಮಾಯಣ ಮಹಾಭಾರತದ ಕಾಲದಿಂದಲೂ ಸಂಸ್ಕೃತ ಭಾಷೆಯು ಪ್ರಚಲಿತವಾಗಿ ನಡೆದುಕೊಂಡು ಬರುತ್ತಿದೆ. ಕಾವ್ಯ ಜಗತ್ತಿನಲ್ಲಿ ಕವಿಯ ಮಹತ್ವವನ್ನು ಕುರಿತು ಒಂದು ಶ್ಲೋಕವಿದೆ.

अपारे काव्यसंसारे कविरेकः प्रजापतिः।

यथास्मैरोचते विश्वं तथेदं परिवर्तते ॥[4]

ಅಪಾರವಾದ ಕಾವ್ಯಜಗತ್ತಿನಲ್ಲಿ ಕವಿಯೋಬ್ಬನೇ ಸೃಷ್ಟಿಕರ್ತನಾದ ಬ್ರಹ್ಮ. ಅವನಿಗೆ ಹೇಗೆ ರುಚಿಸುವುದೋ ಹಾಗೆ ಈ ವಿಶ್ವವು ಪರಿವರ್ತನೆಗೊಳ್ಳುತ್ತದೆ ಎಂದು.

3. ಅಮರಕೋಶ, VI ವಾಗ್ವರ್ಗ–177

**4. ಆನಂದವರ್ಧನನ ಧ್ವನ್ಯಾಲೋಕ**–3–42ನೇ ಕಾರಿಕೆಯ ಪರಿಕರ ಶ್ಲೋಕ

ವೇದವು ವಿಶ್ವದ ಅತ್ಯಂತ ಪುರಾತನ ಸಾಹಿತ್ಯವಾಗಿದ್ದು, ಇನ್ನಿತರೆಲ್ಲಾ ಭಾರತೀಯ ಸಾಹಿತ್ಯದ ಉಗಮಕ್ಕೆ ನಾಂದಿಯಾಗಿದೆ. ಉಪನಿಷತ್ತು ಮತ್ತು ಭಗವದ್ಗೀತೆಗಳೆರಡನ್ನು ಪ್ರಸ್ಥಾನತ್ರಯಗಳಲ್ಲಿ ಗುರುತಿಸಲಾಗಿದ್ದು, (ಇನ್ನೊಂದು ಬ್ರಹ್ಮಸೂತ್ರ) ಭಾರತೀಯ ತತ್ವಶಾಸ್ತ್ರ ಸಂಸ್ಕೃತಿಯ ಆಧಾರಗಳಾಗಿದ್ದು ವಿಶ್ವಕ್ಕೆ ಮಾರ್ಗದರ್ಶಿಯಾಗಿವೆ. ಇವುಗಳು ಎಂದೆಂದಿಗೂ, ಎಲ್ಲೆಡೆಗೂ, ಎಲ್ಲಾ ಧರ್ಮಗಳಿಗೂ ನಿತ್ಯವೆನಿಸುವ ತತ್ವಗಳನ್ನು ಸರ್ವಭೂತಹಿತಕ್ಕಾಗಿಯೇ ಉಪದೇಶಿಸುತ್ತಿವೆ.[5] ಸಂಸ್ಕೃತ ವಾಙ್ಮಯದಲ್ಲಿ ನೀತಿಕಥಾ ಸಾಹಿತ್ಯದಲ್ಲಿ ವಿಷ್ಣುಶರ್ಮರು ರಚಿಸಿರುವ ಜನಪ್ರಿಯ ಪಂಚತಂತ್ರದಲ್ಲಿ ರಾಜಧರ್ಮದ ವಿಚಾರ ಅದೆಷ್ಟು ಅಚ್ಚುಕಟ್ಟಾಗಿ ಉಲ್ಲೇಖಿಸಲ್ಪಟ್ಟಿದೆಯೆಂದರೆ, ಮಿತ್ರಭೇದದಲ್ಲಿ ಮಂತ್ರಿ ಪದವಿಯನ್ನು ಕಳೆದುಕೊಂಡ, ದಮನಕ ನರಿಗೆ, ಕರಟಕ ನರಿಯು ಎಚ್ಚರಿಕೆಯ ಮಾತುಗಳನ್ನಾಡುತ್ತಾ, ರಾಜನ ಬಹುಮುಖ ವ್ಯಕ್ತಿತ್ವವನ್ನು ಪರ್ವತಕ್ಕೂ ಹಾಗೂ ವಿಷಸರ್ಪಕ್ಕೂ ಹೋಲಿಸುತ್ತದೆ.

दुराराध्या हि राजानः पर्वता इव सर्वदा ।

व्यालाकीर्णाः सुविषमाः कठिना दुष्टसेविताः ॥[6]

ಅಂದರೆ, ಸಿಂಹವ್ಯಾಘ್ರಾದಿ ಕ್ರೂರ ಮೃಗಗಳಿಂದಲೂ, ಕಲ್ಲು ಮುಳ್ಳುಗಳಿಂದಲೂ, ಎತ್ತರ ತಗ್ಗುಗಳಿಂದಲೂ ಕೂಡಿದ ದುರ್ಗಮ ಪರ್ವತವನ್ನೇರುವುದು ಹೇಗೆ ಕಷ್ಟಸಾಧ್ಯವೋ, ಅಂತೆಯೇ ದುಷ್ಟರೂ, ಕಪಟಿಗಳಿಂದಲೂ ಸುತ್ತುವರಿಯಲ್ಪಟ್ಟಿರುವ ರಾಜನನ್ನು ಸಮೀಪಿಸುವುದು ಅಷ್ಟೇ ದುಷ್ಕರವೆಂದು ವಿವರಿಸುತ್ತದೆ. ಶಾಸ್ತ್ರಪ್ರಪಂಚವು ಸಂಸ್ಕೃತದಲ್ಲಿ ಮಾತ್ರ ಲಭ್ಯ. ಇತರ ಭಾಷೆಗಳಲ್ಲಿಲ್ಲ. ವ್ಯಾಕರಣ, ತರ್ಕ, ಜ್ಯೋತಿಷ, ವೇದಾಂತ ಮಿಮಾಂಸ ಮುಂತಾದ ಅನೇಕ ಶಾಸ್ತ್ರಗಳಿವೆ. ಒಂದೊಂದು ಶಾಸ್ತ್ರವನ್ನೂ ತಲಸ್ಪರ್ಶಿಯಾಗಿ ಅರಿಯಲು ಒಂದು ಜನ್ಮಸಾಕಾಗುವುದಿಲ್ಲ. ಅನಂತ ''ಅಪಾರ' ಮುಂತಾದವುಗಳು ಶಾಸ್ತ್ರಕ್ಕೆ ಸಾರ್ಥಕ ವಿಶೇಷಣಗಳು. ಶಾಸ್ತ್ರಗಳು ನಮ್ಮ ಜ್ಞಾನ ಪಿಪಾಸೆಯನ್ನು ಹೆಚ್ಚಿಸುತ್ತವೆ. ಇವುಗಳ ಹೊರತಾಗಿ ವಾಸ್ತುಶಿಲ್ಪ, ಶಿಲ್ಪಶಾಸ್ತ್ರ ಮುಂತಾದ ಹಲವಾರು ವೈಜ್ಞಾನಿಕ ವಿಚಾರಗಳುಳ್ಳ ಗ್ರಂಥರಾಶಿಯೇ ಸಂಸ್ಕೃತದಲ್ಲಿದೆ. ಹೀಗೆ ಸಂಸ್ಕೃತ ಸಾಹಿತ್ಯಸಾಗರದಲ್ಲಿ ಮುತ್ತುರತ್ನಗಳು ಹಲವಾರು. ಎಲ್ಲವನ್ನು ಅರಿಯುವ ಹಂಬಲ ಸ್ವಪ್ನ ಮಾತ್ರ. ಹಾಗಿದ್ದರೂ ಶಕ್ತಿಮೀರಿ ಜ್ಞಾನವನ್ನು ಸಂಪಾದಿಸಲು ಪ್ರಾಮಾಣಿಕ ಪ್ರಯತ್ನವನ್ನಂತೂ ಮಾಡಲೇಬೇಕಾಗಿದೆ.

---

5. **ವಿನಯ್ ಕುಮಾರ್ ಭಾರದ್ವಾಜ್,** Classical Sanskrit Literature, Student Store, Biharipur, Bareily p 1,3,(1970)

6. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತ ಪಂಚತಂತ್ರಂ, ಮಿತ್ರಭೇದಃ-ಶ್ಲೋ-68, ಪು-41, ಚೌಕಾಂಬಾಕೃಷ್ಣದಾಸ್ ಅಕಾಡೆಮಿ, ಓರಿಯಂಟಲ್ ಪಬ್ಲಿಷರ್ಸ್ ಮತ್ತು ಡಿಸ್ಟ್ರಿಬ್ಯೂಟರ್ಸ್ ಕೆ.37/118, ಗೋಪಾಲ್ ಮಂದಿರ್ ಲೇನ್, ಪಿ.ಬಿ.ನಂ118, ವಾರಣಾಸಿ-221001.(1993).

ಸಂಸ್ಕೃತ ಜನಜೀವನದಲ್ಲಿ ಹಾಸುಹೊಕ್ಕಾಗಿ ಬೆಳೆದ ಭಾಷೆ. ಜೀವನದ ಎಲ್ಲ ಮುಖಗಳಲ್ಲಿಯೂ ಇದು ಬಳಕೆಗೆ ಬಂದ ಭಾಷೆ. ಧಾರ್ಮಿಕ ಹಾಗೂ ಲೌಕಿಕ ವಿಚಾರಗಳೆರಡೂ ಇವುಗಳಲ್ಲಿ ಬೆರೆತಿರುವುದನ್ನು ನಾವು ಕಾಣಬಹುದು. ಅಪಾರವಾಗಿ ಕಂಡುಬರುವ ಸಂಸ್ಕೃತ ಸಾಹಿತ್ಯ ರಾಶಿಯಲ್ಲಿ ನಾವು ಕಾವ್ಯಗ್ರಂಥಗಳಷ್ಟೇ ಪ್ರಮುಖವಾಗಿ ಶಾಸ್ತ್ರ ಗ್ರಂಥಗಳನ್ನೂ ಕಾಣಬಹುದು. ಭಾರತೀಯ ಧರ್ಮಶಾಸ್ತ್ರ ಗ್ರಂಥಗಳು ಪ್ರಾಮುಖ್ಯತೆ ಪಡೆದಿದ್ದು, ಮುಕ್ತಿಯನ್ನು ಸಾಧಿಸುವೆಡೆಗೆ ತಲುಪಿಸುತ್ತವೆ.

श्रुतिस्मृत्युदितधर्ममनुतिष्ठन् हि मानवः ।

इह कीर्तिमवाप्नोति प्रेत्यचानुत्तमं सुखम् ॥[7]

ಅಂದರೆ, ಶೃತಿ ಸ್ಮೃತಿಗಳಲ್ಲಿ ವಿಹಿತವಾದ ಧರ್ಮವನ್ನು ಆಚರಿಸುವ ಮನುಷ್ಯರು ಈ ಲೋಕದಲ್ಲಿ ಕೀರ್ತಿಯನ್ನೂ, ಪರಲೋಕದಲ್ಲಿ ಸುಖವನ್ನೂ ಹೊಂದುತ್ತಾನೆ ಎಂದು ಮನುಸ್ಮೃತಿಯಲ್ಲಿ ಹೇಳಲಾಗಿದೆ.

ಸಂಸ್ಕೃತ ಗದ್ಯ ಸಾಹಿತ್ಯದ ಉಗಮವನ್ನು ವೇದಗಳಲ್ಲಿಯೇ ಗುರುತಿಸಲಾಗಿದೆ. ಪ್ರಾರಂಭದಲ್ಲಿ ಕಥೆಗಳು ಬಿಡಿಬಿಡಿಯಾಗಿ ಆರಂಭಗೊಂಡು ಬೆಳವಣಿಗೆಯ ಹಂತದಲ್ಲಿ ನೀತಿಬೋಧನೆಯ ಅಂಶಗಳನ್ನಿರಿಸಿ ಕೊಂಡು ನೀತಿಪ್ರತಿಪಾದನೆಗಾಗಿ ಪದ್ಯಗಳನ್ನು ಬಳಸಿಕೊಳ್ಳಲಾಯಿತು. ಕಥೆಗಳಲ್ಲಿನ ಪಾತ್ರಗಳು ನೀತಿ ಬೋಧನೆಗೆ ಹೊಸ ಉಪಕಥೆಗಳನ್ನು ಉಪಯೋಗಿಸಿಕೊಂಡು ಕಥೆಗಳ ಆಕಾರವನ್ನೂ ಬೆಳಸಿದವು. ಅತ್ಯಂತ ಪ್ರಾಚೀನ ಗದ್ಯ ರಚನೆ ಮಾದರಿಯನ್ನು ನಾವು ಕೃಷ್ಣ ಯಜುರ್ವೇದದ ತೈತ್ತರೀಯ ಸಂಹಿತೆಯಲ್ಲಿ ಕಾಣಬಹುದು. ಅಥರ್ವಣ ವೇದದಲ್ಲಿ ಆರನೆಯ ಒಂದು ಭಾಗ ಗದ್ಯರೂಪದಲ್ಲಿದೆ. ಬ್ರಾಹ್ಮಣಗಳೆಲ್ಲಾ ಗದ್ಯಾತ್ಮಕವಾಗಿಯೇ ಇದೆ. ಪ್ರಾಚೀನ ಉಪನಿಷತ್ತುಗಳೂ ಪ್ರಾಯಃ ಗದ್ಯದಲ್ಲೇ ರಚಿತವಾಗಿವೆ ಹೀಗೆ ವೇದದಲ್ಲಿ ಗದ್ಯಪ್ರಯೋಗ ವ್ಯಾಪಕವಾಗಿಯೇ ಇರುವುದು ಗಮನಾರ್ಹ. ಕಥಾರೂಪದ ಗದ್ಯಕಾವ್ಯವೇ ಸಂಸ್ಕೃತ ಸಾಹಿತ್ಯದಲ್ಲಿ ಗಣ್ಯಸ್ಥಾನಪಡೆದಿರುವುದು. ಮೊದಮೊದಲು ಸಾಮಾನ್ಯಜನರಿಗೆ ರಂಜಕವಾಗಿರುವ ಜನಪ್ರಿಯ ಗದ್ಯಕಥೆಗಳು ಬಳಕೆಯಲ್ಲಿದ್ದು, ಅವೇ ಕಾಲಕ್ರಮದಲ್ಲಿ ಕಾವ್ಯಗುಣಗಳನ್ನು, ಸಂಸ್ಕೃತ ರಚನಾ ಶೈಲಿಯನ್ನು ಅಳವಡಿಸಿ **"ಗದ್ಯಕಾವ್ಯ"**ಎನ್ನಬಹುದಾದ ಮಟ್ಟಕ್ಕೇರಿ **"ಕಥಾ"**ಎಂಬ ಹೆಸರನ್ನು ತಾಳರಬೇಕೆಂದು ಹೇಳಬಹುದು. ಈ ಗದ್ಯಕಾವ್ಯಗಳು ಎಲ್ಲಾ ವಿಚಾರಗಳಲ್ಲೂ ಪದ್ಯಕಾವ್ಯದ ಹಾಗೇ ರಚಿತವಾಗಿರುತ್ತದೆ. ಗದ್ಯದಲ್ಲಿ ಸಮಾಸ ಭೂಯಸ್ತ್ವರೂಪವಾದ ಓಜಸ್ಸಿಗೆ ಪ್ರಾಧಾನ್ಯತೆ ಇರುತ್ತದೆ. ಇಷ್ಟೇ ಅವೆರಡಕ್ಕೂ ಇರುವ

---

7. **ಕುಮುದವಲ್ಲಿ ಕೆ ಆರ್, ಪದ್ಮಜಾ ಎಂ.ಆರ್,** ಸಂ.ಶುಕ್ರನೀತಿಯಲ್ಲಿ ರಾಜಧರ್ಮಪ್ರಸ್ತಾವನೆ-ಪು-7, (2020-21- Degree Text book) ಪ್ರಸಾರಾಂಗ, ಬೆಂಗಳೂರು ನಗರ ವಿಶ್ವವಿದ್ಯಾಲಯ,ಸೆಂಟ್ರಲ್ ಕಾಲೇಜು ಆವರಣ, ಬೆಂಗಳೂರು560001,

ವ್ಯತ್ಯಾಸ. ಆದರೆ ಪದ್ಯರೂಪದಲ್ಲಿದ್ದಿದ್ದರೂ ಗದ್ಯಕಾವ್ಯದ ಹಲಕೆಲವು ಭಾಗಗಳು ವೃತ್ತಗಂಧಿಯಾಗಿರುತ್ತದೆ. ಈಗ ಉಪಲಬ್ಧವಾಗಿರುವ ಗದ್ಯಕಾವ್ಯಗಳಲ್ಲಿ ದಂಡಿವಿರಚಿತ **"ದಶಕುಮಾರಚರಿತೆ"**ಯೇ ಅತ್ಯಂತ ಪ್ರಾಚೀನವೆಂದು ಹೇಳಬಹುದು. **"ಅವಂತಿಸುಂದರೀ ಕಥಾ"** ಮೊದಲ ಬಾರಿಗೆ 1974ರಲ್ಲಿ ಪ್ರಕಟವಾಗಿ ಅದೂ ದಂಡಿವಿರಚಿತ ಎಂದು ನಿರೂಪಿತವಾಯಿತು. ಅದು **"ಕಥಾಸಾರ"**ವೆಂಬ ಪದ್ಯದ ಜೊತೆಯಲ್ಲಿದೆ.[8]

ಹಿಂದೂ ಧರ್ಮದ ಆಧಾರಸ್ತಂಭದಂತಿರುವ ಪುರಾಣಗಳು, ಉಪಪುರಾಣಗಳು, ಆಗಮಗಳು ಸಾಹಿತ್ಯವೃಕ್ಷದ ಇನ್ನೊಂದು ಶಾಖೆ. ಇವುಗಳಲ್ಲದೆ ಫಲಪುಷ್ಪಪರ್ಣಗಳಿಂದ ಶೋಭಿಸುವ ಇನ್ನೊಂದು ಮಹಾಶಾಖೆ ಕಾವ್ಯಸಾಹಿತ್ಯ. ನಿರ್ದೋಷವಾದ ಅಲಂಕಾರಗಳು ಮತ್ತು ಗುಣಗಳಿಂದ ಕೂಡಿದ ಯುಗಲ ಕಾವ್ಯ, ಅಥವಾ ರಮಣೀಯವಾದ ಅರ್ಥವನ್ನು ಪ್ರತಿಪಾದಿಸುವ ಶಬ್ದವೇ ಕಾವ್ಯ. ರಮಣೀಯ ಅಂದರೆ ಸಹೃದಯ ವಾಚಕರಿಗೆ ಅಥವಾ ಪ್ರೇಕ್ಷಕರಿಗೆ ಲೋಕೋತ್ತರವಾದ ಚಮತ್ಕಾರವನ್ನು ಉಂಟುಮಾಡುವ ಶಕ್ತಿಯುಳ್ಳದ್ದು. ಇಂಥಹ ಕಾವ್ಯ ಕೇವಲ ಕೇಳುವುದಕ್ಕೆ ಅರ್ಹವಾದಾಗ ಅದು ಶ್ರವ್ಯ. ಅಷ್ಟೇ ಅಲ್ಲದೆ ರಂಗದ ಮೇಲೆ ಅಭಿನಯಿಸಿ ನೋಡುವುದಕ್ಕೆ ಅರ್ಹವಾದಾಗ ದೃಶ್ಯ ಎನಿಸಿಕೊಳ್ಳುತ್ತದೆ. ಶ್ರವ್ಯ ಕಾವ್ಯ ವೃತ್ತ ನಿಯಮಕ್ಕೆ ಅಂದರೆ ಛಂದಸ್ಸಿನ ನಿರ್ಬಂಧಕ್ಕೆ ಒಳಗಾಗಿದ್ದರೆ ಅದು ಪದ್ಯವಾಗುತ್ತದೆ. ಇಲ್ಲದಿದ್ದರೆ ಗದ್ಯ. ಗದ್ಯಪದ್ಯಗಳ ಮಿಶ್ರಣ ಚಂಪೂ ಆಗುವುದು. ಸಂಸ್ಕೃತದಲ್ಲಿ ಗದ್ಯ ಹೇರಳವಾಗಿದೆ. ವೇದಗಳಲ್ಲಿ ಕೃಷ್ಣ-ಯಜುರ್ವೇದ ಮತ್ತು ಅಥರ್ವಣ ವೇದಗಳು ಗದ್ಯಭಾಗಗಳನ್ನೊಳಗೊಂಡಿವೆ. ಬ್ರಾಹ್ಮಣಗಳು, ಉಪನಿಷತ್ತುಗಳಲ್ಲೂ ಗದ್ಯಕ್ಕೆ ಪ್ರಾಧಾನ್ಯವಿದೆ. ಶಾಸ್ತ್ರಗಳ ಸೂತ್ರಗಳು, ವಾರ್ತಿಕಗಳು, ಭಾಷ್ಯಗಳು ಹೆಚ್ಚಾಗಿ ಗದ್ಯದಲ್ಲಿವೆ. ಮಹಾಭಾರತ ಮತ್ತು ಭಾಗವತಗಳಲ್ಲಿ ಗದ್ಯಾಂಶವಿದೆ. ವ್ಯಾಖ್ಯಾನಗಳೆಲ್ಲಾ ಬಹುಮಟ್ಟಿಗೆ ಗದ್ಯವೇ ಆಗಿರುತ್ತದೆ. ಮಾನವನಿಗೆ ಸ್ವಭಾವತಃ ಬರುವುದು ಗದ್ಯವೇ. ಪದ್ಯವನ್ನು ಪ್ರಯತ್ನಪೂರ್ವಕವಾಗಿ ಹೆಣೆಯಬಹುದು. ಒಟ್ಟಿನಲ್ಲಿ ಹೇಳುವುದಾದರೆ, ಸಾಹಿತ್ಯದಲ್ಲಿ-ಅದು ಯಾವ ಭಾಷೆಯದೇ ಆಗಲಿ ಗದ್ಯವೇ ಹೆಚ್ಚಿರುವುದು ಸ್ವಾಭಾವಿಕವಾಗಿದೆ. ಆದ್ದರಿಂದಲೇ ರಾಜಶೇಖರನು ಕಾವ್ಯಮೀಮಾಂಸೆಯಲ್ಲಿ:- "पूर्वेहि विद्वांसो गद्यम् ददृशुर्न पद्यम्"[9] ಎಂದಿದ್ದಾನೆ. ಆದರೆ ಸಂಸ್ಕೃತ ಗದ್ಯಕಾವ್ಯ ತುಂಬ ವಿರಳವಾಗಿಯೇ ಇದೆ. ಗದ್ಯವು ಕಾವ್ಯವೆನಿಸಿಕೊಳ್ಳಲು ಶ್ಲೇಷ, ಯಮಕ, ಅನುಪ್ರಾಸ ಮುಂತಾದ ಅಲಂಕಾರಗಳನ್ನೂ, ಸಮಾಸ ಭೂಯಿಷ್ಠವಾದ ಶೈಲಿಯನ್ನೂ ಅಳವಡಿಸಿಕೊಂಡು ತನ್ನ ವೈಶಿಷ್ಟ್ಯವನ್ನು ಬೆಳೆಸಿಕೊಂಡಿತು. ಇದನ್ನೇ ಅಲಂಕಾರಿಕನಾದ ದಂಡಿಯು, "ओजः समासभूयस्त्वम् एतद् गद्यस्य जीवितम्"[10] ಎಂದು

---

8. **ಕೃಷ್ಣಮೂರ್ತಿ ಕೆ, ರಂಗನಾಥ ಶರ್ಮ ಎನ್, ಸಿದ್ಧಗಂಗಯ್ಯಕೆ,** ಸಂಸ್ಕೃತ ಭಾಷಾ ಶಾಸ್ತ್ರ ಮತ್ತು ಸಾಹಿತ್ಯಚರಿತ್ರೆ, ಅ-18, ಪು-531-549, ಕರ್ನಾಟಕ ಪಠ್ಯಪುಸ್ತಕಗಳ ಇಲಾಖೆ,(1976).
9. काव्यमीमांसा **3ನೇ ಅಧ್ಯಾಯ** काव्यपुरुषोत्पत्तिः।
10. **ದಂಡಿಯ ಕಾವ್ಯಾದರ್ಶ 1-80**

ವಿವರಿಸಿದ್ದಾರೆ. ಹೀಗಾಗಿ ಅಪಾರವಾದ ಶಬ್ದ ಸಂಪತ್ತು ಮತ್ತು ನಿಷ್ಕೃಷ್ಟವಾದ ವ್ಯಾಕರಣಗಳಿಲ್ಲದೆ ಯಾವನೂ ಸಮರ್ಥ ಗದ್ಯಕಾರನಾಗಲಾರ. ಆದುದರಿಂದಲೇ "गद्यम् कवीनां निकषम् वदन्ति", **"ಗದ್ಯವು ಕವಿಗಳ ಒರೆಗಲ್ಲು"** ಎಂಬ ನಾಣ್ಣುಡಿ ಪ್ರಚಲಿತವಾಗಿದೆ. ಛಂದೋನಿಯಮವಿಲ್ಲದೆ ಬರೆದುದೆಲ್ಲಾ ಗದ್ಯವಾಗಬಹುದು ಆದರೆ, ಅದು ಕಾವ್ಯವೆನಿಸಿಕೊಳ್ಳಲಾರದು. ವಾರ್ತಿಕಕಾರ ಕಾತ್ಯಾಯನನು "आख्यानाख्यायिकेतिहास पुराणेभ्यश्च" ಎಂಬ ವಾರ್ತಿಕದಲ್ಲಿ **"ಆಖ್ಯಾಯಿಕಾ"** ಎಂಬ ಗದ್ಯ ಪ್ರಭೇದದ ನಾಮ ನಿರ್ದೇಶನ ಮಾಡಿದ್ದಾನೆ. ಅದರ ಭಾಷ್ಯದಲ್ಲಿ ಪತಂಜಲಿಯು ಯಯಾತಿ, ಯುವಕ್ರೀತ, ಪ್ರಿಯಂಗವ ಎಂಬುವು ಆಖ್ಯಾನಗಳೆಂದೂ, ವಾಸವದತ್ತಾ, ಸುಮನೋತ್ತರಾ ಮತ್ತು ಭೈಮರಥೀ ಎಂಬುವು ಆಖ್ಯಾಯಿಕೆಗಳೆಂದೂ ಹೇಳುತ್ತಾನೆ. ಈ ಕೃತಿಗಳು ಇಂದು ದೊರಕದಿರುವುದು ದುಃಖದ ವಿಷಯ. ಚಂಪೂಕಾವ್ಯಗಳಲ್ಲಿ ಅರ್ಧದಷ್ಟು ಗದ್ಯವಿರುತ್ತದೆ.[11]

ಚಂಪೂ ರಾಮಾಯಣದಲ್ಲಿ ಒಂದು ಸೊಗಸಾದ ಶ್ಲೋಕ ಹೀಗೆ ಗದ್ಯ – ಪದ್ಯ ಮಿಶ್ರಣದ ಸೊಗಸನ್ನು ತಿಳಿಸುತ್ತದೆ:

गद्यानुबंधरसमिश्रितपद्यसूक्तिःहृद्या हि वाद्यकलया कलितेव गीतिः।

तस्माद्दधातु कविमार्ग जुषां सुखाय चम्पूप्रबंधरचनां रसना मदीया ॥[12]

ಅಂದರೆ, ಗದ್ಯ ರಚನೆಯೊಡನೆ ಸೇರಿದ ಪದ್ಯ ಸೂಕ್ತಿಯು ಪಕ್ಕವಾದ್ಯಗಳ ಕಲೆಯಿಂದ ಸೇರಿದ ಸಂಗೀತದಂತೆ ಹೃದಯಂಗಮವಾಗಿರುತ್ತದೆ. ಆದುದರಿಂದ ನನ್ನ ನಾಲಗೆಯು, ಕವಿಗಳ ಶೈಲಿಯಲ್ಲಿ ಆನಂದ ಹೊಂದುವವರ ಸುಖಕ್ಕೆ ಚಂಪೂಕಾವ್ಯದ ರಚನೆಯನ್ನು ನೀಡಲಿ" ಎಂದಿದೆ.

ಗದ್ಯದಲ್ಲಿ ಕಥೆ ಮತ್ತು ಆಖ್ಯಾಯಿಕಾಗಳೆಂದು ಇನ್ನೆರಡು ಪ್ರಭೇದಗಳಿದ್ದು ಕಲ್ಪಿತ ವಸ್ತುವುಳ್ಳದ್ದು ಕಥೆಯಾದರೆ, ಒಬ್ಬ ನೈಜವ್ಯಕ್ತಿಯ ಚಾರಿತ್ರಿಕ ವಸ್ತುವುಳ್ಳ ಚಿತ್ರಣವೇ **'ಆಖ್ಯಾಯಿಕಾ'** ಎನಿಸಿಕೊಳ್ಳುತ್ತದೆ.

**ಆಖ್ಯಾಯಿಕೆ** ಹಾಗೂ ಕಥೆಯ ಬಗ್ಗೆ ಸೂಕ್ಷ್ಮವಾಗಿ ಕೆಲವು ಲಕ್ಷಣಗಳು ಹಾಗೂ ವ್ಯತ್ಯಾಸಗಳನ್ನು ಕಾಣಬಹುದು.

संस्कृतानाकुलश्रव्यशब्दार्थपदवृत्तिना ।

गद्येन युक्तोदात्तार्था सोच्छवासाख्यायिका मता ॥ 25 ॥

---

11. महाश्वेतावृत्तान्तः (ಬಾಣಕವಿಯ ಕಾದಂಬರಿಯಿಂದ ಸಂಗೃಹೀತ), ಸಂಸ್ಕೃತ ಕಾವ್ಯತರಂಗ–14, ಪ್ರಸ್ತಾವನೆ–ಪು–1–4. ಪ್ರಸಾರಾಂಗ, ಮೈಸೂರು ವಿ.ವಿ.(1980)

12. **ಚಂಪೂರಾಮಾಯಣ,** ಬಾಲಕಾಂಡ, ಶ್ಲೋ–3.

ಸಂಸ್ಕೃತ ಭಾಷೆಯ ಅಕ್ಲಿಷ್ಟ ಹಾಗೂ ಮಧುರವಾದ ಶಬ್ದಾರ್ಥಗಳಿಂದ ಸುಂದರ ಸಮಾಸಮಯವಾದ ಗದ್ಯದಲ್ಲಿದ್ದು ಉತ್ತಮವಾದ ವಿಷಯಗಳನ್ನೊಳಗೊಂಡು ಉಚ್ಛ್ವಾಸವೆಂಬ ಹೆಸರಿನ ಅಧ್ಯಾಯಗಳು ಇರುತ್ತಿದ್ದರೆ ಅಂತಹ ಕಾವ್ಯಕ್ಕೆ ಆಖ್ಯಾಯಿಕೆ ಎನ್ನುವರು.

वृत्तमाख्यायते तस्यां नायकेन स्वचेष्टितम् ।

वक्त्रं चा परवक्त्रं च काले भाव्यार्थशंसि च ॥ 26 ॥

ಅಂದರೆ, ಆಖ್ಯಾಯಿಕೆಯಲ್ಲಿ ನಾಯಕನು ತನ್ನ ಜೀವನದಲ್ಲಿ ನಡೆದ ಸಂಗತಿಯನ್ನೆಲ್ಲ ತಾನೇ ತನ್ನ ಬಾಯಿಂದ ಹೇಳಿಕೊಳ್ಳುತ್ತಾನೆ.

न वक्त्रापरवक्त्राभ्यां युक्ता नोच्छवासवत्यपि ।

संस्कृतासंस्कृता चेष्टा कथाऽपभ्रंशभाक्तथा ॥ 28 ॥

ಕಥೆಯೆಂಬ ಕಾವ್ಯಜಾತಿಯಲ್ಲಿ **ವಕ್ತ್ರ, ಅಪರವಕ್ತ್ರ** ಛಂದಸ್ಸಿನ ಪದ್ಯಗಳಿರುವುದಿಲ್ಲ, ಉಚ್ಛ್ವಾಸಗಳೂ ಇರುವುದಿಲ್ಲ. ಅದು ಸಂಸ್ಕೃತ, ಪ್ರಾಕೃತ, ಅಪಭ್ರಂಶ ಹೀಗೆ ಯಾವ ಭಾಷೆಯಲ್ಲಿ ಬೇಕಾದರೂ ಇರಬಹುದು.

अनैः स्वचरितं तस्यां नायकेन तु नोच्यते ।

स्वगुणाविष्कृतिं कुर्यादभिजातः कथं जनः ॥ 29 ॥[13]

ಕಥೆಯಲ್ಲಿ ನಾಯಕನ ವೃತ್ತಾಂತವನ್ನು ಬೇರೆಯವರು ಹೇಳುತ್ತಾರೆ. ಅಂದರೆ, ತಾನೇ ಅದನ್ನು ಹೇಳಿಕೊಳ್ಳುವುದಿಲ್ಲ. ವಿನಯಸಂಪನ್ನನಾದ ಮನುಷ್ಯನು ತನ್ನ ಗುಣವನ್ನು ತಾನೇ ಹೇಗೆ ಹೇಳಿಕೊಂಡಾನು.

ಅಮರಸಿಂಹ ನಾಮಲಿಂಗಾನುಶಾಸನ (ಅಮರಕೋಶದಲ್ಲಿ) ಹೇಳಿರುವ ಪ್ರಕಾರ ಸಂಕ್ಷಿಪ್ತವಾದ ಆದರೆ ಸುಂದರವಾದ  ಆಖ್ಯಾಯಿಕಾ ಮತ್ತು ಕಥಾ ಭೇದ ಲಕ್ಷಣವೂ ಇದಕ್ಕೆ ಹೊಂದಿಕೊಳ್ಳುತ್ತದೆ.

"आख्यायिकोपलब्धार्था", "प्रबंध कल्पना कथा" **"ಆಖ್ಯಾಯಿಕಾ"**ಪ್ರತ್ಯಕ್ಷವಾಗಿ ಕಂಡ ಸತ್ಯ ಕಥೆಯನ್ನು ಒಳಗೊಂಡಿರುತ್ತದೆ. **"ಕಥೆ"** ಕಾಲ್ಪನಿಕ ಪ್ರಬಂಧ.[14]

---

13. ಕನ್ನಡ ಕಾವ್ಯಾಲಂಕಾರ ಅಧ್ಯಾಯ – 1, ಸೂತ್ರವೃತ್ತಿ( ವಾಮನನ ಮೂಲ ಗ್ರಂಥದ ಅನುವಾದ ಹಾಗೂ ವಿವರಣೆ) ಶ್ಲೋ– 25.26, 28–29, ಪುಟ– 51, ಕೆ.ಕೃಷ್ಣಮೂರ್ತಿ ಸಂಶೋಧನಾ ಸಂಸ್ಥೆ– 22, ಚಿರಂತನ, ಕೆ.ಕೃಷ್ಣಮೂರ್ತಿ ಲೇಔಟ್ ಮೈಸೂರು–2019.
14. महाश्वेतावृत्तान्तः (ಬಾಣಕವಿಯ ಕಾದಂಬರಿಯಿಂದ ಸಂಗ್ರಹೀತ), ಸಂಸ್ಕೃತ ಕಾವ್ಯ ತರಂಗ–14, ಪ್ರಸ್ತಾವನೆ–ಪು–9..ಪ್ರಸಾರಾಂಗ, ಮೈಸೂರು ವಿ.ವಿ.(1980)

ಈ ವಿಚಾರವನ್ನು ಇಲ್ಲೇಕೆ ಪ್ರಸ್ತಾಪ ಮಾಡಬೇಕಾಯಿತೆಂದರೆ, ಪಂಚತಂತ್ರದ ಸಂಸ್ಕರಣಗಳಲ್ಲಿ **Dr. Johannes Hertel** ಹಾಗೂ **Prof. Edgerton** ಎಂಬ ಇಬ್ಬರು ಪಾಶ್ಚಾತ್ಯ ವಿದ್ವಾಂಸರು ಪಂಚತಂತ್ರದ ಮೂಲರೂಪವನ್ನು ಪತ್ತೆಹಚ್ಚಲು ಸತತ ಪರಿಶ್ರಮವನ್ನು ಹಾಕಿದರು. **Edgerton** ರವರ ತಂತ್ರಾಖ್ಯಾಯಿಕಾ, ದಕ್ಷಿಣದ ಪಂಚತಂತ್ರ, ಬೃಹತ್ಕಥಾ ಹಾಗೂ ಪೆಹ್ಲವಿ ಸಂಸ್ಕರಣಗಳಿಗೆ ಮೂಲ ಗ್ರಂಥವು ಅತ್ಯಂತ ಸಮೀಪವಿವೆಯೆಂದು ಒಪ್ಪಿರುತ್ತಾರೆ. ತಂತ್ರಾಖ್ಯಾಯಿಕಾ ಪಂಚತಂತ್ರ ಮೂಲ ಗ್ರಂಥಕ್ಕೆ ಅತ್ಯಂತ ಹತ್ತಿರದ ಮೊಟ್ಟಮೊದಲ ಸಂಸ್ಕರಣವಾಗಿರುತ್ತದೆ.[15] ಇನ್ನು ಕೆಲವು ಸಂಸ್ಕರಣಗಳ ಪರಿಚಯ ಹೀಗಿದೆ:–

1. **ತಂತ್ರಾಖ್ಯಾಯಿಕಾ** – ಇದರಲ್ಲಿ ಪಂಚತಂತ್ರದ ಮೂಲಾಂಶಗಳು ಅಧಿಕವಾಗಿದೆ. ಮೂಲ ಪಂಚತಂತ್ರಕ್ಕೆ ಬಹಳ ಹತ್ತಿರವಾಗಿದೆ. ಇದರ ಕಾಲ ಬಹುಶಃ ೩೦೦ ಈ ಎಂದು ನಂಬಲಾಗಿದೆ. ಕಾಶ್ಮೀರದಿಂದ ಶಾರದಾ ಲಿಪಿಯಲ್ಲಿ ಇದರ ಎರಡು ಪ್ರತಿಗಳು ಪ್ರಾಪ್ತಿಯಾಗಿದ್ದು, ಹರ್ಟೆಲ್ರವರು ೧೯೧೦ರಲ್ಲಿ ಈ ಸಂಸ್ಕರಣ ಪತ್ತೆಮಾಡಿದ್ದಾರೆ.

2. **ಸರಳ ಪಂಂಚತಂತ್ರ(Texts Simplicor)** ಇದರ ಕಾಲ ೧೧೦೦ ಈ ರಲ್ಲಿ. ಇದರ ಸಂಪಾದನೆಯನ್ನು ಯಾವುದೋ ಜೈನವಿದ್ವಾಂಸರು ಮಾಡಿದ್ದರು. ಬ್ಲೂಲರ್ ಮತ್ತು ಕೀಲ್ ಹಾರ್ನ್ ಇದರ ಒಂದು ಸಂಸ್ಕರಣವನ್ನು ಪತ್ತೆಮಾಡಿದ್ದರು. ಇದು ಭಾರತದಲ್ಲಿ ಅತ್ಯಧಿಕವಾಗಿ ಪ್ರಚಲಿತವಾಗಿದೆ.

3. **ಪೂರ್ಣಭದ್ರಕೃತ ಸಂಸ್ಕರಣ**:– ಇದನ್ನು ಪಂಚಾಖ್ಯಾನಕ ಎಂದೂ ಕರೆಯುತ್ತಾರೆ. ಇದರ ಸಂಪಾದನೆಯನ್ನು ಜೈನ ಕವಿ ಪೂರ್ಣಭದ್ರನು ಮಾಡಿದ್ದನು. ಇದರ ಕಾಲ ೧೧೬೯ ಈ ರಲ್ಲಿ. ಇದರಲ್ಲಿ ೨೧ ಹೊಸ ಕಥೆಗಳಿವೆ. ಇದರಲ್ಲಿ ಗುಜರಾತಿ ಹಾಗೂ ಪ್ರಾಕೃತ ಶಬ್ದಗಳ ಪ್ರಯೋಗವೂ ನಡೆದಿದೆ.

4. **ದಕ್ಷಿಣದ ಪಂಚತಂತ್ರ**:– ಇದು ಬಹುಶಃ ಐದು ಸಂಸ್ಕರಣಗಳಲ್ಲಿ ಉಪಲಬ್ಧವಾಗಿದೆ. ಇದರಲ್ಲಿ ದಕ್ಷಿಣಾತ್ಯ ಪಾಠಗಳು ಪ್ರಸ್ತುತಗೊಂಡಿವೆ. ಇದರಲ್ಲಿ ಕಥೆಗಳನ್ನು ಸಂಕ್ಷಿಪ್ತಗೊಳಿಸಿ ಹಿಡಿದಿಟ್ಟಿದೆ. ಇದು ಭಾರವಿಯ ನಂತರದ ಕಾಲದ್ದಾಗಿರುತ್ತದೆ (೬೦೦ ಈ) **Edgerton**ರವರ ಪ್ರಕಾರ ಇದರಲ್ಲಿ ಮೂಲ ಗ್ರಂಥದ ¾ ಭಾಗದಷ್ಟು ಗದ್ಯ ಭಾಗ ಹಾಗೂ ೨/೩ ರಷ್ಟು ಪದ್ಯ ಭಾಗ ಸುರಕ್ಷಿತವಾಗಿದೆ.

5. **ನೇಪಾಳದ ಪಂಚತಂತ್ರ**:– ಇದು ಒಂದು ಹಸ್ತಲಿಖಿತ ಪ್ರತಿಯಲ್ಲಿ ಕೇವಲ ಪದ್ಯಗಳಿದ್ದು, ಮತ್ತೊಂದರಲ್ಲಿ ಪದ್ಯದ ಜೊತೆ ನೇಪಾಳಿ ಭಾಷೆಯಲ್ಲಿ ಗದ್ಯವೂ ದೊರಕುವುದು.

6. **ಹಿತೋಪದೇಶ**:– ಇದು ನಾರಾಯಣ ಪಂಡಿತರ ಮೂಲಕ ಸಂಪಾದಿತಗೊಂಡಿದೆ. ಹಾಗೆಯೇ ಪಂಚತಂತ್ರದ

---

15. **Chandra Rajan,** VISNU SARMA,( English Translation)The Panchatantra,(1993) Introduction - P- liv, Penguin Random House, Gurgaon, Haryana 122002.

ಕಿಂಚಿತ್ ಪರಿವರ್ತಿತ ರೂಪವಾಗಿದೆ.

**7. ಉತ್ತರ ಪಶ್ಚಿಮೀಯ ಸಂಸ್ಕರಣ:–** ಗುಣಾಢ್ಯನು ಬೃಹತ್ಕಥೆಯಲ್ಲಿ ಈ ಸಂಸ್ಕರಣವನ್ನು ತನ್ನದಾಗಿಸಿಕೊಂಡಿದ್ದನು. ಅದು ಈಗ ಕ್ಷೇಮೇಂದ್ರಕೃತ ಬೃಹತ್ಕಥಾಮಂಜರಿ(1037) ಮತ್ತು ಸೋಮದೇವ ಕೃತ ಕಥಾಸರಿತ್ಸಾಗರ (1037 ಈ)ದಲ್ಲಿ ಸುರಕ್ಷಿತವಾಗಿದೆ.

**8. ಪಹ್ಲವಿಸಂಸ್ಕರಣ:–** ಖುಸ್ರೋ ಅನಶೇರಖ್ಖಾ (531–579 ಈ) ಶಾಸನ ಕಾಲದಲ್ಲಿ ಹಕೀಮ್ ಬುರ್ಜೋಇಯಿಯು ಪಂಚತಂತ್ರವನ್ನು ಪಹ್ಲವಿ ಭಾಷೆಗೆ ತರ್ಜಿಮೆ ಮಾಡಿದನು. ಈ ಅನುವಾದದಿಂದ ಸಿರಿಯಾ ಮತ್ತು ಅರಬ್ಬೀ ಭಾಷೆಯಲ್ಲೂ ಅನುವಾದಗೊಂಡಿತು. ಮತ್ತೆ ಅರಬ್ಬೀ ಅನುವಾದದಿಂದ ಯೂರೋಪಿನ ಭಾಷೆಗಳಲ್ಲಿ ಅನುವಾದ ನಡೆಯಿತು. ಈ ರೀತಿಯಾಗಿ ಅಷ್ಟ ಸಂಸ್ಕರಣಗಳು ಮೂಲ ಗ್ರಂಥ ಪಾಠಕ್ಕೆ ಅತ್ಯಂತ ಸಮೀಪದಲ್ಲಿವೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇದು ನಿಜಕ್ಕೂ ಪಂಚತಂತ್ರದ ವಿಶ್ವಪರ್ಯಟನ ಎನ್ನಬಹುದು.

ಈಗ ಉಪಲಬ್ಧವಿರುವ ಸಂಸ್ಕೃತ ಗದ್ಯ ಸಾಹಿತ್ಯದಲ್ಲಿ ಆಧುನಿಕ ದೃಷ್ಟಿಯಿಂದ ನಾಲ್ಕು ಬಗೆಯ ಕೃತಿಗಳನ್ನು ಕಾಣಬಹುದು. ಅವುಗಳೆಂದರೆ:– 1 – **ಕಥೆ 2 – ಆಖ್ಯಾಯಿಕಾ 3 – ಜನಪ್ರಿಯ 4 – ನೀತಿಬೋಧಕ ಕಥೆ**ಗಳು.

ಧರ್ಮಸೂತ್ರಗಳಿಂದ ಪ್ರಾರಂಭವಾಗಿ ಮುಂದುವರೆದ ಧರ್ಮಶಾಸ್ತ್ರದ ವಿಚಾರಗಳೇ ಮುಂದೆ ನೀತಿಶಾಸ್ತ್ರ ಗ್ರಂಥಗಳ ರೂಪದಲ್ಲಿ ವಿಶೇಷವಾಗಿ ಪರಿಗಣಿಸಿ ರಚಿತವಾಗಿರುವುದನ್ನು ಗಮನಿಸಬಹುದು. ವೇದ ಪ್ರತಿಪಾದಿತ ವಿಧಿ – ನಿಷೇಧಗಳ ಪ್ರತಿಪಾದನೆಯೇ ಈ ನೀತಿ ಗ್ರಂಥಗಳ ಮುಖ್ಯ ವಿಷಯವಾಗಿರುತ್ತದೆ. ನೀತಿ ಶಾಸ್ತ್ರದ ಮುಖ್ಯ ಉದ್ದೇಶವನ್ನು ಕುರಿತು ಹೇಳುತ್ತಾ, ಶುಕ್ರಾಚಾರ್ಯರು "ಇವುಗಳ ಜ್ಞಾನದಿಂದ ಧರ್ಮ, ಅರ್ಥ, ಮತ್ತು ಕಾಮ ಈ ಮೂರು ಪುರುಷಾರ್ಥಗಳ ಸಿದ್ಧಯುಂಟಾಗುವುದೆಂದೂ ಹಾಗೂ ಇವುಗಳ ಫಲವಾಗಿ ಮೋಕ್ಷ ಪ್ರಾಪ್ತಿಯಾಗುವುದು" ಎಂದು ತಿಳಿಸಿದ್ದಾರೆ.

"धर्मार्थकाममूलं हि स्मृतं मोक्षप्रदं यतः।" ಹೀಗೆ ನೀತಿಶಾಸ್ತ್ರದ ಪ್ರಯೋಜನ ಪುರುಷಾರ್ಥವಾದ ಮೋಕ್ಷದ ಸಾಧನೆಗೂ ಸಹಾಯಕವಾದೆ. ಇಂತಹ ನೀತಿಶಾಸ್ತ್ರಗ್ರಂಥಗಳಲ್ಲಿ ವ್ಯಾವಹಾರಿಕ ಮತ್ತು ಪ್ರಾಯೋಗಿಕ ಧರ್ಮನೀತಿ, ರಾಜನೀತಿ ಮುಂತಾದವುಗಳನ್ನು ಕುರಿತು ಬೇರೆಬೇರೆಯಾಗಿ ವಿವೇಚನೆ ಮಾಡಿರುವುದು ಕಂಡುಬರುತ್ತದೆ. ಈ ರೀತಿಯ ಧರ್ಮನೀತಿಯನ್ನು ಕುರಿತ ಗ್ರಂಥಗಳೆಂದರೆ:– ವಿಷ್ಣುಶರ್ಮರ – पञ्चतन्त्रम्, ನಾರಾಯಣಪಂಡಿತರ – हितोपदेश, ಭರ್ತೃಹರಿಯ – नीतिशतकम्, ಸೋಮದೇವನ – कथासरित्सा–गरः, ದಂಡಿಯ – दशकुमारचरितम्, ಕ್ಷೇಮೇಂದ್ರನ – बृहत्कथामञ्जरी, ಮೊದಲಾದವುಗಳು ವಿಶೇಷವಾಗಿ

ರಾಜನೀತಿಯನ್ನು ಕುರಿತು ರಚಿಸಲಾದ ಪ್ರಮುಖ ಕೃತಿಗಳು. ಕೌಟಿಲ್ಯನ – अर्थशास्त्र, ಶುಕ್ರಾಚಾರ್ಯರ – शुक्रनीति, ಕಾಮಾಂದಕ ಮುನಿಯ – कामान्दकीय नीतिसार ಈ ಗ್ರಂಥಗಳಲ್ಲಿ ಅರ್ಥಶಾಸ್ತ್ರ ಮತ್ತು ನೀತಿಶಾಸ್ತ್ರ ಎಂಬ ಪದಪ್ರಯೋಗಗಳಿದ್ದರೂ ಅವುಗಳಲ್ಲಿ ಚರ್ಚಿತವಾಗಿರುವ ಅಂಶಗಳು ಮಾತ್ರ ಒಂದೇ ಆಗಿರುತ್ತವೆ. ಈ ಗ್ರಂಥಗಳಲ್ಲಿ ವಿವರಿಸಲಾಗಿರುವ ಅನೇಕ ವಿಷಯಗಳು ಇಂದಿಗೂ ನಮ್ಮ ದೇಶದ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ವಲಯಗಳಿಗೆ ಅತ್ಯಂತ ಪ್ರಸ್ತುತವಾಗಿವೆ ಎಂಬುದು ಈ ಕೃತಿಗಳ ವಿಶಿಷ್ಟತೆಯಿಂದ ತಿಳಿದುಬರುತ್ತದೆ. ಈ ಮೂರುಕೃತಿಗಳಲ್ಲಿ ಇಂದಿಗೂ ಜಗತ್ಪ್ರಸಿದ್ಧ ಕೃತಿಯೇ ಚಾಣಕ್ಯನ ಅರ್ಥಶಾಸ್ತ್ರ ಆಗಿರುತ್ತದೆ.[16] ಇದರ ಆಧಾರದ ಮೇಲೆಯೇ ರಚಿತವಾಗಿರುವುದು ವಿಷ್ಣುಶರ್ಮರ पञ्चतन्त्रम् ।

ಸಂಸ್ಕೃತ ಕಥಾಸಾಹಿತ್ಯದ ಪ್ರಾಚೀನ ಕಥೆಗಳೆಂದರೆ ಜನಪದಕಥೆಗಳೇ ಆಗಿವೆ. ದೈವಾಂಶಸಂಭೂತರಾದ ಯಕ್ಷ, ಗಂಧರ್ವ, ವಿದ್ಯಾಧರರ ಅದ್ಭುತ, ಹಾಗೂ ರೋಮಾಂಚಕಾರಿ ಕೃತ್ಯಗಳೇ ಇವುಗಳ ವಸ್ತು. ಕಥೆಗಾರನ ಕಲ್ಪನಾಶಕ್ತಿ ಹಾಗೂ ಊಹೆ ಎಷ್ಟರಮಟ್ಟಿಗೆ ವಿಶಿಷ್ಟವಾದದ್ದಾಗಿರುತ್ತದೋ, ಅಷ್ಟೂ ಕಥೆಗಳ ಸ್ವಾರಸ್ಯ ಅಧಿಕವಾಗಿರುತ್ತದೆ. ಆಯಾ ಕಾಲದ ಮತಧರ್ಮಗಳ ಪಾತ್ರವೂ ಇಂತಹ ಜನಪ್ರಿಯ ಕಥೆಗಳ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿದೆ. ಜೈನ, ಬೌದ್ಧ ಧರ್ಮಗಳು ಇಂತಹ ಕಥೆಗಳನ್ನು ಧರ್ಮ ಪ್ರಚಾರದಲ್ಲಿ ಅತ್ಯಧಿಕವಾಗಿ ಬಳಸಿಕೊಂಡಿರುವುದನ್ನು ಕಾಣಬಹುದು. ಇಂತಹ ಕಥೆಗಳಲ್ಲಿ ಮುಖ್ಯವಾದವುಗಳೆಂದರೆ **"ಗುಣಾಢ್ಯನ-ಬೃಹತ್ಕಥಾಸಂಗ್ರಹ"**. ಸಂಸ್ಕೃತ ಸಾಹಿತ್ಯದ ಮೇಲೆ ಬೃಹತ್ಕಥೆಯ ಪ್ರಭಾವ ಅಪಾರವಾಗಿದೆ. ಇದರಿಂದ ಸಂಸ್ಕೃತ ಕವಿಗಳು ತಮ್ಮ ಕಥೆಗಳ ರೂಪರೇಷೆಗಳನ್ನು ತೆಗೆದುಕೊಳ್ಳುತ್ತಿದ್ದರು. ದನಂಜಯನು ತನ್ನ ಕೃತಿಯಾದ ದಶರೂಪಕದ ನಾಟಕಗಳ ಉಪಜೀವ್ಯ ಕಾವ್ಯಗಳಲ್ಲಿ ರಾಮಾಯಣದ ನಂತರ ಬೃಹತ್ಕಥೆಯನ್ನೂ ಹೆಸರಿಸುತ್ತಾನೆ– रामायणादि च विभाव्य बृहत्कथाञ्च ।(दशरूपक–1/38) ಇದು ಮೂಲತಃ ಪ್ರಾಕೃತದಲ್ಲಿದ್ದರೂ, ಮುಂದಿನ ಸಂಸ್ಕೃತಕವಿಗಳಿಗೆ ಪ್ರಮುಖ ಆಕರಗ್ರಂಥವಾಗಿದ್ದು, ರಾಮಾಯಣ ಮಹಾಭಾರತದಷ್ಟೇ ಪ್ರಾಧಾನ್ಯತೆ ಪಡೆದಿದೆ. ಸಂಸ್ಕೃತದಲ್ಲಿ ಉದಯನನಿಗೆ ಸಂಬಂಧಿಸಿದ ಕಾವ್ಯನಾಟಕಗಳು, ಬಾಣನ **"ಕಾದಂಬರಿ"**, ಭವಭೂತಿಯ **"ಮಾಲತೀಮಾಧವ"**, ಹರ್ಷನ **"ನಾಗಾನಂದ"**, ಮೊದಲಾದ ಅನೇಕ ಪ್ರಮುಖ ಕೃತಿಗಳಿಗೆ ಬೃಹತ್ಕಥೆಯೇ ಮೂಲ ಆಕರವಾಗಿದೆ. ದಂಡಿಯು– भूतभाषामयीं प्राहुरद्भुतार्थां बृहत्कथाम् ಎಂದು ಇದರ ಪ್ರಶಂಸೆಗೈದಿದ್ದಾನೆ. ಆದರೆ ವ್ಯಾಸವಾಲ್ಮೀಕಿಯರಿಗೆ ಸಮನೆಂದು ಮೆಚ್ಚುಗೆ ಪಡೆದಿರುವ ಗುಣಾಢ್ಯನ **"ಬೃಹತ್ಕಥೆ"** ಉಪಲಬ್ಧವಿರುವುದಿಲ್ಲ, ಆದರೆ ಅದರ ಸಂಗ್ರಹಗಳು ಮಾತ್ರ

16. शुक्राचार्यविरचित शुक्रनीत्यां राजधर्मः ಸಂ.ಕುಮುದವಲ್ಲಿ ಕೆ. ಆರ್. ಮತ್ತು ಪದ್ಮಜಾ ಎಂ. ಆರ್., ಪ್ರಸಾರಾಂಗ, ಬೆಂಗಳೂರು ನಗರ ವಿಶ್ವವಿದ್ಯಾಲಯ, ಸೆಂಟ್ರಲ್ ಕಾಲೇಜು ಆವರಣ, ಬೆಂಗಳೂರು–560001.
(2020-21 Degree Text)

ಉಪಲಬ್ಧವಾಗಿವೆ. **"ಕಥಾಸರಿತ್ಸಾಗರ"**ವೂ ಬೃಹತ್ಕಥೆಯ ಮತ್ತೊಂದು ಪದ್ಯಾತ್ಮಕ ಸಂಗ್ರಹ. ಇದನ್ನು ಕಾಶ್ಮೀರದ ಸೋಮದೇವನು ಕ್ರಿ.ಶ.1070ರ ಸುಮಾರಿನಲ್ಲಿ ರಚಿಸಿದನು.[17] ಬೃಹತ್ಕಥೆಯ ಜೊತೆಗೆ ಹೆಸರಿಸಬೇಕಾದ ಇನ್ನೊಂದು ಅತ್ಯಂತ ಜನಪ್ರಿಯ ಕಥಾಸಂಗ್ರಹ **"ಪಂಚತಂತ್ರ"**ಸರಳ ಗದ್ಯಪದ್ಯ ಮಿಶ್ರಿತ ಚಂಪೂ ಶೈಲಿಯಲ್ಲಿ ರಚಿತವಾದದ್ದು.

ಇದರಲ್ಲಿನ ಕಥೆಗಳು ಮಾನವನ ನಡೆ–ನುಡಿ, ರೀತಿ–ನೀತಿ, ಆಚಾರ–ವಿಚಾರಗಳನ್ನು ಮೃಗಪಕ್ಷಿಗಳಿಗೆ ಆರೋಪಿಸಿ ಹೇಳುತ್ತದೆ. ನೀತಿಬೋಧೆಯೇ ಇವುಗಳ ಮುಖ್ಯ ಗುರಿ. ಅಲ್ಲಲ್ಲಿ ತಿಳಿಹಾಸ್ಯ, ವ್ಯಂಗ್ಯಗಳು ತೋರುತ್ತವೆ. ಪಂಚತಂತ್ರ ಎಂದರೆ ಐದು ತಂತ್ರಗಳಿಂದ ಕೂಡಿದ ಕೃತಿ. ತಂತ್ರವೆಂದರೆ ಶಾಸ್ತ್ರ, ತತ್ವಸಿದ್ಧಾಂತ, ರಾಜ್ಯಭಾರ ಎಂಬೆಲ್ಲ ಅರ್ಥಗಳಿವೆ. ಇಲ್ಲಿ ರಾಜನ ಮಕ್ಕಳಿಗೆ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಮತ್ತು ನೀತಿಶಾಸ್ತ್ರವನ್ನು ಪ್ರಾಣಿಪಕ್ಷಿಗಳ ಕಥೆಗಳ ಮೂಲಕ ಬೋಧಿಸಲಾಗಿದೆ. ಪ್ರತಿಯೊಂದು ತಂತ್ರದಲ್ಲಿಯೂ ಒಂದೊಂದು ಕಥಾಮುಖವಿದೆ.[18]

ಪ್ರಾಚೀನ ಜನಪ್ರಿಯ ಕಥೆಗಳಲ್ಲಿ ಬೃಹತ್ಕಥೆಯ ಬಳಿಕ ವೇತಾಳ ಪಂಚವಿಂಶತಿಯು ಸಂಸ್ಕೃತದಲ್ಲಿ ರಚಿತವಾಗಿರುವ ಸ್ವಾರಸ್ಯವಾದ 25 ಕಥೆಗಳ ಸಂಕಲನ. ಇದರಲ್ಲಿ ಕಥಾನಿರೂಪಣೆ ಸೊಗಸಾಗಿದೆ, ಸುವ್ಯವಸ್ಥಿತವಾಗಿದೆ.



17. **Chandra Rajan,** VISNU SARMA,( English Translation)The Panchatantra,Introduction - P-xlvii-xlviii, Penguin Random House, Gurgaon, Haryana 122002.(1993)
18. 14.139.116.20. bitstream, 08-chapter-3 ಕಥೆ–ಅರ್ಥ–ಸ್ವರೂಪ–ಲಕ್ಷಣಗಳು, PDF, page-78.

## ಅಧ್ಯಾಯ – 1 – 2:

## ಸಂಸ್ಕೃತ ಸಾಹಿತ್ಯದಲ್ಲಿ ನೀತಿಕಾವ್ಯಗಳು संस्कृत साहित्ये नीतिकाव्यः।

## ನೀತಿಕಾವ್ಯದ ಉದ್ಭವ ಹಾಗೂ ವಿಕಾಸ. नीतिकाव्यस्य उद्भवः एवं विकासः

लोकयात्रा भयं लज्जा दाक्षिण्यं त्यागशीलता ।

पञ्च यत्र न विद्यन्ते न कुर्यात् तत्र संगतिम् ॥[19]

ಯಾರಲ್ಲಿ ವ್ಯವಹಾರ ಜ್ಞಾನ, ಭಯ, ನಾಚಿಕೆ, ದಾಕ್ಷಿಣ್ಯ ಸ್ವಭಾವ ಹಾಗೂ ತ್ಯಾಗಬುದ್ಧಿ ಈ ಐದು ಗುಣಗಳು ಇರುವುದಿಲ್ಲವೋ ಅಂತಹವರ ಸ್ನೇಹವನ್ನು ಮಾಡಲೇಬಾರದು.

**ನೀತಿಕಾವ್ಯದ ಹಿನ್ನೆಲೆ.**

ಸಂಸ್ಕೃತ ಸಾಹಿತ್ಯದಲ್ಲಿ ನೀತಿ ಕಾವ್ಯದ ಪ್ರಕಾರವು ಅತ್ಯಂತ ಪ್ರಾಚೀನ ಹಾಗೂ ಸಮೃದ್ಧವಾಗಿದೆ. ಈ ನೀತಿ ಕಾವ್ಯಗಳಲ್ಲಿ ಧರ್ಮ ಹಾಗೂ ಭಾರತೀಯ ದರ್ಶನದ ಮೂಲ ತತ್ವವನ್ನು ಸರಳ ಶಬ್ದಗಳಿಂದ ವ್ಯಕ್ತಗೊಳಿಸಲಾಗಿದೆ. ವೈದಿಕ ಹಾಗೂ ಲೌಕಿಕ ಎರಡೂ ಪ್ರಕಾರದ ಸಂಸ್ಕೃತ ಸಾಹಿತ್ಯ ಕ್ಷೇತ್ರದಲ್ಲಿ ನಮಗೆ ಆದರ್ಶ ಹಾಗೂ ಉಪದೇಶಾತ್ಮಕ ಪ್ರಕ್ರಿಯೆಯೂ ಸ್ಪಷ್ಟವಾಗಿ ಗೋಚರಿಸುತ್ತದೆ.

ಡಾಕ್ಟರ್ ಸೂರ್ಯಕಾಂತ್ ಜೀ ರವರ ಪ್ರಕಾರ "ಸಂಸ್ಕೃತದ ಬಹುಶಃ ಎಲ್ಲ ಗ್ರಂಥಗಳಲ್ಲೂ ನೀತಿ ವಿಷಯದ ಸೂಕ್ತಿಗಳು ಹಾಗೂ ಲೋಕೋಕ್ತಿಗಳು ಸಾಕಷ್ಟು ಹರಡಿಕೊಂಡಿರುತ್ತವೆ. ಇವುಗಳಲ್ಲಿ ಜೀವನಾನುಭವದ ವಿಚಾರಗಳು ಬಹಳಪರಿಣಾಮಕಾರಿಯಾಗಿ ಅಭಿವ್ಯಕ್ತಗೊಂಡಿರುತ್ತವೆ."

ಆಚಾರ್ಯ ಬಲದೇವ ಉಪಾಧ್ಯಾಯರು.. "ಸಂಸ್ಕೃತ ಸಾಹಿತ್ಯದಲ್ಲಿ ನೀತಿ ವರ್ಣನೆಯ ವಿಶೇಷ ಗ್ರಂಥಗಳು ಉಪಲಬ್ಧವಿರುತ್ತವೆ. ಅವುಗಳಲ್ಲಿ ಸೂತ್ರಾತ್ಮಕ ಪದ್ಧತಿಯಲ್ಲಿ ಜೀವನವನ್ನು ಸುಖಮಯ ಹಾಗೂ ಲಾಭದಾಯಕವನ್ನಾಗಿ ಮಾಡುವುದಕ್ಕಾಗಿ ನಾನಾ ಉಪಯೋಗಿ ವಿಷಯಗಳನ್ನು ವರ್ಣನೆ ಮಾಡಲಾಗಿದೆ." ವಿ.ವರದಾಚಾರ್ಯರು?. "ಈ ಪ್ರಕಾರದ ಕಾವ್ಯದಲ್ಲಿ ಧರ್ಮದರ್ಶನ, ಸದಾಚಾರ ಮತ್ತು ರಾಜನೀತಿಯ ವರ್ಣನೆಯಿರುತ್ತದೆ. ಹಿಂದೂ, ಜೈನ ಮತ್ತು ಬೌದ್ಧ ಧರ್ಮಗಳು ಈ ಪ್ರಕಾರದ ಕಾವ್ಯಗಳ ಸಮೃದ್ಧಿಗಾಗಿ ಪೂರ್ಣ ಪ್ರಯತ್ನ ನಡೆಸಿವೆ. ಈ ಪ್ರಕಾರದ ಕವಿತೆಗಳಿಗೆ ನೀತಿ ಕಾವ್ಯಗಳೆಂದು ಕರೆಯಲಾಗಿದೆ."

19. चाणक्य नीतिः 1–10

ಒಂದು ಸ್ಪಷ್ಟ ವಿಚಾರವೆಂದರೆ, ಯಾವ ಕಾವ್ಯದಲ್ಲಿ ಮಾನವ ಜೀವನದ ಕಲ್ಯಾಣಕ್ಕಾಗಿ ಸರಳ ಹಾಗೂ ಸರಸ ಶಬ್ದಗಳಲ್ಲಿ ಲೋಕವ್ಯವಹಾರ ನೀತಿಯನ್ನು ವರ್ಣನೆ ಮಾಡಲಾಗಿದೆಯೋ, ಅವುಗಳನ್ನು ನೀತಿ ಕಾವ್ಯವೆಂದು ಕರೆಯಲಾಗಿದೆ.

**ಐತಿಹಾಸಿಕತೆ:–**

"वेदस्य सर्वविद्यानिधानत्वम्" "यदिहास्ति तदन्यत्र यन्नेहास्ति न तत् क्वचित्"

ಅರ್ಥಾತ್ ಇದರಲ್ಲಿರುವುದು ಅನ್ಯತ್ರದಲ್ಲಿಯೂ ಇರುವುದು, ಇದರಲ್ಲಿರದಿರುವುದು ಮತ್ತೆಲ್ಲೂ ಇರುವುದಿಲ್ಲ. ಈ ಒಂದು ಉಕ್ತಿಯೂ ವೇದಗಳಿಗೆ ಚರಿತಾರ್ಥವಾಗಿದೆ. ಇದರನುಸಾರ ವೇದಗಳಲ್ಲಿಯೂ ಸಮಸ್ತ ತತ್ವಗಳು, ವಿದ್ಯಾ ವಿಧಾನಗಳು, ಮೂಲವಿದ್ಯಮಾನಗಳು ಲಭ್ಯವಿರುತ್ತವೆ. ಆರ್ಯರ ಸರ್ವಾಧಿಕ ಪೂಜ್ಯ ಹಾಗೂ ಪ್ರತಿಷ್ಠಿತ ಗ್ರಂಥ ಋಗ್ವೇದದಲ್ಲಿ ನೀತಿತತ್ವವು ಸಮೃದ್ಧವಾಗಿ ಉಪದೇಶಿಸಲ್ಪಟ್ಟಿದೆ. ಐತರೇಯ ಬ್ರಾಹ್ಮಣದಲ್ಲೂ ಇಂಥಹ ಅನೇಕ ಪ್ರಸಂಗಗಳನ್ನು ವಿವೇಚಿಸಲಾಗಿದೆ. ಇವುಗಳಲ್ಲಿನ ಉಪಾಖ್ಯಾನ ಮಾಧ್ಯಮದಲ್ಲಿ ನೀತಿತತ್ವ ಪ್ರಕಟಗೊಳ್ಳುತ್ತವೆ. ಉಪನಿಷತ್ತು ಹಾಗೂ ಸೂತ್ರ ಗ್ರಂಥಗಳಲ್ಲಿಯೂ ನೀತಿತತ್ವವು ಸಮೃದ್ಧವಾಗಿ ಉಪಲಬ್ಧವಿದೆ. ಸಮಸ್ತ ಸಂಸ್ಕೃತ ಸಾಹಿತ್ಯ ಇತಿಹಾಸಕಾರರ ಅಭಿಮತದಂತೆ ನೀತಿ ಪದ್ಯಗಳ ವಿಕಾಸವು ಸ್ಪಷ್ಟವಾಗಿ ಋಗ್ವೇದದ ಕಾಲದಿಂದ ಕಂಡುಬಂದಿರುತ್ತದೆ.

**ನೀತಿಕಾವ್ಯದ ವಿಶೇಷ ಲಕ್ಷಣಗಳು:**

1. **ಲೋಕವ್ಯವಹಾರದಲ್ಲಿ ಸಾಮರಸ್ಯ (Harmony in Public Behaviour)**

ನೀತಿಕಾವ್ಯಗಳಲ್ಲಿ ಕಾವ್ಯಕಾರರ ಮುಖ್ಯ ಉದ್ದೇಶವು ಸಾರ್ವಜನಿಕ ಲೋಕರಂಜನೆಯ ಜೊತೆಗೆ ಲೋಕ ವ್ಯವಹಾರದ ಶಿಕ್ಷಣವನ್ನು ಒದಗಿಸುವುದಾಗಿದೆ. ಇದರ ಪ್ರಮುಖ ಉದಾಹರಣೆಯೆಂದರೆ ಮಹಾಭಾರತದ ಶ್ರೀಮದ್ಭಗವದ್ಗೀತಾ ಹಾಗೂ ವಿದುರನೀತಿ ಎರಡೂ ಬಹಳ ದೊಡ್ಡ ಪ್ರಸಂಗಗಳಾಗಿವೆ.

2. **ಆಧ್ಯಾತ್ಮಿಕತೆ (Spirituality)**

ನೀತಿಕಾವ್ಯದಲ್ಲಿ ಆಧ್ಯಾತ್ಮ ತತ್ವವು ಸರ್ವತ್ರ ದೃಷ್ಟಿಗೋಚರವಾಗುತ್ತದೆ. ಚತುರ್ವಿಧ ಫಲಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷ ಸಂಬಂಧವಾದ ನೀತಿ ವಿಚಾರಗಳು, ಪುನರ್ಜನ್ಮದಿಂದ ಮುಕ್ತಿ, ಸತ್ಯಾನ್ವೇಷಣ ಸಂಬಂಧೀ ವಾಸ್ತವಗಳು ಪದೇಪದೇ ವಿದ್ಯಮಾನಗೊಳ್ಳುತ್ತವೆ... ಉದಾಹರಣೆಗೆ:–

वासांसि जीर्णानि यथा विहाय नवानि गृह्णाति नरोऽपराणि।

तथा शरीराणि विहाय जीर्णान्यन्यानि संयाति नवानि देही ॥[20]

ಹೇಗೆ ಮನುಷ್ಯನು ಹಳೆಯ ವಸ್ತುಗಳನ್ನು ತ್ಯಜಿಸಿ, ಬೇರೆ ಹೊಸ ವಸ್ತ್ರಗಳನ್ನು ಧರಿಸಿಕೊಳ್ಳುತ್ತಾನೆಯೋ ಹಾಗೆಯೇ ಜೀವಾತ್ಮನು ಹಳೆಯ ಶರೀರಗಳನ್ನು ಬಿಟ್ಟು ಬೇರೆ ಹೊಸ ಶರೀರಗಳಲ್ಲಿ ಪ್ರಾಪ್ತಗೊಳ್ಳುವನು.

**೩. ಸದಾಚಾರ (Virtue)**

ನೀತಿಕಾವ್ಯಗಳಲ್ಲಿ ಉನ್ನತಿಯ ಮಾರ್ಗಗಳಲ್ಲಿ ಕಂಡುಬರುವ ಸದ್ಗುಣಗಳ ಹಾಗೂ ದುರ್ಗುಣಗಳನ್ನು ಹಾಗೂ ಅವುಗಳ ಮೌಲ್ಯಗಳನ್ನು ನಿರ್ಧರಿಸುವ ಅಂಶಗಳನ್ನು ಸ್ಪಷ್ಟಪಡಿಸಲಾಗುತ್ತದೆ. ಜೀವನದ ಒಳ್ಳೆಯದು ಮತ್ತು ಕೆಟ್ಟದ್ದು, ಒಳ್ಳೆಯ ಹಾಗೂ ಕೆಟ್ಟ ವ್ಯಕ್ತಿಗಳ ಬಗ್ಗೆ ವಿಚಾರಮಾಡುತ್ತಾ ಸದ್ಗುಣಗಳ ವಿಶೇಷತೆಯ ಬಗ್ಗೆ ಸ್ಪಷ್ಟಪಡಿಸಿ ಉಪದೇಶಿಸುವುದು.

यथा चित्तं तथा वाचो  यथा वाचस्तथा क्रियाः ।

चित्ते वाचि क्रियायांच साधूनामेकरूपता ॥[21]

ಮನಸ್ಸಿನಂತೆ ಮಾತು,ಮಾತಿನಂತೆ ಕ್ರಿಯೆ.ಮನಸ್ಸು, ಮಾತು,ಕ್ರಿಯೆಗಳಲ್ಲಿ ಸತ್ಪುರುಷರು ಒಂದೇ ಬಗೆಯಾಗಿರುತ್ತಾರೆ.

**4. ಪ್ರಾಣಿಯನ್ನು ಪ್ರೀತಿಸುವುದು(Love Of the Animal)**

ನೀತಿಕಾವ್ಯಗಳಲ್ಲಿ ಪ್ರಾಣಿಪ್ರೀತಿಯ ಬಗ್ಗೆ ಅಪಾರ ನಿದರ್ಶನಗಳಿವೆ.

निर्गुणेष्वपि सत्वेषु दयां कुर्वन्ति साधवः।

नहि संहरते ज्योत्स्नां चन्द्रश्चाण्डालवेश्मनि॥[22]

ಗುಣರಹಿತವಾದ ಪ್ರಾಣಿಗಳಾದರೂ ಸಜ್ಜನರು ಅವುಗಳಲ್ಲೂ  ದಯೆಯನ್ನು ಹೊಂದಿರುತ್ತಾರೆ. ಅವರಿಗೆ ಗುಣಯುಕ್ತ ಗುಣರಹಿತ ಎಂಬ ಭೇದವಿರುವುದಿಲ್ಲ. ಚಂದ್ರನು ಚಂಡಾಲನ ಮನೆಯಾದರೂ ತನ್ನ ಕಿರಣಗಳನ್ನು ಹಿಂದಕ್ಕೆ ಪಡೆಯುವುದಿಲ್ಲ. ಅವನು ಸಜ್ಜನರ ಮನೆಯ ಮೇಲೆ ಎಷ್ಟು ಬೆಳದಿಂಗಳನ್ನು ಪಸರಿಸುವನೋ ಅಷ್ಟೇ ಚಂಡಾಲನ ಮನೆಯ ಮೇಲೂ ಪಸರಿಸುತ್ತಾನೆ. ಅಂತೆಯೇ ಸಜ್ಜನರು.

---

20. भगवद्गीता मूल श्लोक 2–22.
21. सुभाषितानि, संस्कृतभारती. Sanskrit pearls.
22. हितोपदेशःमित्रलाभःश्लो–61.

**೫. ನಿಜವಾದ ಸ್ನೇಹ (Real Friendship)**

ಈ ನೀತಿಕಾವ್ಯಗಳಲ್ಲಿ  ನಿಜವಾದ ಸ್ನೇಹದ ಬಗ್ಗೆ ವಿಶೇಷ ಒತ್ತನ್ನು ನೀಡಲಾಗಿದೆ. ಒಳ್ಳೆಯ ಸ್ನೇಹವು ಪರಸ್ಪರ ಹೊಂದಾಣಿಕೆ, ತ್ಯಾಗ ಆಧಾರಿತವಾಗಿರುತ್ತದೆ.ಇದರಲ್ಲಿ ಬದಲಾದ ಭಾವನೆಗಳಿಗೆ ಸ್ಥಾನವೇ ಇರುವುದಿಲ್ಲ.

क्षीरेणात्मगतोदकाय हि गुणदत्ताः पुरा ते अखिला ।

क्षीरोत्तापमववेक्ष्य तेन पयसा स्वात्माकृशानौ हुतः॥

गन्तुः पावकमुन्मनस्तदभवद दृष्ट्वा तु मित्रपदं ।

युक्तं तेन जलेन शाम्यसि सतां मैत्रीपुनस्वीदृशी ॥[23]

ಮೊದಲಾಗಿ ಹಾಲು ತನ್ನಲ್ಲಿಗೆ ಬಂದು ಸೇರಿದ ನೀರಿಗೆ ತನ್ನ ಗುಣವನ್ನು ನೀಡಿತು. ಕಾಯಿಸಲ್ಪಟ್ಟಾಗ ಆ ನೀರು ಹಾಲಿನ ಸಂತಾಪವನ್ನು ಸಹಿಸಲಾಗದೆ, ತನ್ನನ್ನೇ ಬೆಂಕಿಯಲ್ಲಿ ದಹಿಸಿಕೊಳ್ಳುತ್ತದೆ. ಆಗ ಹಾಲೂ, ಗೆಳೆಯನಾದ ನೀರಿನ ಸಂಕಟವನ್ನು ನೋಡಿ, ತಾನೂ ಬೆಂಕಿಗೆ ಬೀಳಲು ಸಿದ್ಧವಾಗುತ್ತದೆ. ಆದರೆ, ನೀರಿನಿಂದ  ಪುನಃ ಕೂಡಿಕೊಂಡಾಗ ಹಾಲು ತಣ್ಣಗಾಗುತ್ತದೆ. ಸಜ್ಜನರ ಗೆಳೆತನ ಇದೇ ರೀತಿಯದಾಗಿರುತ್ತದೆ.

**೬. ದುರ್ಜನ ನಿಂದೆ (Abusing the wicked)**

ಸಮಾಜಕ್ಕೆ ಸದಾಚರಣೆಯ ಶಿಕ್ಷಣ ನೀಡುವುದಕ್ಕೋಸ್ಕರ ದುಷ್ಟರ ಸ್ವಭಾವವನ್ನು ನಿರೂಪಿಸುತ್ತಾ, ಅವರ ದುರ್ಗುಣಗಳನ್ನು ನಿಂದಿಸಲಾಗುತ್ತದೆ.

**7. ಜಿಪುಣತನ, ಬಡತನ, ದಾರಿದ್ರ್ಯ(Poverty, Miserliness, Indigence)**

ಈ ಕಾವ್ಯಗಳಲ್ಲಿ, ಕೃಪಣತೆ ಮತ್ತು ದೀನತೆಯ ದೋಷಗಳನ್ನು ಉಲ್ಲೇಖಿಸುತ್ತಾ ಮಾನವ ಜೀವನದ ಮೇಲೆ ಬೀರುವ ದುಷ್ಪರಿಣಾಮಗಳನ್ನು ತಿಳಿಹೇಳಲಾಗುತ್ತದೆ.

**೮. भाग्य की अवश्यंभाविता (Must of Fate)**

ನೀತಿಕಾವ್ಯಗಳಲ್ಲಿ ವಿಧಿಯ ಅನಿವಾರ್ಯತೆ ಬಗ್ಗೆಯೂ ವರ್ಣನೆ ಮಾಡಲಾಗಿರುತ್ತದೆ.

---

23. भर्तृहरि नीतिशतकम्–श्लो–66

सृजति तावदशेषगुणाकरं पुरुषरत्नमूलकरणं भुवः ।

तदापि तक्षणभंगिंकरोति चेदह कष्टमपण्डितता विधेः ॥[24]

೯. कर्मवाद **(work is worship)**

ನೀತಿಕಾವ್ಯಗಳಲ್ಲಿ ನಿಷ್ಕಾಮ ಭಾವನೆಯಿಂದ ಕರ್ಮವನ್ನು ಕೈಗೊಳ್ಳಬೇಕು ಎಂಬ ವಿಚಾರವನ್ನು ಹೇಳುತ್ತಾ, ಕರ್ಮವಾದದ ಪ್ರಾಧಾನ್ಯತೆಯನ್ನು ಮನದಟ್ಟು ಮಾಡಲಾಗಿದೆ.

कर्मण्येवाधिकारस्ते, मा फलेषु कदाचन ।

मा कर्मफलहेतुर्भूर्मा ते संङ्गोल्स्त्वकर्मणि ॥[25]

೧೦. आशावाद **(Optimism)**

ನೀತಿಕಾವ್ಯಗಳಲ್ಲಿ ನಿರಾಶಾವಾದಕ್ಕೆ ಯಾವುದೇ ಸ್ಥಾನಮಾನವನ್ನು ನೀಡಲಾಗಿರುವುದಿಲ್ಲ.

आशाहि परमज्योतिः नैराश्यं परमंतमः (The Hope Experiment)

## नीतिकाव्यस्य उद्भवः

ನೀತಿಕಾವ್ಯಗಳ ಉದ್ಭವವು ವಿಶ್ವಸಾಹಿತ್ಯದ ಪ್ರಾಚೀನ ಗ್ರಂಥ ಋಗ್ವೇದದ ಕಾಲದಲ್ಲಿಯೇ ಉಂಟಾಗಿದೆಯೆಂದು ಮಾನ್ಯ ಮಾಡಲಾಗಿದೆ. ಇದರ ಜೊತೆಗೆ ಬ್ರಾಹ್ಮಣಗ್ರಂಥಗಳು, ಉಪನಿಷತ್ತು, ರಾಮಾಯಣ ಮಹಾಭಾರತದಲ್ಲೂ ಧರ್ಮ ಮತ್ತು ನೀತಿಯ ಸದುಪದೇಶಗಳು ಸಮ್ಮಿಳಿತವಾಗಿವೆ. ಈ ನೀತಿ ಗ್ರಂಥಗಳಲ್ಲಿ ತತ್ವಜ್ಞಾನ ಹಾಗೂ ವೈರಾಗ್ಯದ ಸುಂದರ ಸನ್ನಿವೇಶಗಳು ಕಂಡುಬರುತ್ತವೆ. ಇವುಗಳಲ್ಲಿ ಬಹುಶಃ ಎಲ್ಲ ಧಾರ್ಮಿಕ ವಿಶ್ವಾಸಗಳ ಉಲ್ಲೇಖ ಹಾಗೂ ಉಪದೇಶವಿರುತ್ತದೆ. ಈ ನೀತಿಗ್ರಂಥಗಳು ಪುರುಷ ಜೀವನದ ವ್ಯವಹಾರದಲ್ಲಿ ಬರಬಹುದಾದ ಅನೇಕ ವಿಚಾರಗಳ ಜೊತೆಜೊತೆಗೆ ಜೀವನದ ನಿಸ್ಸಾರತೆ, ನಿರರ್ಥಕತೆಯ ನಿರೂಪಣೆಯೊಂದಿಗೆ ಮಾನವ ಮಾತ್ರನಾದವನು ಜೀವನದ ಸಾರ್ಥಕತೆಗೆ ಹಾಗೂ ಮೋಕ್ಷಸಾಧನಗೆ ಮಾರ್ಗದರ್ಶನ ನೀಡುತ್ತವೆ. ಮಹಾಭಾರತದ ಎರಡು ದೊಡ್ಡ ಪ್ರಸಂಗಗಳಾದ ಶ್ರೀಮದ್ಭಗವದ್ಗೀತಾ ಹಾಗೂ ವಿದುರನೀತಿ ಸ್ವಯಂ ನೀತಿಕಾವ್ಯಗಳಾಗಿದ್ದು ಸರ್ವಶ್ರೇಷ್ಠ ಗ್ರಂಥಗಳು ಎನಿಸಿಕೊಂಡಿವೆ. ಭಗವದ್ಗೀತೆಯಂತೂ ಭಾರತೀಯ ಸಂಸ್ಕೃತಿಯ ಅಮೂಲ್ಯ ರತ್ನವಾಗಿದೆ. ಈ ಒಂದು

24. भर्तृहरि नीतिशतक –श्लो–93
25. श्रीमद्भगवद्गीता–2-47.

ಮಾಧ್ಯಮದಲ್ಲಿ ಜೀವನದ ಅನಿಯಮಿತತೆ, ಆತ್ಮದ ಅಮರತ್ವ, ನಿಷ್ಕಾಮಕರ್ಮವಾದ ಮುಂತಾದ ಶಿಕ್ಷಣ ಲಭ್ಯವಿರುತ್ತದೆ. ಇದೇ ಪ್ರಕಾರವಾಗಿ ವಿದುರನೀತಿಯಲ್ಲೂ ಕುಲಧರ್ಮ, ಸರ್ವಧರ್ಮ, ರಾಜಧರ್ಮ, ವಿಶ್ವಧರ್ಮ ಹಾಗೂ ಆತ್ಮದ ಧರ್ಮದ ವಿವಿಧ ಸ್ವರೂಪಗಳನ್ನು ಕಾಣಬಹುದು. ಈ ಕೆಳಗಿನ ಶ್ಲೋಕದಲ್ಲಿ ಸದ್ಗೃಹಸ್ಥನ ಮನೆಯಲ್ಲಿ ನಾಲ್ಕು ಜನರ ವಾಸದ ಅವಶ್ಯಕತೆಯನ್ನು ಹೇಳಲಾಗಿದೆ.

चत्वारि ते तात गृहे वसन्तु श्रियाभिजुष्टस्य गृहस्थधर्मे वृद्धो ।

ज्ञातिरवसन्नःकुलीनःसखा दरिद्रो भगिनी चानपत्या ॥[26]

ಅಂದರೆ ಎಲೈ ತಂದೆಯೇ ಗೃಹಸ್ಥ ಜೀವನದಲ್ಲಿ ಲಕ್ಷ್ಮೀಪುತ್ರನ ಮನೆಯಲ್ಲಿ ನಾಲ್ಕು ಜನರು ವಾಸ ಮಾಡುತ್ತಾರೆ. ಕುಟುಂಬದ ವೃದ್ಧರು, ಸಂಕಟದಲ್ಲಿರುವ ಶ್ರೇಷ್ಠಕುಲದವ್ಯಕ್ತಿ, ನಿರ್ಧನಮಿತ್ರ ಮತ್ತು ನಿಸ್ಸಂತಾನದ ಸಹೋದರಿ.

**ನೀತಿ ಕಾವ್ಯದ ವಿಕಾಸ:–**

1. चाणक्य नीतिः

ನೀತಿಕಾವ್ಯದ ಸರ್ವ ಪ್ರಥಮ ಸಂಗ್ರಹವು चाणक्य संग्रहः ಇದನ್ನೇ ವಿದ್ವಾಂಸರು ಚಾಣಕ್ಯನೀತಿ ಎಂದು ಕರೆಯುತ್ತಾರೆ. ಇದರಲ್ಲಿ ವ್ಯವಹಾರ ಸಂಬಂಧವಾದ ಪದ್ಯಗಳ ಜೊತೆ ರಾಜನೀತಿ ಶ್ಲೋಕಗಳ ಸದ್ಭಾವವು ಪ್ರಾಪ್ತವಾಗುತ್ತದೆ. ಈ ನೀತಿ ವಿಷಯ ಸದುಪದೇಶಗಳ ಸಂಬಂಧ ಚಂದ್ರಗುಪ್ತ ಮೌರ್ಯನ ಪ್ರಖ್ಯಾತ ಗುರು ಅಮಾತ್ಯ ಚಾಣಕ್ಯನೊಡನೆ ಸೇರಿಸಲ್ಪಟ್ಟಿದೆ. ಆದರೂ ಇದರ ಲೇಖಕ ಅರ್ಥಶಾಸ್ತ್ರ ರಚಿಸಿದ ಚಾಣಕ್ಯನೇ ಎಂಬುದಕ್ಕೆ ಸ್ಪಷ್ಟತೆಯಿರುವುದಿಲ್ಲ. ಬಹುಶಃ ಚಾಣಕ್ಯನು ಒಬ್ಬ ಪ್ರತಿಷ್ಠಿತ ರಾಜನೀತಿಜ್ಞನಾಗಿರುವ ಕಾರಣ ಇದಕ್ಕೆ ಚಾಣಕ್ಯನೀತಿ ಎಂಬ ಹೆಸರಿನಲ್ಲಿ ಖ್ಯಾತಿಗೊಂಡಿದೆ. ಡಾ.ಲುಡ್ವಿಕ್ ಸ್ಟರ್ನ್ಬಾಕ್ ರವರು ಚಾಣಕ್ಯನೀತಿ ಸಂಪ್ರದಾಯ ಎಂಬ ಗ್ರಂಥದಲ್ಲಿ ಚಾಣಕ್ಯನೀತಿ ಸೂಕ್ತಗಳಲ್ಲಿ ಆರು ವಾಚನಗಳ ಸಂಗ್ರಹವನ್ನು ಸಂಪಾದಿಸಿ ಪ್ರಕಾಶಿತಗೊಳಿಸಿರುತ್ತಾರೆ.

1. वृद्ध चाणक्यः– ಇದರಲ್ಲಿ ಎರಡು कुब्जास्ति ಅಂತರ್ಗತವಾಗಿದ್ದು, ಮೊದಲನೆಯದು ಸಾಮಾನ್ಯ ವಾಚನ ಹಾಗೂ ಎರಡನೆಯದು ಅಲಂಕೃತ ವಾಚನ ಎಂದು ಹೇಳಲಾಗುತ್ತದೆ. ಪ್ರಥಮ ವಾಚನದಲ್ಲಿ ಎಂಟು ಅಧ್ಯಾಯಗಳಿವೆ. ದ್ವಿತೀಯ ವಾಚನದಲ್ಲಿ ಹದಿನೇಳು ಅಧ್ಯಾಯಗಳಿವೆ. ಶ್ಲೋಕಗಳು ಅಲ್ಲಲ್ಲಿ ಅನುಷ್ಟುಪ್ ಛಂದಸ್ಸಿನಲ್ಲಿರುತ್ತವೆ.

26. विदुरनीति श्लोकः75.

೨. चाणक्य नीतिशास्त्रः– ಇದು ಮೂರನೆಯ ವಾಚನ. ಇದರ ಅವತರಣಿಕೆಯಲ್ಲಿ ನಾನಾ ಪ್ರಕಾರದ ಶಾಸ್ತ್ರಗಳಿಂದ ಉಲ್ಲೇಖಿಸಲಾಗಿದ್ದು, ರಾಜನೀತಿಯ ಸಮುಚ್ಚಯ ಹಾಗೂ ಸಮಸ್ತ ಶಾಸ್ತ್ರಗಳ ಮೂಲವನ್ನು ಹೇಳಲಾಗಿದೆ.

नाना शास्त्रोद्धृतम् वक्ष्ये राजनीति समुच्चयम्

सर्वबीजमिदं शास्त्रं चाणक्यं सारसंग्रहम् ॥[27]

ಇದರಲ್ಲಿ ಅನುಷ್ಟುಪ್ ಛಂದಸ್ಸಿನ 108 ಶ್ಲೋಕಗಳು ನಿಬದ್ಧವಾಗಿವೆ.

೩.चाणक्य सारसंग्रहम् – ಇದರಲ್ಲಿ ಮೂರು ಶತಕಗಳಿವೆ. ಪ್ರತ್ಯೇಕ ಶತಕದಲ್ಲಿ ಪೂರ್ಣ 100 ಅನುಷ್ಟುಪ್ ಛಂದಸ್ಸಿನಲ್ಲಿ ವಿದ್ಯಮಾನಗೊಂಡಿವೆ. ಇದರಲ್ಲಿ ರಾಜಕೀಯ ವಿಸ್ತೃತ ಉದೇಶಗಳ ಜೊತೆಗೆ ಲೋಕನೀತಿಯ ಸುಂದರ ಶಿಕ್ಷಣವನ್ನು ನೀಡಲಾಗಿದೆ.

आसारे खलु संसारे सारमेतच्चतुष्टयम् ।

काश्यां वासः सतां संगः गङ्गाभः शम्भु सेवनम् ॥[28]

ಅಸಾರವಾದ ಈ ಸಂಸಾರದಲ್ಲಿ ಜನರಿಗೆ ಸುಖಭ್ರಾಂತಿ ಇದೆ. ಮಕ್ಕಳು ಅಂಗುಷ್ಠದಲ್ಲಿ ಜೊಲ್ಲನ್ನು ಹೀರುತ್ತಾ ಸ್ತನ್ಯವೆಂದು ಭ್ರಮಿಸುತ್ತಾರೆ. ಈ ಉಪಯುಕ್ತ ಶ್ಲೋಕದಲ್ಲಿ ಕಾಶಿವಾಸದ ಆದ್ಯತೆಯನ್ನು ನೀಡಲಾಗಿದೆ. ಬಹುಶಃ ಇದರ ಸಂಗ್ರಹಕಾರರು ಕಾಶೀ ವಾಸಿಯಾಗಿರಬಹುದು.

4. लधु चाणक्य :– ಇದು ಐದನೆಯ ವಾಚನ. ಇದರ ಪ್ರತ್ಯೇಕ ಅಧ್ಯಾಯದಲ್ಲಿ ಹತ್ತರಿಂದ ಹದಿಮೂರರವರೆಗೆ ಶ್ಲೋಕಗಳಿವೆ. ಈ ವಾಚನವು ಭಾರತದಲ್ಲಿ ಸ್ವಲ್ಪ ತಿಳಿದಿರುವಂತಿದೆ. ಆದರೆ ಯೂರೋಪಿನಲ್ಲಿ ಇದು ಬಹಳ ಪ್ರಖ್ಯಾತವಾಗಿದೆ. ಗೆಲೆನಾಸ್ ಎಂಬ ಹೆಸರಿನ ಗ್ರೀಕ್ ಸಂಸ್ಕೃತಜ್ಞನು ಮೂಲ ಸಂಸ್ಕೃತದಿಂದ ಯೂನಾನಿ ಗ್ರೀಕ್ ಭಾಷೆಗೆ ಅನುವಾದ ಮಾಡಿ 1825 ರಲ್ಲಿ ಪ್ರಕಾಶಿತಗೊಳಿಸಿದ್ದಾನೆ.

5. चाणक्य राजनीति शास्त्रम् :– ಈ ವಾಚನವೂ ಭಾರತದಲ್ಲಿ ಅಷ್ಟೇನೂ ಪ್ರಸಿದ್ಧಿ ಪಡೆದಿರುವುದಿಲ್ಲ. ಆದರೂ ಒಂಭತ್ತನೇ ಶತಮಾನದಲ್ಲಿ ಟಿಬೆಟ್ಟಿನ ತಂಜಾವೂರಿನಲ್ಲಿ ಅನುವಾದಿತಗೊಂಡು ಸಂಗ್ರಹವಾಗಿರುತ್ತದೆ. ಈ ಟಿಬೆಟ್ಟಿಯನ್ ಅನುವಾದ ಪುನಃ ಸಂಸ್ಕೃತಕ್ಕೆ ತರ್ಜಿಮೆಗೊಂಡು ಶಾಂತಿನಿಕೇತನದಲ್ಲಿ ಪ್ರಕಾಶಿತಗೊಂಡಿರುತ್ತದೆ.

27. चाणक्य नीति दर्पण 1-1

28. ಸುಭಾಷಿತ ಮಂಜರೀ–ವೈರಾಗ್ಯ–श्लो–14,समयोचित पद्यमालिका –ಪು–297,ಕ.ಸಾ.ಪ.ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು–560018 (2019).

ಇದರಲ್ಲಿ ಎಂಟು ಅಧ್ಯಾಯಗಳಿದ್ದು 5382 ಶ್ಲೋಕಗಳಿವೆ. ಆದರೆ 3972 ಶ್ಲೋಕಗಳು ಮಾತ್ರ ಉಪಲಬ್ಧವಿರುತ್ತವೆ.

ಈ ಎಲ್ಲ ಗ್ರಂಥಗಳ ಕರ್ತೃ ಮಹಾತ್ಮ ಚಾಣಕ್ಯನೇ ಆಗಿದ್ದನೆಂದು ಹೇಳುವುದು ಬಹಳ ಕಠಿಣವೇ ಹೌದು. ಆದರೆ ಈ ಗ್ರಂಥಗಳಲ್ಲಿ ಒದಗಿಸಿರುವ ಶಿಕ್ಷಣ, ಉಪದೇಶ ಹಾಗೂ ನೀತಿ ವಾಕ್ಯಗಳು ಮಾನವ ಜೀವನಕ್ಕೆ ಸರ್ವಥಾ ಗ್ರಹಣ ಯೋಗ್ಯವಾಗಿರುತ್ತದೆ; ಸಾರ್ವಭೌಮ ಹಾಗೂ ಇವುಗಳಲ್ಲಿನ ಅನುಭವ ಹಾಗೂ ಬುದ್ಧಿಯ ಸೂಕ್ಷ್ಮಾಭಿವ್ಯಕ್ತಿಯುಂಟಾಗುತ್ತದೆ. ಹೀಗೆ...

नास्ति विद्यासमम् चक्षुर्नास्ति सत्यसमं तपः।

नास्ति रागसमं दुःखं नास्ति त्यागसमं सुखम्॥[29]

ಅಂದರೆ ವಿದ್ಯೆಗೆ ಸಮನಾದ ಇನ್ನೊಂದು ಕಣ್ಣಿಲ್ಲ.ಸತ್ಯಕ್ಕೆ ಸಮನಾದ ತಪಸ್ಸಿಲ್ಲ. ಆಸಕ್ತಿಗೆ ಸಮನಾದ ದುಃಖವಿಲ್ಲ. ತ್ಯಾಗಕ್ಕೆ ಸಮನಾದ ಸುಖವಿಲ್ಲ.

नात्यन्त सरलैर्भाव्यं गत्वा पश्य वनस्थलीम् ।

छिद्यन्ते रलास्तत्र कुब्जास्तिष्ठन्ति पादपाः ॥[30]

ಅರ್ಥಾತ್ ಅತ್ಯಂತ ಸರಳ ಅಥವಾ ನೇರ ಆಗಿರಬಾರದು. ಇಂತಹ ಹೇಳಿಕೆ ಎಷ್ಟೇ ನಿಖರವಾಗಿರಲಿ; ಏಕೆಂದರೆ ನಾವು ಕಾಡಿಗೆ ಹೋಗಿ ನೋಡಿದಾಗ ತಿಳಿಯುತ್ತದೆ. ನೇರ ವೃಕ್ಷಗಳು ಜನಗಳಿಂದ ಸುಲಭವಾಗಿ ಕಡಿಯಲ್ಪಡುತ್ತವೆ. ಆದರೆ ಅಂಕುಡೊಂಕು ವೃಕ್ಷವು ಕಡಿಯಲ್ಪಟ್ಟಿರುವುದಿಲ್ಲ. ಇದರ ತಾತ್ಪರ್ಯವೇನೆಂದರೆ, ಸಂಸಾರದಲ್ಲಿ ಹುಸಿ ಸಹಜತೆ ಸ್ವಭಾವವುಳ್ಳವರ ಮೂಲಕ ಸೀದಾಸಾದಾ ಜನರು ಶೋಷಿತರಾಗಿಬಿಡುತ್ತಾರೆ.

೨. नीतिद्विषष्ठिका

ಸುಂದರಪಾಂಡೆ ವಿರಚಿತ "नीतिद्विषिका" ಒಂದು ಪ್ರಾಚೀನ ಗ್ರಂಥ. ಇದರಲ್ಲಿ, ದೇಶಾತ್ಮಕ ಶೈಲಿಯಲ್ಲಿ 116 ಶ್ಲೋಕಗಳಿವೆ. ಸುಭಾಷಿತ ಗ್ರಂಥಕಾರರು ಈ ರಚನೆಯಲ್ಲಿನ ಕೆಲವು ಶ್ಲೋಕಗಳನ್ನು ಉಲ್ಲೇಖಿಸಿದ್ದಾರೆ. ಆದರೆ ಗ್ರಂಥದ ಹೆಸರನ್ನು ಎಲ್ಲಿಯೂ ಉಲ್ಲೇಖಿಸಿರುವುದಿಲ್ಲ. ಆದರೂ ಕೆಲವು ಅನ್ಯ ವಿದ್ವಾಂಸರು ಇದರ ಉಲ್ಲೇಖ ಮಾಡಿದ್ದಾರೆ. ಅದರ ವಿವರಣೆ ಈ ಕೆಳಗಿನಂತಿರುತ್ತದೆ.

---

29. ಮಹಾಭಾರತ–ಶಾಂತಿ ಪರ್ವ–ಶ್ಲೋ–175–35.
30. चाणक्य नीतिशास्त्र -07-12.

I. जनाश्रय(६०० ई)ನು ಇದರ ಉಲ್ಲೇಖ ಒಂದು ಪಂಕ್ತಿಯಲ್ಲಿ ತನ್ನ ಛಂದೋವಿಚಿತದಲ್ಲಿ ಉದ್ಧೃತಗೊಳಿಸಿದ್ದಾನೆ.

I I. कुमारिल(६५० ई) ಹಾಗೂ ಶಂಕರಾಚಾರ್ಯರು ತಮ್ಮ ಅನ್ಯ ಗ್ರಂಥಗಳಲ್ಲಿಯೂ ಶ್ಲೋಕ ರೂಪದಲ್ಲಿ ಉದ್ಧೃತಗೊಳಿಸಿದ್ದಾರೆ.

೩. बोधिचर्यावतारः – ಶಾಂತಿದೇವ ರಚಿತ ಬೋಧಿಚರ್ಯಾವತಾರ ಗ್ರಂಥವೂ ಒಂದು ನೀತಿಕಾವ್ಯ. ಇದರಲ್ಲಿ ಬೋಧಿಸತ್ವನ ಕರ್ತವ್ಯಗಳ ಉಲ್ಲೇಖವಿದೆ. ಮಾನವಮಾತ್ರನಿಂದ ಪ್ರೀತಿಯ ಮಹತ್ವದ ಬಗ್ಗೆ ಹೆಚ್ಚಿನ ಒತ್ತನ್ನು ನೀಡಲಾಗಿದೆ. ಈ ಗ್ರಂಥಕ್ಕೆ ಕೆಲವು ವಿಮರ್ಶೆಯನ್ನು ಬರೆಯಲಾಗಿದೆ. ಶಾಂತಿದೇವನು ಆರು ಶಿಕ್ಷಣ ಸಮುಚ್ಚಯ ಹಾಗೂ ಸೂತ್ರ ಸಮುಚ್ಚಯವನ್ನು ರಚಿಸಿದ್ದಾನೆ. ಆದರೆ ಈ ರಚನೆಗಳು ಅಷ್ಟೇನೂ ಪ್ರಸಿಧ್ಧಿಯಾಗಲಿಲ್ಲ.

4. नीतिशतकम् – ಭರ್ತೃಹರಿಯು ಸಂಸ್ಕೃತದ ಮಹಾನ್ ಕವಿ. ಇವನು ಕ್ರಿ.ಶ. ಒಂದನೆಯ ಶತಮಾನದಿಂದ ಏಳನೆಯ ಶತಮಾನದ ನಡುವೆ ಇದ್ದವನೆಂದು ಹೇಳಲಾಗಿದೆ. ಈತನು ರಚಿಸಿದ ಎರಡು ಕೃತಿಗಳೆಂದರೆ–

1.– ವಾಕ್ತಪಥೀಯ. 2.– ಸುಭಾಷೀತ್ರಿಶತಿ. ವಾಕ್ಯಪಥೀಯವು ವ್ಯಾಕರಣ ಶಾಸ್ತ್ರದ ದಾರ್ಶನಿಕ ತತ್ವಗಳನ್ನು ಒಳಗೊಂಡಿದ್ದರೆ ಸುಭಾಷೀತ್ರಿಶತಿಯು ನೀತಿ, ಶೃಂಗಾರ, ವೈರಾಗ್ಯಗಳನ್ನೊಳಗೊಂಡಿರುವ ಶತಕತ್ರಯವಾಗಿದೆ. ಈ ಮೂರರಲ್ಲಿ ನೀತಿಶತಕವು ನೀತಿಸಾರ ಪದ್ಧತಿ, ಪಾಂಡಿತ್ಯ ಪದ್ಧತಿ, ಮೂರ್ಖಪದ್ಧತಿ ಮುಂತಾದ ಹತ್ತು ಭಾಗಗಳನ್ನೊಳಗೊಂಡಿದೆ. ಭರ್ತೃಹರಿ ವಿರಚಿತ ನೀತಿಶತಕವು ನೀತಿಕಾವ್ಯಗಳಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿದೆ. ಇದರಲ್ಲಿರುವ ಪದ್ಯಗಳಲ್ಲಿ ಲೌಕಿಕ ವ್ಯವಹಾರ ಜ್ಞಾನದ ಸೂಕ್ಷ್ಮ ಪರಿಚಯ ಮಾಡುತ್ತಾ, ಕವಿಯು ತನ್ನ ಅನುಭವಗಳನ್ನು ಅತ್ಯಂತ ಸಹಜ, ಸರಳ, ಸ್ವಾಭಾವಿಕ ಹಾಗೂ ಸುಂದರ ಶಬ್ದಗಳಿಂದ ಪ್ರಸ್ತುತಪಡಿಸಿದ್ದಾನೆ. ಮಾನವ ಜೀವನಕ್ಕೆ ಸಂಬಂಧಿಸಿದಂತೆ ಯಾವುದೇ ವಿಷಯವಾಗಲೀ, ಯಾವುದೇ ಸಮಸ್ಯೆ ಇಲ್ಲದಂತೆ ಅದರ ಚರ್ಚೆಯನ್ನು ಈ ಗ್ರಂಥದಲ್ಲಿ ನಡೆಸಲಾಗಿದೆ. ಪರಿಶುದ್ಧ ಮಾನವ ಯಾರೆಂದರೆ ಯಾವನು ತನ್ನ ಮನದಲ್ಲಿ ಪರಮ ಸಂತೋಷದ ಅನುಭೂತಿಯನ್ನು ಪಡೆಯುತ್ತಾನೋ ಅವನು. ಅವನು ಒಂದೆಡೆ ಕರ್ಮಸಿದ್ಧಾಂತದ ವಕಾಲತ್ತನ್ನು ನಡೆಸುವವನು, ಮತ್ತೊಂದೆಡೆ ಭಾಗ್ಯವನ್ನು ಅಲ್ಲಗಳೆಯುವುದಿಲ್ಲ. ಕೆಲವು ವಿಷಯಗಳಲ್ಲಿ ಭರ್ತೃಹರಿಯ ಅಭಿಪ್ರಾಯ ಇಂದಿಗೂ ಸತ್ಯದ ಪ್ರತೀಕವಾಗಿದೆ. ಈ ಸಂಸಾರದಲ್ಲಿ ಪ್ರತಿಯೊಂದಕ್ಕೂ ಪರಿಹಾರ ಅಥವಾ ಉಪಚಾರದ ಸಂಭವವಿದೆ. ಆದರೆ ಮೂರ್ಖನಿಗಿಲ್ಲ.

शक्यो वारयितुं जलेन हुतभुक्छत्रेण सूर्यात्तप्तो

नागेन्द्रो निशिताङ्कुशेन समदो दण्डेन गोर्गदभौ ।

व्याधिर्भेषजसंङ्ग्रहैश्च विविधैर्मन्त्रप्रयोगैर्विषं

सर्वस्यौषधमस्ति शास्त्रविहितं मूर्खस्य नास्त्यौषधम् ॥[31]

ಬೆಂಕಿಯನ್ನು ನೀರಿನಿಂದ ನಂದಿಸಬಹುದು. ಕೊಡೆಯಿಂದ ಸೂರ್ಯನ ತಾಪವನ್ನು ತಡೆಯಬಹುದು. ಚೂಪಾದ ಅಂಕುಶದಿಂದ ಮದವೇರಿದ ಆನೆಯನ್ನು, ದೊಣ್ಣೆಯಿಂದ ಎತ್ತು ಕತ್ತೆಗಳನ್ನು ನಿಯಂತ್ರಿಸಬಹುದು. ಮದ್ದುಗಳಿಂದ ರೋಗಗಳನ್ನು ಗುಣಪಡಿಸಬಹುದು. ನಾನಾ ವಿಧದ ಮಂತ್ರಗಳಿಂದ ವಿಷವನ್ನು ಹೊರದೂಡಬಹುದು. ಹೀಗೆ ಎಲ್ಲವುದಕ್ಕೂ ಶಾಸ್ತ್ರದಲ್ಲಿ ಹೇಳಿದ ನಿವಾರಣೋಪಾಯವಿದೆ. ಆದರೆ ಮೂರ್ಖನನ್ನು ತಿದ್ದಲು ಯಾವ ಔಷಧವೂ ಇಲ್ಲ.

ವಿವೇಕವನ್ನು ಪರಿತ್ಯಜಿಸಿದವನ ಪತನವು ನೂರಾರು ರೀತಿಯಲ್ಲಿ ಉಂಟಾಗುತ್ತದೆ.

शिरः शर्व स्वर्गात्पशुपतिशिरस्तः क्षितिधरं

महिध्रादुत्तुङ्गादवनिमवनेश्चापि जलधिम् ।

अधोल्धो गङ्गेयं पदमुपगता स्तोकमथवा

विवेकभ्रष्टानां भवति विनिपातः शतमुखः॥[32]

ಅರ್ಥಾತ್ ಗಂಗೆಯು ಶಿವನ ತಲೆಯಮೇಲೆ, ಅಲ್ಲಿಂದ ಬೆಟ್ಟದ ಮೇಲೆ, ಅನಂತರ ಭೂಮಿಯ ಮೇಲೆ, ಭೂಮಿಯಿಂದ ಸಮುದ್ರ ಹೀಗೆ ಕೆಳಗಿನ ಸ್ಥಾನವನ್ನು ಪಡೆದಳು. ಅದೇರೀತಿ ವಿವೇಕವನ್ನು ಕಳೆದುಕೊಂಡ ದಡ್ಡರು ನೂರಾರು ವಿಧದಿಂದ ಅವನತಿಯನ್ನು ಹೊಂದುತ್ತಾರೆ.

ಶರೀರಕ್ಕೆ ಆಭರಣವಿಲ್ಲ. ಆದರೂ ಅದನ್ನು ಸುಸಜ್ಜಿತಗೊಳಿಸಲು ಸುಸಂಸ್ಕೃತ ಮಾತೇ ನಿಜವಾದ ಆಭರಣವಾಗಿದೆ.

31. भर्तृहरि नीतिशतकम्–श्लो–11
32. भर्तृहरि नीतिशतकम्–श्लो–10

केयूराणि न भूषयन्ति पुरुषं हारा न चन्द्रोज्वला

न स्नानं न विलेपनं न कुसुमं नालङ्कृता मूर्धजाः।

वाण्येका समलङ्करोति पुरुषं या संस्कृता धार्यते

क्षीयन्ते खलु भूषणानि सततं वाग्भूषणं भूषणम् ॥[33]

ಮಾನವೀಯ ವ್ಯವಹಾರ ಮತ್ತು ಪ್ರವೃತ್ತಿಗಳು ಹಾಗೂ ಸದಾಚಾರವನ್ನು ಭರ್ತೃಹರಿಯು ಎಷ್ಟು ಸೂಕ್ಷ್ಮ ಹಾಗೂ ವ್ಯಾಪಕ ಅಧ್ಯಯನವನ್ನು ನಡೆಸದ್ದಾನೆಂದರೆ, ಅದರ ತುಲನೆಯನ್ನ ಯಾರಿಂದಲೂ ಮಾಡಲಾಗುವುದಿಲ್ಲ. ಈ ನೀತಿ ತತ್ವಗಳನ್ನು ಕವಿಯು ಬಹಳ ನಿಖರವಾಗಿ ಸಮೀಕರಣಗೊಳಿಸಿ, ತನ್ನ ಜೀವನದಲ್ಲೂ ಆಚರಣೆ ಮಾಡಿದ್ದಾನೆ. ಈ ಕಾರಣದಿಂದಲೇ ಸಂಸ್ಕೃತ ಸಾಹಿತ್ಯದಲ್ಲಿ ಅವನ ನೀತಿ ವಚನಗಳು ವ್ಯಾಪಕವಾಗಿ ಪ್ರಚಾರಗೊಂಡು ಜನಪ್ರಿಯವಾಗಿವೆ. ಶಬ್ದರಚನೆ, ಅಲಂಕಾರ ವಿಧಾನ, ಛಂದಸ್ಸಿನ ರಚನೆ ಇತ್ಯಾದಿ ಎಲ್ಲ ದೃಷ್ಟಿಯಲ್ಲೂ ಈ ಶತಕವು ಪರಿಪುಷ್ಟವಾಗಿದೆ.

೫. वैराग्य शतकम् :- ವೈರಾಗ್ಯಶತಕವು ಒಂದು ಉತ್ಕೃಷ್ಟ ಶೈಲಿಯಲ್ಲಿ ಬರೆದಿರುವ ನೀತಿಕಾವ್ಯವಾಗಿದೆ. ಇದರಲ್ಲಿ ಒಂದು ಒಳ್ಳೆಯ ಶಿಕ್ಷಣದ ಬಗ್ಗೆ ವಿಶೇಷ ಗಮನಹರಿಸಲಾಗಿದೆ. ಮನುಷ್ಯರಲ್ಲಿ ಸಾಧಾರಣವಾಗಿ ದುರ್ಗುಣಗಳನ್ನು ಹೇಗೆ ದೂರಮಾಡುವುದೆಂಬುದು.

चला लक्षीश्चलाः प्राणाश्चलं जीवित यौवनम् ।

चलाचले च संसारे धर्म ऐकोहि निश्चलः॥[34]

ಇದರಲ್ಲಿ ಶಿವಭಕ್ತಿ ಬಗ್ಗೆ ಒತ್ತನ್ನು ಕೊಟ್ಟು ಸಂನ್ಯಾಸವನ್ನು ಪ್ರಶಂಸೆ ಮಾಡಲಾಗಿದೆ.

೬. मोहमुद्गरः –

ಈ ರಚನೆಯು ಶಂಕರಾಚಾರ್ಯರಿಂದ ರಚಿತವಾಗಿದೆಯೆಂದು ತಿಳಿದುಬಂದಿದೆ. ಇದರಲ್ಲಿ ಸಾಂಸಾರಿಕ ವಿಚಾರಗಳನ್ನು ಬಿಟ್ಟು ಆಧ್ಯಾತ್ಮಿಕ ಮಾಯಾಜಾಲದಲ್ಲಿ ಮುಕ್ತರಾಗುವುದರ ಬಗ್ಗೆ ಉಪದೇಶ ನೀಡಲಾಗಿದೆ. ಇವುಗಳಲ್ಲಿ ನೈತಿಕ ಹಾಗೂ ದಾರ್ಶನಿಕ ಭಾವನೆಗಳಿವೆ.

---

33. भर्तृहरि नीतिशतकम् –19.
34. भर्तृहरि वैराग्य शतकम्–श्लो–96.

7. कुट्टनीमत :–

ಕಾಶ್ಮೀರದ ರಾಜ ಜಯಪೀಡನ ಆಶ್ರಯದಲ್ಲಿ ಮಂತ್ರಿ ಹಾಗೂ ಕವಿಯಾಗಿದ್ದ ದಾಮೋದರ ಗುಪ್ತನಿಂದ ಇದು ರಚಿಸಲ್ಪಟ್ಟಿದೆ. ಇದು ಸಮಾಜಕ್ಕೆ ಶಿಕ್ಷಣ ನೀಡುವ ಒಂದು ನೀತಿಕಾವ್ಯವಾಗಿದೆ. ಇದನ್ನು ವೇಶ್ಯೆಯರ ಶಿಕ್ಷಣಗ್ರಂಥ ಎಂದೂ ಕರೆಯಲ್ಪಟ್ಟಿದೆ. ಆರ್ಯಾ ಛಂದಸ್ಸಿನಲ್ಲಿ ನಿಬದ್ಧಗೊಂಡಿರುವ ಈ ಕಾವ್ಯವು ತನ್ನ ಮಧುರತೆ ಹಾಗೂ ಸ್ನಿಗ್ಧತೆಯ ಕಾರಣ ಸಂಸ್ಕೃತ ಸಾಹಿತ್ಯದಲ್ಲಿ ಚಿರಸ್ಮರಣೀಯವಾಗಿದೆ. ಪ್ರಸ್ತುತ ಶ್ಲೋಕದಲ್ಲಿ

परमार्थ कठोरा अपि विषयगतं लोहकं मनुष्यं च ।

चुम्बक पाषाणशिलारूपाजीवाश्च कर्षन्ति ॥[35]

ಅರ್ಥಾತ್ ಈ ಪ್ರಕಾರ ಆಯಸ್ಕಾಂತೀಯ ಕಲ್ಲು ತನ್ನ ಹತ್ತಿರ ಬಂದ ಲೋಹವನ್ನು ತನ್ನೆಡೆಗೆ ಆಕರ್ಷಿಸುವಂತೆ ರೂಪದಿಂದ ಜೀವಿಗಳನ್ನು ತನ್ನೆಡೆಗೆ ಸೆಳೆಯುವ ವೇಶ್ಯೆಯರ ವಿಷಯದಲ್ಲಿ ಆಸಕ್ತ ಮನುಷ್ಯರು ಅನಿವಾರ್ಯವಾಗಿ ರೂಪದಿಂದಲೇ ಎಳೆಯಲ್ಪಡುತ್ತಾರೆ.

೮. सुभाषितरत्नसन्दोह :–

ಜೈನ ಲೇಖಕ ಅಮಿತಗತಿಯು ೯೯೮ರಲ್ಲಿ **"ಸುಭಾಷಿತರತ್ನ ಸಂದೋಹ"**ವನ್ನು ರಚಿಸಿದ್ದಾನೆ. ಇದರಲ್ಲಿ ಮೂವತ್ತೆರಡು ಅಧ್ಯಾಯಗಳಿವೆ. ಇದರಲ್ಲಿ ಜೈನ ಸಾಧುಗಳು, ದೇವತೆಗಳು ಮತ್ತು ಹಿಂದೂಗಳ ವ್ಯವಹಾರಗಳ ಬಗ್ಗೆ ಕಟು ಆಕ್ಷೇಪವಿದೆ.

೯. धर्मपरीक्षा :–

ಇದರ ರಚನೆಯೂ ಅಮಿತಗತಿಯಿಂದ ರಚಿಸಲ್ಪಟ್ಟಿದೆ. ಈ ರಚನೆಯಲ್ಲಿ ಅವನು ಹಿಂದೂ ಧರ್ಮವನ್ನು ಉಪೇಕ್ಷಿಸಿ, ಜೈನ ಧರ್ಮವನ್ನು ಉತ್ಕೃಷ್ಟವೆಂದು ಹೇಳಿದ್ದಾನೆ.

10.कला विलास :–

ಮಹಾಕವಿ ಕ್ಷೇಮೇಂದ್ರ 1050ರಲ್ಲಿ ಆ ಕಾಲದ ಧರ್ಮ ಹಾಗೂ ಸಮಾಜದ ಅನುಶೀಲನೆ ಮಾಡಿ ಈ ನೀತಿಕಾವ್ಯವನ್ನು ರಚಿಸಿದ್ದಾನೆ. ಇದರಲ್ಲಿ 10 ಅಧ್ಯಾಯಗಳಿವೆ. ಕಲಾ ವಿಕಾಸವಲ್ಲದೆ ಕ್ಷೇಮೇಂದ್ರನ ಅನ್ಯ ರಚನೆಗಳು ಈ ಕೆಳಗಿನಂತಿವೆ.

35. कुट्टनीमत श्लोकः

11. दर्पदलन :–

ಕ್ಷೇಮೇಂದ್ರನ ಈ ರಚನೆಯು 596 ಶ್ಲೋಕಗಳಿಂದ ಕೂಡಿದೆ. ಇದರಲ್ಲಿ ಏಳು ಅಧ್ಯಾಯಗಳಿವೆ. ಇದರ ಅಂತರ್ಗತದಲ್ಲಿ ಇವನು ಅಭಿಮಾನದ ನಿಂದನೆಯನ್ನು ಮಾಡಿರುತ್ತಾನೆ. ಇವನ ಅನುಸಾರವಾಗಿ ಈ ಉಚ್ಚಕುಲ, ಧನ, ವಿದ್ಯಾ, ಸೌಂದರ್ಯ, ಸಾಹಸ, ದಾನ ಇವೆಲ್ಲವೂ ತಪಸ್ಯೆಯಿಂದ ಉತ್ಪನ್ನಗೊಳ್ಳುತ್ತವೆ.

सृजति तवदशेषगुणाकरं पुरुषरत्नमूलकरणं भुवः

तदापि तक्षणभंगिंकरोति चेदहह कष्टमपण्डितता विधेः॥[36]

ಇದರಲ್ಲಿ ಏಳು ವಿಚಾರಗಳಿದ್ದು ಇವುಗಳ ಆರಂಭದಲ್ಲಿ ವಿಷಯಾತ್ಮಕ, ಉಪದೇಶಾತ್ಮಕ ಸೂಕ್ತಿ ಹಾಗೂ ಅವುಗಳ ಉಪಯುಕ್ತತೆ ಸ್ಪಷ್ಟಪಡಿಸುತ್ತಾ, ಪ್ರಧಾನಪಾತ್ರದಲ್ಲಿ ನೀತಿಯ ಮಹತ್ವವನ್ನೂ ತಿಳಿಸಲಾಗಿದೆ.

12. चारुचर्या :–

ಇದು ಸದಾಚಾರಕ್ಕೆ ಸಂಬಂಧಿಸಿದ ಶತಕವಾಗಿರುತ್ತದೆ. ಈ ಒಂದು ಮಾಧ್ಯಮದಲ್ಲಿ ಕವಿಯು ಸುಂದರವಾದ ವ್ಯವಹಾರ ನಡೆಸಲು ಮಾನವನಿಗೆ ಅವಶ್ಯಕವಾದ ಕೆಲವು ನೀತಿನಿಯಮಗಳನ್ನು ವರ್ಣನೆ ಮಾಡಿರುತ್ತಾನೆ.

13. चतुर्वर्गसंग्रहः :–

ಇದು ಪುರುಷಾರ್ಥ ಚತುಷ್ಟಯಗಳ ವಿವರಗಳನ್ನು ನೀಡುವ ಒಂದು ಕಾವ್ಯವಾಗಿದೆ. ಇದರಲ್ಲಿ ನಾಲ್ಕು ಪರಿಚ್ಛೇದಗಳಿದ್ದು, ಅವುಗಳಲ್ಲಿ ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷಗಳ ಪ್ರಶಂಸೆಯನ್ನು ವಿವೇಚಿಸಲಾಗಿದೆ.

14. सेव्यसेवकोपदेशः :–

ಕ್ಷೇಮೇಂದ್ರನು ಇದರಲ್ಲಿ ಸೇವಕನ ದೀನತೆ ಹಾಗೂ ಸ್ವಾಮಿಜನರೊಡನೆ ದುರ್ವ್ಯವಹಾರ ಮಾಡುವವರ ಬಗ್ಗೆ ಬಹಳ ರೋಚಕವಾದ ರೀತಿಯಲ್ಲಿ ವರ್ಣನೆ ಮಾಡಿದ್ದಾನೆ. ಇದರಲ್ಲಿ ಅರವತ್ತೊಂದು ಶ್ಲೋಕಗಳಿವೆ. ಅನೇಕ ಛಂದಸ್ಸುಗಳಿಂದ ನಿಬದ್ಧವಾಗಿದ್ದು ಕಾವ್ಯದ ಶೈಲಿಯು ವಿಶಿಷ್ಟವಾಗಿದೆ.

15. समयमातृका :–

ಇದರಲ್ಲಿ ಎಂಟು ಅಧ್ಯಾಯಗಳಿವೆ. ಇದರಲ್ಲಿ ವೇಶ್ಯೆಯರ ಪ್ರಪಂಚದ ವರ್ಣನೆಯಿರುತ್ತದೆ. ಇದರಲ್ಲಿ ವೇಶ್ಯೆಯರ ಜಾಲದಿಂದ ತಪ್ಪಿಸಿಕೊಳ್ಳಲು ಶಿಕ್ಷಣ ನೀಡಲಾಗಿದೆ.

---

36. औ.वि.च,–पृ–5– क्षेमेन्द्रकृत दर्पदलनम्–

16. देशोपदेश :–

ಇದರಲ್ಲಿ ಅಂದರೆ ನರ್ಮಮಾಲಾದಲ್ಲಿ ಕವಿಯು ಹಾಸ್ಯೋಪದೇಶದ ರೂಪದಲ್ಲಿ ನೀತಿಯ ಸ್ಪಷ್ಟ ಉಪದೇಶ ನೀಡಲಾಗಿದೆ. ದೇಶೋಪದೇಶದಲ್ಲಿ ಎಂಟು ಉಪದೇಶಗಳಿವೆ. ಇದರಲ್ಲಿ ಕವಿಯ ಪ್ರಧಾನ ಲಕ್ಷ್ಯವೆಂದರೆ ಹಾಸ್ಯದಿಂದ ಸಂಕೋಚಗೊಂಡು ಯಾವುದೇ ಪುರುಷನು ದೋಷಗಳಿಂದ ಪ್ರವೃತ್ತನಾಗಲಾರ ಎಂಬುದಾಗಿದೆ.

हासेन लज्जितोउत्यन्तं न दोशेशु प्रवर्तते ।

जनस्तदुपकाराय ममायं स्वमुद्यमः ॥[37]

17. नर्ममाला :–

ಇದರಲ್ಲಿ ಮೂರು ಪರಿಚ್ಛೇದಗಳಿವೆ.

18. योगशास्त्र :–

ಜೈನ ಕವಿ ಹೇಮಚಂದ್ರನು ಈ ರಚನೆಯಲ್ಲಿ ಜೈನರ ಕರ್ತವ್ಯಗಳು ಹಾಗೂ ಜೈನ ಸಾಧುಗಳ ಮುಖಾಂತರ ಸಿದ್ಧಾಂತವನ್ನು ತಿಳಿದಿರುವವರು ಅನುಸರಿಸುವ ಕಠೋರ ನಿಯಮಗಳನ್ನು ವರ್ಣಿಸಿದ್ದಾನೆ.

19. मुग्धोपदेश :–

ಕವಿ ಜಲ್ಹಣನು (1130) ಈ ರಚನೆಯಲ್ಲಿ ವೇಶ್ಯೆಯರ ನಡೆಯುತ್ತಿರುವ ಪ್ರಪಂಚದಿಂದ ತಪ್ಪಿಸಿಕೊಳ್ಳುವ ಬಗ್ಗೆ ಶಿಕ್ಷಣ ನೀಡಲಾಗಿದೆ.

20. शान्तिशतक :–

ಶಿಲ್ಹಣ (1205) ನಿಂದ ರಚಿತವಾದ ಈ ಶತಕದಲ್ಲಿ ಮಾನಸಿಕ ಶಾಂತಿ ಪ್ರಾಪ್ತಿಗಾಗಿ ವಿಶೇಷ ಮಹತ್ವವನ್ನು ನೀಡಲಾಗಿದೆ. ಈ ರಚನೆಯಲ್ಲಿ ಭರ್ತೃಹರಿ ವಿರಚಿತ ನೀತಿಶತಕ ಮತ್ತು ವೈರಾಗ್ಯಶತಕದಿಂದ ಪೂರ್ಣ ಪ್ರಭಾವ ಪಡೆದಿರುವಂತಿದೆ ಎಂಬುದು ಸ್ಪಷ್ಟವಾಗಿ ಕಂಡುಬರುತ್ತದೆ.

21. श्रृंगारवैराग्यतरंगिणी :–

ಸೋಮಪ್ರಭನು 1267 ರಲ್ಲಿ ಈ ರಚನೆಯನ್ನು ಮಾಡಿರುತ್ತಾನೆ. ಇದರಲ್ಲಿ ಸ್ತ್ರೀಯರ ಸಂಯೋಗದಿಂದ ಉಂಟಾಗುವ ಹಾನಿಗಳು ಅಥವಾ ವೈರಾಗ್ಯದ ವಿಚಾರಗಳ ಬಗ್ಗೆ ಹೇಳಲಾಗಿದೆ.

37. काश्मीरिकवि क्षेमेन्द्र विरचित देशोपदेशः–प्रथम उपदेशः–श्लो –4.

22. सुभाषित नीवी :–

ವೇದಾಂತ ದೇಶಿಕ (1268–1269) ರಿಂದ ರಚಿತವಾದ ಈ ರಚನೆಯು 145 ಸುಭಾಷಿತ ಶ್ಲೋಕಗಳ ಸಂಗ್ರಹವಾಗಿದೆ.ಈ ರಚನೆಯು ಭರ್ತೃಹರಿಯ ನೀತಿಶತಕದಿಂದ ಪೂರ್ಣ ಪ್ರಭಾವಿತಗೊಂಡಿದೆ. ಇದರ ಜೊತೆಗೆ ಕವಿಯು ವೈರಾಗ್ಯ ಪಂಚಕ ಎಂಬ ಹೆಸರಿನ ರಚನೆಯನ್ನೂ ಮಾಡಿರುತ್ತಾನೆ.

23. दृष्टान्त कलिकाशतम् :–

ಕವಿ ಕುಸುಮದೇವನಿಂದ ರಚಿತವಾದ ಈ ಕಾವ್ಯವು ಅನುಷ್ಟುಪ್ ಛಂದಸ್ಸಿನಲ್ಲಿ ರಚಿತವಾಗಿದೆ. ಬಲ್ಲಭ ದೇವ(1500)ನು ಈ ಕವಿಯ ಬಗ್ಗೆ ಉಲ್ಲೇಖ ಮಾಡಿದ್ದಾನೆ. ಇದರಿಂದ ಕುಸುಮದೇವನ ಕಾಲವು ಈ ಸಮಯದಿಂದ ಪೂರ್ವದ್ದೇ ಎಂದು ಹೇಳಬಹುದು.

24. नीति मंजरी :–

ದ್ಯಾದ್ವಿವೇದನು1492 ರಲ್ಲಿ ನೀತಿಮಂಜರಿ ರಚನೆಯನ್ನು ಮಾಡಿದನು. ಇದರಲ್ಲಿ ವೃದ್ಧ ದೇವತಾ ಮೊದಲಾದ ಪ್ರಾಚೀನ ಗ್ರಂಥಗಳ ಉದಾಹರಣೆಗಳ ಮಾಧ್ಯಮದಲ್ಲಿ ಮೂಲಕ ತಿಳಿಸಲಾಗಿದೆ. ಕೆಲವು ಸ್ಥಳಗಳಲ್ಲಿ ವೇದಮಂತ್ರಗಳ ವ್ಯಾಖ್ಯೆಯನ್ನೂ ನೀಡಲಾಗಿದೆ.

25. भामिनी विलास :–

ಪಂಡಿತರಾಜ ಜಗನ್ನಾಥ(1590–1665)ಇವರಿಂದ ರಚಿತವಾದ ಭಾಮಿನೀವಿಲಾಸದಲ್ಲಿ ಕ್ರಮಶಃ ನಾಲ್ಕು ಭಾಗಗಳಿವೆ. ಅವುಗಳೆಂದರೆ–ಅನ್ಯೋಕ್ತಿ, ಶೃಂಗಾರ, ಕರುಣ ಮತ್ತು ಶಾಂತ. ಇವುಗಳಲ್ಲಿ ಕ್ರಮಶಃ 101,100,19 ಮತ್ತು 32 ಶ್ಲೋಕಗಳಿವೆ. ಅನ್ವರ್ಥ ನಾಮ ಪಂಡಿತರಾಜ ಪಾಂಡಿತ್ಯಕ್ಕೆ ಅಪಾರ ಪ್ರವೀಣನೇ ಹೌದು. ಇವನ ಕಾವ್ಯದಲ್ಲಿ ಸ್ಥಾನಪದ, ಕಾವ್ಯಸೌಂದರ್ಯ, ಅಲಂಕೃತಪದಾವಳಿ, ಭಾವಸೌಂದರ್ಯ, ರಸಪ್ರವೃತ್ತಿ, ಜ್ಞಾನಗರಿಮಾ ಮತ್ತು ಹೃದಯಗ್ರಾಹಿತದ ದರ್ಶನ ಉಂಟಾಗುತ್ತದೆ. ಉದಾ:–

सपदि विलयमेतु राज्यलक्ष्मीरूपरि पतन्त्वथवाकृपाणधाराः।

अपहरतुतरां शिरः कृतान्तो ममतु मतिर्न मनागपैतु धर्मात्॥[38]

ಅಂದರೆ, ರಾಜ್ಯಲಕ್ಷ್ಮಿಯೇ ಹೊರಟು ಹೋದರೂ, ಕತ್ತಿಯ ಹಿಡಿ ಬಿದ್ದು ಹೋದರೂ, ಮೃತ್ಯುವೇ ಬಂದರೂ ಯಾವಾಗಲೂ ಧರ್ಮವನ್ನು ಪರಿತ್ಯಾಗ ಮಾಡುವ ಮನಸ್ಸು ಮಾತ್ರ ಬರಬಾರದು.

38. भामिनीविलासे चतुर्थः शांतो विलासः–श्लो–27.

26. कलि विडम्बन :–

ನೀಲಕಂಠ ದೀಕ್ಷಿತ್(1630)ರು ನಾಲ್ಕು ರಚನೆಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಪ್ರಥಮವಾಗಿ ಕಲಿ ವಿಡಂಬನೆ ಇರುತ್ತದೆ. ಇವುಗಳಲ್ಲಿ ಕಲಿಯುಗದ ವಿಡಂಬನೆಯ ಉತ್ಕೃಷ್ಟ ಚಿತ್ರಣವಿದೆ. ಇದು ಒಂದು ವ್ಯಂಗ್ಯ ಪ್ರಧಾನವಾದ ಕಾವ್ಯವಾಗಿದೆ.

ಹೇಗೆಂದರೆ–

यत्र भार्यागिरो वेदाः यत्र धर्मोऽर्थसाधनम् ।

'यत्र स्वप्रतिभा मौनं तस्मै श्रीकलये नमः ॥[39]

27. सभारन्जनशतक :–

ನೀಲಕಂಠ ದೀಕ್ಷಿತರ ಇದೊಂದು ಅನ್ಯ ಕೃತಿ. ಈ ಶತಕದಲ್ಲಿ ಹೀಗೆ ಹೇಳಲಾಗಿದೆ– "ಯಾವ ಪ್ರಕಾರದ ವಿದ್ವನ್ಮಂಡಳ, ರಾಜ್ಯಸಭೆ, ವ್ಯಕ್ತಿಗಳಿಗೆ ಪ್ರಸನ್ನಗೊಳಿಸುವುದು."

28. शान्ति विलास :–

ಇದು ನೀಲಕಂಠ ದೀಕ್ಷಿತರ ಮೂರನೆಯ ಕೃತಿಯಾಗಿದೆ.ಇದರಲ್ಲಿ ಐವತ್ತೊಂದು ಶ್ಲೋಕಗಳಿವೆ. ಮಂದಾಕಾಂತಾ ಛಂದಸ್ಸಿನಲ್ಲಿ ವಿರಚಿತಗೊಂಡಿವೆ. ಈ ಕಾವ್ಯದಲ್ಲಿ ಭೌತಿಕ ಜೀವನದ ಅನಿತ್ಯತೆಯ ಚಿತ್ರಣವನ್ನು ಬಹಳ ರೋಚಕವಾಗಿ ರೂಪಿಸಲಾಗಿದೆ. ಹಾಗೆಯೇ ಮೋಕ್ಷ ಪ್ರಾಪ್ತಿಗಾಗಿ ಶಿವನಲ್ಲಿ ಪ್ರಾರ್ಥನೆಯನ್ನೂ ಮಾಡಲಾಗಿದೆ.

29. वैराग्य शतक :–

ನೀಲಕಂಠ ದೀಕ್ಷಿತರ ನಾಲ್ಕನೇ ಕೃತಿ ವೈರಾಗ್ಯಶತಕದಲ್ಲಿ ವೈರಾಗ್ಯಪೂರ್ಣ ಜೀವನವನ್ನು ನಡೆಸುವುದರ ಅನೇಕಾನೇಕ ಲಾಭದ ಬಗ್ಗೆ ತಿಳಿಹೇಳಲಾಗುತ್ತದೆ.

30. उपदेश शतकम् :–

ಅಲ್ಮೋಡಾ ನಿವಾಸಿ ಪರ್ವತೀಯ ಕವಿಯು (ಈತನ ಸಮಯ 18ನೇ ಶತಮಾನದ ಉತ್ತರಾರ್ಧ)

---

39. नीलकंठ दीक्षित–कलि विडम्बना।–दुर्जनाः–श्लो –100.

ಉಪದೇಶಶತಕವೆಂಬ ಹೆಸರಿನ ಕಾವ್ಯವನ್ನು ಆರ್ಯಾ ಛಂದಸ್ಸಿನಲ್ಲಿ ರಚಿಸಿದ್ದಾನೆ. ಇದರ ಜನೋಪಯೋಗಿ ಉಪದೇಶ ಸ್ವರೂಪದಲ್ಲಿ 100 ಶ್ಲೋಕಗಳಿವೆ.

೩1. सुभाषित कौस्तभ :-

ವೆಂಕಟಾಧ್ವರಿ(1650)ಯಿಂದ ರಚಿತವಾದ ಈ ಕಾವ್ಯವು ಉಪದೇಶಾತ್ಮಕ ಶೈಲಿಯಲ್ಲಿರುವ ನೀತಿಕಾವ್ಯ.

೩೨. लोकोक्ति मुक्तावली :-

ದಕ್ಷಿಣಾಮೂರ್ತಿ ಎಂಬ ಹೆಸರಿನ ಕವಿಯಿಂದ ರಚಿತವಾದ ಈ ಕಾವ್ಯವು ನಾನಾ ಛಂದಸ್ಸುಗಳಿಂದ ನಿಬದ್ಧಗೊಂಡಿದೆ. ಇದರಲ್ಲಿ 94 ಶ್ಲೋಕಗಳಿವೆ. ಇವುಗಳಲ್ಲಿ ವಿದ್ವತ್ಪ್ರಶಂಸೆ, ದುರ್ಜನ, ತ್ಯಾಗ, ದ್ವೈತ ನಿಂದೆ, ಶಿಕ್ಷಾ ಪದ್ಧತಿ, ವಿಷಾದ ಪದ್ಧತಿ ಹಾಗೂ ಜ್ಞಾನ ಪದ್ಧತಿಯಲ್ಲಿ ವಿಷಯಗಳು ವಿಭಜನೆಗೊಂಡು ವರ್ಣಿಸಲ್ಪಟ್ಟಿವೆ.

ಹೀಗೆ ನೀತಿಕಾವ್ಯಗಳು ಮಾನವನ ಸರ್ವಾಂಗೀಣ ಉನ್ನತಿಗಾಗಿ ಸದುಪದೇಶಗಳನ್ನು ನೀಡುವ ಸದುದ್ದೇಶದಿಂದ ರಚನೆಗೊಂಡು ಸಂಸ್ಕೃತ ಸಾಹಿತ್ಯದ ವಿಶಾಲ ಪ್ರಾಂಗಣದಲ್ಲಿ ನೀತಿಕಾವ್ಯಧಾರೆಯ ಸ್ಥಾನವು ಪವಿತ್ರ ಗಂಗಾನದಿ ಸಮಾನವಾಗಿ ಸಂಸ್ಮರಣೀಯವಾಗಿದೆ. ಈ ಗ್ರಂಥಗಳಲ್ಲಿ ನೀತಿದರ್ಶನ, ವ್ಯವಹಾರಿಕ ಜೀವನ, ರಾಜನೀತಿ, ಯುದ್ಧನೀತಿ ಮುಂತಾದ ನಾನಾವಿಧ ಮಹತ್ವಪೂರ್ಣ ವಿಷಯಗಳ ಬಗ್ಗೆ ಚರ್ಚಿಸಲಾಗಿದೆ. ಈ ಕಾರಣದಿಂದ ಅನ್ಯಕವಿಗಳೂ ಸಹ ಈ ಪ್ರಕಾರದ ಶಿಕ್ಷಾಪ್ರದ ಸೂಕ್ತಿಗಳನ್ನು ಅನೇಕ ಕಾವ್ಯಗಳಲ್ಲಿ ಸಂಕಲನವನ್ನೂ ಮಾಡಿರುತ್ತಾರೆ. ಹೀಗೆ ಸಾಹಿತ್ಯವು ಸಮಾಜದ ದರ್ಪಣವಾಗಿರುತ್ತದೆ. ಬೇರೆಬೇರೆ ಸಾಹಿತ್ಯಕಾರರು ಇದರ ದಾಯಿತ್ವವನ್ನು ಹೊಂದಿದ್ದು, ಅವರುಗಳು ತತ್ಕಾಲೀನ ಸಮಾಜೋಪಯೋಗಿ ರಚನೆಗಳ ಮಾಧ್ಯಮದಲ್ಲಿ ಮಾನವಮಾತ್ರದ ಹಿತವನ್ನು ಬಯಸಿದ್ದಾರೆ. ಈ ಕಾರ್ಯವನ್ನು ಬಹಳ ದೊಡ್ಡ ಸರಳ-ಸಹಜತೆಯಿಂದ ಕವಿಗಳು ಕೈಗೊಂಡು ಬೋಧನಾತ್ಮಕವಾಗಿ, ಉಪದೇಶಾತ್ಮಕವಾಗಿ, ಶಿಕ್ಷಣಪ್ರದವಾಗಿ ನೀತಿಕಾವ್ಯಗಳನ್ನು ರಚಿಸಿದ್ದಾರೆ. ಅವರ ನೀತಿಬೋಧನೆ ಅಂದು, ಇಂದು, ಮುಂದು, ಎಂದೆಂದೂ ಪ್ರಸ್ತುತ ಹಾಗೂ ನಿತ್ಯವಿನೂತನ.



## ಅಧ್ಯಾಯ–1–3. ಸಂಸ್ಕೃತ ಸಾಹಿತ್ಯದಲ್ಲಿ ನೀತಿಬೋಧಕ ಕಥಾ ಸಾಹಿತ್ಯ– ಪಂಚತಂತ್ರ ನೀತಿ ಕಥೆಗಳು – ಇದರ ವಿಶಿಷ್ಟ ಲಕ್ಷಣಗಳು

ಭಾರತೀಯ ಕಥಾಸಾಹಿತ್ಯದಲ್ಲಿ ನೀತಿಗೆ ಅತ್ಯುನ್ನತ ಸ್ಥಾನವಿದೆ. ಮೃಗಪಕ್ಷಿಗಳಿಗೆ ಮಾನವನ ಗುಣಗಳನ್ನು ಆರೋಪಿಸಿ, ಆ ಮೂಲಕ ಕಥೆಯನ್ನು ಚಿತ್ತರಿಸುವ ತಂತ್ರ ಇವುಗಳದ್ದಾಗಿದೆ. ಈ ಕಾರಣದಿಂದಲೇ ಇಂತಹ ಕಥೆಗಳಿಗೆ **"ಶ್ವಾಪದಾಖ್ಯಾನ"** ಎಂಬ ಹೆಸರನ್ನೂ ನೀಡಲಾಗಿದೆ. ಮತ್ತೊಂದು ಮುಖ್ಯ ವಿಚಾರವೆಂದರೆ, ಜೀವಿಯ ಸದ್ಗುಣ, ದುರ್ಗುಣಗಳು ಅದರ ಕೃತ್ಯವನ್ನವಲಂಭಿಸಿವೆ. ಜನ್ಮಾಂತರ ವಾದವೇ ಇದರ ಅಡಿಗಲ್ಲು. ಇವು ಒಂದು ಬಗೆಯ ಕಲ್ಪಿತ ಕಥೆಗಳು. "ಈ ಕಲ್ಪಿತಕಥೆಗಳೆಲ್ಲ ಮಾನವನ ರಾಜಕೀಯ ಮತ್ತು ದೈನಂದಿನ ನಿತ್ಯಜೀವನ ಕ್ಷೇತ್ರಕ್ಕೆ ಸಂಬಂಧಪಟ್ಟಂತಹವು. ಇವುಗಳು ಸಾಮಾನ್ಯವಾಗಿ ರಾಜಕುಮಾರರಿಗಾಗಿಯೇ ರಚಿತವಾದಂತಿವೆ. ಜೀವನದ ಅವಗುಣಗಳಾದ–ದುರಾಸೆ, ಡಂಭಾಚಾರ, ವಂಚನೆ, ಮೋಸಗಾರಿಕೆ, ಕೃತಜ್ಞತೆ ಇವುಗಳು ಬಹಳ ತೀಕ್ಷ್ಣವಾಗಿ ಖಂಡಿಸಲ್ಪಟ್ಟು ದಯಾಪರತೆ, ಪೂಜ್ಯತೆ, ಕರ್ತವ್ಯ ನಿಷ್ಠೆ, ರಾಜನಿಷ್ಠೆ, ಪತಿಪತ್ನಿಯರ ಪ್ರೇಮ, ಆಸಕ್ತಿ, ಅನುರಾಗಗಳು ಶ್ಲಾಘಿತವಾಗಿವೆ. ಈ ಕಥೆಗಳಲ್ಲೆಲ್ಲ ಸರಳ ಹಾಸ್ಯವೂ, ಕಟುವ್ಯಂಗ್ಯವೂ ಸ್ಫುಟವಾಗಿ ಪ್ರದರ್ಶಿತವಾಗಿವೆ. ಈ ರೀತಿಯ ಕಥೆಗಳಿಗೆ ಅತ್ಯುತ್ತಮ ನಿದರ್ಶನವೆಂದರೆ **"ಪಂಚತಂತ್ರ"** ಮತ್ತು **"ಹಿತೋಪದೇಶ"**ಗಳು.[40] " ಇಲ್ಲೊಂದು ಸುಂದರವಾದ ಶ್ಲೋಕವು ಪಾಠಕನ ಒಳ್ಳೆಯ ಗುಣಗಳನ್ನು ಹೀಗೆ ಹೇಳುತ್ತದೆ:–

माधुर्यमक्षरव्यक्तिः पदच्छेदस्तु सुस्वरः ।
धैर्यं लयसमर्थं च षडेते पाठकागुणाः ॥[41]

ಇಂಪು, ಅಕ್ಷರಸ್ಫುಟತೆ, ಪದಚ್ಛೇದ, ಸರಿಯಾದ ಸ್ವರ, ಧೈರ್ಯ, ಲಯಯುಕ್ತವಾಗಿ ಹೇಳುವುದು– ಇವು ಆರು ಪಾಠಕನ ಒಳ್ಳೆಯ ಗುಣಗಳು. ಇದು ಪಂಚತಂತ್ರ ಪಾಠಕನ ಗುಣಗಳೂ ಹೌದು. ನೀತಿಕಥೆಗಳ ನಿರೂಪಣೆ ಎಷ್ಟು ಸೊಗಸಾಗಿದೆ ಎಂದರೆ, ಅದರ, ಇಂಪು, ಅಕ್ಷರಸ್ಫುಟತೆ ಸ್ವರ, ಶೃತಿ ಮುಂತಾದವುಗಳು ಬಹಳ ಉತ್ತಮ ಸಂಯೋಜನೆಯಿಂದ ಕೂಡಿರುವುದಾಗಿದ್ದು ಕೇಳುಗರಿಗೆ ಹೃದಯಂಗಮವಾಗಿರುತ್ತದೆ. ವಿಷ್ಣುಶರ್ಮರ ಪಂಚತಂತ್ರ ನೀತಿಕಥೆಗಳ ನಿರೂಪಣಾ ಶೈಲಿಯೂ ಇದೇ ಮಾದರಿಯಲ್ಲಿ ಕೇಳುಗರಿಗೆ ಮನೋಜ್ಞವಾಗಿರುತ್ತದೆ.

---

40. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮ ವಿರಚಿತಮ್ ಪಂಚತಂತ್ರಮ್, (1993), ಭೂಮಿಕಾ–ಪು.7,8. ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ.221001.
41. **ಪಾಣಿನೀಯ ಶಿಕ್ಷಾ,** 33–55, ಸುಭಾಷಿತಮಂಜರೀ, ಕವಿ, ಕಾವ್ಯ ಪ್ರಶಂಸೆ–ಶ್ಲೋ–29, ಪು–10. ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು.(2001)

ಪಂಚತಂತ್ರ ನೀತಿಕಥೆಗಳು ಮೊದಲ ಬಾರಿಗೆ ರೂಪತಾಳಿರುವ ಲೋಕಪ್ರಿಯ ಕಥಾ ಸಂವಿಧಾನ. ಕುತೂಹಲವನ್ನು ಕೆರಳಿಸಿ ಮನೋರಂಜನೆಯನ್ನು ಒದಗಿಸುವುದಷ್ಟೇ ಕಥೆಯ ಗುರಿಯಲ್ಲ. ನೀತಿ, ಆಚಾರ, ಧರ್ಮಾದಿಗಳ ಬೋಧನೆಯೂ ಪಂಚತಂತ್ರಾಕಾರನ ಆಶಯವಾಗಿದೆ. ಅಂದರೆ ಕಥಾಮಾಧ್ಯಮವು ನೀತಿಬೋಧೆಗೆ ಉತ್ತಮ ಸಾಧನ ಎಂಬುದನ್ನು ಪಂಚತಂತ್ರವು ಸ್ಪಷ್ಟಪಡಿಸಿದೆ. ಪಂಚತಂತ್ರದ ಅನ್ವರ್ಥನಾಮವು ಐದುತಂತ್ರ (ಪ್ರಕರಣ)ಗಳಲ್ಲಿ ವಿಭಕ್ತವಾಗಿದೆ. 1. **ಮಿತ್ರಭೇದ 2. ಮಿತ್ರಸಂಪ್ರಾಪ್ತಿ 3. ಕಾಕೋಲೂಕೀಯ 4. ಲಬ್ಧಪ್ರಣಾಶ 5. ಅಪರೀಕ್ಷಿತಕಾರಕ**.

"पंचानाम् तंत्राणाम् समाहारः" ಹಾಗೂ "पंचतंत्राणि यस्मिन् समाह्रीरेते तत्" ಎಂದು ನಿಷ್ಪತ್ತಿಯನ್ನು ಹೊಂದಿರುವ ಪಂಚತಂತ್ರದ ಪ್ರತ್ಯೇಕ ತಂತ್ರಗಳೂ ಕೂಡ ಅನ್ವರ್ಥನಾಮಗಳಾಗಿವೆ. ಇದರ ಮೊದಲ ಪರಿಷ್ಕರಣವನ್ನು ಜೈನ ವಿದ್ವಾಂಸರಾದ ಪೂರ್ಣ ಭದ್ರಸೂರಿಯು 1,335 ಡಿಸೆಂಬರ್‌ನಲ್ಲಿ ಮಾಡಿರುವುದು ಈ ಶ್ಲೋಕದಿಂದ ಪ್ರಮಾಣಿತವಾಗುತ್ತದೆ.

श्री सोममन्त्रिवचनेन विशीर्णवर्णमालोक्य शास्त्रमखिलं खलु पञ्चतन्त्रम् ।
श्रीपूर्णभद्रगुरुणा गुरुणादरेण संशोधितं नृपतिरीतिविवेचनाय ॥
प्रत्यक्षरं, प्रतिपदं, प्रतिवाक्यं, प्रतिकथं, प्रतिश्लोकम्।
श्रीपूर्णभद्रसूरिर्विशोधयामास शास्त्रमिदम्॥[42]

ಪಂಚತಂತ್ರದ ಮೂಲಕ ಮಾನವನು ಜೀವನದಲ್ಲಿ ಹೇಗೆ ಯಶಸ್ಸನ್ನು ಕಂಡು ಯೋಗ್ಯ ಮನುಷ್ಯ ಆಗಬಹುದು, ರಾಜನೀತಿನಿಪುಣ ಆಗಬಹುದು ಎಂಬ ಬಗ್ಗೆ ಮನೋಜ್ಞವಾಗಿ, ಕ್ರಮಬದ್ಧವಾಗಿ, ಆಸಕ್ತಿಯಿಂದ ಕಲಿಯುವಂತೆ ವಿಷ್ಣುಶರ್ಮರು ತಮ್ಮ ಭೋದನಾ ವಿಧಾನದಲ್ಲಿ ಆಕರ್ಷಕ ಕಥೆಗಳು, ಉದಾಹರಣೆಗಳ ಮೂಲಕ ಕೇಳುಗರ ಮನಸ್ಸನ್ನು ಅರಿತು ಮನೋವಿಜ್ಞಾನದ ನೈಪುಣ್ಯತೆ ಮೆರೆಸಿದ್ದಾರೆ. ಈ ಅದ್ಭುತ ಪಂಚತಂತ್ರ ಕಥೆಗಳು ಮಕ್ಕಳಲ್ಲಂತೂ ಪ್ರಾಯೋಗಿಕ ಬುದ್ಧಿವಂತಿಕೆ, ನಾಯಕತ್ವದ ಕೌಶಲ್ಯ, ನೈತಿಕಮೌಲ್ಯಗಳು ಹಾಗೂ ಜ್ಞಾನ ಸಂಪತ್ತನ್ನು ಅಭಿವೃದ್ಧಿಗೊಳಿಸುತ್ತದೆ. ಇದೆಲ್ಲವೂ ಮನೋವಿಜ್ಞಾನದ ಪ್ರಜ್ವಲಿತ ಲಕ್ಷಣಗಳು. ಅದರಲ್ಲೂ ಶೈಕ್ಷಣಿಕ ಮನೋವಿಜ್ಞಾನದ ಮಜಲುಗಳು. ಪ್ರತ್ಯೇಕ ಕಥೆಗಳ ಶೀರ್ಷಿಕೆಯಲ್ಲಿ ಒಂದು ಶ್ಲೋಕವನ್ನು ರಚಿಸಲಾಗಿದ್ದು, ಅದರಲ್ಲಿ ಆ ಕಥೆಯಲ್ಲಿ ಹೊರಬರುವ ಶಿಕ್ಷಣವನ್ನು, ಅದರ ಮುಖ್ಯ ಪಾತ್ರದ ಹೆಸರನ್ನೂ ನಿರೂಪಿಸಲಾಗಿರುತ್ತದೆ.

---

42. **Shastri Guru Prasad,** ಶ್ರೀವಿಷ್ಣುಶರ್ಮವಿರಚಿತಮ್ ಪಂಚತಂತ್ರಮ್, ಪ್ರಸ್ತಾವನೆ–ಪು–9, ಪಂಚತಂತ್ರದ ಜೀರ್ಣೋದ್ಧಾರ, ಶ್ಲೋಕ–1 ಮತ್ತು2, ಚೌಕಾಂಬ ಸುರಭಾರತೀ ಪ್ರಕಾಶನ, ಓರಿಯಂಟಲ್ ಪಬ್ಲಿಶರ್ಸ & ಡಿಸ್ಟ್ರಿಬ್ಯೂಟರ್ಸ್, ಏ.37/117, ಗೋಪಾಲ್ ಮಂದಿರ್ ಲೇನ್, ಪಿ.ಬಿ.ನಂ–1129, ವಾರಣಾಸಿ–221001(2018)

ಉದಾಹರಣೆಗೆ:–

यस्य बुद्धिर्बलं तस्य निर्बुद्धिस्तु कुतो बलम् ।

वने सिंहो मदोन्मत्तः शशकेन निपातितः ॥[43]

ಅಂದರೆ– ಬುದ್ಧಿವಂತರಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಏಕೆಂದರೆ ಬುದ್ಧಿವಂತನೇ ನಿಜವಾದ ಬಲಶಾಲಿಯೇ ಹೊರತು ಬುದ್ಧಿಯಿಲ್ಲದವನು ಎಂದೂ ಬಲಶಾಲಿ ಆಗಲಾರ. ಉದಾಹರಣೆಗೆ ಮದೋನ್ಮತ್ತನಾದ ಸಿಂಹವೊಂದು ಮೊಲದಿಂದ ಹೀಗೆ ಕೊಲ್ಲಲ್ಪಟ್ಟಿತು. ಪಂಚತಂತ್ರ ಕಥಾ ಮಾಧ್ಯಮದಲ್ಲಿ ಕವಿಯು ಅನೇಕ ಸಿದ್ಧಾಂತ ವಚನಗಳನ್ನು ಪ್ರಸ್ತುತಪಡಿಸಿ, ಅವುಗಳಲ್ಲಿ ನೈತಿಕ, ಧಾರ್ಮಿಕ, ರಾಜನೈತಿಕ ಜೀವನದ ಸಾಮಾನ್ಯ ನಿಯಮಗಳನ್ನು ಹಿಡಿದಿಟ್ಟಿರುತ್ತಾನೆ.

ಕಥಾಮಾಧ್ಯಮವು ನೀತಿ ಬೋಧೆಗೆ ಉತ್ತಮ ಸಾಧನ ಎಂಬುದನ್ನು ಪಂಚತಂತ್ರವು ಸ್ಪಷ್ಟಪಡಿಸಿದೆ. ತತ್ವ ಪ್ರತಿಪಾದಕರೂ, ಪ್ರಚಾರಕರೂ ಕಥೆಗಳನ್ನು ಯಶಸ್ವಿಯಾಗಿ ಬಳಸಿಕೊಂಡಿದ್ದಾರೆ. ಈ ಕೃತಿರತ್ನವು ಪಶುಪಕ್ಷಿಗಳ ಕಥೆಗಳ ಮೂಲಕ ಕೋಮಲಮತಿಗಳಾದ ಅರಸುಕುಮಾರರಿಗೆ ಉತ್ತಮ ರಾಜಕೀಯ ಶಿಕ್ಷಣವನ್ನು ನೀಡುತ್ತದೆ. ಪಶುಪಕ್ಷಿಗಳಾದರೂ ಅವು ಮಾನವರಿಗಿಂತ ಮಿಗಿಲಾಗಿ ವರ್ತಿಸಿ ನಿತ್ಯ ಜೀವನದ ವ್ಯವಹಾರ ಕೌಶಲ್ಯ ಮತ್ತು ಸದಾಚಾರಗಳನ್ನು ಮನಮುಟ್ಟಿಸುವ ರೀತಿಯು ಅತ್ಯಾಕರ್ಷಕವಾಗಿದೆ. ಕರಟಕದಮನಕರು, ಪಿಂಗಳಕ ಮತ್ತು ಸಂಜೀವಕರ ಗಾಢ ಮೈತ್ರಿಯನ್ನು ಮುರಿಯುತ್ತವೆ. ಕಪೋತ ರಾಜನು ಆತ್ಮ ರಕ್ಷಣೆಯನ್ನು ಕಡೆಗಣಿಸಿ ವ್ಯಾಧನ ಬಲೆಯಿಂದ ಸಂಗಡಿಗರನ್ನು ಕಾಪಾಡುತ್ತಾನೆ. ಕಾಗೆಗಳು ಚಾತುರ್ಯದಿಂದ ಪ್ರಬಲ ಶತ್ರುವಾದ ಗೂಬೆಯ ನೆಲೆಯನ್ನು ಸುಡುತ್ತವೆ. ಹೆಂಡತಿಯ ಪ್ರೇರಣೆಯಿಂದ ಕೊಲ್ಲಲು ಯೋಜಿಸಿದ ಮೊಸಳೆಯಿಂದ ಕಪಿಯು ತನ್ನನ್ನು ಕಾಪಾಡಿ ಕೊಳ್ಳುತ್ತದೆ. ಕಥಾಸಂವಿಧಾನದಲ್ಲಿ ಪಂಚತಂತ್ರಾಕಾರನ ಕೈ ಪಳುಗಿದೆ. ಎಲ್ಲಿಯೂ ಜಾಡು ತಪ್ಪಿಲ್ಲ. ಬರಡಾಗಿಲ್ಲ. ಪದ್ಯಗಳೆಲ್ಲಾ ನೀತಿಯಿಂದ ತುಂಬಿ ಮನೋರಂಜಕವಾಗಿ, ಕಂಠಪಾಠ ಯೋಗ್ಯವಾಗಿ ಹಾಗೂ ಉಪದೇಶಾತ್ಮಕವಾಗಿ ರೂಪುಗೊಂಡಿವೆ. ಉದಾಹರಣೆಗೆ:–

न विश्वसेदविश्वस्ते विश्वते नातिविश्वसेत्।

विश्वासाद्भयमुत्पन्नं मूलान्यपि निकृन्तति ॥[44]

---

43. **ಸುಧಾಕರ ಮಾಲವೀಯ,** ವಿಷ್ಣುಶರ್ಮವಿರಚಿತ ಪಂಚತಂತ್ರಂ, ಮಿತ್ರಭೇದ– ಶ್ಲೋ.238. ಪು–158,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ 221001.

44. **ಸುಧಾಕರ ಮಾಲವೀಯ,** ವಿಷ್ಣುಶರ್ಮವಿರಚಿತ ಪಂಚತಂತ್ರಮ್–ಲಬ್ಧಪ್ರಣಾಶ–ಶ್ಲೋಕ 14,ಪು–630(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಅಂದರೆ, "ವಿಶ್ವಾಸವನ್ನು ಬೆಳೆಸಲು ಯೋಗ್ಯನಲ್ಲದವನಲ್ಲಿ ವಿಶ್ವಾಸವನ್ನಿಡಬಾರದು. ಹಾಗೆಯೇ ವಿಶ್ವಾಸ ಬೆಳೆಸಲು ಯೋಗ್ಯನಾಗಿದ್ದವನಲ್ಲೂ ಅತಿಯಾದ ವಿಶ್ವಾಸವನ್ನು ಬೆಳೆಸಬಾರದು. ಏಕೆಂದರೆ ವಿಶ್ವಾಸದ ಕಾರಣದಿಂದ ಉತ್ಪನ್ನವಾದ ಭಯವು ಮನುಷ್ಯನ ಮೂಲವನ್ನೇ ಕಡಿದು ಹಾಕುವುದು. ಇಂದು ನನಗೆ ಪುನರ್ಜನ್ಮ ಇದ್ದಂತೆ". ಎಂದು ವಾನರನು ಮೊಸಳೆಗೆ ಹೇಳಿದ ಮಾತು. ಮಿತ್ರಸಂಪ್ರಾಪ್ತಿ-ವರ್ತಕ ಪುತ್ರನ ಕಥೆಯಲ್ಲಿ ಬಂದಿರುವ ಈ ಪದ್ಯವು ರಾಜಕುಮಾರರಿಗೆ ಶಿಕ್ಷಣ ನೀಡುವ ಕವಿಯ ಉದ್ದೇಶವನ್ನು ಸುಂದರವಾಗಿ ಧ್ವನಿಸುತ್ತದೆ.

कोऽतिभारः समर्थानां किं दूरं व्यवसायिनाम् ।

को विदेशः सुविद्यानां कः परः प्रियवादिनाम् ॥[45]

ಸಮರ್ಥರಿಗೆ ಯಾವುದುತಾನೇ ಭಾರ? ವ್ಯವಸಾಯ ಮಾಡುವವರಿಗೆ ಯಾವುದು ತಾನೇ ದೂರ? ವಿದ್ಯಾವಂತರಿಗೆ ವಿದೇಶವುಂಟೇ? ಪ್ರಿಯ ಮಾತನಾಡುವವರಿಗೆ ಶತ್ರುಗಳುಂಟೇ? "ಓದು ಒಕ್ಕಾಲು, ಬುದ್ಧಿ ಮುಕ್ಕಾಲು" ಎಂಬ ನಾಣ್ಣುಡಿಯಂತೆ ವಿದ್ಯೆಗಿಂತ ಬುದ್ಧಿ ಮುಖ್ಯ ಎಂಬ ವಿಚಾರವನ್ನು ಲೋಭದಿಂದ ಕೂಡಿದ ಚಕ್ರಧರನ ಕಥೆಯಲ್ಲಿ ಮೂರನೆಯ ಬ್ರಾಹ್ಮಣನು ಎಷ್ಟು ಸೊಗಸಾದ ಉಕ್ತಿಯನ್ನು ಹೇಳಿದ್ದಾನೆ:-

वरं बुद्धिर्न सा विद्या विद्याया बुद्धिरुत्तमा ।

बुद्धिहीना विनश्यन्ति यथा ते सिंहकारकाः ॥[46]

ಅಂದರೆ, ಬುದ್ಧಿಯೇ ಶ್ರೇಷ್ಠ, ವಿದ್ಯೆಯಲ್ಲ. ವಿದ್ಯೆಗಿಂತ ಬುದ್ಧಿಯೇ ಉತ್ತಮ. ಸಿಂಹಕ್ಕೆ ಜೀವವನ್ನು ಕೊಟ್ಟವರಂತೆ ಬುದ್ಧಿಹೀನರು ನಾಶವಾಗುತ್ತಾರೆ. ಪಂಚತಂತ್ರದಲ್ಲಿನ ಭಾಷಾ ಪ್ರಯೋಗವು ಸರಳ, ಸ್ಪಷ್ಟ ಹಾಗೂ ಅಲಂಕಾರಗಳಿಂದ ಕೂಡಿದ್ದು, ಉತ್ತಮ ದೃಷ್ಟಾಂತವು ಸಂದರ್ಭೋಚಿತವಾಗಿದ್ದು, ಓದುಗರಿಗೆ, ಕೇಳುಗರಿಗೆ ಅರ್ಥಪೂರ್ಣ ಜ್ಞಾನವನ್ನು ಒದಗಿಸುತ್ತದೆ. ಉದಾಹರಣೆಗೆ:-

रुपेणाप्रतिमेन यौवनगुणैः श्रेष्ठे कुले जन्मना

कान्त्या श्रीरिव याऽत्र साऽपि विदशां कालक्रमादागता ।

सैरिन्ध्रीति सगर्वितं युवतिभिः साक्षेपमज्ञातया

द्रौपद्या ननु मत्स्यराजभवने घृष्टं न किं चन्दनम् ?॥[47]

---

45. **ಸುಧಾಕರ ಮಾಲವೀಯ,** ಶ್ರೀವಿಷ್ಣುಶರ್ಮವಿರಚಿತಮ್ ಪಂಚತಂತ್ರಮ್, ಮಿತ್ರಸಂಪ್ರಾಪ್ತಿ-ಶ್ಲೋ.57, ಪು.337. ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.(1993)

46. **ಸುಧಾಕರ ಮಾಲವೀಯ,** ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಅಪರೀಕ್ಷಿತಕಾರಕಂ-ಶ್ಲೋ 36, ಪು.734,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

47. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಕಾಕೋಲೂಕೀಯಮ್ ಶ್ಲೋ-227, ಪು.589, (1993)ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಸೊಗಸಾದ ವರ್ಣನೆ- ಶ್ರೀ ಮಾನ್ ಯುಧಿಷ್ಠಿರನು ಕಷ್ಟಕಾಲ ಬಂದಾಗ ಒಂದು ವರ್ಷದ ಕಾಲ ತ್ರಿದಂಡವನ್ನು ಹೊರಲಿಲ್ಲವೇ? ರೂಪವಂತರಾದ, ಬಲವಂತರಾದ, ಕುಂತೀಪುತ್ರರಾದ ನಕುಲ-ಸಹದೇವರನ್ನು ವಿರಾಟ ರಾಜನು ಗೋರಕ್ಷಣೆಗೆ ಕಳಿಸಲಿಲ್ಲವೇ? ಅಪ್ರತಿಮವಾದ, ರೂಪಯೌವನವುಳ್ಳ, ಉತ್ತಮ ಕುಲದಲ್ಲಿ ಹುಟ್ಟಿದ, ಲಕ್ಷ್ಮಿಯಂತೆ ಕಾಂತಿಯನ್ನುಳ್ಳ ದ್ರೌಪದಿಯು, ಕಾಲವಶದಿಂದ ಬಂದ ಆಪತ್ತಿನ ಸಮಯದಲ್ಲಿ ಮತ್ಸ್ಯರಾಜಭವನದಲ್ಲಿರುವ ಯುವತಿಯರ ಗರ್ವದಿಂದ ಹಾಗೂ ಆಕ್ಷೇಪದಿಂದ ಕೂಡಿದ ಆಜ್ಞೆಗಳನ್ನು ಕೇಳುತ್ತಾ, ಸೈರಂಧ್ರೀ ಎಂದು ಕರೆಸಿಕೊಳ್ಳುತ್ತಾ ಗಂಧವನ್ನು ಅರೆಯಲಿಲ್ಲವೇ?

ರಾಜನೀತಿಯನ್ನು, ಕಾಲಪುರುಷನ ಪ್ರಭಾವವನ್ನು ಪರಿಣಾಮಕಾರಿಯಾಗಿ ಚಿತ್ರಿಸಿರುವ ಈ ಶ್ಲೋಕ ಎಷ್ಟು ಸೊಗಸಾಗಿದೆ !

स च नृपतिस्ते सचिवास्ताः प्रमदास्तानि काननवनानि ।

स च ते च ताश्च तानि च कृतान्तदृष्टानि नष्टानि ॥[48]

ಈ ಸಂದರ್ಭದಲ್ಲಿ ಸ್ಥಿರಜೀವಿಯಿಂದ ಮೇಘವರ್ಣನಿಗೆ ರಾಜನೀತಿಯ ಉಪದೇಶ ಎಷ್ಟು ಅರ್ಥಪೂರ್ಣವಾಗಿದೆಯೆಂದರೆ, "ತ್ರಿಲೋಕ ವಿಜಯಿಯಾದ ಮಾಂಧಾತನು ಎಲ್ಲಿಗೆ ಹೋದ? (ಸತ್ಯವ್ರತ) ಭೀಷ್ಮನು ಎಲ್ಲಿಗೆ ಹೋದ? ದೇವತೆಗಳ ರಾಜ ನಹುಷನು ಎಲ್ಲಿಗೆ ಹೋದ? ಉತ್ತಮ ಶಾಸ್ತ್ರ ಕೋವಿದನಾದ ಕೇಶವನು ಎಲ್ಲಿಗೆ ಹೋದ? ಇವರೆಲ್ಲರೂ ರಥ, ಆನೆಗಳೊಂದಿಗೆ ಇಂದ್ರನ ಆಸನವನ್ನೇರುವ ಯೋಗ್ಯರನ್ನಾಗಿ ಮಾಡಿದ್ದು ಮಹಾತ್ಮನಾದ ಕಾಲ ಹಾಗೂ ಕಾಲನೇ ಎಲ್ಲರನ್ನೂ ನಾಶಮಾಡಿದನು. ಅಲ್ಲದೆ ಆ ರಾಜ, ಆ ಸಚಿವರು, ಆ ಸುಂದರ ಸ್ತ್ರೀಯರು, ಆ ವನ-ಉಪವನಗಳು ಎಲ್ಲಿ ಹೋದವು? ಅವೆಲ್ಲವನ್ನೂ ಕಾಲನೇ ಸೃಷ್ಟಿಸಿ, ಕಾಲನೇ ನಷ್ಟ ಮಾಡಿದನು. ಆದ್ದರಿಂದ ಮತ್ತಗಜದ ಕಿವಿಯಂತೆ ಚಂಚಲವಾದ ರಾಜ್ಯಲಕ್ಷ್ಮಿಯನ್ನು ನ್ಯಾಯನಿಷ್ಠೆಯಿಂದ ಕೂಡಿದವನಾಗಿ ಅನುಭವಿಸು."[49]

ಇದನ್ನೆಲ್ಲಾ ಗಮನಿಸಿದರೆ, ವಿಷ್ಣುಶರ್ಮರು ತಮ್ಮ ಪಂಚತಂತ್ರ ಕೃತಿಯಲ್ಲಿ ಸಣ್ಣಸಣ್ಣ, ಸರಳ, ಲಲಿತ ಹಾಗೂ ಪ್ರಚಲಿತ ವ್ಯವಹಾರಿಕ ಭಾಷೆಯನ್ನು ಉಪಯೋಗಿಸುತ್ತಾ ಕೇಳುಗರಿಗೆ ತುಂಬಾ ನಿಕಟವಾಗುತ್ತಾರೆ. ಅಲ್ಲಲ್ಲಿ ಕಲ್ಪನೆಗಳು ಮತ್ತು ಅಲಂಕಾರಗಳ ಸಮಾವೇಷದಿಂದ ಕಾವ್ಯಾತ್ಮಕ ಪ್ರವಾಹವನ್ನೇ ಹರಿಸಿದ್ದಾರೆ.

---

48. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಕಾಕೋಲೂಕೀಯಮ್-ಶ್ಲೋ 256, ಪು.616. (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.
49. **ಭರತ್.ಬಿ.ರಾವ್,** ಪಂಚತಂತ್ರ (ಕನ್ನಡಾನುವಾದ),2018, ಕಾಕೋಲೂಕೀಯ, ಪು.217, ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್ ರಸ್ತೆ. ಬಸವನಗುಡಿ, ಬೆಂಗಳೂರು-560004

ಇಷ್ಟಾದರೂ ಎಲ್ಲೂ ಭಾಷಾ ದೋಷಗಳು ಕಂಡುಬರುವುದಿಲ್ಲ. ಪಂಚತಂತ್ರ ಗ್ರಂಥದಲ್ಲಿ ಸರ್ವತ್ರ ಒಂದು ವ್ಯವಹಾರ ಕುಶಲ ನೀತಿಪಟುವಿನ ವ್ಯಕ್ತಿತ್ವ ವ್ಯಕ್ತಗೊಳ್ಳುತ್ತದೆ. ಗಾದೆಗಳನ್ನು ಕರಾರುವಾಕ್ಕಾಗಿ ಬಳಸಿದ್ದು, ವಿನೋದಪ್ರಿಯತೆ ಹಾಗೂ ವ್ಯಂಗ್ಯಾತ್ಮಕತೆಗೇನೂ ಕೊರತೆಯಿಲ್ಲ.



## ಅಧ್ಯಾಯ-1-4. ಪಂಚತಂತ್ರದ ಕರ್ತೃ-ದೇಶ-ಕಾಲ-ವಿಚಾರ

ಕವಿ, ಕಾಲ, ದೇಶ ಇವುಗಳ ವಿಚಾರದಲ್ಲಿ ಸಂಸ್ಕೃತ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ ಸಮಸ್ಯಗಳೇ ಹೆಚ್ಚು. ಸಾಮಾನ್ಯವಾಗಿ ಸಂಸ್ಕೃತ ಕವಿಗಳ ದೇಶಕಾಲಾದಿಗಳು ಸಂದೇಹಾಸ್ಪದವಾಗಿಯೇ ಇರುತ್ತದೆ. ಅದೂ ಅಲ್ಲದೆ ಸಾಮಾನ್ಯವಾಗಿ ಎಲ್ಲ ಕವಿಗಳೂ ತಮ್ಮತಮ್ಮ ದೇಶ, ಕಾಲ, ಕೃತಿಗಳನ್ನು ಕುರಿತು ಏನನ್ನೂ ಸರಿಯಾಗಿ ಹೇಳಕೊಳ್ಳದಿರುವುದೇ ಇದಕ್ಕೆ ಕಾರಣವಾಗಿರುತ್ತದೆ. ಪ್ರಾಚೀನ ಕೃತಿಗಳ ಒಂದು ಲಕ್ಷಣವೆಂದರೆ ಕೃತಿಗಳನ್ನು ಯಾರು ರಚಿಸಿದರೆಂಬುದರ ಬಗ್ಗೆ ಅನಾಮಧೇಯತೆ. ಆದ್ದರಿಂದ ಕೃತಿಗಳನ್ನು ಯಾರು ಬರೆದರೆಂಬುದೇ ತಿಳಿಯುವಂತಿರುವುದಿಲ್ಲ. ಆದರೆ ಸ್ವಲ್ಪ ಸ್ವಲ್ಪ ಅಂದಾಜಿನ ಮೇಲೆ ಇಂಥಹವರು ಬರೆದಿರಬಹುದು ಅಥವಾ ಕರ್ತೃವಿನ ಕಾಲದೇಶಾದಿಗಳ ವಿಚಾರ ತಿಳಿದಷ್ಟು ಮಾತ್ರ ಪರಿಗಣಿಸಬೇಕಾಗುವುದು. ಈ ವಿಚಾರದಲ್ಲಿ ಪಂಚತಂತ್ರವೂ ಹೊರತಾಗಿಲ್ಲ. ಬೇರೆ ಕವಿಗಳು ತಮ್ಮ ಕಾವ್ಯದಲ್ಲಿ ತಮ್ಮ ಹಿಂದಿನವರ ಅಥವಾ ಸಮಕಾಲೀನರ ಹೆಸರುಗಳನ್ನು ಉಲ್ಲೇಖಿಸಿದ್ದುದರ ಆಧಾರದ ಮೇಲೆ ಅವರ ಬಗೆಗೆ ತಿಳಿಯಬೇಕಾಗುತ್ತದೆ.

ಈ ಆಧಾರಗಳೂ ಕೆಲವೊಮ್ಮೆ ನಂಬಲರ್ಹವಾಗಿರುವುದಿಲ್ಲ. ಪಂಚತಂತ್ರದ ವಿಚಾರದಲ್ಲೂ ಕರ್ತೃವು ಪಠ್ಯದಲ್ಲಿ ಉಲ್ಲೇಖವಾಗಿರುವ "ವಿಷ್ಣುಶರ್ಮರು" ಇರಬಹುದು. ಆ ಕಾಲದಲ್ಲಿ ಅತ್ಯಂತ ಪ್ರತಿಭಾನ್ವಿತ ಕಥೆಗಾರನಾಗಿದ್ದು, ಅದ್ಭುತ ಕಲ್ಪಿತ ರಚನಾ ಕೌಶಲ್ಯವನ್ನು ಹೊಂದಿರುವ ಮೇಧಾವಿ ಹಾಗೂ ರಾಜನೀತಿ ಶಿಕ್ಷಣ ತಜ್ಞ, ಜನಪ್ರಿಯ ನೀತಿಕಥೆಗಾರನಾಗಿದ್ದು ವಿಶೇಷ ಆಸಕ್ತಿ ವಹಿಸಿ, ವಿಶಿಷ್ಟ ರಚನೆ ಮತ್ತು ಚೆನ್ನಾಗಿ ವ್ಯಾಖ್ಯಾನಿಸಿದ ಸೂತ್ರಗ್ರಂಥವು **'ಪಂಚತಂತ್ರ'** ಆಗಿರಬಹುದು.

ಅದೇನೇ ಇರಲಿ, ಶಿಷ್ಯರು ಕೇವಲ ಕೆಲವೇ ಮಾಸಗಳಲ್ಲಿ ಬಹಳ ಬುದ್ಧಿವಂತರಾಗಬೇಕಾದರೆ, ಅವರ ಗುರುಗಳು ಎಂಥಹ ಶಿಕ್ಷಣ ತಜ್ಞರಾಗಿರಬಹುದೆಂಬುದು ಗಮನಿಸಬೇಕಾದ ಅಂಶವಾಗಿದೆ.

स्थानेषु शिष्यनिवहैर्विनियुज्यमाना विद्या गुरुं हि गुणवत्तरमातनोति ।

आदाय शुक्तिषु बलाहकविप्रकीर्णैः रत्नाकरो भवति वारिभिरंबुराशिः ॥[50]

ಅಂದರೆ, ಶಿಷ್ಯರು ಸತ್ಪಾತ್ರದಲ್ಲಿ ಉಪಯೋಗಿಸಿದ ವಿದ್ಯೆಯು ಅವರ ಆಚಾರ್ಯರ ಪಾಂಡಿತ್ಯವನ್ನು ತಿಳಿಸುತ್ತದೆ. ಮೋಡಗಳಿಂದ ಸುರಿದ ನೀರಿನ ಬಿಂದುಗಳನ್ನು ಮುತ್ತಿನಚಿಪ್ಪಿನಲ್ಲಿ ಸಂಗ್ರಹಿಸಿ ಸಮುದ್ರವು ರತ್ನಾಕರವೆನಿಸಿದೆ.

---

50. **ಸುಭಾಷಿತಮಂಜರೀ,** ವಿವೇಕ-ಶ್ಲೋ-121,ಪು-292, ಅನರ್ಘರಾಘವ, 2-9 ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18. (2001)

ಭಾರತದ ಪ್ರಾಚೀನ ಕಥೆಗಳಾದ ಮಹಾಭಾರತ ಮತ್ತು ಭರತಮುನಿಯ ನಾಟ್ಯಶಾಸ್ತ್ರ ರಚನೆಯ ಬಗ್ಗೆ ಇರುವಂತೆಯೇ, ಭಾರತದಲ್ಲಿ ಈ ಸಂಪ್ರದಾಯ ಅಸಾಮಾನ್ಯವೇನಲ್ಲ. ಆದ್ದರಿಂದ ಪಂಚತಂತ್ರವನ್ನು ಅನೇಕ ಕರ್ತೃತ್ವದಿಂದ ಕೂಡಿದುದೆಂದೂ ಹೇಳಬಹುದು.

ಬಹಳ ಹಿಂದಿನಿಂದಲೂ ಮೌಖಿಕ ಸಂಪ್ರದಾಯದಂತೆ ಕಥೆಹೇಳುವುದು ಒಂದು ಪ್ರಮುಖ ಪದ್ಧತಿಯಾಗಿ ಬೆಳೆದು ಬಂದಿದೆ. ಕಥೆಹೇಳುವ ಸಂಪ್ರದಾಯವು ದೂರದ ಹಿಂದಿನ ಪೂರ್ವಸಾಕ್ಷರ ಸಮಾಜದಲ್ಲಿನ ಒಂದು ಸಮುದಾಯಿಕ ಚಟುವಟಿಕೆಯ ಮೂಲವನ್ನು ಹೊಂದಿದೆ. ಪರಂಪರಾನುಗತವಾಗಿ ಯಾವ ಕಥೆಯನ್ನೂ ಅದೇ ಮಾದರಿಯಲ್ಲಿ ಎರಡನೇ ಬಾರಿ ಹೇಳಲಾಗಿಲ್ಲ. ಹೀಗಿರುವುದರಿಂದ ಕಥಾ ಸಂಪ್ರದಾಯದ ಹೆಸರು ಮತ್ತು ಕಾಲವನ್ನು ನಿರ್ದಿಷ್ಟವಾಗಿ ಹೇಳುವುದು ಕಷ್ಟಸಾಧ್ಯವೇ ಸರಿ. ಆದರೆ ಪರಂಪರಾನುಗತವಾಗಿ ಕಥಾಸಾಹಿತ್ಯವು ಕೇಳಿ ಬರುತ್ತಿದೆ. ಪಂಚತಂತ್ರ ನೀತಿಕಥೆಗಳ ಕರ್ತೃವೂ ಒಬ್ಬ ನರೆತ,ನುರಿತ ಪ್ರಾಚೀನ ಸಾಂಪ್ರದಾಯಿಕ ಕಥೆಗಾರನಿರಬಹುದೆಂದು, ಮಹಾಭಾರತದ ಕರ್ತೃ ಎನ್ನಲಾದ ಪೌರಾಣಿಕ ವ್ಯಕ್ತಿ ವ್ಯಾಸನಂತೆ, ನಮಗೆ ಆತನ ಬಗ್ಗೆ ಮಹಾಭಾರತದ ಕರ್ತೃ ಎಂಬುದು ಎಷ್ಟು ತಿಳಿದಿದೆಯೋ, ಅದಕ್ಕಿಂತ ಪಂಚತಂತ್ರದ ಕರ್ತೃವಿನ ಬಗ್ಗೆ ಅಷ್ಟೂ ಸ್ಪಷ್ಟವಿಲ್ಲವೆನ್ನಬಹುದು. ಸಂಪ್ರದಾಯವು ಇಂತಹ ಅಸಾಧಾರಣ ಪಂಚತಂತ್ರ ಕೃತಿಯನ್ನು ರಚಿಸಿರುವ ಕರ್ತೃ **"ವಿಷ್ಣುಶರ್ಮ"** ಎಂದು ಹೇಳುತ್ತದೆ. ಆದರೆ ನಮಗೆ ಇಂಥಹ ಪ್ರತಿಭಾನ್ವಿತ ಲೇಖಕ, ಶಿಕ್ಷಣ ತಜ್ಞ ಪಂಚತಂತ್ರದಲ್ಲಿ ಯೋಜಿಸಿ, ಕಲಾತ್ಮಕವಾಗಿ ಪ್ರದರ್ಶಿಸಿರುವ ಕಥಾನಿರೂಪಣೆಯು ಲೋಕಜ್ಞಾನದ ಉನ್ನತಿಯನ್ನು ಪರಕಾಷ್ಠತೆಯೆಡೆಗೆ ಕೊಂಡೊಯ್ದಿದೆ. ಪ್ರಪಂಚದಾದ್ಯಂತ ಬೇಕಾದಷ್ಟು ಕಥಾನಿರೂಪಕರು ಶತಮಾನಗಳಲ್ಲಿ, ಅನೇಕ ಪರಿಷ್ಕರಣೆಗಳಲ್ಲಿ, ಅನೇಕ ಭಾಷೆಗಳಲ್ಲಿ ಇದೇ ಪಂಚತಂತ್ರವನ್ನು ರಚಿಸಿದ್ದರೂ, ಯಾವುದೂ ವಿಷ್ಣುಶರ್ಮರ ಪ್ರತಿಭೆಗೆ ಸಮಾನ ಇಲ್ಲವೆಂದು ಅಭಿಪ್ರಾಯಪಡಬಹುದು. ಹೇಳುವುದಾದರೆ, ಸಾಹಿತ್ಯದಲ್ಲಿ ಕಥಾನಿರೂಪಣೆಯ ಒಂದು ಪ್ರಕಾರವನ್ನೇ ವಿಷ್ಣುಶರ್ಮರು ಸೃಷ್ಟಿ ಮಾಡಿದ್ದರೆಂದರೆ ಅತಿಶಯೋಕ್ತಿಯೇನಲ್ಲ.[51] ಆದಿಕಾವ್ಯದಲ್ಲಿ ಒಂದು ಮಾತಿದೆ. ಅದರಂತೆ ಏನಾದರೊಂದು ತೀರ್ಮಾನಕ್ಕೆ ಬರಬೇಕಾಗುವುದು. ಅದೇನೆಂದರೆ:–

नातन्त्री वाद्यते वीणा नाचक्रो वर्तते रथः ।

नापतिः सुखमेधेत या स्यादपि शतात्मजा ॥[52]

---

51. **Chandra Rajan,** VISNU SARMA,( English Translation)The Panchatantra, Forward - P- 11,12.,(1993) Penguin Random House, Gurgaon, Haryana 122002.

52. **ಸುಭಾಷಿತಮಂಜರೀ,** ಸಾಮಾನ್ಯ ನೀತಿ, ಶ್ಲೋ–241, ಪು–428, ರಾಮಾಯಣ–ಅಯೋಧ್ಯಾ–39–30,(2001), ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು–18.

ತಂತಿಯಿಲ್ಲದೆ ವೀಣೆ ನುಡಿಯದು. ಚಕ್ರವಿಲ್ಲದೆ ರಥವು ಸಾಗದು. ಹಾಗೆ ನೂರು ಮಕ್ಕಳ ತಾಯಿಯಾದರೂ ಪತಿಯಿಲ್ಲದಿದ್ದರೆ ಸ್ತ್ರೀಯು ಸುಖವಾಗಿ ಇರಲಾರಳು.

ಕೆಲವೊಮ್ಮೆ ವಿಷ್ಣುಶರ್ಮ ಎಂಬ ಹೆಸರು ಅರ್ಥಶಾಸ್ತ್ರ ರಚಿಸಿದ ವಿಷ್ಣುಗುಪ್ತ ಚಾಣಕ್ಯನ ಒಂದು ಹೆಸರು ಎಂಬುದಾಗಿಯೂ ಹೇಳಲ್ಪಟ್ಟಿದೆ. ಆದರೆ ಅರ್ಥಶಾಸ್ತ್ರದ ಕರ್ತೃವೇ ನೀತಿಶಾಸ್ತ್ರವನ್ನೂ ರಚಿಸಿದ್ದಾರೆ ಎಂಬುದಕ್ಕಾಗಲೀ ಅಥವಾ ಅಲ್ಲವೆಂಬುದಕ್ಕಾಗಲೀ ಯಾವುದೇ ಪುರಾವೆಗಳು ಲಭ್ಯವಿರುವುದಿಲ್ಲ. ಹಾಗಾದರೆ ಈ ವಿಷ್ಣುಶರ್ಮರು ಯಾರಿರಬಹುದು? ಪಂಚತಂತ್ರ ಪಠ್ಯದ ಭೂಮಿಕೆಯಲ್ಲಿ ಮಾತ್ರ ಈ ಹೆಸರು ಕಂಡುಬರುತ್ತದೆ. ಇವರು ಒಬ್ಬ ಪ್ರಸಿದ್ಧ ಶಿಕ್ಷಕನಾಗಿದ್ದು, ಮಹಿಲಾರೋಪ್ಯ ನಗರದಲ್ಲಿ ವಾಸಿಸುತ್ತಿದ್ದರು. ಮಹಿಲಾರೋಪ್ಯನಗರವು ಯಾರಿಂದಲೂ ಗುರುತಿಸಲ್ಪಟ್ಟ ನಗರವಲ್ಲ. ಆದರೆ ಎಚ್.ಎಚ್. ವಿಲ್ಸನ್ ಎಂಬುವವರು ಹೇಳಿರುವಂತೆ ಮಯಿಲಾಪುರ, ನವಿಲುನಗರ–ಈಗ ತಮಿಳುನಾಡಿನ ರಾಜಧಾನಿಯ ಒಂದು ಭಾಗವಾಗಿದೆ. ಅವರೇ ಸ್ವತಃ ಅವರ ಬಗ್ಗೆ ತಿಳಿಸಿರುವಂತೆ, ಎಂಭತ್ತು ವರ್ಷದವರಾಗಿದ್ದು, ಯಾವುದೇ ಪ್ರಾಪಂಚಿಕ ಆಸೆ ಆಕಾಂಕ್ಷೆಗಳಿಲ್ಲದೆ, ಒಬ್ಬ ಪರಿಣಾಮಕಾರಿ ಶಿಕ್ಷಕನಾಗಿ, ಮೂವರು ಹಠಮಾರಿ ರಾಜಕುಮಾರರಿಗೆ ಕೇವಲ ಆರು ತಿಂಗಳುಗಳಲ್ಲಿ ಕಥೆ ಹೇಳುವ ಮೂಲಕ ಸುಶಿಕ್ಷಿತರನ್ನಾಗಿ ಮಾಡುವ ಕಾರ್ಯದಲ್ಲಿ ತೊಡಗಿದ್ದರೆಂಬ ಉಲ್ಲೇಖವಿದೆ. ಈ ರಾಜನಂದನರನ್ನು ರಾಜನೀತಿ ನಿಪುಣರೂ, ಬದುಕಿನ ಚತುರರೂ ಆಗುವಂತೆ ಮಾರ್ಗದರ್ಶನ ನೀಡಿದರು. ನಂತರದಲ್ಲಿ ಏನಾಯ್ತೆಂಬುದರ ಬಗ್ಗೆ ಏನೂ ವಿಚಾರಗಳಿಲ್ಲ. ಇಷ್ಟು ವಿಚಾರಗಳು ಪಠ್ಯದಲ್ಲಿಯೇ ಕಂಡು ಬಂದಿರುವುದರಿಂದ ಮಾಹಿತಿ ಲಭ್ಯವಾಗಿದೆ.[53]

वर्णप्रकर्षे सति कर्णिकारं दुनोति निर्गन्धतया स्म चेतः।

प्रायेण सामग्र्यविधौ गुणानां पराङ्मुखी विश्वसृजःप्रवृत्तिः ॥[54]

ಬೆಟ್ಟದಾವರೆಯು ವರ್ಣಮಯವಾಗಿ, ಸುಂದರವಾಗಿ ಕಾಣಿಸಿದರೂ ಸುವಾಸನೆಯಿಲ್ಲವಾದುದರಿಂದ ಮನಸ್ಸಿಗೆ ಬೇಸರವನ್ನುಂಟು ಮಾಡುತ್ತದೆ. ತನ್ನ ಸೃಷ್ಟಿಯಲ್ಲಿ ಬ್ರಹ್ಮನು ಎಲ್ಲಾಪದಾರ್ಥಗಳಲ್ಲಿಯೂ ಯಾವುದಾದರೊಂದು ನ್ಯೂನತೆ ಇಟ್ಟಿರುತ್ತಾನೆ. ಪೂರ್ಣವಾಗಿ ಯಾವುದನ್ನೂ ಮಾಡುವ ಅಭ್ಯಾಸವಿಲ್ಲ. ಈ ಅರಸುಕುಮಾರರಿಗೂ ತಿಳಿಗೇಡಿತನವನ್ನಿಟ್ಟು, ಪ್ರಯೋಜನಕ್ಕೆ ಬಾರದಂತೆ ಮಾಡಿಬಿಟ್ಟಿದ್ದಾನೆ. ಇಂತಹವರನ್ನು

53. **Chandra Rajan**, VISNU SARMA,( English Translation)The Panchatantra, Forward - P- 11. Penguin Random House,India Pvt.Ltd. 7th Floor, Infinity Tower,C, DLF Cyber City,(1993) Gurgaon, Haryana 122002, India.

54. **ಸುಭಾಷಿತಮಂಜರೀ,** ಸಾಮಾನ್ಯ ನೀತಿ, ಶ್ಲೋ–446,ಪು–478,ಕುಮಾರಸಂಭವ.ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು,–18,(2001)

ಪರಿವರ್ತನೆ ಮಾಡಿ, ಉತ್ತಮ ವ್ಯಕ್ತಿತ್ವ ನಿರ್ಮಾಣ ಮಾಡಿ, ಮಾನವ ಜನ್ಮದ ಸಾರ್ಥಕತೆ ಕಾಣುವಂತೆ ಶಿಕ್ಷಣ ಮತ್ತು ಮಾರ್ಗದರ್ಶನ ನೀಡುವ ಜವಾಬ್ದಾರಿಯನ್ನು ವಿಷ್ಣುಶರ್ಮರು ಸಮರ್ಪಕವಾಗಿ ನಿರ್ವಹಿಸಿದ್ದಾರೆ.

ಮತ್ತೊಂದು ಸಾಧ್ಯತೆಯೇನೆಂದರೆ, ಪಂಚತಂತ್ರ ನೀತಿಕಥೆಗಳಲ್ಲಿ ಕಂಡು ಬರುವ ಪಾತ್ರಗಳು ಮಾನವ-ಪ್ರಾಣಿ-ಪಕ್ಷಿಗಳು. ಅವುಗಳ ಲಕ್ಷಣಗಳು ಹೇಗೆ ಸಂದರ್ಭೋಚಿತವಾಗಿ ಕಲ್ಪಿಸಲ್ಪಟ್ಟಿದೆಯೋ ಅದೇ ರೀತಿ ಪಂಚತಂತ್ರ ಕೃತಿಯ ಪೀಠಿಕಾ ಭಾಗದಲ್ಲಿ ವಿಷ್ಣುಶರ್ಮರೂ ಸಹ ಒಂದು ಕಾಲ್ಪನಿಕ ಪಾತ್ರವೇಕಾಗಿರಬಾರದು? ಒಬ್ಬ ಅನಾಮಧೇಯ ನಿರೂಪಕ, ಕಥಾಮುಖದಲ್ಲಿ ಕರ್ತೃವು ವಿಷ್ಣಶರ್ಮನೆಂದೂ, ಅದ್ಭುತ ಕಥೆಗಾರರ ಸಾಲಿನಲ್ಲಿ ಮೊದಲನೆಯವರೆಂದೂ, ಅಮರಶಕ್ತಿ ರಾಜನ ಪುತ್ರರು ಮೊದಲ ಪ್ರೇಕ್ಷಕ ಶಿಷ್ಯರು. ಬಹುಶಃ ವಿಷ್ಣುಶರ್ಮರು ಮೂಲರೂಪ ಕಥೆಗಾರನೆಂದೂ ಕಂಡುಬರುತ್ತದೆ.[55]

ಅದೇನೇ ಇರಲಿ, ಪಂಚತಂತ್ರ ಕೃತಿ ರಚನೆಯು ಸಂಸ್ಕೃತ ಸಾಹಿತ್ಯ ಕ್ಷೇತ್ರದಲ್ಲಿ ಒಂದು ವಿಶಿಷ್ಟವಾದ, ಅಸಾಧಾರಣ, ಅಮೂಲ್ಯ ಕೃತಿರತ್ನವಾಗಿದ್ದು, ಸಾಹಿತ್ಯದ ಒಂದು ಪ್ರಕಾರವಾಗಿರುತ್ತದೆ. ಅಂದಿನಿಂದ ಇಂದಿನವರೆಗೂ, ಎಲ್ಲ ವಯಸ್ಸಿನ ಮಕ್ಕಳಿಗೂ, ದೊಡ್ಡವರಿಗೂ ಆಪ್ಯಾಯಮಾನವಾದ ಮಾರ್ಗದರ್ಶಕ ನೀತಿಕಥಾಗುಚ್ಛ. ಬದುಕಿನ ರೀತಿ, ರಾಜನೀತಿ ಹಾಗೂ ವ್ಯಕ್ತಿತ್ವ ನಿರ್ಮಾಣಕ್ಕೆ ಉತ್ತಮ ಪ್ರೇರಣೆ ನೀಡುವಂತಹ **"ಅನರ್ಘ್ಯ ಕೃತಿ"** ಎನ್ನಬಹುದು. **"ಪಂಚತಂತ್ರದ ಹೆಸರು ಹೇಗೆ ಬಂತು?"** ಎಂದು ಯಾರಾದರೂ ಯೋಚಿಸಿದರೆ, ಪಂಚತಂತ್ರದಲ್ಲಿ ಬರುವ ಎಲ್ಲ ಪಾತ್ರಗಳೂ ವಿಶಿಷ್ಟವಾದವುಗಳು. ಒಂದು ವ್ಯಕ್ತಿತ್ವ ನಿರ್ಮಾಣ ಕಾರ್ಯದಲ್ಲಿ ಪಂಚೇಂದ್ರಿಯಗಳಂತೆ ಶಬ್ದ, ಸ್ಪರ್ಶ, ರಸ, ರೂಪ ಮತ್ತು ಗಂಧವೆಂಬ ಪಂಚ ವಿಷಯಗಳಲ್ಲಿ ವ್ಯಕ್ತಿ ನಿರ್ಮಾಣ ತಂತ್ರವನ್ನು, ಪಂಚಾಮೃತ ಸವಿಯ ಕಥಾಮಾಧ್ಯಮದಲ್ಲಿ ಭೇದ, ಪರೀಕ್ಷೆ, ವಿಶ್ವಾಸ, ವಂಚನೆ, ಮಿತ್ರಕಾರ್ಯ ಮುಂತಾದ ಪಂಚತಂತ್ರಗಳನ್ನು ಸುವ್ಯವಸ್ಥಿತವಾಗಿ ಸಂಯೋಜಿಸಿರುವ ಶಿಕ್ಷಣ ಗ್ರಂಥವಾಗಿದೆ. ಪಂಚತಂತ್ರವು ಕೆಲವು ಮುಖ್ಯ ಸೂಚನೆಗಳನ್ನು ಹಾಗೂ ಜಾಗೃತಿಗಳನ್ನು ತಿಳಿಸುತ್ತಾ ತಪ್ಪುಗಳನ್ನು ತಿದ್ದಿ ತಿಳುವಳಿಕೆ ಬೆಳೆಸುವ ಕಾರ್ಯವನ್ನೂ ಮಾಡುತ್ತದೆ. ಇದು ನೀತಿಶೀಕ್ಷಣದ ಮುಖ್ಯ ಲಕ್ಷಣವಾಗಿದೆ. ಉದಾಹರಣೆಗೆ ಒಂದು ಸೂಕ್ತಿಯನ್ನು ಪರಿಶೀಲಿಸಬಹದು

मानाद्वा यदि वा लोभात् क्रोधाद्वा यदि वा भयात् ।

यो न्यायमन्यथा ब्रूते स याति नरकं नरः ॥[56]

55. **Chandra Rajan,** VISNU SARMA,( English Translation)The Panchatantra,(1993) Forward -P-12,48. (1993)Penguin Random House,India Pvt.Ltd, 7th Floor, Infinity Tower,C,DLF Cyber City,Gurgaon, Haryana 122002.India.

**56. ಸುಧಾಕರಮಾಲವೀಯ,** ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಮ್, ಕಾಕೋಲೂಕೀಯಮ್-ಶ್ಲೋ-108, ಪು.494,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಅಹಂಕಾರದಿಂದಾಗಲೀ, ಆಸೆಯಿಂದಾಗಲೀ, ಕೋಪದಿಂದಾಗಲೀ, ಭಯದಿಂದಾಗಲೀ, ಯಾವ ಮನುಷ್ಯನು ನ್ಯಾಯವನ್ನು ಬೇರೆ ರೀತಿಯಲ್ಲಿ ಹೇಳುವನೋ ಅವನು ನರಕಕ್ಕೆ ಹೋಗುತ್ತಾನೆ.

ಭಾರತೀಯ ಸಾಹಿತ್ಯ ಭಂಡಾರದಲ್ಲಿ ಸಂಸ್ಕೃತ ಪಂಚತಂತ್ರವು ಅತ್ಯಂತ ಮುಖ್ಯವೂ, ಸ್ವಾರಸ್ಯಪೂರ್ಣವೂ ಆದ ಉಪದೇಶಾತ್ಮಕ ಕಲ್ಪಿತ ಕಥೆಗಳ ಸಂಕಲನ. ಇದು ಅತ್ಯಂತ ಜನಪ್ರಿಯವೂ, ಮನೋಜ್ಞವೂ ಮತ್ತು ಮನೋ ವೈಜ್ಞಾನಿಕವೂ ಆಗಿರುವ ನೀತಿಕಥಾ ಗುಚ್ಛ. ಪಂಚತಂತ್ರದಲ್ಲಿ ಭಾರತದ ಎಲ್ಲ ನೀತಿಶಾಸ್ತ್ರಗಳು ಅಂದರೆ, ಮನು, ಶುಕ್ರ ಮತ್ತು ಚಾಣಕ್ಯನ ನೀತಿವಾಕ್ಯಗಳ ಸಾರಾಂಶವನ್ನು ಕಥಾರೂಪದಲ್ಲಿ ಕಾಣ ಬಹುದಾಗಿದೆ. ಇದರಲ್ಲಿ ಅರ್ಥಶಾಸ್ತ್ರದ ಐದು ತಂತ್ರಗಳನ್ನು ರೂಪಿಸಿರುವುದರಿಂದ ಇದಕ್ಕೆ ಪಂಚತಂತ್ರ ಎಂದು ಹೆಸರಾಯಿತೆಂಬ ಅಭಿಪ್ರಾಯವೂ ಇರುತ್ತದೆ. ಮೂರ್ಖನನ್ನೂ ವ್ಯವಹಾರ ಕುಶಲನನ್ನಾಗಿ ಮಾಡುವ ಅಪರೂಪದ ಸಂಸ್ಕೃತ ಭಾಷೆಯ ಕೊಡುಗೆ.[57] ಪಂಚತಂತ್ರ ಈ ಶಬ್ದದ ವ್ಯುತ್ಪತ್ತಿಯು ಸಂಸ್ಕೃತ ಭಾಷೆಯಿಂದಾಗಿದೆ. **'ಪಂಚ'** ಎಂದರೆ **'ಐದು'** **'ತಂತ್ರ'** ಎಂದರೆ **'ತತ್ವ'**. ಪಂಚತಂತ್ರದ ಅರ್ಥ ಐದು ತತ್ವಗಳು ಎಂದಾಯಿತು. ವಿಶಿಷ್ಟವಾದ ಐದು ತಂತ್ರಗಳು ರಾಜನ ಹಾಗೂ ಸಾಮಾನ್ಯ ವ್ಯಕ್ತಿಯ ದೈನಂದಿನ ಜೀವನಕ್ಕಾಗಿ ಮಾರ್ಗದರ್ಶಕ ತತ್ವಗಳಾಗಿವೆ. ಪಂಚತಂತ್ರವು ಸಂಸ್ಕೃತ ಸಾಹಿತ್ಯದಲ್ಲಿ ಒಂದು ಚಂಪೂ ಕಾವ್ಯವಾಗಿದೆ. ಇದು ಗದ್ಯಾತ್ಮಕವಾಗಿಯೇ ರಚಿತವಾಗಿದ್ದರೂ ಮದ್ಯೆ ಮದ್ಯೆ ಬೋಧಪ್ರದವಾದ ಅನೇಕ ಶ್ಲೋಕಗಳನ್ನು ವಿಶಿಷ್ಟ ಉದ್ದೇಶ ದಿಂದ ಸೇರಿಸಲ್ಪಟ್ಟಿದೆ. ಪ್ರಸಿದ್ಧೋಕ್ತಿಗಳು, ಲೋಕೋಕ್ತಿಗಳು, ಮಾರ್ಗದರ್ಶಕ ಸೂಕ್ತಿಗಳು, ಆಧಿಕ್ಯವಾಕ್ಯಗಳು ಮುಂತಾದವುಗಳನ್ನು ಶ್ಲೋಕಗಳ ಮೂಲಕ ಅಭಿವ್ಯಕ್ತಗೊಳಸಲಾಗಿದೆ. ಸಾಮಾನ್ಯವಾಗಿ ಭಾವನೆಗಳನ್ನು ಉತ್ತುಂಗಕ್ಕೇರಿಸುವ ಸಲುವಾಗಿ, ಸಮಯೋಚಿತವಾಗಿ ಇವುಗಳಂದ ಕಥಾ ನಿರೂಪಣೆ ಪರಿಣಾಮಕಾರಿ ಹಾಗೂ ಅರ್ಥಪೂರ್ಣವಾಗಿರುವಂತೆ ಸಂಯೋಜಿಸಲಾಗಿದೆ.[58] ಈ ಒಂದು ಶ್ಲೋಕವು ಅದೆಷ್ಟು ಸರಳ ಹಾಗೂ ಅರ್ಥಪೂರ್ಣವಾಗಿದೆ–

बलीयसा हीनबलो विरोधं न भूतिकामो मनसाऽपि वाञ्छेत् ।

न बध्यतेऽत्यन्तबलो हि यस्मात् व्यक्तं प्रणाशोऽस्ति पतङ्गवृत्तेः ॥[59]

ಏಳಗೆ ಬಯಸುವ ದುರ್ಬಲನೊಬ್ಬನು ಬಲಿಷ್ಠರೊಡನೆ ಮನಸ್ಸಿನಲ್ಲಿಯೂ ವಿರೋಧವನ್ನು ಕಟ್ಟಿಕೊಳ್ಳ ಕೂಡದು. ಏಕೆಂದರೆ ಅತ್ಯಂತ ಬಲಶಾಲಿ ನಾಶಕ್ಕೊಳಗಾಗುವುದಿಲ್ಲ. ಚಿಟ್ಟೆಯನಡತೆಯನ್ನು

57. सत्यकाम विद्यालंकार (अनुवादक), पंचतन्त्र, विष्णुशर्मा,भूमिका–पु.5,6.(2017), राजपाल एन्ड सन्ज,1590,मदरसारोड, काश्मीरी गेट, दिल्ली–110006.

58. **Chandra Rajan** VISNU SARMA The Panchatantra(English Translation) Introduction-pp 53.(1993) Penguin Random House India, Gurgaon Haryana-122002.

59. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಕಾಕೋಲೂಕೀಯಮ್–ಶ್ಲೋ–128, ಪು.512, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ– 221001.

ನಡೆಯುವವನಿಗೇ ವಿನಾಶವು ಸ್ಪಷ್ಟವಾಗಿದೆ.

ಮಂದರಲ್ಲಿ ಮಂದಬುದ್ಧಿಯವರೂ ಸಹ ಈ ಸುಂದರ ಸರಳ ಕಥೆಗಳಲ್ಲಿನ ಗಹನವಾದ ನೀತಿಶಿಕ್ಷಣವನ್ನು ಪಡೆದುಕೊಳ್ಳಲು ಪಂಚತಂತ್ರವು ಮಾರ್ಗದರ್ಶಕವಾಗಿದೆ. ಸುಮಾರು 160 ವರ್ಷಗಳ ಹಿಂದೆಯೇ ಇಂಗ್ಲೆಂಡಿನ ಪ್ರಸಿದ್ಧ ವಿದ್ವಾಂಸರಾದ ಸರ್ ವಿಲಿಯಂ ಜೇಮ್ಸ್ ರವರು ಪಂಚತಂತ್ರ ನೀತಿಕಥೆಗಳನ್ನು ಕುರಿತು ಹೀಗೆ ಹೇಳಿದ್ದಾರೆ. "ಅವರ(ಹಿಂದೂಗಳ) ನೀತಿಶಾಸ್ತ್ರ ಅಥವಾ ನೀತಿ ವ್ಯವಸ್ಥೆಯನ್ನು (ವಿದ್ವಾಂಸ ವಿಷ್ಣುಶರ್ಮರು) ಇನ್ನೂ ಸಂರಕ್ಷಿಸಿ ಬಹಳ ಸುಂದರವಾದ ನೀತಿಕಥಾಗುಚ್ಛದಲ್ಲಿ ಹಿಡಿದಿಟ್ಟಿದ್ದಾರೆ. ಅರ್ಥಾತ್ ಹಿಂದೂಗಳ ನೀತಿಶಾಸ್ತ್ರ  ಇಲ್ಲಿಯತನಕ ಸುರಕ್ಷಿತವಾಗಿದೆ. ಹಾಗೂ ವಿಷ್ಣುಶರ್ಮರ ಪಂಚತಂತ್ರ ಕಥೆಗಳು ಅತ್ಯಂತ ಪ್ರಾಚೀನವಲ್ಲದಿದ್ದರೂ, ಬದುಕಿನ ಚತುರತೆಯ ನೀತಿಪಾಠವನ್ನು, ರಾಜನೀತಿಕ ಮತ್ತು ಧಾರ್ಮಿಕ ಜೀವನದ ಸಾಮಾನ್ಯ ನಿಯಮಗಳನ್ನು ಹಿಡಿದಿಟ್ಟಿವೆಯೆಂದು ಅಭಿಪ್ರಾಯಪಟ್ಟಿರುತ್ತಾರೆ. ಉದಾಹರಣೆಗೆ, ಪಂಚತಂತ್ರದ ಅಂತಿಮ ತಂತ್ರ **"ಅಪರೀಕ್ಷಿತಕಾರಕ"**ದ ಅಂತ್ಯದಲ್ಲಿ ಒಂದು ಸರಳ ಸುಂದರ ಶ್ಲೋಕದ ಮೂಲಕ ಮನುಷ್ಯಮಾತ್ರರಿಗೆ ಎಂಥಹ ವಿಚಾರಪೂರ್ಣ, ಸುಪರೀಕ್ಷಿತ ಕಾರ್ಯಕೈಗೊಳ್ಳಬೇಕೆಂಬ ಬಗ್ಗೆ ಶಿಕ್ಷಣವನ್ನು ನೀಡಲಾಗಿದೆ. ಪಂಚತಂತ್ರದ ಉದ್ದೇಶವೇನೆಂದರೆ, ಅರಸುವಂಶಜಾತರಾದ ರಾಜಕುಮಾರರು ಮಂದಮತಿಗಳಾಗಿ ಸ್ವೇಚ್ಛೆಯ ಬದುಕನ್ನು ನಡೆಸುತ್ತಾ, ವಂಶದ ಕೀರ್ತಿಪತಾಕೆಯನ್ನು ಏರಿಸದೆ ಉನ್ನತಿಗೆ ಬರದಿದ್ದರೆ ಅವರ ಜನ್ಮ ವ್ಯರ್ಥವೇ. ಇವರಿಗೆ ಸೂಕ್ತ ಶಿಕ್ಷಣವನ್ನೂ, ಬದುಕಿನ ಶಿಕ್ಷಣವನ್ನು ಒದಗಿಸಿ, ತಂದೆತಾಯಿಗಳ ಸಂಕಟವನ್ನು ಪರಿಹರಿಸಬೇಕೆಂಬುದು.

किं तेन जातु जातेन मातुर्यौवनहारिणा ।

आरोहति न यः स्वस्य वंशस्याग्रे ध्वजो यथा ॥[60]

ಅಂದರೆ ಧ್ವಜಸ್ಥಂಭದ ಮೇಲಕ್ಕೆ ಪತಾಕೆ ಏರುವಂತೆ, ಯಾವಾತನು ತನ್ನ ವಂಶದ ಮೇಲೇರಿ ಉನ್ನತಿಗೆ ಬರುವುದಿಲ್ಲವೋ ಅವನು ಹುಟ್ಟಿದ್ದರಿಂದ ಏನು ಫಲ? ತಾಯಿಯ ಯೌವನವನ್ನು ಅಪಹರಿಸಿದವನು ಆತ ಎಂದು ಈ ಶ್ಲೋಕವು ಹೇಳುತ್ತದೆ. ಅಮರಶಕ್ತಿ ರಾಜನು ಬಹಳ ವಿಚಾರಮಾಡಿ, ತನ್ನಪುತ್ರರನ್ನು ಪ್ರತಿಭಾವಂತ ಶಿಕ್ಷಕರಾಗಿ ಕೀರ್ತಿ ಪಡೆದಿದ್ದ ಪಂಡಿತ ವಿಷ್ಣುಶರ್ಮರಿಗೆ ಬಹಳ ನಂಬಿಕೆಯಿಂದ ಒಪ್ಪಿಸಿದನು.

---

60. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಮಿತ್ರಭೇದಃ-ಶ್ಲೋ 27, ಪು.26(1993),. ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ- 221001.

मन्त्रे तीर्थे द्विजे देवे दैवज्ञे भेषजे गुरौ ।

यादृशी भावना यस्य सिद्धिर्भवति तादृशी ॥[61]

ಅಂದರೆ, ಮಂತ್ರ, ತೀರ್ಥಕ್ಷೇತ್ರ, ವಿಪ್ರರು, ದೇವರು, ದೈವಜ್ಞರು, ವೈದ್ಯರು ಮತ್ತು ಗುರುಗಳಲ್ಲಿ ನಮ್ಮ ನಂಬಿಕೆ ಹಾಗೂ ವಿಶ್ವಾಸ ಹೇಗೆ ಇರುತ್ತದೆಯೋ, ಅದಕ್ಕನುಗುಣವಾಗಿ ಫಲಪ್ರಾಪ್ತಿಯಾಗುವುದು. "यद्भावं तद्भवति" ಜಗತ್ತಿನಲ್ಲಿ ಲಭ್ಯವಿರುವ ಸಕಲ ಅರ್ಥಶಾಸ್ತ್ರಗಳ ಸಾರವನ್ನು ಪರಿಶೀಲಿಸಿ ವಿಷ್ಣುಶರ್ಮರು ಪಂಚತಂತ್ರಗಳಿಂದ ಕೂಡಿದ ಈ ಸುಮಧುರ ಶಾಸ್ತ್ರವನ್ನು ರಚಿಸಿರುವರು. ಈ ಶಾಸ್ತ್ರವು ಒಂದು ಉತ್ತಮವಾದ ಶೈಕ್ಷಣಿಕ ಮನೋವಿಜ್ಞಾನದ ಲೇಪನದೊಂದಿಗೆ ವ್ಯಕ್ತಿಯಲ್ಲಿನ ವ್ಯಕ್ತಿತ್ವದ ಬೆಳವಣಿಗೆಗೆ ಮಾರ್ಗದರ್ಶಕವಾಗಿದೆ. ಸರಳ ಸುಂದರ ಆಕರ್ಷಕ ಕಥೆಗಳನ್ನು ಹೆಣೆದು, ಎಂಥಹ ಆಸಕ್ತಿಯಿಲ್ಲದ ಅಜ್ಞಾನಿಯಲ್ಲೂ ಕಲಿಕೆಯ ಅಕ್ಕರೆಯನ್ನು ಪ್ರೇರೇಪಿಸುತ್ತದೆ. ಜೊತೆಗೆ ಅನೇಕ ಸೂಕ್ತ, ನೀತಿನಿಯಮಗಳನ್ನು ಬೋಧಿಸುವ ಸುಭಾಷಿತಗಳನ್ನು ಮಧ್ಯೆ ಮಧ್ಯೆ ಸೇರಿಸಿ ಸುಂದರ ವ್ಯಕ್ತಿತ್ವ ನಿರ್ಮಾಣಕ್ಕೆ ಪೂರಕವಾದ ಬುದ್ಧಿವಿಕಸನ ವಿಷಯಗಳನ್ನು ಹಿಡಿದಿಟ್ಟಿದ್ದಾರೆ. ನಾಯಕತ್ವದ ಲಕ್ಷಣ, ರಾಜನೀತಿ ನೈಪುಣ್ಯ, ಪ್ರಜಾಹಿತಧರ್ಮ, ಸಂಘಟನಾ ಚಾತುರ್ಯ, ದೇಶಪ್ರೇಮ, ವಿಚಾರಮಾಡಿ ಕ್ರಮಕೈಗೊಳ್ಳುವ ಲಕ್ಷಣ, ಮೂರ್ಖತನದಿಂದ ಒದಗಬಹುದಾದ ಅನಾಹುತಗಳು, ಶತ್ರುಗಳನ್ನು ಗೆಲ್ಲಲು ಬಳಸಬಹುದಾದ ಸಂಧಿವಿಗ್ರಹ, ಯಾನ, ಆಸನ, ಸಂಶ್ರಯ ಮತ್ತು ದ್ವೈಧೀಭಾವ, ತಂತ್ರಗಳು, ಒಳ್ಳೆಯ ಮಿತ್ರರನ್ನುಗಳಸುವುದರಿಂದ ಏನೂ ವಿಶೇಷ ಸಲಕರಣೆಯಿಲ್ಲದೆಯೇ ಆಪತ್ತಿನಿಂದ ದೂರವಾಗುವ ಬಗೆ ಹೇಗೆ? ಇತ್ಯಾದಿಗಳ ಕುರಿತು ಒಂದು ವಿಶಿಷ್ಟತಂತ್ರಜ್ಞಾನವನ್ನೇ ಅತ್ಯಂತ ನೈಪುಣ್ಯತೆಯಿಂದ ವಿಷ್ಣುಶರ್ಮರು ಪಂಚತಂತ್ರದ ಕಥಾಮಾಧ್ಯಮದ ಮೂಲಕ ಅಳವಡಿಸಿದ್ದಾರೆ.

ಪ್ರೊ. ಮೂರಲೆಯವರು ಪಂಚತಂತ್ರ–ಹಿತೋಪದೇಶದ ಭೂಮಿಕೆಯನ್ನು ಬರೆಯುವ ಸಂದರ್ಭದಲ್ಲಿ ಹೀಗೆ ಬರೆದಿದ್ದಾರೆ. ಇದು ನಮಗೆ ಬಹಳ ದೂರ ಪ್ರದೇಶ ಮತ್ತು ಸಮಯದಿಂದ ಬಂದಿದೆ ಎಂದರೆ "ಒಂದು ಲೌಕಿಕ ಬುದ್ಧಿವಂತಿಕೆಯ ಕೈಪಿಡಿಯಾಗಿ, ಆ ಪ್ರದೇಶದ ಮತ್ತು ಸಮಯದ ಧಾರ್ಮಿಕ ಸ್ಫೂರ್ತಿಯನ್ನು ಇಲ್ಲಿಯವರೆಗೂ ಪ್ರೇರೇಪಿಸುವುದಾಗಿದ್ದು, ಪ್ರತಿ ಪಂಚತಂತ್ರದ ನೀತಿ ಕಥೆಯೂ ಈಗಲೂ ಮಾನವನ ವ್ಯಕ್ತಿತ್ವದ ಬೆಳವಣಿಗೆಗೆ, (ಎರಡು ಮೂರು ಸಾವಿರ ವರ್ಷಗಳ ಹಿಂದೆಯೇ) ಸುಜ್ಞಾನಿಗಳಿಂದ ಉಲ್ಲೇಖಿಸಲ್ಪಟ್ಟ ಪ್ರತಿ ಸೂತ್ರವೂ ಮಾನವನ ಸರ್ವತೋಮುಖ ಬೆಳವಣಿಗೆಗೆ, ಅಂದಿನಿಂದ ಇಂದಿನವರೆಗೂ ಮನೆಯಲ್ಲಾಗಲೀ, ಧಾರ್ಮಿಕ ಪ್ರವಚನ ನೀಡುವ ದೇವಾಲಯದಲ್ಲಾಗಲೀ ಅಥವಾ ಸತ್ಸಂಗದಲ್ಲಾಗಲೀ ಉಲ್ಲೇಖಿಸಿ ಜಾಗೃತಿ ಮೂಡಿಸಬಹುದಾಗಿದೆ.[62]

---

61. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ–ಶ್ಲೋ–98, ಪು–804, (1993), ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

62 **ಸತ್ಯ ಕಾಮ್ ವಿದ್ಯಾಲಂಕಾರ್,** ಅನುವಾದಕರು, ಪಂಚತಂತ್ರ–ವಿಷ್ಣುಶರ್ಮ, ಭೂಮಿಕಾ–ಪು 6.(2017)

औषधार्थसुमन्त्राणां बुद्धेश्चैव महात्मनाम् ।

असाध्यं नास्ति लोकेऽत्र यद्ब्रह्माण्डस्य मध्यगम् ॥[63]

ಔಷಧ, ಹಣ, ಮಂತ್ರಾಲೋಚನೆ, ಮಹಾತ್ಮರ ಬುದ್ಧಿಶಕ್ತಿ ಇವುಗಳಿಗೆ ಅಸಾಧ್ಯವಾದದ್ದು ಈ ಬ್ರಹ್ಮಾಂಡದ ನಡುವೆ ಇಲ್ಲ.

ಪಂಚತಂತ್ರದ ಮೂಲ ಸಂಸ್ಕರಣೆಯು ಬಹುಶಃ ಕ್ರಿ.ಪೂ. ೨೦೦ರಲ್ಲಿಯೇ ಹಿಂದೂ ವಿದ್ವಾಂಸರಾದ ವಿಷ್ಣುಶರ್ಮರಿಂದ ರಚಿತವಾಗಿರುವ ಅಭಿಪ್ರಾಯವಿದೆ. ಇದರಲ್ಲಿ ಬರುವ ಅನೇಕ ಕಥೆಗಳು ಇನ್ನೂ ಹಳೆಯದು ಎಂದೆನಿಸುತ್ತವೆ. ಇದರ ಮೂಲ ಋಗ್ವೇದ ಮತ್ತು ಉಪನಿಷತ್ತುಗಳ ಕಾಲದಿಂದಲೇ (ಕ್ರಿ.ಪೂ. 1500 ರಿಂದ ಕ್ರಿ.ಪೂ. 500) ಎಂದು ಕಂಡುಬರುತ್ತದೆ. ಕೆಲವು ಇಂಡೋ-ಯೂರೋಪಿಯನ್ ವಿದ್ವಾಂಸರು ಅಭಿಪ್ರಾಯ ಪಡುವಂತೆ **"ಪಂಚತಂತ್ರ ನೀತಿಕಥೆಗಳು"** ಉಳಿದಿರುವ ಭಾರತೀಯ ನೀತಿಕಥೆಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದದ್ದು. ಪಂಚತಂತ್ರದ ಬಹು ಪ್ರಾಚೀನತೆಯ ಮತ್ತು ವ್ಯಾಪಕ ವಲಸೆಯ ಕಾರಣ ಇದರ ಪ್ರಭಾವದ ಕುರುಹುಗಳನ್ನು ಸ್ಥಳ ಹಾಗೂ ಕಾಲಾನ್ವಯ ಸಾಹಿತ್ಯದ ಕ್ಷೇತ್ರ ಕಾರ್ಯದಲ್ಲಿ ಪತ್ತೆ ಮಾಡಬಹುದು. ಉದಾಹರಣೆಗೆ **ಅರೇಬಿಯನ್ ನೈಟ್ಸ್, ದಿ ಗೆಸ್ಟಾ ರೋಮನೋರಮ್,** ಬೊಕಾಷಿಯೋನ **ಡೆಕಮಿರಾನ್** ಮತ್ತು ಛಾಸರನ **ಕ್ಯಾಂಟರ್ಬರೀ ಟೇಲ್ಸ್, ದಿ ಫೇಬಲ್ಸ್ ಆಫ್ ಲಾ ಫಾಂಟೇನ್** ಇತ್ಯಾದಿ. **ದಿ ಅರೇಬಿಯನ್ ನೈಟ್ಸ್** ಮತ್ತು **ಲಾ ಫಾಂಟೈನ್ ಫೇಬಲ್ಸ್** ಈ ಎರಡೂ ಕೃತಿಗಳಲ್ಲಿ ಸುಸ್ಪಷ್ಟ ಹಾಗೂ ಗಮನಾರ್ಹ ಪ್ರಭಾವವನ್ನು **ಪಂಚತಂತ್ರ**ವು ಬೀರಿದೆ ಎಂಬುದನ್ನು ಕಾಣಬಹುದು. **ಲಾ ಫಾಂಟೈನ್ ಫೇಬಲ್ಸ್**ನ ಎರಡನೇ ಆವೃತ್ತಿಯ ಮುನ್ನುಡಿಯಲ್ಲಿ **ಲಾ ಫಾಂಟೈನ್** ಸ್ಪಷ್ಟವಾಗಿ ಹೇಳಿರುವಂತೆ ಅದರಲ್ಲಿನ ಹೊಸ ಮೂಲ ವಸ್ತುವಿನ ಹೆಚ್ಚು ಭಾಗವು ಭಾರತೀಯ ಋಷಿ ವಿವೇಚನೆಯುಳ್ಳದ್ದು ಹಾಗೂ ಕೃತಿಯು ಈಸೋಪನ ನೀತಿಕಥೆಗಳಿಗಿಂತ ಹಿಂದಿನದಾಗಿರುತ್ತದೆ. ಯೂರೋಪಿನ ಹಲವಾರು ವಿವಿಧ ಭಾಷೆಗಳ ಆವೃತ್ತಿಗಳಲ್ಲಿ ಸಂಸ್ಕೃತ ಪಂಚತಂತ್ರ ನೀತಿಕಥೆಗಳನ್ನು **"ಬಿದ್ವಾಯ್"** ಎಂದೂ, ಸಂಸ್ಕೃತದಲ್ಲಿ **"ವಿದ್ಯಾಪತಿ"** ಎಂದೂ ಕರೆಯಲ್ಪಟ್ಟಿದೆ. ಇನ್ನೂ ವಿಶೇಷವೆಂದರೆ ಭಾರತೀಯ ಸ್ಥಳ ಮತ್ತು ವ್ಯಕ್ತಿಗಳ ಹೆಸರುಗಳು ಬೇರೆಬೇರೆ ಪ್ರದೇಶ ಹಾಗೂ ಭಾಷೆಯನ್ವಯ ರೂಪಾಂತರಗೊಂಡಿರುತ್ತದೆ. **ಎ.ಬಿ. ಕೀತ್** ಮತ್ತು **ಥಾಮಸ್ ಬಿ. ಇರ್ವಿಂಗ್** ಸೂಚಿಸಿರುವಂತೆ **ಕಲಿಲಾ ವಾ ದಿಮ್ನ** ಆವೃತ್ತಿಯಲ್ಲಿ **'ವಿದ್ಯಾಪತಿ'** ಎಂಬ ಸಂಸ್ಕೃತ ಹೆಸರನ್ನೇ ವಂಚನೆಯಿಂದ ಆರಿಸಿಕೊಳ್ಳಲಾಗಿದೆ.

"It comes to us from a far place and time,as a manual of worldly wisdom, inspired throughout by the religion of its place and time….every fable of Panchatantra can still be applied to human character every maxim quoted from the wise men of two or three thousand years ago when parted from the local accidents of form, might find its time for being quoted now in church or at home."Rajpal &Sons,1590, Madarasa Road, Kashmiri Gate,Delhi-110006

೬೩. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಮಿತ್ರಭೇದಃ-ಶ್ಲೋ-219, ಪು-132,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಆದರೂ **"ವಾಜಪೇಯಿ"** ಪದದ ವಿಚಿತ್ರ ಭಾಷಾಂತರವಾಗಿದೆ. ಇದು ಒಂದು ಕುಟುಂಬದ ಉಪನಾಮ ಅಥವಾ ಹೆಸರು. ಇದರ ಆಧುನೀಕೃತ ಹೆಸರೇ **ಬಜಪಾಯ್** ಎಂಬುದು. ವಾಜಪೇಯಿ ಯಾಗವನ್ನು ಕೈಗೊಳ್ಳುವ ಬ್ರಾಹ್ಮಣ ಕುಟುಂಬದ ಗೌರವಾನ್ವಿತ ಶೀರ್ಷಿಕೆಯೂ ಹೌದು. ಪಂಚತಂತ್ರವು ದೇಶದ ಆಂತರಿಕ ಜನಪ್ರಿಯತೆ ಯನ್ನು ಸಮಾನ ಇಲ್ಲದೆ ಶತಮಾನಗಳಲ್ಲಿ, ಅನೇಕ ಪುನರಾವರ್ತನೆ ಪಡೆದು ಸಂಸ್ಕೃತಭಾಷಾ ಆವೃತ್ತಿಯಲ್ಲಿ, ಭಾಷಾಂತರಗಳಲ್ಲಿ ಬಹಳ ಪ್ರಸಿದ್ಧಿಯನ್ನು ಪಡೆದಿದೆಯೆಂದು ಭಾರತೀಯ ಭಾಷೆಗಳು ಸೂಚಿಸುತ್ತವೆ.[64] ಪಂಚತಂತ್ರವು ಭಾರತೀಯರು ಅರಿತಿರುವ ವಿಜ್ಞಾನದ ಒಂದು ಭಾಗವಾಗಿದೆ. ಅದೇ ನೀತಿಶಾಸ್ತ್ರ. ಇದನ್ನು ಸಂಸ್ಕೃತದಲ್ಲಿ ಸನ್ನಡತೆಯ ಬದುಕಿನ ನೀತಿಯನ್ನು ಬೋಧಿಸುವ (ಜಾಗೃತಗೊಳಿಸುವ) ಪುಸ್ತಕ.

एकम् हन्यान्न वा हन्यात् इत्यादिषुर्मुक्तो धनुष्मता ।

बुद्धिर्बुद्धिमता सृष्टा हन्ति राष्ट्रं सनायकम् ॥[65]

ಈ ಗ್ರಂಥವು ಮಾನವನು ಹೇಗೆ ನಂಬಲು ಯೋಗ್ಯರಾದ ಹಾಗೂ ಪ್ರಾಮಾಣಿಕರಾದ ಸ್ನೇಹಿತರನ್ನು ಆಯ್ಕೆ ಮಾಡಿಕೊಳ್ಳಬಹುದು. ಸಂಕಷ್ಟ ಅಥವಾ ತೊಂದರೆಗಳನ್ನು ಎದುರಿಸುವ ಹಾಗೂ ಬಹಳ ಬುದ್ಧಿವಂತಿಕೆಯಿಂದ ಪರಿಹಾರವನ್ನು ಕಂಡುಕೊಳ್ಳಬಹುದು, ಎಂಬ ತಿಳುವಳಿಕೆಯನ್ನು ನೀಡುತ್ತದೆ. ವಂಚನೆ, ಮೋಸ, ತಟವಟಗಳು ಇತ್ಯಾದಿಗಳಿಂದ ಕೂಡಿರುವ ಈ ಪ್ರಪಂಚದಲ್ಲಿ ಶಾಂತಿ ಮತ್ತು ಹೊಂದಾಣಿಕೆಯಿಂದ ಬದುಕುವ ಕಲೆಯನ್ನು ಬೋಧಿಸಲು ಪ್ರಯತ್ನಿಸುತ್ತದೆ. ಉದಾಹರಣೆಗೆ–

अम्भसा भिद्यते सेतुस्तथा मन्त्रोऽप्यरक्षितः ।

पैशुन्याद्भिद्यते स्नेहो भिद्यते वाग्भिरातुरः ॥[66]

ಬಹಳ ನೀರಿನಿಂದ ಕಟ್ಟೆ ಒಡೆದು ಹೋಗುವುದು; ಗುಟ್ಟುಪಡಿಸದೆ ಇದ್ದರೆ ಆಲೋಚನೆ ಹೊರಗೆ ಬೀಳುವುದು; ಚಾಡಿಯಿಂದ ಸ್ನೇಹವು ನಶಿಸುವುದು; ಮಾತುಗಳಿಗೆ ಹೆದರಿದವನು ಕೆಟ್ಟು ಹೋಗುವನು. ಆದಕಾರಣ ಅಧೈರ್ಯದಿಂದ ತ್ವರೆಪಟ್ಟರೆ ಕೆಲಸ ಕೆಟ್ಟು ಹೋದೀತು. ಧೈರ್ಯವನ್ನವಲಂಬಿಸಿ ನಿಧಾನವಾಗಿ ವಿಚಾರಿಸಬೇಕು.

ವಿಷ್ಣುಶರ್ಮರ ಕಥೆಹೇಳುವ ಕಲೆ ಹೇಗಿದೆಯೆಂದರೆ, ಒಂದು ಗಂಭೀರ ತತ್ವಶಾಸ್ತ್ರಕ್ಕೆ ಮಧುರವಾದ

---

64. **Chandra Rajan,** VISNU SARMA,( English Translation)The Panchatantra, Forward - P-20. (1993) Penguin Random House India Pvt.Ltd,7th Floor, Infinity Tower,C,DLF Cyber City,, Gurgaon, Haryana 122002.India.

65. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್–ಮಿತ್ರಭೇದಃ–ಶ್ಲೋ–215, ಪು.127,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

66. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ–ಶ್ಲೋ–111, ಪು–58,(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಅಲಂಕಾರ ಕೊಟ್ಟು, ಕೇಳುಗರಲ್ಲಿ ಶ್ರದ್ಧೆ ಹಾಗೂ ಕಲಿಕಾ ಪ್ರೇರಣೆಯನ್ನು ಪ್ರೋತ್ಸಾಹಿಸುವಂತಿದೆ. ಕಥೆಯೊಳಗೆ ಕಥೆಗಳನ್ನು ಹೆಣೆದು, ಕಥೆಯ ಚೌಕಟ್ಟಿಗೆ ಒಂದು ಒಳ್ಳೆಯ ಬದುಕಿನ ನೀತಿಯನ್ನು ಲೇಪಿಸಿ, ಕೇಳುಗರು ಬಹಳ ಕುತೂಹಲದಿಂದ ಉತ್ತರ ಭಾಗಗಳನ್ನು ತಿಳಿಯಲು ತವಕಿಸುವಂತೆ ಮಾಡಿದ್ದಾರೆ. ಹೀಗೆಯೇ ಇದು ಒಂದು ತಂತ್ರದಿಂದ ಮತ್ತೊಂದು ತಂತ್ರದೆಡೆಗೆ ಕೇಳುಗರನ್ನು, ಓದುಗರನ್ನು ತಡೆರಹಿತವಾಗಿ ಮುನ್ನುಗ್ಗುವಂತೆ ಪ್ರೋತ್ಸಾಹಿಸಿ ಪ್ರೇರೇಪಿಸುತ್ತದೆ. ಒಂದು ನೀತಿಕಥೆಯು ಮತ್ತೊಂದನ್ನು ಅನುಸರಿಸಿ ಆಯಾ ಸಂದರ್ಭಕ್ಕೆ ತಕ್ಕಂತೆ ವ್ಯಕ್ತಿಗಳು, ಪ್ರಾಣಿಗಳು, ಸ್ಥಳ ಅಥವಾ ಪ್ರದೇಶಗಳನ್ನು ಹಾಗೂ ಆಯಾ ಗುಣಲಕ್ಷಣಗಳಿಗೆ ಅಂದರೆ ಪ್ರೀತಿ, ದ್ವೇಷ, ಅನುಕಂಪ, ಸ್ವಾರ್ಥ, ಧೈರ್ಯ, ಬುದ್ಧಿವಂತಿಕೆ, ದಡ್ಡತನ, ಸಣ್ಣತನ, ವಿಶಾಲ ಮನಸ್ಸು ಮುಂತಾದ ಸ್ವಭಾವಗಳನ್ನು ಸಂಯೋಜಿಸಿ ಕಥೆಯಲ್ಲಿ ಹೆಚ್ಚಿನ ಶಿಕ್ಷಣವನ್ನು ವಿಷ್ಣುಶರ್ಮರು ಒದಗಿಸಿದ್ದಾರೆ. ಮೊದಲು ಶಿಷ್ಯರನ್ನು ಶ್ರದ್ಧೆಯಿಂದ ಕೇಳುಗರನ್ನಾಗಿ, ಕಲಿಕೆಯಲ್ಲಿ ಆಸಕ್ತರನ್ನಾಗಿ, ರಾಜವಂಶಜಾತರಾದ್ದರಿಂದ ರಾಜ್ಯಭಾರ ಹಾಗೂ ಪ್ರಜಾ ಸೇವಾಸಕ್ತರನ್ನಾಗಿಸಿ ಹಂತಹಂತವಾಗಿ ಸೂಕ್ತ ಪಠ್ಯಕ್ರಮವನ್ನು ರಚಿಸಿ ರಾಜನೀತಿ ಶಿಕ್ಷಣವನ್ನು ಸರಳವಾಗಿ ಹಾಗೂ ಸೂಕ್ಷ್ಮವಾಗಿ ಬೋಧನೆ ಮಾಡಿದರು. ಭಾಗವತದಲ್ಲಿ ಹೀಗೊಂದು ಮಾತು ಸಮಂಜಸವಾಗಿರುತ್ತದೆ.

श्रद्धधानाय भक्ताया विनीतायानसूयवे ।

भूतेषु कृतमैत्राय शुश्रूषाभिरताय च ॥[67]

ಶ್ರದ್ಧೆಯಿಂದ ಕೂಡಿರುವವನಿಗೆ, ಭಕ್ತನಿಗೆ, ವಿನೀತನಿಗೆ, ಹೊಟ್ಟೆಕಿಚ್ಚಿಲ್ಲದವನಿಗೆ, ಎಲ್ಲಾ ಪ್ರಾಣಿಗಳಲ್ಲಿಯೂ ಸ್ನೇಹದಿಂದಿರುವವನಿಗೆ, ಸೇವೆಯಲ್ಲಿ ಅಥವಾ ಕೇಳುವುದರಲ್ಲಿ ಇಚ್ಛೆಯುಳ್ಳವನಿಗೆ ಜ್ಞಾನಾಮೃತದ ಉಪದೇಶವನ್ನು ನೀಡಬೇಕು. ಮಾನವನ ಸರ್ವತೋಮುಖ ಬೆಳವಣಿಗೆಗೆ ಸೂಕ್ತವಾದ ನೀತಿಬೋಧೆಯನ್ನು ಅಳವಡಿಸಿ, ವರ್ತನೆಗಳು –ಅವುಗಳ ಪರಿವರ್ತನೆ, ಕ್ರಮವಾಗಿ ಯೋಚಿಸುವ ವಿಧಾನ, ನೀತಿನಿಯಮಗಳ ಪಾಲನೆ, ಶಿಸ್ತು ಸಂಯಮದಿಂದ ಉತ್ತಮ ವ್ಯಕ್ತಿತ್ವನಿರ್ಮಾಣ ಇತ್ಯಾದಿಗಳನ್ನು ಕುರಿತು ಪಂಚತಂತ್ರ ನೀತಿಕಥೆಗಳನ್ನು ಅಚ್ಚುಕಟ್ಟಾಗಿ ವಿಷ್ಣುಶರ್ಮರು ನಿರೂಪಿಸಿ, ವ್ಯಕ್ತಿತ್ವ ವಿಕಸನ ಕಲೆಯ ಬೈಬಲ್ನಂತೆ ರಚಿಸಿದ್ದಾರೆ. ಪಂಚತಂತ್ರ ನಿಜಕ್ಕೂ ಒಂದು ಅಪರೂಪದ ಕೃತಿರತ್ನವು. ಇದರ ವಿಶೇಷತೆ ಎಂದರೆ, ತತ್ವ ಶಾಸ್ತ್ರ, ಮನೋವಿಜ್ಞಾನ, ರಾಜನೀತಿ, ಸಂಗೀತ, ಖಗೋಳಶಾಸ್ತ್ರ, ಮಾನವೀಯ ಸಂಬಂಧ ಇತ್ಯಾದಿಗಳನ್ನು ಒಂದೇ ಪುಸ್ತಕದಲ್ಲಿ ವಿಧಿವತ್ತಾಗಿ ಅಡಕಗೊಳಿಸಿ, ಅಷ್ಟೇ ಸರಳ ಹಾಗೂ ಸೊಗಸಾದ ಶೈಲಿಯಲ್ಲಿ ವಿವರಿಸಿ ವಿಶ್ಲೇಷಿಸಲಾಗಿದೆ. ವಿಷ್ಣುಶರ್ಮರು ಹೆಚ್ಚು ಹೆಚ್ಚು ಜ್ಞಾನವನ್ನೊದಗಿಸಿ, ಮಂದಮತಿಗಳಾದ ರಾಜಕುಮಾರರಲ್ಲಿ

67. **ಸುಭಾಷಿತಮಂಜರೀ,** ಸಾಮಾನ್ಯ ನೀತಿ –ಶ್ಲೋ–389, ಪು–463, ಭಾಗವತ, 3–32–41(2001).
ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು–18

ಒಳ್ಳೆಯ ವ್ಯಕ್ತಿತ್ವ ನಿರ್ಮಾಣ ಮಾಡಬೇಕೆಂದೇ ಈ ಅದ್ಭುತ ಸಂಯೋಜನೆಯನ್ನು ಸಂಶೋಧನಾತ್ಮಕವಾಗಿ ಅನುಗೊಳಿಸಿರುವಂತೆ ಕಂಡುಬರುತ್ತದೆ.[68] ಇದು ಕೇವಲ ಆ ರಾಜಕುಮಾರರನ್ನಷ್ಟೇ ಅಲ್ಲದೆ, ಸುಮಾರು ಕಳೆದ 2200 ವರ್ಷಗಳಿಂದಲೂ ಈ ವಿಶಿಷ್ಟವಾದ ಪಂಚತಂತ್ರ ನೀತಿಕಥೆಗಳನ್ನು ಕೇಳುತ್ತಾ ಹಾಗೂ ಓದುತ್ತಾ ಬಂದಿರುವ ಲಕ್ಷಾಂತರ ವ್ಯಕ್ತಿಗಳು ಹೆಚ್ಚಿನ ಜ್ಞಾನ ಪಡೆದಿರುವುದರಲ್ಲಿ ಯಾವುದೇ ಸಂಶಯವಿಲ್ಲ. ಹಾಗೆಯೇ ಇಂದಿಗೂ ಪಂಚತಂತ್ರ ನೀತಿಕಥೆಗಳು ಮಾನವನಿಗೆ ಉತ್ತಮ ನೀತಿಶಿಕ್ಷಣ, ವರ್ತನಾ ಕಲೆ ಹಾಗೂ ವ್ಯಕ್ತಿತ್ವ ನಿರ್ಮಾಣ ಕಾರ್ಯದಲ್ಲಿ ಅತ್ಯಂತ ಪ್ರಸ್ತುತವಾಗಿದೆ.

ಇದರ ವಿಶಿಷ್ಟತೆ, ಜನಪ್ರಿಯತೆ ಅಳೆಯಲಾಗದ್ದು. ಈ ಗ್ರಂಥದ ಮೂಲ ಉದ್ದೇಶ ಕೇವಲ ಮಕ್ಕಳನ್ನು ಸನ್ನಡತೆಯಹಾದಿಯಲ್ಲಿ ಕೊಂಡೊಯ್ಯುವುದಷ್ಟೇ ಅಲ್ಲ, ದೊಡ್ಡವರೂ ಇದನ್ನು ಸೂಕ್ಷ್ಮವಾಗಿ ಅಭ್ಯಸಿಸಿದರೆ, ಸುಂದರ ವ್ಯಕ್ತಿತ್ವ ರೂಪಿಸಿಕೊಂಡು, ಬದುಕನ್ನು ಹಸನುಗೊಳಿಸಿಕೊಂಡು ಸಾರ್ಥಕಪಡಿಸಿಕೊಳ್ಳಬಹುದು. ಪಂಚತಂತ್ರ ಕಥೆಗಳಲ್ಲಿ ಕಂಡುಬರುವ ಪ್ರತಿಯೊಂದು ಸಂದರ್ಭಗಳು ಪ್ರಸಂಗಗಳು ಬಹಳ ಕ್ರಮಬದ್ಧ ವಾಗಿದ್ದು, ಕರಾರುವಾಕ್ಕಾಗಿ ಮಾನವನ ಸನ್ನಡತೆಗೆಬೇಕಾದ ನೀತಿಶಿಕ್ಷಣವನ್ನು ದೊರಕಿಸಿಕೊಡುತ್ತವೆ. ಒಂದು ಉತ್ತಮ ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ಮಾರ್ಗದರ್ಶೀ ಸೂತ್ರಗಳನ್ನು ಪಂಚತಂತ್ರವು ಕ್ರಮಬದ್ಧವಾಗಿ ಕಲ್ಪಿಸಿಕೊಟ್ಟಿದೆ.

वनेऽपि सिंहा मृगमांसभक्ष्या बुभुक्षिता नैव तृणं चरन्ति ।

एवं कुलीना व्यसनाभिभूता न नीतिमार्गं परिलङ्घयन्ति ॥[69]

ಪ್ರಾಣಿಗಳ ಮಾಂಸವನ್ನು ತಿನ್ನುವ ಅಭ್ಯಾಸವುಳ್ಳ ಸಿಂಹಗಳು ಕಾಡಿನಲ್ಲಿ ಹಸಿವಾದಾಗಲೂ ಹುಲ್ಲನ್ನು ತಿನ್ನುವುದಿಲ್ಲ. ಹಾಗೆಯೇ ಒಳ್ಳೆಯವಂಶದಲ್ಲಿ ಹುಟ್ಟಿದವರು ಕಷ್ಟಗಳಗೋಸ್ಕರವಾದರೂ ನೀತಿಯ ಮಾರ್ಗವನ್ನೆಂದೂ ಮೀರುವುದಿಲ್ಲ. ಹೀಗಾಗಿ ರಾಜಕುಮಾರರಿಗೆ ನೀತಿಪಾಠವೇ ಸೂಕ್ತವೆಂದು, ಅದರಲ್ಲೂ ಕಥಾಮಾಧ್ಯಮ ಮತ್ತೂ ಉತ್ತಮವೆಂದು ವಿಷ್ಣುಶರ್ಮರು ನಿರ್ಧರಿಸಿ ಅದಕ್ಕೆ ತಕ್ಕಂತೆ ನೀತಿಕಥಾಗುಚ್ಛವನ್ನು ಸಮರ್ಪಕವಾಗಿ ಸಂಯೋಜಿಸಿದ್ದಾರೆ.

ಪಂಚತಂತ್ರ ನೀತಿಕಥೆಗಳು ವಿಶ್ವದ ಮೂವತ್ತಕ್ಕೂ ಹೆಚ್ಚು ಭಾಷೆಗಳಿಗೆ ಭಾಷಾಂತರಗೊಂಡಿದೆ.

---

68. **ಸುಧಾಕರ್ ಮಾಲವೀಯ,** (ಅನುವಾದಕರು), ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಭೂಮಿಕಾ–ಪು.10.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
69. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಲಬ್ಧಪ್ರಣಾಶಮ್–ಶ್ಲೋ–71, ಪು–,692,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ವಿಷ್ಣುಶರ್ಮರ ಮೂಲ ಕಥೆಯನ್ನು ಆಯಾ ದೇಶ, ವಾತಾವರಣ, ಜನಜೀವನಕ್ಕೆ ತಕ್ಕಂತೆ ಕೆಲವು ಹೆಚ್ಚಿನ ವಿವರಗಳಿಂದ ಅಲಂಕರಿಸಿ ಹೆಸರುಗಳನ್ನೂ ಬದಲಿಸಿ ಪ್ರಕಟಿಸಿರುವ ಬಹಳಷ್ಟು ಪರಿಷ್ಕರಣೆಗಳಿವೆ. ಆದರೆ ಅವುಗಳ ನೀತಿ ಸನ್ನಡತೆಯ ಬದುಕಿನ ಸೂತ್ರಗಳು, ವ್ಯಕ್ತಿತ್ವ ವಿಕಸನದ ಮಾರ್ಗದರ್ಶನಗಳು ಮಾತ್ರ ಒಂದೇ ಆಗಿರುತ್ತವೆ. ಪಂಚತಂತ್ರವು ಒಂದು ಜ್ಞಾನದ ಚಿಲುಮೆ. ಇದರಲ್ಲಿ ನಿರಂತರವಾಗಿ ಜ್ಞಾನದ ಬುಗ್ಗೆಯು ಹೊಸ ಹೊಸ ಚಿಂತನೆಗಳನ್ನು ಹೊರಹೊಮ್ಮಿಸುತ್ತಿರುತ್ತದೆ. ಹೀಗಿರುವುದರಿಂದಲೇ ಬೈಬಲನ್ನು ಬಿಟ್ಟರೆ ಪ್ರಪಂಚದಲ್ಲೇ ಅತ್ಯಂತ ಹೆಚ್ಚು ಪ್ರಕಟಣೆಗಳನ್ನು ಕಂಡಿರುವ ಜನಪ್ರಿಯ ಗ್ರಂಥವೆಂದರೆ ಅದು ಪಂಚತಂತ್ರವೆ. ವಿಶ್ವದ ಐವತ್ತಕ್ಕೂ ಹೆಚ್ಚು ಭಾಷೆಗಳಲ್ಲಿ ಸುಮಾರು ಇನ್ನೂರ ಐವತ್ತು ಪಂಚತಂತ್ರ ಸಂಸ್ಕರಣಗಳು ಪ್ರಕಾಶಿತಗೊಂಡಿದೆ ಎಂದು ತಿಳಿದುಬಂದಿದೆ.[70] ಮೇಲ್ನೋಟಕ್ಕೆ ಪಂಚತಂತ್ರದಲ್ಲಿ ಕೇವಲ ನೀತಿಯ ವಿಚಾರಗಳು ತಿಳಿದುಬರುತ್ತದೆ ಎನ್ನಿಸಿದರೂ, ಸ್ವಲ್ಪ ಸೂಕ್ಷ್ಮವಾಗಿ ಗಮನಿಸಿದರೆ, ಅವರವರ ಅನುಭವಕ್ಕೆ ಸಂಬಂಧಪಟ್ಟಂತೆ ಇನ್ನಷ್ಟು, ಮತ್ತಷ್ಟು ಸೃಜನಾತ್ಮಕ ಭಾವನೆಗಳನ್ನು, ಬದುಕಿನ ನೀತಿನಿಯಮಗಳನ್ನು ಈ ಕಥೆಗಳಿಂದ ಪಡೆದುಕೊಳ್ಳಬಹುದು. ಉತ್ತಮ ವ್ಯಕ್ತಿತ್ವನಿರ್ಮಾಣ ಕಲೆಯನ್ನು ಗುರುತಿಸಿಕೊಳ್ಳಬಹುದು. ಸಮಯ, ಸ್ಥಳಗಳಿಗನುಗುಣವಾಗಿ ಪಂಚತಂತ್ರವು ಒಂದು ಲೌಕಿಕಬುದ್ಧಿವಂತಿಕೆಯ ಕೈಪಿಡಿಯಾಗಿದೆ. ವ್ಯವಹಾರ ಕುಶಲತೆ, ಲೌಕಿಕ ವಿವೇಕ, ಸನ್ನಡತೆ ಮುಂತಾದ ಲೋಕಜ್ಞಾನ ಸಂಪತ್ತನ್ನೇ ಅಡಗಿಸಿಕೊಂಡಿರುವ ಜ್ಞಾನಕೋಶವಾಗಿದೆ.

वचस्तत्र प्रयोक्तव्यं यत्रोक्तं लभते फलम् ।

स्थायीभवति चात्यन्तं रागः शुक्लपटे यथा ॥[71]

ಅಂದರೆ, ಬಿಳಿಯಬಟ್ಟೆಯ ಮೇಲೆ ಹಾಕಿದ ಬಣ್ಣ ಸ್ಥಿರವಾಗಿ ನಿಲ್ಲುವುದು. ಹಾಗೆ ಎಲ್ಲಿ ಹೇಳಿದ ಮಾತು ಸ್ಥಿರವಾಗಿ ನಿಂತು ಪ್ರಯೋಜನಕಾರಿಯಾಗುವುದೋ, ಅಲ್ಲಿ ಮಾತು ಹೇಳಬೇಕು. ಹೀಗೆಯೇ ಎಲ್ಲಿ? ಹೇಗೆ? ಯಾವ ಸಂದರ್ಭದಲ್ಲಿ ಏನು ತಿಳಿಸಬೇಕೋ ಹಾಗೆ ಒಂದು ಶಾಸ್ತ್ರೀಯ ಕ್ರಮದಲ್ಲಿ ಎಲ್ಲ ವಿಚಾರಗಳಲ್ಲಿಯೂ ಸೂಕ್ತ ತಿಳುವಳಿಕೆ, ಜಾಗೃತಿ ಪಂಚತಂತ್ರಗಳ ಮೂಲಕ ಮೂಡಿಸಿರುವುದೇ ವಿಷ್ಣುಶರ್ಮರ ಬೋಧನಾ ವಿಶಿಷ್ಟತೆ.

ಬಹುಶಃ ಇಷ್ಟೊಂದು ಸರಳ ಮತ್ತು ಆಕರ್ಷಕವಾಗಿ ಲೋಕಜ್ಞಾನವನ್ನು ಪಸರಿಸುವ ಮತ್ತೊಂದು ಕೃತಿಯನ್ನು ನಾವು ಕಾಣಲಾರೆವು. ಬೇರೆಬೇರೆ ವಿಷಯಜ್ಞಾನವನ್ನು ಹೆಚ್ಚಿಸುವ ಅನೇಕ ಅದ್ಭುತ ಗ್ರಂಥಗಳು,

---

70. **ಸುಧಾಕರ್ ಮಾಲವೀಯ,** (ಅನುವಾದಕರು) ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಭೂಮಿಕಾ-ಪು.31.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ. ವಾರಣಾಸಿ-221001.
71. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಮಿತ್ರಭೇದಃ-ಶ್ಲೋ-34,ಪು.28,(1993)ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಜ್ಞಾನಕೋಶಗಳು ಕಂಡುಬರುವುದು. ಆದರೆ ಲೌಕಿಕ ಜ್ಞಾನ, ಬದುಕಿನ ಕಲೆ, ಕಾರ್ಯಯೋಜನೆ, ಆತ್ಮವಿಶ್ವಾಸ, ದುಡುಕಿನ ಪರಿಣಾಮ, ಅಜ್ಞಾನದ ಅನಾಹುತ ಇತ್ಯಾದಿ ವಿಷಯಗಳ ತಿಳುವಳಿಕೆ ಮತ್ತು ಜಾಗೃತಿಯನ್ನು ಮೂಡಿಸುವ ಅನುಪಮ ಗ್ರಂಥವೇ ಈ ಪಂಚತಂತ್ರವಾಗಿದೆ. ಇದು ಬದುಕಿನ ಜ್ಞಾನ ಭಂಡಾರದ ಒಂದು ಅಮರ ಕೃತಿ. ಸುಂದರ ಬದುಕಿಗೆ ಬೇಕಾದ ನೀತಿಯನ್ನು, ಜಾಗೃತಿಯನ್ನು ಆಪ್ಯಾಯಮಾನವಾಗಿ ಕೇಳುಗರು ಪ್ರೀತಿಯಿಂದ ಆಸ್ವಾದಿಸುವಂತೆ ಅನುವು ಮಾಡುವುದರಲ್ಲಿ **ಪಂಚತಂತ್ರ**ವು ಏಕಮೇವಾದ್ವಿತೀಯಮ್ ಎನ್ನುವಂತಿದೆ. ಕಥಾಮಾಧ್ಯಮವು ನೀತಿಬೋಧೆಗೆ ಉತ್ತಮ ಸಾಧನ ಎಂಬುದನ್ನು ಪಂಚತಂತ್ರವು ಸ್ಪಷ್ಟಪಡಿಸಿದೆ. ಪಂಚತಂತ್ರದ ಅನ್ವರ್ಥನಾಮವು ಐದು ತಂತ್ರ(ಪ್ರಕರಣ)ಗಳಲ್ಲಿ ವಿಭಕ್ತವಾಗಿದೆ.:–

1. **ಮಿತ್ರಭೇದ**. 2. **ಮಿತ್ರಸಂಪ್ರಾಪ್ತಿ** 3. **ಕಾಕೋಲುಕೀಯ** 4. **ಲಬ್ಧಪ್ರಣಾಶ** 5. **ಅಪರೀಕ್ಷಿತಕಾರಕ**.

ಪಂಚತಂತ್ರದಲ್ಲಿ ಐದು ಭಾಗಗಳೊಂದೊಂದೂ ನೀತಿ ತಂತ್ರ ಶಾಸ್ತ್ರಗಳನ್ನು ನಿರೂಪಿಸುತ್ತದೆ. ಮೊದಲನೇ ಭಾಗವಾದ **ಮಿತ್ರ ಭೇದವು** ಕರಟಕ ದಮನಕ ಎಂಬ ಎರಡು ನರಿಗಳು ಗಾಢ ಮಿತ್ರರಾಗಿದ್ದ ಒಂದು ಸಿಂಹ ಮತ್ತು ವೃಷಭಗಳಿಗೆ ವೈಮನಸ್ಸನ್ನು ತಂದುಹಾಕಿ ತಾವು ಸುಖವಾಗಿದ್ದ ಕಥೆಯ ಮೂಲಕ ಭೇದ ತಂತ್ರವನ್ನು ಪ್ರತಿಪಾದಿಸುತ್ತದೆ. ಎರಡನೆಯ **ಮಿತ್ರಲಾಭ**ವು ಒಳ್ಳೆಯ ಸ್ನೇಹದ ಫಲವನ್ನು ಆಮೆ, ಜಿಂಕೆ, ಕಾಗೆ ಮತ್ತು ಇಲಿ ಇವುಗಳ ಕಥೆಯನ್ನು ಹೇಳಿ ವಿವರಿಸುತ್ತದೆ. ಮೂರನೇ **ಕಾಕೋಲೂಕೀಯ**ವು ಕಾಗೆ ಗೂಬೆಯ ಕಥೆ ಮೂಲಕ ನಮ್ಮ ಶತ್ರುಗಳಾದವರ ಸ್ನೇಹ ಬಂಧನದ ಅಪಾಯಗಳನ್ನು ತಿಳಿಸುತ್ತದೆ. ನಾಲ್ಕನೆಯ **ಲಬ್ಧಪ್ರಣಾಶ**ವು ಕಪಿ ಮತ್ತು ಮೊಸಳೆಯ ಮೂಲಕ ನಮ್ಮ ಲೋಪದೋಷಗಳಿಂದ ನಾವು ನಮ್ಮಲ್ಲಿದ್ದುದನ್ನು ಹೇಗೆ ಕಳೆದುಕೊಳ್ಳಬೇಕಾಗುತ್ತದೆಂದು ತಿಳಿಸುತ್ತದೆ. ಐದನೆಯ **ಅಪರೀಕ್ಷಿತಕಾರಕ**ವು ಎಲ್ಲಾ ಪೂರ್ವಾಪರ ವಿಚಾರಗಳನ್ನು ಕೂಲಂಕಷವಾಗಿ ಪರಿಶೀಲಿಸದೆ ಯಾವ ಕೆಲಸವನ್ನೇ ಆಗಲಿ ದುಡುಕಿಮಾಡಿದರೆ ಉಂಟಾಗುವ ಕಷ್ಟನಷ್ಟಗಳನ್ನು ಅನೇಕ ಕಥೆಗಳ ಮೂಲಕ ಪ್ರತಿಪಾದಿಸಿ ತೋರಿಸುತ್ತದೆ. ಹೀಗೆ ಪಂಚತಂತ್ರದಲ್ಲಿ ಐದು ತಂತ್ರಗಳಲ್ಲಿನ ಒಟ್ಟು ಐದು ಸೂತ್ರಕಥೆಗಳನ್ನು ಹೊರತುಪಡಿಸಿ ಇತರ ಎಪ್ಪತ್ತು ಕಥೆಗಳು ಇವೆ.[72]

ಪಂಚತಂತ್ರದಲ್ಲಿ ಸಾಮಾನ್ಯವಾಗಿ ನೀತಿಯ ಮಾತುಗಳು ಪದ್ಯದ ರೂಪದಲ್ಲಿವೆ ಮತ್ತು ಆ ಮಾತನ್ನು ಸಮರ್ಥಿಸಲು ಗದ್ಯದಲ್ಲಿ ಕಥೆ ಹೇಳಲಾಗಿದೆ. ಎಲ್ಲ ಪದ್ಯಗಳನ್ನೂ ಕಥೆಗಾರನೇ ರಚಿಸಿಲ್ಲ. ರಾಮಾಯಣ ಮಹಾಭಾರತಾದಿ ಕಾವ್ಯಗಳಿಂದಲೂ ಸ್ಮೃತಿಗಳಿಂದಲೂ, ಸುಭಾಷಿತಗಳಿಂದಲೂ ಮತ್ತು ಸೂಕ್ತಿಗಳಿಂದಲೂ

---

72. **ಭರತ ಬಿ ರಾವ್** (ಕನ್ನಡ ಅನುವಾದಕರು), ಪಂಚತಂತ್ರ, ಪು–8,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ. 44/1, ಕೆ.ಆರ್.ರಸ್ತೆ, ಬಸವನಗುಡಿ, ಬೆಂಗಳೂರು–560004.

ಅನೇಕ ಶ್ಲೋಕಗಳನ್ನು ಕಥೆಗಾರರು ತಮಗೆ ಬೇಕಾದಂತೆ ಆಯ್ಕೆಮಾಡಿಕೊಂಡಿದ್ದಾರೆ. ಇದೂ ಒಂದು ರೀತಿಯಲ್ಲಿ ಶೈಕ್ಷಣಿಕ ಮನೋವಿಜ್ಞಾನದ ಪ್ರಕಾರ **"Syllabus Framing"** ಪಠ್ಯಕ್ರಮ ಯೋಜನೆಯಿದ್ದಂತೆ.

ಈ ಎಲ್ಲ ಅಂಶಗಳನ್ನೂ ಪರಿಶೀಲಿಸಿ ವಿಶ್ಲೇಷಿದರೆ, ಪಂಚತಂತ್ರ ಗ್ರಂಥದ ಮೂಲಕ ಮೇಧಾವಿ ವಿಷ್ಣುಶರ್ಮರು ಅದೆಷ್ಟು ವಿಪುಲವಾಗಿ ಪಂಚಸೂತ್ರಗಳ ಅಳವಡಿಕೆಯಲ್ಲಿ ಅನೇಕತೆಗಳಲ್ಲಿ ಏಕತೆಯಿಂದ ಕೂಡಿರುವಂತೆ ಕಥೆಗಳನ್ನು  ಹೆಣೆದು, ಪ್ರಾಣಿಗಳ ವರ್ತನೆಯನ್ನು ಮನುಷ್ಯರ ಅಪರಾವತಾರವೆಂಬಂತೆ ಪ್ರತಿಬಿಂಬಿಸುತ್ತಾ, ಒಬ್ಬ ಉತ್ತಮ ರಾಜನೀತಿ ಶಿಕ್ಷಣತಜ್ಞನಾಗಿ, ಶೈಕ್ಷಣಿಕ ಮನೋವಿಜ್ಞಾನಿಯಾಗಿ ಸರಳ ಸುಂದರ ಉದಾಹರಣೆಗಳನ್ನು ನೀಡುತ್ತಾ ದುರ್ವಿನೀತ ರಾಜನಂದನರನ್ನು ಸಂಪೂರ್ಣ ಯೋಗ್ಯರನ್ನಾಗಿ ಮಾಡಿ ರಾಜನೀತಿ ನಿಪುಣತ್ವಕ್ಕೆ ಒಳ್ಳೆಯ ಕಲಿಕಾ ತರಬೇತಿಯನ್ನೊದಗಿಸಿ ಪರಿವರ್ತನೆ ಮಾಡಿದ್ದಾರೆ. ಇದನ್ನೇ ಶೈಕ್ಷಣಿಕ ಮನೋವಿಜ್ಞಾನದ ಪ್ರಸಿದ್ಧ ವ್ಯಾಖ್ಯಾನಗಳಲ್ಲಿ ಪ್ರತಿಪಾದಿಸಿರುವುದು. ಉದಾಹರಣೆಗೆ ಕೆಲವನ್ನು ಗಮನಿಸಬಹುದು:–

**"Learning is the modification of behaviour through experience and training."** ಎಂದು ಪ್ರಸಿದ್ಧ ಮನೋವಿಜ್ಞಾನಿ ಗೇಲ್ಸ್ ಮತ್ತು ಇತರರು ಕಲಿಕೆಯನ್ನು ಕುರಿತು  ವ್ಯಾಖ್ಯಾನಿಸಿದ್ದಾರೆ. **"Learning is any change in behaviour,resulting from behaviour."** ಹೀಗೆ ಗಿಲ್ಫೋರ್ಡ್ ಹೇಳಿದ್ದಾರೆ.

**"Learning is the modification of our ready made behaviour due to experience."** ಎಂದು ಮನಶ್ಶಾಸ್ತ್ರಜ್ಞ ಕೋಲ್ವಿನ್ ವ್ಯಾಖ್ಯಾನಿಸಿದ್ದಾರೆ.[73] ಅಲ್ಲಿಗೆ ಒಂದು ಸ್ಪಷ್ಟವಾದ ಅರ್ಥವನ್ನು ಹೀಗೆ ಮಾಡಿಕೊಳ್ಳಬಹುದು – **"Education is the modification of human behavior"**- ಶಿಕ್ಷಣವು ಮಾನವ ನಡವಳಿಕೆಯ ಮಾರ್ಪಾಡು ಅಥವಾ ವರ್ತನೆಯ ಪರಿವರ್ತನೆ." ಎಂದು. ಈ ಪರಿವರ್ತನೆಯನ್ನೇ ಪಂಚತಂತ್ರದಲ್ಲಿ ವಿಷ್ಣುಶರ್ಮರು ರಾಜಕುಮಾರರ ರಾಜನೀತಿ ಶಿಕ್ಷಣ ಹಾಗೂ ಜೀವನ ಶಿಕ್ಷಣ ವಿಚಾರದಲ್ಲಿ ಬಹಳ ಪರಿಣಾಮಕಾರಿಯಾಗಿ ಕೈಗೊಂಡಿರುತ್ತಾರೆ. ಇದೇನು ಸುಲಭ ಸಾಧ್ಯ ಕಾರ್ಯವಲ್ಲ. ಒಬ್ಬ ವಿಶಿಷ್ಟ ಕಥಾಶಿಲ್ಪಿ, ಸಿದ್ಧಾಂತ ಬದ್ಧ ಶಿಕ್ಷಕ. ಮೇಧಾವಿ ರಾಜನೀತಿ ಶಾಸ್ತ್ರಜ್ಞ, ಅರ್ಥಶಾಸ್ತ್ರಜ್ಞ ಕಲ್ಪನೆ ಮತ್ತು ಅಲಂಕಾರ ಸಮಾವೇಶವನ್ನು ನಡೆಸಬಲ್ಲ ಸಾಮರ್ಥ್ಯವುಳ್ಳ, ಅಪಾರ ಭಾಷಾವಿಜ್ಞಾನ ಚಾತುರ್ಯವುಳ್ಳ

---

73. Robert M. Gagne, "Conditions of Learning" (relevent chapters) 1965, 1975, 1978 editions.

ವಿಷ್ಣುಶರ್ಮರಂತಹ ಸಕಲಶಾಸ್ತ್ರಪಾರಂಗತರಿಂದ ಮಾತ್ರ ಸಾಧ್ಯವೆನ್ನಿಸುತ್ತದೆ.

ಸಂಸ್ಕೃತ ಸಾಹಿತ್ಯದ ವಿಶಿಷ್ಟತೆಯನ್ನು ಕುರಿತು ಒಬ್ಬ ಪಾಶ್ಚಾತ್ಯ ವಿದ್ವಾಂಸರಾದ ವಿಂಟರ್ನಿಟ್ಸ್ ಹೀಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. "ಯಾವ ಮನುಷ್ಯನು ಸಂಸ್ಕೃತಿ, ಸಾಹಿತ್ಯದ ಪ್ರಾರಂಭಿಕ ದಿನಗಳ ಪರಿಸ್ಥಿತಿಯನ್ನು ತಿಳಯಲು ಇಚ್ಛಿಸುತ್ತಾನೋ, ಅವನು ಭಾರತ ದೇಶಕ್ಕೆ ಶರಣು ಹೋಗಬೇಕು. ಏಕೆಂದರೆ ಅಲ್ಲೊಂದು ಭಾರತೀಯ ಸಂಸ್ಕೃತಿಯ ಅತ್ಯಂತ ಪ್ರಾಚೀನ ಸಾಹಿತ್ಯವು ಅಡಗಿ ಸುರಕ್ಷಿತವಾಗಿದೆ.. ಯಾವ ಸಾಹಿತ್ಯವು ಕವಿಕುಲಗುರು ಕಾಳಿದಾಸನಂತಹ ಮಹಾಕವಿಯನ್ನು ಪಡೆದಿದೆಯೋ, ಯಾವ ಸಾಹಿತ್ಯವು ಕಠಿಣ ಹೃದಯದಲ್ಲೂ ಕರುಣಾರಸವನ್ನು ಉತ್ಪತ್ತಿ ಮಾಡುವಂತೆ ಚಿತ್ರಿಸುವ ಭವಭೂತಿಯಂತಹ ನಾಟಕಕಾರನನ್ನು ಹೊಂದಿದೆಯೋ, ಅದ್ಭುತ ಕಲ್ಪನಾ ಶ್ರೇಷ್ಠಗುಣದ ಬಾಣಭಟ್ಟನಿಂದ ಓಜಸ್ವಿ **"ಕಾದಂಬರಿ"**ಗದ್ಯ ಕಥಾಸಾಹಿತ್ಯ ರಚಿತವಾಗಿ ಭಂಡಾರ ತುಂಬಿಕೊಂಡಿತೋ, ತನ್ನ ಪೀಯೂಶವರ್ಷಿಣಿ ವಾಣಿಯಿಂದ ಜಯದೇವಕವಿಯ **"ಗೀತಗೋವಿಂದ"** ಕೋಮಲಕಾಂತಿಯ ಪದಾವಳಿಯು ಸೇರಿಕೊಂಡಿತೋ, ಕಾವ್ಯ ಮತ್ತು ದರ್ಶನ ಸಮನ್ವಯದ ಚಿತ್ರಣವನ್ನು ಬಿಡಿಸಿದ ಶ್ರೀಹರ್ಷನಂತಹ ಸರಸ್ವತೀಪುತ್ರರು ಅಲಂಕರಿಸಲ್ಪಟ್ಟರೋ, ಯಾವುದರಲ್ಲಿ ಷಡ್ದರ್ಶನದ ಪ್ರೌಢ ವಿಚಾರಾವಳಿ ಜೊತೆಯಲ್ಲಿ ಕೌಟಿಲ್ಯನ ಅರ್ಥಶಾಸ್ತ್ರ ಎಂಬ ಸಮಾಜಶಾಸ್ತ್ರ ಗ್ರಂಥವು ಸೇರ್ಪಡೆಯಾಯಿತೋ, ಶೈಕ್ಷಣಿಕ ಮನೋವಿಜ್ಞಾನದಿಂದ ಅಲಂಕೃತವಾದ ಪಂಡಿತ ವಿಷ್ಣುಶರ್ಮರ ಪಂಚತಂತ್ರ ನೀತಿಕಥೆಗಳ ಭಂಡಾರ ಸೇರ್ಪಡೆಯಾಯಿತೋ ಅಂತಹ ಸಂಸ್ಕೃತ ಸಾಹಿತ್ಯ ಮಹತ್ವಪೂರ್ಣ ವಾದುದು ವಿಶಿಷ್ಟವಾದುದು ಮತ್ತು ಅವರ್ಣನೀಯ."[74]



74. Untitled Shodhaganga, shodhaganga.inflibnet.ac.in PDF,08-chapter-1,.pdf, ಅಧ್ಯಾಯ-1ಪು-4,5.

## ಅಧ್ಯಾಯ–1–5. ಪಂಚತಂತ್ರದ ವಿಶ್ವವ್ಯಾಪಿ ಪ್ರಭಾವ.

ನೀತಿಕಥಾ ಸಾಹಿತ್ಯವು ಕಾಲ್ಪನಿಕ ಕಥೆಗಳು ಹಾಗೂ ನೀತಿಕಥೆಗಳಿಂದ ಕೂಡಿದ್ದು ವಾಸ್ತವ ವಿಚಾರಗಳಿಗೆ ಸಂಬಂಧಪಡದ ಅಲೌಕಿಕ, ಅಪ್ರಾಕೃತ ಅಂಶಗಳನ್ನೊಳಗೊಂಡ, ಪ್ರಾಣಿಪಕ್ಷಿಗಳ ಪಾತ್ರಗಳಿಂದ ಕೂಡಿದುದು, ಸೊಗಸಾದ ಆನಂದದಾಯಕ ಮನರಂಜನೆಯನ್ನು ನಿಭಾಯಿಸುವಂತಹದು ಎಂಬ ಒಂದು ಸಾಮಾನ್ಯ ಅಭಿಪ್ರಾಯ ಎಲ್ಲೆಡೆಯಲ್ಲೂ ಕಂಡುಬರುತ್ತದೆ. ಆದರೆ ಸಂಸ್ಕೃತ ಸಾಹಿತ್ಯ ಕ್ಷೇತ್ರದಲ್ಲಿ ನೀತಿಕಥೆಗಳ ಉದ್ದೇಶವೇ ಬೇರೆಯಾಗಿದೆ. ಅಂದರೆ ಇದರಲ್ಲಿ ಕಂಡುಬರುವ ಪಾತ್ರಗಳು ಮತ್ತು ಅದರ ಗುಣಲಕ್ಷಣಗಳು ನೈತಿಕ ಹಾಗೂ ಸಾರ್ಥಕ ಬದುಕಿನ ಶಿಕ್ಷಣವನ್ನು ನೀಡುವುದೇ ಮೂಲ ಉದ್ದೇಶವಾಗಿರುತ್ತದೆ. ಸಂಸ್ಕೃತ ನೀತಿಕಥೆಗಳು ಉಪದೇಶಾತ್ಮಕ, ಶಿಕ್ಷಣಾತ್ಮಕ, ಜ್ಞಾನಾತ್ಮಕ ಹಾಗೂ ಪ್ರತಿಪಾದಕ ಲಕ್ಷಣಗಳಿಂದ ಕೂಡಿದುದಾಗಿದೆ. ಹೀಗಿರುವುದರಿಂದಲೇ ಅವುಗಳಲ್ಲಿನ ಸುಪ್ತ ಚೇತನವು ಸ್ಪಷ್ಟವಾಗಿ ಹಾಗೂ ಪರ್ಯಾಲೋಚನೆಯಿಂದ ವಿಶ್ವಸಾಹಿತ್ಯದ ಮೇಲೆ ಮಹತ್ತರವಾದ ಪ್ರಭಾವವನ್ನು ಬೀರಿದೆ.

ಭಾರತ ದೇಶ ಹಳ್ಳಿಗಳ ದೇಶ. ಹೆಚ್ಚಿನ ಜನರು ದೈವದತ್ತವಾದ ಪ್ರಕೃತಿಯ ಮಡಿಲಿನಲ್ಲಿ ವಾಸಿಸುತ್ತಿರುವುದರಿಂದ, ಅವರ ಸಾಮಾನ್ಯ ಜೀವನವೂ ನೈಸರ್ಗಿಕವಾಗಿಯೇ ಉತ್ತಮ ಸಂಸ್ಕಾರ ಹಾಗೂ ಸಂಸ್ಕೃತಿಯಿಂದ ಬೆಳೆದುಬಂದಿರುತ್ತದೆ. ಪ್ರಕೃತಿಗೆ ಸಮೀಪ ವಾಸಿಸುವುದರಿಂದ ಮಾನವನ ಚಿಂತನೆಗಳನ್ನು ಮತ್ತು ಭಾವನೆಗಳನ್ನು ಪ್ರಾಣಿಪಕ್ಷಿಗಳಿಗೆ ಆರೋಪಿಸಿ, ಅವುಗಳಿಂದಲೇ ನೈತಿಕ, ರಾಜಕೀಯ ಹಾಗೂ ಜ್ಞಾನಾತ್ಮಕ ವರ್ತನೆಗಳನ್ನು ಪ್ರತಿಬಿಂಬಿಸಿ, ವಿಶೇಷ ಆಕರ್ಷಣೆಯಿಂದ ನೀತಿಶಿಕ್ಷಣವನ್ನೊದಗಿಸುವುದು ಸಂಸ್ಕೃತ ನೀತಿಕಥಾ ಸಾಹಿತ್ಯದ ವಿಶಿಷ್ಟ ಲಕ್ಷಣವಾಗಿದೆ ಬಹಳ ಹಿಂದಿನ ಇಂಥಹ ನೀತಿಕಥಾ ಸಾಹಿತ್ಯ ನಮಗೆ ಅಲಭ್ಯ. ಆದರೆ ಅವುಗಳ ಪಠ್ಯದಿಂದ ಪಡೆಯಲಾದ **"ಪಂಚತಂತ್ರ"** ಮತ್ತು **"ಆಖ್ಯಾಯಿಕಾ"**–ಕಾಶ್ಮೀರಿ ಆವೃತ್ತಿಯೇ ಅತ್ಯಂತ ಪ್ರಾಚೀನ ಹಾಗೂ ಮೂಲ ನೀತಿಕಥಾ ಸಾಹಿತ್ಯವಾಗಿದೆ. ಭಾರತೀಯ ಮತ್ತು ಗ್ರೀಕ್ ನೀತಿಕಥೆಗಳಲ್ಲಿ ಒಂದು ಸ್ಪಷ್ಟ ಸಮಾನಾಂತರತೆ ಕಂಡುಬರುತ್ತದೆ. **Wagener** ರವರ ಅಭಿಪ್ರಾಯದಂತೆ **"ಗ್ರೀಸ್ ಕಾಲ್ಪನಿಕ ಕಥೆಗಳು ಭಾರತೀಯ ಸ್ವೀಕೃತಿ"** ಎಂದಿದ್ದಾರೆ. "**Benfey**ರವರು **"ಸಾಮಾನ್ಯವಾಗಿ ನೀತಿಕಥೆಗಳು–ಕಾಲ್ಪನಿಕ ಕಥೆಗಳು ಮೂಲ ಭಾರತೀಯ ಜನ್ಯ"** ಎಂಬ ತೀರ್ಮಾನಕ್ಕೆ ಬಂದಿರುತ್ತಾರೆ. ಆದರೆ **"ಭಾರತೀಯ ಕಾಲ್ಪನಿಕ ಕಥೆಗಳು ಗ್ರೀಸ್ನಿಂದ ಪಡೆದದ್ದಾಗಿದೆ."** ಎಂದು ಒಂದು ವಿವಾದಾಸ್ಪದ ಹೇಳಿಕೆ ಕೊಟ್ಟಿರುತ್ತಾರೆ.[75] **WEBER-(GermanSociologist, Historian)** ರವರ ಅಭಿಪ್ರಾಯದಲ್ಲಿ

---

75. **Chandra Rajan,** VISNU SARMA,( English Translation)The Panchatantra, INTRO- P- XV, XVI (1993) Penguin Random House India Pvt.Ltd,7th Floor, Infinity Tower,C,DLF Cyber City,, Gurgaon, Haryana 122002.India.

**"ಕಾಲ್ಪನಿಕ ಕಥೆಗಳು–ನೀತಿಕಥೆಗಳು ಭಾರತೀಯ ಜನ್ಯ. ಅದರಲ್ಲೂ ಅದರ ಸರಳತೆಯೇ ಆ ಯುಗದ ಹೆಗ್ಗುರುತು.** "**KELLER** ರವರೂ ಇದೇ ಅಭಿಪ್ರಾಯವನ್ನು ಸಮರ್ಥಿಸಿಕೊಂಡು **"ಪ್ರಾಣಿಪಕ್ಷಿಗಳ ಮೇಲೆ ಮಾನವನ ಸ್ವಭಾವ ಮತ್ತು ವರ್ತನೆಗಳನ್ನು ಒಂದು ತಾರ್ಕಿಕ ಅನುಕ್ರಮದಿಂದ ಆರೋಪಿಸುವ ಸಿದ್ಧಾಂತ ಭಾರತೀಯ ಜನ್ಯವೇ."** ಎಂದು ಹೇಳಿದ್ದಾರೆ. ಫೇಬಲ್ಗಳ ಜನ್ಯತೆ ಹಾಗೂ ಪ್ರಸರಣಕಾರ್ಯದಲ್ಲಿ ಈಜಿಪ್ಟ್‌ನ ಪಾತ್ರವೂ ಸಂಭಾವ್ಯವಿರುವುದಾಗಿ ಕೆಲವು ವಿದ್ವಾಂಸರು ಅಭಿಪ್ರಾಯಿಸುವರು. ಅದೇನೇ ಇರಲಿ, ಬಹಳ ಮುಖ್ಯವಾದ ಅಂಶವೆಂದರೆ ಭಾರತೀಯ ನೀತಿಬೋಧಕ ಕಥೆಗಳು ಕಾಲ್ಪನಿಕಕಥೆಗಳು ಪಾಶ್ಚಿಮಾತ್ಯ ನೆಲದಲ್ಲಿ ಅಲ್ಲಿನ ಭಾಷೆಗಳಿಗೆ ತರ್ಜುಮೆಗೊಂಡಿರುವುದಂತೂ ಸುಸ್ಪಷ್ಟ.[76] **KHOSRO ANUSHIRVAN(A.D.550-578-)** ಆಳ್ವಿಕೆಯ ಕಾಲದಲ್ಲಿ **Physician** (ಭೌತಶಾಸ್ತ್ರಜ್ಞ) **BURZOE** ಪಂಚತಂತ್ರವನ್ನು ಪಹ್ಲವಿ ಭಾಷೆಗೆ ತರ್ಜುಮೆ ಮಾಡಿರುತ್ತಾನೆ. ಅದೇ **A.D.**570 ರಲ್ಲಿ ಅದನ್ನು **BUD** ಗೆ ಸಲ್ಲಿಸಲಾಗಿ ಅವನು ಸಿರಿಯಾ ಭಾಷೆಗೆ ಅನುವಾದಿಸಿದನು. ಮತ್ತೆ ಸುಮಾರು **A.D.**750 ರಲ್ಲಿ **Abdallah in al-Moqaffa** ನಿಂದ ಅರಬ್ಬೀ ಆವೃತ್ತಿ ಸಿದ್ಧಗೊಂಡಿತು. ಆನಂತರದಲ್ಲಿ ಪಾಶ್ಚಾತ್ಯ ಆವೃತ್ತಿಗಳು ಪ್ರಕಟಗೊಂಡವು. ಸಿರಿಯಾ ಭಾಷೆಯಿಂದ ಗ್ರೀಸ್ ಭಾಷೆಗೆ, ಅಲ್ಲಿಂದ ಇಟಲಿ ಹಾಗೂ ಜರ್ಮನಿ ಭಾಷಾ ಆವೃತ್ತಿಗಳು ಮತ್ತು ಅದರ ವಿವಿಧ ಪ್ರತಿರೂಪಗಳು ಕಂಡುಬಂದವು. ಹೀಗೆ ಪಂಚತಂತ್ರವು ಭಾರತದ ಹೊರಗೂ ಪಾಶ್ಚಿಮಾತ್ಯ ಸಾಹಿತ್ಯದ ಮೇಲೆ ವ್ಯಾಪಕ ಪ್ರಭಾವವನ್ನು ಬೀರಿದೆ.[77]

ಆದ್ಯತೆಯ ಬಗ್ಗೆ ಏನೇ ವಿವಾದವಿದ್ದರೂ, ಅದರ ಬಗ್ಗೆ ವಾಗ್ವಾದ ಮಾಡದೆ, ನೀತಿಬೋಧಕ–ಕಥೆಗಳು ಹಾಗೂ ಕಾಲ್ಪನಿಕ ಕಥೆಗಳು ಕೇವಲ ಮನರಂಜನೆ, ಸೊಗಸಾದ ಆನಂದ ಮಾತ್ರ ನೀಡದೆ, ಅದನ್ನೂ ಮೀರಿದ ಒಂದು ವಿಶಿಷ್ಟ ಉದ್ದೇಶವನ್ನು ಹೊಂದಿರುತ್ತವೆ. ಒಂದು ಪ್ರಸಿದ್ಧ ಸಂಸ್ಕೃತ ಶ್ಲೋಕ ಹೀಗೆ ವಿವರಿಸುತ್ತದೆ :–

यन्नवे भाजने लग्नः संस्कारो नान्यथा भवेत् ।

कथाच्छलेन बालानां नीतिस्तदिह कथ्यते ॥[78]

ಅಂದರೆ, ಹೊಸದಾಗಿ ತಯಾರಿಸಿದ ಮಣ್ಣಿನ ಪಾತ್ರೆಗಳ ಉಪಯೋಗ ಮಾಡಿ ಹೇಗೆ ಸಕಲ ಸಂಸ್ಕಾರಾದಿಗಳನ್ನು ಮಾಡಲಾಗುತ್ತದೆಯೋ, ಹಾಗೆಯೇ ಹೊಸದಾಗಿ ವಿಕಸಿತವಾಗುತ್ತಿರುವ ಬುದ್ಧಿಯುಳ್ಳ ಬಾಲಕರಿಗೆ ಕಥೆಗಳ ಮಾಧ್ಯಮದಿಂದ **"ಹಿತೋಪದೇಶ"** ಗ್ರಂಥಗಳಲ್ಲಿ ಈ ನೀತಿಯು ಹೇಳಲ್ಪಟ್ಟಿದೆ. ಇದೇ

76. Chandramani G.L., translation _Panchatantra- Preface- Page: V, Roopa Publication Ind.Pvt.Ltd. 7/16, Ansari road, Dariyaganj, Newdelhi-110002-1991

**77. Sadhu Ram,** " Essays on Sanskrit Literature,C-28,P-242-245, Munshi Ram Manhattan All, Oriental Book Sellers & Publishers,PB-1165,Nai Sarak,Delhi-6 Aug 1965.

78. **ನಾರಾಯಣ ಪಂಡಿತ ಸಂಗೃಹೀತ ಹಿತೋಪದೇಶ,** ಪ್ರಾಸ್ತಾವಿಕಾ–ಶ್ಲೋ–೮.ಚೌಕಾಂಬಾ ಸಂಸ್ಕೃತ ಭವನ, ವಾರಣಾಸಿ.

ಧಾಟಿಯಲ್ಲಿ ಪಂಚತಂತ್ರದ ನೀತಿಕಥೆಗಳ ಮೂಲಕ ಸರಳ, ಆಕರ್ಷಕ ನಿರೂಪಣಾ ಮಾಧ್ಯಮದಿಂದ ರಾಜನೀತಿಶಿಕ್ಷಣ, ಮೌಲ್ಯಾಧಾರಿತ ಬದುಕಿನ ಶಿಕ್ಷಣವನ್ನು ರಾಜನಂದನರಿಗೆ ಮನಮುಟ್ಟುವಂತೆ ಪಂಡಿತ ವಿಷ್ಣುಶರ್ಮರು ಬೋಧಿಸಿದ್ದಾರೆ.

ಮತ್ತೊಂದು ಬಹಳ ಮುಖ್ಯ ವಿಚಾರವೆಂದರೆ, ವಿಷ್ಣುಶರ್ಮರು ಅರಸುಕುಮಾರರಿಗೆ ಕೇವಲ ಆರು ತಿಂಗಳುಗಳೊಳಗಾಗಿ ಉತ್ತಮ ಶಿಕ್ಷಣವನ್ನು ಒದಗಿಸಿ ರಾಜನೀತಿ ನಿಪುಣರನ್ನಾಗಿ ಮಾಡುತ್ತೇನೆಂದು ಪ್ರತಿಜ್ಞೆ ಮಾಡಿದ್ದು ಸರಿಯಷ್ಟೆ. ಅವರನ್ನು ಉತ್ತಮ ವ್ಯಕ್ತಿತ್ವದೆಡೆಗೆ ಪ್ರೋತ್ಸಾಹಿಸಿ ಪ್ರೇರೇಪಿಸಿದ್ದೂ ಸರಿಯಷ್ಟೆ. ಅದಕ್ಕೆ ತಕ್ಕಂತೆ ಸ್ಪಂದಿಸಿ, ಬದುಕಿನ ನೀತಿಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿ, ಒಂದು ಸುಭಾಷಿತ ಹೇಳುವಂತೆ :–

कुरु गुरुवचो निपीतं भूयो भूयो विचिन्तयाधीतम् ।

विद्या गुरुपदिष्टा चिरपरिमृष्टा विभूषणं वपुषः ॥[79]

ಗುರುವಿನ ಉಪದೇಶವನ್ನು ಕುಡಿ. ಕಲಿತದ್ದನ್ನು ಮತ್ತೆಮತ್ತೆ ಚಿಂತನೆ ಮಾಡು. ಗುರೂಪದಿಷ್ಟವಾದ ವಿದ್ಯೆ ಬಹಳ ಕಾಲ ಚಿಂತನೆಗೊಳಗಾದರೆ ದೇಹಕ್ಕೆ ಭೂಷಣವಾಗಿರುತ್ತದೆ. ಹೀಗೆಯೇ ಅರಿತು ಗುರುಗಳಲ್ಲಿ ಭಕ್ತಿಶ್ರದ್ಧೆಯನ್ನಿಟ್ಟುಕೊಂಟು ರಾಜನಂದನರೂ ಸಾಧನೆಗೈದಿದ್ದಾರೆ. ವಿಷ್ಣುಶರ್ಮರು ಒಂದು ಅದ್ಭುತ ವಾಣಿಯನ್ನು ಹಿಡಿದು, ಅಂದರೆ ಒಳ್ಳೆಯ ಕಥಾನಿರೂಪಣಾ ಮಾಧ್ಯಮದಲ್ಲಿ ವಿಶೇಷ, ಸರಳ ಹಾಗೂ ಆಕರ್ಷಕ ಕಥೆಗಳನ್ನು ಹೆಣೆದು, ಮನಸ್ಸನ್ನು ಕೇಂದ್ರೀಕೃತಗೊಳಿಸಿಕೊಂಡು ಶ್ರವಣ ಹಾಗೂ ಮನನ ಮಾಡುವಂತೆ ಶಿಷ್ಯರನ್ನು ಪ್ರೇರೇಪಿಸಿದ್ದಾರೆ. ಇವರ ನಿರೂಪಣಾ ಶೈಲಿ, ಕೃತಿಮಾಡಿದ ವಾಣಿ ಇಲ್ಲಿ ಬಹಳ ಪ್ರಾಮುಖ್ಯತೆ ಪಡೆದಿರುತ್ತದೆ. ವೇದಾಂತ ದೇಶಿಕದಲ್ಲಿನ ಒಂದು ಶ್ಲೋಕ ವಾಣಿಯ ಮಹತ್ವವನ್ನು ಹೀಗೆ ವರ್ಣಿಸುತ್ತದೆ:–

संतोषार्थं विमृशति मुहुः सद्भिरध्यात्मविद्याम्

नित्यं ब्रूते निशमयति च स्वादुसुव्याहृतानि ।

अंगीकुर्वन्नघललितां वृत्तिमादेहपातात्

दृष्टादृष्टस्वभरविगमे दत्तदृष्टिः प्रसन्नः ॥[80]

---

೭೯. हरिहरविरचितं हरिहरसुभाषितम् , ३–३
**೮೦. ವೇದಾಂತ ದೇಶಿಕ,**

ಅಂದರೆ, ದೇವರಲ್ಲಿ ಮೊರೆಹೊಕ್ಕ ಭಕ್ತನು ಸಂತೋಷಕ್ಕಾಗಿ ಪಂಡಿತರೊಡನೆ ಆಧ್ಯಾತ್ಮ ವಿದ್ಯೆಯನ್ನು ಕುರಿತು ಚರ್ಚಿಸುತ್ತಾನೆ, ಒಳ್ಳೆಯ ಮಾತನ್ನು ಹೇಳುತ್ತಾನೆ ಮತ್ತು ಕೇಳುತ್ತಾನೆ. ಈ ಲೋಕದ ಅಥವಾ ಇತರ ಲೋಕದ ಸುಖಗಳಲ್ಲಿ ಆಸೆಪಡದೆ ಅಂತ್ಯದವರೆಗೂ ಪಾಪಕರವಿಲ್ಲದ ಭಗವದಾರಾಧನೆ ರೂಪವಾದ ಕೆಲಸಗಳನ್ನು ಮಾಡುತ್ತಾನೆ. ಹೀಗೆ ರಾಜಕುಮಾರರಿಗೆ ವಿಷ್ಣುಶರ್ಮರು ಬಹಳ ಉತ್ತಮ ಸನ್ನಿವೇಶಗಳನ್ನೊದಗಿಸಿ ಅವರ ಮನಸ್ಸನ್ನು ಕಥೆಗಳ ಮೂಲಕ ಆಕರ್ಷಿಸಿ ನೀತಿ ವಿಚಾರಗಳನ್ನು ಕುತೂಹಲದಿಂದ ತಿಳಿಯುವಂತೆ ಪ್ರೇರೇಪಿಸಿ, ವಿಶಿಷ್ಟ ಮಾದರಿಯಲ್ಲಿ ಶಿಕ್ಷಣ ನೀಡಿದ್ದಾರೆ. ಒಳ್ಳೆಯ ಮಾತುಗಳನ್ನು ಹೇಳಿದ್ದಾರೆ. ಮಂದ ಮತಿಗಳಾಗಿದ್ದ ರಾಜಕುಮಾರರು ಹಾಗೂ ಅವರ ಸ್ಥಿತಿಗಳನ್ನು ಕುರಿತು ಕೊರಗುತ್ತಿದ್ದ ಅಮರಶಕ್ತಿ ರಾಜನ ಬಗ್ಗೆ ಕರುಣಾರ್ದ್ರಹೃದಯಿಯಾಗಿ ವಯೋವೃದ್ಧರೂ, ಜ್ಞಾನವೃದ್ಧರೂ ಆದ ವಿಷ್ಣುಶರ್ಮರು ಶಿಕ್ಷಣ ಹಾಗೂ ಉತ್ತಮ ವ್ಯಕ್ತಿತ್ವನಿರ್ಮಾಣಕ್ಕೆ ಪಂಚತಂತ್ರಗಳ ಮೂಲಕ ಆದರ್ಶ ಯೋಜನೆಯನ್ನು ಕೈಗೊಂಡಿರುತ್ತಾರೆ.

वाचा निर्मलया सुधामधुरया यां नाथ शिक्षामदाः
तां स्वप्नेऽपि न संस्मराम्यहमहंभावावृतो निस्त्रपः ।
इत्यागःशतशालिनं पुनरपि स्वीयेषु मां बिभ्रतः
त्वत्तो नास्ति दयानिधिर्यदुपते मत्तो न मत्तः परः ॥[81]

ಸ್ವಚ್ಛವಾದ ಅಮೃತದಂತೆ ರುಚಿಯಾದ ಮಾತುಗಳಿಂದ ನೀನು ಕಲಿಸಿದ್ದೆಲ್ಲವನ್ನೂ ಮರೆತು ಅಹಂಕಾರದಿಂದ ನಾಚಿಕೆಯಿಲ್ಲದೇ ನೂರಾರು ತಪ್ಪುಗಳನ್ನು ಮಾಡಿದರೂ ದಯೆಯಿಂದ ನನ್ನನ್ನು ತನ್ನವರಲ್ಲಿ ಸೇರಿಸಿಕೊಂಡಿರುವೆ. ಇದನ್ನು ಯೋಚಿಸಿದರೆ ನಿನಗಿಂತಲೂ ಕರುಣಾಳುಗಳಿಲ್ಲ, ನನಗಿಂತಲೂ ಕೊಬ್ಬಿದವರಿಲ್ಲ. ಇದು ಗುರು ಶಿಷ್ಯರಿಗೆ ಅನ್ವಯಿಸುತ್ತದೆ. ಆದರೆ, ಇಲ್ಲಿ ಗುರುಗಳಾದ ವಿಷ್ಣುಶರ್ಮರು ಒಳ್ಳೆಯ ಶ್ರುತಿ ಮಾಡಿದ ಪಂಚತಂತ್ರ ಕಥೆಗಳ ಸುಮಧುರ ನಿರೂಪಣಾವಾಣಿಯಿಂದ ರಾಜಕುಮಾರರ ಸ್ವೇಚ್ಛವರ್ತನೆಗಳನ್ನು ಬಹಳ ಅಚ್ಚುಕಟ್ಟಾಗಿ ಪರಿವರ್ತಿಸಿ ಉತ್ತಮ ವ್ಯಕ್ತಿತ್ವ ನಿರ್ಮಾಣ ಮಾಡಿರುತ್ತಾರೆ. ಇಂತಹ ವಿಶಿಷ್ಟ ಲಕ್ಷಣಗಳೇ ಪಂಚತಂತ್ರ ವಿಶ್ವವ್ಯಾಪಿ ಪ್ರಭಾವವನ್ನು ಬೀರಲು ಕಾರಣವಾಗಿದೆ.



81. करुणालहरि

# ಅಧ್ಯಾಯ–2

## ಶಿಕ್ಷಣದಲ್ಲಿ ಮನೋವಿಜ್ಞಾನ

ಅಧ್ಯಾಯ –2 – 1. ಮನೋವಿಜ್ಞಾನ; ಪೀಠಿಕೆ– ವ್ಯಾಪ್ತಿ– ಪಾತ್ರ

**Psychology- Introduction-Scope-It's Role**

ಅಧ್ಯಾಯ 2 – 2.ಶೈಕ್ಷಣಿಕ ಮನೋವಿಜ್ಞಾನ

–ಅನ್ವಯಿಕ ವಿಜ್ಞಾನ–ಅರ್ಥ–ವ್ಯಾಖ್ಯೆ–ಪ್ರಾಮುಖ್ಯತೆ.

**Educational Psychology-Applied Science-meaning-definition-importance**

ಅಧ್ಯಾಯ 2 – 3.ಶಿಕ್ಷಣದಲ್ಲಿ ಮನೋವಿಜ್ಞಾನದ ಮಹತ್ವ.

**Importance of Psychology in Education**

ಅಧ್ಯಾಯ 2 – 4.ಪಂಚತಂತ್ರ ನೀತಿಕಥೆಗಳಲ್ಲಿ ಕಂಡುಬರುವ ಕೆಲವು

ಶೈಕ್ಷಣಿಕ ಮನೋವಿಜ್ಞಾನದ ಹಾಗೂ

ವ್ಯಕ್ತಿತ್ವನಿರ್ಮಾಣ ಪರಿಕಲ್ಪನೆಗಳ ವಿಶ್ಲೇಷಣೆ.

## ಅಧ್ಯಾಯ 2-1. ಮನೋವಿಜ್ಞಾನ-ಪೀಠಿಕೆ-ವ್ಯಾಪ್ತಿ-ಪಾತ್ರ

समदोषः समाग्निश्च समधातुमलक्रियः ।

प्रसन्नात्मेन्द्रियमनाः स्वस्थ इत्यभिधीयते ॥[1]

ಸಮತೋಲನಸ್ಥಿತಿಯಲ್ಲಿರುವ ದೋಷಗಳು - ಹಿತಕರ ಸ್ಥಿತಿಯಲ್ಲಿರುವ ಕಿಚ್ಚು (ಅಗ್ನಿ) ಸುಸ್ಥಿಯಲ್ಲಿರುವ ಅಂಗಾಂಶಗಳು ಹಾಗೂ ಅವುಗಳ ಜೀವದ್ರವ್ಯಕ್ರಿಯೆಯ ಪರಿಣಾಮಗಳು, ಜೊತೆಗೆ ಬುದ್ಧಿ, ಮನಸ್ಸು ಮತ್ತು ಆತ್ಮಗಳ ಸಮಸ್ಥಿತಿಯನ್ನು ತರುವುದರ ಮೂಲಕ ಆರೋಗ್ಯ ಸ್ಥಿತಿಯನ್ನು ರೂಪಿಸುತ್ತವೆ. ಸ್ವಸ್ಥವಾದ ಮಾನವ, ಶರೀರಮಾತ್ರದಿಂದಲೇ ಏನನ್ನಾದರೂ ಸಾಧಿಸಬಹುದು. **HEALTH IS WEALTH** ಎಂಬ ಹೇಳಿಕೆ ಇದನ್ನು ಮತ್ತೆ ಮತ್ತೆ ಸ್ಪಷ್ಟಪಡಿಸುತ್ತದೆ. "ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಬೇಡಿ ಹುಚ್ಚಪ್ಪಗಳಿರಾ" ಎಂಬ ದಾಸವಾಣಿಯೂ ಸಹ ಮಾನವಜನ್ಮದ ಹಿರಿಮೆಗರಿಮೆಗಳನ್ನು ಸಾರುತ್ತದೆ. ಮತ್ತೊಂದು- ಸುಭಾಷಿತವು ಶರೀರಪ್ರಾಪ್ತಿಯ ಮಹತ್ವವನ್ನು ಸೂಚಿಸುತ್ತದೆ:-

पुनर्वित्तं पुनर्मित्रं पुनर्भार्या पुनर्मही ।

एतत्सर्वं पुनर्लभ्यं न शरीरं पुनःपुनः ॥[2]

ಭಾಗ್ಯವಶದಿಂದ ಲಭ್ಯವಾಗಿರುವ ಶರೀರವನ್ನು ಜತನದಿಂದ ಕಾಪಾಡುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ. ಸ್ವಾಮಿ ವಿವೇಕಾನಂದರೂ ಸಹ ಶರೀರವನ್ನು ಕುರಿತು ಬಹಳ ಒಳ್ಳೆಯ ಮಾತನ್ನು ಹೇಳಿದ್ದಾರೆ." ಈ ದೇಹವು ಜೀವಾತ್ಮನು ವಾಸಿಸುವ ಸ್ಥಳ. ಇದರ ಮೂಲಕವೇ ಕರ್ಮಗಳನ್ನು ಮಾಡುವುದು. ಯಾರು ಇದನ್ನು ಒಂದು ನರಕ ಕುಂಡವನ್ನಾಗಿ ಮಾಡುತ್ತಾರೋ, ಅವರು ದೋಷಿಗಳು ಮತ್ತು ಇದನ್ನು ಕಡೆಗಣಿಸುವವರು ದ್ರೋಹಿಗಳು." ಆರೋಗ್ಯವೆಂದರೆ ಕೇವಲ ಶಾರೀರಿಕ ಸುಸ್ಥಿತಿ ಮಾತ್ರವಲ್ಲ. ಬದಲಾಗಿ ಇಂದ್ರಿಯ,ಮನಸ್ಸು ಹಾಗೂ ಆತ್ಮವಿಷಯಕವಾಗಿಯೂ ಇರುತ್ತದೆಂಬುದೂ ಸನಾತನ ಭಾರತೀಯ ಚಿಂತನೆಯಾಗಿರುತ್ತದೆ. ಗೀತಾಚಾರ್ಯನೂ ಸಹ:-

युक्ताहारविहारस्य युक्तचेष्टस्य कर्मसु ।

युक्तस्वप्नावबोधस्य योगो भवति दुःखहा ॥[3]

---

1. सुश्रुत, सू.अ. -75/41
2. **ಚಾಣಕ್ಯ ನೀತಿ** - (14/3)
3. **ಭಗವದ್ಗೀತಾ,** षष्ठोऽध्यायः-श्लोक-17.

ಎಂಬುದಾಗಿ ಆರೋಗ್ಯ ಹೇಗೆ ಕಾಪಾಡಿಕೊಳ್ಳಬೇಕೆಂದು ಮನೋಜ್ಞವಾಗಿ ಹೇಳಿದ್ದಾನೆ. ಯುಕ್ತವಾದ ಆಹಾರ, ವಿಹಾರ, ನಡವಳಿಕೆ, ಕ್ರಿಯಾಕಲಾಪಗಳು, ನಿದ್ರೆ, ಜಾಗರಣೆಗಳನ್ನು ಅಭ್ಯಾಸಮಾಡಿಕೊಂಡರೆ ಶಾರೀರಿಕ ಹಾಗೂ ಮಾನಸಿಕ ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳಬಹುದು. ಪ್ರತಿಯೊಬ್ಬ ಮಾನವನಿಗೂ ಭಗವಂತನು ಅನುಗ್ರಹಿಸಿರುವ ಅಸಾಧಾರಣ ಸಂಪತ್ತೆಂದರೆ ಅದು **"ಮನಸ್ಸು"** ಇದನ್ನು ಬುದ್ಧಿ, ಚಿತ್ತ, ಚೇತ, ಮಾನಸ ಎಂದೆಲ್ಲ ಅನೇಕ ಹೆಸರುಗಳಿಂದ ಕರೆಯುತ್ತಾರೆ. ಇತರ ಯಾವ ಪ್ರಾಣಿಗಳಿಗೂ ಭಗವಂತನು ಇಂಥಹ ಸಂಪತ್ತನ್ನು ಕೊಡಮಾಡಲಿಲ್ಲ. ಈ ವಿಷಯದಲ್ಲಿ ಮಾನವನೇ ಭಾಗ್ಯವಂತನು. ಈ ಮನಸ್ಸು ಅತ್ಯಂತ ಸೂಕ್ಷ್ಮವೂ, ಪವಿತ್ರವೂ ದುರ್ಬಲವೂ ಆಗಿರುವಂಥಾದ್ದು. ಸ್ವಲ್ಪ ಆಧ್ಯಾತ್ಮಿಕ ದೃಷ್ಟಿಯಿಂದ ಚಿಂತನೆ ಮಾಡಿದರೆ ಇಂಥ ಮನಸ್ಸಿನಿಂದ ಮೋಕ್ಷವೂ ದೊರಕುತ್ತದೆ, ಬಂಧನವೂ ಆಗುತ್ತದೆ. ಇದನ್ನು ಯೋಗವಾಸಿಷ್ಠದಲ್ಲಿ ಬಹಳ ಅಚ್ಚುಕಟ್ಟಾಗಿ ಹೇಳಲಾಗಿದೆ:

मन एव मनुष्याणां कारणं बन्धमोक्षयोः ।

बन्धाय विषयासक्तं मुक्त्यै निर्विषयं स्मृतम् ॥[4]

ಅಂದರೆ ವಿಷಯಾನುಸಂಧಾನದಲ್ಲಿ ಮುಳುಗಿಬಿಟ್ಟಾಗ ಇದರಿಂದ ಬಂಧವೇ ಉಂಟಾಗುತ್ತದೆ. ವಿಷಯ ಧ್ಯಾನದಿಂದ ದೂರವಾದಾಗ ಇದೇ ಮನಸ್ಸು ಮುಕ್ತಿಗೂ ಸಾಧನವಾಗುವುದು. ಈ ಮನಸ್ಸೇ ಬಂಧನಕ್ಕೂ, ಮೋಕ್ಷಕ್ಕೂ ನಿಮಿತ್ತವಾಗುತ್ತದೆ. ಮನುಸ್ಮೃತಿಯಲ್ಲಿ ಹೇಳಿರುವಂತೆ

दृष्टिपूतं न्यसेत्पादं वस्त्रपूतं जलं पिबेत् ।

सत्यपूतां वदेद्वाचं मनःपूतं समाचरेत् ॥[5]

ಕಣ್ಣಿನಿಂದ ನೋಡಿ ಹೆಜ್ಜೆ ಇಡಬೇಕು; ಬಟ್ಟೆಯಿಂದ ಶೋಧಿಸಿ ನೀರನ್ನು ಕುಡಿಯಬೇಕು; ಸತ್ಯದಿಂದ ಶುದ್ಧವಾದ ಮಾತನ್ನಾಡಬೇಕು; ಮನಸ್ಸಿನಿಂದ ಪವಿತ್ರವಾದ ಕೆಲಸವನ್ನು ಮಾಡಬೇಕು. ಯಾವುದಕ್ಕೂ ಮೊದಲು ಮನಸ್ಸಿರಬೇಕು. ಮನಸ್ಸಿನ ಮಹತ್ವದ ಮೂರು ತಪಸ್ಸುಗಳನ್ನು ಕುರಿತು ಭಗವದ್ಗೀತೆಯಲ್ಲಿ ಗೀತಾಚಾರ್ಯನು ಬಹಳ ಉತ್ತಮ ವ್ಯಾಖ್ಯಾನವನ್ನು ಕೊಟ್ಟಿರುತ್ತಾನೆ:–

---

4. ब्रह्मबिन्दूपनिषद्, श्लो–2

5. **ಸುಭಾಷಿತಮಂಜರೀ,** ಧರ್ಮ–ಶ್ಲೋ–65 ಮನುಸ್ಮೃತಿ, 6–46. ಪು–239,(2001) 12 ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18.

देवद्विजगुरुप्राज्ञपूजनं शौचमार्जवम् ।

ब्रह्मचर्यमहिंसा च शारीरं तप उच्यते ॥

अनुद्वेगकरं वाक्यं सत्यं प्रियहितं च यत् ।

स्वाध्यायाभ्यसनं चैव वाङ्मयं तप उच्यते ॥

मनःप्रसादः सौम्यत्वं मौनमात्मविनिग्रहः ।

भावसंशुद्धिरित्येतत्तपो मानसमुच्यते ॥[6]

ದೇವ, ದ್ವಿಜ, ಗುರು ಜ್ಞಾನಿಗಳ ಪೂಜನ, ಶುಚಿತ್ವ, ಸರಳತೆ, ಬ್ರಹ್ಮಚರ್ಯ ಮತ್ತು ಅಹಿಂಸೆ–ಇವುಗಳು ಕಾಯಿಕ ತಪಸ್ಸು. ಮನಸ್ಸಿಗೆ ಉದ್ವೇಗವನ್ನುಂಟುಮಾಡದ ಮತ್ತು ಸತ್ಯವೂ ಪ್ರಿಯವೂ ಹಿತಕರವೂ ಆದ ನುಡಿ, ವೇದಾಭ್ಯಾಸ–ಇವುಗಳು ವಾಙ್ಮಯವಾದ ತಪಸ್ಸು. ಮನಸ್ಸಿನ ಪ್ರಸನ್ನತೆ, ಸೌಮ್ಯತೆ, ಮಿತಭಾಷಣ, ಮನಶ್ಶುದ್ಧಿ – ಇವುಗಳು ಮಾನಸ ತಪಸ್ಸು. ಹೀಗೆ ಮನಸ್ಸನ್ನು ಒಂದು ವಿಚಾರದೆಡೆ ಕೇಂದ್ರೀಕೃತಗೊಳಿಸಿ ಶ್ರದ್ಧಾಭಕ್ತಿಯಿಂದ ಧ್ಯಾನಾಸಕ್ತರಾಗಬೇಕೆಂಬುದೇ ತಪಸ್ಸು, ತಪಸ್ಸಿನ ಮೂಲವೇ ಮನಸ್ಸು ಹಾಗೂ ಇದರ ನಿಯಂತ್ರಣ. ಅದಕ್ಕೇ ಜ್ಞಾನಿಗಳು ಹೇಳುತ್ತಾರೆ ಭಗವದ್ಗೀತೆಗಿಂತ ದೊಡ್ಡ ಮನೋವಿಜ್ಞಾನದ ಗ್ರಂಥ ಬೇಕೇ?

ಇನ್ನು ವೈಜ್ಞಾನಿಕವಾಗಿ ಚಿಂತನೆ ಮಾಡಿದಾಗ, ಮನೋವಿಜ್ಞಾನವು ಹೇಗೆ ಒಂದು ಸ್ವತಂತ್ರ ವಿಷಯವಾಗಿ ಬಹಳಷ್ಟು ಆಧುನಿಕ ಅಭಿವೃದ್ಧಿಯನ್ನು ಕಂಡಿರುವುದಾಗಿದೆ. ಶಿಕ್ಷಣ ಕ್ಷೇತ್ರದಲ್ಲಂತೂ ಇದರ ಪಾತ್ರ ಮಹತ್ವಪೂರ್ಣದ್ದಾಗಿರುತ್ತದೆ. ಶಿಕ್ಷಣಶಾಸ್ತ್ರ ಹಾಗೂ ಮನೋವಿಜ್ಞಾನವು ಪರಸ್ಪರ ಅವಿನಾಭಾವ ಸಂಬಂಧವನ್ನು ಬೆಳೆಸಿಕೊಂಡಿದೆ. ಒಂದನ್ನು ಅಗಲಿ ಮತ್ತೊಂದು ಇರಲಾರದು. ಕಲಿಕೆಯೂ, ಬೋಧನೆಯೂ ಅಸ್ವಾದನೀಯವಾಗುವುದರಲ್ಲಿ ಶೈಕ್ಷಣಿಕ ಮನೋವಿಜ್ಞಾನದ ಪ್ರಾಧಾನ್ಯತೆಯಿರುತ್ತದೆ. ಶಿಕ್ಷಣ ಮತ್ತು ಮನೋವಿಜ್ಞಾನದ ಸಂಬಂಧ ಕಣ್ಣಿಗೆ ಕಾಣುವುದಿಲ್ಲ, ಆದರೆ ಒಂದಿಲ್ಲದೆ ಮತ್ತೊಂದರ ಕ್ರಿಯೆ ನಡೆಯುವುದಿಲ್ಲ. ಪಂಚತಂತ್ರದಲ್ಲೇ ಇದಕ್ಕೆ ಸಮಂಜಸವಾದ ಒಂದು ವಿಚಾರ ಬರುತ್ತದೆ:–

यच्छञ्जलमपि जलदो वल्लभतामेति सकललोकस्य ।

नित्य प्रसारितकरो मित्रोऽपि न वीक्षितुं शक्यः ॥[7]

---

6. भगवद्गीता, 17–14, 15, 16

7. **ಸುಧಾಕರ್ ಮಾಲವೀಯ,** ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಮಿತ್ರಸಂಪ್ರಾಪ್ತಿ–ಶ್ಲೋ–78, ಪು–353, (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಅದೇನೆಂದರೆ, ಮೋಡವು ಬರಿಯ ನೀರನ್ನು ಕೊಡುತ್ತಿದ್ದರೂ ಎಲ್ಲ ಜನರಿಗೂ ಪ್ರಿಯವಾಗಿರುತ್ತದೆ. ಅದು ಅವಶ್ಯಕವೂ ಹೌದು. ಸೂರ್ಯನು (ಮಿತ್ರನಾಗಿದ್ದರೂ) ಕಿರಣಗಳನ್ನು ಹರಡುತ್ತಾನೆ –ಕೈ ನೀಡಿಕೊಂಡಿರುತ್ತಾನಾದ್ದರಿಂದ ಅವನನ್ನು ಕಣ್ಣೆತ್ತಿ ನೋಡಲೂ ಸಾಧ್ಯವಿಲ್ಲ. ಆದರೆ ಅವನ ಕಿರಣಗಳು ಪ್ರತಿಯೊಂದು ಜೀವರಾಶಿಗಳಗೂ ತನ್ನ ಪ್ರಭೆಯಿಂದ ಪಾಲನೆಪೋಷಣೆ ಮಾಡುತ್ತಾನೆ. ಹೀಗೆಯೇ ಮನೋವಿಜ್ಞಾನವು ಶಿಕ್ಷಣ ಕ್ಷೇತ್ರದ ಪ್ರತಿಯೊಂದು ಕಾರ್ಯ ವ್ಯವಸ್ಥೆಯಲ್ಲೂ ತನ್ನ ಪ್ರಭೆಯಿಂದ ಕ್ರಮಬದ್ಧವಾದ ಅಭಿಜ್ಞಾನವನ್ನೊದಗಿಸಿ ಪೋಷಿಸುತ್ತದೆ.

ಪ್ರತಿಯೊಬ್ಬ ಯಶಸ್ವೀ ಶಿಕ್ಷಕ, ಬೋಧಕ ಅಥವಾ ಅದ್ಯಾಪಕ ತನ್ನ ಪವಿತ್ರವಾದ ಬೋಧನಾ ಕಾರ್ಯದಲ್ಲಿ ಜವಾಬ್ದಾರಿಯನ್ನು ವಹಿಸಿಕೊಂಡಾಗ ಆತನಿಗೆ ಮನೋವಿಜ್ಞಾನದ ಅಭಿಜ್ಞಾನ ಇರಬೇಕಾದುದು ಅತ್ಯಾವಶ್ಯಕ. ಒಂದು ನಿರ್ದಿಷ್ಟವಾದ ಮನೋವಿಜ್ಞಾನ ಮತ್ತು ಶೈಕ್ಷಣಿಕ ಮನೋವಿಜ್ಞಾನದ ಅಧ್ಯಯನವು ಪ್ರತಿ ಬೋಧಕರಿಗೆ ಮಾನವ ಪರಂಪರೆಯಿಂದ ಬಂದಿರುವ ಮನುಷ್ಯನ ಸ್ವಭಾವದಲ್ಲಿನ ಜಟಿಲತೆಗಳು ಮತ್ತು ವೈಭವಗಳನ್ನು ಅಂತರ್ದೃಷ್ಟಿಯಿಂದ ನೋಡಲು ನೆರವಾಗುತ್ತದೆ. ಶಿಕ್ಷಣವು ಒಂದು ಪ್ರಕ್ರಿಯೆಯಾಗಿ ಪರಿಕಲ್ಪನೆ ಮಾಡಿಕೊಂಡಾಗ ಮಗುವಿನ ವರ್ತನೆಯಲ್ಲಿ ಅಪೇಕ್ಷಣೀಯ ಬದಲಾವಣೆಗಳನ್ನು ತರಲು ಮನೋವಿಜ್ಞಾನದ ಸಮರ್ಪಕ ಜ್ಞಾನವು ಮಗುವನ್ನು ಅಥವಾ ಕಲಿಕಾ ವ್ಯಕ್ತಿಯನ್ನು ಸಂಪೂರ್ಣವಾಗಿ ಅರ್ಥೈಸಿಕೊಂಡು, ಸೂಕ್ತವಾದ ಶಿಕ್ಷಣವನ್ನು ಒದಗಿಸಲು ಸಹಾಯಕವಾಗಿರುತ್ತದೆ.[8]

"ಜೀವಿಗಳ ವರ್ತನೆಯನ್ನು ಕುರಿತ ಶಾಸ್ತ್ರ ಮನೋವಿಜ್ಞಾನ. ಇದರ ಒಂದು ಶಾಖೆ ಶೈಕ್ಷಣಿಕ ಮನೋವಿಜ್ಞಾನ. ಮನೋವಿಜ್ಞಾನದೆಡೆಗೆ ಅರ್ಥೈಸಿಕೊಳ್ಳಲು ಪ್ರಯತ್ನಿಸಿದರೆ, ಮನೋವಿಜ್ಞಾನವು ಮೂಲತಃ ತತ್ವಶಾಸ್ತ್ರದ ಬಾಹ್ಯವೃದ್ಧಿಯಾಗಿದೆ." ಮನೋವಿಜ್ಞಾನ ಎಂಬ ಪದವು ಮೂಲ ಗ್ರೀಕ್ ಪದಗಳಾದ **PSYCHE-** ಮತ್ತು **LOGOS-** ನಿಂದ ಪಡೆಯಲಾಗಿದೆ[9]. "ಪ್ರಾಚೀನ ಕಾಲದಿಂದಲೂ ಬಂದಿರುವ ಒಂದು ನಂಬಿಕೆಯೆಂದರೆ, ಮಾನವನು ಜೀವಂತವಾಗಿರುವವರೆಗೆ ದೇಹದಲ್ಲಿ ಆತ್ಮ ಇರುವುದೆಂದೂ ಹಾಗೂ ಈ ಆತ್ಮದ ಅಧ್ಯಯನವೇ ಆತ್ಮಜ್ಞಾನ. ಆತ್ಮಜ್ಞಾನಕ್ಕೂ ಮನೋವಿಜ್ಞಾನಕ್ಕೂ ಇತ್ತೀಚಿನವರೆಗೂ ಯಾವ ವ್ಯತ್ಯಾಸವನ್ನೂ ಕಲ್ಪಿಸಿರಲಿಲ್ಲ. ಹದಿನೇಳನೇ ಶತಮಾನದಲ್ಲಿ **RENE DESCARTES** ಎಂಬ ಫ್ರೆಂಚ್ ತತ್ವಜ್ಞಾನಿ ಹಾಗೂ ಗಣಿತಶಾಸ್ತ್ರಜ್ಞ **"ಆತ್ಮ ಮತ್ತು ಮನಸ್ಸು ಇವೆರಡೂ ಪ್ರತ್ಯೇಕ"** ಎಂದು ಘೋಷಿಸಿದನು.

8. BhatiaHansRaj, "A text book of Educaional Psychology", Asia Publication House, Bombay-1. (1905)-Sect.1, Intro. Chap-1-PP-4-7

9. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಪು–2,(2009) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳುಬಡಾವಣೆ, ದಾವಣಗೆರೆ–577005.

ಮನಸ್ಸು ದೇಹದಲ್ಲಿದ್ದರೂ ತನ್ನದೇ ಆದ ರೀತಿಯಲ್ಲಿ ಕೆಲಸ ಮಾಡುತ್ತದೆಂದು ಸೂಚಿಸಿದನು. ಮನಸ್ಸಿನೊಡನೆ ಅಂಟಿಕೊಂಡು ಸಾಗಿಬಂದಿದ್ದ ಆತ್ಮವನ್ನು ಬಿಡುಗಡೆ ಮಾಡಿದನು. ಆ ವೇಳೆಗೆ ನರಗಳು, ಮಾಂಸಖಂಡಗಳು, ರಸಗ್ರಂಥಿಗಳು, ಜ್ಞಾನೇಂದ್ರಿಯಗಳು ಇವುಗಳ ಬಗ್ಗೆ ವಿವರಣೆ ದೊರಕುವಂತಾಗಿತ್ತು. ಅದರ ಫಲವಾಗಿ ಮನೋವಿಜ್ಞಾನಕ್ಕೆ ಒಂದು ಸ್ಪಷ್ಟ ಅರ್ಥ ಬಂತು. ಅಂದಿನಿಂದ ಅದು ಆತ್ಮವಿಜ್ಞಾನದಿಂದ ಬೇರ್ಪಟ್ಟು ಮನೋವಿಜ್ಞಾನವಾಯಿತು. ಪ್ರಯೋಗಗಳನ್ನು ನಡೆಸಿ ಮನಸ್ಸಿನ ವ್ಯಾಪಾರಗಳ ಬಗ್ಗೆ ತತ್ವ ಸಿದ್ಧಾಂತಗಳನ್ನು ರೂಪಿಸುವ ಯತ್ನ ಆರಂಭವಾಯಿತು."[10]

**"ಮನಸ್ಸು"** ಎಂಬ ಪದ ಎಲ್ಲರಿಗೂ ತಿಳಿದಿರುವುದೇ ಆಗಿದೆ. ನಾವು ಪ್ರಪಂಚವನ್ನು ಅರಿತು ಅರ್ಥ ಮಾಡಿಕೊಳ್ಳುವುದು ಮನಸ್ಸಿನಲ್ಲಿ. ನಮ್ಮ ವಿವಿಧ ವರ್ತನೆಗಳಿಗೆ ಆಧಾರವಾಗಿರತಕ್ಕ ಅಂಗವೂ ಮನಸ್ಸೇ. ನಮ್ಮ ಆಲೋಚನೆ, ವಿವೇಚನೆ, ಸಂವೇದನೆ, ಆಸಕ್ತಿ, ನೆನಪು, ಮರೆವು, ದುಃಖದುಮ್ಮಾನ, ಕರುಣೆ, ಅನುಕಂಪ ಇವೆಲ್ಲಕ್ಕೂ ಆಧಾರ ಮನಸ್ಸೇ. ಆದರೆ ಅದು ಎಲ್ಲಿದೆ? ಮೆದುಳಿನಲ್ಲಿದೆಯೇ? ಹಾಗಾದರೆ ನರಮಂಡಲದ ಯಾವುದಾದರೂ ಒಂದು ಭಾಗದಲ್ಲಿದೆಯೇ? ದೇಹದ ವಿವಿಧ ಅಂಗಗಳ ವ್ಯಾಪಾರಗಳು ಮನಸ್ಸಿನೊಡನೆ ಸಂಬಂಧಿಸಿವೆ. ಒಂದನ್ನಗಲಿ ಇನ್ನೊಂದು ತನ್ನ ಕಾರ್ಯ ನಡೆಸುವಂತಿಲ್ಲ. ಹಾಗಾದರೆ ದೇಹ–ನರಮಂಡಲವನ್ನೇ ಮನಸ್ಸು ಆವರಿಸಿದೆಯೇ? ಗೀತೆಯಲ್ಲಿ ಒಂದು ಮಾತು ಹೀಗಿದೆ:–

श्रोत्रं चक्षुः स्पर्शनं च रसनं घ्राणमेव च ।

अधिष्ठाय मनश्चायं विषयानुपसेवते ॥[11]

ಜೀವಾತ್ಮನು ಕಿವಿ, ಕಣ್ಣು, ಚರ್ಮ, ನಾಲಿಗೆ, ಮೂಗು ಮತ್ತು ಮನಸ್ಸು ಇವುಗಳನ್ನು ಆಶ್ರಯಿಸಿ ವಿಷಯಗಳನ್ನು ಅನುಭವಿಸುತ್ತಾನೆ.

ಮನಸ್ಸಿಗೆ ಎರಡು ಭಾಗಗಳಿರುತ್ತವೆ. ಅವುಗಳೆಂದರೆ– ಬಾಹ್ಯಮನಸ್ಸು ಮತ್ತು ಅಂತರ್ಮನಸ್ಸು. ಮನಸ್ಸಿನ ಎರಡೂ ಭಾಗಗಳ ಕಾರ್ಯ ಬೇರೆ ಬೇರೆಯದಾಗಿರುತ್ತದೆ. ನಾವು ಯಾವ ವಿಚಾರವನ್ನು ಅರಿತು–ಕೊಂಡು ಮಾಡುತ್ತೇವೆಯೋ, ಆ ವಿಚಾರ ಬಾಹ್ಯ ಮನಸ್ಸಿನದಾಗಿರುತ್ತದೆ. ಅಂತರ್ಮನ ಬಾಹ್ಯಮನದ ಪಟ್ಟು ದೊಡ್ಡದು. ನಮ್ಮ ಆಗುಹೋಗುಗಳಲ್ಲಿ ಅಂತರ್ಮನದ ಸಹಭಾಗವು ದೊಡ್ಡದಾಗಿರುತ್ತದೆ. ಮನಸ್ಸಿನ ನೆಲೆಯನ್ನು ಗುರುತಿಸುವುದು ಇಂದಿಗೂ ಸಾಧ್ಯವಾಗಿರುವುದಿಲ್ಲ.ಆದರೆ ಮನಸ್ಸು ನಿರ್ವಹಿಸುವ ವ್ಯಾಪಾರಗಳನ್ನೂ,

---

10. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಪು–17,18.(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4.
11. भगवद्गीता, अध्याय–15, श्लोकः–9.

ಅವುಗಳ ಸ್ವರೂಪವನ್ನೂ ನಾವು ನಿರಂತರ ಅನುಭವಿಸುತ್ತಿದ್ದೇವೆ. ಹಾದಿಯಲ್ಲಿ ಹಸಿವಿನಿಂದ ಬಳಲುತ್ತಿರುವ ಬಡ ವ್ಯಕ್ತಿಯೊಬ್ಬನನ್ನು ಕಂಡಾಗ ಅವನ ಕಷ್ಟಗಳ ಸ್ವರೂಪ ನಮಗೆ ಅರ್ಥವಾಗುತ್ತದೆ. "ಪ್ರಜ್ಞೆ" ತಕ್ಷಣ ಮನಸ್ಸಿನಲ್ಲಿ ಮರುಕ ಹುಟ್ಟಿಸುತ್ತದೆ. ಅದೇ "ರಸಭಾವ" ಆಗ ಏನಾದರೂ ಸಹಾಯ ಮಾಡಬೇಕೆನ್ನಿಸುತ್ತದೆ. ಇದೇ **"ಸಂಕಲ್ಪ"** ಇವು ಮೂರು ಮನೋವ್ಯಾಪಾರದ ಘಟ್ಟಗಳು. ಆದರೆ ನಾವು ಆ ಸ್ಥಿತಿಗಳನ್ನು ಅನುಭವಿಸಬಲ್ಲೆವಷ್ಟೆ. ಕೊನೆಯ ಘಟ್ಟಕ್ಕೆ ಅಂಟಿಕೊಂಡಂತೆ ಮತ್ತೊಂದು ಘಟ್ಟವಿದೆ. ಅದೇ ನಾವು ಆ ವ್ಯಕ್ತಿಗೆ ಮಾಡುವ ಸಹಾಯ. ಇದನ್ನೇ **"ವರ್ತನೆ"** ಎಂದು ಕರೆಯುವುದು. ಇದೊಂದೇ ನಮಗೆ ಕಾಣುವ ವ್ಯಾಪಾರ. ಹೀಗೆ ಮನಸ್ಸಿನ ವ್ಯಾಪಾರವನ್ನು ವಿವರಿಸಲು ಅನೇಕ ದೃಷ್ಟಾಂತಗಳನ್ನು ಕೊಡಬಹುದು.

ಮನೋವ್ಯಾಪಾರಗಳು ಯಾವಾಗಲೂ ಸಮಗ್ರ ಕ್ರಿಯೆಯಾಗಿ ನಡೆಯುತ್ತವೆ.[12] ಒಂದು ಸುಭಾಷಿತ ಹೇಳುತ್ತದೆ:-

अनिच्छंतोऽपि विनयं विद्याभ्यासेन बालकाः ।

भेषजेनेव नैरुज्यं प्रापणीयाः प्रयत्नतः ॥[13]

ಔಷಧವನ್ನು ಕೊಟ್ಟು ಖಾಯಿಲೆಯನ್ನು ಪರಿಹರಿಸುವಂತೆ, ಬಾಲಕರು ಇಚ್ಛಿಸದಿದ್ದರೂ ಅವರಿಗೆ ಪ್ರಯತ್ನಪೂರ್ವಕವಾಗಿ ವಿದ್ಯಾಭ್ಯಾಸವನ್ನು ಮಾಡಿಸಿ ನಯನೀತಿಗಳನ್ನು ಕಲಿಸಿಕೊಡಬೇಕು ಇದೇ ಕಾರ್ಯವನ್ನು ವಿಷ್ಣುಶರ್ಮರು ತಿಳಿಗೇಡಿಗಳಾಗಿದ್ದ ರಾಜಕುಮಾರರನ್ನು ಬಹಳ ಸಮಾಧಾನದಿಂದ ಆಸಕ್ತಿಯನ್ನು ಪ್ರೇರೇಪಿಸಿ ಅವರಿಗೊಪ್ಪುವ ವಿದ್ಯೆಯನ್ನು ಕಲಿಸಿಕೊಟ್ಟರು.

ಅಂತಿಮವಾಗಿ ಕಂಡುಕೊಂಡದ್ದೇನೆಂದರೆ, ಪ್ರಸಿದ್ಧ ಮನೋವಿಜ್ಞಾನಿ **"ವುಡ್ವರ್ಥ್"** ರವರು ಬಹಳ ಸುಂದರವಾಗಿ ಸಂಕ್ಷಿಪ್ತಗೊಳಿಸಿರುವಂತೆ "ಮನೋವಿಜ್ಞಾನವು ಮೊದಲು ಆತ್ಮವನ್ನು ಕಳೆದುಕೊಂಡಿತು, ನಂತರ ಮನಸ್ಸು, ತದನಂತರ ಪ್ರಜ್ಞೆ, ಆದರೆ ಇನ್ನೂ ಉಳಿಸಿಕೊಂಡಿರುವುದೆಂದರೆ ವರ್ತನೆ. ಈ ವರ್ತನೆಯನ್ನು ಪರಿವರ್ತನೆ ಮಾಡುವ ವಿಜ್ಞಾನವೇ ಶೈಕ್ಷಣಿಕ ಮನೋವಿಜ್ಞಾನ. ಅಲ್ಲಿಗೆ ಮನಶ್ಶಾಸ್ತ್ರವನ್ನು ಒಂದು ವಿಜ್ಞಾನ ಎಂದು ಕರೆಯಲಾಗುತ್ತದೆ. ಏಕೆಂದರೆ ಮನೋವಿಜ್ಞಾನವು ವ್ಯಕ್ತಿಗಳ ಮತ್ತು ಗುಂಪಿನ ವರ್ತನೆಯನ್ನು ವಿಶ್ಲೇಷಿಸಲು, ಊಹಿಸಲು ಅಗತ್ಯವಾದ ದತ್ತಾಂಶವನ್ನು ಸಂಗ್ರಹಿಸಲು ವೈಜ್ಞಾನಿಕ ವಿಧಾನವನ್ನು ಬಳಸಿಕೊಳ್ಳುತ್ತದೆ. ಇದು ಕಣ್ಣಿಗೆ ಕಾಣಬಹುದಾದ ವರ್ತನೆಗಳನ್ನು ಗಣನೆಗೆ ತೆಗೆದುಕೊಳ್ಳುತ್ತದೆ. ವಸ್ತುನಿಷ್ಠ ನಿದರ್ಶನ ಅಥವಾ ಸಾಕ್ಷ್ಯಾಧಾರಗಳಿದ್ದಲ್ಲಿ ಮಾತ್ರ ನೈಜ ವರ್ತನೆಯನ್ನು ಸ್ಥಿರಪಡಿಸುತ್ತದೆ. ಮನೋವಿಜ್ಞಾನವು

12. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ-2, ಪು-23, 24, 25.(1962)
ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

13. हरिहरविरचितं हरिहरसुभाषितम् , 2-39

ವೈಜ್ಞಾನಿಕವಾಗಿ ವರ್ತನೆಯನ್ನು ಅರ್ಥ ಮಾಡಿಕೊಳ್ಳಲು, ನಿಯಂತ್ರಿಸಲು, ಮತ್ತು ಮುನ್ಸೂಚಿಸಲು ಸಹಾಯ ಮಾಡುತ್ತದೆ. ಮನೋವಿಜ್ಞಾನದಲ್ಲಿ ಮಾನವನ ವರ್ತನೆಯನ್ನು ಅಧ್ಯಯನ ಮಾಡಲು ಮತ್ತು ಸಾಂಪ್ರದಾಯಿಕ ಅಭಿಪ್ರಾಯಗಳನ್ನುಪರೀಕ್ಷಿಸಲು "ವೈಜ್ಞಾನಿಕ ವಿಧಾನಗಳನ್ನು ಬಳಸಲಾಗುತ್ತಿರುವುದರಿಂದ ಮನೋವಿಜ್ಞಾನವು ಒಂದು ವರ್ತನಾ ವಿಜ್ಞಾನವಾಗಿದೆ.ಇದನ್ನು ಪ್ರಭಾವಶಾಲಿಯಾಗಿ ಪ್ರಚುರಪಡಿಸಿದವನು ಅಮೆರಿಕನ್ ಮನೋವಿಜ್ಞಾನಿಯಾದ **J.B.Watson** ಇವನ ಪ್ರಕಾರ ಮನೋವಿಜ್ಞಾನವು ವರ್ತನೆಯ ಅಧ್ಯಯನವಾಗಿದ್ದು, ವರ್ತನೆ ಎಂದರೆ ವಸ್ತು ನಿಷ್ಠವಾಗಿ ವೀಕ್ಷಿಸಬಹುದಾದ ಯಾವುದೇ ಒಂದು ಕ್ರಿಯೆ ಅಥವಾ ಚಟುವಟಿಕೆ"[14] ಎಂದು ವ್ಯಾಖ್ಯಾನಿಸಿರುತ್ತಾನೆ. ಮನೋವಿಜ್ಞಾನಕ್ಕೆ ವೈಜ್ಞಾನಿಕವಾದ ವ್ಯಾಖ್ಯೆ ನೀಡಲು ಹಲವಾರು ಮನೋವಿಜ್ಞಾನಿಗಳು ಪ್ರಯತ್ನಿಸಿದ್ದಾರೆ. ಅವುಗಳಲ್ಲಿ ಕೆಲವು ಹೀಗಿವೆ.[15]

1. "ಪರಿಸರಕ್ಕೆ ಸಂಬಂಧಿಸಿದಂತೆ ವ್ಯಕ್ತಿಯ ಚಟುವಟಿಕೆಗಳ ವೈಜ್ಞಾನಿಕ ಅಧ್ಯಯನವೇ ಮನೋವಿಜ್ಞಾನ" ಎಂದಿದ್ದಾರೆ. **ROBERT S. WOODWORTH and** ಮಾರ್ಕ್ವಿಸ್.

2. "ಜೀವನದಲ್ಲಿ ನಾವು ಎದುರಿಸುವ ಎಲ್ಲಾ ಬಗೆಯ ಸನ್ನಿವೇಶಗಳಿಗೆ ತೋರುವ ಪ್ರತಿಕ್ರಿಯೆಯನ್ನು ಕುರಿತು ಅಭ್ಯಸಿಸುವುದೇ ಮನೋವಿಜ್ಞಾನ"ಎಂದಿದ್ದಾರೆ **CHARLES E SKINNER**

3. "ವರ್ತನೆಯ ವೈಜ್ಞಾನಿಕ ಅಧ್ಯಯನವೇ ಮನೋವಿಜ್ಞಾನ, ಹಾವಭಾವಗಳು, ಮಾತು ಮತ್ತು ದೈಹಿಕ ಬದಲಾವಣೆಗಳು ಇಂತಹ ವೀಕ್ಷಣೀಯ ವರ್ತನಾ ಪ್ರಕ್ರಿಯೆಗಳು ಮತ್ತು ಆಲೋಚನೆಗಳು ಹಾಗೂ ಕನಸುಗಳು ಇಂತಹ ಊಹಿಸಬೇಕಾದ ಪ್ರಕ್ರಿಯೆಗಳನ್ನು ಅದರ ವಿಷಯ ಒಳಗೊಂಡಿದೆ."

   ಎಂದಿದ್ದಾರೆ. **KENNETH CLARK and GEORGE ARMITAGE MILLER**

ಜೀವಿಗಳ ಎಲ್ಲಾ ಚಟುವಟಿಕೆಗಳು ವರ್ತನೆಯಲ್ಲದೆ ಬೇರೆಯಲ್ಲ. ಅಂದರೆ ವ್ಯಕ್ತಿಯ, ವಯಸ್ಕರ, ಮಗುವಿನ, ಪ್ರಾಣಿಗಳ ಅಥವಾ ಗುಂಪಿನ ವರ್ತನೆಯನ್ನು ಗಮನಿಸುವುದೆಂದು ಒಂದು ವಿಶಾಲ ಅರ್ಥದಲ್ಲಿ ತಿಳಿಸಲಾಗಿದೆ. ವರ್ತನೆಯ ಮಾರ್ಪಾಡೇ ಶಿಕ್ಷಣ. ಶಿಕ್ಷಣವೇಶಕ್ತಿ. ಇಲ್ಲಿವರ್ತನೆ ಅಧ್ಯಯನಕ್ಕೆ–ಮನಶ್ಶಾಸ್ತ್ರವನ್ನು, ಅದೇ ವರ್ತನೆಯನ್ನು ಮಾರ್ಪಾಡು ಮಾಡಲು–ಶಿಕ್ಷಣಶಾಸ್ತ್ರವನ್ನು ಅವಲಂಬಿಸಬೇಕಾಗುತ್ತದೆ. ಇವೆರಡೂ ಅವಿನಾಭಾವ ಸಂಬಂಧ ಹೊಂದಿರುವುದಾಗಿದೆ. ಇದನ್ನೇ ಅನ್ವಯಿಸಿ ಶೈಕ್ಷಣಿಕ ಮನೋವಿಜ್ಞಾನ ಎಂದು

14. **ವಾಮದೇವಪ್ಪ ಎಚ್.ವಿ**. ಶೈಕ್ಷಣಿಕ ಮನೋವಿಜ್ಞಾನ, ಪು.2,(2009) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳುಬಡಾವಣೆ, ದಾವಣಗೆರೆ–577005.
15. **ವಾಮದೇವಪ್ಪ ಎಚ್.ವಿ**. ಶೈಕ್ಷಣಿಕ ಮನೋವಿಜ್ಞಾನ, ಪು.3.(2009), ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳುಬಡಾವಣೆ, ದಾವಣಗೆರೆ– 577005.

ಹೇಳುವುದು. ಶೈಕ್ಷಣಿಕ ಮನೋವಿಜ್ಞಾನವು ಅನ್ವಯಿಕ ಮನೋವಿಜ್ಞಾನದ ಒಂದು ಶಾಖೆ. ಮನೋವಿಜ್ಞಾನದ ಜ್ಞಾನವನ್ನು ಶೈಕ್ಷಣಿಕ ಕ್ಷೇತ್ರಕ್ಕೆ ಅನ್ವಯಿಸುವ ಪ್ರಯತ್ನವಾಗಿದೆ. ಇದರೊಳಗೆ ಮನೋವೈಜ್ಞಾನಿಕ ತತ್ವಗಳನ್ನು ಹಾಗೂ ತಂತ್ರಗಳನ್ನು ಶೈಕ್ಷಣಿಕ ಸನ್ನಿವೇಶಗಳಲ್ಲಿ ಮಾನವನ ವರ್ತನೆಗಳಿಗೆ ಅನ್ವಯಿಸಲಾಗುತ್ತದೆ. **"Education is the modification of behavior**." ಕೊಠಾರಿ ಶಿಕ್ಷಣ ಆಯೋಗದ ವರದಿಯಲ್ಲಿ **"The destiny of our nation is being shaped in her classrooms"** ಎಂದು ಪ್ರಾರಂಭಿಕ ವಾಕ್ಯದಲ್ಲಿ ತಿಳಿಸಿರುವ ವಿಚಾರ ಸರ್ವಕಾಲಿಕವಾದುದು. ಅಂದರೆ ಯಾವುದೇ ಒಂದು ರಾಷ್ಟ್ರದ ಭವ್ಯ ಭವಿಷ್ಯತ್ ನಿರ್ಧಾರವಾಗುವುದು ಅಲ್ಲಿನ ವ್ಯವಸ್ಥಿತ ತರಗತಿ ಕೋಣೆಗಳಲ್ಲಿ ."ಎಂದು ಶಿಕ್ಷಣದ ಮಹತ್ವದ ಬಗ್ಗೆ ಸ್ಪಷ್ಟಪಡಿಸಿದೆ. ಸದೃಢಮನಸ್ಸಿನ ಆರೋಗ್ಯವಂತ, ಸಂತೋಷದಾಯಕ, ಉಲ್ಲಾಸದ ಯುವಕರು ಭಾರತದ ಆರ್ಥಿಕಾಭಿವೃದ್ಧಿಗೆ ಬೇಕಾಗಿದ್ದಾರೆ ಎಂದು ಗಾಂಧೀಜಿ ಹೇಳಿದ ಮಾತು ಇಂದಿಗೂ ಎಷ್ಟೊಂದು ಸತ್ಯವೆನಿಸುತ್ತದೆ. ಇಂದು ಶಿಕ್ಷಣದ ರಕ್ಷಣೆ ಮುಖ್ಯವೆನಿಸುತ್ತದೆ. ಹಾಗೆಯೇ ಸ್ವಾಮಿ ವಿವೇಕಾನಂದರು ಹೇಳಿರುವ ಮಾತು ಎಷ್ಟು ಪ್ರಸ್ತುತವಾಗಿದೆ. "ಶಿಕ್ಷಣವೆಂದರೆ, ಕೇವಲ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುವುದು ಅಥವಾ ನೌಕರಿಯನ್ನು ಪಡೆದುಕೊಳ್ಳುವುದಲ್ಲ, ಅದು ಒಂದು ಸ್ಥಿರವಾದ ನೈಜ ಚಾರಿತ್ರ್ಯ ಮತ್ತು ಮಾನವತ್ವ ನಿರ್ಮಿಸುವುದಾಗಿರಬೇಕು" ಇದನ್ನೇ ವಿಷ್ಣುಶರ್ಮರು ಪಂಚತಂತ್ರದ ಮೂಲಕ ಅರಸುಕುಮಾರರ ಸರ್ವತೋಮುಖ ಬೆಳವಣಿಗೆಗೆ ನೀತಿಶಿಕ್ಷಣ, ರಾಜನೀತಿ ಶಿಕ್ಷಣವನ್ನು ವ್ಯವಸ್ಥೆಗೊಳಿಸಿದ್ದಾರೆ. ಉದಾಹರಣೆಗೆ ಒಂದು ಸುಭಾಷಿತದಲ್ಲಿ ಹೇಳಿರುವಂತೆ:–

भये वा यदि वा हर्षे संप्राप्ते यो विमर्षयेत् ।
कृत्यं न कुरुते वेगान्न स संतापमाप्नुयात् ॥[16]

ಭಯವುಂಟಾದಾಗ ಅಥವಾ ಸಂತೋಷವುಂಟಾದಾಗ ಯಾವಾತನು ನಿಧಾನವಾಗಿ ಯೋಚಿಸುತ್ತಾನೆಯೋ, ತಟ್ಟನೆ ಯಾವನು ಕೆಲಸ ಮಾಡುವುದಿಲ್ಲವೋ, ಅವನು ದುಃಖವನ್ನು ಹೊಂದುವುದಿಲ್ಲ ಇದನ್ನೇ ಉತ್ತಮ ಸನ್ನಿವೇಶಗಳನ್ನು ಒದಗಿಸಿ, ಆಕರ್ಷಕ ಕಥೆಗಳನ್ನು ಜೋಡಿಸಿ ಕೊನೆಯ ತಂತ್ರ. "ಅಪರೀಕ್ಷಿತಕಾರಕ"ದಲ್ಲಿ ವಿವರವಾಗಿ ತಿಳಿಸಿದ್ದಾರೆ.

ಈ ಒಂದು ಮಹತ್ವಪೂರ್ಣ ವಿಚಾರವನ್ನಿಟ್ಟುಕೊಂಡು ಭಾರತದ ಘನ ಸರ್ಕಾರವು ೨೦೨೦ರ ನೂತನ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಜಾರಿಗೆ ತಂದಿರುವುದು ಬಹಳ ಸಂತೋಷದ ವಿಷಯವಾಗಿದೆ. ಇದು ಬಹುವಿಷಯಗಳ ಶಿಕ್ಷಣವನ್ನು ಉತ್ತೇಜಿಸುತ್ತದೆ. ಹಾಗೆಯೇ ನೀತಿಶಿಕ್ಷಣದ

---

೧೬. **ಸುಭಾಷಿತಮಂಜರೀ, ವಿವೇಕ** ಶ್ಲೋ–೭೩, ಪು–೨೮೧, (೨೦೦೧) ಸುಭಾಷಿತರತ್ನಭಾಂಡಾಗಾರ ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–೧೮

ವಿಚಾರದಲ್ಲೂ ಮಹತ್ವವನ್ನು ನೀಡಿದೆ. ಇದು ಮಾನವನ ಸರ್ವತೋಮುಖ ಬೆಳವಣಿಗೆಗೆ ಪ್ರೇರಕ ಹಾಗೂ ಪೂರಕವಾಗಿರುತ್ತದೆ. ಶಿಕ್ಷಣಶಾಸ್ತ್ರವು ವ್ಯಕ್ತಿಯ ಬೆಳವಣಿಗೆಯೊಂದಿಗೆ ಸಂಬಂಧಿಸಿದ ಶಿಕ್ಷಣ ವಿದ್ಯಮಾನಗಳ ಒಂದು ವ್ಯವಸ್ಥೆಯಾಗಿದೆ. ಅದೇ ಮನೋವಿಜ್ಞಾನವು, ಒಬ್ಬ ವ್ಯಕ್ತಿಯನ್ನು, ಅವನ ಮನಸ್ಸನ್ನು ಅಧ್ಯಯನ ಮಾಡುವುದು. ಇಂಥಹ ಒಂದು ಹಿನ್ನೆಲೆಯನ್ನು ಆ ಕಾಲದಲ್ಲೇ ವಿಷ್ಣುಶರ್ಮರು ಪಂಚತಂತ್ರದಲ್ಲಿ ಎಷ್ಟರಮಟ್ಟಿಗೆ ವ್ಯವಸ್ಥೆಗೊಳಿಸಿದ್ದಾರೆಂಬುದು ಇದರ ಅಧ್ಯಯನದಿಂದ ತಿಳಿದುಬರುತ್ತದೆ. ಅವರು ಅಳವಡಿಸಿರುವ ಸೂಕ್ತಿಗಳು, ನೀತಿಪಾಠಗಳು, ಕಥಾಗುಚ್ಛಗಳು ಬದುಕಿನ ಶಿಕ್ಷಣವನ್ನು ಮನೋಜ್ಞವಾಗಿ ಒದಗಿಸುತ್ತವೆ. ಉತ್ತಮ ಗುಣಗಳು, ವರ್ತನೆಗಳು ಹೇಗೆ ವ್ಯಕ್ತಿತ್ವವಿಕಸನದಲ್ಲಿ ಎಂತಹ ಪಾತ್ರ ವಹಿಸುತ್ತವೆ ಹಾಗೂ ದುರ್ವರ್ತನೆಗಳು ಹೇಗೆ ವ್ಯಕ್ತಿತ್ವವನ್ನು ನಾಶಗೊಳಿಸುತ್ತವೆ ಎಂಬುದರ ಬಗ್ಗೆ ವಿಶೇಷ ಜಾಗೃತಿಯನ್ನು ಹಾಗೂ ಎಚ್ಚರಿಕೆಯನ್ನು ಒದಗಿಸಿ ನೀತಿಬೋಧಕವಾಗಿದೆ. ಉದಾಹರಣೆಗೆ ಒಗ್ಗಟ್ಟಿನಲ್ಲಿ ಬಲವಿದೆ ಎಂಬುದನ್ನು ಎಂಥಹ ಸರಳವಾಗಿ ಅರ್ಥೈಸಲಾಗಿದೆ.

बहूनामप्यसाराणां समवायो हि दुर्जयः ।

तृणैरावेष्यते रज्जुर्यया नागोऽपि बद्धयते ॥[17]

ಅಂದರೆ ಕಡಿಮೆ ಶಕ್ತಿಯುಳ್ಳ ಅನೇಕ ವಸ್ತುಗಳು ಒಂದುಗೂಡಿದಾಗ ಅದನ್ನು ಗೆಲ್ಲುವುದು ಅಶಕ್ಯವಾಗುತ್ತದೆ. ಹುಲ್ಲುಗಳಿಂದ ಹೊಸೆಯಲ್ಪಟ್ಟ ಹಗ್ಗದಿಂದ ಆನೆಯೂ ಕೂಡ ಕಟ್ಟಲ್ಪಡುತ್ತದೆ.



17. **ಸುಧಾಕರ್ ಮಾಲವೀಯ,** ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿ ತಂಪಂಚತಂತ್ರಮ್, ಮಿತ್ರಭೇದಃ– ಶ್ಲೋ–361, ಪು–232, (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

# ಅಧ್ಯಾಯ-2-2. ಶೈಕ್ಷಣಿಕ ಮನೋವಿಜ್ಞಾನ-ಅನ್ವಯಿಕವಿಜ್ಞಾನ-ಅರ್ಥ-ವ್ಯಾಖ್ಯೆ-ಪ್ರಾಮುಖ್ಯತೆ

ಶೈಕ್ಷಣಿಕ ಮನೋವಿಜ್ಞಾನ ಎಂಬ ಶಬ್ದ **"ಶಿಕ್ಷಣ"** ಮತ್ತು **"ಮನೋವಿಜ್ಞಾನ"** ಎಂಬ ಎರಡು ಶಬ್ದಗಳಿಂದ ಕೂಡಿದೆ. ಶಿಕ್ಷಣದ ಗುರಿ ವ್ಯಕ್ತಿಯ ಸರ್ವಾಂಗೀಣ ವಿಕಾಸವನ್ನು ಹೊಂದುವುದಾಗಿದೆ. ಶಿಕ್ಷಣವು ಕಲಿಯುವಿಕೆ ಕುರಿತದ್ದಾಗಿದೆ. ಕಲಿಯುವ ವ್ಯಕ್ತಿ, ವಿಧಾನ ಮತ್ತು ಕಲಿಯಲು ಬೇಕಾಗುವ ಸನ್ನಿವೇಶಗಳು ಶಿಕ್ಷಣ ಕ್ಷೇತ್ರದ ಆಧಾರ ಸ್ಥಂಭಗಳು. ಈ ಎಲ್ಲವುಗಳನ್ನೂ ಶೋಧಿಸಿ, ವಿಶ್ಲೇಷಿಸಿ ವಿವರಿಸುವ ಕೆಲಸ ಮನೋವಿಜ್ಞಾನದ್ದಾಗಿದೆ.

**ಮಹಾತ್ಮ ಗಾಂಧೀಜಿ ಮತ್ತು ಥಾಮಸ್ ಆಲ್ವ ಎಡಿಸನ್**

ಕಲಿಯುವಿಕೆ ಪರಿಣಾಮಕಾರಿಯಾಗಿ ಸಾಗಬೇಕಾದರೆ ಬೋಧಿಸುವಿಕೆ ಮನೋವೈಜ್ಞಾನಿಕ ತತ್ವಗಳಿಗೆ ಅನುಗುಣವಾಗಿ ಸಾಗಬೇಕು. ಮನೋವಿಜ್ಞಾನವು ಏನು? ಏಕೆ? ಮತ್ತು ಹೇಗೆ? ಎಂಬ ಮೂರು ಮೂಲಭೂತ ಪ್ರಶ್ನೆಗಳಿಗೆ ತೃಪ್ತಿಕರವಾದ ಉತ್ತರವನ್ನು ಕಂಡುಕೊಳ್ಳಲು ಪರಿಶ್ರಮಿಸುವುದು. ಕಲಿಯುವಿಕೆ ಮತ್ತು ಕಲಿಸುವಿಕೆಯಲ್ಲಿ ಈ ಪ್ರಶ್ನೆಗಳು ಬಹಳ ಮುಖ್ಯವಾಗುವುದು. ಶಿಕ್ಷಕನು ಏನನ್ನು ಬೋಧಿಸಬೇಕು? ಏಕೆ ಬೋಧಿಸಬೇಕು? ಹೇಗೆ ಬೋಧಿಸಬೇಕು? ಮತ್ತು ಯಾವಾಗ ಬೋಧಿಸಬೇಕು? ಎಂಬುದೆಲ್ಲವನ್ನೂ ಕರಾರುವಾಕ್ಕಾಗಿ ವಿಶ್ಲೇಷಣೆಗೈದು ಶಿಕ್ಷಣವನ್ನು ನೀಡಬೇಕು. ಅದೇ ರೀತಿಯಲ್ಲಿ ವಿದ್ಯಾರ್ಥಿಯು ಏನು ಕಲಿಯಬೇಕು? ಏಕೆ ಕಲಿಯಬೇಕು? ಮತ್ತು ಹೇಗೆ ಕಲಿಯಬೇಕು? ಎಂಬುದನ್ನೆಲ್ಲಾ ಗಮನದಲ್ಲಿಟ್ಟುಕೊಂಡು ಕಲಿಯಬೇಕು. ಈ ಒಂದು ವೈಜ್ಞಾನಿಕ ಜ್ಞಾನವನ್ನು ಒದಗಿಸಿಕೊಡುವುದೇ ಶೈಕ್ಷಣಿಕ ಮನೋವಿಜ್ಞಾನ.[18] ಆಧ್ಯಾತ್ಮಿಕ ಚಿಂತನೆಯಿಂದ ವಿಚಾರಮಾಡಿದರೆ, ನಿಜವಾಗಿಯೂ ಭಗವದ್ಗೀತೆಗಿಂತ ಮತ್ತೊಂದು ಮನೋವೈಜ್ಞಾನಿಕ ಗ್ರಂಥ ಮತ್ತೊಂದಿಲ್ಲವೆನಿಸುತ್ತದೆ. ಭಾಗವತದಲ್ಲಿ ಮನಸ್ಸಿನ ಮಹತ್ವವನ್ನು ಕುರಿತು ಒಂದು ಸೊಗಸಾದ ಶ್ಲೋಕವಿದೆ:-

यदृच्छयोपपन्नेन संतुष्टो वर्तते सुखम् ।

नासंतुष्टस्त्रिभिर्लोकैरजितात्मोपसादितैः ॥[19]

18. **ಶೈಕ್ಷಣಿಕ ಮನೋವಿಜ್ಞಾನದ ಅರ್ಥ,** https://m.facebook.com

19. **ಸುಭಾಷಿತಮಂಜರೀ**-ಸಂಸಾರ-ಶ್ಲೋ-54, ಪು-26, ಭಾಗವತ 8-19-24, ಕ.ಸಾ.ಪ.(2001), ಚಾಮರಾಜಪೇಟೆ, ಬೆಂಗಳೂರು-18

ಅಂದರೆ ಅಕಸ್ಮಾತ್ತಾಗಿ ಬಂದ ಹಣದಿಂದ ತೃಪ್ತಿಹೊಂದಿದವನು ಸುಖವಾಗಿರುತ್ತಾನೆ. ಆದರೆ ಮನಸ್ಸನ್ನು ಗೆಲ್ಲದವನು ಮೂರು ಲೋಕಗಳು ತನ್ನವಾದರೂ ಅತೃಪ್ತನಾಗಿ ಸುಖಿಯಾಗಲಾರನು.

ಈ ಸಂದರ್ಭದಲ್ಲಿ ಶಿಕ್ಷಣ ಎಂಬ ಪದದ ಅರ್ಥ ಮತ್ತು ವ್ಯಾಖ್ಯೆಯ ಬಗ್ಗೆ ಸ್ವಲ್ಪ ತಿಳಿಯುವುದು ಸೂಕ್ತವೆಂದು ತೋರುತ್ತದೆ. ಶಿಕ್ಷಣ ಎಂಬ ಪದವು **"Educare", "Educe"** ಎಂಬ ಲ್ಯಾಟಿನ್ ಪದದಿಂದ ಬಂದಿದೆ, ಇದರ ಅರ್ಥ ಒಳ್ಳೆಯ ಗುಣವನ್ನು "ಹೊರತೆಗೆ" ಅಥವಾ "ಬೆಳೆಸು" ಎಂಬುದಾಗಿದೆ. ವ್ಯಕ್ತಿಯಲ್ಲಿ ಒಳ್ಳೆಯ ಗುಣವನ್ನು ಬೆಳೆಸುವುದೇ ಶಿಕ್ಷಣ ಎಂದಿದ್ದಾರೆ, ಶಿಕ್ಷಣದ ಬಗ್ಗೆ ಅನೇಕ ಶಿಕ್ಷಣ ತಜ್ಞರುಗಳು, ಧರ್ಮಗುರುಗಳು, ತತ್ವಜ್ಞಾನಿಗಳು ತಮ್ಮದೇ ಆದ ವ್ಯಾಖ್ಯಾನವನ್ನು ನೀಡಿರುವರು.ಮುಖ್ಯವಾಗಿ ಕೆಲವನ್ನು ಮಾತ್ರ ಉಲ್ಲೇಖಿಸುವುದಾದರೆ:-[20]

1. "ಪೀಳಿಗೆಯಿಂದ ಪೀಳಿಗೆಗೆ ಆಗುವ ಜ್ಞಾನದ ವರ್ಗಾವಣೆಯೇ ಶಿಕ್ಷಣ" ಎಂದಿದ್ದಾರೆ

   **CROW LASTER AND CROW ALICE**

2. "ಪ್ರತಿ ವ್ಯಕ್ತಿಯೂ ಪರಿಪೂರ್ಣನಾಗಿ ಬೆಳೆಯುವಂತೆ ಯೋಗ್ಯ ಪರಿಸರವನ್ನು ನಿರ್ಮಿಸುವುದೇ ಶಿಕ್ಷಣ"

   ಎನ್ನುತ್ತಾರೆ **T.P .NUNN**

3. "ಬದಲಾಗುತ್ತಿರುವ ಸಮಾಜದ ವಾತಾವರಣಕ್ಕೆ ಹೊಂದಿಕೊಂಡು ಹೋಗುವಂತೆ ಮಾಡುವುದೇ ಶಿಕ್ಷಣ"

   **BANERJEE**

4. "ಜೀವನದಲ್ಲಿ ನಡೆಯುವ ಎಲ್ಲಾ ಘಟನೆಗಳ ಪುನರ್ ಪರಿಶೀಲನೆಯೇ ಶಿಕ್ಷಣ."ಎಂದಿದ್ದಾರೆ

   **JOHN DEWEY**

5. "ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ, ಭಾವನಾತ್ಮಕವಾಗಿ ಮತ್ತು ನೈತಿಕವಾಗಿ ಸಮರ್ಥರನ್ನಾಗಿಸುವುದೇ ಶಿಕ್ಷಣ"ಎಂದಿದ್ದಾರೆ (**"By Education I mean an all-round drawing out of the best in the child and man - - body, mind and spirit."**) ಮಹಾತ್ಮ ಗಾಂಧೀಜಿ.

6. **"Education is the manifestation of perfection which is already in man."** "ಈಗಾಗಲೇ ಮಾನವನಲ್ಲಿ ಅಡಗಿರುವ ಸುಪ್ತ ಚೇತನವನ್ನು ಅಭಿವ್ಯಕ್ತಿಗೊಳಿಸುವುದೇ ಶಿಕ್ಷಣ." ಎಂದು ವೀರ ಸಂನ್ಯಾಸಿ ಸ್ವಾಮಿ ವಿವೇಕಾನಂದರು ಹೇಳಿದ್ದಾರೆ.

---
20. **ಶಿಕ್ಷಣ-ವಿಕಾಸ್ ಪೀಡಿಯಾ,** https://kn.vikaspedia.in

7. “ಮಗುವು ಮಾನವನಾಗಿ, ನಾಗರಿಕನಾಗಿ, ಎಲ್ಲರೊಡನೆ ಸ್ನೇಹ, ಘನತೆ ಮತ್ತು ಗೌರವದಿಂದ ವರ್ತಿಸುವಂತೆ ಮಾಡುವುದೇ ಶಿಕ್ಷಣ”ಎಂದಿದ್ದಾರೆ. ಡಾ.ರಾಧಾಕೃಷ್ಣನ್.

8. **“Education is life and;life is education.”Hence it follows by that,”Whatever that broadens our mental horizon, deepens our insight, refines our reactions, stimulates our thoughts and feelings”-educates us. rightly said by Lodge.**

9. **“Education does not mean teaching people what they do not know. It means teaching them-to behave as they do not behave.”. RUSKIN**

10. **“Education is a process of dispelling error and discovering truth.” SOCRATES (469-399 B.C)**

11. **“Education is a process of attaining happiness through politics, Ethics and Metaphysics”. ARISTOTLE (384-322 B.C)**

12. **“Education consists of giving body and soul,all the perfection of which it is susceptible.” PLATO (429-384 B.C.)**

13. **“Education is that which fits the individual for the effective Service of the church, State, duties of home and occupation.”. MARTIN LUTHER (1483-1546 A.D.)**

14. **“Education means a natural, progressive and systematic development of all the powers of man.”. PESTALOZZI (1784-1827)**

15. **The Chief aim of education is that which does not merely give us information but makes out life,in harmony with all existence. “RABINDRANATH TAGORE(1861-1941 A.D.**

**16. I call,therefore,a complete and generous education that which fits man to perform justly, skilfully and magnanimously, all the offices both private and public, of peace and war.". JOHN MILTON (1603-1674 A.D.)**

**From a close analysis of these definitions of education certain common features can be enumerated as follows:-**

**a. Education is a biological as well as sociological necessity for human beings.**

**b. Education is what happens to a human being from his birth to death.(some go even to the extent of including prenatal period)**

**c. Education is a process or an activity deliberately employed by the adult members of a society to modify and shape the behaviour of young ones in the society.**

**d.?.Education is an art of training.**

**e. Education is an integrated, continuous reorganisation of human activities and experiences."**

**f. Education is a tri-polar process operating between the teacher and the taught; taught and the content (subject matter) and teacher and the subject matter in a social environment.**

**g. Education is a process which attempts at an all round development of the child.**

**h. Education has something to do with learning.It is not a simple process but a complex one. It is being influenced by many interrelated factors.**

ಶಿಕ್ಷಣಕ್ಕೊಂದು ವೃತ್ತಿವಿಜ್ಞಾನ ಬೇಕು. ಯಾವ ವೃತ್ತಿಯೇ ಆಗಲಿ ತನ್ನದೇ ಆದ ಆದರ್ಶಗಳನ್ನೂ, ಮೌಲ್ಯಗಳನ್ನೂ ಪಡೆದಿರುವುದು ಮುಖ್ಯ. ತನ್ನದೇ ಆದ ಅನುಸರಣೆ ಕ್ರಮಗಳನ್ನು ರೂಢಿಸಿಕೊಂಡಿರಬೇಕು.

ಆಗ ಮಾತ್ರ ಅದು ವ್ಯವಸ್ಥಿತ ವೃತ್ತಿಯಾಗಿ ಬೆಳೆದು ವೃದ್ಧಿಯಾಗುತ್ತದೆ. ಈ ವಿಚಾರ ಶಿಕ್ಷಣ ವೃತ್ತಿಗೂ ಅನ್ವಯಿಸುತ್ತದೆ. ಅದು ತನ್ನ ಕಾರ್ಯಕ್ಷೇತ್ರದ ಗುರಿಯನ್ನು ಕಂಡುಕೊಳ್ಳಲು ಜೀವನ ತತ್ವವನ್ನೂ, ಸಮಾಜ ಶಾಸ್ತ್ರವನ್ನೂ ಆಧಾರಮಾಡಿಕೊಂಡಿದೆ. ಈ ಗುರಿಯನ್ನು ಸಾಧಿಸಲು ನೆರವಾಗುವ ಪಠ್ಯವಸ್ತು, ಬೋಧನಾ ಉಪಕರಣಗಳು, ಬೋಧನಾ ಮಾದರಿ, ಶಾಲೆಯ ಕಾರ್ಯಕ್ರಮ, ಆಡಳಿತವ್ಯವಸ್ಥೆ ಇತ್ಯಾದಿಗಳನ್ನು ರಚಿಸಿಕೊಳ್ಳಲು ಬಹುಮಟ್ಟಿಗೆ ಮನೋವಿಜ್ಞಾನವನ್ನು ಅವಲಂಬಿಸಿದೆ. ಇದರಿಂದ ವೃತ್ತಿಯ ಶಾಸ್ತ್ರೀಯ ಸ್ವರೂಪ ಸಮೃದ್ಧಗೊಳ್ಳುತ್ತದೆ.[21]

ಹೀಗೆ ಶಿಕ್ಷಣದ ಬಗ್ಗೆ ಹಲವಾರು ಶಿಕ್ಷಣ ತಜ್ಞರು, ದಾರ್ಶನಿಕರು, ಧರ್ಮಗುರುಗಳು, ತತ್ವ ಜ್ಞಾನಿಗಳು ತಮ್ಮದೇ ಆದ ವ್ಯಾಖ್ಯಾನಗಳನ್ನು ನೀಡಿರುವರು. ಒಟ್ಟಿನಲ್ಲಿ ಕ್ರೋಢೀಕರಿಸಿ ಪರಿಶೀಲಿಸಿದಾಗ ಎಲ್ಲವೂ ಒಂದೇ ಗುರಿಯೆಡೆಗೆ ತಲುಪುತ್ತವೆ.

आकाशात् पतितं तोयं यथा गच्छति सागरम् ।

सर्वदेव नमस्कारः केशवं प्रतिगच्छति ॥[22]

ಆಕಾಶದಿಂದ ಬಿದ್ದ ಪ್ರತಿ ಮಳೆಹನಿಯೂ ಹೇಗೆ ಸಾಗರವನ್ನು ಸೇರುತ್ತದೆಯೋ, ಹಾಗೆ ಎಲ್ಲಾ ದೇವರುಗಳಿಗೆ ಸಲ್ಲಿಸಿದ ನಾಮಸ್ಮರಣೆಯು ಕೇಶವನಿಗೆ ಹೋಗಿ ಸೇರುತ್ತದೆ. ಹೀಗೆಯೇ ಶಿಕ್ಷಣಕ್ಕೆ ನೀಡಿರುವ ವ್ಯಾಖ್ಯೆಗಳೆಲ್ಲವೂ ಒಂದೇ ಅರ್ಥದೆಡೆಗೆ ತಲುಪುತ್ತವೆ. ಎಂದಿನಿಂದಲೂ ಶಿಕ್ಷಣ ಕ್ಷೇತ್ರದಲ್ಲಿ ಕಲಿಕೆ ಮತ್ತು ಕಲಿಸುವಿಕೆಯಲ್ಲಿ ಮನೋವಿಜ್ಞಾನ ಉದಯವಾಯಿತು. ಶೈಕ್ಷಣಿಕ ಮನೋವಿಜ್ಞಾನದ ಮೂಲ ಉದ್ದೇಶ ವೈಜ್ಞಾನಿಕವಾಗಿ ಶಿಕ್ಷಣ ರಂಗಕ್ಕೆ ಮನೋವೈಜ್ಞಾನಿಕ ಸೂತ್ರಗಳನ್ನು ಅಳವಡಿಸುವುದರ ಮೂಲಕ ಕಲಿಯುವ ವ್ಯಕ್ತಿಗೂ, ಕಲಿಸುವ ಶಿಕ್ಷಕನಿಗೂ ಅವರವರ ಕಾರ್ಯ ನಿರ್ವಹಣೆಯಲ್ಲಿ ಸಹಾಯ ಮಾಡುವುದಾಗಿದೆ.

ಶಿಕ್ಷಣದ ಪ್ರಮುಖ ಪ್ರಕ್ರಿಯೆಯು ಕಲಿಕೆಯ ಸಾಮಾನ್ಯ ನಿಯಮಗಳಾದ ಸಾದೃಶ್ಯ-ವೈದೃಶ್ಯ ಮತ್ತು ಸಾಮೀಪ್ಯ ಕುರಿತಾದ ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲ್ನ ವಿಚಾರಧಾರೆ ಶೈಕ್ಷಣಿಕ ಮನೋವಿಜ್ಞಾನದ ಬೆಳವಣಿಗೆಗೆ ನಾಂದಿಯಾಯಿತು. ಮಗುವಿನ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಆತನ ಕುಟುಂಬದ ಪಾತ್ರವನ್ನು ಒತ್ತಿ ಹೇಳಿದವನು ಗ್ರೀಕ್ ತತ್ವ ಜ್ಞಾನಿ **DEMOCRITUS.** ಮಾನವನ ಬೆಳವಣಿಗೆಯ ತತ್ವಗಳ ಮೇಲೆ ಶಿಕ್ಷಣವನ್ನಾಧರಿಸಲು ಪ್ರಯತ್ನಿಸಿದವನು ಶಿಕ್ಷಣತಜ್ಞ, ತತಜ್ಞಾನಿ ತನ್ನ ಪ್ರಸಿದ್ಧವಾದ ಗ್ರಂಥ "ಎಮಿಲ"ಯಲ್ಲಿ

---

21. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-1, ಪು-10, ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4 (.1962).
22. **ಸಂಧ್ಯಾವಂದನೆ ಮಂತ್ರಗಳು,** ಸಂಧ್ಯೋಪಸ್ಥಾನ ಶ್ಲೋಕ.

ಶಿಕ್ಷಣ ನೀತಿ ಯೋಜನೆಯನ್ನು ವಿವರಿಸಿದ್ದಾನೆ. **"JOHN LOCKE"-English Philosopher and Physician, Father of Liberalism,** 'ಇಂದ್ರಿಯಾನುಭವ' ವಾದದ ಪ್ರತಿಪಾದಕನಾಗಿದ್ದು, ನವಜಾತ ಶಿಶುವಿನ ಮನಸ್ಸು ಕಾಯಸಿದ್ಧತೆಗೆ ಅಣಿಯಾಗಿರುವುದಿಲ್ಲವೆಂದು ಹೇಳುತ್ತಾನೆ. ಆದರೆ ಅವನ ಪ್ರಜ್ಞೆಯ ಮೂಲಕ ಬಾಹ್ಯ ಪ್ರಪಂಚದಿಂದ ಸಂವೇದನಾಶೀಲತೆಯ ಸಂಸ್ಕಾರ ಪಡೆಯುವ ಸಾಮರ್ಥ್ಯವನ್ನು ಹೊಂದಿರುತ್ತಾನೆಂದು ಪ್ರತಿಪಾದಿಸಿದ್ದಾನೆ.ಇವನ ಬರವಣಿಗೆಗಳಿಂದ ಪ್ರಭಾವಿತರಾಗಿದ್ದವರುಗಿ **OLTAIRE** ಮತ್ತು **JEAN-JACQES ROUSSEAU** ಹಾಗೂ ಹಲವಾರು **Scottish Enlightenment Thinkers.** ಮತ್ತೊಬ್ಬ ಶಿಕ್ಷಣ ತಜ್ಞ **"JOHANN HEINRICH PESTALOZZI" the Philanthropic Educator Of Zurich**,ಪರಿಣಾಮಕಾರಿ ಬೋಧನೆಗೆ ಕಲಿಯುವ ಮಕ್ಕಳ ಶಾರೀರಿಕ ಮತ್ತು ಮಾನಸಿಕ ಸಿದ್ಧತೆಗಳ ಅರಿವು ಅವಶ್ಯಕವೆಂದು ಪ್ರತಿಪಾದಿಸಿದ್ದಾನೆ **JOHANN FRIEDRICH HERBART(1776-1841)-** ಇವನನ್ನೇ ಅನುಸರಿಸಿ ಶಿಕ್ಷಣದ ತತ್ವಸಿದ್ಧಾಂತಗಳಿಗೂ ಮನೋವಿಜ್ಞಾನವೇ ತಳಹದಿ ಆಗಬೇಕೆಂದು ಪ್ರತಿಪಾದಿಸಿದ್ದಾನೆ. ಪೆಸ್ಟಾಲೊಜಿಯ ಹಾಗೆಯೇ ಜಾನ್ ಹರ್ಬಾರ್ಟನು ಸಹಶಿಕ್ಷಕರ ತರಬೇತಿ ಶಾಲೆಯನ್ನು ತೆರೆದು, ಮೊಟ್ಟಮೊದಲ ಬಾರಿಗೆ ಶಿಕ್ಷಣದಲ್ಲಿ ಬೋಧನೆಯ ಪಂಚಸೋಪಾನಗಳನ್ನು ರಚಿಸಿದನು.[23]

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದರೆ ಶೈಕ್ಷಣಿಕ ಮನೋವಿಜ್ಞಾನ "ಶಿಕ್ಷಣ" ಹಾಗೂ "ಮನೋವಿಜ್ಞಾನ" ಕ್ಷೇತ್ರಗಳ ಸಂಗಮವಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಶೈಕ್ಷಣಿಕ ಮನೋವಿಜ್ಞಾನದ ಪ್ರಮುಖ ಕಾರ್ಯವೆಂದರೆ ಶೈಕ್ಷಣಿಕ ಪ್ರಕ್ರಿಯೆಯ ತಾತ್ವಿಕ ಮತ್ತು ಕ್ರಿಯಾತ್ಮಕ ಸ್ವರೂಪವನ್ನು ಅರ್ಥ ಮಾಡಿಕೊಳ್ಳಲು ಶಿಕ್ಷಕರು ಮತ್ತು ಶಿಕ್ಷಣ ಪ್ರಕ್ರಿಯೆಯಲ್ಲಿ ತೊಡಗಿರುವವರಿಗೆ ನೆರವು ನೀಡುವುದಾಗಿದೆ. ಮನೋವಿಜ್ಞಾನವು ಪ್ರಾರಂಭದಲ್ಲಿ ತತ್ವಶಾಸ್ತ್ರದ ಒಂದು ಶಾಖೆಯಾಗಿತ್ತು. ಕಳೆದ ಶತಮಾನದಲ್ಲಿ ಶಿಕ್ಷಣವೇತ್ತರು ಶೈಕ್ಷಣಿಕ ಮನೋವಿಜ್ಞಾನವನ್ನು ಮನೋವಿಜ್ಞಾನದ ಒಂದು ಪ್ರತ್ಯೇಕ ಶಾಖೆಯನ್ನಾಗಿ ರೂಪಿಸಿ ಬೆಳೆಸುವ ಅಗತ್ಯವನ್ನು ಮನಗಂಡರು.**HERMANN EBBINGHAUS- German Psychologist, EDWARD THORNDIKE - American Psychologist** ಮುಂತಾದವರು ನಡೆಸಿದ ಕಲಿಕೆಗೆ ಸಂಬಂಧಿಸಿದ ಕೆಲವು ಪ್ರಯೋಗಗಳಿಂದ ಈ ಜ್ಞಾನದ ಅಡಿಪಾಯವನ್ನು ಹಾಕಿದವರೆನ್ನಬಹುದು.[24] ಶಿಕ್ಷಣಕ್ಕೆ ಸಂಬಂಧಪಟ್ಟ ಅನೇಕ ಸಮಸ್ಯೆಗಳನ್ನು ಆ ಜ್ಞಾನದ ಸಹಾಯದಿಂದ ಬಿಡಿಸುವ ಪ್ರಯತ್ನ ನಿರಂತರವಾಗಿ ನಡೆದು ಬಂದಿದೆ.

---

23. **ಶೈಕ್ಷಣಿಕಮನೋವಿಜ್ಞಾನ** –ವಿಕಿಪೀಡಿಯ https://in.mwikipedia.org ಐತಿಹಾಸಿಕ ಹಿನ್ನೆಲೆ.
24. **ವೀರಪ್ಪ. ಎನ್.ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–2, ಪು–20,(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

## 2 – 3. ಶಿಕ್ಷಣದಲ್ಲಿ ಮನೋವಿಜ್ಞಾನದ ಮಹತ್ವ

ಇಂದಿನ ದಿನಗಳಲ್ಲಿ ಶೈಕ್ಷಣಿಕ ಮನೋವಿಜ್ಞಾನವು ಶಿಕ್ಷಣ ಕ್ಷೇತ್ರದಲ್ಲಿ ಅಪಾರವಾದ ಪ್ರಭಾವವನ್ನು ಬೀರುತ್ತಲಿದೆ. ಕಲಿಕೆ ಮತ್ತು ಬೋಧನೆಗಳಲ್ಲಿ ಇದರ ಪಾತ್ರ "ಮನೋವಿಜ್ಞಾನದ ಪ್ರಭಾವವಿಲ್ಲದ ಶಿಕ್ಷಣವೇ ಇಲ್ಲ" ಎನ್ನುವಷ್ಟರಮಟ್ಟಿಗಿದೆ. ಶೈಕ್ಷಣಿಕ ಮನೋವಿಜ್ಞಾನದ ಪ್ರಧಾನ ಗುರಿಯು ಶಿಕ್ಷಕ ತನ್ನ ವೃತ್ತಿಯ ಬೇಡಿಕೆಗಳನ್ನು ಯಶಸ್ವಿಯಾಗಿ ಪೂರೈಸಲು ಅಗತ್ಯವಾದ ತತ್ವಗಳು ಮತ್ತು ಸಾರ್ವತ್ರೀಕರಣಗಳನ್ನು ವ್ಯವಸ್ಥಿತ ರೂಪದಲ್ಲಿ ಒದಗಿಸುವುದಾಗಿದೆ. ಶೈಕ್ಷಣಿಕ ಮನೋವಿಜ್ಞಾನವೆಂದರೆ ಉತ್ತಮವಾದ ಶೈಕ್ಷಣಿಕ ಸನ್ನಿವೇಶಗಳನ್ನೊದಗಿಸಿ ವ್ಯಕ್ತಿ ವಿಕಾಸದ ಕ್ರಮಬದ್ಧ ಅಧ್ಯಯನ ನಡೆಸುವುದಾಗಿದೆ. ಇದು ಒಬ್ಬ ವ್ಯಕ್ತಿಯನ್ನು ಅರ್ಥಾತ್ ವಿದ್ಯಾರ್ಥಿಯನ್ನು ಜವಾಬ್ದಾರಿಯುತ ನಾಗರಿಕ, ಉತ್ಪಾದನಾತ್ಮಕ ಹಾಗೂ ಸೃಜನಶೀಲ ವ್ಯಕ್ತಿಯನ್ನಾಗಿ ಮಾಡುವ ಮೂಲಕ ಅವನಲ್ಲಿ ಸರ್ವತೋಮುಖ ಅಭಿವೃದ್ಧಿಯನ್ನು ಉಂಟುಮಾಡುವಲ್ಲಿ ಶಿಕ್ಷಕನಿಗೆ ಅಥವಾ ಮಾರ್ಗದರ್ಶಕನಿಗೆ ಸಹಾಯ ಮಾಡುವುದಾಗಿರುತ್ತದೆ.

ವ್ಯಕ್ತಿ ಹಾಗೂ ಸಮಾಜದ ಹಿತ ಅಗತ್ಯಗಳಿಗೊಪ್ಪುವಂತೆ ಸೂಕ್ತ ಸನ್ನಿವೇಶ ರಚನೆಯಿಂದ ಮೂಲ ಸ್ವಭಾವವನ್ನು ಮಾರ್ಪಡಿಸುವುದೇ ಶಿಕ್ಷಣ ಎಂದು **JOHN B.WATSON-(American Psychologist)** ವಿವರಿಸಿ, ಶಿಕ್ಷಣಕ್ಕೊಂದು ನೂತನ ಅರ್ಥವನ್ನು ಕಲ್ಪಿಸಿದ್ದಾನೆ. ಜೊತೆಗೆ ಮನೋವಿಜ್ಞಾನವನ್ನು "ವರ್ತನೆಯ ಜ್ಞಾನ" ಎಂದು ತೋರಿಸಿಕೊಟ್ಟಿದ್ದಾನೆ. ಹಾಗೆಯೇ "ಮಾನವನ ವರ್ತನೆ ಹಾಗೂ ಮಾನವನ ಅಂತರ ಸಂಬಂಧಗಳ ಅಧ್ಯಯನವೇ ಮನೋವಿಜ್ಞಾನ" ಎಂದು **CROW AND CROW** ವ್ಯಾಖ್ಯಾನಿಸಿರುತ್ತಾರೆ.[25]

ಹುಟ್ಟಿನಿಂದ ಪ್ರೌಢಾವಸ್ಥೆಯವರೆಗಿನ ವ್ಯಕ್ತಿಯ ವಿಕಾಸದ ವಿವಿಧ ಹಂತಗಳನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಶಾಸ್ತ್ರವೇ ಶೈಕ್ಷಣಿಕ ಮನೋವಿಜ್ಞಾನ ಎಂದು ಜಡ್‌ರವರು ಹೇಳಿರುತ್ತಾರೆ. ಅದೇ ರೀತಿಯಲ್ಲಿ ಪೀಲ್‌ರವರು ಒಂದು ಸರಳ ವ್ಯಾಖ್ಯೆಯನ್ನು ನೀಡಿರುತ್ತಾರೆ. ಅದೇನೆಂದರೆ, "ಶೈಕ್ಷಣಿಕ ಮನೋವಿಜ್ಞಾನವು ಶಿಕ್ಷಣವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಶಾಸ್ತ್ರವಾಗಿದೆ."

ಮತ್ತೊಂದು ವ್ಯಾಖ್ಯೆಯನ್ನು ಎನ್. ಎಸ್. ವೀರಪ್ಪ ಇವರು ನೀಡುತ್ತಾ, "ಶಿಕ್ಷಣದಲ್ಲಿ ಮಾನವ ಸ್ವಭಾವ ವಹಿಸುವ ಪಾತ್ರವನ್ನು ಕುರಿತ ಜ್ಞಾನವೇ ಶೈಕ್ಷಣಿಕ ಮನೋವಿಜ್ಞಾನ, ಎಂದರೆ ಅದು ಕಲಿವು ಮತ್ತು ಬೋಧನೆ –ಇವೆರಡಕ್ಕೂ ನಿಕಟವಾಗಿ ಸಂಬಂಧಿಸಿರುವ ಆಧಾರ ಜ್ಞಾನ" ಎಂದು ತಿಳಿಸಿದ್ದಾರೆ.

**25. ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–2, ಪು–27, 28. ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4.(1962)

ಶೈಕ್ಷಣಿಕ ಮನೋವಿಜ್ಞಾನವು ಬೋಧನಾ-ಕಲಿಕೆ ಪ್ರಕ್ರಿಯೆಯ ಮತ್ತು ಶೈಕ್ಷಣಿಕ ಪ್ರಕ್ರಿಯೆಯ ಅಥವಾ ಪರಿಸ್ಥಿತಿಯ ಅಧ್ಯಯನಕ್ಕೆ ತನ್ನ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಂಡಿದೆ. ಇದು ಅಭಿವೃದ್ಧಿ ಹೊಂದುತ್ತಿರುವ ಹಾಗೂ ತೀವ್ರ ಬೆಳವಣಿಗೆ ಕಾಣುತ್ತಿರುವ ಒಂದು ವಿಜ್ಞಾನವಾಗಿದೆ. ಇದರ ವ್ಯಾಪ್ತಿಯು ತುಂಬಾ ವಿಶಾಲವಾಗಿದ್ದು, ಶೈಕ್ಷಣಿಕ ಮನೋವಿಜ್ಞಾನ ಕ್ಷೇತ್ರದಲ್ಲಿ ನಡೆಯುತ್ತಿರುವ ಅಧ್ಯಯನಗಳಿಂದ ಅದರ ವ್ಯಾಪ್ತಿ ದಿನೇದಿನೇ ಹೆಚ್ಚಾಗುತ್ತಿದೆ.[26]

ಅಮೆರಿಕ ಮನೋವಿಜ್ಞಾನ ಸಂಘದ ಶೈಕ್ಷಣಿಕ ಮನೋವಿಜ್ಞಾನ ವಿಭಾಗವು1947 ರಲ್ಲಿ ಒಂದು ಸಮಿತಿಯನ್ನು ನೇಮಕ ಮಾಡಿ ಶೈಕ್ಷಣಿಕ ಮನೋವಿಜ್ಞಾನವನ್ನು ಸ್ಪಷ್ಟವಾಗಿ ವ್ಯಾಖ್ಯಾನಿಸಿ ಅದರ ವ್ಯಾಪ್ತಿಯನ್ನು ಗೊತ್ತುಪಡಿಸಿತು ಹಾಗೂ ಮನೋವಿಜ್ಞಾನದ ವಿವಿಧ ಶಾಖೆಗಳ ನಡುವಿನ ಸಂಬಂಧವನ್ನು ಸೂಚಿಸಿತು. ಅದರ ಪ್ರಕಾರ ಶೈಕ್ಷಣಿಕ ಮನೋವಿಜ್ಞಾನದ ವ್ಯಾಪ್ತಿಯಲ್ಲಿ ಈ ಕೆಳಕಂಡ ವಿಷಯಗಳನ್ನು ಪಟ್ಟಿಮಾಡಿತು.[27]

1. **ಮಾನವನ ಬೆಳವಣಿಗೆ ಮತ್ತು ವಿಕಾಸ;** ದೈಹಿಕ, ಜ್ಞಾನಾತ್ಮಕ, ಸಾಮಾಜಿಕ ಮತ್ತು ಸಂವೇಗಾತ್ಮಕ ವಿಕಾಸಗಳ ಮೇಲೆ ಅನುವಂಶೀಯತೆ ಮತ್ತು ಪರಿಸರಗಳ ಪ್ರಭಾವ, ಅಭಿಪ್ರೇರಣೆ, ಬುದ್ಧಿಶಕ್ತಿ, ಸಹಜ ಸಾಮರ್ಥ್ಯಗಳು, ಆಸಕ್ತಿ ಹಾಗೂ ವೈಯುಕ್ತಿಕ ಭಿನ್ನತೆಗಳು.

2. **ಕಲಿಕೆ;** ಕಲಿಕೆಯ ಸಾಮಾನ್ಯ ಸ್ವರೂಪ, ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳು, ತಾರ್ಕಿಕತೆ, ಕೌಶಲ್ಯಗಳು, ಸಮಸ್ಯೆ ಪರಿಹಾರ, ಸ್ಮರಣೆ ಮತ್ತು ಕಲಿಕೆಯ ವರ್ಗಾವಣೆ.

3. **ವ್ಯಕ್ತಿತ್ವ ಮತ್ತು ಹೊಂದಾಣಿಕೆ;** ವ್ಯಕ್ತಿತ್ವದ ವಿಕಾಸ; ವಿದ್ಯಾರ್ಥಿ ಮತ್ತು ಶಿಕ್ಷಕರ ಮಾನಸಿಕ ಆರೋಗ್ಯ. ವಿಶಿಷ್ಟ ಮಕ್ಕಳ ಶಿಕ್ಷಣ, ವಿದ್ಯಾರ್ಥಿಗಳ ಚಾರಿತ್ರ್ಯದ ವಿಕಾಸ ಮತ್ತು ಸಾಮಾಜಿಕ ಅಂತರ್ ಕ್ರಿಯೆ.

4. **ಅಳತೆ ಮತ್ತು ಮೌಲ್ಯಮಾಪನ;** ಮೌಲ್ಯಮಾಪನದ ಸಾಮಾನ್ಯ ತತ್ವಗಳು, ಬುದ್ಧಿ ಶಕ್ತಿ, ಸಹಜ ಸಾಮರ್ಥ್ಯಗಳು, ಕಲಿಕೆ ಮತ್ತು ಹೊಂದಾಣಿಕೆಗಳ ಮಾಪನ ಹಾಗೂ ಮಾಪನ ಫಲಶೃತಿಗಳ ಕಾರ್ಯಾಚರಣೆ.

5. **ಶೈಕ್ಷಣಿಕ ಮನೋವಿಜ್ಞಾನದ ತಂತ್ರಗಳು ಮತ್ತು ವಿಧಾನಗಳು;** ಶೈಕ್ಷಣಿಕ ಸಮಸ್ಯೆಗಳ ವೈಜ್ಞಾನಿಕ ಅಧ್ಯಯನ, ಸಂಖ್ಯಾಶಾಸ್ತ್ರದ ತಂತ್ರಗಳು ಮತ್ತು ತರಗತಿ ಬೋಧನಾ ಸಮಸ್ಯೆಗಳನ್ನು ಕುರಿತು ಶೈಕ್ಷಣಿಕ ಸಂಶೋಧನೆಗಳನ್ನು ಕೈಗೊಳ್ಳುವುದು.

---

26. **ವಾಮದೇವಪ್ಪ ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-1, ಪು-7,8.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005.
27. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-1, ಪು-8. (2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005.

ಒಟ್ಟಿನಲ್ಲಿ ಯಾವುದು ಶೈಕ್ಷಣಿಕವೋ ಅಥವಾ ಯಾವುದು ತರಗತಿಯಲ್ಲಿ ವಿದ್ಯಾರ್ಥಿಯ ವರ್ತನೆಯನ್ನು ಅಧ್ಯಯನ ಮಾಡುತ್ತದೋ ಅದೆಲ್ಲವೂ ಶೈಕ್ಷಣಿಕ ಮನೋವಿಜ್ಞಾನದ ವ್ಯಾಪ್ತಿಯಲ್ಲಿ ಬರುತ್ತದೆ.

ಜೀವಿಯ ವರ್ತನೆಯನ್ನು ಮನೋವಿಜ್ಞಾನವು ಅಧ್ಯಯನ ಮಾಡುತ್ತಾ, ವ್ಯಕ್ತಿ ಮತ್ತು ವಸ್ತುನಿಷ್ಠೆಯ ಆಧಾರದ ಮೇಲೆ ಪರಿಶೀಲಿಸಿದಾಗ ಬೋಧನಾ–ಕಲಿಕೆಯ ವಿಚಾರದಲ್ಲಿ ಶಿಕ್ಷಕನು ಹಲವಾರು ಸಮಸ್ಯೆಗಳನ್ನು ಎದುರುಗೊಳ್ಳಬೇಕಾಗುತ್ತದೆ. ಇವು ಯಾವುವೆಂದರೆ, ಮಕ್ಕಳಲ್ಲಿನ ಅಸಾಮಾನ್ಯ ವರ್ತನೆಗಳಿಂದ ಉಂಟಾಗುವಂತದ್ದು. ಮಕ್ಕಳವರ್ತನೆಯನ್ನು ಅಧ್ಯಯನ ಮಾಡಿ ಅವರ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಹಿಡಿಯಲು ಪ್ರತಿಯೊಬ್ಬ ಶಿಕ್ಷಕನೂ ಮನೋವಿಜ್ಞಾನದ ವಿವಿಧ ವಿಧಾನಗಳನ್ನು ತಿಳಿದಿರಬೇಕು. ಏಕೆಂದರೆ ಶೈಕ್ಷಣಿಕ ಮನೋವಿಜ್ಞಾನವು ವಿದ್ಯಾರ್ಥಿಗಳ ವರ್ತನಾ ಸಮಸ್ಯೆಗಳ ಬಗ್ಗೆ ಅರಿತುಕೊಳ್ಳಲು ಕೆಲವು ವಿಧಾನಗಳು ಮತ್ತು ತಂತ್ರಗಳನ್ನು ವೈಜ್ಞಾನಿಕವಾಗಿ ವ್ಯವಸ್ಥೆಗೊಳಿಸಿದೆ.[28] ಅವುಗಳಲ್ಲಿ ಕೆಲವು ಪ್ರಮುಖವಾದವುಗಳೆಂದರೆ:–

1. **ಅಂತರಾವಲೋಕನ(INTROSPECTION):–** ಈ ವಿಧಾನವನ್ನು **"EDWARD BRADFORD TITCHENER"** ಎಂಬ ಬ್ರಿಟಿಷ್ ಮನೋವಿಜ್ಞಾನಿ ರೂಪಿಸಿದನು. ಈ ವಿಧಾನದಿಂದ ವ್ಯಕ್ತಿಯು ತನ್ನ ಆಲೋಚನೆಗಳು, ಭಾವನೆಗಳು ಹಾಗೂ ಪ್ರೇರಣೆಗಳ ಸಂದರ್ಭದಲ್ಲಿ ಮಾನಸಿಕ ಪ್ರಕ್ರಿಯೆಗಳನ್ನು ಪರೀಕ್ಷಿಸಿಕೊಳ್ಳಲು ಸಾಧ್ಯವಾಗುತ್ತದೆ.

2. **ವೀಕ್ಷಣೆ (OBSERVATION) :-** ಈ ವಿಧಾನವು ವರ್ತನಾ ವಾದಿಗಳಿಂದ ಪ್ರಾರಂಭಗೊಂಡಿದ್ದು, ಕ್ರಮಬದ್ಧವಾದ ವೀಕ್ಷಣಾ ಪದ್ಧತಿಯಾಗಿದೆ. ಈ ವಿಧಾನವನ್ನು ಹೆಚ್ಚು ಬೆಳಕಿಗೆ ತಂದವನು ವರ್ತನಾವಾದಿ ಜೆ.ಬಿ. ವ್ಯಾಟ್ಸನ್. ಒಂದು ನಿರ್ದಿಷ್ಟ ಉದ್ದೇಶ ಸಾಧನೆಗಾಗಿ ವ್ಯಕ್ತಿಯ ಬಾಹ್ಯ ವರ್ತನೆಯನ್ನು ಅಧ್ಯಯನ ಮಾಡುವುದಕ್ಕೆ ವೀಕ್ಷಣೆ ಎನ್ನುತ್ತಾರೆ. ವೀಕ್ಷಣಾ ವಿಧಾನದಲ್ಲಿ ವ್ಯಕ್ತಿಯ ವರ್ತನೆಯ ಬಗ್ಗೆ ಇಂದ್ರಿಯಾನುಭವವನ್ನು ಪಡೆದು ಅದನ್ನು ವಿಶ್ಲೇಷಿಸಲಾಗುತ್ತದೆ. ನಂತರ ಅದನ್ನು ಅರ್ಥೈಸಲಾಗುತ್ತದೆ.

3. **ಪ್ರಾಯೋಗಿಕ ವಿಧಾನ (EXPERIMENTATION) :-WILHELM MAXIMILIAN WUNDT -The Germam Physiologist, Philosopher and Professor, 1879** ರಲ್ಲಿ ಜರ್ಮನಿಯ ಲೈಪಿಗ್ಸ್ ಎಂಬಲ್ಲಿ ಮೊಟ್ಟಮೊದಲ ಮನೋವೈಜ್ಞಾನಿಕ ಪ್ರಯೋಗಾಲಯವನ್ನು ತೆರೆದನು. ಪ್ರಾಯೋಗಿಕ ವಿಧಾನಕ್ಕೆ ಹೆಚ್ಚು ಪ್ರಚಾರ ನೀಡಿದನು. ವೈಜ್ಞಾನಿಕ ಮತ್ತು ವಸ್ತುನಿಷ್ಠತೆ ಹೊಂದಿರುವ ವರ್ತನೆಯ ಅಧ್ಯಯನವಾದ ಮನೋವಿಜ್ಞಾನಕ್ಕೆ ವಿಜ್ಞಾನದಷ್ಟೇ ಮಹತ್ವದ ಸ್ಥಾನಮಾನ ತಂದುಕೊಟ್ಟ ವಿಧಾನವಿದು. ಈ ವಿಧಾನವು

---

**28. ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ. ಪು–12–25,(2005). ಶ್ರೇಯಸ್ ಪಬ್ಲಿಕೇಷನ್ಸ್. ತರಳಬಾಳು ಬಡಾವಣೆ, ದಾವಣಗೆರೆ–577005.

ವರ್ತನೆಯನ್ನು ಅರ್ಥಮಾಡಿಕೊಳ್ಳಲು, ನಿಯಂತ್ರಿಸಲು ಮತ್ತು ಮುನ್ಸೂಚಿಸಲು ನೆರವಾಗುತ್ತದೆ.

4. **ವ್ಯಕ್ತಿ ಅಧ್ಯಯನ(CASE STUDY) :–** ಡಿ. ಎಫ್. ಡಿ.ಬುಕ್ಸ್ ಎಂಬ ತಜ್ಞನು ಈ ವಿಧಾನವನ್ನು ಹೆಚ್ಚಾಗಿ ಬಳಕೆಗೆ ತಂದವನು. ವ್ಯಕ್ತಿ ಅಧ್ಯಯನವು ಒಬ್ಬ ವ್ಯಕ್ತಿ ಅಥವಾ ಒಂದು ಸಂಸ್ಥೆಯ ಆಳವಾದ ಅಧ್ಯಯನವನ್ನು ನಡೆಸುತ್ತದೆ. ಈ ವಿಧಾನದಲ್ಲಿ ಒಬ್ಬ ವರ್ತನಾ ಸಮಸ್ಯೆಯುಳ್ಳ ವ್ಯಕ್ತಿಯ ಬಗ್ಗೆ ಅಥವಾ ಒಂದು ಸಂಸ್ಥೆಯ ಬಗ್ಗೆ ವಿವರವಾದ ಮಾಹಿತಿಯನ್ನು ಸಂಗ್ರಹಿಸಿ ನ್ಯೂನತೆಗೆ ಕಾರಣಗಳನ್ನು ಪರಿಶೋಧಿಸಿ ಸೂಕ್ತ ನಿವಾರಣಾ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ.

5. **ಸಂದರ್ಶನ(INTERVIEW) :-** ಸಂದರ್ಶನವನ್ನು ಸಾಮಾನ್ಯವಾಗಿ ಸಲಹಾ ಕಾರ್ಯಕ್ರಮಗಳಲ್ಲಿ ಬಳಸಲಾಗುತ್ತದೆ. ಸಂದರ್ಶನ ಒಂದು ಸಂವಹನ ಪ್ರಕ್ರಿಯೆಯಾಗಿರುತ್ತದೆ ಅಥವಾ ಅಂತರ್ ಕ್ರಿಯೆಯಾಗಿರುತ್ತದೆ. ಇದರಲ್ಲಿ ಸಂದರ್ಶಿತ ವ್ಯಕ್ತಿಯು ಅವಶ್ಯಕವಾದ ಮಾಹಿತಿಯನ್ನು ಮುಖಾಮುಖಿ ಸನ್ನಿವೇಶದಲ್ಲಿ ಶಾಬ್ದಿಕವಾಗಿ ನೀಡುವನು. ಹಲವಾರು ಸಂಶೋಧನಾ ಸನ್ನಿವೇಶಗಳಲ್ಲಿ ವ್ಯಕ್ತಿಗಳಿಂದ ಉಪಯುಕ್ತವಾದ ಮಾಹಿತಿಯನ್ನು ಸಂಗ್ರಹಿಸಲು ಬಳಸಬಹುದಾದ ಒಂದು ಪರಿಣಾಮಕಾರಿ ವಿಧಾನವಾಗಿದೆ.

6. **ಪರೀಕ್ಷಾ ವಿಧಾನ(TESTING):–** ಪ್ರಯೋಗಶಾಲೆಯ ಸಹಾಯವಿಲ್ಲದೆ ಮನಶ್ಶಾಸ್ತ್ರಜ್ಞನು ಪರೀಕ್ಷೆಗಳನ್ನು ಉಪಯೋಗಿಸಿ ಯಾವುದೇ ರೀತಿಯ ಮಾಹಿತಿಗಳನ್ನು ಸಂಗ್ರಹಿಸಬಹುದು. ಇದನ್ನು ಮಕ್ಕಳ ಸಾಮರ್ಥ್ಯಗಳು, ಆಸಕ್ತಿ ಹಾಗೂ ಮನೋಭಾವಗಳನ್ನು ಅಳೆಯಲು ಉಪಯೋಗಿಸಲಾಗುತ್ತದೆ. ಪರೀಕ್ಷಾ ವಿಧಾನ ಆಧುನಿಕ ಮನೋವಿಜ್ಞಾನದ ಒಂದು ಪ್ರಮುಖ ಸಂಶೋಧನಾ ಸಾಧನವಾಗಿರುತ್ತದೆ.

7. **ಸಮೀಕ್ಷಾ ವಿಧಾನ(SURVEY METHOD):-** ವಿದ್ಯಾರ್ಥಿಗಳ ವೈಯಕ್ತಿಕ ಭಿನ್ನತೆಗಳನ್ನು ಅಧ್ಯಯನ ಮಾಡಲು ಈ ವಿಧಾನವನ್ನು ಬಳಸುತ್ತಾರೆ. ಈ ವಿಧಾನವನ್ನು ಸರ್ವೇಕ್ಷಣ ಅಥವಾ ಕ್ಷೇತ್ರ ಅನ್ವೇಷಣ ವಿಧಾನವೆಂತಲೂ ಕರೆಯುತ್ತಾರೆ. ಶೈಕ್ಷಣಿಕ ಮನೋವಿಜ್ಞಾನದ ಅಧ್ಯಯನಗಳಲ್ಲಿ ಪ್ರತಿದರ್ಶನವನ್ನು ನೇರವಾಗಿ ವೀಕ್ಷಿಸುವಂತಹ ಸಂಖ್ಯಾಶಾಸ್ತ್ರೀಯ ಸಮೀಕ್ಷೆಗಳನ್ನು ಬಳಸಿಕೊಳ್ಳುತ್ತಾರೆ. ಹೆಚ್ಚು ಜನರಿಂದ ಮಾಹಿತಿಯನ್ನು ಸಂಗ್ರಹಿಸಬೇಕಾದಾಗ, ಇತರ ವಿಧಾನಗಳನ್ನು ಅನುಸರಿಸಲು ಸಾಧ್ಯವಾಗದಿದ್ದಾಗ ಈ ವಿಧಾನವನ್ನು ಅನುಸರಿಸಬಹುದು.

ಕಳೆದ ಶತಮಾನದಲ್ಲಿ ಹಲವಾರು ಮನೋವೈಜ್ಞಾನಿಕ ಪಂಥಗಳು ಶೈಕ್ಷಣಿಕ ಸಿದ್ಧಾಂತ ಮತ್ತು ಪ್ರಾಯೋಗಿಕ ಉಪಯೋಗಗಳ ಮೇಲೆ ಹೆಚ್ಚಿನ ಪ್ರಭಾವ ಬೀರಿದೆಯೆಂಬುದನ್ನು ಕಾಣಬಹುದು.

ಮನೋವಿಜ್ಞಾನದ ಕ್ರಮಬದ್ಧ ಬೆಳವಣಿಗೆಯನ್ನು ಅರ್ಥಮಾಡಿಕೊಂಡು ವಿದ್ಯಾರ್ಥಿಗಳ ವರ್ತನೆಯನ್ನು ವಿವಿಧ ವಿಧಾನಗಳಿಂದ ಅಧ್ಯಯನ ನಡೆಸಲು ಮನೋವೈಜ್ಞಾನಿಕ ಪಂಥಗಳು ಸಹಾಯಕವಾಗುತ್ತವೆ. ಮನೋವಿಜ್ಞಾನ ಕ್ಷೇತ್ರ ಬೆಳೆದಂತೆ ಹಾಗೂ ಅದರ ವಿಚಾರ ವ್ಯಾಪ್ತಿ ಹೆಚ್ಚಾದಂತೆ ಹಲವಾರು ಮನೋ– ವೈಜ್ಞಾನಿಕ ಪಂಥಗಳು ಜನ್ಮತಾಳಿದವು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ,

**1. ರಚನಾ ಪಂಥ. 2. ಕ್ರಿಯಾತ್ಮಕ ಪಂಥ 3. ವರ್ತನಾ ಪಂಥ. 4. ಗೆಸ್ಟಾಲ್ಟ್ ಪಂಥ. 5. ಮನೋವಿಶ್ಲೇಷಣಾ ಪಂಥ. 6. ಮಾನವತಾ ಪಂಥ 7. ಜ್ಞಾನಾತ್ಮಕ ಪಂಥ 8. ಜ್ಞಾನ ಸಂರಚನಾ ಪಂಥ**

ಇವುಗಳಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಹೆಚ್ಚಿನ ಕೊಡುಗೆ ನೀಡಿರುವಂತಹವುಗಳು:–

1. **ವರ್ತನಾ ಪಂಥ (BEHAVIOURISM):–** ಮನೋವಿಜ್ಞಾನದಲ್ಲಿ **J.B. WATSON** ರವರು ತಮ್ಮ ಪ್ರಸಿದ್ಧ" ವರ್ತನಾ ವಾದವನ್ನು ಮಂಡಿಸಿ, ಮನೋವಿಜ್ಞಾನವನ್ನು ಪ್ರಾಣಿಗಳು ಹಾಗೂ ಮಾನವರ ವರ್ತನೆಯ ವಸ್ತುನಿಷ್ಠ ಅಧ್ಯಯನವನ್ನಾಗಿ ಬೆಳೆಸಿ, ಮನೋವಿಜ್ಞಾನದಲ್ಲಿ ಕ್ರಾಂತಿಯನ್ನುಂಟು ಮಾಡಿದರು. ಇವರ ವಾದವನ್ನು ಜೊತೆಗೂಡಿ ಪ್ರತಿಪಾದಿಸಿದವರೆಂದರೆ– **IVAN PAVLOV-Russian Physiologist, B.F. SKINNER-American Psychologist, CLARK LEONARD HULL - American psychologist, EDWIN RAY GUTHRIE - Behavioral Psychologist, Philosopher, VLADIMIR BEKHTEREV-Russian Neurologist and the Father of Objective Psychology.** ವರ್ತನಾ ಪಂಥವು ಕಲಿಕೆ ಹಾಗೂ ಅಭಿಪ್ರೇರಣೆಯು ಮನೋವಿಜ್ಞಾನಕ್ಕೆ ಮಹತ್ವದ ಕೊಡುಗೆ ಕೊಟ್ಟಿದೆ. ಮಾನವನ ಬೆಳವಣಿಗೆ ಮತ್ತು ವಿಕಾಸದಲ್ಲಿ ಪರಿಸರದ ಪ್ರಭಾವ ಹಾಗೂ ಅದರ ಮಹತ್ವವನ್ನು ತಿಳಿಸುತ್ತದೆ. ಪರಿಸರದೊಂದಿಗೆ ನಿರಂತರ ಸಂಪರ್ಕ ಹೊಂದುವುದರಿಂದ ಎಲ್ಲ ವರ್ತನೆಗಳನ್ನು ಕಲಿಯಲು ಸಾಧ್ಯವೆಂದು ತಿಳಿಸುತ್ತದೆ.

2. **ಗೆಸ್ಟಾಲ್ಟ್ ಪಂಥ, (GESTALTISM):-**

ಈ ಪಂಥಸ್ಥಾಪಕರು **MAX WERTHEIMER - Austro - Hungarian born Psychologist, One of the three founders of Gestalt Psychology -** ಈ ಪಂಥದ ವಾದದ ವಿಚಾರವೇನೆಂದರೆ, ಕಲಿಕೆಯೆಂದರೆ ಒಳನೋಟವನ್ನು ನಿರ್ಮಿಸುವುದಾಗಿರುತ್ತದೆ. ಒಂದು ಸಮಸ್ಯೆಗೆ ಪರಿಹಾರವನ್ನು ಪಡೆಯುವುದೇ ಒಳನೋಟ ಕಲಿಕೆಯಾಗಿರುತ್ತದೆ. ಕಲಿಯುವಿಕೆಯಲ್ಲಿ ಅರ್ಥಗ್ರಹಣೆಗೆ ಗೆಸ್ಟಾಲ್ಟ್ ವಾದವು ಪ್ರಧಾನ ಸ್ಥಾನವನ್ನು ಕಲ್ಪಿಸಿರುತ್ತದೆ. ಯಾವ ಒಂದು ಪ್ರಚೋದನೆಯು ತನ್ನ ಪರಿಸರದಲ್ಲಿಯ ಇತರ

ಅಂಶಗಳೊಡನೆ ಹೇಗೆ ಒಂದು ಅರ್ಥಪೂರ್ಣ ಸಂಬಂಧವನ್ನು ಪಡೆದಿರುತ್ತದೆಯೋ, ಆ ಸಂಬಂಧವನ್ನು ಅರ್ಥೈಸಿದಾಗ ಒಳನೋಟದ ಕಲಿಕೆಯು ತನ್ನಷ್ಟಕ್ಕೆ ತಾನೇ ಮೂಡುತ್ತದೆ. ಗೆಸ್ಟಾಲ್ಟ್ ವಾದಿಗಳು "ಕಲಿಕೆಯು ಒಂದು ಗುರಿ ನಿರೂಪಿತ, ಸಂಶೋಧನಾತ್ಮಕ ಮತ್ತು ಆಲೋಚನಾತ್ಮಕ ಕ್ರಿಯೆ" ಎಂದು ಪ್ರತಿಪಾದಿಸುತ್ತಾರೆ. ಶಿಕ್ಷಣ ಕ್ಷೇತ್ರಕ್ಕೆ ಗೆಸ್ಟಾಲ್ಟ್ ಪಂಥವು ಕಲಿಕೆಯಲ್ಲಿ ಸಂಬಂಧಗಳ ಗ್ರಹಿಕೆ, ಪುನರ್ರಚನೆ ಹಾಗೂ ಪೂರ್ಣತೆಗೆ ಮಹತ್ವದ ಕೊಡುಗೆ ಕೊಟ್ಟಿರುತ್ತದೆ. ಇಂದಿನ ಶಿಕ್ಷಣದಲ್ಲಿ ಬಳಕೆಯಾಗುತ್ತಿರುವ ಅಂತರ್ – ಶಿಸ್ತಿನ ವಿಧಾನ(**Inter-disciplinary approach**)ಗೆಸ್ಟಾಲ್ಟ್ ಪಂಥದ ಕೊಡುಗೆಯೇ ಹೌದು. ಸಮಸ್ಯಾ ಪರಿಹಾರ ವಿಧಾನ ಮತ್ತು ಕಲಿಕೆಯ ನೂತನ ವಿಧಾನಗಳನ್ನು ಗೆಸ್ಟಾಲ್ಟ್ ಮನೋವಿಜ್ಞಾನಿಗಳು ಒದಗಿಸಿರುತ್ತಾರೆ.

**3. ಮನೋವಿಶ್ಲೇಷಣಾ ಪಂಥ(PSYCHOANALISM):–**

ಈ ಪಂಥದ ಸ್ಥಾಪಕರು **SIGMUND FREUD-Austrian Neurologist and the founder of Psychoanalysis.** ಈ ಪಂಥವು ಮಾನವನ ವರ್ತನೆಯನ್ನು ವಿಶ್ಲೇಷಣೆ ಮಾಡುವಲ್ಲಿ ರಚನಾ ಪಂಥ, ಕ್ರಿಯಾತ್ಮಕ ಪಂಥ, ವರ್ತನಾ ಪಂಥಗಳಿಗೆ ವಿರುದ್ಧವಾದ ಅಭಿಪ್ರಾಯವನ್ನು ಮಂಡಿಸುತ್ತದೆ. ಈ ಪಂಥದ ಪ್ರಕಾರ ವ್ಯಕ್ತಿಯ ಮನಸ್ಸಿನ ಅಜಾಗೃತ ಮಟ್ಟದಲ್ಲಿರುವ ಪ್ರಚೋದನೆಗಳು ವ್ಯಕ್ತಿಯ ವರ್ತನೆ ಅಥವಾ ಆಲೋಚನೆಗಳ ಮೂಲಕ ಅಭಿವ್ಯಕ್ತ ಗೊಳ್ಳಲು ಪ್ರಯತ್ನಿಸುತ್ತವೆ. ಈ ಅಜಾಗೃತ ಅಭಿಪ್ರೇರಣೆಯೇ ಮನೋವಿಶ್ಲೇಷಣೆಯ ಮೂಲಾಂಶವಾಗಿದೆ. ಅಜಾಗೃತ ಅವಸ್ಥೆಯಲ್ಲಿರುವ ವಿಷಯವನ್ನು ಹೊರಸೆಳೆಯಲು "ಮುಕ್ತ ಸಹಚರ್ಯ" ವಿಧಾನ ಮತ್ತು ಸ್ವಪ್ನ ವಿಶ್ಲೇಷಣೆ ಕ್ರಮಗಳನ್ನು ಸೂಚಿಸಲಾಗಿದೆ. ಶಿಕ್ಷಣ ಕ್ಷೇತ್ರಕ್ಕೆ ಈ ಪಂಥದ ಮುಖ್ಯ ಕೊಡುಗೆಯೆಂದರೆ – ವ್ಯಕ್ತಿಯ ವರ್ತನೆಯನ್ನು ಅಧ್ಯಯನ ಮಾಡಲು ಮನೋವಿಶ್ಲೇಷಣಾ ವಿಧಾನವನ್ನು ಕೊಟ್ಟಿರುತ್ತದೆ. ಶಿಕ್ಷಣದ ಪ್ರಾಮುಖ್ಯತೆಯನ್ನು ತಿಳಿಸುವುದರ ಜೊತೆಗೆ ಬಾಲ್ಯಾವಸ್ಥೆಯಲ್ಲಿ ಉತ್ತಮ ಹಾಗೂ ಆರೋಗ್ಯಕರ ವಾತಾವರಣ ಒದಗಿಸಬೇಕೆಂದು ಸೂಚಿಸುತ್ತದೆ. ಮಕ್ಕಳಲ್ಲಿ ಹುದುಗಿರುವ ಭಾವನೆಗಳನ್ನು ಅಥವಾ ದಮನಕ್ಕೊಳಗಾಗಿರುವ ಭಾವನೆಗಳನ್ನು ವ್ಯಕ್ತಪಡಿಸಲು ಸೂಕ್ತ ಸಹಪಠ್ಯ ಚಟುವಟಿಕೆಗಳು ಹಾಗೂ ಒಳ್ಳೆಯ ಹವ್ಯಾಸಗಳನ್ನು ಬೆಳೆಸುವಂತಹ ಚಟುವಟಿಕೆಗಳನ್ನು ಶಾಲಾ ಕಾರ್ಯಕ್ರಮಗಳಲ್ಲಿ ಜೋಡಿಸಿಕೊಳ್ಳಬೇಕು.

**4. ಮಾನವತಾ ಪಂಥ**[29] **CARL ROGERS - American Psychologist and ABRAHAM MASLOW - American Psychologist** ಮುಂತಾದವರು ಮಾನವತಾ ಪಂಥದ ಪ್ರತಿಪಾದಕರು. ಈ ಪಂಥ ಮಾನವನಲ್ಲಿ ಪ್ರಾಣಿಗಳಿಂದ ಪ್ರತ್ಯೇಕಿಸುವಂತಹ ಮಾನವೀಯಗುಣಗಳನ್ನು ಪ್ರತಿಪಾದಿಸುತ್ತದೆ. ಇವರ

---

29. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–1, ಪು–28. ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005 (2005)

ಪ್ರಕಾರ **"Self-actualization"** (ಆತ್ಮ-ವಾಸ್ತವೀಕರಣ) ಮಾನವನ ಮೂಲಭೂತ ಪ್ರೇರಕ ಶಕ್ತಿ. ಇಲ್ಲಿ ಪರಿಸರವನ್ನಾಗಲೀ, ಮಾತಾಪಿತೃಗಳನ್ನಾಗಲೀ, ಸಮಾಜದಲ್ಲಿರುವವರನ್ನಾಗಲೀ ದೂಷಣೆ ಮಾಡುವಂತಿಲ್ಲ. ವ್ಯಕ್ತಿಯು ತನ್ನ ಚಟುವಟಿಕೆಗಳಿಗೆ ತಾನೇ ಕಾರಣನಾಗುವನು. ಹೀಗಾಗಿ ಆಯ್ಕೆಯ ಸ್ವಾತಂತ್ರ್ಯವಿದೆ, ನಿರ್ವಹಣಾ ಸ್ವಾತಂತ್ರ್ಯವಿದೆ. ಶಿಕ್ಷಣ ಕ್ಷೇತ್ರಕ್ಕೆ ಇದರ ಕೊಡುಗೆಯೇನೆಂದರೆ, ಮಾನವ ತನ್ನ ಸಾಮರ್ಥ್ಯದಲ್ಲಿ ಆತ್ಮವಿಶ್ವಾಸಹೊಂದಿ ಮಹತ್ವದ ಸಾಧನೆಯೆಡೆಗೆ ಸಾಗಲು ಪ್ರೇರೇಪಿಸಬೇಕು. ಸಮಾಜ ಮತ್ತು ಶಾಲೆಯ ಮಧ್ಯೆ ಒಳ್ಳೆಯ ಬಾಂಧವ್ಯ ಬೆಳೆಸಬೇಕು. ಉತ್ಪಾದನಾತ್ಮಕ ಹಾಗೂ ಸಹಕಾರ ಮನೋಭಾವವನ್ನು ಮಕ್ಕಳಲ್ಲಿ ಪ್ರೇರೇಪಿಸಬೇಕು.

೫. **ಜ್ಞಾನಾತ್ಮಕ ಪಂಥ**:- ಈ ನವೀನ ಪಂಥದ ಪ್ರತಿಪಾದನಾ ವಿಚಾರವೆಂದರೆ, ಜ್ಞಾನಾತ್ಮಕ ಕ್ರಾಂತಿ. ಜ್ಞಾನಾತ್ಮಕ ಮನೋವಿಜ್ಞಾನ ಮಾನವನ ಆಲೋಚನೆ, ಸ್ಮೃತಿ, ಭಾಷಾ ವಿಕಾಸ, ಪ್ರತ್ಯಕ್ಷಾನುಭವಗಳು, ಪರಿಕಲ್ಪನೆಗಳ ವಿಕಾಸ ಮುಂತಾದ ಮಾನಸಿಕ ಕಾರ್ಯಗಳಾದ ಒಳನೋಟ, ಸೃಜನಶೀಲತೆ ಮತ್ತು ಸಮಸ್ಯಾಪರಿಹಾರಗಳನ್ನು ಅರಿಯಲು ಪ್ರಯತ್ನಿಸುತ್ತದೆ. ಜ್ಞಾನಾತ್ಮಕ ಮನೋವಿಜ್ಞಾನಿಗಳು ವರ್ತನಾವಾದಿಗಳ ಉದ್ದೀಪನ - ಅನುಕ್ರಿಯೆಯ ಮಾದರಿ ಕಲಿಕೆಯನ್ನು ಸಂಪೂರ್ಣವಾಗಿ ವಿರೋಧಿಸುತ್ತಾರೆ. ಈ ಪಂಥದ ಮೂಲ ಗೆಸ್ಟಾಲ್ಟ್ ವಾದಿಗಳ ಜ್ಞಾನಾತ್ಮಕ ದೃಷ್ಟಿಕೋನದಿಂದ ಪ್ರಾರಂಭವಾಯಿತೆಂದು ಹೇಳಬಹುದು. ಸಂಕ್ಷಿಪ್ತವಾಗಿ ಹೇಳುವುದಾದರೆ, ಜ್ಞಾನಾತ್ಮಕ ಮನೋವಿಜ್ಞಾನವು ವರ್ತನಾ ಪ್ರಕ್ರಿಯೆಯನ್ನು, ಈ ವ್ಯವಸ್ಥೆಯಲ್ಲಿ ಪರಿಸರದಿಂದ ಒಳಬರುವ ಉದ್ದೀಪನವನ್ನು 'ಒಳಬರುವ ಮಾಹಿತಿ' - **input** ಎಂತಲೂ, ಮಾನವನ ಮನಸ್ಸಿನ ಜ್ಞಾನಾತ್ಮಕ ಕಾರ್ಯಕ್ಷಮತೆಯನ್ನು 'ಪ್ರಕ್ರಿಯೆ'-**process** ಎಂತಲೂ ಮತ್ತು ಜ್ಞಾನಾತ್ಮಕ ಕಾರ್ಯಕ್ಷಮತೆಯ ಫಲಿತಾಂಶವನ್ನು 'ಉತ್ಪನ್ನ'-**output** ಎಂದು ವಿವರಿಸಬಹುದು. ಜ್ಞಾನಾತ್ಮಕ ಪಂಥದ ಪ್ರಮುಖ ಪ್ರತಿಪಾದಕರು **JEAN PIAGET - Swiss Psychologist known for his work on child development,** ಮಕ್ಕಳಲ್ಲಿ ಜ್ಞಾನಾತ್ಮಕ ಸಾಮರ್ಥ್ಯಗಳ ವಿಕಾಸ ಮತ್ತು ಜ್ಞಾನಾತ್ಮಕ ಪ್ರಕ್ರಿಯೆ ಹೇಗೆ ನಡೆಯುತ್ತದೆ ಎಂಬುದನ್ನು ತಿಳಿಯಲು ಶ್ರೇಷ್ಠ ಅಧ್ಯಯನ ನಡೆಸಿರುತ್ತಾರೆ. ಈ ಪಂಥದ ಮತ್ತೊಬ್ಬ ಸ್ಥಾಪಕರು-**EDWARD TOLMAN American Psychologist and a Professor at the University Of California** ಇವರು ಕಲಿಕೆ, ಆಲೋಚನೆ ಮತ್ತು ಸೃಜನಾತ್ಮಕ ಕಾರ್ಯನಿರ್ವಹಣೆ ಕ್ಷೇತ್ರದಲ್ಲಿ ಮಹತ್ವಪೂರ್ಣ ಕೊಡುಗೆಯನ್ನು ನೀಡಿರುತ್ತಾರೆ.[೩೦]

---

೩೦. **ವೀರಪ್ಪ ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-11- ಪು-208-214.(1962), ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

## 2–4."श्रीविष्णुशर्मविरचितं पञ्चतन्त्रम्"ನೀತಿಕಥೆಗಳಲ್ಲಿ ಕಂಡುಬರುವ ಕೆಲವು ಶೈಕ್ಷಣಿಕ ಮನೋವಿಜ್ಞಾನ ಹಾಗೂ ವ್ಯಕ್ತಿತ್ವನಿರ್ಮಾಣ–ಪರಿಕಲ್ಪನೆಗಳ–ವಿಶ್ಲೇಷಣೆ

ಹೀಗೆ ಶೈಕ್ಷಣಿಕ ಮನೋವಿಜ್ಞಾನದ ಕೆಲವು ಪ್ರಮುಖ ವಿಚಾರಗಳ ಒಂದು ಪಕ್ಷಿನೋಟವನ್ನು ನೋಡಿದ ಉದ್ದೇಶವೇನೆಂದರೆ, ವಿಷ್ಣುಶರ್ಮರ ಸಂಸ್ಕೃತ ಪಂಚತಂತ್ರ ಚಂಪೂ ಕಾವ್ಯವನ್ನು ಸೂಕ್ಷ್ಮವಾಗಿ ಈ ನಿಟ್ಟಿನಲ್ಲಿ ಗಮನಿಸಿ ವಿಶ್ಲೇಷಣೆ ಮಾಡಿದಾಗ ಎಷ್ಟು ಸಹಜವಾಗಿ ಕಲಿಕೆ ಹಾಗೂ ಕಲಿಸುವಿಕೆ ಪರಿಣಾಮಕಾರಿಯಾಗಿದೆ, ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಎಷ್ಟು ಸುವ್ಯವಸ್ಥಿತವಾಗಿದೆ ಎಂಬುದನ್ನು ಕಂಡುಕೊಳ್ಳಬಹುದು. ವಿಮರ್ಶಾತ್ಮಕವಾಗಿ, ಹೋಲಿಕೆ ಮಾಡಿ ಪಂಚತಂತ್ರದಲ್ಲಿನ ಶೈಕ್ಷಣಿಕ ಮನೋವಿಜ್ಞಾನದ ಲಕ್ಷಣಗಳನ್ನು ಹಾಗೂ ವ್ಯಕ್ತಿ ವಿಕಸನಕ್ಕೆ ನೆರವಾಗುವ ನೀತಿಶಿಕ್ಷಣದ ಅಂಶಗಳನ್ನೂ ಕಾಣಬಹುದು.

ವಿಷ್ಣುಶರ್ಮರು ತಮ್ಮ ಪಂಚತತ್ವಗಳಲ್ಲಿ ಬಣ್ಣ ಬಣ್ಣದ ಸಣ್ಣ ಸಣ್ಣ ನೀತಿಕಥೆಗಳ ಒಂದು ಅನ್ಯೋನ್ಯ ಸಂಗಮದಲ್ಲಿ ಒಳ್ಳೆಯ ಪಠ್ಯಕ್ರಮ ಆಯ್ಕೆ ಮಾಡಿಕೊಂಡಿದ್ದಾರೆ. ಶಿಕ್ಷಣವು ಸಹಜವಾಗಿ ಶಿಕ್ಷಕರ ಸೂಕ್ತ ಮಾರ್ಗದರ್ಶನದಿಂದ ಸಂಭವಿಸುತ್ತದೆ. ವ್ಯಕ್ತಿಪರಿವರ್ತನಾ ಸನ್ನಿವೇಶಗಳನ್ನು ಸ್ವಾರಸ್ಯವಾದ ಒಂದೇ ಪಡಿಯಚ್ಚಿನ ಪ್ರಾಣಿಗಳನ್ನೊಳಗೊಂಡ ಆಕರ್ಷಕ ಉದಾಹರಣೆಗಳಿಂದ ಮೂವರು ಮುಗ್ಧ ರಾಜಕುಮಾರರ ವ್ಯಕ್ತಿತ್ವ ವಿಕಸನಕ್ಕೆ ರಚಿಸಿದ ಜನಪ್ರಿಯ ನೀತಿಕಾವ್ಯ ಈ ಪಂಚತಂತ್ರವಾಗಿದೆ.[31]

ಈ ಅಮೂಲ್ಯ ಗ್ರಂಥದಲ್ಲಿಯೇ ಅಂದರೆ ಭೂಮಿಕೆಯಲ್ಲಿ ಸೂಚಿಸಿರುವಂತೆ ದಾಕ್ಷಿಣಾತ್ಯದಲ್ಲಿದ್ದ ಮಹಿಲಾರೋಪ್ಯನಗರದ ರಾಜನಾದ ಅಮರಶಕ್ತಿಯ ಮಕ್ಕಳು ಮೂವರು. ಅವರುಗಳೆಂದರೆ ಬಹುಶಕ್ತಿ, ಉಗ್ರಶಕ್ತಿ ಮತ್ತು ಅನಂತಶಕ್ತಿ. ಈ ಮೂವರೂ ಮೂರ್ಖ, ಆಲಸಿ ಮತ್ತು ಬುದ್ಧಿಶೂನ್ಯರಾಗಿದ್ದರು. ತನ್ನ ದುರ್ವಿನೀತ ಮಕ್ಕಳ ವಿಚಾರವಾಗಿ ರಾಜನು ಸದಾ ಚಿಂತೆಗೊಳಗಾಗಿದ್ದನು. ರಾಜನು ವೃದ್ಧನಾಗಿದ್ದನು. "ನನ್ನ ನಂತರ ಈ ರಾಜ್ಯಭಾರವನ್ನು ಯಾರು ಸಂಭಾಳಿಸುವರು ಎಂಬ ವಿಚಾರವಾಗಿ ರಾಜನಿಗೆ ಚಿಂತೆ ಸದಾ ಕಾಡುತ್ತಿತ್ತು. ತನ್ನ ಮೂರ್ಖ ಮಕ್ಕಳನ್ನು ನೋಡಿ ಅವನಿಗೆ ಪುನಃಪುನಃ ಒಂದೇ ವಚನ ಸ್ಮರಣೆಗೆ ಬರುತ್ತಿತ್ತು.

अजातमृतमूर्खेभ्यो मृतजातौ सुतौ वरम् ।

यतस्तौ स्वल्पदुःखाय यावज्जीवं जडो दहेत् ॥[32]

31. **ಪಂಚತಂತ್ರ** –ವಿಕಿಪೀಡಿಯ, ಹುರುಳು, https://googleweblight.com

32. **ಸುಧಾಕರ್ ಮಾಲವೀಯ,** ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಕಥಾಮುಖಂ–ಶ್ಲೋ–4,(1993). ಪು–4 ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಅಜಾತ-ಜನಿಸದ ಮೃತ ಮತ್ತು ಮೂರ್ಖ ಪುತ್ರರಿಗಿಂತ ಪುತ್ರರು ಜನ್ಮ ತಾಳದಿರುವುದೇ ಉತ್ತಮ. ಏಕೆಂದರೆ ಮೊದಲೆರಡು ಕಾರಣಗಳಿಂದಾಗುವ ದುಃಖ ಅಲ್ಪ ಸಮಯದ್ದಾಗಿದ್ದರೆ, ಮೂರ್ಖ ಪುತ್ರರಿಂದ ಮನಸ್ಸು ಸುಟ್ಟಂತಾಗುತ್ತದೆ. ಇದರಿಂದ ಆ ರಾಜನ ವ್ಯಥೆ ಯಾವ ಪರಕಾಷ್ಠತೆಯನ್ನು ತಲುಪಿತ್ತೆಂದು ಸ್ಪಷ್ಟವಾಗುತ್ತದೆ.

ಆ ರಾಜನ ಆಸ್ಥಾನದಲ್ಲಿ ಸುಮಾರು ೫೦೦ಜನ ಪಂಡಿತರಿದ್ದರು. ಒಂದು ದಿನ ಚಿಂತಾಕ್ರಾಂತನಾಗಿದ್ದ ರಾಜನು ಪಂಡಿತರನ್ನೆಲ್ಲಾ ಕರೆದು "ನನ್ನ ಮಕ್ಕಳು ಚತುರರಾಗಲು ಏನಾದರೂ ಮಾಡಿ" ಎಂದು ಕೋರಿದನು. ಯಾರೂ ಮುಂದೆ ಬರಲಿಲ್ಲ. ಆದರೆ ಅವರು ಒಂದು ಅಭಿಪ್ರಾಯ ಸೂಚಿಸಿದರು."ವಿಷ್ಣುಶರ್ಮ ಎಂಬ ಪಂಡಿತರು,ಶಿಕ್ಷಕ ವೃತ್ತಿಯಿಂದ ನಿವೃತ್ತರಾಗಿರುವವರು, ಅವರೇ ನಿಮ್ಮ ಮಕ್ಕಳನ್ನು ಬುದ್ಧಿವಂತರನ್ನಾಗಿ ಮಾಡಲು ಸಮರ್ಥರು. ನೀವು ನಿಮ್ಮ ಮಕ್ಕಳನ್ನು ಅವರಿಗೆ ಒಪ್ಪಿಸಿಬಿಡಿ. ಮುಂದಿನದೆಲ್ಲವನ್ನೂ ಅವರು ನೋಡಿಕೊಳ್ಳುತ್ತಾರೆ."

ರಾಜನು ತನ್ನ ಪುತ್ರರು ಮೂರ್ಖರೂ, ಕುಮಾರ್ಗದಲ್ಲಿ ನಡೆಯುವವರೂ ಆಗಿರುವರೆಂಬುದನ್ನು ಮನಗಂಡು ಈ ರೀತಿ ಯೋಚಿಸುತ್ತಾನೆ कोऽर्थः पुत्रेण जातेन, यो न विद्वान्न धार्मिकः ಅಂದರೆ ಯಾವ ಪುತ್ರನು ವಿದ್ವಾಂಸನೂ, ಗುಣಶಾಲಿಯೂ, ಧರ್ಮಾತ್ಮನೂ, ವಶವರ್ತಿಯೂ ಆಗಿರುವುದಿಲ್ಲವೋ, ಅವರುಗಳು ಇರುವುದೇ ವ್ಯರ್ಥ. ನನ್ನ ಪುತ್ರರನ್ನು ಯಾವ ರೀತಿಯಲ್ಲಿ ಗುಣಶಾಲಿಗಳನ್ನಾಗಿಸಲಿ? ಈ ರೀತಿ ಯೋಚಿಸುತ್ತಾ, ವಿಷ್ಣುಶರ್ಮರನ್ನು ಆಹ್ವಾನಿಸಿದನು. ತನ್ನ ಇಚ್ಛೆಯನ್ನು ತಿಳಿಸಿದನು ಮತ್ತು ತನ್ನ ರಾಜ್ಯದಲ್ಲಿ ಅವರಿಗೆ ಪಾಲು ಕೊಡುವುದಾಗಿ ನಿವೇದಿಸಿಕೊಂಡನು. ಬೃಹಸ್ಪತಿಯಂತೆ ನೀತಿಶಾಸ್ತ್ರದ ತತ್ವಗಳನ್ನು ಚೆನ್ನಾಗಿ ಅರಗಿಸಿಕೊಂಡಿದ್ದ ವಿಷ್ಣುಶರ್ಮರು ಈ ರೀತಿ ಹೇಳುತ್ತಾರೆ देव! महाकुलसम्भूता एते राजपुत्राः, तन्मया नीतिं ग्राहयितुं शक्यन्ते। ರಾಜಪುತ್ರರು ಉಚ್ಚಕುಲದಲ್ಲಿ ಜನಿಸಿದವರಾದ್ದರಿಂದ ಇವರಿಗೆ ನೀತಿಶಾಸ್ತ್ರದ ಉಪದೇಶವನ್ನುಮಾಡಿ ಯೋಗ್ಯರನ್ನಾಗಿಸುತ್ತೇನೆ.

ಪಂಚತಂತ್ರದ ಭೂಮಿಕೆಯಲ್ಲಿ ವಿಷ್ಣುಶರ್ಮರು ಹೀಗೆ ಹೇಳುತ್ತಾ ಪ್ರಾರಂಭಿಸಿರುವುದನ್ನೂ ಗಮನಿಸಬಹುದು.

"एतत्पञ्चतन्त्रकं नाम नीतिशास्त्रं बालावबोधनार्थ भूतले प्रवृत्तम् ।"

ಈ ಪಂಚತಂತ್ರಗಳಿಂದ ಕೂಡಿದ ನೀತಿಶಾಸ್ತ್ರವು ಈ ಭುವಿಯ ಮೇಲೆ ಸೃಷ್ಟಿಯಾಗಿರುವುದು ಯುವಕರ ಜ್ಞಾನೋದಯಕ್ಕೆ ಅಥವಾ ಜ್ಞಾನದ ಬೋಧನೆಗಾಗಿ. ಅಂದರೆ ಇದು ಶಿಕ್ಷಣ ನೀಡುವುದಕ್ಕಾಗಿ "

ಆದರೆ ವಿಷ್ಣುಶರ್ಮರು ಒಬ್ಬ ಆದರ್ಶ ಶಿಕ್ಷಕರಾಗಿದ್ದರಿಂದ ರಾಜನು ಘೋಷಣೆ ಮಾಡಿದ ಬಹುಮಾನಕ್ಕೆ ತಮ್ಮ ಜ್ಞಾನವನ್ನು ಮಾರಲು ನಿರಾಕರಿಸಿದರು. ಇದು ಒಂದು ವೃತ್ತಿಯ ಘನತೆ ಮತ್ತು ಗೌರವವನ್ನು ಸೂಚಿಸುತ್ತದೆ.

ಆ ದುರ್ವಿನೀತ ಮಕ್ಕಳನ್ನು ಆರು ಮಾಸಗಳಲ್ಲಿ ವ್ಯವಹಾರ ಕುಶಲರನ್ನೂ, ರಾಜನೀತಿ ನಿಪುಣರನ್ನೂ ಮತ್ತು ದೇವತೆಗಳ ರಾಜ ಇಂದ್ರನನ್ನೂ ಜಯಿಸುವಷ್ಟು ಸಮರ್ಥರನ್ನಾಗಿಸುವ ವಚನ ನೀಡಿದರು. ರಾಜನು ಬಹಳ ಸಂತೋಷದಿಂದ ತನ್ನ ಪುತ್ರರನ್ನು ವಿಷ್ಣುಶರ್ಮರ ಜೊತೆ ಕಳುಹಿಸಿಕೊಟ್ಟನು. ವಿಷ್ಣುಶರ್ಮರು ರಾಜನಂದನರನ್ನು ಕರೆದುಕೊಂಡು ಹೋಗಿ, ಅವರಿಗಾಗಿ ಮಿತ್ರಭೇದ, ಮಿತ್ರಸಂಪ್ರಾಪ್ತಿ, ಕಾಕೋಲೂಕೀಯ, ಲಬ್ಧಪ್ರಣಾಶ ಮತ್ತು ಅಪರೀಕ್ಷಿತಕಾರಕ ಎಂಬ ಐದು ತಂತ್ರಗಳನ್ನು ರಚಿಸಿ ಆ ರಾಜನಂದನರಿಗೆ ಪಾಠ ಮಾಡಿದರು. ಅವರೂ ಕೂಡ ಆ ತಂತ್ರಗಳನ್ನು ಅಭ್ಯಾಸ ಮಾಡಿ ಆರು ತಿಂಗಳಲ್ಲಿ ಅವರು ವಚನ ಕೊಟ್ಟಿದ್ದಂತೆ ನಿಪುಣರಾದರು.

अधीते य इदं नित्यं नीतिशास्त्रं श्रृणोति च ।

न पराभवमाप्नोति शक्रादपि कदाचन ॥[33]

ಅಂದಿನಿಂದ ಆ ನೀತಿಶಾಸ್ತ್ರವು ಪಂಚತಂತ್ರವೆಂಬ ಹೆಸರಿನಿಂದ ಜಗತ್ಪ್ರಸಿದ್ಧವಾಯಿತು. ಅಷ್ಟೇ ಅಲ್ಲದೆ "ಯಾರು ನಿತ್ಯ ಈ ನೀತಿಶಾಸ್ತ್ರವನ್ನು ಅಧ್ಯಯನ ಮಾಡುವರೋ ಅವರು ಇಂದ್ರನಿಂದ ಕೂಡ ಸೋಲನ್ನು ಕಾಣಲಾರರು." ಎಂದು ಪ್ರಖ್ಯಾತಿ ಪಡೆಯಿತು.[34]

ಈ ಸಂದರ್ಭದಲ್ಲಿ ಸಂಕ್ಷಿಪ್ತವಾಗಿ ಪಂಚತಂತ್ರ ನೀತಿಕಥೆಯ ಪೂರ್ವಭಾವಿ ವಿಚಾರಗಳನ್ನು ಸ್ಮರಣೆಗೆ ತಂದುಕೊಂಡ ಕಾರಣವೇನೆಂದರೆ, ರಾಜನ ಪರಿಸ್ಥಿತಿಯನ್ನು ಗಮನಿಸಿ, ಕಾರ್ಯಯೋಜನೆಗೆ ಮುನ್ನ ಚೆನ್ನಾಗಿ ಆಲೋಚಿಸಿ, ಸೂಕ್ತ ಪಠ್ಯಕ್ರಮ ಮತ್ತು ಬೋಧನಾ ಮಾಧ್ಯಮ ಆಯ್ಕೆಮಾಡಿ, ಶಿಕ್ಷಣ ನೀಡುವ ವಿಷ್ಣುಶರ್ಮರ ಮನೋವೈಜ್ಞಾನಿಕ ಕೌಶಲ್ಯವನ್ನು ಗುರುತಿಸಲು ಸಾಧ್ಯವಾಗುತ್ತದೆ. ತಮ್ಮ ಸೂಕ್ಷ್ಮಮತಿಯಿಂದ ರಾಜನ ಮತ್ತು ಅವನ ಪುತ್ರರ ಮನಸ್ಸು ಹಾಗೂ ಪರಿಸ್ಥಿತಿಯನ್ನರಿತು, ದೃಢಸಂಕಲ್ಪದಿಂದ ಐದು ತಂತ್ರಗಳನ್ನು ರಚಿಸಿ ವಿವಿಧಕಥೆಗಳ ಮಾಧ್ಯಮದಿಂದ ಆ ಮಕ್ಕಳಿಗೆ ಬದುಕಿನ ವ್ಯವಹಾರ ಜ್ಞಾನ ಕಲಿಸಲು ಸನ್ನದ್ಧರಾದರು. ವಿಷ್ಣುಶರ್ಮರಿಗೆ ಶೈಕ್ಷಣಿಕ ಮನೋ ವಿಜ್ಞಾನದ ಜ್ಞಾನ ಬಹುಶಃ ದೈವದತ್ತವಾಗಿಯೇ ಬಂದು ಬಿಟ್ಟಿತ್ತು. ಕಥೆಗಳ ಮೂಲಕ ಬೋಧನೆ ಎಷ್ಟರಮಟ್ಟಿಗೆ ಪರಿಣಾಮಕಾರಿ ಎಂಬ ಬಗ್ಗೆ ವಿಷ್ಣುಶರ್ಮರಿಗೆ ತಿಳಿದಿತ್ತು. ಹಾಗೆಯೇ

---

೩೩. **ಸುಧಾಕರ್ ಮಾಲವೀಯ,** ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಮ್ ಪಂಚತಂತ್ರಮ್, ಕಥಾಮುಖಂ–ಶ್ಲೋ–10,ಪು–10, (1993), ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

34. सुधाकर मालवीय, श्री विष्णशर्मविरचितं पञ्चतन्त्रम्, कथामुखम्, PP 8,9,10. चौकाम्बा कृष्णदास अकादमी, वारणासी –221001. (1993)

ಮಕ್ಕಳ ಆಸಕ್ತಿಯನ್ನು ಹೆಚ್ಚಿಸಲು ಇದೊಂದು ವಿಶಿಷ್ಟ ಕಲೆಯೆಂಬುದೂ ಅರಿವಿತ್ತು. ಈ ಒಂದು ಒಳ್ಳೆಯ ಪರಿಜ್ಞಾನದಿಂದ ಅಚ್ಚುಕಟ್ಟಾದ ಕಥೆಯ ಚೌಕಟ್ಟಿನಲ್ಲಿ ಪಂಚಸೂತ್ರಗಳನ್ನು ಅಡಕಗೊಳಿಸಿ, ಪ್ರತಿ ಕಥೆಯೊಂದಿಗೆ ಒಂದು ವ್ಯಕ್ತಿತ್ವ ನಿರ್ಮಾಣಕ್ಕೆ ಅಣಿಯಾದ ನೀತಿಯನ್ನು ಅಳವಡಿಸಿ ಮಂದಮತಿಗಳಾದ ರಾಜಕುಮಾರರಿಗೆ ಶಿಕ್ಷಣವನ್ನೊದಗಿಸಲು ಸೂಕ್ತ ಪಠ್ಯಕ್ರಮವನ್ನು ರಚಿಸಿದ್ದಾರೆ.[35]

ಮನೋವಿಜ್ಞಾನವು ವ್ಯಕ್ತಿಯ ವಿವಿಧ ಹಂತಗಳಲ್ಲಿ ಬೆಳವಣಿಗೆಯ ಲಕ್ಷಣಗಳು, ಬೌದ್ಧಿಕವಿಕಾಸ, ಪರಿಕಲ್ಪನಾ ಬೆಳವಣಿಗೆಯ ಮಟ್ಟ, ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳ ಬಗ್ಗೆ ಚರ್ಚಿಸುತ್ತದೆ. ಈ ಜ್ಞಾನವನ್ನು ಬಳಸಿಕೊಂಡು ಶಿಕ್ಷಣತಜ್ಞ ಅಥವಾ ಶಿಕ್ಷಕ ತನ್ನ ವಿದ್ಯಾರ್ಥಿಗಳ ಅಗತ್ಯತೆ ಹಾಗೂ ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ಪಠ್ಯಕ್ರಮವನ್ನು ರೂಪಿಸಿಕೊಳ್ಳುತ್ತಾನೆ. ಅರ್ಥಪೂರ್ಣವಾದ ಪಠ್ಯಕ್ರಮ ಮಾತ್ರ ವಿದ್ಯಾರ್ಥಿಗಳನ್ನು ಕಲಿಕೆಗೆ ಪ್ರೇರೇಪಿಸುತ್ತದೆ. ಪಂಚತಂತ್ರದಲ್ಲಿ ವಿಷ್ಣುಶರ್ಮರು ಹೀಗೆ-ಯೇ ರಾಜಕುಮಾರರ ವರ್ತನೆಯಲ್ಲಿ ಅಪೇಕ್ಷಿತ ಬದಲಾವಣೆಗಳನ್ನು ತರುವ ಉದ್ದೇಶವಿಟ್ಟುಕೊಂಡೇ ಪಠ್ಯಕ್ರಮವನ್ನು ರೂಪಿಸಿಕೊಂಡಿದ್ದಾರೆ. (ಅಮರಶಕ್ತಿ ರಾಜನ ಅಪೇಕ್ಷೆಯಂತೆ) ಮಹಾಭಾರತದಲ್ಲಿ ಒಂದು ಒಳ್ಳೆಯ ಸೂಕ್ತಿಯನ್ನು, ಹೇಳಲಾಗಿದೆ:-

नित्यं क्रोधात्तपो रक्षेत् धर्मं रक्षेच्छ मत्सरात् ।

विद्यां मानापमानाभ्यामात्मानं तु प्रमादतः॥[36]

ಕ್ರೋಧಬರದಂತೆ ತಪಸ್ಸನ್ನೂ, ಹೊಟ್ಟೆಕಿಚ್ಚುಪಡದೆ ಧರ್ಮವನ್ನೂ ರಕ್ಷಿಸಬೇಕು. ಮಾನ-ಅಪಮಾನಗಳಿಗೆ ಜಗ್ಗದ ವಿದ್ಯೆಯನ್ನು ಸಂಗ್ರಹಿಸಿ ಉಳಿಸಿಕೊಳ್ಳಬೇಕು. ತಪ್ಪುದಾರಿ ತುಳಿಯದಂತೆ ತನ್ನ ಆತ್ಮವನ್ನು ಕಾಪಾಡಿಕೊಳ್ಳಬೇಕು. ಬದುಕಿನ ನೀತಿಯನ್ನು ಕಂಡುಕೊಳ್ಳಬೇಕು.

ಶಿಕ್ಷಣವು ಚರಿತ್ರಾ ಪೂರ್ವಕಾಲದಲ್ಲಿಯೇ ಪ್ರಾರಂಭವಾಗಿತ್ತು. ಆಗಿನ ಪದ್ಧತಿ ಮೌಖಿಕವಾಗಿ ಹಾಗೂ ಕಥೆ ಹೇಳುವ ಮೂಲಕ, ಅನುಕರಣೆ ಮೂಲಕ ಶಿಕ್ಷಣ ನೀಡುವುದು, ಅನೌಪಚಾರಿಕವಾಗಿತ್ತು. ನಂತರದಲ್ಲಿ ಶಿಕ್ಷಣ ಶಾಸ್ತ್ರ ಅಭಿವೃದ್ಧಿಗೊಂಡಂತೆ ಔಪಚಾರಿಕ ಶಿಕ್ಷಣ ಪ್ರಾರಂಭವಾಯಿತು. ಉಪನಿಷತ್ತುಗಳ ಪರಿಕಲ್ಪನೆಯನ್ನು ಆಧರಿಸಿದ್ದ ಪ್ರಾಚೀನ ಗುರುಕುಲಗಳಲ್ಲಿ ಪ್ರಮುಖವಾದ ನಾಲ್ಕು ಸೂತ್ರಗಳಿದ್ದವು ಅವುಗಳೆಂದರೆ ಸ್ವಚಿಂತನೆ, ಸ್ವಅನುಶಾಸನ, ಸ್ವಾವಲಂಬನೆ ಹಾಗೂ ಸ್ವಾಧ್ಯಾಯ. ಈ ಗುರುಕುಲದಲ್ಲಿ ವ್ಯಕ್ತಿತ್ವ ನಿರ್ಮಾಣವು

---

35. **ಭರತ.ಬಿ.ರಾವ್,** ಪಂಚತಂತ್ರ, ಪಂಡಿತ ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಪು-10,11.(2018) Jwalamukhi MudranalayaPvt,Ltd, 44/1KRRoad, Basavanagudi,Bengaluru-560004.

36. **ಸುಭಾಷಿತಮಂಜರೀ**-ಸದ್ಗುಣ-ದುರ್ಗುಣ-ಶ್ಲೋ-173,ಪು-166, ಮಹಾಭಾರತ-ವನಪರ್ವ-213-29, ಕ.ಸಾ.ಪ. ಬೆಂಗಳೂರು-18(2001)

ಪ್ರಮುಖವಾಗಿರುತ್ತದೆ. ಸಮಾಜವು ಎಂದೂ ಸಮಜ(ಪಶು ಸಮೂಹ) ಆಗಬಾರದು. ಸುಶಿಕ್ಷಿತ ಜನರಿದ್ದಾಗ ಮಾತ್ರ ಇದು ಸಾಧ್ಯ. ವ್ಯಕ್ತಿಯು ಸ್ವತಃ ವಿಕಸಿತನಾಗಲಾರ. ಮೊದಲು ಮನೆಯಲ್ಲಿ ತಂದೆ ತಾಯಿಗಳ ಮೂಲಕ ನಂತರ ಸಾಮಾಜಿಕ ಪರಿವೇಶದ ಮೂಲಕ ಅಧಿಶೀಲ ಶಿಕ್ಷಣ ಪಡೆದನಂತರ ಅಧಿಚಿತ್ತ ಶಿಕ್ಷಣ ಪಡೆಯಲು ಬಾಲಕರನ್ನು ಹಿಂದೆ ಗುರುಕುಲಕ್ಕೆ ಕಳುಹಿಸಲಾಗುತ್ತಿತ್ತು. ಮುಂದೆ ಅಲ್ಲಿಯೇ ಅಧಿಪ್ರಜ್ಞೆ ಶಿಕ್ಷಣ ಪಡೆದು ಸ್ವಾವಲಂಬಿ ಜೀವನ ನಡೆಸಲು ಸಮರ್ಥರಾದ ಯುವಕರು ಸಿದ್ಧರಾಗುತ್ತಿದ್ದರು. ಇಲ್ಲಿ ಗುರುಶಿಷ್ಯರ ಚಿತ್ತಾಪಹಾರಕರಾಗಿ ತಮ್ಮ ಆಚರಣೆಯ ಮೂಲಕ ವಿವೇಚನೆ, ಧಾರಣೆ, ಸ್ಮರಣೆ, ಕಲ್ಪನೆ ಮುಂತಾದ ಶಕ್ತಿಗಳನ್ನು ವಿಕಾಸಪಡಿಸುವುದರ ಮೂಲಕ ಸಂಸ್ಕಾರ ನೀಡುತ್ತಿದ್ದರು. ಇಲ್ಲಿ ಸಹಜವಾಗಿಯೇ ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ಕಾರ್ಯಕ್ರಮಗಳು ನಡೆಯುತ್ತಿದ್ದವು ಶಿಷ್ಯರು ಆಚಾರ್ಯರ ನಡತೆಯನ್ನು ಅನುಸರಿಸುತ್ತ ಜ್ಞಾನ ಪಡೆಯುತ್ತಿದ್ದರು. "ಜ್ಞಾನದ ಪರಕಾಷ್ಠೆಯೇ ವೈರಾಗ್ಯ ಎಂಬ ವಿಚಾರದಲ್ಲಿ ಶ್ರದ್ಧೆಯಿರುತ್ತಿತ್ತು. ದೈವೀಗುಣದ ವರ್ಧನೆ, ಅಸುರೀಗುಣದ ಮರ್ಧನ, ನಿರೋಗಿತೆ, ಶಾರೀರಿಕ ದೃಢತೆ, ವಿನಯಶೀಲತೆ, ಕರ್ತವ್ಯ ಪ್ರಜ್ಞೆ ಮುಂತಾದ ಗುಣಲಕ್ಷಣಗಳು ಈ ಶಿಕ್ಷಣದಲ್ಲಿ ಸಹಜವಾಗಿಯೇ ವಿಕಸಿತಗೊಳ್ಳುತ್ತಿದ್ದವು. ಗುರುಕುಲಗಳಲ್ಲಿ ವ್ಯವಹಾರ ಭಾಷೆ ಸಂಸ್ಕೃತವೇ ಆಗಿರುತ್ತಿತ್ತು. ಸದ್ವ್ಯಕ್ತಿ ನಿರ್ಮಾಣದ ಮೂಲಕ ಸ್ವಸ್ಥ ಸಮಾಜವನ್ನು ನಿರ್ಮಿಸುವುದು ಗುರುಕುಲದ ಅಂತಿಮ ಗುರಿಯಾಗಿತ್ತು. ಇಲ್ಲಿ ಕಲಿತ ವ್ಯಕ್ತಿಗಳು ಮುಂದೆ ಸದ್ಗೃಹಸ್ಥರಾಗಿ ಯಥಾರ್ಥ ಜೀವನವನ್ನು ನಡೆಸಬಹುದು ಅಥವಾ ನೈಷ್ಠಿಕ ಬ್ರಹ್ಮಚಾರಿಗಳಾಗಿ ವಿದ್ಯಾಪ್ರಸಾರ, ಸ್ವಾಧ್ಯಾಯ, ಪ್ರವಚನದಲ್ಲಿ ತೊಡಗಬಹುದು. ಸಮಾಜದ ಏಳಿಗೆಗೆ ಸಾಧಕರಾಗಬಹುದು. ಸಮಾಜ ಸೇವೆಯ ಮೂಲಕ ಸಮಾಜದಲ್ಲಿ ದೈವದೃಷ್ಟಿ, ಧರ್ಮನಿಷ್ಠೆ, ರಾಜಪ್ರಜ್ಞೆ, ರಾಜನೀತಿ, ಸಮರ್ಥನಾಯಕತ್ವ ಹಾಗೂ ರಾಷ್ಟ್ರಭಕ್ತಿಯನ್ನು ಉದ್ದೀಪನಗೊಳಿಸುವವರೂ ಆಗಬಹುದು.[37]

ಈ ಒಂದು ಕ್ರಮದಲ್ಲೇ ವಿಷ್ಣುಶರ್ಮರು ಸೂಕ್ತ ಶೈಕ್ಷಣಿಕ ಸನ್ನಿವೇಶಗಳನ್ನೊದಗಿಸಿ, ಪುರಾತನ ಮೌಖಿಕ ಪರಂಪರೆಗಳ ಮೇಲೆ ಆಧರಿಸಿ ಪ್ರಾಣಿಗಳ ಸಣ್ಣನೀತಿಕಥೆಗಳನ್ನು ಒಳಗೊಂಡ ಮೂಲ ಸಂಸ್ಕೃತ ಕಾವ್ಯವನ್ನು ಕವಿತೆ ಹಾಗೂ ಗದ್ಯದಲ್ಲಿ, ಮೂಲತಃ ಭಾರತೀಯ ಪ್ರಾಣಿಗಳ ಕಥೆಗಳ ಮೇಲೆ ಆಧಾರಿತವಾಗಿ ಪಂಚತಂತ್ರ ಪಠ್ಯಕ್ರಮವನ್ನು ರಚಿಸಿದ್ದಾರೆ. ಹೀಗೆ ಇಲ್ಲಿ ಶೈಕ್ಷಣಿಕ ಮನೋವಿಜ್ಞಾನವು ಪರೋಕ್ಷವಾಗಿ ಪ್ರಾರಂಭದಿಂದಲೂ ಅಂದರೆ ಪ್ರಾಚೀನ ಗುರುಕುಲಶಿಕ್ಷಣ ಕಾಲದಿಂದಲೂ ತನ್ನಪಾತ್ರವನ್ನು ನೆರಳನಂತೆ ಹಿಂಬಾಲಿಸಿದೆ. ಇದರಲ್ಲಿ ಅಡಕವಾಗಿರುವ ಶೈಕ್ಷಣಿಕಮನೋವಿಜ್ಞಾನವೆಂದರೆ ಬೆಳೆಯುವ ಎಳಸಾದ ಬುದ್ಧಿಕೇಂದ್ರಕ್ಕೆ ಧರ್ಮ – ನೀತಿ ವ್ಯವಹಾರಗಳನ್ನು ಪರಸ್ಪರ ಬಾಧಕವಿಲ್ಲದಂತೆ ಕಥಾರೂಪವಾಗಿ ಬೋಧಿಸುವ

37. https://kn.m.wikipedia.org ಗುರುಕುಲ–ವಿಕಿಪೀಡಿಯ.

ಪ್ರಪ್ರಥಮ ಗ್ರಂಥ ಪಂಚತಂತ್ರವಾಗಿದೆ. ಇಲ್ಲಿನ ಕಥಾಸಂಕಲನದಲ್ಲಿ, ಪ್ರತಿಯೊಂದು ಕಥೆಯಲ್ಲೂ ಧರ್ಮವು ಆತ್ಮ ಸ್ಥಾನದಲ್ಲೂ, ನೀತಿಯು ಇಂದ್ರಿಯ ಸ್ಥಾನಗಳಲ್ಲೂ, ವ್ಯವಹಾರವು ಒಡಲಿನ ಸ್ಥಾನದಲ್ಲಿಯೂ ಇರುತ್ತದೆ. ನೀತಿಕಥೆಗಳಲ್ಲಿ ಕಂಡುಬರುವ ಕಥೆಗಳಲ್ಲಿ ಮೃಗಪಕ್ಷಿಗಳು, ಕೆಲವೆಡೆ ಗಿಡಮರಗಳನ್ನು ನೀತಿವಿಜ್ಞಾನ ಬೋಧಿಸಲು ಆಯ್ಕೆ ಮಾಡಿಕೊಂಡಿರುವ ವಿಶೇಷತೆ ಏನೆಂದರೆ ಕೇಳುಗರಿಗೆ ಒಂದು ನಾವೀನ್ಯತೆ, ಆಕರ್ಷಣೆ ಮತ್ತು ಪ್ರಾಣಿಪಶುಪಕ್ಷಿಗಳೇ ಅಂಥಹ ನೀತಿ ಮಾರ್ಗದಲ್ಲಿ ಮಾನವನಿಗೂ ಮಿಗಿಲಾಗಿ ನಡೆಯುತ್ತಿರುವುದನ್ನು ನೋಡಿದಾಗ, ಇನ್ನು ಮನುಷ್ಯರಾದವರು ಹೇಗಿರಬೇಕು? ಎಂಬ ಭಾವನೆಯನ್ನು ಬಡಿದೆಬ್ಬಿಸುವುದಾಗಿದೆ. ಕಲಿಸುವಿಕೆಯಲ್ಲಿ ಇದೊಂದು ಆದರ್ಶ ವಿಧಾನವಾಗಿದೆ. ಇಲ್ಲಿ ಶೈಕ್ಷಣಿಕ ಮನೋವಿಜ್ಞಾನ ಹಾಗೂ ವ್ಯಕ್ತಿತ್ವ ನಿರ್ಮಾಣ ಕಲೆಯ ಲಕ್ಷಣಗಳು ಎಷ್ಟರಮಟ್ಟಿಗೆ ಪಂಚತಂತ್ರದಲ್ಲಿ ಪ್ರಜ್ವಲಿತಗೊಂಡಿದೆ ಎಂಬುದನ್ನು ಕಾಣಬಹುದು. ಇದು ಮಕ್ಕಳ ಬುದ್ಧಿಕೇಂದ್ರಕ್ಕೂ, ಹೃದಯಕ್ಕೂ, ಕೆಲವೆಡೆ ವಯಸ್ಕರಮನಸ್ಸಿಗೂ ಅತ್ಯಂತ ಪ್ರಿಯವೂ, ಪರಿಣಾಮಕಾರಿಯೂ ಆಗಿರುವುದು.[38] ಭಗವದ್ಗೀತೆಯಲ್ಲಿ ಒಂದು ಬೋಧನೆ ಹೀಗಿರುತ್ತದೆ:–

यः शास्त्रविधिमुत्सृज्य वर्तते कामकारतः ।

न स सिद्धिमवाप्नोति न सुखं न परां गतिम् ॥[39]

ಅಂದರೆ ಯಾವನು ಶಾಸ್ತ್ರವಿಧಾನವನ್ನು(ಕ್ರಮಬದ್ಧವಾದ ಶಿಕ್ಷಣವನ್ನು) ಬದಿಗೊತ್ತಿ ಮನಸ್ಸಿಗೆ ಬಂದಂತೆ ಸ್ವೇಚ್ಛೆಯಾಗಿ ಕಾಲಕಳೆಯುವನೋ ಅವನು ಎಂದೂ ಸಿದ್ಧಿಯನ್ನು ಪಡೆಯುವುದಿಲ್ಲ. ಅವನಿಗೆ ಸುಖವೂ ಇಲ್ಲ. ಉತ್ತಮ ಗತಿಯೂ ಇಲ್ಲ. ಇದು ಅಮರಶಕ್ತಿ ರಾಜನ ತಿಳಿಗೇಡಿ ಮೂವರು ಪುತ್ರರಿಗೇ ಹೇಳಿದಂತಿದೆ. ಇದಕ್ಕೆ ಸೂಕ್ತವಾಗಿ ವಿಷ್ಣುಶರ್ಮರು ಪಂಚತಂತ್ರದಲ್ಲಿ ಹೀಗೆ ಎಚ್ಚರಿಸಿದ್ದಾರೆ:–

यस्य धर्मविहीनानि दिनान्यायान्ति यान्ति च ।

स लोहकारभस्त्रेव श्वसन्नपि न जीवति ॥[40]

ಧರ್ಮದ ಆಚರಣೆ ಇಲ್ಲದೆ ಯಾರ ದಿನಗಳು ವ್ಯರ್ಥವಾಗಿ ಕಳೆದುಹೋಗುತ್ತವೆಯೋ ಅಂಥವನು ಕಮ್ಮಾರನ ತಿದಿಯಂತೆ ಉಸಿರಾಡುತ್ತಿದ್ದರೂ ಬದುಕಿರುವವನಲ್ಲ. ಅರಸುವಂಶದಲ್ಲಿ ಜನಿಸಿದ ರಾಜಕುಮಾರರು ತಮ್ಮವಂಶದ ಧರ್ಮವನ್ನು ಅರಿಯದೆ ದುಃಸಹವಾಸದಲ್ಲಿ ಸ್ವೇಚ್ಛೆಯಿಂದ ಕಾಲಹರಣ ಮಾಡುತ್ತಿದ್ದರು.

---

**38. Chandra Rajan,** Translated from Sanskrit, VISNU SARMA, The Panchatantra, PP-27,28,35,38,39. PenguinRandom House India Pvt.Ltd, Gurgaon-122002, Haryana,

39. भगवद्गीता, 16–23.

40. **ಸುಧಾಕರ್ ಮಾಲವೀಯ,** ಅನುವಾದಕರು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಮ್, ಕಾಕೋಲೂಕೀಯ–ಶ್ಲೋ–97, ಪು–489, (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಪಂಚತಂತ್ರವನ್ನು ಸುಮಾರು ಎರಡು ಸಾವಿರ ವರ್ಷಗಳ ಪೂರ್ವದಲ್ಲೇ ರಚಿಸಲಾಗಿದೆ. ಆದರೆ ಅದರಲ್ಲಿರುವ ಮೌಲಿಕ ಜ್ಞಾನದಿಂದ ಅದು ಇಂದಿಗೂ ಲೋಕ ಪ್ರಿಯವಾಗಿದೆ. ಸಾಮಾನ್ಯ ಜನರೂ ಸಹ ಒಂದು ಉತ್ತಮವಾದ ಬದುಕಿನ ವ್ಯವಹಾರಗಳ ನೀತಿಶಿಕ್ಷಣವನ್ನು ಮನೋರಂಜಕವಾಗಿ, ಮನೋಜ್ಞವಾಗಿ ತಿಳಿದುಕೊಳ್ಳಲು ಅವಕಾಶವಿದೆ. ಅದೇರೀತಿಯಲ್ಲಿ ಪೋಷಕರೂ ಸಹ ತಮ್ಮ ತಮ್ಮ ಮಕ್ಕಳಿಗೆ ಸರಳವಾಗಿ, ಸನ್ನಿವೇಶಗಳನ್ನು ಆಕರ್ಷಕವಾಗಿ ಒದಗಿಸಿ ಪ್ರೀತಿಯಿಂದ ಉತ್ತಮ ವ್ಯಕ್ತಿತ್ವ ವಿಕಸನಕ್ಕೆಮಾರ್ಗದರ್ಶನ ಮಾಡಬಹುದು. ಪಂಚತಂತ್ರದಲ್ಲಿ ಮುಖ್ಯವಾಗಿ ಬೋಧನಾ ಮಾಧ್ಯಮ-ಕಥಾನಿರೂಪಣೆ, ಪಠ್ಯಕ್ರಮ-ನೀತಿಶಿಕ್ಷಣ ಹಾಗೂ ಬದುಕಿನ ವ್ಯವಹಾರಗಳ ಬಗ್ಗೆ ವಿಶೇಷ ಜಾಗೃತಿ ಸುಮಧುರವಾಗಿ ಅಡಕವಾಗಿದೆ. ಬೋಧನಾ ಸಲಕರಣೆಗಳು-ಕಥೆಗಳು-ಕಥೆಯೊಳಗೆ ಉಪಕಥೆಗಳು- ಪ್ರತಿ ಕಥೆಯಲ್ಲೂ ಒಂದು ಬಹುಮೂಲ್ಯ ವ್ಯಕ್ತಿತ್ವನಿರ್ಮಾಣ ನೀತಿಯನ್ನು ಅಳವಡಿಸಲಾಗಿದ್ದು, ಬೋಧಪ್ರದವಾದ ಹಾಗೂ ಉಪದೇಶಾತ್ಮಕ ಲಕ್ಷಣಗಳನ್ನು ಕಾಣಬಹುದು.

ಪಂಚತಂತ್ರ ಕಥಾ ಮಾಧ್ಯಮದಲ್ಲಿ ಕವಿಯು ಅನೇಕ ಸಿದ್ಧಾಂತ ವಚನಗಳನ್ನು ಪ್ರಸ್ತುತಪಡಿಸಿ ಅವುಗಳ ನೈತಿಕ ಧಾರ್ಮಿಕ, ರಾಜನೀತಿಕ ಜೀವನದ ಸಾಮಾನ್ಯ ನಿಯಮಗಳನ್ನು ಹಿಡಿದಿಟ್ಟಿದ್ದಾರೆ. ಸಣ್ಣ ಸಣ್ಣ ಹಾಗೂ ಪ್ರಚಲಿತ ವ್ಯಾವಹಾರಿಕ ಭಾಷೆಯನ್ನು ಪ್ರಯೋಗಿಸುತ್ತಾ ಕೇಳುಗರಿಗೆ ತುಂಬಾ ನಿಕಟವಾಗುತ್ತಾರೆ. ಇದನ್ನೇ ಮನೋವಿಜ್ಞಾನದಲ್ಲಿ "ಪರಾನುಭೂತಿ" ಅಥವಾ ಆಂಗ್ಲ ಭಾಷೆಯಲ್ಲಿ "ಎಂಪಥಿ"**(Empathy)** ಎನ್ನುತ್ತಾರೆ. ಇದು ಯಾವುದೇ ವೃತ್ತಿ, ನಾಯಕತ್ವ, ಮುಖಂಡತ್ವ ವಹಿಸಿಕೊಂಡ ವ್ಯಕ್ತಿಯಲ್ಲಿರಬೇಕಾದ ಗುಣವಿದು. ಬೋಧಕ ಅಥವಾ ಶಿಕ್ಷಕರಲ್ಲಂತೂ ಈ ಗುಣ ಬಹಳ ಮುಖ್ಯ. ಆಗ ಮಾತ್ರ ಕಲಿಯುವವರ ಮಟ್ಟಕ್ಕಿಳಿದು, ಸಕಾರಾತ್ಮಕ ಮನೋಭಾವನೆಯಿಂದ, ಅತ್ಯಂತ ಸಂಯಮದಿಂದ ಕಲಿಕೆಯಲ್ಲಿ ಪ್ರೀತಿಯನ್ನುಂಟು ಮಾಡಬಹುದು.

ಶೈಕ್ಷಣಿಕ ಹಾಗೂ. ಮನೋವೈಜ್ಞಾನಿಕವಾಗಿ, ಪಂಚತಂತ್ರ ನೀತಿಕಥೆಗಳನ್ನು ವಿಶ್ಲೇಷಿಸಿದರೆ, ಇಲ್ಲಿ ಬಹಳ ಮುಖ್ಯವಾದ ಒಂದು ಅಂಶವನ್ನು ಗಮನಿಸಬಹುದು. ಅದೇನೆಂದರೆ, ಬೋಧನಾ ಕ್ರಮದಲ್ಲಿ ಕೆಲವು ಸೂತ್ರಗಳು ಕಂಡು ಬರುತ್ತವೆ. ಉದಾಹರಣೆಗೆ **ಸರಳದಿಂದ-ಸಂಕೀರ್ಣದೆಡೆಗೆ, ಸುಲಭ ವಿಚಾರಗಳಿಂದ-ಕಠಿಣ ವಿಚಾರಗಳೆಡೆಗೆ,ತಿಳಿದುದರಿಂದ-ತಿಳಿಯದಿದ್ದುದರಕಡೆಗೆ, ದಿನನಿತ್ಯದ ವಿಚಾರಗಳಿಂದ- ವಿಶೇಷ ವಿಚಾರಗಳೆಡೆಗೆ ಇತ್ಯಾದಿ**. ಈ ಒಂದು ಕ್ರಮದ ಬೋಧನೆಯನ್ನನುಸರಿಸಿದಾಗ, ವಿದ್ಯಾರ್ಥಿಗಳು ಸುಲಭವಾಗಿ ವಿಚಾರಗಳನ್ನು ಗ್ರಹಿಸುವರು, ಆಸಕ್ತಿಯನ್ನು ಹೆಚ್ಚಿಸಿಕೊಳ್ಳುವರು, ಸದಾ ಕ್ರಿಯಾತ್ಮಕ ಹಾಗೂ ಸೃಜನಶೀಲರಾಗುವರು. ಪಂಚತಂತ್ರದ ಐದೂ ತಂತ್ರಗಳ ಮೂಲಕ ಅನೇಕತೆಗಳಲ್ಲಿ ಏಕತೆಯಿಂದ ಕೂಡಿರುವ ಕಥಾಗುಚ್ಛಗಳಲ್ಲಿ ಇದೇ

ಸೂತ್ರವನ್ನು ಕಾಣಬಹುದು. ಇದಕ್ಕೆ ನಿದರ್ಶನವೆಂದರೆ ರಾಜಕುಮಾರರು ನಿತ್ಯವೂ ಕಥೆಗಳನ್ನು ಆಸಕ್ತಿಯಿಂದ ಕೇಳಿ ವಿಚಾರಗಳನ್ನು ಗ್ರಹಿಸಿಕೊಳ್ಳುತ್ತಿದ್ದರು. ಪಂಚತಂತ್ರದ ಐದನೆಯ ತಂತ್ರ ಅಪರೀಕ್ಷಿತಕಾರಕದಲ್ಲಿ ಬರುವ ಕೊನೆಯ ಕಥೆ ಹೇಳುತ್ತಿದ್ದ ಸಂದರ್ಭದಲ್ಲಿ, ವಿಷ್ಣುಶರ್ಮರು ಹೀಗೆ ಹೇಳುತ್ತಾರೆ." ಮಣಿಭದ್ರನು ಧರ್ಮಾಧಿಕಾರಿಗಳ  ಉಪದೇಶವನ್ನು ಕೇಳಿ ಅವರ ಅನುಮತಿಯನ್ನು ಪಡೆದು ಒಬ್ಬ ಸಹಾಯಕನೊಡನೆ ತನ್ನ ಮನೆಗೆ ಹೋಗಿ ಬಹಳಕಾಲ ಭೋಗಗಳನ್ನು ಅನುಭವಿಸುತ್ತಾ ಸುಖವಾಗಿ ಕಾಲ ಕಳೆದನು ಎಂಬಲ್ಲಿಗೆ ವಿಷ್ಣುಶರ್ಮವಿರಚಿತ ಪಂಚತಂತ್ರದ ಐದನೆಯ ತಂತ್ರವಾದ ಅಪರೀಕ್ಷಿತಕಾರಕವು ಸಂಪೂರ್ಣವಾದುದು." ಎಂದು ಹೇಳುತ್ತಾ, ವಿಷ್ಣುಶರ್ಮರು ರಾಜಕುಮಾರರನ್ನು ಕುರಿತು "ಕೇಳಿದಿರಾ ರಾಜನಾದವನು ಬಹಳ ಎಚ್ಚರಿಕೆಯಿಂದ ಇರಬೇಕು. ಹಾಗೆಯೇ ಬುದ್ಧಿವಂತಿಕೆಯೂ ಮುಖ್ಯ. ವಿವೇಚನೆಯಿಂದ ಮಂತ್ರಿಗಳ ಮಾತನ್ನು ಕೇಳಬೇಕು. ಕೊನೆಗೆ ತನ್ನ ವಿವೇಕದಂತೆ ವರ್ತಿಸಬೇಕು. ರಾಜಪದವಿಯೆಂದರೆ ಆಟದ ಸಿಂಹಾಸನವಲ್ಲ. ಪುರಾಣ, ವ್ಯಾಕರಣ ಶಾಸ್ತ್ರ, ಇತಿಹಾಸ ಇತ್ಯಾದಿಗಳನ್ನು ಕಲಿತರೆ ಮಾತ್ರ ಆಪತ್ತಿನಿಂದ ಪಾರಾಗಲು ಸಾಧ್ಯ. ರಾಜ್ಯವನ್ನು ಉಳಿಸಿಕೊಳ್ಳಬಹುದು. ಇರಲಿ ಇದನ್ನೆಲ್ಲಾ ಚೆನ್ನಾಗಿ ಆಲೋಚಿಸಿ ನಿಮ್ಮ ಅಭಿಪ್ರಾಯಗಳನ್ನು ನಾಳೆ ತಿಳಿಸುವಿರಂತೆ."[41] ಹೀಗೆ ಹೇಳಿ ರಾಜಪದವಿಯ ಮಹತ್ವ ಕುರಿತು ಚಿಂತನೆ ಮಾಡಲು ಪ್ರೇರೇಪಿಸಿದರು. ಇದನ್ನೇ ಪ್ರೇರಣೆ ಅಥವಾ ಉತ್ತೇಜನ**(Motivation)** ಎಂದು ಶೈಕ್ಷಣಿಕ ಮನೋವಿಜ್ಞಾನವು ತಿಳಿಸುತ್ತದೆ. ಈ ರೀತಿಯಾಗಿ ಶಿಕ್ಷಕನಾದವನು ಸಂಪೂರ್ಣ ವಿಷಯಜ್ಞಾನ, ಮನೋವಿಜ್ಞಾನ  ಹಾಗೂ ಬೋಧನಾ ಕೌಶಲ್ಯಗಳ ಪರಿಜ್ಞಾನ ಹೊಂದಿರಬೇಕು.

अन्तःसारैरकुटिलैरच्छिद्रैः सुपरीक्षितैः ।

मन्त्रिभिर्धार्यते राज्यं सुस्तम्भैरिव मन्दिरम् ॥[42]

ಒಳಗೆ ಗಟ್ಟಿಯಾಗಿ, ನೇರವಾಗಿದ್ದು, ಒಡಕುಗಳಿಲ್ಲದೆ, ಚೆನ್ನಾಗಿ ಪರೀಕ್ಷಿಸಲ್ಪಟ್ಟಿರುವ ಒಳ್ಳೆಯ ಕಂಬಗಳು ಕಟ್ಟಡದ ಭಾರವನ್ನು ಹೊರುವಂತೆ, ಒಳಗೆ ಸತ್ವವನ್ನುಳ್ಳವರೂ, ಮೋಸವಿಲ್ಲದವರೂ, ಚೆನ್ನಾಗಿ ಪರೀಕ್ಷಿಸಲ್ಪಟ್ಟವರೂ ಆದ ಮಂತ್ರಿಗಳೇ ರಾಜ್ಯದ ಭಾರವನ್ನು ನಿರ್ವಹಿಸುತ್ತಾರೆ. ಮಂತ್ರಿಗಳೂ ರಾಜನಿಗೆ ಉತ್ತಮ ಸಲಹೆಗಳನ್ನು ಕೊಡುವ ವಿದ್ಯಾವಂತ ಗುರುಗಳೇ ಇದ್ದಂತೆ.

---

41. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ-5, ಪು.235.(2015) ವರ್ಣಿಲ, 39/2-11,ಕಲ್ಯಾಣಿ ಗಾರ್ಡನ್, ಬನಶಂಕರಿ, 1ನೇ ಹಂತ, ಬೆಂಗಳೂರು-560050.
42. **ಸುಧಾಕರ್ ಮಾಲವೀಯ,** ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂಪಂಚತಂತ್ರಮ್, ಮಿತ್ರಭೇದಃ- ಶ್ಲೋ-137, ಪು-74, (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಈ ಸಂದರ್ಭದಲ್ಲಿ ಶಿಕ್ಷಣ ತಜ್ಞರಾದ ರವೀಂದ್ರನಾಥ ಟ್ಯಾಗೋರ್‌ರವರು ಆದರ್ಶ ಶಿಕ್ಷಕರ ಲಕ್ಷಣವನ್ನು ಎಷ್ಟು ಸೊಗಸಾಗಿ ತಿಳಸಿರುವುದನ್ನು ಸ್ಮರಿಸಿಕೊಳ್ಳಬಹುದು. **" A teacher can never truly teach unless he is still learning himself.A lamp cannot light another lamp unless it continues to burn it's own flame."** "ಅಂದರೆ ಒಬ್ಬ ಶಿಕ್ಷಕನು ತಾನೇ ಸರಿಯಾದ ತಿಳುವಳಿಕೆ ಬೆಳೆಸಿಕೊಳ್ಳುತ್ತಿರುವುದಿಲ್ಲವಾದರೆ, ನಿಜವಾಗಿಯೂ ಮತ್ತೊಬ್ಬರಿಗೆ ಬೋಧಿಸಲು ಸಮರ್ಥನಾಗಲಾರನು. ತಾನೇ ಉರಿಯದಿರುವ ದೀಪವು ಮತ್ತೊಂದು ದೀಪವನ್ನು ಹಚ್ಚಿ ಉರಿಸಲು ಸಾಧ್ಯವಾಗುವುದಿಲ್ಲ." ಒಬ್ಬ ಉತ್ತಮ ಶಿಕ್ಷಕನು ಸದಾ ಒಬ್ಬ ಉತ್ತಮ ವಿದ್ಯಾರ್ಥಿಯಾಗಿರಬೇಕು. ಸರಿಯಾದ ಶಿಕ್ಷಣವನ್ನು ಸರಿಯಾದ ಶಿಕ್ಷಕರಿಂದ ಮಾತ್ರ ಪಡೆಯಲು ಸಾಧ್ಯ.

**"As is the teacher so is the student." "As you sow,so you reap"**[43]

"ವರ್ತನೆಯ ನರ್ತನಕೆ ಪರಿವರ್ತನೆಯ ಶೃಂಗಾರ" ಎಂಬ ಕವಿವಾಣಿಯಂತೆ ಮಗುವಿನ ಅನಾರೋಗ್ಯಕರ ವರ್ತನೆಯನ್ನು ತಿದ್ದಿತೀಡಿ ಆರೋಗ್ಯಕರ ವರ್ತನೆಯೆಡೆಗೆ ಪರಿವರ್ತಿಸಿ ಬದಲಾವಣೆಯ ಶೃಂಗಾರ ಮಾಡುವ ಶಿಕ್ಷಣ ಸಂಸ್ಥೆಗಳಿಗೆ ಸ್ವಾಗತ. ಸ್ವಾಮಿವಿವೇಕಾನಂದರು "ಈಗಾಗಲೇ ಮಗುವಿನ ಅಂತರಂಗದಲ್ಲಿ ಹುದುಗಿರುವ ಪರಿಪೂರ್ಣತೆ ಮತ್ತು ದೈವತ್ವವನ್ನು ಹೊರತರುವುದೇ ಶಿಕ್ಷಣ ಎಂದು ಶಿಕ್ಷಣದ ಮಹತ್ವವನ್ನು ಕುರಿತು ವರ್ಣಿಸಿದ್ದಾರೆ. ಈ ಹಾದಿಯಲ್ಲಿ ಶಿಕ್ಷಣ ಸಂಸ್ಥೆಗಳು ಸಾಗಿದರೆ, ಇಲ್ಲಿ ಸೇವೆ ಸಲ್ಲಿಸುವ ಗುರುಗಳಲ್ಲಿ ಗುರುತ್ವಾಕರ್ಷಣ ಶಕ್ತಿ ಸಮೃದ್ಧಿಯಾದರೆ ಸಾಮಾಜಿಕರಲ್ಲಿ ಮೌಲ್ಯ ವರ್ಧನೆ ಖಚಿತ.[44] ಸುಂದರ ಸಮಾಜವೆಂಬ ತೋಟದ ಮಾಲೀಕರೆ ಶಿಕ್ಷಕರು. ಸಮಾಜದ ಪ್ರತಿಯೊಬ್ಬ ಸಾಧಕನ ಹಿಂದೆಯೂ ಶಿಕ್ಷಕನ ಶ್ರಮ ಇದ್ದೇ ಇರುತ್ತದೆ. ಮಕ್ಕಳ ಲಾಲನೆಪಾಲನೆಯಲ್ಲಿ ತಾಯಿಯ ಪಾತ್ರ ಎಷ್ಟುಮುಖ್ಯವೋ, ಹಾಗೆಯೇ ಮಕ್ಕಳ ಬೌದ್ಧಿಕ ಪ್ರಗತಿ ಸಾಧಿಸುವಲ್ಲಿ ಶಿಕ್ಷಕನ ಪಾತ್ರವೂ ಅಷ್ಟೇ ಮುಖ್ಯವಾಗಿದೆ. ಊರಿಗೆ ದಾರಿಯನ್ನು ಆರು ತೋರಿದರೇನು? ಎಂಬ ವಿಶಾಲ ಮನೋಭಾವ ನಮಗೆ ದಾರಿ ದೀಪವಾಗಬೇಕು. ನಮ್ಮ ಸುತ್ತಮುತ್ತಲಿನ ಪ್ರಾಣಿಪಶುಪಕ್ಷಿಗಳ ಸಾಂಘಿಕ ಬದುಕು ಎಷ್ಟು ಅದ್ಭುತ ಮತ್ತು ಅನುಕರಣೀಯ. ಪೂರ್ವಾಧ್ಯಯನವಿಲ್ಲದ ಅಧ್ಯಾಪಕ, ಉತ್ತರಾಧ್ಯಯನವಿಲ್ಲದ ವಿದ್ಯಾರ್ಥಿ, ಶಿಕ್ಷಣಕ್ಕೆ ಶೋಭೆ ತರಲಾರರು. ಸುಭಾಷಿತವೊಂದರಲ್ಲಿ ಅಧ್ಯಾಪಕರ ಬಗ್ಗೆ ಎಷ್ಟು ಚೆನ್ನಾಗಿ ಹೇಳಲಾಗಿದೆ.

---

43. **ಚಿತ್ತಿದಂತೆ ಬೆಳೆ.**
44. **ಮೌಲ್ಯವರ್ಧಿತ ಶಿಕ್ಷಣ** –ವಿಕಾಸ್ ಪೀಡಿಯಾ, https://in.vikaspedia.in

ಅಧ್ಯಾಪಕನು ಸುಮ್ಮನೆ

वाच्यतां समयो अतीतः स्पष्टमग्रे भविष्यति ।

इति पाठयतां ग्रंथे काठिण्यं कुत्र विद्यते ॥

ಅಂದರೆ "ಓದಿಕೊಂಡು ಹೋಗು, ವೇಳೆಯಾಯಿತು, ಮುಂದೆ ಎಲ್ಲವೂ ನಿನಗೇ ತಿಳಿಯುತ್ತದೆ" ಎಂದುಕೊಂಡು ಹೋದರೆ ಪಾಠದ ಮಧ್ಯದಲ್ಲಿ ಅಂಥವರಿಗೆ ಏನೂ ಕಷ್ಟ ಬರಲಾರದು ಆದರೆ ಇದು "ಜ್ಞಾನಾಭ್ಯಾಸ" ಅಥವಾ "ವಿದ್ಯಾಭ್ಯಾಸ" ವಾದೀತೆ ಹೊರತು "ವಿದ್ಯೆ" ಎನಿಸಲಾರದು." ಅದಕ್ಕಾಗಿ ವಿದ್ಯೆ ಜ್ಞಾನದಾಯಿನಿಯಾಗಬೇಕಾದರೆ ಸಾಕಷ್ಟು ಪೂರ್ವಾಧ್ಯಯನ, ಹಿತ-ಮಿತ ಶ್ರದ್ಧೆ, ಸರಿಯಾಗಿ ಅರ್ಥವಾದ ಮೇಲೇ ತೃಪ್ತಿ ಪಟ್ಟುಕೊಳ್ಳುವ ಸ್ವಭಾವ ಇವು ವಿದ್ಯಾರ್ಥಿಯಲ್ಲಿ ಮೂಡಿದಾಗ ಮಾತ್ರ ದೇಶವು ಒಳ್ಳೆಯ ವಿದ್ಯಾವಂತರನ್ನು ಪಡೆಯಲು ಸಾಧ್ಯ.[45] ಉಪಾಧ್ಯಾಯರೂ ಸಹ ಮಕ್ಕಳಿಗೆ ಅರ್ಥಪೂರ್ಣ ಬೋಧನೆ ಮಾಡಿದ ನಂತರದಲ್ಲಿ ಅವರ ಪ್ರತಿಕ್ರಿಯೆಗಳನ್ನು ನೋಡಿದನಂತರವೇ ತೃಪ್ತಿಪಟ್ಟುಕೊಳ್ಳುವ ಸ್ವಭಾವದವರಾಗಿರಬೇಕು.

ಪಂಚತಂತ್ರದಲ್ಲಿ ವಿಷ್ಣುಶರ್ಮರು ಒಳ್ಳೆಯ ಪ್ರತಿಭಾನ್ವಿತ ಗುರುಗಳಾಗಿ, ರಾಜಕುಮಾರರಿಗೆ ಅರ್ಥಪೂರ್ಣ ವಿದ್ಯೆ, ರಾಜನೀತಿ ಶಿಕ್ಷಣ, ಬದುಕಿನ ನೀತಿ, ಸಾಮಾನ್ಯಜ್ಞಾನ ಇತ್ಯಾದಿಗಳನ್ನು ಅತ್ಯಂತ ಸಮಯೋಚಿತವಾಗಿ ಸೂಕ್ತ ಪಂಚತಂತ್ರಗಳನ್ನು ರಚಿಸಿ, ಉತ್ತಮ ಕಥಾ ಸನ್ನಿವೇಶದಲ್ಲಿ ವೈಯುಕ್ತಿಕ ಗಮನಹರಿಸಿ, ಬೋಧನೆ ಮಾಡಿದ್ದಾರೆ. ಇದು ನಿಜಕ್ಕೂ ಶೈಕ್ಷಣಿಕ ಮನೋವಿಜ್ಞಾನದ ಅನುಕ್ರಮವಾಗಿದೆ. ಇದೇ ಪಂಚತಂತ್ರದ ಒಂದು ವಿಶಿಷ್ಟ ಹಾಗೂ ಆದರ್ಶ ಗುಣವಾಗಿರುತ್ತದೆ. ವಿಷ್ಣುಶರ್ಮರು ಒಂದು ಒಳ್ಳೆಯ ತಂತ್ರವನ್ನು ಬಳಸಿ  ಪಂಚತಂತ್ರ ಕಥೆಗಳು ಆಕರ್ಷಕ ಹಾಗೂ ಮನೋಜ್ಞವಾಗಿರುವಂತೆ ಸಂಯೋಜನೆ ಮಾಡಿದ್ದಾರೆ. ಮಾತನಾಡುವ ಪ್ರಾಣಿಗಳು ಮತ್ತು ಪಕ್ಷಿಗಳು ಭಾರತೀಯ ಸಾಹಿತ್ಯದಲ್ಲಿ ಬಹಳ ಹಿಂದಿನಿಂದಲೂ ಕಂಡುಬಂದಿರುತ್ತದೆ. ಋಗ್ವೇದದಲ್ಲಿ ಸರಮ ದೇವಶುನೀ ಋಷಿಗೆ ಹಸುಗಳನ್ನು ಹುಡುಕಿಕೊಟ್ಟ ಹೆಣ್ಣು ನಾಯಿ, ಮನುಷ್ಯರಿಗೆ ಹಸುಗಳ ಹಾಲನ್ನು ದೊರಕಿಸಿಕೊಟ್ಟ ಕೀರ್ತಿ ಇದರದ್ದೇ. ಅಸುರರು ಕದ್ದೊಯ್ದ ಹಸುಗಳನ್ನು ಇಂದ್ರನಿಗೆ ಪತ್ತೆ ಮಾಡಿ ಕೊಟ್ಟದ್ದೂ ಇದೇ. ಸರಮೆಗೆ ಮೊದಲು ಇಂದ್ರದೇವಪಕ್ಷಿ ಸುಪರ್ಣನನ್ನು ಹಸುಗಳ ಪತ್ತೆಗಾಗಿ ಕಳುಹಿಸಿರುತ್ತಾನೆ. ಆದರೆ ಸುಪರ್ಣ ಫಣಿಗಳ ಆಮಿಷಕ್ಕೆ ಮಣಿದು ಇಂದ್ರನನ್ನು ವಂಚಿಸುತ್ತಾನೆ.

---

45. **ವಿ.ಎನ್.ಭಟ್**. ಜ್ಞಾನದೀಪ, ಅ.ನಂ-8, ಪು-19.(1993) ವಿಶ್ವನಾಥ ಪ್ರಕಾಶನ ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ-577201

ಆದರೆ ಸರಮ ಯಾವ ಲೋಭಕ್ಕೂ ಒಳಗಾಗದೆ ಇಂದ್ರನಿಗೆ ನಿಷ್ಠೆಯಾಗಿ ಉಳಿಯುತ್ತಾಳೆ. ಈ ಕಾರಣಕ್ಕೆ ನಾಯಿಯನಿಷ್ಠೆ ವಿಶೇಷವಾಗಿ ಗುರುತಿಸಲ್ಪಡುತ್ತದೆ ಅನ್ನುವುದೊಂದು ಕಥೆ. ವೇದ ಕಥನಗಳನ್ನು ಸರಿಯಾಗಿ ಅರ್ಥಮಾಡಿಕೊಂಡರೆ ಯಾವ ಪ್ರಾಣಿಯೂ ಹೆಚ್ಚಲ್ಲ, ಯಾವುದೂ ಕಡಿಮೆಯಿಲ್ಲ. ಯಾವುದೂ ದೈವಿಕವಲ್ಲ, ಯಾವುದೂ ದೈವಿಕ ಅಲ್ಲದೆಯೂ ಇಲ್ಲ. ಎಲ್ಲ ಪ್ರಾಣಿಗಳೂ ಪರಸ್ಪರ ಪೂರಕ ಅನ್ನುವುದು ತಿಳಿಯುತ್ತದೆ. ಅಂದಿನಿಂದ ಸರಮಾ, ಸಾರಮೇಯಗಳು ಮನುಷ್ಯರ ಗೆಳೆಯರಾದರು ಎನ್ನುವುದೊಂದು ಕಥೆ.

ಮಹಾಭಾರತದಲ್ಲಿ ದಮಯಂತಿಯು ನಳಮಹಾರಾಜನನ್ನು ಕೇವಲ ಒಂದು ಸುವರ್ಣ ಹಂಸದಿಂದ ಅವನ ಸದ್ಗುಣಗಳು ಹಾಗೂ ಸಾಧನೆಗಳನ್ನು ಕೇಳಿ ಪ್ರೀತಿಸಿದಳು ಹಾಗೂ ವಿವಾಹವಾದಳು.[46]

ಛಾಂದೋಗ್ಯೋಪನಿಷತ್ ಕಥೆಯಲ್ಲಿ ಹಂಸಪಕ್ಷಿಯು ರೂಪ, ಹೋರಿಯರೂಪ, ಜಲಚರ ಪಕ್ಷಿಯ ರೂಪದಲ್ಲಿ ಬಂದು ಬ್ರಾಹ್ಮಣ ವಿದ್ಯಾರ್ಥಿ ಸತ್ಯಕಾಮನಿಗೆ ವಾಸ್ತವದ ಸ್ವರೂಪಕ್ಕೆ ಸಂಬಂಧಿಸಿದ ವಿಷಯಗಳನ್ನು ತಿಳಿಸುತ್ತಾ ಶಿಕ್ಷಣ ಕೊಡುವುದು.

ಬಹಳಷ್ಟು ಪ್ರಾಚೀನ ಸಂಸ್ಕೃತಿಗಳಲ್ಲಿ ಮಾನವನಲ್ಲದ ಸ್ವರೂಪದಲ್ಲಿನ ಜೀವನ ಪಕ್ಷಿಗಳು, ಪ್ರಾಣಿಗಳು ಮತ್ತು ಮರಗಳೂ ಸಹ ಅತಿಮಾನುಷ ಸಾಮರ್ಥ್ಯ ಮತ್ತು ಶಕ್ತಿಗಳನ್ನು ಪಡೆದಿವೆಯೆಂದೂ, ವಿಶೇಷ ರೀತಿಯ ಬುದ್ಧಿವಂತಿಕೆ ಮತ್ತು ಪವಿತ್ರತೆಯ ವಿಶೇಷ ಬಾಂಧವ್ಯ ಹೊಂದಿರುವುದಾಗಿಯೂ ನಂಬಲಾಗಿತ್ತು. ಹಾಗೂ ಭಾರತೀಯ ಚಿಂತನೆ ಮತ್ತು ನಂಬಿಕೆಯು ಮಾನವ ಮತ್ತು ಅಮಾನವೀಯ ಜೀವಿಗಳ ಶ್ರೇಣಿಯಲ್ಲಿ ಪೂರ್ತಿಯಾಗಿ ವ್ಯತ್ಯಾಸಗಳನ್ನು ಮಾಡಿರಲಿಲ್ಲ. ಎಲ್ಲವೂ ಒಂದು ರೀತಿಯಲ್ಲಿ ಇಡಿಯೇ. ಎಲ್ಲವೂ ಮಾನವನಲ್ಲಿರುವ ದೈವತ್ವದ ಕಿಡಿಯನ್ನು ಪಡೆದಿರುವಂತಹವೇ ಎಂಬ ನಂಬಿಕೆಯಿತ್ತು. ವಿಶ್ವ ದೃಷ್ಟಿಕೋನದಿಂದ ಪುಟಿದ ಸಾಹಿತ್ಯ ಸಂಪ್ರದಾಯದಲ್ಲಿ ಮೇಲೆ ವಿವರಿಸಲಾಗಿರುವಂತೆ ಬುದ್ಧಿವಂತಿಕೆಯ ಮಾತುಗಳನ್ನು ಮಾನವನಲ್ಲದ ಪಾತ್ರಗಳಲ್ಲಿ ನುಡಿಸುವುದು ಸ್ವಾಭಾವಿಕವಾಗಿ ಬೆಳೆದುಬಂದಿತ್ತು. ಮಾನವ ಹಾಗೂ ನೈಸರ್ಗಿಕ ಪ್ರಪಂಚದಲ್ಲಿ ಸರಾಗವಾಗಿ ಸಂವಹನ ನಡೆಸಬಹುದು. ಮತ್ತು ಪರಸ್ಪರ ಅಭಿಪ್ರಾಯ ವ್ಯಕ್ತಪಡಿಸಬಹುದು.[47] ವಿಷ್ಣುಶರ್ಮರಿಗೆ ಈ ಒಂದು ಪೂರ್ವ ನಿದರ್ಶನದ ಅರಿವಿದ್ದು, ನೈಸರ್ಗಿಕ ಪ್ರಪಂಚದ ಪ್ರಾಣಿಗಳು, ಪಕ್ಷಿಗಳು ಮತ್ತು ಇತರ ಜೀವಿಗಳು ಬೋಧನೆಗೆ ಅಥವಾ ಶಿಕ್ಷಣಕ್ಕೆ ಅತ್ಯುತ್ತಮ ಸಾಧನಗಳು. ನೈಜ ರಾಜಕೀಯ ಸಂದರ್ಭ ಹಾಗೂ ನೀತಿಗೆ ಸಂಬಂಧಿಸಿದ ವಿಚಾರಗಳಿಗೆ ಅತ್ಯಂತ ಸಮಂಜಸವಾದುದು ಎಂಬ ಅಭಿಪ್ರಾಯ ಹೊಂದಿದ್ದರು. ಈ ತಂತ್ರವನ್ನು ಅತ್ಯಂತ ಸಮರ್ಪಕವಾಗಿ ಬಳಸಿ ಪಂಚತಂತ್ರ ಕಥೆಗಳನ್ನು ಸರಳವೂ,

---

**46. 1) Chandra Rajan,** Translated from Sanskrit,VISNU SARMA,The Panchatantra, PP-40, Penguin Random House India Pvt.Ltd, Gurgaon-122002, Haryana(1993)

**2).** ಸರಮಾ ದೇವಶುನೀ: ಋಷಿಗೆ ಹಸುಗಳನ್ನು ಹುಡುಕಿಕೊಟ್ಟ ಹೆಣ್ಣು ನಾಯಿ, HTTPS://aralimara.com Aug 27, 2018.

**47. Chandra Rajan,** Translation from Sanskrit, VISNU SARMA, The Panchatantra, Introduction -PP-37-39.(1993) Penguin Random House India Pvt.Ltd.Gurgaon-122002.Haryana.India.

ಆಕರ್ಷಕವೂ, ಅರ್ಥಪೂರ್ಣವೂ ಮತ್ತು ಸ್ವಾರಸ್ಯಕರವೂ ಆಗಿರುವಂತೆ ಹೆಣೆದಿಟ್ಟಿರುತ್ತಾರೆ. ಸಾರವಾದುದನ್ನು ಹೇಗೆ ಸ್ವೀಕರಿಸಬೇಕೆಂದು ಪಂಚತಂತ್ರದ ಕಥಾಮುಖದಲ್ಲಿ ಹೇಳಲಾಗಿದೆ:-

अनन्तपारं किल शब्दशास्त्रं स्वल्पं तथाऽऽयुर्बहवश्च विघ्नाः ।

सारं तथो ग्राहमपास्य फल्गु हसैर्यथा क्षीरमिवाम्बुमध्यात् ॥[48]

ಶಬ್ದಶಾಸ್ತ್ರ ಕೊನೆಯಿಲ್ಲದ್ದು. ಆಯಸ್ಸೋ ಬಹಳ ಕಡಿಮೆಯಾದದ್ದು, ತೊಂದರೆಗಳೋ ಅಪಾರವಾಗಿವೆ. ಆದುದರಿಂದ ಅಸಾರವಾದುದನ್ನು ತ್ಯಾಗಮಾಡಿ ಸಾರವಾದುದನ್ನು ನೀರಿನ ಮಧ್ಯದಿಂದ ಹಾಲನ್ನು ಬೇರ್ಪಡಿಸಿ ಹಂಸವು ತೆಗೆದುಕೊಳ್ಳುವಂತೆ ಗ್ರಹಿಸಬೇಕು. ಅಂದರೆ ಶಾಸ್ತ್ರಾಧ್ಯಯನ ಮಾಡಲು ಬಹಳ ವರ್ಷಗಳೇ ಬೇಕು. ಆಯಸ್ಸಿರುವವರೆಗೆ ಪ್ರಯತ್ನಿಸಿದರೂ ಪೂರ್ಣಾಧ್ಯಯನ ಮಾಡಲು ಸಾಧ್ಯವಿಲ್ಲ. ಹೀಗಿರುವಾಗ ರಾಜನಂದನರಿಗೆ ಯಾವುದು ಅತ್ಯಾವಶ್ಯಕ ಆಗಿದೆಯೋ ಅಂಥಹ ಶಿಕ್ಷಣವನ್ನು ನೀಡಲು ಬಹಳ ತಂತ್ರಗಾರಿಕೆ ಹಾಗೂ ಬೋಧನಾ ಕೌಶಲ್ಯವಿರಬೇಕು. ಅದಕ್ಕೆ ಬಹಳ ಸೂಕ್ತವಾದ ಶಿಕ್ಷಕರೆಂದರೆ ವಿದ್ಯಾರ್ಥಿಗಳ ಮೆಚ್ಚಿನ ಪ್ರತಿಭಾವಂತ ವಿಷ್ಣುಶರ್ಮರೇ ಸರಿ ಎಂದು ಆಸ್ಥಾನದಲ್ಲಿದ್ದ ವಿದ್ವಾಂಸರುಗಳು ಅಮರಶಕ್ತಿ ರಾಜನಿಗೆ ಸಲಹೆ ನೀಡಿದ ಸಂದರ್ಭದಲ್ಲಿ ಈ ಮಾತು ಬಂದಿರುತ್ತದೆ.



48. **ಸುಧಾಕರ್ ಮಾಲವೀಯ,** ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂಪಂಚತಂತ್ರಮ್, ಕಥಾಮುಖ, ಶ್ಲೋ-9, ಪು-7 (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

## ಅಧ್ಯಾಯ – ೩

## ವ್ಯಕ್ತಿತ್ವದ ಬೆಳವಣಿಗೆ ಮತ್ತು ವಿಕಾಸ Personality development

ಅಧ್ಯಾಯ ೩–1. ವ್ಯಕ್ತಿಯ ಬೆಳವಣಿಗೆಯಲ್ಲಿ ಮೂಲ ಸ್ವಭಾವ ಮತ್ತು ಸನ್ನಿವೇಶದ ಪ್ರಭಾವ–ವೈಯಕ್ತಿಕ ಭಿನ್ನತೆಗಳು. **Individual Differences**

ಅಧ್ಯಾಯ ೩–2. ಕಲಿಕೆ–ಅರ್ಥ–ಸ್ವರೂಪ. **Learning-meaning-nature**

ಅಧ್ಯಾಯ ೩–೩. ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳು–

ಅಭಿಪ್ರೇರಣೆ– **(Motivation)**

ಅವಧಾನ. **(Attention)**

ಅಧ್ಯಾಯ ೩–4. ಸ್ಮೃತಿ–ವಿಸ್ಮೃತಿ–––ಕಲಿಕೆಯ ವರ್ಗಾವಣೆ.

**(Memory-Forgetting-Transfer of learning)**

ಅಧ್ಯಾಯ ೩–5. पञ्चतन्त्रस्य–प्रथमं तन्त्रम् – मित्रभेदः ಕಥೆಗಳ ವಿಶ್ಲೇಷಣೆ

**೩–1 ವ್ಯಕ್ತಿಯ ಬೆಳವಣಿಗೆಯಲ್ಲಿ ಮೂಲ ಸ್ವಭಾವ ಮತ್ತು ಸನ್ನಿವೇಶದ ಪ್ರಭಾವ – ವೈಯಕ್ತಿಕ ಭಿನ್ನತೆಗಳು.**

ಮಾನವನ ಸರ್ವತೋಮುಖ ವಿಕಾಸವೇ ಶಿಕ್ಷಣದ ಗುರಿ. ಹಾಗೆಂದರೆ, ವ್ಯಕ್ತಿಯ ಶಾರೀರಿಕ, ಮಾನಸಿಕ, ಬೌದ್ಧಿಕ, ಸಾಮಾಜಿಕ, ನೈತಿಕ ಮತ್ತು ಆಧ್ಯಾತ್ಮಿಕ ವಿಕಾಸವೇ ಶಿಕ್ಷಣದ ಗುರಿ. "शरीरमाद्यम् खलुधर्मसाधनम्"– "ಆರೋಗ್ಯವಂತ ಶರೀರದಲ್ಲಿ ಆರೋಗ್ಯವಂತ ಮನುಷ್ಯ." **"A Sound Mind in a Sound Body."** ಅದೇ ರೀತಿಯಲ್ಲಿ ಆರೋಗ್ಯವಂತ ಮನುಷ್ಯನಲ್ಲಿ ಆರೋಗ್ಯವಂತ ಮನಶ್ಶಕ್ತಿ.[1]

सुवर्णापुष्पितां पृथ्वीं विचिन्वन्ति नरास्त्रयः।

शूरश्च कृतविद्यश्च यश्च जानाति सेवितुम् ॥[2]

ಮಹಾಭಾರತದಲ್ಲಿ ಬರುವ ಈ ಉಕ್ತಿ ಎಷ್ಟು ಅರ್ಥಪೂರ್ಣವಾಗಿದೆ. ಶೂರರು, ವಿದ್ಯಾವಂತರು, ಚೆನ್ನಾಗಿ ಸೇವೆ ಮಾಡಬಲ್ಲವರು – ಈ ಮೂವರೂ ಭೂಮಿಯಲ್ಲಿ ಸುವರ್ಣಪುಷ್ಪಗಳನ್ನು ಬೆಳೆಯಬಲ್ಲರು ಅಂದರೆ, ಮೊದಲನೆಯದಾಗಿ ತಾಯ್ನಾಡಿಗಾಗಿ ಜೀವವನ್ನೂ ಅರ್ಪಿಸಬಲ್ಲ ಶೂರ ಅವಳ ಸೇವೆಯನ್ನು ಚೆನ್ನಾಗಿ ಮಾಡಬಲ್ಲ. "ವೀರ ಮರಣಂ ತೃಣಂ–ಅವನಿಗೆ ಮರಣವೇ ಮಹಾನವಮಿ. ಎರಡನೆಯದು ದೇಶವನ್ನು ಸೇವಿಸುವ ಇನ್ನೊಂದು ವರ್ಗ ವಿದ್ಯಾವಂತರು. ತಮ್ಮ ಬುದ್ಧಿ ಶಕ್ತಿಯಿಂದ ನವ ಪೀಳಿಗೆಯನ್ನು ಅಣಿಗೊಳಿಸಿ, ದೇಶವನ್ನು 'ಜ್ಞಾನಂ – ವಿಜ್ಞಾನ ಸಹಿತಂ ಎಂಬಂತೆ ಜ್ಞಾನ – ವಿಜ್ಞಾನಗಳಲ್ಲಿ ಮುನ್ನಡೆ ಸಾಧಿಸುವಂತೆ ಮಾಡಿ, ಸರಿಯಾದ ದಿಕ್ಕಿನಲ್ಲಿ ಒಯ್ಯಬಲ್ಲ ಸಾಮರ್ಥ್ಯ ವಿದ್ಯಾವಂತರಿಗೆ ಮಾತ್ರ ಇರುತ್ತದೆ.

ಇನ್ನು ಮೂರನೆಯದಾಗಿ ಯಾವುದೇ ಸೇವಾ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದರೂ, ವೃತ್ತಿ ದ್ರೋಹ ಬಗೆಯದೆ ಪ್ರತಿಯೊಬ್ಬರೂ ಸೇವೆ ಸಲ್ಲಿಸಿದರೆ, ದೇಶ ಅಭಿವೃದ್ಧಿ ಹೊಂದುವುದು. ಒಟ್ಟಾರೆ ಹೇಳುವುದಾದರೆ ದೇಶಕ್ಕಾಗಿ ಮಡಿಯುವ, ಮಿಡಿಯುವ, ದುಡಿಯುವ ಶೂರ, ವಿದ್ಯಾವಂತ, ಸೇವಕರು ಮಾತ್ರ ಭೂಮಿಯಲ್ಲಿ ಬಂಗಾರ ಬೆಳೆಯಬಲ್ಲರು.[3] ಈ ನಿಟ್ಟಿನಲ್ಲಿ ಮನುಷ್ಯನ ವ್ಯಕ್ತಿತ್ವ ರೂಪುಗೊಳ್ಳಬೇಕು. ಅದಕ್ಕೆ ಸೂಕ್ತವಾದ ಸನ್ನಿವೇಶಗಳನ್ನು ಪ್ರತಿಭಾವಂತ ಗುರುಗಳಾದವರು ಅವರ ಶಿಷ್ಯರಿಗೆ ಒದಗಿಸಿ ಸುಂದರ ವ್ಯಕ್ತಿತ್ವ ನಿರ್ಮಾಣ ಮಾಡುತ್ತಾರೆ. ಇದೇ ಕಾರ್ಯವನ್ನು ವಿಷ್ಣುಶರ್ಮರು ರಾಜಕುಮಾರರ ವಿಚಾರದಲ್ಲಿ ಅದ್ಭುತವಾದ ಸಾಧನೆಗೈದಿದ್ದಾರೆ.

---

1. deck.org>kreedothsava Sri Rama Vidya Kendra Trust.
2. **ಸುಧಾಕರ್ ಮಾಲವೀಯ,** ಸಂಪಾ – ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–46, ಪು–34, ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001 (1993)
3. **ವಿ.ಎನ್.ಭಟ್,** ಜ್ಞಾನದೀಪ, ಅ.ನಂ–104, ಪು–205. ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ577201 (1993).

अज्ञानमालस्य जडत्व निद्रा प्रमादमूढत्व मुखास्तमोगुणाः ।

एतैः प्रयुक्तो न हि वेत्ति किंचि न्निद्रालुवत् स्तम्भवदेव तिष्ठति[4]

ಅಜ್ಞಾನ, ಆಲಸ್ಯ, ಜಡತ್ವ, ನಿದ್ರೆ, ಅವಧಾನವಿಲ್ಲದಿರುವಿಕೆ, ಮೂಢತನ ಮುಂತಾದವುಗಳು ತಮಸ್ಸಿನ ಗುಣಗಳು. ಇವುಗಳಿಂದ ಕೂಡಿರುವವನಿಗೆ ಏನೊಂದೂ ತಿಳಿಯುವುದಿಲ್ಲ. ಅವನು ನಿದ್ರಿಸುವನಂತೆಯೂ ಕಂಬದಂತೆಯೂ ಜಡನಾಗಿರುತ್ತಾನೆ. ರಾಜಕುಮಾರರ ಪರಿಸ್ಥಿತಿಯೂ ಇದೇ ರೀತಿಯಾಗಿತ್ತು. ವಿಷ್ಣುಶರ್ಮರು ಇಂಥಹವರಿಗೆ ಸೂಕ್ತ ಪರಿಸರವನ್ನೊದಗಿಸಿ, ಕಲಿಯುವುದರಲ್ಲಿ ಆಸಕ್ತಿಯನ್ನೂ, ಒಲವನ್ನೂ ಮೂಡಿಸಿದ್ದಾರೆ.

ಮನುಷ್ಯನ ರಚನೆ, ಶರೀರದ ಸಂವಿಧಾನವನ್ನು ಸ್ವಲ್ಪ ಸೂಕ್ಷ್ಮವಾಗಿ ಗಮನಿಸಿದರೆ ಇದೊಂದು ಅದ್ಭುತ ಸೃಷ್ಟಿ ಎನ್ನಿಸುತ್ತದೆ. ಇದರ ಬಗ್ಗೆ ಇನ್ನೂ ಹೆಚ್ಚು ಹೆಚ್ಚು ಅರ್ಥೈಸಿಕೊಳ್ಳಲು ಪ್ರಯತ್ನಿಸಿದರೆ ಈ ಅದ್ಭುತ ಜೀವಿ, ಮಾನವ ನಿರ್ಮಾಣವನ್ನು ಆ ಪ್ರಕೃತಿಯು ಎಷ್ಟೊಂದು ವಿಶಿಷ್ಟವಾಗಿ, ಅತ್ಯಂತ ವ್ಯವಸ್ಥಿತವಾಗಿ ಕೈಗೊಂಡಿದೆ !!! ಯಾವ ವಿಜ್ಞಾನಿ ಅಥವಾ ನಿರ್ಮಾತೃವಿನಿಂದಲೂ ಇಷ್ಟು ಕರಾರುವಾಕ್ಕಾಗಿ ರಚಿಸಲಸಾಧ್ಯವೆನ್ನಬಹುದು. ಮತ್ತೊಂದು ವಿಶೇಷವೆಂದರೆ, ಒಬ್ಬ ವ್ಯಕ್ತಿಯಲ್ಲಿರುವ ಲಕ್ಷಣಗಳನ್ನು, ಮತ್ತೊಬ್ಬನಲ್ಲಿ ಮೂಡಿಸಿಲ್ಲ. ಆ ವ್ಯಕ್ತಿಯು ಎಷ್ಟರಮಟ್ಟಿಗೆ ತಂದೆ ತಾಯಿಗಳ ಲಕ್ಷಣವನ್ನು ಹೋಲುತ್ತಾನೆ. ಅದೇ ಬೇರೆ ಸದಸ್ಯರಂತೆ ಇರುವುದಿಲ್ಲ. ಮನಶ್ಶಾಸ್ತ್ರಜ್ಞರು ಇದನ್ನೇ "ವೈಯುಕ್ತಿಕ ಭಿನ್ನತೆಗಳು" ಎನ್ನುತ್ತಾರೆ.

ಎಲ್ಲಾ ಜೀವಿಗಳಲ್ಲೂ ಅಂದರೆ ಮಾನವರಲ್ಲಾಗಲೀ ಅಥವಾ ಇನ್ನಿತರ ಪ್ರಾಣಿಗಳಲ್ಲಾಗಲೀ ಗಾತ್ರ, ಆಕಾರ, ಬಾಹ್ಯ ಚಹರೆ, ಅನುಕ್ರಿಯೆಯ ವೇಗ ಇತ್ಯಾದಿ ಇನ್ನೂ ಹಲವಾರು ವರ್ತನೆಗಳಲ್ಲಿ ನಾವು ವ್ಯತ್ಯಾಸಗಳನ್ನು ಕಾಣುತ್ತೇವೆ. ಹೀಗೆ ವ್ಯಕ್ತಿಗಳ ಅನೇಕ ಲಕ್ಷಣಗಳಲ್ಲಿ ಭಿನ್ನತೆಯನ್ನು ಕಾಣುತ್ತೇವೆ. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ಹಾಗೆ ಇರುವುದಿಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ಸಹ ಅದ್ವಿತೀಯ. ಮಾನವರಾದ ನಾವು ಕೆಲವು ಲಕ್ಷಣಗಳಲ್ಲಿ ಸಮತೆ ಕಂಡುಬಂದರೂ ಸಹ ಹಲವಾರು ವಿಷಯಗಳಲ್ಲಿ ಭಿನ್ನರಾಗಿದ್ದೇವೆ. ವೈಯಕ್ತಿಕ ಭಿನ್ನತೆಗೆ ಒಂದು ಮನೋವೈಜ್ಞಾನಿಕ ಪಾರಿಭಾಷಿಕ ಪದವಾಗಿ ಈ ಕೆಳಕಂಡಂತೆ ವ್ಯಾಖ್ಯಾನಿಸಬಹುದಾಗಿದೆ. "ಒಬ್ಬನನ್ನು ಇನ್ನೊಬ್ಬನಿಂದ ಬೇರ್ಪಡಿಸುವಂತಹ ಲಕ್ಷಣಗಳು ಮತ್ತು ತನ್ಮೂಲಕ ಪ್ರತಿಯೊಬ್ಬ ವ್ಯಕ್ತಿಯನ್ನು ಅದ್ವಿತೀಯನನ್ನಾಗಿ ಮಾಡುವಂತಹ ಲಕ್ಷಣಗಳನ್ನು ವೈಯಕ್ತಿಕ ಭಿನ್ನತೆಗಳು"[5] ಎಂದು ಕರೆಯಬಹುದು. ವ್ಯಕ್ತಿವ್ಯಕ್ತಿಗಳಿಗೂ ಕೇವಲ ದೈಹಿಕ ಭಿನ್ನತೆಗಳಷ್ಟೇ ಅಲ್ಲದೆ ಸ್ವಭಾವ, ನಡೆನುಡಿ, ಆಚಾರವಿಚಾರಗಳಲ್ಲೂ ಬೇಕಾದ ಹಾಗೆ ವ್ಯತ್ಯಾಸ ಕಂಡುಬರುತ್ತದೆ. ಶೈಶವದಲ್ಲಿ ಕಾಣದ ಈ ವ್ಯತ್ಯಾಸಗಳು ವಯಸ್ಸಾದಂತೆ

4. **ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು,** ಶಂಕರಾಚಾರ್ಯವಿರಚಿತ ವಿವೇಕಚೂಡಾಮಣಿ,(2005), ಅ– 3, ಶ್ಲೋ–115, ಪು–35, ಆಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೇನರಸೀಪುರ 573211

5. **ಎಚ್. ವಿ.ವಾಮದೇವಪ್ಪ,** ಶೈಕ್ಷಣಿಕ ಮನೋವಿಜ್ಞಾನ, ಅ–3, ಪು–111.(1962) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಚೆನ್ನಾಗಿ ವ್ಯಕ್ತಪಡುತ್ತವೆ. ಒಂದೇ ಕಡೆ ಬೆಳೆದವರು, ಒಂದೇ ಕುಟುಂಬದಲ್ಲಿ ಜನಿಸಿದ್ದವರಲ್ಲೂ ವ್ಯತ್ಯಾಸಗಳು ಕಂಡುಬರುತ್ತದೆ. ಒಬ್ಬರನ್ನೊಬ್ಬರು ಗುರುತು ಹಚ್ಚಲು ಈ ವೈವಿಧ್ಯ ನಿಜಕ್ಕೂ ಸಹಕಾರಿ. ಸಮಾಜ ಜೀವನದ ಸೊಗಸಿಗೂ ಈ ವೈವಿಧ್ಯ ಅಗತ್ಯವೆನಿಸುತ್ತದೆ. ಉತ್ತಮ ಸ್ವಭಾವಾದಿ ಗುಣಗಳನ್ನು ಪಡೆದಿರುವವರು ಜೀವನದಲ್ಲಿ ಹೆಚ್ಚಿನ ಯಶಸ್ಸು ಗಳಿಸುವುದು ಸ್ವಾಭಾವಿಕ.

गुणवत्तरपात्रेण छाद्यन्ते गुणिनां गुणाः ।

रात्रौ दीपशिखाकान्तिर्न भानावुदिते सति ॥[6]

ಅಂತಹ ಯಶಸ್ಸು ಯಾರಿಗೆ ತಾನೇ ಬೇಡವೆನ್ನಿಸುತ್ತದೆ? ಇದು ಎಲ್ಲರಿಗೂ ಆಗತ್ಯವೇ. ಹಾಗಿದ್ದಲ್ಲಿ ಈ ವೈವಿಧ್ಯಕ್ಕೆ ಕಾರಣಗಳೇನಿರಬಹುದು? ಆ ಕಾರಣಗಳು ಜನ್ಮಗತವಾದವೇ? ಅಥವಾ ಜೀವನದಲ್ಲಿ ಕಾಣತಕ್ಕವೇ? ಏನಿರಬಹುದು?

ತಂದೆತಾಯಿಗಳ ದೈಹಿಕ ಮತ್ತು ಮಾನಸಿಕ ಲಕ್ಷಣಗಳು ಮಕ್ಕಳಿಗೆ ವಂಶಗತವಾಗಿ ಬರುತ್ತವೆ. ಹೀಗೆ ಅನುವಂಶೀಯವಾಗಿ ಬರುವ ಮೂಲ ಸ್ವಭಾವವೇ ವ್ಯಕ್ತಿಯ ಮಾನಸಿಕ, ದೈಹಿಕ ಮತ್ತು ಸಾಮಾಜಿಕ ಅಭಿವೃದ್ಧಿಗೆ ಕಾರಣವೆಂದು ಕೆಲವರ ವಾದವಿದೆ. ಮಗುವಿನ ಇಡೀ ಭವಿಷ್ಯವನ್ನು ನಿರ್ಧರಿಸತಕ್ಕದ್ದು ಅನುವಂಶೀಯತೆ ಎಂದು ಸಾಧಿಸಲು ಪ್ರಯತ್ನಿಸುವರು. ಈ ಪಂಥದಲ್ಲಿ ಯತ್ನಿಸಿದವರೆಂದರೆ **Rousseau, Galton, Plato, Pearson** ಮುಂತಾದವರು. ಮತ್ತೆ ಕೆಲವರು ಇದನ್ನೊಪ್ಪದೆ ವಂಶಗತವಾಗಿ ಬಂದಿರುವ ಮೂಲ ಸ್ವಭಾವಗಳು ಹೇಗೇ ಇರಲಿ, ಅವರ ಶಿಕ್ಷಣಾಭಿವೃದ್ಧಿ, ವ್ಯಕ್ತಿತ್ವ ಭವಿಷ್ಯ ಜೀವನದ ಸ್ವರೂಪ – ಇವನ್ನೆಲ್ಲಾ ರೂಪಿಸತಕ್ಕದ್ದು ಅವರು ವಾಸಿಸುವ ಸನ್ನಿವೇಶ ಮತ್ತು ಪಡೆಯುವ ಶಿಕ್ಷಣದ ಸ್ವರೂಪ ಎಂದು ವಾದಿಸುವರು. ಈ ಪಂಥದಲ್ಲಿ ವಾದಿಸಿದವರೆಂದರೆ **Spencer, Watson, Newman, Weisman** ಇನ್ನಿತರರು. ಈ ವಾದ – ವಿವಾದಗಳನ್ನು **(Nature-Nurture-Controversy)** "ಪ್ರಕೃತಿ–ಪರಿಸರವಾದ" ಎಂದು ಕರೆಯುತ್ತಾರೆ.[7]

ಅನುವಂಶೀಯತೆಯನ್ನು ಪ್ರಕೃತಿಯೆಂದೂ, ಪರಿಸರವನ್ನು ಪಾಲನೆ ಮತ್ತು ಆರೈಕೆಯೆಂದೂ ಅನುವಾದ ಮಾಡಬಹುದು. ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ ಇವೆರಡೂ ಬಹುಮುಖ್ಯವೇ.

---

6. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–310, ಪು–199, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
7. **ಎನ್.ಎಸ್.ವೀರಪ್ಪ,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–4, ಪು–52ರಿಂದ54. (1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿ ಪುರಂ, ಮೈಸೂರು–4.

ಇವೆರಡನ್ನೂ ವ್ಯಕ್ತಿಯ ಬೆಳವಣಿಗೆಗೆ ಹಾಗೂ ಅಭಿವೃದ್ಧಿಯಲ್ಲಿ ಅನ್ಯೋನ್ಯಾವಲಂಬನಗಳೆಂದು ಕರೆಯಬಹುದು. ಇವು ನಿರಂತರ ಪರಸ್ಪರ ಪೂರಕವಾಗಿದ್ದು, ಅನುವಂಶೀಯತೆ ಮತ್ತು ಪರಿಸರಗಳ ನಡುವಿನ ಅನ್ಯೋನ್ಯ ಕ್ರಿಯೆಯ ಫಲಿತವೇ ವಿಕಾಸ. ಅನುವಂಶೀಯತೆ ಬಂದೂಕವನ್ನು ಗುಂಡಿನಿಂದ ಭರ್ತಿಮಾಡಿದರೆ, ಪರಿಸರವು ಬಂದೂಕಿನ ಕುದುರೆ ಅಥವಾ ಪ್ರಚೋದಕವನ್ನು ಎಳೆಯುವುದು. ಅಂದರೆ ವ್ಯಕ್ತಿಯಲ್ಲಿ ಅಂತರ್ಗತವಾಗಿರುವ ಅನುವಂಶೀಯ ಅಂಶಗಳು ಮತ್ತು ಪರಿಸರದ ಅಂಶಗಳು ವ್ಯಕ್ತಿಯ ವಿಕಾಸದ ಮೇಲೆ ಪ್ರಭಾವ ಬೀರುತ್ತವೆ. ಇವೆರಡರ ಪ್ರಭಾವವನ್ನು ಯಾವುದರಿಂದಲೂ ಪ್ರತ್ಯೇಕಿಸಲು ಸಾಧ್ಯವಿಲ್ಲ. ವ್ಯಕ್ತಿಯ ವಿಕಾಸವು ವ್ಯಕ್ತಿ ಹಾಗೂ ಅವನ ಪರಿಸರದ ಅನ್ಯೋನ್ಯ ಕ್ರಿಯೆಯ ಉತ್ಪನ್ನವಾಗಿದೆ.

ಮನೋವೈಜ್ಞಾನಿಕ ಗುಣಗಳಾದ ಆದರ್ಶಗಳು, ಆಸಕ್ತಿಗಳು ಮತ್ತು ಮನೋಭಾವಗಳು ಪರಿಸರದಿಂದ ಪ್ರಭಾವಿತವಾಗುತ್ತವೆ. ವ್ಯಕ್ತಿಗಳು ತಮ್ಮ ಗುಣಲಕ್ಷಣಗಳನ್ನು ಅಂಕುರಾಣುಗಳು ಮತ್ತು ಅವುಗಳಲ್ಲಿರುವ ವರ್ಣತಂತುಗಳ ಹಾಗೂ ವಂಶವಾಹಿನಿಗಳ ಮೂಲಕ ವಂಶಪಾರಂಪರ್ಯವಾಗಿ ಪಡೆದುಕೊಳ್ಳುತ್ತಾರೆ. ಕಣ್ಣಿನ ಬಣ್ಣ, ಕೂದಲು ಹಾಗೂ ಚರ್ಮಗಳ ಬಣ್ಣ, ತಲೆಯಗಾತ್ರ, ಕೈಬೆರಳು ವಿನ್ಯಾಸ, ಲೈಂಗಿಕ ಪಕ್ವತೆಯ ಕಾಲ ಮತ್ತು ದೇಹದ ದೃಢತೆ ಇತ್ಯಾದಿಗಳು ಮುಖ್ಯವಾಗಿ ಅನುವಂಶೀಯ ಗುಣಗಳಿಂದ ನಿರ್ಧರಿಸಲ್ಪಡುತ್ತವೆ.[8] ಇನ್ನು ಉತ್ತಮ ಪರಿಸರವನ್ನು ಒದಗಿಸಿಕೊಟ್ಟರೆ ಉತ್ತಮನಾಗುತ್ತಾನೆ, ವ್ಯತ್ಯಾಸವಾದರೆ ಅಧಮನೂ ಆಗುತ್ತಾನೆ. ಹಿತೋಪದೇಶದಲ್ಲಿ ಸರಳವಾಗಿ ಹೀಗೆ ಹೇಳಲ್ಪಟ್ಟಿದೆ:–

यदाऽसत्सङ्गरहितो भविष्यसि भविष्यसि ।

यदाऽसज्जनगोष्ठीषु पतिष्यसि पतिष्यसि ॥[9]

ಸಜ್ಜನರ ಸಹವಾಸದಲ್ಲಿ ನಿರತನಾದರೆ ಖಂಡಿತವಾಗಿ ನೀನು ಬದುಕುವೆ. ಹಾಗೆಯೇ ಕೆಟ್ಟವರ ಗುಂಪಿನಲ್ಲಿ ಬಿದ್ದರೆ ಖಂಡಿತವಾಗಿಯೂ ಬೀಳುತ್ತೀಯೆ. ಎಂಥಹ ಪರಿಸರ ಸಿಗುವುದೋ ಹಾಗೇ ಆಗುವೆ ಎಂದು ಸೂಚಿಸುತ್ತದೆ. ಅದಕ್ಕೇ ಮಕ್ಕಳಿಗೆ ಅನುವಂಶೀಯ ಗುಣಗಳ ಜೊತೆಗೆ ಉತ್ತಮ ಪರಿಸರವನ್ನೂ ಕಲ್ಪಿಸಿಕೊಡಬೇಕಾದದ್ದು ನಮ್ಮ ಕರ್ತವ್ಯ.

ವಿದ್ಯೆ ಕಲಿಸುವ ಶಿಕ್ಷಕರು ಹಾಗೂ ಪೋಷಕರು ಮಕ್ಕಳ ಸರ್ವತೋಮುಖ ಅಭಿವೃದ್ಧಿಯ ವಿಚಾರದಲ್ಲಿ ಈ ಮೇಲಿನ ಎಲ್ಲ ಮನೋವೈಜ್ಞಾನಿಕ ಅಂಶಗಳನ್ನು ಅರಿತುಕೊಂಡು, ಅವರಿಗೆ ಉತ್ತಮವಾದ ಸಾಮಾಜಿಕ ಅನುವಂಶೀಯತೆಯ ಬುನಾದಿಯಲ್ಲಿ ಸುಸಂಸ್ಕೃತ, ಸೃಜನಶೀಲ ಪರಿಸರವನ್ನು

---

8. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–2 ಪು–47, 48. ಶ್ರೇಯಸ್ ಪಬ್ಲಿಕೇಷನ್ಸ್,(2005) ತರಳಬಾಳು ಬಡಾವಣೆ, ದಾವಣಗೆರೆ–577005.
9. **ನಾರಾಯಣ ಪಂಡಿತರ** ಹಿತೋಪದೇಶ– ಮಿ.ಲಾ. ಶ್ಲೋ–207.

ಒದಗಿಸಿಕೊಡುವುದು ಬಹಳ ಮುಖ್ಯವಾದ ವಿಚಾರ.

ಪಂಚತಂತ್ರ ನೀತಿಕಾವ್ಯವನ್ನು ಈ ದೃಷ್ಟಿಯಿಂದ ವಿಶ್ಲೇಷಿಸಿದರೆ, ಹಿರಿಯ ಅನುಭವೀ ವಿದ್ವಾಂಸರೂ, ಪ್ರತಿಭಾನ್ವಿತ ಶಿಕ್ಷಕರೂ ಆಗಿದ್ದ ವಿಷ್ಣುಶರ್ಮರು ಅಮರಶಕ್ತಿ ರಾಜನ ಮೂವರು ಪುತ್ರರನ್ನು ಬಹಳ ವಿಶೇಷವಾಗಿ ಗಮನಿಸಿದ್ದಾರೆ. ಅವರು ಪಡೆದಿರುವ ಅನುವಂಶೀಯ ಲಕ್ಷಣಗಳನ್ನು ಪರಿಶೀಲಿಸಿ, ಅವರಲ್ಲಿರುವ ವೈಯಕ್ತಿಕ ಭಿನ್ನತೆಗಳನ್ನು ಗುರುತಿಸಿ, (ಒಬ್ಬ ಮೂರ್ಖ, ಮತ್ತೊಬ್ಬ ಆಲಸಿ, ಇನ್ನೊಬ್ಬ ಮೂರ್ಖ, ಆಲಸಿ) ಅವರಿಗೆ ತಕ್ಕುದಾದ ಉತ್ತಮ ಪರಿಸರವನ್ನೊದಗಿಸಿ, ಸನ್ನಿವೇಶ, ಸಮಸ್ಯೆ, ಜ್ಞಾನ, ವಯೋಗುಣ, ಗ್ರಹಣಶಕ್ತಿ ಇವುಗಳ ಕಾರ್ಯಕಾರಣ ಬದ್ಧ ಪಠ್ಯಕ್ರಮ, ಬೋಧನಾ ವಿಧಾನವನ್ನು ಅಳವಡಿಸಿ, ಕೋಮಲಮತಿಗಳಾದ ಬಹುಶಕ್ತಿ, ಉಗ್ರಶಕ್ತಿ ಮತ್ತು ಅನಂತಶಕ್ತಿ ಇವರುಗಳನ್ನು ಸುಶಿಕ್ಷಿತರನ್ನಾಗಿ, ರಾಜನೀತಿ ಕುಶಲರನ್ನಾಗಿ ಮಾರ್ಪಡಿಸಿ, ಉತ್ತಮ ವ್ಯಕ್ತಿತ್ವ – ನಿರ್ಮಾಣ ಮಾಡಿರುವುದರಲ್ಲಿ ನಿಜಕ್ಕೂ ಪಂಚತಂತ್ರದಲ್ಲಿ ಒಂದು ಅಸಾಮಾನ್ಯ ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆ ಅಡಗಿದೆಯೆಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ.

वंशभवो गुणवानपि सङ्गविशेषेण पूज्यते पुरुषः।

न हि तुम्बीफलविकलो वीणादण्डः प्रयाति महिमानम् ॥[10]

ಉತ್ತಮ ವಂಶದಲ್ಲಿ ಹುಟ್ಟಿರಲಿ, ಗುಣವಂತನಾಗಿರಲಿ, ಸತ್ಸಂಗ ವಿಶೇಷದಿಂದ ಪುರುಷನು ಪೂಜ್ಯನಾಗುತ್ತಾನೆ. ಸೋರೆಬುರುಡೆ ಇಲ್ಲದಿದ್ದಲ್ಲಿ ವೀಣಾದಂಡಕ್ಕೆ ಯಾವ ಮಹಿಮೆಯೂ ದೊರಕದು. ವೀಣಾದಂಡವು ವಂಶಭವ, ಅಂದರೆ ಬಿದಿರಿನಿಂದ ಆದದ್ದು; ಗುಣವಾನ್ ಅಂದರೆ ತಂತಿಗಳಿಂದ ಯುಕ್ತವಾದದ್ದು. ಇಲ್ಲಿ ವಂಶವೂ ಮುಖ್ಯ ಅದಕ್ಕೆ ತಕ್ಕಂತೆ ಗುಣ ಅರ್ಥಾತ್ ಪರಿಸರವೂ ಮುಖ್ಯ. ಅಂತೆಯೇ, ಮಕ್ಕಳಲ್ಲಿ ಜನ್ಮತಃ ಹಲವು ಗುಣ – ಧರ್ಮಗಳು ಅಡಗಿದ್ದರೂ ಅವು ಕಾರ್ಯರೂಪಕ್ಕೆ ಬರುವುದು ಸನ್ನಿವೇಶದ ಪ್ರಭಾವದಿಂದ ಸನ್ನಿವೇಶದ ಆ ಪ್ರಭಾವಕ್ಕೆ ಪ್ರತಿಕ್ರಿಯಾರೂಪದಲ್ಲಿ ಮೂಲ ಸ್ವಭಾವಗಳು ವರ್ತಿಸುತ್ತವೆ. ಉದಾಹರಣೆಗೆ – ಸಂಗ್ರಹಾಸಕ್ತಿಯ ಹುಟ್ಟುಗುಣವನ್ನು ಪರಿಶೀಲಿಸಿದರೆ, ಪದಾರ್ಥಗಳನ್ನು ಕಂಡೊಡನೆಯೆ ಮಗುವು ಅದನ್ನು ಆಯ್ದುಕೊಳ್ಳುತ್ತದೆ. ಇಲ್ಲಿ ಪದಾರ್ಥವನ್ನು ಕಾಣುವುದೇ ಸನ್ನಿವೇಶದ ಪ್ರಭಾವ 'ಕ್ರಿಯೆ'. ಈ ಕ್ರಿಯಾ ಪ್ರತಿಕ್ರಿಯೆಗಳ ಸ್ವರೂಪವೇ ಮಕ್ಕಳು ಸನ್ನಿವೇಶಗಳೊಡನೆ ವರ್ತಿಸುವ 'ರೀತಿ'. ಅದನ್ನು ವ್ಯಕ್ತಿಯ ಮತ್ತು ಸಮಾಜದ ಹಿತಗಳಿಗೊಪ್ಪುವಂತೆ ರೂಪಿಸುವುದೇ ಶಿಕ್ಷಣವ್ಯವಸ್ಥೆ.[11] ಈ ವ್ಯವಸ್ಥೆಯನ್ನು

---

10. **ಸುಭಾಷಿತಮಂಜರೀ,** ಸಾಮಾನ್ಯ ನೀತಿ–ಶ್ಲೋ–367, ಪು–458–ರಸಗಂಗಾಧರ. ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು(2001)
11. **ವೀರಪ್ಪ. ಎನ್.ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–3, ಪು–40–42.(1962) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಸಕಲ ಶಾಸ್ತ್ರಪಾರಂಗತರಾದ ವಿಷ್ಣುಶರ್ಮರು ಪಂಚತಂತ್ರದ ಮೂಲಕ ಮಂದಮತಿಗಳಾದ ಮೂವರು ರಾಜಕುಮಾರರನ್ನು ಸುಶಿಕ್ಷಿತರನ್ನಾಗಿ ಮಾಡಲು ಉತ್ತಮ ಕಲಿಕಾ ಸನ್ನಿವೇಶವನ್ನು ಆಕರ್ಷಕ ಕಥೆಗಳ ಅದ್ಭುತ ಸಂಕಲನದಿಂದ ಕಲ್ಪಿಸಿ ಕೊಟ್ಟಿದ್ದಾರೆ. ವಂಶಗತವಾಗಿ ಬರುವ ಸಂಗ್ರಹಾಸಕ್ತಿ ಉಚಿತ ರೀತಿಯಲ್ಲಿ ಸಂಸ್ಕಾರಗೊಳ್ಳದಿದ್ದರೆ ವ್ಯಕ್ತಿ ಜಿಪುಣನಾಗಬಹುದು, ದುರಾಸೆಗೂ ತುತ್ತಾಗಬಹುದು. ನಿರಾಸೆಯಾದಾಗ ಹುಚ್ಚನೂ ಆಗಬಹುದು. ಅದರಿಂದ ಅವನ ವ್ಯಕ್ತಿತ್ವಕ್ಕೆ ಕಳಂಕ ಬರುವುದರ ಜೊತೆಗೆ ಅವನು ಸಮಾಜ ಜೀವನಕ್ಕೆ ಘಾತುಕನಾಗಿಯೂ ಪರಿಣಮಿಸಬಹುದು. ಮಕ್ಕಳ ಈ ತೀಕ್ಷ್ಣವಾಗಿರುವ ಹುಟ್ಟುಗುಣವನ್ನು ಅಂತಹ ಅಹಿತ ಮಾರ್ಗದಲ್ಲಿ ಬೆಳೆಯುವುದನ್ನು ತಪ್ಪಿಸುವುದು ಅಗತ್ಯವಿದೆ. ಜೊತೆಗೆ ಅವು ಹಿತವೆನಿಸುವ ಮಾರ್ಗದಲ್ಲಿ ಪಳಗುವಂತೆ ಮಾಡುವುದು ಶಿಕ್ಷಣದ ಕೆಲಸ.

वाञ्छा सज्जनसङ्गमे परगुणे प्रीतिर्गुरौ नम्रता विद्यायां व्यसनं स्वयोषिति रतिर्लोकापवादाद्भयम् ॥

भक्तिः शूलिनि शक्तिरात्मदमने संसर्गमुक्तिः खले येष्वेते निवसन्ति निर्मलगुणास्तेभ्यो नरेभ्यो नमः ॥[12]

"ಸಜ್ಜನರ ಸಹವಾಸದಲ್ಲಿ ಆಸೆ, ಪರರ ಗುಣದಲ್ಲಿ ಪ್ರೀತಿ, ಗುರುವಿನಲ್ಲಿ ವಿಧೇಯತೆ, ವಿದ್ಯೆಯಲ್ಲಿ ಆಸಕ್ತಿ, ತನ್ನ ಹೆಂಡತಿಯಲ್ಲಿ – ಸುಖಪಡುವಿಕೆ, ಲೋಕಾಪವಾದ ದೆಸೆಯಿಂದ – ಹೆದರಿಕೆ, ಶಿವನಲ್ಲಿ – ಭಕ್ತಿ, ಮನೋನಿಗ್ರಹದಲ್ಲಿ – ಶಕ್ತಿ, ದುರ್ಜನರಲ್ಲಿ – ಸಹವಾಸತ್ಯಾಗ, ಈ ನಿರ್ಮಲಗುಣಗಳು ಯಾರಲ್ಲಿವೆಯೋ ಆ ಮಹಾತ್ಮರಿಗೆ ನಮಸ್ಕಾರ."

ಹೀಗೆ ಸದ್ಗುಣಗಳಿಂದ ಉತ್ತಮ ವ್ಯಕ್ತಿತ್ವ ನಿರ್ಮಾಣಮಾಡಿಕೊಂಡು ಬದುಕನ್ನು ಸಾರ್ಥಕಪಡಿಸಿಕೊಳ್ಳುವಂತೆ ಪ್ರೇರೆಪಿಸುತ್ತಾ, ನೀತಿಶಿಕ್ಷಣದ ಮೂಲಕ ವಿಷ್ಣುಶರ್ಮರು ರಾಜಕುಮಾರರನ್ನು ಬದುಕಿನ ನೀತಿಕುಶಲರು ಹಾಗೂ, ರಾಜನೀತಿ ಪರಿಣಿತರನ್ನಾಗಿ ಪರಿವರ್ತನೆ ಮಾಡಿದ್ದಾರೆ.

ಪ್ರತಿಭಾನ್ವಿತ ಶಿಕ್ಷಕರಾದ ವಿಷ್ಣುಶರ್ಮರು ಈ ಮೂವರು ದುರ್ವಿನೀತರಾದ ರಾಜಕುಮಾರರನ್ನು ಕ್ರಮಬದ್ಧ ವೀಕ್ಷಣೆಗೊಳಪಡಿಸಿ, ಅವರುಗಳ ವೈಯಕ್ತಿಕ ಭಿನ್ನತೆಗಳು, ಜನ್ಮತಃ ಹೊಂದಿರುವ ಗುಣಧರ್ಮಗಳು, ಒಂದು ವೇಳೆ ಪ್ರತಿಕೂಲ ಸನ್ನಿವೇಶದ ಪರಿಣಾಮದಿಂದ ಅವರ ವರ್ತನೆಗಳು ಅಹಿತ ಮಾರ್ಗದಲ್ಲಿ ಬೆಳೆಯುತ್ತಿದೆಯೇ? ಇವೆಲ್ಲವನ್ನೂ ಪರಿಶೀಲಿಸಿ, ಅವರಲ್ಲಿ ಯಾವ ಅಪೇಕ್ಷಿತ ಬದಲಾವಣೆಗಳನ್ನು ತರಬಹುದು ಎಂಬುದರ ಬಗ್ಗೆ ಕೂಲಂಕಶವಾಗಿ ವಿಚಾರಮಾಡಿದ್ದಾರೆ. ಬದುಕಿನ ವ್ಯವಹಾರಗಳ ನೀತಿಪಾಠವನ್ನು ರಾಜನೀತಿ ಶಿಕ್ಷಣದೊಂದಿಗೆ ಹಸನುಮಾಡಿ, ನಾಣ್ನುಡಿಗಳು, ಸುಭಾಷಿತಗಳು, ಸೂಕ್ತಿಗಳು ಹಾಗೂ ನೀತಿಶ್ಲೋಕ ಮಿಶ್ರಿತ

---

12. **ಭರ್ತೃಹರಿಯ ನೀತಿಶತಕ,** ಸುಜನ ಪದ್ಧತಿ – ಶ್ಲೋ–62.

ಕಥಾಸಂಕಲನದ ಪಠ್ಯಕ್ರಮವನ್ನು ಸಿದ್ಧಪಡಿಸಿದ್ದಾರೆ. ಉತ್ತಮ ಶೈಕ್ಷಣಿಕ ಸನ್ನಿವೇಶಗಳನ್ನು ಅದರಲ್ಲೂ ದಿನನಿತ್ಯದ ಬದುಕಿನ ವ್ಯವಹಾರಗಳ ವಿಚಾರಗಳನ್ನೇ, ಪ್ರಾಣಿಪಶುಪಕ್ಷಿಗಳಿಗೆ ಆರೋಪಿಸಿ,ಪರಕಾಯಪ್ರವೇಶ ಮಾಡಿ ವರ್ತಿಸುವಂತೆ ಒಂದು ವಿಶಿಷ್ಟ ತಂತ್ರಗಾರಿಕೆಯನ್ನು ರೂಪಿಸಿದ್ದಾರೆ.

ಇನ್ನೊಂದು ವಿಶೇಷತೆಯೆಂದರೆ ವಿಷ್ಣುಶರ್ಮರು ಪಂಚತಂತ್ರದಲ್ಲಿ ಅಳವಡಿಸಿರುವ ಬೋಧನಾ ಮಾಧ್ಯಮ. "ಕಥಾನಿರೂಪಣಾ" ಮಾದ್ಯಮ. ಅದರಲ್ಲೂ ಬಹಳ ಮುಖ್ಯವಾಗಿ "ನಿರೂಪಣಾ ಶೃತಿ." ಶೃತಿ ಹೇಗಿದೆಯೆಂದರೆ, ತಾಳ, ಲಯ ಬದ್ಧವಾಗಿ ನಿರೂಪಿಸಿರುವ ಶೈಲಿ, ಆ ಧ್ವನಿ, ಹೇಳುವ ಸನ್ನಿವೇಶ ಎಷ್ಟರಮಟ್ಟಿಗೆ ಹೊಂದಿದೆಯೆಂದರೆ, ಸಂಗೀತ ಕ್ಷೇತ್ರದಲ್ಲಿ ಶೃತಿ, ಆಲಾಪನೆ, ಭಾವ, ರಾಗ, ತಾಳ, ಪಲ್ಲವಿ, ನುಡಿ ಮತ್ತು ಸ್ವರ ಮಾಧುರ್ಯ ಹೇಗೆ ಒಂದು ಹಾಡಿನ ಇಂಪನ್ನು, ಶಾಸ್ತ್ರೀಯ ಲಕ್ಷಣಗಳೊಂದಿಗೆ ಆಕರ್ಷಕ ಹಾಗೂ ಸುಶ್ರಾವ್ಯಗೊಳಿಸುವುದೋ; ಏನಾದರೊಂದು ಆಧ್ಯಾತ್ಮ ಚಿಂತನೆ ಅಥವಾ ಬದುಕಿನ ನೀತಿಯನ್ನು ಸೂಚಿಸುವುದೋ, ಹಾಗೆಯೇ ಕೇಳುಗರ ಮನಸ್ಸನ್ನು ಹಿಡಿದಿಟ್ಟು, ಬದುಕಿನ ನೀತಿಶಿಕ್ಷಣವನ್ನು, ಸುಂದರ ವ್ಯಕ್ತಿತ್ವನಿರ್ಮಾಣ ಕೌಶಲ್ಯವನ್ನು ಬೋಧಿಸುವ ಕಥಾ-ಸಂಗಮವೇ ಈ ಪಂಚತಂತ್ರ. ಇಲ್ಲಿ ಕಂಡು ಬರುವ ವ್ಯವಸ್ಥೆಗೆ ಶೈಕ್ಷಣಿಕ ಮನೋವಿಜ್ಞಾನದ ಅಂಶಗಳು ತುಂಬಾ ನೆರವಾಗುತ್ತವೆ.

ಪಾಠಪ್ರವಚನ ಹಾಗೂ ವ್ಯಕ್ತಿತ್ವದ ಬೆಳವಣಿಗೆಗೆ ಸಂಬಂಧಿಸಿದಂತೆ ನೂತನ ವಿಷಯಗಳನ್ನೂ, ಗುಣಲಕ್ಷಣಗಳನ್ನೂ ಸಂಗ್ರಹಿಸುವುದಕ್ಕೆ, ಹೆಚ್ಚು ಮಂದಿ ಉತ್ತಮ ಸ್ನೇಹಿತರನ್ನು ಮಾಡಿಕೊಳ್ಳುವುದಕ್ಕೆ, ಉತ್ತಮ ವಿಚಾರಗಳು, ಚಿತ್ರಗಳು ಇತ್ಯಾದಿಗಳನ್ನು ಸಂಗ್ರಹಿಸುವ ಕಾರ್ಯಕ್ಕೆ ತಿರುಗಿಸಿದರೆ ವಂಶಗತವಾಗಿ ಬರುವ ಸಂಗ್ರಹಾಸಕ್ತಿಯ ಸದ್ವಿನಿಯೋಗವಾದಂತಾಗುವುದು.

मन्दोऽप्यमन्दतामेति संसर्गेण विपश्चितः ।

पंकच्छिदः फलस्येव निकषेणाबिलं पयः ॥[13]

ಪಂಡಿತರ ಸಹವಾಸ ಅಥವಾ ಬುದ್ಧಿವಂತರ ಸ್ನೇಹದಿಂದ ದಡ್ಡನೂ ಪಂಡಿತ ಅಥವಾ ಬುದ್ಧಿವಂತನಾಗುತ್ತಾನೆ. ಬಗ್ಗಡವಾದ ನೀರು ಕತಕಬೀಜದ ಸಂಪರ್ಕದಿಂದ ತಿಳಿಯಾಗುವುದಿಲ್ಲವೇ? ಹೀಗೆಯೇ ಮಂದಮತಿಗಳಾದ ರಾಜಕುಮಾರರಿಗೆ ಪಂಡಿತೋತ್ತಮರಾದ ವಿಷ್ಣುಶರ್ಮರು ಗುರುಗಳಾಗಿ ಲಭ್ಯವಾದುದರಿಂದ, ಅವರೂ ರಾಜನೀತಿ ನಿಪುಣರಾಗಲು ಸಾಧ್ಯವಾಯಿತು. ಜೊತೆಗೆ ವ್ಯಕ್ತಿಗೆ ಆದರಣೀಯವೂ, ಸಮಾಜ ಜೀವನಕ್ಕೆ ಹಿತಕರವೂ ಎನಿಸುವ ಗುಣಶೀಲಗಳು ಬೆಳೆಯುತ್ತವೆ.

---

13. **ಸುಭಾಷಿತಮಂಜರೀ**, ಸದ್ಗುಣ-ದುರ್ಗುಣ- ಶ್ಲೋ-221, ಪು-177, मालविकाग्निमित्र, 2-7.(2001) ಕ.ಸಾ.ಪ.ಚಾಮರಾಜಪೇಟೆ. ಬೆಂಗಳೂರು-18

ಮೂಲಸ್ವಭಾವವನ್ನು ಸಂಸ್ಕರಿಸಲು ಏರ್ಪಡಿಸಿಕೊಳ್ಳುವ ಇಂತಹ ಕಾರ್ಯಕ್ರಮಗಳೇ ಶಿಕ್ಷಣ ಸನ್ನಿವೇಶಗಳು. ಕೋಪ, ಬೇಸರ, ವ್ಯಸನ, ಸಂತೋಷ, ಉತ್ಸಾಹ, ಭಯ, ಆಶ್ಚರ್ಯ, ಕಷ್ಟ, ಕೋಮಲತೆ, ಕರ್ಕಶ ಪ್ರೀತಿ ಇತ್ಯಾದಿ ಮನೋರಸಗಳನ್ನು ಸಂವೇದನೆಗಳೆಂದೂ ಕರೆಯುತ್ತಾರೆ. ಒಂದೊಂದು ಸಂವೇದನೆಯೂ ಒಂದೊಂದು ಹುಟ್ಟುಗುಣಕ್ಕೆ ಸಂಬಂಧಿಸಿದುದಾಗಿದೆ. ಈ ಗುಣಗಳು ಕಾರ್ಯಮುಖವಾದಾಗ ಆಯಾ ಮನೋರಸ ಪ್ರಕಾಶಕ್ಕೆ ಬರುವುದು ಎಂದು ಭಾವಿಸಲಾಗಿದೆ. ಅವನ್ನು ಪ್ರತ್ಯೇಕವಾಗಿ ಕಾಣಲಾಗದಿದ್ದರೂ ಅವುಗಳ ಫಲವಾಗಿ ಮಾಡುವ ದೈಹಿಕ ವರ್ತನೆಗಳಂದ ಕಂಡುಕೊಳ್ಳಬಹುದು. ಈ ಸಂವೇದನೆಗಳು ಉಚಿತ ರೀತಿಯಲ್ಲಿ ಸಂಸ್ಕರಿಸುವ ಕಾರ್ಯ ಶಿಕ್ಷಣದ ಒಂದು ಬಹುಮುಖ್ಯ ಅಂಶವಾಗಿದೆ. ವ್ಯಕ್ತಿಗೂ ಸಮಾಜಕ್ಕೂ ಹಿತವೆನಿಸುವ ಅಭ್ಯಾಸಗಳಂತೆ ಮನೋಭಾವವೂ, ದೃಷ್ಟಿಧ್ಯೇಯಗಳೂ ರೂಪುಗೊಳ್ಳಬೇಕು. ಹುಟ್ಟುಗುಣಗಳು ವ್ಯಕ್ತಿತ್ವದ ಮಂದಿರವನ್ನು ರೂಪಿಸಲು ಇಟ್ಟಿಗೆಗಳಂತೆ ಸಹಕಾರಿಯಾದರೆ, ಆ ಇಟ್ಟಿಗೆಗಳನ್ನು ಹದವರಿತು ಬಂಧಿಸುವ ಗಾರೆಯಂತೆ ನೆರವಾಗುತ್ತವೆ.[14]

ಇದನ್ನು ಚೆನ್ನಾಗಿ ಮನಗಂಡಿರುವ ವಿಷ್ಣುಶರ್ಮರು ಪಂಚತಂತ್ರದಲ್ಲಿ ವ್ಯವಸ್ಥಿತವಾದ ಶಿಕ್ಷಣ ಸನ್ನಿವೇಶಗಳನ್ನು ಒದಗಿಸಿ ರಾಜಕುಮಾರರಿಗೆ ಉತ್ತಮ ನೀತಿಪಾಠವನ್ನು ಬೋಧಿಸಿದ್ದಾರೆ. ಇದು ಶಿಕ್ಷಕರಿಗೆಲ್ಲಾ ಒಂದು ಆದರ್ಶವೇ ಸರಿ. ಅದರಲ್ಲೂ ಮಂದಮತಿಗಳಗೆ ಹೇಗೆ ಶಿಕ್ಷಣ ನೀಡಬಹುದು ಎಂಬುದಕ್ಕೆ ಒಂದು ಮಾದರಿಯಾಗಿದೆ. ತೀಕ್ಷ್ಣಮತಿಯ ಮಕ್ಕಳಗೆ ಶಿಕ್ಷಣ ನೀಡುವುದು ಬಹಳ ದೊಡ್ಡ ವಿಚಾರವಲ್ಲ ಅಥವಾ ಸಾಧನೆಯೂ ಅಲ್ಲ. ಮಂದಮತಿಗಳನ್ನು ಅರ್ಥಮಾಡಿಕೊಂಡು ಅವರಿಗೆ ಕಲಿಕೆಯಲ್ಲಿ ಆಸಕ್ತಿಯನ್ನು ಪ್ರೇರೇಪಿಸಿ, ಶಿಕ್ಷಣ ಕೊಟ್ಟು ಸುಶಿಕ್ಷಿತರನ್ನಾಗಿ ಮಾಡುವುದು ಒಂದು ಸವಾಲೇ ಹೌದು. ಅದು ಒಬ್ಬ ಪ್ರಾಮಾಣಿಕ ಶಿಕ್ಷಕನ ಲಕ್ಷಣ. ಇಂಥಹ ಪ್ರಾಮಾಣಿಕ ಕಾರ್ಯವನ್ನು ವಿಷ್ಣುಶರ್ಮರು ಪಂಚತಂತ್ರದಲ್ಲಿ ಬಹಳ ಯಶಸ್ವಿಯಾಗಿ ನಿರ್ವಹಿಸಿದ್ದಾರೆ.

भूतानां प्राणिनः श्रेष्ठाः प्राणिनां बुद्धिजीविनः
बुद्धिमत्सु नराःश्रेष्ठाः नराणां सात्विकाः स्मृताः ।
सात्विकेषु च विद्वाम्सः विद्वत्सु कृतबुद्धयः
कृतबुद्धिषु कर्तारः कर्तृषु ब्रम्हवेदिनः ॥[15]

---

14. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ-3, ಪು-41-44.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4.

15. मनुस्मृतिः – 1 – 96,97.

ಲೋಕದಲ್ಲಿ ಜಡವಸ್ತುಗಳಿಗಿಂತಲೂ ಪ್ರಾಣಿಗಳು ಶ್ರೇಷ್ಠ. ಅವುಗಳಲ್ಲಿ ಬುಧ್ಧಿಯನ್ನುಪಯೋಗಿಸುವ ಇರುವೆ, ನರಿ ಮೋದಲಾದವುಗಳು ಉತ್ತಮ. ಬುಧ್ಧಿಜೀವಿಗಳಲ್ಲಿ ಮಾನವ, ಮಾನವರಲ್ಲಿ ಒಳ್ಳೆಯವರು, ಒಳ್ಳೆಯವರಲ್ಲಿ ವಿದ್ಯಾವಂತರು, ವಿದ್ಯಾವಂತರಲ್ಲಿ ಪರಿಣಿತರು, ಪರಿಣಿತರಲ್ಲಿ ಆಚರಿಸುವವರು, ಆಚರಿಸುವವರಲ್ಲಿ ಬ್ರಹ್ಮಜ್ಞಾನಿಗಳು ಶ್ರೇಷ್ಠ ಎಂಬಂತೆ ವಿಷ್ಣುಶರ್ಮರು ಒಬ್ಬ ಶ್ರೇಷ್ಠ ಶಿಕ್ಷಕರಾಗಿದ್ದಾರೆ.



## 3-2 ಕಲಿಕೆ:- ಅರ್ಥ-ವ್ಯಾಖ್ಯೆ-ವ್ಯಾಪ್ತಿ-ಸ್ವರೂಪ

ಓದು ಬರಹ ಲೆಕ್ಕಾಚಾರಗಳನ್ನೇ **"ಕಲಿವು"** ಎನ್ನುವುದು ಮನೋವಿಜ್ಞಾನದ ಪ್ರಕಾರ ಒಂದು ಸಂಕುಚಿತ ಅರ್ಥವಾಗುತ್ತದೆ. ಮುಂದೆ ಬರುವ ಸಮಸ್ಯೆಗಳನ್ನು ಸೂಕ್ತರೀತಿಯಿಂದ ಎದುರಿಸುವಂತೆ ಮೂಲ ವರ್ತನೆಗಳನ್ನು ಅನುಭವಗಳ ಮೂಲಕ ಮಾರ್ಪಡಿಸುವುದೇ ಶಿಕ್ಷಣ. ಹಾಗೆ ಯಾವೊಂದು ಮೂಲ ವರ್ತನೆ ಮಾರ್ಪಟ್ಟರೂ ಅದು ಕಲಿವಾಗುತ್ತದೆ. ಮಕ್ಕಳು ಓದುಬರಹ, ಲೆಕ್ಕಾಚಾರಗಳ ಜೊತೆಗೆ ಸಾಂಸ್ಕೃತಿಕ ಅಂಶಗಳನ್ನೂ, ಸಂಪ್ರದಾಯಗಳನ್ನೂ ಕಲಿಯುವರು; ಕೌಟುಂಬಿಕ ಜೀವನಕ್ಕೆ ಸಂಬಂಧಿಸಿದ ನಡವಳಿಕೆಗಳನ್ನೂ ಕಲಿಯುವರು; ಪ್ರೀತಿ, ದ್ವೇಷ, ಭೀತಿ, ಆತ್ಮವಿಶ್ವಾಸ- ಇವನ್ನೂ ಬೆಳೆಸಿಕೊಳ್ಳುವರು; ವ್ಯಕ್ತಿತ್ವಕ್ಕೆ ಸಂಬಂಧಿಸಿದ ಅನೇಕ ಗುಣಶೀಲಗಳನ್ನೂ ರೂಪಿಸಿಕೊಳ್ಳುವರು; ತಮ್ಮ ಅಗತ್ಯಗಳನ್ನು ಅರಿತುಕೊಳ್ಳುವರು. ಇವೆಲ್ಲವೂ ಹೊಸದಾಗಿ ಸಿದ್ಧಿಸಿದವೇ. ಆದರೂ ಅವೆಲ್ಲ ವಂಶಗತವಾಗಿ ಬಂದ ಹಲವು ಮೂಲವರ್ತನೆಗಳಿಂದ ಮಾರ್ಪಟ್ಟವು. ಮನೋವಿಜ್ಞಾನ ಬಹು ಮಟ್ಟಿಗೆ ಆ ಮೂಲ ವರ್ತನೆಗಳ ಪರಿಚಯ ಮಾಡಿಕೊಟ್ಟು, ಅವನ್ನು ಉಚಿತ ರೀತಿಯಲ್ಲಿ ಬೆಳೆಸುವ ಕಾರ್ಯವನ್ನು ತೋರಿಸಿ ಕೊಡುತ್ತದೆ. ಅಂದರೆ ಆ ವಿಜ್ಞಾನದ ಬಹು ಭಾಗ ಕಲಿವಿಗೆ ಸಂಬಂಧಪಟ್ಟಂತೆ ರೂಪುಗೊಂಡಿರುತ್ತದೆ.[16] ವಿಷ್ಣುಶರ್ಮರು ಪಂಚತಂತ್ರದ ಮೂಲಕ ಈ ಹಿನ್ನೆಲೆಯಲ್ಲೇ ರಾಜಕುಮಾರರಿಗೆ ಉತ್ತಮ ಶಿಕ್ಷಣವನ್ನು ಒದಗಿಸಿ ವ್ಯಕ್ತಿತ್ವ ನಿರ್ಮಾಣ ಕೈಗೊಂಡಿದ್ದಾರೆ.

प्रसह्य मणिमुद्धरेन्मकरवक्त्रदंष्ट्राङ्कुरा ।
त्समुद्रमपि संतरेत्प्रचलदुर्मिमालाकुलम् ॥
भुजङ्गमपि कोपितं शिरसि पुष्पवद्धारये-
न्न तु प्रतिनिविष्टमूर्खजनचित्तमाराधयेत् ॥[17]

ಮೊಸಳೆಯ ಬಾಯೊಳಗಿನ ಹಲ್ಲುಗಳ ಮಧ್ಯದಲ್ಲಿ ಸಿಕ್ಕಿಕೊಂಡ ರತ್ನವನ್ನೂ ಹಠಾತ್ತಾಗಿ ಹೊರಗೆ ತೆಗೆಯಬಹುದು. ಏಳುತ್ತಿರುವ ಅಲೆಗಳ ಸಾಲುಗಳಿಂದ ಕ್ಷುಬ್ಧವಾದ ಸಮುದ್ರವನ್ನೂ ಕೂಡ ದಾಟಬಹುದು. ಸಿಟ್ಟಿಗೆದ್ದ ಹಾವನ್ನೂ ಕೂಡ ಹೂವಿನಂತೆ ತಲೆಯಲ್ಲಿ ಧರಿಸಬಹುದು. ಆದರೆ ಹಟಮಾರಿಯಾದ ಮೂರ್ಖನ ಮನಸ್ಸನ್ನು ಮೆಚ್ಚಿಸಲಾಗುವುದಿಲ್ಲ. ಅಂದರೆ ಮೂರ್ಖರಿಗೆ ವಿದ್ಯೆ ಕಲಿಸುವುದು ಬಹಳ ಕಷ್ಟದ ಕೆಲಸ.

---

16. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ-11, ಪು-185,186.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4.
17. **ಭರ್ತೃಹರಿಯ ನೀತಿಶತಕ,** ಮೂರ್ಖಪದ್ಧತಿ ಶ್ಲೋ-4.

ಒಬ್ಬರಲ್ಲ, ಇಬ್ಬರಲ್ಲ ಮೂವರು ಮೂರ್ಖ ರಾಜಕುಮಾರರಿಗೆ ರಾಜನೀತಿ ಶಿಕ್ಷಣ ನೀಡಿ, ಸಾರ್ಥಕ ಬದುಕಿನ ನೀತಿನಿಯಮಗಳನ್ನು ಕಲಿಸಿ ಸಾಧನೆಗೈದಿದ್ದಾರೆ ಮೇಧಾವಿ ಶಿಕ್ಷಕರಾದ ವಿಷ್ಣುಶರ್ಮರು.

ಮನೋವಿಜ್ಞಾನದಲ್ಲಿ ಕಲಿವೇ ಪ್ರಧಾನ ಅಧ್ಯಯನದ ಭಾಗವಾಗಿರುತ್ತದೆ. ಕಲಿಕೆ ಎಂದರೆ ವ್ಯಕ್ತಿಯ ವರ್ತನೆಯಲ್ಲಿ ಬದಲಾವಣೆಗಳನ್ನು ತರುವುದಾಗಿದೆ. ಮಾನವರು ತಮ್ಮ ಜೀವನಪೂರ್ತಿ ಅನೇಕ ಬದಲಾವಣೆಗಳನ್ನು ಹೊಂದುತ್ತಿರುತ್ತಾರೆ. ಮಾನವನಿಗೆ ಕಲಿಕೆ ಅನಿವಾರ್ಯ ಹಾಗೂ ಅಗತ್ಯ. ಅವನ ಭವಿಷ್ಯ ಅವನು ಮಾಡಿಕೊಳ್ಳುವ ನಾನಾ ಬಗೆಯ ಕಲಿಕೆಯ ಮೇಲೆಯೇ ಅವಲಂಭಿಸಿರುತ್ತದೆ. ಈ ರೀತಿಯ ಕಲಿಕೆ, ಜ್ಞಾನ, ಕುಶಲತೆ, ಆಸಕ್ತಿ, ನಾನಾ ಬಗೆಯ ಸಾಮರ್ಥ್ಯಗಳು ಮತ್ತು ಅಭಿರುಚಿಗೆ ಸಂಬಂಧಿಸಿರಬಹುದು. ಇವುಗಳನ್ನು ವ್ಯವಸ್ಥಿತ ರೀತಿಯಲ್ಲಿ ಮಕ್ಕಳಿಗೆ ಒದಗಿಸಿಕೊಡುವುದೇ ಶಿಕ್ಷಣದ ಮುಖ್ಯ ಕರ್ತವ್ಯವಾಗಿರುತ್ತದೆ. ಆದುದರಿಂದ ಶಿಕ್ಷಣದ ಯಾವುದೇ ಹಂತದಲ್ಲಿ ಕಲಿಕೆ ಮುಖ್ಯವಾಗುತ್ತದೆ. ವಿವಿಧ ಅನುಭವಗಳಿಂದ ಮಕ್ಕಳು ಕಲಿಯುತ್ತಾರೆ. ಇದರಿಂದ ಅವರ ವರ್ತನೆಯಲ್ಲಿ ಸೂಕ್ತ ಪರಿವರ್ತನೆಯಾಗುತ್ತದೆ. ಇದನ್ನೇ "ಕಲಿಕೆ" ಎನ್ನುತ್ತಾರೆ. ಮೂಲವರ್ತನೆಗಳನ್ನು ಅನುಭವಗಳ ಮೂಲಕ ಮಾರ್ಪಡಿಸುವುದೇ ಶಿಕ್ಷಣ. **"Education is the modification of behavior."** ಕಲಿಕೆಗೆ ಸರ್ವಮಾನ್ಯ ವ್ಯಾಖ್ಯೆಯನ್ನು ನೀಡುವುದು ಬಹಳ ಕಷ್ಟದ ಕೆಲಸ. ಏಕೆಂದರೆ ವಿವಿಧ ಸಿದ್ಧಾಂತಗಳನ್ನು ಮಂಡಿಸಿರುವ ಮನೋವಿಜ್ಞಾನಿಗಳು ಬೇರೆ ಬೇರೆ ದೃಷ್ಟಿಕೋನದಿಂದ ಕಲಿಕೆಗೆ ತಮ್ಮದೇ ಆದ ವ್ಯಾಖ್ಯಾನ ನೀಡಿರುತ್ತಾರೆ. ಕೆಲವು ಮುಖ್ಯ ವ್ಯಾಖ್ಯೆಗಳೆಂದರೆ:–[18]

1. "ಅನುಭವಗಳಿಂದ ವರ್ತನೆಯಲ್ಲುಂಟಾಗುವ ಬದಲಾವಣೆಯೇ ಕಲಿಕೆ." **GATES**

2."ತರಬೇತಿ ಮತ್ತು ಅಭ್ಯಾಸಗಳ ಮೂಲಕ ವರ್ತನೆಯ ಉಗಮ ಮತ್ತು ಮಾರ್ಪಾಟನ್ನು ಉಂಟುಮಾಡುವ ಪ್ರಕ್ರಿಯೆಯೇ ಕಲಿಕೆ." **CRONBACK.LEE..J.**

3. "ಒಬ್ಬ ವ್ಯಕ್ತಿಯ ವರ್ತನೆ, ಒಳನೋಟ, ಆಸಕ್ತಿ, ಚಿಂತನೆ ಇವುಗಳಲ್ಲಿ ಉಂಟಾಗುವ ಬದಲಾವಣೆಯೇ ಕಲಿಕೆ." **BLAIR & SIMPSON .**

4. "ಪೂರ್ವ ವರ್ತನೆಯ ಆಧಾರದ ಮೇಲೆ ವ್ಯಕ್ತಿಯ ವರ್ತನೆಯಲ್ಲಿ ಹೆಚ್ಚು ಕಾಲ ನೆಲಸಿರುವಂತಹ ಬದಲಾವಣೆಯೇ ಕಲಿಕೆ.," **MELVIN H. MARX**

5. "ಸನ್ನಿವೇಶದ ಅವಶ್ಯಕತೆಗಳನ್ನು ಪೂರೈಸಲು ವರ್ತನೆಯಲ್ಲಿ ಆಗುವ ಎಲ್ಲಾ ಮಾರ್ಪಾಟುಗಳನ್ನು ಕಲಿಕೆ ಎನ್ನುವರು. **GARDNER MURPHY**

---

18. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–5, ಪು–222,223.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

6. " ಪ್ರಯತ್ನ ಮತ್ತು ಅನುಭವದ ಪರಿಣಾಮವಾಗಿ ಉಂಟಾಗುವ ಶಾಶ್ವತ ಬದಲಾವಣೆಯೇ ಕಲಿಕೆ.

**WALTER V. BINGHAM**

ಮೇಲಿನ ವ್ಯಾಖ್ಯೆಗಳನ್ನು ವಿಶ್ಲೇಷಿಸಿದಾಗ ಕಲಿಕಾ ಪ್ರಕ್ರಿಯೆಯ ಕೆಲವು ಪ್ರಮುಖ ಅಂಶಗಳನ್ನು ಕಾಣಬಹುದು. ಅವುಗಳೆಂದರೆ, ಅನುಭವದ ಪರಿಣಾಮವಾಗಿ ವರ್ತನೆಯಲ್ಲಾಗುವ ಶಾಶ್ವತವಾದ ಬದಲಾವಣೆಗಳೇ ಕಲಿಕೆ. ಆದರೆ ವರ್ತನೆಯ ಎಲ್ಲಾ ಬದಲಾವಣೆಗಳೂ ಕಲಿಕೆಯಲ್ಲ. ಔಷಧಿಗಳು, ಮಾದಕ ಪದಾರ್ಥಗಳು ಆಯಾಸ, ಪರಿಪಕ್ವನ, ಅಪಘಾತಗಳು – ಇವುಗಳಿಂದುಂಟಾಗುವ ಬದಲಾವಣೆ ಶಾಶ್ವತವಾಗಿದ್ದರೂ ಸಹ ಅದನ್ನು 'ಕಲಿಕೆ' ಎನ್ನಲಾಗುವುದಿಲ್ಲ. ಕಲಿಕೆಯನ್ನು ನೇರವಾಗಿ ವೀಕ್ಷಿಸಲು ಸಾಧ್ಯವಾಗದಿದ್ದರೂ, ಅದನ್ನು ವ್ಯಕ್ತಿಯ ಚಟುವಟಿಕೆಗಳಲ್ಲಿ ಕಾಣಬಹುದಾಗಿದೆ. "ಕಲಿಕೆ" ಎನ್ನುವುದು ವ್ಯಕ್ತಿಯ ಕೆಲಕಾಲ ನೆಲಸಿರುವಂತಹ ಸ್ವರೂಪದ ಬದಲಾವಣೆಗಳನ್ನು ಒಳಗೊಳ್ಳುತ್ತದೆ. ಕಲಿಕೆ ಎನ್ನುವುದು ಅಭ್ಯಾಸ ಮತ್ತು ಅನುಭವಗಳ ಮೇಲೆ ಅವಲಂಬಿಸಿರುವಂಥಾದ್ದು. ಹೊಸ ವರ್ತನೆಗಳನ್ನು, ಜ್ಞಾನವನ್ನು, ಕೌಶಲ್ಯವನ್ನು, ಗುರಿಗಳನ್ನು ಪರಿಚಯ ಮಾಡಿಕೊಳ್ಳುವುದು ಮೊದಲ ಭಾಗವಾದರೆ, ಹಾಗೆ ಕಲಿತದ್ದನ್ನು ದೃಢಪಡಿಸಿಕೊಳ್ಳುವುದು ಎರಡನೆಯ ಭಾಗ. ನೂತನ ವಿಷಯಗಳನ್ನು ಹೊಸ ಸನ್ನಿವೇಶಗಳಿಗೆ ಅನ್ವಯಿಸುವ ಜ್ಞಾನ, ಕಾರ್ಯವಿಧಾನ ಮುಂತಾದವುಗಳು ಹೆಚ್ಚು ಪ್ರಯೋಜನಕಾರಿಯಾಗಬೇಕಾದರೆ ಅವು ವ್ಯಕ್ತಿಯ ಇಷ್ಟದಂತೆ ಸುಲಭವಾಗಿ ನಡೆಯುವಂತೆ ಪಳುಗಬೇಕು.

ಒಟ್ಟಿನಲ್ಲಿ ಕಲಿಕೆ ಅಭ್ಯಾಸ ಮತ್ತು ಅನುಭವಗಳಿಂದ ಉಂಟಾಗುವ ವರ್ತನೆಯಲ್ಲಿನ ಬದಲಾವಣೆ ಅಥವಾ ಮಾರ್ಪಾಟು ಎಂದಾಯಿತು. 'ಕಲಿಕೆ' ವಿಕಾಸವನ್ನು ಸಹಕರಿಸುವ ಅಥವಾ ಬೆಂಬಲಿಸುವ ಒಂದು ಪ್ರಕ್ರಿಯೆ ಎಂದು ಹೇಳಬಹುದು. ಆದ್ದರಿಂದ ಶೈಕ್ಷಣಿಕ ಪ್ರಕ್ರಿಯೆಗಳನ್ನು ಬೆಳವಣಿಗೆ ಮತ್ತು ವಿಕಾಸದ ಪ್ರಕ್ರಿಯೆಗಳೊಂದಿಗೆ ಸಮನ್ವಯಗೊಳಿಸಬೇಕೆಂಬುದನ್ನು ಅಧ್ಯಾಪಕರು ಸದಾ ಸ್ಮರಣೆಯಲ್ಲಿಟ್ಟುಕೊಳ್ಳುವುದು ಒಳ್ಳೆಯದು. ಶೈಕ್ಷಣಿಕ ಮನೋವಿಜ್ಞಾನಿಗಳು ಕಲಿಕೆಯಲ್ಲಿ ಹಲವಾರು ಘಟಕಗಳನ್ನು ಗುರುತಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದವೆಂದರೆ:–[19]

---

19. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–5, ಪು–224,225.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

**1. ಕಲಿಯುವ ವ್ಯಕ್ತಿ–**

ಕಲಿಯಲು ಬರುವ ವ್ಯಕ್ತಿ ತನ್ನದೇ ಆದ ವ್ಯಕ್ತಿತ್ವ ಮತ್ತು ಅನುಭವಗಳನ್ನು ಪಡೆದಿರುತ್ತಾನೆ. ಅವನಿಗೆ ತನ್ನದೇ ಆದ ಆಸೆ, ಅವಶ್ಯಕತೆಗಳು, ಶಕ್ತಿಸಾಮರ್ಥ್ಯಗಳು ಹಾಗೂ ಆಸಕ್ತಿ ಅಭಿರುಚಿಗಳಿರುತ್ತವೆ. ಇವುಗಳೊಂದಿಗೆ ಅವನು ಕಲಿಯುವ ಸನ್ನಿವೇಶಕ್ಕೆ ಬರುತ್ತಾನೆ. ಅವನಿಗೆ ಕಲಿಯಲು ಆಸಕ್ತಿಯಿರಬಹುದು ಆದರೆ ಕಲಿಯುವ ಸಾಮರ್ಥ್ಯ ವಿಲ್ಲದಿರಬಹುದು. ಕಲಿಯುವ ಉದ್ದೇಶವಿರಬಹುದು, ಆದರೆ ಅದಕ್ಕೆ ಶಾರೀರಿಕ, ಮಾನಸಿಕ, ಸಾಮಾಜಿಕ ಅಥವಾ ಇನ್ನಾವುದೇ ಅಡಚಣೆ ಇರಬಹುದು.

**2. ಕಲಿಯುವ ಸನ್ನಿವೇಶ:–**

ಕಲಿಕೆಯ ಸನ್ನಿವೇಶ ಸಂದರ್ಭಗಳು ಒಂದೊಂದು ವ್ಯಕ್ತಿಗೂ ಭಿನ್ನವಾಗಿರುತ್ತದೆ. ಒಂದೇ ಸನ್ನಿವೇಶ ಅದೇ ವ್ಯಕ್ತಿಗೆ ಬೇರೆ ಬೇರೆ ಕಾಲದಲ್ಲಿ ಭಿನ್ನವಾಗಿರಬಹುದು ಅಂದರೆ ಕಲಿಕೆಯ ಸನ್ನಿವೇಶ ಕಲಿಯುವ ವ್ಯಕ್ತಿಯ ಅವಿಭಾಜ್ಯ ಅಂಗವಾಗಿರುತ್ತದೆ. (ಮತ್ತು ಕಲಿಯಬೇಕಾದ ವಸ್ತುವನ್ನವಲಂಭಿಸಿರುತ್ತದೆ.

**3. ಕಲಿಯುವ ಪ್ರಕ್ರಿಯೆ:–**

ಇದು ಒಂದು ಸಂಕೀರ್ಣ ವಿಚಾರ. ಕಲಿಯುವ ಪ್ರಕ್ರಿಯೆ ಹೀಗೇ ನಡೆಯುತ್ತದೆ ಎಂದು ಹೇಳುವುದು ತುಂಬಾ ಕಷ್ಟ. ಸಾಮಾನ್ಯವಾಗಿ ಕಲಿಯುವ ಪ್ರಕ್ರಿಯೆ ಕಲಿಯುವ ವ್ಯಕ್ತಿ, ಕಲಿಕೆಯ ಸನ್ನಿವೇಶ ಮತ್ತು ಕಲಿಯಬೇಕಾದ ವಸ್ತುವನ್ನವಲಂಭಿಸಿರುತ್ತದೆ.

**4. ಕಲಿಸುವ ವ್ಯಕ್ತಿ.**

ಕಲಿಕೆಯು ಕಲಿಸುವ ಅಧ್ಯಾಪಕನನ್ನು ಅವಲಂಭಿಸಿರುತ್ತದೆ. ಇಲ್ಲಿ ಅವನ ಹಿನ್ನೆಲೆ, ಅನುಭವ, ಸಾಮರ್ಥ್ಯಗಳು ಮತ್ತು ಅವನ ವ್ಯಕ್ತಿತ್ವ ಪ್ರಧಾನ ಪಾತ್ರ ವಹಿಸುತ್ತವೆ. ವಿದ್ಯಾರ್ಥಿಯು ಶಾಲೆ ಅಥವಾ ಗುರುಕುಲದ ಒಳಗೆ ಮತ್ತು ಹೊರಗೆ ಕಲಿತದ್ದಕ್ಕೆಲ್ಲಾ ಅಧ್ಯಾಪಕರೇ ನೇರವಾಗಿ ಕಾರಣರಲ್ಲದಿದ್ದರೂ ಕಲಿಕೆಯ ನಿರ್ದೇಶನ, ಪ್ರೇರಣೆ, ಅಭಿಪ್ರೇರಣೆ, ಅವಧಾನ, ಅವಲೋಕನ ಮತ್ತು ಲಕ್ಷ್ಯಗಳಲ್ಲಿ ಅವರ ಪಾತ್ರ ಮಹತ್ವದ್ದಾಗಿರುತ್ತದೆ." ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" ಎಂಬ ದಾಸವಾಣಿಯಂತೆ ಗುರುವಿನ ಆಶೀರ್ವಾದ ಮಹತ್ವಪೂರ್ಣವಾದದ್ದು.

**೨. ಕಲಿಯುವ ವಸ್ತು:**

ಕಲಿಯಬೇಕಾದ ವಸ್ತು ಕಲಿಯುವ ಹಾಗೂ ಕಲಿಸುವ ಕ್ರಮವನ್ನು ನಿರ್ಧರಿಸುತ್ತದೆ. ಕಲಿಯುವ ವಸ್ತು ವ್ಯಕ್ತಿಯ ವಿವಿಧ ವಯೋಮಾನದಲ್ಲಿ ಕಲಿಯಬೇಕಾದ ಅಂಶಗಳನ್ನು ಸೂಚಿಸುತ್ತದೆ.

**ಕಲಿಕೆಯ ಬಗ್ಗೆ ಗಮನದಲ್ಲಿಟ್ಟುಕೊಳ್ಳಬೇಕಾದ ಕೆಲವು ಅಂಶಗಳು ಹೀಗಿವೆ:–**

ಕಲಿಕೆ ವ್ಯಾಪಕವಾದುದು. ಅದು ಜೀವನದ ಎಲ್ಲಾ ಪ್ರಾಕಾರಗಳಿಗೂ ಸಂಬಂಧಪಟ್ಟಿರುತ್ತದೆ. ಅದು ವ್ಯಕ್ತಿಯ ಬೌದ್ಧಿಕ, ಸಾಮಾಜಿಕ ಹಾಗೂ ಸಂವೇಗಾತ್ಮಕ ವಲಯಗಳಿಗೆ ಸಂಬಂಧಿಸಿರುತ್ತದೆ. ಕಲಿಕೆ ವರ್ತನೆಯ ನಿರಂತರ ಬದಲಾವಣೆ. ಅದು ಜೀವನಪೂರ್ತಿ ನಡೆಯುತ್ತಲೇ ಇರುತ್ತದೆ. ಅದಕ್ಕೇ ಹೇಳುವುದು "ಜೀವನಪೂರ್ತಿ ಕಲಿಯುವುದು ಇದ್ದೇ ಇದೆ" ಎಂದು. ಕಲಿಕೆ ವಿಕಾಸಾತ್ಮಕ ಹಾಗೂ ವರ್ತನೆಯ ಸರಿಯಾದ ರೂಪ ಕಲಿಕೆಗಳು ಯಾವಾಗಲೂ ಗುರಿಗಳಿಗೆ ಸಂಬಂಧಿಸಿದ್ದು. ಈ ಗುರಿಗಳನ್ನು ವೀಕ್ಷಣಾ ಸಾಧ್ಯವಾದ ವರ್ತನೆಗಳನ್ನಾಗಿ ನಿರೂಪಿಸಬಹುದು. ಕಲಿಕೆಗೂ ಆಸಕ್ತಿಗಳಿಗೂ ನಿಕಟವಾದ ಸಂಬಂಧವಿದೆ. ಯಾವುದೇ ವ್ಯಕ್ತಿ ಅವನಿಗೆ ಆಸಕ್ತಿಯಿರುವ ವಿಷಯಗಳನ್ನು ಬೇಗ ಕಲಿಯುತ್ತಾನೆ. ಕಲಿಕೆಯು ಸಿದ್ಧತೆ ಮತ್ತು ಪ್ರೇರಣೆಯನ್ನು ಅವಲಂಭಿಸಿರುತ್ತದೆ.[20]

ಕಲಿಯುವ ಕ್ರಮವನ್ನನುಸರಿಸಿ ಕಲಿವನ್ನು ಸ್ಥೂಲವಾಗಿ ನಾಲ್ಕು ವಿಧಗಳಾಗಿ ವಿಂಗಡಿಸಬಹುದು. ಇವುಗಳು ಬಹಳ ಮುಖ್ಯವಾಗಿದ್ದು, ಇದರ ಪರಿಚಯದಿಂದ ಶಿಕ್ಷಕರ ಕಾರ್ಯಕ್ಕೆ ತುಂಬಾ ಸಹಕಾರಿಯಾಗುವುದು.

**1. ಪರಿವರ್ತನ ರೀತಿಯ ಕಲಿವು.**

ವ್ಯಕ್ತಿಯ ಮೂಲ ಸ್ವಭಾವಗಳನ್ನು ಹಲವು ಸನ್ನಿವೇಶಗಳ ರಚನೆಯಿಂದ ಮಾರ್ಪಡಿಸುವುದು ಸಾಧ್ಯ. ಈ ಮೂಲಕ ಸಾಧ್ಯವಾಗುವ ಕಲಿವನ್ನು ಪರಿವರ್ತನಾ ರೀತಿಯ ಕಲಿವೆನ್ನುತ್ತೇವೆ.

**2. ಅನುಕರಣ ರೀತಿಯ ಕಲಿವು.**

ಚಿಕ್ಕವರಿರುವಾಗ ಮಕ್ಕಳು ದೊಡ್ಡವರಾಡುವ ಮಾತನ್ನು, ಮಾಡುವ ಕೆಲಸವನ್ನು ನೋಡಿ ತಾವೂ ಅದರಂತೆ ಮಾಡಲು ಪ್ರೇರಿತರಾಗಿ, ಆಚರಿಸಿ ಕಲಿಯುತ್ತಾರೆ. ಇದೇ ಅನುಕರಣ ರೀತಿಯ ಕಲಿವು.ಸಮಾಜದ ಆಚಾರ– ವ್ಯವಹಾರಗಳನ್ನು, ಸಂಪ್ರದಾಯಗಳನ್ನು, ಆದರ್ಶ ಪುರುಷರ ದೃಷ್ಟಿಧ್ಯೇಯಗಳನ್ನು ಕಲಿಯಲು ಅನುಕರಣದಿಂದ ಸಾಧ್ಯವಾಗುತ್ತದೆ. ಅನುಕರಣ ಎರಡು ರೀತಿಯದ್ದಾಗಿದೆ. 'ಪ್ರಾಸಂಗಿಕ' ಮತ್ತು 'ಉದ್ದೇಶಪೂರ್ವಕ' ಅನುಕರಣ.

---

20. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–5, ಪು–224,225.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

**೩. ತಿದ್ದಿಕೊಂಡು ಕಲಿಯುವಿಕೆ**.

ಯಾವುದಾದರೊಂದು ಹೊಸ ಕೆಲಸ ಮಾಡಬೇಕಾಗಿ ಬಂದಾಗ ಆಚರಿಸಲು ಪ್ರಯತ್ನಿಸಿ, ಸರಿಯಾಗದಿದ್ದರೆ ತಿದ್ದಿಕೊಂಡು ಪುನಃ ಆಚರಿಸಿ, ಆಕಸ್ಮಿಕವಾಗಿ ಸರಿಯಾದ ರೀತಿಯಲ್ಲಿ ಒಮ್ಮೆ ಮಾಡಿಬಿಟ್ಟರೆ, ಅದನ್ನು ಅನಂತರ ದೃಢಪಡಿಸಿಕೊಳ್ಳುತ್ತೇವೆ. ಈ ರೀತಿಯ ಕಲಿವಿಗೆ ತಿದ್ದಿಕೊಂಡು ಕಲಿಯುವಿಕೆ ಎನ್ನುತ್ತೇವೆ. ಹಾಗೆ ಕಲಿಯುವಾಗ ನಮ್ಮ ಮುಂದಿರುವ ಸಮಸ್ಯೆಯನ್ನು ಪರೀಕ್ಷಿಸಿ ಅದನ್ನು ಬಿಡಿಸಬೇಕಾದ ಕ್ರಮವನ್ನು ವಿವೇಚಿಸಿಕೊಂಡು ಕಾರ್ಯಮುಖವಾಗುವುದು ಕಂಡು ಬರುವುದಿಲ್ಲ. ಯಾವ ಪ್ರಾಣಿಗಳಲ್ಲೂ ವಿವೇಚನೆಯಿಂದ ಕಲಿಯುವುದು ಕಂಡು ಬರುವುದಿಲ್ಲ ಎಂದು ಥಾರ್ನ್ಡೈಕರು ವಾದಿಸಿರುವರು. ಆದರೆ ಮೆಕ್ಡೂಗಲ್, ಕಾಯ್ಲರ್ ಮುಂತಾದವರು ಅವುಗಳಲ್ಲೂ ವಿವೇಚನೆ ಉಂಟೆಂದು ಹೇಳಿದ್ದಾರೆ. ಇದನ್ನು ಸಮರ್ಥಿಸಲು ಕಾಯ್ಲರ್ ರವರು ಅನೇಕ ಪ್ರಯೋಗಗಳನ್ನು ನಡೆಸಿರುವರು. ಒಂದು ಚಿಂಪಾಂಜಿ ಜಾತಿಯ ಕಪಿಯು ಗಳುವಿಗೆ ಗಳುವನ್ನು ಸೇರಿಸಿದರೆ ಉದ್ದವಾಗುವುದನ್ನು ಅದು ಕಲಿತರೂ, ಆ ಗಳು ಬಾಳೆಹಣ್ಣನ್ನು ಪಡೆಯಲು ಅವಶ್ಯಕವೆಂಬುದನ್ನು ಅರಿತುಕೊಂಡದ್ದು ವಿವೇಚನೆಯಿಂದ ಎಂದು ಕಾಯ್ಲರ್ ವಾದಿಸಿರುವರು.[21]

ಥಾರ್ನ್ಡೈಕರು ನಡೆಸಿದ ಇನ್ನೊಂದು ಪ್ರಯೋಗದಲ್ಲಿ ಬೆಕ್ಕು ಅಗುಣಿ ತೆಗೆಯುವುದನ್ನು ಮೊದಲನೆಯ ಸಲ ಅದು ಕಲಿತದ್ದು ವಿವೇಚನೆಯಿಂದಲ್ಲ, ಆಕಸ್ಮಿಕವಾಗಿ. ಇವರು ಈ ಪ್ರಯೋಗದ ಆಧಾರದ ಮೇಲೆ ಪ್ರಾಣಿಗಳಲ್ಲಿ ತಿದ್ದಿಕೊಂಡು ಕಲಿಯುವುದು ಮಾತ್ರ ಸಾಧ್ಯ ಎಂದು ವಾದಿಸಿದರು. ಕೆಲವರು ಆ ಬೆಕ್ಕಿನಲ್ಲೂ ವಿವೇಚನೆ ಇತ್ತು ಎಂದು ವಾದಿಸಿರುವರು. ಏಕೆಂದರೆ ಒಮ್ಮೆ ಆಕಸ್ಮಿಕವಾಗಿ ಅದನ್ನು ಕಲಿತರೂ ಮುಂದೆ ಅದನ್ನು ದೃಢಪಡಿಸಿಕೊಳ್ಳುವಾಗ, ಅದೇ ಸರಿಯಾದ ರೀತಿಯೆಂದು ಅದಕ್ಕೆ ತೋರಿರಬೇಕು. ಆದ್ದರಿಂದ ಅದರಲ್ಲೂ ವಿವೇಚನೆ ಇದೆ ಎಂದು ಕಂಡು ಬರುತ್ತದೆ.

**4. ವಿವೇಚನಾ ರೀತಿಯ ಕಲಿವು**.

ನಮ್ಮ ಮುಂದಿರುವ ಕೆಲಸವನ್ನು ಆರಂಭಿಸುವುದಕ್ಕೆ ಮೊದಲು ಅದನ್ನು ಹೇಗೆ ಮಾಡಬಹುದೆಂಬ ಆಲೋಚನೆ ನಡೆಸಿ ಕ್ರಮವನ್ನರಿತುಕೊಂಡು, ಅನಂತರ ಅದನ್ನು ಆರಂಭಿಸಿದರೆ ಆ ಕಾರ್ಯ ಬೇಗ ಯಶಸ್ವಿಯಾಗಬಲ್ಲದು. ಅಂತಹ ಕಲಿವನ್ನು ವಿವೇಚನಾ ರೀತಿಯ ಕಲಿವೆನ್ನುತ್ತೇವೆ.

---

21. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–11, ಪು–188–194.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

**WOLFGANG KOHLER German Psychologist and Phenomenologist**ರವರು ಪ್ರಾಣಿಗಳಲ್ಲಿ ಅಂಥ ವಿವೇಚನೆ ಇದೆಯೆಂದೂ, **E.L.THONDIKE** ರವರು ಇಲ್ಲವೆಂದೂ ಹೇಳುವರು. ಆದರೆ ವಾಸ್ತವವಾಗಿ ಇವರಿಬ್ಬರ ಅಭಿಪ್ರಾಯಕ್ಕೂ ಮಧ್ಯಸ್ಥವಾಗಿದೆ ಅಂದರೆ" ಯಾವುದು ತಿದ್ದಿಕೊಂಡು ಕಲಿಯುವ ರೀತಿಯೆಂದು ಒಬ್ಬರು ಭಾವಿಸುತ್ತಾರೋ ಅದರಲ್ಲೂ ವಿವೇಚನೆ ಇದ್ದೇ ಇದೆ. ಎಂದು. ಮಾನವನ ಕಲಿವಿನ ಕ್ರಮದಲ್ಲಿ ವಿವೇಚನೆ ಪ್ರಧಾನ ಪಾತ್ರ ವಹಿಸುವುದಾದರೂ ತಿದ್ದಿಕೊಂಡು ಕಲಿಯುವ ರೀತಿಯೂ ಇದೆ. ಮೊದಮೊದಲಿನ ಕಲಿವಿನಲ್ಲಿ ತಿದ್ದಿಕೊಳ್ಳುವಿಕೆ ಪ್ರಧಾನವಾಗಿದ್ದರೂ ಅದು ಪ್ರಬುದ್ಧವಾದಂತೆ ವಿವೇಚನೆಯೇ ಹೆಚ್ಚಾಗಿ ಕಂಡುಬರುತ್ತದೆ. ಇವೆರಡು ರೀತಿಗಳೂ ಕಲಿವಿನ ಎರಡು ಧ್ರುವಗಳಂತಿವೆ.

ವರ್ತನೆಗಳು ಸ್ಥಿರಗೊಂಡು ವ್ಯಕ್ತಿಯ ಜೀವನದಲ್ಲಿ ಪಾತ್ರ ವಹಿಸುವಂತಾಗಬೇಕು. ಆಗ ಮಾತ್ರ ಕಲಿವು ಪೂರ್ಣವಾಗುವುದು. ಹಾಗೆ ವರ್ತನೆಗಳನ್ನು ಮಾರ್ಪಡಿಸಿ ದೃಢಗೊಳಿಸಲು ಸಹಕರಿಸುವ ಸನ್ನಿವೇಶಗಳೇ ಕಲಿವಿನ ನಿಯಮಗಳು. ಉಪಾಧ್ಯಾಯರು ತಮ್ಮ ಪಾಠಬೋಧನೆಯ ಕ್ರಮವನ್ನು ಕಲಿವಿನ ನಿಯಮಗಳನ್ನು ಅನುಸರಿಸಿಯೇ ರೂಪಿಸಿಕೊಳ್ಳಬೇಕು. ಕಲಿವನ್ನು ಸಾಧಿಸದ ಬೋಧನೆ ಬೋಧನೆಯೇ ಅಲ್ಲ. ಕಲಿವು ಖಚಿತವಾಗಿ ಸಿದ್ಧಿಸುವಂತೆ ಬೋಧನಕ್ರಮ ರೂಪುಗೊಳ್ಳಬೇಕು. ಅಂಥ ಉಚಿತ ಬೋಧನ ಕ್ರಮವನ್ನು ಕಂಡುಕೊಳ್ಳಲು ಥಾರ್ನ್ಡೈಕರು ಕೆಲವು ನಿಯಮಗಳನ್ನು ರೂಪಿಸಿದ್ದಾರೆ. ಅವುಗಳೆಂದರೆ:–[22]

1. **ಆಚರಣೆಯ ನಿಯಮ**:– ನಾವು ಯಾವ ವರ್ತನೆಯನ್ನು ಆಚರಿಸುತ್ತೇವೆಯೋ ಆ ವರ್ತನೆ ದೃಢಗೊಂಡು ಕಲಿವು ಸಿದ್ಧಿಸುತ್ತದೆ.

2. **ಫಲಾಫಲಗಳ ನಿಯಮ**:–ಸಂತೋಷವನ್ನು, ಜಯವನ್ನು ತರತಕ್ಕದ್ದನ್ನು ಕಲಿಯುತ್ತೇವೆ. ಅಹಿತ, ನೋವು, ಸೋಲು ಇವುಗಳನ್ನು ಹುಟ್ಟಿಸುವಂಥದ್ದನ್ನು ಕಲಿಯಲಾರೆವು.

3. **ಸಿದ್ಧತೆಯ ನಿಯಮ**:– ಸಿದ್ಧವಿರುವಾಗ ಕಲಿಯುತ್ತೇವೆ. ಸಿದ್ಧವಿಲ್ಲದಿರುವಾಗ ಕಲಿಯಲಾರೆವು.

4. **ಉದ್ದೇಶದ ನಿಯಮ**:– ಉದ್ದೇಶಪೂರ್ವಕವಾದದ್ದನ್ನು ನಾನು ಕಲಿಯುತ್ತೇವೆ. ಉದ್ದೇಶರಹಿತವಾದದ್ದನ್ನು ಕಲಿಯುವುದು ಕಷ್ಟ. ಇದರಂತೆ ಕಲಿಯುವ ನಿಯಮಗಳನ್ನು ಅನುಸರಿಸಿಯೇ ಬೋಧಿಸುವ ಕ್ರಮ ರೂಪುಗೊಳ್ಳಬೇಕು. ಆಗ ಮಾತ್ರ ಬೋಧಿಸಿದ್ದನ್ನು ವಿದ್ಯಾರ್ಥಿಗಳು ಕಲಿಯಬಲ್ಲರು.

---

22. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–11, ಪು–196–200.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

## ೩-೩. ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳು.

## ಅಭಿಪ್ರೇರಣೆ – ಅವಧಾನ

ಶಿಕ್ಷಣ ವ್ಯವಸ್ಥೆಯಲ್ಲಿ ಬಹುಮಟ್ಟಿಗೆ ಶಿಕ್ಷಕರು ತಮ್ಮ ನಿಯಂತ್ರಣಕ್ಕೆ ಒಳಪಟ್ಟ ವಿದ್ಯಾರ್ಥಿಗಳ ಮನೋವ್ಯಾಪಾರಗಳನ್ನು ಸೂಕ್ತ ರೀತಿಯಲ್ಲಿ ಬಳಸಿಕೊಳ್ಳುವುದಾಗಿದೆ. ಆ ಮೂಲಕ ಕಲಿವು ಆದಷ್ಟು ಬೇಗ ಪರಿಣಾಮಕಾರಿಯಾಗಿ ಸಿದ್ಧಿಸುವಂತೆ ಮಾಡಬೇಕಾವುದು. ಅಂತಹ ಅಂಶಗಳಲ್ಲಿ ಕೆಲವು ಮುಖ್ಯವಾದವುಗಳನ್ನು ಗಮನಿಸೋಣ.[23]

- ~ **ಕಲಿವಿಗೆ ಸಿದ್ಧತೆ.**
- ~ **ಕಲಿವಿಗೆ ಪ್ರೇರಕಶಕ್ತಿ**
- ~ **ಕಲಿವಿನ ಮೇಲೆ ಮನೋಭಾವಗಳ ಪರಿಣಾಮ.**
- ~ **ಕಲಿವಿಗೆ ಅನುಭವಗಳ ವ್ಯವಸ್ಥೆ ಮತ್ತು ಸಂವಿಧಾನದ ಅಚ್ಚುಕಟ್ಟು.**
- ~ **ಕಲಿವಿನಲ್ಲಿ ಅಭ್ಯಾಸದ ಪಾತ್ರ.**
- ~ **ಕಲಿವಿಗೆ ಸಾಮಾಜಿಕ ಸನ್ನಿವೇಶಗಳು**
- ~ **ಮನಸ್ಸಿನ ಸಂಸ್ಕಾರ(ಶಿಸ್ತು)ಮತ್ತು ಕಲಿವಿನಲ್ಲಿ ಅದರ ಪಾತ್ರ.**
- ~ **ಆಯಾಸ ಮತ್ತು ಕಲಿವಿನ ಮೇಲೆ ಬೀರುವ ಪರಿಣಾಮ.**
- ~ **ಆಸಕ್ತಿ ಮತ್ತು ಅವಧಾನ.**
- ~ **ದೌರ್ಬಲ್ಯಗಳು ಮತ್ತು ಚಿಕಿತ್ಸಾ ಶಿಕ್ಷಣ.**

---

೨೩. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿಮನೋವಿಜ್ಞಾನ, ಅ-೧೨, ಪು-೨೨೨,೨೨೩.(೧೯೬೨) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-೪

## ಅಭಿಪ್ರೇರಣೆ (MOTIVATION)

ನಮ್ಮ ವರ್ತನೆಗಳಿಗೆಲ್ಲ ಮನಶ್ಶಕ್ತಿಯೇ (ಕಾರಣ) ಆಧಾರ. ಅದೇ ಚಾಲಕ ಶಕ್ತಿ. ಆ ಚಾಲಕ ಶಕ್ತಿ ನಮ್ಮ ಮನಸ್ಸಿನ ಕೆಲವು ಗತಿಗಳೊಡನೆ ಸಂಬಂಧಿಸಿದೆ.ಇದನ್ನೇ ಆಂಗ್ಲಭಾಷೆಯಲ್ಲಿ **Motivation** ಎಂದು ಕರೆಯುತ್ತಾರೆ.ಈ ಪದವು ಲ್ಯಾಟಿನ್ ಮೂಲ ಮೂವರ್ಸ್ ಎಂಬ ಪದದಿಂದ ಬಂದಿದೆ. ಇದರ ಅರ್ಥ ಚಲಿಸುವಂತೆ ಮಾಡು, ಕಾರ್ಯೋನ್ಮುಖನಾಗುವಂತೆ ಮಾಡು ಎಂದಾಗಿರುತ್ತದೆ. ಇದನ್ನೇ ಕನ್ನಡ ಭಾಷೆಯಲ್ಲಿ ಅಭಿಪ್ರೇರಣೆ ಎಂದು ಕರೆಯುತ್ತೇವೆ. ಇದರ ಅರ್ಥ ವ್ಯಕ್ತಿಯನ್ನು ಕಾರ್ಯೋನ್ಮುಖನನ್ನಾಗಿ ಅಥವಾ ಕ್ರಿಯಾಶೀಲನನ್ನಾಗಿ ಮಾಡುವಂತಹ ಪ್ರಕ್ರಿಯೆಯಾಗಿದೆ.[24]

"ಅಭಿಪ್ರೇರಣೆ ಎಂದರೆ ನಿರ್ದಿಷ್ಟ ಗುರಿಯೆಡೆಗೆ ಕಾರ್ಯೋನ್ಮುಖನಾಗುವಂತೆ ಮಾಡುವ ಪ್ರಕ್ರಿಯೆಯಾಗಿದೆ.

ಆದರೆ ಈ ಮೊದಲು ಆ ಗುರಿಯೆಡೆಗೆ ಅತ್ಯಲ್ಪ ಅಥವಾ ಯಾವುದೇ ಆಕರ್ಷಣೆ ಇಲ್ಲದಿರಬಹುದು." ಎಂದು **H.W.BERNARD–** ವ್ಯಾಖ್ಯಾನಿಸಿದ್ದಾರೆ.

"ಅಭಿಪ್ರೇರಣೆಯು ವರ್ತನೆಯನ್ನು ಹುರಿದುಂಬಿಸುವ, ಪೋಷಿಸುವ ಮತ್ತು ನಿರ್ದೇಶಿಸುವ ಸಂಕೀರ್ಣ ಆಂತರಿಕ ಪ್ರಕ್ರಿಯೆಗಳ ಸಂಯೋಜನೆಯಾಗಿದೆ." ಎಂದು **WILLIAM C. MORSE** ಮತ್ತು **G. MAX WINGO** ವ್ಯಾಖ್ಯಾನಿಸಿದ್ದಾರೆ.

ಮತ್ತೊಬ್ಬರು **American** ಮನೋವಿಜ್ಞಾನಿ – **ABRAHAM MASLOW** ಎಂಬುವವರು "ಅಭಿಪ್ರೇರಣೆ ಎನ್ನುವುದು ನಿರಂತರ, ಚಲನಶೀಲ ಹಾಗೂ ಸಂಕೀರ್ಣ ಪ್ರಕ್ರಿಯೆಯಾಗಿದೆ ಮತ್ತು ಇದು ಪ್ರತಿಯೊಂದು ಜೀವಿಯಲ್ಲಿಯೂ ಕಂಡುಬರುವ ಒಂದು ಸಾಮಾನ್ಯ ಲಕ್ಷಣವಾಗಿದೆ." ಎಂದು ವ್ಯಾಖ್ಯಾನಿಸಿದ್ದಾರೆ.

ಒಂದು ನಿರ್ದಿಷ್ಟ ರೀತಿಯಲ್ಲಿ ವರ್ತಿಸುವಂತೆ ಪ್ರೋತ್ಸಾಹಿಸುವ, ಪ್ರೇರೇಪಿಸುವ ಮನೋಭಾವವನ್ನು ಸಂಕಲ್ಪ ಎನ್ನುವುದು. ಇದನ್ನು ಉದ್ದೇಶ ಉತ್ತೇಜಕ, ಪ್ರೇರಕ ಎಂದೂ ಕರೆಯಬಹುದು. ಕಲಿವು ಕೇವಲ ಒಂದು ಕ್ಷೇತ್ರಕ್ಕಲ್ಲ. ಇಡೀ ಜೀವನದ ಅವಶ್ಯಕತೆಗಳ ಪೂರೈಕೆಗೂ ಹೌದು. ಜ್ಞಾನವನ್ನು ಜೀವನದ ಬೆಳಕಿನಲ್ಲಿ ಬೋಧಿಸಬೇಕು.[25]

---

24. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–6, ಪು–259,(2005)ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
25. **ವೀರಪ್ಪ.. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–12, ಪು–231.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

ಬದುಕಿನ ಸಾರ್ಥಕತೆಗೆ ಪ್ರೇರೇಪಿಸುವಂತಿರಬೇಕು. ಅಭಿಪ್ರೇರಣೆಯು ವ್ಯಕ್ತಿಯನ್ನು ಕ್ರಿಯೆಯಲ್ಲಿ ತೊಡಗುವಂತೆ ಮಾಡುವುದಲ್ಲದೆ, ವ್ಯಕ್ತಿಯಲ್ಲಿ ಶಕ್ತಿಯನ್ನು ತುಂಬುತ್ತದೆ. ವ್ಯಕ್ತಿಯ ಕ್ರಿಯೆಯನ್ನು ಅಥವಾ ಚಟುವಟಿಕೆಯನ್ನು ನಿರ್ದೇಶಿಸುತ್ತದೆ; ಅಥವಾ ಅದರಲ್ಲಿ ಆಸಕ್ತಿ ಉಳಿದುಕೊಳ್ಳುವಂತೆ ಮಾಡುತ್ತದೆ. ಗುರಿಯನ್ನು ತಲುಪುವ ಕಾರ್ಯಗತಿಯಲ್ಲಿ, ಅವನು ಎಲ್ಲಾ ಸಾಧ್ಯ ಪರ್ಯಾಯಗಳನ್ನು ಪ್ರಯತ್ನಿಸಿ ನೋಡುತ್ತಾನೆ.

ಸಾಮಾನ್ಯವಾಗಿ ಎರಡು ರೀತಿಯ ಅಭಿಪ್ರೇರಣೆಗಳನ್ನು ಕಾಣುತ್ತೇವೆ. ಅವುಗಳು ಆಂತರಿಕ ಅಭಿಪ್ರೇರಣೆ ಮತ್ತು ಬಾಹ್ಯ ಅಭಿಪ್ರೇರಣೆ. ಆಂತರಿಕ ಅಭಿಪ್ರೇರಣೆಯು ವ್ಯಕ್ತಿಯ ಒಳಗಿನಿಂದಲೇ ಹೊಮ್ಮುವಂತಹದು. ಇದು ಜೀವಿಯ ಬಯಕೆ ಮತ್ತು ಸಹಜವಾದ ಪ್ರವೃತ್ತಿಗಳಿಗೆ ನೇರವಾಗಿ ಸಂಬಂಧಿಸಿದೆ. ಆಂತರಿಕ ಪ್ರೇರಣೆಯಿದ್ದಾಗ ಕಲಿಕೆಯ ಪುಷ್ಟೀಕರಣ ಅಥವಾ ಪುನರ್ಬಲವನ್ನು ತಾನೇ ಒದಗಿಸುತ್ತದೆ. ಅರ್ಥಪೂರ್ಣ ಕಲಿಕೆ ಮುಂದಿನ ಕಲಿಕೆಯ ಅಪೇಕ್ಷೆಯನ್ನು ಹುರಿದುಂಬಿಸುತ್ತದೆ. ಉದಾಹರಣೆಗೆ ವಾದ್ಯ ನುಡಿಸುವುದು ವ್ಯಕ್ತಿಗೆ ಆನಂದವನ್ನುಂಟುಮಾಡುತ್ತದೆ. ಶಿಕ್ಷಕನಿಗೆ ಬೋಧನೆ ತೃಪ್ತಿಯನ್ನು ನೀಡುತ್ತದೆ.[26]

ಇನ್ನು ಬಾಹ್ಯ ಅಭಿಪ್ರೇರಣೆ ಎಂದರೆ ಇದು ಜೀವಿಗೆ ದೇಹದ ಹೊರಗಡೆಯಿಂದ ಬರುವುದಾಗಿದೆ. ತಾನು ತೊಡಗಿರುವ ಚಟುವಟಿಕೆಗಳು ಲಾಭದಾಯಕವಾಗಿರುವುದರಿಂದ ವ್ಯಕ್ತಿಯು ಆ ಚಟುವಟಿಕೆಗಳಲ್ಲಿ ತೊಡಗುತ್ತಾನೆ. ದೊರಕುವ ಲಾಭ ಅಥವಾ ಮೆಚ್ಚುಗೆಯೇ ಪ್ರೇರಕವಾಗಿರಬಹುದು. ಉದಾಹರಣೆಗೆ ಬಟ್ಟೆ ಹೊಲಿಯುವ ಕಾರ್ಯದಲ್ಲಿ ತೊಡಗಿರುವುದು. ಅದು ಅವನಿಗೆ ಜೀವನೋಪಾಯವನ್ನು ಒದಗಿಸುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ತನ್ನದೇ ಆದ ಆಕಾಂಕ್ಷೆ ಮಟ್ಟ ಹೊಂದಿರುತ್ತಾನೆ. ಈ ಪರಿಕಲ್ಪನೆಯನ್ನು ಮೊಟ್ಟಮೊದಲು ಪರಿಚಯಿಸಿದವನು **HOPPE** ಎಂಬ ಜರ್ಮನ್ ಮನೋವಿಜ್ಞಾನಿ. ಇವನ ಪ್ರಕಾರ ಎಲ್ಲ ವ್ಯಕ್ತಿಗಳೂ ಜೀವನದಲ್ಲಿ ಹಲವಾರು ಗುರಿಗಳನ್ನು ಹೊಂದಿರುತ್ತಾರೆ. ಈ ಗುರಿಯನ್ನು ತಲುಪಲು ಇಚ್ಛಿಸುವ ಕಾರ್ಯದ ಮಟ್ಟ ಅಥವಾ ಆತ್ಮವಿಶ್ವಾಸದ ಮಟ್ಟವನ್ನು ಆಕಾಂಕ್ಷೆಯ ಮಟ್ಟವೆಂದು ಕರೆಯುತ್ತಾರೆ. ಇದು ಒಂದು ಪ್ರಬಲ ಆಂತರಿಕ ಪ್ರೇರಕವಾಗಿ ಕಾರ್ಯ ನಿರ್ವಹಿಸುತ್ತದೆ. ಅಭಿಪ್ರೇರಣೆ ಒಂದು ಗುರಿ ನಿರ್ದೇಶಿತ ವರ್ತನೆ. ಶಿಕ್ಷಕ ಕಲಿಯುವವನಿಗೆ ಅಣಿಗೊಳಿಸುವಂತಹ ಗುರಿಯಾಗಿದೆ ಅಥವಾ ಕಲಿಯುವವನನ್ನು ತನ್ನಷ್ಟಕ್ಕೆ ತಾನೇ ಗುರಿ ಅಣಿ ಮಾಡಿಕೊಳ್ಳುವಂತೆ ಬೆಂಬಲಿಸುವುದು. ಇದು ಕಲಿಕೆಯ ಚಟುವಟಿಕೆಯನ್ನು ನಿರ್ದೇಶಿಸುವಲ್ಲಿ ಮತ್ತು ಕಾಪಾಡಿಕೊಳ್ಳುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಈ ಎರಡೂ ರೀತಿಯ ಪ್ರೇರಣೆಗಳಲ್ಲಿ ಆಂತರಿಕ ಅಭಿಪ್ರೇರಣೆ ಕಲಿಯುವವನ್ನು ಪ್ರಚೋದಿಸಿ, ಉತ್ಸಾಹಭರಿತನನ್ನಾಗಿ ಮಾಡುವುದರ ಮೂಲಕ ಬೋಧನಾ–ಕಲಿಕಾ ಪ್ರಕ್ರಿಯೆಯಲ್ಲಿ ಉತ್ತಮ ಫಲಿತಾಂಶ ತರಬಲ್ಲುದು.[27]

---

26. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–6, ಪು–260–264.(2005)ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
27. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–6, ಪು–260,264,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಅಭಿಪ್ರೇರಣೆ ವಿಚಾರ ಗಮನದಲ್ಲಿಟ್ಟುಕೊಂಡು ವಿಷ್ಣುಶರ್ಮರ ಪಂಚತಂತ್ರದ ಬಗ್ಗೆ ಯೋಚಿಸಿದರೆ, ಅದೆಷ್ಟು ಹೃದಯಂಗಮವಾಗಿ ಆ ರಾಜಕುಮಾರರನ್ನು ಅಭಿಪ್ರೇರಣೆಗೊಳಸಿ, ಉತ್ತಮ ಮಹತ್ವಾಕಾಂಕ್ಷೆಯನ್ನು ಅವರ ಮನಸ್ಸಿನಲ್ಲಿ ಉದ್ಭವಿಸುವಂತೆ ಪ್ರೋತ್ಸಾಹಿಸಿ ಕೇವಲ ಆರು ತಿಂಗಳುಗಳಲ್ಲಿ ರಾಜನೀತಿ ನಿಪುಣರು, ಬದುಕಿನ ನೀತಿ ಅರಿತವರು ಹಾಗೂ ಸುಶಿಕ್ಷಿತರನ್ನಾಗಿ ಪರಿವರ್ತಿಸಿರುವುದು ಒಂದು ಅಸಾಧಾರಣ ಅಭಿಪ್ರೇರಣಾ ಶಕ್ತಿಯಿಂದ ಎಂದು ಸ್ಪಷ್ಟವಾಗಿ ಹೇಳಬಹುದು. ಇಂಥಹ ಪ್ರತಿಭಾವಂತ ಶಿಕ್ಷಕರು ಬಹಳ ವಿರಳವೇ ಸರಿ.

स्तिमितोन्नतसञ्चारा जनसंतापहारिणः ।

जायन्ते विरला लोके जलदा इव सज्जनाः ॥[28]

ಅಂದರೆ ಸ್ಥಿರವಾದ ಬಹಳ ಎತ್ತರದಲ್ಲಿ ಸಂಚರಿಸುವುವೂ, ಜನರ ಸಂತಾಪವನ್ನು ಕಳೆಯುವುವೂ ಆದ ಮೋಡಗಳಂತೆ ಲೋಕದಲ್ಲಿ ಉನ್ನತವಾದ ನಡತೆಯುಳ್ಳವರೂ, ಜನರ ಕಷ್ಟಗಳನ್ನು ಪರಿಹರಿಸುವವರೂ ಆದ ಸಜ್ಜನರು ಬಹಳ ವಿರಳರು.

## ಅವಧಾನ ~ATTENTION

ಕಲಿವನ್ನು ಪರಿಣಾಮಕಾರಿಗೊಳಸತಕ್ಕ ಕೆಲವು ಮುಖ್ಯ ಅಂಶಗಳಲ್ಲಿ ಅವಧಾನ ಮತ್ತು ಆಸಕ್ತಿ ಒಂದು ವಿಶಿಷ್ಟ ಪಾತ್ರವನ್ನು ವಹಿಸುತ್ತವೆ. **DUMVILLE**– ಎಂಬ ಶೈಕ್ಷಣಿಕ – ಮನೋವಿಜ್ಞಾನಿಯು ಅವಧಾನ ಕುರಿತು ಹೀಗೆ ವ್ಯಾಖ್ಯಾನಿಸಿದ್ದಾರೆ:– "ಒಂದು ವಸ್ತುವಿನ ಬದಲು ಮತ್ತೊಂದು ವಸ್ತುವಿನ ಮೇಲೆ ಪ್ರಜ್ಞಾನುಭವದ ಕೇಂದ್ರೀಕರಣವೇ ಅವಧಾನ. ಎಲ್ಲಾ ಸೃಜನಶೀಲ ಚಟುವಟಿಕೆಗಳಲ್ಲಿ ಇದು ಅಗತ್ಯವಾದ ಅಂಶವಾಗಿದೆ. ನಿರ್ದಿಷ್ಟ ಉದ್ದೀಪನಗಳ ಕಡೆಗೆ ಗಮನಹರಿಸುವ ಪ್ರಕ್ರಿಯೆಯೇ ಅವಧಾನ. ಅವಧಾನ ಪ್ರಕ್ರಿಯೆಯೆಂದರೆ ಸಂವೇದನೆಗೆ ಅಥವಾ ಗ್ರಹಿಕೆಗೆ ಸಿದ್ಧವಾಗಿದೆ ಎಂದರ್ಥ. ಅದು ಒಂದು ಕ್ರಿಯಾಶೀಲ–ಪ್ರಕ್ರಿಯೆ. ಇದು ಕೆಲವು ಸಲ ಇಂದ್ರಿಯಗಳ ಮತ್ತು ಇಡೀ ನರವ್ಯೂಹದ ಹೊಂದಾಣಿಕೆಯನ್ನು ಒಳಗೊಂಡಿರುತ್ತದೆ.[29]

ಸರಳವಾಗಿ ಹೇಳುವುದಾದರೆ ಒಂದು ಅಂಶದ ಕಡೆ ಪ್ರಜ್ಞೆಯನ್ನು ಕೇಂದ್ರೀಕರಿಸುವುದೇ " ಅವಧಾನ. "ಟಾರ್ಚ್ ಬೆಳಕನ್ನು ವಿಸ್ತಾರವಾದ ಬಯಲಿನಲ್ಲಿ ಬಿಟ್ಟರೆ ಬೆಳಕು ಹರಡಿಹೋಗಿ ಅಲ್ಲಿರುವ ವಸ್ತುಗಳು ಮಂಕಾಗಿ ಗೊಂದಲಮಯವಾಗಿ ಗೋಚರಿಸುವುವು. ಅದೇ ಬೆಳಕನ್ನು ಒಂದು ವಸ್ತುವಿನ ಮೇಲೆ ಮೊನೆಮಾಡಿದರೆ ಅದು ಪ್ರಕಾಶಮಾನವಾಗಿ ಸ್ಪಷ್ಟವಾಗಿ ಗೋಚರಿಸುತ್ತದೆ.

---

28. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ– ಶ್ಲೋ –30, ಪು –27,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
29. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–6, ಪು–265,,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಅದೇ ರೀತಿಯಲ್ಲಿ ಒಂದು ಕಾಲದಲ್ಲಿ ನಮ್ಮ ಮನಸ್ಸು ಅನೇಕ ವಸ್ತುಗಳ ಕಡೆ ಗಮನಕೊಟ್ಟರೆ ಅವಧಾನ ಚೆಲ್ಲಿಹೋಗಿ, ಶಕ್ತಿ ಕುಂದಿಹೋಗಿ, ಅದರ ಬಿಂಬ ಮನಸ್ಸಿನಲ್ಲಿ ಪರಿಣಾಮಕಾರಿಯಾಗಿ ರೂಪುಗೊಳ್ಳುವುದಿಲ್ಲ. ಅದೇ ಗಮನವನ್ನು ಒಂದಂಶದ ಮೇಲೆ ಕೇಂದ್ರೀಕರಿಸಿದಾಗ ಮನಸ್ಸಿಗೆ ಅದರ ಬಿಂಬ ಸ್ಪಷ್ಟವಾಗಿ ಬಿದ್ದು ಉತ್ತಮ ಸ್ಪರ್ಶಾನುಭವ ಉಂಟಾಗುತ್ತದೆ. ಹೀಗೆ ವಿಷಯ, ಸನ್ನಿವೇಶ, ಶಬ್ದ, ವಾಸನೆ, ರುಚಿ ಮುಂತಾದವನ್ನು ಸ್ಪಷ್ಟವಾಗಿ ಪರಿಚಯಮಾಡಿಕೊಡುವುದೇ ಅವಧಾನದ ಮೂಲ ಉದ್ದೇಶವಾಗಿದೆ.

ಕಲಿವಿನ ಮೇಲೆ ಅವಧಾನದ ಪ್ರಭಾವ ಬಹಳ ಮುಖ್ಯವಾದುದು. ಪಾಠದ ಆರಂಭದಲ್ಲಿ ಮಕ್ಕಳು ಈಗಾಗಲೇ ತಿಳಿದಿರುವ ವಿಷಯದ ಕಡೆ ಮೊದಲು ಅವರ ಗಮನ ಸೆಳೆಯುತ್ತೇವೆ. ಹಾಗೆಯೇ ಅದಕ್ಕೆ ಸಂಬಂಧಿಸಿದಂತೆ ಒಂದು ಹೊಸ ವಿಷಯದ ಕಡೆಗೂ ತಿರುಗಿಸುತ್ತೇವೆ. ಕಾರಣ, ಹೊಸ ಜ್ಞಾನ ನಮಗೆ ಪರಿಚಯವಾಗುವುದು ಹಳೆಯ ಜ್ಞಾನದ ಜೊತೆ ಸೇರಿಕೊಳ್ಳುವುದರಿಂದ. ಅದಕ್ಕೇ, ಶೈಕ್ಷಣಿಕ ಮನೋವಿಜ್ಞಾನದ ಸೂಚಿತ ಕ್ರಮದಂತೆ ಯಾವುದೇ ಬೋಧನೆಗೆ ಮೊದಲು ಪಾಠಕ್ಕೆ ಪೀಠಿಕೆ ಹಾಕಿ, ಅದರ ಕೊನೆಯಲ್ಲಿ ಕಲಿಯುವವರ ಗಮನವನ್ನು ಹಳೆಯ ಪರಿಚಿತ ವಿಷಯದಿಂದ ಹೊಸ ವಿಷಯದ ಕಡೆಗೆ ಸೆಳೆದು– "ಮಕ್ಕಳೇ, ಈ ದಿನ ಇಂತಹದೇ ಒಂದು ವಿಷಯವನ್ನು ತಿಳಿಯೋಣವೇ?" ಎಂದಾಗ, ಅವರಿಗೆ ಆ ವಿಷಯವನ್ನು ಕಲಿಯುವುದು ಅವಶ್ಯಕವೂ, ಪ್ರಿಯವೂ, ಆಸಕ್ತಿಯುತವೂ ಆಗುತ್ತದೆ. ಅವರ ಅವಧಾನ ಆ ವಿಷಯದ ಮೇಲೆ ಕೇಂದ್ರೀಕೃತವಾಗುತ್ತದೆ. ಅವರ ಕಲಿವು ಸರಾಗವೂ ಯಶಸ್ವಿಯೂ ಆಗುತ್ತದೆ.[30] ಈ ಕ್ರಮವನ್ನೇ ವಿಷ್ಣುಶರ್ಮರು ಪಂಚತಂತ್ರದಲ್ಲಿ ಬಹಳ ಅಚ್ಚುಕಟ್ಟಾಗಿ ಅನುಸರಿಸಿ, ರಾಜಕುಮಾರರ ಗಮನವನ್ನು ರಾಜನೀತಿ ಶಿಕ್ಷಣ ಹಾಗೂ ಉತ್ತಮ ಬದುಕಿನ ನೀತಿನಿಯಮಗಳೆಡೆಗೆ ಆಕರ್ಷಕ ದೃಷ್ಟಾಂತಗಳ ಮೂಲಕ ಕೇಂದ್ರೀಕೃತಗೊಳಿಸಿದ್ದಾರೆ.

सत्यधर्मविहीनेन न सन्दध्यात्कथञ्चन ।

सुसन्धितोऽप्यसाधुत्वादचिराद्याति विक्रियाम् ॥[31]

ಸತ್ಯ, ಧರ್ಮ, ಇವುಗಳನ್ನು ಹೊಂದಿರದವನ ಜೊತೆಗೆ ಹೇಗಾದರೂ ಸಂಧಿ ಮಾಡಿಕೊಳ್ಳಕೂಡದು. ಒಳ್ಳೆಯ ರೀತಿಯಲ್ಲಿ ಸಂಧಿಮಾಡಿಕೊಂಡಿದ್ದರೂ ಅವನು ಅಸಾಧುವಾದ ಕಾರಣ ಬಹಳ ಬೇಗ ವಿರೋಧಿಯಾಗುತ್ತಾನೆ. ರಾಜನೀತಿಯನ್ನು ಎಷ್ಟು ಚೆನ್ನಾಗಿ ತಿಳಿಹೇಳಿರುವುದು ಕಂಡುಬರುತ್ತದೆ.

---

30. **ವೀರಪ್ಪ. ಎನ್.ಎಸ್**. ಶೈಕ್ಷಣಿಕ ಮನೋವಿಜ್ಞಾನ, ಅ–12, ಪು–264–265.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

31. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಾಕೋಲೂಕೀಯ, ಶ್ಲೋ– 24, ಪು –446,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಮತ್ತೊಂದು ಉದಾಹರಣೆ ಕೊಡುವುದಾದರೆ – ಐದನೆಯ ತಂತ್ರ ಅಪರೀಕ್ಷಿತಕಾರಕ ಸೂತ್ರಕಥಾ ಪ್ರಾರಂಭದಲ್ಲಿ ರಾಜಕುಮಾರರನ್ನು ಕುರಿತು " ಇವತ್ತಿನಿಂದ ಬೇರೆ ರೀತಿಯ ಕಥೆಗಳನ್ನು ನಿಮಗೆ ಹೇಳುತ್ತೇನೆ. ಪ್ರತಿಯೊಬ್ಬರಿಗೂ ತಾನು ನಾಯಕನಾಗಬೇಕು, ಇತರರನ್ನು ಆಳಬೇಕು ಎಂಬ ಮಹತ್ವಾಕಾಂಕ್ಷೆ ಇರುತ್ತದೆ. ಇನ್ನು ತಂದೆಯ ಪದವಿ ತನಗಲ್ಲದೆ ಇನ್ನೊಬ್ಬರಿಗೆ ಹೋಗಬಾರದು ಎಂಬ ಸ್ವಾರ್ಥ ವ್ಯಾಮೋಹವೂ ಇರುತ್ತದೆ. ಹಾಗೆ ಇರುವುದು ಸಹಜವೇ.ಆದರೆ ಆ ಸ್ಥಾನವನ್ನಲಂಕರಿಸಲು ಬೇಕಾದ ಯೋಗ್ಯತೆ ಇರಬೇಕಲ್ಲ?ಅಂತಹ ಯೋಗ್ಯತೆ ಇಲ್ಲದಿದ್ದರೆ, ಅದನ್ನು ಇತರರನ್ನು ನೋಡಿಯೋ, ಕೇಳಿಯೋ ಗಳಿಸಿಕೊಳ್ಳಬೇಕು. ಇದಕ್ಕೆ ಒಳ್ಳೆಯ ಪರಿಶ್ರಮ ಹಾಗೂ ಪ್ರಯತ್ನವಿರಬೇಕು. ಇದಕ್ಕೆ ಸಂಬಂಧಿಸಿದಂತೆ ಕಥೆಯೊಂದಿದೆ ಮತ್ತು ಅದಕ್ಕೆ ಸೇರಿಕೊಂಡಂತಹ ಬೇರೆ ಕಥೆಗಳಿವೆ. ಅವನ್ನೇ ಈಗ ಹೇಳುತ್ತೇನೆ ಕೇಳಿ."[32] ಹೀಗೆ ಉತ್ತಮ ಪೀಠಿಕೆಯೊಂದಿಗೆ ಪರಿಚಿತ ವಿಚಾರಗಳ ಮೂಲಕ ಹೊಸ ವಿಚಾರಗಳ ಕಡೆಗೆ ವಿಷ್ಣುಶರ್ಮರು ರಾಜಕುಮಾರರ ಗಮನವನ್ನು ಅವರ ಉಜ್ವಲ ಭವಿಷ್ಯದೆಡೆಗೆ ಕೇಂದ್ರೀಕರಿಸುತ್ತಾರೆ.

ಅವಧಾನವನ್ನು ಕೆಲವು ವಿಧಗಳಾಗಿ ವಿಂಗಡಿಸಲಾಗಿದೆ. ಅವುಗಳನ್ನು ದೊರಕಿಕೊಳ್ಳುವ ಕ್ರಮವನ್ನು ಪರಿಚಯಿಸಿಕೊಳ್ಳುವುದು ಸೂಕ್ತವಾದುದು.[33]

**1. ಸ್ವಾಭಾವಿಕ ಅವಧಾನ:–**

ಹುಟ್ಟು ಗುಣದ ಮೂಲಕ ಬರುವ ಮನಶ್ಶಕ್ತಿ ಸ್ವಪ್ರೇರಣೆಯಿಂದ ಉಚಿತ ಸನ್ನಿವೇಶಗಳ ಕಡೆಗೆ ಪ್ರವಹಿಸುತ್ತದೆ. ಅದು ಸ್ವಾಭಾವಿಕವಾಗಿ ಪ್ರವಹಿಸುವುದರಿಂದ ಮಕ್ಕಳಿಗೆ ಅತಿ ಹೆಚ್ಚಿನ ಪ್ರಮಾಣದಲ್ಲಿ ಶಕ್ತಿ ವ್ಯಯವಾಗುವುದಿಲ್ಲ. ಇದು ಬಹಳ ತೀಕ್ಷ್ಣವಾಗಿ ರುವುದರಿಂದ ಕಲಿವಿಗೂ ಅನುಕೂಲಕರ.

**2. ಒತ್ತಾಯದ ಅವಧಾನ:–**

ಬೋಧನೆಯಲ್ಲಿ ಎಲ್ಲ ಕಾಲದಲ್ಲೂ ಸ್ವಾಭಾವಿಕ ಅವಧಾನವನ್ನೇ ಒದಗಿಸಿಕೊಳ್ಳುವುದು ಸಾಧ್ಯವಿಲ್ಲ. ಕಾರಣ ಆ ಹುಟ್ಟು ಗುಣಗಳು ಯಾವುದೋ ನಿರ್ದಿಷ್ಟ ಮಾರ್ಗದಲ್ಲಿ ಕಾರ್ಯಮುಖವಾಗತಕ್ಕವು. ಮಕ್ಕಳಿಗೆ ಕಲಿಯಬೇಕಾದ ಅನೇಕ ವಿಷಯಗಳಲ್ಲಿ ಆಸಕ್ತಿಯಿರುವುದಿಲ್ಲ. ಆದರೂ ಅವರು ಅದನ್ನು ಕಲಿಯುವುದು ಕಡ್ಡಾಯವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಆ ಕಾರ್ಯಕ್ಕೆ ಅವರ ಸ್ವಾಭಾವಿಕ ಅವಧಾನವನ್ನು

---

32. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ–5–ಅಪರೀಕ್ಷಿತಕಾರಕ, ಪು–205,(2015) ವರ್ನಿಲ 39/2–11,ಕಲ್ಯಾಣಿ ಗಾರ್ಡನ್,BSK 1stStage, ಬೆಂಗಳೂರು–560050
33. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–12, ಪು–265–267.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4.

ಒತ್ತಾಯವಾಗಿ ಬಳಸಿಕೊಳ್ಳಬೇಕಾಗುತ್ತದೆ.

**೩. ಆರ್ಜಿತ ಅವಧಾನ :–**

ಒಮ್ಮೆ ನೀತಿಪಾಠಕ್ಕೆ ಒತ್ತಾಯದ ಅವಧಾನವನ್ನು ಬಳಸಿಕೊಂಡಿದ್ದೇವೆಂದು ಭಾವಿಸೋಣ.ಅವರಿಗೆ ನೀತಿಪಾಠದಲ್ಲಿ ಪ್ರೀತಿ ಹುಟ್ಟುವಂತೆ ಪ್ರೇರೇಪಿಸಿದರೆ ಅದು ಅವರ ಆಸೆಯ ವಿಚಾರವಾಗುತ್ತದೆ. ಇದರಿಂದ ಅವಧಾನ ಸುಲಭವಾಗಿ ದೊರಕುತ್ತದೆ. ಒತ್ತಾಯವಾಗಿ ಒದಗಿಸಿಕೊಂಡಿದ್ದರೂ ಆದಷ್ಟು ಬೇಗ ಅದು ಆರ್ಜಿತ ರೂಪಕ್ಕೆ ಪರಿವರ್ತನೆಯಾಗಬೇಕು. ಹೀಗೆ ಕಲಿಯುವ ವಿಷಯದಲ್ಲೇ ಆರಂಭವಾಗುವ ಪ್ರೀತಿಯಿಂದ ಪರಿವರ್ತನೆಯಾಗುವ ಒತ್ತಾಯದ ಅವಧಾನ ಸ್ವಾಭಾವಿಕ ಅವಧಾನದಷ್ಟೇ ಸರಾಗವಾಗಿ ದೊರಕುತ್ತದೆ. ಇದರಿಂದ ಶ್ರಮವೂ ಕಡಿಮೆ ಮತ್ತು ಕಲಿವೂ ಯಸ್ವಿಯಾಗುವುದು.

ಸುಲಭವಾಗಿ ಅವಧಾನವನ್ನು ದೊರಕಿಸಿಕೊಳ್ಳುವುದಕ್ಕೂ, ನಂತರ ಅದು ಕದಲದಂತೆ ನೋಡಿಕೊಳ್ಳುವುದಕ್ಕೂ ನೆರವಾಗುವ ಸಾಧನಗಳಲ್ಲಿ ಬಹು ಮುಖ್ಯವಾಗಿ ಮಕ್ಕಳಿಗೆ ಬಂದಿರುವ ಒಂದು ಗುಣವೆಂದರೆ "ಆಸಕ್ತಿ". ಹಲವರು ಇದನ್ನು ಅವಧಾನವೆಂದೂ ಭಾವಿಸುವರು. ಅವಧಾನ ಪ್ರವಹಿಸುವ ಮಾರ್ಗವನ್ನು ನಿಷ್ಕರ್ಷಿಸುವ ಮನೋಭಾವವೇ ಆಸಕ್ತಿ. **MCDOUGALL - American Psychologist** ರವರು ಹೇಳಿರುವಂತೆ, ಆಸಕ್ತಿ ಅವಧಾನದ ಸ್ಥಾವರ ರೂಪ. ಅವಧಾನ ಆಸಕ್ತಿಯ ಕಾರ್ಯಸ್ವರೂಪ. ಕಾರ್ಯರೂಪಕ್ಕೆ ಬರದೆ ಮನಸ್ಸಿನಲ್ಲಿ ಅಡಗಿರುವ ಅವಧಾನವೇ ಆಸಕ್ತಿ, ಕಾರ್ಯರೂಪಕ್ಕೆ ಬಂದಾಗ ಅವಧಾನ. ರಚನೆ, ಕಾತರ, ಹೋರಾಟ, ಸಂಘಾಭಿಲಾಷೆ ಇತ್ಯಾದಿ ಹುಟ್ಟುಗುಣಗಳು ಆಸಕ್ತಿಗಳು. ಭೀತಿ, ಆಹಾರಾನ್ವೇಷಣೆ, ಸಂಗ್ರಹ ಇವುಗಳಿಂದಲೂ ಹಲವು ಆಸಕ್ತಿಗಳು ಹುಟ್ಟುತ್ತವೆ. ಇವುಗಳು ಪ್ರಕೃತಿದತ್ತವಾಗಿ ಬರುವ ಸಹಜ ಆಸಕ್ತಿಗಳು. ಸ್ವಾಭಾವಿಕ ಅವಧಾನಕ್ಕೆ ಸ್ವಾಭಾವಿಕ ಆಸಕ್ತಿಗಳೇ ಕಾರಣ. ಆರ್ಜಿತ ಅವಧಾನಕ್ಕೆ ಪರಿವರ್ತಿತ ಆಸಕ್ತಿಗಳೇ ಆಧಾರ.[34]



34. **ವೀರಪ್ಪ. ಎನ್.ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–12, ಪು–272.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4.

## ೩-೪- ಸ್ಮೃತಿ ಮತ್ತು ವಿಸ್ಮೃತಿ-ಕಲಿಕೆಯ ವರ್ಗಾವಣೆ

ಅನುಭವಗಳು ಮನಸ್ಸಿನಲ್ಲಿ ಗುರುತುಗಳನ್ನು ನಿಲ್ಲಿಸುತ್ತವೆ. ಹಾಗೆ ಮನಸ್ಸಿನಲ್ಲಿ ಸಂಗ್ರಹವಾಗುವ ಅನುಭವದ ಮುದ್ರಿಕೆಗಳನ್ನು ಬಿಂಬಗಳೆಂದು ಕರೆಯುತ್ತಾರೆ. ಆ ಬಿಂಬಗಳನ್ನು ಮುಂದೆ ನಾವು ಪುನಃ ಮನಸ್ಸಿನಲ್ಲಿ ಚಿತ್ರಿಸಿಕೊಂಡು ಅದರ ಅನುಭವಗಳನ್ನು ಮರುಕಳಿಸಿ ಪಡೆಯುವುದಕ್ಕೆ ನೆನಪು, ಸ್ಮೃತಿ ಅಥವಾ ಜ್ಞಾಪಕಶಕ್ತಿ ಎನ್ನಲಾಗಿದೆ. ಸರಳವಾಗಿ ಹೇಳುವುದಾದರೆ, ಕಲಿತ ವಿಷಯವನ್ನು ನೆನಪಿನಲ್ಲಿಟ್ಟುಕೊಳ್ಳುವ ಪ್ರಕ್ರಿಯೆಯೇ ಸ್ಮೃತಿ. ಈ ಸ್ಮೃತಿ ಶಕ್ತಿ ಇಲ್ಲದೆ ನಾವು ಏನನ್ನೂ ಕಲಿಯಲು ಸಾಧ್ಯವಿಲ್ಲ. ನೆನಪೆಂಬ ಮಾನಸಿಕ ವ್ಯಾಪಾರದಲ್ಲಿ ಮೂರು ಉಪಕ್ರಿಯೆಗಳಿವೆ. ಮೊದಲನೆಯದಾಗಿ ಇಂದ್ರಿಯಗಳ ಮೂಲಕ ಮನಸ್ಸು ಪ್ರತ್ಯಕ್ಷವಾಗಿ ಅನುಭವ ಪಡೆಯಬೇಕು. ಎರಡನೆಯದಾಗಿ ಈ ಅನುಭವಗಳನ್ನು ಮನಸ್ಸು ಬಿಂಬ ರೂಪದಲ್ಲಿ ಧರಿಸಬೇಕು. ಕೊನೆಯದಾಗಿ ಅಗತ್ಯವೆನಿಸಿದಾಗ ಆ ಬಿಂಬಗಳು ಭಾವನೆಗಳ ರೂಪವನ್ನು ತಾಳಿ ಸ್ಮರಣೆಗೆ ಬರಬೇಕು. ಸಾಂಪ್ರದಾಯಿಕವಾಗಿ ಕೊನೆಯ ಮಾನಸಿಕ ವ್ಯಾಪಾರವನ್ನು ಜ್ಞಾಪಕಶಕ್ತಿ ಎಂದು ಕರೆಯಲಾದರೂ ಒಟ್ಟಾರೆ ಮೂರು ಮಾನಸಿಕ ವ್ಯಾಪಾರಗಳನ್ನೂ ಒಟ್ಟಿಗೆ ಸೇರಿದಂತೆ ನೆನಪು ಅಥವಾ ಜ್ಞಾಪಕಶಕ್ತಿ ಎಂದು ಕರೆಯುವುದು ಹೆಚ್ಚು ಶಾಸ್ತ್ರೀಯವಾಗಿರುತ್ತದೆ.[35]

ಸಂಸ್ಕೃತ ಕಥಾಸಾಹಿತ್ಯದ ಒಂದು ಶ್ಲೋಕ ಹೀಗೆ ಹೇಳುತ್ತದೆ.

काव्यशास्त्रविनोदेन कालोगच्छति धीमताम् ।

व्यसनेन च मूर्खाणां निद्रया कलहेन वा ॥[36]

ಅಂದರೆ, ಬುದ್ಧಿವಂತರ ಸಮಯವು ಸಾಹಿತ್ಯ, ಶಾಸ್ತ್ರ ಗ್ರಂಥಗಳನ್ನು ಓದುವುದರಿಂದ ಸಿಗುವ ಮನರಂಜನೆಯಿಂದ ಕಳೆಯುತ್ತದೆ. ಆದರೆ, ಮೂರ್ಖರ ಸಮಯವು ದುಶ್ಚಟಗಳಲ್ಲಿ, ನಿದ್ದೆಯಲ್ಲಿ ಅಥವಾ ಜಗಳದಲ್ಲಿ ಕಳೆಯುತ್ತದೆ.

ಭಾಷೆಗಳಲ್ಲಿ ಮುಖ್ಯವೂ, ಮಧುರವೂ, ದಿವ್ಯವೂ ಆದುದು ಸಂಸ್ಕೃತ. ಅದರಿಂದ ಆ ಭಾಷೆಯ ಕಾವ್ಯ ಮಧುರ, ಅದಕ್ಕಿಂತಲೂ ಸುಭಾಷಿತ ಮಧುರ. ಇಲ್ಲಿನ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಲಭ್ಯವಾಗುವ ನೀತಿಪಾಠಗಳು, ಸೂಕ್ತಿಗಳು, ಶ್ಲೋಕಗಳು, ಅಜ್ಞಾನದ ಅಂಧಕಾರವನ್ನು ಹೋಗಲಾಡಿಸುವುದಲ್ಲದೆ ಸುಜ್ಞಾನದ ಬೆಳಕು ಚೆಲ್ಲಿ ಬದುಕನ್ನು ಹಸನು ಮಾಡುವುದಾಗಿದೆ. ಇದಲ್ಲದೆ ಸ್ತೋತ್ರಗಳು ಸುಭಾಷಿತಗಳು ಮತ್ತು ನೀತಿ

---

೩೫. **ವೀರಪ್ಪ.ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-14, ಪು-೩೩೯-೩೪೦.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4.

36. **ನಾರಾಯಣ ಪಂಡಿತರ ಹಿತೋಪದೇಶ**. 1-32.

ಪಾಠಗಳ ಪಠಣ ನಮ್ಮ ಉಚ್ಛಾರಣೆ ಮತ್ತು ನೆನಪಿನ ಶಕ್ತಿಯನ್ನು ಹೆಚ್ಚಿಸುವುದೂ ಆಗಿರುತ್ತದೆ. ಇದನ್ನರಿತ ಪ್ರಪಂಚದ ಅನೇಕ ದೇಶಗಳು ತಮ್ಮ ಶಾಲೆಗಳ ಪಠ್ಯಕ್ರಮಕ್ಕೆ ಸಂಸ್ಕೃತ ಭಾಷೆಯನ್ನು ಸೇರಿಸುವುದಲ್ಲದೆ ಶಾಲೆಯ ಪ್ರಾರ್ಥನಾ ಶ್ಲೋಕಗಳನ್ನು ಆಯ್ಕೆಮಾಡಿಕೊಂಡಿರುತ್ತಾರೆ. ವೇದಗಳ ಕಾಲದಿಂದಲೂ ಋಷಿಮುನಿಗಳು ನೆನಪಿನ ಶಕ್ತಿಯಿಂದಲೇ ವೇದಮಂತ್ರಗಳನ್ನು ಉಚ್ಛಾರಣೆ ಮಾಡುತ್ತಿದ್ದರು.

ಸ್ಮೃತಿ ಅಥವಾ ಜ್ಞಾಪಕಶಕ್ತಿ ಕುರಿತು ಕೆಲವು ಮನೋವಿಜ್ಞಾನಿಗಳು ತಮ್ಮದೇ ಆದ ವ್ಯಾಖ್ಯಾನವನ್ನು ಒದಗಿಸಿದ್ದಾರೆ." ಹಿಂದೆ ಕಲಿತಂತಹ ವಿಷಯಗಳನ್ನು ಅನುಭವಗಳನ್ನು ಪುನಃ ಸ್ಮರಣೆಗೆ ತರುವುದೇ ಸ್ಮೃತಿ" ಎಂದು **ROBERT S. WOODWORTH & MARK WEISS-(AmericanPsychologists)** ವ್ಯಾಖ್ಯಾನಿಸಿದ್ದಾರೆ. ಹಾಗೆಯೇ **RYBURN-(Educational Psychologist)** ರವರು ಇನ್ನೂ ಸ್ವಲ್ಪ ವಿವರವಾಗಿ ವ್ಯಾಖ್ಯಾನಿಸಿ "ನಾವು ಪಡೆದ ಅನುಭವಗಳನ್ನು ಸಂಗ್ರಹಿಸಿಡುವ ಶಕ್ತಿ ಮತ್ತು ಅನುಭವಗಳು ಜರುಗಿದ ಸ್ವಲ್ಪ ಕಾಲಾನಂತರ ಪ್ರಜ್ಞಾನುಭವಕ್ಕೆ ತಂದುಕೊಳ್ಳುವ ಸಾಮರ್ಥ್ಯವೇ ಸ್ಮೃತಿ ಎಂದು ಹೇಳಿದ್ದಾರೆ.[37] ಸ್ಮೃತಿಯ ಮೇಲೆ ಪ್ರಭಾವ ಬೀರುವ ಹಲವಾರು ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳಿವೆ. ಕೆಲವು ಮುಖ್ಯವಾದುದನ್ನು ಗಮನಿಸಿದರೆ- ವೈಯಕ್ತಿಕ ಭಿನ್ನತೆಗಳು, ಆಸಕ್ತಿ, ಅಭಿಪ್ರೇರಣೆ, ಕಲಿಯುವವನ ಮನೋಧೋರಣೆ, ಕಲಿಕೆಯ ಪ್ರಮಾಣ, ಕಲಿಯುವ ವಿಷಯ, ಪುನರಾವರ್ತನೆ ಇತ್ಯಾದಿ. ಸ್ಮೃತಿ ಅಥವಾ ಸ್ಮರಣೆಯಲ್ಲಿ ಕೆಲವು ವಿಧಾನಗಳಿವೆ. ಅವು ಯಾವುವೆಂದರೆ- ಅಂತರ ಮತ್ತು ನಿರಂತರ ಅಭ್ಯಾಸ, ಇಡಿ ಮತ್ತು ಬಿಡಿ ವಿಧಾನ, ಅರ್ಥಪೂರ್ಣ ಕಲಿಕೆ ಮತ್ತು ಕಂಠಪಾಠ ಸಂಯೋಜನಾ ವಿಧಾನ.[38]

ನಮ್ಮ ಅನುಭವಕ್ಕೆ ಬಂದ ಅನೇಕ ವಿಚಾರಗಳನ್ನು ನಾವು ನೆನಪಿಡುತ್ತೇವೆ. ಸಮಯ ಬಂದಾಗ ಅವನ್ನು ಸ್ಮರಿಸಿಕೊಳ್ಳುತ್ತೇವೆ. ಆದರೆ ಕೆಲವನ್ನು ಸ್ಮರಿಸಿಕೊಳ್ಳಲಾರೆವು. ಮನಸ್ಸಿನ ಆ ಸ್ಥಿತಿಯನ್ನೇ 'ಮರೆವು' ಅಥವಾ 'ವಿಸ್ಮೃತಿ' ಎಂದು ಕರೆಯುತ್ತೇವೆ." ಹಿಂದೆ ಕಲಿತಂತಹ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗದಿರುವುದು ಅಥವಾ ಹಿಂದೆ ಪಡೆದ ಅನುಭವಗಳನ್ನು ಅಗತ್ಯವಾದಾಗ ಪುನಃಸ್ಮರಣೆಗೆ ತಂದುಕೊಳ್ಳಲಾಗದಿರುವುದನ್ನು ವಿಸ್ಮೃತಿ ಅಥವಾ ಮರೆವು ಎನ್ನುವುದು" ಎಂದು ಡ್ರೀವರ್‌ರವರು ವ್ಯಾಖ್ಯಾನಿಸಿದ್ದಾರೆ. ಮತ್ತೊಬ್ಬರು ಮನೋವಿಜ್ಞಾನಿ **BHATIA H.R.** ಹೀಗೆ ಹೇಳಿದ್ದಾರೆ- "ಒಂದು ವಿಚಾರ ಅಥವಾ ಹಲವು ವಿಚಾರಗಳನ್ನು ಮೂಲ ಉದ್ದೀಪನದ ಅನುಪಸ್ಥಿತಿಯಲ್ಲಿ ಪುನಃ ಸ್ಮರಣೆಗೆ ತಂದುಕೊಳ್ಳಲು ಸಾಧ್ಯವಾಗದಿರುವುದನ್ನು ವಿಸ್ಮೃತಿ ಅಥವಾ ಮರೆವು ಎನ್ನುವರು.[39] ವಿಸ್ಮೃತಿಯಲ್ಲಿ ವಿಧಗಳು ಎರಡು. ಅವುಗಳೆಂದರೆ.

---

37. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-6, ಪು-268,269.(2005), ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ -577005.
38. **ವಾಮದೇವಪ್ಪ. ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-6, ಪು-270-272.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ. ದಾವಣಗೆರೆ-577005.
39. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ -6, ಪು -272.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005.

**1. ಸಾಮಾನ್ಯ ರೀತಿಯ ಮರೆವು ಅಥವಾ ನಿಷ್ಕ್ರಿಯ ಅಥವಾ ಸ್ವಾಭಾವಿಕ ಮರೆವು.**

ನೆನೆಸದೆ ದೀರ್ಘಕಾಲ ಬಿಡುವುದರಿಂದ, ಇತರ ಅನುಭವಗಳ ಅತಿಕ್ರಮಣದಿಂದ ಮತ್ತು ಹೊಸ ಅನುಭವಗಳ ಸಂಗಡ ಬೆರೆತು ಆಗುವ ಗೊಂದಲಗಳಂದ ಹುಟ್ಟುವುದೇ ಸಾಧಾರಣ ರೀತಿಯ ಮರೆವು.

**2. ಅಸಾಮಾನ್ಯ ರೀತಿಯ ಮರೆವು ಅಥವಾ ಕ್ರಿಯಾತ್ಮಕ ಅಥವಾ ಪ್ರೇರಿತ ಮರೆವು.**

ದೊಡ್ಡ ಶಬ್ದದಿಂದಲೋ, ಆಘಾತದಿಂದಲೋ, ಮೆದುಳಿನ ಭಾಗ ಘಾಸಿಯಾದಾಗಲೋ ಮರೆವು ಸಂಭವಿಸಬಹುದು. ಹಾಗೆಯೇ ಮನಸ್ಸಿನ ಕೆಲವು ಕಹಿ ಅನುಭವಗಳ ಪ್ರಭಾವದಿಂದಲೂ ಮರೆವು ಮೂಡಬಹುದು. ಇವೆರಡೂ ಅಸಾಧಾರಣ ರೀತಿಯವಾಗಿದ್ದು, ಶಿಕ್ಷಣಕ್ಕೆ ಅಷ್ಟಾಗಿ ಸಂಬಂಧಿಸಿರುವುದಿಲ್ಲ. ಆದ್ದರಿಂದ ಸಾಧಾರಣ ರೀತಿಯ ಮರೆವಿನ ಪರಿಚಯ ಮಾತ್ರ ಶಿಕ್ಷಕರಿಗೆ ಅವಶ್ಯಕ ಎನ್ನಬಹುದು.[40]

ಸಾಮಾನ್ಯವಾಗಿ ಮರೆವು ಒಂದು ಮಾನಸಿಕ ದೌರ್ಬಲ್ಯ ಎಂದು ಅಭಿಪ್ರಾಯ ಇದೆ. ಆದರೆ ಅದೂ ಒಂದು ಸ್ವಾಭಾವಿಕ ಮನೋವ್ಯಾಪಾರ ಹೌದು. ಮಾನಸಿಕ ಆರೋಗ್ಯಕ್ಕೆ ಇದೂ ಅವಶ್ಯಕವಾದದ್ದು. ನಿತ್ಯ ಜೀವನದ ಎಲ್ಲಾ ಅನುಭವಗಳನ್ನೂ ಮನಸ್ಸು ಗ್ರಹಿಸಿಡಬೇಕಾದರೆ ದೊಡ್ಡ ಹೊರೆಯಾದೀತು. ಅವುಗಳಲ್ಲಿ ಕೆಲವು ಉಪಯುಕ್ತವೇನೋ ಹೌದು, ಮಿಕ್ಕವು ಕಹಿ ಅನುಭವಗಳು, ಇನ್ನು ಕೆಲವು ಅನಗತ್ಯವಾದವು. ಅಂತಹ ಅನುಭವಗಳನ್ನು ಮರೆತರೇ ಮನಸ್ಸಿಗೆ ನೆಮ್ಮದಿ, ಆರೋಗ್ಯ. ಈ ದೃಷ್ಟಿಯಿಂದ ಮರೆವು ಅಹಿತ ವ್ಯಾಪಾರವೇನಲ್ಲ. ನಿಜಕ್ಕೂ ಇದು ಒಂದು ವರವೇ ಹೌದು.

## ~ಕಲಿಕೆಯ ವರ್ಗಾವಣೆ~

ಇನ್ನೊಂದು ಬಹಳ ಮುಖ್ಯವಾದ ಶಿಕ್ಷಣದ ಗುರಿಯಿದೆ. ಅದೇನೆಂದರೆ, ವ್ಯಕ್ತಿಯು ತನ್ನ ಜೀವನದಲ್ಲಿ ಎದುರಾಗುವ ಹೊಸ ಸನ್ನಿವೇಶಗಳನ್ನು ಪರಿಣಾಮಕಾರಿಯಾಗಿ ಎದುರಿಸಲು ಸಮರ್ಥನನ್ನಾಗಿ ಮಾಡುವುದು. ಒಂದು ಸನ್ನಿವೇಶದಲ್ಲಿ ಕಲಿತ ಜ್ಞಾನ ಹಾಗೂ ಕೌಶಲಗಳು ಮುಂದಿನ ಸನ್ನಿವೇಶದಲ್ಲಿ ಸಮಸ್ಯೆಗಳನ್ನು ಎದುರಿಸಲು ಸಹಕಾರಿಯಾಗುತ್ತದೆ. ಹೀಗೆ ಒಂದು ಸನ್ನಿವೇಶದಲ್ಲಿ ಕಲಿತದ್ದು ಇನ್ನೊಂದು ಹೊಸ ಸನ್ನಿವೇಶದಲ್ಲಿ ಉಪಯೋಗಿಸಲ್ಪಡುವುದಕ್ಕೆ ಅಥವಾ ಪ್ರಭಾವ ಬೀರುವುದಕ್ಕೆ **"ಕಲಿಕೆಯ ವರ್ಗಾವಣೆ"** ಎಂದು ಕರೆಯುತ್ತಾರೆ.

"ಕಲಿಕೆಯ ವರ್ಗಾವಣೆಯೆಂದರೆ ಒಂದು ಸನ್ನಿವೇಶದಲ್ಲಿ ಕಲಿತ ಜ್ಞಾನ, ತರಬೇತಿ ಕುಶಲತೆ ಹಾಗೂ ಅಭ್ಯಾಸಗಳನ್ನು ಇನ್ನೊಂದು ಸನ್ನಿವೇಶಕ್ಕೆ ವರ್ಗಾಯಿಸುವುದಾಗಿದೆ." ಎಂದು **SORENSON-Educational Psychologist** ವ್ಯಾಖ್ಯಾನಿಸಿದ್ದಾರೆ.

---

40. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ –14, ಪು –354–355.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

"ಒಂದು ಸನ್ನಿವೇಶದಲ್ಲಿ ಕಲಿತ ವಿಷಯಗಳ ಸಾಮಾನ್ಯೀಕರಣವೇ ಕಲಿಕೆಯ ವರ್ಗಾವಣೆ" ಎಂದು **C.H.JUDD -(Theory of Generalization)** ಹೇಳಿದ್ದಾರೆ.[41]

ನಮ್ಮ ಮನೋಧೋರಣೆಗಳು, ಅಭ್ಯಾಸಗಳು ಹಾಗೂ ಆಸಕ್ತಿಗಳು ವರ್ಗಾವಣೆಯಾಗುವ ಮೂಲಕ ಮುಂದಿನ ವಿವಿಧ ಸನ್ನಿವೇಶಗಳಲ್ಲಿ ನೆರವಾಗುತ್ತವೆ. ಇದೇ ಕಲಿಕೆಯ ವರ್ಗಾವಣೆ. ಕಲಿಕೆಯ ವರ್ಗಾವಣೆ ಮೂರು ವಿಧದಲ್ಲಾಗುತ್ತದೆ. ಒಂದು ಸನ್ನಿವೇಶದಲ್ಲಿ ನಾವು ಏನನ್ನು ಕಲಿಯುತ್ತೇವೆಯೋ ಅದರ ಕಾರಣದಿಂದ ಇನ್ನೊಂದು ಸನ್ನಿವೇಶದಲ್ಲಿ ಕಲಿಕೆ ಹೆಚ್ಚು ಪರಿಣಾಮಕಾರಿಯಾಗುತ್ತದೆ. ಇದನ್ನು ಧನಾತ್ಮಕ ವರ್ಗಾವಣೆ**(Positive Transfer)** ಎನ್ನುತ್ತಾರೆ. ಒಂದು ಸನ್ನಿವೇಶದಲ್ಲಿ ಕಲಿತ ವಿಷಯವು ಇನ್ನೊಂದು ಕ್ಷೇತ್ರದ ಕಲಿಕೆಗೆ ಅಡ್ಡಿಯನ್ನುಂಟುಮಾಡಿದರೆ ಅದನ್ನು ಋಣಾತ್ಮಕ ವರ್ಗಾವಣೆ**(Negative Transfer)** ಎನ್ನುತ್ತಾರೆ. ಒಂದು ಸನ್ನಿವೇಶದಲ್ಲಿ ಕಲಿತ ವಿಷಯ ಅಥವಾ ಪಡೆದ ಅನುಭವ ಇನ್ನೊಂದು ಸನ್ನಿವೇಶದಲ್ಲಿ ಯಾವುದೇ ಪರಿಣಾಮ ಬೀರದಿದ್ದಾಗ, ಅಂತಹ ವರ್ಗಾವಣೆಯನ್ನು ಶೂನ್ಯ ವರ್ಗಾವಣೆ **(Zero Transfer)** ಎನ್ನುತ್ತಾರೆ.[42]

ಕಲಿಕೆಯ ವರ್ಗಾವಣೆಯು ಶಿಕ್ಷಣ ಕ್ಷೇತ್ರದಲ್ಲಿ ಮಹತ್ವದ ಪಾತ್ರವನ್ನು ವಹಿಸಿದೆ. ಹಿಂದೆ ಗಳಿಸಿದ ಅನುಭವದ ವರ್ಗಾವಣೆ ಹೆಚ್ಚಾದಷ್ಟು ಹೊಸ ಸನ್ನಿವೇಶದಲ್ಲಿ ಬೇರೆ ವಿಷಯಗಳನ್ನು ಕಲಿಯುವುದು ಸುಲಭವಾಗುತ್ತದೆ. ಬೋಧಕನಿಗೆ ತಾನು ಬೋಧನೆ ಮಾಡುತ್ತಿರುವ ವಿಷಯದ ಯಾವ ತತ್ವಗಳು, ನಿಯಮ ಅಥವಾ ಸಾಮಾನ್ಯೀಕರಣಗಳ ಕಲಿಕೆಯ ಇತರ ಕ್ಷೇತ್ರಗಳಿಗೆ ವರ್ಗಾಯಿಸಲ್ಪಡಬೇಕು ಎಂಬುದರ ಕುರಿತು ಸ್ಪಷ್ಟ ಅರಿವು ಇರಬೇಕು. ಪರಿಕಲ್ಪನೆಗಳು ಅಥವಾ ಕಾರ್ಯದಲ್ಲಿ ಸಾಕಷ್ಟು ಅನುಭವ ಒದಗಿಸಿ ಮೂಲ ಕ್ರಿಯೆ ಅಥವಾ ಕಾರ್ಯದ ಬಗ್ಗೆ ಹೆಚ್ಚಿನ ತರಬೇತಿ ನೀಡಿದರೆ ಮುಂದಿನ ಸನ್ನಿವೇಶಕ್ಕೆ ಹೆಚ್ಚಿನ ಧನಾತ್ಮಕ ವರ್ಗಾವಣೆಯಾಗುವ ಸಾಧ್ಯತೆಯಿರುತ್ತದೆ. ವಿದ್ಯಾರ್ಥಿಗಳು ಅರ್ಥಪೂರ್ಣವಾಗಿ ಮತ್ತು ಒಳನೋಟಗಳ ಮೂಲಕ ಕಲಿಯಲು ಪ್ರೋತ್ಸಾಹಿಸಬೇಕು. ಪ್ರಾಯೋಗಿಕ ಸನ್ನಿವೇಶಗಳು ಮತ್ತು ಸೂಕ್ತ ಅನುಭವಗಳ ಮೂಲಕ ಉತ್ತಮ ಆದರ್ಶವನ್ನು ಬೆಳೆಸಬೇಕು.

ಪಂಚತಂತ್ರದಲ್ಲಿ ಮೊದಲನೆಯದಾಗಿ, ಮಾನವ ಪ್ರಪಂಚದ, ಅನುಭವಗಳು ವರ್ತನೆಗಳು, ಭಾವನೆಗಳನ್ನು ಪ್ರಾಣಿಪಶುಪಕ್ಷಿಗಳಿಗೆ ಆರೋಪಿಸಿ ಆಕರ್ಷಕ ಕಥೆಗಳನ್ನು ವ್ಯವಸ್ಥಿತವಾಗಿ ಹೆಣೆಯಲಾಗಿದೆ. ಆ

---

41. **ವಾಮದೇವಪ್ಪ. ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-6, ಪು-278,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ. ದಾವಣಗೆರೆ-577005
42. **ವಾಮದೇವಪ್ಪ ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ -6, ಪು -278,279.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005.

ಕಥೆಗಳಿಂದ ಪಡೆದ ಅನುಭವಗಳು, ವರ್ತನೆಗಳು ಕೇಳುಗರಿಗೆ ಮನೋಜ್ಞವಾಗಿ ಗ್ರಹಿಸಲು ಸಾಧ್ಯವಾಗುತ್ತದೆ. ಅಲ್ಲಿ ಅವರು ಪಡೆದ ಜ್ಞಾನವನ್ನು ತಮ್ಮ ಜೀವನಕ್ಕೆ ಅಳವಡಿಸಿಕೊಂಡಾಗ ಅದ್ಭುತವಾದ ಕಲಿಕೆಯ ವರ್ಗಾವಣೆ ಉಂಟಾಗುತ್ತದೆ. ರಾಜನೀತಿ, ಸಾರ್ಥಕ ಬದುಕಿನ ನೀತಿನಿಯಮಗಳು ಮಂದಮತಿಗಳಾದ ಅರಸುಕುಮಾರರಿಗೆ ಕೇಳುತ್ತ, ಕೇಳುತ್ತ ಅರ್ಥಪೂರ್ಣವಾಗಿ ಗ್ರಹಿಸುತ್ತಾ, ಪಡೆದ ಜ್ಞಾನವನ್ನು ಮುಂದೆ ಮುಂದೆ ಅವರ ಜೀವನಕ್ಕೆ ಅಳವಡಿಸಿಕೊಂಡಾಗ, ಅವರು ಎಷ್ಟರಮಟ್ಟಿಗೆ ಪರಿವರ್ತಿತರಾದರು ಎಂಬುದು ತಿಳಿದದ್ದೇ ಆಗಿರುತ್ತದೆ. ಇಂಥಹ ಕಲಿಕೆಯ ವರ್ಗಾವಣೆಗೆ ಮೇಧಾವಿ ಶಿಕ್ಷಕರಾದ ವಿಷ್ಣುಶರ್ಮರು ಅಷ್ಟೇ ವ್ಯವಸ್ಥಿತ ಸನ್ನಿವೇಶಗಳನ್ನು ಹಾಗೂ ದೃಷ್ಟಾಂತಗಳನ್ನು ಒದಗಿಸಿ ಪ್ರೋತ್ಸಾಹಿಸಿದ್ದಾರೆ.



# ೩-೫. पञ्चतन्त्रस्य- प्रथमं तन्त्रम्- * मित्रभेदः *

## ಕಥೆಗಳ ವಿಶ್ಲೇಷಣೆ.

ಪಂಚತಂತ್ರದಲ್ಲಿನ ಮೊದಲ ತಂತ್ರ **"ಮಿತ್ರಭೇದ"**ವು ಉಳಿದ ನಾಲ್ಕು ತಂತ್ರಗಳಿಗಿಂತಲೂ ಅತ್ಯಂತ ವಿಸ್ತೃತ ಗ್ರಂಥಭಾಗವಾಗಿರುತ್ತದೆ. ಗೆಳೆತನದಲ್ಲಿ ಒಡಕು ಅಥವಾ ಭೇದ ಮೂಡಲು ಕಾರಣವಾಗುವಂಥ ಸನ್ನಿವೇಶಗಳನ್ನು ಈ ತಂತ್ರದ ಕಥೆಗಳು ಪ್ರದರ್ಶಿಸುತ್ತವೆ. ರಾಜ ಪದವಿಯನ್ನು ಹೊಂದಿದ್ದ ಪಿಂಗಳಕ ಎಂಬ ಒಂದು ಸಿಂಹ, ಆ ರಾಜನ ಮಂತ್ರಿ ಸ್ಥಾನವನ್ನು ತುಂಬಿದ್ದ ಕರಟಕ, ದಮನಕ ಎಂಬ ಎರಡು ನರಿಗಳು ಮತ್ತು ಸಂಜೀವಕನೆಂಬ ಎತ್ತು ಇವುಗಳು ಮುಖ್ಯ ಭೂಮಿಕೆಯಲ್ಲಿ ಕಂಡುಬರುತ್ತವೆ. ಕಪಟತನಕ್ಕೆ ಹೆಸರುವಾಸಿಯಾದ ನರಿಗಳು ಸಿಂಹ ಹಾಗೂ ಎತ್ತಿನ ಮಧ್ಯೆ ಹಗೆತನವನ್ನು ಮೂಡಿಸಿ ಎತ್ತಿನ ಅಂತ್ಯಕ್ಕೆ ಕಾರಣವಾಗುವುದೇ ಈ ಗ್ರಂಥ ಭಾಗದ ತಿರುಳಾಗಿದೆ. ಈ ತಂತ್ರದಲ್ಲಿ ಒಟ್ಟು ಇಪ್ಪತ್ತೆರಡು ಉಪಕಥೆಗಳು ಬಹಳ ಉತ್ತಮ ಸನ್ನಿವೇಶಗಳನ್ನೊದಗಿಸಿ ಮಿತ್ರತ್ವದಲ್ಲಿ ಹಗೆತನ ಅದರಿಂದ ಒಡಕು ಅಥವಾ ಭೇದ ಮತ್ತು ಅದರ ಪರಿಣಾಮವನ್ನು ಬಹಳ ಅಚ್ಚುಕಟ್ಟಾಗಿ ಪ್ರತಿಬಿಂಬಿಸುತ್ತವೆ.

ಪಂಚತಂತ್ರದ ಮೊದಲನೆಯ ತಂತ್ರವಾದ ಮಿತ್ರಭೇದದ ಮೊದಲ ನುಡಿ ಒಳ್ಳೆಯ ಗಾಢವಾದ ಸ್ನೇಹ ಹೇಗೆ ನಾಶವಾಯಿತು ಎಂಬುದರಿಂದ ಪ್ರಾರಂಭವಾಗುತ್ತದೆ. ಬಹಳ ಒಳ್ಳೆಯ ತಿಳುವಳಿಕೆಯನ್ನು ಸೂಕ್ತಿಗಳ ರೂಪದಲ್ಲಿ ಸರಳ ಹಾಗೂ ಆಕರ್ಷಕ ಕಥೆಗಳ ಮೂಲಕ ರಾಜನಂದನರಿಗೆ ಬೋಧಿಸಲಾಗಿರುತ್ತದೆ. ಉದಾಹರಣೆಗೆ:-

मृगा मृगैः सङ्गमनुव्रजन्ति गावश्च गोभिस्तुरगास्तुरङ्गैः।

मूर्खाश्च मूर्खैः सुधियः सुधीभिः समानशीलव्यसनेषु सख्यम् ॥[43]

ಮೃಗಗಳು - ಮೃಗಗಳೊಡನೆ, ಹಸುಗಳು - ಹಸುಗಳೊಡನೆ, ಕುದುರೆಗಳು - ಕುದುರೆಗಳೊಡನೆ, ಮೂರ್ಖರು ಮೂರ್ಖರೊಡನೆ, ವಿದ್ವಾಂಸರು - ವಿದ್ವಾಂಸರೊಡನೆ ಸೇರುತ್ತಾರೆ. ಗುಣಶೀಲಾಭ್ಯಾಸಗಳು ಸಮಾನವಾಗಿದ್ದವರೊಡನೆ ಸ್ನೇಹ ಬೆಳೆಯುತ್ತದೆ.

ವ್ಯಕ್ತಿಯ ಬೆಳವಣಿಗೆಯಲ್ಲಿ ಮೂಲಸ್ವಭಾವ ಮತ್ತು ಸನ್ನಿವೇಶಗಳ ಪ್ರಭಾವ, ವೈಯುಕ್ತಿಕ ಭಿನ್ನತೆಗಳು, ಅಭಿಪ್ರೇರಣೆ, ಅವಧಾನ, ಸ್ಮೃತಿ, ವಿಸ್ಮೃತಿ, ಕಲಿಕೆಯ ವರ್ಗಾವಣೆ ಇವುಗಳ ಬಗ್ಗೆ ಶೈಕ್ಷಣಿಕ ಮನೋವಿಜ್ಞಾನದಲ್ಲಿ

---

೪೩. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ-ಶ್ಲೋ -೩೦೫, ಪು -೧೯೬,(೧೯೯೩) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-೨೨೧೦೦೧.

ಕಂಡು ಬರುವಂತೆ ವಿಚಾರಮಾಡಿ, ಕಲಿವಿನ ಬಗ್ಗೆ ಇವುಗಳು ಹೇಗೆ ಪರಿಣಾಮಕಾರಿಯಾಗಬಲ್ಲವು ಎಂಬುದರ ಬಗ್ಗೆ ಪರಿಚಯಮಾಡಿಕೊಂಡಂತಾಯಿತು. ಈ ಹಿನ್ನೆಲೆಯಲ್ಲಿ ಪಂಚತಂತ್ರ ನೀತಿ ಕಾವ್ಯದ ವ್ಯವಸ್ಥಿತ ಕಥಾಸಂಕಲನದಲ್ಲಿ ಈ ಮನೋವೈಜ್ಞಾನಿಕ ಹಾಗೂ ಶೈಕ್ಷಣಿಕ ಅಂಶಗಳನ್ನು ಎಷ್ಟರಮಟ್ಟಿಗೆ ಕಾಣಬಹುದು ಎಂಬುದನ್ನು ವಿಶ್ಲೇಷಿಸೋಣ.

ಪ್ರತಿಭಾನ್ವಿತ ಶಿಕ್ಷಕರೂ, ಸಕಲ ಶಾಸ್ತ್ರಪಾರಂಗತರೂ ಆದ ವಿಷ್ಣುಶರ್ಮರು ಕಥೆಯ ಚೌಕಟ್ಟನ್ನೇ ಬಹಳ ಅಚ್ಚುಕಟ್ಟಾಗಿ ನಿರ್ಮಿಸಿ, ಅದರೊಳಗೆ ಸಣ್ಣಸಣ್ಣ ಉಪಕಥೆಗಳನ್ನು ಸಂಯೋಜಿಸಿ ಸಮರ್ಪಕವಾದ ದೃಷ್ಟಾಂತಗಳನ್ನೊದಗಿಸಿ, ರಾಜಕುಮಾರರಿಗೆ ಆಸಕ್ತಿಯುತವಾಗಿ, ಅರ್ಥಪೂರ್ಣವಾಗಿ ಬದುಕಿನ ವ್ಯವಹಾರ ನೀತಿಯನ್ನು, ವ್ಯಕ್ತಿತ್ವ ನಿರ್ಮಾಣ ಕೌಶಲ್ಯವನ್ನು ಸೂಕ್ತ ಸಮಯದಲ್ಲಿ ಒದಗಿಸಿ ಬೋಧಿಸುತ್ತಾ, ಚಮತ್ಕಾರಯುತವಾಗಿ ಅದರಲ್ಲೇ, ಅವರ ಅವಧಾನ, ಆಸಕ್ತಿ, ಸ್ಮರಣಶಕ್ತಿ ಮತ್ತು ಚಿಂತನಶೀಲತೆಯನ್ನು ಸೆರೆ ಹಿಡಿದಿದ್ದಾರೆ ಎಂಬುದು ಬಹಳ ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಹಿಂದೆ ಸಂಕ್ಷಿಪ್ತವಾಗಿ ವಿಶ್ಲೇಷಿಸಿರುವ ಕಲಿಕೆ – ಅದರ ಅರ್ಥ – ಕಲಿಯುವ ಕ್ರಮ, ಕಲಿಯುವ ವಿಧಗಳು, ಕಲಿಕಾ ನಿಯಮಗಳು, ಕಲಿಕಾ ಸಿದ್ಧಾಂತಗಳು ಇತ್ಯಾದಿ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ವಿಷ್ಣುಶರ್ಮರ ಪಂಚತಂತ್ರದ ಅಧ್ಯಯನ ನಡೆಸಿದಾಗ ನಮಗೆ ಬಹಳಷ್ಟು ಶೈಕ್ಷಣಿಕ, ಮನೋವೈಜ್ಞಾನಿಕ ವಿಚಾರಗಳು ಪ್ರತಿಬಿಂಬಿಸುತ್ತವೆ. ಮನೋವಿಜ್ಞಾನದಲ್ಲಿ ಕಲಿವೇ ಪ್ರಧಾನವಾದದ್ದು. ಹಾಗೆಯೇ ಪಂಚತಂತ್ರದಲ್ಲಿ ಕಂಡು ಬರುವ ಮೂವರು ದುರ್ವಿನೀತ ರಾಜಕುಮಾರರ ಮೂಲ ಸ್ವಭಾವ ಮತ್ತು ವರ್ತನೆಗಳನ್ನು ಗುರುತಿಸಿ, ಅಂದರೆ ಅವರು ಸೋಮಾರಿಗಳು, ಆಲಸಿಗಳು, ಮೂರ್ಖರು, ಬುದ್ಧಿಶೂನ್ಯರು ಎಂಬುದನ್ನು ಗಮನಿಸಿ, ಮೊದಲೇ ಮೂರ್ಖರಿಗೆ ಉಪದೇಶ ಮಾಡುವುದು ಅಲ್ಲ ಎಂದು ಒಂದು ಸೂಕ್ತಿ ಹೇಳುತ್ತದೆ:–

उपदेशो हि मूर्खाणां प्रकोपाय न शान्तये

पयःपानं भुजङ्गानां केवल विषवर्धनम् ॥[44]

ಮೂರ್ಖರಿಗೆ ಉಪದೇಶಮಾಡುವುದು ಅವರನ್ನು ರೇಗಿಸಲು ಕಾರಣವಾಗುತ್ತದೆಯೇ ಹೊರತು ಸಮಾಧಾನಪಡಿಸಲಲ್ಲ. ಸರ್ಪಗಳಿಗೆ ಹಾಲನ್ನೆರೆಯುವುದು, ಕೇವಲ ಅವುಗಳ ವಿಷವನ್ನು ಹೆಚ್ಚಿಸುವುದು. ಇಂಥಹ ಸಂದರ್ಭದಲ್ಲಿ ವಿಷ್ಣುಶರ್ಮರು ತೆಗೆದುಕೊಂಡಿರುವ ನಿರ್ಧಾರವು ಎಂಥಹವರೂ ಆಶ್ಚರ್ಯಪಡುವಂತಿದೆ.

---

44. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ ಶ್ಲೋ –420, ಪು–273(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ವಿಷ್ಣುಶರ್ಮರು ಅವರಿಗೆ ಅಗತ್ಯವಾದ ಹಾಗೂ ಅಪೇಕ್ಷಿತವಾದ ಪರಿವರ್ತನೆ ಅಥವಾ ಮಾರ್ಪಾಟು ಮಾಡಿ ಹೊಸವರ್ತನೆಗಳನ್ನು, ಜ್ಞಾನವನ್ನು, ಕೌಶಲ್ಯವನ್ನು, ದೃಷ್ಟಿಧ್ಯೇಯಗಳನ್ನು ಪರಿಚಯಮಾಡಿ ಕೊಡುವ ಪ್ರಯತ್ನವನ್ನು ಕಲಿವಿನ ಮೊದಲ ಭಾಗವಾಗಿ ವಿಶಿಷ್ಟವಾದ ಪಂಚಸೂತ್ರಗಳನ್ನು ರಚಿಸಿದರು. ರಾಜಕುಮಾರರು ಮುಂದೆ ಯುವರಾಜ ಪದವಿಗೆ ಅರ್ಹರಾಗಬೇಕಾದವರು. ದಕ್ಷಿಣಾತ್ಯ ದೇಶದ ಮಹಿಲಾರೋಪ್ಯ ನಗರದಲ್ಲಿ ದಾನದಲ್ಲಿ ಕಲ್ಪವೃಕ್ಷಕ್ಕೆ ಸಮನಾದ, ದೊಡ್ಡ ದೊಡ್ಡ ರಾಜರ ಕಿರೀಟದಲ್ಲಿರುವ ರತ್ನಗಳ ಕಿರಣಗಳಿಂದ ಪಾದಪೂಜೆಯನ್ನು ಪಡೆಯುತ್ತಿದ್ದ, ಸಕಲಕಲಾ ಪಾರಂಗತನಾದ "ಅಮರಶಕ್ತಿ"ಎಂಬ ರಾಜನು ಈ ರಾಜಕುಮಾರರ ತಂದೆ. ಆದರೇನು ಮಾಡುವುದು ಈ ಮಕ್ಕಳು ಶಾಸ್ತ್ರ ಜ್ಞಾನವನ್ನರಿಯದ ಅವಿವೇಕಿಗಳು. ಹೇಗೆ ಕರುವನ್ನು ನೀಡದ ಮತ್ತು ಹಾಲನ್ನು ಕೊಡದ ಹಸುವಿನಿಂದ ಏನೂ ಪ್ರಯೋಜನ ಇಲ್ಲವೋ ಹಾಗೆ ಬುದ್ಧಿವಂತನಲ್ಲದ, ವಿನಯಶೀಲನಲ್ಲದ ಮಗನಿಂದ ಏನೂ ಪ್ರಯೋಜನವಿಲ್ಲ. ಸತ್ಕುಲದಲ್ಲಿ ಮೂರ್ಖ ಮಕ್ಕಳು ಹುಟ್ಟುವುದಕ್ಕಿಂತ, ಅಂತಹ ಮಕ್ಕಳ ಮರಣವೇ ಲೇಸು. ಎನ್ನುವಷ್ಟರಮಟ್ಟಿಗೆ ರಾಜನು ಚಿಂತಾಕ್ರಾಂತನಾಗಿದ್ದನು.[45]

वरं गर्भस्रावे वरमृतुषु नैवाभिगमनम्

वरं जातः प्रेतो वरमपि च कन्यैव जनिता ।

वरं वन्ध्या भार्या वरमपि च गर्भेषु वसति

र्न चविद्वान्रूपद्रविणगुणयुक्तोऽपि तनयः ॥[46]

ಅಂದರೆ ಮೂರ್ಖನಾಗಿ ಹುಟ್ಟುವುದಕ್ಕಿಂತ ಗರ್ಭಪಾತವೋ, ಋತುಕಾಲದಲ್ಲಿ ಹೆಂಡತಿಯೊಡನೆ ಕೂಡದೆ ಇರುವುದೋ, ಹುಟ್ಟಿ ಸತ್ತು ಹೋಗುವುದೋ, ಹೆಣ್ಣಾಗಿ ಹುಟ್ಟುವುದೋ, ಹೆಂಡತಿಗೆ ಮಕ್ಕಳಾಗದಿರುವುದೋ ಅಥವಾ ಮಗುವು ಗರ್ಭದಿಂದ ಹೊರಗೆ ಬರದೇ ಇರುವುದೋ – ಇದು ಯಾವುದಾದರೂ ಒಳಿತು. ಆದರೆ ರೂಪ, ದ್ರವ್ಯ, ಗುಣ ಸಂಪನ್ನನಾಗಿದ್ದರೂ ಮೂರ್ಖ ಪುತ್ರನಾಗಿದ್ದರೆ, ಅದು ಸರಿಯಲ್ಲ.

---

**45. Chandra Rajan,** VISNU SARMA (Eng.Trns) Introduction- pp-xxxii,1993. Penguin Random House India Pvt.Ltd. 7th Floor, Infinity Tower C, DLF Cyber City, Gurgoan,-122002, Haryana, India

46. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಥಾಮುಖಮ್ ಶ್ಲೋ –5, ಪು –4,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಈ ಮಕ್ಕಳ ಬುದ್ಧಿ ವಿಕಸನಗೊಳಿಸುವ ಕುರಿತು ಏನಾದರೂ ಉಪಾಯವಿದೆಯೇ? ಎಂದು ಅವನ ಆಶ್ರಯದಲ್ಲಿದ್ದ ಪಂಡಿತರಲ್ಲಿ ವಿಚಾರಿಸಲಾಗಿ, ಅವರಲ್ಲಿ ಸುಮತಿ ಎಂಬ ಸಚಿವನು ಹೀಗೆ ಸಲಹೆ ನೀಡಿದರು." ಈ ಜೀವನ ಶಾಶ್ವತವಲ್ಲ ಮತ್ತು ಶಾಸ್ತ್ರಗಳನ್ನೆಲ್ಲಾ ದೀರ್ಘಕಾಲದಿಂದ ಅಭ್ಯಾಸ ಮಾಡಬೇಕು.ಹೀಗಿರುವಾಗ ಶಾಸ್ತ್ರವನ್ನು ಸಂಕ್ಷೇಪದಲ್ಲಿ ಇವರಿಗೆ ಬೋಧಿಸುವುದಕ್ಕೆ ಆಗುತ್ತದೆಯೇ ಎಂದು ವಿಚಾರಮಾಡಬೇಕು. ವ್ಯಾಕರಣ ಮುಂತಾದ ಶಾಸ್ತ್ರಗಳಿಗೆ ಕೊನೆಯೆಂಬುದಿಲ್ಲ. ಅಲ್ಲದೆ ಇರುವ ಕಡಿಮೆ ಆಯಸ್ಸಿನಲ್ಲಿ ವಿಘ್ನಗಳು ಹಲವಾರು. ಹಾಗಾಗಿ ಹಂಸಕ್ಷೀರ ನ್ಯಾಯದಂತೆ ಶಾಸ್ತ್ರಗಳಲ್ಲಿ ಅಷ್ಟೇನೂ ಮುಖ್ಯವಲ್ಲದ ವಿವರವಾದದ್ದನ್ನು ಬಿಟ್ಟು ಕೇವಲ ಸಾರಮಾತ್ರವನ್ನು ತಿಳಿದುಕೊಳ್ಳಬೇಕಾಗುತ್ತದೆ. ಬಹಳ ಗಂಭೀರ ಚಿಂತನೆ ಮಾಡಿ ನೋಡಿದ್ದರಲ್ಲಿ, ಈ ಪ್ರದೇಶದಲ್ಲಿ ಸಕಲಶಾಸ್ತ್ರ ಪಾರಂಗತರಾದ, ವಿದ್ಯಾರ್ಥಿ ಸಮುದಾಯದಲ್ಲಿ ಹೆಸರುವಾಸಿಯಾದ ವಿಷ್ಣುಶರ್ಮರೆಂಬ ಬ್ರಾಹ್ಮಣರಿದ್ದಾರೆ. ಅವರು ಖಂಡಿತವಾಗಿಯೂ ಇವರನ್ನು ಬುದ್ಧಿವಂತರನ್ನಾಗಿ ಮಾಡುವರು." ರಾಜನು ವಿಷ್ಣುಶರ್ಮರನ್ನು ಆಸ್ಥಾನಕ್ಕೆ ಆಹ್ವಾನಿಸಿ, ತನ್ನ ವಿಚಾರವನ್ನು ನಿವೇದಿಸಿಕೊಂಡನು. ಪರಿಸ್ಥಿತಿಯನ್ನು ಗಮನಿಸಿದ ವಿಷ್ಣುಶರ್ಮರು ರಾಜನ ಸಹಾಯಕ್ಕೆ ಸಿದ್ಧರಾದರು. ಸಿಂಹನಾದದಿಂದ ಈ ರೀತಿ ಪ್ರತಿಜ್ಞೆ ಮಾಡಿದರು.

यद्यहं षण्मासाभ्यन्तरे तव पुत्रान्नयशास्त्रं प्रत्यनन्यसदृशान्न

करिष्यामि,ततो नार्हति देवो देवमार्ग संदर्शयितुम् ।[47]

ಕೇವಲ ಆರು ಮಾಸಗಳಲ್ಲಿ ಆ ಕಾರ್ಯ ನಿರ್ವಹಿಸುವುದಾಗಿ ವಚನವಿತ್ತರು.[48] ವಿಷ್ಣುಶರ್ಮರು ತಮ್ಮ ಆಶ್ರಮದಲ್ಲಿ ರಾಜಪುತ್ರರಿಗೆ ಶುಭ ಮಹೂರ್ತದಲ್ಲಿ ವಿದ್ಯೆಕಲಿಸತೊಡಗಿದ ಸಂದರ್ಭದಲ್ಲಿ ರಾಜಪುತ್ರರ ಗಮನ ಎಲ್ಲೋ ಇದ್ದಿತ್ತು. ರಾಜಕುಮಾರರು ಕಲಿಯಲು ಸಿದ್ಧರಾಗೇ ಇರಲಿಲ್ಲ. ಬಹಳ ಉದ್ಧಟರಾಗಿದ್ದು ಸ್ವೇಚ್ಛಾಪ್ರವೃತ್ತಿಯಿಂದ ಕೂಡಿದ್ದರು. ಅವರನ್ನು ಹೇಗೆ ಬದಲಾಯಿಸುವುದೆಂಬುದೇ, ಅಷ್ಟೆಲ್ಲಾ ಉಪಾಯಗಳನ್ನು ಬಲ್ಲ ಪ್ರತಿಭಾನ್ವಿತ ವಿಷ್ಣುಶರ್ಮರಿಗೇ ಒಂದು ಕಗ್ಗಂಟಾಯಿತು. ಪ್ರಾರಂಭದಲ್ಲಿ ಕಥಾ ಮಾಧ್ಯಮ ಆಯ್ಕೆ ಮಾಡಿಕೊಂಡು ಕಲಿಸಲು ಪ್ರಯತ್ನಿಸಿದರೆ "ಗೋರ್ಕಲ್ಲ ಮೇಲೆ ಮಳೆ ಸುರಿದಂತೆ" ವ್ಯರ್ಥವಾಗುತ್ತಿತ್ತು. ಮಾರನೆಯ ದಿನ ಹೇಗಾದರೂ ಮಾಡಿ ಅವರಲ್ಲಿ ಕುತೂಹಲ ಮೂಡಿಸಲು ಯೋಚಿಸುತ್ತಿರುವಾಗ, ರಾಜಕುಮಾರರು ಬಿಲ್ಲು ಬಾಣಗಳನ್ನು ಹಿಡಿದು ಬೇಟೆಗೆ ಹೋರಟಿದ್ದರು. ಈ ಸಮಯವನ್ನೇ ವಿಷ್ಣುಶರ್ಮರು ಉಪಯೋಗಿಸಿಕೊಂಡು ರಾಜಕುಮಾರರನ್ನು ಪ್ರೀತಿಯಿಂದ ಮಾತನಾಡಿಸಿ," ಈ ವನ ನಿಮಗೆ ಪರಿಚಯವಿಲ್ಲದ್ದು, ನಾನು ನಿಮಗೆ ದಾರಿ ತೋರಿಸುತ್ತೇನೆ"

---

47. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಥಾಮುಖಮ್, ಪು –9, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
48. **ಭರತ.ಬಿ.ರಾವ್,** ಪಂಡಿತ ವಿಷ್ಣುಶರ್ಮ ವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಕಥಾಮುಖ – ಪು –9–10.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್.ರಸ್ತೆ, ಬೆಂಗಳೂರು–560004.

ಎಂದರು. ರಾಜಕುಮಾರರಿಗೆ ಬಹಳ ಆನಂದವಾಯಿತು. ಅರಣ್ಯದ ತರುಲತೆ, ಮೃಗಪಕ್ಷಿಗಳನ್ನು ತೋರಿಸುತ್ತಾ, **"ಇದು ಆಶ್ರಮ. ಇಲ್ಲಿ ಬೇಟೆಯಿಲ್ಲ." "ಅರಣ್ಯದೊಳಕ್ಕೆ ಹೋಗಬೇಕು. ಅಲ್ಲಿಯ ತನಕ ನಿಮಗೆ ಬೇಸರವಾಗದಂತೆ ಒಂದು ಕಥೆ ಹೇಳಲೇ?"** ಎಂದು ವಿಷ್ಣುಶರ್ಮರು ರಾಜಕುಮಾರರನ್ನು ಕೇಳಿದರು. ರಾಜಕುಮಾರರಿಗೆ ಬಹಳ ಸಂತೋಷವಾಯಿತು. **"ಆಯಿತು ಗುರುಗಳೇ ಹೇಳಿ"**ಎಂದು ಕುತೂಹಲದಿಂದ ಕಥೆಗಾಗಿ ಕಿವಿಯರಳಿಸಿದರು. ಹೀಗೆ ವಿಷ್ಣುಶರ್ಮರು ಒಳ್ಳೆಯ ಅವಧಾನ, ಅಭಿಪ್ರೇರಣೆ, ಆಸಕ್ತಿಯನ್ನುಂಟುಮಾಡಿ, ರಾಜಕುಮಾರರು ಅವರೇ ಇಷ್ಟಪಟ್ಟು ಕಥೆ ಕೇಳುವಂತೆ ಹುರಿದುಂಬಿಸಿದರು. ಇಲ್ಲಿ ಕಲಿಸುವಿಕೆಯಲ್ಲಿ ಅವರಲ್ಲಿದ್ದ ದೃಢಸಂಕಲ್ಪ ಹಾಗೂ ಶ್ರದ್ಧೆ ಹೇಗಿತ್ತೆಂದು ಯೋಚಿಸಬಹುದು.

ರಾಜಕುಮಾರರನ್ನು ವಿದ್ಯಾರ್ಥಿಗಳಾಗಿ ಸ್ವೀಕರಿಸಿದ ವಿಷ್ಣುಶರ್ಮರು ಅವರುಗಳ ಮನಸ್ಸನ್ನರಿತು ಅವರೊಡನೆ ಒಂದು ಸಹೃದಯಿ ಸಂಬಂಧವನ್ನು ಬೆಳೆಸಿಕೊಂಡು **"ಪ್ರೀತಿಯ ರಾಜಕುವರರೇ"** ಎಂದು ಸಂಬೋಧಿಸುತ್ತ, **"ಒಂದು ದಿನ ಏನಾಯಿತು ಗೊತ್ತೇ?", "ಮೊನ್ನೆ ನಾವು ರಾಜಧಾನಿಯಿಂದ ಬರುವಾಗ ವಿಶಾಲವಾದ ಹೊಲಗಳಲ್ಲಿ ಎತ್ತರವಾಗಿ ಬೆಳೆದ ಕಬ್ಬನ್ನು ನೋಡಿದ್ದೆವು ಅಲ್ಲವೇ?" "ಹಾಗಾದರೆ ಈಗ ಹೇಳಿದ ಕಥೆಯನ್ನು ನೀವು ಮೂವರೂ ಸೇರಿ ಹೇಳಿ ನೋಡೋಣ." "ಒಂದಲ್ಲ ನೂರಾರು ಕಥೆ ಹೇಳ್ತೇನೆ. ಆದರೆ ನಾನು ಕೇಳಿದಾಗ ನೀವು ಆ ಕಥೆಯನ್ನು ಹೇಳಬೇಕು."**[49] ಹೀಗೆಲ್ಲ ಸ್ಫೂರ್ತಿದಾಯಕ ಪ್ರಶ್ನೆಗಳನ್ನು ಕೇಳುತ್ತಾ, ಅವರಲ್ಲಿ ಕಥೆಯ ಕಡೆ ಗಮನಸೆಳೆದರು – ಅವಧಾನವನ್ನುಂಟುಮಾಡಿದರು.

ಮನುಸ್ಮೃತಿಯಲ್ಲಿ ಹೇಳಿರುವಂತೆ ರಾಜಕುಮಾರರು ಬಹಳ ಶ್ರದ್ಧಾಭಕ್ತಿಯಿಂದ ವಿದ್ಯೆಯನ್ನು ಪಡೆಯಲು ಸಿದ್ಧರಾದರು. ಗುರುಗಳು ಶಿಷ್ಯರನ್ನು ಅಷ್ಟರ ಮಟ್ಟಿಗೆ ಪ್ರೇರೇಪಿಸಿ ಪರಿವರ್ತನೆ ಮಾಡಿದ್ದರು.

यथाखनन् खनित्रेण नरो वार्यधिगच्छति ।

तथा गुरुगतां विद्यां शुश्रूषुरधिगच्छति ॥[50]

ಗುದ್ದಲಿಯಿಂದ ಕಷ್ಟಪಟ್ಟು ಅಗೆಯುತ್ತಾ ಮನುಷ್ಯನು ಹೇಗೆ ನೀರನ್ನು ಹೊಂದುತ್ತನೋ, ಅದರಂತೆ-ಯೇ ಸೇವೆ ಮಾಡುತ್ತಾ, ಮಾಡುತ್ತಾ ಗುರುವಿನಲ್ಲಿನ ವಿದ್ಯೆಯನ್ನು ಪಡೆಯುತ್ತಾನೆ.

ಸ್ಮರಣೆಯಲ್ಲಿಟ್ಟುಕೊಂಡು ಪುನಃ ಕೇಳಿದಾಗ ಹೇಳಬೇಕೆಂದು ಅಭಿಪ್ರೇರಣೆ ನೀಡುತ್ತಾ, ಸ್ಮೃತಿ–

---

**49. ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, (ಕನ್ನಡ) ಮಿತ್ರಭೇದ– ಪು–19–20.(2015) ವರ್ಣಿಲ, 39/2–11, ಕಲ್ಯಾಣಿ ಗಾರ್ಡನ್, BSK 1ಸ್ಟೇಜ್, ಬೆಂಗಳೂರು–560050.

**50.** ಮನುಸ್ಮೃತಿ, 2–218.

ವಿಸ್ಮೃತಿಯನ್ನು ಆಗಾಗ್ಗೆ ಪರಿಚಯಿಸಿ, ಆ ಬಗ್ಗೆ ಜಾಗೃತಿ ಮೂಡಿಸಿದರು. ಅದಕ್ಕೆ ಸ್ಪಂದಿಸಿದ ಶಿಷ್ಯರು **"ಗುರುಗಳೇ, ನರಿಯೇ ಜಾಣ ಅಲ್ವಾ, ಹೀಗಿದ್ದೇ ಇನ್ನೊಂದು ಕಥೆ ಹೇಳಿ"**ಎಂದು ಕುತೂಹಲದಿಂದ ಕೇಳುವಂತೆ ಪ್ರೇರೇಪಿಸಿದ್ದಾರೆ. ಇದು ಪಂಚತಂತ್ರದಲ್ಲಿ ಕಂಡು ಬರುವ ಶೈಕ್ಷಣಿಕ ಮನೋವಿಜ್ಞಾನ. ವಿಷ್ಣುಶರ್ಮರ ಬೋಧನಾ ಪ್ರತಿಭೆ ಹಾಗೂ ಕಲಿಸುವ ಶ್ರದ್ಧೆಯನ್ನು ಸೂಚಿಸುತ್ತದೆ. ಕಥೆ ಹೇಳುವುದರ ಮಧ್ಯೆ ಮಧ್ಯೆ ಕೆಲವು ಅಭಿಪ್ರಾಯ ಪ್ರಚೋದಕ ಪ್ರಶ್ನೆಗಳನ್ನು ಕೇಳುತ್ತಾ ರಾಜಕುಮಾರರ ಕಲಿಕೆ ಹಾಗೂ ಸ್ಮರಣಶಕ್ತಿಯನ್ನು ಗಮನಿಸಿ ಪ್ರೋತ್ಸಾಹ ನೀಡುತ್ತಿದ್ದುದು ವಿಷ್ಣುಶರ್ಮರ ಶಿಕ್ಷಕ ವೃತ್ತಿಕೌಶಲ್ಯವನ್ನು ತಿಳಿಸುತ್ತದೆ.

ರಾಜಕುಮಾರರು ಪುನಃ ಹೇಳಿದ, ಅದರಲ್ಲೂ ಕ್ರಮತಪ್ಪಿದರೂ, ಅದನ್ನು ಸರಿಪಡಿಸಿಕೊಂಡು ಕಥೆಯನ್ನು ಹೇಳಿದಾಗ, ವಿಷ್ಣುಶರ್ಮರಿಗೆ ಸಂತೋಷ ಹಾಗೂ ಸಮಾಧಾನವುಂಟಾಯಿತು. ಕಥೆಯ ಮೂಲಕವೇ ಈ ಮಕ್ಕಳನ್ನು ತಿದ್ದಬೇಕೆಂದು ನಿಶ್ಚಯಿಸಿದರು. ಈ ಕಾರಣದಿಂದಲೇ, ರಾಜಕುಮಾರರಿಗೆ ಅಗತ್ಯವಾಗಿ ಬೇಕಾಗಿರುವ ರಾಜನೀತಿಶಾಸ್ತ್ರ, ಅರ್ಥಶಾಸ್ತ್ರ, ನೀತಿಶಾಸ್ತ್ರ, ಬದುಕಿನ ಸಾರ್ಥಕತೆಗೆ ಬೇಕಾದ ತಿಳುವಳಿಕೆ ಇತ್ಯಾದಿಗಳನ್ನು ಪಂಚಸೂತ್ರಗಳಲ್ಲಿ ವ್ಯವಸ್ಥಿತವಾಗಿ ಅಳವಡಿಸಿ, ಆಯ್ದ ಸುಭಾಷಿತಗಳನ್ನು, ನಾಣ್ಣುಡಿಗಳನ್ನು, ನೀತಿ ಶ್ಲೋಕಗಳನ್ನು ಸೇರಿಸಿ, ಆಕರ್ಷಕ ಕಥೆಗಳನ್ನು ಸಂಯೋಜನೆ ಮಾಡಿ ಉತ್ತಮ ಪಠ್ಯಕ್ರಮವನ್ನು ವಿಷ್ಣುಶರ್ಮರು ರಚಿಸಿದ್ದಾರೆ.[51] ವಿವೇಕಚೂಡಾಮಣಿಯಲ್ಲಿ ಒಂದು ಮಾತಿದೆ:-

शब्दजालं महारण्यं चित्तभ्रमणकारणम् ।

अतः प्रयत्नाज्ज्ञा तव्यं तत्वज्ञात्तत्त्वमात्मनः ॥[52]

ಅಂದರೆ ಶಬ್ದಜಾಲವೆಂಬುದು ದೊಡ್ಡ ಅರಣ್ಯ. ಬುದ್ಧಿಯು ದಾರಿತಪ್ಪಿ ಭ್ರಮಿಸುವುದಕ್ಕೆ ಇದು ಕಾರಣ. ಆದ್ದರಿಂದ ತತ್ವವನ್ನರಿತ ಗುರುವಿನಿಂದ ಆತ್ಮತತ್ವವನ್ನು ಅರಸಿ ತಿಳಿದುಕೊಳ್ಳಬೇಕು. ಹೀಗೆಯೇ ಸಕಲಶಾಸ್ತ್ರಪಾರಂಗತರಾದ ವಿಷ್ಣುಶರ್ಮರನ್ನು ಅಮರಶಕ್ತಿ ರಾಜನು ತನ್ನ ಕುಮಾರರಿಗೆ ಸೂಕ್ತ ಶಿಕ್ಷಣವನ್ನು ನೀಡಿ ಅವರ ಜನ್ಮ ಸಾರ್ಥಕಪಡಿಸಬೇಕೆಂಬುದಾಗಿ ಕೋರಿಕೊಂಡನು. ಅವರಿಗೆ ಸೂಕ್ತವಾದ ಪಠ್ಯಕ್ರಮವನ್ನು ಮೇಧಾವಿ ವಿಷ್ಣುಶರ್ಮರು ಸಿದ್ಧಮಾಡಿಬಿಟ್ಟರು.

ಪಂಚಸೂತ್ರಗಳಲ್ಲಿ ಸಂವಿಧಾನಗೊಳಿಸಿರುವ ಪಂಚತಂತ್ರ ನೀತಿಕಥೆಗಳು ಅತ್ಯಂತ ವ್ಯವಸ್ಥಿತವಾಗಿ ಸಂಕಲನಗೊಂಡಿದ್ದು, ಅದರಲ್ಲೂ ಒಂದೊಂದು ಕಥೆಯೂ ಮುಂದಿನ ಕಥೆಗೆ ಪ್ರೇರಕವಾಗಿರುತ್ತದೆ. ಒಂದು

---

**51. Chandramani.G.L,** Panchatantra (English), Preface-PP-5,6. Rupa Publications India Pvt. Ltd.1991, 7/16, Ansari Road, Daryaganj, New Delhi-110002.

52. **ವಿವೇಕಚೂಡಾಮಣಿ** -ಶ್ಲೋ-೬೦.

ಕಥೆಯ ಅಂತ್ಯ ಮತ್ತೊಂದು ಕಥೆಗೆ ಸರಪಳಿಕೊಂಡಿಯಂತೆ ಸಂಪರ್ಕ ಸಂಯೋಜಿಸುವಂತೆ ವಿಷ್ಣುಶರ್ಮರು ಸಿದ್ಧಪಡಿಸಿ ರಾಜಕುಮಾರರನ್ನು ಆಸಕ್ತಿಯುತವಾಗಿ ಮುನ್ನಡೆಸಿ ವಿದ್ಯೆ ಕಲಿಯುವಂತೆ ಪ್ರೇರೇಪಿಸಿರುವ ಇವರ ಬೋಧನಾ ಪ್ರತಿಭೆಯು ಯಾವ ಶೈಕ್ಷಣಿಕ ಮನೋವಿಜ್ಞಾನದ ನೀತಿ–ನಿಯಮಗಳ ಮುಂದೆ ಕಡಿಮೆಯಾಗಿದೆ !!! ಇಷ್ಟಲ್ಲದೆ ಕಥೆ ಹೇಳುವ ಕಲೆ, ಶೃತಿ, ಧ್ವನಿ, ಇವೆಲ್ಲವೂ ಕೇಳುಗನು ತಾನೇ ಆ ಅನುಭವದಲ್ಲಿ ತೇಲಾಡುತ್ತಿದ್ದಾನೆಯೋ ಎಂಬಂತೆ ಮನಸ್ಸನ್ನು ಸೆರೆಹಿಡಿದು ಬಿಡುತ್ತದೆ.ಈ ವಿಷಯದಲ್ಲಿ ವಿಷ್ಣುಶರ್ಮರಿಗೆ ಅಸಾಧಾರಣ ಕೌಶಲ್ಯವಿದ್ದಿತೆಂದು ಹೇಳಬಹುದು. ಕಥೆಹೇಳುವ ಸಂದರ್ಭದಲ್ಲಿ ಆಗಾಗ್ಗೆ ಜಾಗೃತಿಯಿಂದ ರಾಜಕುಮಾರರ ಆಸಕ್ತಿ ಹಾಗೂ ಅವರ ಕಲಿಕೆಯನ್ನು ಪರೀಕ್ಷಿಸಲು ಮಧ್ಯೆ ಮಧ್ಯೆ ಗಮನ ಸೆಳೆಯುವ ಪ್ರಶ್ನೆಗಳನ್ನು ಕೇಳುತ್ತಾ, ಕಲಿತದ್ದನ್ನು ದೃಢಪಡಿಸುತ್ತಾ, ಮುಂದಿನ ಕಲಿವಿಗೆ ಪ್ರಚೋದಕ ಸನ್ನಿವೇಶಗಳನ್ನು ಒದಗಿಸಿ ಪ್ರೋತ್ಸಾಹಿಸುತ್ತಾ ಇದ್ದುದೇ ವಿಷ್ಣುಶರ್ಮರ ಬೋಧನಾ ಪ್ರತಿಭೆಯೆನ್ನಬಹುದು.

ಪಂಚತಂತ್ರದ ಐದು ತಂತ್ರಗಳು, ಮನುಷ್ಯರಿಗೆ, ವಿಶೇಷವಾಗಿ ರಾಜರಾದವರಿಗೆ ಕಾರ್ಯಸಾಧನೆಯಲ್ಲಿ ಉಪಯೋಗಕ್ಕೆ ಬರುತ್ತದೆ ಎಂಬುದನ್ನು, ವಿವಿಧ ಕಥೆಗಳ ಮೂಲಕವೇ ಅರಿವು ಮೂಡಿಸುವುದು ಸೂಕ್ತ ಎಂದು ವಿಷ್ಣುಶರ್ಮರು ನಿರ್ದರಿಸಿದರು.

ಮೊದಲನೆಯ ತಂತ್ರ ಮಿತ್ರಭೇದ – ಭೇದ ಎಂದರೆ ಒಡೆಯುವುದು; ಮಿತ್ರರ ನಡುವೆ ಬೆಳದಿರುವ ಸ್ನೇಹವನ್ನು ಅಪನಂಬಿಕೆಯಿಂದ ಬದ್ಧ ದ್ವೇಷಕ್ಕೆ ಪರಿವರ್ತಿಸುವುದು; ವಿಶ್ವಾಸ ಕೆಡುವಂತೆ ಚಾಡಿ ಬೆಸೆಯುವುದು. ಇದು ರಾಜಕೀಯದಲ್ಲಂತೂ ಬಹಳ ಮುಖ್ಯ. ಚತುರೋಪಾಯಗಳಲ್ಲೊಂದಾದ ಭೇದ ಪರಸ್ಪರರು ಬೆರೆತಿರುವ ಸಂದರ್ಭದಲ್ಲಿ ಅವರಲ್ಲಿ ಒಡಕುಮೂಡಿಸುವುದು.ಇದರಿಂದ ಇಬ್ಬರೂ ದುರ್ಬಲರಾಗುತ್ತಾರೆ. ಕಾರಣ ಶಕ್ತಿಯು ಇಬ್ಭಾಗವಾಗುತ್ತದೆ. ಅದನ್ನು ಸಾಧಿಸುವ ತಂತ್ರ–ಪ್ರತಿತಂತ್ರ, ಉಪಾಯ– ಅಪಾಯ, ಎಲ್ಲಿ? ಹೇಗೆ ನಡೆಯಬೇಕು? ವಂಚನೆ – ಕಪಟತನ, ಪ್ರಭುಶಕ್ತಿ, ಮುಗ್ಧ ಸ್ವಭಾವದ ಪರಿಣಾಮ ಇತ್ಯಾದಿಗಳ ಸ್ವರೂಪದ ಅರಿವು ಇದ್ದಾಗ ಮಾತ್ರ ಆ ಸಂದರ್ಭದಲ್ಲೊದಗುವ ಸಮಸ್ಯೆಯಿಂದ ಪಾರಾಗುವ ದಾರಿ ಸುಲಭವಾಗುತ್ತದೆ, ಎಂಬುದನ್ನು ತಿಳಿಸುವ ಹಲವು ಕಥೆಗಳು ಈ ಸೂತ್ರದಲ್ಲಿ ಹೆಣೆದುಕೊಂಡಿವೆ.[53] ಪಂಚತಂತ್ರದ ಮೊದಲನೆಯ ತಂತ್ರವಾದ ಮಿತ್ರಭೇದದ ಮೊದಲ ನುಡಿ ಹೀಗಿದೆ :–

वर्धमानो महान्स्नेहः सिंहगोवृषयोर्वने ।

पिशुनेनातिलुब्धेन जम्बुकेन विनाशितः ।।[54]

53. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಮಿತ್ರಭೇದ – ಪು–18.(2015) ವರ್ನಿಲ, 39/2–11, ಕಲ್ಯಾಣಿ ಗಾರ್ಡನ್, BSK 1ನೇ ಹಂತ, ಬೆಂಗಳೂರು – 560050.

54. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ – 1, ಪು – 11.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಅಂದರೆ, "ಒಂದು ಕಾಡಿನಲ್ಲಿ, ಒಮ್ಮೆ ಸಿಂಹ ಹಾಗೂ ಎತ್ತಿಗೂ ಗಾಢವಾದ ಸ್ನೇಹವುಂಟಾಗಿರಲು, ದುಷ್ಟನಾದ ಹಾಗೂ ಅತಿಲೋಭಿಯಾದ ನರಿಯಿಂದ ಆ ಸ್ನೇಹವು ನಾಶಮಾಡಲ್ಪಟ್ಟಿತು.

ಮಿತ್ರಭೇದದಲ್ಲಿ ಕಾಡಿನ ರಾಜನಾದ ಸಿಂಹ ಹಾಗೂ ನಾಡಿನಿಂದ ಬಂದ ಎತ್ತಿನ ಮಧ್ಯೆ ಉಂಟಾದ ಅಸಹಜ ಸ್ನೇಹದ ಮೋಹದಲ್ಲಿ ಸಿಂಹವು ಕರ್ತವ್ಯ ಭ್ರಷ್ಟನಾಗಿ, ಅದರ ಪ್ರಜೆಗಳು ತೊಂದರೆಗೆ ಒಳಗಾದಾಗ ಮಂತ್ರಿಯಾಗಿದ್ದ ನರಿಯು ಈ ಮೈತ್ರಿಯನ್ನು ಹೇಗೆ ಒಡೆಯಿತೆಂಬುದನ್ನು ಈ ತಂತ್ರದಲ್ಲಿ ಇಪ್ಪತ್ತೆರಡು ಉಪಕಥೆಗಳ ಮೂಲಕ ತೋರಿಸಲಾಗಿದೆ.[55] ಕಾರ್ಯ ಸಾಧನೆಗಾಗಿ ಗೆಳೆಯರಲ್ಲಿ ಭೇದವುಂಟುಮಾಡುವ ಬಗ್ಗೆ ವಿವಿಧ ಉಪಕಥೆಗಳ ಮೂಲಕ ಒಳ್ಳೆಯ ಸನ್ನಿವೇಶಗಳನ್ನು ರಚಿಸಿ, ಧನಾರ್ಜನೆಯ ಉಪಾಯಗಳು; ಹಣವಿರುವವರ ಬಳಿ ಮಿತ್ರರು ಮತ್ತು ಬಾಂಧವರು ಮುತ್ತಿಬಿಡುತ್ತಾರೆ; ಈ ಲೋಕದಲ್ಲಿ ಸಂಬಂಧವಿಲ್ಲದವರೂ ಕೂಡ ಹಣವಂತರ ಸಂಬಂಧಿಗಳೆನಿಸಿಬಿಡುತ್ತಾರೆ; ಬಡವರಲ್ಲಿ ಅವರ ಸ್ವಜನರೂ ದುರ್ಜನರಂತೆ ನಡೆದುಕೊಳ್ಳುತ್ತಾರೆ[56] ಇತ್ಯಾದಿ ಅನೇಕ ತಿಳುವಳಿಕೆಗಳನ್ನು ನೀಡುತ್ತಾ, ರಾಜಕುಮಾರರೇ ತಮ್ಮ ಪರಿಸ್ಥಿತಿಯಬಗ್ಗೆ ತಾವೇ ಯೋಚಿಸಿ, ಸಹವಾಸದೋಷದಿಂದ ಉದ್ಧಟತನ, ಸ್ವೇಚ್ಛಾ ಮನೋಧೋರಣೆ ಬೆಳೆಸಿಕೊಂಡು ವ್ಯಕ್ತಿತ್ವವನ್ನು ಹಾಳುಮಾಡಿಕೊಂಡಿರುವ ಕುರಿತು ಅರಿವನ್ನು ಮೂಡಿಸಲಾಗಿದೆ. ಅಪಾತ್ರರೊಡನೆ ಸ್ನೇಹ ಮಾಡುವುದರ ಪರಿಣಾಮ, ದುಷ್ಟರ ಸಹವಾಸ, ಸ್ವಾರ್ಥಸಾಧಕರ ಮಧ್ಯೆ,ಮೂರ್ಖರ ಸಹವಾಸ ಇವೆಲ್ಲ ತಕ್ಕುದಲ್ಲ ಹಾಗೂ ಅದರಿಂದಾಗಿ ಅಪರೂಪವಾಗಿ ದೊರಕಿರುವ ಬದುಕಿನ ಸದುಪಯೋಗ ಮತ್ತು ಸಾರ್ಥಕತೆ ಅಸಾಧ್ಯ ಎಂಬ ವಿಚಾರವನ್ನು ತಿಳಿಸಿ ವಿಷ್ಣುಶರ್ಮರು ರಾಜಕುಮಾರರನ್ನು ಜಾಗೃತಗೊಳಿಸಿದ್ದಾರೆ. ಆಸಕ್ತಿಯಿಂದ ಕಥೆಗಳನ್ನು ಕೇಳುವಂತೆ ಪ್ರೇರೇಪಿಸಿದ್ದಾರೆ.ಇಂತಿರಬೇಕು ಸಜ್ಜನರ ನಡವಳಿಕೆ ಎಂಬ ಸುಭಾಷಿತದಲ್ಲಿ ಸೂಚಿಸಿರುವಂತೆ:

अभिवादनशीलस्य नित्यं वृद्धोपसेविनः।

चत्वारि तस्य वर्धन्ते आयुर्विद्या यशोबलम् ॥[57]

ಅಂದರೆ," ಗೌರವಾರ್ಹರಿಗೆ ವಂದಿಸುವ ಪ್ರಭಾವವುಳ್ಳ, ನಿತ್ಯವೂ ಗುರುಹಿರಿಯರ ಸೇವೆಮಾಡುತ್ತಾ, ಅವರಿಗೆ ತಗ್ಗಿ, ಬಗ್ಗಿ ನಡೆಯಬಲ್ಲವನಿಗೆ ಆಯುಷ್ಯ, ವಿದ್ಯೆ, ಯಶಸ್ಸು ಮತ್ತು ಬಲ ಈ ನಾಲ್ಕೂ ಹೆಚ್ಚಾಗುತ್ತವೆ."

---

55. **ಭರತ.ಬಿ.ರಾವ್,** ಪಂಡಿತ ವಿಷ್ಣುಶರ್ಮ ವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಕಥಾಮುಖ, ಪು- 8 (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್ ರಸ್ತೆ, ಬೆಂಗಳೂರು-560004.
56. **ಭರತ.ಬಿ.ರಾವ್,** ಪಂಡಿತ ವಿಷ್ಣುಶರ್ಮ ವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಕಥಾಮುಖ-ಪು - 13-14.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.,44/1, ಕೆ.ಆರ್ ರಸ್ತೆ, ಬೆಂಗಳೂರು-560004.
57. **ಭಟ್.ವಿಎನ್,** ಜ್ಞಾನದೀಪ, ಅ-3, ಪು-5.(ಸುಭಾಷಿತರತ್ನ ಭಾಂಡಾಗಾರಂ) ವಿಶ್ವನಾಥ ಪ್ರಕಾಶನ, (1993) ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ-577201.

ಎಂಬುದನ್ನು ತಿಳಿಸಿದ್ದಾರೆ.

ರಾಜಕುಮಾರರ ಮೂಲಸ್ವಭಾವಗಳನ್ನು ಉತ್ತಮ ಅನುಭವಗಳ ಮೂಲಕ ಮಾರ್ಪಡಿಸುವ ಒಂದು ಪ್ರಾಮಾಣಿಕ ಪ್ರಯತ್ನವನ್ನು ವಿಷ್ಣುಶರ್ಮರು ಮಾಡಿರುತ್ತಾರೆ. ಅನುಭವಗಳನ್ನು ನೀಡುವ ಉದ್ದೇಶದಿಂದ, ರಾಜಕುಮಾರರು ಇಷ್ಟಪಟ್ಟು ಕಲಿಯುವಂತಹ ಶೈಕ್ಷಣಿಕ ಸನ್ನಿವೇಶಗಳನ್ನು ಸುಂದರ ನೀತಿಕಥೆಗಳ ಮೂಲಕ, ಪರಿಣಾಮಕಾರಿಯಾದ ಬೋಧನೆ ಹಾಗೂ ಉತ್ತಮ ಉಪದೇಶವನ್ನು ನೀಡುತ್ತಾ, ಅವರನ್ನು ಸುಶಿಕ್ಷಿತರನ್ನಾಗಿ, ರಾಜನೀತಿನಿಪುಣರನ್ನಾಗಿ, ಬದುಕಿನ ವ್ಯವಹಾರ ಚತುರರನ್ನಾಗಿ ಮಾಡಿದ್ದಾರೆ. ಪಾಠದ ಜೊತೆಗೆ ಪ್ರಾಸಂಗಿಕವಾಗಿ ಅವರ ಗುಣಶೀಲಗಳನ್ನು ಸಂಸ್ಕರಿಸುವಂತಹ ನೈತಿಕ ವಿಚಾರಗಳನ್ನು ಸರಳ ಕಥೆಗಳು, ನೀತಿಶ್ಲೋಕಗಳು, ಸುಭಾಷಿತಗಳ ಮೂಲಕ ತಿಳಿಸಿದ್ದಾರೆ. ಒಂದೊಂದು ಕಥೆಯನ್ನು ಕೇಳಿದಾಗಲೂ, ಒಂದೊಂದು ಹೊಸ ವಿಚಾರ,ಅದರಲ್ಲೊಂದು ವ್ಯಕ್ತಿತ್ವ ನಿರ್ಮಾಣ ಅಂಶ ಅಡಕವಾಗಿರುವಂತೆ ರೂಪಿಸಿರುವುದು ಪಂಚತಂತ್ರದ ವೈಶಿಷ್ಟ್ಯತೆ. ಅನುಚಿತ ರೀತಿಯಲ್ಲಿ ತೊಡಗುವ ವ್ಯಕ್ತಿಯನ್ನು ಅತೃಪ್ತಿ ಅಸಂತೋಷಗಳಾಗುವಂತೆ ಸನ್ನಿವೇಶಗಳನ್ನು ರಚಿಸಿ ಅವನನ್ನು ಆ ಕಾರ್ಯದಿಂದ ಹೊರಗೆಳೆಯುವಂತೆ ಮಾಡಿ, ಜೊತೆಗೆ ಉಚಿತ ರೀತಿಯ ಕಲಿವಿನೆಡೆಗೆ ಹೆಜ್ಜೆ ಇಡುವಂತೆ ಪಂಚತಂತ್ರದಲ್ಲಿ ವಿಷ್ಣುಶರ್ಮರು ಯೋಜಿಸಿದ್ದಾರೆ. ಪ್ರಾಪಂಚಿಕ ಸುಖದ ಲಕ್ಷಣಗಳನ್ನು ಹೇಳಿಕೊಟ್ಟಿದ್ದಾರೆ. ಮಹಾಭಾರತದಲ್ಲಿ ಹೀಗೆ ಹೇಳಲ್ಪಟ್ಟಿದೆ.

आरोग्यमानृण्यमविप्रवासः सद्भिर्मनुष्यैः सह संप्रयोगः ।

स्वप्रत्यया वृत्तिरभीतवासः षड् जीवलोकस्य सुखानि राजन् ॥[58]

ಅಂದರೆ ಆರೋಗ್ಯಭಾಗ್ಯ, ಸಾಲವಿಲ್ಲದಿರುವಿಕೆ, ಆತ್ಮೀಯರಿಂದ ದೂರವಿಲ್ಲದಿರುವುದು, ನಂಬಿಕೆಯುಳ್ಳ ಉದ್ಯೋಗ, ಭಯವಿಲ್ಲದ ಜೀವನ, ಸಜ್ಜನರ ಸಹವಾಸ ಈ ಆರು ಪ್ರಾಪಂಚಿಕ ಸುಖಗಳೆನಿಸುವುವು. ಇದೆಲ್ಲ ಪ್ರಾಪಂಚಿಕ ಬದುಕಿನ ವ್ಯವಹಾರ ಚತುರತೆಯ ಲಕ್ಷಣಗಳು.

ವಿಷ್ಣುಶರ್ಮರು ಕಥೆ ಹೇಳುತ್ತಾ, ಅನೇಕ ಉಪಯುಕ್ತ ವಿಚಾರಗಳನ್ನು ಒಳ್ಳೆಯ ತಾಳಮೇಳದಿಂದ ಅಂದರೆ  ರಾಜಕುಮಾರರ ಮನಸ್ಸು, ಅವರ ಮೂಲ ವರ್ತನೆ, ಕಲಿಕೆಯಲ್ಲಿನ ಆಸಕ್ತಿ ಮುಃತಾದವುಗಳನ್ನು ಬಹಳ ಸೂಕ್ಷ್ಮವಾಗಿ ಗಮನಿಸುತ್ತಾ ಅವರಿಗೊಪ್ಪುವಂತೆ ಕೆಲವು ನೀತಿ ಬೋಧೆಯನ್ನು ಮಾಡುತ್ತಾ, ಅವರ

---

58. **ಸುಭಾಷಿತಮಂಜರೀ,** ಸಂಸಾರ–ಶ್ಲೋ–11, ಪು–16, ಮಹಾಭಾರತ, ಉ.ಪ–33–89. ಕ.ಸಾ.ಪ.(2001) ಚಾಮರಾಜಪೇಟೆ, ಬೆಂಗಳೂರು.

ಮೇಲಿನ ಹತೋಟಿಯನ್ನು ಸಾಧಿಸುತ್ತಾರೆ. ನಂತರ ಕಥಾನಿರೂಪಣಾ ವಿಧಾನವೇ ರಾಜಕುಮಾರರನ್ನು ಬುದ್ಧಿವಂತರನ್ನಾಗಿ ಮಾಡಲು ಸೂಕ್ತ ಕ್ರಮ ಎಂದು ತೀರ್ಮಾನಿಸಿಕೊಂಡರು.

ಉಜ್ಜಯಿನಿ ಎಂಬ ಒಂದು ಶ್ರೀಮಂತ ನಗರದಲ್ಲಿ ವರ್ಧಮಾನಕನೆಂಬ ಸಜ್ಜನ ವ್ಯಾಪಾರಿ ಇದ್ದನು. ಒಂದು ಬಾರಿ ಬಂಡಿ ತುಂಬಾ ಸರಕನ್ನು ಹೇರಿಕೊಂಡು ಮಧುರಾ ನಗರದ ಕಡೆಗೆ ವ್ಯಾಪಾರಕ್ಕೆ ಹೊರಟಿದ್ದನು. ಅವನ ಬಂಡಿಯನ್ನು ವೇಗವಾಗಿ ಕೊಂಡೊಯ್ಯುವ ಸಾಮರ್ಥ್ಯವುಳ್ಳ, ದಷ್ಟಪುಷ್ಟವಾದ ಎತ್ತುಗಳೆರಡು- ಸಂಜೀವಕ ಮತ್ತು ನಂದಕ. ಯಮುನಾ ತೀರದಲ್ಲಿ ವ್ಯಾಪಾರಿಯ ಸಾರ್ಥವು ಚಲಿಸುತ್ತಿದ್ದಾಗ, ಕಾಲುಗಳು ಕೆಸರಿನಲ್ಲಿ ಸಿಕ್ಕಿ ಸಂಜೀವಕನು ಬಿದ್ದುಬಿಟ್ಟನು. ಅವನ ಪರಿಸ್ಥಿತಿಗೆ ಮರುಗಿ ವರ್ಧಮಾನಕನು ಮೂರು ರಾತ್ರಿಗಳು ಅಲ್ಲೇ ತಂಗಿದನು. ಆನಂತರ ಸಾರ್ಥದಲ್ಲಿದ್ದ ಇತರ ವ್ಯಾಪಾರಿಗಳು ಹೇಳಿದರು " ಎಲೈ ಶ್ರೇಷ್ಠೀ, ಏನಿದು ಹೀಗೆ ಒಂದು ಎತ್ತಿನ ಸಲುವಾಗಿ ಹುಲಿಸಿಂಹಗಳಿರುವ ಈ ಅಪಾಯಕಾರಿಯಾದ ಅಡವಿಯಲ್ಲಿ ಇಡೀ ಸಾರ್ಥವನ್ನೇ ಸಂಕಟಕ್ಕೀಡು ಮಾಡಿರುವೆ? ಬುದ್ಧಿವಂತನಾದವನು ಸ್ವಲ್ಪಕ್ಕೋಸ್ಕರ ಹೆಚ್ಚಿನದನ್ನು ಕಳೆದುಕೊಳ್ಳುವುದಿಲ್ಲ. ಆದ್ದರಿಂದ ಹೆಚ್ಚಿನದಕ್ಕಾಗಿ ಸ್ವಲ್ಪವನ್ನು ಬಿಟ್ಟುಬಿಡುವುದೇ ಜಾಣತನವು." ವರ್ಧಮಾನಕನು ಅವರ ಮಾತುಗಳನ್ನು ಒಪ್ಪಿ ಸಂಜೀವಕನ ರಕ್ಷಣೆಗಾಗಿ ಜನರನ್ನು ನೇಮಿಸಿ, ಸಾರ್ಥದೊಂದಿಗೆ ಅಲ್ಲಿಂದ ಹೊರಟನು.

ಅಪಾಯಕಾರಿ ಅರಣ್ಯದಲ್ಲಿ ಇರಲಿಚ್ಛಿಸದ ಆರಕ್ಷಕರು ಸಂಜೀವಕನನ್ನು ಅಲ್ಲಿಯೇ ಬಿಟ್ಟು ನಡೆದರು. "ಸಂಜೀವಕನು ಸತ್ತುಹೋದನು, ಅವನಿಗೆ ಅಗ್ನಿಸಂಸ್ಕಾರ ಮಾಡಿದೆವು."[59] ಎಂದು ಹೇಳಿಬಿಟ್ಟರು. ಆಯಸ್ಸು ಗಟ್ಟಿಯಾಗಿದ್ದುದರಿಂದ ಸಂಜೀವಕನು ಯಮುನಾ ನೀರಿನಿಂದ ಮಿಶ್ರಿತವಾದ ತಂಪಾದ ಗಾಳಿಯ ಬೀಸುವಿಕೆಯಿಂದ ಚೇತರಿಸಿಕೊಂಡವನಾಗಿ, ಅಲ್ಲಿಂದ ಹೇಗೋ ಎದ್ದು ಯಮುನಾ ತೀರವನ್ನು ತಲುಪಿದನು. ಅಲ್ಲಿ ಪಚ್ಚೆ ಹರಳಿನಂತಹ ಎಳೆಹುಲ್ಲಿನ ಮೇಲ್ಭಾಗವನ್ನು ತಿನ್ನುತ್ತಾ, ತಿನ್ನುತ್ತಾ ಶಿವನ ನಂದಿಯಂತೆ ದಷ್ಟಪುಷ್ಟ ಹಾಗೂ ಶಕ್ತಿವಂತನಾದನು. ಪ್ರತಿದಿನವೂ ಹುತ್ತದ ತುದಿಗಳನ್ನು ಕೊಂಬುಗಳಿಂದ ಭೇದಿಸುತ್ತಾ, ಗರ್ಜಿಸುತ್ತಾ ವಾಸವಾಗಿದ್ದನು. ಇಲ್ಲಿ ಒಂದು ಉಕ್ತಿ ಸರಿಯಾಗಿಯೇ ಇದೆ.

अरक्षितं तिष्ठति दैवरक्षितं सुरक्षितं दैवहतं विनश्यति ।

जीवत्यनाथोऽपि वने विसर्जितः कृतप्रयत्नोऽपि गृहे विनश्यति ॥[60]

**59. ಭರತ.ಬಿ ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ. ತಂ- ಪು-15, 2018. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು-560004

**60. ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ- ಶ್ಲೋ - 20, ಪು - 21,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಇದರರ್ಥ– “ರಕ್ಷಣೆಯಿಲ್ಲದವನು ದೈವರಕ್ಷೆಯಿದ್ದರೆ ಬದುಕುತ್ತಾನೆ; ಉತ್ತಮ ರಕ್ಷಣೆಯಿದ್ದವನು ದೈವಕೃಪೆಯಿಲ್ಲದಿದ್ದರೆ ನಾಶವಾಗುತ್ತಾನೆ; ಕಾಡಿನಲ್ಲಿ ಬಿಟ್ಟ ಅನಾಥನು ದೈವಕೃಪೆಯಿಂದ ಬದುಕುತ್ತಾನೆ; ದೈವಕೃಪೆಯಿಲ್ಲದಿದ್ದಾಗ ಎಷ್ಟೇ ಪ್ರಯತ್ನಪಟ್ಟರೂ ಮನೆಯಲ್ಲಿದ್ದರೂ ಕೂಡ ನಾಶವಾಗುತ್ತಾನೆ.

ಒಂದು ದಿನ ಪಿಂಗಳಕನೆಂಬ ಬಾಯಾರಿದ ಸಿಂಹವೊಂದು ತನ್ನ ಮೃಗ ಪರಿವಾರದೊಡನೆ ಯಮುನಾ ತೀರಕ್ಕೆನೀರು ಕುಡಿಯಲು ಬಂದನು. ಆ ಸಮಯದಲ್ಲಿ ಸಂಜೀವಕನ ಗಂಭೀರವಾದ ಕೂಗನ್ನು ದೂರದಿಂದಲೇ ಕೇಳಿ ಪಿಂಗಲಕನು ವ್ಯಾಕುಲ ಹೃದಯದವನಾಗಿ ಭಯಗೊಂಡರೂ ಅದನ್ನು ತೋರ್ಪಡಿಸದೆ ಒಂದು ಆಲದ ಮರದ ಕೆಳಗೆ ನಾಲ್ಕು ಮಂಡಲಗಳುಳ್ಳ ವ್ಯೂಹ ರಚನೆ ಮಾಡಿ ಕುಳಿತುಕೊಂಡನು. ಅವನ ಚತುರ್ಮಂಡಲ ಹೇಗಿತ್ತೆಂದರೆ –– ಮಧ್ಯ ಭಾಗದಲ್ಲಿ ಸಿಂಹ, ಅನಂತರದ ಸುತ್ತಿನಲ್ಲಿ ಅನುಯಾಯಿಗಳು ಅಂದರೆ ಮಂತ್ರಿಗಳು ಮುಂತಾದವರು, ಅವರ ಸುತ್ತ ಮಧ್ಯಮ ವರ್ಗದ ಸೇವಕರು, ಕೊನೆಯ ಸುತ್ತಿನಲ್ಲಿ ಗೂಢಚಾರರು, ಸೈನಿಕರು ಮುಂತಾದವರು. ಇದೆಲ್ಲಾ ಪ್ರಾಣಿಗಳ ಗುಂಪೇ ಆಗಿದ್ದರೂ ಒಂದು ರಾಜನ ಸಭೆಗಿಂತ ಏನೂ ಕಡಿಮೆಯಾಗಿರಲಿಲ್ಲ.

ಪಿಂಗಲಕನಿಗೆ ಅಧಿಕಾರಭ್ರಷ್ಟರಾದ ಮಂತ್ರಿಪುತ್ರರಾದ ಕರಟಕ – ದಮನಕರೆಂಬ ಇಬ್ಬರು ನರಿಗಳು ಅನುಯಾಯಿಗಳು. ಅವರಿಬ್ಬರು ತಮ್ಮಲ್ಲೇ ಮಂತ್ರಾಲೋಚನೆಯಲ್ಲಿ ತೊಡಗಿದರು. ದಮನಕ ಕೇಳಿದನು– “ಎಲೈ ಮಂಗಳಕರ ಕರಟಕನೇ, ಈ ನಮ್ಮ ಸ್ವಾಮಿ ಪಿಂಗಳಕನು ಬಾಯಾರಿದ್ದವನು, ನೀರು ಕುಡಿಯಲು ಯಮುನಾ ತೀರಕ್ಕೆ ಹೋದವನು ನೀರು ಕುಡಿಯದೆ ಹಿಂದಿರುಗಿ ಬಂದು ವ್ಯೂಹ ರಚನೆ ಮಾಡಿ ದುಃಖ ತಪ್ತನಾಗಿ ಈ ಆಲದ ಮರದ ಕೆಳಗೆ ಕುಳಿತಿರುವನು. ಇದು ಯಾವ ಕಾಣದಿಂದ? ಕರಟಕನು ಹೇಳುತ್ತಾನೆ –“ಮಂಗಳಕರನೇ, ಈ ವ್ಯಾಪಾರದಿಂದ(ಸಂಬಂಧಪಡದ ವ್ಯವಹಾರದಿಂದ ನಮಗೇನು? ಏಕೆಂದರೆ ಹೀಗೊಂದು ಉಕ್ತಿಯಿದೆ –

अव्यापारेषु व्यापारं यो नरः कर्तुमिच्छति ।

स एव निधनं याति कीलोत्पाटीव वानरः ॥[61]

ಯಾವ ಮನುಷ್ಯನು ತನಗೆ ಸಂಬಂಧಿಸದ ವ್ಯಾಪಾರದಲ್ಲಿ ಮೂಗು ತೂರಿಸುವನೋ, ಆತನು(ಮರದಿಂದ) ಬೆಣೆಯನ್ನು ಕಿತ್ತ ಮಂಗನಂತೆ ಸಾವನ್ನಪ್ಪುತ್ತಾನೆ. “ಹೇಳಿಕೆಯಿಲ್ಲದೆ ಊಟಕ್ಕೆ, ಕರೆಯದೇ ಇದ್ದ ಮಾತುಕತೆಗೆ ಹೋಗಬಾರದಂತೆ. ಹಾಗೆ ಹೋದದ್ದೇ ಆದರೆ, ದಾರಿಯನ್ನು ಹೋಗುವ ಮಾರಿಯನ್ನು

61. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ –21, ಪು– 22, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಅಕ್ಷತೆ ಕೊಟ್ಟು ಮನೆಯೊಳಕ್ಕೆ ಕರೆಸಿದಂತಾದೀತು. **"ರಾಜಕುಮಾರರಲ್ಲಿ ಒಬ್ಬ ಕೇಳಿದ– "ಗುರುಗಳೇ, ಅದೇನು ಕಥೆ – ಕಪಿ ಕೀಲನ್ನು ಕಳಚಿದ್ದು? ಹೇಳಿ"** ಎಂಬುದಾಗಿ.

ವಿಷ್ಣುಶರ್ಮರು ಮನಸ್ಸಿನಲ್ಲೇ ಖುಶಿಪಟ್ಟುಕೊಂಡು –"ಅಬ್ಬಾ! ರಾಜಕುಮಾರರಿಗೆ ಕಥೆ ಕೇಳುವ ಆಸಕ್ತಿ ಬೆಳೆಯುತ್ತಿದೆ, ಇನ್ನು ಇವರನ್ನು ತಿದ್ದಬಹುದು" ಆದ್ದರಿಂದ ಉತ್ಸಾಹದಿಂದಲೇ ಬೆಣೆಯನ್ನು ಕಿತ್ತ ಮಂಗನ ಕಥೆಯನ್ನು ಹೇಳತೊಡಗಿದರು. ಹೀಗೆ ಇವರ ಬೋಧನಾ ಕ್ರಮ ಮನೋವೈಜ್ಞಾನಿಕವಾಗಿತ್ತು. ಶಿಷ್ಯರ ಆಸಕ್ತಿಯನ್ನು ಪ್ರೇರೇಪಿಸಿ, ಪಾಠದ ಪೂರ್ವಸಿದ್ಧತಾ ಕಾರ್ಯವನ್ನು, ಪೀಠಿಕೆಗೆ ಪೂರಕವಾದ ಒಂದು ದೃಷ್ಟಾಂತವನ್ನು ವಿವರಿಸಿ ಮುಂದಿನ ಪಾಠಕ್ಕೆ ಸುಗಮವಾದ ಮಾರ್ಗವನ್ನು ರೂಪಿಸುತ್ತಿದ್ದರು. ಮಿತ್ರಭೇದ ಸೂತ್ರ ಕಥೆಯಲ್ಲಿ ಬಹಳ ನೀತಿಯುತ ವಿಚಾರಗಳನ್ನು ರಾಜಕುಮಾರರಿಗೆ ಬೋಧಿಸಿದ್ದಾರೆ. ಉದಾಹರಣೆಗೆ– ಧನಾರ್ಜನೆಯ ಉಪಾಯಗಳು, ಸಂಜೀವಕನ ವನಪ್ರವೇಶ, ಪಿಂಗಲಕನಿಂದ ವ್ಯೂಹ ರಚನೆ, ಕರಟಕ–ದಮನಕರ ಮಂತ್ರಾಲೋಚನೆ ಮುಂತಾದ ಪ್ರಸಂಗಗಳಲ್ಲಿ – ರಾಜನೀತಿ ಶಿಕ್ಷಣದ ಪರಿಚಯವನ್ನು ಸರಳವಾಗಿ ಹಾಗೂ ಆಕರ್ಷಕವಾಗಿ ಪ್ರಾಣಿಗಳೇ ಮನುಷ್ಯರಷ್ಟು ಭಾವನೆಗಳನ್ನು ವ್ಯಕ್ತಪಡಿಸುವಂತೆ ಉತ್ತಮ ಬೋಧನಾ ತಂತ್ರವನ್ನು ವಿಷ್ಣುಶರ್ಮರು ಅಳವಡಿಸಿದ್ದಾರೆ. ಆಲದ ಮರದ ಕೆಳಗೆ ಮೃಗ ಪರಿವಾರ ಸೇರಿ ಒಂದು ಅದ್ಭುತವಾದ ರಾಜನ ಆಸ್ಥಾನ ಮತ್ತು ರಾಜಸಭೆಯ ಪರಿಕಲ್ಪನೆಯನ್ನು ಮೂಡಿಸಿದ್ದಾರೆ.

ಬೆಣೆಯನ್ನು ಕಿತ್ತ ಮಂಗನ ಕಥೆ ಬಹಳ ಚಿಕ್ಕ ಕಥೆ, ಆದರೆ ಒಂದು ಒಳ್ಳೆಯ ತಿಳುವಳಿಕೆಯನ್ನು ಬೆಳೆಸುವುದು.

ಕಪಿಚೇಷ್ಟೆ ಎಂಬುವುದು ವಾಡಿಕೆ. ಆದರೆ ಇದು ಎಷ್ಟು ಅರ್ಥಪೂರ್ಣವಾಗಿದೆಯೆಂದು ಈ ಪುಟ್ಟ ಕಥೆ ಸ್ಪಷ್ಟ ಪಡಿಸುತ್ತದೆ. ಒಮ್ಮೆ ಒಂದು ನಗರದ ಸಮೀಪದ ವೃಕ್ಷ ಸಮೂಹದ ಮಧ್ಯೇ ವ್ಯಾಪಾರಿಯ ಮಗನೊಬ್ಬನು ಒಂದು ದೇವಸ್ಥಾನ ಕಟ್ಟುವ ಕಾರ್ಯ ನಡೆಸುತ್ತಿದ್ದನು. ಕೆಲಸ ಮಾಡುತ್ತಿದ್ದ ಕಾರ್ಮಿಕರು ಮಧ್ಯಾಹ್ನದ ಸಮಯದಲ್ಲಿ ಊಟಕ್ಕೆ ನಗರಕ್ಕೆ ಹೋಗುತ್ತಿದ್ದರು.ಒಮ್ಮೆ ತಮ್ಮ ಸಹಜ ಸ್ವಭಾವದಂತೆ ಅತ್ತಿತ್ತ ತಿರುಗಾಡುತ್ತಿದ್ದ ಮಂಗಗಳ ಹಿಂಡೊಂದು ಅಲ್ಲಿಗೆ ಬಂತು. ಕೆಲಸದ ಆವರಣದಲ್ಲಿ ಬಡಗಿಯೊಬ್ಬನು ಅರ್ದ ಸೀಳಿದ ಅರ್ಜುನ ವೃಕ್ಷದ ಸ್ಥಂಭಕ್ಕೆ ಕಗ್ಗಲಿ ಮರದ ಬೆಣೆಯನ್ನು ಸಿಕ್ಕಿಸಿ ಹೋಗಿದ್ದನು. ಮಂಗಗಳು ಮನಸೋಇಚ್ಛೆ ಮರಗಳ ಮಧ್ಯೇ ಆಡಲು ತೊಡಗಿದವು. ಆಗ ಒಂದು ಮೃತ್ಯು ಸನ್ನಿಹಿತವಾದ ಮಂಗವು ಬೆಣೆಯನ್ನು ಸಿಕ್ಕಿಸಿದ್ದ ಮರದ ದಿಮ್ಮಿಯ ಮೇಲೆ ಕುಳಿತು, ಕೈಗಳಿಂದ ಬೆಣೆಯನ್ನು ಎಳೆದು ಕಿತ್ತಾಗ, ಅದರ ವೃಷಣಗಳು ಸೀಳಿದ್ದ

ಮರದ ಮಧ್ಯೆ ಸಿಕ್ಕಿ ಜಜ್ಜಿ ಹೋಗಿದ್ದರಿಂದ ಸತ್ತುಹೋಯಿತು.ಬೇಡದ ಕೆಲಸಕ್ಕೆ ಕೈಹಾಕಿದ್ದರಿಂದ ವಾನರ ತನ್ನ ಜೀವವನ್ನು ಅನ್ಯಾಯವಾಗಿ ಕಳೆದುಕೊಂಡಿತು. ಈ ಕಥೆಯ ನೀತಿ:–

ಕರಟಕ ಹೇಳುತ್ತಾನೆ– "अव्यापारेषु इति । आवयोर्भक्षितशेष आहारोऽस्त्येव तत्किमनेन व्यापारेण ?" ಅಂದರೆ, ಸಂಬಂಧಿಸದ ವ್ಯಾಪಾರದಲ್ಲಿ ತಲೆಹಾಕಬಾರದು. ನಾವು ತಿಂದು ಉಳಿದ ಆಹಾರವು ಇನ್ನೂ ಇದೆಯಲ್ಲವೇ? ನಮಗೇಕೀ ವ್ಯಾಪಾರ? ಯಾವಾಗಲೂ ನಮಗೆ ಸಂಬಂಧಪಡದಿರುವ ವಿಚಾರಗಳಿಗೆ ಅನ್ಯಥಾ ತಲೆಹಾಕಿ ಫಜೀತಿಮಾಡಿಕೊಳ್ಳಬಾರದು.

ಇನ್ನು ಮೊನ್ನೆ, ಮೊನ್ನೆ, ನೀರು ಕುಡಿಯಲು ಹೋದ ಮೃಗರಾಜ ಸಿಂಹವು ಒಮ್ಮೆಗೇ ಬೆದರಿ ಹಿಂದೆ ಬಂದಿದ್ದೇಕೆ? ಎಂಬುದನ್ನು ತಿಳಿಯಲು ದಮನಕನು ಧೈರ್ಯದಿಂದ ಕೇಳಿದನು. ಆಗ ಸಿಂಹವು ಯೋಚಿಸಿ ತನ್ನ ದುಗುಡವನ್ನು ಹೇಳಿಕೊಳ್ಳಲು ಮನದಲ್ಲೇ ಯೋಚಿಸಿ ಹೀಗೆ ಹೇಳಿತು– "ಸಚಿವೋತ್ತಮನೇ, ನೀನೂ ಕೇಳಿದ್ದಿರಬಹುದು. ಮೋಡದ ಮೊಳಗಿಗಿಂತ, ಆನೆಯ ಘೀಳಿಡುವಿಕೆಗಿಂತ ಭಯಂಕರವಾದ, ಈ ಹಿಂದೆ ಎಂದೂ ಕೇಳಿರದ ಉಗ್ರವಾದ ನಾದವದು. ಆ ಮೊಳಗು ಈ ಕಾಡನ್ನು ಸೇರಿಕೊಂಡ ವಿಚಿತ್ರ, ಭಯಾನಕ ಪ್ರಾಣಿಯದ್ದಾಗಿರಬೇಕು. ಆದ್ದರಿಂದ ಈ ಕಾಡನ್ನೇ ಬಿಟ್ಟು ಹೋಗುವ ಯೋಚನೆ ಮಾಡಿದ್ದೇನೆ." ಅದಕ್ಕೆ ಕರಟಕನು ಹೇಳಿದನು– " ಛೇ, ಛೇ.. ಇಷ್ಟಕ್ಕೆಲ್ಲಾ ಹೆದರುವುದೇ, ಅಪಾಯದ ಮೂಲವನ್ನು ಶೋಧನೆ ಮಾಡಿದರೆ ಭಯದ ಬುಡವನ್ನೇ ಕಿತ್ತೆಸೆಯಲು ಸಾಧ್ಯವಾಗುತ್ತದೆ. ನಮ್ಮ ಕಲ್ಪನೆಗೂ ಮೀರಿದ, ಬೇರೆಯದ್ದೇ ಆದ ಸತ್ಯ ಅಲ್ಲಿರಬಹುದು. ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು ಎಂಬ ಗಾದೆಯೇ ಇದೆಯಲ್ಲ. ಹೀಗೆ ಭಯಗ್ರಸ್ಥ ಪಿಂಗಲಕನೊಂದಿಗೆ ದಮನಕನ ಸಂವಾದ ಬಹಳ ದೀರ್ಘವಾಗಿ ನಡೆಯುತ್ತದೆ. ಬಹಳ ಉಪಯುಕ್ತ ರಾಜನೀತಿ ಶಿಕ್ಷಣ ಹಾಗೂ ನಾಯಕನಾದವನು ತಿಳಿದುಕೊಳ್ಳಬೇಕಾದ ರಾಜಧರ್ಮ ಪ್ರಜಾ ಪರಿಪಾಲನಾ ನೀತಿನಿಯಮಗಳೆಡೆಗೆ ರಾಜಕುಮಾರರು ಆಲೋಚನೆ ಮಾಡುವಂತೆ ಈ ಸೂತ್ರಕಥೆಯ ಮೂಲಕ ವಿಷ್ಣುಶರ್ಮರು ಪ್ರೇರೇಪಿಸಿದ್ದಾರೆ. ಹೀಗೊಂದು ಉಕ್ತಿಯಿದೆ :–

पूर्वमेव मया ज्ञातं पूर्णमेतद्दि मेदसा।

अनुप्रविश्य विज्ञातं यावच्चर्म च दारु च ।।[62]

ಅಂದರೆ," ಇದರಲ್ಲಿ ಮಾಂಸವು ತುಂಬಿದೆಯೆಂದು ತಿಳಿದಿದ್ದೆ. ಆದರೆ ಪ್ರವೇಶಿಸಿ ನೋಡಿದಾಗ ಕೇವಲ

62. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ – 117, ಪು – 61,.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಚರ್ಮ ಹಾಗೂ ಮರದ ಕಡ್ಡಿಗಳಿದ್ದವು ಎಂದು ದಮನಕನು ದೃಷ್ಟಾಂತವೊಂದನ್ನು ಹೇಳಲು, ಪಿಂಗಳಕನು ಅದೇನೆಂದು ಕೇಳಿದನು. ಆಗ ದಮನಕನು **ಗೋಮಾಯು ದುಂದುಭಿ ಕಥೆ**ಯನ್ನು ಹೇಳಿದನು.

ಹಸಿವಿನಿಂದ ಆಹಾರವನ್ನು ಹುಡುಕಿಕೊಂಡು ಗೋಮಾಯು ಎಂಬ ಒಂದು ಅಂಜುಬುರುಕ ನರಿ ಅಲೆಯುತ್ತಾ ಇರುವಾಗ ಎರಡು ಸೈನ್ಯಗಳ ಮಧ್ಯೆ ಯುದ್ಧವಾಗಿದ್ದ ಒಂದು ಪ್ರದೇಶವನ್ನು ತಲುಪಿತು. ಜೋರು ಗಾಳಿ ಬೀಸುತ್ತಿದ್ದರ ಪರಿಣಾಮ ಲತೆಗಳ ಕಾಂಡಗಳು ಅಲ್ಲಿದ್ದ ನಗಾರಿಗೆ ಬಡಿದಾಗ ಒಂದು ಶಬ್ದ ಬರುತ್ತಿದ್ದುದನ್ನು ಆ ನರಿಯು ಕೇಳಿಸಿಕೊಂಡು ಭಯಭೀತಿಯಿಂದ ಯೋಚಿಸಿತು. "ಅಯ್ಯೋ ನಾನು ಸತ್ತಂತೆಯೇ, ಈ ಶಬ್ದವನ್ನು ಮಾಡುತ್ತಿರುವ ಪ್ರಾಣಿಯ ದೃಷ್ಟಿಗೆ ಬೀಳುವುದರೊಳಗಾಗಿ ಇಲ್ಲಿಂದ ಜಾಗ ಖಾಲಿ ಮಾಡಿಬಿಡುವುದು ಒಳ್ಳೆಯದು " ಎಂದುಕೊಂಡಿತು. ಪುನಃ ಮತ್ತೊಂದು ತರಹ ಚಿಂತಿಸಿ, ಪೂರ್ವಜರು ನೆಲಸಿದ್ದ ಕಾಡನ್ನು ಒಮ್ಮೆಲೇ ಬಿಟ್ಟುಹೋಗುವುದು ಸರಿಯಲ್ಲ ಏಕೆಂದರೆ, ಭಯದ ಅಥವಾ ಸಂತೋಷದ ಸಂದರ್ಭದಲ್ಲಿ ಆತುರಪಡಬಾರದು. ಬದಲಾಗಿ ವಿಚಾರಮಾಡಿ ಯಾರು ಕೆಲಸ ಕೈಗೊಳ್ಳುವನೋ ಅವನು ದುಃಖವನ್ನು ಹೊಂದುವುದಿಲ್ಲ. ಆದ್ದರಿಂದ ಅದೇನು ಶಬ್ದವೆಂದು ತಿಳಿಯಲು ಅಪೇಕ್ಷಿಸಿತು. ಹೀಗೆ ವಿಚಾರಮಾಡಿ ಧೈರ್ಯದಿಂದ ಮೆಲ್ಲಗೆ ನಡೆಯುತ್ತಿದ್ದಾಗ ನಗಾರಿ (ದುಂದುಭಿ)ಯನ್ನು ಕಂಡಿತು. ಅದರ ಹತ್ತಿರ ಹೋಗಿ ಸರಿಯಾಗಿ ಪರಿಶೀಲಿಸಿ ಕುತೂಹಲದಿಂದ ತಾನೂ ಒಮ್ಮೆ ಅದಕ್ಕೆ ಹೊಡೆಯಿತು. ನಂತರ ಹರ್ಷದಿಂದ ಅದೊಂದು ರಕ್ತಮಾಂಸಗಳಿಂದ ತುಂಬಿರುವ ಪ್ರಾಣಿಯೆಂದು ತಿಳಿದು, ತನಗೆ ಭೂರಿಭೋಜನ ಪ್ರಾಪ್ತವಾಯಿತೆಂದು ಯೋಚಿಸಿತು. ನಗಾರಿಯ ದಪ್ಪ ಚರ್ಮವನ್ನು ಕಷ್ಟಪಟ್ಟು ಹೇಗೋ ಒಂದು ಕಡೆ ತೂತು ಮಾಡಿ ಒಳಹೊಕ್ಕಿತು. ಆದರೆ ಒಳಗೆ ರಕ್ತಮಾಂಸದ ಬದಲು ಕೇವಲ ಚರ್ಮ ಹಾಗೂ ಮರದ ಕಡ್ಡಿಗಳಿವೆಯೆಂದು ತಿಳಿಯಿತು. ಹೊರಗೆ ಬಂದು ತನ್ನನ್ನು ತಾನೇ ಹಾಸ್ಯಮಾಡಿಕೊಂಡಿತು.

ಕಥೆಯನ್ನು ಮುಗಿಸಿದ ದಮನಕ "ಆದ್ದರಿಂದಲೇ ಕೇವಲ ಶಬ್ದಕ್ಕೆ ಹೆದರಬಾರದೆಂದು ನಾನು ಹೇಳುವುದು "ಎಂದನು. ಆಗ ಪಿಂಗಲಕನು ಹೇಳುತ್ತಾನೆ– "ನೋಡು, ನನ್ನ ಪರಿವಾರದವರೆಲ್ಲರೂ ಭಯದಿಂದ ವ್ಯಾಕುಲಗೊಂಡು ಓಡಿಹೋಗಲು ಯೋಚಿಸುತ್ತಿರುವರು. ಹೀಗಿದ್ದಲ್ಲಿ ನಾನು ಹೇಗೆ ಧೈರ್ಯವನ್ನು ತಾಳಲಿ? ಇದನ್ನು ಕೇಳಿದ ದಮಕನು ಪಿಂಗಲಕನಿಗೆ ಧೈರ್ಯ ತುಂಬಿ, ಶಬ್ದದ ಕಾರಣವನ್ನ ತಾನೇ ಸ್ವತಃ ಹೋಗಿ ತಿಳಿದು ಬರುವುದಾಗಿ ಹೇಳಿ ಹೊರಟನು. ಪಿಂಗಲಕನು ನಿನ್ನ ದಾರಿಯು ಮಂಗಳಕರವಾಗಲಿ ಎಂದು ಹರಸಲು, ದಮನಕನು ಅವನಿಗೆ ನಮಸ್ಕರಿಸಿ ಸಂಜೀವಕನು ಮಾಡಿದ ಶಬ್ದವನ್ನು ಅನುಸರಿಸುತ್ತಾ ಹೊರಟನು.[63]

---

63. **ಭರತ.ಬಿ ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ. – ಪು–28–32, 2018. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು–560004

ನಂತರದಲ್ಲಿ ಮಂತ್ರಿಪದವಿಯನ್ನು ಪಡೆಯಲು ಪಿಂಗಳಕನೊಂದಿಗೆ ದಮನಕನ ಒಪ್ಪಂದವಾಗುತ್ತದೆ. ದಮನಕನಿಂದ ಪಿಂಗಲಕ– ಸಂಜೀವಕನ ಮಧ್ಯೆ ಮೈತ್ರಿ ಸ್ಥಾಪನೆಯಾಗುತ್ತದೆ. ಹಾಗೆಯೇ ಅನೇಕ ರಾಜಧರ್ಮ ಮತ್ತು ರಾಜನೀತಿಗೆ ಸಂಬಂಧಿಸಿದಂತೆ ಒಳ್ಳೆಯ ತಿಳುವಳಿಕೆ ವಿಚಾರಗಳನ್ನು ದಮನಕ ಪಿಂಗಲಕನ ಸಂಭಾಷಣೆ ಮೂಲಕ ಹೇಳುತ್ತಾ ಬರುತ್ತಾರೆ. ಇಲ್ಲಿ ವಿಷ್ಣುಶರ್ಮರು ರಾಜನೀತಿ– ಶಿಕ್ಷಣವನ್ನು ಬಹಳ ಅಚ್ಚುಕಟ್ಟಾಗಿ ಕಥೆಯೊಳಗೆ ಒಂದು ವಿಚಾರ ಗೋಷ್ಠಿಯಂತೆ ಸಂಯೋಜಿಸಿ ರಾಜಕುಮಾರಿಗೆ ಬೋಧಿಸಿದ್ದಾರೆ. ಇಲ್ಲಿ ಹೀಗೊಂದು ಉಕ್ತಿಯಿದೆ:–

तथा च यो न पूजयते गर्वादुत्तमाधममध्यमान् ।

भूपसंमानमान्योऽपि भ्रश्यते दन्तिलो यथा ॥[64]

ಅಂದರೆ, " ಯಾರು ಗರ್ವದಿಂದ ರಾಜನ ಆಶ್ರಯದಲ್ಲಿರುವ ಉತ್ತಮ, ಮಧ್ಯಮ ಹಾಗೂ ಅಧಮ ವ್ಯಕ್ತಿಗಳನ್ನು ಗೌರವಿಸುವುದಿಲ್ಲವೋ, ಆತನು ದಂತಿಲನಂತೆ ತನ್ನ ಪದವಿಯನ್ನು ಕಳೆದುಕೊಳ್ಳುವನು. ಸಂಜೀವಕನು ಅದನ್ನು ಅರ್ಥೈಸಿ ಹೇಳಬೇಕೆಂದು ಕೇಳಲು ದಮನಕನು **ದಂತಿಲ–ಗೋರಂಭರ ಕಥೆ**ಯನ್ನು ಹೇಳಿದನು.

ಇದನ್ನೆಲ್ಲಾ ಕೇಳುತ್ತಿದ್ದ ರಾಜಕುಮಾರನೊಬ್ಬ ಗುರುಗಳನ್ನು ಹೀಗೆ ಕೇಳುತ್ತಾನೆ– "ಗುರುಗಳೇ, ದಂತಿಲನ ಕಥೆ ಏನು? ಮಂತ್ರಿಯಾಗಿದ್ದ ನರಿ ಅದನ್ನೇಕೆ ಹೇಳಿತು? ಗುರುಗಳು– ಅದಾ? ನೋಡಿ "ರಾಜಕುವರರೇ, ರಾಜನೆಂದರೆ ಅದೊಂದು ದೊಡ್ಡ ಅಧಿಕಾರ, ಇದರಿಂದಾಗಿಯೇ ಗರ್ವ. ಇದು ಒಮ್ಮೆ ದೊರೆತರೆ ಮತ್ತೆ ಅದರಿಂದ ತಪ್ಪಿಸಿಕೊಳ್ಳಲು ಆಗದು. ಅಂತಹ ಕಾಲದಲ್ಲಿ ರಾಜನಿಗೆ ಎಲ್ಲರ ಮೇಲೂ ಅನುಮಾನ ಆರಂಭವಾಗುತ್ತದೆ. ಯಾರು ತನ್ನನ್ನು ಕೊಲ್ಲುವರೋ, ಕೊಂದು ಅಧಿಕಾರ ಹೊಂದುವರೋ ಎಂಬ ಭಯ; ತನ್ನವರು ಯಾರಾದರೂ ಶತ್ರುಗಳೊಂದಿಗೆ ಕೈ ಜೋಡಿಸುವರೋ ಎಂದು ಎಲ್ಲರನ್ನೂ ಸಂಶಯದಿಂದ ಕಾಣುತ್ತಾನೆ. ತನ್ನ ಆಪ್ತರ ಮೇಲೂ ಅಪನಂಬಿಕೆ. ಅದಕ್ಕೆ ವರ್ಧಮಾನಪುರದ ರಾಜನೇ ಸಾಕ್ಷಿ. ರಾಜಕುಮಾರರು ಬಹಳ ಕುತೂಹಲದಿಂದ "ಅಲ್ಲಿ ಏನು ನಡೆಯಿತು, ಆಚಾರ್ಯ? ರಾಜಕುಮಾರರಿಗೆ ಕಥೆ ಕೇಳುವುದರಲ್ಲಿ ಆಸಕ್ತಿ ಹೆಚ್ಚಿತೆಂದರೆ ಇನ್ನು ನನ್ನ ಕೆಲಸ ಪೂರ್ಣವಾದಂತೆ. ಈ ಕಥೆಗಳ ಮೂಲಕವೇ ರಾಜನೀತಿಯನ್ನು ಬೋಧಿಸುವುದು ಸುಲಭವೆಂದುಕೊಂಡು ವಿಷ್ಣುಶರ್ಮರು ಮುಂದುವರೆಸುತ್ತಾರೆ.

---

64. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ – 141, ಪು – 76,,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಮಿತ್ರಭೇದದಲ್ಲಿ **ಬೆಣೆಯನ್ನು ಕಿತ್ತ ಮಂಗನ ಪರಿಸ್ಥಿತಿ – ಆಶಾಢಭೂತಿ – ನರಿ – ದೂತಿಯಕಥೆ**ಯಲ್ಲಿನ ನೀತಿ – ಬುದ್ಧಿವಂತನು ಆಪತ್ಕಾಲದಲ್ಲಿ ಪ್ರತಿಕೂಲ ಪರಿಸ್ಥಿತಿ ಇದ್ದರೂ ಕೂಡ ಬುದ್ಧಿಯ ನೆರವನ್ನು ಪಡೆಯಲೇಬೇಕು, ಪ್ರಯತ್ನವನ್ನು ಬಿಡಬಾರದು. – ಅಕಸ್ಮಾತ್ ಘುಣಾಕ್ಷರ ನ್ಯಾಯದಿಂದಾದರೂ ಬುದ್ಧಿಬಲದಿಂದ ಕಾರ್ಯಸಿದ್ಧಿ ಆಗಬಹುದು ಎಂಬ ತಿಳುವಳಿಕೆಯನ್ನು ಮೂಡಿಸಲಾಗಿದೆ. **ಕಾಗೆ – ಚಿನ್ನದ ಹಾರ – ಕೃಷ್ಣಸರ್ಪದ ಕಥೆ**ಯಲ್ಲಿ ಕಾಗೆಯು ಚಿನ್ನದ ಹಾರವನ್ನು ಕದ್ದ ಕಾರಣದಿಂದ ಕೃಷ್ಣಸರ್ಪವು ಹೇಗೆ ನಾಶವಾಯಿತೋ ಹಾಗೆ ಪರಾಕ್ರಮದಿಂದ ಯಾವುದು ಸಾಧ್ಯವಿಲ್ಲವೋ, ಅದು ಉಪಾಯದಿಂದ ಸಾಧ್ಯ.[65]

उपायेन जयो यादृग् रिपोस्तादृङ् न हेतिभिः ।

उपायज्ञोऽल्पकायोऽपि न शूरैः परिभूयते ॥[66]

ನರಿ ಹೇಳುತ್ತದೆ:– "ಈ ವಿಷಯದಲ್ಲಿ ಸ್ವಲ್ಪವೂ ದುಃಖಿಸುವುದು ತರವಲ್ಲ. ಉಪಾಯದಿಂದಲ್ಲದೇ ಆ ಲೋಭಿಯನ್ನು ಕೊಲ್ಲಲು ಸಾಧ್ಯವಿಲ್ಲ. ಉಪಾಯದಿಂದ ಹೇಗೆ ಶತ್ರುಗಳನ್ನು ಗೆಲ್ಲಬಹುದೋ ಆ ರೀತಿ ಆಯುಧಗಳಿಂದ ಕೂಡ ಗೆಲ್ಲಲು ಸಾಧ್ಯವಿಲ್ಲ.

ಇಂತಹ ಅನೇಕ ವಿಚಾರಗಳನ್ನು ಸಣ್ಣ ಸಣ್ಣ ಕಥೆಗಳ ಮೂಲಕ ದುರ್ವಿನೀತ ರಾಜಕುಮಾರಿಗೆ ಬೋಧಿಸುತ್ತಾ, ಅವರುಗಳ ಆಲೋಚನೆ, ವಿವೇಚನೆ, ವಿಮರ್ಶೆ, ತೀರ್ಮಾನ ಮುಂತಾದ ಮನಶ್ಶಕ್ತಿಗಳು ಕೆಲಸ ಮಾಡಲು ನೆರವಾಗುವಂತೆ ಪ್ರಶ್ನೆಗಳನ್ನು ಕೇಳಿ ಉತ್ತರ ಹೇಳಿಸುತ್ತಾ, ವಿಷ್ಣುಶರ್ಮರು ಮುಂದು ಮುಂದಿನ ಅಂಥಹ ಅರ್ಥಪೂರ್ಣ ಕಥೆಗಳ ನಿರೂಪಣೆಯನ್ನು ಮುಂದುವರಿಸಿ ಕಲಿವಿನೆಡೆಗೆ, ಉತ್ತಮ ವ್ಯಕ್ತಿತ್ವ ನಿರ್ಮಾಣಕ್ಕೆ ಸಮಯೋಚಿತವಾಗಿ ಸನ್ನಿವೇಶಗಳನ್ನು ಒದಗಿಸಿಕೊಟ್ಟಿರುತ್ತಾರೆ. ಮತ್ತೊಂದು ಉದಾಹರಣೆಯೆಂದರೆ:– ಮೂರು ಮೀನಿನ ಕಥೆಯಲ್ಲಿ ಪ್ರತ್ಯುತ್ಪನ್ನಮತಿ ಮೀನು ಹೀಗೆ ಹೇಳುತ್ತದೆ.

यस्यास्ति सर्वत्र गतिः स कस्मात् स्वदेशरागेण हि याति नाशम् ।

तातस्य कूपोऽयमिति ब्रुवाणाः क्षारं जलं कापुरुषाः पिबन्ति ॥[67]

ಯಾರಿಗೆ ಎಲ್ಲ ಕಡೆಯೂ ಅವಕಾಶವಿರುವುದೋ ಅಂಥವನು ಏಕೆ ತನ್ನ ದೇಶದ ಮೇಲಿನ ಆಸೆಯ ಕಾರಣ ನಾಶ ಹೊಂದುತ್ತಾನೆ? ಕೈಲಾಗದವರೀಗ 'ತಂದೆ ತೋಡಿದ ಬಾವಿ' ಎಂದು ಹೇಳುತ್ತಾ

---

65. **ಸುಧಾಕರ್ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಭೂಮಿಕಾ – ಪು– 13–17. ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
66. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–231,ಪು–148,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
67. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–351,ಪು–227,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಉಪ್ಪು ನೀರುನ್ನು ಕುಡಿಯುತ್ತಾರೆ. ಅಂದರೆ ಯಾರು ಎಲ್ಲಾದರೂ ಬದುಕಬಲ್ಲರೋ ಅವರು ಸ್ವದೇಶದ ಮೋಹದಿಂದ ನಾಶಹೊಂದುವುದಿಲ್ಲ. ಹೇಡಿಗಳು ಮಾತ್ರ ಅಜ್ಜನ ಬಾವಿಯೆಂದು ಹೇಳುತ್ತಾ ಉಪ್ಪುನೀರನ್ನೇ ಕುಡಿಯುತ್ತಿರುತ್ತಾರೆ.

ಸಹವಾಸ ದೋಷದಿಂದ ಏನೆಲ್ಲ ಅನಾಹುತಗಳಾಗುತ್ತವೆ ಎಂಬುದನ್ನು ಶುಭಾಶುಭಗಳನ್ನು ಉಲಿಯುವ ಎರಡು ಗಿಳಿ ಸಹೋದರಿಯರ ಕಥೆಯಲ್ಲಿ ಬರುವ ವಿಚಾರಗಳನ್ನು ರಾಜಕುಮಾರರಿಗೆ ಮನದಟ್ಟು ಮಾಡಿ, ಅವರುಗಳು ಸಹವಾಸ ದೋಷದಿಂದ ಹೇಗೆ ಉದ್ಧಟರಾಗಿ ಸ್ವೇಚ್ಛಾ ಪ್ರವೃತ್ತಿಯಿಂದ ವ್ಯರ್ಥವಾಗಿ ಕಾಲಹರಣ ಮಾಡುತ್ತಿದ್ದರೆಂಬ ಬಗ್ಗೆ ಅವರೇ ವಿಮರ್ಶಿಸಿಕೊಳ್ಳುವಂತೆ ಪ್ರೇರೇಪಿಸಿ, ಜಾಗೃತಿ ಮೂಡಿಸಿದರು. ಅಪಾತ್ರರಲ್ಲಿ ಗೆಳೆತನ ಸಲ್ಲದು ಎಂಬುದನ್ನು-ಬಡಾಯಿ ಗೂಬೆಯ ಸಹವಾಸದಿಂದ ಹತನಾದ ರಾಜಹಂಸದ ಕಥೆಯಿಂದ ಸ್ಪಷ್ಟಪಡಿಸಿದ್ದಾರೆ. ಹೀಗೆ ವಿಷ್ಣುಶರ್ಮರು ಬಹಳ ಚಮತ್ಕಾರದಿಂದ, ರಾಜಕುಮಾರರ ದುರ್ವರ್ತನೆಗಳನ್ನು ಮಾರ್ಪಾಟು ಗೊಳಿಸುತ್ತಾ, ಅನುಚಿತ ವರ್ತನೆಗಳನ್ನು ತಳ್ಳಿಹಾಕಿ ಉಚಿತವಾದುದನ್ನು ಆರಿಸಿಕೊಳ್ಳುವಂತೆ ಕಲಿವಿನ ರೂಢಿ ಮಾಡಿಸಿದರು. ಪಂಚತಂತ್ರದ ಮೊದಲನೆಯ ತಂತ್ರ "ಮಿತ್ರಭೇದ"ದಲ್ಲಿ ಉತ್ತಮ ನೀತಿಬೋಧನೆ ಮಾಡುತ್ತಾ, ವಿಷ್ಣುಶರ್ಮರು ರಾಜಪುತ್ರರಿಗೆ ನೈಜ ಜೀವನದ ಸನ್ನಿವೇಶಗಳಿಗೆ ಉಪಯುಕ್ತವಾಗುವಂತಹ ಕಲಿಕೆಯ ಅನುಭವಗಳನ್ನು ಒದಗಿಸಿಕೊಟ್ಟಿದ್ದಾರೆ. ಇಲ್ಲಿ ಪಡೆದ ಅನುಭವಗಳನ್ನು ಮುಂದೆ ಅವರಿಗೆ ಹೊಸ ಸನ್ನಿವೇಶಗಳಲ್ಲಿ ಕಾರ್ಯರೂಪಕ್ಕೆ ಬರುವಂತೆ, ಅಂದರೆ ಕಲಿಕೆಯ ವರ್ಗಾವಣೆಯಾಗುವ ಮುಂದಾಲೋಚನೆಯಿಂದಲೇ ತರಬೇತಿ ನೀಡಿದ್ದಾರೆ. ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು – ಸ್ವಂತ ಬುದ್ಧಿ ಒಂದಿರಬೇಕು – ಬುದ್ಧಿ ಬಲವೇ ಮೇಲು – ಅಪಾತ್ರರಲ್ಲಿ ಗೆಳೆತನ ಸಲ್ಲದು – ಕಾರ್ಯಸಾಧನೆಗೆ ಸಮರ್ಥರ ನೆರವು, ಉಪಾಯದಿಂದ ಅಪಾಯವನ್ನು ತಪ್ಪಿಸಿಕೊಳ್ಳುವುದು ಮುಂತಾದ ಮಿತ್ರಭೇದ ಸೂತ್ರದ ಉಪ ಕಥೆಗಳಲ್ಲಿ, ಮುಂದೆ ರಾಜನಾಗುವವನಿಗೆ ಬಹಳ ಮುಖ್ಯವಾಗಿ ಇರಬೇಕಾದ ಗುಣಲಕ್ಷಣಗಳನ್ನು ಅರ್ಥಪೂರ್ಣ ದೃಷ್ಟಾಂತಗಳಲ್ಲಿ ತಿಳಿಸಲಾಗಿದೆ.[68] ಇವುಗಳಿಂದ ಅಥವಾ ಈ ಸನ್ನಿವೇಶಗಳಿಂದ ಪಡೆದ ಜ್ಞಾನವು ಅಥವಾ ಅನುಭವವು ಧನಾತ್ಮಕವಾಗಿ ವರ್ಗಾವಣೆಯಾಗುತ್ತದೆ. ಇದೇ ನಾವು ಶೈಕ್ಷಣಿಕ ಮನೋವಿಜ್ಞಾನದಲ್ಲಿ ಕಾಣುವ "ಕಲಿಕೆಯ ವರ್ಗಾವಣೆ."

सहृदामुपकारकारणाद् द्विषतामप्यपकारकारणात् ।

नृपसंश्रय इष्यते बुधैर्जठरं को न बिभति केवलम् ॥[69]

---

68. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಭೂಮಿಕಾ–ಪು –14–15.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
69. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–22, ಪು–24,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಇಲ್ಲಿ ಮಿತ್ರರಿಗೆ ಉಪಕಾರವನ್ನೂ ಶತ್ರುಗಳಿಗೆ ಅಪಕಾರವನ್ನೂ ಮಾಡುವುದಕ್ಕಾಗಿ ಲೋಕದಲ್ಲಿಯ ಜನರು ಅರಸರನ್ನು ಸೇವಿಸುತ್ತಾರೆಯೇ ಹೊರತು ತಮ್ಮ ಹೊಟ್ಟೆಗಳ ಹೊರೆವುದಕ್ಕಲ್ಲ. ಅದಕ್ಕೋಸ್ಕರ ಸೇವಿಸುವುದಕ್ಕಿಂತ ಸಾಯುವುದೇ ಮೇಲು. ಯಾರ ಬದುಕಿನಿಂದ ಹಲವರು ಸುಖವಾಗಿರುತ್ತಾರೋ ಅಂತಹವನ ಬದುಕು ಸಾರ್ಥಕ. ಕೇವಲ ಹೊಟ್ಟೆಗಾಗಿ ಬದುಕುವುದಾದರೆ, ಮೂಗಿನಿಂದ ಚುಚ್ಚಿಕೊಂಡು ತಿನ್ನುವ ಕಾಗೆ ತನ್ನ ಹೊಟ್ಟೆ ತುಂಬಿಕೊಳ್ಳುವುದಿಲ್ಲವೇ? ಯಾವನು ಅಲ್ಪವಾದರೂ ಸಹ ವಿಜ್ಞಾನ, ಶೌರ್ಯ, ಐಶ್ವರ್ಯಾದಿ ಗುಣಗಳಿಂದ ಕೂಡಿ ಬದುಕುವನೋ ಅವನ ಬದುಕೇ ನಿಜವಾದ ಬದುಕು ಎಂದು ಪ್ರಾಜ್ಞರು ನುಡಿದಿದ್ದಾರೆ.

जीविते यस्य जीवन्ति विप्रा मित्राणि बान्धवाः।

सफलं जीवितं तस्य आत्मार्थं को न जीवति ॥[70]

ಯಾವ ಮನುಷ್ಯನು ತನ್ನಲ್ಲಿ, ಇತರರಲ್ಲಿ, ಬಂಧುವರ್ಗದಲ್ಲಿ, ದೀನರಲ್ಲಿ, ಸೇವಕವರ್ಗದಲ್ಲಿ ದಯೆಯಿಂದ ಕೂಡಿರುವುದಿಲ್ಲವೋ, ಆತನ ಬದುಕು ನಿಷ್ಪ್ರಯೋಜಕ, ನಿರರ್ಥಕ. ಇಂಥಹವನು ಬದುಕಿ ಫಲವಾದರೂ ಏನಿದೆ? ಕಾಗೆಯು ಕೂಡ ಬಲಿರೂಪದಲ್ಲಿ ಹಾಕಿದ ಆಹಾರವನ್ನು ತಿಂದು ದೀರ್ಘ ಕಾಲ ಬದುಕುತ್ತದೆ. ವಿಷ್ಣುಶರ್ಮರು ಬದುಕಿನ ನೀತಿಪಾಠವನ್ನು ಎಷ್ಟು ಸರಳವಾಗಿ, ಉತ್ತಮ ಉದಾಹರಣೆಯೊಂದಿಗೆ ಅರ್ಥಪೂರ್ಣ ಶಿಕ್ಷಣ ನೀಡಿದ್ದಾರೆಂಬುದು ಗಮನಾರ್ಹ ನಿದರ್ಶನವಾಗಿದೆ. ಜೊತೆಯಲ್ಲಿ ರಾಜನೀತಿ ಶಿಕ್ಷಣವನ್ನೂ ಸೂಕ್ತ ಸನ್ನಿವೇಶಗಳನ್ನು ಬಳಸಿಕೊಂಡು ಬೋಧನೆ ಮಾಡಿದ್ದಾರೆ:–1

स्थानेष्वेव नियोज्यन्ते भृत्याश्चाभरणानि च ।

न हि चूडामणिः पादे प्रभवामीति बध्यते ॥[71]

ಅಂದರೆ ಸೇವಕರನ್ನೂ, ಆಭರಣಗಳನ್ನೂ ಅವರವರಿಗೆ ತಕ್ಕಜಾಗದಲ್ಲಿ ನಿಯೋಜಿಸಬೇಕು. ನಾನು ರಾಜ, ಸಾಮರ್ಥ್ಯವಿದೆ ಎಂದುಕೊಂಡು ತಲೆಯಲ್ಲಿರಬೇಕಾದ ಚೂಡಾಮಣಿಯನ್ನು ಕಾಲಿನಲ್ಲಿ ಧರಿಸಲಾಗುತ್ತದೆಯೇ?

---

70. **ಹಿತೋಪದೇಶ**. ನಾರಾಯಣ ಪಂಡಿತ ,ಸಹೃದ್ಭೇದ–ಶ್ಲೋ–11,

71. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–78, ಪು–46,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಪಂಚತಂತ್ರ ಪಠ್ಯವನ್ನು ಹೇಗೆ ಯೋಜಿಸಿದೆಯೆಂದರೆ, ಕೆಲವು ಪ್ರಮುಖ ತೋರ್ಗಂಬಗಳನ್ನು ಹೊಂದಿಸಿ ವಿಷಯಗಳನ್ನು ಮನದಟ್ಟು ಮಾಡುವ ವ್ಯವಸ್ಥೆಯಿದೆ. ಉದಾಹರಣೆಗೆ ಮಿತ್ರಭೇದದ ಕಥೆಯಲ್ಲಿ ಬರುವ ಎತ್ತು ಸಂಜೀವಕನನ್ನು ಸಕಲವಿದ್ಯಾಸಂಪನ್ನನಂತೆ, ಒಬ್ಬ ಒಳ್ಳೆಯ ಬೋಧಕನಂತೆ ಚಿತ್ರಿಸಲಾಗಿದೆ. ಎರಡನೆಯ ತಂತ್ರ ಮಿತ್ತಸಂಪ್ರಾಪ್ತಿ ಚೌಕಟ್ಟಿನ ಕಥೆಗಳಲ್ಲಿ ಬರುವ ನಾಲ್ವರು ಮಿತ್ರರು – ಲಘುಪತನಕ, ಹಿರಣ್ಯಕ, ಚಿತ್ರಗ್ರೀವ, ಮಂಥರಕ ಇವರುಗಳು ಕಲಿಕೆಯ ನಿಧಿಯೊಡನೆ ವಿದ್ವಾಂಸರುಗಳಿದ್ದಂತೆ ಪ್ರತಿಬಿಂಬಿಸಲಾಗಿದೆ.[72] ಸರಿಯಾದ ಕಲಿಕೆಯನ್ನು ಪ್ರಾಯೋಗಿಕ ಪ್ರಜ್ಞೆಯಿಂದ ನಡೆಸುವುದು, ಅದೂ ಅಲ್ಲದೆ ಜೀವನಕ್ಕೆ ಸರಿಯಾದ ವರ್ತನೆಯನ್ನು ಸಂಯೋಜಿಸಲಾಗಿದೆ. ನಾಲ್ವರೂ ಸ್ನೇಹಿತರು ಪ್ರತ್ಯೇಕ ಜೀವನವನ್ನು ನಡೆಸುವರು. ಆದರೆ ಪ್ರತಿನಿತ್ಯ ಸರೋವರದ ಬದಿಯಿರುವ ನೆರಳನ್ನು ಕೊಡುವ ಒಂದು ವಿಶಾಲ ಆಲದ ಮರದ ಆಶ್ರಯದಲ್ಲಿ ಅನೇಕ ವಿಚಾರಗಳನ್ನು ಚರ್ಚಿಸಲು ಸೇರುತ್ತಿದ್ದರು. ಕಾನೂನು, ಅರ್ಥಶಾಸ್ತ್ರ, ರಾಜಕೀಯ ಮತ್ತು ಇತರ ಸಂಬಂಧಿತ ವಿಷಯಗಳು(ಧರ್ಮ, ಅರ್ಥ, ಇತ್ಯಾದಿ) ಚರ್ಚಿಸಲ್ಪಡುತ್ತಿದ್ದವು. ಅಲ್ಲೊಂದು ಸಮುದಾಯ ಆದರ್ಶಪ್ರಾಯವಾಗಿ ಅರಣ್ಯ ಕುಟೀರಗಳಲ್ಲಿ ಪ್ರಾಚೀನ ಋಷಿಗಳು, ಕೆಲವು ಕಾಡಿನ ನಿವಾಸಿಗಳು ಮತ್ತು ಸರೋವರ ತೀಕ್ಷ್ಣಬುದ್ಧಿ ಹೊಂದಿದ್ದು ಅಚ್ಚುಕಟ್ಟಾಗಿ ನುಡಿಗಟ್ಟು ಮಾಡಬಹುದಾಗಿತ್ತು. ಅವರೆಷ್ಟು ಸುಶಿಕ್ಷಿತರಾಗಿದ್ದರೆಂದರೆ, ವಿವಿಧ ವಿಷಯಗಳ ಬಗ್ಗೆ ಸಂವಾದ ನಡೆಸುವಷ್ಟು ಸಮರ್ಥರಿದ್ದರು. ಮಾನವ ಜಗತ್ತಿನ ಅನೇಕ ತಜ್ಞರು ತಮ್ಮ ಅಲ್ಪ ಪಾಂಡಿತ್ಯವನ್ನೇ ತತ್ಪರತೆಯಿಂದ ಬೀಗುತ್ತಿದ್ದವರೂ ಅಸೂಯೆಪಡುವಂತೆ, ಇತರ ಕ್ಷೇತ್ರಗಳನ್ನು ನೋಡದಂತೆ ಪಠ್ಯದ ಚಿತ್ರಣ ಕಂಡುಬರುತ್ತದೆ. ಇದರ ಮುಖ್ಯ ಉದ್ದೇಶವೇನೆಂದರೆ, ನೈಸರ್ಗಿಕ ಜಗತ್ತನ್ನು ಮಾನವ ಜಗತ್ತಿಗೆ ಸ್ಥಳಾಂತರಿಸಿ ಒಂದು ವಿಶೇಷ ಆಕರ್ಷಣೆ ಹಾಗೂ ಆಸಕ್ತಿಯನ್ನು ಮೂಡಿಸಿ ಶಿಕ್ಷಣ ಅಥವಾ ಕಲಿಕೆಯನ್ನು ಪರಿಣಾಮಕಾರಿಯಾಗಿ ಒದಗಿಸುವುದು.[73] ಇದು ವಿಷ್ಣುಶರ್ಮರು ಯೋಜಿಸಿರುವ ಒಂದು ವಿಶಿಷ್ಟ ಬೋಧನಾ ವಿಧಾನವಾಗಿರುತ್ತದೆ.



**72. Chandra Rajan,** VISNU SARMA,(Eng, translation), Introduction-pp-xxxix,1993. Penguin Random House India Pvt. Ltd., 7th Floor, Infantry Tower, C, DLF Cyber City, Gurgaon-122002, Haryana, India

**73. Chandra Rajan,** VISNU SARMA The Panchatantra (English),(1993). Introduction- PP-39-40. Penguin Random House India Pvt.Ltd. 7thFloor, Infantry Tower C,DLF Cyber City, Gurgaon-12202.Haryana, India.

# ಅಧ್ಯಾಯ – 4

## ಮನಶ್ಶಕ್ತಿಯ ವ್ಯಾಪಕ ಸ್ವರೂಪ – ಕಲಿಕೆ ಮತ್ತು ವ್ಯಕ್ತಿತ್ವದ ಮೇಲೆ ಅದರ ಪ್ರಭಾವ

ಅಧ್ಯಾಯ 4–1. ಉನ್ನತ ಮಟ್ಟದ ಮನೋವ್ಯಾಪಾರಗಳು:–

ಅಧ್ಯಾಯ 4–2. ಆಲೋಚನೆ–ವಿವೇಚನೆ–ಆಲೋಚಿಸದೆ ತೀರ್ಮಾನಕ್ಕೆ ಬರುವುದರ ಅಪಾಯ.

ಅಧ್ಯಾಯ 4–3. ಮನೋಧೋರಣೆಗಳು–ವರ್ತನೆಗಳು ಪರಿವರ್ತನೆ– ಶೀಲಸಂಪನ್ನತೆ.

ಅಧ್ಯಾಯ 4–4. पञ्चतन्त्रस्य–प्रथमं तन्त्रम्– मित्रभेदः ~ ಕಥೆಗಳ ವಿಶ್ಲೇಷಣೆ–ಮುಂದುವರಿದಿದೆ.

## ಅಧ್ಯಾಯ:– 4–1. ಉನ್ನತ ಮಟ್ಟದ ಮನೋವ್ಯಾಪಾರಗಳು

ಮಾನವನ ಮನಶ್ಶಕ್ತಿ ಕಣ್ಣಿಗೆ ಕಾಣದಿದ್ದರೂ, ಅನೇಕ ರೂಪದಲ್ಲಿ ಅವನ ವರ್ತನೆಯ ಮೇಲೆ ಪ್ರಭಾವ ಬೀರುತ್ತಿರುತ್ತದೆ. ಕಲ್ಪನೆ, ನೆನಪು, ಆಲೋಚನೆ ಇವುಗಳನ್ನು ಉನ್ನತ ಮನಶ್ಶಕ್ತಿಗಳು ಎಂದು ಕರೆಯುತ್ತಾರೆ. ಇವುಗಳು ಇನ್ನಿತರ ವ್ಯಾಪಾರಗಳ ಮೇಲೂ ತಮ್ಮ ಪ್ರಭಾವ ಬೀರುತ್ತವೆ. ನಮ್ಮ ದೃಷ್ಟಿ ಧ್ಯೇಯಗಳು, ಆರ್ಜಿತ ಆಸಕ್ತಿಗಳು, ಮನೋಭಾವಗಳು, ಸಂವೇದನೆಯ ಸ್ವರೂಪ – ಈ ಎಲ್ಲ ರೀತಿಯ ಮನೋವ್ಯಾಪಾರಗಳೂ ಉನ್ನತ ಮನಶ್ಶಕ್ತಿಯಿಂದ ಪ್ರಚೋದಿತವಾಗುತ್ತವೆ. ಅದೇ ರೀತಿ ನಮ್ಮ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದ ನಡೆನುಡಿಗಳು, ಅಭ್ಯಾಸಗಳು, ಕೌಶಲ್ಯಗಳು, ಗುಣಶೀಲಗಳು – ಈ ಎಲ್ಲ ವರ್ತನೆಗಳಲ್ಲೂ ಇವುಗಳ ಪ್ರಭಾವವನ್ನು ಕಾಣಬಹುದು. ವ್ಯಕ್ತಿ ಸಮಾಜ ಜೀವನದಲ್ಲಿ, ರಾಷ್ಟ್ರ ಮತ್ತು ಮಾನವ ಬಾಂಧವ್ಯದಲ್ಲಿ ವಹಿಸುವ ಪಾತ್ರವೂ ಈ ಉನ್ನತ ಮನಶ್ಶಕ್ತಿಗಳ ಪ್ರಭಾವದಿಂದಲೇ ರೂಪುಗೊಳ್ಳುವುದು.[1]

सुजीर्णमन्नं, सुविचक्षणःसुतः

सुशासिता स्त्री नृपतिः सुसेवितः।

सुचिन्त्यचोक्तं सुविचार्य यत्कृतं

सुदीर्घकालेऽपि न हि याति विक्रियाम् ॥[2]

ಅಂದರೆ "ಚೆನ್ನಾಗಿ ಜೀರ್ಣವಾದ ಆಹಾರ, ಒಳ್ಳೆಯ ಬುದ್ಧಿವಂತ ಮಗ, ಚೆನ್ನಾಗಿ ತಿದ್ದಿದ ಹೆಣ್ಣು, ಸರಿಯಾದ ರೀತಿಯಲ್ಲಿ ಸೇವಿಸಿದ ರಾಜ, ಚೆನ್ನಾಗಿ ಯೋಚಿಸಿ ನುಡಿದ ಮಾತು, ವಿಚಾರಿಸಿ ಮಾಡಿದ ಕಾರ್ಯ, ಇವು ಎಂದೆಂದೂ ಕೆಟ್ಟ ಪರಿಣಾಮ ಬೀರಲಾರವು. ವ್ಯಕ್ತಿಯ ಶೈಕ್ಷಣಿಕ ಬೆಳವಣಿಗೆಯ ದೃಷ್ಟಿಯಿಂದ ಅವುಗಳು ಅತ್ಯಂತ ಪರಿಣಾಮಕಾರಿಯೆನಿಸುವ ಮನೋವ್ಯಾಪಾರಗಳು.

ಒಂದು ವ್ಯಕ್ತಿಯ ಮನಶ್ಶಕ್ತಿಯನ್ನು ಪತ್ತೆಹಚ್ಚುವುದು, ಅವನ ಜ್ಞಾಪಕಶಕ್ತಿಯಿಂದ, ಕಲ್ಪನೆಯಿಂದ ಮತ್ತು ಆಲೋಚನೆ ವಿವೇಚನೆಗಳಿಂದ. ಈ ದೃಷ್ಟಿ ಆಧುನಿಕ ಸಂಶೋಧನೆಗಳ ಬೆಂಬಲವನ್ನು ಗಳಿಸಿದೆ. ಒಬ್ಬನ ಪ್ರತಿಭೆಯನ್ನು ಅಳೆಯುವಾಗ ಈ ಮೂರನ್ನೂ ಪರಿಗಣಿಸುವುದು ಬಹಳ ಮುಖ್ಯ ಎಂಬುದು ಸ್ಥಿರಪಟ್ಟಿದೆ. ಈ ಎಲ್ಲ ಕಾರಣಗಳಿಂದ ಇವು ಮೂರೂ ಉನ್ನತ ಮಟ್ಟದ ಮನೋವ್ಯಾಪಾರಗಳೆಂದು ಪರಿಗಣಿತವಾಗಿವೆ.[3]

---

1. **ವೀರಪ್ಪ. ಎನ್.ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–13, ಪು–324.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
2. **ನಾರಾಯಣ ಪಂಡಿತರ ಹಿತೋಪದೇಶ,** ಮಿತ್ರಲಾಭ–22
3. **ವೀರಪ್ಪ. ಎನ್.ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–13, ಪು–324,325.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

ಶಿಕ್ಷಣ ಕೇವಲ ಮನಶ್ಶಕ್ತಿಯ ಬೆಳವಣಿಗೆಗೆ ಮಾತ್ರವಲ್ಲವೆಂಬುದನ್ನು ಅಲ್ಲಗಳೆಯುವಂತಿಲ್ಲ. ಆದರೂ ಅವನ ಸಾಮಾಜಿಕ, ನೈತಿಕ ಮತ್ತು ಸಂವೇದನಾ ಜೀವನದ ಮೇಲೆ ಆ ಮನಶ್ಶಕ್ತಿ ಬಹು ಮುಖ್ಯ ಪಾತ್ರ ವಹಿಸುತ್ತದೆ. ಈ ಕಾರಣದಿಂದಲೇ ಎಲ್ಲ ಕಾಲದ ಶಿಕ್ಷಣವೇತ್ತರೂ ಅದರ ಬೆಳವಣಿಗೆಗಾಗಿ ಹೆಚ್ಚಿನ ಆಸ್ಥೆ ತೋರುತ್ತಾ ಬಂದಿದ್ದಾರೆ. ವ್ಯಕ್ತಿ ಸಮಾಜ ಜೀವನದಲ್ಲಿ, ನೀತಿವಂತನಾಗಿ, ಸುಸಂಸ್ಕೃತನಾಗಿ ಬಾಳುವಾಗ ಮೇಲಿನ ಮೂರು ಉನ್ನತ ಮನೋವ್ಯಾಪಾರಗಳು ವಹಿಸುವ ಪಾತ್ರದ ಪ್ರಾಮುಖ್ಯತೆ ತಾನಾಗಿ ಸ್ಪಷ್ಟಪಡುತ್ತದೆ. ಶಾಲೆ ಅಥವಾ ಆಶ್ರಮದ ಜೀವನದಲ್ಲಿ ಮಕ್ಕಳ ವ್ಯಕ್ತಿತ್ವದ ವಿವಿಧ ಮುಖಗಳನ್ನು ರೂಪಿಸಿ ಬೆಳೆಸುವಾಗ ಆ ಮನಶ್ಶಕ್ತಿಗಳನ್ನು ಹೆಜ್ಜೆ ಹೆಜ್ಜೆಗೂ ಬಳಸಿಕೊಳ್ಳಬೇಕಾಗುತ್ತದೆ. ಮಾನಸಿಕ ಚಿಂತನೆಯು ಮಾನವಚಿಂತನೆ, ನಡವಳಿಕೆ, ಬೆಳವಣಿಗೆ, ವ್ಯಕ್ತಿತ್ವ, ಭಾವನೆ, ಪ್ರೇರಣೆ ಮತ್ತು ಹೆಚ್ಚಿನದನ್ನು ಅಧ್ಯಯನಮಾಡುವ ವ್ಯಾಪಕ ಕ್ಷೇತ್ರವಾಗಿದೆ. ಮನೋವಿಜ್ಞಾನದ ಉತ್ಕೃಷ್ಟ ಮತ್ತು ಆಳವಾದ ತಿಳುವಳಿಕೆಯನ್ನು ಪಡೆದುಕೊಳ್ಳುವುದು ಜನರಿಗೆ ಅಥವಾ ವ್ಯಕ್ತಿಗೆ ತಮ್ಮದೇ ಕಾರ್ಯಗಳ ಒಳನೋಟಗಳನ್ನು ಸಾಧಿಸಲು ಸಹಕಾರ ಮಾಡುತ್ತದೆ. ಮನಶ್ಶಕ್ತಿಯನ್ನು ಸದ್ಬಳಕೆ ಮಾಡಿಕೊಂಡು ಸದ್ಗುಣಗಳಿಂದ ಕೂಡಿದ ಸುಂದರ ವ್ಯಕ್ತಿತ್ವ ಬೆಳೆಸಿಕೊಳ್ಳಬೇಕು. ಭಾಗವತದಲ್ಲಿ ಒಂದು ಒಳ್ಳೆಯ ಮಾತಿದೆ:-

इन्द्रियैर्विषयाकृष्टैराक्षिप्तं ध्यायतां मनः ।

चेतनां हरते बुद्धेः स्तम्बस्तोयमिव ह्रदात् ॥[4]

ಅಂದರೆ ವಿಷಯ ಸುಖಗಳ ಆಕರ್ಷಣೆಗೊಳಪಟ್ಟ ಇಂದ್ರಿಯಗಳಿಂದ ಧ್ಯಾನಮಾಡುವವರ ಮನಸ್ಸು ಚಂಚಲವಾಗುತ್ತದೆ ಮತ್ತು ಮಡುವಿನಿಂದ ನೀರನ್ನು ಜೊಂಡುಹುಲ್ಲು ಹೀರುವಂತೆ ಬುದ್ಧಿಯ ಚೈತನ್ಯ ಶಕ್ತಿಯನ್ನು ಅಪಹರಿಸುತ್ತದೆ.

ಪಂಚತಂತ್ರದಲ್ಲಿ ವಿಷ್ಣುಶರ್ಮರು ರಾಜಪುತ್ರರಿಗೆ ಅವರ ಮನಶ್ಶಕ್ತಿಯ ಬೆಳವಣಿಗೆಗೆ ಸಾಕಷ್ಟು ಪ್ರೋತ್ಸಾಹ ನೀಡಿ, ಕೇವಲ ಆರುತಿಂಗಳುಗಳೊಳಗಾಗಿ, ಬದುಕಿನ ವ್ಯವಹಾರ ಜ್ಞಾನ, ರಾಜನೀತಿ ಜ್ಞಾನ ಪಡೆದು ಪವಾಡ ಸದೃಶ ಬದಲಾಗುವಂತೆ ಪ್ರೇರೇಪಿಸಿದ್ದರು. ವಿವಿಧ ಸರಳ ಸುಂದರ ಕಥೆಗಳ ಮೂಲಕ ವ್ಯವಹಾರ ಜ್ಞಾನ ಕಲಿಸಿದರು. ವಿಷ್ಣುಶರ್ಮರು ರಾಜಪುತ್ರರಿಗೆ ಜ್ಞಾನ ನೀಡಿದ್ದಲ್ಲದೆ, ಜ್ಞಾನದ ಮಹತ್ವ ಅರಿಯುವಂತೆ ಉತ್ತಮ ಸನ್ನಿವೇಶಗಳನ್ನು ರೂಪಿಸಿ, ಪಶುಪಕ್ಷಿಗಳಿಗೆ ಮಾನವ ವರ್ತನೆಗಳನ್ನು ಲೇಪಿಸಿ ಒಂದು ಚಮತ್ಕಾರಯುತ ತಂತ್ರವನ್ನು ಅಳವಡಿಸಿ, ಆ ಜ್ಞಾನವನ್ನು ಯಾವಾಗ, ಎಲ್ಲಿ ಮತ್ತು ಹೇಗೆ ಬಳಸಿಕೊಳ್ಳಬೇಕೆಂಬುದನ್ನೂ ಕಲಿಸಿದ್ದರು. ಇಂಥಹ ಸಾಧನೆಗೆ ಕಾರಣ ಮನಶ್ಶಕ್ತಿಯೇ ಎಂಬುದು ಬಹಳ ಸ್ಪಷ್ಟವಾಗಿ ಗೋಚರಿಸುತ್ತದೆ.

4. ಶ್ರೀಮದ್ಭಾಗವತಮಹಾಪುರಾಣ, - 4-22-30

ಇಲ್ಲಿ ಕಲಿಸುವವರ ದೃಢ ಸಂಕಲ್ಪ ಕಲಿಯುವವರ ಇಚ್ಛಾಶಕ್ತಿ ಇವೆರಡಕ್ಕೂ ಮನಶ್ಶಕ್ತಿಯೇ ಆಗಿರುತ್ತದೆ. ಇಂತಹ ಮನಶ್ಶಕ್ತಿಯನ್ನು ಕುರಿತ ಕ್ರಮಬದ್ಧವಾದ, ಸುವ್ಯವಸ್ಥಿತ ಜ್ಞಾನವೇ ಮನೋವಿಜ್ಞಾನ, ಇದರ ಸದ್ಬಳಕೆ ಮಾಡಿಕೊಳ್ಳುವ ಪರಿಜ್ಞಾನವೇ ಶೈಕ್ಷಣಿಕ ಮನೋವಿಜ್ಞಾನ.



### 4-2. ಆಲೋಚನೆ-ವಿವೇಚನೆ-ಆಲೋಚಿಸದೆ ತೀರ್ಮಾನಕ್ಕೆ ಬರುವುದರ ಅಪಾಯ

ವೈಜ್ಞಾನಿಕ ನೆಲೆಗಟ್ಟಿನಿಂದ ಮನಸ್ಸು, ಪ್ರಜ್ಞೆ, ವರ್ತನೆಗಳ ಹಾಸುಬೀಸನ್ನು ಮನೋವಿಜ್ಞಾನವು ತನ್ನ ಅಧ್ಯಯನದ ವ್ಯಾಪ್ತಿಗೊಳಪಡಿಸುತ್ತದೆ. ಇವುಗಳಲ್ಲಿ ಅನೇಕ ಕ್ರಿಯೆಗಳು, ಪರಿಕಲ್ಪನೆಗಳು, ಸಂರಚನೆಗಳು ಕಂಡುಬರುತ್ತವೆ. ಪ್ರವೃತ್ತಿ, ಅಭಿಪ್ರೇರಣೆ, ಆಲೋಚನೆ, ಕಲಿಕೆ, ಸೃಜನಶೀಲತೆ ಸಂವೇದನೆ, ಬುದ್ಧಿ ಶಕ್ತಿ, ಗತಿಕೌಶಲ ಸ್ಮೃತಿ, ವಿಸ್ಮೃತಿ-ಹೀಗೆ ಹಲವು ಹತ್ತು ವಿಚಾರಗಳ ಪಟ್ಟಿಯನ್ನೇ ಮಾಡಬಹುದು.

ನಮಗೆ ದೊರಕುವ ಪ್ರತ್ಯಕ್ಷಾನುಭವಗಳು ಇಂದ್ರಿಯಾನುಭವದ ಮೂಲಕ ಭಾವನೆಗಳಾಗಿ ಮನಸ್ಸಿನಲ್ಲಿ ಸೇರಿಕೊಳ್ಳುತ್ತವೆ. ಅವುಗಳು ಹಾಗೆಯೇ ಸುಮ್ಮನೆ ಉಳಿಯದೆ ಒಂದಕ್ಕೊಂದು ಸಂಬಂಧ ಕಲ್ಪಿಸಿಕೊಂಡು ನೂತನ ಜ್ಞಾನದ ನಿರ್ಮಾಣದಲ್ಲಿ ತೊಡಗುತ್ತವೆ. ಹೊಸ ಜ್ಞಾನವನ್ನು ಪಡೆಯಲು ಉಂಟಾಗುವ ಆ ಉನ್ನತ ಮಟ್ಟದ ಮನೋವ್ಯಾಪಾರವೇ "ಆಲೋಚನೆ". ಅದಕ್ಕೆ ಸ್ಮರಣೆ ಮತ್ತು ಕಲ್ಪನೆ ಸಹಾಯ ಮಾಡುವ ಮನೋವ್ಯಾಪಾರಗಳು. ಆಲೋಚನೆ ವಂಶಗತವಾಗಿ ಬರುವ ಬುದ್ಧಿ ಶಕ್ತಿಗೆ ಸಂಬಂಧಿಸಿದ ಪ್ರಕ್ರಿಯೆ.[5] ಸನ್ನಿವೇಶಗಳಲ್ಲಿ ಕಂಡುಬರುವ ಬದಲಾವಣೆಗೆ ಹೊಂದಿಕೊಳ್ಳುವ ಅಗತ್ಯ ನಿರಂತರವೂ ಇರುತ್ತದೆ. ಪ್ರಾಣಿಗಳಲ್ಲಿ ಅಷ್ಟಾಗಿ ಕಂಡುಬರದ ಆಲೋಚನೆ ಮಾನವನಲ್ಲಿ ಎದುರಾಗುವ ಸಮಸ್ಯೆಗಳನ್ನು ಬಿಡಿಸಿಕೊಳ್ಳುವಾಗ ನಿರ್ದಿಷ್ಟ ಪಾತ್ರ ವಹಿಸುತ್ತದೆ. ಸನ್ನಿವೇಶಗಳೊಡನೆ ಹೊಂದಾಣಿಕೆ ಮಾಡಿಕೊಳ್ಳುವಾಗಲೂ ಆಲೋಚನೆ ಮಾರ್ಗ ತೋರಿಸುವುದು. ವಿಧವಿಧವಾದ ಸಮಸ್ಯೆಗಳು ನಮ್ಮ ನಿತ್ಯಜೀವನದಲ್ಲಿ ಏಳುತ್ತಲೇ ಇರುತ್ತವೆ. ಇದರ ಜೊತೆಗೆ ವಾತಾವರಣದ ಎಡರು ತೊಡರುಗಳೂ ಕಾದಿರುತ್ತವೆ. ಸಾಮಾಜಿಕ ಸಮಸ್ಯೆಗಳೂ ಎದುರಾಗುತ್ತವೆ. ಅವುಗಳನ್ನೆಲ್ಲಾ ಬಿಡಿಸಿ ಅಗತ್ಯವಾದಂತೆ ನಡೆದರೆ ನಾವು ಸುಖವಾಗಿ ಬದುಕಿ ಬಾಳಬಹುದು. ಹೀಗಾಗಿ ಜೀವನದಲ್ಲಿ ಹುಟ್ಟಿಕೊಳ್ಳುವ ಎಲ್ಲ ಎಡರು ತೊಡರುಗಳನ್ನೂ ಪರಿಹರಿಸಿ ಯಶಸ್ವಿಯಾಗಿ ಬಾಳಲು "ಆಲೋಚನೆ" ಮಾನವನಿಗೆ ನಿತ್ಯ ನಿರಂತರ ನೆರವಾಗುವ ವರಪ್ರಸಾದವಾಗಿದೆ.ಸರಿಯಾಗಿ ಆಲೋಚಿಸಿ, ವಿಚಾರಿಸಿ ಮಾಡಿದ ಕಾರ್ಯದ ಬಗ್ಗೆ ಕವಿ ಭಾರವಿ ಒಂದು ಒಳ್ಳೆಯ ಸೂಕ್ತಿಯನ್ನು ಹೇಳುತ್ತಾನೆ.

सहसा विदधीत न क्रियां अविवेकः परमापदां पदम् ।

वृणुतेहि विमृश्यकारिणं गुणलुब्धाः स्वयमेव संपदः ॥[6]

---

5. **ವೀರಪ್ಪ. ಎನ್.ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-15, ಪು-364,365.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

6. भारवि विरचित किरातार्जुनीयम् - 2-30

ಅಂದರೆ ಯಾವ ಕಾರ್ಯವನ್ನೇ ಆಗಲೀ, ವಿಚಾರಿಸದೇ ಮಾಡಬಾರದು ಅವಿವೇಕವೆಂಬುದು ಆಪತ್ತುಗಳಿಗೆಲ್ಲಾ ಮೂಲ.ವಿಮರ್ಶಿಸಿ ಕೆಲಸಮಾಡುವ ಗುಣವಂತನೆಡೆ ಸಂಪತ್ತುಗಳು ತಾನಾಗಿ ಬಂದು ನೆಲೆಸುತ್ತವೆ. ಈ ಮಾತು. ಅಕ್ಷರಶಃ ನಿಜ. ಈ ಆಲೋಚನಾ ಶಕ್ತಿಯನ್ನು ರಾಜಕುಮಾರರಲ್ಲಿ ಬೆಳೆಸಲೆಂದೇ ವಿಷ್ಣುಶರ್ಮರು ತಮ್ಮ ಪಂಚತಂತ್ರದಲ್ಲಿ, ಅತ್ಯಂತ ವ್ಯವಸ್ಥಿತವಾಗಿ ಶೈಕ್ಷಣಿಕ ಸನ್ನಿವೇಶಗಳನ್ನು ಮತ್ತು ಸಮಯೋಚಿತವಾದ ದೃಷ್ಟಾಂತಗಳನ್ನು ಒದಗಿಸಿ ಪ್ರೇರೇಪಿಸಿದ್ದಾರೆ.

ಆಲೋಚನೆಯ ಕಾರ್ಯ ಮುಖ್ಯವಾಗಿ ಮಾನಸಿಕವಾದದ್ದು. ಅದನ್ನು ನೋಡಿ ತಿಳಿಯುವಂತಿಲ್ಲ. ಆದರೆ ಅದರಿಂದಾಗುವ ಅನುಭವವನ್ನು ನಾವೇ ಅರಿತುಕೊಳ್ಳಬಹುದು. ಇದು ನರಮಂಡಲಕ್ಕೆ ಸಂಬಂಧಿಸಿದ್ದರೂ ಕೆಲವು ನಿರ್ದಿಷ್ಟ ರೀತಿಯ ದೈಹಿಕ ವರ್ತನೆಗಳನ್ನು ಕಾಣಿಸುತ್ತದೆ. ಉದಾಹರಣೆಗೆ: ಮಾಂಸಖಂಡಗಳು ಬಿಗಿಯಾಗುವುದು, ಕಣ್ಣಿನ ನೋಟ ಕೇಂದ್ರೀಕರಿಸಿದಂತೆ ಕಾಣುವುದು ಇತ್ಯಾದಿ. ಕೆಲವೊಮ್ಮೆ ಆಲೋಚನೆಯ ಫಲವಾಗಿ ಮಾಡುವ ರಸಾಭಾವವೂ ದೈಹಿಕ ವರ್ತನೆಗಳಲ್ಲಿ ಕಾಣಿಸಿಕೊಳ್ಳುವುದು. ಉದಾಹರಣೆಗೆ:– ತೃಪ್ತಿಯಾಗುವಂತೆ ಆಲೋಚನೆ ನಡೆದರೆ ಮುಖದಲ್ಲಿ ಮಂದಹಾಸ, ವಿನೂತನ ಅಂಶ ಗೋಚರಿಸಿದರೆ ನಗುವುದು, ಅಹಿತವಾಗಿದ್ದಲ್ಲಿ ಜೋಲು ಮುಖ, ಸಮಸ್ಯೆ ಆಗ್ರಹದ್ದೆನಿಸಿದರೆ ಮುಖದಲ್ಲೂ ಆ ಭಾವ, ಕೋಪ ಇತ್ಯಾದಿಗಳನ್ನು ಗಮನಿಸಬಹುದು.[7] ಇಲ್ಲಿ ಬಹಳ ಮುಖ್ಯವಾಗಿ ಮನಸ್ಸು ಹತೋಟಿಯಲ್ಲಿರಬೇಕು.

अवशेन्द्रियचित्तानां हस्तिस्नानमिव क्रिया ।

दुर्भगाभरणप्रायो ज्ञानं भारः क्रियां विना ॥[8]

ಅಂದರೆ ಇಂದ್ರಿಯಗಳೂ ಮನಸ್ಸೂ ವಶದಲ್ಲಿರದವರಿಗೆ ಧಾರ್ಮಿಕ ಕ್ರಿಯೆಗಳು ಆನೆಗೆ ಮಾಡಿಸಿದ ಸ್ನಾನದಂತೆ(ವ್ಯರ್ಥ); ಯೋಗ್ಯವಾದ ಕೃತಿಯಿಲ್ಲದ ಜ್ಞಾನವು ವಿಧವೆಯು ಧರಿಸಿದ ಒಡವೆಗಳಂತೆ ಬರಿ ಹೊರೆ.

ಆಲೋಚನೆಗೂ ಸಹ ಇತರ ಎಲ್ಲ ಮಾನಸಿಕ ವ್ಯಾಪಾರಗಳಂತೆ ಒಂದು ಸನ್ನಿವೇಶದ ಪ್ರಚೋದನೆ ಅಗತ್ಯವಾದುದು. ಆಲೋಚನೆ ಸಾಗುವ ಮಾರ್ಗ ಮತ್ತು ಉದ್ದೇಶಗಳ ಆಧಾರದ ಮೇಲೆ ನಾಲ್ಕು ವಿಧವಾದ ಆಲೋಚನೆಗಳನ್ನು ಗುರುತಿಸಬಹುದು.

---

7. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–15, ಪು–365,366.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

8. **ನಾರಾಯಣ ಪಂಡಿತರ ಮಿತ್ರಲಾಭ**, ಶ್ಲೋ – 18

**1. ಆಕಸ್ಮಿಕ ಆಲೋಚನೆ:**

ಅನುಭವಗಳು ಎಡೆ ಸಿಕ್ಕಿದಂತೆ ಸಂಬಂಧ ಕಲ್ಪಿಸಿಕೊಳ್ಳುತ್ತವೆ. ಕಾರ್ಯಕಾರಣ ದೃಷ್ಟಿಗಳು ಆ ಸಂಬಂಧವನ್ನು ನಿರ್ದೇಶಿಸುವುದಿಲ್ಲ. ಇಂತಹ ಆಲೋಚನೆಯಿಂದ ನಮಗೆ ಯಾವ ಹೊಸ ಜ್ಞಾನವೂ ಉದ್ಭವಿಸುವುದಿಲ್ಲ. ಯಾವ ಗುರಿಯನ್ನೂ ಮುಟ್ಟುವುದಿಲ್ಲ. ಯಾವ ಶಿಕ್ಷಣವೂ ದೊರಕುವುದಿಲ್ಲ. ಹಳೆಯ ಅನುಭವಗಳನ್ನು ಮಾತ್ರ ಸ್ಮರಣೆಗೆ ತಂದುಕೊಳ್ಳಬಹುದು. ಇದೆಲ್ಲ ಕಾರಣಗಳಿಂದ ಆಕಸ್ಮಿಕ ಆಲೋಚನೆಯನ್ನು ಸೋಮಾರಿಯ ಆಲೋಚನೆಯೆಂದೂ ಕರೆಯಬಹುದು.

**2. ಭ್ರಾಂತಿಯ ಆಲೋಚನೆ:**

ಮತ್ತೊಬ್ಬರು ಆಲೋಚಿಸಿ ತೀರ್ಮಾನಿಸಿರುವ ಅಂಶವನ್ನು ಅರಿತಾಗ, ಇದು ನಾವೇ ನಿರ್ಧರಿಸಿದ್ದೆಂದು ಕೆಲವರು ಭಾವಿಸುತ್ತಾರೆ. ಇದು ಆಲೋಚನೆಯೇ ಅಲ್ಲ.

**3. ಜ್ಞಾನವರ್ಧಕ ಆಲೋಚನೆ:**

ಇದು ಹಿಂದಿನ ಅನುಭವಗಳ ಜೊತೆಗೆ ಹೊಸದೊಂದನ್ನು ಸೇರಿಸಿಕೊಳ್ಳುವುದು. ಹೊಸ ಜ್ಞಾನವು ನಮ್ಮ ಮನಸ್ಸಿಗೆ ಬರುವಾಗ ಹಳೆಯದರೊಡನೆ ಸಮನ್ವಯವಾಗಿ ಜ್ಞಾನದ ಒಟ್ಟು ಮೊತ್ತ ಅಧಿಕವಾಗುತ್ತದೆ. ಹೀಗೆ ಹಳೆಯದು ಹೊಸದರೊಡನೆ ಸಮನ್ವಯಗೊಂಡು ಜ್ಞಾನವರ್ಧಿಸುವಾಗ ಆಲೋಚನೆ ನಡೆಯಬೇಕಾಗುತ್ತದೆ. ಇದನ್ನು ಜ್ಞಾನಪೂರಕ ಆಲೋಚನೆಯೆಂದೂ ಕರೆಯಬಹುದು.

**4. ಉದ್ದೇಶಪೂರ್ವಕ ಆಲೋಚನೆ:**

ಯಾವುದಾದರೊಂದು ಸಮಸ್ಯೆ ಎದುರಾದಾಗ ಒಂದು ನಿರ್ದಿಷ್ಟ ತೀರ್ಮಾನಕ್ಕೆ ಬರಲು ಕೆಲವೊಮ್ಮೆ ಉದ್ದೇಶಪೂರ್ವಕವಾಗಿ ಪ್ರಯತ್ನಿಸುತ್ತೇವೆ. ಈಗಾಗಲೇ ಗೊತ್ತಿರುವ ಹಳೆಯ ಅನುಭವಗಳನ್ನು ಸ್ಮರಣೆಗೆ ತಂದುಕೊಂಡು ಆಲೋಚನೆ ನಡೆಸಿ ಹೊಸದೊಂದು ವಿಷಯ ತಿಳಿದುಕೊಂಡು ಸಮಸ್ಯೆಗೆ ಪರಿಹಾರವನ್ನು ಕಾಣುತ್ತೇವೆ. ಈ ರೀತಿಯ ಆಲೋಚನೆಯನ್ನೇ ಉದ್ದೇಶಪೂರ್ವಕ ಅಥವಾ ಸಮಸ್ಯಾಪರಿಹಾರಕ ಆಲೋಚನೆ ಎನ್ನಬಹುದು.[9] ಚರಿತ್ರೆ, ಕಥೆ, ಕಾದಂಬರಿಗಳಲ್ಲಿ ಹಿಂದಿನವರ ಜೀವನ ಪರಿಚಯ, ಅವರ ಪರಾಕ್ರಮ ಅಥವಾ ಸಾಧನೆ ಇವುಗಳ ವಿಚಾರ ಹೆಚ್ಚಾಗಿದ್ದರೆ, ಸ್ವತಂತ್ರವಾಗಿ ಆಲೋಚಿಸಿ ಸಮಸ್ಯೆಗಳನ್ನು ಬಿಡಿಸುವ ಅವಕಾಶ

---

9. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–15, ಪು–367–369. (1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

ದೊರಕುತ್ತದೆ. ಶಿಕ್ಷಕರು ಈ ಬಗ್ಗೆ ವಿಶೇಷ ಗಮನಹರಿಸಿ, ಮಕ್ಕಳಲ್ಲಿ ಉತ್ತಮ ಆಲೋಚನಾ ಶಕ್ತಿಯನ್ನು ಬೆಳೆಸಲು ಪ್ರೋತ್ಸಾಹಿಸಿ ಮುಂದೆ ಜೀವನದಲ್ಲಿ ಬರಬಹುದಾದ ಸಮಸ್ಯೆಗಳನ್ನು ಸ್ವಂತ ಆಲೋಚನಾ ಶಕ್ತಿಯಿಂದ ಬಿಡಿಸಿಕೊಳ್ಳುವಂತೆ ಪ್ರೇರೇಪಿಸಬೇಕು.

ಪಂಚತಂತ್ರದಲ್ಲಿ, ವಿಷ್ಣುಶರ್ಮರು ಒಂದು ವಿಶೇಷವಾದ ತಾಂತ್ರಿಕತೆಯನ್ನು ಬಳಸಿ, ಆಕರ್ಷಕ ನೀತಿಕಥೆಗಳ ಮೂಲಕ ರಾಜಕುಮಾರರಲ್ಲಿ ಉತ್ತಮ ಆಲೋಚನಾ ಶಕ್ತಿಯನ್ನು ಬೆಳೆಸಿದ್ದಾರೆ. ಉತ್ತಮ ಆಲೋಚನೆಯಿಂದಲೇ ರಾಜಕುಮಾರರು ಪ್ರಾಣಿಪಶುಪಕ್ಷಿಗಳೇ ಮಾನವರಂತೆ ವರ್ತಿಸುವಾಗ, ಮಾನವರಾದ ನಾವು ಹೀಗಿದ್ದೀವಲ್ಲಾ!! ಎಂದು ಸ್ವಯಂ ಮೌಲ್ಯಮಾಪನ ಮಾಡಿಕೊಂಡು ಇದು ಒಂದು ನಾಚಿಕೆಯ ವಿಷಯ ಎಂದು ಆಲೋಚನೆ ನಡೆಸಿದ್ದರಿಂದಲೇ, ಬಹಳ ಒಳ್ಳೆಯ ಪರಿವರ್ತನೆ ಹೊಂದಿ, ಶಾಸ್ತ್ರಗಳನ್ನು ಕಲಿಯಲು ಮುಂದಾದರು.

ಮನೋವ್ಯಾಪಾರದಲ್ಲೆಲ್ಲಾ ಅತ್ಯುನ್ನತ ಮಟ್ಟದ್ದೆಂದರೆ ಅದೇ "ವಿವೇಚನೆ" ಉದ್ದೇಶಪೂರ್ವಕವಾಗಿ ಆಲೋಚನೆಯಲ್ಲಿ ತೊಡಗುವ ಸಂದರ್ಭದಲ್ಲಿ ನಾವು ಮನಸೋಇಚ್ಛೆ ಮುಂದುವರಿಯುವಂತಿಲ್ಲ. ನಮ್ಮ ಹಿಂದಿನ ಅನುಭವಗಳ ಆಧಾರದ ಮೇಲೆ ಆಲೋಚಿಸಿದರೂ ಕುರುಡರಂತೆ ತೀರ್ಮಾನಕ್ಕೆ ಬರುವಂತಿಲ್ಲ. ಸಂಬಂಧ ಕಲ್ಪಿಸುವಾಗ ಸರಿತಪ್ಪುಗಳನ್ನು ಹೆಜ್ಜೆ ಹೆಜ್ಜೆಗೂ ವಿವೇಚನೆ ನಡೆಸಿ ಮುಂದುವರಿಯಬೇಕು. ಮಾತುಗಳನ್ನು ಆಡುವಾಗಲೂ ವಿವೇಚನೆಯಿಂದ ಸಮಯ ಸಂದರ್ಭಕ್ಕೆ ಹಿತವಾಗಿ, ಆತ್ಮೀಯವಾಗಿರಬೇಕು ರಾಮಾಯಣದಲ್ಲಿ ಇದರ ಬಗ್ಗೆ:-

सुलभाः पुरुषा राजन् सततं प्रियवादिनः ।

अप्रियस्य तु पथ्यस्य वक्ता श्रोता च दुर्लभः ।।[10]

"ಎಲೈ ರಾಜನೇ, ಯಾವಾಗಲೂ ಪ್ರಿಯವಾದ ಮಾತನ್ನು ಹೇಳುವ ವ್ಯಕ್ತಿಗಳು ಸುಲಭವಾಗಿ ಸಿಗುತ್ತಾರೆ. ಕೇಳಲು ಅಪ್ರಿಯವಾದರೂ, ಹಿತಕರವಾದ ಮಾತನ್ನು ಹೇಳುವವರು, ಹೇಳಿದರೆ ಕೇಳುವವರು ಸಿಗುವುದು ಕಷ್ಟ. ಕವಿ ಭಾರವಿ ಹೇಳುವಂತೆ "हितं मनोहारि च दुर्लभं वचः"[11] ಅಂದರೆ ಹಿತವೂ ಮನೋಹರವೂ ಆದ ಮಾತು ಸಿಗುವುದು ಕಷ್ಟ. ಹಿತವಾಗಿದ್ದರೆ ಮನೋಹರವಾಗಿರದು, ಮನೋಹರವಾಗಿದ್ದರೆ ಹಿತವಾಗಿರದು ಅಧರಕ್ಕೆ ಕಹಿ, ಉದರಕ್ಕೆ ಸಿಹಿ, ಔಷಧಿಯ ಹಾಗೆ-ಕುಡಿಯಲು ಕಹಿಯಾದರೂ, ಆರೋಗ್ಯಕ್ಕೆ ಹಿತಕರ. ಹೀಗೆ ಹಿರಿಯರ ಉಪದೇಶ, ಶಾಲೆಯಲ್ಲಿ ಪಾಠ-ಪ್ರವಚನಗಳು ಇತ್ಯಾದಿಗಳು ಕೇಳಲು

10. **ವಾಲ್ಮೀಕಿರಾಮಾಯಣ**-ಯುದ್ಧಕಾಂಡ-10-21.
11. **ಭಾರವಿಯ ಕಿರಾತಾರ್ಜುನೀಯ 1-4**

ಕಠೋರವಾಗಿದ್ದರೂ, ಅದರಂತೆ ನಡೆದಾಗ, ಹಿತಕಾರಿ. ಅದಕ್ಕೇ ಮಾತಿನಲ್ಲಿ ವಿವೇಚನೆ ಇರಬೇಕು.

ಯಾವುದೇ ಸಮಸ್ಯೆಯ ಪರಿಹಾರಕ್ಕೆ, ಮೊದಲು ಅದಕ್ಕೆ ಸಂಬಂಧಿಸಿದಂತೆ ಬೇಕಾದ ಅಂಶಗಳನ್ನು ಸಂಗ್ರಹಿಸಿ ವಾಸ್ತವಿಕ ರೀತಿಯಲ್ಲಿ ಆಲೋಚನೆ ನಡೆಸಬೇಕು. ಮುಂಜಾಗ್ರತೆಯೊಂದಿಗೆ ಸಮಸ್ಯೆಯನ್ನು ಸಮರ್ಥವಾಗಿ ಎದುರಿಸಲು ಯಾವ ಮಾರ್ಗ ಯೋಗ್ಯವೆಂಬುದನ್ನು ಅರಿತುಕೊಳ್ಳುವುದು ಬಹಳ ಮುಖ್ಯವಾದುದು. ಇಲ್ಲಿ ವಿವೇಚನೆ ಉತ್ತಮ ತೀರ್ಮಾನದೆಡೆಗೆ ಬರಲು ನೆರವಾಗುತ್ತದೆ.

ನಮ್ಮ ವಿವೇಚನೆ ಕಾರ್ಯೋನ್ಮುಖವಾಗುವ ಮಾರ್ಗವನ್ನು ಪ್ರಸಿದ್ಧ ಶಿಕ್ಷಣ ತಜ್ಞ ಜಾನ್ ಡ್ಯೂಯಿ ರವರು ಐದು ಹಂತಗಳಲ್ಲಿ ಸೂಚಿಸಿದ್ದಾರೆ.[12] ಇದನ್ನು ವಿವೇಚನೆಯ "ಪಂಚಸೋಪಾನ" ಎಂದು ಕರೆಯುತ್ತಾರೆ. ಅವುಗಳೆಂದರೆ:

**1. ಸಮಸ್ಯೆಯನ್ನು ಕಾಣುವುದು**.

ಶಿಕ್ಷಣ ನೀಡುವ ಸಂದರ್ಭದಲ್ಲಿ ಪಾಠ ಬೋಧಿಸುವಾಗ ಕಲಿಯಬೇಕಾದ ಹೊಸ ವಿಚಾರವನ್ನು ಸಮಸ್ಯೆಯ ರೂಪದಲ್ಲಿ ವಿದ್ಯಾರ್ಥಿಗಳ ಮುಂದೆ ಬರುವ ಹಾಗೆ ಮಾಡಬೇಕು. ಮುಂದೆ ಸಾಗಲು ಅದನ್ನು ಬಿಡಿಸುವ ಅಗತ್ಯವನ್ನು ಅವರು ಕಂಡುಕೊಳ್ಳುವಂತೆ ಪ್ರೋತ್ಸಾಹಿಸಬೇಕು. ಆಗ ಅವರು ಆ ಕಾರ್ಯಕ್ಕೆ ತಮ್ಮ ಮನಶ್ಶಕ್ತಿಯನ್ನು ಒದಗಿಸಿಕೊಂಡು ಕ್ರಿಯಾಶೀಲರಾಗುವರು. ಅದರ ಅಗತ್ಯದ ಅರಿವಿರುವುದರಿಂದ ಸ್ವಪ್ರೇರಣೆಯಿಂದ ಆಸಕ್ತಿ ವಹಿಸುವರು. ಇದನ್ನೇ ವಿಷ್ಣುಶರ್ಮರು ಪಂಚತಂತ್ರದಲ್ಲಿ, ಪ್ರಾರಂಬಿಕವಾಗಿ ಯಾವುದರಲ್ಲೂ ಆಸಕ್ತಿಯಿಲ್ಲದೆ, ಸ್ವೇಚ್ಛಾಪ್ರವೃತ್ತಿಯಿಂದ, ಸೋಮಾರಿಗಳಾಗಿ ಕಾಲಕಳೆಯುತ್ತಿದ್ದ ರಾಜಕುಮಾರರಿಗೆ ವಿದ್ಯೆ ಕಲಿಸುವುದು ಬಹಳ ಕಷ್ಟದ ಕೆಲಸ ಎಂಬುದನ್ನು ಬಹಳ ಸೂಕ್ಷ್ಮವಾಗಿ ಪರಿಶೀಲಿಸಿ, ಈಗಾಗಲೇ ಅವರು ಒಮ್ಮೆ ಎಡವಿದ್ದಾರೆಂಬುದನ್ನು ಗಮನಿಸಿ ಮುಂದಿನ ಕಾರ್ಯಯೋಜನೆ ಹಾಕಿಕೊಳ್ಳುತ್ತಾರೆ.

तावदस्खलितं यावत्सुखं याति समे पथि ।

स्खलिते च समुत्पन्ने विषमञ्च पदे पदे ॥[13]

ಎಲ್ಲಿಯವರೆಗೆ  ಒಮ್ಮೆಯೂ ಎಡವುದಿಲ್ಲವೋ ಅಲ್ಲಿಯವರೆಗೆ ಸುಖವಾಗಿ ಸಮವಾದ ಹಾದಿಯಲ್ಲಿ ನಡೆಯುತ್ತಾನೆ. ಒಮ್ಮೆ ಎಡವಿದಾಗ ಮುಂದೆ ಹೆಜ್ಜೆ ಹೆಜ್ಜೆಗೂ ಹಾದಿ ವಿಷಮವಾಗುತ್ತದೆ. ಇಂಥಹ

---

12. **ವೀರಪ್ಪ. ಎನ್ ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ-15, ಪು- 370-383,(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

13. **ಸುಧಾಕರ್ ಮಾಲವೀಯ,** ಸಂಪಾ, ಹಾಗೂ ವ್ಯಾಖ್ಯಾ, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಸಂಪ್ರಾಪ್ತಿ, ಶ್ಲೋ-184, ಪು-425,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಸಂದರ್ಭದಲ್ಲಿ ನಾನು ಸಿದ್ಧನಿದ್ದೇನೆಂದು ಸಿಂಹ ಗರ್ಜನೆ ಮಾಡಿದ ವಿಷ್ಣುಶರ್ಮರ ಅಸಾಧಾರಣ ಪ್ರಯತ್ನ ಆದರ್ಶಪ್ರಾಯವಾದದ್ದು. ಉತ್ತಮ ವಾತಾವರಣ ನಿರ್ಮಾಣ ಮಾಡಿ, ಒಳ್ಳೆಯ ಸನ್ನಿವೇಶ, ಸಂದರ್ಭದಲ್ಲಿ ಸ್ವಪ್ರೇರಣೆಯಿಂದ ಅವರ ಸಮಸ್ಯೆಯನ್ನು ಸಮರ್ಥವಾಗಿ ಎದುರಿಸುವಂತೆ ಸರಳ ಸುಂದರ ಕಥೆಗಳ ಮೂಲಕ ಮಾರ್ಗದರ್ಶನ ನೀಡಿದ್ದಾರೆ.

**2. ಸಮಸ್ಯೆಯ ಸ್ಪಷ್ಟೀಕರಣ**

ಪಾಠದ ಪ್ರಾರಂಭದಲ್ಲಿಯೇ ಆ ದಿನ ತಿಳಿಯಬೇಕಾದ ವಿಚಾರವನ್ನು ಸಮಸ್ಯೆಯ ರೂಪದಲ್ಲಿ ಸ್ಪಷ್ಟಪಡಿಸಬೇಕು. ಇದರಿಂದ ಆ ಕಾರ್ಯ ಸಾಧನೆಗೆ ಪೂರಕವಾದ ಅಂಶಗಳನ್ನು ಸಂಗ್ರಹಿಸುವುದಕ್ಕೆ ಹಾಗೂ ಸಮಸ್ಯೆಯನ್ನು ಬಿಡಿಸಲು ಸೂಕ್ತ ಮಾರ್ಗವನ್ನು ಕಂಡುಕೊಳ್ಳಲು ಸಹಾಯಕವಾಗುತ್ತದೆ. ಒಂದು ವೇಳೆ ಸಮಸ್ಯೆಯು ಬಹು ವ್ಯಾಪ್ತಿವುಳ್ಳದ್ದಾಗಿದ್ದರೆ, ಉಪಸಮಸ್ಯೆಗಳನ್ನಾಗಿ ವಿಂಗಡಿಸಿಕೊಂಡು, ಒಂದೊಂದನ್ನಾಗಿ ಬಿಡಿಸುವ ಏರ್ಪಾಡು ಮಾಡಿಕೊಳ್ಳಬೇಕಾಗುತ್ತದೆ.

**3. ಅಂಕಿಅಂಶಗಳ ಮತ್ತು ಅನುಭವಗಳ ಸ್ಮರಣೆ ಮತ್ತು ಸಂಬಂಧ ಕಲ್ಪನೆ:**

ಬಿಡಿಸಬೇಕಾದ ಸಮಸ್ಯೆ ಹೆಚ್ಚು ಹೆಚ್ಚು ಸ್ಪಷ್ಟವಾದಂತೆ, ಅಗತ್ಯವಾದ ಅಂಕಿಅಂಶಗಳ ಸ್ವರೂಪ ತಿಳಿಯುತ್ತದೆ. ಆಗ ನಮ್ಮ ಮನಸ್ಸಿನಲ್ಲಿರುವ ಅನುಭವದ ದೊಡ್ಡ ರಾಶಿಯಿಂದ ಅವಶ್ಯಕವಾದದ್ದನ್ನು ಮಾತ್ರ ಆರಿಸಿಕೊಳ್ಳುವಂತೆ ಮನಸ್ಸು ಸೂಚಿಸುತ್ತದೆ. ನಂತರ ಎದುರಿಸಬೇಕಾದ ಸಮಸ್ಯೆಗೆ ಸಂಬಂಧ ಕಲ್ಪಿಸಿಕೊಂಡು ಪರಿಹಾರಕಾರ್ಯಕೈಗೊಳ್ಳಲು ಸುಲಭವಾಗುತ್ತದೆ.

**4. ಊಹೆಯ ನಿರೂಪಣೆ:**

ಸಮಸ್ಯೆಯ ಪರಿಹಾರ ಮಾರ್ಗವು ಅಗತ್ಯವಾದ ಅಂಕಿಅಂಶಗಳನ್ನು ಆಯ್ಕೆ ಮಾಡಿಕೊಂಡಾಗ ಮಾತ್ರ ಸಾಧ್ಯವಾಗುತ್ತದೆ. ಸಂಗ್ರಹಿಸಿದ ಅಂಶಗಳ ಸಂಬಂಧ ಕಲ್ಪಿಸಿ ಜೋಡಿಸುತ್ತಿರುವ ಸಮಯದಲ್ಲಿ ಉತ್ತರ ಹೊಳೆಯುವ ಸಂಭವವಿರುತ್ತದೆ. ಆದರೆ ಅಂತ್ಯ ತೀರ್ಮಾನವಾಗಲಾರದು. ಅಂತ್ಯ ತೀರ್ಮಾನಕ್ಕೆ ಬರುವ ಮುನ್ನ ಅದರ ಸಾಧುತ್ವವನ್ನು ಪರಿಶೀಲಿಸಬೇಕು. ಆನಂತರ ಆ ತೀರ್ಮಾನ ಎಲ್ಲ ರೀತಿಯ ಸಂದರ್ಭಗಳಿಗೆ ಒಪ್ಪುವುದೇ ಇಲ್ಲವೇ ಎಂದು ಪರೀಕ್ಷಿಸಬೇಕು. ಒಂದು ವೇಳೆ ಒಪ್ಪದಿದ್ದರೆ, ಸರಿಹೊಂದದ ಸನ್ನಿವೇಶಗಳಾವುವು ಎಂದು ಆಲೋಚಿಸಿ, ಪುನಃ ಅವುಗಳಿಗೆ ನಮ್ಮ ಊಹೆಯನ್ನು ಒರೆಹಚ್ಚಿ ನೋಡಿ ಪರಿಷ್ಕರಣೆ ಮಾಡಬೇಕಾಗುತ್ತದೆ. ಇದನ್ನೇ ಊಹೆಯ ನಿರೂಪಣೆ ಎಂದು ಕರೆಯುವರು.

**೫. ನಿರ್ಧಾರದ ಪುರಸ್ಕಾರ ಅಥವಾ ತಿರಸ್ಕಾರ.**

ಒಂದು ವೇಳೆ ಊಹಿಸಿದ ಉತ್ತರ ಅಥವಾ ತೀರ್ಮಾನ ತಪ್ಪಾಗಲೂಬಹುದು ಅಥವಾ ಸರಿಯಾದ್ದೂ ಆಗಿರಬಹುದು. ಎಲ್ಲ ಸಂದರ್ಭಗಳಿಗೂ ಒಪ್ಪುವಂತಿದ್ದು ನಿರ್ದಿಷ್ಟವಾದ್ದೆಂದು ತಿಳಿದರೆ ಅದನ್ನು ಸ್ವೀಕರಿಸಬಹುದು. ಇಲ್ಲವಾದರೆ ಮತ್ತೆ ಆಲೋಚನೆ ನಡೆಸಬೇಕಾಗುವುದು. ಎಲ್ಲ ಸಂದರ್ಭಗಳಿಗೂ ಅನ್ವಯಿಸಬಹುದೆಂದು ಧೃಢಪಟ್ಟ ಮೇಲೂ ಆ ತೀರ್ಮಾನವನ್ನು ಕೆಲವು ನೂತನ ಸಮಸ್ಯೆಗಳನ್ನು ಬಿಡಿಸಲು ಪ್ರಯೋಗಿಸಿ ನೋಡುವುದು ಉತ್ತಮ. ನಂತರ ಸಾಧುವಾದುದನ್ನು ಆಯ್ಕೆ ಮಾಡಿ, ಸಾರ್ವತ್ರಿಕ ವ್ಯಾಪ್ತಿಗೆ ಸೂಕ್ತವಾಗಿದೆಯೇ ಎಂದು ತಿಳಿದು ತೀರ್ಮಾನ ತೆಗೆದುಕೊಳ್ಳುವುದು. ಇಲ್ಲದಿದ್ದರೆ ತಿರಸ್ಕರಿಸಬೇಕಾಗುವುದು.

ಈ ರೀತಿ ನಮ್ಮ ಆಲೋಚನೆಗಳು ಮೇಲಿನ ಪಂಚಸೋಪಾನ ಹಂತದಲ್ಲಿ ಹಾದುಹೋಗುವುದು ಉತ್ತಮ. ಅಲ್ಲಿಗೆ ಅದು ಒಂದು ರೀತಿಯ ಶಾಸ್ತ್ರೀಯ ಆಲೋಚನೆಯಾಗಿರುತ್ತದೆ. ಈ ಎಲ್ಲ ಅಂಶಗಳನ್ನು ಪರಿಶೀಲಿಸದೆ, ಆತುರವಾಗಿ ನಿರ್ಧಾರಕ್ಕೆ ಬಂದರೆ ಆಲೋಚನೆಯಲ್ಲಿ ನಿರ್ದಿಷ್ಟತೆ ಇರುವುದಿಲ್ಲ. ಆತುರದಿಂದ ಮಾಡುವ ದೋಷಮಯ ತೀರ್ಮಾನಗಳು ನಮ್ಮ ನಿತ್ಯ ಜೀವನದಲ್ಲಿ ಸಮಸ್ಯೆಗಳನ್ನು ಜಟಿಲಗೊಳಿಸುತ್ತವೆಯೇ ಹೊರತು, ಬಿಡಿಸಲು ಸರಳಗೊಳಿಸುವುದಿಲ್ಲ. ಇದರಿಂದ ಅಭಿಪ್ರಾಯ ಭಿನ್ನತೆ ಹೆಚ್ಚಿ ಸಾಮಾಜಿಕ ಕ್ಷೋಭೆಯೂ ತಲೆದೋರಬಹುದು.[14] ಸಂಸ್ಕೃತ ಕವಿ ಭರ್ತೃಹರಿ ನೀತಿಶತಕದಲ್ಲಿ ಎಷ್ಟು ಸರಳವಾಗಿ ಸೂಚಿಸಿರುವುದನ್ನು ಸ್ಮರಿಸಿಕೊಳ್ಳಬಹುದು.

कर्मायत्तं फलं पुंसां बुद्धिः कर्मानुसारिणी ।

तथापि सुधिया भाव्यं सुविचार्यैव कुर्वता ॥[15]

ಜನರಿಗೆ ಫಲವು ಕರ್ಮಗಳಿಗೆ ಅಧೀನವಾಗಿರುತ್ತದೆ. ಬುದ್ಧಿಯು ಕರ್ಮವನ್ನು ಅನುಸರಿಸುತ್ತದೆ. ಆದರೂ ಕೂಡ ಒಳ್ಳೆಯ ಬುದ್ಧಿವಂತನು ಚೆನ್ನಾಗಿ ವಿಮರ್ಶಿಸಿಯೇ ಕೆಲಸವನ್ನು ಮಾಡುವವನಾಗಿರಬೇಕು.

ವಿವಿಧ ಅಂಶಗಳನ್ನು ಜಾಣತನದಿಂದ ಜೋಡಿಸಿಕೊಂಡು, ಸೂಕ್ತ ಸಂಬಂಧ ಕಲ್ಪಿಸಿಕೊಂಡು, ಅವುಗಳ ಸಂಬಂಧದಲ್ಲಿ ಅಡಗಿರುವ ಸತ್ಯಾಂಶವನ್ನು ಅರಸಿ ಧೃಢಪಡಿಸಿಕೊಳ್ಳುವುದೇ ಶಾಸ್ತ್ರೀಯ ಆಲೋಚನೆಯಲ್ಲಿ ನಡೆಯಬೇಕಾದ ಮನೋವ್ಯಾಪಾರ. ಹೀಗಾಗಿ ಇದು ಒಂದು ಕೌಶಲ್ಯದ ಕಾರ್ಯವಾಗಿದೆ. ಇದಕ್ಕೆ ಸಾವಧಾನ ಮನಶ್ಶಾಂತಿ ಬಹು ಮುಖ್ಯ. ಕೆಲವೊಮ್ಮೆ ಆಲೋಚನೆ ನಡೆಸುವ ಸಂದರ್ಭದಲ್ಲಿ ಆತುರವೋ, ಬೇಸರವೋ

---

14. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–15, ಪು–375.(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
15. **ಭರ್ತೃಹರಿ,** ನೀತಿಶತಕ ೨– ದೈವ ಪದ್ಧತಿ, ಶ್ಲೋ–೯೦.

ಸುಳಿದುಬಿಟ್ಟರೆ, ನಮ್ಮ ಆಲೋಚನೆ ಅಡ್ಡದಾರಿ ಹಿಡಿದು, ಗೊಂದಲವನ್ನುಂಟುಮಾಡಿ, ಯಾವುದೋ ಒಂದು ತೀರ್ಮಾನಕ್ಕೆ ಬಂದುಬಿಡುವುದು ಉಂಟು. ಈ ತೀರ್ಮಾನ ಹೆಚ್ಚಿನ ಸಂದರ್ಭಗಳಲ್ಲಿ ಅಸಾಧುವೇ ಆಗಿಬಿಡುತ್ತದೆ. ಇನ್ನು ಕೆಲವು ಸಂದರ್ಭಗಳಲ್ಲಿ ಹಿಂದಿನಿಂದ ಬಂದಿರುವ ಅನೇಕ ನಂಬಿಕೆಗಳು ನಮ್ಮ ಮಾನಸಿಕ ಜೀವನದಲ್ಲಿ ಭಾಗವಹಿಸಿಬಿಡುತ್ತವೆ. ಅವುಗಳು ಸರಿಯೋ ತಪ್ಪೋ ಎಂದು ವಿವೇಚನೆ ಮಾಡದೆ ನಮ್ಮ ಆಲೋಚನೆಗಳಿಗೆ ಮೂಲ ಆಧಾರಗಳನ್ನಾಗಿ ಬಳಸಿಕೊಂಡುಬಿಟ್ಟರೆ, ತೀರ್ಮಾನ ದೋಷಮಯವಾಗಿ, ವಾಸ್ತವಿಕತೆಗೆ ದೂರವಾಗಿ ಬಿಡುತ್ತದೆ.[16] ಅದಕ್ಕೇ ಹೇಳುವುದು "ಆತುರಗಾರನಿಗೆ ಬುದ್ಧಿ ಮಟ್ಟು"ಎಂದು. ವಿಷ್ಣುಶರ್ಮರು ಪಂಚತಂತ್ರ ಕಥೆಗಳಲ್ಲಿ ಬಹಳಷ್ಟು ಕಡೆ ಈ ಎಚ್ಚರಿಕೆ ಕೊಡುತ್ತಾ ಜಾಗೃತಿ ಮೂಡಿಸಿದ್ದಾರೆ. ಉದಾಹರಣೆಗೆ ಕಣ್ಣಾರೆ ಕಂಡರೂ ಪರಾಂಬರಿಸಿ ನೋಡು, ಬುದ್ಧಿ ಬಲವೇ ಮೇಲು, ಅವರವರ ಅನರ್ಥಕ್ಕೆ ಅವರವರೇ ಜವಾಬ್ದಾರರು ಇತ್ಯಾದಿ.

ಇನ್ನೂ ಅನೇಕ ವಿಚಾರಗಳು ಆಲೋಚನೆಯನ್ನು ಅಡ್ಡದಾರಿಗೊಯ್ಯುತ್ತವೆ. ಅವುಗಳಲ್ಲಿ ಅಭಿಮಾನ ಪಕ್ಷಪಾತಗಳು, ಪೂರ್ವಜ್ಞಾನದ ಪ್ರಭಾವ, ಶಬ್ದಾಡಂಭರದ ಹೊಯ್ಲು, ವಿವೇಚನೆಯ ಅಪ್ರಬುದ್ಧ ಸ್ವರೂಪ ಇತ್ಯಾದಿಗಳು. ಅಭಿಪ್ರಾಯಗಳ ವೈಯಕ್ತಿಕ ಅಭಿಮಾನ ಏಕಮುಖ ತೀರ್ಮಾನಗಳಿಗೆ ದಾರಿಮಾಡಿಕೊಡುತ್ತದೆ. ಅವೆರಡರಲ್ಲಿ ಒಂದನ್ನು ತೀರ್ಮಾನಿಸುವ ಅಗತ್ಯತೆಯಿರುತ್ತದೆ. ಅಂತಹ ಸಂದರ್ಭದಲ್ಲಿ ಅಭಿಮಾನ ಯಾವ ಕಡೆಗೆ ಜಾಸ್ತಿ ಇದೆಯೋ, ಆ ಕಡೆಗೆ ವಾಲುತ್ತದೆ. ಅಲ್ಲಿ ತೀರ್ಮಾನ ತಪ್ಪಾಗುತ್ತದೆ. ಉದಾಹರಣೆಗೆ–ಭಾರವಿ ದೊಡ್ಡ ಕವಿಯೋ? ದಂಡಿ ದೊಡ್ಡ ಕವಿಯೋ? ಎಂಬುದನ್ನು ತೀರ್ಮಾನಿಸುವಾಗ ಅನೇಕ ಅಂಶಗಳನ್ನು ಇಬ್ಬರಿಂದಲೂ ಆರಿಸಿ, ಪರಿಗಣಿಸಿ, ತೂಗಿ ಒಂದು ತೀರ್ಮಾನಕ್ಕೆ ಬರಬೇಕಾಗುತ್ತದೆ. ಒಬ್ಬೊಬ್ಬರಲ್ಲಿ ಒಂದೊಂದು ಪ್ರತಿಭೆ ಪ್ರಕಾಶಮಾನವಾಗಿರುವುದರಿಂದ, ಭಾರವಿಯು ಕೆಲವು ಅಂಶಗಳಲ್ಲಿ ದೊಡ್ಡವನಾದರೆ ದಂಡಿಯು ಇನ್ನು ಕೆಲವಂಶಗಳಲ್ಲಿ ದೊಡ್ಡವನೆನಿಸುತ್ತಾನೆ.

सर्वस्य हि परीक्ष्यन्ते स्वभावा नेतरे गुणाः ।

अतीत्य हि गुणान्सर्वान स्वभावो मून्धि वर्तते ॥[17]

ಅಂದರೆ ಎಲ್ಲರ ವಿಷಯದಲ್ಲಿ ಹುಟ್ಟುಗುಣವನ್ನೇ ಪರೀಕ್ಷಿಸುತ್ತಾರೆ, ಹೊರತು ಇತರ ಗುಣಗಳನ್ನಲ್ಲ. ಏಕೆಂದರೆ, ಎಲ್ಲ ಗುಣಗಳನ್ನೂ ಹುಟ್ಟುಗುಣವು ಮೀರಿಸಿ ಇರುತ್ತದೆ. ಕೆಲವರ ಗುಣಗಳು

---

16. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–15, ಪು – 375–377.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
17. **ನಾರಾಯಣಪಂಡಿತರ ಮಿತ್ರಲಾಭ**– ಶ್ಲೋ–20.

ವಂಶಪಾರಂಪರ್ಯವಾಗಿ, ಮತ್ತೆ ಕೆಲವು ಸ್ವಪ್ರಯತ್ನ, ಸನ್ನಿವೇಶ ಮತ್ತು ಅಭ್ಯಾಸ ಬಲದಿಂದ ಬಂದಿರುವುದೂ ಇರುತ್ತದೆ. ಆಲೋಚನೆಮಾಡುವಾಗ ಇದೆಲ್ಲವನ್ನೂ ಗಮನಿಸಬೇಕಾಗುತ್ತದೆ. ಪಕ್ಷಪಾತವಿಲ್ಲದೆ ತೆರೆದ ಮನಸ್ಸಿನಿಂದ ಎಲ್ಲ ಅಂಶಗಳ ಕಡೆಗೂ ಗಮನವಿಟ್ಟು ಆಲೋಚಿಸಿದಾಗ ತೀರ್ಮಾನವು ಸಾಧುವೂ, ಮಧ್ಯಸ್ಥವೂ ಆಗಿರುವುದು ಕಂಡುಬರುತ್ತದೆ.[18]

ವಿವೇಚನೆಯ ಅಪ್ರಬುದ್ಧ ಸ್ವರೂಪವೂ ಕೆಲವೊಮ್ಮೆ ನಮ್ಮ ತೀರ್ಮಾನಗಳನ್ನು ತಪ್ಪುಗೊಳಿಸುವುದು. ನಮ್ಮ ಆ ವಿವೇಚನಾ ಶಕ್ತಿಗೆ ನಿಲುಕದ ಹಲವು ಸಮಸ್ಯೆಗಳು ಕಂಡು ಬರುತ್ತವೆ. ಉದಾಹರಣೆಗೆ– ದೇವರು ಇದ್ದಾನೆಯೇ? ಇಂತಹ ಸಮಸ್ಯೆಗಳನ್ನು ಬಿಡಿಸಲು ಬಲು ಕಷ್ಟ. ಇದನ್ನು ಬಿಡಿಸಲು ಅಗತ್ಯವಾದ ಅಂಕಿಅಂಶಗಳು ಯಾವುದೆಂಬುದು ಇಂದಿಗೂ ದೊರೆತಿಲ್ಲ. ಜೊತೆಗೆ ಮಾನವನ ಮನಸ್ಸು ಆಲೋಚಿಸುವಾಗ ಎಲ್ಲ ಕಾಲಗಳಲ್ಲೂ ಯಂತ್ರದಂತೆ ಕರಾರುವಾಕ್ಕಾಗಿ ಕೆಲಸಮಾಡುವುದೆಂದೂ ನಂಬಲಾಗುವುದಿಲ್ಲ.

ನಿರ್ದಿಷ್ಟ ತೀರ್ಮಾನಗಳಿಗೆ ಆಲೋಚನೆ ಒಂದು ಪ್ರಮುಖ ಮಾರ್ಗವಾದರೂ ಇತರ ಮಾರ್ಗಗಳಿಲ್ಲದಿಲ್ಲ. ನಮ್ಮ ಧಾರ್ಮಿಕ ಹಾಗೂ ಕಲ್ಪನೆಯ ತೀರ್ಮಾನಗಳು ನಮ್ಮ ಸಂಸ್ಕೃತಿಯೊಡನೆ ಹಾಸುಹೊಕ್ಕಾಗಿ ಹೆಣೆದು ಕೊಂಡಿವೆ. ಧರ್ಮ, ಸಾಹಿತ್ಯ, ಕಲೆ ಮುಂತಾದ ಕ್ಷೇತ್ರಗಳಲ್ಲಿ ಕಾಣಬಹುದು. ಶಾಸ್ತ್ರೀಯ ರೀತಿಯ ಯೋಚನೆಗೆ ನಿಲುಕದ ಅಂಶಗಳೆಷ್ಟೋ ಮಾನವನ ಧರ್ಮದೃಷ್ಟಿಗೂ, ಕಲ್ಪನಾ ಜೀವನಕ್ಕೂ ಗೋಚರಿಸಬಹುದು.

ಉತ್ತಮ ಶಿಕ್ಷಣದಿಂದ ಆಲೋಚಿಸುವ ಅಭ್ಯಾಸಗಳನ್ನು ಬೆಳೆಸುವುದು ಶಿಕ್ಷಣದ ಗುರಿಯಾಗಿದೆ. ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಆಲೋಚಿಸುವ ಅಭ್ಯಾಸವಿರಬೇಕು. ಆಲೋಚಿಸುವ ಕ್ರಮವೂ ಗೊತ್ತಿರಬೇಕು. ವಂಶಗತವಾಗಿ ಬಂದಿರುವ ಆಲೋಚನಾ ಶಕ್ತಿಯನ್ನು ಹೆಚ್ಚಿಸಲಾಗದಿದ್ದರೂ ಅದು ಶಾಸ್ತ್ರೀಯ ರೀತಿಯಲ್ಲಿ ಕಾರ್ಯನಿರ್ವಹಿಸುವ ಅಭ್ಯಾಸದ ಸೌಲಭ್ಯವನ್ನೂ, ಕ್ರಮದ ಪರಿಚಯವನ್ನೂ ದೊರಕಿಸಿಕೊಡುವ ವಿಚಾರದಲ್ಲಿ ಶಾಲೆಗಳು, ವಿದ್ಯಾಶ್ರಮಗಳು ಪ್ರಧಾನ ಪಾತ್ರ ವಹಿಸುತ್ತವೆ. ಅಂತಹ ಕೆಲವು ಮುಖ್ಯ ಅಂಶಗಳನ್ನು ಪರಿಶೀಲಿಸುವುದಾದರೆ,

---

**18. ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ –15, ಪು – 375–376.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

**1. ಪದಗಳ ಸರಿಯಾದ ಅರ್ಥ ಪರಿಚಯ.**

**2. ಅಂಕಿಅಂಶಗಳಲ್ಲಿ ನಂಬಿಕೆ ಮತ್ತು ಆಸಕ್ತಿ.**

**3. ಆಲೋಚಿಸದೆ ತೀರ್ಮಾನಕ್ಕೆ ಬರುವುದರ ಅಪಾಯ.**

**4. ಆಲೋಚಿಸಬೇಕಾದ ವಿಷಯದ ಸ್ಪಷ್ಟೀಕರಣ.**

**5. ಉಪಾಧ್ಯಾಯರ ಆದರ್ಶ.**

**6. ಆಲೋಚನೆಯ ಶಾಸ್ತ್ರೀಯ ಕ್ರಮದ ಪರಿಚಯ.**

**7. ಕಲಿಕೆಯ ಕಾರ್ಯಕ್ರಮದಲ್ಲಿ ಆಲೋಚನೆಗೆ ಅವಕಾಶ ಹೆಚ್ಚಿರಬೇಕು**

ಹೇಗೆ ವ್ಯಾಕರಣದಿಂದ ಭಾಷೆಯ ಮೇಲೆ ಹಿಡಿತ ಸಾಧಿಸಬಹುದೋ, ಹಾಗೆಯೇ ಆಲೋಚನೆಯ ಸರಿಯಾದ ಕ್ರಮವನ್ನು ಅರಿತರೆ ಆಲೋಚಿಸುವ ಕಾರ್ಯವೂ ಚೆನ್ನಾಗಿ ನಡೆಯುತ್ತದೆ. ಪ್ರಶ್ನೆಗಳನ್ನು ಹಾಕಿಕೊಂಡು ಮಕ್ಕಳು ಕುತೂಹಲದಿಂದ ಕೇಳುವ ಪ್ರಶ್ನೆಗಳಿಗೆ ಸೂಕ್ತ ಉತ್ತರ ಹೇಳಿಕೊಂಡು, ಆಲೋಚಿಸಿ ತಾವೇ ವಿಷಯವನ್ನು ಕ್ರಮವಾಗಿ ಪರಿಚಯ ಮಾಡಿಕೊಳ್ಳುವಂತೆ ಬೋಧನೆ ಮಾಡುವುದು ಒಂದು ಆದರ್ಶ ಕ್ರಮ. ಇದರಿಂದ ಮಕ್ಕಳು ಚೆನ್ನಾಗಿ ಕಲಿಯುವರು. ಜೊತೆಯಲ್ಲಿ ಆಲೋಚಿಸುವ ಅವಕಾಶವನ್ನೂ ಗಳಿಸುವರು. ಇದನ್ನೇ ಸಂವಾದಾತ್ಮಕ ಬೋಧನೆ ಎನ್ನುವರು. ವಿಷ್ಣುಶರ್ಮರು ರಾಜಕುವರರಿಗೆ ವಿದ್ಯೆಯನ್ನು ಕಲಿಸಲು ಇದೇ ಮಾದರಿಯ ಬೋಧನಾ ಕ್ರಮವನ್ನು ಅನುಸರಿಸಿ, ಉತ್ತಮ ಮಾರ್ಗದರ್ಶನ ನೀಡುತ್ತಿದ್ದರು. ಪಾಠಬೋಧನೆ ಕೇವಲ ಉಪಾಧ್ಯಾಯರ ತೀರ್ಮಾನಗಳಂತೆ ಇರಬಾರದು. ಮಕ್ಕಳ ವಿವೇಚನೆಗೆ ಅವಕಾಶ ಕಲ್ಪಿಸುವಂತಿರಬೇಕು. ಆಗ ಮಕ್ಕಳಿಗೆ ಆಲೋಚಿಸುವ ಅವಕಾಶವೂ ದೊರೆತು, ಶಾಸ್ತ್ರೀಯ ರೀತಿಯಲ್ಲಿ ಆಲೋಚಿಸುವ ಅಭ್ಯಾಸವೂ ಬೆಳೆಯುತ್ತದೆ. ವ್ಯಕ್ತಿಯ ಮತ್ತು ಸಮಾಜ ಜೀವನದಲ್ಲಿ ಆತುರದ ತೀರ್ಮಾನಗಳಿಂದ ಒದಗಬಹುದಾದ ದುರಂತಗಳು ಹೆಚ್ಚಿನ ಮಟ್ಟಿಗೆ ತಪ್ಪುತ್ತವೆ.[19]



19. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 15, ಪು – 378–383.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು –4

## 4-3. ಮನೋಧೋರಣೆಗಳು: ವರ್ತನೆಗಳು-ಪರಿವರ್ತನೆ

### ಶೀಲಸಂಪನ್ನತೆ

ಸಮಾಜದ ಅಗತ್ಯತೆಗಳು ಹಾಗೂ ಅಪೇಕ್ಷೆಗಳಿಗನುಗುಣವಾಗಿ ಮಕ್ಕಳ ವರ್ತನೆಯನ್ನು ಮಾರ್ಪಡಿಸುವುದೇ ಶಿಕ್ಷಣದ ಪ್ರಮುಖ ಉದ್ದೇಶವಾಗಿದೆ. ಮಾನವನ ವರ್ತನೆ ಹಲವಾರು ಗುಣಗಳ ಗಣಿಯಾಗಿದೆ. ಅವುಗಳಲ್ಲಿ ಬಹಳ ಮುಖ್ಯವಾದ ಗುಣವೆಂದರೆ ಮನೋಭಾವಗಳು ಅಥವಾ ಮನೋಧೋರಣೆಗಳು. ಮನೋಭಾವಗಳು ಜನ್ಮತಃ ಬಂದವಲ್ಲ. ಇವು ಜೀವನದಲ್ಲಿ ರೂಢಿಸಿಕೊಂಡಂತಹವು. ಯಾವುದೇ ಒಂದು ಸನ್ನಿವೇಶದಲ್ಲಿ ಒಬ್ಬ ವ್ಯಕ್ತಿಯು ನಿರ್ದಿಷ್ಟ ರೀತಿಯಲ್ಲಿ ವರ್ತಿಸುವಂತೆ ಮಾಡುವ ಇಂಥ ಆರ್ಜಿತ ಪ್ರವೃತ್ತಿಗಳನ್ನು ಮನೋಭಾವಗಳು**(Attitudes)** ಎಂದು ಕರೆಯುವರು.[20] ಒಂದು ವಿಷಯದ ಕಲಿಕೆ, ಹವ್ಯಾಸಗಳು, ಆಸಕ್ತಿಗಳು ಹಾಗೂ ಇತರ ಮನೋ-ದೈಹಿಕ ಅಂಶಗಳನ್ನು ರೂಢಿಸಿಕೊಳ್ಳುವಿಕೆಯು ವ್ಯಕ್ತಿ ಹೊಂದಿರುವ ಮನೋಧೋರಣೆಗಳ ಸ್ವರೂಪದಿಂದ ಪ್ರಭಾವಿತವಾಗುತ್ತವೆ.

"ನಿರ್ದಿಷ್ಟ ವಸ್ತುಗಳಿಗೆ ವ್ಯಕ್ತಿಯು ತೋರುವ ಅನುಕ್ರಿಯೆಯ ಮೇಲೆ ನಿರ್ದೇಶಕ ಅಥವಾ ಚಲನಶೀಲ ಪ್ರಭಾವ ಬೀರುವ ಅನುಭವಗಳಿಂದ ಸಂಘಟಿಸಲ್ಪಟ್ಟ ಮಾನಸಿಕ ಮತ್ತು ನರಮಂಡಲದ ಸ್ಥಿತಿಯೇ ಮನೋಧೋರಣೆ" ಎಂದು **GORDON WILLARD ALLPORT,** ಎಂಬ ಸಮಕಾಲೀನ ಅಮೆರಿಕಾದ ಸಾಮಾಜಿಕ ಮನಶ್ಶಾಸ್ತ್ರಜ್ಞರು ವ್ಯಾಖ್ಯಾನಿಸಿದ್ದಾರೆ. ಮತ್ತೊಬ್ಬ ಮನಶ್ಶಾಸ್ತ್ರಜ್ಞ **FRANK N. FREE-MAN- (Canadian born American Educational Psychologist)** ಹೀಗೆ ಹೇಳಿದ್ದಾರೆ- "ನಿರ್ದಿಷ್ಟ ಸನ್ನಿವೇಶಗಳು, ವ್ಯಕ್ತಿಗಳು, ವಸ್ತುಗಳು ಇಂಥವುಗಳ ಉದ್ದೀಪನೆಗೆ ನಿರ್ದಿಷ್ಟ ಅನುಕ್ರಿಯೆ ತೋರುವಂತೆ ಮಾಡುವ ಮನಸ್ಸಿನ ಪೂರ್ವಸಿದ್ಧ ಸ್ಥಿತಿಯೇ ಮನೋಧೋರಣೆ. ವಿಷ್ಣುಪುರಾಣದಲ್ಲಿ ಒಂದು ಸರಳ ವಿವರಣೆ ಹೀಗಿದೆ:-

तस्मात् दुःखात्मकं नास्ति न च किञ्चित्सुखात्मकम् ।

मनसः परिणामोऽयं सुखदुःखादिलक्षणः ॥[21]

ಮನೋಧೋರಣೆಗಳು ಅನುಭವ ಜನ್ಯವಾಗಿದ್ದು, ಬೌದ್ಧಿಕ, ಜೈವಿಕ, ಸಾಮಾಜಿಕ ಮತ್ತು ಸಂವೇಗಾತ್ಮಕ ಅಂಶಗಳನ್ನೊಳಗೊಂಡಿರುತ್ತದೆ. ವ್ಯಕ್ತಿಯ ವರ್ತನೆಯ ಮೇಲೆ ಕ್ರಿಯಾಶೀಲ ಪ್ರಭಾವ

---

20. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ - 20, ಪು -520..(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು -4

21 **ವಿಷ್ಣುಪುರಾಣ 2-6-47.**

ಬೀರುತ್ತವೆ. ಮನೋಧೋರಣೆಯ ವಿನ್ಯಾಸಗಳು ವಿವಿಧವಾಗಿವೆ. ಅವುಗಳೆಂದರೆ:– ಆರೋಗ್ಯ, ಜೀವನ, ಸಾವು, ಜನಸಂಖ್ಯೆ, ಸಂಗೀತ, ಕಲೆ, ಆಟಗಳು, ಸರ್ಕಾರ, ಧರ್ಮ, ರಾಜನೀತಿ ಇತ್ಯಾದಿ. ಇವುಗಳ ಬಗ್ಗೆ ಪ್ರತಿಯೊಬ್ಬನೂ ತನ್ನದೇ ಆದ ಮನೋಭಾವವನ್ನು ಹೊಂದಿರುತ್ತಾನೆ.[22]

ಮನೋಭಾವನೆಗಳು ಮೊದಮೊದಲು ಆಕಸ್ಮಿಕವಾಗಿ ರೂಪುಗೊಳ್ಳುವುದು. ಕ್ರಮಕ್ರಮವಾಗಿ ನಮಗೆ ಅರಿವೇ ಇಲ್ಲದಂತೆ ಧೃಢಗೊಳ್ಳುತ್ತಾ ಹೋಗುವುದು. ಮನೋಧೋರಣೆ ಕುರಿತು ಅನೇಕ ವಿಷಯಗಳಲ್ಲಿ ಸಂಶೋಧನೆಗಳನ್ನು ಸಮಾಜವಿಜ್ಞಾನ ನಡೆಸಿದೆ. ಕೆಲವು ವ್ಯಕ್ತಿಗಳು ಸರಳವಾಗಿ ಹೊಂದಿಕೊಳ್ಳುವ, ಸ್ನೇಹಮಯಿ, ಮನಬಿಚ್ಚಿ ಮಾತನಾಡುವ, ಸಹಾಯ ಹಸ್ತವನ್ನು ಚಾಚುವ ಸ್ವಭಾವವುಳ್ಳವರು ಧನಾತ್ಮಕ ಮನೋಧೋರಣೆಯನ್ನು ಹೊಂದಿರುತ್ತಾರೆ. ಇನ್ನು ಕೆಲವು ವ್ಯಕ್ತಿಗಳು ಅಸೂಯೆಯ ಭಾವನೆ, ಯಾವಾಗಲೂ ತಪ್ಪನ್ನು ಹುಡುಕುವ, ಮಾತುಮಾತಿಗೆ ಜಗಳ ಕಾಯುವ, ಸ್ವಪ್ರತಿಷ್ಟೆಯ, ಸ್ವಾರ್ಥವನ್ನೇ ಯೋಚಿಸುವ, ಏಕಾಂತ ಬಯಸುವ ಸ್ವಭಾವವುಳ್ಳವರು ಋಣಾತ್ಮಕ ಮನೋಧೋರಣೆಯನ್ನು ಹೊಂದಿರುತ್ತಾರೆ.[23]

ಮಕ್ಕಳಿಗೆ ಆದರ್ಶಗಳನ್ನು ಮನಸ್ಸಿಗೆ ಹಿತವಾಗುವ ಹಾಗೂ ಹಿತವಾಗುವ ಸನ್ನಿವೇಶಗಳನ್ನು ಒದಗಿಸಿ ಮನೋಭಾವಗಳನ್ನು ಮೂಡಿಸಬೇಕು. ಹಾಗೆಯೇ ಕ್ರಮವಾಗಿ ಕೆಲವು ಮೌಲ್ಯಗಳಿಗನುಗುಣವಾದ ಅನುಭವದ ಸನ್ನಿವೇಶಗಳನ್ನು ನೀಡುತ್ತಾ, ಉತ್ತಮ ವ್ಯಕ್ತಿತ್ವನಿರ್ಮಾಣ ಮಾಡಬೇಕಾದುದು ಶಿಕ್ಷಕರ ಕರ್ತವ್ಯ.

बालः पुत्रो नीतिवाक्योपचारैः कार्ये कार्ये यत्नतः शिक्षणीयः ।

लेखा लग्ना याऽमपात्रे विचित्रा नासौ नाशं पाककालेऽपि याति ॥[24]

ಬಾಲಕನಾಗಿದ್ದಲೇ ಪುತ್ರನಿಗೆ ನೀತಿಯನ್ನು ಹೇಳಿ ಪ್ರತಿಯೊಂದು ಕಾರ್ಯದಲ್ಲಿಯೂ ಶಿಕ್ಷಣವನ್ನು ಕೊಡಬೇಕು. ಹಸಿಯ ಗಡಿಗೆಯಲ್ಲಿ ರಚಿಸಿದ ವಿಚಿತ್ರವಾದ ರೇಖೆಗಳು ಗಡಿಗೆಯನ್ನು ಸುಟ್ಟಾಗಲೂ ಅಳಿಸದೆ ಇರುತ್ತವೆ.

ಮಕ್ಕಳಲ್ಲಿ ಬೆಳೆಯಬೇಕಾದ ಎಲ್ಲ ಉಚಿತ ಮನೋಭಾವಗಳಿಗೂ ಶಿಕ್ಷಕರ ಜೀವನದ ಆದರ್ಶ ಲಕ್ಷಣಗಳಿಂದ ದೊರಕುವಂತಿರಬೇಕು.ಆದ್ದರಿಂದ ಶಿಕ್ಷಕರು ಆದರ್ಶ ಮಾನವರಾಗಬೇಕು. ಸಮಾಜದ ಆದರ್ಶಗಳಲ್ಲಿ ಪಳುಗಿರಬೇಕು. ಧೃಢಚಿತ್ತ, ಸತ್ಯಸಂಧತೆ, ಸಮಾಜ ಎತ್ತಿ ಹಿಡಿಯುವ ಜೀವನ ತತ್ವ ಈ

22. **ವಾಮದೇವಪ್ಪ. ಎಚ್. ವಿ,** ಶೈಕ್ಷಣಿಕ ಮನೋವಿಜ್ಞಾನ, ಅ – 3, ಪು –150–151.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

23. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 3, ಪು –151.(2005)ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

24. **ಸುಭಾಷಿತಮಂಜರೀ** –ಸಂಸಾರ– ಶ್ಲೋ–48, ಪು–25, (2001) ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18.

ಅಂಶಗಳಲ್ಲಿ ಶಿಕ್ಷಕರು ಅಥವಾ ಬೋಧಕರು ಆದರ್ಶ ಜೀವಿಗಳೆನಿಸಿರಬೇಕು. ತಮ್ಮ ವರಿಷ್ಠ ವ್ಯಕ್ತಿತ್ವದ ಮೂಲಕ ತಮ್ಮ ಆ ಆದರ್ಶಗಳು ಮಕ್ಕಳಲ್ಲಿ ಸಮಾಜಹಿತಕ್ಕೊಪ್ಪುವ ಮನೋಧೋರಣೆಯನ್ನು ರೂಪಿಸುವ ಶಿಲ್ಪಿಗಳಾಗಬೇಕು.

ಇಂದಿನ ಮಕ್ಕಳು ಮುಂದಿನ ಪ್ರಜೆಗಳು. ಮುಂದೆ ಹತ್ತಾರು ವರ್ಷ ಬಾಳಬದುಕುತ್ತಾರೆ. ಜೀವನದಲ್ಲಿ ಶಾಲೆಯ ಬಗ್ಗೆ ಅವರು ತಾಳಬಹುದಾದ ಮನೋಧೋರಣೆ ಅವರ ಮುಂದಿನ ಜೀವನದ ಮೇಲೆ ಅಪಾರ ಪರಿಣಾಮ ಬೀರುತ್ತದೆ. ಹೀಗಿರುವುದರಿಂದ ಮಕ್ಕಳು ಶಾಲೆಯ ಬಗ್ಗೆ ವಿಶಿಷ್ಟ ಅಭಿಮಾನದ ಮನೋಭಾವನೆಯನ್ನು ಬೆಳೆಸಿಕೊಳ್ಳುವಂತೆ ಮಾಡುವುದು ಶಾಲೆಯ ಹಾಗೂ ರಾಷ್ಟ್ರದ ಹಿತದೃಷ್ಟಿಯಿಂದ ಅಗತ್ಯವಾಗಿರುತ್ತದೆ. ಇದರೊಡನೆ ಸಾಹಿತ್ಯ, ಸಂಸ್ಕೃತಿ, ಕಲೆ, ಸದ್ಭಾವನೆ, ಸಜ್ಜನಿಕೆ, ಸತ್ಯ ಇವೆಲ್ಲದರ ಬಗ್ಗೆಯೂ ಹಿತಕರವಾದ ಮನೋಧೋರಣೆ ಮೂಡುವ ಸಂಭವ ಹೆಚ್ಚಿರುತ್ತದೆ. ಇದರಿಂದ ಮಕ್ಕಳಲ್ಲಿ ಅಹಿತಕರ ದುರ್ವರ್ತನೆಗಳು ಹಿತಕರ ಸದ್ವರ್ತನೆಗಳಾಗಿ ಪರಿವರ್ತನೆಗೊಂಡು ಶೀಲಸಂಪನ್ನತೆ ಪ್ರಾಪ್ತವಾಗುವುದು.[25] ಮಕ್ಕಳಿಗೆ ಒಳ್ಳೆಯ ಸಹವಾಸ ಹಾಗೂ ಉತ್ತಮ ಪರಿಸರವನ್ನು ಒದಗಿಸಿಕೊಡಬೇಕು.

शिशौ प्रविशतः प्रायः प्रतिवेशिगुणागुणौ ।

गंधोऽन्यसंनिधेरेव संक्रामति समीरणे ॥[26]

ಮಕ್ಕಳಲ್ಲಿ ನೆರೆಮನೆಯವರ ಸದ್ಗುಣಗಳೂ, ದುರ್ಗುಣಗಳೂ ಸಾಮಾನ್ಯವಾಗಿ ಸೇರಿಕೊಳ್ಳುತ್ತವೆ, ಗಾಳಿಯಲ್ಲಿ ಇನ್ನೊಂದು ವಸ್ತುವಿನ ವಾಸನೆ ಸೇರಿಕೊಳ್ಳುವಂತೆ.

ಮನೋಭಾವನೆಗಳು ಮುಖ್ಯವಾಗಿ ನಾಲ್ಕು ಆಯಾಮಗಳನ್ನೊಳಗೊಂಡಿರುತ್ತದೆ. ಅವು ಯಾವುವೆಂದರೆ – ತೀವ್ರತೆ, ದಿಕ್ಕು, ವ್ಯಾಪಕತೆ ಮತ್ತು ಅವಧಿ. ಮನೋಧೋರಣೆಯ ತೀವ್ರತೆ ಎಂದರೆ ವ್ಯಕ್ತಿಯ ವರ್ತನೆಯನ್ನು ಎಷ್ಟರಮಟ್ಟಿಗೆ ಪ್ರೇರೇಪಿಸುತ್ತದೆಂಬುದನ್ನು ಸೂಚಿಸುತ್ತದೆ. ಉದಾಹರಣೆಗೆ:– ಉಪಾಧ್ಯಾಯರ ಬಗ್ಗೆ ತೀವ್ರ ಋಣಾತ್ಮಕ ಮನೋಭಾವನೆ ಹೊಂದಿರುವ ವ್ಯಕ್ತಿಯು ನೇರವಾಗಿ ತನ್ನ ಕೋಪವನ್ನು ಅವರ ಮೇಲೆ ತೀರಿಸಿಕೊಳ್ಳಲಾಗುವುದಿಲ್ಲ. ಅದಕ್ಕೆ ಅವನು ಆ ಉಪಾಧ್ಯಾಯರ ಬಗ್ಗೆ ಸಾರ್ವಜನಿಕ ಸ್ಥಳಗಳಲ್ಲಿ ಕೆಟ್ಟ ಹೇಳಿಕೆ ಬರೆಯುವುದು ಅಥವಾ ಅವರ ಆಸ್ತಿ ಹಾಳುಮಾಡುವುದರ ಮೂಲಕ ಪರೋಕ್ಷವಾಗಿ ತನ್ನ ಭಾವನೆ ವ್ಯಕ್ತಪಡಿಸುತ್ತಾನೆ.ಹೀಗೆ ಮನೋಧೋರಣೆಗಳು ಧನಾತ್ಮಕವಾಗಿ, ಋಣಾತ್ಮಕವಾಗಿ ಅಥವಾ ತಟಸ್ಥವಾಗಿ

---

**25. ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 20, ಪು–519–522.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

**26.** हरिहरविरचितं हरिहरसुभाषितम्– 2–51.

ಈ ಮೂರೂ ದಿಕ್ಕುಗಳಲ್ಲಿ ಪ್ರಕಟಗೊಳ್ಳಬಹುದು. ಉದಾಹರಣೆಗೆ–ಸ್ನೇಹಿತನ ಬಗ್ಗೆ ಧನಾತ್ಮಕ ಧೋರಣೆ, ವೈರಿಯ ಬಗ್ಗೆ ಋಣಾತ್ಮಕ ಧೋರಣೆ, ಅಪರಿಚಿತನ ಬಗ್ಗೆ ತಟಸ್ಥ ಧೋರಣೆ. ಮನೋಧೋರಣೆಗಳಲ್ಲಿ ಕೆಲವು ನಿರ್ದಿಷ್ಟ ವರ್ತನೆಗಳ ಮೇಲೆ ಪ್ರಭಾವ ಬೀರಿದರೆ, ಇನ್ನು ಕೆಲವು ವ್ಯಕ್ತಿಯ ಎಲ್ಲಾ ವರ್ತನೆಗಳ ಮೇಲೆ ಪ್ರಭಾವ ಬೀರುತ್ತವೆ. ಉದಾಹರಣೆಗೆ:– ಮನೋಧೋರಣೆಗಳು ವ್ಯಕ್ತಿಯಲ್ಲಿ ಎಷ್ಟು ಕಾಲ ನೆಲಸಿರುತ್ತವೆ ಎಂಬುದೇ ಅವಧಿ ಆಯಾಮದ ಸೂಚಿ. ಹೆಚ್ಚು ತೀವ್ರತೆ ಹೊಂದಿರುವವು ಹೆಚ್ಚು ಕಾಲ ನೆಲೆಗೊಳ್ಳುತ್ತವೆ, ಕಡಿಮೆ ತೀವ್ರತೆ ಹೊಂದಿರುವವು ಹೆಚ್ಚು ಕಾಲ ನೆಲೆಗೊಳ್ಳುವುದಿಲ್ಲ.[27]

ಮನೋಭಾವಗಳು ವ್ರಕ್ತಿತ್ವದ ಸ್ವರೂಪದ ಒಂದು ಅಂಗವಾಗಿ ಹೋಗಿರುತ್ತವೆ. ಅವುಗಳು ಒಮ್ಮೆ ರೂಪುಗೊಂಡು ಸರಿಯಾಗಿ ಒಂದು ವ್ಯಕ್ತಿತ್ವದಲ್ಲಿ ವ್ಯವಸ್ಥೆಗೊಂಡಿದ್ದರೆ ಮತ್ತೆ ಬದಲಾವಣೆ ಹೊಂದುವುದು ಕಷ್ಟ. ಅವುಗಳ ಆಧಾರದಿಂದಲೇ ನಿಶ್ಚಿತ ರೂಪವನ್ನು ತಾಳಿ ರುವ ದೃಷ್ಟಿ ಧ್ಯೇಯಗಳು ಅಷ್ಟೆ. ಆದರೆ ಮನೋಭಾವಗಳು ಅಪಕ್ವವಾಗಿ ವ್ಯವಸ್ಥಯಾಗಿದ್ದಲ್ಲಿ ನೇರವಾದ ಬೋಧನೆಯಿಂದ ಬದಲಾಗಬಲ್ಲವು. ಎಲ್ಲ ಮಟ್ಟಗಳ ಶಿಕ್ಷಣ ಸಂಸ್ಥೆಗಳಲ್ಲೂ ಈ ಬಗ್ಗೆ ವಿಶೇಷ ಕಾಳಜಿ ವಹಿಸಿ ವ್ಯಕ್ತಿಯಲ್ಲಿನ ಗುಣಶೀಲಗಳ ಧನಾತ್ಮಕ ಬೆಳವಣಿಗೆಗೆ ಸೂಕ್ತ ಬೋಧನೆ ಹಾಗೂ ಮಾರ್ಗದರ್ಶನ ನೀಡಬೇಕು.

ಸಾಮಾನ್ಯವಾಗಿ ವ್ಯಕ್ತಿಯ ಶೀಲಸಂಪನ್ನತೆಗೂ, ನೈತಿಕ ಶಿಕ್ಷಣಕ್ಕೂ ಸಂಬಂಧವಿರುವುದು ಸರ್ವವೇದ್ಯವಾದುದು. ನೈತಿಕ ಶಿಕ್ಷಣ, ಸಾಮಾಜಿಕ ಜೀವನಕ್ಕೆ ಬೇಕಾಗುವ ಗುಣಶೀಲಗಳನ್ನು ನಿರೂಪಿಸಿದರೆ, ವ್ಯಕ್ತಿತ್ವ ನಿರೂಪಣೆಯಲ್ಲಿ ಅದರ ಪ್ರಭಾವ ಪ್ರಾಧಾನ್ಯಕ್ಕೆ ಬರುತ್ತದೆ.ನೇರವಾದ ನೀತಿಬೋಧೆ, ಉಪಾಧ್ಯಾಯರ ಮೇಲ್ಪಂಕ್ತಿ, ಇತರ ಹಿರಿಯರ ಆದರ್ಶ ಇವು ವ್ಯಕ್ತಿ ಜೀವನದ ಮೇಲೆ ಅತ್ಯಂತ ಪ್ರಭಾವಕಾರಿಯಾಗುತ್ತದೆ.[28] ಇನ್ನೂ ಯಾವ ಮನೋಧೋರಣೆಯೂ ರೂಪುಗೊಳ್ಳದ ಎಳೆಯ ದಿನಗಳ ಮಕ್ಕಳ ಗುಣಶೀಲಗಳನ್ನು ತಿದ್ದುವಾಗ ನೇರವಾದ ಬೋಧನೆ ಅದರ್ಶ ಮತ್ತು ಆದೇಶಗಳು ಸೂಕ್ತವಾದರೆ ಆ ಮಕ್ಕಳ ವಿವೇಚನೆಯನ್ನು ಪರಿವರ್ತಿಸುವ ಮತ್ತು ಸ್ವಪ್ರೇರಣೆಯಿಂದ ಅಂತಹ ಪರಿವರ್ತನೆಗಳನ್ನು ಸ್ವೀಕರಿಸುವ ಕಾರ್ಯಕ್ರಮಗಳನ್ನು ಉಪಾಧ್ಯಾಯರು ವ್ಯವಸ್ಥೆ ಮಾಡಿಕೊಡುವುದು ಅವಶ್ಯಕವಾಗಿರುತ್ತದೆ. ಈ ಸಮಯದಲ್ಲಿ ತಿಳಿಹೇಳಿದ ಮಾತುಗಳು ಅವರ ವಯಸ್ಕರ ಜೀವನಕ್ಕೂ ಅನ್ವಯಿಸುವಂತಿರಬೇಕು. शीलं परं भूषणं ಅಂದರೆ ಶೀಲಕ್ಕಿಂತ ಮಿಗಿಲಾದ ಭೂಷಣವಿಲ್ಲ. ವ್ಯಾಸ ಮಹರ್ಷಿಗಳು ಮಹಾಭಾರತದಲ್ಲಿ ಹೀಗೆ ಹೇಳಿದ್ದಾರೆ–

---

27. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ– 3, ಪು – 151–152.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

28. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ –20, ಪು –530–531.(1962)ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

शीलं प्रधानं पुरुषे तद् यस्येह प्रणश्यति ।

न तस्य जीवितेनार्थो न धनेन न बन्धुभिः ॥[29]

ಮನುಷ್ಯನಿಗೆ ಶೀಲ ಎಲ್ಲಕ್ಕಿಂತ ಮುಖ್ಯ. ಅದು ಇಲ್ಲದ ಬಳಿಕ ಅಂಥ ವ್ಯಕ್ತಿಯ ಸಂಪರ್ಕದಿಂದಾಗಲೀ, ಬಾಂಧವ್ಯದಿಂದಾಗಲೀ, ಜೀವನದಿಂದಾಗಲೀ ಏನೂ ಅರ್ಥವಿಲ್ಲ. "कुरूपता शीलतया विराजते " ಎಂಬಂತೆ ಶೀಲದಿಂದ ಕುರೂಪವೂ ಸುರೂಪವಾಗುತ್ತದೆ.

ವ್ಯಕ್ತಿಯ ಗುಣಶೀಲಗಳ ನಿರೂಪಣೆಯಲ್ಲಿ ಸಮಾಜದ ಸಂಸ್ಕೃತಿ, ಸಂಪ್ರದಾಯಗಳು ನಿರ್ದಿಷ್ಟ ಪ್ರಭಾವವನ್ನು ಬೀರುತ್ತವೆ. ಗುಣಶೀಲಗಳು ವ್ಯಕ್ತಿ ತಾನು ತಳೆದಿರುವ ಮೌಲ್ಯಕ್ಕನುಗುಣವಾಗಿ ರೂಪಿತವಾಗುತ್ತವೆ. ಈ ಮೌಲ್ಯವು ಸಮಾಜದ ಆಸೆಆಕಾಂಕ್ಷೆಗಳನ್ನೂ, ಸಂಸ್ಕೃತಿ ಸಂಪ್ರದಾಯಗಳನ್ನೂ ಅವಲಂಬಿಸಿರುತ್ತದೆ. ಅಪೇಕ್ಷಿತ ಮನೋಭಾವನೆಗಳನ್ನು ಬೆಳೆಸುವಿಕೆ ಮತ್ತು ಮನೋಭಾವನೆಗಳನ್ನು ಏರ್ಪಡಿಸುವಿಕೆ ಉಂಟಾಗುವುದು ಶಾಲಾ ಅನುಭವಗಳಿಂದ ಹಾಗೂ ಶಿಕ್ಷಕರ ಪ್ರಭಾವದಿಂದ, ಕೆಲವು ಘಟನೆಗಳು, ಪಠ್ಯ ಹಾಗೂ ಸಹ ಪಠ್ಯ ಚಟುವಟಿಕೆಗಳಿಂದ. ಶಾಲೆಗಳಲ್ಲಿ ನೀತಿಶಿಕ್ಷಣವನ್ನು ಬೋಧಿಸುವಾಗ ಶ್ರೇಷ್ಠ ವ್ಯಕ್ತಿಗಳ ಜೀವನಚರಿತ್ರೆ ಮತ್ತು ಅವರ ತತ್ವಗಳು ಮಕ್ಕಳಿಗೆ ದಾರಿದೀಪವಾಗಲು ಮಾರ್ಗದರ್ಶನ ಮಾಡಬೇಕು. ಇದರಿಂದ ಅವರ ಅನೇಕ ಅನಪೇಕ್ಷಿತ ವರ್ತನೆಗಳು ಪರಿವರ್ತನೆಗೊಂಡು ಉತ್ತಮ ಗುಣಶೀಲಗಳನ್ನು ಬೆಳೆಸಿಕೊಂಡು ಆದರ್ಶವಾಗಿ ಬದುಕುವರು.[30] ಮಕ್ಕಳು ತಮ್ಮ ಭಾವನೆಗಳನ್ನು ಮುಕ್ತವಾಗಿ ಅಭಿವ್ಯಕ್ತಿಗೊಳಿಸಲು ಅವಕಾಶ ಕಲ್ಪಿಸಿಕೊಡಬೇಕು. ಶಾಲೆಯ ಚಟುವಟಿಕೆಗಳಲ್ಲಿ ಭಾಗವಹಿಸಿ ಯೋಜನೆಗಳಲ್ಲಿ ಪಾಲ್ಗೊಳ್ಳುವುದು, ಸಾಂಸ್ಕೃತಿಕ ಚಟುವಟಿಕೆಗಳು ಮತ್ತು ಪಠ್ಯ ವಿಷಯಗಳಲ್ಲಿ ಚರ್ಚೆ ಮುಂತಾದ ಕ್ರಿಯಾತ್ಮಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಂತೆ ಆಸಕ್ತಿ ಕೆರಳಿಸಿ, ಅವರು ಸತ್ಕಾರ್ಯ, ಸನ್ನಡತೆಯೆಡೆಗೆ ಗಮನಹರಿಸುವಂತೆ ಪ್ರೋತ್ಸಾಹಿಸಬೇಕು. ಇದರಿಂದ ಅವರಲ್ಲಿ ಅಶಿಸ್ತು, ಅಶಾಂತಿ, ಅವಿಧೇಯತೆ, ಅನಾಸಕ್ತಿ ಇತ್ಯಾದಿ ವರ್ತನೆಗಳು ಪರಿವರ್ತನೆಗೊಂಡು ಉತ್ತಮ ಗುಣಶೀಲಗಳೆಡೆಗೆ ಆಸಕ್ತಿ ಹೊಂದಿ ಜಾಗೃತರಾಗುವರು.

ಇಂದಿನ ದಿನಗಳಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಒಂದು ದೊಡ್ಡ ಕೊರಗು ಕಾಡುತ್ತಿದೆ. ಅದೇನೆಂದರೆ, ಅಂಕಗಳಿಗಾಗಿ, ವೃತ್ತಿಗಾಗಿ, ಶಿಕ್ಷಣವಾಗಿಬಿಟ್ಟಿದೆ. ಜ್ಞಾನವೃದ್ಧಿ, ನೀತಿ, ಗುಣ ಸಂಪತ್ತು, ಬದುಕಿನ ಸಾರ್ಥಕ್ಯ ಲಕ್ಷಣಗಳು ಮತ್ತುಜೀವನ ಮೌಲ್ಯಗಳನ್ನು ಕಾಣುತ್ತಿಲ್ಲ. ಹಿಂದೆ ಗುರುಕುಲಗಳಲ್ಲಿ, ಶಿಷ್ಯರ ಬಗ್ಗೆ ವೈಯಕ್ತಿಕ

---

**29. ಭಟ್.ವಿ.ಎನ್,** ಜ್ಞಾನದೀಪ, ಅ–92–ಪು–191 (ವ್ಯಾಸಮಹರ್ಷಿಗಳು–ಮಹಾಭಾರತದಲ್ಲಿ). ವಿಶ್ವನಾಥ ಪ್ರಕಾಶನ,(1997) ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ–577201.

**30. ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ –20, ಪು – 531–537. ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4.

ಗಮನಹರಿಸಿ, ಬದುಕಿನ ವ್ಯವಹಾರಗಳ ಕುರಿತು ಅನೇಕ ವಿಚಾರಗಳನ್ನು ಮನದಟ್ಟು ಮಾಡುತ್ತಾ, ವಿವಿಧ ರೀತಿಯ ಸಾಮಾಜಿಕ ಮತ್ತು ನೈತಿಕ ಮೌಲ್ಯಗಳನ್ನು ಕಲಿಸುತ್ತಿದ್ದರು. ಗುರುಹಿರಿಯರನ್ನು ಕಂಡರೆ ಅಪಾರ ಗೌರವ, ಭಕ್ತಿ, ಶ್ರದ್ಧೆ, ವಿಧೇಯತೆ ಮುಂತಾದ ಗುಣಗಳಿಂದ ಶಿಷ್ಯರು ಸಂಸ್ಕಾರವಂತರಾಗಿ ಕಂಡುಬರುತ್ತಿದ್ದರು.

श्रद्धावाँल्लभते ज्ञानं तत्परः संयतेन्द्रियः।

ज्ञानं लब्ध्वा परां शान्तिमचिरेणाधिगच्छति ॥[31]

ಶ್ರದ್ಧಾವಂತನೂ, ತತ್ಪರನೂ, ಜಿತೇಂದ್ರಿಯನೂ, ಆದವನಿಗೆ ಜ್ಞಾನವು ಲಭಿಸುತ್ತದೆ. ಜ್ಞಾನವು ಬರುತ್ತಲೇ ಅವನು ಮುಕ್ತಿಯನ್ನು ಪಡೆಯುತ್ತಾನೆ. ಹೀಗೆಂದು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸುತ್ತಾ ಜ್ಞಾನದ ಮಹತ್ವವನ್ನು ತಿಳಿಸುತ್ತಾನೆ.

विद्या ददाति विनयं विनयाद्याति पात्रताम् ।

पात्रत्वाद्धनमाप्नोति धनाद्धर्मं ततः सुखम् ॥[32]

ವಿದ್ಯೆಯು ವಿನಯವನ್ನು ಕೊಡುತ್ತದೆ. ವಿನಯದಿಂದ ಸ್ಥಾನವು ಸಿಗುತ್ತದೆ. ಸ್ಥಾನದಿಂದ ಹಣವು ದೊರಕುತ್ತದೆ. ಆ ಹಣದ ದಾನಧರ್ಮದಿಂದ ನಂತರ ಸುಖವು ಉಂಟಾಗುತ್ತದೆ. ಈ ಉಕ್ತಿಗಳು ಅಕ್ಷರಶಃ ಅರ್ಥಬದ್ಧವಾಗಿ ಕಂಡು ಬರುತ್ತಿದ್ದವು. ಅಂದರೆ, ಪಂಚತಂತ್ರದಲ್ಲಿ ವಿಷ್ಣುಶರ್ಮರು ಬಹಳ ವ್ಯವಸ್ಥಿತವಾಗಿ ರಾಜಕುಮಾರರಿಗೆ ಗುರುಕುಲ ಪದ್ಧತಿಯನ್ನು ಅನುಸರಿಸಿ, ಶಿಷ್ಯರಿಗೆ ಶ್ರದ್ಧಾಭಕ್ತಿಯಿಂದ ಇಷ್ಟಪಟ್ಟು ಕಲಿಯುವಂಥಹ ವಾತಾವರಣ ಒದಗಿಸಿ ಕೊಟ್ಟಿರುತ್ತಾರೆ. ಯಾವ ಯಾವ ಸಂದರ್ಭದಲ್ಲಿ ಎಷ್ಟು ತಿಳಿಸಬೇಕೋ ಅಷ್ಟನ್ನು, ಹಿತಮಿತವಾಗಿ ಆಕರ್ಷಕ ಪುಟ್ಟ ಪುಟ್ಟ ಕಥೆಗಳ ಮೂಲಕ ಬೋಧಿಸಿದ್ದಾರೆ. ಸುಂದರ ವ್ಯಕ್ತಿತ್ವ ನಿರ್ಮಾಣಕ್ಕೆ ಉತ್ತಮ ಬುನಾದಿಯನ್ನು ಹಾಕಿದ್ದಾರೆ.

ಈಗಿನ ಶಿಕ್ಷಣ ವ್ಯವಸ್ಥೆಯಲ್ಲಿ ಪಠ್ಯಕ್ರಮ ಪಾಠಗಳ ವೇಳಾಪಟ್ಟಿಯಲ್ಲಿ ವಾರಕ್ಕೊಂದು ಅವಧಿಯನ್ನು ನೀತಿಪಾಠಕ್ಕಾಗಿ ಮೀಸಲಿಟ್ಟಿರುವುದೇನೋ ನಿಜ. ಆದರೆ ಈ ಅವಧಿ ಒಂದು ರೀತಿಯಲ್ಲಿ ಬಿಡುವಿನ ಸಮಯವಿದ್ದಂತೆ. ಅದು ಯಾವ ಉದ್ದೇಶದಿಂದ ಸಂಯೋಜಿಸಲ್ಪಟ್ಟಿದೆಯೋ, ಅದರಂತೆ ಹೆಚ್ಚಿನ ರೀತಿಯಲ್ಲಿ ಪ್ರಯೋಜನವಾಗುತ್ತಿಲ್ಲ. ಹಿಂದಿನ ಕಾಲದಲ್ಲಿ, ಇಂಥಹ ತಯಾರಿ ಮನೆಯಿಂದಲೇ ಪ್ರಾರಂಭವಾಗಿ, ಶಾಲೆ ಅಥವಾ ಆಶ್ರಮದಲ್ಲಿಯೂ ಹೆಚ್ಚಿನ ಪ್ರೋತ್ಸಾಹ ದೊರಕುತ್ತಿತ್ತು. ಉದಾಹರಣೆಗೆ:- ಹಿಂದೆ

31. **ಭಗವದ್ಗೀತೆ**, ಅ – 4, ಶ್ಲೋ–39.
32. **ಉಪನಿಶತ್ತಿನ ಒಂದು ಪ್ರಸಿದ್ಧ ಶ್ಲೋಕ.**

ಗಾಂಧೀಜಿ, ಶಿವಾಜಿಯಂತಹ ಮಹಾನುಭಾವರು ತಾಯಿಯಿಂದ ಕಲಿತ ಕಲಿಕೆಯಲ್ಲಿನ ಪ್ರೀತಿ ಹಾಗೂ ರಾಮಾಯಣ ಮತ್ತು ಮಹಾಭಾರತ ಮಹಾಕಾವ್ಯಗಳ ಕಥೆಗಳನ್ನು ಶ್ರದ್ಧಾಭಕ್ತಿಯಿಂದ ಕೇಳಿ ಅದರ ನೀತಿಪಾಠವನ್ನು ಅವರ ಜೀವನದಲ್ಲಿ ಅಳವಡಿಸಿಕೊಂಡು ಶ್ರೇಷ್ಠ ವ್ಯಕ್ತಿಗಳಾಗಿ ಬಾಳಿ ಬದುಕಿ ಇತಿಹಾಸದ ಪುಟಗಳಲ್ಲಿ ಅಮರರಾದರು. ವಿನಯೋಪೇತ ವಿದ್ಯೆಯು ಎಂಥಹವರ ಮನಸ್ಸನ್ನೂ ಆಕರ್ಷಿಸುತ್ತದೆ.

विद्या नाम नरस्य रूपमधिकं प्रच्छन्नगुप्तं धनम्

विद्या भोगकरी यशस्सुखकरी विद्या गुरूणां गुरुः ।

विद्या बन्धुजनो विदेशगमने विद्या परा देवता

विद्या राजसु पूजिता न तु धनं विद्याविहीनः पशुः ॥[33]

ವಿದ್ಯೆಯೆಂಬುದು ಮನುಷ್ಯನ ವಿಶೇಷವಾದ ರೂಪ. ಹಾಗೂ ಅದು ಅವನ ಬಚ್ಚಿಟ್ಟು ಕಾಪಾಡಲ್ಪಟ್ಟ ಧನ. ವಿದ್ಯೆಯು ಅವನಿಗೆ ಸುಖಸಂತೋಷಗಳನ್ನೂ, ಕೀರ್ತಿ ಪ್ರತಿಷ್ಠೆಗಳನ್ನು ತಂದುಕೊಡುತ್ತದೆ. ಅದು ಅವನ ಗುರುಗಳ ಗುರು. ವಿದೇಶಕ್ಕೆ ಹೊರಟಾಗ ಅದು ಅವನ ಬಂಧು. ಅದೇ ಅವನಿಗೆ ಪರದೈವ. ಅದು ರಾಜರಲ್ಲಿ ಪೂಜಿಸಲ್ಪಟ್ಟಿದೆ. ಹಣವಲ್ಲ. ವಿದ್ಯೆಯಿಲ್ಲದವನು ಪಶು. ವಿದ್ವತ್ತು ಮತ್ತು ರಾಜತ್ವ ಎಂದಿಗೂ ಸಮಾನವಾದದ್ದಲ್ಲ. ರಾಜನು ತನ್ನ ದೇಶದಲ್ಲಿ ಮಾತ್ರ ಪೂಜಿತನಾಗುತ್ತಾನೆ. ಆದರೆ ವಿದ್ವಾನ್ ಸರ್ವತ್ರ ಪೂಜ್ಯತೇ.



೩೩. **ಭರ್ತೃಹರಿಯ ನೀತಿಶತಕ,** ವಿದ್ವತ್ ಪದ್ಧತಿ– ಶ್ಲೋ–೨೦,

# 4-4. पञ्चतन्त्रस्य प्रथमंतन्त्रम्-मित्रभेदः

**ಕಥೆಗಳ ವಿಶ್ಲೇಷಣೆ ಮುಂದುವರೆದಿದೆ**

ಈ ಮೇಲೆ ವಿಶ್ಲೇಷಣೆ ಮಾಡಿದ ಉನ್ನತ ಮಟ್ಟದ ಮನೋವ್ಯಾಪಾರಗಳಾದ ಆಲೋಚನೆ – ವಿವೇಚನೆ ಹಾಗೂ ಕೆಲವು ಜಾಗೃತ ಎಚ್ಚರಿಕೆಯ ತಿಳುವಳಿಕೆಗಳಾದ – ಕಾರ್ಯಸಾಧನೆಯಲ್ಲಿ ಮುಂದಾಲೋಚನೆ – ದುಡುಕು ಅಥವಾ ಆತುರ – ಪರೀಕ್ಷಿಸದೆ ಕೆಲಸ ಮಾಡುವುದು, ಅದರ ಪರಿಣಾಮ – ವರ್ತನೆಗಳ ಪರಿವರ್ತನೆ ಮೂಲಕ ಶೀಲ ಸಂಪನ್ನತೆ ಮುಂತಾದ ಅನೇಕ ಮನೋವೈಜ್ಞಾನಿಕ ವಿಚಾರಗಳು ಶಿಕ್ಷಣ ಕ್ಷೇತ್ರದಲ್ಲಿ ಎಷ್ಟು ಪ್ರಾಮುಖ್ಯತೆ ಪಡೆದಿದೆ ಎಂಬುದರ ಬಗ್ಗೆ ಸಂಕ್ಷಿಪ್ತವಾಗಿ ತಿಳಿದದ್ದಾಯಿತು. ಇದೇ ವಿಚಾರಗಳು ವಿಷ್ಣುಶರ್ಮರ ಪಂಚತಂತ್ರದಲ್ಲಿ ಹೇಗೆ ನೈಜವಾಗಿ ಅಡಕಗೊಂಡಿರಬಹುದೆಂದು ಪರಿಶೀಲಿಸಿದಾಗ ಈ ಕೆಲವು ಅಂಶಗಳನ್ನು ಗಮನಿಸಬಹುದು. ಬಹಳ ವಿಶಿಷ್ಟವಾಗಿ ರಚಿಸಿರುವ ಪಂಚತಂತ್ರವು ಒಬ್ಬ ಪ್ರತಿಭಾನ್ವಿತ, ಅನುಭವೀ, ಸಕಲ ಶಾಸ್ತ್ರಪಾರಂಗತ, ವಿದ್ಯಾರ್ಥಿ ಸಮುದಾಯದಲ್ಲಿ ಜನಪ್ರಿಯರಾದ ಪಂಡಿತ ವಿಷ್ಣುಶರ್ಮರ ಅಮೂಲ್ಯ ಕೃತಿ.

ದಕ್ಷಿಣ ಭಾರತದಲ್ಲಿ ಒಂದು ಪ್ರಾಚೀನ ನಗರವಾದ ಮಹಿಲಾರೋಪ್ಯದ ಅರಸು ಅಮರಶಕ್ತಿ. ಅರಸನು ಸಕಲ ಕಲಾಪಾರಂಗತ. ದಾನದಲ್ಲಿ ಕಲ್ಪವೃಕ್ಷಕ್ಕೆ ಸಮಾನನು. ವೈಭವಯುತ ಆಸ್ಥಾನದಲ್ಲಿ ಉನ್ನತವಾದ ರತ್ನಸಿಂಹಾಸನದಲ್ಲಿ ವೀರಮಂಡಿಯೊಡನೆ ಗಾಂಭೀರ್ಯವೇ ಆಕಾರ ಪಡೆದಂತೆ ಗಂಭೀರವಾಗಿ ಮಂಡಿಸಿರುವ ರಾಜ. ಇಷ್ಟೆಲ್ಲ ಇದ್ದರೂ ಅರಸನ ಮುಖದಲ್ಲಿ ಮಾತ್ರ ಚಿಂತೆಯ ಗಾಢ ದುಗುಡದ ಭಾವ. ಈ ರಾಜನ ಕುವರರು ಮೂವರು. "ರಾಜಯೋಗ ಆದರೆ ದರಿದ್ರಜಾತಕ" ಎಂಬಂತೆ ಅತ್ಯಂತ ಮೂರ್ಖರು. ಅಧಿಕಾರ ಮದದಿಂದ, ಯೌವನದ ಸೊಕ್ಕಿನಿಂದ, ಯಥೇಚ್ಛ ಸಂಪತ್ತಿನ ಗರ್ವದಿಂದ, ಸಹವಾಸ ದೋಷದಿಂದ ಉದ್ಧಟರಾಗಿ ವರ್ತಿಸುವ ಪ್ರವೃತ್ತಿಯನ್ನು ಬೆಳೆಸಿಕೊಂಡಿರುವರು.[34] ಇವರಲ್ಲಿ ಉತ್ತಮ ಆಲೋಚನೆ ನಡೆಸುವ ಪರಿಜ್ಞಾನ, ಭವಿಷ್ಯದ ಕಲ್ಪನೆ, ತಂದೆಯವರ ಆತಂಕದ ಬಗ್ಗೆ ಯಾವ ಯೋಚನೆಗಳೂ ಬಂದೇ ಇರಲಿಲ್ಲ ಎನ್ನುವಂತೆ ಕಾಣಿಸುತ್ತಿದ್ದರು. ಕವಿ ಭರ್ತೃಹರಿ ಪ್ರಶ್ನೋತ್ತರ ರೂಪದಲ್ಲಿ ಹೇಳಿರುವುದನ್ನು ಈ ಸಂದರ್ಭದಲ್ಲಿ ಅನ್ವಯಿಸಬಹುದು:-

34. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಕಥಾಮುಖ-ಪು-9.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560004.

को लाभो गुणिसङ्गमः किं असुखं प्राज्ञेतरैः संङ्गतिः

का हानिः समयच्युतिर्निपुणता का धर्मतत्त्वे रतिः ।

कः शूरो विजितेन्द्रियः प्रियतमा कानुव्रता किं धनं

विद्या किं सुखमप्रवासगमनं राज्यं किमाज्ञाफलम् ॥[35]

ಲಾಭ ಯಾವುದು? – ಗುಣವಂತರ ಸಹವಾಸ. ಸುಖವಲ್ಲದ್ದು ಯಾವುದು? – ಪ್ರಾಜ್ಞರಲ್ಲದವರ ಸಹವಾಸ. ನಷ್ಟವು ಯಾವುದು? – ಸಮಯ ಅಥವಾ ಅವಕಾಶವನ್ನು ಕಳೆದುಕೊಳ್ಳುವುದು. ನೈಪುಣ್ಯ ಯಾವುದು? – ಧರ್ಮದ ತತ್ವದಲ್ಲಿ ಆಸಕ್ತಿ. ಶೂರನು ಯಾರು? – ಇಂದ್ರಿಯಗಳನ್ನು ಜಯಿಸಿದವನು. ಪ್ರಿಯತಮೆಯು ಯಾರು? – ಅನುಸರಿಸಿ ನಿಷ್ಠೆಯಿಂದ ಇರುವವಳು. ಹಣವು ಯಾವುದು? – ವಿದ್ಯೆಯು. ಸುಖವು ಯಾವುದು? – ಪ್ರವಾಸ ಹೋಗದಿರುವುದು. ರಾಜ್ಯ ಯಾವುದು? – ಆಜ್ಞಾ ಫಲವು.

ಮುಂದಿನ ರಾಜ್ಯಾಡಳಿತ ಹೊಣೆಯನ್ನು ಅತ್ಯಂತ ಮೂರ್ಖರಾಗಿರುವ ಮಕ್ಕಳು ಹೇಗೆ ಹೊತ್ತಾರು !! ಎಂಬ ಚಿಂತೆ ರಾಜನ ಹಾಗೂ ರಾಣಿಯ ನೆಮ್ಮದಿ ಕೆಡಿಸಿಬಿಟ್ಟಿದೆ. ಇಂಥಹ ಸಂಕಷ್ಟಪರಿಸ್ಥಿತಿಯಲ್ಲಿ ನೆರವಿಗೆ ಪತ್ತೆಯಾಗಿ ಆಯ್ಕೆಯಾದವರೇ ಪ್ರಖ್ಯಾತ ಅರ್ಥಶಾಸ್ತ್ರಜ್ಞ, ರಾಜ್ಯಶಾಸ್ತ್ರಜ್ಞ ಚಾಣಕ್ಯರಿಂದ ಪ್ರಭಾವಿತರಾದ ವಿಷ್ಣುಶರ್ಮರು. ರಾಜಕುಮಾರರ ಮೂಲವರ್ತನೆಗಳ ಬಗ್ಗೆ ಹಾಗೂ ಸನ್ನಿವೇಶಗಳಿಂದ ಉಂಟಾಗಿರುವ ವ್ಯತ್ಯಾಸಗಳ ಬಗ್ಗೆ ಬಹಳ ಸೂಕ್ಷ್ಮವಾಗಿ ಗಮನಿಸಿ, ಒಳ್ಳೆಯ ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಪೂರ್ವಾಪರ ಚಿಂತನೆ ನಡೆಸಿ, ಅವರ ಆಸಕ್ತಿ, ಆಲೋಚನೆಗಳ ಧನಾತ್ಮಕ ಬೆಳವಣಿಗೆಗೆ ಏನು ಮಾಡಬೇಕು? ಎಂಬುದರ ಕುರಿತು ಬಹಳ ವಿವೇಚನಾ ಪೂರ್ವಕ ಯೋಚನೆ ನಡೆಸಿದರು, ಇವರಿಗೆ ಬದುಕಿನ ನೀತಿನಿಯಮ, ಶಿಸ್ತು, ಸಂಯಮ, ಇವುಗಳನ್ನು ಆಸಕ್ತಿಯಿಂದ ಬೆಳೆಸಿಕೊಳ್ಳಲು ಯಾವ ರೀತಿಯಲ್ಲಿ ಪ್ರೇರೇಪಿಸಬಹುದು? ಮುಂತಾದ ವಿಚಾರಗಳನ್ನು ತಮ್ಮ ಅನುಭವಕ್ಕೆ ಒರೆಹಚ್ಚಿ, ವಿಮರ್ಶಿಸಿ, ಅಂತಿಮವಾಗಿ ಶಿಕ್ಷಣವನ್ನು ನೀತಿಕಥೆಗಳ ಮೂಲಕವೇ ನೀಡಬೇಕಾಗುತ್ತದೆಂಬ ನಿರ್ದಾರಕ್ಕೆ ಬಂದರು. ಇವರುಗಳನ್ನು ಸುಶಿಕ್ಷಿತರನ್ನಾಗಿ ಮಾಡುವ ಹಾಗೂ ಇವರು ಮುಂದಿನ ಭವಿಷ್ಯ ಜೀವನದಲ್ಲಿ ಉತ್ತಮ ಗುಣಗಳನ್ನು ಬೆಳೆಸಿಕೊಂಡು, ಒಳ್ಳೆಯ ವ್ಯಕ್ತಿತ್ವ ನಿರ್ಮಾಣ ಮಾಡಿಕೊಳ್ಳುವಂತೆ ಉತ್ತಮ ಶೈಕ್ಷಣಿಕ ಸನ್ನಿವೇಶಗಳನ್ನು ಒದಗಿಸಿಕೊಟ್ಟು, ವರ್ತನೆಗಳನ್ನು ಅಪೇಕ್ಷಿತ ಮಾರ್ಗಕ್ಕೆ ಕೊಂಡೊಯ್ಯುವಂತೆ ಮಾಡುವುದಾಗಿ ಸವಾಲನ್ನು ಸ್ವೀಕರಿಸಿದರು. ಇದು ನಿಜಕ್ಕೂ ವಿಷ್ಣುಶರ್ಮರಲ್ಲಿದ್ದ ಆತ್ಮವಿಶ್ವಾಸ ಹಾಗೂ ಧೃಢ ಸಂಕಲ್ಪವನ್ನು ಸೂಚಿಸುತ್ತದೆ.

---

35. **ಭರ್ತೃಹರಿ–** ನೀತಿಶತಕ – ಶೇಷ ಭಾಗ– ಶ್ಲೋ–104.

ಈ ರಾಜಕುಮಾರರಿಗೊದಗಿದ್ದ ದುಃಸಹವಾಸದಿಂದ ಉದ್ಧಟರಾಗಿ ಬೆಳೆಯುತ್ತಿರುವ ಮನೋ ಧೋರಣೆಯನ್ನು ಪರಿವರ್ತನೆ ಮಾಡುವ ಸದುದ್ದೇಶದಿಂದ ಮೊದಲನೆಯ ತಂತ್ರ ಮಿತ್ರಭೇದದ ಮೂಲಕ ಅಂದರೆ, ಚತುರೋಪಾಯಗಳಲ್ಲಿ ಮೂರನೆಯದೇ ಭೇದ. ಇದರಲ್ಲಿ ಪರಸ್ಪರರು ಬೆರೆತಿರುವಾಗ ಅವರು ಅಭೇದ್ಯರಾಗುತ್ತಾರೆ. ಮೊದಲು ಮಿತ್ರರನ್ನು ಬೇರ್ಪಡಿಸುವುದರ ಬಗ್ಗೆ ರಾಜಕುಮಾರರು ಪರಿಜ್ಞಾನ ಹೊಂದಿದರೆ, ಸಹವಾಸ ದೋಷಗಳಿಂದ ಉಂಟಾಗುವ ಅನಾಹುತಗಳ ಅರಿವುಂಟಾಗುತ್ತದೆ.[36] ನಂತರದಲ್ಲಿ ಉಪಾಯ–ಅಪಾಯಗಳನ್ನರಿತು ಉತ್ತಮ ಮಿತ್ರರನ್ನು ಹೇಗೆ ಸಂಪ್ರಾಪ್ತಿ ಮಾಡಿಕೊಳ್ಳುವುದು ಎಂಬ ಬಗ್ಗೆ ರಾಜಕುಮಾರರೇ ವಿವೇಚನೆಯಿಂದ ಆಲೋಚನೆ ಬೆಳೆಸಿಕೊಳ್ಳುತ್ತಾರೆಂದು ವಿಷ್ಣುಶರ್ಮರು ಚಿಂತನೆ ನಡೆಸಿದ್ದಾರೆ. ಆಗಾಗ್ಗೆ ಕೆಲವು ಮುಖ್ಯ ಸೂಚನೆಗಳನ್ನು ಕೊಡುತ್ತಾರೆ: ಒಳ್ಳೆಯ ಸಹವಾಸ ಮಾಡಬೇಕು:–

जाड्यं धियो हरति सिञ्चति वाचि सत्यं मानोन्नतिं दिशति पापमपाकरोति ।

चेतः प्रसादयति दिक्षु तनोति कीर्तिं सत्सङ्गतिः कथय किं न करोति पुंसाम् ॥[37]

ಸತ್ಪುರುಷರ ಸಹವಾಸವು ಬುದ್ಧಿಯ ಜಡತ್ವ ಹೋಗಲಾಡಿಸುತ್ತದೆ. ಮಾತಿನಲ್ಲಿ ಸತ್ಯ ಚಿಮುಕಿಸುತ್ತದೆ. ಗೌರವವನ್ನು ಹೆಚ್ಚಿಸುತ್ತದೆ. ಪಾಪವನ್ನು ದೂರಮಾಡುತ್ತದೆ. ಮನಸ್ಸನ್ನು ಪ್ರಸನ್ನಗೊಳಿಸುತ್ತದೆ.. ಎಲ್ಲಾ ದಿಕ್ಕುಗಳಲ್ಲಿಯೂ ಕೀರ್ತಿಯನ್ನು ಹರಡುತ್ತದೆ, ಸತ್ಸಹವಾಸವು ಜನರಿಗೆ ಏನು ತಾನೇ ಮಾಡುವುದಿಲ್ಲ? ಹೇಳು.

ಹಿಂದಿನ ಅಧ್ಯಾಯದಲ್ಲಿ ಪಂಚತಂತ್ರದ ಪ್ರಥಮ ತಂತ್ರ ಮಿತ್ರಭೇದದ ಕೆಲವು ಕಥೆಗಳ ವಿಶ್ಲೇಷಣೆ ಮಾಡಿದ್ದಾಗಿತ್ತು. ಈ ಅಧ್ಯಾಯದಲ್ಲಿ ಇನ್ನುಳಿದ ಕಥೆಗಳನ್ನು ವಿಶ್ಲೇಷಿಸಿ, ವಿಷ್ಣುಶರ್ಮರ ಪಂಚತಂತ್ರದಲ್ಲಿ ಶೈಕ್ಷಣಿಕ ಮನೋವಿಜ್ಞಾನ, ಉತ್ತಮ ವ್ಯಕ್ತಿತ್ವ ನಿರ್ಮಾಣ ಕಲೆ ಹಾಗೂ ಸುಂದರ ಬದುಕಿನ ಮಾರ್ಗದರ್ಶನದ ವಿಚಾರಗಳನ್ನು ಪತ್ತೆ ಮಾಡೋಣ.

ಮೂರನೆಯ ಉಪಕಥೆ "ಸ್ವಂತ ಬುದ್ಧಿ ಒಂದಿರಬೇಕು ಎಂಬುದರ ಮೂಲಕ ದಂತಿಲ–ಗೋರಂಭರ ಕಥೆ ಹೇಳುತ್ತಾ, ರಾಜಮಾನ್ಯ ದಂತಿಲನು ರಾಜಪರಿವಾರದಿಂದ ಅಲಕ್ಷಿಸಲ್ಪಟ್ಟು, ಕೊನೆಗೆ ಅರಮನೆಗೂ ಬರದಂತೆ ಶಿಕ್ಷಿಸಲ್ಪಟ್ಟನು. ಇದಕ್ಕೆ ಕಾರಣ ಕಸಗುಡಿಸುವಾತನೊಬ್ಬನಿಗೆ ಇವನು ಹಿಂದೆ ಮಾಡಿದ್ದ ಅವಮಾನ. ಇದರಿಂದ ಭಂಗಿತನಾದ ಆತ ಈ ದಂತಿಲನಿಗೆ ರಾಜಾನುಗ್ರಹ ತಪ್ಪುವಂತೆ ಹೇಗೆ ಮಾಡಬಹುದು ಎಂದು ಯೋಚಿಸಿ ಬಹಳ ಬುದ್ಧಿವಂತಿಕೆಯಿಂದ ಒಂದು ತಂತ್ರ ಹೂಡಿ ರಾಜನಿಗೆ ಒಂದು ರೀತಿಯ ಮಾನಸಿಕ ಗೊಂದಲ ಹಾಗೂ ಕಳವಳ ಹುಟ್ಟು ಹಾಕಿ ಒಡಕನ್ನುಂಟುಮಾಡಿದ್ದನು.

---

36. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಪ್ರ.ತಂ. ಮಿತ್ರಭೇದ–ಪು–18.(2015) ವರ್ನಿಲ,39/2–11, ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು–560050

37. **ಭರ್ತೃಹರಿಯ ನೀತಿಶತಕ,** ವಿದ್ವತ್ ಪದ್ಧತಿ–ಶ್ಲೋ–23.

ರಾಜಾನುಗ್ರಹವಿರುವಷ್ಟು ಕಾಲ ನೀಚ, ಹೇಡಿ, ಮಾನಹೀನ, ಮೂಢರಾಗಿದ್ದರೂ ಗೌರವಕ್ಕೆ ಪಾತ್ರರಾಗುತ್ತಾರೆಂದುಕೊಂಡು ದಂತಿಲನು ಗೋರಂಭನೊಡನೆ ತಾನು ಹಿಂದೆ ಮಾಡಿದ್ದ ತಪ್ಪಿಗೆ ಕ್ಷಮಾಪಣೆ ಕೇಳಿಕೊಂಡು ರಾಜಾಶ್ರಯವಿಲ್ಲದ ತನ್ನ ಪರಿಸ್ಥಿತಿಯನ್ನು ಹೇಳಿಕೊಂಡನು. ಗೋರಂಭನು ದಂತಿಲನ ಉಪಚಾರದಿಂದ ಪ್ರಸನ್ನನಾಗಿ, ಪುನಃ ತನ್ನ ಸ್ವಂತ ಬುದ್ಧಿಯಿಂದ ಮತ್ತೊಂದು ತಂತ್ರ ಹೂಡಿ, ರಾಜನ ಮನಸ್ಸನ್ನು ಗೆದ್ದು, ರಾಜನೂ ಸ್ವಂತ ಬುದ್ಧಿಯಿಂದ, ಒಳ್ಳೆಯ ಆಲೋಚನೆ, ವಿವೇಚನೆಯಿಂದ ಅಸಂಬದ್ಧ ಪ್ರಲಾಪವನ್ನು ಕೇಳಿ ತಪ್ಪು ಮಾಡಿದೆನೆಂದು ಪಶ್ಚಾತ್ತಾಪಪಟ್ಟು ದಂತಿಲನನ್ನು ಬರಮಾಡಿಕೊಂಡು ಮೊದಲಿನಂತೆ ಗೌರವಿಸಿದನು.[38]

आकुलीनोऽपि मूर्खोऽपि भूपालं योऽत्र सेवते ।

अपि सम्मानहीनोऽपि स सर्वत्र प्रपूज्यते ॥[39]

ದಂತಿಲನು ಗೋರಂಭನ ಬಗ್ಗೆ ಯೋಚಿಸಿ ಹೀಗೆ ಒಂದು ನೀತಿಯನ್ನು ಹೇಳುತ್ತಾನೆ. "ಇದು ಖಂಡಿತವಾಗಿಯೂ ಗೋರಂಭನ ಕೆಲಸವೇ. ಉತ್ತಮ ಕುಲದವನಲ್ಲದಿದ್ದರೂ, ಮೂರ್ಖನಾಗಿದ್ದರೂ, ಗೌರವಯೋಗ್ಯನಲ್ಲದಿದ್ದರೂ ಯಾರು ರಾಜನ ಸೇವೆಯಲ್ಲಿರುವನೋ ಅವನು ಎಲ್ಲ ಕಡೆಯೂ ಗೌರವಕ್ಕೆ ಪಾತ್ರನಾಗುತ್ತನೆ.ರಾಜನ ಸೇವೆಯಲ್ಲಿದ್ದವನು ನೀಚನಾಗಿರಲಿ ಅಥವಾ ಅಂಜುಬುರುಕನಾಗಿರಲಿ, ಆತನು ಯಾರಿಂದಲೂ ಸೋಲನ್ನು ಕಾಣುವುದಿಲ್ಲ

ವಿಷ್ಣುಶರ್ಮರು ಮಿತ್ರಭೇದ ಕಥೆಯನ್ನು ಮುಂದುವರೆಸಿ... "ಹೀಗಾಗಿ ಸಂಜೀವಕನೆ, ರಾಜನಿಗೆ ಚಾಡಿ ಹೇಳಿಕೊಡುವ ನೀಚ ಚತುರರನೇಕರು ಅವನನ್ನು ಸುತ್ತುವರಿದಿರುತ್ತಾರೆ. ಅಸ್ಥಿರನಾದ ರಾಜನು ಸುಲಭದಲ್ಲಿ ಅವರ ಮಾತಿಗೆ ಮರುಳಾಗುತ್ತಾನೆ. ಆದ್ದರಿಂದ ಪಿಂಗಳಕನ ಮುಂದೆ ನೀನು ನುಡಿವಾಗ, ನಡೆವಾಗ ಎಚ್ಚರವಿರಲಿ" ಎಂದು ದಮನಕನು ಹೇಳಿದ್ದಕ್ಕೆ ಸಮ್ಮತಿ ದೊರಕಿತು.

"ರಾಜಕುಮಾರರೇ, ಮತ್ತೆಲ್ಲವೂ ಏನು ಆಗಬೇಕೋ ಅದರಂತೆ ಆಯಿತು." ಎಂದು ಹೇಳಿ ರಾಜಕುಮಾರರು ಈ ಬಗ್ಗೆ ಆಲೋಚಿಸಲು ಅನುವು ಮಾಡಿಕೊಟ್ಟರು.

"ಅಂದರೆ, ಗುರುಗಳೇ ಆದದ್ದಾದರೂ ಏನು? ಎಂದು ಕೇಳಿದನು ಬಹುಶಕ್ತಿ. ಗುರುಗಳು– "ಇದಕ್ಕೆ ಉತ್ತರವನ್ನು ನಾನು ಹೇಳುವುದಿಲ್ಲ. ನೀವೇ ಊಹಿಸಿ ತಿಳಿದುಕೊಳ್ಳಬೇಕು.

---

38. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಪಂಚತಂತ್ರದ ಕನ್ನಡಾನುವಾದ, ಮಿತ್ರಭೇದ–32–36.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–560004.
39. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–159, ಪು–86,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ನಾಳೆಯವರೆಗೆ ನಿಮಗೆ ಸಮಯ ಕೊಟ್ಟಿದ್ದೇನೆ. ನಾಳೆ ಬೆಳಗ್ಗೆ ಇಲ್ಲಿಗೆ ಬನ್ನಿ. ಏನಾಯಿತು ಎಂದು ನೀವು ಹೇಳಬೇಕು. ಮತ್ತೆ ನಾನು ಕಥೆಯನ್ನು ಮುಂದುವರಿಸುತ್ತೇನೆ." ಎಂದಿದ್ದಾರೆ. ಮುಂದೇನಾಗಿದ್ದಿರಬಹುದು ಎಂಬುದರ ಬಗ್ಗೆ ರಾಜಕುಮಾರರು ತಮ್ಮ ತಮ್ಮಲ್ಲೇ ಹಾಗಲ್ಲ, ಹೀಗೆ, ಯಾಕೆ ಹಾಗೆ? ಅದಲ್ಲ, ಇದು ಎಂದು ಚರ್ಚಿಸುತ್ತಿದ್ದರು. ಗುರುಗಳು ಇವರು ಚರ್ಚಿಸುತ್ತಿರುವುದನ್ನು ಕಂಡು ಸಮಾಧಾನ ಪಟ್ಟರು. ಒಂದು ರೀತಿಯಲ್ಲಿ ವೃತ್ತಿಯಲ್ಲಿನ ತೃಪ್ತಿ. ಇಲ್ಲಿ ನಾವು ಗಮನಿಸಬಹುದು, ವಿಷ್ಣುಶರ್ಮರು ಎಂತಹ ಒಳ್ಳೆಯ ಸನ್ನಿವೇಶವನ್ನೊದಗಿಸಿ ಆಲೋಚಿಸುವ, ವಿವೇಚನೆಯಿಂದ ಚರ್ಚಿಸುವ ತರಬೇತಿಯನ್ನು ರಾಜಕುಮಾರರಿಗೆ ನೀಡಿದ್ದಾರೆ. ಒಂದು ನೈಜ ವಿಚಾರಗೋಷ್ಠಿಯನ್ನೇ ಏರ್ಪಡಿಸಿದ್ದಂತೆ. ಇದು ಒಬ್ಬಆದರ್ಶ ಶಿಕ್ಷಕನ ಬೋಧನಾ ಕೌಶಲ್ಯ ಹಾಗೂ ಗುಣಲಕ್ಷಣ. ನಿಧಾನವಾಗಿಯಾದರೂ ರಾಜಕುಮಾರರು ಕಥೆಯ ಆಳಕ್ಕೆ ಇಳಿಯುತ್ತಿದ್ದಾರೆ ಎಂಬ ತೃಪ್ತಿ ಗುರುಗಳಿಗಾಯಿತು. ಮರುದಿನ ವಿಷ್ಣುಶರ್ಮರು ಬರುವುದರೊಳಗೆ ರಾಜಕುಮಾರರು ಬಂದು ಕುಳಿತಾಗಿತ್ತು.[40] ಹೀಗೊಂದು ಕಥೆಯು ಬರುತ್ತದೆ :-

जम्बुको हुडुयुद्धेन वयं चाषाढभूतिना ।

दूतिका परकार्येण त्रयो दोषाः स्वयंकृताः ॥[41]

"ನರಿಯು ಟಗರುಗಳ ಕಾಳಗದಿಂದ, ನಾವು ಆಶಾಢಭೂತಿಯಿಂದ ಹಾಗೂ ದೂತಿಯು ನೇಕಾರನಿಂದ ತೊಂದರೆಗೊಳಗಾದೆವು. ಆದರೆ ಈ ಮೂವರೂ ಸ್ವಯಂಕೃತ ಅಪರಾಧದಿಂದಲೇ ತೊಂದರೆಗೊಳಗಾದರು."

ಇದನ್ನು ಕೇಳಿದ ಕರಟಕ ಅದೇನೆಂದು ಕೇಳಲು ದಮನಕನು **ಆಶಾಢಭೂತಿ – ನರಿ – ದೂತಿಯ ಕಥೆ** ಹೇಳಿದನು.

ಒಂದು ನಿರ್ಜನವಾದ ಪ್ರದೇಶ, ಅಲ್ಲೊಂದು ಮಠ.ಅಲ್ಲಿ ದೇವಶರ್ಮನೆಂಬ ಸಂನ್ಯಾಸಿಯು ವಾಸವಾಗಿದ್ದನು. ಅನೇಕ ಸಜ್ಜನರು ಅವನಿಗೆ ದಾನವಾಗಿ ಕೊಟ್ಟ ಬೆಲೆಬಾಳುವ ವಸ್ತ್ರಗಳನ್ನು ಮಾರುವುದರಿಂದ ಅವನಲ್ಲಿ ಅಪಾರ ಹಣ ಸೇರಿತ್ತು. ದುಡ್ಡಿನ ವಿಷಯದಲ್ಲಿ ಅವನು ಯಾರನ್ನೂ ನಂಬದೆ ಹಗಲು ರಾತ್ರಿ ಧನವನ್ನು ತನ್ನ ಪಂಚೆಯ ಸೆರಗಿನಲ್ಲೇ ಕಟ್ಟಿಕೊಂಡಿರುತ್ತಿದ್ದನು. ಅಂತಹ ಧನದ ಬಗ್ಗೆ ಹೀಗೊಂದು ನುಡಿ ಬಹಳ ಯೋಗ್ಯವಾಗಿದೆ.

अर्थानामर्जने दुःखमर्जितानां  च रक्षणे ।

आये दुःखं व्यये दुःखं धिगर्थाः कष्टसंश्रयाः ॥[42]

40. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಪ್ರ.ತಂ.-ಪು-34-35.(2015)ವರ್ಣಿಲ, 39/2-11, ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು-560050.

41. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-173,ಪು-96,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

42. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-174, ಪು-97,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಅಂದರೆ, ಧನ ಸಂಪಾದನೆ ಮಾಡುವುದರಲ್ಲಿ ದುಃಖ ಮತ್ತು ಸಂಪಾದನೆ ಮಾಡಿದ್ದನ್ನು ರಕ್ಷಿಸಿಕೊಳ್ಳುವುದರಲ್ಲೂ ದುಃಖ. ಸಂಪಾದನೆ ಹಾಗೂ ವ್ಯಯ ಎರಡು ಸಮಯದಲ್ಲೂ ದುಃಖವುಂಟಾಗುತ್ತದೆ. ಹೀಗೆ ಕಷ್ಟವನ್ನೇ ತಂದೊಡ್ಡುವ ಹಣದ ಬಗ್ಗೆ ಧಿಕ್ಕಾರವಿರಲಿ.

ಒಮ್ಮೆ ಆಷಾಢಭೂತಿ ಎಂಬ ಪರರ ಹಣವನ್ನು ಕದಿಯುವುದರಲ್ಲಿ ನಿಷ್ಣತನಾದ ದೂರ್ತನು ಸಂನ್ಯಾಸಿಯ ಹಣದ ವಿಚಾರ ತಿಳಿದುಕೊಂಡು ಹೇಗೆ ಕದಿಯಬಹುದೆಂದು ಚಿಂತಿಸಿ, ಮಾತಿನ ಮೋಡಿಯಿಂದ ಇವನ ವಿಶ್ವಾಸ ಗಳಿಸಿ ಶಿಷ್ಯನಾಗಲು ಯೋಜನೆ ಹಾಕಿಕೊಂಡನು. ಸಂನ್ಯಾಸಿಯ ಬಳಿ ಹೋಗಿ 'ಓಂ ನಮಃ ಶಿವಾಯ' ಎಂದು ನುಡಿದು, ಬಹಳ ಬುದ್ಧಿವಂತಿಕೆಯಿಂದ ಶಿಷ್ಯನಾಗಲು ಒಪ್ಪಿಗೆ ಪಡೆದೇ ಬಿಟ್ಟನು. ದೇವಶರ್ಮನು ದೂರ್ತನಿಗೆ ಕೆಲವು ಷರತ್ತುಗಳ ಮೇಲೆ, ದೀಕ್ಷೆಯನ್ನು ಅನುಗ್ರಹಿಸಿ ಶಾಸ್ತ್ರೋಕ್ತವಾಗಿ ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಿದನು.

ಆಶಾಢಭೂತಿಯು ಗುರುವಿಗೆ ಉತ್ತಮ ಸೇವೆ ಮಾಡಿ ಸಂತೋಷಪಡಿಸಿದನು. ಹೀಗಿದ್ದರೂ ಗುರುವು ತನ್ನ ಬಳಿ ಇಟ್ಟುಕೊಂಡಿದ್ದ ಹಣದ ಗಂಟನ್ನು ಕೈ ಬಿಡುತ್ತಿರಲಿಲ್ಲ. ಹೀಗೇ ಕಾಲಕಳೆಯುತ್ತಿರಲು ಆಶಾಢಭೂತಿಯು ಬಹಳವಾಗಿ ಚಿಂತಿಸಿ, ಸಂನ್ಯಾಸಿಯನ್ನು ಹೇಗಾದರೂ ಮಾಡಿ, ಕೊಂದಾದರೂ, ಹಣವನ್ನು ಹೊಡೆದುಕೊಳ್ಳಲು ಯೋಜಿಸುತ್ತಿದ್ದನು. ಇದೇ ಸಮಯದಲ್ಲಿ ಒಂದು ಉಪನಯನ ಸಂಸ್ಕಾರ ಮಾಡಲು ದೇವಶರ್ಮನು ಶಿಷ್ಯನೊಂದಿಗೆ ಹತ್ತಿರದ ಒಂದು ಗ್ರಾಮಕ್ಕೆ ಹೊರಟನು. ಮಧ್ಯದಲ್ಲಿ ಒಂದು ನದಿಯನ್ನು ತಲುಪಿ, ಅಲ್ಲಿ, ಸ್ನಾನ, ದೇವರ ಅರ್ಚನೆ ಮಾಡಿದ ಬಳಿಕ ಪ್ರಯಾಣ ಮುಂದುವರಿಸಲು ಯೋಚಿಸಿದರು. ಈ ಮಧ್ಯೆ ದೇವಶರ್ಮನು ಪ್ರಕೃತಿಯ ಕರೆಗೆ ಹೋಗಬೇಕಾಗಿ ಬಂದಾಗ ಶಿಷ್ಯನನ್ನು ನಂಬಿ ತನ್ನ ಬಟ್ಟೆಯ ಗಂಟನ್ನು ನೋಡಿಕೊಳ್ಳಲು ಹೇಳಿ ಅವನ ಬಳಿ ಕೊಟ್ಟು ಹೊರಟನು. ಈ ಸದವಕಾಶವನ್ನು ಉಪಯೋಗಿಸಿಕೊಂಡು ಗಂಟನ್ನು ಎತ್ತಿಕೊಂಡು ಬೇಗನೆ ಅಲ್ಲಿಂದ ನಡೆದನು. ಅಂತೂ ದೇವಶರ್ಮನು ಆಶಾಢಭೂತಿಯಿಂದ ಮೋಸಹೋದನು. ಅಲ್ಲಿಂದ ಮುಂದೆ ಹಲವಾರು ರೀತಿಯಲ್ಲಿ ವಿಲಾಪಿಸಿ, ಮೆಲ್ಲಮೆಲ್ಲಗೆ ನಡೆಯುತ್ತಾ ಸಾಯಂಕಾಲದ ಸಮಯಕ್ಕೆ ಒಂದು ಗ್ರಾಮ ಸೇರಿದನು. ಅಲ್ಲಿ ಮತ್ತೊಂದು ತರಹ ವಿಚಿತ್ರ ಅನುಭವ ಪಡೆದನು. ಇಲ್ಲಿ ಒಂದು ನೀತಿ ವ್ಯಕ್ತಗೊಂಡಿದೆ:-

अवध्यो ब्राह्मणो बालः स्त्री तपस्वी च रोगभाक् ।

विहिता व्यङ्गिता तेषमपराधे महत्यपि ॥[43]

---

43. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-214,ಪು-126,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

" ಬ್ರಾಹ್ಮಣ, ಬಾಲಕ, ಸ್ತ್ರೀ, ತಪಸ್ವಿ, ರೋಗಿಷ್ಟ–ಇವರು ಮಹಾ ತಪ್ಪನ್ನು ಮಾಡಿದ್ದರೂ ಕೊಲ್ಲಬಾರದು. ಕೇವಲ ಅಂಗಹೀನರನ್ನಾಗಿ ಮಾಡಬೇಕು. ತನ್ನ ಕರ್ಮದಿಂದಲೇ ಇವಳ ಮೂಗು ಕತ್ತರಿಸಲ್ಪಟ್ಟಿದೆ. ಈಗ ರಾಜನ ಶಿಕ್ಷೆಯಂತೆ ಇವಳ ಕಿವಿಯನ್ನು ಕತ್ತರಿಸಬೇಕು." ಹಣ ಕಳೆದುಕೊಂಡ ದೇವಶರ್ಮ, ಅನ್ಯಾಯಕ್ಕೆ ನೆರವಾಗಿ ಮೂಗು ಕೊಯ್ಯಿಸಿಕೊಂಡ ಕ್ಷೌರಿಕನ ಹೆಂಡತಿ, ಅವರವರ ಅನರ್ಥಕ್ಕೆ ಅವರವರೇ ಜವಾಬ್ದಾರರು. ನಂಬಿಕೆಯಿಟ್ಟವನನ್ನು ವಂಚಿಸುವುದು ಸುಲಭವೆಂಬಂತೆ ಆಶಾಢಭೂತಿ ಕಾಲುಕಿತ್ತ. ದೇವಶರ್ಮನ ವ್ಯಥೆ ಸ್ವಲ್ಪ ಹೊತ್ತು ಮಾತ್ರ. ನಂತರ ತನ್ನನ್ನು ತಾನೇ ಸಂತೈಸಿಕೊಂಡ ಜೇನುಹುಳು ಸಂಗ್ರಹಿಸಿಟ್ಟ ಮಧುವನ್ನು ಯಾರೋ ಅಪಹರಿಸುತ್ತಾರೆ. ಈಗ ತನ್ನದೂ ಹಾಗೇ ಆಯಿತು. ಹಣ ಇದ್ದರೆ ಅದನ್ನು ಅನುಭವಿಸಬೇಕು, ಇಲ್ಲವೇ ಪರೋಪಕಾರಕ್ಕಾಗಿ ಅದನ್ನು ವಿನಿಯೋಗಿಸಬೇಕು. ಹಾಗೆ ಮಾಡದೇ ಹೋದಲ್ಲಿ ಹೀಗೆಯೇ ಆಗುತ್ತದೆ. ಎಲ್ಲವೂ ಅದೃಷ್ಟವಶ. ಕಳೆದ ಹಣ ನನ್ನದಲ್ಲವೆಂದೇ ಭಾವಿಸುತ್ತೇನೆ ಎಂದುಕೊಂಡ, ಸುಖದುಖವನ್ನು ಸಮಾನವಾಗಿ ಸ್ವೀಕರಿಸುವ ಸ್ಥಿತಪ್ರಜ್ಞನಂತೆ. ನಿಜಕ್ಕೂ ಎಂತಹ ಅದ್ಭುತವಾದ ಅನುಭವವನ್ನು ಒದಗಿಸಿ, ವಿಷ್ಣುಶರ್ಮರು ನೀತಿಪಾಠವನ್ನು ಎಷ್ಟು ಸೊಗಸಾಗಿ ಬೋಧಿಸಿದ್ದಾರೆ. ಇದು ಒಂದು ರೀತಿಯ ನಿತ್ಯ ಸತ್ಯ. ಹೀಗಾಗಿ ಪಂಚತಂತ್ರ ಪ್ರಾಚೀನ ಜನಪ್ರಿಯ ನೀತಿಕಥೆಯಾಗಿದ್ದರೂ ನಿತ್ಯಹರಿದ್ವರ್ಣ ವಿಚಾರಧಾರೆ ಸರ್ವಕಾಲಿಕ ಹಾಗೂ ಸದಾ ವಿನೂತನವಾಗಿದೆ. ಇಲ್ಲಿ ಒಂದು ಮಾತಿದೆ:–

सुप्रयुक्तस्य दम्भस्य ब्रह्माप्यन्तं न गच्छति ।

कौलिको विष्णुरूपेण राजकन्यां निषेवते ॥[44]

ಸದಾ ಪ್ರಯತ್ನಶೀಲನಾಗಿರುವವನಿಗೆ ದೈವವೂ ಕೂಡ ಒಲಿಯುತ್ತದೆ." ಸರಿಯಾಗಿ ಯೋಚಿಸಿ ಮಾಡಿದ ಮೋಸಜಾಲದಿಂದ ಬ್ರಹ್ಮನೂ ಕೂಡ ಬಿಡಿಸಿಕೊಂಡು ಬರಲಾರ. ಹಾಗೆ ಬೀಸಿದ ಬಲೆಯಿಂದ ವಿಷ್ಣುರೂಪವನ್ನು ಧರಿಸಿದ ನೇಕಾರನೊಬ್ಬನು ರಾಜಕನ್ಯೆಯನ್ನು ರಮಿಸಿದನು "ಕರಟಕನು ಇದನ್ನು ಕೇಳಿ, ಅದು ಹೇಗೆಂದು ಕೇಳಲು ದಮನಕನು **ಮಿಥ್ಯಾವಿಷ್ಣು– ನೇಕಾರ ಕಥೆ**ಯನ್ನು ಹೇಳಿದನು.

ಒಂದಾನೊಂದು ರಾಜ್ಯದಲ್ಲಿ ನೇಕಾರ ಮತ್ತು ಬಡಗಿ ಸ್ನೇಹಿತರಾಗಿದ್ದರು. ಯಾವಾಗಲೂ ಒಟ್ಟಿಗೆ ಕಾಲಕಳೆಯುತ್ತಿದ್ದರು. ಒಮ್ಮೆ ಆ ರಾಜ್ಯದ ದೇವಸ್ಥಾನವೊಂದರಲ್ಲಿ ಜಾತ್ರಾಮಹೋತ್ಸವವು ಜರುಗಿತು. ಅಲ್ಲಿಗೆ ನಾನಾ ದೇಶಗಳಿಂದ ಬಂದ ಜನರ ಗುಂಪಿನ ಮಧ್ಯೆ ಅಲೆಯುತ್ತಿದ್ದ ಈ ಮಿತ್ರರು ಆನೆಯ ಮೇಲೆ ಕುಳಿತಿರುವ ಸರ್ವಲಕ್ಷಣ ಸಂಪನ್ನಳಾದ ಸಖಿಯರಿಂದ ಹಾಗೂ ಅಂತಃಪುರದ ನಪುಂಸಕರಿಂದ ಸುತ್ತುವರೆಯಲ್ಪಟ್ಟ,

44. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ– ಮಿತ್ರಭೇದ, ಶ್ಲೋ–218, ಪು–129, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ದೇವದರ್ಶನಕ್ಕಾಗಿ ಬಂದಿದ್ದ ರಾಜಕನ್ಯೆಯನ್ನು ನೋಡಿದರು. ಅವಳನ್ನು ನೋಡಿದ ಕೂಡಲೇ ನೇಕಾರನು ವಿಷವೇರಿದಂತೆ, ದುಷ್ಟ ಗ್ರಹದಿಂದ ಪೀಡಿತನಾದಂತೆ, ಮನ್ಮಥನ ಬಾಣಗಳಿಂದ ಹೊಡೆಯಲ್ಪಟ್ಟಂತೆ ನೆಲದ ಮೇಲೆ ಬಿದ್ದನು. ಅವನನ್ನು ಆ ಸ್ಥಿತಿಯಲ್ಲಿ ನೋಡಿದ ಬಡಗಿಯು ದುಃಖಿತನಾಗಿ ಆಪ್ತಜನರ ಸಹಾಯದಿಂದ ಅವನನ್ನು ಎತ್ತಿಕೊಂಡು ಮನೆಗೆ ಬಂದನು. ಅವನಿಗೆ ವಿವಿಧ ಚಿಕಿತ್ಸೆಗಳನ್ನು ಮಾಡಿಸಿದ ಮೇಲೆ ಬಹು ಕಾಲದ ನಂತರ ನೇಕಾರನು ಗುಣಮುಖನಾದನು. ನಂತರದಲ್ಲಿ ಬಡಗಿಯು ಮಿತ್ರ ನೇಕಾರನಿಗೆ ಏನಾಗಿತ್ತೆಂಬುದರ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸಿ, ಬಹಳಷ್ಟು ಬುದ್ಧಿವಂತಿಕೆಯಿಂದ ಅವನ ದುಃಖಕ್ಕೆ ಪರಿಹಾರೋಪಾಯಗಳ ಭರವಸೆ ಮೂಡಿಸಿ, ಕಾರಣವನ್ನು ತಿಳಿದುಕೊಂಡನು. ಅದೇನೆಂದರೆ, ಅಂದು ರಾಜಕನ್ಯೆಯನ್ನು ನೋಡಿದ ನಂತರದಲ್ಲಿ ಕಾಮಬಾಧೆಯಿಂದ ಆ ಪರಿಸ್ಥಿತಿ ಉಂಟಾಯಿತೆಂದು ಒಪ್ಪಿಕೊಂಡನು." ಹಾಗಿದ್ದಲ್ಲಿ ಸುದೈವದಿಂದ ನಮ್ಮ ಮನೋರಥವು ಸಿದ್ಧವಾದಹಾಗೆಯೇ, ಇಂದೇ ಅವಳೊಂದಿಗೆ ಸಮಾಗಮವನ್ನು ನಡೆಸು."ಹೀಗೆಂದು ಬಡಗಿಯು ನೇಕಾರನಿಗೆ ಹೇಳಿದನು. ನೇಕಾರನು ಆಗಲೇ ಸಾಯಲು ಸಿದ್ಧನಾಗಿದ್ದವನು, ಬಡಗಿಯ ಮಾತಿಗೆ ಆಶ್ಚರ್ಯಗೊಂಡು, ಅಪಹಾಸ್ಯ ಮಾಡುತ್ತಿರಬಹುದೆಂದುಕೊಂಡನು. ಆಗ ಬಡಗಿಯು"ಮಿತ್ರ, ನನ್ನ ಬುದ್ಧಿ ಬಲವನ್ನು ನೋಡು " ಎಂದು ಹೇಳಿ, ಆ ಕೂಡಲೇ ವರುಣವೃಕ್ಷದ ಮರದಿಂದ ಕೀಲನಿಂದ ಸಂಚರಿಸುವಂತಹ ರೆಕ್ಕೆಯುಳ್ಳ ಗರುಡನನ್ನು ಮತ್ತು ಶಂಖ, ಚಕ್ರ, ಗದೆ, ಪದ್ಮ, ಕಿರೀಟ, ಕೌಸ್ತುಭಮಣಿ ಮುಂತಾದ ವಿಷ್ಣುವಿನ ಎಲ್ಲಾ ಲಕ್ಷಣಗಳನ್ನು ನಿರ್ಮಿಸಿದನು. ನಂತರ ಗರುಡನ ಮೇಲೆ ನೇಕಾರನನ್ನು ಕುಳ್ಳಿರಿಸಿ, ವಿಷ್ಣುವಿನ ಎಲ್ಲಾ ಚಿನ್ಹೆಗಳನ್ನು ತೊಡಿಸಿ, ಕೀಲಿನಿಂದ ಹೇಗೆ ಗರುಡನನ್ನು ನಡೆಸುವುದೆಂದು ತೋರಿಸಿಕೊಟ್ಟನು. ಮತ್ತೆ ಹೇಳಿದನು " ಗೆಳೆಯ ಏಕಾಂಗಿಯಾಗಿ ಏಳು ಅಂತಸ್ತಿನ ಭವನದಲ್ಲಿರುವ ರಾಜಕನ್ಯೆಯ ಅಂತಃಪುರಕ್ಕೆ ರಾತ್ರಿ ಈ ವಿಷ್ಣುರೂಪದಲ್ಲಿ ಹೋಗಿ ಮುಗ್ಧಸ್ವಭಾವದ ಅವಳನ್ನು ನೀನು ವಾಸುದೇವನೆಂದು ನಂಬಿಸಿ, ನಿನ್ನ ಸುಳ್ಳುನುಡಿಗಳಿಂದ ಅವಳನ್ನು ರಂಜಿಸಿ ವಾತ್ಸಾಯನನು ತಿಳಿಸಿರುವ ರೀತಿಯಲ್ಲಿ ಅವಳ ಸಮಾಗಮ ನಡೆಸು"

ನೇಕಾರನು ಅದರಂತೆಯೇ ಅನುಸರಿಸಿ ರಾಜಕುಮಾರಿಗೆ ವಿಷ್ಣುಭಗವಾನ್ ಎಂದೇ ನಂಬಿಸಿ, ಗಾಂಧರ್ವ ವಿವಾಹ ಮಾಡಿಕೊಂಡಂತಹವನಾಗಿ ಕೆಲಸ ಸಾಧಿಸಿಯೇಬಿಟ್ಟನು. ಇವನ ಆಸೆ ನೆರವೇರಿತು. ಗೆಳೆಯನ ಉಪಕಾರವನ್ನು ಮನದಲ್ಲೇ ನೆನೆದನು. ಇರುಳಿನ ಅಂತ್ಯದಲ್ಲಿ ಮನೆಗೆ ಸಂತೋಷದಿಂದ ಹಿಂದಿರುಗಿ ಗೆಳೆಯನಿಗೆ ಕೃತಜ್ಞತೆ ಹೇಳಿದ. ಹೀಗೆ ಹಲವಾರು ರಾತ್ರಿ ಕಳೆದವು.[45]

---

45. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಪಂಚತಂತ್ರದ ಕನ್ನಡಾನುವಾದ, ಮಿತ್ರಭೇದ, ಪು-50-56.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1,ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು-560004

ಆ ದಿನ ದಾಸಿಯೊಬ್ಬಳು ರಾಜಕುಮಾರಿಯ ಚಿಗುರು ತುಟಿಯಲ್ಲಾದ ಗಾಯವು ಅನುಮಾನವನ್ನು ಮೂಡಿಸಲು, ರಾಜನಲ್ಲಿಗೆ ವರದಿ ಮಾಡುತ್ತಾಳೆ. ಇದರಿಂದಾಗಿ ರಾಜನು ವ್ಯಾಕುಲಗೊಂಡು ಮಹಾರಾಣಿಗೆ ವಿಷಯವನ್ನು ಸೂಕ್ಷ್ಮವಾಗಿ ತಿಳಿಸಿದ. ರಾಣಿಯು ತಡಮಾಡದೆ, ಎಚ್ಚರಿಕೆಯಿಂದ ಗಮನಿಸಿ ವಿಚಾರಣೆ ಮಾಡಿದಾಗ ಅನುಮಾನ ಸ್ಥಿರವಾಯಿತು. ನಿಜಾಂಶವೆಲ್ಲವನ್ನೂ ರಾಜಕನ್ಯೆ ತಿಳಿಸಬೇಕಾಯಿತು. ಪರೀಕ್ಷಿಸಲಾಗಿ, ಗರುಡವಾಹನನಾಗಿ ಅವತರಿಸಿದ ಶಂಖಚಕ್ರಗಧಾಪದ್ಮಧಾರಿಯಾಗಿರುವ ಭಗವಂತನನ್ನು ಕಂಡು ಪುಳಕಿತರಾದರು. ನಂತರ ರಾಜನು ತಡಮಾಡದೆ ಸೈನ್ಯವನ್ನು ಸಂಘಟಿಸಿ ನೆರೆ ರಾಜ್ಯದ ಮೇಲೆ ಸೇನಾಸಾಗರವನ್ನು ಹರಿಸಿದ. ರಾಜ್ಯವನ್ನು ಗೆದ್ದನು. ಆತ್ಮವಿಶ್ವಾಸ ಹೆಚ್ಚಿತು. ಬೇರೆ ಪ್ರದೇಶಗಳನ್ನು ಗೆಲ್ಲುತ್ತಲೇ ಹೋದನು. ಆಗ ಉಳಿದ ರಾಜರೆಲ್ಲಾ ಒಂದಾಗಿ ಈತನನ್ನು ಎದುರಿಸಲು ಸಿದ್ಧರಾದರು. ಇತ್ತ ಒಗ್ಗಟ್ಟಾದ ಶತ್ರು ರಾಜರು ಯಾವ ಭಯವೂ ಇಲ್ಲದೆ ರಾಜನ ನಾಡನ್ನೆಲ್ಲಾ ಆಕ್ರಮಿಸಿದರು. ಕೊನೆಗೆ ರಾಜನಿಗೆ ಉಳಿದದ್ದು ಕೋಟೆ ಮಾತ್ರ. ಇನ್ನೊಂದು ಕಡೆ ಮಡದಿ ಕೇಳಿದಾಗಲೆಲ್ಲ ನೇಕಾರನು ಬಹಳ ಬುದ್ಧಿವಂತಿಕೆಯಿಂದ ನಂಬಿಸಿ ಹಲವು ರಾತ್ರಿಗಳನ್ನು ಅವಳೊಂದಿಗೆ  ಕಳೆದ. ಆಗ ನಾರಾಯಣನೊಂದಿಗೆ ರಾಜಕನ್ಯೆಯು ಬೇಡಿಕೊಂಡಳು. ಈಗ ಶತ್ರುಗಳನ್ನು ಪರಾಜಯಗೊಳಿಸಬೇಕಾದ ಸಂದರ್ಭ ಒದಗಿಯೇ ಬಂತು. ರಾಜಕನ್ಯೆಯು ವಿನಯಪೂರ್ವಕವಾಗಿ ಹೇಳುತ್ತಾಳೆ " ಭಗವನ್, ನೀನು ಅಳಿಯನಾಗಿರುವಾಗ ನನ್ನ ತಂದೆ-ಯು ಶತ್ರುಗಳಿಂದ ಸೋಲುವುದರಲ್ಲಿ ಅರ್ಥವಿಲ್ಲ. ಆದ್ದರಿಂದ ಕೃಪೆಮಾಡಿ ಎಲ್ಲ ಶತ್ರುಗಳನ್ನು ಕೊಂದುಬಿಡು "ಇದನ್ನು ಕೇಳಿದ ನೇಕಾರನು ಯೋಚಿಸಿದನು. "ಕೋಟೆಯು ನಾಶವಾದರೆ ನನಗೆ ರಾಜಕುಮಾರಿಯಿಂದ ವಿಯೋಗವಾಗುತ್ತದೆ. ಆದ್ದರಿಂದ ಗರುಡ ಯಂತ್ರವನ್ನೇರಿ, ಆಯುಧಗಳನ್ನು ಹಿಡಿದು ಆಕಾಶದಲ್ಲಿ ಶತ್ರುಗಳಿಗೆ ಕಾಣಿಸಿಕೊಳ್ಳುತ್ತೇನೆ. ಒಂದು ವೇಳೆ ನನ್ನನ್ನು ವಾಸುದೇವನೆಂದು ತಿಳಿದು ಭ್ರಾಂತರಾದಲ್ಲಿ ರಾಜನ ಸೈನಿಕರು ಅವರನ್ನು ಸೋಲಿಸಬಹುದು. ಕೋಟೆಯನ್ನು ಉಳಿಸುವ ಪ್ರಯತ್ನದಲ್ಲಿ ನಾನು ಸತ್ತರೂ ಚಿಂತೆಯಿಲ್ಲ.

गवामर्थे ब्राम्हणार्थे स्वाम्यर्थे स्वीकृतेऽथवा ।

स्थानार्थे यस्त्यजेत्प्राणांस्तस्य लोकाः सनातनाः ॥[46]

"ಧನ, ಭೂ, ಗೋ, ಸ್ತ್ರೀ ರಕ್ಷಣೆಗಾಗಿ ಸಾಯುವುದರಿಂದ ಪ್ರಾಪ್ತವಾಗುವ ಸತ್ಯಲೋಕ ನನಗೂ ಸಿಕ್ಕೀತು."[47]

46. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-226ಪು-143,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001
47. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಪಂಚತಂತ್ರದ ಕನ್ನಡಾನುವಾದ, ಮಿತ್ರಭೇದ-ಪು-55-56.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು-560004

ಅಷ್ಟರಲ್ಲಿ ಆ ಕಡೆ ಭೂತಭವಿಷ್ಯದ್ವರ್ತಮಾನಗಳನ್ನು ತಿಳಿಯುವ ಭಗವನ್ನಾರಾಯಣನು, ನೇಕಾರನ ಎಲ್ಲಾ ಚೇಷ್ಟೆ ವಿಚಾರವನ್ನು ತಿಳಿದು, ಗರುಡನನ್ನು ಸ್ಮರಿಸಿಕೊಂಡು, ಗರುಡ ಬಂದಾಗ ಹೀಗೆ ಭಗವನ್ನಾರಾಯಣನ ಪ್ರೇರಣೆಯಾಯಿತು– "ಶತ್ರುಗಳ ಬಾಣಗಳಿಂದ ವಿಷ್ಣುವೇಷಧಾರಿ ನೇಕಾರನು ಸಾಯುತ್ತಾನೆ. ಕ್ಷತ್ರಿಯರೆಲ್ಲರೂ ಸೇರಿ ಗರುಡ ಹಾಗೂ ವಿಷ್ಣುವನ್ನು ಕೊಂದರು ಎಂಬ ಕಳಂಕ ಬಂದು ಮುಂದೆ ಲೋಕದಲ್ಲಿ ವಿಷ್ಣುಪೂಜೆಯನ್ನು ಮಾಡುವುದಿಲ್ಲ. ನೀನು ಕೂಡಲೇ ಆ ಮರದ ಗರುಡನಲ್ಲಿ ಸೇರಿ–ಕೊ, ಚಕ್ರವು ಚಕ್ರವನ್ನು ಸೇರಲಿ, ನಾನೂ ಕೂಡ ನೇಕಾರನ ಶರೀರವನ್ನು ಪ್ರವೇಶಿಸಿ ಆತನಿಂದ ಶತ್ರುಸಂಹಾರ ಮಾಡಿಸುತ್ತೇನೆ. ಶತ್ರುಗಳ ನಾಶದಿಂದ ನಮ್ಮ ಮಹಿಮೆಯೂ ಹೆಚ್ಚುತ್ತದೆ" ಎಂದು. ಯೋಜಿಸಿದಂತೆ ಎಲ್ಲವೂ ನಡೆದು ಭಗವಾನ್ ವಿಷ್ಣು ಗರುಡನನ್ನೇರಿ ಸ್ವಸ್ಥಾನವನ್ನು ಸೇರಿದ. ನೇಕಾರನಿಗೆ ಈಗ ಆಶ್ಚರ್ಯ, ತಾನು ಹೀಗೆ ಮಾಡಿದೆನೇ ಎಂದು. ಅದೇ ಮದದಿಂದ ತಲೆ ಎತ್ತಿ ಗರ್ವದಿಂದ ಭೂತಳಕ್ಕೆ ಇಳಿದು ನಡೆದು ಬರುತ್ತಿರುವಾಗ ಅವನನ್ನು ಜನ ಗುರ್ತಿಸಿದರು. ನೇಕಾರನು ಮೊದಲಿನಿಂದ ಹಿಡಿದು ಎಲ್ಲಾ ವೃತ್ತಾಂತವನ್ನೂ ತಿಳಿಸಿದನು. ಸಂತೋಷಗೊಂಡ ರಾಜನು ಪ್ರಜೆಗಳ ಸಮ್ಮುಖದಲ್ಲಿ ವಿವಾಹ ವಿಧಿಯಿಂದ ರಾಜಕನ್ಯೆಯನ್ನು ಅವನಿಗೆ ಸಮರ್ಪಿಸಿ ರಾಜ್ಯವನ್ನು ಕೊಟ್ಟನು. ನೇಕಾರನು ಅವಳೊಡನೆ ಪಂಚೇಂದ್ರಿಯಗಳಿಂದೊದಗುವ ವಿಷಯಸುಖಗಳನ್ನು ಅನುಭವಿಸುತ್ತಾ ಸುಖದಿಂದ ಕಾಲಕಳೆದನು.

ಕಥೆಯನ್ನು ಕೇಳಿದ ಕರಟಕನಿಗೆ ದಮನಕ ಹೇಳಿದ ಕಥೆ ಮತ್ತು ಮಾತಿನ ಮೇಲೆ ಭರವಸೆ ಮೂಡಲಿಲ್ಲ. ಆದ್ದರಿಂದಲೇ" ಗೆಳೆಯಾ, ನಿನ್ನ ಮಾತೇನೋ ಕೇಳಲು ಹಿತ. ಆದರೆ ಬುದ್ಧಿಯುಳ್ಳ ಸಂಜೀವಕನ ವಿಷಯದಲ್ಲಿ ನಿನ್ನ ಜಾಣತನ ನಡೆಯದೆಂದು ನನ್ನ ಅನಿಸಿಕೆ. ಪಿಂಗಳಕನಿಂದ ಸಂಜೀವಕನನ್ನು ಅಗಲಿಸಲು ನೀನು ಅಸಮರ್ಥನೇ ಆಗುವೆ." ಎಂದನು. ಆಗ ದಮನಕನು– "ತಮ್ಮಾ, ನಾನು ಅಸಮರ್ಥನಾದರೂ ಸಮರ್ಥನಾಗಿದ್ದೇನೆ. ಏಕೆಂದರೆ,

उपायेन हि यत्कुर्यात्तन्न शक्यं पराक्रमैः ।

काक्या कनकसूत्रेण कृष्णसर्पो निपातितः॥[48]

ಕಾಗೆಯು ಚಿನ್ನದ ಸರವನ್ನು ಕದ್ದ ಕಾರಣದಿಂದ ಕೃಷ್ಣಸರ್ಪವು ಹೇಗೆ ನಾಶವಾಯಿತೋ, ಹಾಗೆ ಪರಾಕ್ರಮದಿಂದ ಯಾವುದು ಸಾಧ್ಯವಿಲ್ಲವೋ ಅದು ಉಪಾಯದಿಂದ ಸಾಧ್ಯ." ಕರಟಕ ಅದೇನೆಂದು ಕೇಳಲು, ದಮನಕನು **ಕಾಗೆ – ಚಿನ್ನದ ಹಾರ – ಕೃಷ್ಣಸರ್ಪದ ಕಥೆ**ಯನ್ನು ಹೇಳಿದನು.

---

48. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–228, ಪು–146,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ತನಗೆ ಶಕ್ತಿ ಇಲ್ಲದಿದ್ದರೂ ಸಾಮರ್ಥ್ಯವುಳ್ಳವರ ಸಹಾಯವನ್ನು ಪಡೆದು ಕಾರ್ಯಸಾಧನೆ ಮಾಡಿಕೊಂಡ ವಿಚಾರವನ್ನು ತಿಳಿಸುತ್ತಾ ರಾಜಕುಮಾರರಿಗೆ ಸ್ವತಃ ಅವರ ಕೈನಿಂದ ಆಗದಿದ್ದ ಸಂದರ್ಭದಲ್ಲಿ, ಸಾಮರ್ಥ್ಯವುಳ್ಳವರ ನೆರವನ್ನಾದರೂ ಪಡೆದು ಕಾರ್ಯ ಸಾಧನೆ ಮಾಡಿಕೊಳ್ಳುವ ಆಲೋಚನೆಯನ್ನು ವಿಷ್ಣುಶರ್ಮರು ಪ್ರೇರೇಪಿಸಿದ್ದಾರೆ. ಅಲ್ಲೊಂದು ನದಿ. ತೀರದಲ್ಲಿ ಒಂದು ದೊಡ್ಡ ಆಲದ ಮರವಿತ್ತು. ಅದರಲ್ಲಿ ಕಾಗೆಯ ಜೋಡಿಯೊಂದು ವಾಸವಾಗಿತ್ತು. ಅವುಗಳು ಮರಿಹಾಕಿದ ಸಂದರ್ಭದಲ್ಲಿ ಮರದ ಪೊಟರೆಯಲ್ಲಿದ್ದ ಕೃಷ್ಣಸರ್ಪವೊಂದು ಬಂದು ತಿಂದುಬಿಡುತ್ತಿತ್ತು. ಇದರಿಂದ ಬೇಸರಗೊಂಡ ಕಾಗೆ ದಂಪತಿಗಳು ಮತ್ತೊಂದು ಮರದ ಬುಡದಲ್ಲಿ ವಾಸವಾಗಿದ್ದ ಮೆಚ್ಚಿನ ಗೆಳೆಯನಾದ ನರಿಯ ಬಳಿಗೆ ಹೋಗಿ ಹೇಳಿಕೊಂಡವು

यस्य क्षेत्रं नदीतीरे भार्या च परसंगता ।

ससर्पे च गृहे वासः कथं स्यात्तस्य निर्वृत्तिः ॥[49]

ಅಂದರೆ "ಯಾರ ಮನೆಯು ನದೀತೀರದಲ್ಲಿದೆಯೋ, ಯಾರ ಹೆಂಡತಿಯು ಪರಪುರುಷನ ಸಂಗ ಮಾಡುತ್ತಾಳೋ, ಯಾರ ಮನೆಯಲ್ಲಿ ಹಾವು ನೆಲಸಿದೆಯೋ, ಅವರಿಗೆ ನೆಮ್ಮದಿಯೆಂಬುದು ಇದೆಯೇ? ಸರ್ಪವಿರುವ ಮನೆಯಲ್ಲಿ ವಾಸಮಾಡುವುದರಿಂದ ಸಾವು ಖಂಡಿತ. ಸರ್ಪವು ಗ್ರಾಮದ ಸೀಮೆಯಲ್ಲಿದ್ದರೂ ಅದರಿಂದಲೂ ಕೂಡ ಪ್ರಾಣಭಯವಿರುತ್ತದೆ. ಹೀಗಿದ್ದಾಗ ನಮ್ಮ ಆಲದ ಮರದಲ್ಲಿ ಸರ್ಪವಿರುವುದರಿಂದ ನಮಗೂ ಕೂಡ ಪ್ರತಿದಿನವೂ ಪ್ರಾಣಭಯವು ಕಾಡುತ್ತಿದೆ." ಅದಕ್ಕೆ ನರಿಯು– "ಈ ವಿಷಯದಲ್ಲಿ ಸ್ವಲ್ಪವೂ ದುಃಖಿಸುವುದು ತರವಲ್ಲ. ಉಪಾಯದಿಂದಲ್ಲದೇ ಆ ಲೋಭಿಯನ್ನು ಕೊಲ್ಲಲು ಸಾಧ್ಯವಿಲ್ಲ. ಉಪಾಯದಿಂದ ಹೇಗೆ ಶತ್ರುಗಳನ್ನು ಗೆಲ್ಲಬಹುದೋ ಆ ರೀತಿ ಆಯುಧಗಳಿಂದ ಕೂಡ ಗೆಲ್ಲಲು ಸಾಧ್ಯವಿಲ್ಲ. ಹೀಗೊಂದು ಮಾತಿದೆ:–

भक्षयित्वा बहून्मत्स्यानुत्तमाधममध्यमान् ।

अतिलौल्याद् बकःकश्चिन्मृतः कर्कटकग्रहात् ॥[50]

"ಅನೇಕ ಸಣ್ಣ,ಮಧ್ಯಮ ಹಾಗೂ ದೊಡ್ಡ ಮೀನುಗಳನ್ನು ತಿಂದ ಬಕವೊಂದು ಅತಿಯಾಸೆಯಿಂದ ಏಡಿಯಿಂದ ಸಾವನ್ನಪ್ಪಿತು." ಕಾಗೆಗಳು ಅದು ಹೇಗೆಂದು ಕೇಳಲು, ನರಿಯು **ಬಕ ಹಾಗೂ ಏಡಿಯ ಕಥೆ** ಯನ್ನು ಹೇಳಿತು.

---

49. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–229,ಪು–147,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
50. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–232,ಪು–148,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಒಂದು ವನಪ್ರದೇಶದಲ್ಲಿ ಸರೋವರವೊಂದಿತ್ತು. ಅಲ್ಲಿ ಒಂದು ಬಕಪಕ್ಷಿ ವಾಸವಾಗಿತ್ತು. ವಯೋಧರ್ಮದ ದೌರ್ಬಲ್ಯದಿಂದ ಮೀನನ್ನು ಹಿಡಿಯಲೂ ಆಗುತ್ತಿರಲಿಲ್ಲ. ಹಸಿವಿನಿಂದ ಬಳಲುತ್ತಾ ಒಮ್ಮೆ ಸರೋವರದ ತೀರದಲ್ಲಿ ಕುಳಿತುಕೊಂಡು ಕಣ್ಣೀರು ಹಾಕುತ್ತಿತ್ತು. ಆಗ ಒಂದು ಏಡಿಯು ಇತರ ಜಲಚರಗಳೊಂದಿಗೆ ಬಂದು ಅದರ ದುಃಖವನ್ನು ಕಂಡು ತಾನೂ ಮರುಕಗೊಂಡು ಆದರಪೂರ್ವಕವಾಗಿ ಹೇಳಿತು." ಮಾಮ ಏಕೆ ಇಂದು ಆಹಾರ ಸೇವಿಸುತ್ತಿಲ್ಲ? ಕೇವಲ ಕಣ್ಣೀರು ಸುರಿಸುತ್ತಾ ನಿಟ್ಟುಸಿರುಬಿಡುತ್ತಾ ಕುಳಿತಿರುವೆ? ಮತ್ಸ್ಯಭಕ್ಷಣದ ಬಗ್ಗೆ ಅತೀವ ವೈರಾಗ್ಯ ಮೂಡಿರುವುದರಿಂದ ಉಪವಾಸ ಕೈಗೊಂಡಿದ್ದೇನೆ ಎಂದು ಬಕ ಹೇಳಿತು. ಮುಂದುವರೆದು ಆ ಸರೋವರದಲ್ಲಿ ಇನ್ನು ಹನ್ನೆರಡು ವರ್ಷ ಕಾಲ ಅನಾವೃಷ್ಟಿಯಾಗುವುದೆಂದು ಜ್ಯೋತಿಷಿಯೊಬ್ಬರಿಂದ ಕೇಳಿದೆ ಎಂದು ಹೇಳಿತು. ಮುಂದೆ ಬಹಳ ಸಂಕಷ್ಟದ ದಿನಗಳು ಬರುತ್ತವೆ. ಕ್ಷಾಮ, ಬರಗಾಲ ಬಹಳ ಘೋರವಾಗುತ್ತದೆ. ಗ್ರಹಗತಿಗಳು ಬಹಳ ಕ್ರೂರವಾಗಿದೆ ಎಂದು ಹೇಳಿತು. ಇದನ್ನೆಲ್ಲಾ ಕೇಳಿದ ಏಡಿಯು ಸರೋವರದಲ್ಲಿದ್ದ ಇತರ ಪ್ರಾಣಿಗಳಿಗೂ ಬಕಪಕ್ಷಿಯ ಮಾತನ್ನು ತಿಳಿಸಿತು. ಎಲ್ಲ ಜಲಚರಗಳೂ ಬಕಪಕ್ಷಿಯ ಬಳಿಗೆ ಬಂದು ಸೂಕ್ತ ಪರಿಹಾರವನ್ನು ಕೋರಿದವು. ಆಗ ಬಕವು ಬುದ್ಧಿವಂತಿಕೆಯಿಂದ ಒಂದು ಉಪಾಯವನ್ನು ಹೇಳಿತು." ಈ ಜಲಾಶಯದ ಹತ್ತಿರದಲ್ಲಿಯೇ ಹೆಚ್ಚು ನೀರಿನಿಂದ ತುಂಬಿದ, ಕಮಲಗಳಿಂದ ಶೋಭಿತವಾದ, ನಲವತ್ತು ವರ್ಷಗಳ ಕಾಲ ಅನಾವೃಷ್ಟಿಯಾದರೂ ಒಣಗದ ಒಂದು ಸರೋವರವಿದೆ. ಯಾರು ನನ್ನ ಬೆನ್ನೇರುವರೋ ಅವರನ್ನು ಅಲ್ಲಿಗೆ ಕರೆದುಕೊಂಡು ಹೋಗಬಲ್ಲೆ " ಎಂದಿತು. ಬಕಪಕ್ಷಿಯ ಮೇಲೆ ವಿಶ್ವಾಸಮೂಡಿ ಆ ಜಲಚರರು ತಂದೆ, ಮಾಮ, ಅಣ್ಣ ಎಂದು ಕರೆಯುತ್ತಾ ನಾ ಮುಂದು, ತಾಮುಂದು ಎನ್ನುತ್ತಾ ಅದರ ಸುತ್ತ ನೆರೆದರು. ದುರಾತ್ಮನಾದ ಬಕಪಕ್ಷಿಯು ಒಂದೊಂದಾಗಿ ಅವುಗಳನ್ನು ಬೆನ್ನಮೇಲೆ ಕೂರಿಸಿಕೊಂಡು ಸರೋವರದ ಹತ್ತಿರದಲ್ಲಿದ್ದ ಒಂದು ಬಂಡೆಯ ಮೇಲೆ ಅವುಗಳನ್ನು ಇಳಿಸಿ ಸ್ವೇಚ್ಛೆಯಿಂದ ಭಕ್ಷಿಸಿಯಾಯಿತು. ಪುನಃ ಬಂದು ಅನೇಕ ಸುಳ್ಳುಗಳನ್ನು ಹೇಳುತ್ತಾ ಆಹಾರ ಸಂಪಾದನೆ ಮಾಡುತ್ತಿತ್ತು.[51]

ಆದರೆ ಏಡಿಯು ಎಲ್ಲಾ ಗಮನಿಸುತ್ತಾ, ನನ್ನ ಪ್ರಾಣ ರಕ್ಷಣೆ ಮಾಡು, ಏಕೆಂದರೆ ನಿನ್ನೊಡನೆ ಮೊದಲು ಸ್ನೇಹದಿಂದ ಮಾತನಾಡಿದವನು ನಾನು ಎಂದು ಬಕಪಕ್ಷಿಗೆ ನೆನಪು ಮಾಡಿತು. ಮೀನಿನ ಮಾಂಸವನ್ನು ತಿಂದು ತಿಂದು ಬೇಜಾರಾಗಿದೆ, ಏಡಿಯನ್ನು ಫಲ್ಯದಂತೆ ತಿಂದುಬಿಡುವೆನೆಂದು ಯೋಚಿಸಿ, ಅದನ್ನು ಬೆನ್ನ ಮೇಲೆ ಕೂಳ್ಳಿರಿಸಿಕೊಂಡು ಮೀನುಗಳನ್ನು ಕೊಲ್ಲುತ್ತಿದ್ದ ಬಂಡೆಯ ಬಳಿಗೆ ಹೊರಟಿತು. ಏಡಿಯು

51. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಪು-149-157,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ದೂರದಿಂದಲೇ ಆ ಬಂಡೆಯ ಮೇಲೆ ಮೀನಿನ ಮೂಳೆಗಳ ರಾಶಿಯನ್ನು ನೋಡಿತು. ಇನ್ನೆಷ್ಟು ದೂರ? ಎಂದು ಕೇಳಿತು. ಬಕವು ತನ್ನ ಮಂದ ಬುದ್ಧಿಯಿಂದ ಏಡಿಯನ್ನು ಜಲಚರ ಪ್ರಾಣಿ, ಭೂಮಿಯಲ್ಲಿ ಬದುಕಲಾರದೆಂದು ತಿಳಿಯಿತು. ನಗುತ್ತಾ, ನಿನ್ನ ಇಷ್ಟ ದೇವರನ್ನು ಸ್ಮರಣೆ ಮಾಡಿಕೊ, ನಿನ್ನನ್ನೂ ಈ ಬಂಡೆಯ ಮೇಲೆ ಬೀಳಿಸಿ ಭಕ್ಷಿಸುತ್ತೇನೆ ಎಂದಿತು. ಕೂಡಲೇ ಏಡಿಯು ಕಮಲದ ತೊಟ್ಟಿನಂತೆ ಬಿಳಿಯಾಗಿ ಹಾಗೂ ಮೃದುವಾಗಿರುವ ಬಕದ ಕತ್ತನ್ನು ತನ್ನ ಎರಡು ಹಲ್ಲುಗಳಿಂದ ಕಚ್ಚಿ ಸಾಯಿಸಿತು. ನಂತರ ಬಕದ ಕತ್ತನ್ನು ಹಿಡಿದುಕೊಂಡು ಮೆಲ್ಲಮೆಲ್ಲಗೆ ಸರೋವರ ತಲುಪಿತು. ಜಲಚರರಿಗೆ ಏಡಿ ವಾಪಸ್ಸು ಬಂದದ್ದು ನೋಡಿ ಆಶ್ಚರ್ಯವೋ ಆಶ್ಚರ್ಯ. ಏಡಿಯು ನಗುತ್ತಾ" ಮೂರ್ಖರೇ, ಸುಳ್ಳು ನುಡಿಯುವ ಆ ಬಕವು ಮೋಸದಿಂದ ಎಲ್ಲರನ್ನೂ ಹತ್ತಿರದಲ್ಲಿರುವ ಬಂಡೆಯ ಮೇಲೆ ಎಸೆದು ತಿಂದುಬಿಟ್ಟಿತು. ನನ್ನ ಆಯಸ್ಸು ಗಟ್ಟಿಯಿರುವುದರಿಂದ ಆ ವಿಶ್ವಾಸ ಘಾತಕನ ಅಭಿಪ್ರಾಯವನ್ನು ತಿಳಿದು, ಅದನ್ನು ಸಾಯಿಸಿ ಅದರ ಕತ್ತನ್ನು ತಂದಿರುವೆ. ಸಾಕು ನಿಮ್ಮ ಸಂಭ್ರಮ. ಇಂದಿನಿಂದ ಎಲ್ಲಾ ಜಲಚರಗಳೂ ಕ್ಷೇಮದಿಂದಿರಬಹುದು." ಎಂದು ಹೇಳಿತು.

ನರಿಯು ಕಥೆಯನ್ನು ಮುಗಿಸಿದಾಗ, ಕೇಳಿದ ಕಾಗೆ– ಆ ದುಷ್ಟ ಸರ್ಪವು ಸಾವನ್ನಪ್ಪುವ ಬಗೆ ಹೇಗೆ ಉಪಾಯವನ್ನು ತಿಳಿಸು ಎಂದಿತು. ನರಿಯು–" ಯಾವುದಾದರೂ ರಾಜ್ಯದ ನಗರಕ್ಕೆ ಹೋಗಿ, ಎಚ್ಚರದಿಂದಿಲ್ಲದ ಯಾವುದಾದರೂ ಧನಿಕನ ಅಥವಾ ರಾಜನ ಅಥವಾ ಮಂತ್ರಿಯ ಚಿನ್ನದ ಸರ ಅಥವಾ ಹಾರವನ್ನು ತಂದು ಆ ಸರ್ಪದ ಪೊಟರೆಯಲ್ಲಿ ಹಾಕಿದರೆ, ಅದನ್ನು ಇಟ್ಟುಕೊಂಡಿರುವ ಸರ್ಪವು ಸಾಯಿಸಲ್ಪಡುತ್ತದೆ. ಈ ಉಪಾಯವನ್ನು ತಿಳಿದ ಕಾಗೆ ದಂಪತಿಗಳು ಸಂತೋಷದಿಂದ ಹಾಗೇ ಮಾಡಿದವು. ಅದರಲ್ಲೂ ಅಂತಃಪುರಕ್ಕೆಹೋಗಿ ಚಿನ್ನದ ಸರ ಹಾರಿಸಿಕೊಂಡು ತಂದು ಸರ್ಪವಿದ್ದ ಪೊಟರೆಯೊಳಗೆ ಹಾಕಿದವು. ಅದನ್ನು ನೋಡಿದ ಅಂತಃಪುರ ರಕ್ಷಕರು ಹಿಂಬಾಲಿಸಿಕೊಂಡು ಬಂದು ಹೆಡೆಯನ್ನು ಬಿಚ್ಚಿ ಕುಳಿತಿದ್ದ ಸರ್ಪವನ್ನು ದೊಣ್ಣೆಯಿಂದ ಹೊಡೆದು ಕೊಂದು ಸರವನ್ನು ಪಡೆದು ವಾಪಸಾದರು. ದಂಪತಿಗಳು ಸುಖವಾಗಿ ನಿಶ್ಚಿಂತರಾಗಿ ಮರದಲ್ಲಿ ವಾಸಮಾಡಿದವು. ಕೊನೆಯಲ್ಲಿ ದಮನಕನು–

यस्य बुद्धिर्बलं तस्य निर्बुद्धेस्तु कुतो बलम् ।

वने सिंहो मदोन्मत्तः शशकेन निपातितः ॥[52]

ಆದ್ದರಿಂದ ಉಪಾಯದಿಂದ ಕೆಲಸ ಮಾಡಬೇಕೆಂದು ನಾನು ಹೇಳುವುದು. ಬುದ್ಧಿವಂತರಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಏಕೆಂದರೆ ಬುದ್ಧಿವಂತನೇ ನಿಜವಾದ ಬಲಶಾಲಿಯೇ ಹೊರತು

---

52. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–237,ಪು– 157,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಬುದ್ಧಿಯಿಲ್ಲದವನು ಎಂದೂ ಬಲಶಾಲಿಯಾಗಲಾರ. ಉದಾಹರಣೆಗೆ ಮದೋನ್ಮತ್ತನಾದ ಸಿಂಹವೊಂದು ಮೊಲದಿಂದ ಹೀಗೆ ಕೊಲ್ಲಲ್ಪಟ್ಟಿತು.

ಕರಟಕ ಅದೇನೆಂದು ಕೇಳಲು– ದಮನಕನು **ಸಿಂಹ – ಮೊಲದ ಕಥೆ**ಯನ್ನು ಹೇಳಿದನು.

ಸಿಂಹ–ಮೊಲದ ಕಥೆಯಲ್ಲಿ ಉಪಾಯದಿಂದ ಅಪಾಯವನ್ನು ತಪ್ಪಿಸಿಕೊಳ್ಳುವುದರ ಜಾಗೃತಿಯನ್ನು ಸರದಿಯಂತೆ ಆಹಾರವಾಗಿ ಬಂದ ಮೊಲ ಮತ್ತು ಬಾವಿಯಲ್ಲಿ ಬಿದ್ದು ಪ್ರಾಣ ಕಳೆದುಕೊಂಡ ಸಿಂಹದ ವೃತ್ತಾಂತವನ್ನು ಸ್ವಾರಸ್ಯಪೂರ್ಣವಾಗಿ ಹೇಳಿದರು. ಇದರಿಂದ ರಾಜಕುಮಾರರಿಗೆ ಉಪಾಯದಿಂದ ಕೆಲಸ ಮಾಡಬೇಕು, ಇದಕ್ಕೆ ಬುದ್ಧಿವಂತಿಕೆ ಬೇಕು, ಬುದ್ಧಿವಂತನೇ ನಿಜವಾದ ಬಲಶಾಲಿಯೇ ಹೊರತು ಬುದ್ಧಿಯಿಲ್ಲದವನು ಎಂದೂ ಬಲಶಾಲಿಯಾಗಲಾರ– **"Knowledge is Power"** ಎಂಬ ಅರಿವನ್ನು ಮೂಡಿಸಿದಂತಾಯಿತು. ಮದೋನ್ಮತ್ತನಾದ ಸಿಂಹವೊಂದು ತನ್ನ ಮೂರ್ಖತನದಿಂದ ಬಾವಿಯ ನೀರಿನಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಗರ್ಜಿಸಿತು. ಆಗ ಬಾವಿಯಿಂದ ಅದಕ್ಕೆರಡರಷ್ಟು ಪ್ರತಿಧ್ವನಿಸಿದ್ದು, ನೀರಿನಲ್ಲಿ ಮೂಡಿದ್ದ ಪ್ರತಿಬಿಂಬ ಶತ್ರುವಿನದ್ದೆಂದು ತಿಳಿದು ಬಾವಿಗೆ ಹಾರಿ ಪ್ರಾಣವನ್ನೇ ಕಳೆದುಕೊಂಡಿತು. ಅದೇ ಮೊಲವು ತನ್ನ ಬುದ್ಧಿವಂತಿಕೆಯಿಂದ ಎಲ್ಲಾ ಪ್ರಾಣಿಗಳಿಗೆ ಆನಂದವನ್ನುಂಟುಮಾಡಿ ಸುಖವಾಗಿ ಕಾಡಿನಲ್ಲಿ ವಾಸ ಮಾಡಿತು. ಸಿಂಹದ ಕೋಪ, ಶತ್ರುತ್ವ "ಆತುರಗಾರನಿಗೆ ಬುದ್ಧಿ ಮಟ್ಟು"ಎಂಬಂತೆ ಬಾವಿಯಲ್ಲಿ ಕಂಡದ್ದು ಪ್ರತಿಬಿಂಬ ಎನ್ನುವಷ್ಟೂ ಆಲೋಚನೆ ಮಾಡಲಾಗಲಿಲ್ಲವಲ್ಲ!! ಎಂದು ರಾಜಕುಮಾರರು ಗಟ್ಟಿಯಾಗಿ ನಕ್ಕುಬಿಟ್ಟರು. ಆಗ ಗುರುಗಳು ಹೇಳುತ್ತಾರೆ – ಅದಕ್ಕೂ ಕಾರಣವಿದೆ "ತನ್ನಂತಹವರು ಇನ್ನೊಬ್ಬರು ಇರಬಾರದು ಎಂಬುದು; ಅಂತಹವರು ಇದ್ದರೆ ಅದನ್ನು ಸಹಿಸದೆ ಇರುವುದು. ಈ ಎರಡು ದುರ್ಗುಣದಿಂದಾಗಿ ಕೋಪಗೊಂಡ ಸಿಂಹವು ಸತ್ಯಾಸತ್ಯತೆಗಳನ್ನು ನಿರ್ಣಯಿಸುವ ಶಕ್ತಿಯನ್ನು ಕಳೆದುಕೊಂಡಿತ್ತು. ಆದ್ದರಿಂದ ಕೋಪವು ಎಂದಿಗೂ ತರವಲ್ಲ. ಉಪಾಯಚತುರನು ಏನನ್ನೂ ಸಾಧಿಸಿಯಾನು. ಇದು ಎಲ್ಲರಿಗೂ ಪಾಠವಾಗಬೇಕು" ಎಂದರು. ಹೌದು ಪ್ರತಿಯೊಬ್ಬರಿಗೂ ಇದು ಒಳ್ಳೆಯ ಪಾಠವೆ.[53]

ದಮನಕನು ರಾಜಧರ್ಮಕ್ಕೆ ಸಂಬಂಧಿಸಿದಂತೆ ಅನೇಕ ನೀತಿ ಉಪದೇಶಗಳನ್ನು ಹೇಳುತ್ತಾನೆ. ದುಷ್ಟರು ಹಾಗೂ ಸಜ್ಜನರ ಸಹವಾಸ, ಅದರ ಪರಿಣಾಮ ಇತ್ಯಾದಿ ಬಹಳ ಉಪಯುಕ್ತ ಮಾಹಿತಿಗಳನ್ನು ಸೂಕ್ತ ದೃಷ್ಟಾಂತಗಳೊಂದಿಗೆ ತಿಳಿಹೇಳುತ್ತಾ, ಈ ಒಂದು ಉಕ್ತಿಯನ್ನು:–

---

53. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ–1–7,ಪು – 60–64,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

न ह्यविज्ञातशीलस्य प्रदातव्यः प्रतिश्रयः ।

मत्कुणस्य च दोषेण हता मन्दविसर्पिणी ॥[54]

ಅಂದರೆ, ಒಬ್ಬರ ಸ್ವಭಾವವನ್ನು ತಿಳಿಯದೆ ಅವರಿಗೆ ಆಶ್ರಯವನ್ನು ಕೊಡಬಾರದು, ಕೊಟ್ಟರೆ ತಿಗಣೆಯ ತಪ್ಪಿನಿಂದ ಹೇನೊಂದು ಹೇಗೆ ನಾಶವಾಯಿತೋ ಹಾಗಾಗುತ್ತದೆ." ಪಿಂಗಲಕನು ಅದೇನೆಂದು ಕೇಳಿದಾಗ ದಮನಕನು **ಹೇನು ಹಾಗೂ ತಿಗಣೆಯ ಕಥೆ**ಯನ್ನು ಹೇಳಿದನು.

ಒಬ್ಬ ಮಹಾರಾಜ, ಅವನ ಆಸ್ಥಾನದಲ್ಲಿ ಒಂದು ಮಂಚ. ಅಲ್ಲಿ ಬಿಳಿಯ ವಸ್ತ್ರಗಳು ಎರಡು. ಅದರ ಮಧ್ಯೆ ಮಂದವಿಸರ್ಪಿಣೀ ಎಂಬ ಹೇನು ವಾಸವಾಗಿತ್ತು. ಅದು ರಾಜನ ರಕ್ತವನ್ನು ಆಸ್ವಾದಿಸುತ್ತಾ ಸುಖವಾಗಿತ್ತು. ಒಮ್ಮೆ ಅಲ್ಲಿಗೆ ಎಲ್ಲಿಂದಲೋ ಅಲೆಯುತ್ತಾ, ಅಗ್ನಿಮುಖ ಎಂಬ ತಿಗಣೆ ಬಂತು. ಇದನ್ನು ನೋಡಿದ ಹೇನು ಬೇಸರದಿಂದ ಕೇಳಿತು– "ಎಲೈ ಅಗ್ನಿಮುಖ, ಉಚಿತವಲ್ಲದ ಆ ಸ್ಥಳಕ್ಕೆ ಏಕೆ ಬಂದಿರುವೆ? ಯಾರಾದರೂ ನೋಡುವ ಮೊದಲೇ ಇಲ್ಲಿಂದ ಹೊರಟುಹೋಗು." ತಿಗಣೆ ಹೇಳಿತು– "ದೇವಿ, ಮನೆಗೆ ಬಂದವನು ದುಷ್ಟನಾದರೂ ಹೀಗೆ ಹೇಳುವುದು ಸರಿಯಲ್ಲ. ನೀಚ ಜನರು ಮನೆಗೆ ಬಂದರೂ ಸಜ್ಜನರು ಅವರನ್ನು ಸೌಹಾರ್ದತೆಯಿಂದಲೇ ಕುಶಲೋಪರಿಗಳನ್ನು ಕೇಳುತ್ತಾ ಉಪಚರಿಸುತ್ತಾರೆ. ಗೃಹಸ್ಥಧರ್ಮವನ್ನು ಆಚರಿಸಿದವರಿಗೆ, ಬೇಗನೆ ಸ್ವರ್ಗ ಪ್ರಾಪ್ತಿಯಾಗುತ್ತದೆಂದು ಬಲ್ಲವರು ಹೇಳುತ್ತಾರೆ. ಈಗಾಗಲೇ ಎಷ್ಟೋ ಜನರ ರಕ್ತವನ್ನು ಕುಡಿದು ಅದರ ರುಚಿ ವೈವಿಧ್ಯವನ್ನು ಸವಿದಿದ್ದೇನೆ. ಈಗ ರಾಜನ ರಕ್ತದ ರುಚಿಯನ್ನು ಕಾಣುವ ಅವಕಾಶವು ಅನಾಯಾಸವಾಗಿ ಸಿಕ್ಕಿದೆ. ಹಸಿವಿನಿಂದ ಬಳಲಿ ಆಹಾರಾರ್ಥಿಯಾಗಿ ಬಂದಿದ್ದೇನೆ. ಹೀಗೆ ನೀನೊಬ್ಬಳೇ ರಾಜನ ರಕ್ತ ಹೀರುವುದು ಸರಿಯಲ್ಲ."

ಅದನ್ನು ಕೇಳಿ ಮಂದವಿಸರ್ಪಿಣೀ ಹೇಳಿತು– "ತಿಗಣೆಯೇ, ನಾನು ರಾಜನು ನಿದ್ದೆ ಮಾಡಿದಾಗ ಅವನ ರಕ್ತವನ್ನು ಹೀರುತ್ತೇನೆ. ನೀನಾದರೋ ಅಗ್ನಿಮುಖ ಮತ್ತು ಚಪಲನು. ಆದ್ದರಿಂದ ನನ್ನ ಜೊತೆಗೆ ಮಾತ್ರ ರಕ್ತ ಪಾನವನ್ನು ಮಾಡುವುದಾದರೆ ಇಲ್ಲಿ ಇರು. ಇಷ್ಟಬಂದಷ್ಟು ರಕ್ತವನ್ನು ಆಸ್ವಾದಿಸು." ಸಿಕ್ಕಿದ ಅವಕಾಶವನ್ನು ತನ್ನ ಅನುಕೂಲಕ್ಕೆ ಬಳಸಿಕೊಳ್ಳದವ ಮೂಢ. ಅಂತಹವನು ತಾನಾಗಬಾರದೆಂದು ತಿಗಣೆಯು ಮಂದವಿಸರ್ಪಿಣೀಗೆ ಹೀಗೆ ಹೇಳಿತು– "ದೇವೀ, ನನ್ನ ಮನೆದೇವರಾಣೆ, ನೀನು ರಾಜನ ರಕ್ತವನ್ನು ಕುಡಿದಾದ ಮೇಲೆಯೇ ನಾನು ರಕ್ತ ಪಾನ ಮಾಡುವೆನು. ನನ್ನನ್ನು ನಂಬು." ಎಂದಿತು.

---

54. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–275, ಪು–179,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ರಾಜನು ಮಂಚವೇರಿ ಮಲಗಿಕೊಂಡನು. ಆಗ ಜಿಹ್ವಾ ಚಾಪಲ್ಯದಿಂದ ಅತ್ಯಂತ ಉತ್ಸಾಹದಿಂದ ಇನ್ನೂ ಎಚ್ಚರವಾಗಿರುವ ರಾಜನನ್ನು ಕಚ್ಚೇಬಿಟ್ಟಿತು. ಯಾರದ್ದೇ ಆಗಲಿ ಸ್ವಾಭಾವಿಕವಾಗಿ ಬಂದ ಸ್ವಭಾವವನ್ನು ಮಾತೊಂದರಿಂದ ಬದಲಿಸುವುದು ಶಕ್ಯವಲ್ಲ. ತಣ್ಣಗಿನ ನೀರು ಶಾಖದಿಂದ ಬಿಸಿಯಾದರೂ ಮತ್ತೆ ಮೊದಲಿನಂತೆ ತಣ್ಣಗಾಗಿಯೇ ಆಗುತ್ತದೆ. ಒಂದು ವೇಳೆ ಬೆಂಕಿ ತಂಪಾಗಬಹುದು, ಚಂದ್ರನು ಸುಡುವಂತೆ ಆಗಬಹುದು, ಆದರೆ ಮನುಷ್ಯರ ಸ್ವಭಾವವನ್ನು ಬದಲಿಸಲಸಾಧ್ಯ. ಆಗ ರಾಜನು ಸೂಜಿಮೊನೆಯಿಂದ ಚುಚ್ಚಿದಂತಾಗಿ ತಟ್ಟನೆ ಹಾಸಿಗೆಯಿಂದೆದ್ದು, ಕಂಚುಕಿಯನ್ನು ಕರೆದು ಕಚ್ಚಿದ ಹುಳವನ್ನು ಹುಡುಕುವಂತೆ ಆಜ್ಞಾಪಿಸಿದ. ಆಗ ಅಂತಃಪುರದವರು ಚಾದರವನ್ನು ಸೂಕ್ಷ್ಮವಾಗಿ ಗಮನಿಸಿ, ಹುಡುಕಿ ಸಂದಿಯಲ್ಲಿದ್ದ ಹೇನನ್ನು ಕೊಂದರು. ತಿಗಣೆಯು ತಕ್ಷಣ ಮಂಚದ ಒಳಭಾಗದಲ್ಲಿ ಸೇರಿಕೊಂಡಿತು. ಕಥೆಯನ್ನು ಮುಗಿಸಿ ದಮನಕನು ಪಿಂಗಲಕನಿಗೆ" ಇದನ್ನು ತಿಳಿದುಕೊಂಡು ನೀನು ಸಂಜೀವಕನನ್ನು ಕೊಲ್ಲು. ಇಲ್ಲದಿದ್ದರೆ, ಆವನೇ ನಿನ್ನನ್ನು ಕೊಲ್ಲುವನು." ಎಂದು ಸಲಹೆ ಮಾಡಿದನು.[55] ಹೀಗೊಂದು ಉಕ್ತಿಯಿದೆ–

त्यक्ताश्चाभ्यन्तरा येन बाह्याश्चाभ्यन्तरीकृताः ।

स एव मृत्युमाप्नोति यथा राजा ककुद्द्रुमः ॥[56]

ಅಂದರೆ, "ಯಾರು ತನ್ನವರನ್ನು ದೂರಮಾಡಿ, ಪರರನ್ನು ಹತ್ತಿರದಲ್ಲಿಟ್ಟುಕೊಳ್ಳುವನೋ, ಅವನು ಮೂರ್ಖ ಚಂಡರವನಂತೆ ನಾಶವಾಗುವನು." ಪಿಂಗಲಕನು ಅದೇನೆಂದು ಕೇಳಲು, ದಮನಕನು **ಚಂಡರವ ನರಿಯ ಕಥೆ**ಯನ್ನು ಹೇಳಿದನು.

ದಟ್ಟಾರಣ್ಯವೊಂದರಲ್ಲಿ ಚಂಡರವನೆಂಬ ನರಿಯೊಂದು ಜಿಹ್ವಾಚಾಪಲ್ಯಕ್ಕೊಳಗಾಗಿ ಆಹಾರವನ್ನು ಹುಡುಕುತ್ತಾ ನಗರಕ್ಕೆ ಬಂತು. ಅಲ್ಲಿದ್ದ ನಾಯಿಗಳು ನರಿಯನ್ನು ಕಂಡು ಅಟ್ಟಿದವು, ಕಚ್ಚಿದವು. ನರಿಯು ಜೀವಭಯದಿಂದ ಓಡಿಹೋಗುತ್ತಿದ್ದಾಗ ಅಲ್ಲೊಂದು ಅಗಸನ ಮನೆ ಹೊಕ್ಕಿತು. ಅಲ್ಲಿ ಬಟ್ಟೆ ಹಾಕಲು ದೊಡ್ಡ ಹಂಡೆಯೊಂದನ್ನು ಇಟ್ಟಿದ್ದರು. ಅದರ ತುಂಬಾ ನೀಲಿ ನೀರಿತ್ತು. ನಾಯಿಗಳ ಆಕ್ರಮಣದ ಗಾಬರಿಯಿಂದ ನರಿಯು ಹಂಡೆಯೊಳಗೆ ಬಿದ್ದು ಹೋಯಿತು. ಅಲ್ಲಿಂದ ಹೊರಬಂದಾಗ ಅದರ ಮೈಯೆಲ್ಲಾ ನೀಲಿ ಬಣ್ಣವಾಯಿತು. ಅದನ್ನು ನೋಡಿದ ನಾಯಿಗಳು ನರಿಯೆಂದು ಗುರುತಿಸದೆ ದಿಕ್ಕಾಪಾಲಾಗಿ ಓಡಿದವು. ಚಂಡರವ ನರಿಯೂ ಕಾಡಿನತ್ತ ಸಾಗಿತು. ಒಮ್ಮೆ ಅಂಟಿಕೊಂಡ ನೀಲಿಬಣ್ಣವು ಅಷ್ಟು ಸುಲಭವಾಗಿ ತನ್ನ ಬಣ್ಣವನ್ನು ಬಿಡುವುದಿಲ್ಲ.

---

**೫೫. ಭರತ.ಬಿ.ರಾವ್,** ಪಂಚತಂತ್ರ, – ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು – 67–69, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

**೫೬. ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–282, ಪು–184,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಒಂದು ಉಕ್ತಿಯಿದೆ-

वज्रलेपस्य मूर्खस्य नारीणां कर्कटस्य च ।

एको ग्रहस्तु मीनानां नीलीमद्यपयोर्यथा ॥[57]

ಇದರರ್ಥ ವಜ್ರಲೇಪ, ಮೂರ್ಖ, ನಾರಿಯರು, ಮೊಸಳೆ, ಮೀನು, ನೀಲಿಬಣ್ಣ ಹಾಗೂ ಮದ್ಯಪಾನ- ಇವುಗಳು ಒಮ್ಮೆ ಹಿಡಿದುಕೊಂಡರೆ, ಎಂದಿಗೂ ಬಿಡುವುದಿಲ್ಲ.

ಹೀಗೆ ಮೈಯೆಲ್ಲಾ ನೀಲಿಯಾಗಿರುವ ನರಿಯನ್ನು ನೋಡಿದ ಕಾಡಿನ ಪ್ರಾಣಿಗಳೆಲ್ಲ ಭಯಗ್ರಸ್ಥರಾಗಿ, ವ್ಯಾಕುಲಗೊಂಡು ದಿಕ್ಕಾಪಾಲಾಗಿ ಓಡುತ್ತಿದ್ದವು. ಇದನ್ನು ನೋಡಿದ ನರಿಯು ಅವುಗಳ ಭಯವನ್ನು ಗ್ರಹಿಸಿ, ಮೊದಲೇ ಬುದ್ಧಿವಂತ ನರಿ ಒಂದು ಉಪಾಯ ಹೊಳೆಯಿತು, ಪ್ರಾಣಿಗಳನ್ನೆಲ್ಲಾ ಹತ್ತಿರಕ್ಕೆ ಕರೆದು ಹೀಗೆ ಹೇಳಿತು - "ನನ್ನ ಹೆಸರು ಕುಕುದ್ರುಮ. ಬ್ರಹ್ಮನು ನನ್ನನ್ನು ಸೃಷ್ಟಿಮಾಡಿ, ಪ್ರಾಣಿಗಳಿಗೆ ಯಾರೂ ರಾಜನಿಲ್ಲದಿರುವುದರಿಂದ ನನ್ನನ್ನು ಎಲ್ಲಾ ಪ್ರಾಣಿಗಳಿಗೆ ಪ್ರಭುವೆಂದು ನಿಯೋಜನೆ ಮಾಡಿದ್ದಾನೆ. ನಾನು ಇಂದಿನಿಂದ ಮೂರುಲೋಕಗಳಲ್ಲಿಯೂ ಪ್ರಾಣಿಗಳ ಒಡೆಯನಾಗಿರುವೆ. ಇದನ್ನು ಕೇಳಿದ ಸಿಂಹ, ಹುಲಿ ಮುಂತಾದ ಪ್ರಾಣಿಗಳು ಒಪ್ಪಿ ನರಿಯಸುತ್ತ ನಿಂತವು. ನರಿಯು ಸಿಂಹಕ್ಕೆ ಮಂತ್ರಿಪದವಿ, ಹುಲಿಗೆ ತನ್ನ ಮಲಗುವ ಸ್ಥಾನದ ರಕ್ಷಣೆಯ ಜವಾಬ್ದಾರಿ, ಚಿರತೆಗೆ ತಾಂಬೂಲವನ್ನು ತಯಾರಿಸುವ ಕಾರ್ಯ ಕೊಟ್ಟಿತು. ಆದರೆ ತನ್ನ ಜಾತಿಯವರಾದ ನರಿಗಳನ್ನು ಬಹಳ ದೂರ ಇಟ್ಟು, ಮಾತನ್ನೂ ಕೂಡ ಆಡುತ್ತಿರಲಿಲ್ಲ. ಹೀಗೆ ರಾಜ್ಯಭಾರಮಡುತ್ತಿದ್ದ ನರಿಗೆ ಸಿಂಹ ಮುಂತಾದವುಗಳು ಪ್ರಾಣಿಗಳನ್ನು ಬೇಟೆಯಾಡಿ ಆಹಾರವನ್ನು ಒದಗಿಸುತ್ತಿದ್ದವು. ನರಿಯೂ ಬುದ್ಧಿವಂತಿಕೆಯಿಂದ ರಾಜಧರ್ಮವನ್ನು ಪಾಲನೆ ಮಾಡುತ್ತಾ, ಅದನ್ನೆಲ್ಲಾ ಇತರ ಪ್ರಾಣಿಗಳಿಗೆ ಹಂಚುತ್ತಿತ್ತು. ಹೀಗೇ ಎಲ್ಲವೂ ಚೆನ್ನಾಗಿ ನಡೆಯುತ್ತಿದ್ದಾಗ, ಒಮ್ಮೆ ರಾಜಸಭೆಯಲ್ಲಿದ್ದಾಗ ದೂರದಲ್ಲಿ ಒಂದು ನರಿಗಳ ಗುಂಪು ಊಳಿಡುವ ಶಬ್ದ ಕೇಳಿಬಂತು. ಆ ಶಬ್ದವನ್ನು ಕೇಳಿದೊಡನೆ ರಾಜನಿಗೆ ಶರೀರವೆಲ್ಲಾ ಪುಳಕಿತಗೊಂಡಿತು. ಕಣ್ಣಲ್ಲಿ ಆನಂದ ಭಾಷ್ಪವೇ ತುಂಬಿಕೊಂಡಿತು. ರಾಜನು ಎದ್ದು ಜೋರಾಗಿ ಊಳಿಟ್ಟುಬಿಟ್ಟನು. ಪ್ರಾಣಿಗಳೆಲ್ಲ ಮುಖಮುಖ ನೋಡಿಕೊಂಡು, ರಾಜನು ನರಿಯೆಂದು ತಿಳಿದು ತಲೆತಗ್ಗಿಸಿ ಮೂರ್ಖರಾದ ಬಗ್ಗೆ ನಾಚಿಕೊಂಡವು. ನರಿಯ ಮೋಸಕ್ಕೆ ಒಳಗಾದ ಸಿಂಹ ಮುಂತಾದವುಗಳು ನರಿಯನ್ನು ಒಂದೇ ಏಟಿಗೆ

---

57. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-283,ಪು-185,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಕೊಂದವು. ಮುಂದೆ ದಮನಕನು ಸಂಜೀವಕನಲ್ಲಿ ಮಿತ್ರಭೇದದ ಪ್ರಯೋಗ ಮಾಡುತ್ತಾನೆ.ಇಲ್ಲಿಯೂ ಸಾಕಷ್ಟು ರಾಜಧರ್ಮದ ವಿಚಾರಗಳನ್ನು ಸಮಯೋಚಿತವಾಗಿ ತಿಳಿಸುತ್ತಾ ಬರುತ್ತಾನೆ. ದಮನಕನು– "ಎಲೈ ಮಿತ್ರನೇ, ಹಾಗಿದ್ದರೆ ನನಗೇನೂ ಭಯವಿಲ್ಲ, ಪಿಂಗಲಕನು ದುರ್ಜನರ ಕಾರಣದಿಂದ ನಿನ್ನಮೇಲೆ ಕೋಪಗೊಂಡಿದ್ದರೂ, ನಿನ್ನ ಮಾತಿನ ಧಾಟಿಯಿಂದ ಆತನ ಕೋಪವು ಶಮನವಾಗುತ್ತದೆ." ಎಂದು ಸಂಜೀವಕನಿಗೆ ಹೇಳುತ್ತಾನೆ. ಆಗ ಸಂಜೀವಕನು ದಮನಕ  ಹೇಳಿದ ಮಾತು. ಸರಿಯಾಗಿಲ್ಲ, ದುರ್ಜನರು ಅಲ್ಪರಾದರೂ ಅವರೊಡನೆ ವಾಸಮಾಡುವುದು ತರವಲ್ಲ. ಏನಾದರೂ ಉಪಾಯಮಾಡಿ ಅವರು ಖಂಡಿತಾ ಕೊಂದುಹಾಕುವರು ಎಂದು.

बहवः पण्डिताः क्षुद्राः सर्वे मायोपजीविनः।

कुर्युः कृत्यमकृत्यं वा उष्ट्रे काकादयो यथा ॥[58]

ಕಾಗೆ ಮುಂತಾದವುಗಳೆಲ್ಲವೂ ಸೇರಿ ಒಂಟೆಯನ್ನು ಹೇಗೆ ನಾಶಮಾಡಿದವೋ ಹಾಗೆ ಹಲವು ನೀಚರಾದ ಹಾಗೂ ಮೋಸವನ್ನವಲಂಭಿಸಿ ಬದುಕುವ ಪಂಡಿತರು ವಿವೇಕವಿಲ್ಲದ ಕೆಲಸವನ್ನು ಮಾಡುವರು. ದಮನಕನು ಅದೇನೆಂದು ಕೇಳಲು ಸಂಜೀವಕನು **ಒಂಟೆ ಕಾಕಾದಿ ಕಥೆ**ಯನ್ನು ಹೇಳಿದನು.

ವನಪ್ರದೇಶವೊಂದರಲ್ಲಿ ಮದೋತ್ಕಟವೆಂಬ ಸಿಂಹ ವಾಸವಾಗಿತ್ತು. ಚಿರತೆ, ಕಾಗೆ ಮತ್ತು ನರಿ ಅದರ ಅನುಯಾಯಿಗಳಾಗಿದ್ದವು. ಒಮ್ಮೆ ಕಾಡಿನಲ್ಲಿ  ಕ್ರಥನಕನೆಂಬ ಒಂದು ಒಂಟೆಯನ್ನು ನೋಡಿದವು. ಸಿಂಹವು ಹಿಂದೆಂದೂ ಅಂತಹ ಪ್ರಾಣಿಯನ್ನು ನೋಡಿರಲಿಲ್ಲ. ಅದು ಅರಣ್ಯ ವಾಸಿಯೋ ಅಥವಾ ಗ್ರಾಮವಾಸಿಯೋ ಎಂದು ತಿಳಿದುಕೊಳ್ಳುವ ಕುತೂಹಲದಿಂದ ಕಾಗೆಯನ್ನು ಕೇಳಿತು. ಕಾಗೆಯು ಅದು ಒಂಟೆಯೆಂದು ಹೇಳುತ್ತಾ, ಅದು ತಿನ್ನಲು ಯೋಗ್ಯವಾದುದು. ಆಗ ಸಿಂಹವು "ಮನೆಗೆ ಬಂದವರನ್ನು ನಾನು ಕೊಲ್ಲುವುದಿಲ್ಲ" ಏಕೆಂದರೆ, ವಿಶ್ವಾಸ ಹಾಗೂ ನಿರ್ಭಯದಿಂದ ಮನೆಗೆ ಬಂದ ಶತ್ರುವನ್ನು ಕೊಂದರೂ ಕೂಡ ನೂರು ಬ್ರಾಹ್ಮಣರನ್ನು ಕೊಂದ ಪಾಪ ಬರುತ್ತದೆ. ನಂತರ ಅದರ ಅನುಚರರು ಒಂಟೆಯಲ್ಲಿ ವಿಶ್ವಾಸ ಮೂಡಿಸಿ, ಅಭಯಪ್ರಧಾನವನ್ನು ಮಾಡಿ ಮದೋತ್ಕಟನ ಬಳಿಗೆ ಕರೆದುಕೊಂಡು ಬಂದವು. ಸಿಂಹವು ಒಂಟೆಯನ್ನು ಆಹ್ವಾನಿಸಿ, ಅಲ್ಲಿಯೇ ಮರಕತಮಣಿಯಂತಿರುವ ಹುಲ್ಲಿನ ಅಗ್ರಭಾಗವನ್ನು ನಿರ್ಭಯದಿಂದ ತಿನ್ನುತ್ತಾ ಸದಾ ನನ್ನ ಬಳಿ ಇರು "ಎಂದುಹೇಳಿತು. ಹೀಗಿರಲು ಒಮ್ಮೆ ಸಿಂಹಕ್ಕೆ ಬಲಿಷ್ಠವಾದ ಆನೆಯೊಂದಿಗೆ  ಯುದ್ಧವಾಯಿತು.

ಆನೆಯ ದಂತದ ಪ್ರಹಾರದಿಂದ ಸಿಂಹವು ಗಾಯಗೊಂಡು ಹೇಗೋ ಪ್ರಾಣ ಉಳಿಸಿಕೊಂಡಿತು. ಬಹಳ

58. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–311, ಪು–200,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ನೋವಿನಿಂದ ಬೇಟೆಯಾಡುವುದೂ ಸಾಧ್ಯವಾಗಲಿಲ್ಲ. ಸಿಂಹವು ತನ್ನ ಅನುಯಾಯಿಗಳನ್ನು ಕರೆದು "ಎಲ್ಲಾದರೂ, ಯಾವುದಾದರೂ ಪ್ರಾಣಿ ಸಿಗುತ್ತದೆಯೇ ಎಂದು ಹುಡುಕಿರಿ " ಎಂದು ಹೇಳಿತು. ಅಂತಹ ಸಂಕಷ್ಟ ಪರಿಸ್ಥಿತಿಯಲ್ಲೂ, ಆಹಾರವನ್ನು ಒದಗಿಸುವ ಪ್ರಜಾಪಾಲನಾ ಕಾರ್ಯ ರಾಜಧರ್ಮವಾಗಿರುತ್ತದೆ. ರಾಜನ ಅಪ್ಪಣೆಯಂತೆ, ಅನುಯಾಯಿಗಳು ಪ್ರಾಣಿಗಾಗಿ ಹುಡುಕಾಡಿದರೂ ಎಲ್ಲಿಯೂ ಸಿಗದಿದ್ದಾಗ, ತಮ್ಮ ತಮ್ಮಲ್ಲೇ ಮಾತನಾಡಿಕೊಂಡು ಕ್ರಂಥಕನನ್ನೇ ಕೊಂದು ತಿಂದು ಹಸಿವು ಶಮನ ಮಾಡಿಕೊಳ್ಳುವುದು ಸರಿಯೆಂದು ಯೋಚಿಸಿದವು. ಎಲ್ಲವೂ ಸೇರಿಕೊಂಡು ಬಹಳ ಉಪಾಯ ಹೂಡಿ ಅಭಯಪ್ರಧಾನ ಮಾಡಿದ್ದ ಒಂಟೆಯನ್ನೇ "ಸ್ವತಃ ತನ್ನ ಪ್ರಾಣವನ್ನು ತಾನೇ ಸ್ವಯಂ ಇಚ್ಛೆಯಿಂದ ಕೊಟ್ಟು ಉಳಿದವರ ಹಸಿವನ್ನು ನೀಗಿಸಿಕೊಳ್ಳಿ ಎಂದು ಹೇಳುವಷ್ಟರಮಟ್ಟಿಗೆ ತಯಾರಿ ಮಾಡಿಬಿಟ್ಟವು. ಯಾವಾಗ ಒಂಟೆ ಮುಗ್ಧತೆಯಿಂದ ಹೀಗೆ ಹೇಳಿತೋ, ರಾಜನೂ ಅಂತಿಮವಾಗಿ ಒಪ್ಪಿದನೋ ಆ ಕೂಡಲೇ ನರಿ ಮತ್ತು ಚಿರತೆ ಒಂದೊಂದು ಕಡೆಯಿಂದ ಒಂಟೆಯ ಹೊಟ್ಟೆಯನ್ನು ಸೀಳಿಬಿಟ್ಟವು. ಕಾಗೆಯು ಅದರ ಕಣ್ಣುಗಳನ್ನು ಕುಕ್ಕಿ ತೆಗೆದುಹಾಕಿತು. ಒಟ್ಟಿನಲ್ಲಿ ನೀಚ ಪಾಂಡಿತ್ಯವುಳ್ಳ ಆ ಪ್ರಾಣಿಗಳೆಲ್ಲಾ ಸೇರಿ ಒಂಟೆಯನ್ನು ತಿಂದುಹಾಕಿದವು.

ಹೀಗೆ ಕಥೆಯನ್ನು ಹೇಳಿ ಮುಗಿಸಿದ ದಮನಕನು "ತಿಳಿಯಿತಲ್ಲ ಸಂಜೀವಕ, ಮೋಸ ಹೋಗುವವರು ಇರುವವರೆಗೆ ಮೋಸ ಮಾಡುವವರು ಇದ್ದೇ ಇರುತ್ತಾರೆ. ಆದ್ದರಿಂದ ಅಂತಹವರು ಹತ್ತಿರ ಬರುವತನಕ ಅವರಿಗಾಗಿ ಹೆದರಬೇಕು, ಹತ್ತಿರ ಬಂದಾಗ ಮತ್ತೆ ಭಯಪಡಬಾರದು. ನೀರಲ್ಲಿ ಪೂರ್ತಿ ಮುಳುಗಿದ ಮೇಲೆ ಚಳಿ ಏನು, ಮಳೆ ಏನು? ಹೀಗಾಗಿ ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಶತ್ರುವನ್ನು ಎದುರಿಸುವುದೇ ಸೂಕ್ತ" ಎಂದಿದ್ದ.[59] ಮತ್ತೆ ಸಂಜೀವಕ ಮತ್ತು ದಮನಕನು ರಾಜನೀತಿಯ ಬಗ್ಗೆ ಕೆಲವು ಮುಖ್ಯ ವಿಚಾರಗಳನ್ನು ಚರ್ಚಿಸುತ್ತಾ, ಕೊನೆಯಲ್ಲಿ ದಮನಕನು ಹೇಳುತ್ತಾನೆ–

शत्रोर्विक्रममज्ञात्वा वैरमारभते हि यः ।

स पराभवमाप्नोति समुद्रष्टिट्टिभाद्यथा ॥[60]

ಶತ್ರುವಿನ ಪರಾಕ್ರಮವನ್ನು ತಿಳಿಯದೇ ಯಾವನು ವೈರತ್ವವನ್ನು ಆರಂಭಿಸುತ್ತಾನೋ ಅವನು ಸಮುದ್ರವು ಟಿಟ್ಟಿಭ ಪಕ್ಷಿಯಿಂದ ಸೋತಂತೆ ಸೋಲನ್ನು ಕಾಣುತ್ತಾನೆ. ಸಂಜೀವಕನು ಅದೇನೆಂದು ಕೇಳಲು ದಮನಕನು **ಟಿಟ್ಟಿಭ – ಸಮುದ್ರ ಕಥೆ**ಯನ್ನು ಹೇಳಿದನು. "ಸ್ವಪ್ರಯತ್ನದೊಂದಿಗೆ ದೈವಬಲವು ಸೇರಿದರೆ ಅಸಾಧ್ಯವಾದುದನ್ನು ಸಾಧಿಸಬಹುದಾಗಿದೆ. ಅದಕ್ಕೆ ಶಕ್ತಿಯೇ ಬೇಕೆಂದೇನಿಲ್ಲ. ಯುಕ್ತಿಯಿಂದ

---

59. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು–74–79, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.
60. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–337, ಪು–217,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಶತ್ರುವಿನ ದೌರ್ಬಲ್ಯವನ್ನು ಅರಿತು ಅಥವಾ ಇನ್ನೊಬ್ಬರ ಸಹಾಯವನ್ನು ಪಡೆದು ಕಾರ್ಯದಲ್ಲಿ ಯಶಸ್ಸು ಪಡೆಯಲಾಗುತ್ತದೆ ಎಂಬುದಕ್ಕೆ ಟಿಟ್ಟಿಭ ದಂಪತಿಯ ಗೆಲುವೇ ಸ್ಪಷ್ಟ ಉದಾಹರಣೆ.

ಒಂದು ಸಮುದ್ರ ತೀರ ಪ್ರದೇಶದಲ್ಲಿ ಟಿಟ್ಟಿಭ ದಂಪತಿಗಳು ವಾಸವಾಗಿದ್ದವು. ಟಿಟ್ಟಿಭೆಯು ಗರ್ಭವತಿಯಾಗಿದ್ದು, ಪ್ರಸವದ ಕಾಲ ಪ್ರಾಪ್ತವಾದಾಗ ತನ್ನ ಮೊಟ್ಟೆಗಳನ್ನಿಡಲು ಸುರಕ್ಷಿತವಾದ ಜಾಗವೊಂದನ್ನು ಹುಡುಕಲು ಟಿಟ್ಟಿಭನಿಗೆ ಹೇಳಿತು. ಅದಕ್ಕೆ, ಸಮುದ್ರಪ್ರದೇಶವೇ ರಮಣೀಯವಾಗಿರುವಾಗ ಅಲ್ಲಿಯೇ ಹೆರಿಗೆ ಕಾರ್ಯ ನಿರ್ವಹಿಸೋಣವೆಂದು ಟಿಟ್ಟಿಭ ಸಲಹೆ ಮಾಡಿತು. ಆದರೆ, ಟಿಟ್ಟಿಭೆ ಇದನ್ನು ಒಪ್ಪಲಿಲ್ಲ. ಏಕೆಂದರೆ ಪೂರ್ಣಿಮೆಯ ದಿನದಂದು ಸಮುದ್ರದ ಅಲೆಗಳು ಮದಗಜವನ್ನು ಕೂಡ ಎಳೆದುಕೊಂಡು ಹೋಗುವಷ್ಟು ಜೋರಾಗಿರುತ್ತದೆ. ಮತ್ತೊಂದು ಸುರಕ್ಷಿತ ಸ್ಥಳಕ್ಕೆ ಹೋಗುವುದು ಒಳ್ಳೆಯದು ಎಂದಳು ಟಿಟ್ಟಿಭೆ. ಅದನ್ನು ಕೇಳಿ ಟಿಟ್ಟಿಭ ನಕ್ಕು ಬಹಳ ಉಡಾಫೆ, ಅಹಂಕಾರ ಹಾಗೂ ಮೌಢ್ಯದ ಮಾತುಗಳನ್ನಾಡುತ್ತಾ ಬರೀ ಪ್ರತಿಷ್ಠೆ ಮಾತುಗಳನ್ನಾಡಿತು. ಈ ಮಾತುಗಳನ್ನು ಸಮುದ್ರವೂ ಕೇಳಿಸಿಕೊಂಡು ಯೋಚಿಸಿತು-"ಈ ಹುಳುವಿನಂತಿರುವ ಪಕ್ಷಿಗೆ ಅದೆಷ್ಟು ಗರ್ವ! ಆಕಾಶವು ತುಂಡಾಗಿ ಬಿದ್ದರೆ ಹಿಡಿದುಕೊಳ್ಳುವೆನೆಂಬ ಭ್ರಾಂತಿಯಿಂದ ಕಾಲುಗಳನ್ನು ಮೇಲೆ ಮಾಡಿ ಮಲಗುವ ಟಿಟ್ಟಿಭಕ್ಕಿರುವಂತಹ ಗರ್ವವು ಬೇರೆಲ್ಲೂ ಕಾಣಸಿಗದು. ಕುತೂಹಲಕ್ಕಾದರೂ ಇದರ ಮೊಟ್ಟೆಗಳನ್ನು ಅಪಹರಿಸಿ ಇದರ ಸಾಮರ್ಥ್ಯ ಪರೀಕ್ಷೆ ಮಾಡಲೇಬೇಕು." ಮೊಟ್ಟೆ ಇಟ್ಟದ್ದೂ ಆಯಿತು. ಒಮ್ಮೆ ಟಿಟ್ಟಿಭ ದಂಪತಿಗಳು ಆಹಾರವನ್ನು ಹುಡುಕಲು ಹೋಗಿದ್ದಾಗ ಸಮುದ್ರವು ಅಲೆಗಳನ್ನೆಬ್ಬಿಸಿ ಅವುಗಳ ಮೊಟ್ಟೆಯನ್ನು ಅಪಹರಿಸಿತು. ಟಿಟ್ಟಿಭ ದಂಪತಿಗಳು ಹಿಂದಿರುಗಿ ಬಂದಾಗ, ಮೊಟ್ಟೆಗಳು ಇಲ್ಲದ್ದನ್ನು ನೋಡಿದ ಟಿಟ್ಟಿಭೆಯು ಬಹಳ ಕೋಪ ಹಾಗೂ ದುಃಖದಿಂದ ಪ್ರಲಾಪಿಸುತ್ತಾ, ಟಿಟ್ಟಿಭಕ್ಕೆ ಹೀಗೆ ಹೇಳಿತು- "ಎಲೈ ಮೂರ್ಖನೇ, ನಾನು ಮೊದಲೇ ಹೇಳಿದ್ದೆ. ಸಮುದ್ರದ ಅಲೆಗಳಿಂದ ಮೊಟ್ಟೆಯು ನಾಶವಾಗುವುದು, ಬೇರೆಡೆಗೆ ಹೋಗೋಣ ಎಂದು. ಆದರೆ ಮೌಢ್ಯದಿಂದ ಮತ್ತು ಅಹಂಕಾರದಿಂದ ನನ್ನ ಮಾತನ್ನು ನೀನು ಕೇಳಲಿಲ್ಲ. ಹೀಗೊಂದು ಉಕ್ತಿಯಿದೆ:-

सुहृदां हितकामानां न करोतीह यो वचः ।

स कूर्म इव दुर्बुद्धिः काष्ठाद् भ्रष्टो विनश्यति ॥[61]

ಯಾರು ಹಿತವನ್ನು ಬಯಸುವ ಮಿತ್ರರ ಮಾತನ್ನು ಕೇಳುವುದಿಲ್ಲವೋ ಅವನು ಕಟ್ಟಿಗೆಯಿಂದ ಬಿದ್ದ

61. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-344, ಪು-221,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಆಮೆಯಂತೆ ನಾಶಹೊಂದುತ್ತಾನೆ. ಟಿಟ್ಟಿಭವು ಅದೇನೆಂದು ಕೇಳಲು ಟಿಟ್ಟಿಭೆಯು **ಕಟ್ಟಿಗೆಯಿಂದ ಬಿದ್ದ ಆಮೆಯ ಕಥೆ**ಯನ್ನು ಹೇಳಿತು.

ಒಂದು ಜಲಾಶಯದಲ್ಲಿ ಕುಂಬುಗ್ರೀವನೆಂಬ ಆಮೆಯಿತ್ತು. ಅಲ್ಲಿಗೆ ನಿತ್ಯವೂ ಸಂಕಟ ಮತ್ತು ವಿಕಟ ಎಂಬ ಅದರ ಹಂಸಮಿತ್ರರು ಬಂದು ಮಹರ್ಷಿ ದೇವರ್ಷಿಗಳ ಕಥೆಗಳನ್ನು ಹೇಳುತ್ತಾ ಆಮೆಯೊಡನೆ ಸೂರ್ಯಾಸ್ತದ ಸಮಯದವರೆಗೂ ಕಾಲಕಳೆದು, ತಮ್ಮ ಗೂಡಿಗೆ ವಾಪಸ್ಸಾಗುತ್ತಿದ್ದವು. ಹೀಗೇ ಕಾಲಕಳೆದಂತೆ, ಅನಾವೃಷ್ಟಿಯಿಂದ ಸರೋವರವು ಒಣಗುತ್ತಾ ಬಂತು. ಆಗ ಆಮೆ ಬಹಳ ದುಃಖಗೊಂಡಿತು. ಇದನ್ನು ನೋಡಿದ ಹಂಸಮಿತ್ರರು ಆಮೆಯನ್ನು ವಿಚಾರಿಸಿದವು. ಅದಕ್ಕೆ ಕುಂಬುಗ್ರೀವ ಹೇಳಿತು– "ನೀರಿಲ್ಲದಿದ್ದರೆ ನಮಗೆ ಬದುಕಿಲ್ಲ. ಪ್ರತಿಕೂಲ ಕಾಲದಲ್ಲೂ ಧೈರ್ಯ ಬಿಡಬಾರದು. ಏಕೆಂದರೆ ಧೈರ್ಯವೊಂದಿದ್ದರೆ ಹೇಗಾದರೂ ಉತ್ತಮ ಸ್ಥಿತಿಯನ್ನು ಪಡೆಯಬಹುದು ಸಮುದ್ರದ ಹಡಗು ಮುರಿದರೆ ನಾವಿಕನು ಹೇಗಾದರೂ ಮಾಡಿ ದಡ ತಲುಪುವುದಿಲ್ಲವೇ? ಆದ್ದರಿಂದ ನೀವೇನಾದರೂ ಒಂದು ಉಪಾಯವನ್ನು ಮಾಡಿ ನನಗೆ ಸಹಾಯ ಮಾಡಬೇಕು. ಆದ್ದರಿಂದ ಒಂದು ಗಟ್ಟಿಯಾದ ಹಗ್ಗ ಅಥವಾ ಸಣ್ಣ ಕಟ್ಟಿಗೆಯ ತುಂಡೊಂದನ್ನು ತನ್ನಿ. ಹೆಚ್ಚು ನೀರಿರುವ ಸರೋವರವೊಂದನ್ನು ಹುಡುಕಿರಿ. ನಾನು ಆ ಕಟ್ಟಿಗೆಯ ಮಧ್ಯ ಭಾಗವನ್ನು ಕಚ್ಚಿ ಹಿಡಿಯುತ್ತೇನೆ. ನೀವು ಅದರ ಎರಡು ತುದಿಗಳನ್ನು ಕಚ್ಚಿಕೊಂಡು ನನ್ನನ್ನು ಆ ಸರೋವರಕ್ಕೆ ಕರೆದುಕೊಂಡು ಹೋಗಿ" ಎಂದಿತು.

ಹಂಸಗಳು ಹಾಗೆಯೇ ಮಾಡೋಣವೆಂದು ಒಪ್ಪಿದವು. ಆದರೆ ನೀನು ಮೌನಿಯಾಗಿರಬೇಕು ಎಂದು ಒಂದು ಷರತ್ತನ್ನು ಹೇಳಿದವು. ಸರಿ, ಯೋಜನೆಯಂತೆ ಪ್ರಯಾಣ ಸಾಗುತ್ತಿತ್ತು. ದಾರಿಯಲ್ಲಿ ಒಂದು ನಗರ ಕಂಡಿತು. ಅಲ್ಲಿನ ಜನರು ಈ ಚಿತ್ರವನ್ನು ಕುತೂಹಲದಿಂದ ನೋಡುತ್ತಾ" ಏನೋ ಚಕ್ರಾಕಾರದ ವಸ್ತುವನ್ನು ಪಕ್ಷಿಗಳು ಒಯ್ಯುತ್ತಿವೆ ನೋಡಿ! ನೋಡಿ! "ಎಂದರು. ಅವರ ಕೋಲಾಹಲವನ್ನು ಕೇಳಿದ ಆಮೆಯು, ಎಚ್ಚರಿಕೆ ಮರೆತು ಬಾಯಿ ತೆರೆದು, "ಇದೇನು ಕೋಲಾಹಲ?." ಎಂದು ಹೇಳುವಷ್ಟರಲ್ಲಿ ಕೆಳಗೆ ಬಿದ್ದುಬಿಟ್ಟಿತು. ಜನರು ಅದನ್ನು ಕೊಚ್ಚಿ ಹಾಕಿಬಿಟ್ಟರು.[62] ಇಲ್ಲಿ ಎಂಥಹ ಒಂದು ನೀತಿಪಾಠವಿದೆ! ಹಿತವನ್ನು ಬಯಸುವ ಮಿತ್ರರ ಮಾತನ್ನು ಕೇಳಬೇಕು; ಮೌಢ್ಯದಿಂದ ವರ್ತಿಸಬಾರದು; ಜಾಗ್ರತೆ ಅಥವಾ ಎಚ್ಚರಿಕೆ ತಪ್ಪಬಾರದು. ಈ ಒಂದು ಪುಟ್ಟ ಕಥೆ ಕೇಳುಗರಿಗೆ ನಿಜಕ್ಕೂ ಕಣ್ಣಿಗೆ ಕಟ್ಟುವಂತಿದ್ದು, ಎಂದೂ ಮರೆಯಲುವಂತಿಲ್ಲ. ಇದರ ಮುಂದೆ ಯಾವ ದುಬಾರಿಯಾದ ಪಾಠೋಪಕರಣವೂ ಇಷ್ಟು

62. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು–81–82, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

ಪರಿಣಾಮಕಾರಿಯಾಗಲಾರದು. ಇದೇ ಪಂಚತಂತ್ರದಲ್ಲಿ ಕಂಡುಬರುವ ಒಂದು ವಿಶಿಷ್ಟ ಶೈಕ್ಷಣಿಕ, ಮನೋವೈಜ್ಞಾನಿಕ ತಂತ್ರಗಾರಿಕೆಯಾಗಿರುತ್ತದೆ. ಸರಳ ಹಾಗೂ ಆಪ್ಯಾಯಮಾನ ಬೋಧನೆಯಾಗಿದೆ. ಅದರಲ್ಲೂ ಪ್ರಾಣಿಪಕ್ಷಿಗಳು ಇಂತಹ ಮನುಷ್ಯವರ್ತನೆಯನ್ನು ನಿರೂಪಿಸುತ್ತವೆ ಎಂಬುದೇ ಕಲಿಯುವವರಿಗೆ ಒಂದು ವಿಶೇಷ ಆಕರ್ಷಣೆಯಾಗಿರುತ್ತದೆ.

ಕಟ್ಟಿಗೆಯಿಂದ ಬಿದ್ದ ಆಮೆಯ ಕಥೆಯನ್ನು ಮುಗಿಸಿದ ಟಿಟ್ಟಿಭೆಯು ಮುಂದುವರಿದು –

अनागतविधाता च प्रत्युत्पन्नमतिस्तथा ।

द्वावेतौ सुखमेधेते यद्भविष्यो विनश्यति ॥[63]

ಅಂದರೆ, "ಅನಾಗತ ವಿಧಾತಾ ಮತ್ತು ಪ್ರತ್ಯುತ್ಪನ್ನಮತಿ– ಈ ಇಬ್ಬರೂ ಸಂತೋಷದಿಂದ ಇರುವರು. ಆದರೆ ಯದ್ಭವಿಷ್ಯನು ನಾಶಹೊಂದುವನು." ಅದನ್ನು ಕೇಳಿದ ಟಿಟ್ಟಿಭವು ಅದೇನೆಂದು ಕೇಳಲು ಟಿಟ್ಟಿಭೆಯು **ಮೂರು ಮೀನುಗಳ ಕಥೆ**ಯನ್ನು ಹೇಳಿತು. ಅನಾಗತ ವಿಧಾತಾ, ಪ್ರತ್ಯುತ್ಪನ್ನಮತಿ ಮತ್ತು ಯದ್ಭವಿಷ್ಯತಿ ಎಂಬ ಮೂರು ಮೀನುಗಳು ಒಂದು ಜಲಾಶಯದಲ್ಲಿ ವಾಸಿಸುತ್ತಿದ್ದವು. ಅದರಲ್ಲಿ ಇನ್ನೂ ಬೇಕಾದಷ್ಟು ಮೀನುಗಳೂ ವಾಸವಾಗಿದ್ದವು. ಒಮ್ಮೆ ಅದೇ ದಾರಿಯಲ್ಲಿ ಹೋಗುತ್ತಿದ್ದ ಮೀನುಗಾರರು– "ಅಪರೂಪದ ಸರೋವರ, ಅದರ ತುಂಬಾ ಮೀನುಗಳಿವೆ. ಅಂದಿನ ಮೀನುಗಳನ್ನು ಹಿಡಿದಾಗಿದ್ದರಿಂದ ಹಾಗೂ ಸಂಜೆಯಾಗಿದ್ದರಿಂದ ನಾಳೆ ಬೆಳಗ್ಗೆ ಖಂಡಿತಾ ಬಂದು ಮೀನುಗಳನ್ನು ಹಿಡಿಯೋಣ ಎಂದು ಮಾತನಾಡಿಕೊಳ್ಳುತ್ತಿದ್ದರು. ಇದನ್ನು ಅನಾಗತ ವಿಧಾತಾ ಮೀನು ಕೇಳಿಸಿಕೊಂಡು ಎಲ್ಲಾ ಮೀನುಗಳಿಗೂ ವಿಷಯ ತಿಳಿಸಿ ಎಚ್ಚರಿಸಿತು. ಅಂದೇ ರಾತ್ರಿ ಬೇರೆ ಸರೋವರಕ್ಕೆ ಹೋಗಿಬಿಡೋಣ ಎಂದು ಸಲಹೆ ನೀಡಿತು"

विद्यमाना गतिर्येषामन्यत्रापि सुखावहा ।

तेन पश्यन्ति विद्वांसो देहभङ्गं कुलक्षयम् ॥[64]

ಬೇರೆಕಡೆಗೆ ಹೋಗಿ ಸುಖವಾಗಿ ಬದುಕುವ ಅವಕಾಶ ಇದ್ದಾಗ, "ಬುದ್ಧಿವಂತನು ತಾನು ಸ್ವದೇಶದಿಂದ ಹೊರಡುವಂತಾಯಿತು ಅಥವಾ ಕುಲವು ನಾಶವಾಯಿತು ಎಂದು ಚಿಂತಿಸುವುದಿಲ್ಲ." ಎಂದೂ ಹೇಳಿತು.

ಅದನ್ನು ಕೇಳಿದ ಪ್ರತ್ಯುತ್ಪನ್ನಮತಿ ಸರಿಯೆಂದು ಒಪ್ಪಿ, ತಾನೂ ಒಂದು ಸಲಹೆ ನೀಡಿತು–

---

63. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–347, ಪು–224,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
64. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–349, ಪು–226,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

यस्यास्ति सर्वत्र गतिः स कस्मात्स्वदेशरागेण हि याति नाशम् ।

तातस्य कूपोऽयमिति ब्रुवाणाः क्षारं जलं कापुरुषाः पिबन्ति ॥[65]

"ಯಾರು ಎಲ್ಲಾದರೂ ಬದುಕಬಲ್ಲರೋ ಅವರು ಸ್ವದೇಶದ ವ್ಯಾಮೋಹದಿಂದ ನಾಶಹೊಂದುವುದಿಲ್ಲ. ಹೇಡಿಗಳು ಮಾತ್ರ ಅಜ್ಜನ ಬಾವಿಯೆಂದು ಹೇಳುತ್ತಾ ಉಪ್ಪು ನೀರನ್ನೇ ಕುಡಿಯುತ್ತಿರುತ್ತಾರೆ."

ಇದನ್ನೆಲ್ಲಾ ಕೇಳಿದ ಯದ್ಭವಿಷ್ಯ ಮೀನು  ನಗುತ್ತಾ, ಇವರುಗಳ ಆಲೋಚನೆ ಸರಿಯಿಲ್ಲವೆಂಬ ಅಭಿಪ್ರಾಯ ವ್ಯಕ್ತಪಡಿಸಿತು. ಪೂರ್ವಜರ ಕಾಲದ ಆ ಸರೋವರವನ್ನು ಬಿಟ್ಟುಹೋಗುವುದು ಸರಿಯಲ್ಲವೆಂದಿತು. ಆಯಸ್ಸು ಮುಗಿದಾಗ ಎಲ್ಲಿದ್ದರೂ ಸಾವು ಬಂದೇಬರುತ್ತದೆ.

अरक्षितं तिष्ठति दैवरक्षितं सुरक्षितं दैवहतं विनश्यति ।

जीवत्सनाथोऽपि वने विसर्जितः कृतप्रयत्नोऽपि गृहे विनश्यति ॥[66]

ರಕ್ಷಣೆಯಿಲ್ಲದವನು ದೈವರಕ್ಷೆಯಿದ್ದರೆ ಬದುಕುತ್ತಾನೆ. ಉತ್ತಮ ರಕ್ಷಣೆಯಿದ್ದವನು ದೈವಕೃಪೆಯಿಲ್ಲದಿದ್ದಾಗ ನಾಶವಾಗುತ್ತಾನೆ. ಕಾಡಿನಲ್ಲಿ ಬಿಟ್ಟ ಅನಾಥನು ದೈವಕೃಪೆಯಿಂದ ಬದುಕುತ್ತಾನೆ. ದೈವಕೃಪೆಯಿಲ್ಲದಿದ್ದಾಗ ಎಷ್ಟೇ ಪ್ರಯತ್ನಪಟ್ಟರೂ, ಮನೆಯಲ್ಲಿದ್ದರೂ ಕೂಡ ನಾಶವಾಗುತ್ತಾನೆ. ಆದ್ದರಿಂದ ನಾನು ಬರುವುದಿಲ್ಲ. ನಿಮಗೆ ತೋಚಿದಂತೆ ನೀವು ಮಾಡಿ." ಎಂದಿತು. ಯದ್ಭವಿಷ್ಯನ ತೀರ್ಮಾನ ತಿಳಿದುಕೊಂಡು ಅನಾಗತವಿಧಾತಾ ಮತ್ತು ಪ್ರತ್ಯುತ್ಪನ್ನಮತಿ ಮೀನುಗಳು ಇತರರೊಂದಿಗೆ ಬೇರೆಡೆಗೆ ಹೊರಟುಹೋದವು ಬೆಳಗ್ಗೆ ಯೋಜನೆಯಂತೆ ಮೀನುಗಾರರು ಬಂದರು, ಬಲೆಬೀಸಿದರು, ಯದ್ಭವಿಷ್ಯ ಹಾಗೂ ಉಳಿದ ಇತರ ಮೀನುಗಳನ್ನು ಹಿಡಿದುಕೊಂಡು ಹೊರಟರು. ಹೀಗೆ ಕಥೆಯನ್ನು ಮುಗಿಸಿದ ಟಿಟ್ಟಿಭೆಯು ಟಿಟ್ಟಿಭದೊಡನೆ ಅನೇಕ ವಿಚಾರಗಳನ್ನು ಚರ್ಚೆ ಮಾಡಿ ಹೇಳಿತು– "ನೀನು ನಿಜವಾಗಿಯೂ ಸಮುದ್ರದೊಂದಿಗೆ ಯುದ್ಧ ಮಾಡುವುದಾದರೆ ಬೇರೆ ಪಕ್ಷಿಗಳನ್ನು ಕರೆದು ಮಿತ್ರರೊಂದಿಗೆ ಸೇರಿಕೊಂಡು ಯುದ್ಧವನ್ನು ಹೂಡು, ಹುಲ್ಲಿನಿಂದ ಮಾಡಿದ ಹಗ್ಗದಿಂದ ಹೇಗೆ ಆನೆಯನ್ನೂ ಕೂಡ ಕಟ್ಟಬಹುದೋ ಹಾಗೆ ದುರ್ಬಲರಾದವರು ಗುಂಪುಗೂಡಿದಾಗ ಅವರನ್ನು ಜಯಿಸುವುದು ಕಷ್ಟಕರವು.

---

65. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–351, ಪು–227,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
66. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–352,ಪು–227–228,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

चटकाकाष्ठकुट्टेन मक्षिकादर्दुरैस्तथा ।

महाजनविरोधेन कुञ्जरः प्रलयं गतः ॥[67]

"ಗುಬ್ಬಚ್ಚಿಯು ಮರಕುಟಿಗದೊಂದಿಗೆ ಸೇರಿತು. ನೊಣವು ಕಪ್ಪೆಯೊಂದಿಗೆ ಸೇರಿತು. ಇವರೆಲ್ಲರ ವಿರೋಧದಿಂದ ಆನೆಯೊಂದು ಸಾವನ್ನಪ್ಪಿತು." ಟಿಟ್ಟಿಭವು ಅದೇನೆಂದು ಕೇಳಲು ಟಿಟ್ಟಿಭೆಯು **ಗುಬ್ಬಚ್ಚಿ ದಂಪತಿ ಹಾಗೂ ಆನೆಯ ಕಥೆ**ಯನ್ನು ಹೇಳಿತು.

ಒಂದು ಕಾಡಿನಲ್ಲಿ ದಟ್ಟವಾದ ಎಲೆಯನ್ನು ಹೊಂದಿದ ತಮಾಲವೃಕ್ಷದಲ್ಲಿ ಗುಬ್ಬಿ ದಂಪತಿ ವಾಸವಾಗಿದ್ದವು. ಅನ್ಯೋನ್ಯ ದಾಂಪತ್ಯದಿಂದ ಹೆಣ್ಣು ಗುಬ್ಬಿ ಮೊಟ್ಟೆಯನ್ನಿಟ್ಟು ಅದನ್ನು ಎಚ್ಚರಿಕೆಯಿಂದ ಕಾಯುತ್ತಿತ್ತು. ಅದೇ ಸಮಯದಲ್ಲಿ ಒಂದು ಮದಗಜವು ಆ ಮರದ ಬಳಿ ಬಂದು ಗುಬ್ಬಚ್ಚಿ ಗೂಡಿದ್ದ ರೆಂಬೆಯನ್ನು ಎಳೆದು ಎಸೆಯಿತು. ಮೊಟ್ಟೆಗಳೆಲ್ಲವೂ ಪುಡಿಪುಡಿಯಾದವು. ಪೂರ್ವಜನ್ಮದ ಪುಣ್ಯವಿಶೇಷದಿಂದ ದಂಪತಿಗಳಿಗೆ ಏನೂ ತೊಂದರೆಯಾಗಲಿಲ್ಲ. ಹೆಣ್ಣು ಗುಬ್ಬಿ ತನ್ನ ಮೊಟ್ಟೆಗಳನ್ನು ಕಳೆದುಕೊಂಡು ಆಕ್ರಂದನಕ್ಕೆ ತೊಡಗಿತು. ಅದರ ಸಂಕಟವನ್ನು ನೋಡಲಾರದೆ, ಅದರ ಮಿತ್ರನಾದ ಮರಕುಟಿಕ ಪಕ್ಷಿಯು ಅದಕ್ಕೆ ಸಾಂತ್ವನ ಹೇಳಿತು. "ಮಾನ್ಯಳೇ ಸುಮ್ಮನೆ ಅಳಬೇಡ ಅದರಿಂದ ಪ್ರಯೋಜನವಿಲ್ಲ. ನಷ್ಟವಾದುದಕ್ಕೆ, ಸತ್ತುಹೋದದ್ದಕ್ಕೆ ಮತ್ತು ಕಳೆದುಹೋದದ್ದಕ್ಕೆ ಬುದ್ಧಿವಂತರು ಚಿಂತಿಸುವುದಿಲ್ಲ. ಚಿಂತಿಸಬಾರದ್ದಕ್ಕಾಗಿ ಚಿಂತಿಸುವುದು ಹಾಗೂ ಅದರಿಂದಾಗುವ ದುಃಖ –ಈ ಎರಡೂ ಅನರ್ಥಗಳು

श्लेष्माश्रु बान्धवैर्मुक्तं प्रेतो भुङ्क्ते यतरोऽवशः ।

तस्मान्न रोदितव्यं हि क्रियाः कार्याश्च शक्तितः ॥[68]

ಅಂದರೆ ಸತ್ತ ಪ್ರೇತಶರೀರವು ಕಫದಿಂದ ಕೂಡಿದ ಬಂಧುಗಳ ಕಣ್ಣೀರನ್ನು ಕುಡಿಯುತ್ತದೆ. ಆದ್ದರಿಂದ ಸತ್ತಾಗ ಅಳದೆ ಯಥಾಶಕ್ತಿ ಉತ್ತರಕ್ರಿಯೆಗಳನ್ನು ಮಾಡಬೇಕು. ಸಂತತಿಯನ್ನು ನಾಶಮಾಡಿದ ದುಷ್ಟಗಜವನ್ನು, ನೀನು ಬಂಧುವೇ ಆಗಿದ್ದಲ್ಲಿ ಕೊಲ್ಲುವ ಉಪಾಯವನ್ನು ಯೋಚಿಸು ಎಂದು ಗುಬ್ಬಿಯು ಯಾಚಿಸಿತು. ಅದಕ್ಕೆ ಮರಕುಟಿಗನು ಹೇಳಿತು– "ಯಾರು, ಯಾರ ಕಷ್ಟದಲ್ಲಿ ನೆರವಾಗುತ್ತಾರೋ ಅವರು ಜಾತಿಯನ್ನು ಮೀರಿ ಬಂಧುವಾಗುತ್ತಾರೆ. ಕಷ್ಟದಲ್ಲಾಗುವವನೇ ಮಿತ್ರ, ಹಿತಕಾರಿಯಾದವನೇ ಪುತ್ರ. ಆದ್ದರಿಂದ

67. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–362,ಪು–233,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
68. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–365, ಪು–235,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ನನ್ನ ಬುದ್ಧಿ ಪ್ರಭಾವವನ್ನು ನೋಡು. ವೀಣಾರವಾ ಎಂಬ ನೊಣವು ನನ್ನ ಸ್ನೇಹಿತೆ. ಅವಳನ್ನು ಕರೆದುಕೊಂಡು ಬರುವೆನು. ಬಳಿಕ ಮರಕುಟಿಕವು ಗುಬ್ಬಿಯೊಡನೆ. ನೊಣದ ಹತ್ತಿರ ಬಂದು ವಿಚಾರ ವಿನಿಮಯ ಮಾಡಿಕೊಂಡವು. ನೊಣ ಹೇಳಿತು– "ಈ ವಿಷಯದಲ್ಲಿ ಹೇಳುವುದೇನಿಲ್ಲ. ಪ್ರತ್ಯುಪಕಾರವನ್ನು ಪಡೆಯುವುದಕ್ಕಾಗಿಯೇ ಮಿತ್ರನಿಗೆ ಅಥವಾ ಮಿತ್ರನಮಿತ್ರನಿಗೆ ಪ್ರಿಯವಾದ ಕಾರ್ಯವನ್ನು ಮಾಡಿದರೆ ಮಿತ್ರನಾಗಿ ಏನು ಮಾಡಿದಂತಾಯಿತು? ಇದು ಸತ್ಯವಾದ ಮಾತು. ಮೇಘನಾದನೆಂಬ ಕಪ್ಪೆಯು ನನ್ನ ಸ್ನೇಹಿತ. ಅವನನ್ನು ಕರೆದು ಸೂಕ್ತವಾದುದನ್ನು ಮಾಡೋಣ. ಅನಂತರ ಮೂವರೂ ಹೋಗಿ ಮೇಘನಾದನಲ್ಲಿ ಎಲ್ಲವನ್ನೂ ಹೇಳಿಕೊಂಡರು. ಆಗ ಮೇಘನಾದವು ಹೇಳಿತು– "ಕುಪಿತರಾದ ಮಹಾಜನರ ಮುಂದೆ ಆ ಆನೆಯು ಎಷ್ಟು ಮಾತ್ರದ್ದು? ನಾವು ವಿಚಾರ ಮಾಡೋಣ. ನೊಣವೇ, ನೀನು ಮಧ್ಯಾಹ್ನದ ವೇಳೆ ಆ ಮತ್ತಗಜದ ಕಿವಿಯಲ್ಲಿ ವೀಣಾರವದಂತಹ ಶಬ್ದವನ್ನು ಮಾಡು. ಅದನ್ನು ಕೇಳುವ ಸುಖದಿಂದ ಆನೆಗೆ ಗಾಢವಾದ ನಿದ್ದೆಬರುತ್ತದೆ. ಆಗ ಮರಕುಟಿಕದ ಕೊಕ್ಕಿನಿಂದ ಕಣ್ಣುಗಳಿಗೆ ಚುಚ್ಚಲ್ಪಟ್ಟು, ದೃಷ್ಟಿ ಕಳೆದುಕೊಂಡು ಬಾಯಾರಿಕೆಯಿಂದ ನೀರನ್ನು ಹುಡುಕುತ್ತಾ ಕಂದಕದಲ್ಲಿ ನಿಂತು ವಟಗುಟ್ಟುತ್ತಿರುವ ಕಪ್ಪೆಯ ಪರಿವಾರದವರ ಶಬ್ದವನ್ನು ಕೇಳಿ ಸರೋವರವಿದೆಯೆಂದು ತಿಳಿದು ಆನೆಯು ಕಂದಕಕ್ಕೆ ಬೀಳುತ್ತದೆ ಮತ್ತು ಸಾವನ್ನಪ್ಪುತ್ತದೆ ಹೀಗೆ ಮಾಡಿದಲ್ಲಿ ವೈರಸಾಧನೆ ಮಾಡಿದಂತಾಗುತ್ತದೆ.[69] ಎಂತಹ ಇಂಜಿನಿಯರಿಂಗ್ ಪ್ಲಾನ್!

ಇದು ಒಂದು ರೀತಿ ಶೈಕ್ಷಣಿಕ ಮನೋವಿಜ್ಞಾನದಲ್ಲಿ ಸಮಸ್ಯೆ ಬಗೆಹರಿಸುವಿಕೆ. **(problem solving)** ಅಂತೂ ಯೋಜನೆಯಂತೆ ಎಲ್ಲವೂ ನಡೆದು ಆನೆ ದೊಡ್ಡ ಕಂದಕಕ್ಕೆ ಬಿದ್ದು ಸತ್ತು ಹೋಯಿತು. ಇದರ ನೀತಿಪಾಠ ಒಗ್ಗಟ್ಟಿದ್ದರೆ ಏನನ್ನೂ ಸಾಧಿಸಬಹುದು, ಒಗ್ಗಟ್ಟಿನಲ್ಲಿ ಬಲವಿದೆ. ಹಿತವಾದ ಮಿತ್ರರ ಮಾತುಗಳನ್ನು ಕೇಳಿದರೆ ಎಂಥಹ ಸಮಸ್ಯೆಯನ್ನೂ ಯೋಜಿತವಾಗಿ ಎದುರಿಸಬಹುದು. ಹೀಗೆ ಗುಬ್ಬಚ್ಚಿ ದಂಪತಿ ಕಥೆ ಮುಕ್ತಾಯವಾಗುತ್ತದೆ.

ಪುನಃ ಟಿಟ್ಟಿಭ ಈ ಕಥೆಯನ್ನು ಕೇಳಿ ತಾನೂ ಸ್ನೇಹಿತರೊಂದಿಗೆ ಸೇರಿ ಸಮುದ್ರವನ್ನು ಒಣಗಿಸುವೆನೆಂದು ನಿರ್ಧರಿಸಿ, ಬಕ, ಹಂಸ, ಮಯೂರ ಮೊದಲಾದ ಪಕ್ಷಿಗಳನ್ನು ಸೇರಿಸಿ ಸಮಾಲೋಚನೆ ನಡೆಸಿತು. ಅವುಗಳೆಲ್ಲಾ ಮಂತ್ರಾಲೋಚನೆ ಮಾಡಿ ಹೀಗೆ ಹೇಳಿದವು– "ಸಮುದ್ರವನ್ನು ಒಣಗಿಸುವುದರಲ್ಲಿ ನಾವು ಶಕ್ತರಲ್ಲ. ವ್ಯರ್ಥ ಪ್ರಯಾಸ ಬೇಡ. ನಮ್ಮ ಸ್ವಾಮಿ ಗರುಡನಿದ್ದಾನೆ. ನಮ್ಮ ಈ ಸಮಸ್ಯೆಯನ್ನು ಅವನಲ್ಲಿ ನಿವೇದಿಸಿಕೊಳ್ಳೋಣ. ಅವನು ತನ್ನವರ ಅಪಮಾನದಿಂದ ಕೋಪಗೊಂಡು ಶತ್ರುವಿನಲ್ಲಿ ಪ್ರತೀಕಾರವನ್ನು ಮಾಡುವನು. ಅದರಂತೆ

---

69. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು – 85–87, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

ಅವುಗಳೆಲ್ಲಾ ದುಃಖದಿಂದ ಅಳುತ್ತಾ ಗರುಡನ ಬಳಿಗೆ ಹೋಗಿ ಕರುಣಾಸ್ವರದಿಂದ ಟಿಟ್ಟಿಭೆಯ ಮೊಟ್ಟೆಗಳು ಸಮುದ್ರದ ಅಲೆಯಲ್ಲಿ ಕೊಚ್ಚಿಕೊಂಡು ಹೊದ ಬಗ್ಗೆ, ಪಕ್ಷಿಕುಲ ನಾಶವಾಗಿಹೋಯಿತೆಂಬ ಬಗ್ಗೆ ಹಾಗೂ ತಮ್ಮ ಎಲ್ಲ ಸಂಕಷ್ಟಗಳನ್ನು ನಿವೇದಿಸಿಕೊಂಡವು. ಗರುಡನು ಸತ್ಯಾಸತ್ಯತೆ ಪರೀಕ್ಷಿಸಿ ಪಕ್ಷಿಗಳು ಸತ್ಯವನ್ನೇ ಹೇಳುತ್ತಿವೆ ಎಂಬುದನ್ನು ಅರಿತು ಅಂದೇ ಹೋಗಿ ಸಮುದ್ರವನ್ನು ಒಣಗಿಸಿಬಿಡಬೇಕು ಎಂದು ಯೋಚಿಸಿದನು. ಅಷ್ಟರಲ್ಲಿ ವಿಷ್ಣುದೂತನೊಬ್ಬನು ಬಂದು ಭಗವನ್ನಾರಾಯಣನು ಕರೆ ಕಳುಹಿಸಿರುವುದಾಗಿ ಸಂದೇಶ ಕೊಟ್ಟನು. ಅದನ್ನು ಕೇಳಿದ ಗರುಡನು ಸ್ವಾಭಿಮಾನದಿಂದ ಹೇಳಿದನು– "ಎಲೈ ದೂತನೇ, ನನ್ನಂತಹ ಸಾಮಾನ್ಯ ಸೇವಕನಿಂದ ಭಗವಂತನಿಗೇನು ಪ್ರಯೋಜನ? ನನ್ನ ಸ್ಥಾನದಲ್ಲಿ ಬೇರೆ ಯಾರನ್ನಾದರೂ ವಾಹನವನ್ನಾಗಿ ಮಾಡಿಕೊಳ್ಳಲಿ. ಭಗವಂತನಿಗೆ ನನ್ನ ನಮಸ್ಕಾರಗಳನ್ನು ತಿಳಿಸು. ಕೃಷಿಗೆ ಯೋಗ್ಯವಲ್ಲದ ಭೂಮಿಯಲ್ಲಿ ಉಳುವುದು ಹೇಗೆ ವ್ಯರ್ಥವೋ ಹಾಗೆ ಒಬ್ಬನ ಗುಣಗಳನ್ನು ಅರಿಯಲಾರದವನನ್ನು ಪಂಡಿತನು ಆಶ್ರಯಿಸುವುದಿಲ್ಲ"

ದೂತನಿಗೆ ಇವನ ವಿಚಾರ ಅರ್ಥವಾಗಿ ನಿನಗೇನು ಅಪಮಾನವಾಗಿದೆ ನಿಜ ಹೇಳು ಎಂದು ಕೇಳಿದನು. ಆಗ ಗರುಡನು ಹೀಗೆಂದನು– " ಭಗವಂತನ ಆಶ್ರಯಸ್ಥಾನವಾಗಿರುವ ಸಮುದ್ರವು ನಮ್ಮ ಈ ಟಿಟ್ಟಿಭ ಪಕ್ಷಿಗಳ ಮೊಟ್ಟೆಗಳನ್ನು ಅಪಹರಿಸಿದೆ. ಆದ್ದರಿಂದ, ಸಮುದ್ರವನ್ನು ದಂಡಿಸದಿದ್ದರೆ ನಾನು ಭಗವಂತನ ಸೇವಕನಾಗಿರುವುದಿಲ್ಲ. ಈ ನನ್ನ ನಿಶ್ಚಯವನ್ನು ಬೇಗನೆ ಹೋಗಿ ಭಗವಂತನಿಗೆ ತಿಳಿಸು."

ದೂತನ ಮೂಲಕ ಗರುಡನು ಪ್ರಣಯಕುಪಿತನಾಗಿದ್ದಾನೆಂದು ತಿಳಿದ ಭಗವಂತನು ಬಹಳವಾಗಿ ಯೋಚಿಸಿ ಗರುಡ ಹೇಳಿದ್ದು ಸರಿಯಾಗಿಯೇ ಇದೆ ಎಂದುಕೊಂಡು, ಭಕ್ತಿಶ್ರದ್ಧೆಯಿಂದಿರುವ ಸೇವಕನನ್ನು ಅಪಮಾನಿಸಬಾರದು ಎಂದು ರುಕ್ಮಪುರದಲ್ಲಿರುವ ಗರುಡನ ಮನೆಗೆ ಹೋದನು. ಗರುಡನು ಸ್ವತಃ ಸ್ವಾಮಿಯೇ ಮನೆಗೆ ಬಂದದ್ದನ್ನು ನೋಡಿ ನಾಚಿಕೆಯಿಂದ ತಲೆತಗ್ಗಿಸಿ, ನಮಸ್ಕರಿಸಿ ಇದ್ದ ವಿಚಾರವನ್ನು ಭಗವಂತನ ಮುಂದೆ ನಿವೇದಿಸಿಕೊಂಡನು. ಅದನ್ನು ಕೇಳಿ ಭಗವಂತನು ಗರುಡನನ್ನು ಸಮಾಧಾನಪಡಿಸಿ, ಸಮುದ್ರವನ್ನು ಗದರಿಸಿ ಆಗ್ನೇಯಾಸ್ತ್ರವನ್ನು ಹೂಡಿ ಸಮುದ್ರಕ್ಕೆ ಹೇಳಿದನು– "ಎಲೈ ದುರಾತ್ಮನೇ, ಟಿಟ್ಟಿಭದ ಮೊಟ್ಟೆಗಳನ್ನು ಕೊಡು. ಇಲ್ಲದಿದ್ದರೆ ನಿನ್ನನ್ನು ನಿರ್ಜಲ ಪ್ರದೇಶವನ್ನಾಗಿ ಮಾಡಿಬಿಡುವೆನು." ಆಗ ಸಮುದ್ರವು ಭಯದಿಂದ ಟಿಟ್ಟಿಭದ ಮೊಟ್ಟೆಗಳನ್ನು ಹಿಂದಿರುಗಿಸಿತು.[70] ಟಿಟ್ಟಿಭವು ಅವುಗಳನ್ನು ಟಿಟ್ಟಿಭೆಗೆ ಕೊಟ್ಟಿತು. ಇಲ್ಲಿಗೆ ಟಿಟ್ಟಿಭ–ಸಮುದ್ರ ಕಥೆ ಮುಕ್ತಾಯ. ಕಥೆಯನ್ನು ಮುಗಿಸಿದ ದಮನಕನು ಮಿತ್ರಭೇದೋಪಾಯವನ್ನು ರಚಿಸಿದ ಅನಂತರ ಕರಟಕನೊಡನೆ ಸಂವಾದ ನಡೆಸಿ, ಕೊನೆಯಲ್ಲಿ ಒಂದು ಉಕ್ತಿಯನ್ನು ಹೇಳುತ್ತಾನೆ–

---

70. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು –89–92, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004

परस्य पीडनं कुर्वन् स्वार्थसिद्धिं च पण्डितः ।

मूढबुद्धिर्न भक्षेच्च वने चतुरको यथा ॥[71]

ಕಾಡಿನಲ್ಲಿದ್ದ ಚತುರಕನೆಂಬ ನರಿಯಂತೆ ಬುದ್ಧಿವಂತನು ಬೇರೆಯವರನ್ನು ಪೀಡಿಸುತ್ತಾ ತನ್ನ ಸ್ವಾರ್ಥ ಸಾಧಿಸಿಕೊಳ್ಳುತ್ತಾನೆ ಹಾಗೂ ಅವನ ರಹಸ್ಯ ವ್ಯವಹಾರವು ಯಾರಿಗೂ ತಿಳಿಯದಂತೆ ನೋಡಿಕೊಳ್ಳುತ್ತಾನೆ. ಅದು ಹೇಗೆಂದು ಕರಟಕ ಕೇಳಿದನು. ದಮನಕನು **ಸಿಂಹ ಮತ್ತು ನರಿಯ ಕಥೆ** ಹೇಳಿದನು.

ಮಿತ್ರಭೇದ ತಂತ್ರದಲ್ಲಿ ಕಂಡುಬರುವ ಮತ್ತೊಂದು ಉಪಕಥೆ – ಸಿಂಹ ಮತ್ತು ನರಿಯ ಕಥೆಯಲ್ಲಿ ಸ್ವಾರ್ಥ ಸಾಧಕನಾದ ಚತುರಕನು ಪರಪೀಡೆಯಿಂದ ಸ್ವಾರ್ಥವನ್ನು ಸಾಧಿಸುತ್ತಾನೆ. ಮೂಢ ಜನರು ಮಾತ್ರ ಮಾಂಸ ಸಿಕ್ಕರೂ ತಿನ್ನದ ಸಿಂಹತೋಳಗಳ ಹಾಗೆ ಸುಮ್ಮನಿರುತ್ತಾರೆ. ಚತುರಕ ನರಿ ಮತ್ತು ಸಿಂಹಕ್ಕೆ ಆಹಾರವಾದ ಮರಿ ಒಂಟೆಯನ್ನು ಲಪಟಾಯಿಸಿ ಅದರ ಮಾಂಸವನ್ನು ಹಲವು ದಿನಗಳ ಕಾಲ ತಿಂದಿತು. ಇದ-ರಿಂದ ಪಾಠವೆಂದರೆ, ಕಾಡಿನಲ್ಲಿದ್ದ ಚತುರಕನೆಂಬ ನರಿಯಂತೆ ಬುದ್ಧಿವಂತನು ಬೇರೆಯವರನ್ನು ಪೀಡಿಸುತ್ತಾ ತನ್ನ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾನೆ. ಹಾಗೂ ಅವನ ರಹಸ್ಯ ವ್ಯವಹಾರವು ಯಾರಿಗೂ ತಿಳಿಯದಂತೆ ನೋಡಿಕೊಳ್ಳುತ್ತಾನೆ. ಸ್ವಾರ್ಥಸಾಧಕನು ಎಂತಹ ಹೇಯ ಕೃತ್ಯಕ್ಕೂ ಹಿಂಜರಿಯಲಾರ.[72]

ದಮನಕನು ಕಥೆಯನ್ನು ಮುಗಿಸಿದ ನಂತರ ಸಂಜೀವಕ ಹಾಗೂ ಪಿಂಗಲಕನ ಮುಖಾಮುಖಿಯಾಗುತ್ತದೆ.

ಸಂಜೀವಕನು ಎಡವುತ್ತಾ, ಮೆಲ್ಲನೆ ನಡೆಯುತ್ತಾ ಸಿಂಹವಿರುವ ಜಾಗವನ್ನು ತಲುಪಿದನು. ದಮನಕನು ಮೊದಲೇ ತಿಳಿಸಿದ್ದ ಹಾಗೆ ಕೆಂಪಾದ ಕಣ್ಣುಗಳುಳ್ಳ ಪಿಂಗಲಕನನ್ನು ನೋಡಿ ಭಯಗೊಂಡು, ಶರೀರವನ್ನು ಮುದುಡಿಕೊಂಡು ಸ್ವಲ್ಪ ದೂರದಲ್ಲೇ ಕುಳಿತುಕೊಂಡನು. ಪಿಂಗಲಕನು ಆ ರೀತಿ ಬಂದು ಅವನು ಕುಳಿತದ್ದು ನೋಡಿ ದಮನಕನು ಹೇಳಿದ್ದೆಲ್ಲಾ ಸರಿಯಾಗಿಯೇ ಇದೆ ಎಂದು ಯೋಚಿಸಿ, ಕೋಪದಿಂದ ಅವನ ಮೇಲೆ ಎರಗಿದನು. ಸಂಜೀವಕನು ತನಗೆ ಸಿಂಹದ ಉಗುರಿನಿಂದ ಗಾಯವಾದರೂ ತನ್ನ ಕೊಂಬುಗಳಿಂದ ಸಿಂಹದ ಹೊಟ್ಟೆಗೆ ತಿವಿದು ಹೇಗೋ ಪಿಂಗಲಕನಿಂದ ಬಿಡಿಸಿಕೊಂಡು ಕೊಂಬುಗಳಿಂದ ಆತನನ್ನು ಕೊಲ್ಲುವ ಉದ್ದೇಶದಿಂದ ಯುದ್ಧ ಮಾಡಲು ಸಜ್ಜಾಗಿ ನಿಂತನು. ಹೀಗೆ ಇವರಿಬ್ಬರೂ ಒಬ್ಬರನ್ನೊಬ್ಬರು ಕೊಲ್ಲಲು

71. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–399ಪು–254,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

72. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ–1–12, ಪು – 92–95.,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

ಹವಣಿಸುತ್ತಿರುವ ಅವರನ್ನು ನೋಡಿ ಕರಟಕನು ದಮನಕನಿಗೆ ಹೇಳಿದನು–" ಎಲೈ ಮೂರ್ಖನೇ, ಇವರಿಬ್ಬರ ನಡುವೆ ವಿರೋಧವನ್ನು ತಂದಿಟ್ಟು ನೀನು ಸರಿಯಾದ ಕೆಲಸ ಮಾಡಲಿಲ್ಲ. ನಿನಗೆ ನೀತಿತತ್ವವೇ ತಿಳಿದಿಲ್ಲ." ಎಂದು ರಾಜನೀತಿ, ಯುದ್ಧನೀತಿ, ಮಂತ್ರಾಲೋಚನೆಯ ಕ್ರಮಗಳನ್ನು, ಮಂತ್ರಿಯ ಕರ್ತವ್ಯವನ್ನು ವಿವರಣಾತ್ಮಕವಾಗಿ ತಿಳಿಹೇಳಿದನು. ಕೊನೆಯಲ್ಲಿ ಮೂರ್ಖನಿಗೆ ಉಪದೇಶ ಮಾಡಿ ಏನು ಉಪಯೋಗ ಎಂದು ಹೇಳುತ್ತಾ, ಒಂದು ಉಕ್ತಿಯಿದೆ–

नानाम्यं नमते दारु नाश्मनि स्यात्क्षुरक्रिया ।

सूचीमुखं विजानीहि नाशिष्यायोपदिश्यते ॥[73]

ಅಂದರೆ ನಮಸ್ಕರಿಸಲು ಯೋಗ್ಯವಲ್ಲದ ಮರದ ದಿಮ್ಮಿಗೆ ಯಾರೂ ನಮಿಸುವುದಿಲ್ಲ. ಕಲ್ಲಿಗೆ ಕ್ಷೌರಕರ್ಮವನ್ನು ಮಾಡುವುದಿಲ್ಲ, ಅಯೋಗ್ಯ ಶಿಷ್ಯನಿಗೆ ಯಾರೂ ಉಪದೇಶಿಸುವುದಿಲ್ಲ. ಇದನ್ನು ಸೂಚೀಮುಖನನ್ನು ನೋಡಿ ತಿಳಿಯಬೇಕು. ಅದೇನೆಂದು ದಮನಕನು ಕೇಳಲು ಕರಟಕನು **ಸೂಚೀಮುಖ–ವಾನರ ಕಥೆ**ಯನ್ನು ಹೇಳಿದನು.

ವಿಷ್ಣುಶರ್ಮರು ಪಂಚತಂತ್ರ – ಮಿತ್ರಭೇದ ತಂತ್ರದ ಉಪಕಥೆ "ಸೂಚೀಮುಖ – ವಾನರ ಕಥೆಯನ್ನು ಹೇಳುತ್ತಾ ಒಂದು ಒಳ್ಳೆಯ ಬದುಕಿನ ನೀತಿ ಸನ್ನಿವೇಶವನ್ನು ಒದಗಿಸಿ – ಕಂಡಕಂಡವರಿಗೆಲ್ಲ ಉಪದೇಶ ಮಾಡಬಾರದು ಎಂಬುದನ್ನು ಬಹಳ ಸ್ವಾರಸ್ಯಕರವಾಗಿ ನಿರೂಪಿಸಿದ್ದಾರೆ. ಹಾಗೆಯೇ ರಾಜನೀತಿಯ ಬಗ್ಗೆಯೂ ಆಲೋಚನೆ ಬೆಳೆಸಿದ್ದಾರೆ. ಯಾವ ರಾಜರು ಭೃತ್ಯರೊಡನೆ ವಿಧವಿಧವಾದ ಸ್ವಾರಸ್ಯಕರವಾದ ಕಥಾಗೋಷ್ಠಿಗಳೊಂದಿಗೆ ಕಳೆಯುವರೋ ಹಾಗೂ ಬಿಲ್ಲುಬಾಣಗಳನ್ನು ಬಳಸುವ ಶ್ರಮವನ್ನು ಮಾಡುವುದಿಲ್ಲವೋ, ಅವರ ಸಂಪತ್ತನ್ನು ಶತ್ರುಗಳು ಅನುಭವಿಸುತ್ತಾರೆ. ಆದ್ದರಿಂದ ಮೂರ್ಖನಿಗೆ ಉಪದೇಶ ಮಾಡಿ ಏನು ಪ್ರಯೋಜನ? ಅದರಿಂದ ದೋಷವೇ ಹೊರತು ಒಳ್ಳೆಯದಾಗುವುದಿಲ್ಲ. ನಮಸ್ಕರಿಸಲು ಯೋಗ್ಯವಲ್ಲದ ಮರದ ದಿಮ್ಮಿಗೆ ಯಾರೂ ನಮಿಸುವುದಿಲ್ಲ. ಕಲ್ಲಿಗೆ ಕ್ಷೌರವನ್ನು ಮಾಡುವುದಿಲ್ಲ. ಅಯೋಗ್ಯ ಶಿಷ್ಯನಿಗೆ ಯಾರೂ ಉಪದೇಶಿಸುವುದಿಲ್ಲ. ಇದನ್ನು ಸೂಚಿಮುಖನನ್ನು ನೋಡಿ ತಿಳಿಯಬೇಕು. ನಿರಂತರ ಸೋಲಿನಿಂದ ಕಂಗೆಟ್ಟವನನ್ನೂ, ಜೂಜಾಟದಲ್ಲಿ ತೊಡಗಿದ್ದವನನ್ನೂ, ದುರ್ವ್ಯಸನಿಯನ್ನೂ, ಮೂರ್ಖನನ್ನೂ ನುಡಿಸಿಯೂ ಫಲವಿಲ್ಲವಂತೆ. ಮೂರ್ಖರಾಗಿಯೇ ಉಳಿದರೆ, ಅಂತಹವರಿಗೆ ಯಾರೂ ಬುದ್ಧಿ ಹೇಳುವುದಿಲ್ಲ,

73. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–417,ಪು–270,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಹೇಳಿದರೂ ಪ್ರಯೋಜನವಿಲ್ಲ.[74] ಸರ್ವಜ್ಞ ಎಷ್ಟು ಸೊಗಸಾಗಿ ಹೀಗೆ ಹೇಳಿರುವುದನ್ನು ಸ್ಮರಿಸಿಕೊಳ್ಳಬಹುದು. "ಮೂರ್ಖಂಗೆ ನೂರ್ಕಾಲ ಬುದ್ಧಿ ಹೇಳಿದರೂ ಗೋರ್ಕಲ್ಲ ಮೇಲೆ ಮಳೆ ಸುರಿದಂತೆ ಸರ್ವಜ್ಞ" ಇದು ರಾಜಕುಮಾರಿಗೆ ಇದು ಒಂದು ತಿಳುವಳಿಕೆ. ಮೂರ್ಖರಾಗೇ ಉಳಿದರೆ ಎಲ್ಲೆಲ್ಲೂ ಬೆಲೆಯಿಲ್ಲ. ಎಲ್ಲರಿಂದಲೂ ನಿಕೃಷ್ಟ ವಾಗಿ ಕಾಣಲ್ಪಡುತ್ತಾರೆ. ಇದು ಅವರಿಗೆ ಒಂದು ಎಚ್ಚರಿಕೆಯೂ ಹೌದು. ಹೀಗೊಂದು ಉಕ್ತಿಯಿದೆ ಎಂದು ಕರಟಕನು ಹೇಳುತ್ತಾನೆ:-

उपदेशो न दातव्यो यादृशे तादृशे जने ।

पश्य वानरमूर्खेण सुगृही निर्गृहीकृतः ॥[75]

ಎಂಥೆಂಥವರಿಗೆಲ್ಲ ಉಪದೇಶ ಮಾಡಬಾರದು, ನೋಡು ಮೂರ್ಖ ಕೋತಿಯೊಂದು ಗುಬ್ಬಚ್ಚಿಗೆ ಮನೆಯಿಲ್ಲದಂತೆ ಮಾಡಿತು. ದಮನಕನು ಅದೇನೆಂದು ಕೇಳಲು ಕರಟಕನು **ವಾನರ ಹಾಗೂ ಗುಬ್ಬಚ್ಚಿ ದಂಪತಿ ಕಥೆ** ಹೇಳುತ್ತಾನೆ.

ಮತ್ತೆ ಮುಂದಿನ ಕಥೆ- ವಾನರ ಹಾಗೂ ಗುಬ್ಬಚ್ಚಿ ದಂಪತಿ ಕಥೆಯಲ್ಲಿ ಎಂಥೆಂಥವರಿಗೆಲ್ಲ ಉಪದೇಶ ಮಾಡಬಾರದು. ಮಾಡಿದರೆ, ಕಪಿಗೆ ಬುದ್ಧಿ ಹೇಳಹೋಗಿ ತನ್ನ ಗೂಡನ್ನೇ ಕಳೆದುಕೊಂಡ ಗುಬ್ಬಿಯ ಕಥೆಯ ಹಾಗೆ ಆದೀತು ಎಂದು ಹೇಳುತ್ತಾ, ಮುಂದುವರೆಸಿ, ಕಂಡಕಂಡವರಿಗೆ, ಕೇಳದೇ ಇರುವಾಗ ಉಪದೇಶ ಮಾಡಲು ಹೋದರೆ ಅನರ್ಥವಾದೀತು. ಹೋಗುತ್ತಿದ್ದ ಮಾರಿಯನ್ನು ಸುಮ್ಮನೆ ಮೈಮೇಲೆ ಎಳೆದುಕೊಳ್ಳಬಾರದು. ಉಪದೇಶ ಮಾಡಬೇಕೆಂದರೆ ಸಜ್ಜನರಿಗೆ ಹೇಳಬೇಕು. ಪಾಂಡಿತ್ಯ ಪೂರ್ಣವಾದ ಬೋಧನೆಯನ್ನು ಅಜ್ಞಾನಿಗಳಾದವರಿಗೆ ಮಾಡಿದರೆ ಏನೂ ಫಲವಿಲ್ಲ. ಅದು ದೀಪವನ್ನುರಿಸಿ ಮಡಕೆಯನ್ನು ಅದರ ಮೇಲೆ ಕವುಚಿ ಇಟ್ಟಂತೆ. ಅದರಿಂದ ಕೊಡದೊಳಕ್ಕೂ ಬೆಳಕಿಲ್ಲ, ಹೊರಕ್ಕೂ ಬೆಳಕಿಲ್ಲ. ಹಾಗೆಯೇ ವ್ಯರ್ಥ. ಇಲ್ಲಿ ರಾಜಕುಮಾರರಿಗೆ ಒಂದು ಜಾಗೃತಿ ಮೂಡಿಸಿ, ಅವರುಗಳು ಆಸಕ್ತಿಯನ್ನುಳಿಸಿಕೊಂಡು, ವಿಚಾರಗಳನ್ನು ಸರಿಯಾಗಿ ಮನದಟ್ಟುಮಾಡಿಕೊಂಡು ಅರ್ಥಪೂರ್ಣವಾಗಿ ಕಲಿಯಲೆಂದು ಪ್ರೇರೇಪಿಸುತ್ತಾ, ಮುಂದಿನ ಅಪೇಕ್ಷಿತ ಗುರಿಯನ್ನು ಸಾಧಿಸಲು ಪ್ರೋತ್ಸಾಹಿಸಿದ್ದಾರೆ. ಇದೇ ಸನ್ನಿವೇಶದಲ್ಲಿ ವಿಷ್ಣುಶರ್ಮರು ರಾಜಕುಮಾರರಿಗೆ ರಾಜನೀತಿ ಶಿಕ್ಷಣವನ್ನು ಕರಟಕನ ಮೂಲಕ ಅಭಿವ್ಯಕ್ತಿಗೊಳಿಸಿದ್ದಾರೆ. ಚತುರೋಪಾಯಗಳಲ್ಲಿ ಸಾಮವನ್ನು

---

74. **ಭರತ.ಬಿ.ರಾವ್,** ಪಂಚತಂತ್ರ,-ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ-1-13. ಪು-98.,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560004.
75. **ಸುಧಾಕರ್ ಮಾಲವೀಯ,** ಶ್ರೀವಿಷ್ಣುಶರ್ಮವಿರಚಿತ ಪಂಚತಂತ್ರಂ, ಮಿತ್ರಭೇದಃ-ಶ್ಲೋ-421,ಪು-273.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಬಳಸಿ ಗೆಲ್ಲುವವನು ಸರ್ವತ್ರ ಪೂಜ್ಯ ನಾಗುತ್ತಾನೆ. ಅದರ ಬದಲಿಗೆ ಪಾಪಕರವಾದ ದಂಡವನ್ನೇ ಮುಂದೆ ಮಾಡಿದರೆ ಮಂತ್ರಿಸ್ಥಾನಕ್ಕೆ ಅವನು ಅರ್ಹನಾಗುವುದಿಲ್ಲ. ಕತ್ತಲೆಯನ್ನು ಬೆಳಕಿನಿಂದ ಕಳೆಯಬಹುದೇ ಹೊರತು ಬಲಾತ್ಕಾರದಿಂದಲ್ಲ. ಅಸಾಧ್ಯ ಸಾಹಸದಿಂದ ಸಾಧಿಸಬಹುದಾದ ಕಾರ್ಯವನ್ನು ಸಾಮೋಪಾಯದಿಂದ ಸಾಧಿಸಿದ ಮಂತ್ರಿಗಳು ನೃಪನಿಗೆ ಪ್ರಿಯರಾಗುತ್ತಾರೆ. ಕ್ರಮ ತಪ್ಪಿ ಫಲಕೊಡುವ ಕಾರ್ಯವನ್ನು ಯಾರು ಮಾಡುತ್ತಾರೋ ಅವರು ದಂಡಾಧಮರು ಎನಿಸಿಕೊಳ್ಳುತ್ತಾರೆ. ನೀತಿಶಾಸ್ತ್ರ ನಿಪುಣನಲ್ಲದ, ರಾಜಭಕ್ತಿ, ಧೈರ್ಯ, ಇಂದ್ರಿಯನಿಗ್ರಹ, ನಿಸ್ವಾರ್ಥ ಗುಣಹೀನನಾದವನ ಮಾತನ್ನು ವಂಶಪರಂಪರೆಯಿಂದ ಬಂದ ಸಚಿವನೆಂಬ ಏಕೈಕ ಕಾರಣದಿಂದ ಪಾಲಿಸಿದ ರಾಜನಿಗೆ ಎಂತಹ ವಿಷಮ ಸ್ಥಿತಿಗೆ ತಲುಪುವ ಅವಸ್ಥೆ ಒದಗಿತು. ಇದರಿಂದ ವಂಶಕ್ಕೆ ಅಪಕೀರ್ತಿಬಂದಂತಾಗುತ್ತಿತ್ತು. ನಿನ್ನದು ಧರ್ಮಬುದ್ಧಿಯನ್ನು ವಂಚಿಸಿದ ದುಷ್ಟಬುದ್ಧಿಯ ಕಥೆಯಂತಾಯ್ತು ಎಂದು ಕರಟಕನು ದಮನಕನಿಗೆ ಹೇಳಿದನು.[76]

ಈ ಸಂದರ್ಭಗಳಿಂದ ರಾಜಕುಮಾರರು ತಮ್ಮ ವರ್ತನೆಗಳಲ್ಲಿರುವ ದೋಷಗಳನ್ನು ಅರ್ಥ ಮಾಡಿಕೊಂಡು, ಒಳ್ಳೆಯ ಆಲೋಚನೆ ಹಾಗೂ ಉತ್ತಮ ವಿವೇಚನೆಯಿಂದ ಅಪೇಕ್ಷಿತ ಮಾರ್ಗದಲ್ಲಿ ಪರಿವರ್ತನೆ ಹೊಂದಲು ಹಾಗೂ ಒಳ್ಳೆಯ ಗುಣಶೀಲಗಳನ್ನು ಬೆಳೆಸಿಕೊಳ್ಳುವ ಬಗ್ಗೆ ಪ್ರೇರಿತರಾದರು. ಹೀಗೆ ಪಂಚತಂತ್ರ ನೀತಿಕಥೆಗಳು ಬಹಳ ಒಳ್ಳೆಯ ದೃಷ್ಟಾಂತಗಳನ್ನು ಒದಗಿಸಿ, ಮುಂದೆ ರಾಜ್ಯಾಡಳಿತವನ್ನು ವಹಿಸಿಕೊಳ್ಳಬೇಕಾಗಿರುವ ರಾಜಕುಮಾರರು ಹೇಗೆ ಉತ್ತಮ ವ್ಯಕ್ತಿತ್ವ ನಿರ್ಮಾಣ ಮಾಡಿಕೊಂಡು ಬದುಕಿನ ಸಾರ್ಥಕತೆಗೆ ಪ್ರಯತ್ನ ಶೀಲರಾಗಬಹುದು ಎಂಬ ಬಗ್ಗೆ ಒಳ್ಳೆಯ ಮಾರ್ಗದರ್ಶನ ಮಾಡಿವೆ. ಇಂತಹ ಅನುಭವಗಳು ಬೇರೆಡೆಯಲ್ಲಿ ಸಿಗುವುದು ಬಹಳ ದುರ್ಲಭ. ಅದಕ್ಕೇ ಹೇಳುವುದು ಸಮರ್ಥ ಗುರುಗಳನ್ನು ಪಡೆಯುವುದು ಒಂದು ಅದೃಷ್ಟವೇ. ಮುಂದುವರಿದು ದಮನಕನು ವಾನರ ಹಾಗೂ ಗುಬ್ಬಚ್ಚಿ ದಂಪತಿ ಕಥೆಯನ್ನು ಮುಗಿಸುತ್ತಾ ಒಂದು ಉಕ್ತಿಯನ್ನು ಹೇಳುತ್ತಾನೆ.

धर्मबुद्धिः कुबुद्धिश्च द्वावेतौ विदितौ मम ।

पुत्रेण व्यर्थपाण्डित्यात्पिता धूमेन घातितः ॥[77]

ಅಂದರೆ " ನನಗೆ ಧರ್ಮ ಬುದ್ಧಿ ಮತ್ತು ಪಾಪ ಬುದ್ಧಿಯೆಂಬ ಇಬ್ಬರ ಬಗ್ಗೆ ಗೊತ್ತು. ಪಾಪಬುದ್ಧಿಯು ವ್ಯರ್ಥ ಪಾಂಡಿತ್ಯದಿಂದ ತನ್ನ ತಂದೆಯನ್ನೇ ಹೊಗೆಯಲ್ಲಿ ಸಿಲುಕಿಸಿ ಕೊಂದನು ದಮನಕ ಅದೇನೆಂದು ಕೇಳಲು ಕರಟಕನು **ಧರ್ಮಬುದ್ಧಿ ಮತ್ತು ಪಾಪಬುದ್ಧಿ ಕಥೆ**ಯನ್ನು ಹೇಳಿದನು.

---

76. **ಭರತ.ಬಿ.ರಾವ್,** ಪಂಚತಂತ್ರ,-ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ-1-14, ಪು-99.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560004.
77. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-429,ಪು-277,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಒಂದಾನೊಂದು ಸ್ಥಳದಲ್ಲಿ ಧರ್ಮ ಬುದ್ಧಿ ಮತ್ತು ಪಾಪಬುದ್ಧಿ ಎಂಬ ಇಬ್ಬರು ಮಿತ್ರರು ವಾಸಿಸುತ್ತಿದ್ದರು. ಇಬ್ಬರೂ ಪರಸ್ಪರ ಮಾತನಾಡಿಕೊಂಡು ದೇಶಾಂತರ ಹೋಗಿ ಅಪಾರ ಹಣ ಸಂಪಾದನೆ ಮಾಡಿಕೊಂಡು ಬರುವ ಯೋಜನೆ ಹಾಕಿಕೊಂಡು ಹೊರಟೇಬಿಟ್ಟರು. ಆನಂತರ ಅಂದುಕೊಂಡಂತೆಯೇ ಅವರಿಬ್ಬರೂ ಬೇಕಾದಷ್ಟು ಹಣವನ್ನು ಗಳಿಸಿ ಸಂತೋಷಗೊಂಡು ಮನೆಯ ಕಡೆಗೆ ಹೊರಟರು. ಒಂದು ಉಕ್ತಿಯಿದೆ

प्राप्तविद्यार्थशिल्पानां देशान्तरनिवासिनाम् ।

क्रोशमात्रोऽपि भूभागः शतयोजनवद्भवेत् ॥[78]

ವಿದೇಶದಲ್ಲಿದ್ದುಕೊಂಡು ವಿದ್ಯೆ, ಹಣ ಮತ್ತು ಕಲೆಯನ್ನು ಸಂಪಾದಿಸಿಕೊಂಡು ಸ್ವದೇಶಕ್ಕೆ ಮರಳುವಾಗ ಕಾಲುಯೋಜನ ದಾರಿಯು ಶತಯೋಜನದಂತೆ ಭಾಸವಾಗುತ್ತದೆ. ಇನ್ನೇನು ದೇಶದ ಹತ್ತಿರ ಬರುತ್ತಿರುವಾಗ ಪಾಪಬುದ್ಧಿಯು ಧರ್ಮಬುದ್ಧಿಗೆ ಒಂದು ಸಲಹೆ ಮಾಡಿದನು. ಅದೇನೆಂದರೆ, ಎಲ್ಲಾ ಹಣವನ್ನೂ ಮನೆಗೆ ಒಯ್ಯುವುದು ತರವಲ್ಲ. ಇಲ್ಲೇ ಸ್ವಲ್ಪ ಕಾಡಿನಲ್ಲಿ ನೆಲದಲ್ಲಿ ಹೂತಿಟ್ಟು ಉಳಿದದ್ದನ್ನು ತೆಗೆದುಕೊಂಡು ಹೋಗೋಣ. ಅವಶ್ಯಕವಾಗಿ ಬೇಕಾದಾಗ ಬಂದು ತೆಗೆದುಕೊಂಡು ಹೋಗೋಣ. ಅದೂ ಅಲ್ಲದೆ ಹಣವಿದೆಯೆಂದರೆ ಎಲ್ಲೆಡೆಯೂ ಪೀಡಿಸುತ್ತಾರೆ. ಪಾಪಬುದ್ಧಿಯು ಅನ್ವರ್ಥನಾಮದಂತೆ ಕೆಟ್ಟ ಯೋಚನೆಯವನೇ ಹೌದು. ಪಾಪ ಧರ್ಮಬುದ್ಧಿ ಒಪ್ಪಿಕೊಂಡು ಹಾಗೆಯೇ ಮಾಡಿದರು. ಮತ್ತೊಂದು ದಿನ ಪಾಪಬುದ್ಧಿ ಕಾಡಿಗೆ ತೆರಳಿ ಆ ಎಲ್ಲಾ ಹಣವನ್ನೂ ತೆಗೆದುಕೊಂಡು ಗುಂಡಿಯನ್ನು ಮುಚ್ಚಿ ತನ್ನ ಮನೆಗೆ ಬಂದು ಏನೂ ಗೊತ್ತಿಲ್ಲದವನಂತಿದ್ದುಬಿಟ್ಟನು. ಹೀಗೆ ಕಾಲ ಕಳೆಯಿತು. ಒಮ್ಮೆ ದುಡ್ಡಿನ ಅಭಾವವುಂಟಾಗಿ ಅಡಗಿಸಿಟ್ಟಿದ್ದ ಸ್ಥಳಕ್ಕೆ ಹೋಗಿ ಸ್ವಲ್ಪ ಹಣ ತೆಗೆದುಕೊಂಡು ಬರುವಂತೆ ಯೋಚಿಸಲಾಯಿತು. ಹಾಗೇ ಆಗಲೆಂದು ಹೋಗಿ ನೋಡಿದರೆ ಅಲ್ಲೇನಿದೆ? ಖಾಲಿ ಪಾತ್ರೆ!! ಧರ್ಮಬುದ್ಧಿಗಿಂತ ಮೊದಲೇ ಪಾಪಬುದ್ಧಿಯು ತಲೆ ಚಚ್ಚಿಕೊಳ್ಳುತ್ತಾ, ಧರ್ಮಬುದ್ಧಿಯೇ ಹಣವನ್ನು ಕದ್ದಿದ್ದಾನೆಂದು ವಾದಮಾಡಿದನು. ಏಕೆಂದರೆ "ಅದು ಅವನಿಗೆ ಮಾತ್ರ ಗೊತ್ತಿರುವುದು" ಎಂದು. ಅಂತಿಮವಾಗಿ ಧರ್ಮಾಧಿಕಾರಿಗಳಿಗೆ ದೂರನ್ನೂ ಸಲ್ಲಿಸಲಾಯಿತು. ಅವರು ಇದರ ನ್ಯಾಯ ತೀರ್ಮಾನಕ್ಕೆ ಶಪಥಮಾರ್ಗವನ್ನು ಸೂಚಿಸಿದರು. ಪಾಪಬುದ್ಧಿಯು ಇದನ್ನೊಪ್ಪಲಿಲ್ಲ. ಈ ವಿಷಯದಲ್ಲಿ ವೃಕ್ಷದೇವತೆಗಳು ಸಾಕ್ಷಿಯಾಗಿ ನಿಲ್ಲುವರು ಎಂದು ಹೇಳಿದನು. ಧರ್ಮಾಧಿಕಾರಿಗಳಿಗೆ ಇದು ಸರಿಯೆನ್ನಿಸಿ, ದೇವತೆಗಳೇ ಸಾಕ್ಷಿ ಹೇಳುವಾಗ ಬೇರೆ ಏನು ಹೇಳುವುದಿದೆ? ಎಂದರು.

---

78. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-432,ಪು-279,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಈ ಮಧ್ಯದಲ್ಲಿ ಪಾಪಬುದ್ಧಿಯು ಮನೆಗೆ ಹೋಗಿ ತನ್ನ ತಂದೆಗೆ ಇಷ್ಟವಿಲ್ಲದಿದ್ದರೂ, ಬಹಳ ಇಕ್ಕಟ್ಟಿಗೆ ಸಿಕ್ಕಿಸಿ, ಅಲ್ಲೇ ಹತ್ತಿರದಲ್ಲಿರುವ ಶಮೀವೃಕ್ಷದಲ್ಲಿರುವ ದೊಡ್ಡ ಪೊಟರೆಯಲ್ಲಿ ಕುಳಿತುಕೊಂಡು ಧರ್ಮಬುದ್ಧಿಯೇ ಈ ಹಣವನ್ನು ಕದ್ದಿರುವುದು ಎಂದು ಹೇಳುವಂತೆ ಸಿದ್ಧಮಾಡಿಬಿಟ್ಟನು. ಅದರಂತೆಯೇ ಎಲ್ಲವೂ ನಡೆದೇ ಹೋಯಿತು. ಧರ್ಮಬುದ್ಧಿಯ ತಪ್ಪಿಗೆ ಶಾಸ್ತ್ರೋಕ್ತವಾಗಿ ಶಿಕ್ಷೆಯ ಬಗ್ಗೆ ವಿಚಾರ ಪ್ರಾರಂಭವಾಯಿತು. ಧರ್ಮಬುದ್ಧಿಯು ಆ ಮರದ ಪೊಟರೆಗೆ ಒಣಗಿದ ಎಲೆ ಮುಂತಾದವುಗಳನ್ನು ಹಾಕಿ ಬೆಂಕಿಯನ್ನು ಹೊತ್ತಿಸಿದನು ಪೊಟರೆಯಲ್ಲಿ ಬೆಂಕಿ ಉರಿಯುತ್ತಿರಲು, ಅದರೊಳಗಿಂದ ಅರೆಬೆಂದ ದೇಹವುಳ್ಳ, ಕಣ್ಣುಗಳು ಸಿಡಿದುಹೋಗಿ ಕರುಣಾಜನಕವಾಗಿ ರೋಧಿಸುತ್ತಾ ಪಾಪಬುದ್ಧಿಯ ತಂದೆಯು ಹೊರಗೆ ಬಂದನು. ಜನರೆಲ್ಲಾ ವಿಚಾರಿಸಲು "ಇದೆಲ್ಲವೂ ಪಾಪಬುದ್ಧಿಯು ಕೆಲಸ" ಎಂದು ಹೇಳಿ ಸತ್ತುಹೋದನು. ರಾಜಪುರುಷರು ಕೂಡಲೇ ಪಾಪಬುದ್ಧಿಯನ್ನು ಅದೇ ಶಮೀವೃಕ್ಷದ ಕೊಂಬೆಗೆ ಕಟ್ಟಿಹಾಕಿ, ಧರ್ಮಬುದ್ಧಿಯನ್ನು ಹೊಗಳುತ್ತಾ –

उपायं चिन्तयेत् प्राज्ञस्तथाऽपायं च चिन्तयेत् ।

पश्यतो बकमूर्खस्य नकुलेन हता बकाः ॥[79]

ಬುದ್ಧಿವಂತನು ಉಪಾಯವನ್ನು ಮತ್ತು ಅಪಾಯದ ಬಗ್ಗೆಯೂ ಚಿಂತಿಸಬೇಕು. ಇಲ್ಲದಿದ್ದರೆ ಮೂರ್ಖ ಬಕವು ನೋಡುತ್ತಿದ್ದ ಹಾಗೆ ಮುಂಗುಸಿಯು ಎಲ್ಲಾ ಬಕಗಳನ್ನು ತಿಂದಹಾಗೆ ಆಗುತ್ತದೆ. ಧರ್ಮಬುದ್ಧಿಯು ಅದೇನೆಂದು ಕೇಳಲು, ರಾಜಪುರುಷರು **ಮೂರ್ಖಬಕ ಹಾಗೂ ಮುಂಗುಸಿಯ ಕಥೆ**ಯನ್ನು ಹೇಳಿದರು.

ಈ ಕಥೆಯಲ್ಲಿ ಬಕವೇನೋ ಸರ್ಪದ ಸಾವಿಗೆ ಉಪಾಯವನ್ನು ನಿರೀಕ್ಷಿಸಿದ್ದು ಸರಿ. ತನ್ನಿಂದಾಗದಿದ್ದರೆ ಇನ್ನೊಬ್ಬರಿಂದ ಮಾಡಿಸಿಕೊಳ್ಳಬಹುದು. ಆ ಇನ್ನೊಬ್ಬ ಯಾರಾಗಬೇಕು ಎಂಬುದು ಮುಖ್ಯ. ಬಕವು ತನ್ನ ಆಹಾರದಲ್ಲಿ ಒಂದಾದ ಏಡಿಯಲ್ಲಿ ಉಪಾಯವನ್ನು ಕೇಳಿದರೆ ಅದು ಸರಿಯಾದ ದಾರಿ ತೋರಿಸೀತೇ? ಖಂಡಿತವಾಗಿಯೂ ಇಲ್ಲಿ ಉಪಾಯಕ್ಕೆ ಬದಲಾಗಿ ಅಪಾಯವಾಗುವ ಸಲಹೆಯನ್ನು ಕೊಟ್ಟೀತು ಅಲ್ಲ, ಕೊಟ್ಟೇಬಿಟ್ಟಿತು. ಅದರಿಂದ ಅದರ ವೈರಿಕುಲವೇ ನಾಶಹೊಂದಿತು. ಶತ್ರುಕುಲ ನಾಶದ ಯೋಚನೆಯ ಹೊತ್ತಲ್ಲಿ ಹೃದಯವನ್ನು ಕಲ್ಲು ಮಾಡಿಕೊಳ್ಳಬೇಕು. ಆಮೇಲೆ ಶತ್ರುಶೇಷವೂ ಉಳಿಯದಂತಹ ಸಲಹೆ ನೀಡಬೇಕು ಎಂದುಕೊಳ್ಳುತ್ತಾ ಸಲಹೆ ಕೊಟ್ಟಿತ್ತು. ಈ ಸಂದರ್ಭದಲ್ಲಿ ಸಹವಾಸ ಮಾಡಲು ಅರ್ಹರು ಯಾರು ಎಂಬುದರ

79. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ- ಮಿತ್ರಭೇದ, ಶ್ಲೋ-439, ಪು-285,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಬಗ್ಗೆ ಒಳ್ಳೆಯ ಆಲೋಚನೆ ಹಾಗೂ ಉಪಾಯವನ್ನು ಚಿಂತಿಸುವ ಸಮಯದಲ್ಲಿ ಅಪಾಯವನ್ನೂ ಯೋಚಿಸಿ ಕಾರ್ಯಸಾಧನೆ ಮಾಡಿಕೊಳ್ಳಬೇಕು ಎಂಬ ಬಗ್ಗೆ ರಾಜಕುಮಾರರಿಗೆ ಅರಿವು ಮೂಡಿಸಲಾಗಿದೆ.

ಸಹವಾಸ ಮಾಡಲು ಯಾರು ಅರ್ಹರು ಎಂಬ ವಿಚಾರವನ್ನು ಧರ್ಮಬುದ್ಧಿ ಮತ್ತು ಪಾಪಬುದ್ಧಿ ಕಥೆಯನ್ನು ಮುಗಿಸಿದ ಕರಟಕನು ದಮನಕನಿಗೆ ಎಚ್ಚರಿಸುತ್ತಾನೆ "ಮೂಢನೇ ನೀನೂ ಕೂಡ ಉಪಾಯವನ್ನು ಚಿಂತಿಸಿದೆಯೇ ಹೊರತು ಅಪಾಯವನ್ನು ಯೋಚಿಸಲೇ ಇಲ್ಲ. ನೀನು ಪಾಪಿಷ್ಠನೇ ಹೊರತು ಸಜ್ಜನನಲ್ಲ. ಪ್ರಭುವಿಗೆ ಪ್ರಾಣಸಂಕಟ ತಂದಿಟ್ಟ ನಿನ್ನನ್ನು ನಾನು ಸರಿಯಾಗಿ ಅರ್ಥೈಸಿಕೊಂಡೆ. ಸ್ವಯಂ ನೀನೇ ನಿನ್ನ ದುಷ್ಟತನ ಹಾಗೂ ಕುಟಿಲತೆಯನ್ನು ಪ್ರದರ್ಶಿಸಿಬಿಟ್ಟೆ. ನೀನು ಪ್ರಭುವನ್ನೇ ಈ ಪರಿಸ್ಥಿತಿಗೆ ದೂಡುವೆಯಾದಲ್ಲಿ ಇನ್ನು ನಮ್ಮಂತಹವರ ಪಾಡೇನು? ಆದ್ದರಿಂದ ನೀನು ನನ್ನ ಬಳಿಯಿಂದ ತೊಲಗು. ನಿನ್ನ ಸಹವಾಸ ಬೇಡ. ಇಂತಹ ಹೊಲಸು ಕಾರ್ಯವನ್ನು ಮಾಡಿದ ನಿನ್ನನ್ನು ಕ್ಷಮಿಸಿದ ಲೋಕಕ್ಕೆ ತಪ್ಪು ಸಂದೇಶ ಕೊಟ್ಟಂತಾಗುವುದು. ಹೀಗೊಂದು ನುಡಿಯಿದೆ.

तुलां लोहसहस्त्रस्य यत्र खादन्ति मूषकाः ।

राजन् तत्र हरेच्छयेनो बालकं नात्र संशयः ॥[80]

ಎಲ್ಲಿ ಲೋಹಸಹಸ್ರದಿಂದ ಮಾಡಲ್ಪಟ್ಟ ತಕ್ಕಡಿಯನ್ನು ಇಲಿಗಳು ತಿನ್ನುತ್ತವೆಯೋ, ಅಲ್ಲಿ ಬಾಲಕನೊಬ್ಬನನ್ನು ಗಿಡುಗವು ಹಿಡಿದುಕೊಂಡು ಹೋಗುವುದರಲ್ಲಿ ಸಂಶಯವೇ ಇಲ್ಲ. ಹಿಂದೊಮ್ಮೆ ಮುಂಗುಸಿಯೊಂದು ಬಕಸಂತಾನವನ್ನೇ ತಿಂದ ಕಥೆ ನೆನಪಾಗುತ್ತದೆ. ಏಡಿಯ ಸಹವಾಸ ಮಾಡಿ ಬಕಗಳೆಲ್ಲವನ್ನೂ ಬಲಿಕೊಟ್ಟ ಮೂರ್ಖ ಬಕದಂತಾಯಿತು.[81] ದಮನಕನು ಅದೇನೆಂದು ಕೇಳಲು ಕರಟಕನು **ಲೋಹತಕ್ಕಡಿ ಹಾಗೂ ವ್ಯಾಪಾರಿಯ ಮಗನ ಕಥೆ**ಯನ್ನುಹೇಳದನು.

ನಗರವೊಂದರಲ್ಲಿ ಜೀರ್ಣಧನ ಎಂಬ ಹೆಸರಿನ ವ್ಯಾಪಾರಿಯ ಮಗನೊಬ್ಬನಿದ್ದನು. ವ್ಯಾಪಾರದಲ್ಲಿ ಬಹಳ ನಷ್ಟವುಂಟಾಗಿ, ದೇಶಾಂತರ ಹೋಗುವ ಮನಸ್ಸು ಮಾಡಿದನು. ವ್ಯಾಪಾರಿಯ ಮನೆಯಲ್ಲಿ ಅವನ ಪೂರ್ವಜರು ಸಂಪಾದಿಸಿದ ಭಾರವಾದ ಲೋಹದ ತಕ್ಕಡಿಯೊಂದಿತ್ತು. ಅದನ್ನು ಒಬ್ಬ ಶ್ರೇಷ್ಠಿಯ ಬಳ ಅಡವಿಟ್ಟು

---

೮೦. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-442,ಪು-288,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

೮೧. **ಭರತ.ಬಿ.ರಾವ್,** ಪಂಚತಂತ್ರ,-ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ-ಪು-100-103.,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560004.

ದೇಶಾಂತರ ಹೋದನು. ಬಹುಕಾಲ ಕಳೆದು ಪುನಃ ಊರಿಗೆ ಬಂದಾಗ ಆ ಶ್ರೇಷ್ಠಿಯನ್ನು ಭೇಟಿಮಾಡಿ ಅಡವಿಟ್ಟ ತಕ್ಕಡಿಯನ್ನು ವಾಪಸ್ ಕೊಡಲು ಕೇಳಿದನು. ಶ್ರೇಷ್ಠಿಯು ತಕ್ಕಡಿ ಇಲ್ಲವೆಂದು, ಇಲಿಯು ತಿಂದುಬಿಟ್ಟಿತು ಎಂದು ಹೇಳಿದನು.

ಜೀರ್ಣಧನ ಹೇಳಿದನು– "ಇಲಿ ತಿಂದರೆ ನಿನ್ನ ದೋಷವೇನೂ ಇಲ್ಲ. ಸಂಸಾರವೆಂದರೆ ಹೀಗೆಯೇ. ಯಾವುದೂ ಶಾಶ್ವತವಲ್ಲ. ನಾನು ಈಗ ನದಿಗೆ ಸ್ನಾನಕ್ಕೆ ಹೋಗುತ್ತಿದ್ದೇನೆ ನಿನ್ನ ಮಗನಾದ ಧನದೇವನನ್ನು ನನ್ನ ಸ್ನಾನದ ಪರಿಕರಗಳನ್ನು ಹಿಡಿದುಕೊಳ್ಳಲು ಜೊತೆಗೆ ಕಳುಹಿಸಿಕೊಡು" ಎಂದನು. ಶ್ರೇಷ್ಠಿ ಕಳ್ಳತನ ಮಾಡಿದ್ದರಿಂದ ಹೆದರಿ ತನ್ನ ಮಗನನ್ನು ಕಳುಹಿಸಿಕೊಟ್ಟನು. ಸುಮ್ಮನೆ ಯಾರೂ ಇನ್ನೊಬ್ಬರ ಕೆಲಸ ಮಾಡುವುದಿಲ್ಲ. ಭಯ, ಲೋಭ ಅಥವಾ ಪ್ರಯೋಜನ ದೃಷ್ಟಿಯಿಂದ ಮಾತ್ರ ಮಾಡುತ್ತಾರೆ. ಪ್ರಯೋಜನವಿಲ್ಲದೆ ಎಲ್ಲಿ ಅತಿಯಾದ ಆದರ ಸಿಗುತ್ತದೋ ಅಲ್ಲಿ ಸಂದೇಹಪಡಬೇಕು. **"ಅತಿ ವಿನಯಂ ದೂರ್ತ ಲಕ್ಷಣಂ."** ಅನಂತರ ಜೀರ್ಣಧನನು ಸ್ನಾನ ಮುಗಿಸಿ, ಆ ಹುಡುಗನನ್ನು ಒಂದು ಬೆಟ್ಟದ ಗುಹೆಯಲ್ಲಿರಿಸಿ, ಗುಹೆಯನ್ನು ದೊಡ್ಡ ಬಂಡೆಯಿಂದ ಮುಚ್ಚಿ ಹಿಂದಿರುಗಿದನು. ಇವನು ಒಬ್ಬನೇ ಬಂದದ್ದನ್ನು ನೋಡಿ ಶ್ರೇಷ್ಠಿ ಮಗನೆಲ್ಲಿ? ಎಂದು ಜೀರ್ಣಧನನನ್ನು ಕೇಳಿದನು.

ಆಗ ಜೀರ್ಣಧನನು "ಸ್ನಾನಮಾಡಿ ಬರುವುದರೊಳಗೆ ನದಿ ದಡದಲ್ಲಿದ್ದ ಅವನನ್ನು ಒಂದು ಗಿಡುಗವು ಎತ್ತಿಕೊಂಡು ಹೋಯಿತು." ಎಂದನು. ಶ್ರೇಷ್ಠಿಯು ಕೋಪಗೊಂಡು, "ಸುಳ್ಳುಗಾರ, ಏನು ಗಿಡುಗವು ಬಾಲಕನನ್ನು ಅಪಹರಿಸಲಾಗುತ್ತದೆಯೇ? ನನ್ನ ಮಗನನ್ನು ಕೊಟ್ಟುಬಿಡು. ಇಲ್ಲದಿದ್ದರೆ ರಾಜನಲ್ಲಿ ದೂರು ಕೊಡುವೆ." ಎಂದನು. ಆಗ ಜೀರ್ಣಧನ – "ಸತ್ಯವಂತನೇ ಗಿಡಗವು ಬಾಲಕನನ್ನು ಅಪಹರಿಸಲು ಅಸಾಧ್ಯವಾದಂತೆ ಇಲಿಯು ಭಾರವಾದ ಲೋಹದ ತಕ್ಕಡಿಯನ್ನು ತಿನ್ನುವುದೂ ಕೂಡ ಅಸಾಧ್ಯವೇ. ಆದ್ದರಿಂದ ನೀನೇ ಸುಳ್ಳು ಹೇಳದೆ, ಮಗನು ಬೇಕೆಂದರೆ ತಕ್ಕಡಿಯನ್ನು ಕೊಡು ಎಂದನು. ಹೀಗೆ ಜಗಳ ಮುಂದುವರೆದು ಧರ್ಮಾಧಿಕಾರಿಗಳವರೆಗೂ ಹೋಯಿತು. ಶ್ರೇಷ್ಠಿಯು ದೊಡ್ಡ ಧ್ವನಿಯಿಂದ ಕಳ್ಳ, ನನ್ನ ಶಿಶುವನ್ನು ಅಪಹರಿಸಿದ್ದಾನೆ, ಅನ್ಯಾಯವಾಗಿದೆ ಎಂದು ಕೂಗಾಡಿದನು. ಧರ್ಮಾಧಿಕಾರಿಗಳು ಜೀರ್ಣಧನನಿಗೆ ಶ್ರೇಷ್ಠಿಯ ಮಗನನ್ನು ವಾಪಸ್ಸು ಮಾಡಲು ಹೇಳಿದರು. ಅದಕ್ಕೆ ಜೀರ್ಣಧನನು "ಏನು ಮಾಡಲಿ? ನಾನು ನೋಡನೋಡುತ್ತಿದ್ದಂತೆಯೇ ಗಿಡಗವೊಂದು ಬಾಲಕನನ್ನು ಹೊತ್ತುಕೊಂಡು ಹಾರಿತು.

"ಎಲ್ಲಾದರೂ ಗಿಡಗವು ಬಾಲಕನನ್ನು ಹೊತ್ತುಕೊಂಡು ಹೋಗಲು ಸಮರ್ಥವೇ, ಸಾಧ್ಯವೇ? ನೀನು ಹೇಳುತ್ತಿರುವುದು ಸುಳ್ಳು." ಎಂದು ಧರ್ಮಾಧಿಕಾರಿಗಳು ಹೇಳಿದರು. ಅದಕ್ಕೆ ಜೀರ್ಣಧನನು ಸ್ಪಷ್ಟವಾಗಿ

ಹೇಳುತ್ತಾನೆ – "ನನ್ನ ಮಾತನ್ನು ಕೇಳಿರಿ. ಭಾರವಾದ ಲೋಹದ ತಕ್ಕಡಿಯನ್ನು ಎಲ್ಲಿ ಇಲಿಯು ತಿನ್ನಬಲ್ಲದೋ ಅಲ್ಲಿ ಗಿಡುಗವು ಬಾಲಕನನ್ನು ಖಂಡಿತಾ ಅಪಹರಿಸಬಲ್ಲದು." ಧರ್ಮಾಧಿಕಾರಿಗಳು ನಡೆದ ವೃತ್ತಾಂತವನ್ನೆಲ್ಲ ತಿಳಿದು, ನಕ್ಕು ಇಬ್ಬರಿಗೂ ಬುದ್ಧಿ ಹೇಳಿ ಬಾಲಕ ಹಾಗೂ ತಕ್ಕಡಿಯನ್ನು ಒಬ್ಬರಿಗೊಬ್ಬರು ವಾಪಸ್ಸು ಕೊಡುವಂತೆ ಮಾಡಿದರು.[82]

ಕರಟಕನು ಮುಂದುವರೆಸುತ್ತಾ, ದಮನಕನನ್ನು ಕುರಿತು ಮೂರ್ಖನೇ, ಪಿಂಗಳಕನು ಸಂಜೀವಕನಲ್ಲಿ ಪ್ರಸನ್ನನಾಗಿರುವುದನ್ನು ಸಹಿಸದೆ ನೀನು ಈ ಅಭಾಸ ಮಾಡಿದೆ. ಪ್ರಾಯಶಃ ಸತ್ಕುಲಜಾತರನ್ನು ದುಶ್ಕುಲದಲ್ಲಿ ಹುಟ್ಟಿದವರು, ಐಶ್ವರ್ಯವಂತರನ್ನು ದುರ್ಭಾಗ್ಯವಂತರು; ದಾನಿಗಳನ್ನು ಜಿಪುಣರು; ಸರಳ ಜನರನ್ನು ದುಷ್ಟರು; ಸುಂದರ ಶರೀರವುಳ್ಳವರನ್ನು ಕುರೂಪಿಗಳು; ಸಂತೋಷದಲ್ಲಿರುವವರನ್ನು ದುಃಖದಲ್ಲಿರುವವರು; ನಾನಾ ಶಾಸ್ತ್ರ ಪರಿಣಿತರನ್ನು ಮೂರ್ಖರು ನಿಂದಿಸುವುದು ಸಹಜವೇ. ಹಾಗೆಯೇ ಪಂಡಿತರು ಮೂರ್ಖರಿಂದ; ಶ್ರೀಮಂತರು ಬಡವರಿಂದ; ವ್ರತನಿರತರು ಪಾಪಿಗಳಿಂದ; ಕುಲಸ್ತ್ರೀಯರು ವ್ಯಭಿಚಾರಣಿಗಳಿಂದ ದ್ವೇಷಿಸಲ್ಪಡುತ್ತಾರೆ. ಆದ್ದರಿಂದ ಮೂರ್ಖನೇ ನೀನು ಹಿತವೆಂದೆಣಿಸಿ ಅಹಿತವನ್ನೇ ಮಾಡಿದೆ. ಹೀಗೊಂದು ಉಕ್ತಿಯಿದೆ:

पण्डितोऽपि वरं शत्रुर्न मूर्खो हितकारकः ।

वानरेण हतो राजा विप्राश्चोरेण रक्षिताः ॥[83]

ಹಿತವನ್ನು ಮಾಡುವ ಮೂರ್ಖನಿಗಿಂತ ಪಂಡಿತನಾದ ಶತ್ರುವೇ ಮೇಲು. ಒಂದು ಕಥೆಯಲ್ಲಿ ಮೂರ್ಖ ಮಂಗನಿಂದ ರಾಜನು ಕೊಲ್ಲಲ್ಪಟ್ಟನು ಮತ್ತು ಬ್ರಾಹ್ಮಣರು ರಕ್ಷಿಸಲ್ಪಟ್ಟರು ಎಂದು ಹೇಳುತ್ತಾ **ನೃಪಸೇವಕ, ವಾನರ, ಕಳ್ಳ ಹಾಗೂ ಬ್ರಾಹ್ಮಣರ ಕಥೆ**ಯನ್ನು ಪ್ರಾರಂಭ ಮಾಡಿದನು.

ನೃಪಸೇವಕನಾಗಿದ್ದ ವಾನರವೊಂದು ನಿತ್ಯವೂ ಅತಿಶ್ರದ್ಧಾಭಕ್ತಿಯಿಂದ ರಾಜನ ಸೇವೆಯನ್ನು ಮಾಡುತ್ತಾ, ಅವನವಿಶ್ವಾಸವನ್ನು ಗಳಿಸಿ ಸ್ವತಂತ್ರವಾಗಿ ಅಂತಃಪುರದಲ್ಲೆಲ್ಲಾ ಸ್ವತಂತ್ರವಾಗಿ ಓಡಾಡಿ-ಕೊಂಡಿತ್ತು. ಒಮ್ಮೆ ರಾಜನು ನಿದ್ದೆ ಮಾಡುತ್ತಿದ್ದಾಗ ಈ ವಾನರನು ಬೀಸಣಿಕೆಯಿಂದ ಬೀಸುತ್ತಿತ್ತು. ಆಗ ಒಂದು ನೊಣ ಬಂದು ರಾಜನ ಎದೆಯ ಮೇಲೆ ಕೂತು ಹಿಂಸೆ ಮಾಡುತ್ತಿತ್ತು. ಮೊದಲೇ ಸ್ವಭಾವದಿಂದ ಚಂಚಲವಾದ ಮಂಗ ತೋಪದಿಂದ ಹರಿತವಾದ ಕತ್ತಿಯನ್ನು ತೆಗೆದುಕೊಂಡು ನೊಣದ ಮೇಲೆ ಬೀಸಿತು.

82. **ಭರತ.ಬಿ.ರಾವ್,** ಪಂಚತಂತ್ರ,-ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ-ಪು- 104-106,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560004.

83. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-450,ಪು-294,(1993) ಚೌಕಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಮೊದಲೇ ಸ್ವಭಾವದಿಂದ ಚುರುಕು, ನೊಣ ಹಾರಿ ಏಟನ್ನು ತಪ್ಪಿಸಿಕೊಂಡಿತು. ಅದೇ ಏಟು ರಾಜನ ಎದೆಗೆ ತಾಕಿ, ಅವನು ಸತ್ತುಹೋದನು. ಅದಕ್ಕೇ ಹೇಳುವುದು "ಚಿರಕಾಲ ಬದುಕಲಿಚ್ಛಿಸುವ ರಾಜನು ಮೂರ್ಖ ಮಂಗನನ್ನು ಸೇವಕನನ್ನಾಗಿ ಇಟ್ಟುಕೊಳ್ಳಬಾರದು. ಮತ್ತೊಂದು ಪುಟ್ಟ ಕಥೆ – ಕಳ್ಳ ಹಾಗೂ ಬ್ರಾಹ್ಮಣರು –ಒಬ್ಬ ಮಹಾ ವಿದ್ವಾಂಸನಾದ ಬ್ರಾಹ್ಮಣನು ಪೂರ್ವಜನ್ಮದ ಯೋಗದಿಂದ ಕಳ್ಳನಾಗಿದ್ದನು. ಅವನು ವಾಸಿಸುತ್ತಿದ್ದ ನಗರಕ್ಕೆ ನಾಲ್ಕು ಬ್ರಾಹ್ಮಣರು ಬೇರೆ ದೇಶದಿಂದ ಬಂದ ಹಲವು ವಸ್ತುಗಳ ವ್ಯಾಪಾರ ಮಾಡಿಕೊಂಡು ಚೆನ್ನಾಗಿ ಕಾಲಕಳೆಯುತ್ತಿರಲು, ಇವನು ಅವರನ್ನು ನೋಡಿ, ಅವರ ಸ್ನೇಹವನ್ನು ತನ್ನ ಮಧುರ ಹಿತವಚನಗಳ ಮೂಲಕ ಗಳಿಸಿಕೊಂಡನು. ಅವರ ಮನಸ್ಸಿನಲ್ಲಿ ವಿಶ್ವಾಸ ಮೂಡಿಸಿ ಅವರ ಸೇವೆ ಮಾಡಲಾರಂಭಿಸಿದನು. ಆದರೆ "ಯಾವ ಉಪಾಯದಿಂದ ಇವರ ಧನವನ್ನು ಕದಿಯಲಿ" ಎಂಬುದು ಇವನ ಯೋಚನೆ. ಇಲ್ಲೊಂದು ಉಕ್ತಿಯಿದೆ:–

असती भवति सलज्जा क्षारं नीरं च शीतलं भवति ।

दम्भी भवति विवेकी प्रियवक्ता भवति धूर्तजनः ॥[84]

"ವ್ಯಭಿಚಾರಿಣಿಯು ಲಜ್ಜಾವಂತಳಾಗಿರುತ್ತಾಳೆ, ಉಪ್ಪುನೀರು ತಣ್ಣಗಿರುತ್ತದೆ., ಕಪಟವ್ಯಕ್ತಿಯು ವಿವೇಕಿಯಾಗಿರುತ್ತಾನೆ. ಮತ್ತು ದೂರ್ತಜನರು ಪ್ರಿಯವಚನಗಳನ್ನು ನುಡಿಯುತ್ತಾರೆ." ಆ ಬ್ರಾಹ್ಮಣರು ಎಲ್ಲಾ ವಸ್ತುಗಳನ್ನು ಮಾರಿ ಬಹುಮೂಲ್ಯವಾದ ರತ್ನಗಳನ್ನು ಖರೀದಿಸಿದರು. ಸ್ವದೇಶಕ್ಕೆ ತೆರಳಲು ಅನುವಾದರು. ದೂರ್ತ ಬ್ರಾಹ್ಮಣನು ಚಿಂತೆಯಿಂದ ದುಃಖಗೊಂಡನು. ಇವನ ಮಾತಿನ ಚಮತ್ಕಾರದಿಂದ ಅವರ ಜೊತೆಯಲ್ಲಿ ಹೊರಡಲು ಒಪ್ಪಿಗೆ ಪಡೆದು ಸಿದ್ಧನಾದನು. ಇವನ ಯೋಜನೆಯೇನೆಂದರೆ, ದಾರಿಯಲ್ಲಿ ಬ್ರಾಹ್ಮಣರಿಗೆ ವಿಷವುಣಿಸಿ ಕೊಂದು ರತ್ನಗಳನ್ನು ಪಡೆದುಕೊಳ್ಳುವುದು.

ಆ ಐವರು ಹಳ್ಳಿ ನಗರಗಳನ್ನು ದಾಟಿಕೊಂಡು ಹೋಗುತ್ತಿರುವಾಗ, ಒಂದೆಡೆ ಕಾಗೆಯೊಂದು ಭವಿಷ್ಯ ನುಡಿಯಲು ಆರಂಭಿಸಿತು.– "ಏ ಏ ಬೇಡರೇ! ಓಡಿ ! ಓಡಿ ! ಕಾಲುಲಕ್ಷ ಹಣವಿರುವ ಧನಿಕರು ಹೋಗುತ್ತಿದ್ದಾರೆ. ಅವರನ್ನು ಕೊಂದು ಹಣವನ್ನು ಪಡೆದುಕೊಳ್ಳಿ!" ಬೇಡರು ಕಾಗೆಯ ನುಡಿಯನ್ನು ಕೇಳಿದೊಡನೆ ಹೋಗಿ ಆ ಬ್ರಾಹ್ಮಣರಿಗೆ ಹೊಡೆದು ವಸ್ತ್ರಗಳನ್ನು ಕಳಚಿ ನೋಡಿದಾಗ ಹಣವು ಸಿಗಲಿಲ್ಲ. ಕಾಗೆಯು ಎಂದೂ ಸುಳ್ಳು ಹೇಳಿದ್ದಿಲ್ಲ. ಆದ್ದರಿಂದ ನಿಮ್ಮಲ್ಲಿ ಹಣವಿದ್ದರೆ ಕೊಟ್ಟು ಬಿಡಿ. ಇಲ್ಲದಿದ್ದರೆ ನಿಮ್ಮೆಲ್ಲರನ್ನೂ

84. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ– ಮಿತ್ರಭೇದ, ಶ್ಲೋ–451, ಪು–296,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಕೊಂದು ಚರ್ಮ ಸುಲಿದು, ಅಂಗಾಂಗಗಳನ್ನು ಹುಡುಕಿ ಹಣವನ್ನು ತೆಗೆದುಕೊಳ್ಳುತ್ತೇವೆ. ಎಂದು ಬೇಡರು ಬ್ರಾಹ್ಮಣರಿಗೆ ಎಚ್ಚರಿಕೆ ನೀಡಿದರು. ಇದನ್ನು ಕೇಳಿದ ಕಳ್ಳ ಬ್ರಾಹ್ಮಣನು ತನ್ನಲ್ಲೇ ಯೋಚಿಸಿ," ಈ ಬ್ರಾಹ್ಮಣರನ್ನು ಕೊಂದರೆ ಅವರ ಅಂಗಾಂಗಗಳನ್ನು ಹುಡುಕಿದರೆ ನನಗೂ ಹಾಗೇ ಮಾಡುತ್ತಾರೆ. ಆದ್ದರಿಂದ ರತ್ನಗಳಿಲ್ಲದ ನಾನೇ ಮೊದಲು ಇವರಿಗೆ ಶರೀರವನ್ನು ಸಮರ್ಪಿಸಿಕೊಳ್ಳುತ್ತೇನೆ. ನನ್ನಲ್ಲಿ ರತ್ನಗಳಿಲ್ಲದಕಾರಣ, ಅವರಲ್ಲೂ ಏನೂ ಇಲ್ಲವೆಂದು ಅವರನ್ನೆಲ್ಲಾ ಬಿಟ್ಟುಬಿಡುವರು. ಮೃತ್ಯುವಿಗೆ ಅಂಜಬಾರದು. ಎಂದಿದ್ದರೂ ಸಾತಲೇಬೇಕು."ಯಾರು ಗೋವಿಗಾಗಿ ಅಥವಾ ಬ್ರಾಹ್ಮಣನಿಗಾಗಿ ಪ್ರಾಣತ್ಯಾಗ ಮಾಡುವನೋ ಅವನು ಸೂರ್ಯಮಂಡಲವನ್ನು ದಾಟಿ ಸದ್ಗತಿಯನ್ನು ಪಡೆಯುವನು." ಹೀಗೆ ನಿಶ್ಚಯಿಸಿ ಸಿದ್ಧನಾದನು. ಬೇಡರು ಹಾಗೇ ಮಾಡಿ ಆತನಲ್ಲಿ ಹಣವನ್ನು ಕಾಣದಿದ್ದಾಗ ಇತರ ನಾಲ್ಕು ಬ್ರಾಹ್ಮಣರನ್ನು ಬಿಟ್ಟು ಬಿಟ್ಟರು.[೮೫]

ಕಥೆಯನ್ನು ಮುಗಿಸಿದ ಕರಟಕ – ದಮನಕರು ಸಂವಾದ ನಡೆಸುತ್ತಿದ್ದರು. ಸಂಜೀವಕನು ಪಿಂಗಲಕನೊಡನೆ ಸ್ವಲ್ಪ ಕಾಲ ಯುದ್ಧ ಮಾಡಿದ ನಂತರ ಪಿಂಗಲಕನ ತೀಕ್ಷ್ಣವಾದ ಉಗುರುಗಳ ಘಾತದಿಂದ ಸತ್ತು ನೆಲಕ್ಕುರುಳಿದನು. ಅವನು ಸತ್ತದ್ದನ್ನು ಕಂಡು ಪಿಂಗಲಕನು ಅವನ ಗುಣಗಳನ್ನು ನೆನೆಸಿಕೊಂಡು ಹೃದಯ ತುಂಬಿಬಂದವನಾಗಿ ಹೀಗೆ ನುಡಿದನು– "ಅಯ್ಯೋ, ಸಂಜೀವಕನನ್ನು ಕೊಂದು ನಾನು ಪಾಪಯುಕ್ತವಾದ ಕೆಲಸವನ್ನು ಮಾಡಿಬಿಟ್ಟೆ. ಏಕೆಂದರೆ ವಿಶ್ವಾಸಘಾತಕ್ಕಿಂತ ನೀಚ ಕೆಲಸ ಮತ್ತೊಂದಿಲ್ಲ. ಮಿತ್ರದ್ರೋಹಿ, ಕೃತಘ್ನ ಹಾಗೂ ವಿಶ್ವಾಸಘಾತಕರಾದ ಮನುಷ್ಯರು ಸೂರ್ಯಚಂದ್ರರಿರುವವರೆಗೆ ನರಕವಾಸವನ್ನನುಭವಿಸುವರು ಹೀಗೆ ಹಲವು ವಿಧದಲ್ಲಿ ಪ್ರಲಾಪಿಸುತ್ತಿರುವ ಪಿಂಗಲಕನ ಬಳಿಗೆ ಹೋಗಿ ದಮನಕನು ಹರ್ಷದಿಂದ ಹೇಳಿದನು–

"ದ್ರೋಹಿ ಹಾಗೂ ಹುಲ್ಲು ತಿನ್ನುವ ಸಂಜೀವಕನನ್ನು ಕೊಂದು ತಾವು ಈ ರೀತಿ ದುಃಖ ಪಡುವುದು ಹೇಡಿಗಳು ಅನುಸರಿಸುವ ಮಾರ್ಗದಂತಿದೆ. ಭೂಪಾಲರಿಗೆ ಇದು ಯೋಗ್ಯವಲ್ಲ. ತನ್ನ ಪ್ರಾಣಕ್ಕೇ ಅಪಾಯವನ್ನುಂಟು ಮಾಡುವವರು ಯಾರಾದರೇನು? ಅವರನ್ನು ಕೊಲ್ಲಬೇಕು." ಹೀಗೆ ದಮನಕನು ಅನೇಕ ಬುದ್ಧಿಮಾತುಗಳನ್ನು ಹೇಳಿದನು. ಅದನ್ನು ಕೇಳಿದ ಪಿಂಗಲಕನು ಸಂಜೀವಕನ ಶೋಕವನ್ನು ಬಿಟ್ಟು, ದಮನಕನನ್ನು ಮಂತ್ರಿತನ್ನಾಗಿಸಿಕೊಂಡು ರಾಜ್ಯವನ್ನಾಳಿದನು.

ಹೀಗೆ ಮಿತ್ರಭೇದದಲ್ಲಿ ಬರುವ ಈ ಕಥೆಯಲ್ಲಿ ಒಳ್ಳೆಯ ವ್ಯಕ್ತಿತ್ವ ನಿರ್ಮಾಣದಿಂದ ಮನುಷ್ಯನು ಉತ್ತಮನೆನಿಸಿಕೊಳ್ಳುವುದಕ್ಕೆ ಬೇಕಾದ ಗುಣಗಳಲ್ಲಿ ವಿಶ್ವಾಸಕ್ಕೆ ಯೋಗ್ಯನಾಗುವುದೂ ಒಂದು. ಇತರರಲ್ಲಿ

---

೮೫. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ– ಮಿತ್ರಭೇದ, ಪು–294–297,,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ವಿಶ್ವಾಸವಿಟ್ಟು ಅವರ ಮನಸ್ಸನ್ನು ಗೆಲ್ಲುವುದು ಅಷ್ಟೇ ಮುಖ್ಯ. ಈ ಗುಣವು ಒಳ್ಳೆಯ ಸಂಸ್ಕಾರದಿಂದ ಬರುತ್ತದೆ. ಬಲದಿಂದ ಸಾಧ್ಯವಾಗದ ಕೆಲಸವನ್ನು ವಿಶ್ವಾಸವೆಂಬ ಮಾನವೀಯ ಗುಣದಿಂದ ಸಾಧಿಸಬಹುದು. ಆಗ ರಾಜನು ಸರ್ವತ್ರ ಮಾನ್ಯನಾಗುತ್ತಾನೆ. ಹಾಗೆಂದು ಕಂಡಕಂಡವರಲ್ಲೆಲ್ಲಾ ವಿಶ್ವಾಸವಿಡುವುದು ಹಾಗೂ ವಿಶ್ವಾಸ ದ್ರೋಹ ಮಾಡಿದವರನ್ನು ಪುನಃ ನಂಬುವುದು ಇದೆಲ್ಲ ತಪ್ಪು. ಇದು ಹೇಗಾಗುವುದೆಂದರೆ ಇರುಳು ಕಂಡ ಬಾವಿಯಲ್ಲಿ ಹಗಲು ಬಿದ್ದಂತಾಗುವುದು. ಈ ರೀತಿಯ ಬದುಕಿನ ನೀತಿಪಾಠವನ್ನು, ಗುಣಶೀಲ ವರ್ತನೆಗಳನ್ನು ವಿಷ್ಣುಶರ್ಮರು ರಾಜಕುಮಾರರಿಗೆ ಬೋಧಿಸಿದ್ದಾರೆ. ಹಿತೋಪದೇಶದಲ್ಲಿಒಂದು ಒಳ್ಳೆಯ ಉಪದೇಶವಿದೆ:-

दानं प्रियवाक्सहितं ज्ञानमगर्वं क्षमान्वितं शौर्यम् ।

वित्तं त्यागनियुक्तं दुर्लभमेतत् चतुष्टयं लोके ॥[86]

ಅಂದರೆ, "ಪ್ರೀತಿಯಿಂದ ಮಾತಿನಿಂದ ಕೂಡಿದ ದಾನ, ಗರ್ವವಿಲ್ಲದ ಜ್ಞಾನ, ಕ್ಷಮೆಯಿಂದ ಕೂಡಿದ ಶೌರ್ಯ, ತ್ಯಾಗ ಮನೋಭಾವದಿಂದ ಕೂಡಿದ ಸಂಪತ್ತು- ಈ ನಾಲ್ಕು ಒಳ್ಳೆಯದು, ಶ್ಲಾಘನೀಯ ಗುಣಗಳು. ಆದರೆ ಇದನ್ನು ಕಾಣುವುದು ಕಷ್ಟ.

ಮತ್ತೊಂದು ಉಪಕಥೆಯಲ್ಲಿ ಶುಭಾಶುಭಗಳನ್ನು ಉಲಿಯುವ ಎರಡು ಗಿಳಿ ಸಹೋದರಿಯರು ಸಹವಾಸ ಕಾರಣದಿಂದ ಬದಲಾಗಿದ್ದರೆಂಬ ಬಗ್ಗೆನಿರೂಪಿಸಲಾಗುತ್ತದೆ. ಆದ್ದರಿಂದಲೇ ತಿಳುವಳಿಕೆ ಇಲ್ಲದವನು ಎಂತಹ ಬುದ್ಧಿವಂತ ನಾಗಿದ್ದರೂ ಸಹವಾಸ ಕಾರಣದಿಂದ ಬದಲಾಗುತ್ತಾನೆ. ಇದರರ್ಥ ರಾಜಕುಮಾರರಿಗೆ ಅವರ ತಪ್ಪುಅರಿವಾಗುವಂತೆ ಆಲೋಚಿಸುವ ಪ್ರೇರಕವಾಗಿರುತ್ತದೆ. ವಿಷ್ಣುಶರ್ಮರು ಕಥೆಹೇಳುವುದನ್ನು ನಿಲ್ಲಿಸಿ, ರಾಜಕುಮಾರರ ಮುಖಗಳನ್ನು ಗಮನಿಸಿ ಕೇಳಿದರು." ರಾಜಕುಮಾರರೇ ದಮನಕನು ಹೇಳಿದ ಅಜ್ಞಾತನಾದವನನ್ನು ಹೆಚ್ಚು ನಂಬಬಾರದು, ವಿಶ್ವಾಸಕ್ಕೆ ತೆಗೆದುಕೊಳ್ಳಬಾರದು, ದೂರದಲ್ಲೇ ಇರಿಸಿಕೊಳ್ಳಬೇಕು ಎಂಬುದರ ಬಗ್ಗೆ ನೀವೇನು ಹೇಳುತ್ತೀರಿ? ಉತ್ತರವನ್ನು ಯೋಚಿಸಿ ನಾಳೆ ಬಂದು ಹೇಳಿ, ಆಗದೇ? ಎಂದರು. ಇದಕ್ಕೆ ರಾಜಕುಮಾರರು ಒಪ್ಪಿದರು. ಮರುದಿನ ರಾಜಕುಮಾರರು ಬಂದವರೇ ಕಾತುರದಿಂದ ಹೇಳಿದರು- "ಗುರುಗಳೇ ದಮನಕನ ಮಾತು ಸತ್ಯ. ಏಕೆಂದರೆ, ಅಪರಿಚಿತ ವ್ಯಕ್ತಿಗಳು ತಮ್ಮಮಾತಿನಲ್ಲಿ ಮರ್ಯಾದಸ್ಥರಂತೆ ಕಾಣಿಸಿದರೂ ಅವರ ಗುಣ – ಸ್ವಭಾವ – ವ್ಯಕ್ತಿತ್ವ ಎಂತಹುದೋ ಯಾರಿಗೆ ಗೊತ್ತು? ಹೀಗಾಗಿ ಬಹಳ ಕಾಲದ ಅನುಭವದಿಂದ ಬಂದ ಹೊಸಬನನ್ನು ಆಳವಾಗಿ ಪರೀಕ್ಷಿಸಿ ನೋಡಿದ ಅನಂತರವೇ

---

೮೬. नारायणपण्डितस्य हितोपदेश, मित्रलाभ – **122**

ಅವನಿಗೆ ನೀಡಬೇಕಾದ ಸ್ಥಾನವನ್ನು ನೀಡುವುದು ಸರಿ ಅಲ್ಲವೇ ಗುರುಗಳೇ? ಎಂದರು. ಆಗ ಗುರುಗಳು ಭೇಷ್ ಎಂದು ರಾಜಕುಮಾರರನ್ನು ಮೆಚ್ಚಿ ಹೇಳಿದರು" ನೀವೀಗ ನಿಜವಾಗಿ ರಾಜಕುಮಾರರೆ. ದಮನಕನು ಅದಕ್ಕಾಗಿ ಹೇಳಿದ ಕಥೆ ಯಾವುದು ಗೊತ್ತೇ? ಅದೇ **ಗೂಬೆಯ ಸಹವಾಸ ಮಾಡಿದ ರಾಜಹಂಸನ ಕಥೆ** ಎಂದು ಮುಂದಿನ ಕಥೆಗೆ ಆಸಕ್ತಿ ಮೂಡಿಸಿದರು. ರಾಜಕುಮಾರರ ಕಲಿಕೆ, ಆಸಕ್ತಿ ಹಾಗೂ ಆಲೋಚನೆ ಎಷ್ಟರಮಟ್ಟಿಗೆ ಬೆಳೆದಿತ್ತೆಂದರೆ "ಈಗ ನೀವು ಹೇಳಬೇಕೆಂದಿರುವ ಕಥೆ ಸ್ವಾರಸ್ಯಕರವೂ, ನೀತಿಬೋಧಕವೂ ಆಗಿದ್ದಿರಬೇಕು, ಹೇಳಿ ಆಚಾರ್ಯರೇ ಎಂದು ಕುತೂಹಲದಿಂದ ಕೇಳುವಷ್ಟು.[87] ಹೀಗೆ ರಾಜಕುಮಾರರ ಕುತೂಹಲ ಇನ್ನಷ್ಟು ಹೆಚ್ಚುವಂತೆ ಪ್ರೇರೇಪಿಸಿ ಕಥೆ ಹೇಳಲು ತೊಡಗುತ್ತಾರೆ. ಒಂದು ಕಥೆಯ ಅಂತ್ಯದಲ್ಲಿ ಒಂದು ಅಮೂಲ್ಯ ನೀತಿಬೋಧೆ, ಪುನಃ ಆ ಕೊಂಡಿ ಕಳಚದಂತೆ, ಮುಂದಿನ ಮತ್ತೊಂದು ಸ್ವಾರಸ್ಯಕರ ನೀತಿಕಥೆ. ಜೊತೆಜೊತೆಯಲ್ಲಿ ರಾಜನೀತಿ ಶಿಕ್ಷಣವೂ, ಬದುಕಿನ ನೀತಿಶಿಕ್ಷಣವೂ ದೊರಕುವಂತೆ ವಿಚಾರಗಳನ್ನು ಸಂಯೋಜಿಸಿರುವುದು ಪಂಚತಂತ್ರದ ವಿಶಿಷ್ಟತೆಗೆ ದ್ಯೋತಕವಾಗಿದೆ.



87. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಪ್ರ.ತಂ –1–12,ಪು – 64–67.(2015)ವರ್ಣಿಲ, 39/2–11,ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು–560050.

## ಅಧ್ಯಾಯ – ೩

## ವ್ಯಕ್ತಿತ್ವದ ಬೆಳವಣಿಗೆ ಮತ್ತು ವಿಕಾಸ Personality development

ಅಧ್ಯಾಯ ೩–1. ವ್ಯಕ್ತಿಯ ಬೆಳವಣಿಗೆಯಲ್ಲಿ ಮೂಲ ಸ್ವಭಾವ ಮತ್ತು ಸನ್ನಿವೇಶದ ಪ್ರಭಾವ–ವೈಯಕ್ತಿಕ ಭಿನ್ನತೆಗಳು. **Individual Differences**

ಅಧ್ಯಾಯ ೩–2. ಕಲಿಕೆ–ಅರ್ಥ–ಸ್ವರೂಪ. **Learning-meaning-nature**

ಅಧ್ಯಾಯ ೩–೩. ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳು–

ಅಭಿಪ್ರೇರಣೆ– **(Motivation)**

ಅವಧಾನ. **(Attention)**

ಅಧ್ಯಾಯ ೩–4. ಸ್ಮೃತಿ–ವಿಸ್ಮೃತಿ–––ಕಲಿಕೆಯ ವರ್ಗಾವಣೆ.

**(Memory-Forgetting-Transfer of learning)**

ಅಧ್ಯಾಯ ೩–5. पञ्चतन्त्रस्य–प्रथमं तन्त्रम् – मित्रभेदः ಕಥೆಗಳ ವಿಶ್ಲೇಷಣೆ

**3–1 ವ್ಯಕ್ತಿಯ ಬೆಳವಣಿಗೆಯಲ್ಲಿ ಮೂಲ ಸ್ವಭಾವ ಮತ್ತು ಸನ್ನಿವೇಶದ ಪ್ರಭಾವ – ವೈಯಕ್ತಿಕ ಭಿನ್ನತೆಗಳು.**

ಮಾನವನ ಸರ್ವತೋಮುಖ ವಿಕಾಸವೇ ಶಿಕ್ಷಣದ ಗುರಿ. ಹಾಗೆಂದರೆ, ವ್ಯಕ್ತಿಯ ಶಾರೀರಿಕ, ಮಾನಸಿಕ, ಬೌದ್ಧಿಕ, ಸಾಮಾಜಿಕ, ನೈತಿಕ ಮತ್ತು ಆಧ್ಯಾತ್ಮಿಕ ವಿಕಾಸವೇ ಶಿಕ್ಷಣದ ಗುರಿ. "शरीरमाद्यम् खलुधर्मसाधनम्"– "ಆರೋಗ್ಯವಂತ ಶರೀರದಲ್ಲಿ ಆರೋಗ್ಯವಂತ ಮನುಷ್ಯ." **"A Sound Mind in a Sound Body."** ಅದೇ ರೀತಿಯಲ್ಲಿ ಆರೋಗ್ಯವಂತ ಮನುಷ್ಯನಲ್ಲಿ ಆರೋಗ್ಯವಂತ ಮನಶ್ಶಕ್ತಿ.[1]

सुवर्णापुष्पितां पृथ्वीं विचिन्वन्ति नरास्त्रयः।

शूरश्च कृतविद्यश्च यश्च जानाति सेवितुम् ॥[2]

ಮಹಾಭಾರತದಲ್ಲಿ ಬರುವ ಈ ಉಕ್ತಿ ಎಷ್ಟು ಅರ್ಥಪೂರ್ಣವಾಗಿದೆ. ಶೂರರು, ವಿದ್ಯಾವಂತರು, ಚೆನ್ನಾಗಿ ಸೇವೆ ಮಾಡಬಲ್ಲವರು – ಈ ಮೂವರೂ ಭೂಮಿಯಲ್ಲಿ ಸುವರ್ಣಪುಷ್ಪಗಳನ್ನು ಬೆಳೆಯಬಲ್ಲರು ಅಂದರೆ, ಮೊದಲನೆಯದಾಗಿ ತಾಯ್ನಾಡಿಗಾಗಿ ಜೀವವನ್ನೂ ಅರ್ಪಿಸಬಲ್ಲ ಶೂರ ಅವಳ ಸೇವೆಯನ್ನು ಚೆನ್ನಾಗಿ ಮಾಡಬಲ್ಲ. "ವೀರ ಮರಣಂ ತೃಣಂ–ಅವನಿಗೆ ಮರಣವೇ ಮಹಾನವಮಿ. ಎರಡನೆಯದು ದೇಶವನ್ನು ಸೇವಿಸುವ ಇನ್ನೊಂದು ವರ್ಗ ವಿದ್ಯಾವಂತರು. ತಮ್ಮ ಬುದ್ಧಿ ಶಕ್ತಿಯಿಂದ ನವ ಪೀಳಿಗೆಯನ್ನು ಅಣಿಗೊಳಿಸಿ, ದೇಶವನ್ನು 'ಜ್ಞಾನಂ – ವಿಜ್ಞಾನ ಸಹಿತಂ ಎಂಬಂತೆ ಜ್ಞಾನ – ವಿಜ್ಞಾನಗಳಲ್ಲಿ ಮುನ್ನಡೆ ಸಾಧಿಸುವಂತೆ ಮಾಡಿ, ಸರಿಯಾದ ದಿಕ್ಕಿನಲ್ಲಿ ಒಯ್ಯಬಲ್ಲ ಸಾಮರ್ಥ್ಯ ವಿದ್ಯಾವಂತರಿಗೆ ಮಾತ್ರ ಇರುತ್ತದೆ.

ಇನ್ನು ಮೂರನೆಯದಾಗಿ ಯಾವುದೇ ಸೇವಾ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದರೂ, ವೃತ್ತಿ ದ್ರೋಹ ಬಗೆಯದೆ ಪ್ರತಿಯೊಬ್ಬರೂ ಸೇವೆ ಸಲ್ಲಿಸಿದರೆ, ದೇಶ ಅಭಿವೃದ್ಧಿ ಹೊಂದುವುದು. ಒಟ್ಟಾರೆ ಹೇಳುವುದಾದರೆ ದೇಶಕ್ಕಾಗಿ ಮಡಿಯುವ, ಮಿಡಿಯುವ, ದುಡಿಯುವ ಶೂರ, ವಿದ್ಯಾವಂತ, ಸೇವಕರು ಮಾತ್ರ ಭೂಮಿಯಲ್ಲಿ ಬಂಗಾರ ಬೆಳೆಯಬಲ್ಲರು.[3] ಈ ನಿಟ್ಟಿನಲ್ಲಿ ಮನುಷ್ಯನ ವ್ಯಕ್ತಿತ್ವ ರೂಪುಗೊಳ್ಳಬೇಕು. ಅದಕ್ಕೆ ಸೂಕ್ತವಾದ ಸನ್ನಿವೇಶಗಳನ್ನು ಪ್ರತಿಭಾವಂತ ಗುರುಗಳಾದವರು ಅವರ ಶಿಷ್ಯರಿಗೆ ಒದಗಿಸಿ ಸುಂದರ ವ್ಯಕ್ತಿತ್ವ ನಿರ್ಮಾಣ ಮಾಡುತ್ತಾರೆ. ಇದೇ ಕಾರ್ಯವನ್ನು ವಿಷ್ಣುಶರ್ಮರು ರಾಜಕುಮಾರರ ವಿಚಾರದಲ್ಲಿ ಅದ್ಭುತವಾದ ಸಾಧನೆಗೈದಿದ್ದಾರೆ.

---

1. deck.org>kreedothsava Sri Rama Vidya Kendra Trust.
2. **ಸುಧಾಕರ್ ಮಾಲವೀಯ,** ಸಂಪಾ – ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–46, ಪು–34, ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001 (1993)
3. **ವಿ.ಎನ್.ಭಟ್,** ಜ್ಞಾನದೀಪ, ಅ.ನಂ–104, ಪು–205. ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ577201 (1993).

अज्ञानमालस्य जडत्व निद्रा प्रमादमूढत्व मुखास्तमोगुणाः ।

एतैः प्रयुक्तो न हि वेत्ति किंचि न्निद्रालुवत् स्तम्भवदेव तिष्ठति[4]

ಅಜ್ಞಾನ, ಆಲಸ್ಯ, ಜಡತ್ವ, ನಿದ್ರೆ, ಅವಧಾನವಿಲ್ಲದಿರುವಿಕೆ, ಮೂಢತನ ಮುಂತಾದವುಗಳು ತಮಸ್ಸಿನ ಗುಣಗಳು. ಇವುಗಳಿಂದ ಕೂಡಿರುವವನಿಗೆ ಏನೊಂದೂ ತಿಳಿಯುವುದಿಲ್ಲ. ಅವನು ನಿದ್ರಿಸುವನಂತೆಯೂ ಕಂಬದಂತೆಯೂ ಜಡನಾಗಿರುತ್ತಾನೆ. ರಾಜಕುಮಾರರ ಪರಿಸ್ಥಿತಿಯೂ ಇದೇ ರೀತಿಯಾಗಿತ್ತು. ವಿಷ್ಣುಶರ್ಮರು ಇಂಥಹವರಿಗೆ ಸೂಕ್ತ ಪರಿಸರವನ್ನೊದಗಿಸಿ, ಕಲಿಯುವುದರಲ್ಲಿ ಆಸಕ್ತಿಯನ್ನೂ, ಒಲವನ್ನೂ ಮೂಡಿಸಿದ್ದಾರೆ.

ಮನುಷ್ಯನ ರಚನೆ, ಶರೀರದ ಸಂವಿಧಾನವನ್ನು ಸ್ವಲ್ಪ ಸೂಕ್ಷ್ಮವಾಗಿ ಗಮನಿಸಿದರೆ ಇದೊಂದು ಅದ್ಭುತ ಸೃಷ್ಟಿ ಎನ್ನಿಸುತ್ತದೆ. ಇದರ ಬಗ್ಗೆ ಇನ್ನೂ ಹೆಚ್ಚು ಹೆಚ್ಚು ಅರ್ಥೈಸಿಕೊಳ್ಳಲು ಪ್ರಯತ್ನಿಸಿದರೆ ಈ ಅದ್ಭುತ ಜೀವಿ, ಮಾನವ ನಿರ್ಮಾಣವನ್ನು ಆ ಪ್ರಕೃತಿಯು ಎಷ್ಟೊಂದು ವಿಶಿಷ್ಟವಾಗಿ, ಅತ್ಯಂತ ವ್ಯವಸ್ಥಿತವಾಗಿ ಕೈಗೊಂಡಿದೆ !!! ಯಾವ ವಿಜ್ಞಾನಿ ಅಥವಾ ನಿರ್ಮಾತೃವಿನಿಂದಲೂ ಇಷ್ಟು ಕರಾರುವಾಕ್ಕಾಗಿ ರಚಿಸಲಸಾಧ್ಯವೆನ್ನಬಹುದು. ಮತ್ತೊಂದು ವಿಶೇಷವೆಂದರೆ, ಒಬ್ಬ ವ್ಯಕ್ತಿಯಲ್ಲಿರುವ ಲಕ್ಷಣಗಳನ್ನು, ಮತ್ತೊಬ್ಬನಲ್ಲಿ ಮೂಡಿಸಿಲ್ಲ. ಆ ವ್ಯಕ್ತಿಯು ಎಷ್ಟರಮಟ್ಟಿಗೆ ತಂದೆ ತಾಯಿಗಳ ಲಕ್ಷಣವನ್ನು ಹೋಲುತ್ತಾನೆ. ಅದೇ ಬೇರೆ ಸದಸ್ಯರಂತೆ ಇರುವುದಿಲ್ಲ. ಮನಶ್ಶಾಸ್ತ್ರಜ್ಞರು ಇದನ್ನೇ "ವೈಯುಕ್ತಿಕ ಭಿನ್ನತೆಗಳು" ಎನ್ನುತ್ತಾರೆ.

ಎಲ್ಲಾ ಜೀವಿಗಳಲ್ಲೂ ಅಂದರೆ ಮಾನವರಲ್ಲಾಗಲೀ ಅಥವಾ ಇನ್ನಿತರ ಪ್ರಾಣಿಗಳಲ್ಲಾಗಲೀ ಗಾತ್ರ, ಆಕಾರ, ಬಾಹ್ಯ ಚಹರೆ, ಅನುಕ್ರಿಯೆಯ ವೇಗ ಇತ್ಯಾದಿ ಇನ್ನೂ ಹಲವಾರು ವರ್ತನೆಗಳಲ್ಲಿ ನಾವು ವ್ಯತ್ಯಾಸಗಳನ್ನು ಕಾಣುತ್ತೇವೆ. ಹೀಗೆ ವ್ಯಕ್ತಿಗಳ ಅನೇಕ ಲಕ್ಷಣಗಳಲ್ಲಿ ಭಿನ್ನತೆಯನ್ನು ಕಾಣುತ್ತೇವೆ. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ಹಾಗೆ ಇರುವುದಿಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ಸಹ ಅದ್ವಿತೀಯ. ಮಾನವರಾದ ನಾವು ಕೆಲವು ಲಕ್ಷಣಗಳಲ್ಲಿ ಸಮತೆ ಕಂಡುಬಂದರೂ ಸಹ ಹಲವಾರು ವಿಷಯಗಳಲ್ಲಿ ಭಿನ್ನರಾಗಿದ್ದೇವೆ. ವೈಯಕ್ತಿಕ ಭಿನ್ನತೆಗೆ ಒಂದು ಮನೋವೈಜ್ಞಾನಿಕ ಪಾರಿಭಾಷಿಕ ಪದವಾಗಿ ಈ ಕೆಳಕಂಡಂತೆ ವ್ಯಾಖ್ಯಾನಿಸಬಹುದಾಗಿದೆ. "ಒಬ್ಬನನ್ನು ಇನ್ನೊಬ್ಬನಿಂದ ಬೇರ್ಪಡಿಸುವಂತಹ ಲಕ್ಷಣಗಳು ಮತ್ತು ತನ್ಮೂಲಕ ಪ್ರತಿಯೊಬ್ಬ ವ್ಯಕ್ತಿಯನ್ನು ಅದ್ವಿತೀಯನನ್ನಾಗಿ ಮಾಡುವಂತಹ ಲಕ್ಷಣಗಳನ್ನು ವೈಯಕ್ತಿಕ ಭಿನ್ನತೆಗಳು"[5] ಎಂದು ಕರೆಯಬಹುದು. ವ್ಯಕ್ತಿವ್ಯಕ್ತಿಗಳಿಗೂ ಕೇವಲ ದೈಹಿಕ ಭಿನ್ನತೆಗಳಷ್ಟೇ ಅಲ್ಲದೆ ಸ್ವಭಾವ, ನಡೆನುಡಿ, ಆಚಾರವಿಚಾರಗಳಲ್ಲೂ ಬೇಕಾದ ಹಾಗೆ ವ್ಯತ್ಯಾಸ ಕಂಡುಬರುತ್ತದೆ. ಶೈಶವದಲ್ಲಿ ಕಾಣದ ಈ ವ್ಯತ್ಯಾಸಗಳು ವಯಸ್ಸಾದಂತೆ

4. **ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು,** ಶಂಕರಾಚಾರ್ಯವಿರಚಿತ ವಿವೇಕಚೂಡಾಮಣಿ,(2005), ಅ– 3, ಶ್ಲೋ–115, ಪು–35, ಆಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೇನರಸೀಪುರ 573211

5. **ಎಚ್. ವಿ.ವಾಮದೇವಪ್ಪ,** ಶೈಕ್ಷಣಿಕ ಮನೋವಿಜ್ಞಾನ, ಅ–3, ಪು–111.(1962) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಚೆನ್ನಾಗಿ ವ್ಯಕ್ತಪಡುತ್ತವೆ. ಒಂದೇ ಕಡೆ ಬೆಳೆದವರು, ಒಂದೇ ಕುಟುಂಬದಲ್ಲಿ ಜನಿಸಿದ್ದವರಲ್ಲೂ ವ್ಯತ್ಯಾಸಗಳು ಕಂಡುಬರುತ್ತದೆ. ಒಬ್ಬರನ್ನೊಬ್ಬರು ಗುರುತು ಹಚ್ಚಲು ಈ ವೈವಿಧ್ಯ ನಿಜಕ್ಕೂ ಸಹಕಾರಿ. ಸಮಾಜ ಜೀವನದ ಸೊಗಸಿಗೂ ಈ ವೈವಿಧ್ಯ ಅಗತ್ಯವೆನಿಸುತ್ತದೆ. ಉತ್ತಮ ಸ್ವಭಾವಾದಿ ಗುಣಗಳನ್ನು ಪಡೆದಿರುವವರು ಜೀವನದಲ್ಲಿ ಹೆಚ್ಚಿನ ಯಶಸ್ಸು ಗಳಿಸುವುದು ಸ್ವಾಭಾವಿಕ.

गुणवत्तरपात्रेण छाद्यन्ते गुणिनां गुणाः ।

रात्रौ दीपशिखाकान्तिर्न भानावुदिते सति ॥[6]

ಅಂತಹ ಯಶಸ್ಸು ಯಾರಿಗೆ ತಾನೇ ಬೇಡವೆನ್ನಿಸುತ್ತದೆ? ಇದು ಎಲ್ಲರಿಗೂ ಆಗತ್ಯವೇ. ಹಾಗಿದ್ದಲ್ಲಿ ಈ ವೈವಿಧ್ಯಕ್ಕೆ ಕಾರಣಗಳೇನಿರಬಹುದು? ಆ ಕಾರಣಗಳು ಜನ್ಮಗತವಾದವೇ? ಅಥವಾ ಜೀವನದಲ್ಲಿ ಕಾಣತಕ್ಕವೇ? ಏನಿರಬಹುದು?

ತಂದೆತಾಯಿಗಳ ದೈಹಿಕ ಮತ್ತು ಮಾನಸಿಕ ಲಕ್ಷಣಗಳು ಮಕ್ಕಳಿಗೆ ವಂಶಗತವಾಗಿ ಬರುತ್ತವೆ. ಹೀಗೆ ಅನುವಂಶೀಯವಾಗಿ ಬರುವ ಮೂಲ ಸ್ವಭಾವವೇ ವ್ಯಕ್ತಿಯ ಮಾನಸಿಕ, ದೈಹಿಕ ಮತ್ತು ಸಾಮಾಜಿಕ ಅಭಿವೃದ್ಧಿಗೆ ಕಾರಣವೆಂದು ಕೆಲವರ ವಾದವಿದೆ. ಮಗುವಿನ ಇಡೀ ಭವಿಷ್ಯವನ್ನು ನಿರ್ಧರಿಸತಕ್ಕದ್ದು ಅನುವಂಶೀಯತೆ ಎಂದು ಸಾಧಿಸಲು ಪ್ರಯತ್ನಿಸುವರು. ಈ ಪಂಥದಲ್ಲಿ ಯತ್ನಿಸಿದವರೆಂದರೆ **Rousseau, Galton, Plato, Pearson** ಮುಂತಾದವರು. ಮತ್ತೆ ಕೆಲವರು ಇದನ್ನೊಪ್ಪದೆ ವಂಶಗತವಾಗಿ ಬಂದಿರುವ ಮೂಲ ಸ್ವಭಾವಗಳು ಹೇಗೇ ಇರಲಿ, ಅವರ ಶಿಕ್ಷಣಾಭಿವೃದ್ಧಿ, ವ್ಯಕ್ತಿತ್ವ ಭವಿಷ್ಯ ಜೀವನದ ಸ್ವರೂಪ – ಇವನ್ನೆಲ್ಲಾ ರೂಪಿಸತಕ್ಕದ್ದು ಅವರು ವಾಸಿಸುವ ಸನ್ನಿವೇಶ ಮತ್ತು ಪಡೆಯುವ ಶಿಕ್ಷಣದ ಸ್ವರೂಪ ಎಂದು ವಾದಿಸುವರು. ಈ ಪಂಥದಲ್ಲಿ ವಾದಿಸಿದವರೆಂದರೆ **Spencer, Watson, Newman, Weisman** ಇನ್ನಿತರರು. ಈ ವಾದ – ವಿವಾದಗಳನ್ನು **(Nature-Nurture-Controversy)** "ಪ್ರಕೃತಿ–ಪರಿಸರವಾದ" ಎಂದು ಕರೆಯುತ್ತಾರೆ.[7]

ಅನುವಂಶೀಯತೆಯನ್ನು ಪ್ರಕೃತಿಯೆಂದೂ, ಪರಿಸರವನ್ನು ಪಾಲನೆ ಮತ್ತು ಆರೈಕೆಯೆಂದೂ ಅನುವಾದ ಮಾಡಬಹುದು. ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ ಇವೆರಡೂ ಬಹುಮುಖ್ಯವೇ.

---

6. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–310, ಪು–199, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
7. **ಎನ್.ಎಸ್.ವೀರಪ್ಪ,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–4, ಪು–52ರಿಂದ54. (1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿ ಪುರಂ, ಮೈಸೂರು–4.

ಇವೆರಡನ್ನೂ ವ್ಯಕ್ತಿಯ ಬೆಳವಣಿಗೆಗೆ ಹಾಗೂ ಅಭಿವೃದ್ಧಿಯಲ್ಲಿ ಅನ್ಯೋನ್ಯಾವಲಂಬನಗಳೆಂದು ಕರೆಯಬಹುದು. ಇವು ನಿರಂತರ ಪರಸ್ಪರ ಪೂರಕವಾಗಿದ್ದು, ಅನುವಂಶೀಯತೆ ಮತ್ತು ಪರಿಸರಗಳ ನಡುವಿನ ಅನ್ಯೋನ್ಯ ಕ್ರಿಯೆಯ ಫಲಿತವೇ ವಿಕಾಸ. ಅನುವಂಶೀಯತೆ ಬಂದೂಕವನ್ನು ಗುಂಡಿನಿಂದ ಭರ್ತಿಮಾಡಿದರೆ, ಪರಿಸರವು ಬಂದೂಕಿನ ಕುದುರೆ ಅಥವಾ ಪ್ರಚೋದಕವನ್ನು ಎಳೆಯುವುದು. ಅಂದರೆ ವ್ಯಕ್ತಿಯಲ್ಲಿ ಅಂತರ್ಗತವಾಗಿರುವ ಅನುವಂಶೀಯ ಅಂಶಗಳು ಮತ್ತು ಪರಿಸರದ ಅಂಶಗಳು ವ್ಯಕ್ತಿಯ ವಿಕಾಸದ ಮೇಲೆ ಪ್ರಭಾವ ಬೀರುತ್ತವೆ. ಇವೆರಡರ ಪ್ರಭಾವವನ್ನು ಯಾವುದರಿಂದಲೂ ಪ್ರತ್ಯೇಕಿಸಲು ಸಾಧ್ಯವಿಲ್ಲ. ವ್ಯಕ್ತಿಯ ವಿಕಾಸವು ವ್ಯಕ್ತಿ ಹಾಗೂ ಅವನ ಪರಿಸರದ ಅನ್ಯೋನ್ಯ ಕ್ರಿಯೆಯ ಉತ್ಪನ್ನವಾಗಿದೆ.

ಮನೋವೈಜ್ಞಾನಿಕ ಗುಣಗಳಾದ ಆದರ್ಶಗಳು, ಆಸಕ್ತಿಗಳು ಮತ್ತು ಮನೋಭಾವಗಳು ಪರಿಸರದಿಂದ ಪ್ರಭಾವಿತವಾಗುತ್ತವೆ. ವ್ಯಕ್ತಿಗಳು ತಮ್ಮ ಗುಣಲಕ್ಷಣಗಳನ್ನು ಅಂಕುರಾಣುಗಳು ಮತ್ತು ಅವುಗಳಲ್ಲಿರುವ ವರ್ಣತಂತುಗಳ ಹಾಗೂ ವಂಶವಾಹಿನಿಗಳ ಮೂಲಕ ವಂಶಪಾರಂಪರ್ಯವಾಗಿ ಪಡೆದುಕೊಳ್ಳುತ್ತಾರೆ. ಕಣ್ಣಿನ ಬಣ್ಣ, ಕೂದಲು ಹಾಗೂ ಚರ್ಮಗಳ ಬಣ್ಣ, ತಲೆಯಗಾತ್ರ, ಕೈಬೆರಳು ವಿನ್ಯಾಸ, ಲೈಂಗಿಕ ಪಕ್ವತೆಯ ಕಾಲ ಮತ್ತು ದೇಹದ ದೃಢತೆ ಇತ್ಯಾದಿಗಳು ಮುಖ್ಯವಾಗಿ ಅನುವಂಶೀಯ ಗುಣಗಳಿಂದ ನಿರ್ಧರಿಸಲ್ಪಡುತ್ತವೆ.[8] ಇನ್ನು ಉತ್ತಮ ಪರಿಸರವನ್ನು ಒದಗಿಸಿಕೊಟ್ಟರೆ ಉತ್ತಮನಾಗುತ್ತಾನೆ, ವ್ಯತ್ಯಾಸವಾದರೆ ಅಧಮನೂ ಆಗುತ್ತಾನೆ. ಹಿತೋಪದೇಶದಲ್ಲಿ ಸರಳವಾಗಿ ಹೀಗೆ ಹೇಳಲ್ಪಟ್ಟಿದೆ:–

यदाऽसत्सङ्गरहितो भविष्यसि भविष्यसि ।

यदाऽसज्जनगोष्ठीषु पतिष्यसि पतिष्यसि ॥[9]

ಸಜ್ಜನರ ಸಹವಾಸದಲ್ಲಿ ನಿರತನಾದರೆ ಖಂಡಿತವಾಗಿ ನೀನು ಬದುಕುವೆ. ಹಾಗೆಯೇ ಕೆಟ್ಟವರ ಗುಂಪಿನಲ್ಲಿ ಬಿದ್ದರೆ ಖಂಡಿತವಾಗಿಯೂ ಬೀಳುತ್ತೀಯೆ. ಎಂಥಹ ಪರಿಸರ ಸಿಗುವುದೋ ಹಾಗೇ ಆಗುವೆ ಎಂದು ಸೂಚಿಸುತ್ತದೆ. ಅದಕ್ಕೇ ಮಕ್ಕಳಿಗೆ ಅನುವಂಶೀಯ ಗುಣಗಳ ಜೊತೆಗೆ ಉತ್ತಮ ಪರಿಸರವನ್ನೂ ಕಲ್ಪಿಸಿಕೊಡಬೇಕಾದದ್ದು ನಮ್ಮ ಕರ್ತವ್ಯ.

ವಿದ್ಯೆ ಕಲಿಸುವ ಶಿಕ್ಷಕರು ಹಾಗೂ ಪೋಷಕರು ಮಕ್ಕಳ ಸರ್ವತೋಮುಖ ಅಭಿವೃದ್ಧಿಯ ವಿಚಾರದಲ್ಲಿ ಈ ಮೇಲಿನ ಎಲ್ಲ ಮನೋವೈಜ್ಞಾನಿಕ ಅಂಶಗಳನ್ನು ಅರಿತುಕೊಂಡು, ಅವರಿಗೆ ಉತ್ತಮವಾದ ಸಾಮಾಜಿಕ ಅನುವಂಶೀಯತೆಯ ಬುನಾದಿಯಲ್ಲಿ ಸುಸಂಸ್ಕೃತ, ಸೃಜನಶೀಲ ಪರಿಸರವನ್ನು

---

8. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–2 ಪು–47, 48. ಶ್ರೇಯಸ್ ಪಬ್ಲಿಕೇಷನ್ಸ್,(2005) ತರಳಬಾಳು ಬಡಾವಣೆ, ದಾವಣಗೆರೆ–577005.
9. **ನಾರಾಯಣ ಪಂಡಿತರ** ಹಿತೋಪದೇಶ– ಮಿ.ಲಾ. ಶ್ಲೋ–207.

ಒದಗಿಸಿಕೊಡುವುದು ಬಹಳ ಮುಖ್ಯವಾದ ವಿಚಾರ.

ಪಂಚತಂತ್ರ ನೀತಿಕಾವ್ಯವನ್ನು ಈ ದೃಷ್ಟಿಯಿಂದ ವಿಶ್ಲೇಷಿಸಿದರೆ, ಹಿರಿಯ ಅನುಭವೀ ವಿದ್ವಾಂಸರೂ, ಪ್ರತಿಭಾನ್ವಿತ ಶಿಕ್ಷಕರೂ ಆಗಿದ್ದ ವಿಷ್ಣುಶರ್ಮರು ಅಮರಶಕ್ತಿ ರಾಜನ ಮೂವರು ಪುತ್ರರನ್ನು ಬಹಳ ವಿಶೇಷವಾಗಿ ಗಮನಿಸಿದ್ದಾರೆ. ಅವರು ಪಡೆದಿರುವ ಅನುವಂಶೀಯ ಲಕ್ಷಣಗಳನ್ನು ಪರಿಶೀಲಿಸಿ, ಅವರಲ್ಲಿರುವ ವೈಯಕ್ತಿಕ ಭಿನ್ನತೆಗಳನ್ನು ಗುರುತಿಸಿ, (ಒಬ್ಬ ಮೂರ್ಖ, ಮತ್ತೊಬ್ಬ ಆಲಸಿ, ಇನ್ನೊಬ್ಬ ಮೂರ್ಖ, ಆಲಸಿ) ಅವರಿಗೆ ತಕ್ಕುದಾದ ಉತ್ತಮ ಪರಿಸರವನ್ನೊದಗಿಸಿ, ಸನ್ನಿವೇಶ, ಸಮಸ್ಯೆ, ಜ್ಞಾನ, ವಯೋಗುಣ, ಗ್ರಹಣಶಕ್ತಿ ಇವುಗಳ ಕಾರ್ಯಕಾರಣ ಬದ್ಧ ಪಠ್ಯಕ್ರಮ, ಬೋಧನಾ ವಿಧಾನವನ್ನು ಅಳವಡಿಸಿ, ಕೋಮಲಮತಿಗಳಾದ ಬಹುಶಕ್ತಿ, ಉಗ್ರಶಕ್ತಿ ಮತ್ತು ಅನಂತಶಕ್ತಿ ಇವರುಗಳನ್ನು ಸುಶಿಕ್ಷಿತರನ್ನಾಗಿ, ರಾಜನೀತಿ ಕುಶಲರನ್ನಾಗಿ ಮಾರ್ಪಡಿಸಿ, ಉತ್ತಮ ವ್ಯಕ್ತಿತ್ವ – ನಿರ್ಮಾಣ ಮಾಡಿರುವುದರಲ್ಲಿ ನಿಜಕ್ಕೂ ಪಂಚತಂತ್ರದಲ್ಲಿ ಒಂದು ಅಸಾಮಾನ್ಯ ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆ ಅಡಗಿದೆಯೆಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ.

वंशभवो गुणवानपि सङ्गविशेषेण पूज्यते पुरुषः।

न हि तुम्बीफलविकलो वीणादण्डः प्रयाति महिमानम् ॥[10]

ಉತ್ತಮ ವಂಶದಲ್ಲಿ ಹುಟ್ಟಿರಲಿ, ಗುಣವಂತನಾಗಿರಲಿ, ಸತ್ಸಂಗ ವಿಶೇಷದಿಂದ ಪುರುಷನು ಪೂಜ್ಯನಾಗುತ್ತಾನೆ. ಸೋರೆಬುರುಡೆ ಇಲ್ಲದಿದ್ದಲ್ಲಿ ವೀಣಾದಂಡಕ್ಕೆ ಯಾವ ಮಹಿಮೆಯೂ ದೊರಕದು. ವೀಣಾದಂಡವು ವಂಶಭವ, ಅಂದರೆ ಬಿದಿರಿನಿಂದ ಆದದ್ದು; ಗುಣವಾನ್ ಅಂದರೆ ತಂತಿಗಳಿಂದ ಯುಕ್ತವಾದದ್ದು. ಇಲ್ಲಿ ವಂಶವೂ ಮುಖ್ಯ ಅದಕ್ಕೆ ತಕ್ಕಂತೆ ಗುಣ ಅರ್ಥಾತ್ ಪರಿಸರವೂ ಮುಖ್ಯ. ಅಂತೆಯೇ, ಮಕ್ಕಳಲ್ಲಿ ಜನ್ಮತಃ ಹಲವು ಗುಣ – ಧರ್ಮಗಳು ಅಡಗಿದ್ದರೂ ಅವು ಕಾರ್ಯರೂಪಕ್ಕೆ ಬರುವುದು ಸನ್ನಿವೇಶದ ಪ್ರಭಾವದಿಂದ ಸನ್ನಿವೇಶದ ಆ ಪ್ರಭಾವಕ್ಕೆ ಪ್ರತಿಕ್ರಿಯಾರೂಪದಲ್ಲಿ ಮೂಲ ಸ್ವಭಾವಗಳು ವರ್ತಿಸುತ್ತವೆ. ಉದಾಹರಣೆಗೆ – ಸಂಗ್ರಹಾಸಕ್ತಿಯ ಹುಟ್ಟುಗುಣವನ್ನು ಪರಿಶೀಲಿಸಿದರೆ, ಪದಾರ್ಥಗಳನ್ನು ಕಂಡೊಡನೆಯೆ ಮಗುವು ಅದನ್ನು ಆಯ್ದುಕೊಳ್ಳುತ್ತದೆ. ಇಲ್ಲಿ ಪದಾರ್ಥವನ್ನು ಕಾಣುವುದೇ ಸನ್ನಿವೇಶದ ಪ್ರಭಾವ 'ಕ್ರಿಯೆ'. ಈ ಕ್ರಿಯಾ ಪ್ರತಿಕ್ರಿಯೆಗಳ ಸ್ವರೂಪವೇ ಮಕ್ಕಳು ಸನ್ನಿವೇಶಗಳೊಡನೆ ವರ್ತಿಸುವ 'ರೀತಿ'. ಅದನ್ನು ವ್ಯಕ್ತಿಯ ಮತ್ತು ಸಮಾಜದ ಹಿತಗಳಿಗೊಪ್ಪುವಂತೆ ರೂಪಿಸುವುದೇ ಶಿಕ್ಷಣವ್ಯವಸ್ಥೆ.[11] ಈ ವ್ಯವಸ್ಥೆಯನ್ನು

---

10. **ಸುಭಾಷಿತಮಂಜರೀ,** ಸಾಮಾನ್ಯ ನೀತಿ–ಶ್ಲೋ–367, ಪು–458–ರಸಗಂಗಾಧರ. ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು(2001)
11. **ವೀರಪ್ಪ. ಎನ್.ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–3, ಪು–40–42.(1962) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಸಕಲ ಶಾಸ್ತ್ರಪಾರಂಗತರಾದ ವಿಷ್ಣುಶರ್ಮರು ಪಂಚತಂತ್ರದ ಮೂಲಕ ಮಂದಮತಿಗಳಾದ ಮೂವರು ರಾಜಕುಮಾರರನ್ನು ಸುಶಿಕ್ಷಿತರನ್ನಾಗಿ ಮಾಡಲು ಉತ್ತಮ ಕಲಿಕಾ ಸನ್ನಿವೇಶವನ್ನು ಆಕರ್ಷಕ ಕಥೆಗಳ ಅದ್ಭುತ ಸಂಕಲನದಿಂದ ಕಲ್ಪಿಸಿ ಕೊಟ್ಟಿದ್ದಾರೆ. ವಂಶಗತವಾಗಿ ಬರುವ ಸಂಗ್ರಹಾಸಕ್ತಿ ಉಚಿತ ರೀತಿಯಲ್ಲಿ ಸಂಸ್ಕಾರಗೊಳ್ಳದಿದ್ದರೆ ವ್ಯಕ್ತಿ ಜಿಪುಣನಾಗಬಹುದು, ದುರಾಸೆಗೂ ತುತ್ತಾಗಬಹುದು. ನಿರಾಸೆಯಾದಾಗ ಹುಚ್ಚನೂ ಆಗಬಹುದು. ಅದರಿಂದ ಅವನ ವ್ಯಕ್ತಿತ್ವಕ್ಕೆ ಕಳಂಕ ಬರುವುದರ ಜೊತೆಗೆ ಅವನು ಸಮಾಜ ಜೀವನಕ್ಕೆ ಘಾತುಕನಾಗಿಯೂ ಪರಿಣಮಿಸಬಹುದು. ಮಕ್ಕಳ ಈ ತೀಕ್ಷ್ಣವಾಗಿರುವ ಹುಟ್ಟುಗುಣವನ್ನು ಅಂತಹ ಅಹಿತ ಮಾರ್ಗದಲ್ಲಿ ಬೆಳೆಯುವುದನ್ನು ತಪ್ಪಿಸುವುದು ಅಗತ್ಯವಿದೆ. ಜೊತೆಗೆ ಅವು ಹಿತವೆನಿಸುವ ಮಾರ್ಗದಲ್ಲಿ ಪಳಗುವಂತೆ ಮಾಡುವುದು ಶಿಕ್ಷಣದ ಕೆಲಸ.

वाञ्छा सज्जनसङ्गमे परगुणे प्रीतिर्गुरौ नम्रता  विद्यायां व्यसनं स्वयोषिति रतिर्लोकापवादाद्भयम् ॥

भक्तिः शूलिनि शक्तिरात्मदमने संसर्गमुक्तिः खले येष्वेते निवसन्ति निर्मलगुणास्तेभ्यो नरेभ्यो नमः ॥[12]

"ಸಜ್ಜನರ ಸಹವಾಸದಲ್ಲಿ ಆಸೆ, ಪರರ ಗುಣದಲ್ಲಿ ಪ್ರೀತಿ, ಗುರುವಿನಲ್ಲಿ ವಿಧೇಯತೆ, ವಿದ್ಯೆಯಲ್ಲಿ ಆಸಕ್ತಿ, ತನ್ನ ಹೆಂಡತಿಯಲ್ಲಿ – ಸುಖಪಡುವಿಕೆ, ಲೋಕಾಪವಾದ ದೆಸೆಯಿಂದ – ಹೆದರಿಕೆ, ಶಿವನಲ್ಲಿ – ಭಕ್ತಿ, ಮನೋನಿಗ್ರಹದಲ್ಲಿ – ಶಕ್ತಿ, ದುರ್ಜನರಲ್ಲಿ – ಸಹವಾಸತ್ಯಾಗ, ಈ ನಿರ್ಮಲಗುಣಗಳು ಯಾರಲ್ಲಿವೆಯೋ ಆ ಮಹಾತ್ಮರಿಗೆ  ನಮಸ್ಕಾರ."

ಹೀಗೆ ಸದ್ಗುಣಗಳಿಂದ ಉತ್ತಮ ವ್ಯಕ್ತಿತ್ವ ನಿರ್ಮಾಣಮಾಡಿಕೊಂಡು ಬದುಕನ್ನು ಸಾರ್ಥಕಪಡಿಸಿಕೊಳ್ಳುವಂತೆ ಪ್ರೇರೆಪಿಸುತ್ತಾ, ನೀತಿಶಿಕ್ಷಣದ ಮೂಲಕ ವಿಷ್ಣುಶರ್ಮರು ರಾಜಕುಮಾರರನ್ನು ಬದುಕಿನ ನೀತಿಕುಶಲರು ಹಾಗೂ, ರಾಜನೀತಿ ಪರಿಣಿತರನ್ನಾಗಿ ಪರಿವರ್ತನೆ ಮಾಡಿದ್ದಾರೆ.

ಪ್ರತಿಭಾನ್ವಿತ ಶಿಕ್ಷಕರಾದ ವಿಷ್ಣುಶರ್ಮರು ಈ ಮೂವರು ದುರ್ವಿನೀತರಾದ ರಾಜಕುಮಾರರನ್ನು ಕ್ರಮಬದ್ಧ ವೀಕ್ಷಣೆಗೊಳಪಡಿಸಿ, ಅವರುಗಳ ವೈಯಕ್ತಿಕ ಭಿನ್ನತೆಗಳು, ಜನ್ಮತಃ ಹೊಂದಿರುವ ಗುಣಧರ್ಮಗಳು, ಒಂದು ವೇಳೆ ಪ್ರತಿಕೂಲ ಸನ್ನಿವೇಶದ ಪರಿಣಾಮದಿಂದ ಅವರ ವರ್ತನೆಗಳು ಅಹಿತ ಮಾರ್ಗದಲ್ಲಿ ಬೆಳೆಯುತ್ತಿದೆಯೇ? ಇವೆಲ್ಲವನ್ನೂ ಪರಿಶೀಲಿಸಿ, ಅವರಲ್ಲಿ ಯಾವ ಅಪೇಕ್ಷಿತ ಬದಲಾವಣೆಗಳನ್ನು ತರಬಹುದು ಎಂಬುದರ ಬಗ್ಗೆ ಕೂಲಂಕಶವಾಗಿ ವಿಚಾರಮಾಡಿದ್ದಾರೆ. ಬದುಕಿನ ವ್ಯವಹಾರಗಳ ನೀತಿಪಾಠವನ್ನು ರಾಜನೀತಿ ಶಿಕ್ಷಣದೊಂದಿಗೆ ಹಸನುಮಾಡಿ, ನಾಣ್ನುಡಿಗಳು, ಸುಭಾಷಿತಗಳು, ಸೂಕ್ತಿಗಳು ಹಾಗೂ ನೀತಿಶ್ಲೋಕ ಮಿಶ್ರಿತ

---

12. **ಭರ್ತೃಹರಿಯ ನೀತಿಶತಕ,** ಸುಜನ ಪದ್ಧತಿ – ಶ್ಲೋ–62.

ಕಥಾಸಂಕಲನದ ಪಠ್ಯಕ್ರಮವನ್ನು ಸಿದ್ಧಪಡಿಸಿದ್ದಾರೆ. ಉತ್ತಮ ಶೈಕ್ಷಣಿಕ ಸನ್ನಿವೇಶಗಳನ್ನು ಅದರಲ್ಲೂ ದಿನನಿತ್ಯದ ಬದುಕಿನ ವ್ಯವಹಾರಗಳ ವಿಚಾರಗಳನ್ನೇ, ಪ್ರಾಣಿಪಶುಪಕ್ಷಿಗಳಿಗೆ ಆರೋಪಿಸಿ,ಪರಕಾಯಪ್ರವೇಶ ಮಾಡಿ ವರ್ತಿಸುವಂತೆ ಒಂದು ವಿಶಿಷ್ಟ ತಂತ್ರಗಾರಿಕೆಯನ್ನು ರೂಪಿಸಿದ್ದಾರೆ.

ಇನ್ನೊಂದು ವಿಶೇಷತೆಯೆಂದರೆ ವಿಷ್ಣುಶರ್ಮರು ಪಂಚತಂತ್ರದಲ್ಲಿ ಅಳವಡಿಸಿರುವ ಬೋಧನಾ ಮಾಧ್ಯಮ. "ಕಥಾನಿರೂಪಣಾ" ಮಾದ್ಯಮ. ಅದರಲ್ಲೂ ಬಹಳ ಮುಖ್ಯವಾಗಿ "ನಿರೂಪಣಾ ಶೃತಿ." ಶೃತಿ ಹೇಗಿದೆಯೆಂದರೆ, ತಾಳ, ಲಯ ಬದ್ಧವಾಗಿ ನಿರೂಪಿಸಿರುವ ಶೈಲಿ, ಆ ಧ್ವನಿ, ಹೇಳುವ ಸನ್ನಿವೇಶ ಎಷ್ಟರಮಟ್ಟಿಗೆ ಹೊಂದಿದೆಯೆಂದರೆ, ಸಂಗೀತ ಕ್ಷೇತ್ರದಲ್ಲಿ ಶೃತಿ, ಆಲಾಪನೆ, ಭಾವ, ರಾಗ, ತಾಳ, ಪಲ್ಲವಿ, ನುಡಿ ಮತ್ತು ಸ್ವರ ಮಾಧುರ್ಯ ಹೇಗೆ ಒಂದು ಹಾಡಿನ ಇಂಪನ್ನು, ಶಾಸ್ತ್ರೀಯ ಲಕ್ಷಣಗಳೊಂದಿಗೆ ಆಕರ್ಷಕ ಹಾಗೂ ಸುಶ್ರಾವ್ಯಗೊಳಿಸುವುದೋ; ಏನಾದರೊಂದು ಆಧ್ಯಾತ್ಮ ಚಿಂತನೆ ಅಥವಾ ಬದುಕಿನ ನೀತಿಯನ್ನು ಸೂಚಿಸುವುದೋ, ಹಾಗೆಯೇ ಕೇಳುಗರ ಮನಸ್ಸನ್ನು ಹಿಡಿದಿಟ್ಟು, ಬದುಕಿನ ನೀತಿಶಿಕ್ಷಣವನ್ನು, ಸುಂದರ ವ್ಯಕ್ತಿತ್ವನಿರ್ಮಾಣ ಕೌಶಲ್ಯವನ್ನು ಬೋಧಿಸುವ ಕಥಾ-ಸಂಗಮವೇ ಈ ಪಂಚತಂತ್ರ. ಇಲ್ಲಿ ಕಂಡು ಬರುವ ವ್ಯವಸ್ಥೆಗೆ ಶೈಕ್ಷಣಿಕ ಮನೋವಿಜ್ಞಾನದ ಅಂಶಗಳು ತುಂಬಾ ನೆರವಾಗುತ್ತವೆ.

ಪಾಠಪ್ರವಚನ ಹಾಗೂ ವ್ಯಕ್ತಿತ್ವದ ಬೆಳವಣಿಗೆಗೆ ಸಂಬಂಧಿಸಿದಂತೆ ನೂತನ ವಿಷಯಗಳನ್ನೂ, ಗುಣಲಕ್ಷಣಗಳನ್ನೂ ಸಂಗ್ರಹಿಸುವುದಕ್ಕೆ, ಹೆಚ್ಚು ಮಂದಿ ಉತ್ತಮ ಸ್ನೇಹಿತರನ್ನು ಮಾಡಿಕೊಳ್ಳುವುದಕ್ಕೆ, ಉತ್ತಮ ವಿಚಾರಗಳು, ಚಿತ್ರಗಳು ಇತ್ಯಾದಿಗಳನ್ನು ಸಂಗ್ರಹಿಸುವ ಕಾರ್ಯಕ್ಕೆ ತಿರುಗಿಸಿದರೆ ವಂಶಗತವಾಗಿ ಬರುವ ಸಂಗ್ರಹಾಸಕ್ತಿಯ ಸದ್ವಿನಿಯೋಗವಾದಂತಾಗುವುದು.

मन्दोऽप्यमन्दतामेति संसर्गेण विपश्चितः ।

पंकच्छिदः फलस्येव निकषेणाबिलं पयः ॥[13]

ಪಂಡಿತರ ಸಹವಾಸ ಅಥವಾ ಬುದ್ಧಿವಂತರ ಸ್ನೇಹದಿಂದ ದಡ್ಡನೂ ಪಂಡಿತ ಅಥವಾ ಬುದ್ಧಿವಂತನಾಗುತ್ತಾನೆ. ಬಗ್ಗಡವಾದ ನೀರು ಕತಕಬೀಜದ ಸಂಪರ್ಕದಿಂದ ತಿಳಿಯಾಗುವುದಿಲ್ಲವೇ? ಹೀಗೆಯೇ ಮಂದಮತಿಗಳಾದ ರಾಜಕುಮಾರರಿಗೆ ಪಂಡಿತೋತ್ತಮರಾದ ವಿಷ್ಣುಶರ್ಮರು ಗುರುಗಳಾಗಿ ಲಭ್ಯವಾದುದರಿಂದ, ಅವರೂ ರಾಜನೀತಿ ನಿಪುಣರಾಗಲು ಸಾಧ್ಯವಾಯಿತು. ಜೊತೆಗೆ ವ್ಯಕ್ತಿಗೆ ಆದರಣೀಯವೂ, ಸಮಾಜ ಜೀವನಕ್ಕೆ ಹಿತಕರವೂ ಎನಿಸುವ ಗುಣಶೀಲಗಳು ಬೆಳೆಯುತ್ತವೆ.

13. **ಸುಭಾಷಿತಮಂಜರೀ,** ಸದ್ಗುಣ-ದುರ್ಗುಣ- ಶ್ಲೋ-221, ಪು-177, मालविकाग्निमित्र, 2-7.(2001) ಕ.ಸಾ.ಪ.ಚಾಮರಾಜಪೇಟೆ. ಬೆಂಗಳೂರು-18

ಮೂಲಸ್ವಭಾವವನ್ನು ಸಂಸ್ಕರಿಸಲು ಏರ್ಪಡಿಸಿಕೊಳ್ಳುವ ಇಂತಹ ಕಾರ್ಯಕ್ರಮಗಳೇ ಶಿಕ್ಷಣ ಸನ್ನಿವೇಶಗಳು. ಕೋಪ, ಬೇಸರ, ವ್ಯಸನ, ಸಂತೋಷ, ಉತ್ಸಾಹ, ಭಯ, ಆಶ್ಚರ್ಯ, ಕಷ್ಟ, ಕೋಮಲತೆ, ಕರ್ಕಶ ಪ್ರೀತಿ ಇತ್ಯಾದಿ ಮನೋರಸಗಳನ್ನು ಸಂವೇದನೆಗಳೆಂದೂ ಕರೆಯುತ್ತಾರೆ. ಒಂದೊಂದು ಸಂವೇದನೆಯೂ ಒಂದೊಂದು ಹುಟ್ಟುಗುಣಕ್ಕೆ ಸಂಬಂಧಿಸಿದುದಾಗಿದೆ. ಈ ಗುಣಗಳು ಕಾರ್ಯಮುಖವಾದಾಗ ಆಯಾ ಮನೋರಸ ಪ್ರಕಾಶಕ್ಕೆ ಬರುವುದು ಎಂದು ಭಾವಿಸಲಾಗಿದೆ. ಅವನ್ನು ಪ್ರತ್ಯೇಕವಾಗಿ ಕಾಣಲಾಗದಿದ್ದರೂ ಅವುಗಳ ಫಲವಾಗಿ ಮಾಡುವ ದೈಹಿಕ ವರ್ತನೆಗಳಂದ ಕಂಡುಕೊಳ್ಳಬಹುದು. ಈ ಸಂವೇದನೆಗಳು ಉಚಿತ ರೀತಿಯಲ್ಲಿ ಸಂಸ್ಕರಿಸುವ ಕಾರ್ಯ ಶಿಕ್ಷಣದ ಒಂದು ಬಹುಮುಖ್ಯ ಅಂಶವಾಗಿದೆ. ವ್ಯಕ್ತಿಗೂ ಸಮಾಜಕ್ಕೂ ಹಿತವೆನಿಸುವ ಅಭ್ಯಾಸಗಳಂತೆ ಮನೋಭಾವವೂ, ದೃಷ್ಟಿಧ್ಯೇಯಗಳೂ ರೂಪುಗೊಳ್ಳಬೇಕು. ಹುಟ್ಟುಗುಣಗಳು ವ್ಯಕ್ತಿತ್ವದ ಮಂದಿರವನ್ನು ರೂಪಿಸಲು ಇಟ್ಟಿಗೆಗಳಂತೆ ಸಹಕಾರಿಯಾದರೆ, ಆ ಇಟ್ಟಿಗೆಗಳನ್ನು ಹದವರಿತು ಬಂಧಿಸುವ ಗಾರೆಯಂತೆ ನೆರವಾಗುತ್ತವೆ.[14]

ಇದನ್ನು ಚೆನ್ನಾಗಿ ಮನಗಂಡಿರುವ ವಿಷ್ಣುಶರ್ಮರು ಪಂಚತಂತ್ರದಲ್ಲಿ ವ್ಯವಸ್ಥಿತವಾದ ಶಿಕ್ಷಣ ಸನ್ನಿವೇಶಗಳನ್ನು ಒದಗಿಸಿ ರಾಜಕುಮಾರರಿಗೆ ಉತ್ತಮ ನೀತಿಪಾಠವನ್ನು ಬೋಧಿಸಿದ್ದಾರೆ. ಇದು ಶಿಕ್ಷಕರಿಗೆಲ್ಲಾ ಒಂದು ಆದರ್ಶವೇ ಸರಿ. ಅದರಲ್ಲೂ ಮಂದಮತಿಗಳಗೆ ಹೇಗೆ ಶಿಕ್ಷಣ ನೀಡಬಹುದು ಎಂಬುದಕ್ಕೆ ಒಂದು ಮಾದರಿಯಾಗಿದೆ. ತೀಕ್ಷ್ಣಮತಿಯ ಮಕ್ಕಳಗೆ ಶಿಕ್ಷಣ ನೀಡುವುದು ಬಹಳ ದೊಡ್ಡ ವಿಚಾರವಲ್ಲ ಅಥವಾ ಸಾಧನೆಯೂ ಅಲ್ಲ. ಮಂದಮತಿಗಳನ್ನು ಅರ್ಥಮಾಡಿಕೊಂಡು ಅವರಿಗೆ ಕಲಿಕೆಯಲ್ಲಿ ಆಸಕ್ತಿಯನ್ನು ಪ್ರೇರೇಪಿಸಿ, ಶಿಕ್ಷಣ ಕೊಟ್ಟು ಸುಶಿಕ್ಷಿತರನ್ನಾಗಿ ಮಾಡುವುದು ಒಂದು ಸವಾಲೇ ಹೌದು. ಅದು ಒಬ್ಬ ಪ್ರಾಮಾಣಿಕ ಶಿಕ್ಷಕನ ಲಕ್ಷಣ. ಇಂಥಹ ಪ್ರಾಮಾಣಿಕ ಕಾರ್ಯವನ್ನು ವಿಷ್ಣುಶರ್ಮರು ಪಂಚತಂತ್ರದಲ್ಲಿ ಬಹಳ ಯಶಸ್ವಿಯಾಗಿ ನಿರ್ವಹಿಸಿದ್ದಾರೆ.

भूतानां प्राणिनः श्रेष्ठाः प्राणिनां बुद्धिजीविनः
बुद्धिमत्सु नराःश्रेष्ठाः नराणां सात्विकाः स्मृताः ।
सात्विकेषु च विद्वाम्सः विद्वत्सु कृतबुद्धयः
कृतबुद्धिषु कर्तारः कर्तृषु ब्रम्हवेदिनः ॥[15]

---

14. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–3, ಪು–41–44.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4.

15. मनुस्मृतिः – 1 – 96,97.

ಲೋಕದಲ್ಲಿ ಜಡವಸ್ತುಗಳಗಿಂತಲೂ ಪ್ರಾಣಿಗಳು ಶ್ರೇಷ್ಠ. ಅವುಗಳಲ್ಲಿ ಬುದ್ಧಿಯನ್ನುಪಯೋಗಿಸುವ ಇರುವೆ, ನರಿ ಮೋದಲಾದವುಗಳು ಉತ್ತಮ. ಬುದ್ಧಿಜೀವಿಗಳಲ್ಲಿ ಮಾನವ, ಮಾನವರಲ್ಲಿ ಒಳ್ಳೆಯವರು, ಒಳ್ಳೆಯವರಲ್ಲಿ ವಿದ್ಯಾವಂತರು, ವಿದ್ಯಾವಂತರಲ್ಲಿ ಪರಿಣಿತರು, ಪರಿಣಿತರಲ್ಲಿ ಆಚರಿಸುವವರು, ಆಚರಿಸುವವರಲ್ಲಿ ಬ್ರಹ್ಮಜ್ಞಾನಿಗಳು ಶ್ರೇಷ್ಠ ಎಂಬಂತೆ ವಿಷ್ಣುಶರ್ಮರು ಒಬ್ಬ ಶ್ರೇಷ್ಠ ಶಿಕ್ಷಕರಾಗಿದ್ದಾರೆ.



## 3-2 ಕಲಿಕೆ:- ಅರ್ಥ-ವ್ಯಾಖ್ಯೆ-ವ್ಯಾಪ್ತಿ-ಸ್ವರೂಪ

ಓದು ಬರಹ ಲೆಕ್ಕಾಚಾರಗಳನ್ನೇ **"ಕಲಿವು"** ಎನ್ನುವುದು ಮನೋವಿಜ್ಞಾನದ ಪ್ರಕಾರ ಒಂದು ಸಂಕುಚಿತ ಅರ್ಥವಾಗುತ್ತದೆ. ಮುಂದೆ ಬರುವ ಸಮಸ್ಯೆಗಳನ್ನು ಸೂಕ್ತರೀತಿಯಿಂದ ಎದುರಿಸುವಂತೆ ಮೂಲ ವರ್ತನೆಗಳನ್ನು ಅನುಭವಗಳ ಮೂಲಕ ಮಾರ್ಪಡಿಸುವುದೇ ಶಿಕ್ಷಣ. ಹಾಗೆ ಯಾವೊಂದು ಮೂಲ ವರ್ತನೆ ಮಾರ್ಪಟ್ಟರೂ ಅದು ಕಲಿವಾಗುತ್ತದೆ. ಮಕ್ಕಳು ಓದುಬರಹ, ಲೆಕ್ಕಾಚಾರಗಳ ಜೊತೆಗೆ ಸಾಂಸ್ಕೃತಿಕ ಅಂಶಗಳನ್ನೂ, ಸಂಪ್ರದಾಯಗಳನ್ನೂ ಕಲಿಯುವರು; ಕೌಟುಂಬಿಕ ಜೀವನಕ್ಕೆ ಸಂಬಂಧಿಸಿದ ನಡವಳಿಕೆಗಳನ್ನೂ ಕಲಿಯುವರು; ಪ್ರೀತಿ, ದ್ವೇಷ, ಭೀತಿ, ಆತ್ಮವಿಶ್ವಾಸ- ಇವನ್ನೂ ಬೆಳೆಸಿಕೊಳ್ಳುವರು; ವ್ಯಕ್ತಿತ್ವಕ್ಕೆ ಸಂಬಂಧಿಸಿದ ಅನೇಕ ಗುಣಶೀಲಗಳನ್ನೂ ರೂಪಿಸಿಕೊಳ್ಳುವರು; ತಮ್ಮ ಅಗತ್ಯಗಳನ್ನು ಅರಿತುಕೊಳ್ಳುವರು. ಇವೆಲ್ಲವೂ ಹೊಸದಾಗಿ ಸಿದ್ಧಿಸಿದವೇ. ಆದರೂ ಅವೆಲ್ಲ ವಂಶಗತವಾಗಿ ಬಂದ ಹಲವು ಮೂಲವರ್ತನೆಗಳಿಂದ ಮಾರ್ಪಟ್ಟವು. ಮನೋವಿಜ್ಞಾನ ಬಹು ಮಟ್ಟಿಗೆ ಆ ಮೂಲ ವರ್ತನೆಗಳ ಪರಿಚಯ ಮಾಡಿಕೊಟ್ಟು, ಅವನ್ನು ಉಚಿತ ರೀತಿಯಲ್ಲಿ ಬೆಳೆಸುವ ಕಾರ್ಯವನ್ನು ತೋರಿಸಿ ಕೊಡುತ್ತದೆ. ಅಂದರೆ ಆ ವಿಜ್ಞಾನದ ಬಹು ಭಾಗ ಕಲಿವಿಗೆ ಸಂಬಂಧಪಟ್ಟಂತೆ ರೂಪುಗೊಂಡಿರುತ್ತದೆ.[16] ವಿಷ್ಣುಶರ್ಮರು ಪಂಚತಂತ್ರದ ಮೂಲಕ ಈ ಹಿನ್ನೆಲೆಯಲ್ಲೇ ರಾಜಕುಮಾರರಿಗೆ ಉತ್ತಮ ಶಿಕ್ಷಣವನ್ನು ಒದಗಿಸಿ ವ್ಯಕ್ತಿತ್ವ ನಿರ್ಮಾಣ ಕೈಗೊಂಡಿದ್ದಾರೆ.

प्रसह्य मणिमुद्धरेन्मकरवक्त्रदंष्ट्राङ्कुरा ।
त्समुद्रमपि संतरेत्प्रचलदुर्मिमालाकुलम् ॥
भुजङ्गमपि कोपितं शिरसि पुष्पवद्धारये-
न्न तु प्रतिनिविष्टमूर्खजनचित्तमाराधयेत् ॥[17]

ಮೊಸಳೆಯ ಬಾಯೊಳಗಿನ ಹಲ್ಲುಗಳ ಮಧ್ಯದಲ್ಲಿ ಸಿಕ್ಕಿಕೊಂಡ ರತ್ನವನ್ನೂ ಹಠಾತ್ತಾಗಿ ಹೊರಗೆ ತೆಗೆಯಬಹುದು. ಏಳುತ್ತಿರುವ ಅಲೆಗಳ ಸಾಲುಗಳಿಂದ ಕ್ಷುಬ್ಧವಾದ ಸಮುದ್ರವನ್ನೂ ಕೂಡ ದಾಟಬಹುದು. ಸಿಟ್ಟಿಗೆದ್ದ ಹಾವನ್ನೂ ಕೂಡ ಹೂವಿನಂತೆ ತಲೆಯಲ್ಲಿ ಧರಿಸಬಹುದು. ಆದರೆ ಹಟಮಾರಿಯಾದ ಮೂರ್ಖನ ಮನಸ್ಸನ್ನು ಮೆಚ್ಚಿಸಲಾಗುವುದಿಲ್ಲ. ಅಂದರೆ ಮೂರ್ಖರಿಗೆ ವಿದ್ಯೆ ಕಲಿಸುವುದು ಬಹಳ ಕಷ್ಟದ ಕೆಲಸ.

---

16. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ-11, ಪು-185,186.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4.
17. **ಭರ್ತೃಹರಿಯ ನೀತಿಶತಕ,** ಮೂರ್ಖಪದ್ಧತಿ ಶ್ಲೋ-4.

ಒಬ್ಬರಲ್ಲ, ಇಬ್ಬರಲ್ಲ ಮೂವರು ಮೂರ್ಖ ರಾಜಕುಮಾರರಿಗೆ ರಾಜನೀತಿ ಶಿಕ್ಷಣ ನೀಡಿ, ಸಾರ್ಥಕ ಬದುಕಿನ ನೀತಿನಿಯಮಗಳನ್ನು ಕಲಿಸಿ ಸಾಧನೆಗೈದಿದ್ದಾರೆ ಮೇಧಾವಿ ಶಿಕ್ಷಕರಾದ ವಿಷ್ಣುಶರ್ಮರು.

ಮನೋವಿಜ್ಞಾನದಲ್ಲಿ ಕಲಿವೇ ಪ್ರಧಾನ ಅಧ್ಯಯನದ ಭಾಗವಾಗಿರುತ್ತದೆ. ಕಲಿಕೆ ಎಂದರೆ ವ್ಯಕ್ತಿಯ ವರ್ತನೆಯಲ್ಲಿ ಬದಲಾವಣೆಗಳನ್ನು ತರುವುದಾಗಿದೆ. ಮಾನವರು ತಮ್ಮ ಜೀವನಪೂರ್ತಿ ಅನೇಕ ಬದಲಾವಣೆಗಳನ್ನು ಹೊಂದುತ್ತಿರುತ್ತಾರೆ. ಮಾನವನಿಗೆ ಕಲಿಕೆ ಅನಿವಾರ್ಯ ಹಾಗೂ ಅಗತ್ಯ. ಅವನ ಭವಿಷ್ಯ ಅವನು ಮಾಡಿಕೊಳ್ಳುವ ನಾನಾ ಬಗೆಯ ಕಲಿಕೆಯ ಮೇಲೆಯೇ ಅವಲಂಭಿಸಿರುತ್ತದೆ. ಈ ರೀತಿಯ ಕಲಿಕೆ, ಜ್ಞಾನ, ಕುಶಲತೆ, ಆಸಕ್ತಿ, ನಾನಾ ಬಗೆಯ ಸಾಮರ್ಥ್ಯಗಳು ಮತ್ತು ಅಭಿರುಚಿಗೆ ಸಂಬಂಧಿಸಿರಬಹುದು. ಇವುಗಳನ್ನು ವ್ಯವಸ್ಥಿತ ರೀತಿಯಲ್ಲಿ ಮಕ್ಕಳಿಗೆ ಒದಗಿಸಿಕೊಡುವುದೇ ಶಿಕ್ಷಣದ ಮುಖ್ಯ ಕರ್ತವ್ಯವಾಗಿರುತ್ತದೆ. ಆದುದರಿಂದ ಶಿಕ್ಷಣದ ಯಾವುದೇ ಹಂತದಲ್ಲಿ ಕಲಿಕೆ ಮುಖ್ಯವಾಗುತ್ತದೆ. ವಿವಿಧ ಅನುಭವಗಳಿಂದ ಮಕ್ಕಳು ಕಲಿಯುತ್ತಾರೆ. ಇದರಿಂದ ಅವರ ವರ್ತನೆಯಲ್ಲಿ ಸೂಕ್ತ ಪರಿವರ್ತನೆಯಾಗುತ್ತದೆ. ಇದನ್ನೇ "ಕಲಿಕೆ" ಎನ್ನುತ್ತಾರೆ. ಮೂಲವರ್ತನೆಗಳನ್ನು ಅನುಭವಗಳ ಮೂಲಕ ಮಾರ್ಪಡಿಸುವುದೇ ಶಿಕ್ಷಣ. **"Education is the modification of behavior."** ಕಲಿಕೆಗೆ ಸರ್ವಮಾನ್ಯ ವ್ಯಾಖ್ಯೆಯನ್ನು ನೀಡುವುದು ಬಹಳ ಕಷ್ಟದ ಕೆಲಸ. ಏಕೆಂದರೆ ವಿವಿಧ ಸಿದ್ಧಾಂತಗಳನ್ನು ಮಂಡಿಸಿರುವ ಮನೋವಿಜ್ಞಾನಿಗಳು ಬೇರೆ ಬೇರೆ ದೃಷ್ಟಿಕೋನದಿಂದ ಕಲಿಕೆಗೆ ತಮ್ಮದೇ ಆದ ವ್ಯಾಖ್ಯಾನ ನೀಡಿರುತ್ತಾರೆ. ಕೆಲವು ಮುಖ್ಯ ವ್ಯಾಖ್ಯೆಗಳೆಂದರೆ:–[18]

1. "ಅನುಭವಗಳಿಂದ ವರ್ತನೆಯಲ್ಲುಂಟಾಗುವ ಬದಲಾವಣೆಯೇ ಕಲಿಕೆ." **GATES**

2."ತರಬೇತಿ ಮತ್ತು ಅಭ್ಯಾಸಗಳ ಮೂಲಕ ವರ್ತನೆಯ ಉಗಮ ಮತ್ತು ಮಾರ್ಪಾಟನ್ನು ಉಂಟುಮಾಡುವ ಪ್ರಕ್ರಿಯೆಯೇ ಕಲಿಕೆ." **CRONBACK.LEE..J.**

3. "ಒಬ್ಬ ವ್ಯಕ್ತಿಯ ವರ್ತನೆ, ಒಳನೋಟ, ಆಸಕ್ತಿ, ಚಿಂತನೆ ಇವುಗಳಲ್ಲಿ ಉಂಟಾಗುವ ಬದಲಾವಣೆಯೇ ಕಲಿಕೆ." **BLAIR & SIMPSON .**

4. "ಪೂರ್ವ ವರ್ತನೆಯ ಆಧಾರದ ಮೇಲೆ ವ್ಯಕ್ತಿಯ ವರ್ತನೆಯಲ್ಲಿ ಹೆಚ್ಚು ಕಾಲ ನೆಲಸಿರುವಂತಹ ಬದಲಾವಣೆಯೇ ಕಲಿಕೆ.," **MELVIN H. MARX**

5. "ಸನ್ನಿವೇಶದ ಅವಶ್ಯಕತೆಗಳನ್ನು ಪೂರೈಸಲು ವರ್ತನೆಯಲ್ಲಿ ಆಗುವ ಎಲ್ಲಾ ಮಾರ್ಪಾಟುಗಳನ್ನು ಕಲಿಕೆ ಎನ್ನುವರು. **GARDNER MURPHY**

---

**18. ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–5, ಪು–222,223.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

6. " ಪ್ರಯತ್ನ ಮತ್ತು ಅನುಭವದ ಪರಿಣಾಮವಾಗಿ ಉಂಟಾಗುವ ಶಾಶ್ವತ ಬದಲಾವಣೆಯೇ ಕಲಿಕೆ.

**WALTER V. BINGHAM**

ಮೇಲಿನ ವ್ಯಾಖ್ಯೆಗಳನ್ನು ವಿಶ್ಲೇಷಿಸಿದಾಗ ಕಲಿಕಾ ಪ್ರಕ್ರಿಯೆಯ ಕೆಲವು ಪ್ರಮುಖ ಅಂಶಗಳನ್ನು ಕಾಣಬಹುದು. ಅವುಗಳೆಂದರೆ, ಅನುಭವದ ಪರಿಣಾಮವಾಗಿ ವರ್ತನೆಯಲ್ಲಾಗುವ ಶಾಶ್ವತವಾದ ಬದಲಾವಣೆಗಳೇ ಕಲಿಕೆ. ಆದರೆ ವರ್ತನೆಯ ಎಲ್ಲಾ ಬದಲಾವಣೆಗಳೂ ಕಲಿಕೆಯಲ್ಲ. ಔಷಧಿಗಳು, ಮಾದಕ ಪದಾರ್ಥಗಳು ಆಯಾಸ, ಪರಿಪಕ್ವನ, ಅಪಘಾತಗಳು – ಇವುಗಳಿಂದುಂಟಾಗುವ ಬದಲಾವಣೆ ಶಾಶ್ವತವಾಗಿದ್ದರೂ ಸಹ ಅದನ್ನು 'ಕಲಿಕೆ' ಎನ್ನಲಾಗುವುದಿಲ್ಲ. ಕಲಿಕೆಯನ್ನು ನೇರವಾಗಿ ವೀಕ್ಷಿಸಲು ಸಾಧ್ಯವಾಗದಿದ್ದರೂ, ಅದನ್ನು ವ್ಯಕ್ತಿಯ ಚಟುವಟಿಕೆಗಳಲ್ಲಿ ಕಾಣಬಹುದಾಗಿದೆ. "ಕಲಿಕೆ" ಎನ್ನುವುದು ವ್ಯಕ್ತಿಯ ಕೆಲಕಾಲ ನೆಲಸಿರುವಂತಹ ಸ್ವರೂಪದ ಬದಲಾವಣೆಗಳನ್ನು ಒಳಗೊಳ್ಳುತ್ತದೆ. ಕಲಿಕೆ ಎನ್ನುವುದು ಅಭ್ಯಾಸ ಮತ್ತು ಅನುಭವಗಳ ಮೇಲೆ ಅವಲಂಬಿಸಿರುವಂಥಾದ್ದು. ಹೊಸ ವರ್ತನೆಗಳನ್ನು, ಜ್ಞಾನವನ್ನು, ಕೌಶಲ್ಯವನ್ನು, ಗುರಿಗಳನ್ನು ಪರಿಚಯ ಮಾಡಿಕೊಳ್ಳುವುದು ಮೊದಲ ಭಾಗವಾದರೆ, ಹಾಗೆ ಕಲಿತದ್ದನ್ನು ದೃಢಪಡಿಸಿಕೊಳ್ಳುವುದು ಎರಡನೆಯ ಭಾಗ. ನೂತನ ವಿಷಯಗಳನ್ನು ಹೊಸ ಸನ್ನಿವೇಶಗಳಿಗೆ ಅನ್ವಯಿಸುವ ಜ್ಞಾನ, ಕಾರ್ಯವಿಧಾನ ಮುಂತಾದವುಗಳು ಹೆಚ್ಚು ಪ್ರಯೋಜನಕಾರಿಯಾಗಬೇಕಾದರೆ ಅವು ವ್ಯಕ್ತಿಯ ಇಷ್ಟದಂತೆ ಸುಲಭವಾಗಿ ನಡೆಯುವಂತೆ ಪಳುಗಬೇಕು.

ಒಟ್ಟಿನಲ್ಲಿ ಕಲಿಕೆ ಅಭ್ಯಾಸ ಮತ್ತು ಅನುಭವಗಳಿಂದ ಉಂಟಾಗುವ ವರ್ತನೆಯಲ್ಲಿನ ಬದಲಾವಣೆ ಅಥವಾ ಮಾರ್ಪಾಟು ಎಂದಾಯಿತು. 'ಕಲಿಕೆ' ವಿಕಾಸವನ್ನು ಸಹಕರಿಸುವ ಅಥವಾ ಬೆಂಬಲಿಸುವ ಒಂದು ಪ್ರಕ್ರಿಯೆ ಎಂದು ಹೇಳಬಹುದು. ಆದ್ದರಿಂದ ಶೈಕ್ಷಣಿಕ ಪ್ರಕ್ರಿಯೆಗಳನ್ನು ಬೆಳವಣಿಗೆ ಮತ್ತು ವಿಕಾಸದ ಪ್ರಕ್ರಿಯೆಗಳೊಂದಿಗೆ ಸಮನ್ವಯಗೊಳಿಸಬೇಕೆಂಬುದನ್ನು ಅಧ್ಯಾಪಕರು ಸದಾ ಸ್ಮರಣೆಯಲ್ಲಿಟ್ಟುಕೊಳ್ಳುವುದು ಒಳ್ಳೆಯದು. ಶೈಕ್ಷಣಿಕ ಮನೋವಿಜ್ಞಾನಿಗಳು ಕಲಿಕೆಯಲ್ಲಿ ಹಲವಾರು ಘಟಕಗಳನ್ನು ಗುರುತಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದವೆಂದರೆ:–[19]

---

19. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–5, ಪು–224,225.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

**1. ಕಲಿಯುವ ವ್ಯಕ್ತಿ–**

ಕಲಿಯಲು ಬರುವ ವ್ಯಕ್ತಿ ತನ್ನದೇ ಆದ ವ್ಯಕ್ತಿತ್ವ ಮತ್ತು ಅನುಭವಗಳನ್ನು ಪಡೆದಿರುತ್ತಾನೆ. ಅವನಿಗೆ ತನ್ನದೇ ಆದ ಆಸೆ, ಅವಶ್ಯಕತೆಗಳು, ಶಕ್ತಿಸಾಮರ್ಥ್ಯಗಳು ಹಾಗೂ ಆಸಕ್ತಿ ಅಭಿರುಚಿಗಳಿರುತ್ತವೆ. ಇವುಗಳೊಂದಿಗೆ ಅವನು ಕಲಿಯುವ ಸನ್ನಿವೇಶಕ್ಕೆ ಬರುತ್ತಾನೆ. ಅವನಿಗೆ ಕಲಿಯಲು ಆಸಕ್ತಿಯಿರಬಹುದು ಆದರೆ ಕಲಿಯುವ ಸಾಮರ್ಥ್ಯ ವಿಲ್ಲದಿರಬಹುದು. ಕಲಿಯುವ ಉದ್ದೇಶವಿರಬಹುದು, ಆದರೆ ಅದಕ್ಕೆ ಶಾರೀರಿಕ, ಮಾನಸಿಕ, ಸಾಮಾಜಿಕ ಅಥವಾ ಇನ್ನಾವುದೇ ಅಡಚಣೆ ಇರಬಹುದು.

**2. ಕಲಿಯುವ ಸನ್ನಿವೇಶ:–**

ಕಲಿಕೆಯ ಸನ್ನಿವೇಶ ಸಂದರ್ಭಗಳು ಒಂದೊಂದು ವ್ಯಕ್ತಿಗೂ ಭಿನ್ನವಾಗಿರುತ್ತದೆ. ಒಂದೇ ಸನ್ನಿವೇಶ ಅದೇ ವ್ಯಕ್ತಿಗೆ ಬೇರೆ ಬೇರೆ ಕಾಲದಲ್ಲಿ ಭಿನ್ನವಾಗಿರಬಹುದು ಅಂದರೆ ಕಲಿಕೆಯ ಸನ್ನಿವೇಶ ಕಲಿಯುವ ವ್ಯಕ್ತಿಯ ಅವಿಭಾಜ್ಯ ಅಂಗವಾಗಿರುತ್ತದೆ. (ಮತ್ತು ಕಲಿಯಬೇಕಾದ ವಸ್ತುವನ್ನವಲಂಭಿಸಿರುತ್ತದೆ.

**3. ಕಲಿಯುವ ಪ್ರಕ್ರಿಯೆ:–**

ಇದು ಒಂದು ಸಂಕೀರ್ಣ ವಿಚಾರ. ಕಲಿಯುವ ಪ್ರಕ್ರಿಯೆ ಹೀಗೇ ನಡೆಯುತ್ತದೆ ಎಂದು ಹೇಳುವುದು ತುಂಬಾ ಕಷ್ಟ. ಸಾಮಾನ್ಯವಾಗಿ ಕಲಿಯುವ ಪ್ರಕ್ರಿಯೆ ಕಲಿಯುವ ವ್ಯಕ್ತಿ, ಕಲಿಕೆಯ ಸನ್ನಿವೇಶ ಮತ್ತು ಕಲಿಯಬೇಕಾದ ವಸ್ತುವನ್ನವಲಂಭಿಸಿರುತ್ತದೆ.

**4. ಕಲಿಸುವ ವ್ಯಕ್ತಿ.**

ಕಲಿಕೆಯು ಕಲಿಸುವ ಅಧ್ಯಾಪಕನನ್ನು ಅವಲಂಭಿಸಿರುತ್ತದೆ. ಇಲ್ಲಿ ಅವನ ಹಿನ್ನೆಲೆ, ಅನುಭವ, ಸಾಮರ್ಥ್ಯಗಳು ಮತ್ತು ಅವನ ವ್ಯಕ್ತಿತ್ವ ಪ್ರಧಾನ ಪಾತ್ರ ವಹಿಸುತ್ತವೆ. ವಿದ್ಯಾರ್ಥಿಯು ಶಾಲೆ ಅಥವಾ ಗುರುಕುಲದ ಒಳಗೆ ಮತ್ತು ಹೊರಗೆ ಕಲಿತದ್ದಕ್ಕೆಲ್ಲಾ ಅಧ್ಯಾಪಕರೇ ನೇರವಾಗಿ ಕಾರಣರಲ್ಲದಿದ್ದರೂ ಕಲಿಕೆಯ ನಿರ್ದೇಶನ, ಪ್ರೇರಣೆ, ಅಭಿಪ್ರೇರಣೆ, ಅವಧಾನ, ಅವಲೋಕನ ಮತ್ತು ಲಕ್ಷ್ಯಗಳಲ್ಲಿ ಅವರ ಪಾತ್ರ ಮಹತ್ವದ್ದಾಗಿರುತ್ತದೆ." ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" ಎಂಬ ದಾಸವಾಣಿಯಂತೆ ಗುರುವಿನ ಆಶೀರ್ವಾದ ಮಹತ್ವಪೂರ್ಣವಾದದ್ದು.

**೫. ಕಲಿಯುವ ವಸ್ತು:**

ಕಲಿಯಬೇಕಾದ ವಸ್ತು ಕಲಿಯುವ ಹಾಗೂ ಕಲಿಸುವ ಕ್ರಮವನ್ನು ನಿರ್ಧರಿಸುತ್ತದೆ. ಕಲಿಯುವ ವಸ್ತು ವ್ಯಕ್ತಿಯ ವಿವಿಧ ವಯೋಮಾನದಲ್ಲಿ ಕಲಿಯಬೇಕಾದ ಅಂಶಗಳನ್ನು ಸೂಚಿಸುತ್ತದೆ.

**ಕಲಿಕೆಯ ಬಗ್ಗೆ ಗಮನದಲ್ಲಿಟ್ಟುಕೊಳ್ಳಬೇಕಾದ ಕೆಲವು ಅಂಶಗಳು ಹೀಗಿವೆ:–**

ಕಲಿಕೆ ವ್ಯಾಪಕವಾದುದು. ಅದು ಜೀವನದ ಎಲ್ಲಾ ಪ್ರಾಕಾರಗಳಿಗೂ ಸಂಬಂಧಪಟ್ಟಿರುತ್ತದೆ. ಅದು ವ್ಯಕ್ತಿಯ ಬೌದ್ಧಿಕ, ಸಾಮಾಜಿಕ ಹಾಗೂ ಸಂವೇಗಾತ್ಮಕ ವಲಯಗಳಿಗೆ ಸಂಬಂಧಿಸಿರುತ್ತದೆ. ಕಲಿಕೆ ವರ್ತನೆಯ ನಿರಂತರ ಬದಲಾವಣೆ. ಅದು ಜೀವನಪೂರ್ತಿ ನಡೆಯುತ್ತಲೇ ಇರುತ್ತದೆ. ಅದಕ್ಕೇ ಹೇಳುವುದು "ಜೀವನಪೂರ್ತಿ ಕಲಿಯುವುದು ಇದ್ದೇ ಇದೆ" ಎಂದು. ಕಲಿಕೆ ವಿಕಾಸಾತ್ಮಕ ಹಾಗೂ ವರ್ತನೆಯ ಸರಿಯಾದ ರೂಪ ಕಲಿಕೆಗಳು ಯಾವಾಗಲೂ ಗುರಿಗಳಿಗೆ ಸಂಬಂಧಿಸಿದ್ದು. ಈ ಗುರಿಗಳನ್ನು ವೀಕ್ಷಣಾ ಸಾಧ್ಯವಾದ ವರ್ತನೆಗಳನ್ನಾಗಿ ನಿರೂಪಿಸಬಹುದು. ಕಲಿಕೆಗೂ ಆಸಕ್ತಿಗಳಿಗೂ ನಿಕಟವಾದ ಸಂಬಂಧವಿದೆ. ಯಾವುದೇ ವ್ಯಕ್ತಿ ಅವನಿಗೆ ಆಸಕ್ತಿಯಿರುವ ವಿಷಯಗಳನ್ನು ಬೇಗ ಕಲಿಯುತ್ತಾನೆ. ಕಲಿಕೆಯು ಸಿದ್ಧತೆ ಮತ್ತು ಪ್ರೇರಣೆಯನ್ನು ಅವಲಂಭಿಸಿರುತ್ತದೆ.[೨೦]

ಕಲಿಯುವ ಕ್ರಮವನ್ನನುಸರಿಸಿ ಕಲಿವನ್ನು ಸ್ಥೂಲವಾಗಿ ನಾಲ್ಕು ವಿಧಗಳಾಗಿ ವಿಂಗಡಿಸಬಹುದು. ಇವುಗಳು ಬಹಳ ಮುಖ್ಯವಾಗಿದ್ದು, ಇದರ ಪರಿಚಯದಿಂದ ಶಿಕ್ಷಕರ ಕಾರ್ಯಕ್ಕೆ ತುಂಬಾ ಸಹಕಾರಿಯಾಗುವುದು.

**1. ಪರಿವರ್ತನ ರೀತಿಯ ಕಲಿವು.**

ವ್ಯಕ್ತಿಯ ಮೂಲ ಸ್ವಭಾವಗಳನ್ನು ಹಲವು ಸನ್ನಿವೇಶಗಳ ರಚನೆಯಿಂದ ಮಾರ್ಪಡಿಸುವುದು ಸಾಧ್ಯ. ಈ ಮೂಲಕ ಸಾಧ್ಯವಾಗುವ ಕಲಿವನ್ನು ಪರಿವರ್ತನಾ ರೀತಿಯ ಕಲಿವೆನ್ನುತ್ತೇವೆ.

**2. ಅನುಕರಣ ರೀತಿಯ ಕಲಿವು.**

ಚಿಕ್ಕವರಿರುವಾಗ ಮಕ್ಕಳು ದೊಡ್ಡವರಾಡುವ ಮಾತನ್ನು, ಮಾಡುವ ಕೆಲಸವನ್ನು ನೋಡಿ ತಾವೂ ಅದರಂತೆ ಮಾಡಲು ಪ್ರೇರಿತರಾಗಿ, ಆಚರಿಸಿ ಕಲಿಯುತ್ತಾರೆ. ಇದೇ ಅನುಕರಣ ರೀತಿಯ ಕಲಿವು.ಸಮಾಜದ ಆಚಾರ– ವ್ಯವಹಾರಗಳನ್ನು, ಸಂಪ್ರದಾಯಗಳನ್ನು, ಆದರ್ಶ ಪುರುಷರ ದೃಷ್ಟಿಧ್ಯೇಯಗಳನ್ನು ಕಲಿಯಲು ಅನುಕರಣದಿಂದ ಸಾಧ್ಯವಾಗುತ್ತದೆ. ಅನುಕರಣ ಎರಡು ರೀತಿಯದ್ದಾಗಿದೆ. 'ಪ್ರಾಸಂಗಿಕ' ಮತ್ತು 'ಉದ್ದೇಶಪೂರ್ವಕ' ಅನುಕರಣ.

---

೨೦. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–೫, ಪು–೨೨೪,೨೨೫.(೨೦೦೫) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–೫೭೭೦೦೫.

**3. ತಿದ್ದಿಕೊಂಡು ಕಲಿಯುವಿಕೆ**.

ಯಾವುದಾದರೊಂದು ಹೊಸ ಕೆಲಸ ಮಾಡಬೇಕಾಗಿ ಬಂದಾಗ ಆಚರಿಸಲು ಪ್ರಯತ್ನಿಸಿ, ಸರಿಯಾಗದಿದ್ದರೆ ತಿದ್ದಿಕೊಂಡು ಪುನಃ ಆಚರಿಸಿ, ಆಕಸ್ಮಿಕವಾಗಿ ಸರಿಯಾದ ರೀತಿಯಲ್ಲಿ ಒಮ್ಮೆ ಮಾಡಿಬಿಟ್ಟರೆ, ಅದನ್ನು ಅನಂತರ ದೃಢಪಡಿಸಿಕೊಳ್ಳುತ್ತೇವೆ. ಈ ರೀತಿಯ ಕಲಿವಿಗೆ ತಿದ್ದಿಕೊಂಡು ಕಲಿಯುವಿಕೆ ಎನ್ನುತ್ತೇವೆ. ಹಾಗೆ ಕಲಿಯುವಾಗ ನಮ್ಮ ಮುಂದಿರುವ ಸಮಸ್ಯೆಯನ್ನು ಪರೀಕ್ಷಿಸಿ ಅದನ್ನು ಬಿಡಿಸಬೇಕಾದ ಕ್ರಮವನ್ನು ವಿವೇಚಿಸಿಕೊಂಡು ಕಾರ್ಯಮುಖವಾಗುವುದು ಕಂಡು ಬರುವುದಿಲ್ಲ. ಯಾವ ಪ್ರಾಣಿಗಳಲ್ಲೂ ವಿವೇಚನೆಯಿಂದ ಕಲಿಯುವುದು ಕಂಡು ಬರುವುದಿಲ್ಲ ಎಂದು ಥಾರ್ನ್ಡೈಕರು ವಾದಿಸಿರುವರು. ಆದರೆ ಮೆಕ್ಡೂಗಲ್, ಕಾಯ್ಲರ್ ಮುಂತಾದವರು ಅವುಗಳಲ್ಲೂ ವಿವೇಚನೆ ಉಂಟೆಂದು ಹೇಳಿದ್ದಾರೆ. ಇದನ್ನು ಸಮರ್ಥಿಸಲು ಕಾಯ್ಲರ್ ರವರು ಅನೇಕ ಪ್ರಯೋಗಗಳನ್ನು ನಡೆಸಿರುವರು. ಒಂದು ಚಿಂಪಾಂಜಿ ಜಾತಿಯ ಕಪಿಯು ಗಳುವಿಗೆ ಗಳುವನ್ನು ಸೇರಿಸಿದರೆ ಉದ್ದವಾಗುವುದನ್ನು ಅದು ಕಲಿತರೂ, ಆ ಗಳು ಬಾಳೆಹಣ್ಣನ್ನು ಪಡೆಯಲು ಅವಶ್ಯಕವೆಂಬುದನ್ನು ಅರಿತುಕೊಂಡದ್ದು ವಿವೇಚನೆಯಿಂದ ಎಂದು ಕಾಯ್ಲರ್ ವಾದಿಸಿರುವರು.[21]

ಥಾರ್ನ್ಡೈಕರು ನಡೆಸಿದ ಇನ್ನೊಂದು ಪ್ರಯೋಗದಲ್ಲಿ ಬೆಕ್ಕು ಅಗುಣಿ ತೆಗೆಯುವುದನ್ನು ಮೊದಲನೆಯ ಸಲ ಅದು ಕಲಿತದ್ದು ವಿವೇಚನೆಯಿಂದಲ್ಲ, ಆಕಸ್ಮಿಕವಾಗಿ. ಇವರು ಈ ಪ್ರಯೋಗದ ಆಧಾರದ ಮೇಲೆ ಪ್ರಾಣಿಗಳಲ್ಲಿ ತಿದ್ದಿಕೊಂಡು ಕಲಿಯುವುದು ಮಾತ್ರ ಸಾಧ್ಯ ಎಂದು ವಾದಿಸಿದರು. ಕೆಲವರು ಆ ಬೆಕ್ಕಿನಲ್ಲೂ ವಿವೇಚನೆ ಇತ್ತು ಎಂದು ವಾದಿಸಿರುವರು. ಏಕೆಂದರೆ ಒಮ್ಮೆ ಆಕಸ್ಮಿಕವಾಗಿ ಅದನ್ನು ಕಲಿತರೂ ಮುಂದೆ ಅದನ್ನು ದೃಢಪಡಿಸಿಕೊಳ್ಳುವಾಗ, ಅದೇ ಸರಿಯಾದ ರೀತಿಯೆಂದು ಅದಕ್ಕೆ ತೋರಿರಬೇಕು. ಆದ್ದರಿಂದ ಅದರಲ್ಲೂ ವಿವೇಚನೆ ಇದೆ ಎಂದು ಕಂಡು ಬರುತ್ತದೆ.

**4. ವಿವೇಚನಾ ರೀತಿಯ ಕಲಿವು**.

ನಮ್ಮ ಮುಂದಿರುವ ಕೆಲಸವನ್ನು ಆರಂಭಿಸುವುದಕ್ಕೆ ಮೊದಲು ಅದನ್ನು ಹೇಗೆ ಮಾಡಬಹುದೆಂಬ ಆಲೋಚನೆ ನಡೆಸಿ ಕ್ರಮವನ್ನರಿತುಕೊಂಡು, ಅನಂತರ ಅದನ್ನು ಆರಂಭಿಸಿದರೆ ಆ ಕಾರ್ಯ ಬೇಗ ಯಶಸ್ವಿಯಾಗಬಲ್ಲದು. ಅಂತಹ ಕಲಿವನ್ನು ವಿವೇಚನಾ ರೀತಿಯ ಕಲಿವೆನ್ನುತ್ತೇವೆ.

---

21. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–11, ಪು–188–194.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

**WOLFGANG KOHLER German Psychologist and Phenomenologist**ರವರು ಪ್ರಾಣಿಗಳಲ್ಲಿ ಅಂಥ ವಿವೇಚನೆ ಇದೆಯೆಂದೂ, **E.L.THONDIKE** ರವರು ಇಲ್ಲವೆಂದೂ ಹೇಳುವರು. ಆದರೆ ವಾಸ್ತವವಾಗಿ ಇವರಿಬ್ಬರ ಅಭಿಪ್ರಾಯಕ್ಕೂ ಮಧ್ಯಸ್ಥವಾಗಿದೆ ಅಂದರೆ" ಯಾವುದು ತಿದ್ದಿಕೊಂಡು ಕಲಿಯುವ ರೀತಿಯೆಂದು ಒಬ್ಬರು ಭಾವಿಸುತ್ತಾರೋ ಅದರಲ್ಲೂ ವಿವೇಚನೆ ಇದ್ದೇ ಇದೆ. ಎಂದು. ಮಾನವನ ಕಲಿವಿನ ಕ್ರಮದಲ್ಲಿ ವಿವೇಚನೆ ಪ್ರಧಾನ ಪಾತ್ರ ವಹಿಸುವುದಾದರೂ ತಿದ್ದಿಕೊಂಡು ಕಲಿಯುವ ರೀತಿಯೂ ಇದೆ. ಮೊದಮೊದಲಿನ ಕಲಿವಿನಲ್ಲಿ ತಿದ್ದಿಕೊಳ್ಳುವಿಕೆ ಪ್ರಧಾನವಾಗಿದ್ದರೂ ಅದು ಪ್ರಬುದ್ಧವಾದಂತೆ ವಿವೇಚನೆಯೇ ಹೆಚ್ಚಾಗಿ ಕಂಡುಬರುತ್ತದೆ. ಇವೆರಡು ರೀತಿಗಳೂ ಕಲಿವಿನ ಎರಡು ಧ್ರುವಗಳಂತಿವೆ.

ವರ್ತನೆಗಳು ಸ್ಥಿರಗೊಂಡು ವ್ಯಕ್ತಿಯ ಜೀವನದಲ್ಲಿ ಪಾತ್ರ ವಹಿಸುವಂತಾಗಬೇಕು. ಆಗ ಮಾತ್ರ ಕಲಿವು ಪೂರ್ಣವಾಗುವುದು. ಹಾಗೆ ವರ್ತನೆಗಳನ್ನು ಮಾರ್ಪಡಿಸಿ ದೃಢಗೊಳಿಸಲು ಸಹಕರಿಸುವ ಸನ್ನಿವೇಶಗಳೇ ಕಲಿವಿನ ನಿಯಮಗಳು. ಉಪಾಧ್ಯಾಯರು ತಮ್ಮ ಪಾಠಬೋಧನೆಯ ಕ್ರಮವನ್ನು ಕಲಿವಿನ ನಿಯಮಗಳನ್ನು ಅನುಸರಿಸಿಯೇ ರೂಪಿಸಿಕೊಳ್ಳಬೇಕು. ಕಲಿವನ್ನು ಸಾಧಿಸದ ಬೋಧನೆ ಬೋಧನೆಯೇ ಅಲ್ಲ. ಕಲಿವು ಖಚಿತವಾಗಿ ಸಿದ್ಧಿಸುವಂತೆ ಬೋಧನಕ್ರಮ ರೂಪುಗೊಳ್ಳಬೇಕು. ಅಂಥ ಉಚಿತ ಬೋಧನ ಕ್ರಮವನ್ನು ಕಂಡುಕೊಳ್ಳಲು ಥಾರ್ನ್ಡೈಕರು ಕೆಲವು ನಿಯಮಗಳನ್ನು ರೂಪಿಸಿದ್ದಾರೆ. ಅವುಗಳೆಂದರೆ:–[22]

1. **ಆಚರಣೆಯ ನಿಯಮ**:– ನಾವು ಯಾವ ವರ್ತನೆಯನ್ನು ಆಚರಿಸುತ್ತೇವೆಯೋ ಆ ವರ್ತನೆ ದೃಢಗೊಂಡು ಕಲಿವು ಸಿದ್ಧಿಸುತ್ತದೆ.

2. **ಫಲಾಫಲಗಳ ನಿಯಮ**:–ಸಂತೋಷವನ್ನು, ಜಯವನ್ನು ತರತಕ್ಕದ್ದನ್ನು ಕಲಿಯುತ್ತೇವೆ. ಅಹಿತ, ನೋವು, ಸೋಲು ಇವುಗಳನ್ನು ಹುಟ್ಟಿಸುವಂಥದ್ದನ್ನು ಕಲಿಯಲಾರೆವು.

3. **ಸಿದ್ಧತೆಯ ನಿಯಮ**:– ಸಿದ್ಧವಿರುವಾಗ ಕಲಿಯುತ್ತೇವೆ. ಸಿದ್ಧವಿಲ್ಲದಿರುವಾಗ ಕಲಿಯಲಾರೆವು.

4. **ಉದ್ದೇಶದ ನಿಯಮ**:– ಉದ್ದೇಶಪೂರ್ವಕವಾದದ್ದನ್ನು ನಾನು ಕಲಿಯುತ್ತೇವೆ. ಉದ್ದೇಶರಹಿತವಾದದ್ದನ್ನು ಕಲಿಯುವುದು ಕಷ್ಟ. ಇದರಂತೆ ಕಲಿಯುವ ನಿಯಮಗಳನ್ನು ಅನುಸರಿಸಿಯೇ ಬೋಧಿಸುವ ಕ್ರಮ ರೂಪುಗೊಳ್ಳಬೇಕು. ಆಗ ಮಾತ್ರ ಬೋಧಿಸಿದ್ದನ್ನು ವಿದ್ಯಾರ್ಥಿಗಳು ಕಲಿಯಬಲ್ಲರು.

---

22. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–11, ಪು–196–200.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

## ೩-೩. ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳು.

### ಅಭಿಪ್ರೇರಣೆ - ಅವಧಾನ

ಶಿಕ್ಷಣ ವ್ಯವಸ್ಥೆಯಲ್ಲಿ ಬಹುಮಟ್ಟಿಗೆ ಶಿಕ್ಷಕರು ತಮ್ಮ ನಿಯಂತ್ರಣಕ್ಕೆ ಒಳಪಟ್ಟ ವಿದ್ಯಾರ್ಥಿಗಳ ಮನೋವ್ಯಾಪಾರಗಳನ್ನು ಸೂಕ್ತ ರೀತಿಯಲ್ಲಿ ಬಳಸಿಕೊಳ್ಳುವುದಾಗಿದೆ. ಆ ಮೂಲಕ ಕಲಿವು ಆದಷ್ಟು ಬೇಗ ಪರಿಣಾಮಕಾರಿಯಾಗಿ ಸಿದ್ಧಿಸುವಂತೆ ಮಾಡಬೇಕಾವುದು. ಅಂತಹ ಅಂಶಗಳಲ್ಲಿ ಕೆಲವು ಮುಖ್ಯವಾದವುಗಳನ್ನು ಗಮನಿಸೋಣ.[23]

- ~ **ಕಲಿವಿಗೆ ಸಿದ್ಧತೆ.**
- ~ **ಕಲಿವಿಗೆ ಪ್ರೇರಕಶಕ್ತಿ**
- ~ **ಕಲಿವಿನ ಮೇಲೆ ಮನೋಭಾವಗಳ ಪರಿಣಾಮ.**
- ~ **ಕಲಿವಿಗೆ ಅನುಭವಗಳ ವ್ಯವಸ್ಥೆ ಮತ್ತು ಸಂವಿಧಾನದ ಅಚ್ಚುಕಟ್ಟು.**
- ~ **ಕಲಿವಿನಲ್ಲಿ ಅಭ್ಯಾಸದ ಪಾತ್ರ.**
- ~ **ಕಲಿವಿಗೆ ಸಾಮಾಜಿಕ ಸನ್ನಿವೇಶಗಳು**
- ~ **ಮನಸ್ಸಿನ ಸಂಸ್ಕಾರ(ಶಿಸ್ತು)ಮತ್ತು ಕಲಿವಿನಲ್ಲಿ ಅದರ ಪಾತ್ರ.**
- ~ **ಆಯಾಸ ಮತ್ತು ಕಲಿವಿನ ಮೇಲೆ ಬೀರುವ ಪರಿಣಾಮ.**
- ~ **ಆಸಕ್ತಿ ಮತ್ತು ಅವಧಾನ.**
- ~ **ದೌರ್ಬಲ್ಯಗಳು ಮತ್ತು ಚಿಕಿತ್ಸಾ ಶಿಕ್ಷಣ.**

---

೨೩. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿಮನೋವಿಜ್ಞಾನ, ಅ-12, ಪು-222,223.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

## ಅಭಿಪ್ರೇರಣೆ (MOTIVATION)

ನಮ್ಮ ವರ್ತನೆಗಳಿಗೆಲ್ಲ ಮನಶ್ಶಕ್ತಿಯೇ (ಕಾರಣ) ಆಧಾರ. ಅದೇ ಚಾಲಕ ಶಕ್ತಿ. ಆ ಚಾಲಕ ಶಕ್ತಿ ನಮ್ಮ ಮನಸ್ಸಿನ ಕೆಲವು ಗತಿಗಳೊಡನೆ ಸಂಬಂಧಿಸಿದೆ.ಇದನ್ನೇ ಆಂಗ್ಲಭಾಷೆಯಲ್ಲಿ **Motivation** ಎಂದು ಕರೆಯುತ್ತಾರೆ.ಈ ಪದವು ಲ್ಯಾಟಿನ್ ಮೂಲ ಮೂವರ್ಸ್ ಎಂಬ ಪದದಿಂದ ಬಂದಿದೆ. ಇದರ ಅರ್ಥ ಚಲಿಸುವಂತೆ ಮಾಡು, ಕಾರ್ಯೋನ್ಮುಖನಾಗುವಂತೆ ಮಾಡು ಎಂದಾಗಿರುತ್ತದೆ. ಇದನ್ನೇ ಕನ್ನಡ ಭಾಷೆಯಲ್ಲಿ ಅಭಿಪ್ರೇರಣೆ ಎಂದು ಕರೆಯುತ್ತೇವೆ. ಇದರ ಅರ್ಥ ವ್ಯಕ್ತಿಯನ್ನು ಕಾರ್ಯೋನ್ಮುಖನನ್ನಾಗಿ ಅಥವಾ ಕ್ರಿಯಾಶೀಲನನ್ನಾಗಿ ಮಾಡುವಂತಹ ಪ್ರಕ್ರಿಯೆಯಾಗಿದೆ.[24]

"ಅಭಿಪ್ರೇರಣೆ ಎಂದರೆ ನಿರ್ದಿಷ್ಟ ಗುರಿಯೆಡೆಗೆ ಕಾರ್ಯೋನ್ಮುಖನಾಗುವಂತೆ ಮಾಡುವ ಪ್ರಕ್ರಿಯೆಯಾಗಿದೆ.

ಆದರೆ ಈ ಮೊದಲು ಆ ಗುರಿಯೆಡೆಗೆ ಅತ್ಯಲ್ಪ ಅಥವಾ ಯಾವುದೇ ಆಕರ್ಷಣೆ ಇಲ್ಲದಿರಬಹುದು." ಎಂದು **H.W.BERNARD–** ವ್ಯಾಖ್ಯಾನಿಸಿದ್ದಾರೆ.

"ಅಭಿಪ್ರೇರಣೆಯು ವರ್ತನೆಯನ್ನು ಹುರಿದುಂಬಿಸುವ, ಪೋಷಿಸುವ ಮತ್ತು ನಿರ್ದೇಶಿಸುವ ಸಂಕೀರ್ಣ ಆಂತರಿಕ ಪ್ರಕ್ರಿಯೆಗಳ ಸಂಯೋಜನೆಯಾಗಿದೆ." ಎಂದು **WILLIAM C. MORSE** ಮತ್ತು **G. MAX WINGO** ವ್ಯಾಖ್ಯಾನಿಸಿದ್ದಾರೆ.

ಮತ್ತೊಬ್ಬರು **American** ಮನೋವಿಜ್ಞಾನಿ – **ABRAHAM MASLOW** ಎಂಬುವವರು "ಅಭಿಪ್ರೇರಣೆ ಎನ್ನುವುದು ನಿರಂತರ, ಚಲನಶೀಲ ಹಾಗೂ ಸಂಕೀರ್ಣ ಪ್ರಕ್ರಿಯೆಯಾಗಿದೆ ಮತ್ತು ಇದು ಪ್ರತಿಯೊಂದು ಜೀವಿಯಲ್ಲಿಯೂ ಕಂಡುಬರುವ ಒಂದು ಸಾಮಾನ್ಯ ಲಕ್ಷಣವಾಗಿದೆ." ಎಂದು ವ್ಯಾಖ್ಯಾನಿಸಿದ್ದಾರೆ.

ಒಂದು ನಿರ್ದಿಷ್ಟ ರೀತಿಯಲ್ಲಿ ವರ್ತಿಸುವಂತೆ ಪ್ರೋತ್ಸಾಹಿಸುವ, ಪ್ರೇರೇಪಿಸುವ ಮನೋಭಾವವನ್ನು ಸಂಕಲ್ಪ ಎನ್ನುವುದು. ಇದನ್ನು ಉದ್ದೇಶ ಉತ್ತೇಜಕ, ಪ್ರೇರಕ ಎಂದೂ ಕರೆಯಬಹುದು. ಕಲಿವು ಕೇವಲ ಒಂದು ಕ್ಷೇತ್ರಕ್ಕಲ್ಲ. ಇಡೀ ಜೀವನದ ಅವಶ್ಯಕತೆಗಳ ಪೂರೈಕೆಗೂ ಹೌದು. ಜ್ಞಾನವನ್ನು ಜೀವನದ ಬೆಳಕಿನಲ್ಲಿ ಬೋಧಿಸಬೇಕು.[25]

---

24. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–6, ಪು–259,(2005)ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
25. **ವೀರಪ್ಪ.. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–12, ಪು–231.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

ಬದುಕಿನ ಸಾರ್ಥಕತೆಗೆ ಪ್ರೇರೇಪಿಸುವಂತಿರಬೇಕು. ಅಭಿಪ್ರೇರಣೆಯು ವ್ಯಕ್ತಿಯನ್ನು ಕ್ರಿಯೆಯಲ್ಲಿ ತೊಡಗುವಂತೆ ಮಾಡುವುದಲ್ಲದೆ, ವ್ಯಕ್ತಿಯಲ್ಲಿ ಶಕ್ತಿಯನ್ನು ತುಂಬುತ್ತದೆ. ವ್ಯಕ್ತಿಯ ಕ್ರಿಯೆಯನ್ನು ಅಥವಾ ಚಟುವಟಿಕೆಯನ್ನು ನಿರ್ದೇಶಿಸುತ್ತದೆ; ಅಥವಾ ಅದರಲ್ಲಿ ಆಸಕ್ತಿ ಉಳಿದುಕೊಳ್ಳುವಂತೆ ಮಾಡುತ್ತದೆ. ಗುರಿಯನ್ನು ತಲುಪುವ ಕಾರ್ಯಗತಿಯಲ್ಲಿ, ಅವನು ಎಲ್ಲಾ ಸಾಧ್ಯ ಪರ್ಯಾಯಗಳನ್ನು ಪ್ರಯತ್ನಿಸಿ ನೋಡುತ್ತಾನೆ.

ಸಾಮಾನ್ಯವಾಗಿ ಎರಡು ರೀತಿಯ ಅಭಿಪ್ರೇರಣೆಗಳನ್ನು ಕಾಣುತ್ತೇವೆ. ಅವುಗಳು ಆಂತರಿಕ ಅಭಿಪ್ರೇರಣೆ ಮತ್ತು ಬಾಹ್ಯ ಅಭಿಪ್ರೇರಣೆ. ಆಂತರಿಕ ಅಭಿಪ್ರೇರಣೆಯು ವ್ಯಕ್ತಿಯ ಒಳಗಿನಿಂದಲೇ ಹೊಮ್ಮುವಂತಹದು. ಇದು ಜೀವಿಯ ಬಯಕೆ ಮತ್ತು ಸಹಜವಾದ ಪ್ರವೃತ್ತಿಗಳಿಗೆ ನೇರವಾಗಿ ಸಂಬಂಧಿಸಿದೆ. ಆಂತರಿಕ ಪ್ರೇರಣೆಯಿದ್ದಾಗ ಕಲಿಕೆಯ ಪುಷ್ಟೀಕರಣ ಅಥವಾ ಪುನರ್ಬಲವನ್ನು ತಾನೇ ಒದಗಿಸುತ್ತದೆ. ಅರ್ಥಪೂರ್ಣ ಕಲಿಕೆ ಮುಂದಿನ ಕಲಿಕೆಯ ಅಪೇಕ್ಷೆಯನ್ನು ಹುರಿದುಂಬಿಸುತ್ತದೆ. ಉದಾಹರಣೆಗೆ ವಾದ್ಯ ನುಡಿಸುವುದು ವ್ಯಕ್ತಿಗೆ ಆನಂದವನ್ನುಂಟುಮಾಡುತ್ತದೆ. ಶಿಕ್ಷಕನಿಗೆ ಬೋಧನೆ ತೃಪ್ತಿಯನ್ನು ನೀಡುತ್ತದೆ.[26]

ಇನ್ನು ಬಾಹ್ಯ ಅಭಿಪ್ರೇರಣೆ ಎಂದರೆ ಇದು ಜೀವಿಗೆ ದೇಹದ ಹೊರಗಡೆಯಿಂದ ಬರುವುದಾಗಿದೆ. ತಾನು ತೊಡಗಿರುವ ಚಟುವಟಿಕೆಗಳು ಲಾಭದಾಯಕವಾಗಿರುವುದರಿಂದ ವ್ಯಕ್ತಿಯು ಆ ಚಟುವಟಿಕೆಗಳಲ್ಲಿ ತೊಡಗುತ್ತಾನೆ. ದೊರಕುವ ಲಾಭ ಅಥವಾ ಮೆಚ್ಚುಗೆಯೇ ಪ್ರೇರಕವಾಗಿರಬಹುದು. ಉದಾಹರಣೆಗೆ ಬಟ್ಟೆ ಹೊಲಿಯುವ ಕಾರ್ಯದಲ್ಲಿ ತೊಡಗಿರುವುದು. ಅದು ಅವನಿಗೆ ಜೀವನೋಪಾಯವನ್ನು ಒದಗಿಸುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ತನ್ನದೇ ಆದ ಆಕಾಂಕ್ಷೆ ಮಟ್ಟ ಹೊಂದಿರುತ್ತಾನೆ. ಈ ಪರಿಕಲ್ಪನೆಯನ್ನು ಮೊಟ್ಟಮೊದಲು ಪರಿಚಯಿಸಿದವನು **HOPPE** ಎಂಬ ಜರ್ಮನ್ ಮನೋವಿಜ್ಞಾನಿ. ಇವನ ಪ್ರಕಾರ ಎಲ್ಲ ವ್ಯಕ್ತಿಗಳೂ ಜೀವನದಲ್ಲಿ ಹಲವಾರು ಗುರಿಗಳನ್ನು ಹೊಂದಿರುತ್ತಾರೆ. ಈ ಗುರಿಯನ್ನು ತಲುಪಲು ಇಚ್ಛಿಸುವ ಕಾರ್ಯದ ಮಟ್ಟ ಅಥವಾ ಆತ್ಮವಿಶ್ವಾಸದ ಮಟ್ಟವನ್ನು ಆಕಾಂಕ್ಷೆಯ ಮಟ್ಟವೆಂದು ಕರೆಯುತ್ತಾರೆ. ಇದು ಒಂದು ಪ್ರಬಲ ಆಂತರಿಕ ಪ್ರೇರಕವಾಗಿ ಕಾರ್ಯ ನಿರ್ವಹಿಸುತ್ತದೆ. ಅಭಿಪ್ರೇರಣೆ ಒಂದು ಗುರಿ ನಿರ್ದೇಶಿತ ವರ್ತನೆ. ಶಿಕ್ಷಕ ಕಲಿಯುವವನಿಗೆ ಅಣಿಗೊಳಿಸುವಂತಹ ಗುರಿಯಾಗಿದೆ ಅಥವಾ ಕಲಿಯುವವನನ್ನು ತನ್ನಷ್ಟಕ್ಕೆ ತಾನೇ ಗುರಿ ಅಣಿ ಮಾಡಿಕೊಳ್ಳುವಂತೆ ಬೆಂಬಲಿಸುವುದು. ಇದು ಕಲಿಕೆಯ ಚಟುವಟಿಕೆಯನ್ನು ನಿರ್ದೇಶಿಸುವಲ್ಲಿ ಮತ್ತು ಕಾಪಾಡಿಕೊಳ್ಳುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಈ ಎರಡೂ ರೀತಿಯ ಪ್ರೇರಣೆಗಳಲ್ಲಿ ಆಂತರಿಕ ಅಭಿಪ್ರೇರಣೆ ಕಲಿಯುವವನನ್ನು ಪ್ರಚೋದಿಸಿ, ಉತ್ಸಾಹಭರಿತನನ್ನಾಗಿ ಮಾಡುವುದರ ಮೂಲಕ ಬೋಧನಾ–ಕಲಿಕಾ ಪ್ರಕ್ರಿಯೆಯಲ್ಲಿ ಉತ್ತಮ ಫಲಿತಾಂಶ ತರಬಲ್ಲುದು.[27]

---

26. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–6, ಪು–260–264.(2005)ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
27. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–6, ಪು–260,264,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಅಭಿಪ್ರೇರಣೆ ವಿಚಾರ ಗಮನದಲ್ಲಿಟ್ಟುಕೊಂಡು ವಿಷ್ಣುಶರ್ಮರ ಪಂಚತಂತ್ರದ ಬಗ್ಗೆ ಯೋಚಿಸಿದರೆ, ಅದೆಷ್ಟು ಹೃದಯಂಗಮವಾಗಿ ಆ ರಾಜಕುಮಾರರನ್ನು ಅಭಿಪ್ರೇರಣೆಗೊಳಿಸಿ, ಉತ್ತಮ ಮಹತ್ವಾಕಾಂಕ್ಷೆಯನ್ನು ಅವರ ಮನಸ್ಸಿನಲ್ಲಿ ಉದ್ಭವಿಸುವಂತೆ ಪ್ರೋತ್ಸಾಹಿಸಿ ಕೇವಲ ಆರು ತಿಂಗಳುಗಳಲ್ಲಿ ರಾಜನೀತಿ ನಿಪುಣರು, ಬದುಕಿನ ನೀತಿ ಅರಿತವರು ಹಾಗೂ ಸುಶಿಕ್ಷಿತರನ್ನಾಗಿ ಪರಿವರ್ತಿಸಿರುವುದು ಒಂದು ಅಸಾಧಾರಣ ಅಭಿಪ್ರೇರಣಾ ಶಕ್ತಿಯಿಂದ ಎಂದು ಸ್ಪಷ್ಟವಾಗಿ ಹೇಳಬಹುದು. ಇಂಥಹ ಪ್ರತಿಭಾವಂತ ಶಿಕ್ಷಕರು ಬಹಳ ವಿರಳವೇ ಸರಿ.

स्तिमितोन्नतसञ्चारा जनसंतापहारिणः ।

जायन्ते विरला लोके जलदा इव सज्जनाः ॥[28]

ಅಂದರೆ ಸ್ಥಿರವಾದ ಬಹಳ ಎತ್ತರದಲ್ಲಿ ಸಂಚರಿಸುವುವೂ, ಜನರ ಸಂತಾಪವನ್ನು ಕಳೆಯುವುವೂ ಆದ ಮೋಡಗಳಂತೆ ಲೋಕದಲ್ಲಿ ಉನ್ನತವಾದ ನಡತೆಯುಳ್ಳವರೂ, ಜನರ ಕಷ್ಟಗಳನ್ನು ಪರಿಹರಿಸುವವರೂ ಆದ ಸಜ್ಜನರು ಬಹಳ ವಿರಳರು.

## ಅವಧಾನ ~ATTENTION

ಕಲಿವನ್ನು ಪರಿಣಾಮಕಾರಿಗೊಳಸತಕ್ಕ ಕೆಲವು ಮುಖ್ಯ ಅಂಶಗಳಲ್ಲಿ ಅವಧಾನ ಮತ್ತು ಆಸಕ್ತಿ ಒಂದು ವಿಶಿಷ್ಟ ಪಾತ್ರವನ್ನು ವಹಿಸುತ್ತವೆ. **DUMVILLE**– ಎಂಬ ಶೈಕ್ಷಣಿಕ – ಮನೋವಿಜ್ಞಾನಿಯು ಅವಧಾನ ಕುರಿತು ಹೀಗೆ ವ್ಯಾಖ್ಯಾನಿಸಿದ್ದಾರೆ:– "ಒಂದು ವಸ್ತುವಿನ ಬದಲು ಮತ್ತೊಂದು ವಸ್ತುವಿನ ಮೇಲೆ ಪ್ರಜ್ಞಾನುಭವದ ಕೇಂದ್ರೀಕರಣವೇ ಅವಧಾನ. ಎಲ್ಲಾ ಸೃಜನಶೀಲ ಚಟುವಟಿಕೆಗಳಲ್ಲಿ ಇದು ಅಗತ್ಯವಾದ ಅಂಶವಾಗಿದೆ. ನಿರ್ದಿಷ್ಟ ಉದ್ದೀಪನಗಳ ಕಡೆಗೆ ಗಮನಹರಿಸುವ ಪ್ರಕ್ರಿಯೆಯೇ ಅವಧಾನ. ಅವಧಾನ ಪ್ರಕ್ರಿಯೆಯೆಂದರೆ ಸಂವೇದನೆಗೆ ಅಥವಾ ಗ್ರಹಿಕೆಗೆ ಸಿದ್ಧವಾಗಿದೆ ಎಂದರ್ಥ. ಅದು ಒಂದು ಕ್ರಿಯಾಶೀಲ–ಪ್ರಕ್ರಿಯೆ. ಇದು ಕೆಲವು ಸಲ ಇಂದ್ರಿಯಗಳ ಮತ್ತು ಇಡೀ ನರವ್ಯೂಹದ ಹೊಂದಾಣಿಕೆಯನ್ನು ಒಳಗೊಂಡಿರುತ್ತದೆ.[29]

ಸರಳವಾಗಿ ಹೇಳುವುದಾದರೆ ಒಂದು ಅಂಶದ ಕಡೆ ಪ್ರಜ್ಞೆಯನ್ನು ಕೇಂದ್ರೀಕರಿಸುವುದೇ " ಅವಧಾನ. "ಟಾರ್ಚ್ ಬೆಳಕನ್ನು ವಿಸ್ತಾರವಾದ ಬಯಲಿನಲ್ಲಿ ಬಿಟ್ಟರೆ ಬೆಳಕು ಹರಡಿಹೋಗಿ ಅಲ್ಲಿರುವ ವಸ್ತುಗಳು ಮಂಕಾಗಿ ಗೊಂದಲಮಯವಾಗಿ ಗೋಚರಿಸುವುವು. ಅದೇ ಬೆಳಕನ್ನು ಒಂದು ವಸ್ತುವಿನ ಮೇಲೆ ಮೊನೆಮಾಡಿದರೆ ಅದು ಪ್ರಕಾಶಮಾನವಾಗಿ ಸ್ಪಷ್ಟವಾಗಿ ಗೋಚರಿಸುತ್ತದೆ.

---

28. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ– ಶ್ಲೋ –30, ಪು –27,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
29. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–6, ಪು–265,,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಅದೇ ರೀತಿಯಲ್ಲಿ ಒಂದು ಕಾಲದಲ್ಲಿ ನಮ್ಮ ಮನಸ್ಸು ಅನೇಕ ವಸ್ತುಗಳ ಕಡೆ ಗಮನಕೊಟ್ಟರೆ ಅವಧಾನ ಚೆಲ್ಲಿಹೋಗಿ, ಶಕ್ತಿ ಕುಂದಿಹೋಗಿ, ಅದರ ಬಿಂಬ ಮನಸ್ಸಿನಲ್ಲಿ ಪರಿಣಾಮಕಾರಿಯಾಗಿ ರೂಪುಗೊಳ್ಳುವುದಿಲ್ಲ. ಅದೇ ಗಮನವನ್ನು ಒಂದಂಶದ ಮೇಲೆ ಕೇಂದ್ರೀಕರಿಸಿದಾಗ ಮನಸ್ಸಿಗೆ ಅದರ ಬಿಂಬ ಸ್ಪಷ್ಟವಾಗಿ ಬಿದ್ದು ಉತ್ತಮ ಸ್ಪರ್ಶಾನುಭವ ಉಂಟಾಗುತ್ತದೆ. ಹೀಗೆ ವಿಷಯ, ಸನ್ನಿವೇಶ, ಶಬ್ದ, ವಾಸನೆ, ರುಚಿ ಮುಂತಾದವನ್ನು ಸ್ಪಷ್ಟವಾಗಿ ಪರಿಚಯಮಾಡಿಕೊಡುವುದೇ ಅವಧಾನದ ಮೂಲ ಉದ್ದೇಶವಾಗಿದೆ.

ಕಲಿವಿನ ಮೇಲೆ ಅವಧಾನದ ಪ್ರಭಾವ ಬಹಳ ಮುಖ್ಯವಾದುದು. ಪಾಠದ ಆರಂಭದಲ್ಲಿ ಮಕ್ಕಳು ಈಗಾಗಲೇ ತಿಳಿದಿರುವ ವಿಷಯದ ಕಡೆ ಮೊದಲು ಅವರ ಗಮನ ಸೆಳೆಯುತ್ತೇವೆ. ಹಾಗೆಯೇ ಅದಕ್ಕೆ ಸಂಬಂಧಿಸಿದಂತೆ ಒಂದು ಹೊಸ ವಿಷಯದ ಕಡೆಗೂ ತಿರುಗಿಸುತ್ತೇವೆ. ಕಾರಣ, ಹೊಸ ಜ್ಞಾನ ನಮಗೆ ಪರಿಚಯವಾಗುವುದು ಹಳೆಯ ಜ್ಞಾನದ ಜೊತೆ ಸೇರಿಕೊಳ್ಳುವುದರಿಂದ. ಅದಕ್ಕೇ, ಶೈಕ್ಷಣಿಕ ಮನೋವಿಜ್ಞಾನದ ಸೂಚಿತ ಕ್ರಮದಂತೆ ಯಾವುದೇ ಬೋಧನೆಗೆ ಮೊದಲು ಪಾಠಕ್ಕೆ ಪೀಠಿಕೆ ಹಾಕಿ, ಅದರ ಕೊನೆಯಲ್ಲಿ ಕಲಿಯುವವರ ಗಮನವನ್ನು ಹಳೆಯ ಪರಿಚಿತ ವಿಷಯದಿಂದ ಹೊಸ ವಿಷಯದ ಕಡೆಗೆ ಸೆಳೆದು– "ಮಕ್ಕಳೇ, ಈ ದಿನ ಇಂತಹದೇ ಒಂದು ವಿಷಯವನ್ನು ತಿಳಿಯೋಣವೇ?" ಎಂದಾಗ, ಅವರಿಗೆ ಆ ವಿಷಯವನ್ನು ಕಲಿಯುವುದು ಅವಶ್ಯಕವೂ, ಪ್ರಿಯವೂ, ಆಸಕ್ತಿಯುತವೂ ಆಗುತ್ತದೆ. ಅವರ ಅವಧಾನ ಆ ವಿಷಯದ ಮೇಲೆ ಕೇಂದ್ರೀಕೃತವಾಗುತ್ತದೆ. ಅವರ ಕಲಿವು ಸರಾಗವೂ ಯಶಸ್ವಿಯೂ ಆಗುತ್ತದೆ.[30] ಈ ಕ್ರಮವನ್ನೇ ವಿಷ್ಣುಶರ್ಮರು ಪಂಚತಂತ್ರದಲ್ಲಿ ಬಹಳ ಅಚ್ಚುಕಟ್ಟಾಗಿ ಅನುಸರಿಸಿ, ರಾಜಕುಮಾರರ ಗಮನವನ್ನು ರಾಜನೀತಿ ಶಿಕ್ಷಣ ಹಾಗೂ ಉತ್ತಮ ಬದುಕಿನ ನೀತಿನಿಯಮಗಳೆಡೆಗೆ ಆಕರ್ಷಕ ದೃಷ್ಟಾಂತಗಳ ಮೂಲಕ ಕೇಂದ್ರೀಕೃತಗೊಳಿಸಿದ್ದಾರೆ.

सत्यधर्मविहीनेन न सन्दध्यात्कथञ्चन ।

सुसन्धितोऽप्यसाधुत्वादचिराद्याति विक्रियाम् ॥[31]

ಸತ್ಯ, ಧರ್ಮ, ಇವುಗಳನ್ನು ಹೊಂದಿರದವನ ಜೊತೆಗೆ ಹೇಗಾದರೂ ಸಂಧಿ ಮಾಡಿಕೊಳ್ಳಕೂಡದು. ಒಳ್ಳೆಯ ರೀತಿಯಲ್ಲಿ ಸಂಧಿಮಾಡಿಕೊಂಡಿದ್ದರೂ ಅವನು ಅಸಾಧುವಾದ ಕಾರಣ ಬಹಳ ಬೇಗ ವಿರೋಧಿಯಾಗುತ್ತಾನೆ. ರಾಜನೀತಿಯನ್ನು ಎಷ್ಟು ಚೆನ್ನಾಗಿ ತಿಳಿಹೇಳಿರುವುದು ಕಂಡುಬರುತ್ತದೆ.

---

30. **ವೀರಪ್ಪ. ಎನ್.ಎಸ್**. ಶೈಕ್ಷಣಿಕ ಮನೋವಿಜ್ಞಾನ, ಅ–12, ಪು–264–265.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
31. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಾಕೋಲೂಕೀಯ, ಶ್ಲೋ– 24, ಪು –446,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಮತ್ತೊಂದು ಉದಾಹರಣೆ ಕೊಡುವುದಾದರೆ – ಐದನೆಯ ತಂತ್ರ ಅಪರೀಕ್ಷಿತಕಾರಕ ಸೂತ್ರಕಥಾ ಪ್ರಾರಂಭದಲ್ಲಿ ರಾಜಕುಮಾರರನ್ನು ಕುರಿತು " ಇವತ್ತಿನಿಂದ ಬೇರೆ ರೀತಿಯ ಕಥೆಗಳನ್ನು ನಿಮಗೆ ಹೇಳುತ್ತೇನೆ. ಪ್ರತಿಯೊಬ್ಬರಿಗೂ ತಾನು ನಾಯಕನಾಗಬೇಕು, ಇತರರನ್ನು ಆಳಬೇಕು ಎಂಬ ಮಹತ್ವಾಕಾಂಕ್ಷೆ ಇರುತ್ತದೆ. ಇನ್ನು ತಂದೆಯ ಪದವಿ ತನಗಲ್ಲದೆ ಇನ್ನೊಬ್ಬರಿಗೆ ಹೋಗಬಾರದು ಎಂಬ ಸ್ವಾರ್ಥ ವ್ಯಾಮೋಹವೂ ಇರುತ್ತದೆ. ಹಾಗೆ ಇರುವುದು ಸಹಜವೇ.ಆದರೆ ಆ ಸ್ಥಾನವನ್ನಲಂಕರಿಸಲು ಬೇಕಾದ ಯೋಗ್ಯತೆ ಇರಬೇಕಲ್ಲ?ಅಂತಹ ಯೋಗ್ಯತೆ ಇಲ್ಲದಿದ್ದರೆ, ಅದನ್ನು ಇತರರನ್ನು ನೋಡಿಯೋ, ಕೇಳಿಯೋ ಗಳಿಸಿಕೊಳ್ಳಬೇಕು. ಇದಕ್ಕೆ ಒಳ್ಳೆಯ ಪರಿಶ್ರಮ ಹಾಗೂ ಪ್ರಯತ್ನವಿರಬೇಕು. ಇದಕ್ಕೆ ಸಂಬಂಧಿಸಿದಂತೆ ಕಥೆಯೊಂದಿದೆ ಮತ್ತು ಅದಕ್ಕೆ ಸೇರಿಕೊಂಡಂತಹ ಬೇರೆ ಕಥೆಗಳಿವೆ. ಅವನ್ನೇ ಈಗ ಹೇಳುತ್ತೇನೆ ಕೇಳಿ."[32] ಹೀಗೆ ಉತ್ತಮ ಪೀಠಿಕೆಯೊಂದಿಗೆ ಪರಿಚಿತ ವಿಚಾರಗಳ ಮೂಲಕ ಹೊಸ ವಿಚಾರಗಳ ಕಡೆಗೆ ವಿಷ್ಣುಶರ್ಮರು ರಾಜಕುಮಾರರ ಗಮನವನ್ನು ಅವರ ಉಜ್ವಲ ಭವಿಷ್ಯದೆಡೆಗೆ ಕೇಂದ್ರೀಕರಿಸುತ್ತಾರೆ.

ಅವಧಾನವನ್ನು ಕೆಲವು ವಿಧಗಳಾಗಿ ವಿಂಗಡಿಸಲಾಗಿದೆ. ಅವುಗಳನ್ನು ದೊರಕಿಕೊಳ್ಳುವ ಕ್ರಮವನ್ನು ಪರಿಚಯಿಸಿಕೊಳ್ಳುವುದು ಸೂಕ್ತವಾದುದು.[33]

**1. ಸ್ವಾಭಾವಿಕ ಅವಧಾನ:–**

ಹುಟ್ಟು ಗುಣದ ಮೂಲಕ ಬರುವ ಮನಶ್ಶಕ್ತಿ ಸ್ವಪ್ರೇರಣೆಯಿಂದ ಉಚಿತ ಸನ್ನಿವೇಶಗಳ ಕಡೆಗೆ ಪ್ರವಹಿಸುತ್ತದೆ. ಅದು ಸ್ವಾಭಾವಿಕವಾಗಿ ಪ್ರವಹಿಸುವುದರಿಂದ ಮಕ್ಕಳಿಗೆ ಅತಿ ಹೆಚ್ಚಿನ ಪ್ರಮಾಣದಲ್ಲಿ ಶಕ್ತಿ ವ್ಯಯವಾಗುವುದಿಲ್ಲ. ಇದು ಬಹಳ ತೀಕ್ಷ್ಣವಾಗಿ ರುವುದರಿಂದ ಕಲಿವಿಗೂ ಅನುಕೂಲಕರ.

**2. ಒತ್ತಾಯದ ಅವಧಾನ:–**

ಬೋಧನೆಯಲ್ಲಿ ಎಲ್ಲ ಕಾಲದಲ್ಲೂ ಸ್ವಾಭಾವಿಕ ಅವಧಾನವನ್ನೇ ಒದಗಿಸಿಕೊಳ್ಳುವುದು ಸಾಧ್ಯವಿಲ್ಲ. ಕಾರಣ ಆ ಹುಟ್ಟು ಗುಣಗಳು ಯಾವುದೋ ನಿರ್ದಿಷ್ಟ ಮಾರ್ಗದಲ್ಲಿ ಕಾರ್ಯಮುಖವಾಗತಕ್ಕವು. ಮಕ್ಕಳಿಗೆ ಕಲಿಯಬೇಕಾದ ಅನೇಕ ವಿಷಯಗಳಲ್ಲಿ ಆಸಕ್ತಿಯಿರುವುದಿಲ್ಲ. ಆದರೂ ಅವರು ಅದನ್ನು ಕಲಿಯುವುದು ಕಡ್ಡಾಯವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಆ ಕಾರ್ಯಕ್ಕೆ ಅವರ ಸ್ವಾಭಾವಿಕ ಅವಧಾನವನ್ನು

---

32. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ–5–ಅಪರೀಕ್ಷಿತಕಾರಕ, ಪು–205,(2015) ವರ್ಣಿಲ 39/2–11,ಕಲ್ಯಾಣಿ ಗಾರ್ಡನ್,BSK 1stStage, ಬೆಂಗಳೂರು–560050
33. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–12, ಪು–265–267.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4.

ಒತ್ತಾಯವಾಗಿ ಬಳಸಿಕೊಳ್ಳಬೇಕಾಗುತ್ತದೆ.

**೩. ಆರ್ಜಿತ ಅವಧಾನ :–**

ಒಮ್ಮೆ ನೀತಿಪಾಠಕ್ಕೆ ಒತ್ತಾಯದ ಅವಧಾನವನ್ನು ಬಳಸಿಕೊಂಡಿದ್ದೇವೆಂದು ಭಾವಿಸೋಣ.ಅವರಿಗೆ ನೀತಿಪಾಠದಲ್ಲಿ ಪ್ರೀತಿ ಹುಟ್ಟುವಂತೆ ಪ್ರೇರೇಪಿಸಿದರೆ ಅದು ಅವರ ಆಸೆಯ ವಿಚಾರವಾಗುತ್ತದೆ. ಇದರಿಂದ ಅವಧಾನ ಸುಲಭವಾಗಿ ದೊರಕುತ್ತದೆ. ಒತ್ತಾಯವಾಗಿ ಒದಗಿಸಿಕೊಂಡಿದ್ದರೂ ಆದಷ್ಟು ಬೇಗ ಅದು ಆರ್ಜಿತ ರೂಪಕ್ಕೆ ಪರಿವರ್ತನೆಯಾಗಬೇಕು. ಹೀಗೆ ಕಲಿಯುವ ವಿಷಯದಲ್ಲೇ ಆರಂಭವಾಗುವ ಪ್ರೀತಿಯಿಂದ ಪರಿವರ್ತನೆಯಾಗುವ ಒತ್ತಾಯದ ಅವಧಾನ ಸ್ವಾಭಾವಿಕ ಅವಧಾನದಷ್ಟೇ ಸರಾಗವಾಗಿ ದೊರಕುತ್ತದೆ. ಇದರಿಂದ ಶ್ರಮವೂ ಕಡಿಮೆ ಮತ್ತು ಕಲಿವೂ ಯಸ್ವಿಯಾಗುವುದು.

ಸುಲಭವಾಗಿ ಅವಧಾನವನ್ನು ದೊರಕಿಸಿಕೊಳ್ಳುವುದಕ್ಕೂ, ನಂತರ ಅದು ಕದಲದಂತೆ ನೋಡಿಕೊಳ್ಳುವುದಕ್ಕೂ ನೆರವಾಗುವ ಸಾಧನಗಳಲ್ಲಿ ಬಹು ಮುಖ್ಯವಾಗಿ ಮಕ್ಕಳಿಗೆ ಬಂದಿರುವ ಒಂದು ಗುಣವೆಂದರೆ "ಆಸಕ್ತಿ". ಹಲವರು ಇದನ್ನು ಅವಧಾನವೆಂದೂ ಭಾವಿಸುವರು. ಅವಧಾನ ಪ್ರವಹಿಸುವ ಮಾರ್ಗವನ್ನು ನಿಷ್ಕರ್ಷಿಸುವ ಮನೋಭಾವವೇ ಆಸಕ್ತಿ. **MCDOUGALL - American Psychologist** ರವರು ಹೇಳಿರುವಂತೆ, ಆಸಕ್ತಿ ಅವಧಾನದ ಸ್ಥಾವರ ರೂಪ. ಅವಧಾನ ಆಸಕ್ತಿಯ ಕಾರ್ಯಸ್ವರೂಪ. ಕಾರ್ಯರೂಪಕ್ಕೆ ಬರದೆ ಮನಸ್ಸಿನಲ್ಲಿ ಅಡಗಿರುವ ಅವಧಾನವೇ ಆಸಕ್ತಿ, ಕಾರ್ಯರೂಪಕ್ಕೆ ಬಂದಾಗ ಅವಧಾನ. ರಚನೆ, ಕಾತರ, ಹೋರಾಟ, ಸಂಘಾಭಿಲಾಷೆ ಇತ್ಯಾದಿ ಹುಟ್ಟುಗುಣಗಳು ಆಸಕ್ತಿಗಳು. ಭೀತಿ, ಆಹಾರಾನ್ವೇಷಣೆ, ಸಂಗ್ರಹ ಇವುಗಳಿಂದಲೂ ಹಲವು ಆಸಕ್ತಿಗಳು ಹುಟ್ಟುತ್ತವೆ. ಇವುಗಳು ಪ್ರಕೃತಿದತ್ತವಾಗಿ ಬರುವ ಸಹಜ ಆಸಕ್ತಿಗಳು. ಸ್ವಾಭಾವಿಕ ಅವಧಾನಕ್ಕೆ ಸ್ವಾಭಾವಿಕ ಆಸಕ್ತಿಗಳೇ ಕಾರಣ. ಆರ್ಜಿತ ಅವಧಾನಕ್ಕೆ ಪರಿವರ್ತಿತ ಆಸಕ್ತಿಗಳೇ ಆಧಾರ.[34]



---

೩4. **ವೀರಪ್ಪ. ಎನ್.ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–12, ಪು–272.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4.

## ೩-೪- ಸ್ಮೃತಿ ಮತ್ತು ವಿಸ್ಮೃತಿ-ಕಲಿಕೆಯ ವರ್ಗಾವಣೆ

ಅನುಭವಗಳು ಮನಸ್ಸಿನಲ್ಲಿ ಗುರುತುಗಳನ್ನು ನಿಲ್ಲಿಸುತ್ತವೆ. ಹಾಗೆ ಮನಸ್ಸಿನಲ್ಲಿ ಸಂಗ್ರಹವಾಗುವ ಅನುಭವದ ಮುದ್ರಿಕೆಗಳನ್ನು ಬಿಂಬಗಳೆಂದು ಕರೆಯುತ್ತಾರೆ. ಆ ಬಿಂಬಗಳನ್ನು ಮುಂದೆ ನಾವು ಪುನಃ ಮನಸ್ಸಿನಲ್ಲಿ ಚಿತ್ರಿಸಿಕೊಂಡು ಅದರ ಅನುಭವಗಳನ್ನು ಮರುಕಳಿಸಿ ಪಡೆಯುವುದಕ್ಕೆ ನೆನಪು, ಸ್ಮೃತಿ ಅಥವಾ ಜ್ಞಾಪಕಶಕ್ತಿ ಎನ್ನಲಾಗಿದೆ. ಸರಳವಾಗಿ ಹೇಳುವುದಾದರೆ, ಕಲಿತ ವಿಷಯವನ್ನು ನೆನಪಿನಲ್ಲಿಟ್ಟುಕೊಳ್ಳುವ ಪ್ರಕ್ರಿಯೆಯೇ ಸ್ಮೃತಿ. ಈ ಸ್ಮೃತಿ ಶಕ್ತಿ ಇಲ್ಲದೆ ನಾವು ಏನನ್ನೂ ಕಲಿಯಲು ಸಾಧ್ಯವಿಲ್ಲ. ನೆನಪೆಂಬ ಮಾನಸಿಕ ವ್ಯಾಪಾರದಲ್ಲಿ ಮೂರು ಉಪಕ್ರಿಯೆಗಳವೆ. ಮೊದಲನೆಯದಾಗಿ ಇಂದ್ರಿಯಗಳ ಮೂಲಕ ಮನಸ್ಸು ಪ್ರತ್ಯಕ್ಷವಾಗಿ ಅನುಭವ ಪಡೆಯಬೇಕು. ಎರಡನೆಯದಾಗಿ ಈ ಅನುಭವಗಳನ್ನು ಮನಸ್ಸು ಬಿಂಬ ರೂಪದಲ್ಲಿ ಧರಿಸಬೇಕು. ಕೊನೆಯದಾಗಿ ಅಗತ್ಯವೆನಿಸಿದಾಗ ಆ ಬಿಂಬಗಳು ಭಾವನೆಗಳ ರೂಪವನ್ನು ತಾಳಿ ಸ್ಮರಣೆಗೆ ಬರಬೇಕು. ಸಾಂಪ್ರದಾಯಿಕವಾಗಿ ಕೊನೆಯ ಮಾನಸಿಕ ವ್ಯಾಪಾರವನ್ನು ಜ್ಞಾಪಕಶಕ್ತಿ ಎಂದು ಕರೆಯಲಾದರೂ ಒಟ್ಟಾರೆ ಮೂರು ಮಾನಸಿಕ ವ್ಯಾಪಾರಗಳನ್ನೂ ಒಟ್ಟಿಗೆ ಸೇರಿದಂತೆ ನೆನಪು ಅಥವಾ ಜ್ಞಾಪಕಶಕ್ತಿ ಎಂದು ಕರೆಯುವುದು ಹೆಚ್ಚು ಶಾಸ್ತ್ರೀಯವಾಗಿರುತ್ತದೆ.[೩೫]

ಸಂಸ್ಕೃತ ಕಥಾಸಾಹಿತ್ಯದ ಒಂದು ಶ್ಲೋಕ ಹೀಗೆ ಹೇಳುತ್ತದೆ.

काव्यशास्त्रविनोदेन कालोगच्छति धीमताम् ।

व्यसनेन च मूर्खाणां निद्रया कलहेन वा ॥[36]

ಅಂದರೆ, ಬುದ್ಧಿವಂತರ ಸಮಯವು ಸಾಹಿತ್ಯ, ಶಾಸ್ತ್ರ ಗ್ರಂಥಗಳನ್ನು ಓದುವುದರಿಂದ ಸಿಗುವ ಮನರಂಜನೆಯಿಂದ ಕಳೆಯುತ್ತದೆ. ಆದರೆ, ಮೂರ್ಖರ ಸಮಯವು ದುಶ್ಚಟಗಳಲ್ಲಿ, ನಿದ್ದೆಯಲ್ಲಿ ಅಥವಾ ಜಗಳದಲ್ಲಿ ಕಳೆಯುತ್ತದೆ.

ಭಾಷೆಗಳಲ್ಲಿ ಮುಖ್ಯವೂ, ಮಧುರವೂ, ದಿವ್ಯವೂ ಆದುದು ಸಂಸ್ಕೃತ. ಅದರಿಂದ ಆ ಭಾಷೆಯ ಕಾವ್ಯ ಮಧುರ, ಅದಕ್ಕಿಂತಲೂ ಸುಭಾಷಿತ ಮಧುರ. ಇಲ್ಲಿನ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಲಭ್ಯವಾಗುವ ನೀತಿಪಾಠಗಳು, ಸೂಕ್ತಿಗಳು, ಶ್ಲೋಕಗಳು, ಅಜ್ಞಾನದ ಅಂಧಕಾರವನ್ನು ಹೋಗಲಾಡಿಸುವುದಲ್ಲದೆ ಸುಜ್ಞಾನದ ಬೆಳಕು ಚೆಲ್ಲಿ ಬದುಕನ್ನು ಹಸನು ಮಾಡುವುದಾಗಿದೆ. ಇದಲ್ಲದೆ ಸ್ತೋತ್ರಗಳು ಸುಭಾಷಿತಗಳು ಮತ್ತು ನೀತಿ

---

**೩೫. ವೀರಪ್ಪ.ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-14, ಪು-೩೩೯-೩೪೦.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4.

36. **ನಾರಾಯಣ ಪಂಡಿತರ ಹಿತೋಪದೇಶ**. 1-32.

ಪಾಠಗಳ ಪಠಣ ನಮ್ಮ ಉಚ್ಛಾರಣೆ ಮತ್ತು ನೆನಪಿನ ಶಕ್ತಿಯನ್ನು ಹೆಚ್ಚಿಸುವುದೂ ಆಗಿರುತ್ತದೆ. ಇದನ್ನರಿತ ಪ್ರಪಂಚದ ಅನೇಕ ದೇಶಗಳು ತಮ್ಮ ಶಾಲೆಗಳ ಪಠ್ಯಕ್ರಮಕ್ಕೆ ಸಂಸ್ಕೃತ ಭಾಷೆಯನ್ನು ಸೇರಿಸುವುದಲ್ಲದೆ ಶಾಲೆಯ ಪ್ರಾರ್ಥನಾ ಶ್ಲೋಕಗಳನ್ನು ಆಯ್ಕೆಮಾಡಿಕೊಂಡಿರುತ್ತಾರೆ. ವೇದಗಳ ಕಾಲದಿಂದಲೂ ಋಷಿಮುನಿಗಳು ನೆನಪಿನ ಶಕ್ತಿಯಿಂದಲೇ ವೇದಮಂತ್ರಗಳನ್ನು ಉಚ್ಛಾರಣೆ ಮಾಡುತ್ತಿದ್ದರು.

ಸ್ಮೃತಿ ಅಥವಾ ಜ್ಞಾಪಕಶಕ್ತಿ ಕುರಿತು ಕೆಲವು ಮನೋವಿಜ್ಞಾನಿಗಳು ತಮ್ಮದೇ ಆದ ವ್ಯಾಖ್ಯಾನವನ್ನು ಒದಗಿಸಿದ್ದಾರೆ." ಹಿಂದೆ ಕಲಿತಂತಹ ವಿಷಯಗಳನ್ನು ಅನುಭವಗಳನ್ನು ಪುನಃ ಸ್ಮರಣೆಗೆ ತರುವುದೇ ಸ್ಮೃತಿ" ಎಂದು **ROBERT S. WOODWORTH & MARK WEISS-(AmericanPsychologists)** ವ್ಯಾಖ್ಯಾನಿಸಿದ್ದಾರೆ. ಹಾಗೆಯೇ **RYBURN-(Educational Psychologist)** ರವರು ಇನ್ನೂ ಸ್ವಲ್ಪ ವಿವರವಾಗಿ ವ್ಯಾಖ್ಯಾನಿಸಿ "ನಾವು ಪಡೆದ ಅನುಭವಗಳನ್ನು ಸಂಗ್ರಹಿಸಿಡುವ ಶಕ್ತಿ ಮತ್ತು ಅನುಭವಗಳು ಜರುಗಿದ ಸ್ವಲ್ಪ ಕಾಲಾನಂತರ ಪ್ರಜ್ಞಾನುಭವಕ್ಕೆ ತಂದುಕೊಳ್ಳುವ ಸಾಮರ್ಥ್ಯವೇ ಸ್ಮೃತಿ ಎಂದು ಹೇಳಿದ್ದಾರೆ.[37] ಸ್ಮೃತಿಯ ಮೇಲೆ ಪ್ರಭಾವ ಬೀರುವ ಹಲವಾರು ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳಿವೆ. ಕೆಲವು ಮುಖ್ಯವಾದುದನ್ನು ಗಮನಿಸಿದರೆ- ವೈಯಕ್ತಿಕ ಭಿನ್ನತೆಗಳು, ಆಸಕ್ತಿ, ಅಭಿಪ್ರೇರಣೆ, ಕಲಿಯುವವನ ಮನೋಧೋರಣೆ, ಕಲಿಕೆಯ ಪ್ರಮಾಣ, ಕಲಿಯುವ ವಿಷಯ, ಪುನರಾವರ್ತನೆ ಇತ್ಯಾದಿ. ಸ್ಮೃತಿ ಅಥವಾ ಸ್ಮರಣೆಯಲ್ಲಿ ಕೆಲವು ವಿಧಾನಗಳಿವೆ. ಅವು ಯಾವುವೆಂದರೆ- ಅಂತರ ಮತ್ತು ನಿರಂತರ ಅಭ್ಯಾಸ, ಇಡಿ ಮತ್ತು ಬಿಡಿ ವಿಧಾನ, ಅರ್ಥಪೂರ್ಣ ಕಲಿಕೆ ಮತ್ತು ಕಂಠಪಾಠ ಸಂಯೋಜನಾ ವಿಧಾನ.[38]

ನಮ್ಮ ಅನುಭವಕ್ಕೆ ಬಂದ ಅನೇಕ ವಿಚಾರಗಳನ್ನು ನಾವು ನೆನಪಿಡುತ್ತೇವೆ. ಸಮಯ ಬಂದಾಗ ಅವನ್ನು ಸ್ಮರಿಸಿಕೊಳ್ಳುತ್ತೇವೆ. ಆದರೆ ಕೆಲವನ್ನು ಸ್ಮರಿಸಿಕೊಳ್ಳಲಾರೆವು. ಮನಸ್ಸಿನ ಆ ಸ್ಥಿತಿಯನ್ನೇ 'ಮರೆವು' ಅಥವಾ 'ವಿಸ್ಮೃತಿ' ಎಂದು ಕರೆಯುತ್ತೇವೆ." ಹಿಂದೆ ಕಲಿತಂತಹ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗದಿರುವುದು ಅಥವಾ ಹಿಂದೆ ಪಡೆದ ಅನುಭವಗಳನ್ನು ಅಗತ್ಯವಾದಾಗ ಪುನಃಸ್ಮರಣೆಗೆ ತಂದುಕೊಳ್ಳಲಾಗದಿರುವುದನ್ನು ವಿಸ್ಮೃತಿ ಅಥವಾ ಮರೆವು ಎನ್ನುವುದು" ಎಂದು ಡ್ರೀವರ್‌ರವರು ವ್ಯಾಖ್ಯಾನಿಸಿದ್ದಾರೆ. ಮತ್ತೊಬ್ಬರು ಮನೋವಿಜ್ಞಾನಿ **BHATIA H.R.** ಹೀಗೆ ಹೇಳಿದ್ದಾರೆ- "ಒಂದು ವಿಚಾರ ಅಥವಾ ಹಲವು ವಿಚಾರಗಳನ್ನು ಮೂಲ ಉದ್ದೀಪನದ ಅನುಪಸ್ಥಿತಿಯಲ್ಲಿ ಪುನಃ ಸ್ಮರಣೆಗೆ ತಂದುಕೊಳ್ಳಲು ಸಾಧ್ಯವಾಗದಿರುವುದನ್ನು ವಿಸ್ಮೃತಿ ಅಥವಾ ಮರೆವು ಎನ್ನುವರು.[39] ವಿಸ್ಮೃತಿಯಲ್ಲಿ ವಿಧಗಳು ಎರಡು. ಅವುಗಳೆಂದರೆ.

37. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-6, ಪು-268,269.(2005), ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ -577005.
38. **ವಾಮದೇವಪ್ಪ. ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-6, ಪು-270-272.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ. ದಾವಣಗೆರೆ-577005.
39. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ -6, ಪು -272.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005.

**1. ಸಾಮಾನ್ಯ ರೀತಿಯ ಮರೆವು ಅಥವಾ ನಿಷ್ಕ್ರಿಯ ಅಥವಾ ಸ್ವಾಭಾವಿಕ ಮರೆವು.**

ನೆನೆಸದೆ ದೀರ್ಘಕಾಲ ಬಿಡುವುದರಿಂದ, ಇತರ ಅನುಭವಗಳ ಅತಿಕ್ರಮಣದಿಂದ ಮತ್ತು ಹೊಸ ಅನುಭವಗಳ ಸಂಗಡ ಬೆರೆತು ಆಗುವ ಗೊಂದಲಗಳಿಂದ ಹುಟ್ಟುವುದೇ ಸಾಧಾರಣ ರೀತಿಯ ಮರೆವು.

**2. ಅಸಾಮಾನ್ಯ ರೀತಿಯ ಮರೆವು ಅಥವಾ ಕ್ರಿಯಾತ್ಮಕ ಅಥವಾ ಪ್ರೇರಿತ ಮರೆವು.**

ದೊಡ್ಡ ಶಬ್ದದಿಂದಲೋ, ಆಘಾತದಿಂದಲೋ, ಮೆದುಳಿನ ಭಾಗ ಘಾಸಿಯಾದಾಗಲೋ ಮರೆವು ಸಂಭವಿಸಬಹುದು. ಹಾಗೆಯೇ ಮನಸ್ಸಿನ ಕೆಲವು ಕಹಿ ಅನುಭವಗಳ ಪ್ರಭಾವದಿಂದಲೂ ಮರೆವು ಮೂಡಬಹುದು. ಇವೆರಡೂ ಅಸಾಧಾರಣ ರೀತಿಯವಾಗಿದ್ದು, ಶಿಕ್ಷಣಕ್ಕೆ ಅಷ್ಟಾಗಿ ಸಂಬಂಧಿಸಿರುವುದಿಲ್ಲ. ಆದ್ದರಿಂದ ಸಾಧಾರಣ ರೀತಿಯ ಮರೆವಿನ ಪರಿಚಯ ಮಾತ್ರ ಶಿಕ್ಷಕರಿಗೆ ಅವಶ್ಯಕ ಎನ್ನಬಹುದು.[40]

ಸಾಮಾನ್ಯವಾಗಿ ಮರೆವು ಒಂದು ಮಾನಸಿಕ ದೌರ್ಬಲ್ಯ ಎಂದು ಅಭಿಪ್ರಾಯ ಇದೆ. ಆದರೆ ಅದೂ ಒಂದು ಸ್ವಾಭಾವಿಕ ಮನೋವ್ಯಾಪಾರ ಹೌದು. ಮಾನಸಿಕ ಆರೋಗ್ಯಕ್ಕೆ ಇದೂ ಅವಶ್ಯಕವಾದದ್ದು. ನಿತ್ಯ ಜೀವನದ ಎಲ್ಲಾ ಅನುಭವಗಳನ್ನೂ ಮನಸ್ಸು ಗ್ರಹಿಸಿಡಬೇಕಾದರೆ ದೊಡ್ಡ ಹೊರೆಯಾದೀತು. ಅವುಗಳಲ್ಲಿ ಕೆಲವು ಉಪಯುಕ್ತವೇನೋ ಹೌದು, ಮಿಕ್ಕವು ಕಹಿ ಅನುಭವಗಳು, ಇನ್ನು ಕೆಲವು ಅನಗತ್ಯವಾದವು. ಅಂತಹ ಅನುಭವಗಳನ್ನು ಮರೆತರೇ ಮನಸ್ಸಿಗೆ ನೆಮ್ಮದಿ, ಆರೋಗ್ಯ. ಈ ದೃಷ್ಟಿಯಿಂದ ಮರೆವು ಅಹಿತ ವ್ಯಾಪಾರವೇನಲ್ಲ. ನಿಜಕ್ಕೂ ಇದು ಒಂದು ವರವೇ ಹೌದು.

## ~ಕಲಿಕೆಯ ವರ್ಗಾವಣೆ~

ಇನ್ನೊಂದು ಬಹಳ ಮುಖ್ಯವಾದ ಶಿಕ್ಷಣದ ಗುರಿಯಿದೆ. ಅದೇನೆಂದರೆ, ವ್ಯಕ್ತಿಯು ತನ್ನ ಜೀವನದಲ್ಲಿ ಎದುರಾಗುವ ಹೊಸ ಸನ್ನಿವೇಶಗಳನ್ನು ಪರಿಣಾಮಕಾರಿಯಾಗಿ ಎದುರಿಸಲು ಸಮರ್ಥನನ್ನಾಗಿ ಮಾಡುವುದು. ಒಂದು ಸನ್ನಿವೇಶದಲ್ಲಿ ಕಲಿತ ಜ್ಞಾನ ಹಾಗೂ ಕೌಶಲಗಳು ಮುಂದಿನ ಸನ್ನಿವೇಶದಲ್ಲಿ ಸಮಸ್ಯೆಗಳನ್ನು ಎದುರಿಸಲು ಸಹಕಾರಿಯಾಗುತ್ತದೆ. ಹೀಗೆ ಒಂದು ಸನ್ನಿವೇಶದಲ್ಲಿ ಕಲಿತದ್ದು ಇನ್ನೊಂದು ಹೊಸ ಸನ್ನಿವೇಶದಲ್ಲಿ ಉಪಯೋಗಿಸಲ್ಪಡುವುದಕ್ಕೆ ಅಥವಾ ಪ್ರಭಾವ ಬೀರುವುದಕ್ಕೆ **"ಕಲಿಕೆಯ ವರ್ಗಾವಣೆ"** ಎಂದು ಕರೆಯುತ್ತಾರೆ.

"ಕಲಿಕೆಯ ವರ್ಗಾವಣೆಯೆಂದರೆ ಒಂದು ಸನ್ನಿವೇಶದಲ್ಲಿ ಕಲಿತ ಜ್ಞಾನ, ತರಬೇತಿ ಕುಶಲತೆ ಹಾಗೂ ಅಭ್ಯಾಸಗಳನ್ನು ಇನ್ನೊಂದು ಸನ್ನಿವೇಶಕ್ಕೆ ವರ್ಗಾಯಿಸುವುದಾಗಿದೆ." ಎಂದು **SORENSON-Educational Psychologist** ವ್ಯಾಖ್ಯಾನಿಸಿದ್ದಾರೆ.

---

40. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ –14, ಪು –354–355.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

"ಒಂದು ಸನ್ನಿವೇಶದಲ್ಲಿ ಕಲಿತ ವಿಷಯಗಳ ಸಾಮಾನ್ಯೀಕರಣವೇ ಕಲಿಕೆಯ ವರ್ಗಾವಣೆ" ಎಂದು **C.H.JUDD -(Theory of Generalization)** ಹೇಳಿದ್ದಾರೆ.[41]

ನಮ್ಮ ಮನೋಧೋರಣೆಗಳು, ಅಭ್ಯಾಸಗಳು ಹಾಗೂ ಆಸಕ್ತಿಗಳು ವರ್ಗಾವಣೆಯಾಗುವ ಮೂಲಕ ಮುಂದಿನ ವಿವಿಧ ಸನ್ನಿವೇಶಗಳಲ್ಲಿ ನೆರವಾಗುತ್ತವೆ. ಇದೇ ಕಲಿಕೆಯ ವರ್ಗಾವಣೆ. ಕಲಿಕೆಯ ವರ್ಗಾವಣೆ ಮೂರು ವಿಧದಲ್ಲಾಗುತ್ತದೆ. ಒಂದು ಸನ್ನಿವೇಶದಲ್ಲಿ ನಾವು ಏನನ್ನು ಕಲಿಯುತ್ತೇವೆಯೋ ಅದರ ಕಾರಣದಿಂದ ಇನ್ನೊಂದು ಸನ್ನಿವೇಶದಲ್ಲಿ ಕಲಿಕೆ ಹೆಚ್ಚು ಪರಿಣಾಮಕಾರಿಯಾಗುತ್ತದೆ. ಇದನ್ನು ಧನಾತ್ಮಕ ವರ್ಗಾವಣೆ**(Positive Transfer)** ಎನ್ನುತ್ತಾರೆ. ಒಂದು ಸನ್ನಿವೇಶದಲ್ಲಿ ಕಲಿತ ವಿಷಯವು ಇನ್ನೊಂದು ಕ್ಷೇತ್ರದ ಕಲಿಕೆಗೆ ಅಡ್ಡಿಯನ್ನುಂಟುಮಾಡಿದರೆ ಅದನ್ನು ಋಣಾತ್ಮಕ ವರ್ಗಾವಣೆ**(Negative Transfer)** ಎನ್ನುತ್ತಾರೆ. ಒಂದು ಸನ್ನಿವೇಶದಲ್ಲಿ ಕಲಿತ ವಿಷಯ ಅಥವಾ ಪಡೆದ ಅನುಭವ ಇನ್ನೊಂದು ಸನ್ನಿವೇಶದಲ್ಲಿ ಯಾವುದೇ ಪರಿಣಾಮ ಬೀರದಿದ್ದಾಗ, ಅಂತಹ ವರ್ಗಾವಣೆಯನ್ನು ಶೂನ್ಯ ವರ್ಗಾವಣೆ **(Zero Transfer)** ಎನ್ನುತ್ತಾರೆ.[42]

ಕಲಿಕೆಯ ವರ್ಗಾವಣೆಯು ಶಿಕ್ಷಣ ಕ್ಷೇತ್ರದಲ್ಲಿ ಮಹತ್ವದ ಪಾತ್ರವನ್ನು ವಹಿಸಿದೆ. ಹಿಂದೆ ಗಳಿಸಿದ ಅನುಭವದ ವರ್ಗಾವಣೆ ಹೆಚ್ಚಾದಷ್ಟು ಹೊಸ ಸನ್ನಿವೇಶದಲ್ಲಿ ಬೇರೆ ವಿಷಯಗಳನ್ನು ಕಲಿಯುವುದು ಸುಲಭವಾಗುತ್ತದೆ. ಬೋಧಕನಿಗೆ ತಾನು ಬೋಧನೆ ಮಾಡುತ್ತಿರುವ ವಿಷಯದ ಯಾವ ತತ್ವಗಳು, ನಿಯಮ ಅಥವಾ ಸಾಮಾನ್ಯೀಕರಣಗಳ ಕಲಿಕೆಯ ಇತರ ಕ್ಷೇತ್ರಗಳಿಗೆ ವರ್ಗಾಯಿಸಲ್ಪಡಬೇಕು ಎಂಬುದರ ಕುರಿತು ಸ್ಪಷ್ಟ ಅರಿವು ಇರಬೇಕು. ಪರಿಕಲ್ಪನೆಗಳು ಅಥವಾ ಕಾರ್ಯದಲ್ಲಿ ಸಾಕಷ್ಟು ಅನುಭವ ಒದಗಿಸಿ ಮೂಲ ಕ್ರಿಯೆ ಅಥವಾ ಕಾರ್ಯದ ಬಗ್ಗೆ ಹೆಚ್ಚಿನ ತರಬೇತಿ ನೀಡಿದರೆ ಮುಂದಿನ ಸನ್ನಿವೇಶಕ್ಕೆ ಹೆಚ್ಚಿನ ಧನಾತ್ಮಕ ವರ್ಗಾವಣೆಯಾಗುವ ಸಾಧ್ಯತೆಯಿರುತ್ತದೆ. ವಿದ್ಯಾರ್ಥಿಗಳು ಅರ್ಥಪೂರ್ಣವಾಗಿ ಮತ್ತು ಒಳನೋಟಗಳ ಮೂಲಕ ಕಲಿಯಲು ಪ್ರೋತ್ಸಾಹಿಸಬೇಕು. ಪ್ರಾಯೋಗಿಕ ಸನ್ನಿವೇಶಗಳು ಮತ್ತು ಸೂಕ್ತ ಅನುಭವಗಳ ಮೂಲಕ ಉತ್ತಮ ಆದರ್ಶವನ್ನು ಬೆಳೆಸಬೇಕು.

ಪಂಚತಂತ್ರದಲ್ಲಿ ಮೊದಲನೆಯದಾಗಿ, ಮಾನವ ಪ್ರಪಂಚದ, ಅನುಭವಗಳು ವರ್ತನೆಗಳು, ಭಾವನೆಗಳನ್ನು ಪ್ರಾಣಿಪಶುಪಕ್ಷಿಗಳಿಗೆ ಆರೋಪಿಸಿ ಆಕರ್ಷಕ ಕಥೆಗಳನ್ನು ವ್ಯವಸ್ಥಿತವಾಗಿ ಹೆಣೆಯಲಾಗಿದೆ. ಆ

---

41. **ವಾಮದೇವಪ್ಪ. ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-6, ಪು-278,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ. ದಾವಣಗೆರೆ-577005
42. **ವಾಮದೇವಪ್ಪ ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ -6, ಪು -278,279.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005.

ಕಥೆಗಳಿಂದ ಪಡೆದ ಅನುಭವಗಳು, ವರ್ತನೆಗಳು ಕೇಳುಗರಿಗೆ ಮನೋಜ್ಞವಾಗಿ ಗ್ರಹಿಸಲು ಸಾಧ್ಯವಾಗುತ್ತದೆ. ಅಲ್ಲಿ ಅವರು ಪಡೆದ ಜ್ಞಾನವನ್ನು ತಮ್ಮ ಜೀವನಕ್ಕೆ ಅಳವಡಿಸಿಕೊಂಡಾಗ ಅದ್ಭುತವಾದ ಕಲಿಕೆಯ ವರ್ಗಾವಣೆ ಉಂಟಾಗುತ್ತದೆ. ರಾಜನೀತಿ, ಸಾರ್ಥಕ ಬದುಕಿನ ನೀತಿನಿಯಮಗಳು ಮಂದಮತಿಗಳಾದ ಅರಸುಕುಮಾರರಿಗೆ ಕೇಳುತ್ತ, ಕೇಳುತ್ತ ಅರ್ಥಪೂರ್ಣವಾಗಿ ಗ್ರಹಿಸುತ್ತಾ, ಪಡೆದ ಜ್ಞಾನವನ್ನು ಮುಂದೆ ಮುಂದೆ ಅವರ ಜೀವನಕ್ಕೆ ಅಳವಡಿಸಿಕೊಂಡಾಗ, ಅವರು ಎಷ್ಟರಮಟ್ಟಿಗೆ ಪರಿವರ್ತಿತರಾದರು ಎಂಬುದು ತಿಳಿದದ್ದೇ ಆಗಿರುತ್ತದೆ. ಇಂಥಹ ಕಲಿಕೆಯ ವರ್ಗಾವಣೆಗೆ ಮೇಧಾವಿ ಶಿಕ್ಷಕರಾದ ವಿಷ್ಣುಶರ್ಮರು ಅಷ್ಟೇ ವ್ಯವಸ್ಥಿತ ಸನ್ನಿವೇಶಗಳನ್ನು ಹಾಗೂ ದೃಷ್ಟಾಂತಗಳನ್ನು ಒದಗಿಸಿ ಪ್ರೋತ್ಸಾಹಿಸಿದ್ದಾರೆ.



# ೩-೫. पञ्चतन्त्रस्य– प्रथमं तन्त्रम्– * मित्रभेदः *

## ಕಥೆಗಳ ವಿಶ್ಲೇಷಣೆ.

ಪಂಚತಂತ್ರದಲ್ಲಿನ ಮೊದಲ ತಂತ್ರ **"ಮಿತ್ರಭೇದ"**ವು ಉಳಿದ ನಾಲ್ಕು ತಂತ್ರಗಳಿಗಿಂತಲೂ ಅತ್ಯಂತ ವಿಸ್ತೃತ ಗ್ರಂಥಭಾಗವಾಗಿರುತ್ತದೆ. ಗೆಳೆತನದಲ್ಲಿ ಒಡಕು ಅಥವಾ ಭೇದ ಮೂಡಲು ಕಾರಣವಾಗುವಂಥ ಸನ್ನಿವೇಶಗಳನ್ನು ಈ ತಂತ್ರದ ಕಥೆಗಳು ಪ್ರದರ್ಶಿಸುತ್ತವೆ. ರಾಜ ಪದವಿಯನ್ನು ಹೊಂದಿದ್ದ ಪಿಂಗಳಕ ಎಂಬ ಒಂದು ಸಿಂಹ, ಆ ರಾಜನ ಮಂತ್ರಿ ಸ್ಥಾನವನ್ನು ತುಂಬಿದ್ದ ಕರಟಕ, ದಮನಕ ಎಂಬ ಎರಡು ನರಿಗಳು ಮತ್ತು ಸಂಜೀವಕನೆಂಬ ಎತ್ತು ಇವುಗಳು ಮುಖ್ಯ ಭೂಮಿಕೆಯಲ್ಲಿ ಕಂಡುಬರುತ್ತವೆ. ಕಪಟತನಕ್ಕೆ ಹೆಸರುವಾಸಿಯಾದ ನರಿಗಳು ಸಿಂಹ ಹಾಗೂ ಎತ್ತಿನ ಮಧ್ಯೆ ಹಗೆತನವನ್ನು ಮೂಡಿಸಿ ಎತ್ತಿನ ಅಂತ್ಯಕ್ಕೆ ಕಾರಣವಾಗುವುದೇ ಈ ಗ್ರಂಥ ಭಾಗದ ತಿರುಳಾಗಿದೆ. ಈ ತಂತ್ರದಲ್ಲಿ ಒಟ್ಟು ಇಪ್ಪತ್ತೆರಡು ಉಪಕಥೆಗಳು ಬಹಳ ಉತ್ತಮ ಸನ್ನಿವೇಶಗಳನ್ನೊದಗಿಸಿ ಮಿತ್ರತ್ವದಲ್ಲಿ ಹಗೆತನ ಅದರಿಂದ ಒಡಕು ಅಥವಾ ಭೇದ ಮತ್ತು ಅದರ ಪರಿಣಾಮವನ್ನು ಬಹಳ ಅಚ್ಚುಕಟ್ಟಾಗಿ ಪ್ರತಿಬಿಂಬಿಸುತ್ತವೆ.

ಪಂಚತಂತ್ರದ ಮೊದಲನೆಯ ತಂತ್ರವಾದ ಮಿತ್ರಭೇದದ ಮೊದಲ ನುಡಿ ಒಳ್ಳೆಯ ಗಾಢವಾದ ಸ್ನೇಹ ಹೇಗೆ ನಾಶವಾಯಿತು ಎಂಬುದರಿಂದ ಪ್ರಾರಂಭವಾಗುತ್ತದೆ. ಬಹಳ ಒಳ್ಳೆಯ ತಿಳುವಳಿಕೆಯನ್ನು ಸೂಕ್ತಿಗಳ ರೂಪದಲ್ಲಿ ಸರಳ ಹಾಗೂ ಆಕರ್ಷಕ ಕಥೆಗಳ ಮೂಲಕ ರಾಜನಂದನರಿಗೆ ಬೋಧಿಸಲಾಗಿರುತ್ತದೆ. ಉದಾಹರಣೆಗೆ:–

मृगा मृगैः सङ्गमनुव्रजन्ति गावश्च गोभिस्तुरगास्तुरङ्गैः।

मूर्खाश्च मूर्खैः सुधियः सुधीभिः समानशीलव्यसनेषु सख्यम् ॥[43]

ಮೃಗಗಳು – ಮೃಗಗಳೊಡನೆ, ಹಸುಗಳು – ಹಸುಗಳೊಡನೆ, ಕುದುರೆಗಳು – ಕುದುರೆಗಳೊಡನೆ, ಮೂರ್ಖರು ಮೂರ್ಖರೊಡನೆ, ವಿದ್ವಾಂಸರು – ವಿದ್ವಾಂಸರೊಡನೆ ಸೇರುತ್ತಾರೆ. ಗುಣಶೀಲಾಭ್ಯಾಸಗಳು ಸಮಾನವಾಗಿದ್ದವರೊಡನೆ ಸ್ನೇಹ ಬೆಳೆಯುತ್ತದೆ.

ವ್ಯಕ್ತಿಯ ಬೆಳವಣಿಗೆಯಲ್ಲಿ ಮೂಲಸ್ವಭಾವ ಮತ್ತು ಸನ್ನಿವೇಶಗಳ ಪ್ರಭಾವ, ವೈಯುಕ್ತಿಕ ಭಿನ್ನತೆಗಳು, ಅಭಿಪ್ರೇರಣೆ, ಅವಧಾನ, ಸ್ಮೃತಿ, ವಿಸ್ಮೃತಿ, ಕಲಿಕೆಯ ವರ್ಗಾವಣೆ ಇವುಗಳ ಬಗ್ಗೆ ಶೈಕ್ಷಣಿಕ ಮನೋವಿಜ್ಞಾನದಲ್ಲಿ

---

43. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ–ಶ್ಲೋ –೩೦೫, ಪು –೧೯೬,(೧೯೯೩) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–೨೨೧೦೦೧.

ಕಂಡು ಬರುವಂತೆ ವಿಚಾರಮಾಡಿ, ಕಲಿವಿನ ಬಗ್ಗೆ ಇವುಗಳು ಹೇಗೆ ಪರಿಣಾಮಕಾರಿಯಾಗಬಲ್ಲವು ಎಂಬುದರ ಬಗ್ಗೆ ಪರಿಚಯಮಾಡಿಕೊಂಡಂತಾಯಿತು. ಈ ಹಿನ್ನೆಲೆಯಲ್ಲಿ ಪಂಚತಂತ್ರ ನೀತಿ ಕಾವ್ಯದ ವ್ಯವಸ್ಥಿತ ಕಥಾಸಂಕಲನದಲ್ಲಿ ಈ ಮನೋವೈಜ್ಞಾನಿಕ ಹಾಗೂ ಶೈಕ್ಷಣಿಕ ಅಂಶಗಳನ್ನು ಎಷ್ಟರಮಟ್ಟಿಗೆ ಕಾಣಬಹುದು ಎಂಬುದನ್ನು ವಿಶ್ಲೇಷಿಸೋಣ.

ಪ್ರತಿಭಾನ್ವಿತ ಶಿಕ್ಷಕರೂ, ಸಕಲ ಶಾಸ್ತ್ರಪಾರಂಗತರೂ ಆದ ವಿಷ್ಣುಶರ್ಮರು ಕಥೆಯ ಚೌಕಟ್ಟನ್ನೇ ಬಹಳ ಅಚ್ಚುಕಟ್ಟಾಗಿ ನಿರ್ಮಿಸಿ, ಅದರೊಳಗೆ ಸಣ್ಣಸಣ್ಣ ಉಪಕಥೆಗಳನ್ನು ಸಂಯೋಜಿಸಿ ಸಮರ್ಪಕವಾದ ದೃಷ್ಟಾಂತಗಳನ್ನೊದಗಿಸಿ, ರಾಜಕುಮಾರರಿಗೆ ಆಸಕ್ತಿಯುತವಾಗಿ, ಅರ್ಥಪೂರ್ಣವಾಗಿ ಬದುಕಿನ ವ್ಯವಹಾರ ನೀತಿಯನ್ನು, ವ್ಯಕ್ತಿತ್ವ ನಿರ್ಮಾಣ ಕೌಶಲ್ಯವನ್ನು ಸೂಕ್ತ ಸಮಯದಲ್ಲಿ ಒದಗಿಸಿ ಬೋಧಿಸುತ್ತಾ, ಚಮತ್ಕಾರಯುತವಾಗಿ ಅದರಲ್ಲೇ, ಅವರ ಅವಧಾನ, ಆಸಕ್ತಿ, ಸ್ಮರಣಶಕ್ತಿ ಮತ್ತು ಚಿಂತನಶೀಲತೆಯನ್ನು ಸೆರೆ ಹಿಡಿದಿದ್ದಾರೆ ಎಂಬುದು ಬಹಳ ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಹಿಂದೆ ಸಂಕ್ಷಿಪ್ತವಾಗಿ ವಿಶ್ಲೇಷಿಸಿರುವ ಕಲಿಕೆ – ಅದರ ಅರ್ಥ – ಕಲಿಯುವ ಕ್ರಮ, ಕಲಿಯುವ ವಿಧಗಳು, ಕಲಿಕಾ ನಿಯಮಗಳು, ಕಲಿಕಾ ಸಿದ್ಧಾಂತಗಳು ಇತ್ಯಾದಿ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ವಿಷ್ಣುಶರ್ಮರ ಪಂಚತಂತ್ರದ ಅಧ್ಯಯನ ನಡೆಸಿದಾಗ ನಮಗೆ ಬಹಳಷ್ಟು ಶೈಕ್ಷಣಿಕ, ಮನೋವೈಜ್ಞಾನಿಕ ವಿಚಾರಗಳು ಪ್ರತಿಬಿಂಬಿಸುತ್ತವೆ. ಮನೋವಿಜ್ಞಾನದಲ್ಲಿ ಕಲಿವೇ ಪ್ರಧಾನವಾದದ್ದು. ಹಾಗೆಯೇ ಪಂಚತಂತ್ರದಲ್ಲಿ ಕಂಡು ಬರುವ ಮೂವರು ದುರ್ವಿನೀತ ರಾಜಕುಮಾರರ ಮೂಲ ಸ್ವಭಾವ ಮತ್ತು ವರ್ತನೆಗಳನ್ನು ಗುರುತಿಸಿ, ಅಂದರೆ ಅವರು ಸೋಮಾರಿಗಳು, ಆಲಸಿಗಳು, ಮೂರ್ಖರು, ಬುದ್ಧಿಶೂನ್ಯರು ಎಂಬುದನ್ನು ಗಮನಿಸಿ, ಮೊದಲೇ ಮೂರ್ಖರಿಗೆ ಉಪದೇಶ ಮಾಡುವುದು ಅಲ್ಲ ಎಂದು ಒಂದು ಸೂಕ್ತಿ ಹೇಳುತ್ತದೆ:–

उपदेशो हि मूर्खाणां प्रकोपाय न शान्तये

पयःपानं भुजङ्गानां केवल विषवर्धनम् ॥[44]

ಮೂರ್ಖರಿಗೆ ಉಪದೇಶಮಾಡುವುದು ಅವರನ್ನು ರೇಗಿಸಲು ಕಾರಣವಾಗುತ್ತದೆಯೇ ಹೊರತು ಸಮಾಧಾನಪಡಿಸಲಲ್ಲ. ಸರ್ಪಗಳಿಗೆ ಹಾಲನ್ನೆರೆಯುವುದು, ಕೇವಲ ಅವುಗಳ ವಿಷವನ್ನು ಹೆಚ್ಚಿಸುವುದು. ಇಂಥಹ ಸಂದರ್ಭದಲ್ಲಿ ವಿಷ್ಣುಶರ್ಮರು ತೆಗೆದುಕೊಂಡಿರುವ ನಿರ್ಧಾರವು ಎಂಥಹವರೂ ಆಶ್ಚರ್ಯಪಡುವಂತಿದೆ.

---

44. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ ಶ್ಲೋ –420, ಪು–273(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ವಿಷ್ಣುಶರ್ಮರು ಅವರಿಗೆ ಅಗತ್ಯವಾದ ಹಾಗೂ ಅಪೇಕ್ಷಿತವಾದ ಪರಿವರ್ತನೆ ಅಥವಾ ಮಾರ್ಪಾಟು ಮಾಡಿ ಹೊಸವರ್ತನೆಗಳನ್ನು, ಜ್ಞಾನವನ್ನು, ಕೌಶಲ್ಯವನ್ನು, ದೃಷ್ಟಿಧ್ಯೇಯಗಳನ್ನು ಪರಿಚಯಮಾಡಿ ಕೊಡುವ ಪ್ರಯತ್ನವನ್ನು ಕಲಿವಿನ ಮೊದಲ ಭಾಗವಾಗಿ ವಿಶಿಷ್ಟವಾದ ಪಂಚಸೂತ್ರಗಳನ್ನು ರಚಿಸಿದರು. ರಾಜಕುಮಾರರು ಮುಂದೆ ಯುವರಾಜ ಪದವಿಗೆ ಅರ್ಹರಾಗಬೇಕಾದವರು. ದಕ್ಷಿಣಾತ್ಯ ದೇಶದ ಮಹಿಲಾರೋಪ್ಯ ನಗರದಲ್ಲಿ ದಾನದಲ್ಲಿ ಕಲ್ಪವೃಕ್ಷಕ್ಕೆ ಸಮನಾದ, ದೊಡ್ಡ ದೊಡ್ಡ ರಾಜರ ಕಿರೀಟದಲ್ಲಿರುವ ರತ್ನಗಳ ಕಿರಣಗಳಿಂದ ಪಾದಪೂಜೆಯನ್ನು ಪಡೆಯುತ್ತಿದ್ದ, ಸಕಲಕಲಾ ಪಾರಂಗತನಾದ "ಅಮರಶಕ್ತಿ"ಎಂಬ ರಾಜನು ಈ ರಾಜಕುಮಾರರ ತಂದೆ. ಆದರೇನು ಮಾಡುವುದು ಈ ಮಕ್ಕಳು ಶಾಸ್ತ್ರ ಜ್ಞಾನವನ್ನರಿಯದ ಅವಿವೇಕಿಗಳು. ಹೇಗೆ ಕರುವನ್ನು ನೀಡದ ಮತ್ತು ಹಾಲನ್ನು ಕೊಡದ ಹಸುವಿನಿಂದ ಏನೂ ಪ್ರಯೋಜನ ಇಲ್ಲವೋ ಹಾಗೆ ಬುದ್ಧಿವಂತನಲ್ಲದ, ವಿನಯಶೀಲನಲ್ಲದ ಮಗನಿಂದ ಏನೂ ಪ್ರಯೋಜನವಿಲ್ಲ. ಸತ್ಕುಲದಲ್ಲಿ ಮೂರ್ಖ ಮಕ್ಕಳು ಹುಟ್ಟುವುದಕ್ಕಿಂತ, ಅಂತಹ ಮಕ್ಕಳ ಮರಣವೇ ಲೇಸು. ಎನ್ನುವಷ್ಟರಮಟ್ಟಿಗೆ ರಾಜನು ಚಿಂತಾಕ್ರಾಂತನಾಗಿದ್ದನು.[45]

वरं गर्भस्रावे वरमृतुषु नैवाभिगमनम्

वरं जातः प्रेतो वरमपि च कन्यैव जनिता ।

वरं वन्ध्या भार्या वरमपि च गर्भेषु वसति

र्न चविद्वान्रूपद्रविणगुणयुक्तोऽपि तनयः ॥[46]

ಅಂದರೆ ಮೂರ್ಖನಾಗಿ ಹುಟ್ಟುವುದಕ್ಕಿಂತ ಗರ್ಭಪಾತವೋ, ಋತುಕಾಲದಲ್ಲಿ ಹೆಂಡತಿಯೊಡನೆ ಕೂಡದೆ ಇರುವುದೋ, ಹುಟ್ಟಿ ಸತ್ತು ಹೋಗುವುದೋ, ಹೆಣ್ಣಾಗಿ ಹುಟ್ಟುವುದೋ, ಹೆಂಡತಿಗೆ ಮಕ್ಕಳಾಗದಿರುವುದೋ ಅಥವಾ ಮಗುವು ಗರ್ಭದಿಂದ ಹೊರಗೆ ಬರದೇ ಇರುವುದೋ – ಇದು ಯಾವುದಾದರೂ ಒಳಿತು. ಆದರೆ ರೂಪ, ದ್ರವ್ಯ, ಗುಣ ಸಂಪನ್ನನಾಗಿದ್ದರೂ ಮೂರ್ಖ ಪುತ್ರನಾಗಿದ್ದರೆ, ಅದು ಸರಿಯಲ್ಲ.

---

**45. Chandra Rajan,** VISNU SARMA (Eng.Trns) Introduction- pp-xxxii,1993. Penguin Random House India Pvt.Ltd. 7th Floor, Infinity Tower C, DLF Cyber City, Gurgoan,-122002, Haryana, India

46. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಥಾಮುಖಮ್ ಶ್ಲೋ –5, ಪು –4,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಈ ಮಕ್ಕಳ ಬುದ್ಧಿ ವಿಕಸನಗೊಳಸುವ ಕುರಿತು ಏನಾದರೂ ಉಪಾಯವಿದೆಯೇ? ಎಂದು ಅವನ ಆಶ್ರಯದಲ್ಲಿದ್ದ ಪಂಡಿತರಲ್ಲಿ ವಿಚಾರಿಸಲಾಗಿ, ಅವರಲ್ಲಿ ಸುಮತಿ ಎಂಬ ಸಚಿವನು ಹೀಗೆ ಸಲಹೆ ನೀಡಿದರು." ಈ ಜೀವನ ಶಾಶ್ವತವಲ್ಲ ಮತ್ತು ಶಾಸ್ತ್ರಗಳನ್ನೆಲ್ಲಾ ದೀರ್ಘಕಾಲದಿಂದ ಅಭ್ಯಾಸ ಮಾಡಬೇಕು.ಹೀಗಿರುವಾಗ ಶಾಸ್ತ್ರವನ್ನು ಸಂಕ್ಷೇಪದಲ್ಲಿ ಇವರಿಗೆ ಬೋಧಿಸುವುದಕ್ಕೆ ಆಗುತ್ತದೆಯೇ ಎಂದು ವಿಚಾರಮಾಡಬೇಕು. ವ್ಯಾಕರಣ ಮುಂತಾದ ಶಾಸ್ತ್ರಗಳಿಗೆ ಕೊನೆಯೆಂಬುದಿಲ್ಲ. ಅಲ್ಲದೆ ಇರುವ ಕಡಿಮೆ ಆಯಸ್ಸಿನಲ್ಲಿ ವಿಘ್ನಗಳು ಹಲವಾರು. ಹಾಗಾಗಿ ಹಂಸಕ್ಷೀರ ನ್ಯಾಯದಂತೆ ಶಾಸ್ತ್ರಗಳಲ್ಲಿ ಅಷ್ಟೇನೂ ಮುಖ್ಯವಲ್ಲದ ವಿವರವಾದದ್ದನ್ನು ಬಿಟ್ಟು ಕೇವಲ ಸಾರಮಾತ್ರವನ್ನು ತಿಳಿದುಕೊಳ್ಳಬೇಕಾಗುತ್ತದೆ. ಬಹಳ ಗಂಭೀರ ಚಿಂತನೆ ಮಾಡಿ ನೋಡಿದ್ದರಲ್ಲಿ, ಈ ಪ್ರದೇಶದಲ್ಲಿ ಸಕಲಶಾಸ್ತ್ರ ಪಾರಂಗತರಾದ, ವಿದ್ಯಾರ್ಥಿ ಸಮುದಾಯದಲ್ಲಿ ಹೆಸರುವಾಸಿಯಾದ ವಿಷ್ಣುಶರ್ಮರೆಂಬ ಬ್ರಾಹ್ಮಣರಿದ್ದಾರೆ. ಅವರು ಖಂಡಿತವಾಗಿಯೂ ಇವರನ್ನು ಬುದ್ಧಿವಂತರನ್ನಾಗಿ ಮಾಡುವರು." ರಾಜನು ವಿಷ್ಣುಶರ್ಮರನ್ನು ಆಸ್ಥಾನಕ್ಕೆ ಆಹ್ವಾನಿಸಿ, ತನ್ನ ವಿಚಾರವನ್ನು ನಿವೇದಿಸಿಕೊಂಡನು. ಪರಿಸ್ಥಿತಿಯನ್ನು ಗಮನಿಸಿದ ವಿಷ್ಣುಶರ್ಮರು ರಾಜನ ಸಹಾಯಕ್ಕೆ ಸಿದ್ಧರಾದರು. ಸಿಂಹನಾದದಿಂದ ಈ ರೀತಿ ಪ್ರತಿಜ್ಞೆ ಮಾಡಿದರು.

यद्यहं षण्मासाभ्यन्तरे तव पुत्रान्नयशास्त्रं प्रत्यनन्यसदृशान्न

करिष्यामि,ततो नार्हति देवो देवमार्ग संदर्शयितुम् ।[47]

ಕೇವಲ ಆರು ಮಾಸಗಳಲ್ಲಿ ಆ ಕಾರ್ಯ ನಿರ್ವಹಿಸುವುದಾಗಿ ವಚನವಿತ್ತರು.[48] ವಿಷ್ಣುಶರ್ಮರು ತಮ್ಮ ಆಶ್ರಮದಲ್ಲಿ ರಾಜಪುತ್ರರಿಗೆ ಶುಭ ಮಹೂರ್ತದಲ್ಲಿ ವಿದ್ಯೆಕಲಿಸತೊಡಗಿದ ಸಂದರ್ಭದಲ್ಲಿ ರಾಜಪುತ್ರರ ಗಮನ ಎಲ್ಲೋ ಇದ್ದಿತ್ತು. ರಾಜಕುಮಾರರು ಕಲಿಯಲು ಸಿದ್ಧರಾಗೇ ಇರಲಿಲ್ಲ. ಬಹಳ ಉದ್ಧಟರಾಗಿದ್ದು ಸ್ವೇಚ್ಛಾಪ್ರವೃತ್ತಿಯಿಂದ ಕೂಡಿದ್ದರು. ಅವರನ್ನು ಹೇಗೆ ಬದಲಾಯಿಸುವುದೆಂಬುದೇ, ಅಷ್ಟೆಲ್ಲಾ ಉಪಾಯಗಳನ್ನು ಬಲ್ಲ ಪ್ರತಿಭಾನ್ವಿತ ವಿಷ್ಣುಶರ್ಮರಿಗೇ ಒಂದು ಕಗ್ಗಂಟಾಯಿತು. ಪ್ರಾರಂಭದಲ್ಲಿ ಕಥಾ ಮಾಧ್ಯಮ ಆಯ್ಕೆ ಮಾಡಿಕೊಂಡು ಕಲಿಸಲು ಪ್ರಯತ್ನಿಸಿದರೆ "ಗೋರ್ಕಲ್ಲ ಮೇಲೆ ಮಳೆ ಸುರಿದಂತೆ" ವ್ಯರ್ಥವಾಗುತ್ತಿತ್ತು. ಮಾರನೆಯ ದಿನ ಹೇಗಾದರೂ ಮಾಡಿ ಅವರಲ್ಲಿ ಕುತೂಹಲ ಮೂಡಿಸಲು ಯೋಚಿಸುತ್ತಿರುವಾಗ, ರಾಜಕುಮಾರರು ಬಿಲ್ಲು ಬಾಣಗಳನ್ನು ಹಿಡಿದು ಬೇಟೆಗೆ ಹೊರಟಿದ್ದರು. ಈ ಸಮಯವನ್ನೇ ವಿಷ್ಣುಶರ್ಮರು ಉಪಯೋಗಿಸಿಕೊಂಡು ರಾಜಕುಮಾರರನ್ನು ಪ್ರೀತಿಯಿಂದ ಮಾತನಾಡಿಸಿ," ಈ ವನ ನಿಮಗೆ ಪರಿಚಯವಿಲ್ಲದ್ದು, ನಾನು ನಿಮಗೆ ದಾರಿ ತೋರಿಸುತ್ತೇನೆ"

47. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಥಾಮುಖಮ್, ಪು -9, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.
48. **ಭರತ.ಬಿ.ರಾವ್,** ಪಂಡಿತ ವಿಷ್ಣುಶರ್ಮ ವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಕಥಾಮುಖ - ಪು -9-10.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್.ರಸ್ತೆ, ಬೆಂಗಳೂರು-560004.

ಎಂದರು. ರಾಜಕುಮಾರರಿಗೆ ಬಹಳ ಆನಂದವಾಯಿತು. ಅರಣ್ಯದ ತರುಲತೆ, ಮೃಗಪಕ್ಷಿಗಳನ್ನು ತೋರಿಸುತ್ತಾ, **"ಇದು ಆಶ್ರಮ. ಇಲ್ಲಿ ಬೇಟೆಯಿಲ್ಲ." "ಅರಣ್ಯದೊಳಕ್ಕೆ ಹೋಗಬೇಕು. ಅಲ್ಲಿಯ ತನಕ ನಿಮಗೆ ಬೇಸರವಾಗದಂತೆ ಒಂದು ಕಥೆ ಹೇಳಲೇ?"** ಎಂದು ವಿಷ್ಣುಶರ್ಮರು ರಾಜಕುಮಾರರನ್ನು ಕೇಳಿದರು. ರಾಜಕುಮಾರರಿಗೆ ಬಹಳ ಸಂತೋಷವಾಯಿತು. **"ಆಯಿತು ಗುರುಗಳೇ ಹೇಳಿ"**ಎಂದು ಕುತೂಹಲದಿಂದ ಕಥೆಗಾಗಿ ಕಿವಿಯರಳಿಸಿದರು. ಹೀಗೆ ವಿಷ್ಣುಶರ್ಮರು ಒಳ್ಳೆಯ ಅವಧಾನ, ಅಭಿಪ್ರೇರಣೆ, ಆಸಕ್ತಿಯನ್ನುಂಟುಮಾಡಿ, ರಾಜಕುಮಾರರು ಅವರೇ ಇಷ್ಟಪಟ್ಟು ಕಥೆ ಕೇಳುವಂತೆ ಹುರಿದುಂಬಿಸಿದರು. ಇಲ್ಲಿ ಕಲಿಸುವಿಕೆಯಲ್ಲಿ ಅವರಲ್ಲಿದ್ದ ದೃಢಸಂಕಲ್ಪ ಹಾಗೂ ಶ್ರದ್ಧೆ ಹೇಗಿತ್ತೆಂದು ಯೋಚಿಸಬಹುದು.

ರಾಜಕುಮಾರರನ್ನು ವಿದ್ಯಾರ್ಥಿಗಳಾಗಿ ಸ್ವೀಕರಿಸಿದ ವಿಷ್ಣುಶರ್ಮರು ಅವರುಗಳ ಮನಸ್ಸನ್ನರಿತು ಅವರೊಡನೆ ಒಂದು ಸಹೃದಯಿ ಸಂಬಂಧವನ್ನು ಬೆಳೆಸಿಕೊಂಡು **"ಪ್ರೀತಿಯ ರಾಜಕುವರರೇ"** ಎಂದು ಸಂಬೋಧಿಸುತ್ತ, **"ಒಂದು ದಿನ ಏನಾಯಿತು ಗೊತ್ತೇ?", "ಮೊನ್ನೆ ನಾವು ರಾಜಧಾನಿಯಿಂದ ಬರುವಾಗ ವಿಶಾಲವಾದ ಹೊಲಗಳಲ್ಲಿ ಎತ್ತರವಾಗಿ ಬೆಳೆದ ಕಬ್ಬನ್ನು ನೋಡಿದ್ದೆವು ಅಲ್ಲವೇ?" "ಹಾಗಾದರೆ ಈಗ ಹೇಳಿದ ಕಥೆಯನ್ನು ನೀವು ಮೂವರೂ ಸೇರಿ ಹೇಳಿ ನೋಡೋಣ." "ಒಂದಲ್ಲ ನೂರಾರು ಕಥೆ ಹೇಳ್ತೇನೆ. ಆದರೆ ನಾನು ಕೇಳಿದಾಗ ನೀವು ಆ ಕಥೆಯನ್ನು ಹೇಳಬೇಕು."**[49] ಹೀಗೆಲ್ಲ ಸ್ಫೂರ್ತಿದಾಯಕ ಪ್ರಶ್ನೆಗಳನ್ನು ಕೇಳುತ್ತಾ, ಅವರಲ್ಲಿ ಕಥೆಯ ಕಡೆ ಗಮನಸೆಳೆದರು – ಅವಧಾನವನ್ನುಂಟುಮಾಡಿದರು.

ಮನುಸ್ಮೃತಿಯಲ್ಲಿ ಹೇಳಿರುವಂತೆ ರಾಜಕುಮಾರರು ಬಹಳ ಶ್ರದ್ಧಾಭಕ್ತಿಯಿಂದ ವಿದ್ಯೆಯನ್ನು ಪಡೆಯಲು ಸಿದ್ಧರಾದರು. ಗುರುಗಳು ಶಿಷ್ಯರನ್ನು ಅಷ್ಟರ ಮಟ್ಟಿಗೆ ಪ್ರೇರೇಪಿಸಿ ಪರಿವರ್ತನೆ ಮಾಡಿದ್ದರು.

यथाखनन् खनित्रेण नरो वार्यधिगच्छति ।

तथा गुरुगतां विद्यां शुश्रूषुरधिगच्छति ।।[50]

ಗುದ್ದಲಿಯಿಂದ ಕಷ್ಟಪಟ್ಟು ಅಗೆಯುತ್ತಾ ಮನುಷ್ಯನು ಹೇಗೆ ನೀರನ್ನು ಹೊಂದುತ್ತನೋ, ಅದರಂತೆ–ಯೇ ಸೇವೆ ಮಾಡುತ್ತಾ, ಮಾಡುತ್ತಾ ಗುರುವಿನಲ್ಲಿನ ವಿದ್ಯೆಯನ್ನು ಪಡೆಯುತ್ತಾನೆ.

ಸ್ಮರಣೆಯಲ್ಲಿಟ್ಟುಕೊಂಡು ಪುನಃ ಕೇಳಿದಾಗ ಹೇಳಬೇಕೆಂದು ಅಭಿಪ್ರೇರಣೆ ನೀಡುತ್ತಾ, ಸ್ಮೃತಿ–

---

49. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, (ಕನ್ನಡ) ಮಿತ್ರಭೇದ– ಪು–19–20.(2015) ವರ್ಣಿಲ, 39/2–11, ಕಲ್ಯಾಣಿ ಗಾರ್ಡನ್, BSK 1ಸ್ಟೇಜ್, ಬೆಂಗಳೂರು–560050.
50. ಮನುಸ್ಮೃತಿ, 2–218.

ವಿಸ್ಮೃತಿಯನ್ನು ಆಗಾಗ್ಗೆ ಪರಿಚಯಿಸಿ, ಆ ಬಗ್ಗೆ ಜಾಗೃತಿ ಮೂಡಿಸಿದರು. ಅದಕ್ಕೆ ಸ್ಪಂದಿಸಿದ ಶಿಷ್ಯರು **"ಗುರುಗಳೇ, ನರಿಯೇ ಜಾಣ ಅಲ್ವಾ, ಹೀಗಿದ್ದೇ ಇನ್ನೊಂದು ಕಥೆ ಹೇಳಿ"**ಎಂದು ಕುತೂಹಲದಿಂದ ಕೇಳುವಂತೆ ಪ್ರೇರೇಪಿಸಿದ್ದಾರೆ. ಇದು ಪಂಚತಂತ್ರದಲ್ಲಿ ಕಂಡು ಬರುವ ಶೈಕ್ಷಣಿಕ ಮನೋವಿಜ್ಞಾನ. ವಿಷ್ಣುಶರ್ಮರ ಬೋಧನಾ ಪ್ರತಿಭೆ ಹಾಗೂ ಕಲಿಸುವ ಶ್ರದ್ಧೆಯನ್ನು ಸೂಚಿಸುತ್ತದೆ. ಕಥೆ ಹೇಳುವುದರ ಮಧ್ಯೆ ಮಧ್ಯೆ ಕೆಲವು ಅಭಿಪ್ರಾಯ ಪ್ರಚೋದಕ ಪ್ರಶ್ನೆಗಳನ್ನು ಕೇಳುತ್ತಾ ರಾಜಕುಮಾರರ ಕಲಿಕೆ ಹಾಗೂ ಸ್ಮರಣಶಕ್ತಿಯನ್ನು ಗಮನಿಸಿ ಪ್ರೋತ್ಸಾಹ ನೀಡುತ್ತಿದ್ದುದು ವಿಷ್ಣುಶರ್ಮರ ಶಿಕ್ಷಕ ವೃತ್ತಿಕೌಶಲ್ಯವನ್ನು ತಿಳಿಸುತ್ತದೆ.

ರಾಜಕುಮಾರರು ಪುನಃ ಹೇಳಿದ, ಅದರಲ್ಲೂ ಕ್ರಮತಪ್ಪಿದರೂ, ಅದನ್ನು ಸರಿಪಡಿಸಿಕೊಂಡು ಕಥೆಯನ್ನು ಹೇಳಿದಾಗ, ವಿಷ್ಣುಶರ್ಮರಿಗೆ ಸಂತೋಷ ಹಾಗೂ ಸಮಾಧಾನವುಂಟಾಯಿತು. ಕಥೆಯ ಮೂಲಕವೇ ಈ ಮಕ್ಕಳನ್ನು ತಿದ್ದಬೇಕೆಂದು ನಿಶ್ಚಯಿಸಿದರು. ಈ ಕಾರಣದಿಂದಲೇ, ರಾಜಕುಮಾರರಿಗೆ ಅಗತ್ಯವಾಗಿ ಬೇಕಾಗಿರುವ ರಾಜನೀತಿಶಾಸ್ತ್ರ, ಅರ್ಥಶಾಸ್ತ್ರ, ನೀತಿಶಾಸ್ತ್ರ, ಬದುಕಿನ ಸಾರ್ಥಕತೆಗೆ ಬೇಕಾದ ತಿಳುವಳಿಕೆ ಇತ್ಯಾದಿಗಳನ್ನು ಪಂಚಸೂತ್ರಗಳಲ್ಲಿ ವ್ಯವಸ್ಥಿತವಾಗಿ ಅಳವಡಿಸಿ, ಆಯ್ದ ಸುಭಾಷಿತಗಳನ್ನು, ನಾಣ್ಣುಡಿಗಳನ್ನು, ನೀತಿ ಶ್ಲೋಕಗಳನ್ನು ಸೇರಿಸಿ, ಆಕರ್ಷಕ ಕಥೆಗಳನ್ನು ಸಂಯೋಜನೆ ಮಾಡಿ ಉತ್ತಮ ಪಠ್ಯಕ್ರಮವನ್ನು ವಿಷ್ಣುಶರ್ಮರು ರಚಿಸಿದ್ದಾರೆ.[51] ವಿವೇಕಚೂಡಾಮಣಿಯಲ್ಲಿ ಒಂದು ಮಾತಿದೆ:-

शब्दजालं महारण्यं चित्तभ्रमणकारणम् ।

अतः प्रयत्नाज्ञा तव्यं तत्वज्ञात्तत्त्वमात्मनः ॥[52]

ಅಂದರೆ ಶಬ್ದಜಾಲವೆಂಬುದು ದೊಡ್ಡ ಅರಣ್ಯ. ಬುದ್ಧಿಯು ದಾರಿತಪ್ಪಿ ಭ್ರಮಿಸುವುದಕ್ಕೆ ಇದು ಕಾರಣ. ಆದ್ದರಿಂದ ತತ್ವವನ್ನರಿತ ಗುರುವಿನಿಂದ ಆತ್ಮತತ್ವವನ್ನು ಅರಸಿ ತಿಳಿದುಕೊಳ್ಳಬೇಕು. ಹೀಗೆಯೇ ಸಕಲಶಾಸ್ತ್ರಪಾರಂಗತರಾದ ವಿಷ್ಣುಶರ್ಮರನ್ನು ಅಮರಶಕ್ತಿ ರಾಜನು ತನ್ನ ಕುಮಾರರಿಗೆ ಸೂಕ್ತ ಶಿಕ್ಷಣವನ್ನು ನೀಡಿ ಅವರ ಜನ್ಮ ಸಾರ್ಥಕಪಡಿಸಬೇಕೆಂಬುದಾಗಿ ಕೋರಿಕೊಂಡನು. ಅವರಿಗೆ ಸೂಕ್ತವಾದ ಪಠ್ಯಕ್ರಮವನ್ನು ಮೇಧಾವಿ ವಿಷ್ಣುಶರ್ಮರು ಸಿದ್ಧಮಾಡಿಬಿಟ್ಟರು.

ಪಂಚಸೂತ್ರಗಳಲ್ಲಿ ಸಂವಿಧಾನಗೊಳಿಸಿರುವ ಪಂಚತಂತ್ರ ನೀತಿಕಥೆಗಳು ಅತ್ಯಂತ ವ್ಯವಸ್ಥಿತವಾಗಿ ಸಂಕಲನಗೊಂಡಿದ್ದು, ಅದರಲ್ಲೂ ಒಂದೊಂದು ಕಥೆಯೂ ಮುಂದಿನ ಕಥೆಗೆ ಪ್ರೇರಕವಾಗಿರುತ್ತದೆ. ಒಂದು

---

**51. Chandramani.G.L,** Panchatantra (English), Preface-PP-5,6. Rupa Publications India Pvt. Ltd.1991, 7/16, Ansari Road, Daryaganj, New Delhi-110002.

52. **ವಿವೇಕಚೂಡಾಮಣಿ** -ಶ್ಲೋ-೬೦.

ಕಥೆಯ ಅಂತ್ಯ ಮತ್ತೊಂದು ಕಥೆಗೆ ಸರಪಳಿಕೊಂಡಿಯಂತೆ ಸಂಪರ್ಕ ಸಂಯೋಜಿಸುವಂತೆ ವಿಷ್ಣುಶರ್ಮರು ಸಿದ್ಧಪಡಿಸಿ ರಾಜಕುಮಾರರನ್ನು ಆಸಕ್ತಿಯುತವಾಗಿ ಮುನ್ನಡೆಸಿ ವಿದ್ಯೆ ಕಲಿಯುವಂತೆ ಪ್ರೇರೇಪಿಸಿರುವ ಇವರ ಬೋಧನಾ ಪ್ರತಿಭೆಯು ಯಾವ ಶೈಕ್ಷಣಿಕ ಮನೋವಿಜ್ಞಾನದ ನೀತಿ-ನಿಯಮಗಳ ಮುಂದೆ ಕಡಿಮೆಯಾಗಿದೆ !!! ಇಷ್ಟಲ್ಲದೆ ಕಥೆ ಹೇಳುವ ಕಲೆ, ಶೃತಿ, ಧ್ವನಿ, ಇವೆಲ್ಲವೂ ಕೇಳುಗನು ತಾನೇ ಆ ಅನುಭವದಲ್ಲಿ ತೇಲಾಡುತ್ತಿದ್ದಾನೆಯೋ ಎಂಬಂತೆ ಮನಸ್ಸನ್ನು ಸೆರೆಹಿಡಿದು ಬಿಡುತ್ತದೆ.ಈ ವಿಷಯದಲ್ಲಿ ವಿಷ್ಣುಶರ್ಮರಿಗೆ ಅಸಾಧಾರಣ ಕೌಶಲ್ಯವಿದ್ದಿತೆಂದು ಹೇಳಬಹುದು. ಕಥೆಹೇಳುವ ಸಂದರ್ಭದಲ್ಲಿ ಆಗಾಗ್ಗೆ ಜಾಗೃತಿಯಿಂದ ರಾಜಕುಮಾರರ ಆಸಕ್ತಿ ಹಾಗೂ ಅವರ ಕಲಿಕೆಯನ್ನು ಪರೀಕ್ಷಿಸಲು ಮಧ್ಯೆ ಮಧ್ಯೆ ಗಮನ ಸೆಳೆಯುವ ಪ್ರಶ್ನೆಗಳನ್ನು ಕೇಳುತ್ತಾ, ಕಲಿತದ್ದನ್ನು ದೃಢಪಡಿಸುತ್ತಾ, ಮುಂದಿನ ಕಲಿವಿಗೆ ಪ್ರಚೋದಕ ಸನ್ನಿವೇಶಗಳನ್ನು ಒದಗಿಸಿ ಪ್ರೋತ್ಸಾಹಿಸುತ್ತಾ ಇದ್ದುದೇ ವಿಷ್ಣುಶರ್ಮರ ಬೋಧನಾ ಪ್ರತಿಭೆಯೆನ್ನಬಹುದು.

ಪಂಚತಂತ್ರದ ಐದು ತಂತ್ರಗಳು, ಮನುಷ್ಯರಿಗೆ, ವಿಶೇಷವಾಗಿ ರಾಜರಾದವರಿಗೆ ಕಾರ್ಯಸಾಧನೆಯಲ್ಲಿ ಉಪಯೋಗಕ್ಕೆ ಬರುತ್ತದೆ ಎಂಬುದನ್ನು, ವಿವಿಧ ಕಥೆಗಳ ಮೂಲಕವೇ ಅರಿವು ಮೂಡಿಸುವುದು ಸೂಕ್ತ ಎಂದು ವಿಷ್ಣುಶರ್ಮರು ನಿರ್ಧರಿಸಿದರು.

ಮೊದಲನೆಯ ತಂತ್ರ ಮಿತ್ರಭೇದ – ಭೇದ ಎಂದರೆ ಒಡೆಯುವುದು; ಮಿತ್ರರ ನಡುವೆ ಬೆಳದಿರುವ ಸ್ನೇಹವನ್ನು ಅಪನಂಬಿಕೆಯಿಂದ ಬದ್ಧ ದ್ವೇಷಕ್ಕೆ ಪರಿವರ್ತಿಸುವುದು; ವಿಶ್ವಾಸ ಕೆಡುವಂತೆ ಚಾಡಿ ಬೆಸೆಯುವುದು. ಇದು ರಾಜಕೀಯದಲ್ಲಂತೂ ಬಹಳ ಮುಖ್ಯ. ಚತುರೋಪಾಯಗಳಲ್ಲೊಂದಾದ ಭೇದ ಪರಸ್ಪರರು ಬೆರೆತಿರುವ ಸಂದರ್ಭದಲ್ಲಿ ಅವರಲ್ಲಿ ಒಡಕುಮೂಡಿಸುವುದು.ಇದರಿಂದ ಇಬ್ಬರೂ ದುರ್ಬಲರಾಗುತ್ತಾರೆ. ಕಾರಣ ಶಕ್ತಿಯು ಇಬ್ಭಾಗವಾಗುತ್ತದೆ. ಅದನ್ನು ಸಾಧಿಸುವ ತಂತ್ರ-ಪ್ರತಿತಂತ್ರ, ಉಪಾಯ- ಅಪಾಯ, ಎಲ್ಲಿ? ಹೇಗೆ ನಡೆಯಬೇಕು? ವಂಚನೆ – ಕಪಟತನ, ಪ್ರಭುಶಕ್ತಿ, ಮುಗ್ಧ ಸ್ವಭಾವದ ಪರಿಣಾಮ ಇತ್ಯಾದಿಗಳ ಸ್ವರೂಪದ ಅರಿವು ಇದ್ದಾಗ ಮಾತ್ರ ಆ ಸಂದರ್ಭದಲ್ಲೊದಗುವ ಸಮಸ್ಯೆಯಿಂದ ಪಾರಾಗುವ ದಾರಿ ಸುಲಭವಾಗುತ್ತದೆ, ಎಂಬುದನ್ನು ತಿಳಿಸುವ ಹಲವು ಕಥೆಗಳು ಈ ಸೂತ್ರದಲ್ಲಿ ಹೆಣೆದುಕೊಂಡಿವೆ.[53] ಪಂಚತಂತ್ರದ ಮೊದಲನೆಯ ತಂತ್ರವಾದ ಮಿತ್ರಭೇದದ ಮೊದಲ ನುಡಿ ಹೀಗಿದೆ :-

वर्धमानो महान्स्नेहः सिंहगोवृषयोर्वने ।

पिशुनेनातिलुब्धेन जम्बुकेन विनाशितः ।।[54]

---

**53. ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಮಿತ್ರಭೇದ – ಪು-18.(2015) ವರ್ಣಿಲ, 39/2-11, ಕಲ್ಯಾಣಿ ಗಾರ್ಡನ್, BSK 1ನೇ ಹಂತ, ಬೆಂಗಳೂರು – 560050.

**54. ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ- ಶ್ಲೋ – 1, ಪು – 11,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಅಂದರೆ, "ಒಂದು ಕಾಡಿನಲ್ಲಿ, ಒಮ್ಮೆ ಸಿಂಹ ಹಾಗೂ ಎತ್ತಿಗೂ ಗಾಢವಾದ ಸ್ನೇಹವುಂಟಾಗಿರಲು, ದುಷ್ಟನಾದ ಹಾಗೂ ಅತಿಲೋಭಿಯಾದ ನರಿಯಿಂದ ಆ ಸ್ನೇಹವು ನಾಶಮಾಡಲ್ಪಟ್ಟಿತು.

ಮಿತ್ರಭೇದದಲ್ಲಿ ಕಾಡಿನ ರಾಜನಾದ ಸಿಂಹ ಹಾಗೂ ನಾಡಿನಿಂದ ಬಂದ ಎತ್ತಿನ ಮಧ್ಯೆ ಉಂಟಾದ ಅಸಹಜ ಸ್ನೇಹದ ಮೋಹದಲ್ಲಿ ಸಿಂಹವು ಕರ್ತವ್ಯ ಭ್ರಷ್ಠನಾಗಿ, ಅದರ ಪ್ರಜೆಗಳು ತೊಂದರೆಗೆ ಒಳಗಾದಾಗ ಮಂತ್ರಿಯಾಗಿದ್ದ ನರಿಯು ಈ ಮೈತ್ರಿಯನ್ನು ಹೇಗೆ ಒಡೆಯಿತೆಂಬುದನ್ನು ಈ ತಂತ್ರದಲ್ಲಿ ಇಪ್ಪತ್ತೆರಡು ಉಪಕಥೆಗಳ ಮೂಲಕ ತೋರಿಸಲಾಗಿದೆ.[55] ಕಾರ್ಯ ಸಾಧನೆಗಾಗಿ ಗೆಳೆಯರಲ್ಲಿ ಭೇದವುಂಟುಮಾಡುವ ಬಗ್ಗೆ ವಿವಿಧ ಉಪಕಥೆಗಳ ಮೂಲಕ ಒಳ್ಳೆಯ ಸನ್ನಿವೇಶಗಳನ್ನು ರಚಿಸಿ, ಧನಾರ್ಜನೆಯ ಉಪಾಯಗಳು; ಹಣವಿರುವವರ ಬಳಿ ಮಿತ್ರರು ಮತ್ತು ಬಾಂಧವರು ಮುತ್ತಿಬಿಡುತ್ತಾರೆ; ಈ ಲೋಕದಲ್ಲಿ ಸಂಬಂಧವಿಲ್ಲದವರೂ ಕೂಡ ಹಣವಂತರ ಸಂಬಂಧಿಗಳೆನಿಸಿಬಿಡುತ್ತಾರೆ; ಬಡವರಲ್ಲಿ ಅವರ ಸ್ವಜನರೂ ದುರ್ಜನರಂತೆ ನಡೆದುಕೊಳ್ಳುತ್ತಾರೆ[56] ಇತ್ಯಾದಿ ಅನೇಕ ತಿಳುವಳಿಕೆಗಳನ್ನು ನೀಡುತ್ತಾ, ರಾಜಕುಮಾರರೇ ತಮ್ಮ ಪರಿಸ್ಥಿತಿಯಬಗ್ಗೆ ತಾವೇ ಯೋಚಿಸಿ, ಸಹವಾಸದೋಷದಿಂದ ಉದ್ಧಟತನ, ಸ್ವೇಚ್ಛಾ ಮನೋಧೋರಣೆ ಬೆಳೆಸಿಕೊಂಡು ವ್ಯಕ್ತಿತ್ವವನ್ನು ಹಾಳುಮಾಡಿಕೊಂಡಿರುವ ಕುರಿತು ಅರಿವನ್ನು ಮೂಡಿಸಲಾಗಿದೆ. ಅಪಾತ್ರರೊಡನೆ ಸ್ನೇಹ ಮಾಡುವುದರ ಪರಿಣಾಮ, ದುಷ್ಟರ ಸಹವಾಸ, ಸ್ವಾರ್ಥಸಾಧಕರ ಮಧ್ಯೆ,ಮೂರ್ಖರ ಸಹವಾಸ ಇವೆಲ್ಲ ತಕ್ಕುದಲ್ಲ ಹಾಗೂ ಅದರಿಂದಾಗಿ ಅಪರೂಪವಾಗಿ ದೊರಕಿರುವ ಬದುಕಿನ ಸದುಪಯೋಗ ಮತ್ತು ಸಾರ್ಥಕತೆ ಅಸಾಧ್ಯ ಎಂಬ ವಿಚಾರವನ್ನು ತಿಳಿಸಿ ವಿಷ್ಣುಶರ್ಮರು ರಾಜಕುಮಾರರನ್ನು ಜಾಗೃತಗೊಳಿಸಿದ್ದಾರೆ. ಆಸಕ್ತಿಯಿಂದ ಕಥೆಗಳನ್ನು ಕೇಳುವಂತೆ ಪ್ರೇರೇಪಿಸಿದ್ದಾರೆ.ಇಂತಿರಬೇಕು ಸಜ್ಜನರ ನಡವಳಿಕೆ ಎಂಬ ಸುಭಾಷಿತದಲ್ಲಿ ಸೂಚಿಸಿರುವಂತೆ:

अभिवादनशीलस्य नित्यं वृद्धोपसेविनः।

चत्वारि तस्य वर्धन्ते आयुर्विद्या यशोबलम् ॥[57]

ಅಂದರೆ," ಗೌರವಾರ್ಹರಿಗೆ ವಂದಿಸುವ ಪ್ರಭಾವವುಳ್ಳ, ನಿತ್ಯವೂ ಗುರುಹಿರಿಯರ ಸೇವೆಮಾಡುತ್ತಾ, ಅವರಿಗೆ ತಗ್ಗಿ, ಬಗ್ಗಿ ನಡೆಯಬಲ್ಲವನಿಗೆ ಆಯುಷ್ಯ, ವಿದ್ಯೆ, ಯಶಸ್ಸು ಮತ್ತು ಬಲ ಈ ನಾಲ್ಕೂ ಹೆಚ್ಚಾಗುತ್ತವೆ."

---

**೫೫. ಭರತ.ಬಿ.ರಾವ್,** ಪಂಡಿತ ವಿಷ್ಣುಶರ್ಮ ವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಕಥಾಮುಖ, ಪು– 8 (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್ ರಸ್ತೆ, ಬೆಂಗಳೂರು–560004.

**೫೬. ಭರತ.ಬಿ.ರಾವ್,** ಪಂಡಿತ ವಿಷ್ಣುಶರ್ಮ ವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಕಥಾಮುಖ–ಪು – 13–14.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.,44/1, ಕೆ.ಆರ್ ರಸ್ತೆ, ಬೆಂಗಳೂರು–560004.

**57. ಭಟ್.ವಿಎನ್,** ಜ್ಞಾನದೀಪ, ಅ–3, ಪು–5.(ಸುಭಾಷಿತರತ್ನ ಭಾಂಡಾಗಾರಂ) ವಿಶ್ವನಾಥ ಪ್ರಕಾಶನ, (1993) ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ–577201.

ಎಂಬುದನ್ನು ತಿಳಿಸಿದ್ದಾರೆ.

ರಾಜಕುಮಾರರ ಮೂಲಸ್ವಭಾವಗಳನ್ನು ಉತ್ತಮ ಅನುಭವಗಳ ಮೂಲಕ ಮಾರ್ಪಡಿಸುವ ಒಂದು ಪ್ರಾಮಾಣಿಕ ಪ್ರಯತ್ನವನ್ನು ವಿಷ್ಣುಶರ್ಮರು ಮಾಡಿರುತ್ತಾರೆ. ಅನುಭವಗಳನ್ನು ನೀಡುವ ಉದ್ದೇಶದಿಂದ, ರಾಜಕುಮಾರರು ಇಷ್ಟಪಟ್ಟು ಕಲಿಯುವಂತಹ ಶೈಕ್ಷಣಿಕ ಸನ್ನಿವೇಶಗಳನ್ನು ಸುಂದರ ನೀತಿಕಥೆಗಳ ಮೂಲಕ, ಪರಿಣಾಮಕಾರಿಯಾದ ಬೋಧನೆ ಹಾಗೂ ಉತ್ತಮ ಉಪದೇಶವನ್ನು ನೀಡುತ್ತಾ, ಅವರನ್ನು ಸುಶಿಕ್ಷಿತರನ್ನಾಗಿ, ರಾಜನೀತಿನಿಪುಣರನ್ನಾಗಿ, ಬದುಕಿನ ವ್ಯವಹಾರ ಚತುರರನ್ನಾಗಿ ಮಾಡಿದ್ದಾರೆ. ಪಾಠದ ಜೊತೆಗೆ ಪ್ರಾಸಂಗಿಕವಾಗಿ ಅವರ ಗುಣಶೀಲಗಳನ್ನು ಸಂಸ್ಕರಿಸುವಂತಹ ನೈತಿಕ ವಿಚಾರಗಳನ್ನು ಸರಳ ಕಥೆಗಳು, ನೀತಿಶ್ಲೋಕಗಳು, ಸುಭಾಷಿತಗಳ ಮೂಲಕ ತಿಳಿಸಿದ್ದಾರೆ. ಒಂದೊಂದು ಕಥೆಯನ್ನು ಕೇಳಿದಾಗಲೂ, ಒಂದೊಂದು ಹೊಸ ವಿಚಾರ,ಅದರಲ್ಲೊಂದು ವ್ಯಕ್ತಿತ್ವ ನಿರ್ಮಾಣ ಅಂಶ ಅಡಕವಾಗಿರುವಂತೆ ರೂಪಿಸಿರುವುದು ಪಂಚತಂತ್ರದ ವೈಶಿಷ್ಟ್ಯತೆ. ಅನುಚಿತ ರೀತಿಯಲ್ಲಿ ತೊಡಗುವ ವ್ಯಕ್ತಿಯನ್ನು ಅತೃಪ್ತಿ ಅಸಂತೋಷಗಳಾಗುವಂತೆ ಸನ್ನಿವೇಶಗಳನ್ನು ರಚಿಸಿ ಅವನನ್ನು ಆ ಕಾರ್ಯದಿಂದ ಹೊರಗೆಳೆಯುವಂತೆ ಮಾಡಿ, ಜೊತೆಗೆ ಉಚಿತ ರೀತಿಯ ಕಲಿವಿನೆಡೆಗೆ ಹೆಜ್ಜೆ ಇಡುವಂತೆ ಪಂಚತಂತ್ರದಲ್ಲಿ ವಿಷ್ಣುಶರ್ಮರು ಯೋಜಿಸಿದ್ದಾರೆ. ಪ್ರಾಪಂಚಿಕ ಸುಖದ ಲಕ್ಷಣಗಳನ್ನು ಹೇಳಿಕೊಟ್ಟಿದ್ದಾರೆ. ಮಹಾಭಾರತದಲ್ಲಿ ಹೀಗೆ ಹೇಳಲ್ಪಟ್ಟಿದೆ.

आरोग्यमानृण्यमविप्रवासः सद्भिर्मनुष्यैः सह संप्रयोगः ।

स्वप्रत्यया वृत्तिरभीतवासः षड् जीवलोकस्य सुखानि राजन् ।।[58]

ಅಂದರೆ ಆರೋಗ್ಯಭಾಗ್ಯ, ಸಾಲವಿಲ್ಲದಿರುವಿಕೆ, ಆತ್ಮೀಯರಿಂದ ದೂರವಿಲ್ಲದಿರುವುದು, ನಂಬಿಕೆಯುಳ್ಳ ಉದ್ಯೋಗ, ಭಯವಿಲ್ಲದ ಜೀವನ, ಸಜ್ಜನರ ಸಹವಾಸ ಈ ಆರು ಪ್ರಾಪಂಚಿಕ ಸುಖಗಳೆನಿಸುವುವು. ಇದೆಲ್ಲ ಪ್ರಾಪಂಚಿಕ ಬದುಕಿನ ವ್ಯವಹಾರ ಚತುರತೆಯ ಲಕ್ಷಣಗಳು.

ವಿಷ್ಣುಶರ್ಮರು ಕಥೆ ಹೇಳುತ್ತಾ, ಅನೇಕ ಉಪಯುಕ್ತ ವಿಚಾರಗಳನ್ನು ಒಳ್ಳೆಯ ತಾಳಮೇಳದಿಂದ ಅಂದರೆ ರಾಜಕುಮಾರರ ಮನಸ್ಸು, ಅವರ ಮೂಲ ವರ್ತನೆ, ಕಲಿಕೆಯಲ್ಲಿನ ಆಸಕ್ತಿ ಮುಃತಾದವುಗಳನ್ನು ಬಹಳ ಸೂಕ್ಷ್ಮವಾಗಿ ಗಮನಿಸುತ್ತಾ ಅವರಿಗೊಪ್ಪುವಂತೆ ಕೆಲವು ನೀತಿ ಬೋಧೆಯನ್ನು ಮಾಡುತ್ತಾ, ಅವರ

---

**೫೮. ಸುಭಾಷಿತಮಂಜರೀ,** ಸಂಸಾರ–ಶ್ಲೋ–11, ಪು–16, ಮಹಾಭಾರತ, ಉ.ಪ–33–89. ಕ.ಸಾ.ಪ.(2001) ಚಾಮರಾಜಪೇಟೆ, ಬೆಂಗಳೂರು.

ಮೇಲಿನ ಹತೋಟಿಯನ್ನು ಸಾಧಿಸುತ್ತಾರೆ. ನಂತರ ಕಥಾನಿರೂಪಣಾ ವಿಧಾನವೇ ರಾಜಕುಮಾರರನ್ನು ಬುದ್ಧಿವಂತರನ್ನಾಗಿ ಮಾಡಲು ಸೂಕ್ತ ಕ್ರಮ ಎಂದು ತೀರ್ಮಾನಿಸಿಕೊಂಡರು.

ಉಜ್ಜಯಿನಿ ಎಂಬ ಒಂದು ಶ್ರೀಮಂತ ನಗರದಲ್ಲಿ ವರ್ಧಮಾನಕನೆಂಬ ಸಜ್ಜನ ವ್ಯಾಪಾರಿ ಇದ್ದನು. ಒಂದು ಬಾರಿ ಬಂಡಿ ತುಂಬಾ ಸರಕನ್ನು ಹೇರಿಕೊಂಡು ಮಧುರಾ ನಗರದ ಕಡೆಗೆ ವ್ಯಾಪಾರಕ್ಕೆ ಹೊರಟಿದ್ದನು. ಅವನ ಬಂಡಿಯನ್ನು ವೇಗವಾಗಿ ಕೊಂಡೊಯ್ಯುವ ಸಾಮರ್ಥ್ಯವುಳ್ಳ, ದಷ್ಟಪುಷ್ಟವಾದ ಎತ್ತುಗಳೆರಡು- ಸಂಜೀವಕ ಮತ್ತು ನಂದಕ. ಯಮುನಾ ತೀರದಲ್ಲಿ ವ್ಯಾಪಾರಿಯ ಸಾರ್ಥವು ಚಲಿಸುತ್ತಿದ್ದಾಗ, ಕಾಲುಗಳು ಕೆಸರಿನಲ್ಲಿ ಸಿಕ್ಕಿ ಸಂಜೀವಕನು ಬಿದ್ದುಬಿಟ್ಟನು. ಅವನ ಪರಿಸ್ಥಿತಿಗೆ ಮರುಗಿ ವರ್ಧಮಾನಕನು ಮೂರು ರಾತ್ರಿಗಳು ಅಲ್ಲೇ ತಂಗಿದನು. ಆನಂತರ ಸಾರ್ಥದಲ್ಲಿದ್ದ ಇತರ ವ್ಯಾಪಾರಿಗಳು ಹೇಳಿದರು " ಎಲೈ ಶ್ರೇಷ್ಠೀ, ಏನಿದು ಹೀಗೆ ಒಂದು ಎತ್ತಿನ ಸಲುವಾಗಿ ಹುಲಿಸಿಂಹಗಳಿರುವ ಈ ಅಪಾಯಕಾರಿಯಾದ ಅಡವಿಯಲ್ಲಿ ಇಡೀ ಸಾರ್ಥವನ್ನೇ ಸಂಕಟಕ್ಕೀಡು ಮಾಡಿರುವೆ? ಬುದ್ಧಿವಂತನಾದವನು ಸ್ವಲ್ಪಕ್ಕೋಸ್ಕರ ಹೆಚ್ಚಿನದನ್ನು ಕಳೆದುಕೊಳ್ಳುವುದಿಲ್ಲ. ಆದ್ದರಿಂದ ಹೆಚ್ಚಿನದಕ್ಕಾಗಿ ಸ್ವಲ್ಪವನ್ನು ಬಿಟ್ಟುಬಿಡುವುದೇ ಜಾಣತನವು." ವರ್ಧಮಾನಕನು ಅವರ ಮಾತುಗಳನ್ನು ಒಪ್ಪಿ ಸಂಜೀವಕನ ರಕ್ಷಣೆಗಾಗಿ ಜನರನ್ನು ನೇಮಿಸಿ, ಸಾರ್ಥದೊಂದಿಗೆ ಅಲ್ಲಿಂದ ಹೊರಟನು.

ಅಪಾಯಕಾರಿ ಅರಣ್ಯದಲ್ಲಿ ಇರಲಿಚ್ಛಿಸದ ಆರಕ್ಷಕರು ಸಂಜೀವಕನನ್ನು ಅಲ್ಲಿಯೇ ಬಿಟ್ಟು ನಡೆದರು. "ಸಂಜೀವಕನು ಸತ್ತುಹೋದನು, ಅವನಿಗೆ ಅಗ್ನಿಸಂಸ್ಕಾರ ಮಾಡಿದೆವು."[59] ಎಂದು ಹೇಳಿಬಿಟ್ಟರು. ಆಯಸ್ಸು ಗಟ್ಟಿಯಾಗಿದ್ದುದರಿಂದ ಸಂಜೀವಕನು ಯಮುನಾ ನೀರಿನಿಂದ ಮಿಶ್ರಿತವಾದ ತಂಪಾದ ಗಾಳಿಯ ಬೀಸುವಿಕೆಯಿಂದ ಚೇತರಿಸಿಕೊಂಡವನಾಗಿ, ಅಲ್ಲಿಂದ ಹೇಗೋ ಎದ್ದು ಯಮುನಾ ತೀರವನ್ನು ತಲುಪಿದನು. ಅಲ್ಲಿ ಪಚ್ಚೆ ಹರಳಿನಂತಹ ಎಳೆಹುಲ್ಲಿನ ಮೇಲ್ಭಾಗವನ್ನು ತಿನ್ನುತ್ತಾ, ತಿನ್ನುತ್ತಾ ಶಿವನ ನಂದಿಯಂತೆ ದಷ್ಟಪುಷ್ಟ ಹಾಗೂ ಶಕ್ತಿವಂತನಾದನು. ಪ್ರತಿದಿನವೂ ಹುತ್ತದ ತುದಿಗಳನ್ನು ಕೊಂಬುಗಳಿಂದ ಭೇದಿಸುತ್ತಾ, ಗರ್ಜಿಸುತ್ತಾ ವಾಸವಾಗಿದ್ದನು. ಇಲ್ಲಿ ಒಂದು ಉಕ್ತಿ ಸರಿಯಾಗಿಯೇ ಇದೆ.

अरक्षितं तिष्ठति दैवरक्षितं सुरक्षितं दैवहतं विनश्यति ।

जीवत्यनाथोऽपि वने विसर्जितः कृतप्रयत्नोऽपि गृहे विनश्यति ॥[60]

---

59. **ಭರತ.ಬಿ ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ. ತಂ- ಪು-15, 2018. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು-560004

60. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ- ಶ್ಲೋ - 20, ಪು - 21,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಇದರರ್ಥ– "ರಕ್ಷಣೆಯಿಲ್ಲದವನು ದೈವರಕ್ಷೆಯಿದ್ದರೆ ಬದುಕುತ್ತಾನೆ; ಉತ್ತಮ ರಕ್ಷಣೆಯಿದ್ದವನು ದೈವಕೃಪೆಯಿಲ್ಲದಿದ್ದರೆ ನಾಶವಾಗುತ್ತಾನೆ; ಕಾಡಿನಲ್ಲಿ ಬಿಟ್ಟ ಅನಾಥನು ದೈವಕೃಪೆಯಿಂದ ಬದುಕುತ್ತಾನೆ; ದೈವಕೃಪೆಯಿಲ್ಲದಿದ್ದಾಗ ಎಷ್ಟೇ ಪ್ರಯತ್ನಪಟ್ಟರೂ ಮನೆಯಲ್ಲಿದ್ದರೂ ಕೂಡ ನಾಶವಾಗುತ್ತಾನೆ.

ಒಂದು ದಿನ ಪಿಂಗಳಕನೆಂಬ ಬಾಯಾರಿದ ಸಿಂಹವೊಂದು ತನ್ನ ಮೃಗ ಪರಿವಾರದೊಡನೆ ಯಮುನಾ ತೀರಕ್ಕೆನೀರು ಕುಡಿಯಲು ಬಂದನು. ಆ ಸಮಯದಲ್ಲಿ ಸಂಜೀವಕನ ಗಂಭೀರವಾದ ಕೂಗನ್ನು ದೂರದಿಂದಲೇ ಕೇಳಿ ಪಿಂಗಲಕನು ವ್ಯಾಕುಲ ಹೃದಯದವನಾಗಿ ಭಯಗೊಂಡರೂ ಅದನ್ನು ತೋರ್ಪಡಿಸದೆ ಒಂದು ಆಲದ ಮರದ ಕೆಳಗೆ ನಾಲ್ಕು ಮಂಡಲಗಳುಳ್ಳ ವ್ಯೂಹ ರಚನೆ ಮಾಡಿ ಕುಳಿತುಕೊಂಡನು. ಅವನ ಚತುರ್ಮಂಡಲ ಹೇಗಿತ್ತೆಂದರೆ –– ಮಧ್ಯ ಭಾಗದಲ್ಲಿ ಸಿಂಹ, ಅನಂತರದ ಸುತ್ತಿನಲ್ಲಿ ಅನುಯಾಯಿಗಳು ಅಂದರೆ ಮಂತ್ರಿಗಳು ಮುಂತಾದವರು, ಅವರ ಸುತ್ತ ಮಧ್ಯಮ ವರ್ಗದ ಸೇವಕರು, ಕೊನೆಯ ಸುತ್ತಿನಲ್ಲಿ ಗೂಢಚಾರರು, ಸೈನಿಕರು ಮುಂತಾದವರು. ಇದೆಲ್ಲಾ ಪ್ರಾಣಿಗಳ ಗುಂಪೇ ಆಗಿದ್ದರೂ ಒಂದು ರಾಜನ ಸಭೆಗಿಂತ ಏನೂ ಕಡಿಮೆಯಾಗಿರಲಿಲ್ಲ.

ಪಿಂಗಲಕನಿಗೆ ಅಧಿಕಾರಭ್ರಷ್ಟರಾದ ಮಂತ್ರಿಪುತ್ರರಾದ ಕರಟಕ – ದಮನಕರೆಂಬ ಇಬ್ಬರು ನರಿಗಳು ಅನುಯಾಯಿಗಳು. ಅವರಿಬ್ಬರು ತಮ್ಮಲ್ಲೇ ಮಂತ್ರಾಲೋಚನೆಯಲ್ಲಿ ತೊಡಗಿದರು. ದಮನಕ ಕೇಳಿದನು– "ಎಲೈ ಮಂಗಳಕರ ಕರಟಕನೇ, ಈ ನಮ್ಮ ಸ್ವಾಮಿ ಪಿಂಗಳಕನು ಬಾಯಾರಿದ್ದವನು, ನೀರು ಕುಡಿಯಲು ಯಮುನಾ ತೀರಕ್ಕೆ ಹೋದವನು ನೀರು ಕುಡಿಯದೆ ಹಿಂದಿರುಗಿ ಬಂದು ವ್ಯೂಹ ರಚನೆ ಮಾಡಿ ದುಃಖ ತಪ್ತನಾಗಿ ಈ ಆಲದ ಮರದ ಕೆಳಗೆ ಕುಳಿತಿರುವನು. ಇದು ಯಾವ ಕಾಣದಿಂದ? ಕರಟಕನು ಹೇಳುತ್ತಾನೆ –"ಮಂಗಳಕರನೇ, ಈ ವ್ಯಾಪಾರದಿಂದ(ಸಂಬಂಧಪಡದ ವ್ಯವಹಾರದಿಂದ ನಮಗೇನು? ಏಕೆಂದರೆ ಹೀಗೊಂದು ಉಕ್ತಿಯಿದೆ –

अव्यापारेषु व्यापारं यो नरः कर्तुमिच्छति ।

स एव निधनं याति कीलोत्पाटीव वानरः ॥[61]

ಯಾವ ಮನುಷ್ಯನು ತನಗೆ ಸಂಬಂಧಿಸದ ವ್ಯಾಪಾರದಲ್ಲಿ ಮೂಗು ತೂರಿಸುವನೋ, ಆತನು(ಮರದಿಂದ) ಬೆಣೆಯನ್ನು ಕಿತ್ತ ಮಂಗನಂತೆ ಸಾವನ್ನಪ್ಪುತ್ತಾನೆ. "ಹೇಳಿಕೆಯಿಲ್ಲದೆ ಊಟಕ್ಕೆ, ಕರೆಯದೇ ಇದ್ದ ಮಾತುಕತೆಗೆ ಹೋಗಬಾರದಂತೆ. ಹಾಗೆ ಹೋದದ್ದೇ ಆದರೆ, ದಾರಿಯನ್ನು ಹೋಗುವ ಮಾರಿಯನ್ನು

61. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ –21, ಪು– 22, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಅಕ್ಷತೆ ಕೊಟ್ಟು ಮನೆಯೊಳಕ್ಕೆ ಕರೆಸಿದಂತಾದೀತು. **"ರಾಜಕುಮಾರರಲ್ಲಿ ಒಬ್ಬ ಕೇಳಿದ– "ಗುರುಗಳೇ, ಅದೇನು ಕಥೆ – ಕಪಿ ಕೀಲನ್ನು ಕಳಚಿದ್ದು? ಹೇಳಿ"** ಎಂಬುದಾಗಿ.

ವಿಷ್ಣುಶರ್ಮರು ಮನಸ್ಸಿನಲ್ಲೇ ಖುಶಿಪಟ್ಟುಕೊಂಡು –"ಅಬ್ಬಾ! ರಾಜಕುಮಾರರಿಗೆ ಕಥೆ ಕೇಳುವ ಆಸಕ್ತಿ ಬೆಳೆಯುತ್ತಿದೆ, ಇನ್ನು ಇವರನ್ನು ತಿದ್ದಬಹುದು" ಆದ್ದರಿಂದ ಉತ್ಸಾಹದಿಂದಲೇ ಬೆಣೆಯನ್ನು ಕಿತ್ತ ಮಂಗನ ಕಥೆಯನ್ನು ಹೇಳತೊಡಗಿದರು. ಹೀಗೆ ಇವರ ಬೋಧನಾ ಕ್ರಮ ಮನೋವೈಜ್ಞಾನಿಕವಾಗಿತ್ತು. ಶಿಷ್ಯರ ಆಸಕ್ತಿಯನ್ನು ಪ್ರೇರೇಪಿಸಿ, ಪಾಠದ ಪೂರ್ವಸಿದ್ಧತಾ ಕಾರ್ಯವನ್ನು, ಪೀಠಿಕೆಗೆ ಪೂರಕವಾದ ಒಂದು ದೃಷ್ಟಾಂತವನ್ನು ವಿವರಿಸಿ ಮುಂದಿನ ಪಾಠಕ್ಕೆ ಸುಗಮವಾದ ಮಾರ್ಗವನ್ನು ರೂಪಿಸುತ್ತಿದ್ದರು. ಮಿತ್ರಭೇದ ಸೂತ್ರ ಕಥೆಯಲ್ಲಿ ಬಹಳ ನೀತಿಯುತ ವಿಚಾರಗಳನ್ನು ರಾಜಕುಮಾರರಿಗೆ ಬೋಧಿಸಿದ್ದಾರೆ. ಉದಾಹರಣೆಗೆ– ಧನಾರ್ಜನೆಯ ಉಪಾಯಗಳು, ಸಂಜೀವಕನ ವನಪ್ರವೇಶ, ಪಿಂಗಲಕನಿಂದ ವ್ಯೂಹ ರಚನೆ, ಕರಟಕ– ದಮನಕರ ಮಂತ್ರಾಲೋಚನೆ ಮುಂತಾದ ಪ್ರಸಂಗಗಳಲ್ಲಿ – ರಾಜನೀತಿ ಶಿಕ್ಷಣದ ಪರಿಚಯವನ್ನು ಸರಳವಾಗಿ ಹಾಗೂ ಆಕರ್ಷಕವಾಗಿ ಪ್ರಾಣಿಗಳೇ ಮನುಷ್ಯರಷ್ಟು ಭಾವನೆಗಳನ್ನು ವ್ಯಕ್ತಪಡಿಸುವಂತೆ ಉತ್ತಮ ಬೋಧನಾ ತಂತ್ರವನ್ನು ವಿಷ್ಣುಶರ್ಮರು ಅಳವಡಿಸಿದ್ದಾರೆ. ಆಲದ ಮರದ ಕೆಳಗೆ ಮೃಗ ಪರಿವಾರ ಸೇರಿ ಒಂದು ಅದ್ಭುತವಾದ ರಾಜನ ಆಸ್ಥಾನ ಮತ್ತು ರಾಜಸಭೆಯ ಪರಿಕಲ್ಪನೆಯನ್ನು ಮೂಡಿಸಿದ್ದಾರೆ.

ಬೆಣೆಯನ್ನು ಕಿತ್ತ ಮಂಗನ ಕಥೆ ಬಹಳ ಚಿಕ್ಕ ಕಥೆ, ಆದರೆ ಒಂದು ಒಳ್ಳೆಯ ತಿಳುವಳಿಕೆಯನ್ನು ಬೆಳೆಸುವುದು.

ಕಪಿಚೇಷ್ಟೆ ಎಂಬುವುದು ವಾಡಿಕೆ. ಆದರೆ ಇದು ಎಷ್ಟು ಅರ್ಥಪೂರ್ಣವಾಗಿದೆಯೆಂದು ಈ ಪುಟ್ಟ ಕಥೆ ಸ್ಪಷ್ಟ ಪಡಿಸುತ್ತದೆ. ಒಮ್ಮೆ ಒಂದು ನಗರದ ಸಮೀಪದ ವೃಕ್ಷ ಸಮೂಹದ ಮಧ್ಯೆ ವ್ಯಾಪಾರಿಯ ಮಗನೊಬ್ಬನು ಒಂದು ದೇವಸ್ಥಾನ ಕಟ್ಟುವ ಕಾರ್ಯ ನಡೆಸುತ್ತಿದ್ದನು. ಕೆಲಸ ಮಾಡುತ್ತಿದ್ದ ಕಾರ್ಮಿಕರು ಮಧ್ಯಾಹ್ನದ ಸಮಯದಲ್ಲಿ ಊಟಕ್ಕೆ ನಗರಕ್ಕೆ ಹೋಗುತ್ತಿದ್ದರು.ಒಮ್ಮೆ ತಮ್ಮ ಸಹಜ ಸ್ವಭಾವದಂತೆ ಅತ್ತಿತ್ತ ತಿರುಗಾಡುತ್ತಿದ್ದ ಮಂಗಗಳ ಹಿಂಡೊಂದು ಅಲ್ಲಿಗೆ ಬಂತು. ಕೆಲಸದ ಆವರಣದಲ್ಲಿ ಬಡಗಿಯೊಬ್ಬನು ಅರ್ಧ ಸೀಳಿದ ಅರ್ಜುನ ವೃಕ್ಷದ ಸ್ಥಂಭಕ್ಕೆ ಕಗ್ಗಲಿ ಮರದ ಬೆಣೆಯನ್ನು ಸಿಕ್ಕಿಸಿ ಹೋಗಿದ್ದನು. ಮಂಗಗಳು ಮನಸೋಇಚ್ಛೆ ಮರಗಳ ಮಧ್ಯೆ ಆಡಲು ತೊಡಗಿದವು. ಆಗ ಒಂದು ಮೃತ್ಯು ಸನ್ನಿಹಿತವಾದ ಮಂಗವು ಬೆಣೆಯನ್ನು ಸಿಕ್ಕಿಸಿದ್ದ ಮರದ ದಿಮ್ಮಿಯ ಮೇಲೆ ಕುಳಿತು, ಕೈಗಳಿಂದ ಬೆಣೆಯನ್ನು ಎಳೆದು ಕಿತ್ತಾಗ, ಅದರ ವೃಷಣಗಳು ಸೀಳಿದ್ದ

ಮರದ ಮಧ್ಯೆ ಸಿಕ್ಕಿ ಜಜ್ಜಿ ಹೋಗಿದ್ದರಿಂದ ಸತ್ತುಹೋಯಿತು.ಬೇಡದ ಕೆಲಸಕ್ಕೆ ಕೈಹಾಕಿದ್ದರಿಂದ ವಾನರ ತನ್ನ ಜೀವವನ್ನು ಅನ್ಯಾಯವಾಗಿ ಕಳೆದುಕೊಂಡಿತು. ಈ ಕಥೆಯ ನೀತಿ:–

ಕರಟಕ ಹೇಳುತ್ತಾನೆ– "अव्यापारेषु इति । आवयोर्भक्षितशेष आहारोऽस्त्येव तत्किमनेन व्यापारेण ?" ಅಂದರೆ, ಸಂಬಂಧಿಸದ ವ್ಯಾಪಾರದಲ್ಲಿ ತಲೆಹಾಕಬಾರದು. ನಾವು ತಿಂದು ಉಳಿದ ಆಹಾರವು ಇನ್ನೂ ಇದೆಯಲ್ಲವೇ? ನಮಗೇಕೀ ವ್ಯಾಪಾರ? ಯಾವಾಗಲೂ ನಮಗೆ ಸಂಬಂಧಪಡದಿರುವ ವಿಚಾರಗಳಿಗೆ ಅನ್ಯಥಾ ತಲೆಹಾಕಿ ಫಜೀತಿಮಾಡಿಕೊಳ್ಳಬಾರದು.

ಇನ್ನು ಮೊನ್ನೆ, ಮೊನ್ನೆ, ನೀರು ಕುಡಿಯಲು ಹೋದ ಮೃಗರಾಜ ಸಿಂಹವು ಒಮ್ಮೆಗೇ ಬೆದರಿ ಹಿಂದೆ ಬಂದಿದ್ದೇಕೆ? ಎಂಬುದನ್ನು ತಿಳಿಯಲು ದಮನಕನು ಧೈರ್ಯದಿಂದ ಕೇಳಿದನು. ಆಗ ಸಿಂಹವು ಯೋಚಿಸಿ ತನ್ನ ದುಗುಡವನ್ನು ಹೇಳಿಕೊಳ್ಳಲು ಮನದಲ್ಲೇ ಯೋಚಿಸಿ ಹೀಗೆ ಹೇಳಿತು– "ಸಚಿವೋತ್ತಮನೇ, ನೀನೂ ಕೇಳಿದ್ದಿರಬಹುದು. ಮೋಡದ ಮೊಳಗಿಗಿಂತ, ಆನೆಯ ಘೀಳಿಡುವಿಕೆಗಿಂತ ಭಯಂಕರವಾದ, ಈ ಹಿಂದೆ ಎಂದೂ ಕೇಳಿರದ ಉಗ್ರವಾದ ನಾದವದು. ಆ ಮೊಳಗು ಈ ಕಾಡನ್ನು ಸೇರಿಕೊಂಡ ವಿಚಿತ್ರ, ಭಯಾನಕ ಪ್ರಾಣಿಯದ್ದಾಗಿರಬೇಕು. ಆದ್ದರಿಂದ ಈ ಕಾಡನ್ನೇ ಬಿಟ್ಟು ಹೋಗುವ ಯೋಚನೆ ಮಾಡಿದ್ದೇನೆ." ಅದಕ್ಕೆ ಕರಟಕನು ಹೇಳಿದನು– " ಛೇ, ಛೇ.. ಇಷ್ಟಕ್ಕೆಲ್ಲಾ ಹೆದರುವುದೇ, ಅಪಾಯದ ಮೂಲವನ್ನು ಶೋಧನೆ ಮಾಡಿದರೆ ಭಯದ ಬುಡವನ್ನೇ ಕಿತ್ತೆಸೆಯಲು ಸಾಧ್ಯವಾಗುತ್ತದೆ. ನಮ್ಮ ಕಲ್ಪನೆಗೂ ಮೀರಿದ, ಬೇರೆಯದ್ದೇ ಆದ ಸತ್ಯ ಅಲ್ಲಿರಬಹುದು. ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು ಎಂಬ ಗಾದೆಯೇ ಇದೆಯಲ್ಲ. ಹೀಗೆ ಭಯಗ್ರಸ್ಥ ಪಿಂಗಲಕನೊಂದಿಗೆ ದಮನಕನ ಸಂವಾದ ಬಹಳ ದೀರ್ಘವಾಗಿ ನಡೆಯುತ್ತದೆ. ಬಹಳ ಉಪಯುಕ್ತ ರಾಜನೀತಿ ಶಿಕ್ಷಣ ಹಾಗೂ ನಾಯಕನಾದವನು ತಿಳಿದುಕೊಳ್ಳಬೇಕಾದ ರಾಜಧರ್ಮ ಪ್ರಜಾ ಪರಿಪಾಲನಾ ನೀತಿನಿಯಮಗಳೆಡೆಗೆ ರಾಜಕುಮಾರರು ಆಲೋಚನೆ ಮಾಡುವಂತೆ ಈ ಸೂತ್ರಕಥೆಯ ಮೂಲಕ ವಿಷ್ಣುಶರ್ಮರು ಪ್ರೇರೇಪಿಸಿದ್ದಾರೆ. ಹೀಗೊಂದು ಉಕ್ತಿಯಿದೆ :–

पूर्वमेव मया ज्ञातं पूर्णामेतद्धि मेदसा।

अनुप्रविश्य विज्ञातं यावच्चर्म च दारु च ॥[62]

ಅಂದರೆ," ಇದರಲ್ಲಿ ಮಾಂಸವು ತುಂಬಿದೆಯೆಂದು ತಿಳಿದಿದ್ದೆ. ಆದರೆ ಪ್ರವೇಶಿಸಿ ನೋಡಿದಾಗ ಕೇವಲ

---

62. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ – 117, ಪು – 61,.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಚರ್ಮ ಹಾಗೂ ಮರದ ಕಡ್ಡಿಗಳಿದ್ದವು ಎಂದು ದಮನಕನು ದೃಷ್ಟಾಂತವೊಂದನ್ನು ಹೇಳಲು, ಪಿಂಗಳಕನು ಅದೇನೆಂದು ಕೇಳಿದನು. ಆಗ ದಮನಕನು **ಗೋಮಾಯು ದುಂದುಭಿ ಕಥೆ**ಯನ್ನು ಹೇಳಿದನು.

ಹಸಿವಿನಿಂದ  ಆಹಾರವನ್ನು ಹುಡುಕಿಕೊಂಡು ಗೋಮಾಯು ಎಂಬ ಒಂದು ಅಂಜುಬುರುಕ ನರಿ ಅಲೆಯುತ್ತಾ ಇರುವಾಗ ಎರಡು ಸೈನ್ಯಗಳ ಮಧ್ಯೆ ಯುದ್ಧವಾಗಿದ್ದ ಒಂದು ಪ್ರದೇಶವನ್ನು ತಲುಪಿತು. ಜೋರು ಗಾಳಿ ಬೀಸುತ್ತಿದ್ದರ ಪರಿಣಾಮ ಲತೆಗಳ ಕಾಂಡಗಳು ಅಲ್ಲಿದ್ದ ನಗಾರಿಗೆ ಬಡಿದಾಗ ಒಂದು ಶಬ್ದ ಬರುತ್ತಿದ್ದುದನ್ನು ಆ ನರಿಯು ಕೇಳಿಸಿಕೊಂಡು ಭಯಭೀತಿಯಿಂದ ಯೋಚಿಸಿತು. "ಅಯ್ಯೋ ನಾನು ಸತ್ತಂತೆಯೇ, ಈ ಶಬ್ದವನ್ನು ಮಾಡುತ್ತಿರುವ ಪ್ರಾಣಿಯ ದೃಷ್ಟಿಗೆ ಬೀಳುವುದರೊಳಗಾಗಿ ಇಲ್ಲಿಂದ ಜಾಗ ಖಾಲಿ ಮಾಡಿಬಿಡುವುದು ಒಳ್ಳೆಯದು " ಎಂದುಕೊಂಡಿತು. ಪುನಃ ಮತ್ತೊಂದು ತರಹ ಚಿಂತಿಸಿ, ಪೂರ್ವಜರು ನೆಲಸಿದ್ದ ಕಾಡನ್ನು ಒಮ್ಮೆಲೇ ಬಿಟ್ಟುಹೋಗುವುದು ಸರಿಯಲ್ಲ ಏಕೆಂದರೆ, ಭಯದ ಅಥವಾ ಸಂತೋಷದ ಸಂದರ್ಭದಲ್ಲಿ ಆತುರಪಡಬಾರದು. ಬದಲಾಗಿ ವಿಚಾರಮಾಡಿ ಯಾರು ಕೆಲಸ ಕೈಗೊಳ್ಳುವನೋ ಅವನು ದುಃಖವನ್ನು ಹೊಂದುವುದಿಲ್ಲ. ಆದ್ದರಿಂದ ಅದೇನು ಶಬ್ದವೆಂದು ತಿಳಿಯಲು ಅಪೇಕ್ಷಿಸಿತು. ಹೀಗೆ ವಿಚಾರಮಾಡಿ ಧೈರ್ಯದಿಂದ ಮೆಲ್ಲಗೆ ನಡೆಯುತ್ತಿದ್ದಾಗ ನಗಾರಿ (ದುಂದುಭಿ)ಯನ್ನು ಕಂಡಿತು. ಅದರ ಹತ್ತಿರ ಹೋಗಿ ಸರಿಯಾಗಿ ಪರಿಶೀಲಿಸಿ ಕುತೂಹಲದಿಂದ ತಾನೂ ಒಮ್ಮೆ ಅದಕ್ಕೆ ಹೊಡೆಯಿತು. ನಂತರ ಹರ್ಷದಿಂದ ಅದೊಂದು ರಕ್ತಮಾಂಸಗಳಿಂದ ತುಂಬಿರುವ ಪ್ರಾಣಿಯೆಂದು ತಿಳಿದು, ತನಗೆ ಭೂರಿಭೋಜನ ಪ್ರಾಪ್ತವಾಯಿತೆಂದು ಯೋಚಿಸಿತು. ನಗಾರಿಯ ದಪ್ಪ ಚರ್ಮವನ್ನು ಕಷ್ಟಪಟ್ಟು ಹೇಗೋ ಒಂದು ಕಡೆ ತೂತು ಮಾಡಿ ಒಳಹೊಕ್ಕಿತು. ಆದರೆ ಒಳಗೆ ರಕ್ತಮಾಂಸದ ಬದಲು ಕೇವಲ ಚರ್ಮ ಹಾಗೂ ಮರದ ಕಡ್ಡಿಗಳಿವೆಯೆಂದು ತಿಳಿಯಿತು. ಹೊರಗೆ ಬಂದು ತನ್ನನ್ನು ತಾನೇ ಹಾಸ್ಯಮಾಡಿಕೊಂಡಿತು.

ಕಥೆಯನ್ನು ಮುಗಿಸಿದ ದಮನಕ "ಆದ್ದರಿಂದಲೇ ಕೇವಲ ಶಬ್ದಕ್ಕೆ ಹೆದರಬಾರದೆಂದು ನಾನು ಹೇಳುವುದು "ಎಂದನು. ಆಗ ಪಿಂಗಲಕನು ಹೇಳುತ್ತಾನೆ– "ನೋಡು, ನನ್ನ ಪರಿವಾರದವರೆಲ್ಲರೂ ಭಯದಿಂದ ವ್ಯಾಕುಲಗೊಂಡು ಓಡಿಹೋಗಲು ಯೋಚಿಸುತ್ತಿರುವರು. ಹೀಗಿದ್ದಲ್ಲಿ  ನಾನು ಹೇಗೆ ಧೈರ್ಯವನ್ನು ತಾಳಲಿ? ಇದನ್ನು ಕೇಳಿದ ದಮಕನು ಪಿಂಗಲಕನಿಗೆ ಧೈರ್ಯ ತುಂಬಿ, ಶಬ್ದದ ಕಾರಣವನ್ನ ತಾನೇ ಸ್ವತಃ ಹೋಗಿ ತಿಳಿದು ಬರುವುದಾಗಿ ಹೇಳಿ ಹೊರಟನು. ಪಿಂಗಲಕನು ನಿನ್ನ ದಾರಿಯು ಮಂಗಳಕರವಾಗಲಿ ಎಂದು ಹರಸಲು, ದಮನಕನು ಅವನಿಗೆ ನಮಸ್ಕರಿಸಿ ಸಂಜೀವಕನು ಮಾಡಿದ ಶಬ್ದವನ್ನು ಅನುಸರಿಸುತ್ತಾ ಹೊರಟನು.[63]

---

63. **ಭರತ.ಬಿ ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ. – ಪು–28–32, 2018. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು–560004

ನಂತರದಲ್ಲಿ ಮಂತ್ರಿಪದವಿಯನ್ನು ಪಡೆಯಲು ಪಿಂಗಳಕನೊಂದಿಗೆ ದಮನಕನ ಒಪ್ಪಂದವಾಗುತ್ತದೆ. ದಮನಕನಿಂದ ಪಿಂಗಲಕ– ಸಂಜೀವಕನ ಮಧ್ಯೆ ಮೈತ್ರಿ ಸ್ಥಾಪನೆಯಾಗುತ್ತದೆ. ಹಾಗೆಯೇ ಅನೇಕ ರಾಜಧರ್ಮ ಮತ್ತು ರಾಜನೀತಿಗೆ ಸಂಬಂಧಿಸಿದಂತೆ ಒಳ್ಳೆಯ ತಿಳುವಳಿಕೆ ವಿಚಾರಗಳನ್ನು ದಮನಕ ಪಿಂಗಲಕನ ಸಂಭಾಷಣೆ ಮೂಲಕ ಹೇಳುತ್ತಾ ಬರುತ್ತಾರೆ. ಇಲ್ಲಿ ವಿಷ್ಣುಶರ್ಮರು ರಾಜನೀತಿ– ಶಿಕ್ಷಣವನ್ನು ಬಹಳ ಅಚ್ಚುಕಟ್ಟಾಗಿ ಕಥೆಯೊಳಗೆ ಒಂದು ವಿಚಾರ ಗೋಷ್ಠಿಯಂತೆ ಸಂಯೋಜಿಸಿ ರಾಜಕುಮಾರಿಗೆ ಬೋಧಿಸಿದ್ದಾರೆ. ಇಲ್ಲಿ ಹೀಗೊಂದು ಉಕ್ತಿಯಿದೆ:–

तथा च यो न पूजयते गर्वादुत्तमाधममध्यमान् ।

भूपसंमानमान्योऽपि भ्रश्यते दन्तिलो यथा ॥[64]

ಅಂದರೆ, " ಯಾರು ಗರ್ವದಿಂದ ರಾಜನ ಆಶ್ರಯದಲ್ಲಿರುವ ಉತ್ತಮ, ಮಧ್ಯಮ ಹಾಗೂ ಅಧಮ ವ್ಯಕ್ತಿಗಳನ್ನು ಗೌರವಿಸುವುದಿಲ್ಲವೋ, ಆತನು ದಂತಿಲನಂತೆ ತನ್ನ ಪದವಿಯನ್ನು ಕಳೆದುಕೊಳ್ಳುವನು. ಸಂಜೀವಕನು ಅದನ್ನು ಅರ್ಥೈಸಿ ಹೇಳಬೇಕೆಂದು ಕೇಳಲು ದಮನಕನು **ದಂತಿಲ–ಗೋರಂಭರ ಕಥೆ**ಯನ್ನು ಹೇಳಿದನು.

ಇದನ್ನೆಲ್ಲಾ ಕೇಳುತ್ತಿದ್ದ ರಾಜಕುಮಾರನೊಬ್ಬ ಗುರುಗಳನ್ನು ಹೀಗೆ ಕೇಳುತ್ತಾನೆ– "ಗುರುಗಳೇ, ದಂತಿಲನ ಕಥೆ ಏನು? ಮಂತ್ರಿಯಾಗಿದ್ದ ನರಿ ಅದನ್ನೇಕೆ ಹೇಳಿತು? ಗುರುಗಳು– ಅದಾ? ನೋಡಿ "ರಾಜಕುವರರೇ, ರಾಜನೆಂದರೆ ಅದೊಂದು ದೊಡ್ಡ ಅಧಿಕಾರ, ಇದರಿಂದಾಗಿಯೇ ಗರ್ವ. ಇದು ಒಮ್ಮೆ ದೊರೆತರೆ ಮತ್ತೆ ಅದರಿಂದ ತಪ್ಪಿಸಿಕೊಳ್ಳಲು ಆಗದು. ಅಂತಹ ಕಾಲದಲ್ಲಿ ರಾಜನಿಗೆ ಎಲ್ಲರ ಮೇಲೂ ಅನುಮಾನ ಆರಂಭವಾಗುತ್ತದೆ. ಯಾರು ತನ್ನನ್ನು ಕೊಲ್ಲುವರೋ, ಕೊಂದು ಅಧಿಕಾರ ಹೊಂದುವರೋ ಎಂಬ ಭಯ; ತನ್ನವರು ಯಾರಾದರೂ ಶತ್ರುಗಳೊಂದಿಗೆ ಕೈ ಜೋಡಿಸುವರೋ ಎಂದು ಎಲ್ಲರನ್ನೂ ಸಂಶಯದಿಂದ ಕಾಣುತ್ತಾನೆ. ತನ್ನ ಆಪ್ತರ ಮೇಲೂ ಅಪನಂಬಿಕೆ. ಅದಕ್ಕೆ ವರ್ಧಮಾನಪುರದ ರಾಜನೇ ಸಾಕ್ಷಿ. ರಾಜಕುಮಾರರು ಬಹಳ ಕುತೂಹಲದಿಂದ "ಅಲ್ಲಿ ಏನು ನಡೆಯಿತು, ಆಚಾರ್ಯ? ರಾಜಕುಮಾರರಿಗೆ ಕಥೆ ಕೇಳುವುದರಲ್ಲಿ ಆಸಕ್ತಿ ಹೆಚ್ಚಿತೆಂದರೆ ಇನ್ನು ನನ್ನ ಕೆಲಸ ಪೂರ್ಣವಾದಂತೆ. ಈ ಕಥೆಗಳ ಮೂಲಕವೇ ರಾಜನೀತಿಯನ್ನು ಬೋಧಿಸುವುದು ಸುಲಭವೆಂದುಕೊಂಡು ವಿಷ್ಣುಶರ್ಮರು ಮುಂದುವರೆಸುತ್ತಾರೆ.

---

64. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ – 141, ಪು – 76,,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಮಿತ್ರಭೇದದಲ್ಲಿ **ಬೆಣೆಯನ್ನು ಕಿತ್ತ ಮಂಗನ ಪರಿಸ್ಥಿತಿ – ಆಶಾಢಭೂತಿ – ನರಿ – ದೂತಿಯಕಥೆ**ಯಲ್ಲಿನ ನೀತಿ – ಬುದ್ಧಿವಂತನು ಆಪತ್ಕಾಲದಲ್ಲಿ ಪ್ರತಿಕೂಲ ಪರಿಸ್ಥಿತಿ ಇದ್ದರೂ ಕೂಡ ಬುದ್ಧಿಯ ನೆರವನ್ನು ಪಡೆಯಲೇಬೇಕು, ಪ್ರಯತ್ನವನ್ನು ಬಿಡಬಾರದು. – ಅಕಸ್ಮಾತ್ ಘುಣಾಕ್ಷರ ನ್ಯಾಯದಿಂದಾದರೂ ಬುದ್ಧಿಬಲದಿಂದ ಕಾರ್ಯಸಿದ್ಧಿ ಆಗಬಹುದು ಎಂಬ ತಿಳುವಳಿಕೆಯನ್ನು ಮೂಡಿಸಲಾಗಿದೆ. **ಕಾಗೆ – ಚಿನ್ನದ ಹಾರ – ಕೃಷ್ಣಸರ್ಪದ ಕಥೆ**ಯಲ್ಲಿ ಕಾಗೆಯು ಚಿನ್ನದ ಹಾರವನ್ನು ಕದ್ದ ಕಾರಣದಿಂದ ಕೃಷ್ಣಸರ್ಪವು ಹೇಗೆ ನಾಶವಾಯಿತೋ ಹಾಗೆ ಪರಾಕ್ರಮದಿಂದ ಯಾವುದು ಸಾಧ್ಯವಿಲ್ಲವೋ, ಅದು ಉಪಾಯದಿಂದ ಸಾಧ್ಯ.[65]

उपायेन जयो यादृग् रिपोस्तादृङ् न हेतिभिः ।

उपायज्ञोऽल्पकायोऽपि न शूरैः परिभूयते ॥[66]

ನರಿ ಹೇಳುತ್ತದೆ:– "ಈ ವಿಷಯದಲ್ಲಿ ಸ್ವಲ್ಪವೂ ದುಃಖಿಸುವುದು ತರವಲ್ಲ. ಉಪಾಯದಿಂದಲ್ಲದೇ ಆ ಲೋಭಿಯನ್ನು ಕೊಲ್ಲಲು ಸಾಧ್ಯವಿಲ್ಲ. ಉಪಾಯದಿಂದ ಹೇಗೆ ಶತ್ರುಗಳನ್ನು ಗೆಲ್ಲಬಹುದೋ ಆ ರೀತಿ ಆಯುಧಗಳಿಂದ ಕೂಡ ಗೆಲ್ಲಲು ಸಾಧ್ಯವಿಲ್ಲ.

ಇಂತಹ ಅನೇಕ ವಿಚಾರಗಳನ್ನು ಸಣ್ಣ ಸಣ್ಣ ಕಥೆಗಳ ಮೂಲಕ ದುರ್ವಿನೀತ ರಾಜಕುಮಾರಿಗೆ ಬೋಧಿಸುತ್ತಾ, ಅವರುಗಳ ಆಲೋಚನೆ, ವಿವೇಚನೆ, ವಿಮರ್ಶೆ, ತೀರ್ಮಾನ ಮುಂತಾದ ಮನಶ್ಶಕ್ತಿಗಳು ಕೆಲಸ ಮಾಡಲು ನೆರವಾಗುವಂತೆ ಪ್ರಶ್ನೆಗಳನ್ನು ಕೇಳಿ ಉತ್ತರ ಹೇಳಿಸುತ್ತಾ, ವಿಷ್ಣುಶರ್ಮರು ಮುಂದು ಮುಂದಿನ ಅಂಥಹ ಅರ್ಥಪೂರ್ಣ ಕಥೆಗಳ ನಿರೂಪಣೆಯನ್ನು ಮುಂದುವರಿಸಿ ಕಲಿವಿನೆಡೆಗೆ, ಉತ್ತಮ ವ್ಯಕ್ತಿತ್ವ ನಿರ್ಮಾಣಕ್ಕೆ ಸಮಯೋಚಿತವಾಗಿ ಸನ್ನಿವೇಶಗಳನ್ನು ಒದಗಿಸಿಕೊಟ್ಟಿರುತ್ತಾರೆ. ಮತ್ತೊಂದು ಉದಾಹರಣೆಯೆಂದರೆ:– ಮೂರು ಮೀನಿನ ಕಥೆಯಲ್ಲಿ ಪ್ರತ್ಯುತ್ಪನ್ನಮತಿ ಮೀನು ಹೀಗೆ ಹೇಳುತ್ತದೆ.

यस्यास्ति सर्वत्र गतिः स कस्मात् स्वदेशरागेण हि याति नाशम् ।

तातस्य कूपोऽयमिति ब्रुवाणाः क्षारं जलं कापुरुषाः पिबन्ति ॥[67]

ಯಾರಿಗೆ ಎಲ್ಲ ಕಡೆಯೂ ಅವಕಾಶವಿರುವುದೋ ಅಂಥವನು ಏಕೆ ತನ್ನ ದೇಶದ ಮೇಲಿನ ಆಸೆಯ ಕಾರಣ ನಾಶ ಹೊಂದುತ್ತಾನೆ? ಕೈಲಾಗದವರೀಗ 'ತಂದೆ ತೋಡಿದ ಬಾವಿ' ಎಂದು ಹೇಳುತ್ತಾ

---

65. **ಸುಧಾಕರ್ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಭೂಮಿಕಾ – ಪು– 13–17. ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
66. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–231,ಪು–148,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
67. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–351,ಪು–227,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಉಪ್ಪು ನೀರುನ್ನು ಕುಡಿಯುತ್ತಾರೆ. ಅಂದರೆ ಯಾರು ಎಲ್ಲಾದರೂ ಬದುಕಬಲ್ಲರೋ ಅವರು ಸ್ವದೇಶದ ಮೋಹದಿಂದ ನಾಶಹೊಂದುವುದಿಲ್ಲ. ಹೇಡಿಗಳು ಮಾತ್ರ ಅಜ್ಜನ ಬಾವಿಯೆಂದು ಹೇಳುತ್ತಾ ಉಪ್ಪುನೀರನ್ನೇ ಕುಡಿಯುತ್ತಿರುತ್ತಾರೆ.

ಸಹವಾಸ ದೋಷದಿಂದ ಏನೆಲ್ಲ ಅನಾಹುತಗಳಾಗುತ್ತವೆ ಎಂಬುದನ್ನು ಶುಭಾಶುಭಗಳನ್ನು ಉಲಿಯುವ ಎರಡು ಗಿಳಿ ಸಹೋದರಿಯರ ಕಥೆಯಲ್ಲಿ ಬರುವ ವಿಚಾರಗಳನ್ನು ರಾಜಕುಮಾರರಿಗೆ ಮನದಟ್ಟು ಮಾಡಿ, ಅವರುಗಳು ಸಹವಾಸ ದೋಷದಿಂದ ಹೇಗೆ ಉದ್ಧಟರಾಗಿ ಸ್ವೇಚ್ಛಾ ಪ್ರವೃತ್ತಿಯಿಂದ ವ್ಯರ್ಥವಾಗಿ ಕಾಲಹರಣ ಮಾಡುತ್ತಿದ್ದರೆಂಬ ಬಗ್ಗೆ ಅವರೇ ವಿಮರ್ಶಿಸಿಕೊಳ್ಳುವಂತೆ ಪ್ರೇರೇಪಿಸಿ, ಜಾಗೃತಿ ಮೂಡಿಸಿದರು. ಅಪಾತ್ರರಲ್ಲಿ ಗೆಳೆತನ ಸಲ್ಲದು ಎಂಬುದನ್ನು-ಬಡಾಯಿ ಗೂಬೆಯ ಸಹವಾಸದಿಂದ ಹತನಾದ ರಾಜಹಂಸದ ಕಥೆಯಿಂದ ಸ್ಪಷ್ಟಪಡಿಸಿದ್ದಾರೆ. ಹೀಗೆ ವಿಷ್ಣುಶರ್ಮರು ಬಹಳ ಚಮತ್ಕಾರದಿಂದ, ರಾಜಕುಮಾರರ ದುರ್ವರ್ತನೆಗಳನ್ನು ಮಾರ್ಪಾಟು ಗೊಳಿಸುತ್ತಾ, ಅನುಚಿತ ವರ್ತನೆಗಳನ್ನು ತಳ್ಳಿಹಾಕಿ ಉಚಿತವಾದುದನ್ನು ಆರಿಸಿಕೊಳ್ಳುವಂತೆ ಕಲಿವಿನ ರೂಢಿ ಮಾಡಿಸಿದರು. ಪಂಚತಂತ್ರದ ಮೊದಲನೆಯ ತಂತ್ರ "ಮಿತ್ರಭೇದ"ದಲ್ಲಿ ಉತ್ತಮ ನೀತಿಬೋಧನೆ ಮಾಡುತ್ತಾ, ವಿಷ್ಣುಶರ್ಮರು ರಾಜಪುತ್ರರಿಗೆ ನೈಜ ಜೀವನದ ಸನ್ನಿವೇಶಗಳಿಗೆ ಉಪಯುಕ್ತವಾಗುವಂತಹ ಕಲಿಕೆಯ ಅನುಭವಗಳನ್ನು ಒದಗಿಸಿಕೊಟ್ಟಿದ್ದಾರೆ. ಇಲ್ಲಿ ಪಡೆದ ಅನುಭವಗಳನ್ನು ಮುಂದೆ ಅವರಿಗೆ ಹೊಸ ಸನ್ನಿವೇಶಗಳಲ್ಲಿ ಕಾರ್ಯರೂಪಕ್ಕೆ ಬರುವಂತೆ, ಅಂದರೆ ಕಲಿಕೆಯ ವರ್ಗಾವಣೆಯಾಗುವ ಮುಂದಾಲೋಚನೆಯಿಂದಲೇ ತರಬೇತಿ ನೀಡಿದ್ದಾರೆ. ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು – ಸ್ವಂತ ಬುದ್ಧಿ ಒಂದಿರಬೇಕು – ಬುದ್ಧಿ ಬಲವೇ ಮೇಲು – ಅಪಾತ್ರರಲ್ಲಿ ಗೆಳೆತನ ಸಲ್ಲದು – ಕಾರ್ಯಸಾಧನೆಗೆ ಸಮರ್ಥರ ನೆರವು, ಉಪಾಯದಿಂದ ಅಪಾಯವನ್ನು ತಪ್ಪಿಸಿಕೊಳ್ಳುವುದು ಮುಂತಾದ ಮಿತ್ರಭೇದ ಸೂತ್ರದ ಉಪ ಕಥೆಗಳಲ್ಲಿ, ಮುಂದೆ ರಾಜನಾಗುವವನಿಗೆ ಬಹಳ ಮುಖ್ಯವಾಗಿ ಇರಬೇಕಾದ ಗುಣಲಕ್ಷಣಗಳನ್ನು ಅರ್ಥಪೂರ್ಣ ದೃಷ್ಟಾಂತಗಳಲ್ಲಿ ತಿಳಿಸಲಾಗಿದೆ.[68] ಇವುಗಳಿಂದ ಅಥವಾ ಈ ಸನ್ನಿವೇಶಗಳಿಂದ ಪಡೆದ ಜ್ಞಾನವು ಅಥವಾ ಅನುಭವವು ಧನಾತ್ಮಕವಾಗಿ ವರ್ಗಾವಣೆಯಾಗುತ್ತದೆ. ಇದೇ ನಾವು ಶೈಕ್ಷಣಿಕ ಮನೋವಿಜ್ಞಾನದಲ್ಲಿ ಕಾಣುವ "ಕಲಿಕೆಯ ವರ್ಗಾವಣೆ."

सहृदामुपकारकारणाद् द्विषतामप्यपकारकारणात् ।

नृपसंश्रय इष्यते बुधैर्जठरं को न बिभति केवलम् ॥[69]

68. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಭೂಮಿಕಾ–ಪು –14–15.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

69. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–22, ಪು–24,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಇಲ್ಲಿ ಮಿತ್ರರಿಗೆ ಉಪಕಾರವನ್ನೂ ಶತ್ರುಗಳಿಗೆ ಅಪಕಾರವನ್ನೂ ಮಾಡುವುದಕ್ಕಾಗಿ ಲೋಕದಲ್ಲಿಯ ಜನರು ಅರಸರನ್ನು ಸೇವಿಸುತ್ತಾರೆಯೇ ಹೊರತು ತಮ್ಮ ಹೊಟ್ಟೆಗಳ ಹೊರೆವುದಕ್ಕಲ್ಲ. ಅದಕ್ಕೋಸ್ಕರ ಸೇವಿಸುವುದಕ್ಕಿಂತ ಸಾಯುವುದೇ ಮೇಲು. ಯಾರ ಬದುಕಿನಿಂದ ಹಲವರು ಸುಖವಾಗಿರುತ್ತಾರೋ ಅಂತಹವನ ಬದುಕು ಸಾರ್ಥಕ. ಕೇವಲ ಹೊಟ್ಟೆಗಾಗಿ ಬದುಕುವುದಾದರೆ, ಮೂಗಿನಿಂದ ಚುಚ್ಚಿಕೊಂಡು ತಿನ್ನುವ ಕಾಗೆ ತನ್ನ ಹೊಟ್ಟೆ ತುಂಬಿಕೊಳ್ಳುವುದಿಲ್ಲವೇ? ಯಾವನು ಅಲ್ಪವಾದರೂ ಸಹ ವಿಜ್ಞಾನ, ಶೌರ್ಯ, ಐಶ್ವರ್ಯಾದಿ ಗುಣಗಳಿಂದ ಕೂಡಿ ಬದುಕುವನೋ ಅವನ ಬದುಕೇ ನಿಜವಾದ ಬದುಕು ಎಂದು ಪ್ರಾಜ್ಞರು ನುಡಿದಿದ್ದಾರೆ.

जीविते यस्य जीवन्ति विप्रा मित्राणि बान्धवाः।

सफलं जीवितं तस्य आत्मार्थं को न जीवति ॥[70]

ಯಾವ ಮನುಷ್ಯನು ತನ್ನಲ್ಲಿ, ಇತರರಲ್ಲಿ, ಬಂಧುವರ್ಗದಲ್ಲಿ, ದೀನರಲ್ಲಿ, ಸೇವಕವರ್ಗದಲ್ಲಿ ದಯೆಯಿಂದ ಕೂಡಿರುವುದಿಲ್ಲವೋ, ಆತನ ಬದುಕು ನಿಷ್ಪ್ರಯೋಜಕ, ನಿರರ್ಥಕ. ಇಂಥಹವನು ಬದುಕಿ ಫಲವಾದರೂ ಏನಿದೆ? ಕಾಗೆಯು ಕೂಡ ಬಲಿರೂಪದಲ್ಲಿ ಹಾಕಿದ ಆಹಾರವನ್ನು ತಿಂದು ದೀರ್ಘ ಕಾಲ ಬದುಕುತ್ತದೆ. ವಿಷ್ಣುಶರ್ಮರು ಬದುಕಿನ ನೀತಿಪಾಠವನ್ನು ಎಷ್ಟು ಸರಳವಾಗಿ, ಉತ್ತಮ ಉದಾಹರಣೆಯೊಂದಿಗೆ ಅರ್ಥಪೂರ್ಣ ಶಿಕ್ಷಣ ನೀಡಿದ್ದಾರೆಂಬುದು ಗಮನಾರ್ಹ ನಿದರ್ಶನವಾಗಿದೆ. ಜೊತೆಯಲ್ಲಿ ರಾಜನೀತಿ ಶಿಕ್ಷಣವನ್ನೂ ಸೂಕ್ತ ಸನ್ನಿವೇಶಗಳನ್ನು ಬಳಸಿಕೊಂಡು ಬೋಧನೆ ಮಾಡಿದ್ದಾರೆ:–1

स्थानेष्वेव नियोज्यन्ते भृत्याश्चाभरणानि च ।

न हि चूडामणिः पादे प्रभवामीति बध्यते ॥[71]

ಅಂದರೆ ಸೇವಕರನ್ನೂ, ಆಭರಣಗಳನ್ನೂ ಅವರವರಿಗೆ ತಕ್ಕಜಾಗದಲ್ಲಿ ನಿಯೋಜಿಸಬೇಕು. ನಾನು ರಾಜ, ಸಾಮರ್ಥ್ಯವಿದೆ ಎಂದುಕೊಂಡು ತಲೆಯಲ್ಲಿರಬೇಕಾದ ಚೂಡಾಮಣಿಯನ್ನು ಕಾಲಿನಲ್ಲಿ ಧರಿಸಲಾಗುತ್ತದೆಯೇ?

---

70. **ಹಿತೋಪದೇಶ**. ನಾರಾಯಣ ಪಂಡಿತ ,ಸಹೃದ್ಭೇದ–ಶ್ಲೋ–11,

71. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–78, ಪು–46,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಪಂಚತಂತ್ರ ಪಠ್ಯವನ್ನು ಹೇಗೆ ಯೋಜಿಸಿದೆಯೆಂದರೆ, ಕೆಲವು ಪ್ರಮುಖ ತೋರ್ಗಂಬಗಳನ್ನು ಹೊಂದಿಸಿ ವಿಷಯಗಳನ್ನು ಮನದಟ್ಟು ಮಾಡುವ ವ್ಯವಸ್ಥೆಯಿದೆ. ಉದಾಹರಣೆಗೆ ಮಿತ್ರಭೇದದ ಕಥೆಯಲ್ಲಿ ಬರುವ ಎತ್ತು ಸಂಜೀವಕನನ್ನು ಸಕಲವಿದ್ಯಾಸಂಪನ್ನನಂತೆ, ಒಬ್ಬ ಒಳ್ಳೆಯ ಬೋಧಕನಂತೆ ಚಿತ್ರಿಸಲಾಗಿದೆ. ಎರಡನೆಯ ತಂತ್ರ ಮಿತ್ತಸಂಪ್ರಾಪ್ತಿ ಚೌಕಟ್ಟಿನ ಕಥೆಗಳಲ್ಲಿ ಬರುವ ನಾಲ್ವರು ಮಿತ್ರರು – ಲಘುಪತನಕ, ಹಿರಣ್ಯಕ, ಚಿತ್ರಗ್ರೀವ, ಮಂಥರಕ ಇವರುಗಳು ಕಲಿಕೆಯ ನಿಧಿಯೊಡನೆ ವಿದ್ವಾಂಸರುಗಳಿದ್ದಂತೆ ಪ್ರತಿಬಿಂಬಿಸಲಾಗಿದೆ.[72] ಸರಿಯಾದ ಕಲಿಕೆಯನ್ನು ಪ್ರಾಯೋಗಿಕ ಪ್ರಜ್ಞೆಯಿಂದ ನಡೆಸುವುದು, ಅದೂ ಅಲ್ಲದೆ ಜೀವನಕ್ಕೆ ಸರಿಯಾದ ವರ್ತನೆಯನ್ನು ಸಂಯೋಜಿಸಲಾಗಿದೆ. ನಾಲ್ವರೂ ಸ್ನೇಹಿತರು ಪ್ರತ್ಯೇಕ ಜೀವನವನ್ನು ನಡೆಸುವರು. ಆದರೆ ಪ್ರತಿನಿತ್ಯ ಸರೋವರದ ಬದಿಯಿರುವ ನೆರಳನ್ನು ಕೊಡುವ ಒಂದು ವಿಶಾಲ ಆಲದ ಮರದ ಆಶ್ರಯದಲ್ಲಿ ಅನೇಕ ವಿಚಾರಗಳನ್ನು ಚರ್ಚಿಸಲು ಸೇರುತ್ತಿದ್ದರು. ಕಾನೂನು, ಅರ್ಥಶಾಸ್ತ್ರ, ರಾಜಕೀಯ ಮತ್ತು ಇತರ ಸಂಬಂಧಿತ ವಿಷಯಗಳು(ಧರ್ಮ, ಅರ್ಥ, ಇತ್ಯಾದಿ) ಚರ್ಚಿಸಲ್ಪಡುತ್ತಿದ್ದವು. ಅಲ್ಲೊಂದು ಸಮುದಾಯ ಆದರ್ಶಪ್ರಾಯವಾಗಿ ಅರಣ್ಯ ಕುಟೀರಗಳಲ್ಲಿ ಪ್ರಾಚೀನ ಋಷಿಗಳು, ಕೆಲವು ಕಾಡಿನ ನಿವಾಸಿಗಳು ಮತ್ತು ಸರೋವರ ತೀಕ್ಷ್ಣಬುದ್ಧಿ ಹೊಂದಿದ್ದು ಅಚ್ಚುಕಟ್ಟಾಗಿ ನುಡಿಗಟ್ಟು ಮಾಡಬಹುದಾಗಿತ್ತು. ಅವರೆಷ್ಟು ಸುಶಿಕ್ಷಿತರಾಗಿದ್ದರೆಂದರೆ, ವಿವಿಧ ವಿಷಯಗಳ ಬಗ್ಗೆ ಸಂವಾದ ನಡೆಸುವಷ್ಟು ಸಮರ್ಥರಿದ್ದರು. ಮಾನವ ಜಗತ್ತಿನ ಅನೇಕ ತಜ್ಞರು ತಮ್ಮ ಅಲ್ಪ ಪಾಂಡಿತ್ಯವನ್ನೇ ತತ್ಪರತೆಯಿಂದ ಬೀಗುತ್ತಿದ್ದವರೂ ಅಸೂಯೆಪಡುವಂತೆ, ಇತರ ಕ್ಷೇತ್ರಗಳನ್ನು ನೋಡದಂತೆ ಪಠ್ಯದ ಚಿತ್ರಣ ಕಂಡುಬರುತ್ತದೆ. ಇದರ ಮುಖ್ಯ ಉದ್ದೇಶವೇನೆಂದರೆ, ನೈಸರ್ಗಿಕ ಜಗತ್ತನ್ನು ಮಾನವ ಜಗತ್ತಿಗೆ ಸ್ಥಳಾಂತರಿಸಿ ಒಂದು ವಿಶೇಷ ಆಕರ್ಷಣೆ ಹಾಗೂ ಆಸಕ್ತಿಯನ್ನು ಮೂಡಿಸಿ ಶಿಕ್ಷಣ ಅಥವಾ ಕಲಿಕೆಯನ್ನು ಪರಿಣಾಮಕಾರಿಯಾಗಿ ಒದಗಿಸುವುದು.[73] ಇದು ವಿಷ್ಣುಶರ್ಮರು ಯೋಜಿಸಿರುವ ಒಂದು ವಿಶಿಷ್ಟ ಬೋಧನಾ ವಿಧಾನವಾಗಿರುತ್ತದೆ.



**72. Chandra Rajan,** VISNU SARMA,(Eng, translation), Introduction-pp-xxxix,1993. Penguin Random House India Pvt. Ltd., 7th Floor, Infantry Tower, C, DLF Cyber City, Gurgaon-122002, Haryana, India

**73. Chandra Rajan,** VISNU SARMA The Panchatantra (English),(1993). Introduction- PP-39-40. Penguin Random House India Pvt.Ltd. 7thFloor, Infantry Tower C,DLF Cyber City, Gurgaon-12202.Haryana, India.

# ಅಧ್ಯಾಯ – 4

## ಮನಶ್ಶಕ್ತಿಯ ವ್ಯಾಪಕ ಸ್ವರೂಪ – ಕಲಿಕೆ ಮತ್ತು ವ್ಯಕ್ತಿತ್ವದ ಮೇಲೆ ಅದರ ಪ್ರಭಾವ

## ಅಧ್ಯಾಯ:– 4–1. ಉನ್ನತ ಮಟ್ಟದ ಮನೋವ್ಯಾಪಾರಗಳು

ಮಾನವನ ಮನಶ್ಶಕ್ತಿ ಕಣ್ಣಿಗೆ ಕಾಣದಿದ್ದರೂ, ಅನೇಕ ರೂಪದಲ್ಲಿ ಅವನ ವರ್ತನೆಯ ಮೇಲೆ ಪ್ರಭಾವ ಬೀರುತ್ತಿರುತ್ತದೆ. ಕಲ್ಪನೆ, ನೆನಪು, ಆಲೋಚನೆ ಇವುಗಳನ್ನು ಉನ್ನತ ಮನಶ್ಶಕ್ತಿಗಳು ಎಂದು ಕರೆಯುತ್ತಾರೆ. ಇವುಗಳು ಇನ್ನಿತರ ವ್ಯಾಪಾರಗಳ ಮೇಲೂ ತಮ್ಮ ಪ್ರಭಾವ ಬೀರುತ್ತವೆ. ನಮ್ಮ ದೃಷ್ಟಿ ಧ್ಯೇಯಗಳು, ಆರ್ಜಿತ ಆಸಕ್ತಿಗಳು, ಮನೋಭಾವಗಳು, ಸಂವೇದನೆಯ ಸ್ವರೂಪ – ಈ ಎಲ್ಲ ರೀತಿಯ ಮನೋವ್ಯಾಪಾರಗಳೂ ಉನ್ನತ ಮನಶ್ಶಕ್ತಿಯಿಂದ ಪ್ರಚೋದಿತವಾಗುತ್ತವೆ. ಅದೇ ರೀತಿ ನಮ್ಮ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದ ನಡೆನುಡಿಗಳು, ಅಭ್ಯಾಸಗಳು, ಕೌಶಲ್ಯಗಳು, ಗುಣಶೀಲಗಳು – ಈ ಎಲ್ಲ ವರ್ತನೆಗಳಲ್ಲೂ ಇವುಗಳ ಪ್ರಭಾವವನ್ನು ಕಾಣಬಹುದು. ವ್ಯಕ್ತಿ ಸಮಾಜ ಜೀವನದಲ್ಲಿ, ರಾಷ್ಟ್ರ ಮತ್ತು ಮಾನವ ಬಾಂಧವ್ಯದಲ್ಲಿ ವಹಿಸುವ ಪಾತ್ರವೂ ಈ ಉನ್ನತ ಮನಶ್ಶಕ್ತಿಗಳ ಪ್ರಭಾವದಿಂದಲೇ ರೂಪುಗೊಳ್ಳುವುದು.[1]

सुजीर्णमन्नं, सुविचक्षणःसुतः

सुशासिता स्त्री नृपतिः सुसेवितः।

सुचिन्त्यचोक्तं सुविचार्य यत्कृतं

सुदीर्घकालेऽपि न हि याति विक्रियाम् ॥[2]

ಅಂದರೆ "ಚೆನ್ನಾಗಿ ಜೀರ್ಣವಾದ ಆಹಾರ, ಒಳ್ಳೆಯ ಬುದ್ಧಿವಂತ ಮಗ, ಚೆನ್ನಾಗಿ ತಿದ್ದಿದ ಹೆಣ್ಣು, ಸರಿಯಾದ ರೀತಿಯಲ್ಲಿ ಸೇವಿಸಿದ ರಾಜ, ಚೆನ್ನಾಗಿ ಯೋಚಿಸಿ ನುಡಿದ ಮಾತು, ವಿಚಾರಿಸಿ ಮಾಡಿದ ಕಾರ್ಯ, ಇವು ಎಂದೆಂದೂ ಕೆಟ್ಟ ಪರಿಣಾಮ ಬೀರಲಾರವು. ವ್ಯಕ್ತಿಯ ಶೈಕ್ಷಣಿಕ ಬೆಳವಣಿಗೆಯ ದೃಷ್ಟಿಯಿಂದ ಅವುಗಳು ಅತ್ಯಂತ ಪರಿಣಾಮಕಾರಿಯೆನಿಸುವ ಮನೋವ್ಯಾಪಾರಗಳು.

ಒಂದು ವ್ಯಕ್ತಿಯ ಮನಶ್ಶಕ್ತಿಯನ್ನು ಪತ್ತೆಹಚ್ಚುವುದು, ಅವನ ಜ್ಞಾಪಕಶಕ್ತಿಯಿಂದ, ಕಲ್ಪನೆಯಿಂದ ಮತ್ತು ಆಲೋಚನೆ ವಿವೇಚನೆಗಳಿಂದ. ಈ ದೃಷ್ಟಿ ಆಧುನಿಕ ಸಂಶೋಧನೆಗಳ ಬೆಂಬಲವನ್ನು ಗಳಿಸಿದೆ. ಒಬ್ಬನ ಪ್ರತಿಭೆಯನ್ನು ಅಳೆಯುವಾಗ ಈ ಮೂರನ್ನೂ ಪರಿಗಣಿಸುವುದು ಬಹಳ ಮುಖ್ಯ ಎಂಬುದು ಸ್ಥಿರಪಟ್ಟಿದೆ. ಈ ಎಲ್ಲ ಕಾರಣಗಳಿಂದ ಇವು ಮೂರೂ ಉನ್ನತ ಮಟ್ಟದ ಮನೋವ್ಯಾಪಾರಗಳೆಂದು ಪರಿಗಣಿತವಾಗಿವೆ.[3]

---

1. **ವೀರಪ್ಪ. ಎನ್.ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–13, ಪು–324.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
2. **ನಾರಾಯಣ ಪಂಡಿತರ ಹಿತೋಪದೇಶ,** ಮಿತ್ರಲಾಭ–22
3. **ವೀರಪ್ಪ. ಎನ್.ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–13, ಪು–324,325.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

ಶಿಕ್ಷಣ ಕೇವಲ ಮನಶ್ಶಕ್ತಿಯ ಬೆಳವಣಿಗೆಗೆ ಮಾತ್ರವಲ್ಲವೆಂಬುದನ್ನು ಅಲ್ಲಗಳೆಯುವಂತಿಲ್ಲ. ಆದರೂ ಅವನ ಸಾಮಾಜಿಕ, ನೈತಿಕ ಮತ್ತು ಸಂವೇದನಾ ಜೀವನದ ಮೇಲೆ ಆ ಮನಶ್ಶಕ್ತಿ ಬಹು ಮುಖ್ಯ ಪಾತ್ರ ವಹಿಸುತ್ತದೆ. ಈ ಕಾರಣದಿಂದಲೇ ಎಲ್ಲ ಕಾಲದ ಶಿಕ್ಷಣವೇತ್ತರೂ ಅದರ ಬೆಳವಣಿಗೆಗಾಗಿ ಹೆಚ್ಚಿನ ಆಸ್ಥೆ ತೋರುತ್ತಾ ಬಂದಿದ್ದಾರೆ. ವ್ಯಕ್ತಿ ಸಮಾಜ ಜೀವನದಲ್ಲಿ, ನೀತಿವಂತನಾಗಿ, ಸುಸಂಸ್ಕೃತನಾಗಿ ಬಾಳುವಾಗ ಮೇಲಿನ ಮೂರು ಉನ್ನತ ಮನೋವ್ಯಾಪಾರಗಳು ವಹಿಸುವ ಪಾತ್ರದ ಪ್ರಾಮುಖ್ಯತೆ ತಾನಾಗಿ ಸ್ಪಷ್ಟಪಡುತ್ತದೆ. ಶಾಲೆ ಅಥವಾ ಆಶ್ರಮದ ಜೀವನದಲ್ಲಿ ಮಕ್ಕಳ ವ್ಯಕ್ತಿತ್ವದ ವಿವಿಧ ಮುಖಗಳನ್ನು ರೂಪಿಸಿ ಬೆಳೆಸುವಾಗ ಆ ಮನಶ್ಶಕ್ತಿಗಳನ್ನು ಹೆಜ್ಜೆ ಹೆಜ್ಜೆಗೂ ಬಳಸಿಕೊಳ್ಳಬೇಕಾಗುತ್ತದೆ. ಮಾನಸಿಕ ಚಿಂತನೆಯು ಮಾನವಚಿಂತನೆ, ನಡವಳಿಕೆ, ಬೆಳವಣಿಗೆ, ವ್ಯಕ್ತಿತ್ವ, ಭಾವನೆ, ಪ್ರೇರಣೆ ಮತ್ತು ಹೆಚ್ಚಿನದನ್ನು ಅಧ್ಯಯನಮಾಡುವ ವ್ಯಾಪಕ ಕ್ಷೇತ್ರವಾಗಿದೆ. ಮನೋವಿಜ್ಞಾನದ ಉತ್ಕೃಷ್ಟ ಮತ್ತು ಆಳವಾದ ತಿಳುವಳಿಕೆಯನ್ನು ಪಡೆದುಕೊಳ್ಳುವುದು ಜನರಿಗೆ ಅಥವಾ ವ್ಯಕ್ತಿಗೆ ತಮ್ಮದೇ ಕಾರ್ಯಗಳ ಒಳನೋಟಗಳನ್ನು ಸಾಧಿಸಲು ಸಹಕಾರ ಮಾಡುತ್ತದೆ. ಮನಶ್ಶಕ್ತಿಯನ್ನು ಸದ್ಬಳಕೆ ಮಾಡಿಕೊಂಡು ಸದ್ಗುಣಗಳಿಂದ ಕೂಡಿದ ಸುಂದರ ವ್ಯಕ್ತಿತ್ವ ಬೆಳೆಸಿಕೊಳ್ಳಬೇಕು. ಭಾಗವತದಲ್ಲಿ ಒಂದು ಒಳ್ಳೆಯ ಮಾತಿದೆ:-

इन्द्रियैर्विषयाकृष्टैराक्षिप्तं ध्यायतां मनः ।

चेतनां हरते बुद्धेः स्तम्बस्तोयमिव ह्रदात् ॥[4]

ಅಂದರೆ ವಿಷಯ ಸುಖಗಳ ಆಕರ್ಷಣೆಗೊಳಪಟ್ಟ ಇಂದ್ರಿಯಗಳಿಂದ ಧ್ಯಾನಮಾಡುವವರ ಮನಸ್ಸು ಚಂಚಲವಾಗುತ್ತದೆ ಮತ್ತು ಮಡುವಿನಿಂದ ನೀರನ್ನು ಜೊಂಡುಹುಲ್ಲು ಹೀರುವಂತೆ ಬುದ್ಧಿಯ ಚೈತನ್ಯ ಶಕ್ತಿಯನ್ನು ಅಪಹರಿಸುತ್ತದೆ.

ಪಂಚತಂತ್ರದಲ್ಲಿ ವಿಷ್ಣುಶರ್ಮರು ರಾಜಪುತ್ರರಿಗೆ ಅವರ ಮನಶ್ಶಕ್ತಿಯ ಬೆಳವಣಿಗೆಗೆ ಸಾಕಷ್ಟು ಪ್ರೋತ್ಸಾಹ ನೀಡಿ, ಕೇವಲ ಆರುತಿಂಗಳುಗಳೊಳಗಾಗಿ, ಬದುಕಿನ ವ್ಯವಹಾರ ಜ್ಞಾನ, ರಾಜನೀತಿ ಜ್ಞಾನ ಪಡೆದು ಪವಾಡ ಸದೃಶ ಬದಲಾಗುವಂತೆ ಪ್ರೇರೇಪಿಸಿದ್ದರು. ವಿವಿಧ ಸರಳ ಸುಂದರ ಕಥೆಗಳ ಮೂಲಕ ವ್ಯವಹಾರ ಜ್ಞಾನ ಕಲಿಸಿದರು. ವಿಷ್ಣುಶರ್ಮರು ರಾಜಪುತ್ರರಿಗೆ ಜ್ಞಾನ ನೀಡಿದ್ದಲ್ಲದೆ, ಜ್ಞಾನದ ಮಹತ್ವ ಅರಿಯುವಂತೆ ಉತ್ತಮ ಸನ್ನಿವೇಶಗಳನ್ನು ರೂಪಿಸಿ, ಪಶುಪಕ್ಷಿಗಳಿಗೆ ಮಾನವ ವರ್ತನೆಗಳನ್ನು ಲೇಪಿಸಿ ಒಂದು ಚಮತ್ಕಾರಯುತ ತಂತ್ರವನ್ನು ಅಳವಡಿಸಿ, ಆ ಜ್ಞಾನವನ್ನು ಯಾವಾಗ, ಎಲ್ಲಿ ಮತ್ತು ಹೇಗೆ ಬಳಸಿಕೊಳ್ಳಬೇಕೆಂಬುದನ್ನೂ ಕಲಿಸಿದ್ದರು. ಇಂಥಹ ಸಾಧನೆಗೆ ಕಾರಣ ಮನಶ್ಶಕ್ತಿಯೇ ಎಂಬುದು ಬಹಳ ಸ್ಪಷ್ಟವಾಗಿ ಗೋಚರಿಸುತ್ತದೆ.

4. ಶ್ರೀಮದ್ಭಾಗವತಮಹಾಪುರಾಣ, - 4-22-30

ಇಲ್ಲಿ ಕಲಿಸುವವರ ದೃಢ ಸಂಕಲ್ಪ ಕಲಿಯುವವರ ಇಚ್ಛಾಶಕ್ತಿ ಇವೆರಡಕ್ಕೂ ಮನಶ್ಶಕ್ತಿಯೇ ಆಗಿರುತ್ತದೆ. ಇಂತಹ ಮನಶ್ಶಕ್ತಿಯನ್ನು ಕುರಿತ ಕ್ರಮಬದ್ಧವಾದ, ಸುವ್ಯವಸ್ಥಿತ ಜ್ಞಾನವೇ ಮನೋವಿಜ್ಞಾನ, ಇದರ ಸದ್ಬಳಕೆ ಮಾಡಿಕೊಳ್ಳುವ ಪರಿಜ್ಞಾನವೇ ಶೈಕ್ಷಣಿಕ ಮನೋವಿಜ್ಞಾನ.



### 4-2. ಆಲೋಚನೆ-ವಿವೇಚನೆ-ಆಲೋಚಿಸದೆ ತೀರ್ಮಾನಕ್ಕೆ ಬರುವುದರ ಅಪಾಯ

ವೈಜ್ಞಾನಿಕ ನೆಲೆಗಟ್ಟಿನಿಂದ ಮನಸ್ಸು, ಪ್ರಜ್ಞೆ, ವರ್ತನೆಗಳ ಹಾಸುಬೀಸನ್ನು ಮನೋವಿಜ್ಞಾನವು ತನ್ನ ಅಧ್ಯಯನದ ವ್ಯಾಪ್ತಿಗೊಳಪಡಿಸುತ್ತದೆ. ಇವುಗಳಲ್ಲಿ ಅನೇಕ ಕ್ರಿಯೆಗಳು, ಪರಿಕಲ್ಪನೆಗಳು, ಸಂರಚನೆಗಳು ಕಂಡುಬರುತ್ತವೆ. ಪ್ರವೃತ್ತಿ, ಅಭಿಪ್ರೇರಣೆ, ಆಲೋಚನೆ, ಕಲಿಕೆ, ಸೃಜನಶೀಲತೆ ಸಂವೇದನೆ, ಬುದ್ಧಿ ಶಕ್ತಿ, ಗತಿಕೌಶಲ ಸ್ಮೃತಿ, ವಿಸ್ಮೃತಿ-ಹೀಗೆ ಹಲವು ಹತ್ತು ವಿಚಾರಗಳ ಪಟ್ಟಿಯನ್ನೇ ಮಾಡಬಹುದು.

ನಮಗೆ ದೊರಕುವ ಪ್ರತ್ಯಕ್ಷಾನುಭವಗಳು ಇಂದ್ರಿಯಾನುಭವದ ಮೂಲಕ ಭಾವನೆಗಳಾಗಿ ಮನಸ್ಸಿನಲ್ಲಿ ಸೇರಿಕೊಳ್ಳುತ್ತವೆ. ಅವುಗಳು ಹಾಗೆಯೇ ಸುಮ್ಮನೆ ಉಳಿಯದೆ ಒಂದಕ್ಕೊಂದು ಸಂಬಂಧ ಕಲ್ಪಿಸಿಕೊಂಡು ನೂತನ ಜ್ಞಾನದ ನಿರ್ಮಾಣದಲ್ಲಿ ತೊಡಗುತ್ತವೆ. ಹೊಸ ಜ್ಞಾನವನ್ನು ಪಡೆಯಲು ಉಂಟಾಗುವ ಆ ಉನ್ನತ ಮಟ್ಟದ ಮನೋವ್ಯಾಪಾರವೇ "ಆಲೋಚನೆ". ಅದಕ್ಕೆ ಸ್ಮರಣೆ ಮತ್ತು ಕಲ್ಪನೆ ಸಹಾಯ ಮಾಡುವ ಮನೋವ್ಯಾಪಾರಗಳು. ಆಲೋಚನೆ ವಂಶಗತವಾಗಿ ಬರುವ ಬುದ್ಧಿ ಶಕ್ತಿಗೆ ಸಂಬಂಧಿಸಿದ ಪ್ರಕ್ರಿಯೆ.[5] ಸನ್ನಿವೇಶಗಳಲ್ಲಿ ಕಂಡುಬರುವ ಬದಲಾವಣೆಗೆ ಹೊಂದಿಕೊಳ್ಳುವ ಅಗತ್ಯ ನಿರಂತರವೂ ಇರುತ್ತದೆ. ಪ್ರಾಣಿಗಳಲ್ಲಿ ಅಷ್ಟಾಗಿ ಕಂಡುಬರದ ಆಲೋಚನೆ ಮಾನವನಲ್ಲಿ ಎದುರಾಗುವ ಸಮಸ್ಯೆಗಳನ್ನು ಬಿಡಿಸಿಕೊಳ್ಳುವಾಗ ನಿರ್ದಿಷ್ಟ ಪಾತ್ರ ವಹಿಸುತ್ತದೆ. ಸನ್ನಿವೇಶಗಳೊಡನೆ ಹೊಂದಾಣಿಕೆ ಮಾಡಿಕೊಳ್ಳುವಾಗಲೂ ಆಲೋಚನೆ ಮಾರ್ಗ ತೋರಿಸುವುದು. ವಿಧವಿಧವಾದ ಸಮಸ್ಯೆಗಳು ನಮ್ಮ ನಿತ್ಯಜೀವನದಲ್ಲಿ ಏಳುತ್ತಲೇ ಇರುತ್ತವೆ. ಇದರ ಜೊತೆಗೆ ವಾತಾವರಣದ ಎಡರು ತೊಡರುಗಳೂ ಕಾದಿರುತ್ತವೆ. ಸಾಮಾಜಿಕ ಸಮಸ್ಯೆಗಳೂ ಎದುರಾಗುತ್ತವೆ. ಅವುಗಳನ್ನೆಲ್ಲಾ ಬಿಡಿಸಿ ಅಗತ್ಯವಾದಂತೆ ನಡೆದರೆ ನಾವು ಸುಖವಾಗಿ ಬದುಕಿ ಬಾಳಬಹುದು. ಹೀಗಾಗಿ ಜೀವನದಲ್ಲಿ ಹುಟ್ಟಿಕೊಳ್ಳುವ ಎಲ್ಲ ಎಡರು ತೊಡರುಗಳನ್ನೂ ಪರಿಹರಿಸಿ ಯಶಸ್ವಿಯಾಗಿ ಬಾಳಲು "ಆಲೋಚನೆ" ಮಾನವನಿಗೆ ನಿತ್ಯ ನಿರಂತರ ನೆರವಾಗುವ ವರಪ್ರಸಾದವಾಗಿದೆ.ಸರಿಯಾಗಿ ಆಲೋಚಿಸಿ, ವಿಚಾರಿಸಿ ಮಾಡಿದ ಕಾರ್ಯದ ಬಗ್ಗೆ ಕವಿ ಭಾರವಿ ಒಂದು ಒಳ್ಳೆಯ ಸೂಕ್ತಿಯನ್ನು ಹೇಳುತ್ತಾನೆ.

सहसा विदधीत न क्रियां अविवेकः परमापदां पदम् ।

वृणुतेहि विमृश्यकारिणं गुणलुब्धाः स्वयमेव संपदः ॥[6]

---

5. **ವೀರಪ್ಪ. ಎನ್.ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-15, ಪು-364,365.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

6. भारवि विरचित किरातार्जुनीयम् - 2-30

ಅಂದರೆ ಯಾವ ಕಾರ್ಯವನ್ನೇ ಆಗಲೀ, ವಿಚಾರಿಸದೇ ಮಾಡಬಾರದು ಅವಿವೇಕವೆಂಬುದು ಆಪತ್ತುಗಳಿಗೆಲ್ಲಾ ಮೂಲ.ವಿಮರ್ಶಿಸಿ ಕೆಲಸಮಾಡುವ ಗುಣವಂತನೆಡೆ ಸಂಪತ್ತುಗಳು ತಾನಾಗಿ ಬಂದು ನೆಲೆಸುತ್ತವೆ. ಈ ಮಾತು. ಅಕ್ಷರಶಃ ನಿಜ. ಈ ಆಲೋಚನಾ ಶಕ್ತಿಯನ್ನು ರಾಜಕುಮಾರರಲ್ಲಿ ಬೆಳೆಸಲೆಂದೇ ವಿಷ್ಣುಶರ್ಮರು ತಮ್ಮ ಪಂಚತಂತ್ರದಲ್ಲಿ, ಅತ್ಯಂತ ವ್ಯವಸ್ಥಿತವಾಗಿ ಶೈಕ್ಷಣಿಕ ಸನ್ನಿವೇಶಗಳನ್ನು ಮತ್ತು ಸಮಯೋಚಿತವಾದ ದೃಷ್ಟಾಂತಗಳನ್ನು ಒದಗಿಸಿ ಪ್ರೇರೇಪಿಸಿದ್ದಾರೆ.

ಆಲೋಚನೆಯ ಕಾರ್ಯ ಮುಖ್ಯವಾಗಿ ಮಾನಸಿಕವಾದದ್ದು. ಅದನ್ನು ನೋಡಿ ತಿಳಿಯುವಂತಿಲ್ಲ. ಆದರೆ ಅದರಿಂದಾಗುವ ಅನುಭವವನ್ನು ನಾವೇ ಅರಿತುಕೊಳ್ಳಬಹುದು. ಇದು ನರಮಂಡಲಕ್ಕೆ ಸಂಬಂಧಿಸಿದ್ದರೂ ಕೆಲವು ನಿರ್ದಿಷ್ಟ ರೀತಿಯ ದೈಹಿಕ ವರ್ತನೆಗಳನ್ನು ಕಾಣಿಸುತ್ತದೆ. ಉದಾಹರಣೆಗೆ: ಮಾಂಸಖಂಡಗಳು ಬಿಗಿಯಾಗುವುದು, ಕಣ್ಣಿನ ನೋಟ ಕೇಂದ್ರೀಕರಿಸಿದಂತೆ ಕಾಣುವುದು ಇತ್ಯಾದಿ. ಕೆಲವೊಮ್ಮೆ ಆಲೋಚನೆಯ ಫಲವಾಗಿ ಮಾಡುವ ರಸಾಭಾವವೂ ದೈಹಿಕ ವರ್ತನೆಗಳಲ್ಲಿ ಕಾಣಿಸಿಕೊಳ್ಳುವುದು. ಉದಾಹರಣೆಗೆ:– ತೃಪ್ತಿಯಾಗುವಂತೆ ಆಲೋಚನೆ ನಡೆದರೆ ಮುಖದಲ್ಲಿ ಮಂದಹಾಸ, ವಿನೂತನ ಅಂಶ ಗೋಚರಿಸಿದರೆ ನಗುವುದು, ಅಹಿತವಾಗಿದ್ದಲ್ಲಿ ಜೋಲು ಮುಖ, ಸಮಸ್ಯೆ ಆಗ್ರಹದ್ದೆನಿಸಿದರೆ ಮುಖದಲ್ಲೂ ಆ ಭಾವ, ಕೋಪ ಇತ್ಯಾದಿಗಳನ್ನು ಗಮನಿಸಬಹುದು.[7] ಇಲ್ಲಿ ಬಹಳ ಮುಖ್ಯವಾಗಿ ಮನಸ್ಸು ಹತೋಟಿಯಲ್ಲಿರಬೇಕು.

अवशेन्द्रियचित्तानां हस्तिस्नानमिव क्रिया ।

दुर्भगाभरणप्रायो ज्ञानं भारः क्रियां विना ॥[8]

ಅಂದರೆ ಇಂದ್ರಿಯಗಳೂ ಮನಸ್ಸೂ ವಶದಲ್ಲಿರದವರಿಗೆ ಧಾರ್ಮಿಕ ಕ್ರಿಯೆಗಳು ಆನೆಗೆ ಮಾಡಿಸಿದ ಸ್ನಾನದಂತೆ(ವ್ಯರ್ಥ); ಯೋಗ್ಯವಾದ ಕೃತಿಯಿಲ್ಲದ ಜ್ಞಾನವು ವಿಧವೆಯು ಧರಿಸಿದ ಒಡವೆಗಳಂತೆ ಬರಿ ಹೊರೆ.

ಆಲೋಚನೆಗೂ ಸಹ ಇತರ ಎಲ್ಲ ಮಾನಸಿಕ ವ್ಯಾಪಾರಗಳಂತೆ ಒಂದು ಸನ್ನಿವೇಶದ ಪ್ರಚೋದನೆ ಅಗತ್ಯವಾದುದು. ಆಲೋಚನೆ ಸಾಗುವ ಮಾರ್ಗ ಮತ್ತು ಉದ್ದೇಶಗಳ ಆಧಾರದ ಮೇಲೆ ನಾಲ್ಕು ವಿಧವಾದ ಆಲೋಚನೆಗಳನ್ನು ಗುರುತಿಸಬಹುದು.

---

7. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–15, ಪು–365,366.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
8. **ನಾರಾಯಣ ಪಂಡಿತರ ಮಿತ್ರಲಾಭ,** ಶ್ಲೋ – 18

**1. ಆಕಸ್ಮಿಕ ಆಲೋಚನೆ:**

ಅನುಭವಗಳು ಎಡೆ ಸಿಕ್ಕಿದಂತೆ ಸಂಬಂಧ ಕಲ್ಪಿಸಿಕೊಳ್ಳುತ್ತವೆ. ಕಾರ್ಯಕಾರಣ ದೃಷ್ಟಿಗಳು ಆ ಸಂಬಂಧವನ್ನು ನಿರ್ದೇಶಿಸುವುದಿಲ್ಲ. ಇಂತಹ ಆಲೋಚನೆಯಿಂದ ನಮಗೆ ಯಾವ ಹೊಸ ಜ್ಞಾನವೂ ಉದ್ಭವಿಸುವುದಿಲ್ಲ. ಯಾವ ಗುರಿಯನ್ನೂ ಮುಟ್ಟುವುದಿಲ್ಲ. ಯಾವ ಶಿಕ್ಷಣವೂ ದೊರಕುವುದಿಲ್ಲ. ಹಳೆಯ ಅನುಭವಗಳನ್ನು ಮಾತ್ರ ಸ್ಮರಣೆಗೆ ತಂದುಕೊಳ್ಳಬಹುದು. ಇದೆಲ್ಲ ಕಾರಣಗಳಿಂದ ಆಕಸ್ಮಿಕ ಆಲೋಚನೆಯನ್ನು ಸೋಮಾರಿಯ ಆಲೋಚನೆಯೆಂದೂ ಕರೆಯಬಹುದು.

**2. ಭ್ರಾಂತಿಯ ಆಲೋಚನೆ:**

ಮತ್ತೊಬ್ಬರು ಆಲೋಚಿಸಿ ತೀರ್ಮಾನಿಸಿರುವ ಅಂಶವನ್ನು ಅರಿತಾಗ, ಇದು ನಾವೇ ನಿರ್ದರಿಸಿದ್ದೆಂದು ಕೆಲವರು ಭಾವಿಸುತ್ತಾರೆ. ಇದು ಆಲೋಚನೆಯೇ ಅಲ್ಲ.

**3. ಜ್ಞಾನವರ್ಧಕ ಆಲೋಚನೆ:**

ಇದು ಹಿಂದಿನ ಅನುಭವಗಳ ಜೊತೆಗೆ ಹೊಸದೊಂದನ್ನು ಸೇರಿಸಿಕೊಳ್ಳುವುದು. ಹೊಸ ಜ್ಞಾನವು ನಮ್ಮ ಮನಸ್ಸಿಗೆ ಬರುವಾಗ ಹಳೆಯದರೊಡನೆ ಸಮನ್ವಯವಾಗಿ ಜ್ಞಾನದ ಒಟ್ಟು ಮೊತ್ತ ಅಧಿಕವಾಗುತ್ತದೆ. ಹೀಗೆ ಹಳೆಯದು ಹೊಸದರೊಡನೆ ಸಮನ್ವಯಗೊಂಡು ಜ್ಞಾನವರ್ಧಿಸುವಾಗ ಆಲೋಚನೆ ನಡೆಯಬೇಕಾಗುತ್ತದೆ. ಇದನ್ನು ಜ್ಞಾನಪೂರಕ ಆಲೋಚನೆಯೆಂದೂ ಕರೆಯಬಹುದು.

**4. ಉದ್ದೇಶಪೂರ್ವಕ ಆಲೋಚನೆ:**

ಯಾವುದಾದರೊಂದು ಸಮಸ್ಯೆ ಎದುರಾದಾಗ ಒಂದು ನಿರ್ದಿಷ್ಟ ತೀರ್ಮಾನಕ್ಕೆ ಬರಲು ಕೆಲವೊಮ್ಮೆ ಉದ್ದೇಶಪೂರ್ವಕವಾಗಿ ಪ್ರಯತ್ನಿಸುತ್ತೇವೆ. ಈಗಾಗಲೇ ಗೊತ್ತಿರುವ ಹಳೆಯ ಅನುಭವಗಳನ್ನು ಸ್ಮರಣೆಗೆ ತಂದುಕೊಂಡು ಆಲೋಚನೆ ನಡೆಸಿ ಹೊಸದೊಂದು ವಿಷಯ ತಿಳಿದುಕೊಂಡು ಸಮಸ್ಯೆಗೆ ಪರಿಹಾರವನ್ನು ಕಾಣುತ್ತೇವೆ. ಈ ರೀತಿಯ ಆಲೋಚನೆಯನ್ನೇ ಉದ್ದೇಶಪೂರ್ವಕ ಅಥವಾ ಸಮಸ್ಯಾಪರಿಹಾರಕ ಆಲೋಚನೆ ಎನ್ನಬಹುದು.[9] ಚರಿತ್ರೆ, ಕಥೆ, ಕಾದಂಬರಿಗಳಲ್ಲಿ ಹಿಂದಿನವರ ಜೀವನ ಪರಿಚಯ, ಅವರ ಪರಾಕ್ರಮ ಅಥವಾ ಸಾಧನೆ ಇವುಗಳ ವಿಚಾರ ಹೆಚ್ಚಾಗಿದ್ದರೆ, ಸ್ವತಂತ್ರವಾಗಿ ಆಲೋಚಿಸಿ ಸಮಸ್ಯೆಗಳನ್ನು ಬಿಡಿಸುವ ಅವಕಾಶ

---

9. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–15, ಪು–367–369. (1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

ದೊರಕುತ್ತದೆ. ಶಿಕ್ಷಕರು ಈ ಬಗ್ಗೆ ವಿಶೇಷ ಗಮನಹರಿಸಿ, ಮಕ್ಕಳಲ್ಲಿ ಉತ್ತಮ ಆಲೋಚನಾ ಶಕ್ತಿಯನ್ನು ಬೆಳೆಸಲು ಪ್ರೋತ್ಸಾಹಿಸಿ ಮುಂದೆ ಜೀವನದಲ್ಲಿ ಬರಬಹುದಾದ ಸಮಸ್ಯೆಗಳನ್ನು ಸ್ವಂತ ಆಲೋಚನಾ ಶಕ್ತಿಯಿಂದ ಬಿಡಿಸಿಕೊಳ್ಳುವಂತೆ ಪ್ರೇರೇಪಿಸಬೇಕು.

ಪಂಚತಂತ್ರದಲ್ಲಿ, ವಿಷ್ಣುಶರ್ಮರು ಒಂದು ವಿಶೇಷವಾದ ತಾಂತ್ರಿಕತೆಯನ್ನು ಬಳಸಿ, ಆಕರ್ಷಕ ನೀತಿಕಥೆಗಳ ಮೂಲಕ ರಾಜಕುಮಾರರಲ್ಲಿ ಉತ್ತಮ ಆಲೋಚನಾ ಶಕ್ತಿಯನ್ನು ಬೆಳೆಸಿದ್ದಾರೆ. ಉತ್ತಮ ಆಲೋಚನೆಯಿಂದಲೇ ರಾಜಕುಮಾರರು ಪ್ರಾಣಿಪಶುಪಕ್ಷಿಗಳೇ ಮಾನವರಂತೆ ವರ್ತಿಸುವಾಗ, ಮಾನವರಾದ ನಾವು ಹೀಗಿದ್ದೀವಲ್ಲಾ!! ಎಂದು ಸ್ವಯಂ ಮೌಲ್ಯಮಾಪನ ಮಾಡಿಕೊಂಡು ಇದು ಒಂದು ನಾಚಿಕೆಯ ವಿಷಯ ಎಂದು ಆಲೋಚನೆ ನಡೆಸಿದ್ದರಿಂದಲೇ, ಬಹಳ ಒಳ್ಳೆಯ ಪರಿವರ್ತನೆ ಹೊಂದಿ, ಶಾಸ್ತ್ರಗಳನ್ನು ಕಲಿಯಲು ಮುಂದಾದರು.

ಮನೋವ್ಯಾಪಾರದಲ್ಲೆಲ್ಲಾ ಅತ್ಯುನ್ನತ ಮಟ್ಟದ್ದೆಂದರೆ ಅದೇ "ವಿವೇಚನೆ" ಉದ್ದೇಶಪೂರ್ವಕವಾಗಿ ಆಲೋಚನೆಯಲ್ಲಿ ತೊಡಗುವ ಸಂದರ್ಭದಲ್ಲಿ ನಾವು ಮನಸೋಇಚ್ಛೆ ಮುಂದುವರಿಯುವಂತಿಲ್ಲ. ನಮ್ಮ ಹಿಂದಿನ ಅನುಭವಗಳ ಆಧಾರದ ಮೇಲೆ ಆಲೋಚಿಸಿದರೂ ಕುರುಡರಂತೆ ತೀರ್ಮಾನಕ್ಕೆ ಬರುವಂತಿಲ್ಲ. ಸಂಬಂಧ ಕಲ್ಪಿಸುವಾಗ ಸರಿತಪ್ಪುಗಳನ್ನು ಹೆಜ್ಜೆ ಹೆಜ್ಜೆಗೂ ವಿವೇಚನೆ ನಡೆಸಿ ಮುಂದುವರಿಯಬೇಕು. ಮಾತುಗಳನ್ನು ಆಡುವಾಗಲೂ ವಿವೇಚನೆಯಿಂದ ಸಮಯ ಸಂದರ್ಭಕ್ಕೆ ಹಿತವಾಗಿ, ಆತ್ಮೀಯವಾಗಿರಬೇಕು ರಾಮಾಯಣದಲ್ಲಿ ಇದರ ಬಗ್ಗೆ:-

सुलभाः पुरुषा राजन् सततं प्रियवादिनः ।

अप्रियस्य तु पथ्यस्य वक्ता श्रोता च दुर्लभः ॥[10]

"ಎಲೈ ರಾಜನೇ, ಯಾವಾಗಲೂ ಪ್ರಿಯವಾದ ಮಾತನ್ನು ಹೇಳುವ ವ್ಯಕ್ತಿಗಳು ಸುಲಭವಾಗಿ ಸಿಗುತ್ತಾರೆ. ಕೇಳಲು ಅಪ್ರಿಯವಾದರೂ, ಹಿತಕರವಾದ ಮಾತನ್ನು ಹೇಳುವವರು, ಹೇಳಿದರೆ ಕೇಳುವವರು ಸಿಗುವುದು ಕಷ್ಟ. ಕವಿ ಭಾರವಿ ಹೇಳುವಂತೆ "हितं मनोहारि च दुर्लभं वचः"[11] ಅಂದರೆ ಹಿತವೂ ಮನೋಹರವೂ ಆದ ಮಾತು ಸಿಗುವುದು ಕಷ್ಟ. ಹಿತವಾಗಿದ್ದರೆ ಮನೋಹರವಾಗಿರದು, ಮನೋಹರವಾಗಿದ್ದರೆ ಹಿತವಾಗಿರದು ಅಧರಕ್ಕೆ ಕಹಿ, ಉದರಕ್ಕೆ ಸಿಹಿ, ಔಷಧಿಯ ಹಾಗೆ-ಕುಡಿಯಲು ಕಹಿಯಾದರೂ, ಆರೋಗ್ಯಕ್ಕೆ ಹಿತಕರ. ಹೀಗೆ ಹಿರಿಯರ ಉಪದೇಶ, ಶಾಲೆಯಲ್ಲಿ ಪಾಠ-ಪ್ರವಚನಗಳು ಇತ್ಯಾದಿಗಳು ಕೇಳಲು

10. **ವಾಲ್ಮೀಕಿರಾಮಾಯಣ**-ಯುದ್ಧಕಾಂಡ-10-21.

11. **ಭಾರವಿಯ ಕಿರಾತಾರ್ಜುನೀಯ 1-4**

ಕಠೋರವಾಗಿದ್ದರೂ, ಅದರಂತೆ ನಡೆದಾಗ, ಹಿತಕಾರಿ. ಅದಕ್ಕೇ ಮಾತಿನಲ್ಲಿ ವಿವೇಚನೆ ಇರಬೇಕು.

ಯಾವುದೇ ಸಮಸ್ಯೆಯ ಪರಿಹಾರಕ್ಕೆ, ಮೊದಲು ಅದಕ್ಕೆ ಸಂಬಂಧಿಸಿದಂತೆ ಬೇಕಾದ ಅಂಶಗಳನ್ನು ಸಂಗ್ರಹಿಸಿ ವಾಸ್ತವಿಕ ರೀತಿಯಲ್ಲಿ ಆಲೋಚನೆ ನಡೆಸಬೇಕು. ಮುಂಜಾಗ್ರತೆಯೊಂದಿಗೆ ಸಮಸ್ಯೆಯನ್ನು ಸಮರ್ಥವಾಗಿ ಎದುರಿಸಲು ಯಾವ ಮಾರ್ಗ ಯೋಗ್ಯವೆಂಬುದನ್ನು ಅರಿತುಕೊಳ್ಳುವುದು ಬಹಳ ಮುಖ್ಯವಾದುದು. ಇಲ್ಲಿ ವಿವೇಚನೆ ಉತ್ತಮ ತೀರ್ಮಾನದೆಡೆಗೆ ಬರಲು ನೆರವಾಗುತ್ತದೆ.

ನಮ್ಮ ವಿವೇಚನೆ ಕಾರ್ಯೋನ್ಮುಖವಾಗುವ ಮಾರ್ಗವನ್ನು ಪ್ರಸಿದ್ಧ ಶಿಕ್ಷಣ ತಜ್ಞ ಜಾನ್ ಡ್ಯೂಯಿ ರವರು ಐದು ಹಂತಗಳಲ್ಲಿ ಸೂಚಿಸಿದ್ದಾರೆ.[12] ಇದನ್ನು ವಿವೇಚನೆಯ "ಪಂಚಸೋಪಾನ" ಎಂದು ಕರೆಯುತ್ತಾರೆ. ಅವುಗಳೆಂದರೆ:

**1. ಸಮಸ್ಯೆಯನ್ನು ಕಾಣುವುದು.**

ಶಿಕ್ಷಣ ನೀಡುವ ಸಂದರ್ಭದಲ್ಲಿ ಪಾಠ ಬೋಧಿಸುವಾಗ ಕಲಿಯಬೇಕಾದ ಹೊಸ ವಿಚಾರವನ್ನು ಸಮಸ್ಯೆಯ ರೂಪದಲ್ಲಿ ವಿದ್ಯಾರ್ಥಿಗಳ ಮುಂದೆ ಬರುವ ಹಾಗೆ ಮಾಡಬೇಕು. ಮುಂದೆ ಸಾಗಲು ಅದನ್ನು ಬಿಡಿಸುವ ಅಗತ್ಯವನ್ನು ಅವರು ಕಂಡುಕೊಳ್ಳುವಂತೆ ಪ್ರೋತ್ಸಾಹಿಸಬೇಕು. ಆಗ ಅವರು ಆ ಕಾರ್ಯಕ್ಕೆ ತಮ್ಮ ಮನಶ್ಶಕ್ತಿಯನ್ನು ಒದಗಿಸಿಕೊಂಡು ಕ್ರಿಯಾಶೀಲರಾಗುವರು. ಅದರ ಅಗತ್ಯದ ಅರಿವಿರುವುದರಿಂದ ಸ್ವಪ್ರೇರಣೆಯಿಂದ ಆಸಕ್ತಿ ವಹಿಸುವರು. ಇದನ್ನೇ ವಿಷ್ಣುಶರ್ಮರು ಪಂಚತಂತ್ರದಲ್ಲಿ, ಪ್ರಾರಂಬಿಕವಾಗಿ ಯಾವುದರಲ್ಲೂ ಆಸಕ್ತಿಯಿಲ್ಲದೆ, ಸ್ವೇಚ್ಛಾಪ್ರವೃತ್ತಿಯಿಂದ, ಸೋಮಾರಿಗಳಾಗಿ ಕಾಲಕಳೆಯುತ್ತಿದ್ದ ರಾಜಕುಮಾರರಿಗೆ ವಿದ್ಯೆ ಕಲಿಸುವುದು ಬಹಳ ಕಷ್ಟದ ಕೆಲಸ ಎಂಬುದನ್ನು ಬಹಳ ಸೂಕ್ಷ್ಮವಾಗಿ ಪರಿಶೀಲಿಸಿ, ಈಗಾಗಲೇ ಅವರು ಒಮ್ಮೆ ಎಡವಿದ್ದಾರೆಂಬುದನ್ನು ಗಮನಿಸಿ ಮುಂದಿನ ಕಾರ್ಯಯೋಜನೆ ಹಾಕಿಕೊಳ್ಳುತ್ತಾರೆ.

तावदस्खलितं यावत्सुखं याति समे पथि ।

स्खलिते च समुत्पन्ने विषमञ्च पदे पदे ॥[13]

ಎಲ್ಲಿಯವರೆಗೆ  ಒಮ್ಮೆಯೂ ಎಡವುದಿಲ್ಲವೋ ಅಲ್ಲಿಯವರೆಗೆ ಸುಖವಾಗಿ ಸಮವಾದ ಹಾದಿಯಲ್ಲಿ ನಡೆಯುತ್ತಾನೆ. ಒಮ್ಮೆ ಎಡವಿದಾಗ ಮುಂದೆ ಹೆಜ್ಜೆ ಹೆಜ್ಜೆಗೂ ಹಾದಿ ವಿಷಮವಾಗುತ್ತದೆ. ಇಂಥಹ

---

12. **ವೀರಪ್ಪ. ಎನ್ ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ-15, ಪು- 370-383,(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

13. **ಸುಧಾಕರ್ ಮಾಲವೀಯ,** ಸಂಪಾ, ಹಾಗೂ ವ್ಯಾಖ್ಯಾ, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಸಂಪ್ರಾಪ್ತಿ, ಶ್ಲೋ-184, ಪು-425,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಸಂದರ್ಭದಲ್ಲಿ ನಾನು ಸಿದ್ಧನಿದ್ದೇನೆಂದು ಸಿಂಹ ಗರ್ಜನೆ ಮಾಡಿದ ವಿಷ್ಣುಶರ್ಮರ ಅಸಾಧಾರಣ ಪ್ರಯತ್ನ ಆದರ್ಶಪ್ರಾಯವಾದದ್ದು. ಉತ್ತಮ ವಾತಾವರಣ ನಿರ್ಮಾಣ ಮಾಡಿ, ಒಳ್ಳೆಯ ಸನ್ನಿವೇಶ, ಸಂದರ್ಭದಲ್ಲಿ ಸ್ವಪ್ರೇರಣೆಯಿಂದ ಅವರ ಸಮಸ್ಯೆಯನ್ನು ಸಮರ್ಥವಾಗಿ ಎದುರಿಸುವಂತೆ ಸರಳ ಸುಂದರ ಕಥೆಗಳ ಮೂಲಕ ಮಾರ್ಗದರ್ಶನ ನೀಡಿದ್ದಾರೆ.

**2. ಸಮಸ್ಯೆಯ ಸ್ಪಷ್ಟೀಕರಣ**

ಪಾಠದ ಪ್ರಾರಂಭದಲ್ಲಿಯೇ ಆ ದಿನ ತಿಳಿಯಬೇಕಾದ ವಿಚಾರವನ್ನು ಸಮಸ್ಯೆಯ ರೂಪದಲ್ಲಿ ಸ್ಪಷ್ಟಪಡಿಸಬೇಕು. ಇದರಿಂದ ಆ ಕಾರ್ಯ ಸಾಧನೆಗೆ ಪೂರಕವಾದ ಅಂಶಗಳನ್ನು ಸಂಗ್ರಹಿಸುವುದಕ್ಕೆ ಹಾಗೂ ಸಮಸ್ಯೆಯನ್ನು ಬಿಡಿಸಲು ಸೂಕ್ತ ಮಾರ್ಗವನ್ನು ಕಂಡುಕೊಳ್ಳಲು ಸಹಾಯಕವಾಗುತ್ತದೆ. ಒಂದು ವೇಳೆ ಸಮಸ್ಯೆಯು ಬಹು ವ್ಯಾಪ್ತಿವುಳ್ಳದ್ದಾಗಿದ್ದರೆ, ಉಪಸಮಸ್ಯೆಗಳನ್ನಾಗಿ ವಿಂಗಡಿಸಿಕೊಂಡು, ಒಂದೊಂದನ್ನಾಗಿ ಬಿಡಿಸುವ ಏರ್ಪಾಡು ಮಾಡಿಕೊಳ್ಳಬೇಕಾಗುತ್ತದೆ.

**3. ಅಂಕಿಅಂಶಗಳ ಮತ್ತು ಅನುಭವಗಳ ಸ್ಮರಣೆ ಮತ್ತು ಸಂಬಂಧ ಕಲ್ಪನೆ:**

ಬಿಡಿಸಬೇಕಾದ ಸಮಸ್ಯೆ ಹೆಚ್ಚು ಹೆಚ್ಚು ಸ್ಪಷ್ಟವಾದಂತೆ, ಅಗತ್ಯವಾದ ಅಂಕಿಅಂಶಗಳ ಸ್ವರೂಪ ತಿಳಿಯುತ್ತದೆ. ಆಗ ನಮ್ಮ ಮನಸ್ಸಿನಲ್ಲಿರುವ ಅನುಭವದ ದೊಡ್ಡ ರಾಶಿಯಿಂದ ಅವಶ್ಯಕವಾದದ್ದನ್ನು ಮಾತ್ರ ಆರಿಸಿಕೊಳ್ಳುವಂತೆ ಮನಸ್ಸು ಸೂಚಿಸುತ್ತದೆ. ನಂತರ ಎದುರಿಸಬೇಕಾದ ಸಮಸ್ಯೆಗೆ ಸಂಬಂಧ ಕಲ್ಪಿಸಿಕೊಂಡು ಪರಿಹಾರಕಾರ್ಯಕೈಗೊಳ್ಳಲು ಸುಲಭವಾಗುತ್ತದೆ.

**4. ಊಹೆಯ ನಿರೂಪಣೆ:**

ಸಮಸ್ಯೆಯ ಪರಿಹಾರ ಮಾರ್ಗವು ಅಗತ್ಯವಾದ ಅಂಕಿಅಂಶಗಳನ್ನು ಆಯ್ಕೆ ಮಾಡಿಕೊಂಡಾಗ ಮಾತ್ರ ಸಾಧ್ಯವಾಗುತ್ತದೆ. ಸಂಗ್ರಹಿಸಿದ ಅಂಶಗಳ ಸಂಬಂಧ ಕಲ್ಪಿಸಿ ಜೋಡಿಸುತ್ತಿರುವ ಸಮಯದಲ್ಲಿ ಉತ್ತರ ಹೊಳೆಯುವ ಸಂಭವವಿರುತ್ತದೆ. ಆದರೆ ಅಂತ್ಯ ತೀರ್ಮಾನವಾಗಲಾರದು. ಅಂತ್ಯ ತೀರ್ಮಾನಕ್ಕೆ ಬರುವ ಮುನ್ನ ಅದರ ಸಾಧುತ್ವವನ್ನು ಪರಿಶೀಲಿಸಬೇಕು. ಆನಂತರ ಆ ತೀರ್ಮಾನ ಎಲ್ಲ ರೀತಿಯ ಸಂದರ್ಭಗಳಿಗೆ ಒಪ್ಪುವುದೇ ಇಲ್ಲವೇ ಎಂದು ಪರೀಕ್ಷಿಸಬೇಕು. ಒಂದು ವೇಳೆ ಒಪ್ಪದಿದ್ದರೆ, ಸರಿಹೊಂದದ ಸನ್ನಿವೇಶಗಳಾವುವು ಎಂದು ಆಲೋಚಿಸಿ, ಪುನಃ ಅವುಗಳಿಗೆ ನಮ್ಮ ಊಹೆಯನ್ನು ಒರೆಹಚ್ಚಿ ನೋಡಿ ಪರಿಷ್ಕರಣೆ ಮಾಡಬೇಕಾಗುತ್ತದೆ. ಇದನ್ನೇ ಊಹೆಯ ನಿರೂಪಣೆ ಎಂದು ಕರೆಯುವರು.

**೫. ನಿರ್ಧಾರದ ಪುರಸ್ಕಾರ ಅಥವಾ ತಿರಸ್ಕಾರ.**

ಒಂದು ವೇಳೆ ಊಹಿಸಿದ ಉತ್ತರ ಅಥವಾ ತೀರ್ಮಾನ ತಪ್ಪಾಗಲೂಬಹುದು ಅಥವಾ ಸರಿಯಾದ್ದೂ ಆಗಿರಬಹುದು. ಎಲ್ಲ ಸಂದರ್ಭಗಳಿಗೂ ಒಪ್ಪುವಂತಿದ್ದು ನಿರ್ದಿಷ್ಟವಾದ್ದೆಂದು ತಿಳಿದರೆ ಅದನ್ನು ಸ್ವೀಕರಿಸಬಹುದು. ಇಲ್ಲವಾದರೆ ಮತ್ತೆ ಆಲೋಚನೆ ನಡೆಸಬೇಕಾಗುವುದು. ಎಲ್ಲ ಸಂದರ್ಭಗಳಿಗೂ ಅನ್ವಯಿಸಬಹುದೆಂದು ಧೃಢಪಟ್ಟ ಮೇಲೂ ಆ ತೀರ್ಮಾನವನ್ನು ಕೆಲವು ನೂತನ ಸಮಸ್ಯೆಗಳನ್ನು ಬಿಡಿಸಲು ಪ್ರಯೋಗಿಸಿ ನೋಡುವುದು ಉತ್ತಮ. ನಂತರ ಸಾಧುವಾದುದನ್ನು ಆಯ್ಕೆ ಮಾಡಿ, ಸಾರ್ವತ್ರಿಕ ವ್ಯಾಪ್ತಿಗೆ ಸೂಕ್ತವಾಗಿದೆಯೇ ಎಂದು ತಿಳಿದು ತೀರ್ಮಾನ ತೆಗೆದುಕೊಳ್ಳುವುದು. ಇಲ್ಲದಿದ್ದರೆ ತಿರಸ್ಕರಿಸಬೇಕಾಗುವುದು.

ಈ ರೀತಿ ನಮ್ಮ ಆಲೋಚನೆಗಳು ಮೇಲಿನ ಪಂಚಸೋಪಾನ ಹಂತದಲ್ಲಿ ಹಾದುಹೋಗುವುದು ಉತ್ತಮ. ಅಲ್ಲಿಗೆ ಅದು ಒಂದು ರೀತಿಯ ಶಾಸ್ತ್ರೀಯ ಆಲೋಚನೆಯಾಗಿರುತ್ತದೆ. ಈ ಎಲ್ಲ ಅಂಶಗಳನ್ನು ಪರಿಶೀಲಿಸದೆ, ಆತುರವಾಗಿ ನಿರ್ಧಾರಕ್ಕೆ ಬಂದರೆ ಆಲೋಚನೆಯಲ್ಲಿ ನಿರ್ದಿಷ್ಟತೆ ಇರುವುದಿಲ್ಲ. ಆತುರದಿಂದ ಮಾಡುವ ದೋಷಮಯ ತೀರ್ಮಾನಗಳು ನಮ್ಮ ನಿತ್ಯ ಜೀವನದಲ್ಲಿ ಸಮಸ್ಯೆಗಳನ್ನು ಜಟಿಲಗೊಳಿಸುತ್ತವೆಯೇ ಹೊರತು, ಬಿಡಿಸಲು ಸರಳಗೊಳಿಸುವುದಿಲ್ಲ. ಇದರಿಂದ ಅಭಿಪ್ರಾಯ ಭಿನ್ನತೆ ಹೆಚ್ಚಿ ಸಾಮಾಜಿಕ ಕ್ಷೋಭೆಯೂ ತಲೆದೋರಬಹುದು.[14] ಸಂಸ್ಕೃತ ಕವಿ ಭರ್ತೃಹರಿ ನೀತಿಶತಕದಲ್ಲಿ ಎಷ್ಟು ಸರಳವಾಗಿ ಸೂಚಿಸಿರುವುದನ್ನು ಸ್ಮರಿಸಿಕೊಳ್ಳಬಹುದು.

कर्मायत्तं फलं पुंसां बुद्धिः कर्मानुसारिणी ।

तथापि सुधिया भाव्यं सुविचार्यैव कुर्वता ॥[15]

ಜನರಿಗೆ ಫಲವು ಕರ್ಮಗಳಿಗೆ ಅಧೀನವಾಗಿರುತ್ತದೆ. ಬುದ್ಧಿಯು ಕರ್ಮವನ್ನು ಅನುಸರಿಸುತ್ತದೆ. ಆದರೂ ಕೂಡ ಒಳ್ಳೆಯ ಬುದ್ಧಿವಂತನು ಚೆನ್ನಾಗಿ ವಿಮರ್ಶಿಸಿಯೇ ಕೆಲಸವನ್ನು ಮಾಡುವವನಾಗಿರಬೇಕು.

ವಿವಿಧ ಅಂಶಗಳನ್ನು ಜಾಣತನದಿಂದ ಜೋಡಿಸಿಕೊಂಡು, ಸೂಕ್ತ ಸಂಬಂಧ ಕಲ್ಪಿಸಿಕೊಂಡು, ಅವುಗಳ ಸಂಬಂಧದಲ್ಲಿ ಅಡಗಿರುವ ಸತ್ಯಾಂಶವನ್ನು ಅರಸಿ ಧೃಢಪಡಿಸಿಕೊಳ್ಳುವುದೇ ಶಾಸ್ತ್ರೀಯ ಆಲೋಚನೆಯಲ್ಲಿ ನಡೆಯಬೇಕಾದ ಮನೋವ್ಯಾಪಾರ. ಹೀಗಾಗಿ ಇದು ಒಂದು ಕೌಶಲ್ಯದ ಕಾರ್ಯವಾಗಿದೆ. ಇದಕ್ಕೆ ಸಾವಧಾನ ಮನಶ್ಶಾಂತಿ ಬಹು ಮುಖ್ಯ. ಕೆಲವೊಮ್ಮೆ ಆಲೋಚನೆ ನಡೆಸುವ ಸಂದರ್ಭದಲ್ಲಿ ಆತುರವೋ, ಬೇಸರವೋ

---

14. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–15, ಪು–375.(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
15. **ಭರ್ತೃಹರಿ,** ನೀತಿಶತಕ ೯– ದೈವ ಪದ್ಧತಿ, ಶ್ಲೋ–೯೦.

ಸುಳದುಬಿಟ್ಟರೆ, ನಮ್ಮ ಆಲೋಚನೆ ಅಡ್ಡದಾರಿ ಹಿಡಿದು, ಗೊಂದಲವನ್ನುಂಟುಮಾಡಿ, ಯಾವುದೋ ಒಂದು ತೀರ್ಮಾನಕ್ಕೆ ಬಂದುಬಿಡುವುದು ಉಂಟು. ಈ ತೀರ್ಮಾನ ಹೆಚ್ಚಿನ ಸಂದರ್ಭಗಳಲ್ಲಿ ಅಸಾಧುವೇ ಆಗಿಬಿಡುತ್ತದೆ. ಇನ್ನು ಕೆಲವು ಸಂದರ್ಭಗಳಲ್ಲಿ ಹಿಂದಿನಿಂದ ಬಂದಿರುವ ಅನೇಕ ನಂಬಿಕೆಗಳು ನಮ್ಮ ಮಾನಸಿಕ ಜೀವನದಲ್ಲಿ ಭಾಗವಹಿಸಿಬಿಡುತ್ತವೆ. ಅವುಗಳು ಸರಿಯೋ ತಪ್ಪೋ ಎಂದು ವಿವೇಚನೆ ಮಾಡದೆ ನಮ್ಮ ಆಲೋಚನೆಗಳಿಗೆ ಮೂಲ ಆಧಾರಗಳನ್ನಾಗಿ ಬಳಸಿಕೊಂಡುಬಿಟ್ಟರೆ, ತೀರ್ಮಾನ ದೋಷಮಯವಾಗಿ, ವಾಸ್ತವಿಕತೆಗೆ ದೂರವಾಗಿ ಬಿಡುತ್ತದೆ.[16] ಅದಕ್ಕೇ ಹೇಳುವುದು "ಆತುರಗಾರನಿಗೆ ಬುದ್ಧಿ ಮಟ್ಟು"ಎಂದು. ವಿಷ್ಣುಶರ್ಮರು ಪಂಚತಂತ್ರ ಕಥೆಗಳಲ್ಲಿ ಬಹಳಷ್ಟು ಕಡೆ ಈ ಎಚ್ಚರಿಕೆ ಕೊಡುತ್ತಾ ಜಾಗೃತಿ ಮೂಡಿಸಿದ್ದಾರೆ. ಉದಾಹರಣೆಗೆ ಕಣ್ಣಾರೆ ಕಂಡರೂ ಪರಾಂಬರಿಸಿ ನೋಡು, ಬುದ್ಧಿ ಬಲವೇ ಮೇಲು, ಅವರವರ ಅನರ್ಥಕ್ಕೆ ಅವರವರೇ ಜವಾಬ್ದಾರರು ಇತ್ಯಾದಿ.

ಇನ್ನೂ ಅನೇಕ ವಿಚಾರಗಳು ಆಲೋಚನೆಯನ್ನು ಅಡ್ಡದಾರಿಗೊಯ್ಯುತ್ತವೆ. ಅವುಗಳಲ್ಲಿ ಅಭಿಮಾನ ಪಕ್ಷಪಾತಗಳು, ಪೂರ್ವಜ್ಞಾನದ ಪ್ರಭಾವ, ಶಬ್ದಾಡಂಭರದ ಹೊಯ್ಲು, ವಿವೇಚನೆಯ ಅಪ್ರಬುದ್ಧ ಸ್ವರೂಪ ಇತ್ಯಾದಿಗಳು. ಅಭಿಪ್ರಾಯಗಳ ವೈಯಕ್ತಿಕ ಅಭಿಮಾನ ಏಕಮುಖ ತೀರ್ಮಾನಗಳಿಗೆ ದಾರಿಮಾಡಿಕೊಡುತ್ತದೆ. ಅವೆರಡರಲ್ಲಿ ಒಂದನ್ನು ತೀರ್ಮಾನಿಸುವ ಅಗತ್ಯತೆಯಿರುತ್ತದೆ. ಅಂತಹ ಸಂದರ್ಭದಲ್ಲಿ ಅಭಿಮಾನ ಯಾವ ಕಡೆಗೆ ಜಾಸ್ತಿ ಇದೆಯೋ, ಆ ಕಡೆಗೆ ವಾಲುತ್ತದೆ. ಅಲ್ಲಿ ತೀರ್ಮಾನ ತಪ್ಪಾಗುತ್ತದೆ. ಉದಾಹರಣೆಗೆ–ಭಾರವಿ ದೊಡ್ಡ ಕವಿಯೋ? ದಂಡಿ ದೊಡ್ಡ ಕವಿಯೋ? ಎಂಬುದನ್ನು ತೀರ್ಮಾನಿಸುವಾಗ ಅನೇಕ ಅಂಶಗಳನ್ನು ಇಬ್ಬರಿಂದಲೂ ಆರಿಸಿ, ಪರಿಗಣಿಸಿ, ತೂಗಿ ಒಂದು ತೀರ್ಮಾನಕ್ಕೆ ಬರಬೇಕಾಗುತ್ತದೆ. ಒಬ್ಬೊಬ್ಬರಲ್ಲಿ ಒಂದೊಂದು ಪ್ರತಿಭೆ ಪ್ರಕಾಶಮಾನವಾಗಿರುವುದರಿಂದ, ಭಾರವಿಯು ಕೆಲವು ಅಂಶಗಳಲ್ಲಿ ದೊಡ್ಡವನಾದರೆ ದಂಡಿಯು ಇನ್ನು ಕೆಲವಂಶಗಳಲ್ಲಿ ದೊಡ್ಡವನೆನಿಸುತ್ತಾನೆ.

सर्वस्य हि परीक्ष्यन्ते स्वभावा नेतरे गुणाः ।

अतीत्य हि गुणान्सर्वान स्वभावो मून्घ्रि वर्तते ॥[17]

ಅಂದರೆ ಎಲ್ಲರ ವಿಷಯದಲ್ಲಿ ಹುಟ್ಟುಗುಣವನ್ನೇ ಪರೀಕ್ಷಿಸುತ್ತಾರೆ, ಹೊರತು ಇತರ ಗುಣಗಳನ್ನಲ್ಲ. ಏಕೆಂದರೆ, ಎಲ್ಲ ಗುಣಗಳನ್ನೂ ಹುಟ್ಟುಗುಣವು ಮೀರಿಸಿ ಇರುತ್ತದೆ. ಕೆಲವರ ಗುಣಗಳು

---

16. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–15, ಪು – 375–377.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
17. **ನಾರಾಯಣಪಂಡಿತರ ಮಿತ್ರಲಾಭ**– ಶ್ಲೋ–20.

ವಂಶಪಾರಂಪರ್ಯವಾಗಿ, ಮತ್ತೆ ಕೆಲವು ಸ್ವಪ್ರಯತ್ನ, ಸನ್ನಿವೇಶ ಮತ್ತು ಅಭ್ಯಾಸ ಬಲದಿಂದ ಬಂದಿರುವುದೂ ಇರುತ್ತದೆ. ಆಲೋಚನೆಮಾಡುವಾಗ ಇದೆಲ್ಲವನ್ನೂ ಗಮನಿಸಬೇಕಾಗುತ್ತದೆ. ಪಕ್ಷಪಾತವಿಲ್ಲದೆ ತೆರೆದ ಮನಸ್ಸಿನಿಂದ ಎಲ್ಲ ಅಂಶಗಳ ಕಡೆಗೂ ಗಮನವಿಟ್ಟು ಆಲೋಚಿಸಿದಾಗ ತೀರ್ಮಾನವು ಸಾಧುವೂ, ಮಧ್ಯಸ್ಥವೂ ಆಗಿರುವುದು ಕಂಡುಬರುತ್ತದೆ.[18]

ವಿವೇಚನೆಯ ಅಪ್ರಬುದ್ಧ ಸ್ವರೂಪವೂ ಕೆಲವೊಮ್ಮೆ ನಮ್ಮ ತೀರ್ಮಾನಗಳನ್ನು ತಪ್ಪುಗೊಳಿಸುವುದು. ನಮ್ಮ ಆ ವಿವೇಚನಾ ಶಕ್ತಿಗೆ ನಿಲುಕದ ಹಲವು ಸಮಸ್ಯೆಗಳು ಕಂಡು ಬರುತ್ತವೆ. ಉದಾಹರಣೆಗೆ– ದೇವರು ಇದ್ದಾನೆಯೇ? ಇಂತಹ ಸಮಸ್ಯೆಗಳನ್ನು ಬಿಡಿಸಲು ಬಲು ಕಷ್ಟ. ಇದನ್ನು ಬಿಡಿಸಲು ಅಗತ್ಯವಾದ ಅಂಕಿಅಂಶಗಳು ಯಾವುದೆಂಬುದು ಇಂದಿಗೂ ದೊರೆತಿಲ್ಲ. ಜೊತೆಗೆ ಮಾನವನ ಮನಸ್ಸು ಆಲೋಚಿಸುವಾಗ ಎಲ್ಲ ಕಾಲಗಳಲ್ಲೂ ಯಂತ್ರದಂತೆ ಕರಾರುವಾಕ್ಕಾಗಿ ಕೆಲಸಮಾಡುವುದೆಂದೂ ನಂಬಲಾಗುವುದಿಲ್ಲ.

ನಿರ್ದಿಷ್ಟ ತೀರ್ಮಾನಗಳಿಗೆ ಆಲೋಚನೆ ಒಂದು ಪ್ರಮುಖ ಮಾರ್ಗವಾದರೂ ಇತರ ಮಾರ್ಗಗಳಿಲ್ಲದಿಲ್ಲ. ನಮ್ಮ ಧಾರ್ಮಿಕ ಹಾಗೂ ಕಲ್ಪನೆಯ ತೀರ್ಮಾನಗಳು ನಮ್ಮ ಸಂಸ್ಕೃತಿಯೊಡನೆ ಹಾಸುಹೊಕ್ಕಾಗಿ ಹೆಣೆದು ಕೊಂಡಿವೆ. ಧರ್ಮ, ಸಾಹಿತ್ಯ, ಕಲೆ ಮುಂತಾದ ಕ್ಷೇತ್ರಗಳಲ್ಲಿ ಕಾಣಬಹುದು. ಶಾಸ್ತ್ರೀಯ ರೀತಿಯ ಯೋಚನೆಗೆ ನಿಲುಕದ ಅಂಶಗಳೆಷ್ಟೋ ಮಾನವನ ಧರ್ಮದೃಷ್ಟಿಗೂ, ಕಲ್ಪನಾ ಜೀವನಕ್ಕೂ ಗೋಚರಿಸಬಹುದು.

ಉತ್ತಮ ಶಿಕ್ಷಣದಿಂದ ಆಲೋಚಿಸುವ ಅಭ್ಯಾಸಗಳನ್ನು ಬೆಳೆಸುವುದು ಶಿಕ್ಷಣದ ಗುರಿಯಾಗಿದೆ. ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಆಲೋಚಿಸುವ ಅಭ್ಯಾಸವಿರಬೇಕು. ಆಲೋಚಿಸುವ ಕ್ರಮವೂ ಗೊತ್ತಿರಬೇಕು. ವಂಶಗತವಾಗಿ ಬಂದಿರುವ ಆಲೋಚನಾ ಶಕ್ತಿಯನ್ನು ಹೆಚ್ಚಿಸಲಾಗದಿದ್ದರೂ ಅದು ಶಾಸ್ತ್ರೀಯ ರೀತಿಯಲ್ಲಿ ಕಾರ್ಯನಿರ್ವಹಿಸುವ ಅಭ್ಯಾಸದ ಸೌಲಭ್ಯವನ್ನೂ, ಕ್ರಮದ ಪರಿಚಯವನ್ನೂ ದೊರಕಿಸಿಕೊಡುವ ವಿಚಾರದಲ್ಲಿ ಶಾಲೆಗಳು, ವಿದ್ಯಾಶ್ರಮಗಳು ಪ್ರಧಾನ ಪಾತ್ರ ವಹಿಸುತ್ತವೆ. ಅಂತಹ ಕೆಲವು ಮುಖ್ಯ ಅಂಶಗಳನ್ನು ಪರಿಶೀಲಿಸುವುದಾದರೆ,

---

**18. ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ –15, ಪು – 375–376.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

**1. ಪದಗಳ ಸರಿಯಾದ ಅರ್ಥ ಪರಿಚಯ.**

**2. ಅಂಕಿಅಂಶಗಳಲ್ಲಿ ನಂಬಿಕೆ ಮತ್ತು ಆಸಕ್ತಿ.**

**3. ಆಲೋಚಿಸದೆ ತೀರ್ಮಾನಕ್ಕೆ ಬರುವುದರ ಅಪಾಯ.**

**4. ಆಲೋಚಿಸಬೇಕಾದ ವಿಷಯದ ಸ್ಪಷ್ಟೀಕರಣ.**

**5. ಉಪಾಧ್ಯಾಯರ ಆದರ್ಶ.**

**6. ಆಲೋಚನೆಯ ಶಾಸ್ತ್ರೀಯ ಕ್ರಮದ ಪರಿಚಯ.**

**7. ಕಲಿಕೆಯ ಕಾರ್ಯಕ್ರಮದಲ್ಲಿ ಆಲೋಚನೆಗೆ ಅವಕಾಶ ಹೆಚ್ಚಿರಬೇಕು**

ಹೇಗೆ ವ್ಯಾಕರಣದಿಂದ ಭಾಷೆಯ ಮೇಲೆ ಹಿಡಿತ ಸಾಧಿಸಬಹುದೋ, ಹಾಗೆಯೇ ಆಲೋಚನೆಯ ಸರಿಯಾದ ಕ್ರಮವನ್ನು ಅರಿತರೆ ಆಲೋಚಿಸುವ ಕಾರ್ಯವೂ ಚೆನ್ನಾಗಿ ನಡೆಯುತ್ತದೆ. ಪ್ರಶ್ನೆಗಳನ್ನು ಹಾಕಿಕೊಂಡು ಮಕ್ಕಳು ಕುತೂಹಲದಿಂದ ಕೇಳುವ ಪ್ರಶ್ನೆಗಳಿಗೆ ಸೂಕ್ತ ಉತ್ತರ ಹೇಳಿಕೊಂಡು, ಆಲೋಚಿಸಿ ತಾವೇ ವಿಷಯವನ್ನು ಕ್ರಮವಾಗಿ ಪರಿಚಯ ಮಾಡಿಕೊಳ್ಳುವಂತೆ ಬೋಧನೆ ಮಾಡುವುದು ಒಂದು ಆದರ್ಶ ಕ್ರಮ. ಇದರಿಂದ ಮಕ್ಕಳು ಚೆನ್ನಾಗಿ ಕಲಿಯುವರು. ಜೊತೆಯಲ್ಲಿ ಆಲೋಚಿಸುವ ಅವಕಾಶವನ್ನೂ ಗಳಿಸುವರು. ಇದನ್ನೇ ಸಂವಾದಾತ್ಮಕ ಬೋಧನೆ ಎನ್ನುವರು. ವಿಷ್ಣುಶರ್ಮರು ರಾಜಕುವರರಿಗೆ ವಿದ್ಯೆಯನ್ನು ಕಲಿಸಲು ಇದೇ ಮಾದರಿಯ ಬೋಧನಾ ಕ್ರಮವನ್ನು ಅನುಸರಿಸಿ, ಉತ್ತಮ ಮಾರ್ಗದರ್ಶನ ನೀಡುತ್ತಿದ್ದರು. ಪಾಠಬೋಧನೆ ಕೇವಲ ಉಪಾಧ್ಯಾಯರ ತೀರ್ಮಾನಗಳಂತೆ ಇರಬಾರದು. ಮಕ್ಕಳ ವಿವೇಚನೆಗೆ ಅವಕಾಶ ಕಲ್ಪಿಸುವಂತಿರಬೇಕು. ಆಗ ಮಕ್ಕಳಿಗೆ ಆಲೋಚಿಸುವ ಅವಕಾಶವೂ ದೊರೆತು, ಶಾಸ್ತ್ರೀಯ ರೀತಿಯಲ್ಲಿ ಆಲೋಚಿಸುವ ಅಭ್ಯಾಸವೂ ಬೆಳೆಯುತ್ತದೆ. ವ್ಯಕ್ತಿಯ ಮತ್ತು ಸಮಾಜ ಜೀವನದಲ್ಲಿ ಆತುರದ ತೀರ್ಮಾನಗಳಿಂದ ಒದಗಬಹುದಾದ ದುರಂತಗಳು ಹೆಚ್ಚಿನ ಮಟ್ಟಿಗೆ ತಪ್ಪುತ್ತವೆ.[19]



19. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 15, ಪು – 378–383.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು –4

## 4–3. ಮನೋಧೋರಣೆಗಳು: ವರ್ತನೆಗಳು–ಪರಿವರ್ತನೆ

### ಶೀಲಸಂಪನ್ನತೆ

ಸಮಾಜದ ಅಗತ್ಯತೆಗಳು ಹಾಗೂ ಅಪೇಕ್ಷೆಗಳಗನುಗುಣವಾಗಿ ಮಕ್ಕಳ ವರ್ತನೆಯನ್ನು ಮಾರ್ಪಡಿಸುವುದೇ ಶಿಕ್ಷಣದ ಪ್ರಮುಖ ಉದ್ದೇಶವಾಗಿದೆ. ಮಾನವನ ವರ್ತನೆ ಹಲವಾರು ಗುಣಗಳ ಗಣಿಯಾಗಿದೆ. ಅವುಗಳಲ್ಲಿ ಬಹಳ ಮುಖ್ಯವಾದ ಗುಣವೆಂದರೆ ಮನೋಭಾವಗಳು ಅಥವಾ ಮನೋಧೋರಣೆಗಳು. ಮನೋಭಾವಗಳು ಜನ್ಮತಃ ಬಂದವಲ್ಲ. ಇವು ಜೀವನದಲ್ಲಿ ರೂಢಿಸಿಕೊಂಡಂತಹವು. ಯಾವುದೇ ಒಂದು ಸನ್ನಿವೇಶದಲ್ಲಿ ಒಬ್ಬ ವ್ಯಕ್ತಿಯು ನಿರ್ದಿಷ್ಟ ರೀತಿಯಲ್ಲಿ ವರ್ತಿಸುವಂತೆ ಮಾಡುವ ಇಂಥ ಆರ್ಜಿತ ಪ್ರವೃತ್ತಿಗಳನ್ನು ಮನೋಭಾವಗಳು**(Attitudes)** ಎಂದು ಕರೆಯುವರು.[20] ಒಂದು ವಿಷಯದ ಕಲಿಕೆ, ಹವ್ಯಾಸಗಳು, ಆಸಕ್ತಿಗಳು ಹಾಗೂ ಇತರ ಮನೋ–ದೈಹಿಕ ಅಂಶಗಳನ್ನು ರೂಢಿಸಿಕೊಳ್ಳುವಿಕೆಯು ವ್ಯಕ್ತಿ ಹೊಂದಿರುವ ಮನೋಧೋರಣೆಗಳ ಸ್ವರೂಪದಿಂದ ಪ್ರಭಾವಿತವಾಗುತ್ತವೆ.

"ನಿರ್ದಿಷ್ಟ ವಸ್ತುಗಳಿಗೆ ವ್ಯಕ್ತಿಯು ತೋರುವ ಅನುಕ್ರಿಯೆಯ ಮೇಲೆ ನಿರ್ದೇಶಕ ಅಥವಾ ಚಲನಶೀಲ ಪ್ರಭಾವ ಬೀರುವ ಅನುಭವಗಳಿಂದ ಸಂಘಟಿಸಲ್ಪಟ್ಟ ಮಾನಸಿಕ ಮತ್ತು ನರಮಂಡಲದ ಸ್ಥಿತಿಯೇ ಮನೋಧೋರಣೆ" ಎಂದು **GORDON WILLARD ALLPORT,** ಎಂಬ ಸಮಕಾಲೀನ ಅಮೆರಿಕಾದ ಸಾಮಾಜಿಕ ಮನಶ್ಶಾಸ್ತ್ರಜ್ಞರು ವ್ಯಾಖ್ಯಾನಿಸಿದ್ದಾರೆ. ಮತ್ತೊಬ್ಬ ಮನಶ್ಶಾಸ್ತ್ರಜ್ಞ **FRANK N. FREE-MAN- (Canadian born American Educational Psychologist)** ಹೀಗೆ ಹೇಳಿದ್ದಾರೆ– "ನಿರ್ದಿಷ್ಟ ಸನ್ನಿವೇಶಗಳು, ವ್ಯಕ್ತಿಗಳು, ವಸ್ತುಗಳು ಇಂಥವುಗಳ ಉದ್ದೀಪನೆಗೆ ನಿರ್ದಿಷ್ಟ ಅನುಕ್ರಿಯೆ ತೋರುವಂತೆ ಮಾಡುವ ಮನಸ್ಸಿನ ಪೂರ್ವಸಿದ್ಧ ಸ್ಥಿತಿಯೇ ಮನೋಧೋರಣೆ. ವಿಷ್ಣುಪುರಾಣದಲ್ಲಿ ಒಂದು ಸರಳ ವಿವರಣೆ ಹೀಗಿದೆ:–

तस्मात् दुःखात्मकं नास्ति न च किञ्चित्सुखात्मकम् ।

मनसः परिणामोऽयं सुखदुःखादिलक्षणः ॥[21]

ಮನೋಧೋರಣೆಗಳು ಅನುಭವ ಜನ್ಯವಾಗಿದ್ದು, ಬೌದ್ಧಿಕ, ಜೈವಿಕ, ಸಾಮಾಜಿಕ ಮತ್ತು ಸಂವೇಗಾತ್ಮಕ ಅಂಶಗಳನ್ನೊಳಗೊಂಡಿರುತ್ತದೆ. ವ್ಯಕ್ತಿಯ ವರ್ತನೆಯ ಮೇಲೆ ಕ್ರಿಯಾಶೀಲ ಪ್ರಭಾವ

---

**20. ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 20, ಪು –520..(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು –4

**21 ವಿಷ್ಣುಪುರಾಣ 2–6–47.**

ಬೀರುತ್ತವೆ. ಮನೋಧೋರಣೆಯ ವಿನ್ಯಾಸಗಳು ವಿವಿಧವಾಗಿವೆ. ಅವುಗಳೆಂದರೆ:– ಆರೋಗ್ಯ, ಜೀವನ, ಸಾವು, ಜನಸಂಖ್ಯೆ, ಸಂಗೀತ, ಕಲೆ, ಆಟಗಳು, ಸರ್ಕಾರ, ಧರ್ಮ, ರಾಜನೀತಿ ಇತ್ಯಾದಿ. ಇವುಗಳ ಬಗ್ಗೆ ಪ್ರತಿಯೊಬ್ಬನೂ ತನ್ನದೇ ಆದ ಮನೋಭಾವವನ್ನು ಹೊಂದಿರುತ್ತಾನೆ.[22]

ಮನೋಭಾವನೆಗಳು ಮೊದಮೊದಲು ಆಕಸ್ಮಿಕವಾಗಿ ರೂಪುಗೊಳ್ಳುವುದು. ಕ್ರಮಕ್ರಮವಾಗಿ ನಮಗೆ ಅರಿವೇ ಇಲ್ಲದಂತೆ ಧೃಢಗೊಳ್ಳುತ್ತಾ ಹೋಗುವುದು. ಮನೋಧೋರಣೆ ಕುರಿತು ಅನೇಕ ವಿಷಯಗಳಲ್ಲಿ ಸಂಶೋಧನೆಗಳನ್ನು ಸಮಾಜವಿಜ್ಞಾನ ನಡೆಸಿದೆ. ಕೆಲವು ವ್ಯಕ್ತಿಗಳು ಸರಳವಾಗಿ ಹೊಂದಿಕೊಳ್ಳುವ, ಸ್ನೇಹಮಯಿ, ಮನಬಿಚ್ಚಿ ಮಾತನಾಡುವ, ಸಹಾಯ ಹಸ್ತವನ್ನು ಚಾಚುವ ಸ್ವಭಾವವುಳ್ಳವರು ಧನಾತ್ಮಕ ಮನೋಧೋರಣೆಯನ್ನು ಹೊಂದಿರುತ್ತಾರೆ. ಇನ್ನು ಕೆಲವು ವ್ಯಕ್ತಿಗಳು ಅಸೂಯೆಯ ಭಾವನೆ, ಯಾವಾಗಲೂ ತಪ್ಪನ್ನು ಹುಡುಕುವ, ಮಾತುಮಾತಿಗೆ ಜಗಳ ಕಾಯುವ, ಸ್ವಪ್ರತಿಷ್ಠೆಯ, ಸ್ವಾರ್ಥವನ್ನೇ ಯೋಚಿಸುವ, ಏಕಾಂತ ಬಯಸುವ ಸ್ವಭಾವವುಳ್ಳವರು ಋಣಾತ್ಮಕ ಮನೋಧೋರಣೆಯನ್ನು ಹೊಂದಿರುತ್ತಾರೆ.[23]

ಮಕ್ಕಳಿಗೆ ಆದರ್ಶಗಳನ್ನು ಮನಸ್ಸಿಗೆ ಹಿತವಾಗುವ ಹಾಗೂ ಹಿತವಾಗುವ ಸನ್ನಿವೇಶಗಳನ್ನು ಒದಗಿಸಿ ಮನೋಭಾವಗಳನ್ನು ಮೂಡಿಸಬೇಕು. ಹಾಗೆಯೇ ಕ್ರಮವಾಗಿ ಕೆಲವು ಮೌಲ್ಯಗಳಿಗನುಗುಣವಾದ ಅನುಭವದ ಸನ್ನಿವೇಶಗಳನ್ನು ನೀಡುತ್ತಾ, ಉತ್ತಮ ವ್ಯಕ್ತಿತ್ವನಿರ್ಮಾಣ ಮಾಡಬೇಕಾದುದು ಶಿಕ್ಷಕರ ಕರ್ತವ್ಯ.

बालः पुत्रो नीतिवाक्योपचारैः कार्ये कार्ये यत्नतः शिक्षणीयः ।

लेखा लग्ना याऽमपात्रे विचित्रा नासौ नाशं पाककालेऽपि याति ॥[24]

ಬಾಲಕನಾಗಿದ್ದಲೇ ಪುತ್ರನಿಗೆ ನೀತಿಯನ್ನು ಹೇಳಿ ಪ್ರತಿಯೊಂದು ಕಾರ್ಯದಲ್ಲಿಯೂ ಶಿಕ್ಷಣವನ್ನು ಕೊಡಬೇಕು. ಹಸಿಯ ಗಡಿಗೆಯಲ್ಲಿ ರಚಿಸಿದ ವಿಚಿತ್ರವಾದ ರೇಖೆಗಳು ಗಡಿಗೆಯನ್ನು ಸುಟ್ಟಾಗಲೂ ಅಳಿಸದೆ ಇರುತ್ತವೆ.

ಮಕ್ಕಳಲ್ಲಿ ಬೆಳೆಯಬೇಕಾದ ಎಲ್ಲ ಉಚಿತ ಮನೋಭಾವಗಳಿಗೂ ಶಿಕ್ಷಕರ ಜೀವನದ ಆದರ್ಶ ಲಕ್ಷಣಗಳಿಂದ ದೊರಕುವಂತಿರಬೇಕು.ಆದ್ದರಿಂದ ಶಿಕ್ಷಕರು ಆದರ್ಶ ಮಾನವರಾಗಬೇಕು. ಸಮಾಜದ ಆದರ್ಶಗಳಲ್ಲಿ ಪಳುಗಿರಬೇಕು. ಧೃಢಚಿತ್ತ, ಸತ್ಯಸಂಧತೆ, ಸಮಾಜ ಎತ್ತಿ ಹಿಡಿಯುವ ಜೀವನ ತತ್ವ ಈ

---

22. **ವಾಮದೇವಪ್ಪ. ಎಚ್. ವಿ,** ಶೈಕ್ಷಣಿಕ ಮನೋವಿಜ್ಞಾನ, ಅ – 3, ಪು –150–151.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
23. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 3, ಪು –151.(2005)ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
24. **ಸುಭಾಷಿತಮಂಜರೀ** –ಸಂಸಾರ– ಶ್ಲೋ–48, ಪು–25, (2001) ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18.

ಅಂಶಗಳಲ್ಲಿ ಶಿಕ್ಷಕರು ಅಥವಾ ಬೋಧಕರು ಆದರ್ಶ ಜೀವಿಗಳೆನಿಸಿರಬೇಕು. ತಮ್ಮ ವರಿಷ್ಠ ವ್ಯಕ್ತಿತ್ವದ ಮೂಲಕ ತಮ್ಮ ಆ ಆದರ್ಶಗಳು ಮಕ್ಕಳಲ್ಲಿ ಸಮಾಜಹಿತಕ್ಕೊಪ್ಪುವ ಮನೋಧೋರಣೆಯನ್ನು ರೂಪಿಸುವ ಶಿಲ್ಪಿಗಳಾಗಬೇಕು.

ಇಂದಿನ ಮಕ್ಕಳು ಮುಂದಿನ ಪ್ರಜೆಗಳು. ಮುಂದೆ ಹತ್ತಾರು ವರ್ಷ ಬಾಳಬದುಕುತ್ತಾರೆ. ಜೀವನದಲ್ಲಿ ಶಾಲೆಯ ಬಗ್ಗೆ ಅವರು ತಾಳಬಹುದಾದ ಮನೋಧೋರಣೆ ಅವರ ಮುಂದಿನ ಜೀವನದ ಮೇಲೆ ಅಪಾರ ಪರಿಣಾಮ ಬೀರುತ್ತದೆ. ಹೀಗಿರುವುದರಿಂದ ಮಕ್ಕಳು ಶಾಲೆಯ ಬಗ್ಗೆ ವಿಶಿಷ್ಟ ಅಭಿಮಾನದ ಮನೋಭಾವನೆಯನ್ನು ಬೆಳೆಸಿಕೊಳ್ಳುವಂತೆ ಮಾಡುವುದು ಶಾಲೆಯ ಹಾಗೂ ರಾಷ್ಟದ ಹಿತದೃಷ್ಟಿಯಿಂದ ಅಗತ್ಯವಾಗಿರುತ್ತದೆ. ಇದರೊಡನೆ ಸಾಹಿತ್ಯ, ಸಂಸ್ಕೃತಿ, ಕಲೆ, ಸದ್ಭಾವನೆ, ಸಜ್ಜನಿಕೆ, ಸತ್ಯ ಇವೆಲ್ಲದರ ಬಗ್ಗೆಯೂ ಹಿತಕರವಾದ ಮನೋಧೋರಣೆ ಮೂಡುವ ಸಂಭವ ಹೆಚ್ಚಿರುತ್ತದೆ. ಇದರಿಂದ ಮಕ್ಕಳಲ್ಲಿ ಅಹಿತಕರ ದುರ್ವವರ್ತನೆಗಳು ಹಿತಕರ ಸದ್ವರ್ತನೆಗಳಾಗಿ ಪರಿವರ್ತನೆಗೊಂಡು ಶೀಲಸಂಪನ್ನತೆ ಪ್ರಾಪ್ತವಾಗುವುದು.[25] ಮಕ್ಕಳಿಗೆ ಒಳ್ಳೆಯ ಸಹವಾಸ ಹಾಗೂ ಉತ್ತಮ ಪರಿಸರವನ್ನು ಒದಗಿಸಿಕೊಡಬೇಕು.

शिशौ प्रविशतः प्रायः प्रतिवेशिगुणागुणौ ।

गंधोऽन्यसंनिधेरेव संक्रामति समीरणे ॥[26]

ಮಕ್ಕಳಲ್ಲಿ ನೆರೆಮನೆಯವರ ಸದ್ಗುಣಗಳೂ, ದುರ್ಗುಣಗಳೂ ಸಾಮಾನ್ಯವಾಗಿ ಸೇರಿಕೊಳ್ಳುತ್ತವೆ, ಗಾಳಿಯಲ್ಲಿ ಇನ್ನೊಂದು ವಸ್ತುವಿನ ವಾಸನೆ ಸೇರಿಕೊಳ್ಳುವಂತೆ.

ಮನೋಭಾವನೆಗಳು ಮುಖ್ಯವಾಗಿ ನಾಲ್ಕು ಆಯಾಮಗಳನ್ನೊಳಗೊಂಡಿರುತ್ತದೆ. ಅವು ಯಾವುವೆಂದರೆ – ತೀವ್ರತೆ, ದಿಕ್ಕು, ವ್ಯಾಪಕತೆ ಮತ್ತು ಅವಧಿ. ಮನೋಧೋರಣೆಯ ತೀವ್ರತೆ ಎಂದರೆ ವ್ಯಕ್ತಿಯ ವರ್ತನೆಯನ್ನು ಎಷ್ಟರಮಟ್ಟಿಗೆ ಪ್ರೇರೇಪಿಸುತ್ತದೆಂಬುದನ್ನು ಸೂಚಿಸುತ್ತದೆ. ಉದಾಹರಣೆಗೆ:– ಉಪಾಧ್ಯಾಯರ ಬಗ್ಗೆ ತೀವ್ರ ಋಣಾತ್ಮಕ ಮನೋಭಾವನೆ ಹೊಂದಿರುವ ವ್ಯಕ್ತಿಯು ನೇರವಾಗಿ ತನ್ನ ಕೋಪವನ್ನು ಅವರ ಮೇಲೆ ತೀರಿಸಿಕೊಳ್ಳಲಾಗುವುದಿಲ್ಲ. ಅದಕ್ಕೆ ಅವನು ಆ ಉಪಾಧ್ಯಾಯರ ಬಗ್ಗೆ ಸಾರ್ವಜನಿಕ ಸ್ಥಳಗಳಲ್ಲಿ ಕೆಟ್ಟ ಹೇಳಿಕೆ ಬರೆಯುವುದು ಅಥವಾ ಅವರ ಆಸ್ತಿ ಹಾಳುಮಾಡುವುದರ ಮೂಲಕ ಪರೋಕ್ಷವಾಗಿ ತನ್ನ ಭಾವನೆ ವ್ಯಕ್ತಪಡಿಸುತ್ತಾನೆ.ಹೀಗೆ ಮನೋಧೋರಣೆಗಳು ಧನಾತ್ಮಕವಾಗಿ, ಋಣಾತ್ಮಕವಾಗಿ ಅಥವಾ ತಟಸ್ಥವಾಗಿ

---

**25**. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 20, ಪು–519–522.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

**26**. हरिहरविरचितं हरिहरसुभाषितम्– 2–51.

ಈ ಮೂರೂ ದಿಕ್ಕುಗಳಲ್ಲಿ ಪ್ರಕಟಗೊಳ್ಳಬಹುದು. ಉದಾಹರಣೆಗೆ–ಸ್ನೇಹಿತನ ಬಗ್ಗೆ ಧನಾತ್ಮಕ ಧೋರಣೆ, ವೈರಿಯ ಬಗ್ಗೆ ಋಣಾತ್ಮಕ ಧೋರಣೆ, ಅಪರಿಚಿತನ ಬಗ್ಗೆ ತಟಸ್ಥ ಧೋರಣೆ. ಮನೋಧೋರಣೆಗಳಲ್ಲಿ ಕೆಲವು ನಿರ್ದಿಷ್ಟ ವರ್ತನೆಗಳ ಮೇಲೆ ಪ್ರಭಾವ ಬೀರಿದರೆ, ಇನ್ನು ಕೆಲವು ವ್ಯಕ್ತಿಯ ಎಲ್ಲಾ ವರ್ತನೆಗಳ ಮೇಲೆ ಪ್ರಭಾವ ಬೀರುತ್ತವೆ. ಉದಾಹರಣೆಗೆ:– ಮನೋಧೋರಣೆಗಳು ವ್ಯಕ್ತಿಯಲ್ಲಿ ಎಷ್ಟು ಕಾಲ ನೆಲಸಿರುತ್ತವೆ ಎಂಬುದೇ ಅವಧಿ ಆಯಾಮದ ಸೂಚಿ. ಹೆಚ್ಚು ತೀವ್ರತೆ ಹೊಂದಿರುವವು ಹೆಚ್ಚು ಕಾಲ ನೆಲೆಗೊಳ್ಳುತ್ತವೆ, ಕಡಿಮೆ ತೀವ್ರತೆ ಹೊಂದಿರುವವು ಹೆಚ್ಚು ಕಾಲ ನೆಲೆಗೊಳ್ಳುವುದಿಲ್ಲ.[27]

ಮನೋಭಾವಗಳು ವ್ರಕ್ತಿತ್ವದ ಸ್ವರೂಪದ ಒಂದು ಅಂಗವಾಗಿ ಹೋಗಿರುತ್ತವೆ. ಅವುಗಳು ಒಮ್ಮೆ ರೂಪುಗೊಂಡು ಸರಿಯಾಗಿ ಒಂದು ವ್ಯಕ್ತಿತ್ವದಲ್ಲಿ ವ್ಯವಸ್ಥೆಗೊಂಡಿದ್ದರೆ ಮತ್ತೆ ಬದಲಾವಣೆ ಹೊಂದುವುದು ಕಷ್ಟ. ಅವುಗಳ ಆಧಾರದಿಂದಲೇ ನಿಶ್ಚಿತ ರೂಪವನ್ನು ತಾಳಿ ರುವ ದೃಷ್ಟಿ ಧ್ಯೇಯಗಳು ಅಷ್ಟೆ. ಆದರೆ ಮನೋಭಾವಗಳು ಅಪಕ್ವವಾಗಿ ವ್ಯವಸ್ಥೆಯಾಗಿದ್ದಲ್ಲಿ ನೇರವಾದ ಬೋಧನೆಯಿಂದ ಬದಲಾಗಬಲ್ಲವು. ಎಲ್ಲ ಮಟ್ಟಗಳ ಶಿಕ್ಷಣ ಸಂಸ್ಥೆಗಳಲ್ಲೂ ಈ ಬಗ್ಗೆ ವಿಶೇಷ ಕಾಳಜಿ ವಹಿಸಿ ವ್ಯಕ್ತಿಯಲ್ಲಿನ ಗುಣಶೀಲಗಳ ಧನಾತ್ಮಕ ಬೆಳವಣಿಗೆಗೆ ಸೂಕ್ತ ಬೋಧನೆ ಹಾಗೂ ಮಾರ್ಗದರ್ಶನ ನೀಡಬೇಕು.

ಸಾಮಾನ್ಯವಾಗಿ ವ್ಯಕ್ತಿಯ ಶೀಲಸಂಪನ್ನತೆಗೂ, ನೈತಿಕ ಶಿಕ್ಷಣಕ್ಕೂ ಸಂಬಂಧವಿರುವುದು ಸರ್ವವೇದ್ಯವಾದುದು. ನೈತಿಕ ಶಿಕ್ಷಣ, ಸಾಮಾಜಿಕ ಜೀವನಕ್ಕೆ ಬೇಕಾಗುವ ಗುಣಶೀಲಗಳನ್ನು ನಿರೂಪಿಸಿದರೆ, ವ್ಯಕ್ತಿತ್ವ ನಿರೂಪಣೆಯಲ್ಲಿ ಅದರ ಪ್ರಭಾವ ಪ್ರಾಧಾನ್ಯಕ್ಕೆ ಬರುತ್ತದೆ.ನೇರವಾದ ನೀತಿಬೋಧೆ, ಉಪಾಧ್ಯಾಯರ ಮೇಲ್ಪಂಕ್ತಿ, ಇತರ ಹಿರಿಯರ ಆದರ್ಶ ಇವು ವ್ಯಕ್ತಿ ಜೀವನದ ಮೇಲೆ ಅತ್ಯಂತ ಪ್ರಭಾವಕಾರಿಯಾಗುತ್ತದೆ.[28] ಇನ್ನೂ ಯಾವ ಮನೋಧೋರಣೆಯೂ ರೂಪುಗೊಳ್ಳದ ಎಳೆಯ ದಿನಗಳ ಮಕ್ಕಳ ಗುಣಶೀಲಗಳನ್ನು ತಿದ್ದುವಾಗ ನೇರವಾದ ಬೋಧನೆ ಅದರ್ಶ ಮತ್ತು ಆದೇಶಗಳು ಸೂಕ್ತವಾದರೆ ಆ ಮಕ್ಕಳ ವಿವೇಚನೆಯನ್ನು ಪರಿವರ್ತಿಸುವ ಮತ್ತು ಸ್ವಪ್ರೇರಣೆಯಿಂದ ಅಂತಹ ಪರಿವರ್ತನೆಗಳನ್ನು ಸ್ವೀಕರಿಸುವ ಕಾರ್ಯಕ್ರಮಗಳನ್ನು ಉಪಾಧ್ಯಾಯರು ವ್ಯವಸ್ಥೆ ಮಾಡಿಕೊಡುವುದು ಅವಶ್ಯಕವಾಗಿರುತ್ತದೆ. ಈ ಸಮಯದಲ್ಲಿ ತಿಳಹೇಳಿದ ಮಾತುಗಳು ಅವರ ವಯಸ್ಕರ ಜೀವನಕ್ಕೂ ಅನ್ವಯಿಸುವಂತಿರಬೇಕು. शीलं परं भूषणं ಅಂದರೆ ಶೀಲಕ್ಕಿಂತ ಮಿಗಿಲಾದ ಭೂಷಣವಿಲ್ಲ. ವ್ಯಾಸ ಮಹರ್ಷಿಗಳು ಮಹಾಭಾರತದಲ್ಲಿ ಹೀಗೆ ಹೇಳಿದ್ದಾರೆ–

---

27. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ– 3, ಪು – 151–152.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
28. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲ ಮನೋವಿಜ್ಞಾನ, ಅ –20, ಪು –530–531.(1962)ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

शीलं प्रधानं पुरुषे तद् यस्येह प्रणश्यति ।

न तस्य जीवितेनार्थो न धनेन न बन्धुभिः ॥[29]

ಮನುಷ್ಯನಿಗೆ ಶೀಲ ಎಲ್ಲಕ್ಕಿಂತ ಮುಖ್ಯ. ಅದು ಇಲ್ಲದ ಬಳಿಕ ಅಂಥ ವ್ಯಕ್ತಿಯ ಸಂಪರ್ಕದಿಂದಾಗಲೀ, ಬಾಂಧವ್ಯದಿಂದಾಗಲೀ, ಜೀವನದಿಂದಾಗಲೀ ಏನೂ ಅರ್ಥವಿಲ್ಲ. "कुरूपता शीलतया विराजते " ಎಂಬಂತೆ ಶೀಲದಿಂದ ಕುರೂಪವೂ ಸುರೂಪವಾಗುತ್ತದೆ.

ವ್ಯಕ್ತಿಯ ಗುಣಶೀಲಗಳ ನಿರೂಪಣೆಯಲ್ಲಿ ಸಮಾಜದ ಸಂಸ್ಕೃತಿ, ಸಂಪ್ರದಾಯಗಳು ನಿರ್ದಿಷ್ಟ ಪ್ರಭಾವವನ್ನು ಬೀರುತ್ತವೆ. ಗುಣಶೀಲಗಳು ವ್ಯಕ್ತಿ ತಾನು ತಳೆದಿರುವ ಮೌಲ್ಯಕ್ಕನುಗುಣವಾಗಿ ರೂಪಿತವಾಗುತ್ತವೆ. ಈ ಮೌಲ್ಯವು ಸಮಾಜದ ಆಸೆಆಕಾಂಕ್ಷೆಗಳನ್ನೂ, ಸಂಸ್ಕೃತಿ ಸಂಪ್ರದಾಯಗಳನ್ನೂ ಅವಲಂಬಿಸಿರುತ್ತದೆ. ಅಪೇಕ್ಷಿತ ಮನೋಭಾವನೆಗಳನ್ನು ಬೆಳೆಸುವಿಕೆ ಮತ್ತು ಮನೋಭಾವನೆಗಳನ್ನು ಏರ್ಪಡಿಸುವಿಕೆ ಉಂಟಾಗುವುದು  ಶಾಲಾ ಅನುಭವಗಳಿಂದ ಹಾಗೂ ಶಿಕ್ಷಕರ ಪ್ರಭಾವದಿಂದ, ಕೆಲವು ಘಟನೆಗಳು, ಪಠ್ಯ ಹಾಗೂ ಸಹ ಪಠ್ಯ ಚಟುವಟಿಕೆಗಳಿಂದ. ಶಾಲೆಗಳಲ್ಲಿ ನೀತಿಶಿಕ್ಷಣವನ್ನು ಬೋಧಿಸುವಾಗ ಶ್ರೇಷ್ಠ ವ್ಯಕ್ತಿಗಳ ಜೀವನಚರಿತ್ರೆ ಮತ್ತು ಅವರ ತತ್ವಗಳು ಮಕ್ಕಳಿಗೆ ದಾರಿದೀಪವಾಗಲು ಮಾರ್ಗದರ್ಶನ ಮಾಡಬೇಕು. ಇದರಿಂದ ಅವರ ಅನೇಕ ಅನಪೇಕ್ಷಿತ ವರ್ತನೆಗಳು ಪರಿವರ್ತನೆಗೊಂಡು ಉತ್ತಮ ಗುಣಶೀಲಗಳನ್ನು ಬೆಳೆಸಿಕೊಂಡು ಆದರ್ಶವಾಗಿ ಬದುಕುವರು.[30] ಮಕ್ಕಳು ತಮ್ಮ ಭಾವನೆಗಳನ್ನು ಮುಕ್ತವಾಗಿ ಅಭಿವ್ಯಕ್ತಿಗೊಳಿಸಲು ಅವಕಾಶ ಕಲ್ಪಿಸಿಕೊಡಬೇಕು. ಶಾಲೆಯ ಚಟುವಟಿಕೆಗಳಲ್ಲಿ ಭಾಗವಹಿಸಿ ಯೋಜನೆಗಳಲ್ಲಿ ಪಾಲ್ಗೊಳ್ಳುವುದು, ಸಾಂಸ್ಕೃತಿಕ ಚಟುವಟಿಕೆಗಳು ಮತ್ತು ಪಠ್ಯ ವಿಷಯಗಳಲ್ಲಿ ಚರ್ಚೆ ಮುಂತಾದ ಕ್ರಿಯಾತ್ಮಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಂತೆ ಆಸಕ್ತಿ ಕೆರಳಿಸಿ, ಅವರು ಸತ್ಕಾರ್ಯ, ಸನ್ನಡತೆಯೆಡೆಗೆ ಗಮನಹರಿಸುವಂತೆ ಪ್ರೋತ್ಸಾಹಿಸಬೇಕು. ಇದರಿಂದ ಅವರಲ್ಲಿ ಅಶಿಸ್ತು, ಅಶಾಂತಿ, ಅವಿಧೇಯತೆ, ಅನಾಸಕ್ತಿ ಇತ್ಯಾದಿ ವರ್ತನೆಗಳು ಪರಿವರ್ತನೆಗೊಂಡು ಉತ್ತಮ ಗುಣಶೀಲಗಳೆಡೆಗೆ ಆಸಕ್ತಿ ಹೊಂದಿ ಜಾಗೃತರಾಗುವರು.

ಇಂದಿನ ದಿನಗಳಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಒಂದು ದೊಡ್ಡ ಕೊರಗು ಕಾಡುತ್ತಿದೆ. ಅದೇನೆಂದರೆ, ಅಂಕಗಳಿಗಾಗಿ, ವೃತ್ತಿಗಾಗಿ, ಶಿಕ್ಷಣವಾಗಿಬಿಟ್ಟಿದೆ. ಜ್ಞಾನವೃದ್ಧಿ, ನೀತಿ, ಗುಣ ಸಂಪತ್ತು, ಬದುಕಿನ ಸಾರ್ಥಕ್ಯ ಲಕ್ಷಣಗಳು ಮತ್ತುಜೀವನ ಮೌಲ್ಯಗಳನ್ನು ಕಾಣುತ್ತಿಲ್ಲ. ಹಿಂದೆ ಗುರುಕುಲಗಳಲ್ಲಿ, ಶಿಷ್ಯರ ಬಗ್ಗೆ ವೈಯಕ್ತಿಕ

---

**29. ಭಟ್.ವಿ.ಎನ್,** ಜ್ಞಾನದೀಪ, ಅ-92-ಪು-191 (ವ್ಯಾಸಮಹರ್ಷಿಗಳು-ಮಹಾಭಾರತದಲ್ಲಿ). ವಿಶ್ವನಾಥ ಪ್ರಕಾಶನ,(1997) ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ-577201.

**30. ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ -20, ಪು - 531-537. ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4.

ಗಮನಹರಿಸಿ, ಬದುಕಿನ ವ್ಯವಹಾರಗಳ ಕುರಿತು ಅನೇಕ ವಿಚಾರಗಳನ್ನು ಮನದಟ್ಟು ಮಾಡುತ್ತಾ, ವಿವಿಧ ರೀತಿಯ ಸಾಮಾಜಿಕ ಮತ್ತು ನೈತಿಕ ಮೌಲ್ಯಗಳನ್ನು ಕಲಿಸುತ್ತಿದ್ದರು. ಗುರುಹಿರಿಯರನ್ನು ಕಂಡರೆ ಅಪಾರ ಗೌರವ, ಭಕ್ತಿ, ಶ್ರದ್ಧೆ, ವಿಧೇಯತೆ ಮುಂತಾದ ಗುಣಗಳಿಂದ ಶಿಷ್ಯರು ಸಂಸ್ಕಾರವಂತರಾಗಿ ಕಂಡುಬರುತ್ತಿದ್ದರು.

श्रद्धावाँल्लभते ज्ञानं तत्परः संयतेन्द्रियः।

ज्ञानं लब्ध्वा परां शान्तिमचिरेणाधिगच्छति ॥[31]

ಶ್ರದ್ಧಾವಂತನೂ, ತತ್ಪರನೂ, ಜಿತೇಂದ್ರಿಯನೂ, ಆದವನಿಗೆ ಜ್ಞಾನವು ಲಭಿಸುತ್ತದೆ. ಜ್ಞಾನವು ಬರುತ್ತಲೇ ಅವನು ಮುಕ್ತಿಯನ್ನು ಪಡೆಯುತ್ತಾನೆ. ಹೀಗೆಂದು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸುತ್ತಾ ಜ್ಞಾನದ ಮಹತ್ವವನ್ನು ತಿಳಿಸುತ್ತಾನೆ.

विद्या ददाति विनयं विनयाद्याति पात्रताम् ।

पात्रत्वाद्धनमाप्नोति धनाद्धर्मं ततः सुखम् ॥[32]

ವಿದ್ಯೆಯು ವಿನಯವನ್ನು ಕೊಡುತ್ತದೆ. ವಿನಯದಿಂದ ಸ್ಥಾನವು ಸಿಗುತ್ತದೆ. ಸ್ಥಾನದಿಂದ ಹಣವು ದೊರಕುತ್ತದೆ. ಆ ಹಣದ ದಾನಧರ್ಮದಿಂದ ನಂತರ ಸುಖವು ಉಂಟಾಗುತ್ತದೆ. ಈ ಉಕ್ತಿಗಳು ಅಕ್ಷರಶಃ ಅರ್ಥಬದ್ಧವಾಗಿ ಕಂಡು ಬರುತ್ತಿದ್ದವು. ಅಂದರೆ, ಪಂಚತಂತ್ರದಲ್ಲಿ ವಿಷ್ಣುಶರ್ಮರು ಬಹಳ ವ್ಯವಸ್ಥಿತವಾಗಿ ರಾಜಕುಮಾರರಿಗೆ ಗುರುಕುಲ ಪದ್ಧತಿಯನ್ನು ಅನುಸರಿಸಿ, ಶಿಷ್ಯರಿಗೆ ಶ್ರದ್ಧಾಭಕ್ತಿಯಿಂದ ಇಷ್ಟಪಟ್ಟು ಕಲಿಯುವಂಥಹ ವಾತಾವರಣ ಒದಗಿಸಿ ಕೊಟ್ಟಿರುತ್ತಾರೆ. ಯಾವ ಯಾವ ಸಂದರ್ಭದಲ್ಲಿ ಎಷ್ಟು ತಿಳಿಸಬೇಕೋ ಅಷ್ಟನ್ನು, ಹಿತಮಿತವಾಗಿ ಆಕರ್ಷಕ ಪುಟ್ಟ ಪುಟ್ಟ ಕಥೆಗಳ ಮೂಲಕ ಬೋಧಿಸಿದ್ದಾರೆ. ಸುಂದರ ವ್ಯಕ್ತಿತ್ವ ನಿರ್ಮಾಣಕ್ಕೆ ಉತ್ತಮ ಬುನಾದಿಯನ್ನು ಹಾಕಿದ್ದಾರೆ.

ಈಗಿನ ಶಿಕ್ಷಣ ವ್ಯವಸ್ಥೆಯಲ್ಲಿ ಪಠ್ಯಕ್ರಮ ಪಾಠಗಳ ವೇಳಾಪಟ್ಟಿಯಲ್ಲಿ ವಾರಕ್ಕೊಂದು ಅವಧಿಯನ್ನು ನೀತಿಪಾಠಕ್ಕಾಗಿ ಮೀಸಲಿಟ್ಟಿರುವುದೇನೋ ನಿಜ. ಆದರೆ ಈ ಅವಧಿ ಒಂದು ರೀತಿಯಲ್ಲಿ ಬಿಡುವಿನ ಸಮಯವಿದ್ದಂತೆ. ಅದು ಯಾವ ಉದ್ದೇಶದಿಂದ ಸಂಯೋಜಿಸಲ್ಪಟ್ಟಿದೆಯೋ, ಅದರಂತೆ ಹೆಚ್ಚಿನ ರೀತಿಯಲ್ಲಿ ಪ್ರಯೋಜನವಾಗುತ್ತಿಲ್ಲ. ಹಿಂದಿನ ಕಾಲದಲ್ಲಿ, ಇಂಥಹ ತಯಾರಿ ಮನೆಯಿಂದಲೇ ಪ್ರಾರಂಭವಾಗಿ, ಶಾಲೆ ಅಥವಾ ಆಶ್ರಮದಲ್ಲಿಯೂ ಹೆಚ್ಚಿನ ಪ್ರೋತ್ಸಾಹ ದೊರಕುತ್ತಿತ್ತು. ಉದಾಹರಣೆಗೆ:- ಹಿಂದೆ

31. **ಭಗವದ್ಗೀತೆ,** ಅ - 4, ಶ್ಲೋ-39.
32. **ಉಪನಿಶತ್ತಿನ ಒಂದು ಪ್ರಸಿದ್ಧ ಶ್ಲೋಕ.**

ಗಾಂಧೀಜಿ, ಶಿವಾಜಿಯಂತಹ ಮಹಾನುಭಾವರು ತಾಯಿಯಿಂದ ಕಲಿತ ಕಲಿಕೆಯಲ್ಲಿನ ಪ್ರೀತಿ ಹಾಗೂ ರಾಮಾಯಣ ಮತ್ತು ಮಹಾಭಾರತ ಮಹಾಕಾವ್ಯಗಳ ಕಥೆಗಳನ್ನು ಶ್ರದ್ಧಾಭಕ್ತಿಯಿಂದ ಕೇಳಿ ಅದರ ನೀತಿಪಾಠವನ್ನು ಅವರ ಜೀವನದಲ್ಲಿ ಅಳವಡಿಸಿಕೊಂಡು ಶ್ರೇಷ್ಠ ವ್ಯಕ್ತಿಗಳಾಗಿ ಬಾಳಿ ಬದುಕಿ ಇತಿಹಾಸದ ಪುಟಗಳಲ್ಲಿ ಅಮರರಾದರು. ವಿನಯೋಪೇತ ವಿದ್ಯೆಯು ಎಂಥಹವರ ಮನಸ್ಸನ್ನೂ ಆಕರ್ಷಿಸುತ್ತದೆ.

विद्या नाम नरस्य रूपमधिकं प्रच्छन्नगुप्तं धनम्

विद्या भोगकरी यशस्सुखकरी विद्या गुरूणां गुरुः ।

विद्या बन्धुजनो विदेशगमने विद्या परा देवता

विद्या राजसु पूजिता न तु धनं विद्याविहीनः पशुः ॥[33]

ವಿದ್ಯೆಯೆಂಬುದು ಮನುಷ್ಯನ ವಿಶೇಷವಾದ ರೂಪ. ಹಾಗೂ ಅದು ಅವನ ಬಚ್ಚಿಟ್ಟು ಕಾಪಾಡಲ್ಪಟ್ಟ ಧನ. ವಿದ್ಯೆಯು ಅವನಿಗೆ ಸುಖಸಂತೋಷಗಳನ್ನೂ, ಕೀರ್ತಿ ಪ್ರತಿಷ್ಠೆಗಳನ್ನು ತಂದುಕೊಡುತ್ತದೆ. ಅದು ಅವನ ಗುರುಗಳ ಗುರು. ವಿದೇಶಕ್ಕೆ ಹೊರಟಾಗ ಅದು ಅವನ ಬಂಧು. ಅದೇ ಅವನಿಗೆ ಪರದೈವ. ಅದು ರಾಜರಲ್ಲಿ ಪೂಜಿಸಲ್ಪಟ್ಟಿದೆ. ಹಣವಲ್ಲ. ವಿದ್ಯೆಯಿಲ್ಲದವನು ಪಶು. ವಿದ್ವತ್ತು ಮತ್ತು ರಾಜತ್ವ ಎಂದಿಗೂ ಸಮಾನವಾದದ್ದಲ್ಲ. ರಾಜನು ತನ್ನ ದೇಶದಲ್ಲಿ ಮಾತ್ರ ಪೂಜಿತನಾಗುತ್ತಾನೆ. ಆದರೆ ವಿದ್ವಾನ್ ಸರ್ವತ್ರ ಪೂಜ್ಯತೇ.



೩೩. **ಭರ್ತೃಹರಿಯ ನೀತಿಶತಕ,** ವಿದ್ವತ್ ಪದ್ಧತಿ- ಶ್ಲೋ-೨೦,

# 4-4. पञ्चतन्त्रस्य प्रथमंतन्त्रम्-मित्रभेदः

### ಕಥೆಗಳ ವಿಶ್ಲೇಷಣೆ ಮುಂದುವರೆದಿದೆ

ಈ ಮೇಲೆ ವಿಶ್ಲೇಷಣೆ ಮಾಡಿದ ಉನ್ನತ ಮಟ್ಟದ ಮನೋವ್ಯಾಪಾರಗಳಾದ ಆಲೋಚನೆ – ವಿವೇಚನೆ ಹಾಗೂ ಕೆಲವು ಜಾಗೃತ ಎಚ್ಚರಿಕೆಯ ತಿಳುವಳಿಕೆಗಳಾದ – ಕಾರ್ಯಸಾಧನೆಯಲ್ಲಿ ಮುಂದಾಲೋಚನೆ – ದುಡುಕು ಅಥವಾ ಆತುರ – ಪರೀಕ್ಷಿಸದೆ ಕೆಲಸ ಮಾಡುವುದು, ಅದರ ಪರಿಣಾಮ – ವರ್ತನೆಗಳ ಪರಿವರ್ತನೆ ಮೂಲಕ ಶೀಲ ಸಂಪನ್ನತೆ ಮುಂತಾದ ಅನೇಕ ಮನೋವೈಜ್ಞಾನಿಕ ವಿಚಾರಗಳು ಶಿಕ್ಷಣ ಕ್ಷೇತ್ರದಲ್ಲಿ ಎಷ್ಟು ಪ್ರಾಮುಖ್ಯತೆ ಪಡೆದಿದೆ ಎಂಬುದರ ಬಗ್ಗೆ ಸಂಕ್ಷಿಪ್ತವಾಗಿ ತಿಳಿದದ್ದಾಯಿತು. ಇದೇ ವಿಚಾರಗಳು ವಿಷ್ಣುಶರ್ಮರ ಪಂಚತಂತ್ರದಲ್ಲಿ ಹೇಗೆ ನೈಜವಾಗಿ ಅಡಕಗೊಂಡಿರಬಹುದೆಂದು ಪರಿಶೀಲಿಸಿದಾಗ ಈ ಕೆಲವು ಅಂಶಗಳನ್ನು ಗಮನಿಸಬಹುದು. ಬಹಳ ವಿಶಿಷ್ಟವಾಗಿ ರಚಿಸಿರುವ ಪಂಚತಂತ್ರವು ಒಬ್ಬ ಪ್ರತಿಭಾನ್ವಿತ, ಅನುಭವೀ, ಸಕಲ ಶಾಸ್ತ್ರಪಾರಂಗತ, ವಿದ್ಯಾರ್ಥಿ ಸಮುದಾಯದಲ್ಲಿ ಜನಪ್ರಿಯರಾದ ಪಂಡಿತ ವಿಷ್ಣುಶರ್ಮರ ಅಮೂಲ್ಯ ಕೃತಿ.

ದಕ್ಷಿಣ ಭಾರತದಲ್ಲಿ ಒಂದು ಪ್ರಾಚೀನ ನಗರವಾದ ಮಹಿಲಾರೋಪ್ಯದ ಅರಸು ಅಮರಶಕ್ತಿ. ಅರಸನು ಸಕಲ ಕಲಾಪಾರಂಗತ. ದಾನದಲ್ಲಿ ಕಲ್ಪವೃಕ್ಷಕ್ಕೆ ಸಮಾನನು. ವೈಭವಯುತ ಆಸ್ಥಾನದಲ್ಲಿ ಉನ್ನತವಾದ ರತ್ನಸಿಂಹಾಸನದಲ್ಲಿ ವೀರಮಂಡಿಯೊಡನೆ ಗಾಂಭೀರ್ಯವೇ ಆಕಾರ ಪಡೆದಂತೆ ಗಂಭೀರವಾಗಿ ಮಂಡಿಸಿರುವ ರಾಜ. ಇಷ್ಟೆಲ್ಲ ಇದ್ದರೂ ಅರಸನ ಮುಖದಲ್ಲಿ ಮಾತ್ರ ಚಿಂತೆಯ ಗಾಢ ದುಗುಡದ ಭಾವ. ಈ ರಾಜನ ಕುವರರು ಮೂವರು. "ರಾಜಯೋಗ ಆದರೆ ದರಿದ್ರಜಾತಕ" ಎಂಬಂತೆ ಅತ್ಯಂತ ಮೂರ್ಖರು. ಅಧಿಕಾರ ಮದದಿಂದ, ಯೌವನದ ಸೊಕ್ಕಿನಿಂದ, ಯಥೇಚ್ಛ ಸಂಪತ್ತಿನ ಗರ್ವದಿಂದ, ಸಹವಾಸ ದೋಷದಿಂದ ಉದ್ಧಟರಾಗಿ ವರ್ತಿಸುವ ಪ್ರವೃತ್ತಿಯನ್ನು ಬೆಳೆಸಿಕೊಂಡಿರುವರು.[34] ಇವರಲ್ಲಿ ಉತ್ತಮ ಆಲೋಚನೆ ನಡೆಸುವ ಪರಿಜ್ಞಾನ, ಭವಿಷ್ಯದ ಕಲ್ಪನೆ, ತಂದೆಯವರ ಆತಂಕದ ಬಗ್ಗೆ ಯಾವ ಯೋಚನೆಗಳೂ ಬಂದೇ ಇರಲಿಲ್ಲ ಎನ್ನುವಂತೆ ಕಾಣಿಸುತ್ತಿದ್ದರು. ಕವಿ ಭರ್ತೃಹರಿ ಪ್ರಶ್ನೋತ್ತರ ರೂಪದಲ್ಲಿ ಹೇಳಿರುವುದನ್ನು ಈ ಸಂದರ್ಭದಲ್ಲಿ ಅನ್ವಯಿಸಬಹುದು:-

---

34. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಕಥಾಮುಖ-ಪು-9.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560004.

को लाभो गुणिसङ्गमः किं असुखं प्राज्ञेतरैः संङ्गतिः

का हानिः समयच्युतिर्निपुणता का धर्मतत्त्वे रतिः ।

कः शूरो विजितेन्द्रियः प्रियतमा कानुव्रता किं धनं

विद्या किं सुखमप्रवासगमनं राज्यं किमाज्ञाफलम् ॥[35]

ಲಾಭ ಯಾವುದು? – ಗುಣವಂತರ ಸಹವಾಸ. ಸುಖವಲ್ಲದ್ದು ಯಾವುದು? – ಪ್ರಾಜ್ಞರಲ್ಲದವರ ಸಹವಾಸ. ನಷ್ಟವು ಯಾವುದು? – ಸಮಯ ಅಥವಾ ಅವಕಾಶವನ್ನು ಕಳೆದುಕೊಳ್ಳುವುದು. ನೈಪುಣ್ಯ ಯಾವುದು? – ಧರ್ಮದ ತತ್ವದಲ್ಲಿ ಆಸಕ್ತಿ. ಶೂರನು ಯಾರು? – ಇಂದ್ರಿಯಗಳನ್ನು ಜಯಿಸಿದವನು. ಪ್ರಿಯತಮೆಯು ಯಾರು? – ಅನುಸರಿಸಿ ನಿಷ್ಠೆಯಿಂದ ಇರುವವಳು. ಹಣವು ಯಾವುದು? – ವಿದ್ಯೆಯು. ಸುಖವು ಯಾವುದು? – ಪ್ರವಾಸ ಹೋಗದಿರುವುದು. ರಾಜ್ಯ ಯಾವುದು? – ಆಜ್ಞಾ ಫಲವು.

ಮುಂದಿನ ರಾಜ್ಯಾಡಳಿತ ಹೊಣೆಯನ್ನು ಅತ್ಯಂತ ಮೂರ್ಖರಾಗಿರುವ ಮಕ್ಕಳು ಹೇಗೆ ಹೊತ್ತಾರು !! ಎಂಬ ಚಿಂತೆ ರಾಜನ ಹಾಗೂ ರಾಣಿಯ ನೆಮ್ಮದಿ ಕೆಡಿಸಿಬಿಟ್ಟಿದೆ. ಇಂಥಹ ಸಂಕಷ್ಟಪರಿಸ್ಥಿತಿಯಲ್ಲಿ ನೆರವಿಗೆ ಪತ್ತೆಯಾಗಿ ಆಯ್ಕೆಯಾದವರೇ ಪ್ರಖ್ಯಾತ ಅರ್ಥಶಾಸ್ತ್ರಜ್ಞ, ರಾಜ್ಯಶಾಸ್ತ್ರಜ್ಞ ಚಾಣಕ್ಯರಿಂದ ಪ್ರಭಾವಿತರಾದ ವಿಷ್ಣುಶರ್ಮರು. ರಾಜಕುಮಾರರ ಮೂಲವರ್ತನೆಗಳ ಬಗ್ಗೆ ಹಾಗೂ ಸನ್ನಿವೇಶಗಳಿಂದ ಉಂಟಾಗಿರುವ ವ್ಯತ್ಯಾಸಗಳ ಬಗ್ಗೆ ಬಹಳ ಸೂಕ್ಷ್ಮವಾಗಿ ಗಮನಿಸಿ, ಒಳ್ಳೆಯ ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಪೂರ್ವಾಪರ ಚಿಂತನೆ ನಡೆಸಿ, ಅವರ ಆಸಕ್ತಿ, ಆಲೋಚನೆಗಳ ಧನಾತ್ಮಕ ಬೆಳವಣಿಗೆಗೆ ಏನು ಮಾಡಬೇಕು? ಎಂಬುದರ ಕುರಿತು ಬಹಳ ವಿವೇಚನಾ ಪೂರ್ವಕ ಯೋಚನೆ ನಡೆಸಿದರು, ಇವರಿಗೆ ಬದುಕಿನ ನೀತಿನಿಯಮ, ಶಿಸ್ತು, ಸಂಯಮ, ಇವುಗಳನ್ನು ಆಸಕ್ತಿಯಿಂದ ಬೆಳೆಸಿಕೊಳ್ಳಲು ಯಾವ ರೀತಿಯಲ್ಲಿ ಪ್ರೇರೇಪಿಸಬಹುದು? ಮುಂತಾದ ವಿಚಾರಗಳನ್ನು ತಮ್ಮ ಅನುಭವಕ್ಕೆ ಒರೆಹಚ್ಚಿ, ವಿಮರ್ಶಿಸಿ, ಅಂತಿಮವಾಗಿ ಶಿಕ್ಷಣವನ್ನು ನೀತಿಕಥೆಗಳ ಮೂಲಕವೇ ನೀಡಬೇಕಾಗುತ್ತದೆಂಬ ನಿರ್ಧಾರಕ್ಕೆ ಬಂದರು. ಇವರುಗಳನ್ನು ಸುಶಿಕ್ಷಿತರನ್ನಾಗಿ ಮಾಡುವ ಹಾಗೂ ಇವರು ಮುಂದಿನ ಭವಿಷ್ಯ ಜೀವನದಲ್ಲಿ ಉತ್ತಮ ಗುಣಗಳನ್ನು ಬೆಳೆಸಿಕೊಂಡು, ಒಳ್ಳೆಯ ವ್ಯಕ್ತಿತ್ವ ನಿರ್ಮಾಣ ಮಾಡಿಕೊಳ್ಳುವಂತೆ ಉತ್ತಮ ಶೈಕ್ಷಣಿಕ ಸನ್ನಿವೇಶಗಳನ್ನು ಒದಗಿಸಿಕೊಟ್ಟು, ವರ್ತನೆಗಳನ್ನು ಅಪೇಕ್ಷಿತ ಮಾರ್ಗಕ್ಕೆ ಕೊಂಡೊಯ್ಯುವಂತೆ ಮಾಡುವುದಾಗಿ ಸವಾಲನ್ನು ಸ್ವೀಕರಿಸಿದರು. ಇದು ನಿಜಕ್ಕೂ ವಿಷ್ಣುಶರ್ಮರಲ್ಲಿದ್ದ ಆತ್ಮವಿಶ್ವಾಸ ಹಾಗೂ ಧೃಢ ಸಂಕಲ್ಪವನ್ನು ಸೂಚಿಸುತ್ತದೆ.

---

35. **ಭರ್ತೃಹರಿ**– ನೀತಿಶತಕ – ಶೇಷ ಭಾಗ– ಶ್ಲೋ–104.

ಈ ರಾಜಕುಮಾರರಿಗೊದಗಿದ್ದ ದುಃಸಹವಾಸದಿಂದ ಉದ್ಧಟರಾಗಿ ಬೆಳೆಯುತ್ತಿರುವ ಮನೋಧೋರಣೆಯನ್ನು ಪರಿವರ್ತನೆ ಮಾಡುವ ಸದುದ್ದೇಶದಿಂದ ಮೊದಲನೆಯ ತಂತ್ರ ಮಿತ್ರಭೇದದ ಮೂಲಕ ಅಂದರೆ, ಚತುರೋಪಾಯಗಳಲ್ಲಿ ಮೂರನೆಯದೇ ಭೇದ. ಇದರಲ್ಲಿ ಪರಸ್ಪರರು ಬೆರೆತಿರುವಾಗ ಅವರು ಅಭೇದ್ಯರಾಗುತ್ತಾರೆ. ಮೊದಲು ಮಿತ್ರರನ್ನು ಬೇರ್ಪಡಿಸುವುದರ ಬಗ್ಗೆ ರಾಜಕುಮಾರರು ಪರಿಜ್ಞಾನ ಹೊಂದಿದರೆ, ಸಹವಾಸ ದೋಷಗಳಿಂದ ಉಂಟಾಗುವ ಅನಾಹುತಗಳ ಅರಿವುಂಟಾಗುತ್ತದೆ.[36] ನಂತರದಲ್ಲಿ ಉಪಾಯ-ಅಪಾಯಗಳನ್ನರಿತು ಉತ್ತಮ ಮಿತ್ರರನ್ನು ಹೇಗೆ ಸಂಪ್ರಾಪ್ತಿ ಮಾಡಿಕೊಳ್ಳುವುದು ಎಂಬ ಬಗ್ಗೆ ರಾಜಕುಮಾರರೇ ವಿವೇಚನೆಯಿಂದ ಆಲೋಚನೆ ಬೆಳೆಸಿಕೊಳ್ಳುತ್ತಾರೆಂದು ವಿಷ್ಣುಶರ್ಮರು ಚಿಂತನೆ ನಡೆಸಿದ್ದಾರೆ. ಆಗಾಗ್ಗೆ ಕೆಲವು ಮುಖ್ಯ ಸೂಚನೆಗಳನ್ನು ಕೊಡುತ್ತಾರೆ: ಒಳ್ಳೆಯ ಸಹವಾಸ ಮಾಡಬೇಕು:-

जाड्यं धियो हरति सिञ्चति वाचि सत्यं मानोन्नतिं दिशति पापमपाकरोति ।

चेतः प्रसादयति दिक्षु तनोति कीर्तिं सत्सङ्गतिः कथय किं न करोति पुंसाम् ॥[37]

ಸತ್ಪುರುಷರ ಸಹವಾಸವು ಬುದ್ಧಿಯ ಜಡತ್ವ ಹೋಗಲಾಡಿಸುತ್ತದೆ. ಮಾತಿನಲ್ಲಿ ಸತ್ಯ ಚಿಮುಕಿಸುತ್ತದೆ. ಗೌರವವನ್ನು ಹೆಚ್ಚಿಸುತ್ತದೆ. ಪಾಪವನ್ನು ದೂರಮಾಡುತ್ತದೆ. ಮನಸ್ಸನ್ನು ಪ್ರಸನ್ನಗೊಳಿಸುತ್ತದೆ.. ಎಲ್ಲಾ ದಿಕ್ಕುಗಳಲ್ಲಿಯೂ ಕೀರ್ತಿಯನ್ನು ಹರಡುತ್ತದೆ, ಸತ್ಸಹವಾಸವು ಜನರಿಗೆ ಏನು ತಾನೇ ಮಾಡುವುದಿಲ್ಲ? ಹೇಳು.

ಹಿಂದಿನ ಅಧ್ಯಾಯದಲ್ಲಿ ಪಂಚತಂತ್ರದ ಪ್ರಥಮ ತಂತ್ರ ಮಿತ್ರಭೇದದ ಕೆಲವು ಕಥೆಗಳ ವಿಶ್ಲೇಷಣೆ ಮಾಡಿದ್ದಾಗಿತ್ತು. ಈ ಅಧ್ಯಾಯದಲ್ಲಿ ಇನ್ನುಳಿದ ಕಥೆಗಳನ್ನು ವಿಶ್ಲೇಷಿಸಿ, ವಿಷ್ಣುಶರ್ಮರ ಪಂಚತಂತ್ರದಲ್ಲಿ ಶೈಕ್ಷಣಿಕ ಮನೋವಿಜ್ಞಾನ, ಉತ್ತಮ ವ್ಯಕ್ತಿತ್ವ ನಿರ್ಮಾಣ ಕಲೆ ಹಾಗೂ ಸುಂದರ ಬದುಕಿನ ಮಾರ್ಗದರ್ಶನದ ವಿಚಾರಗಳನ್ನು ಪತ್ತೆ ಮಾಡೋಣ.

ಮೂರನೆಯ ಉಪಕಥೆ "ಸ್ವಂತ ಬುದ್ಧಿ ಒಂದಿರಬೇಕು ಎಂಬುದರ ಮೂಲಕ ದಂತಿಲ-ಗೋರಂಭರ ಕಥೆ ಹೇಳುತ್ತಾ, ರಾಜಮಾನ್ಯ ದಂತಿಲನು ರಾಜಪರಿವಾರದಿಂದ ಅಲಕ್ಷಿಸಲ್ಪಟ್ಟು, ಕೊನೆಗೆ ಅರಮನೆಗೂ ಬರದಂತೆ ಶಿಕ್ಷಿಸಲ್ಪಟ್ಟನು. ಇದಕ್ಕೆ ಕಾರಣ ಕಸಗುಡಿಸುವಾತನೊಬ್ಬನಿಗೆ ಇವನು ಹಿಂದೆ ಮಾಡಿದ್ದ ಅವಮಾನ. ಇದರಿಂದ ಭಂಗಿತನಾದ ಆತ ಈ ದಂತಿಲನಿಗೆ ರಾಜಾನುಗ್ರಹ ತಪ್ಪುವಂತೆ ಹೇಗೆ ಮಾಡಬಹುದು ಎಂದು ಯೋಚಿಸಿ ಬಹಳ ಬುದ್ಧಿವಂತಿಕೆಯಿಂದ ಒಂದು ತಂತ್ರ ಹೂಡಿ ರಾಜನಿಗೆ ಒಂದು ರೀತಿಯ ಮಾನಸಿಕ ಗೊಂದಲ ಹಾಗೂ ಕಳವಳ ಹುಟ್ಟು ಹಾಕಿ ಒಡಕನ್ನುಂಟುಮಾಡಿದ್ದನು.

---

36. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಪ್ರ.ತಂ. ಮಿತ್ರಭೇದ-ಪು-18.(2015) ವರ್ನಿಲ,39/2-11, ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು-560050

37. **ಭರ್ತೃಹರಿಯ ನೀತಿಶತಕ,** ವಿದ್ವತ್ ಪದ್ಧತಿ-ಶ್ಲೋ-23.

ರಾಜಾನುಗ್ರಹವಿರುವಷ್ಟು ಕಾಲ ನೀಚ, ಹೇಡಿ, ಮಾನಹೀನ, ಮೂಢರಾಗಿದ್ದರೂ ಗೌರವಕ್ಕೆ ಪಾತ್ರರಾಗುತ್ತಾರೆಂದುಕೊಂಡು ದಂತಿಲನು ಗೋರಂಭನೊಡನೆ ತಾನು ಹಿಂದೆ ಮಾಡಿದ್ದ ತಪ್ಪಿಗೆ ಕ್ಷಮಾಪಣೆ ಕೇಳಿಕೊಂಡು ರಾಜಾಶ್ರಯವಿಲ್ಲದ ತನ್ನ ಪರಿಸ್ಥಿತಿಯನ್ನು ಹೇಳಿಕೊಂಡನು. ಗೋರಂಭನು ದಂತಿಲನ ಉಪಚಾರದಿಂದ ಪ್ರಸನ್ನನಾಗಿ, ಪುನಃ ತನ್ನ ಸ್ವಂತ ಬುದ್ಧಿಯಿಂದ ಮತ್ತೊಂದು ತಂತ್ರ ಹೂಡಿ, ರಾಜನ ಮನಸ್ಸನ್ನು ಗೆದ್ದು, ರಾಜನೂ ಸ್ವಂತ ಬುದ್ಧಿಯಿಂದ, ಒಳ್ಳೆಯ ಆಲೋಚನೆ, ವಿವೇಚನೆಯಿಂದ ಅಸಂಬದ್ಧ ಪ್ರಲಾಪವನ್ನು ಕೇಳಿ ತಪ್ಪು ಮಾಡಿದೆನೆಂದು ಪಶ್ಚಾತ್ತಾಪಪಟ್ಟು ದಂತಿಲನನ್ನು ಬರಮಾಡಿಕೊಂಡು ಮೊದಲಿನಂತೆ ಗೌರವಿಸಿದನು.[38]

आकुलीनोऽपि मूर्खोऽपि भूपालं योऽत्र सेवते ।

अपि सम्मानहीनोऽपि स सर्वत्र प्रपूज्यते ॥[39]

ದಂತಿಲನು ಗೋರಂಭನ ಬಗ್ಗೆ ಯೋಚಿಸಿ ಹೀಗೆ ಒಂದು ನೀತಿಯನ್ನು ಹೇಳುತ್ತಾನೆ. "ಇದು ಖಂಡಿತವಾಗಿಯೂ ಗೋರಂಭನ ಕೆಲಸವೇ. ಉತ್ತಮ ಕುಲದವನಲ್ಲದಿದ್ದರೂ, ಮೂರ್ಖನಾಗಿದ್ದರೂ, ಗೌರವಯೋಗ್ಯನಲ್ಲದಿದ್ದರೂ ಯಾರು ರಾಜನ ಸೇವೆಯಲ್ಲಿರುವನೋ ಅವನು ಎಲ್ಲ ಕಡೆಯೂ ಗೌರವಕ್ಕೆ ಪಾತ್ರನಾಗುತ್ತನೆ.ರಾಜನ ಸೇವೆಯಲ್ಲಿದ್ದವನು ನೀಚನಾಗಿರಲಿ ಅಥವಾ ಅಂಜುಬುರುಕನಾಗಿರಲಿ, ಆತನು ಯಾರಿಂದಲೂ ಸೋಲನ್ನು ಕಾಣುವುದಿಲ್ಲ

ವಿಷ್ಣುಶರ್ಮರು ಮಿತ್ರಭೇದ ಕಥೆಯನ್ನು ಮುಂದುವರೆಸಿ... "ಹೀಗಾಗಿ ಸಂಜೀವಕನೆ, ರಾಜನಿಗೆ ಚಾಡಿ ಹೇಳಿಕೊಡುವ ನೀಚ ಚತುರರನೇಕರು ಅವನನ್ನು ಸುತ್ತುವರಿದಿರುತ್ತಾರೆ. ಅಸ್ಥಿರನಾದ ರಾಜನು ಸುಲಭದಲ್ಲಿ ಅವರ ಮಾತಿಗೆ ಮರುಳಾಗುತ್ತಾನೆ. ಆದ್ದರಿಂದ ಪಿಂಗಳಕನ ಮುಂದೆ ನೀನು ನುಡಿವಾಗ, ನಡೆವಾಗ ಎಚ್ಚರವಿರಲಿ" ಎಂದು ದಮನಕನು ಹೇಳಿದ್ದಕ್ಕೆ ಸಮ್ಮತಿ ದೊರಕಿತು.

"ರಾಜಕುಮಾರರೇ, ಮತ್ತೆಲ್ಲವೂ ಏನು ಆಗಬೇಕೋ ಅದರಂತೆ ಆಯಿತು." ಎಂದು ಹೇಳಿ ರಾಜಕುಮಾರರು ಈ ಬಗ್ಗೆ ಆಲೋಚಿಸಲು ಅನುವು ಮಾಡಿಕೊಟ್ಟರು.

"ಅಂದರೆ, ಗುರುಗಳೇ ಆದದ್ದಾದರೂ ಏನು? ಎಂದು ಕೇಳಿದನು ಬಹುಶಕ್ತಿ. ಗುರುಗಳು– "ಇದಕ್ಕೆ ಉತ್ತರವನ್ನು ನಾನು ಹೇಳುವುದಿಲ್ಲ. ನೀವೇ ಊಹಿಸಿ ತಿಳಿದುಕೊಳ್ಳಬೇಕು.

---

38. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಪಂಚತಂತ್ರದ ಕನ್ನಡಾನುವಾದ, ಮಿತ್ರಭೇದ–32–36.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–560004.

39. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–159, ಪು–86,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ನಾಳೆಯವರೆಗೆ ನಿಮಗೆ ಸಮಯ ಕೊಟ್ಟಿದ್ದೇನೆ. ನಾಳೆ ಬೆಳಗ್ಗೆ ಇಲ್ಲಿಗೆ ಬನ್ನಿ. ಏನಾಯಿತು ಎಂದು ನೀವು ಹೇಳಬೇಕು. ಮತ್ತೆ ನಾನು ಕಥೆಯನ್ನು ಮುಂದುವರಿಸುತ್ತೇನೆ." ಎಂದಿದ್ದಾರೆ. ಮುಂದೇನಾಗಿದ್ದಿರಬಹುದು ಎಂಬುದರ ಬಗ್ಗೆ ರಾಜಕುಮಾರರು ತಮ್ಮ ತಮ್ಮಲ್ಲೇ ಹಾಗಲ್ಲ, ಹೀಗೆ, ಯಾಕೆ ಹಾಗೆ? ಅದಲ್ಲ, ಇದು ಎಂದು ಚರ್ಚಿಸುತ್ತಿದ್ದರು. ಗುರುಗಳು ಇವರು ಚರ್ಚಿಸುತ್ತಿರುವುದನ್ನು ಕಂಡು ಸಮಾಧಾನ ಪಟ್ಟರು. ಒಂದು ರೀತಿಯಲ್ಲಿ ವೃತ್ತಿಯಲ್ಲಿನ ತೃಪ್ತಿ. ಇಲ್ಲಿ ನಾವು ಗಮನಿಸಬಹುದು, ವಿಷ್ಣುಶರ್ಮರು ಎಂತಹ ಒಳ್ಳೆಯ ಸನ್ನಿವೇಶವನ್ನೊದಗಿಸಿ ಆಲೋಚಿಸುವ, ವಿವೇಚನೆಯಿಂದ ಚರ್ಚಿಸುವ ತರಬೇತಿಯನ್ನು ರಾಜಕುಮಾರರಿಗೆ ನೀಡಿದ್ದಾರೆ. ಒಂದು ನೈಜ ವಿಚಾರಗೋಷ್ಠಿಯನ್ನೇ ಏರ್ಪಡಿಸಿದ್ದಂತೆ. ಇದು ಒಬ್ಬಆದರ್ಶ ಶಿಕ್ಷಕನ ಬೋಧನಾ ಕೌಶಲ್ಯ ಹಾಗೂ ಗುಣಲಕ್ಷಣ. ನಿಧಾನವಾಗಿಯಾದರೂ ರಾಜಕುಮಾರರು ಕಥೆಯ ಆಳಕ್ಕೆ ಇಳಿಯುತ್ತಿದ್ದಾರೆ ಎಂಬ ತೃಪ್ತಿ ಗುರುಗಳಿಗಾಯಿತು. ಮರುದಿನ ವಿಷ್ಣುಶರ್ಮರು ಬರುವುದರೊಳಗೆ ರಾಜಕುಮಾರರು ಬಂದು ಕುಳಿತಾಗಿತ್ತು.[40] ಹೀಗೊಂದು ಕಥೆಯು ಬರುತ್ತದೆ :-

जम्बुको हुडुयुद्धेन वयं चाषाढभूतिना ।

दूतिका परकार्येण त्रयो दोषाः स्वयंकृताः ॥[41]

"ನರಿಯು ಟಗರುಗಳ ಕಾಳಗದಿಂದ, ನಾವು ಆಶಾಢಭೂತಿಯಿಂದ ಹಾಗೂ ದೂತಿಯು ನೇಕಾರನಿಂದ ತೊಂದರೆಗೊಳಗಾದೆವು. ಆದರೆ ಈ ಮೂವರೂ ಸ್ವಯಂಕೃತ ಅಪರಾಧದಿಂದಲೇ ತೊಂದರೆಗೊಳಗಾದರು."

ಇದನ್ನು ಕೇಳಿದ ಕರಟಕ ಅದೇನೆಂದು ಕೇಳಲು ದಮನಕನು **ಆಶಾಢಭೂತಿ – ನರಿ – ದೂತಿಯ ಕಥೆ** ಹೇಳಿದನು.

ಒಂದು ನಿರ್ಜನವಾದ ಪ್ರದೇಶ, ಅಲ್ಲೊಂದು ಮಠ.ಅಲ್ಲಿ ದೇವಶರ್ಮನೆಂಬ ಸಂನ್ಯಾಸಿಯು ವಾಸವಾಗಿದ್ದನು. ಅನೇಕ ಸಜ್ಜನರು ಅವನಿಗೆ ದಾನವಾಗಿ ಕೊಟ್ಟ ಬೆಲೆಬಾಳುವ ವಸ್ತ್ರಗಳನ್ನು ಮಾರುವುದರಿಂದ ಅವನಲ್ಲಿ ಅಪಾರ ಹಣ ಸೇರಿತ್ತು. ದುಡ್ಡಿನ ವಿಷಯದಲ್ಲಿ ಅವನು ಯಾರನ್ನೂ ನಂಬದೆ ಹಗಲು ರಾತ್ರಿ ಧನವನ್ನು ತನ್ನ ಪಂಚೆಯ ಸೆರಗಿನಲ್ಲೇ ಕಟ್ಟಿಕೊಂಡಿರುತ್ತಿದ್ದನು. ಅಂತಹ ಧನದ ಬಗ್ಗೆ ಹೀಗೊಂದು ನುಡಿ ಬಹಳ ಯೋಗ್ಯವಾಗಿದೆ.

अर्थानामर्जने दुःखमर्जितानां  च रक्षणे ।

आये दुःखं व्यये दुःखं धिगर्थाः कष्टसंश्रयाः ॥[42]

---

40. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಪ್ರ.ತಂ.-ಪು-34-35.(2015)ವರ್ನಿಲ, 39/2-11, ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು-560050.
41. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-173,ಪು-96,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.
42. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-174, ಪು-97,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಅಂದರೆ, ಧನ ಸಂಪಾದನೆ ಮಾಡುವುದರಲ್ಲಿ ದುಃಖ ಮತ್ತು ಸಂಪಾದನೆ ಮಾಡಿದ್ದನ್ನು ರಕ್ಷಿಸಿಕೊಳ್ಳುವುದರಲ್ಲೂ ದುಃಖ. ಸಂಪಾದನೆ ಹಾಗೂ ವ್ಯಯ ಎರಡು ಸಮಯದಲ್ಲೂ ದುಃಖವುಂಟಾಗುತ್ತದೆ. ಹೀಗೆ ಕಷ್ಟವನ್ನೇ ತಂದೊಡ್ಡುವ ಹಣದ ಬಗ್ಗೆ ಧಿಕ್ಕಾರವಿರಲಿ.

ಒಮ್ಮೆ ಆಷಾಢಭೂತಿ ಎಂಬ ಪರರ ಹಣವನ್ನು ಕದಿಯುವುದರಲ್ಲಿ ನಿಷ್ಣತನಾದ ದೂರ್ತನು ಸಂನ್ಯಾಸಿಯ ಹಣದ ವಿಚಾರ ತಿಳಿದುಕೊಂಡು ಹೇಗೆ ಕದಿಯಬಹುದೆಂದು ಚಿಂತಿಸಿ, ಮಾತಿನ ಮೋಡಿಯಿಂದ ಇವನ ವಿಶ್ವಾಸ ಗಳಿಸಿ ಶಿಷ್ಯನಾಗಲು ಯೋಜನೆ ಹಾಕಿಕೊಂಡನು. ಸಂನ್ಯಾಸಿಯ ಬಳಿ ಹೋಗಿ 'ಓಂ ನಮಃ ಶಿವಾಯ' ಎಂದು ನುಡಿದು, ಬಹಳ ಬುದ್ಧಿವಂತಿಕೆಯಿಂದ ಶಿಷ್ಯನಾಗಲು ಒಪ್ಪಿಗೆ ಪಡೆದೇ ಬಿಟ್ಟನು. ದೇವಶರ್ಮನು ದೂರ್ತನಿಗೆ ಕೆಲವು ಷರತ್ತುಗಳ ಮೇಲೆ, ದೀಕ್ಷೆಯನ್ನು ಅನುಗ್ರಹಿಸಿ ಶಾಸ್ತ್ರೋಕ್ತವಾಗಿ ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಿದನು.

ಆಶಾಢಭೂತಿಯು ಗುರುವಿಗೆ ಉತ್ತಮ ಸೇವೆ ಮಾಡಿ ಸಂತೋಷಪಡಿಸಿದನು. ಹೀಗಿದ್ದರೂ ಗುರುವು ತನ್ನ ಬಳಿ ಇಟ್ಟುಕೊಂಡಿದ್ದ ಹಣದ ಗಂಟನ್ನು ಕೈ ಬಿಡುತ್ತಿರಲಿಲ್ಲ. ಹೀಗೇ ಕಾಲಕಳೆಯುತ್ತಿರಲು ಆಶಾಢಭೂತಿಯು ಬಹಳವಾಗಿ ಚಿಂತಿಸಿ, ಸಂನ್ಯಾಸಿಯನ್ನು ಹೇಗಾದರೂ ಮಾಡಿ, ಕೊಂದಾದರೂ, ಹಣವನ್ನು ಹೊಡೆದುಕೊಳ್ಳಲು ಯೋಜಿಸುತ್ತಿದ್ದನು. ಇದೇ ಸಮಯದಲ್ಲಿ ಒಂದು ಉಪನಯನ ಸಂಸ್ಕಾರ ಮಾಡಲು ದೇವಶರ್ಮನು ಶಿಷ್ಯನೊಂದಿಗೆ ಹತ್ತಿರದ ಒಂದು ಗ್ರಾಮಕ್ಕೆ ಹೊರಟನು. ಮಧ್ಯದಲ್ಲಿ ಒಂದು ನದಿಯನ್ನು ತಲುಪಿ, ಅಲ್ಲಿ, ಸ್ನಾನ, ದೇವರ ಅರ್ಚನೆ ಮಾಡಿದ ಬಳಕ ಪ್ರಯಾಣ ಮುಂದುವರಿಸಲು ಯೋಚಿಸಿದರು. ಈ ಮಧ್ಯೆ ದೇವಶರ್ಮನು ಪ್ರಕೃತಿಯ ಕರೆಗೆ ಹೋಗಬೇಕಾಗಿ ಬಂದಾಗ ಶಿಷ್ಯನನ್ನು ನಂಬಿ ತನ್ನ ಬಟ್ಟೆಯ ಗಂಟನ್ನು ನೋಡಿಕೊಳ್ಳಲು ಹೇಳಿ ಅವನ ಬಳಿ ಕೊಟ್ಟು ಹೊರಟನು. ಈ ಸದವಕಾಶವನ್ನು ಉಪಯೋಗಿಸಿಕೊಂಡು ಗಂಟನ್ನು ಎತ್ತಿಕೊಂಡು ಬೇಗನೆ ಅಲ್ಲಿಂದ ನಡೆದನು. ಅಂತೂ ದೇವಶರ್ಮನು ಆಶಾಢಭೂತಿಯಿಂದ ಮೋಸಹೋದನು. ಅಲ್ಲಿಂದ ಮುಂದೆ ಹಲವಾರು ರೀತಿಯಲ್ಲಿ ವಿಲಾಪಿಸಿ, ಮೆಲ್ಲಮೆಲ್ಲಗೆ ನಡೆಯುತ್ತಾ ಸಾಯಂಕಾಲದ ಸಮಯಕ್ಕೆ ಒಂದು ಗ್ರಾಮ ಸೇರಿದನು. ಅಲ್ಲಿ ಮತ್ತೊಂದು ತರಹ ವಿಚಿತ್ರ ಅನುಭವ ಪಡೆದನು. ಇಲ್ಲಿ ಒಂದು ನೀತಿ ವ್ಯಕ್ತಗೊಂಡಿದೆ:–

अवध्यो ब्राह्मणो बालः स्त्री तपस्वी च रोगभाक् ।

विहिता व्यङ्गिता तेषमपराधे महत्यपि ॥[43]

---

43. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ– ಮಿತ್ರಭೇದ, ಶ್ಲೋ–214,ಪು–126,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

" ಬ್ರಾಹ್ಮಣ, ಬಾಲಕ, ಸ್ತ್ರೀ, ತಪಸ್ವಿ, ರೋಗಿಷ್ಟ–ಇವರು ಮಹಾ ತಪ್ಪನ್ನು ಮಾಡಿದ್ದರೂ ಕೊಲ್ಲಬಾರದು. ಕೇವಲ ಅಂಗಹೀನರನ್ನಾಗಿ ಮಾಡಬೇಕು. ತನ್ನ ಕರ್ಮದಿಂದಲೇ ಇವಳ ಮೂಗು ಕತ್ತರಿಸಲ್ಪಟ್ಟಿದೆ. ಈಗ ರಾಜನ ಶಿಕ್ಷೆಯಂತೆ ಇವಳ ಕಿವಿಯನ್ನು ಕತ್ತರಿಸಬೇಕು." ಹಣ ಕಳೆದುಕೊಂಡ ದೇವಶರ್ಮ, ಅನ್ಯಾಯಕ್ಕೆ ನೆರವಾಗಿ ಮೂಗು ಕೊಯ್ಯಿಸಿಕೊಂಡ ಕ್ಷೌರಿಕನ ಹೆಂಡತಿ, ಅವರವರ ಅನರ್ಥಕ್ಕೆ ಅವರವರೇ ಜವಾಬ್ದಾರರು. ನಂಬಿಕೆಯಿಟ್ಟವನನ್ನು ವಂಚಿಸುವುದು ಸುಲಭವೆಂಬಂತೆ ಆಶಾಢಭೂತಿ ಕಾಲುಕಿತ್ತ. ದೇವಶರ್ಮನ ವ್ಯಥೆ ಸ್ವಲ್ಪ ಹೊತ್ತು ಮಾತ್ರ. ನಂತರ ತನ್ನನ್ನು ತಾನೇ ಸಂತೈಸಿಕೊಂಡ ಜೇನುಹುಳು ಸಂಗ್ರಹಿಸಿಟ್ಟ ಮಧುವನ್ನು ಯಾರೋ ಅಪಹರಿಸುತ್ತಾರೆ. ಈಗ ತನ್ನದೂ ಹಾಗೇ ಆಯಿತು. ಹಣ ಇದ್ದರೆ ಅದನ್ನು ಅನುಭವಿಸಬೇಕು, ಇಲ್ಲವೇ ಪರೋಪಕಾರಕ್ಕಾಗಿ ಅದನ್ನು ವಿನಿಯೋಗಿಸಬೇಕು. ಹಾಗೆ ಮಾಡದೇ ಹೋದಲ್ಲಿ ಹೀಗೆಯೇ ಆಗುತ್ತದೆ. ಎಲ್ಲವೂ ಅದೃಷ್ಟವಶ. ಕಳೆದ ಹಣ ನನ್ನದಲ್ಲವೆಂದೇ ಭಾವಿಸುತ್ತೇನೆ ಎಂದುಕೊಂಡ, ಸುಖದುಖವನ್ನು ಸಮಾನವಾಗಿ ಸ್ವೀಕರಿಸುವ ಸ್ಥಿತಪ್ರಜ್ಞನಂತೆ. ನಿಜಕ್ಕೂ ಎಂತಹ ಅದ್ಭುತವಾದ ಅನುಭವವನ್ನು ಒದಗಿಸಿ, ವಿಷ್ಣುಶರ್ಮರು ನೀತಿಪಾಠವನ್ನು ಎಷ್ಟು ಸೊಗಸಾಗಿ ಬೋಧಿಸಿದ್ದಾರೆ. ಇದು ಒಂದು ರೀತಿಯ ನಿತ್ಯ ಸತ್ಯ. ಹೀಗಾಗಿ ಪಂಚತಂತ್ರ ಪ್ರಾಚೀನ ಜನಪ್ರಿಯ ನೀತಿಕಥೆಯಾಗಿದ್ದರೂ ನಿತ್ಯಹರಿದ್ವರ್ಣ ವಿಚಾರಧಾರೆ ಸರ್ವಕಾಲಿಕ ಹಾಗೂ ಸದಾ ವಿನೂತನವಾಗಿದೆ. ಇಲ್ಲಿ ಒಂದು ಮಾತಿದೆ:–

सुप्रयुक्तस्य दम्भस्य ब्रह्माप्यन्तं न गच्छति ।

कौलिको विष्णुरूपेण राजकन्यां निषेवते ॥[44]

ಸದಾ ಪ್ರಯತ್ನಶೀಲನಾಗಿರುವವನಿಗೆ ದೈವವೂ ಕೂಡ ಒಲಿಯುತ್ತದೆ." ಸರಿಯಾಗಿ ಯೋಚಿಸಿ ಮಾಡಿದ ಮೋಸಜಾಲದಿಂದ ಬ್ರಹ್ಮನೂ ಕೂಡ ಬಿಡಿಸಿಕೊಂಡು ಬರಲಾರ. ಹಾಗೆ ಬೀಸಿದ ಬಲೆಯಿಂದ ವಿಷ್ಣುರೂಪವನ್ನು ಧರಿಸಿದ ನೇಕಾರನೊಬ್ಬನು ರಾಜಕನ್ಯೆಯನ್ನು ರಮಿಸಿದನು "ಕರಟಕನು ಇದನ್ನು ಕೇಳಿ, ಅದು ಹೇಗೆಂದು ಕೇಳಲು ದಮನಕನು **ಮಿಥ್ಯಾವಿಷ್ಣು– ನೇಕಾರ ಕಥೆ**ಯನ್ನು ಹೇಳಿದನು.

ಒಂದಾನೊಂದು ರಾಜ್ಯದಲ್ಲಿ ನೇಕಾರ ಮತ್ತು ಬಡಗಿ ಸ್ನೇಹಿತರಾಗಿದ್ದರು. ಯಾವಾಗಲೂ ಒಟ್ಟಿಗೆ ಕಾಲಕಳೆಯುತ್ತಿದ್ದರು. ಒಮ್ಮೆ ಆ ರಾಜ್ಯದ ದೇವಸ್ಥಾನವೊಂದರಲ್ಲಿ ಜಾತ್ರಾಮಹೋತ್ಸವವು ಜರುಗಿತು. ಅಲ್ಲಿಗೆ ನಾನಾ ದೇಶಗಳಿಂದ ಬಂದ ಜನರ ಗುಂಪಿನ ಮಧ್ಯೆ ಅಲೆಯುತ್ತಿದ್ದ ಈ ಮಿತ್ರರು ಆನೆಯ ಮೇಲೆ ಕುಳಿತಿರುವ ಸರ್ವಲಕ್ಷಣ ಸಂಪನ್ನಳಾದ ಸಖಿಯರಿಂದ ಹಾಗೂ ಅಂತಃಪುರದ ನಪುಂಸಕರಿಂದ ಸುತ್ತುವರೆಯಲ್ಪಟ್ಟ,

44. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ– ಮಿತ್ರಭೇದ, ಶ್ಲೋ–218, ಪು–129, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ದೇವದರ್ಶನಕ್ಕಾಗಿ ಬಂದಿದ್ದ ರಾಜಕನ್ಯೆಯನ್ನು ನೋಡಿದರು. ಅವಳನ್ನು ನೋಡಿದ ಕೂಡಲೇ ನೇಕಾರನು ವಿಷವೇರಿದಂತೆ, ದುಷ್ಟ ಗ್ರಹದಿಂದ ಪೀಡಿತನಾದಂತೆ, ಮನ್ಮಥನ ಬಾಣಗಳಿಂದ ಹೊಡೆಯಲ್ಪಟ್ಟಂತೆ ನೆಲದ ಮೇಲೆ ಬಿದ್ದನು. ಅವನನ್ನು ಆ ಸ್ಥಿತಿಯಲ್ಲಿ ನೋಡಿದ ಬಡಗಿಯು ದುಃಖಿತನಾಗಿ ಆಪ್ತಜನರ ಸಹಾಯದಿಂದ ಅವನನ್ನು ಎತ್ತಿಕೊಂಡು ಮನೆಗೆ ಬಂದನು. ಅವನಿಗೆ ವಿವಿಧ ಚಿಕಿತ್ಸೆಗಳನ್ನು ಮಾಡಿಸಿದ ಮೇಲೆ ಬಹು ಕಾಲದ ನಂತರ ನೇಕಾರನು ಗುಣಮುಖನಾದನು. ನಂತರದಲ್ಲಿ ಬಡಗಿಯು ಮಿತ್ರ ನೇಕಾರನಿಗೆ ಏನಾಗಿತ್ತೆಂಬುದರ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸಿ, ಬಹಳಷ್ಟು ಬುದ್ಧಿವಂತಿಕೆಯಿಂದ ಅವನ ದುಃಖಕ್ಕೆ ಪರಿಹಾರೋಪಾಯಗಳ ಭರವಸೆ ಮೂಡಿಸಿ, ಕಾರಣವನ್ನು ತಿಳಿದುಕೊಂಡನು. ಅದೇನೆಂದರೆ, ಅಂದು ರಾಜಕನ್ಯೆಯನ್ನು ನೋಡಿದ ನಂತರದಲ್ಲಿ ಕಾಮಬಾಧೆಯಿಂದ ಆ ಪರಿಸ್ಥಿತಿ ಉಂಟಾಯಿತೆಂದು ಒಪ್ಪಿಕೊಂಡನು." ಹಾಗಿದ್ದಲ್ಲಿ ಸುದೈವದಿಂದ ನಮ್ಮ ಮನೋರಥವು ಸಿದ್ಧವಾದಹಾಗೆಯೇ, ಇಂದೇ ಅವಳೊಂದಿಗೆ ಸಮಾಗಮವನ್ನು ನಡೆಸು."ಹೀಗೆಂದು ಬಡಗಿಯು ನೇಕಾರನಿಗೆ ಹೇಳಿದನು. ನೇಕಾರನು ಆಗಲೇ ಸಾಯಲು ಸಿದ್ಧನಾಗಿದ್ದವನು, ಬಡಗಿಯ ಮಾತಿಗೆ ಆಶ್ಚರ್ಯಗೊಂಡು, ಅಪಹಾಸ್ಯ ಮಾಡುತ್ತಿರಬಹುದೆಂದುಕೊಂಡನು. ಆಗ ಬಡಗಿಯು"ಮಿತ್ರ, ನನ್ನ ಬುದ್ಧಿ ಬಲವನ್ನು ನೋಡು " ಎಂದು ಹೇಳಿ, ಆ ಕೂಡಲೇ ವರುಣವೃಕ್ಷದ ಮರದಿಂದ ಕೀಲನಿಂದ ಸಂಚರಿಸುವಂತಹ ರೆಕ್ಕೆಯುಳ್ಳ ಗರುಡನನ್ನು ಮತ್ತು ಶಂಖ, ಚಕ್ರ, ಗದೆ, ಪದ್ಮ, ಕಿರೀಟ, ಕೌಸ್ತುಭಮಣಿ ಮುಂತಾದ ವಿಷ್ಣುವಿನ ಎಲ್ಲಾ ಲಕ್ಷಣಗಳನ್ನು ನಿರ್ಮಿಸಿದನು. ನಂತರ ಗರುಡನ ಮೇಲೆ ನೇಕಾರನನ್ನು ಕುಳ್ಳಿರಿಸಿ, ವಿಷ್ಣುವಿನ ಎಲ್ಲಾ ಚಿನ್ಹೆಗಳನ್ನು ತೊಡಿಸಿ, ಕೀಲಿನಿಂದ ಹೇಗೆ ಗರುಡನನ್ನು ನಡೆಸುವುದೆಂದು ತೋರಿಸಿಕೊಟ್ಟನು. ಮತ್ತೆ ಹೇಳಿದನು " ಗೆಳೆಯ ಏಕಾಂಗಿಯಾಗಿ ಏಳು ಅಂತಸ್ತಿನ ಭವನದಲ್ಲಿರುವ ರಾಜಕನ್ಯೆಯ ಅಂತಃಪುರಕ್ಕೆ ರಾತ್ರಿ ಈ ವಿಷ್ಣುರೂಪದಲ್ಲಿ ಹೋಗಿ ಮುಗ್ಧಸ್ವಭಾವದ ಅವಳನ್ನು ನೀನು ವಾಸುದೇವನೆಂದು ನಂಬಿಸಿ, ನಿನ್ನ ಸುಳ್ಳುನುಡಿಗಳಿಂದ ಅವಳನ್ನು ರಂಜಿಸಿ ವಾತ್ಸಾಯನನು ತಿಳಿಸಿರುವ ರೀತಿಯಲ್ಲಿ ಅವಳ ಸಮಾಗಮ ನಡೆಸು"

ನೇಕಾರನು ಅದರಂತೆಯೇ ಅನುಸರಿಸಿ ರಾಜಕುಮಾರಿಗೆ ವಿಷ್ಣುಭಗವಾನ್ ಎಂದೇ ನಂಬಿಸಿ, ಗಾಂಧರ್ವ ವಿವಾಹ ಮಾಡಿಕೊಂಡಂತಹವನಾಗಿ ಕೆಲಸ ಸಾಧಿಸಿಯೇಬಿಟ್ಟನು. ಇವನ ಆಸೆ ನೆರವೇರಿತು. ಗೆಳೆಯನ ಉಪಕಾರವನ್ನು ಮನದಲ್ಲೇ ನೆನೆದನು. ಇರುಳಿನ ಅಂತ್ಯದಲ್ಲಿ ಮನೆಗೆ ಸಂತೋಷದಿಂದ ಹಿಂದಿರುಗಿ ಗೆಳೆಯನಿಗೆ ಕೃತಜ್ಞತೆ ಹೇಳಿದ. ಹೀಗೆ ಹಲವಾರು ರಾತ್ರಿ ಕಳೆದವು.[45]

---

45. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಪಂಚತಂತ್ರದ ಕನ್ನಡಾನುವಾದ, ಮಿತ್ರಭೇದ, ಪು-50-56.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1,ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು-560004

ಆ ದಿನ ದಾಸಿಯೊಬ್ಬಳು ರಾಜಕುಮಾರಿಯ ಚಿಗುರು ತುಟಿಯಲ್ಲಾದ ಗಾಯವು ಅನುಮಾನವನ್ನು ಮೂಡಿಸಲು, ರಾಜನಲ್ಲಿಗೆ ವರದಿ ಮಾಡುತ್ತಾಳೆ. ಇದರಿಂದಾಗಿ ರಾಜನು ವ್ಯಾಕುಲಗೊಂಡು ಮಹಾರಾಣಿಗೆ ವಿಷಯವನ್ನು ಸೂಕ್ಷ್ಮವಾಗಿ ತಿಳಿಸಿದ. ರಾಣಿಯು ತಡಮಾಡದೆ, ಎಚ್ಚರಿಕೆಯಿಂದ ಗಮನಿಸಿ ವಿಚಾರಣೆ ಮಾಡಿದಾಗ ಅನುಮಾನ ಸ್ಥಿರವಾಯಿತು. ನಿಜಾಂಶವೆಲ್ಲವನ್ನೂ ರಾಜಕನ್ಯೆ ತಿಳಿಸಬೇಕಾಯಿತು. ಪರೀಕ್ಷಿಸಲಾಗಿ, ಗರುಡವಾಹನನಾಗಿ ಅವತರಿಸಿದ ಶಂಖಚಕ್ರಗಧಾಪದ್ಮಧಾರಿಯಾಗಿರುವ ಭಗವಂತನನ್ನು ಕಂಡು ಪುಳಕಿತರಾದರು. ನಂತರ ರಾಜನು ತಡಮಾಡದೆ ಸೈನ್ಯವನ್ನು ಸಂಘಟಿಸಿ ನೆರೆ ರಾಜ್ಯದ ಮೇಲೆ ಸೇನಾಸಾಗರವನ್ನು ಹರಿಸಿದ. ರಾಜ್ಯವನ್ನು ಗೆದ್ದನು. ಆತ್ಮವಿಶ್ವಾಸ ಹೆಚ್ಚಿತು. ಬೇರೆ ಪ್ರದೇಶಗಳನ್ನು ಗೆಲ್ಲುತ್ತಲೇ ಹೋದನು. ಆಗ ಉಳಿದ ರಾಜರೆಲ್ಲಾ ಒಂದಾಗಿ ಈತನನ್ನು ಎದುರಿಸಲು ಸಿದ್ಧರಾದರು. ಇತ್ತ ಒಗ್ಗಟ್ಟಾದ ಶತ್ರು ರಾಜರು ಯಾವ ಭಯವೂ ಇಲ್ಲದೆ ರಾಜನ ನಾಡನ್ನೆಲ್ಲಾ ಆಕ್ರಮಿಸಿದರು. ಕೊನೆಗೆ ರಾಜನಿಗೆ ಉಳಿದದ್ದು ಕೋಟೆ ಮಾತ್ರ. ಇನ್ನೊಂದು ಕಡೆ ಮಡದಿ ಕೇಳಿದಾಗಲೆಲ್ಲ ನೇಕಾರನು ಬಹಳ ಬುದ್ಧಿವಂತಿಕೆಯಿಂದ ನಂಬಿಸಿ ಹಲವು ರಾತ್ರಿಗಳನ್ನು ಅವಳೊಂದಿಗೆ ಕಳೆದ. ಆಗ ನಾರಾಯಣನೊಂದಿಗೆ ರಾಜಕನ್ಯೆಯು ಬೇಡಿಕೊಂಡಳು. ಈಗ ಶತ್ರುಗಳನ್ನು ಪರಾಜಯಗೊಳಿಸಬೇಕಾದ ಸಂದರ್ಭ ಒದಗಿಯೇ ಬಂತು. ರಾಜಕನ್ಯೆಯು ವಿನಯಪೂರ್ವಕವಾಗಿ ಹೇಳುತ್ತಾಳೆ " ಭಗವನ್, ನೀನು ಅಳಿಯನಾಗಿರುವಾಗ ನನ್ನ ತಂದೆ-ಯು ಶತ್ರುಗಳಿಂದ ಸೋಲುವುದರಲ್ಲಿ ಅರ್ಥವಿಲ್ಲ. ಆದ್ದರಿಂದ ಕೃಪೆಮಾಡಿ ಎಲ್ಲ ಶತ್ರುಗಳನ್ನು ಕೊಂದುಬಿಡು "ಇದನ್ನು ಕೇಳಿದ ನೇಕಾರನು ಯೋಚಿಸಿದನು. "ಕೋಟೆಯು ನಾಶವಾದರೆ ನನಗೆ ರಾಜಕುಮಾರಿಯಿಂದ ವಿಯೋಗವಾಗುತ್ತದೆ. ಆದ್ದರಿಂದ ಗರುಡ ಯಂತ್ರವನ್ನೇರಿ, ಆಯುಧಗಳನ್ನು ಹಿಡಿದು ಆಕಾಶದಲ್ಲಿ ಶತ್ರುಗಳಿಗೆ ಕಾಣಿಸಿಕೊಳ್ಳುತ್ತೇನೆ. ಒಂದು ವೇಳೆ ನನ್ನನ್ನು ವಾಸುದೇವನೆಂದು ತಿಳಿದು ಭ್ರಾಂತರಾದಲ್ಲಿ ರಾಜನ ಸೈನಿಕರು ಅವರನ್ನು ಸೋಲಿಸಬಹುದು. ಕೋಟೆಯನ್ನು ಉಳಿಸುವ ಪ್ರಯತ್ನದಲ್ಲಿ ನಾನು ಸತ್ತರೂ ಚಿಂತೆಯಿಲ್ಲ.

गवामर्थे ब्राम्हणार्थे स्वाम्यर्थे स्वीकृतेऽथवा ।

स्थानार्थे यस्त्यजेत्प्राणांस्तस्य लोकाः सनातनाः ॥[46]

"ಧನ, ಭೂ, ಗೋ, ಸ್ತ್ರೀ ರಕ್ಷಣೆಗಾಗಿ ಸಾಯುವುದರಿಂದ ಪ್ರಾಪ್ತವಾಗುವ ಸತ್ಯಲೋಕ ನನಗೂ ಸಿಕ್ಕೀತು."[47]

46. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-226ಪು-143,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

47. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಪಂಚತಂತ್ರದ ಕನ್ನಡಾನುವಾದ, ಮಿತ್ರಭೇದ-ಪು-55-56.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು-560004

ಅಷ್ಟರಲ್ಲಿ ಆ ಕಡೆ ಭೂತಭವಿಷ್ಯದ್ವರ್ತಮಾನಗಳನ್ನು ತಿಳಿಯುವ ಭಗವನ್ನಾರಾಯಣನು, ನೇಕಾರನ ಎಲ್ಲಾ ಚೇಷ್ಟೆ ವಿಚಾರವನ್ನು ತಿಳಿದು, ಗರುಡನನ್ನು ಸ್ಮರಿಸಿಕೊಂಡು, ಗರುಡ ಬಂದಾಗ ಹೀಗೆ ಭಗವನ್ನಾರಾಯಣನ ಪ್ರೇರಣೆಯಾಯಿತು– "ಶತ್ರುಗಳ ಬಾಣಗಳಿಂದ ವಿಷ್ಣುವೇಷಧಾರಿ ನೇಕಾರನು ಸಾಯುತ್ತಾನೆ. ಕ್ಷತ್ರಿಯರೆಲ್ಲರೂ ಸೇರಿ ಗರುಡ ಹಾಗೂ ವಿಷ್ಣುವನ್ನು ಕೊಂದರು ಎಂಬ ಕಳಂಕ ಬಂದು ಮುಂದೆ ಲೋಕದಲ್ಲಿ ವಿಷ್ಣುಪೂಜೆಯನ್ನು ಮಾಡುವುದಿಲ್ಲ. ನೀನು ಕೂಡಲೇ ಆ ಮರದ ಗರುಡನಲ್ಲಿ ಸೇರಿ–ಕೊ, ಚಕ್ರವು ಚಕ್ರವನ್ನು ಸೇರಲಿ, ನಾನೂ ಕೂಡ ನೇಕಾರನ ಶರೀರವನ್ನು ಪ್ರವೇಶಿಸಿ ಆತನಿಂದ ಶತ್ರುಸಂಹಾರ ಮಾಡಿಸುತ್ತೇನೆ. ಶತ್ರುಗಳ ನಾಶದಿಂದ ನಮ್ಮ ಮಹಿಮೆಯೂ ಹೆಚ್ಚುತ್ತದೆ" ಎಂದು. ಯೋಜಿಸಿದಂತೆ ಎಲ್ಲವೂ ನಡೆದು ಭಗವಾನ್ ವಿಷ್ಣು ಗರುಡನನ್ನೇರಿ ಸ್ವಸ್ಥಾನವನ್ನು ಸೇರಿದ. ನೇಕಾರನಿಗೆ ಈಗ ಆಶ್ಚರ್ಯ, ತಾನು ಹೀಗೆ ಮಾಡಿದೆನೇ ಎಂದು. ಅದೇ ಮದದಿಂದ ತಲೆ ಎತ್ತಿ ಗರ್ವದಿಂದ ಭೂತಳಕ್ಕೆ ಇಳಿದು ನಡೆದು ಬರುತ್ತಿರುವಾಗ ಅವನನ್ನು ಜನ ಗುರ್ತಿಸಿದರು. ನೇಕಾರನು ಮೊದಲಿನಿಂದ ಹಿಡಿದು ಎಲ್ಲಾ ವೃತ್ತಾಂತವನ್ನೂ ತಿಳಿಸಿದನು. ಸಂತೋಷಗೊಂಡ ರಾಜನು ಪ್ರಜೆಗಳ ಸಮ್ಮುಖದಲ್ಲಿ ವಿವಾಹ ವಿಧಿಯಿಂದ ರಾಜಕನ್ಯೆಯನ್ನು ಅವನಿಗೆ ಸಮರ್ಪಿಸಿ ರಾಜ್ಯವನ್ನು ಕೊಟ್ಟನು. ನೇಕಾರನು ಅವಳೊಡನೆ ಪಂಚೇಂದ್ರಿಯಗಳಿಂದೊದಗುವ ವಿಷಯಸುಖಗಳನ್ನು ಅನುಭವಿಸುತ್ತಾ ಸುಖದಿಂದ ಕಾಲಕಳೆದನು.

ಕಥೆಯನ್ನು ಕೇಳಿದ ಕರಟಕನಿಗೆ ದಮನಕ ಹೇಳಿದ ಕಥೆ ಮತ್ತು ಮಾತಿನ ಮೇಲೆ ಭರವಸೆ ಮೂಡಲಿಲ್ಲ. ಆದ್ದರಿಂದಲೇ" ಗೆಳೆಯಾ, ನಿನ್ನ ಮಾತೇನೋ ಕೇಳಲು ಹಿತ. ಆದರೆ ಬುದ್ಧಿಯುಳ್ಳ ಸಂಜೀವಕನ ವಿಷಯದಲ್ಲಿ ನಿನ್ನ ಜಾಣತನ ನಡೆಯದೆಂದು ನನ್ನ ಅನಿಸಿಕೆ. ಪಿಂಗಳಕನಿಂದ ಸಂಜೀವಕನನ್ನು ಅಗಲಿಸಲು ನೀನು ಅಸಮರ್ಥನೇ ಆಗುವೆ." ಎಂದನು. ಆಗ ದಮನಕನು– "ತಮ್ಮಾ, ನಾನು ಅಸಮರ್ಥನಾದರೂ ಸಮರ್ಥನಾಗಿದ್ದೇನೆ. ಏಕೆಂದರೆ,

उपायेन हि यत्कुर्यात्तन्न शक्यं पराक्रमैः ।

काक्या कनकसूत्रेण कृष्णसर्पो निपातितः॥[48]

ಕಾಗೆಯು ಚಿನ್ನದ ಸರವನ್ನು ಕದ್ದ ಕಾರಣದಿಂದ ಕೃಷ್ಣಸರ್ಪವು ಹೇಗೆ ನಾಶವಾಯಿತೋ, ಹಾಗೆ ಪರಾಕ್ರಮದಿಂದ ಯಾವುದು ಸಾಧ್ಯವಿಲ್ಲವೋ ಅದು ಉಪಾಯದಿಂದ ಸಾಧ್ಯ." ಕರಟಕ ಅದೇನೆಂದು ಕೇಳಲು, ದಮನಕನು **ಕಾಗೆ – ಚಿನ್ನದ ಹಾರ – ಕೃಷ್ಣಸರ್ಪದ ಕಥೆ**ಯನ್ನು ಹೇಳಿದನು.

---

48. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–228, ಪು–146,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ತನಗೆ ಶಕ್ತಿ ಇಲ್ಲದಿದ್ದರೂ ಸಾಮರ್ಥ್ಯವುಳ್ಳವರ ಸಹಾಯವನ್ನು ಪಡೆದು ಕಾರ್ಯಸಾಧನೆ ಮಾಡಿಕೊಂಡ ವಿಚಾರವನ್ನು ತಿಳಿಸುತ್ತಾ ರಾಜಕುಮಾರರಿಗೆ ಸ್ವತಃ ಅವರ ಕೈನಿಂದ ಆಗದಿದ್ದ ಸಂದರ್ಭದಲ್ಲಿ, ಸಾಮರ್ಥ್ಯವುಳ್ಳವರ ನೆರವನ್ನಾದರೂ ಪಡೆದು ಕಾರ್ಯ ಸಾಧನೆ ಮಾಡಿಕೊಳ್ಳುವ ಆಲೋಚನೆಯನ್ನು ವಿಷ್ಣುಶರ್ಮರು ಪ್ರೇರೇಪಿಸಿದ್ದಾರೆ. ಅಲ್ಲೊಂದು ನದಿ. ತೀರದಲ್ಲಿ ಒಂದು ದೊಡ್ಡ ಆಲದ ಮರವಿತ್ತು. ಅದರಲ್ಲಿ ಕಾಗೆಯ ಜೋಡಿಯೊಂದು ವಾಸವಾಗಿತ್ತು. ಅವುಗಳು ಮರಿಹಾಕಿದ ಸಂದರ್ಭದಲ್ಲಿ ಮರದ ಪೊಟರೆಯಲ್ಲಿದ್ದ ಕೃಷ್ಣಸರ್ಪವೊಂದು ಬಂದು ತಿಂದುಬಿಡುತ್ತಿತ್ತು. ಇದರಿಂದ ಬೇಸರಗೊಂಡ ಕಾಗೆ ದಂಪತಿಗಳು ಮತ್ತೊಂದು ಮರದ ಬುಡದಲ್ಲಿ ವಾಸವಾಗಿದ್ದ ಮೆಚ್ಚಿನ ಗೆಳೆಯನಾದ ನರಿಯ ಬಳಿಗೆ ಹೋಗಿ ಹೇಳಿಕೊಂಡವು

यस्य क्षेत्रं नदीतीरे भार्या च परसंगता ।

ससर्पे च गृहे वासः कथं स्यात्तस्य निर्वृत्तिः ॥[49]

ಅಂದರೆ "ಯಾರ ಮನೆಯು ನದೀತೀರದಲ್ಲಿದೆಯೋ, ಯಾರ ಹೆಂಡತಿಯು ಪರಪುರುಷನ ಸಂಗ ಮಾಡುತ್ತಾಳೋ, ಯಾರ ಮನೆಯಲ್ಲಿ ಹಾವು ನೆಲಸಿದೆಯೋ, ಅವರಿಗೆ ನೆಮ್ಮದಿಯೆಂಬುದು ಇದೆಯೇ? ಸರ್ಪವಿರುವ ಮನೆಯಲ್ಲಿ ವಾಸಮಾಡುವುದರಿಂದ ಸಾವು ಖಂಡಿತ. ಸರ್ಪವು ಗ್ರಾಮದ ಸೀಮೆಯಲ್ಲಿದ್ದರೂ ಅದರಿಂದಲೂ ಕೂಡ ಪ್ರಾಣಭಯವಿರುತ್ತದೆ. ಹೀಗಿದ್ದಾಗ ನಮ್ಮ ಆಲದ ಮರದಲ್ಲಿ ಸರ್ಪವಿರುವುದರಿಂದ ನಮಗೂ ಕೂಡ ಪ್ರತಿದಿನವೂ ಪ್ರಾಣಭಯವು ಕಾಡುತ್ತಿದೆ." ಅದಕ್ಕೆ ನರಿಯು– "ಈ ವಿಷಯದಲ್ಲಿ ಸ್ವಲ್ಪವೂ ದುಃಖಿಸುವುದು ತರವಲ್ಲ. ಉಪಾಯದಿಂದಲ್ಲದೇ ಆ ಲೋಭಿಯನ್ನು ಕೊಲ್ಲಲು ಸಾಧ್ಯವಿಲ್ಲ. ಉಪಾಯದಿಂದ ಹೇಗೆ ಶತ್ರುಗಳನ್ನು ಗೆಲ್ಲಬಹುದೋ ಆ ರೀತಿ ಆಯುಧಗಳಿಂದ ಕೂಡ ಗೆಲ್ಲಲು ಸಾಧ್ಯವಿಲ್ಲ. ಹೀಗೊಂದು ಮಾತಿದೆ:–

भक्षयित्वा बहून्मत्स्यानुत्तमाधममध्यमान् ।

अतिलौल्याद् बकःकश्चिन्मृतः कर्कटकग्रहात् ॥[50]

"ಅನೇಕ ಸಣ್ಣ,ಮಧ್ಯಮ ಹಾಗೂ ದೊಡ್ಡ ಮೀನುಗಳನ್ನು ತಿಂದ ಬಕವೊಂದು ಅತಿಯಾಸೆಯಿಂದ ಏಡಿಯಿಂದ ಸಾವನ್ನಪ್ಪಿತು." ಕಾಗೆಗಳು ಅದು ಹೇಗೆಂದು ಕೇಳಲು, ನರಿಯು **ಬಕ ಹಾಗೂ ಏಡಿಯ ಕಥೆ** ಯನ್ನು ಹೇಳಿತು.

---

49. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–229,ಪು–147,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
50. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–232,ಪು–148,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಒಂದು ವನಪ್ರದೇಶದಲ್ಲಿ ಸರೋವರವೊಂದಿತ್ತು. ಅಲ್ಲಿ ಒಂದು ಬಕಪಕ್ಷಿ ವಾಸವಾಗಿತ್ತು. ವಯೋಧರ್ಮದ ದೌರ್ಬಲ್ಯದಿಂದ ಮೀನನ್ನು ಹಿಡಿಯಲೂ ಆಗುತ್ತಿರಲಿಲ್ಲ. ಹಸಿವಿನಿಂದ ಬಳಲುತ್ತಾ ಒಮ್ಮೆ ಸರೋವರದ ತೀರದಲ್ಲಿ ಕುಳಿತುಕೊಂಡು ಕಣ್ಣೀರು ಹಾಕುತ್ತಿತ್ತು. ಆಗ ಒಂದು ಏಡಿಯು ಇತರ ಜಲಚರಗಳೊಂದಿಗೆ ಬಂದು ಅದರ ದುಃಖವನ್ನು ಕಂಡು ತಾನೂ ಮರುಕಗೊಂಡು ಆದರಪೂರ್ವಕವಾಗಿ ಹೇಳಿತು." ಮಾಮ ಏಕೆ ಇಂದು ಆಹಾರ ಸೇವಿಸುತ್ತಿಲ್ಲ? ಕೇವಲ ಕಣ್ಣೀರು ಸುರಿಸುತ್ತಾ ನಿಟ್ಟುಸಿರುಬಿಡುತ್ತಾ ಕುಳಿತಿರುವೆ? ಮತ್ಸ್ಯಭಕ್ಷಣದ ಬಗ್ಗೆ ಅತೀವ ವೈರಾಗ್ಯ ಮೂಡಿರುವುದರಿಂದ ಉಪವಾಸ ಕೈಗೊಂಡಿದ್ದೇನೆ ಎಂದು ಬಕ ಹೇಳಿತು. ಮುಂದುವರೆದು ಆ ಸರೋವರದಲ್ಲಿ ಇನ್ನು ಹನ್ನೆರಡು ವರ್ಷ ಕಾಲ ಅನಾವೃಷ್ಟಿಯಾಗುವುದೆಂದು ಜ್ಯೋತಿಷಿಯೊಬ್ಬರಿಂದ ಕೇಳಿದೆ ಎಂದು ಹೇಳಿತು. ಮುಂದೆ ಬಹಳ ಸಂಕಷ್ಟದ ದಿನಗಳು ಬರುತ್ತವೆ. ಕ್ಷಾಮ, ಬರಗಾಲ ಬಹಳ ಘೋರವಾಗುತ್ತದೆ. ಗ್ರಹಗತಿಗಳು ಬಹಳ ಕ್ರೂರವಾಗಿದೆ ಎಂದು ಹೇಳಿತು. ಇದನ್ನೆಲ್ಲಾ ಕೇಳಿದ ಏಡಿಯು ಸರೋವರದಲ್ಲಿದ್ದ ಇತರ ಪ್ರಾಣಿಗಳಿಗೂ ಬಕಪಕ್ಷಿಯ ಮಾತನ್ನು ತಿಳಿಸಿತು. ಎಲ್ಲ ಜರಚರಗಳೂ ಬಕಪಕ್ಷಿಯ ಬಳಿಗೆ ಬಂದು ಸೂಕ್ತ ಪರಿಹಾರವನ್ನು ಕೋರಿದವು. ಆಗ ಬಕವು ಬುದ್ಧಿವಂತಿಕೆಯಿಂದ ಒಂದು ಉಪಾಯವನ್ನು ಹೇಳಿತು." ಈ ಜಲಾಶಯದ ಹತ್ತಿರದಲ್ಲಿಯೇ ಹೆಚ್ಚು ನೀರಿನಿಂದ ತುಂಬಿದ, ಕಮಲಗಳಿಂದ ಶೋಭಿತವಾದ, ನಲವತ್ತು ವರ್ಷಗಳ ಕಾಲ ಅನಾವೃಷ್ಟಿಯಾದರೂ ಒಣಗದ ಒಂದು ಸರೋವರವಿದೆ. ಯಾರು ನನ್ನ ಬೆನ್ನೇರುವರೋ ಅವರನ್ನು ಅಲ್ಲಿಗೆ ಕರೆದುಕೊಂಡು ಹೋಗಬಲ್ಲೆ " ಎಂದಿತು. ಬಕಪಕ್ಷಿಯ ಮೇಲೆ ವಿಶ್ವಾಸಮೂಡಿ ಆ ಜಲಚರರು ತಂದೆ, ಮಾಮ, ಅಣ್ಣ ಎಂದು ಕರೆಯುತ್ತಾ ನಾ ಮುಂದು, ತಾಮುಂದು ಎನ್ನುತ್ತಾ ಅದರ ಸುತ್ತ ನೆರೆದರು. ದುರಾತ್ಮನಾದ ಬಕಪಕ್ಷಿಯು ಒಂದೊಂದಾಗಿ ಅವುಗಳನ್ನು ಬೆನ್ನಮೇಲೆ ಕೂರಿಸಿಕೊಂಡು ಸರೋವರದ ಹತ್ತಿರದಲ್ಲಿದ್ದ ಒಂದು ಬಂಡೆಯ ಮೇಲೆ ಅವುಗಳನ್ನು ಇಳಿಸಿ ಸ್ವೇಚ್ಛೆಯಿಂದ ಭಕ್ಷಿಸಿಯಾಯಿತು. ಪುನಃ ಬಂದು ಅನೇಕ ಸುಳ್ಳುಗಳನ್ನು ಹೇಳುತ್ತಾ ಆಹಾರ ಸಂಪಾದನೆ ಮಾಡುತ್ತಿತ್ತು.[51]

ಆದರೆ ಏಡಿಯು ಎಲ್ಲಾ ಗಮನಿಸುತ್ತಾ, ನನ್ನ ಪ್ರಾಣ ರಕ್ಷಣೆ ಮಾಡು, ಏಕೆಂದರೆ ನಿನ್ನೊಡನೆ ಮೊದಲು ಸ್ನೇಹದಿಂದ ಮಾತನಾಡಿದವನು ನಾನು ಎಂದು ಬಕಪಕ್ಷಿಗೆ ನೆನಪು ಮಾಡಿತು. ಮೀನಿನ ಮಾಂಸವನ್ನು ತಿಂದು ತಿಂದು ಬೇಜಾರಾಗಿದೆ, ಏಡಿಯನ್ನು ಫಲ್ಯದಂತೆ ತಿಂದುಬಿಡುವೆನೆಂದು ಯೋಚಿಸಿ, ಅದನ್ನು ಬೆನ್ನ ಮೇಲೆ ಕೂಳ್ಳಿರಿಸಿಕೊಂಡು ಮೀನುಗಳನ್ನು ಕೊಲ್ಲುತ್ತಿದ್ದ ಬಂಡೆಯ ಬಳಿಗೆ ಹೊರಟಿತು. ಏಡಿಯು

---

51. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಪು-149-157,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ದೂರದಿಂದಲೇ ಆ ಬಂಡೆಯ ಮೇಲೆ ಮೀನಿನ ಮೂಳೆಗಳ ರಾಶಿಯನ್ನು ನೋಡಿತು. ಇನ್ನೆಷ್ಟು ದೂರ? ಎಂದು ಕೇಳಿತು. ಬಕವು ತನ್ನ ಮಂದ ಬುದ್ಧಿಯಿಂದ ಏಡಿಯನ್ನು ಜಲಚರ ಪ್ರಾಣಿ, ಭೂಮಿಯಲ್ಲಿ ಬದುಕಲಾರದೆಂದು ತಿಳಿಯಿತು. ನಗುತ್ತಾ, ನಿನ್ನ ಇಷ್ಟ ದೇವರನ್ನು ಸ್ಮರಣೆ ಮಾಡಿಕೊ, ನಿನ್ನನ್ನೂ ಈ ಬಂಡೆಯ ಮೇಲೆ ಬೀಳಿಸಿ ಭಕ್ಷಿಸುತ್ತೇನೆ ಎಂದಿತು. ಕೂಡಲೇ ಏಡಿಯು ಕಮಲದ ತೊಟ್ಟಿನಂತೆ ಬಿಳಿಯಾಗಿ ಹಾಗೂ ಮೃದುವಾಗಿರುವ ಬಕದ ಕತ್ತನ್ನು ತನ್ನ ಎರಡು ಹಲ್ಲುಗಳಿಂದ ಕಚ್ಚಿ ಸಾಯಿಸಿತು. ನಂತರ ಬಕದ ಕತ್ತನ್ನು ಹಿಡಿದುಕೊಂಡು ಮೆಲ್ಲಮೆಲ್ಲಗೆ ಸರೋವರ ತಲುಪಿತು. ಜಲಚರರಿಗೆ ಏಡಿ ವಾಪಸ್ಸು ಬಂದದ್ದು ನೋಡಿ ಆಶ್ಚರ್ಯವೋ ಆಶ್ಚರ್ಯ. ಏಡಿಯು ನಗುತ್ತಾ" ಮೂರ್ಖರೇ, ಸುಳ್ಳು ನುಡಿಯುವ ಆ ಬಕವು ಮೋಸದಿಂದ ಎಲ್ಲರನ್ನೂ ಹತ್ತಿರದಲ್ಲಿರುವ ಬಂಡೆಯ ಮೇಲೆ ಎಸೆದು ತಿಂದುಬಿಟ್ಟಿತು. ನನ್ನ ಆಯಸ್ಸು ಗಟ್ಟಿಯಿರುವುದರಿಂದ ಆ ವಿಶ್ವಾಸ ಘಾತಕನ ಅಭಿಪ್ರಾಯವನ್ನು ತಿಳಿದು, ಅದನ್ನು ಸಾಯಿಸಿ ಅದರ ಕತ್ತನ್ನು ತಂದಿರುವೆ. ಸಾಕು ನಿಮ್ಮ ಸಂಭ್ರಮ. ಇಂದಿನಿಂದ ಎಲ್ಲಾ ಜಲಚರಗಳೂ ಕ್ಷೇಮದಿಂದಿರಬಹುದು." ಎಂದು ಹೇಳಿತು.

ನರಿಯು ಕಥೆಯನ್ನು ಮುಗಿಸಿದಾಗ, ಕೇಳಿದ ಕಾಗೆ– ಆ ದುಷ್ಟ ಸರ್ಪವು ಸಾವನ್ನಪ್ಪುವ ಬಗೆ ಹೇಗೆ ಉಪಾಯವನ್ನು ತಿಳಿಸು ಎಂದಿತು. ನರಿಯು–" ಯಾವುದಾದರೂ ರಾಜ್ಯದ ನಗರಕ್ಕೆ ಹೋಗಿ, ಎಚ್ಚರದಿಂದಿಲ್ಲದ ಯಾವುದಾದರೂ ಧನಿಕನ ಅಥವಾ ರಾಜನ ಅಥವಾ ಮಂತ್ರಿಯ ಚಿನ್ನದ ಸರ ಅಥವಾ ಹಾರವನ್ನು ತಂದು ಆ ಸರ್ಪದ ಪೊಟರೆಯಲ್ಲಿ ಹಾಕಿದರೆ, ಅದನ್ನು ಇಟ್ಟುಕೊಂಡಿರುವ ಸರ್ಪವು ಸಾಯಿಸಲ್ಪಡುತ್ತದೆ. ಈ ಉಪಾಯವನ್ನು ತಿಳಿದ ಕಾಗೆ ದಂಪತಿಗಳು ಸಂತೋಷದಿಂದ ಹಾಗೇ ಮಾಡಿದವು. ಅದರಲ್ಲೂ ಅಂತಃಪುರಕ್ಕೆಹೋಗಿ ಚಿನ್ನದ ಸರ ಹಾರಿಸಿಕೊಂಡು ತಂದು ಸರ್ಪವಿದ್ದ ಪೊಟರೆಯೊಳಗೆ ಹಾಕಿದವು. ಅದನ್ನು ನೋಡಿದ ಅಂತಃಪುರ ರಕ್ಷಕರು ಹಿಂಬಾಲಿಸಿಕೊಂಡು ಬಂದು ಹೆಡೆಯನ್ನು ಬಿಚ್ಚಿ ಕುಳಿತಿದ್ದ ಸರ್ಪವನ್ನು ದೊಣ್ಣೆಯಿಂದ ಹೊಡೆದು ಕೊಂದು ಸರವನ್ನು ಪಡೆದು ವಾಪಸಾದರು. ದಂಪತಿಗಳು ಸುಖವಾಗಿ ನಿಶ್ಚಿಂತರಾಗಿ ಮರದಲ್ಲಿ ವಾಸಮಾಡಿದವು. ಕೊನೆಯಲ್ಲಿ ದಮನಕನು–

यस्य बुद्धिर्बलं तस्य निर्बुद्धेस्तु कुतो बलम् ।

वने सिंहो मदोन्मत्तः शशकेन निपातितः ॥[52]

ಆದ್ದರಿಂದ ಉಪಾಯದಿಂದ ಕೆಲಸ ಮಾಡಬೇಕೆಂದು ನಾನು ಹೇಳುವುದು. ಬುದ್ಧಿವಂತರಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಏಕೆಂದರೆ ಬುದ್ಧಿವಂತನೇ ನಿಜವಾದ ಬಲಶಾಲಿಯೇ ಹೊರತು

52. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–237,ಪು– 157,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಬುದ್ಧಯಿಲ್ಲದವನು ಎಂದೂ ಬಲಶಾಲಿಯಾಗಲಾರ. ಉದಾಹರಣೆಗೆ ಮದೋನ್ಮತ್ತನಾದ ಸಿಂಹವೊಂದು ಮೊಲದಿಂದ ಹೀಗೆ ಕೊಲ್ಲಲ್ಪಟ್ಟಿತು.

ಕರಟಕ ಅದೇನೆಂದು ಕೇಳಲು– ದಮನಕನು **ಸಿಂಹ – ಮೊಲದ ಕಥೆ**ಯನ್ನು ಹೇಳಿದನು.

ಸಿಂಹ–ಮೊಲದ ಕಥೆಯಲ್ಲಿ ಉಪಾಯದಿಂದ ಅಪಾಯವನ್ನು ತಪ್ಪಿಸಿಕೊಳ್ಳುವುದರ ಜಾಗೃತಿಯನ್ನು ಸರದಿಯಂತೆ ಆಹಾರವಾಗಿ ಬಂದ ಮೊಲ ಮತ್ತು ಬಾವಿಯಲ್ಲಿ ಬಿದ್ದು ಪ್ರಾಣ ಕಳೆದುಕೊಂಡ ಸಿಂಹದ ವೃತ್ತಾಂತವನ್ನು ಸ್ವಾರಸ್ಯಪೂರ್ಣವಾಗಿ ಹೇಳಿದರು. ಇದರಿಂದ ರಾಜಕುಮಾರರಿಗೆ ಉಪಾಯದಿಂದ ಕೆಲಸ ಮಾಡಬೇಕು, ಇದಕ್ಕೆ ಬುದ್ಧಿವಂತಿಕೆ ಬೇಕು, ಬುದ್ಧಿವಂತನೇ ನಿಜವಾದ ಬಲಶಾಲಿಯೇ ಹೊರತು ಬುದ್ಧಿಯಿಲ್ಲದವನು ಎಂದೂ ಬಲಶಾಲಿಯಾಗಲಾರ– **"Knowledge is Power"** ಎಂಬ ಅರಿವನ್ನು ಮೂಡಿಸಿದಂತಾಯಿತು. ಮದೋನ್ಮತ್ತನಾದ ಸಿಂಹವೊಂದು ತನ್ನ ಮೂರ್ಖತನದಿಂದ ಬಾವಿಯ ನೀರಿನಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಗರ್ಜಿಸಿತು. ಆಗ ಬಾವಿಯಿಂದ ಅದಕ್ಕೆರಡರಷ್ಟು ಪ್ರತಿಧ್ವನಿಸಿದ್ದು, ನೀರಿನಲ್ಲಿ ಮೂಡಿದ್ದ ಪ್ರತಿಬಿಂಬ ಶತ್ರುವಿನದ್ದೆಂದು ತಿಳಿದು ಬಾವಿಗೆ ಹಾರಿ ಪ್ರಾಣವನ್ನೇ ಕಳೆದುಕೊಂಡಿತು. ಅದೇ ಮೊಲವು ತನ್ನ ಬುದ್ಧಿವಂತಿಕೆಯಿಂದ ಎಲ್ಲಾ ಪ್ರಾಣಿಗಳಿಗೆ ಆನಂದವನ್ನುಂಟುಮಾಡಿ ಸುಖವಾಗಿ ಕಾಡಿನಲ್ಲಿ ವಾಸ ಮಾಡಿತು. ಸಿಂಹದ ಕೋಪ, ಶತ್ರುತ್ವ "ಆತುರಗಾರನಿಗೆ ಬುದ್ಧಿ ಮಟ್ಟು"ಎಂಬಂತೆ ಬಾವಿಯಲ್ಲಿ ಕಂಡದ್ದು ಪ್ರತಿಬಿಂಬ ಎನ್ನುವಷ್ಟೂ ಆಲೋಚನೆ ಮಾಡಲಾಗಲಿಲ್ಲವಲ್ಲ!! ಎಂದು ರಾಜಕುಮಾರರು ಗಟ್ಟಿಯಾಗಿ ನಕ್ಕುಬಿಟ್ಟರು. ಆಗ ಗುರುಗಳು ಹೇಳುತ್ತಾರೆ – ಅದಕ್ಕೂ ಕಾರಣವಿದೆ "ತನ್ನಂತಹವರು ಇನ್ನೊಬ್ಬರು ಇರಬಾರದು ಎಂಬುದು; ಅಂತಹವರು ಇದ್ದರೆ ಅದನ್ನು ಸಹಿಸದೆ ಇರುವುದು. ಈ ಎರಡು ದುರ್ಗುಣದಿಂದಾಗಿ ಕೋಪಗೊಂಡ ಸಿಂಹವು ಸತ್ಯಾಸತ್ಯತೆಗಳನ್ನು ನಿರ್ಣಯಿಸುವ ಶಕ್ತಿಯನ್ನು ಕಳೆದುಕೊಂಡಿತ್ತು. ಆದ್ದರಿಂದ ಕೋಪವು ಎಂದಿಗೂ ತರವಲ್ಲ. ಉಪಾಯಚತುರನು ಏನನ್ನೂ ಸಾಧಿಸಿಯಾನು. ಇದು ಎಲ್ಲರಿಗೂ ಪಾಠವಾಗಬೇಕು" ಎಂದರು. ಹೌದು ಪ್ರತಿಯೊಬ್ಬರಿಗೂ ಇದು ಒಳ್ಳೆಯ ಪಾಠವೆ.[53]

ದಮನಕನು ರಾಜಧರ್ಮಕ್ಕೆ ಸಂಬಂಧಿಸಿದಂತೆ ಅನೇಕ ನೀತಿ ಉಪದೇಶಗಳನ್ನು ಹೇಳುತ್ತಾನೆ. ದುಷ್ಟರು ಹಾಗೂ ಸಜ್ಜನರ ಸಹವಾಸ, ಅದರ ಪರಿಣಾಮ ಇತ್ಯಾದಿ ಬಹಳ ಉಪಯುಕ್ತ ಮಾಹಿತಿಗಳನ್ನು ಸೂಕ್ತ ದೃಷ್ಟಾಂತಗಳೊಂದಿಗೆ ತಿಳಿಹೇಳುತ್ತಾ, ಈ ಒಂದು ಉಕ್ತಿಯನ್ನು:–

---

53. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ–1–7,ಪು – 60–64,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

न ह्यविज्ञातशीलस्य प्रदातव्यः प्रतिश्रयः ।

मत्कुणस्य च दोषेण हता मन्दविसर्पिणी ॥[54]

ಅಂದರೆ, ಒಬ್ಬರ ಸ್ವಭಾವವನ್ನು ತಿಳಿಯದೆ ಅವರಿಗೆ ಆಶ್ರಯವನ್ನು ಕೊಡಬಾರದು, ಕೊಟ್ಟರೆ ತಿಗಣೆಯ ತಪ್ಪಿನಿಂದ ಹೇನೊಂದು ಹೇಗೆ ನಾಶವಾಯಿತೋ ಹಾಗಾಗುತ್ತದೆ." ಪಿಂಗಲಕನು ಅದೇನೆಂದು ಕೇಳಿದಾಗ ದಮನಕನು **ಹೇನು ಹಾಗೂ ತಿಗಣೆಯ ಕಥೆ**ಯನ್ನು ಹೇಳಿದನು.

ಒಬ್ಬ ಮಹಾರಾಜ, ಅವನ ಆಸ್ಥಾನದಲ್ಲಿ ಒಂದು ಮಂಚ. ಅಲ್ಲಿ ಬಿಳಿಯ ವಸ್ತ್ರಗಳು ಎರಡು. ಅದರ ಮಧ್ಯೆ ಮಂದವಿಸರ್ಪಿಣೀ ಎಂಬ ಹೇನು ವಾಸವಾಗಿತ್ತು. ಅದು ರಾಜನ ರಕ್ತವನ್ನು ಆಸ್ವಾದಿಸುತ್ತಾ ಸುಖವಾಗಿತ್ತು. ಒಮ್ಮೆ ಅಲ್ಲಿಗೆ ಎಲ್ಲಿಂದಲೋ ಅಲೆಯುತ್ತಾ, ಅಗ್ನಿಮುಖ ಎಂಬ ತಿಗಣೆ ಬಂತು. ಇದನ್ನು ನೋಡಿದ ಹೇನು ಬೇಸರದಿಂದ ಕೇಳಿತು– "ಎಲೈ ಅಗ್ನಿಮುಖ, ಉಚಿತವಲ್ಲದ ಆ ಸ್ಥಳಕ್ಕೆ ಏಕೆ ಬಂದಿರುವೆ? ಯಾರಾದರೂ ನೋಡುವ ಮೊದಲೇ ಇಲ್ಲಿಂದ ಹೊರಟುಹೋಗು." ತಿಗಣೆ ಹೇಳಿತು– "ದೇವಿ, ಮನೆಗೆ ಬಂದವನು ದುಷ್ಟನಾದರೂ ಹೀಗೆ ಹೇಳುವುದು ಸರಿಯಲ್ಲ. ನೀಚ ಜನರು ಮನೆಗೆ ಬಂದರೂ ಸಜ್ಜನರು ಅವರನ್ನು ಸೌಹಾರ್ದತೆಯಿಂದಲೇ ಕುಶಲೋಪರಿಗಳನ್ನು ಕೇಳುತ್ತಾ ಉಪಚರಿಸುತ್ತಾರೆ. ಗೃಹಸ್ಥಧರ್ಮವನ್ನು ಆಚರಿಸಿದವರಿಗೆ, ಬೇಗನೆ ಸ್ವರ್ಗ ಪ್ರಾಪ್ತಿಯಾಗುತ್ತದೆಂದು ಬಲ್ಲವರು ಹೇಳುತ್ತಾರೆ. ಈಗಾಗಲೇ ಎಷ್ಟೋ ಜನರ ರಕ್ತವನ್ನು ಕುಡಿದು ಅದರ ರುಚಿ ವೈವಿಧ್ಯವನ್ನು ಸವಿದಿದ್ದೇನೆ. ಈಗ ರಾಜನ ರಕ್ತದ ರುಚಿಯನ್ನು ಕಾಣುವ ಅವಕಾಶವು ಅನಾಯಾಸವಾಗಿ ಸಿಕ್ಕಿದೆ. ಹಸಿವಿನಿಂದ ಬಳಲಿ ಆಹಾರಾರ್ಥಿಯಾಗಿ ಬಂದಿದ್ದೇನೆ. ಹೀಗೆ ನೀನೊಬ್ಬಳೇ ರಾಜನ ರಕ್ತ ಹೀರುವುದು ಸರಿಯಲ್ಲ."

ಅದನ್ನು ಕೇಳಿ ಮಂದವಿಸರ್ಪಿಣೀ ಹೇಳಿತು– "ತಿಗಣೆಯೇ, ನಾನು ರಾಜನು ನಿದ್ದೆ ಮಾಡಿದಾಗ ಅವನ ರಕ್ತವನ್ನು ಹೀರುತ್ತೇನೆ. ನೀನಾದರೋ ಅಗ್ನಿಮುಖ ಮತ್ತು ಚಪಲನು. ಆದ್ದರಿಂದ ನನ್ನ ಜೊತೆಗೆ ಮಾತ್ರ ರಕ್ತ ಪಾನವನ್ನು ಮಾಡುವುದಾದರೆ ಇಲ್ಲಿ ಇರು. ಇಷ್ಟಬಂದಷ್ಟು ರಕ್ತವನ್ನು ಆಸ್ವಾದಿಸು." ಸಿಕ್ಕಿದ ಅವಕಾಶವನ್ನು ತನ್ನ ಅನುಕೂಲಕ್ಕೆ ಬಳಸಿಕೊಳ್ಳದವ ಮೂಢ. ಅಂತಹವನು ತಾನಾಗಬಾರದೆಂದು ತಿಗಣೆಯು ಮಂದವಿಸರ್ಪಿಣೀಗೆ ಹೀಗೆ ಹೇಳಿತು– "ದೇವೀ, ನನ್ನ ಮನೆದೇವರಾಣೆ, ನೀನು ರಾಜನ ರಕ್ತವನ್ನು ಕುಡಿದಾದ ಮೇಲೆಯೇ ನಾನು ರಕ್ತ ಪಾನ ಮಾಡುವೆನು. ನನ್ನನ್ನು ನಂಬು." ಎಂದಿತು.

---

54. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–275, ಪು–179,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ರಾಜನು ಮಂಚವೇರಿ ಮಲಗಿಕೊಂಡನು. ಆಗ ಜಿಹ್ವಾ ಚಾಪಲ್ಯದಿಂದ ಅತ್ಯಂತ ಉತ್ಸಾಹದಿಂದ ಇನ್ನೂ ಎಚ್ಚರವಾಗಿರುವ ರಾಜನನ್ನು ಕಚ್ಚೇಬಿಟ್ಟಿತು. ಯಾರದ್ದೇ ಆಗಲಿ ಸ್ವಾಭಾವಿಕವಾಗಿ ಬಂದ ಸ್ವಭಾವವನ್ನು ಮಾತೊಂದರಿಂದ ಬದಲಿಸುವುದು ಶಕ್ಯವಲ್ಲ. ತಣ್ಣಗಿನ ನೀರು ಶಾಖದಿಂದ ಬಿಸಿಯಾದರೂ ಮತ್ತೆ ಮೊದಲಿನಂತೆ ತಣ್ಣಗಾಗಿಯೇ ಆಗುತ್ತದೆ. ಒಂದು ವೇಳೆ ಬೆಂಕಿ ತಂಪಾಗಬಹುದು, ಚಂದ್ರನು ಸುಡುವಂತೆ ಆಗಬಹುದು, ಆದರೆ ಮನುಷ್ಯರ ಸ್ವಭಾವವನ್ನು ಬದಲಿಸಲಸಾಧ್ಯ. ಆಗ ರಾಜನು ಸೂಜಿಮೊನೆಯಿಂದ ಚುಚ್ಚಿದಂತಾಗಿ ತಟ್ಟನೆ ಹಾಸಿಗೆಯಿಂದೆದ್ದು, ಕಂಚುಕಿಯನ್ನು ಕರೆದು ಕಚ್ಚಿದ ಹುಳವನ್ನು ಹುಡುಕುವಂತೆ ಆಜ್ಞಾಪಿಸಿದ. ಆಗ ಅಂತಃಪುರದವರು ಚಾದರವನ್ನು ಸೂಕ್ಷ್ಮವಾಗಿ ಗಮನಿಸಿ, ಹುಡುಕಿ ಸಂದಿಯಲ್ಲಿದ್ದ ಹೇನನ್ನು ಕೊಂದರು. ತಿಗಣೆಯು ತಕ್ಷಣ ಮಂಚದ ಒಳಭಾಗದಲ್ಲಿ ಸೇರಿಕೊಂಡಿತು. ಕಥೆಯನ್ನು ಮುಗಿಸಿ ದಮನಕನು ಪಿಂಗಲಕನಿಗೆ" ಇದನ್ನು ತಿಳಿದುಕೊಂಡು ನೀನು ಸಂಜೀವಕನನ್ನು ಕೊಲ್ಲು. ಇಲ್ಲದಿದ್ದರೆ, ಆವನೇ ನಿನ್ನನ್ನು ಕೊಲ್ಲುವನು." ಎಂದು ಸಲಹೆ ಮಾಡಿದನು.[55] ಹೀಗೊಂದು ಉಕ್ತಿಯಿದೆ–

त्यक्ताश्चाभ्यन्तरा येन बाह्याश्चाभ्यन्तरीकृताः ।

स एव मृत्युमाप्नोति यथा राजा ककुद्द्रुमः ॥[56]

ಅಂದರೆ, "ಯಾರು ತನ್ನವರನ್ನು ದೂರಮಾಡಿ, ಪರರನ್ನು ಹತ್ತಿರದಲ್ಲಿಟ್ಟುಕೊಳ್ಳುವನೋ, ಅವನು ಮೂರ್ಖ ಚಂಡರವನಂತೆ ನಾಶವಾಗುವನು." ಪಿಂಗಲಕನು ಅದೇನೆಂದು ಕೇಳಲು, ದಮನಕನು **ಚಂಡರವ ನರಿಯ ಕಥೆ**ಯನ್ನು ಹೇಳಿದನು.

ದಟ್ಟಾರಣ್ಯವೊಂದರಲ್ಲಿ ಚಂಡರವನೆಂಬ ನರಿಯೊಂದು ಜಿಹ್ವಾಚಾಪಲ್ಯಕ್ಕೊಳಗಾಗಿ ಆಹಾರವನ್ನು ಹುಡುಕುತ್ತಾ ನಗರಕ್ಕೆ ಬಂತು. ಅಲ್ಲಿದ್ದ ನಾಯಿಗಳು ನರಿಯನ್ನು ಕಂಡು ಅಟ್ಟಿದವು, ಕಚ್ಚಿದವು. ನರಿಯು ಜೀವಭಯದಿಂದ ಓಡಿಹೋಗುತ್ತಿದ್ದಾಗ ಅಲ್ಲೊಂದು ಅಗಸನ ಮನೆ ಹೊಕ್ಕಿತು. ಅಲ್ಲಿ ಬಟ್ಟೆ ಹಾಕಲು ದೊಡ್ಡ ಹಂಡೆಯೊಂದನ್ನು ಇಟ್ಟಿದ್ದರು. ಅದರ ತುಂಬಾ ನೀಲಿ ನೀರಿತ್ತು. ನಾಯಿಗಳ ಆಕ್ರಮಣದ ಗಾಬರಿಯಿಂದ ನರಿಯು ಹಂಡೆಯೊಳಗೆ ಬಿದ್ದು ಹೋಯಿತು. ಅಲ್ಲಿಂದ ಹೊರಬಂದಾಗ ಅದರ ಮೈಯೆಲ್ಲಾ ನೀಲಿ ಬಣ್ಣವಾಯಿತು. ಅದನ್ನು ನೋಡಿದ ನಾಯಿಗಳು ನರಿಯೆಂದು ಗುರುತಿಸದೆ ದಿಕ್ಕಾಪಾಲಾಗಿ ಓಡಿದವು. ಚಂಡರವ ನರಿಯೂ ಕಾಡಿನತ್ತ ಸಾಗಿತು. ಒಮ್ಮೆ ಅಂಟಿಕೊಂಡ ನೀಲಿಬಣ್ಣವು ಅಷ್ಟು ಸುಲಭವಾಗಿ ತನ್ನ ಬಣ್ಣವನ್ನು ಬಿಡುವುದಿಲ್ಲ.

---

೫೫. **ಭರತ.ಬಿ.ರಾವ್,** ಪಂಚತಂತ್ರ, – ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು – 67–69, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

೫೬. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–282, ಪು–184,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಒಂದು ಉಕ್ತಿಯಿದೆ-

वज्रलेपस्य मूर्खस्य नारीणां कर्कटस्य च ।

एको ग्रहस्तु मीनानां नीलीमद्यपयोर्यथा ॥[57]

ಇದರರ್ಥ ವಜ್ರಲೇಪ, ಮೂರ್ಖ, ನಾರಿಯರು, ಮೊಸಳೆ, ಮೀನು, ನೀಲಿಬಣ್ಣ ಹಾಗೂ ಮದ್ಯಪಾನ- ಇವುಗಳು ಒಮ್ಮೆ ಹಿಡಿದುಕೊಂಡರೆ, ಎಂದಿಗೂ ಬಿಡುವುದಿಲ್ಲ.

ಹೀಗೆ ಮೈಯೆಲ್ಲಾ ನೀಲಿಯಾಗಿರುವ ನರಿಯನ್ನು ನೋಡಿದ ಕಾಡಿನ ಪ್ರಾಣಿಗಳೆಲ್ಲ ಭಯಗ್ರಸ್ಥರಾಗಿ, ವ್ಯಾಕುಲಗೊಂಡು ದಿಕ್ಕಾಪಾಲಾಗಿ ಓಡುತ್ತಿದ್ದವು. ಇದನ್ನು ನೋಡಿದ ನರಿಯು ಅವುಗಳ ಭಯವನ್ನು ಗ್ರಹಿಸಿ, ಮೊದಲೇ ಬುದ್ಧಿವಂತ ನರಿ ಒಂದು ಉಪಾಯ ಹೊಳೆಯಿತು, ಪ್ರಾಣಿಗಳನ್ನೆಲ್ಲಾ ಹತ್ತಿರಕ್ಕೆ ಕರೆದು ಹೀಗೆ ಹೇಳಿತು - "ನನ್ನ ಹೆಸರು ಕುಕುದ್ರುಮ. ಬ್ರಹ್ಮನು ನನ್ನನ್ನು ಸೃಷ್ಟಿಮಾಡಿ, ಪ್ರಾಣಿಗಳಿಗೆ ಯಾರೂ ರಾಜನಿಲ್ಲದಿರುವುದರಿಂದ ನನ್ನನ್ನು ಎಲ್ಲಾ ಪ್ರಾಣಿಗಳಿಗೆ ಪ್ರಭುವೆಂದು ನಿಯೋಜನೆ ಮಾಡಿದ್ದಾನೆ. ನಾನು ಇಂದಿನಿಂದ ಮೂರುಲೋಕಗಳಲ್ಲಿಯೂ ಪ್ರಾಣಿಗಳ ಒಡೆಯನಾಗಿರುವೆ. ಇದನ್ನು ಕೇಳಿದ ಸಿಂಹ, ಹುಲಿ ಮುಂತಾದ ಪ್ರಾಣಿಗಳು ಒಪ್ಪಿ ನರಿಯಸುತ್ತ ನಿಂತವು. ನರಿಯು ಸಿಂಹಕ್ಕೆ ಮಂತ್ರಿಪದವಿ, ಹುಲಿಗೆ ತನ್ನ ಮಲಗುವ ಸ್ಥಾನದ ರಕ್ಷಣೆಯ ಜವಾಬ್ದಾರಿ, ಚಿರತೆಗೆ ತಾಂಬೂಲವನ್ನು ತಯಾರಿಸುವ ಕಾರ್ಯ ಕೊಟ್ಟಿತು. ಆದರೆ ತನ್ನ ಜಾತಿಯವರಾದ ನರಿಗಳನ್ನು ಬಹಳ ದೂರ ಇಟ್ಟು, ಮಾತನ್ನೂ ಕೂಡ ಆಡುತ್ತಿರಲಿಲ್ಲ. ಹೀಗೆ ರಾಜ್ಯಭಾರಮಡುತ್ತಿದ್ದ ನರಿಗೆ ಸಿಂಹ ಮುಂತಾದವುಗಳು ಪ್ರಾಣಿಗಳನ್ನು ಬೇಟೆಯಾಡಿ ಆಹಾರವನ್ನು ಒದಗಿಸುತ್ತಿದ್ದವು. ನರಿಯೂ ಬುದ್ಧಿವಂತಿಕೆಯಿಂದ ರಾಜಧರ್ಮವನ್ನು ಪಾಲನೆ ಮಾಡುತ್ತಾ, ಅದನ್ನೆಲ್ಲಾ ಇತರ ಪ್ರಾಣಿಗಳಿಗೆ ಹಂಚುತ್ತಿತ್ತು. ಹೀಗೇ ಎಲ್ಲವೂ ಚೆನ್ನಾಗಿ ನಡೆಯುತ್ತಿದ್ದಾಗ, ಒಮ್ಮೆ ರಾಜಸಭೆಯಲ್ಲಿದ್ದಾಗ ದೂರದಲ್ಲಿ ಒಂದು ನರಿಗಳ ಗುಂಪು ಊಳಿಡುವ ಶಬ್ದ ಕೇಳಿಬಂತು. ಆ ಶಬ್ದವನ್ನು ಕೇಳಿದೊಡನೆ ರಾಜನಿಗೆ ಶರೀರವೆಲ್ಲಾ ಪುಳಕಿತಗೊಂಡಿತು. ಕಣ್ಣಲ್ಲಿ ಆನಂದ ಭಾಷ್ಪವೇ ತುಂಬಿಕೊಂಡಿತು. ರಾಜನು ಎದ್ದು ಜೋರಾಗಿ ಊಳಿಟ್ಟುಬಿಟ್ಟನು. ಪ್ರಾಣಿಗಳೆಲ್ಲ ಮುಖಮುಖ ನೋಡಿಕೊಂಡು, ರಾಜನು ನರಿಯೆಂದು ತಿಳಿದು ತಲೆತಗ್ಗಿಸಿ ಮೂರ್ಖರಾದ ಬಗ್ಗೆ ನಾಚಿಕೊಂಡವು. ನರಿಯ ಮೋಸಕ್ಕೆ ಒಳಗಾದ ಸಿಂಹ ಮುಂತಾದವುಗಳು ನರಿಯನ್ನು ಒಂದೇ ಏಟಿಗೆ

---

57. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-283,ಪು-185,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಕೊಂದವು. ಮುಂದೆ ದಮನಕನು ಸಂಜೀವಕನಲ್ಲಿ ಮಿತ್ರಭೇದದ ಪ್ರಯೋಗ ಮಾಡುತ್ತಾನೆ.ಇಲ್ಲಿಯೂ ಸಾಕಷ್ಟು ರಾಜಧರ್ಮದ ವಿಚಾರಗಳನ್ನು ಸಮಯೋಚಿತವಾಗಿ ತಿಳಿಸುತ್ತಾ ಬರುತ್ತಾನೆ. ದಮನಕನು– "ಎಲೈ ಮಿತ್ರನೇ, ಹಾಗಿದ್ದರೆ ನನಗೇನೂ ಭಯವಿಲ್ಲ, ಪಿಂಗಲಕನು ದುರ್ಜನರ ಕಾರಣದಿಂದ ನಿನ್ನಮೇಲೆ ಕೋಪಗೊಂಡಿದ್ದರೂ, ನಿನ್ನ ಮಾತಿನ ಧಾಟಿಯಿಂದ ಆತನ ಕೋಪವು ಶಮನವಾಗುತ್ತದೆ." ಎಂದು ಸಂಜೀವಕನಿಗೆ ಹೇಳುತ್ತಾನೆ. ಆಗ ಸಂಜೀವಕನು ದಮನಕ ಹೇಳಿದ ಮಾತು. ಸರಿಯಾಗಿಲ್ಲ, ದುರ್ಜನರು ಅಲ್ಪರಾದರೂ ಅವರೊಡನೆ ವಾಸಮಾಡುವುದು ತರವಲ್ಲ. ಏನಾದರೂ ಉಪಾಯಮಾಡಿ ಅವರು ಖಂಡಿತಾ ಕೊಂದುಹಾಕುವರು ಎಂದು.

बहवः पण्डिताः क्षुद्राः सर्वे मायोपजीविनः।

कुर्युः कृत्यमकृत्यं वा उष्ट्रे काकादयो यथा ॥[58]

ಕಾಗೆ ಮುಂತಾದವುಗಳೆಲ್ಲವೂ ಸೇರಿ ಒಂಟೆಯನ್ನು ಹೇಗೆ ನಾಶಮಾಡಿದವೋ ಹಾಗೆ ಹಲವು ನೀಚರಾದ ಹಾಗೂ ಮೋಸವನ್ನವಲಂಭಿಸಿ ಬದುಕುವ ಪಂಡಿತರು ವಿವೇಕವಿಲ್ಲದ ಕೆಲಸವನ್ನು ಮಾಡುವರು. ದಮನಕನು ಅದೇನೆಂದು ಕೇಳಲು ಸಂಜೀವಕನು **ಒಂಟೆ ಕಾಕಾದಿ ಕಥೆ**ಯನ್ನು ಹೇಳಿದನು.

ವನಪ್ರದೇಶವೊಂದರಲ್ಲಿ ಮದೋತ್ಕಟವೆಂಬ ಸಿಂಹ ವಾಸವಾಗಿತ್ತು. ಚಿರತೆ, ಕಾಗೆ ಮತ್ತು ನರಿ ಅದರ ಅನುಯಾಯಿಗಳಾಗಿದ್ದವು. ಒಮ್ಮೆ ಕಾಡಿನಲ್ಲಿ ಕ್ರಥನಕನೆಂಬ ಒಂದು ಒಂಟೆಯನ್ನು ನೋಡಿದವು. ಸಿಂಹವು ಹಿಂದೆಂದೂ ಅಂತಹ ಪ್ರಾಣಿಯನ್ನು ನೋಡಿರಲಿಲ್ಲ. ಅದು ಅರಣ್ಯ ವಾಸಿಯೋ ಅಥವಾ ಗ್ರಾಮವಾಸಿಯೋ ಎಂದು ತಿಳಿದುಕೊಳ್ಳುವ ಕುತೂಹಲದಿಂದ ಕಾಗೆಯನ್ನು ಕೇಳಿತು. ಕಾಗೆಯು ಅದು ಒಂಟೆಯೆಂದು ಹೇಳುತ್ತಾ, ಅದು ತಿನ್ನಲು ಯೋಗ್ಯವಾದುದು. ಆಗ ಸಿಂಹವು "ಮನೆಗೆ ಬಂದವರನ್ನು ನಾನು ಕೊಲ್ಲುವುದಿಲ್ಲ" ಏಕೆಂದರೆ, ವಿಶ್ವಾಸ ಹಾಗೂ ನಿರ್ಭಯದಿಂದ ಮನೆಗೆ ಬಂದ ಶತ್ರುವನ್ನು ಕೊಂದರೂ ಕೂಡ ನೂರು ಬ್ರಾಹ್ಮಣರನ್ನು ಕೊಂದ ಪಾಪ ಬರುತ್ತದೆ. ನಂತರ ಅದರ ಅನುಚರರು ಒಂಟೆಯಲ್ಲಿ ವಿಶ್ವಾಸ ಮೂಡಿಸಿ, ಅಭಯಪ್ರಧಾನವನ್ನು ಮಾಡಿ ಮದೋತ್ಕಟನ ಬಳಿಗೆ ಕರೆದುಕೊಂಡು ಬಂದವು. ಸಿಂಹವು ಒಂಟೆಯನ್ನು ಆಹ್ವಾನಿಸಿ, ಅಲ್ಲಿಯೇ ಮರಕತಮಣಿಯಂತಿರುವ ಹುಲ್ಲಿನ ಅಗ್ರಭಾಗವನ್ನು ನಿರ್ಭಯದಿಂದ ತಿನ್ನುತ್ತಾ ಸದಾ ನನ್ನ ಬಳಿ ಇರು "ಎಂದುಹೇಳಿತು. ಹೀಗಿರಲು ಒಮ್ಮೆ ಸಿಂಹಕ್ಕೆ ಬಲಿಷ್ಠವಾದ ಆನೆಯೊಂದಿಗೆ ಯುದ್ಧವಾಯಿತು.

ಆನೆಯ ದಂತದ ಪ್ರಹಾರದಿಂದ ಸಿಂಹವು ಗಾಯಗೊಂಡು ಹೇಗೋ ಪ್ರಾಣ ಉಳಿಸಿಕೊಂಡಿತು. ಬಹಳ

58. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–311, ಪು–200,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ನೋವಿನಿಂದ ಬೇಟೆಯಾಡುವುದೂ ಸಾಧ್ಯವಾಗಲಿಲ್ಲ. ಸಿಂಹವು ತನ್ನ ಅನುಯಾಯಿಗಳನ್ನು ಕರೆದು "ಎಲ್ಲಾದರೂ, ಯಾವುದಾದರೂ ಪ್ರಾಣಿ ಸಿಗುತ್ತದೆಯೇ ಎಂದು ಹುಡುಕಿರಿ " ಎಂದು ಹೇಳಿತು. ಅಂತಹ ಸಂಕಷ್ಟ ಪರಿಸ್ಥಿತಿಯಲ್ಲೂ, ಆಹಾರವನ್ನು ಒದಗಿಸುವ ಪ್ರಜಾಪಾಲನಾ ಕಾರ್ಯ ರಾಜಧರ್ಮವಾಗಿರುತ್ತದೆ. ರಾಜನ ಅಪ್ಪಣೆಯಂತೆ, ಅನುಯಾಯಿಗಳು ಪ್ರಾಣಿಗಾಗಿ ಹುಡುಕಾಡಿದರೂ ಎಲ್ಲಿಯೂ ಸಿಗದಿದ್ದಾಗ, ತಮ್ಮ ತಮ್ಮಲ್ಲೇ ಮಾತನಾಡಿಕೊಂಡು ಕ್ರಂಥಕನನ್ನೇ ಕೊಂದು ತಿಂದು ಹಸಿವು ಶಮನ ಮಾಡಿಕೊಳ್ಳುವುದು ಸರಿಯೆಂದು ಯೋಚಿಸಿದವು. ಎಲ್ಲವೂ ಸೇರಿಕೊಂಡು ಬಹಳ ಉಪಾಯ ಹೂಡಿ ಅಭಯಪ್ರಧಾನ ಮಾಡಿದ್ದ ಒಂಟೆಯನ್ನೇ "ಸ್ವತಃ ತನ್ನ ಪ್ರಾಣವನ್ನು ತಾನೇ ಸ್ವಯಂ ಇಚ್ಛೆಯಿಂದ ಕೊಟ್ಟು ಉಳಿದವರ ಹಸಿವನ್ನು ನೀಗಿಸಿಕೊಳ್ಳಿ ಎಂದು ಹೇಳುವಷ್ಟರಮಟ್ಟಿಗೆ ತಯಾರಿ ಮಾಡಿಬಿಟ್ಟವು. ಯಾವಾಗ ಒಂಟೆ ಮುಗ್ಧತೆಯಿಂದ ಹೀಗೆ ಹೇಳಿತೋ, ರಾಜನೂ ಅಂತಿಮವಾಗಿ ಒಪ್ಪಿದನೋ ಆ ಕೂಡಲೇ ನರಿ ಮತ್ತು ಚಿರತೆ ಒಂದೊಂದು ಕಡೆಯಿಂದ ಒಂಟೆಯ ಹೊಟ್ಟೆಯನ್ನು ಸೀಳಿಬಿಟ್ಟವು. ಕಾಗೆಯು ಅದರ ಕಣ್ಣುಗಳನ್ನು ಕುಕ್ಕಿ ತೆಗೆದುಹಾಕಿತು. ಒಟ್ಟಿನಲ್ಲಿ ನೀಚ ಪಾಂಡಿತ್ಯವುಳ್ಳ ಆ ಪ್ರಾಣಿಗಳೆಲ್ಲಾ ಸೇರಿ ಒಂಟೆಯನ್ನು ತಿಂದುಹಾಕಿದವು.

ಹೀಗೆ ಕಥೆಯನ್ನು ಹೇಳಿ ಮುಗಿಸಿದ ದಮನಕನು "ತಿಳಿಯಿತಲ್ಲ ಸಂಜೀವಕ, ಮೋಸ ಹೋಗುವವರು ಇರುವವರೆಗೆ ಮೋಸ ಮಾಡುವವರು ಇದ್ದೇ ಇರುತ್ತಾರೆ. ಆದ್ದರಿಂದ ಅಂತಹವರು ಹತ್ತಿರ ಬರುವತನಕ ಅವರಿಗಾಗಿ ಹೆದರಬೇಕು, ಹತ್ತಿರ ಬಂದಾಗ ಮತ್ತೆ ಭಯಪಡಬಾರದು. ನೀರಲ್ಲಿ ಪೂರ್ತಿ ಮುಳುಗಿದ ಮೇಲೆ ಚಳಿ ಏನು, ಮಳೆ ಏನು? ಹೀಗಾಗಿ ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಶತ್ರುವನ್ನು ಎದುರಿಸುವುದೇ ಸೂಕ್ತ" ಎಂದಿದ್ದ.[59] ಮತ್ತೆ ಸಂಜೀವಕ ಮತ್ತು ದಮನಕನು ರಾಜನೀತಿಯ ಬಗ್ಗೆ ಕೆಲವು ಮುಖ್ಯ ವಿಚಾರಗಳನ್ನು ಚರ್ಚಿಸುತ್ತಾ, ಕೊನೆಯಲ್ಲಿ ದಮನಕನು ಹೇಳುತ್ತಾನೆ–

शत्रोर्विक्रममज्ञात्वा वैरमारभते हि यः ।

स पराभवमाप्नोति समुद्रष्टिट्टिभाद्यथा ॥[60]

ಶತ್ರುವಿನ ಪರಾಕ್ರಮವನ್ನು ತಿಳಿಯದೇ ಯಾವನು ವೈರತ್ವವನ್ನು ಆರಂಭಿಸುತ್ತಾನೋ ಅವನು ಸಮುದ್ರವು ಟಿಟ್ಟಿಭ ಪಕ್ಷಿಯಿಂದ ಸೋತಂತೆ ಸೋಲನ್ನು ಕಾಣುತ್ತಾನೆ. ಸಂಜೀವಕನು ಅದೇನೆಂದು ಕೇಳಲು ದಮನಕನು **ಟಿಟ್ಟಿಭ – ಸಮುದ್ರ ಕಥೆ**ಯನ್ನು ಹೇಳಿದನು. "ಸ್ವಪ್ರಯತ್ನದೊಂದಿಗೆ ದೈವಬಲವು ಸೇರಿದರೆ ಅಸಾಧ್ಯವಾದುದನ್ನು ಸಾಧಿಸಬಹುದಾಗಿದೆ. ಅದಕ್ಕೆ ಶಕ್ತಿಯೇ ಬೇಕೆಂದೇನಿಲ್ಲ. ಯುಕ್ತಿಯಿಂದ

---

59. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು–74–79, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.
60. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–337, ಪು–217,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಶತ್ರುವಿನ ದೌರ್ಬಲ್ಯವನ್ನು ಅರಿತು ಅಥವಾ ಇನ್ನೊಬ್ಬರ ಸಹಾಯವನ್ನು ಪಡೆದು ಕಾರ್ಯದಲ್ಲಿ ಯಶಸ್ಸು ಪಡೆಯಲಾಗುತ್ತದೆ ಎಂಬುದಕ್ಕೆ ಟಿಟ್ಟಿಭ ದಂಪತಿಯ ಗೆಲುವೇ ಸ್ಪಷ್ಟ ಉದಾಹರಣೆ.

ಒಂದು ಸಮುದ್ರ ತೀರ ಪ್ರದೇಶದಲ್ಲಿ ಟಿಟ್ಟಿಭ ದಂಪತಿಗಳು ವಾಸವಾಗಿದ್ದವು. ಟಿಟ್ಟಿಭೆಯು ಗರ್ಭವತಿಯಾಗಿದ್ದು, ಪ್ರಸವದ ಕಾಲ ಪ್ರಾಪ್ತವಾದಾಗ ತನ್ನ ಮೊಟ್ಟೆಗಳನ್ನಿಡಲು ಸುರಕ್ಷಿತವಾದ ಜಾಗವೊಂದನ್ನು ಹುಡುಕಲು ಟಿಟ್ಟಿಭನಿಗೆ ಹೇಳಿತು. ಅದಕ್ಕೆ, ಸಮುದ್ರಪ್ರದೇಶವೇ ರಮಣೀಯವಾಗಿರುವಾಗ ಅಲ್ಲಿಯೇ ಹೆರಿಗೆ ಕಾರ್ಯ ನಿರ್ವಹಿಸೋಣವೆಂದು ಟಿಟ್ಟಿಭ ಸಲಹೆ ಮಾಡಿತು. ಆದರೆ, ಟಿಟ್ಟಿಭೆ ಇದನ್ನು ಒಪ್ಪಲಿಲ್ಲ. ಏಕೆಂದರೆ ಪೂರ್ಣಿಮೆಯ ದಿನದಂದು ಸಮುದ್ರದ ಅಲೆಗಳು ಮದಗಜವನ್ನು ಕೂಡ ಎಳೆದುಕೊಂಡು ಹೋಗುವಷ್ಟು ಜೋರಾಗಿರುತ್ತದೆ. ಮತ್ತೊಂದು ಸುರಕ್ಷಿತ ಸ್ಥಳಕ್ಕೆ ಹೋಗುವುದು ಒಳ್ಳೆಯದು ಎಂದಳು ಟಿಟ್ಟಿಭೆ. ಅದನ್ನು ಕೇಳಿ ಟಿಟ್ಟಿಭ ನಕ್ಕು ಬಹಳ ಉಡಾಫೆ, ಅಹಂಕಾರ ಹಾಗೂ ಮೌಢ್ಯದ ಮಾತುಗಳನ್ನಾಡುತ್ತಾ ಬರೀ ಪ್ರತಿಷ್ಠೆ ಮಾತುಗಳನ್ನಾಡಿತು. ಈ ಮಾತುಗಳನ್ನು ಸಮುದ್ರವೂ ಕೇಳಿಸಿಕೊಂಡು ಯೋಚಿಸಿತು- "ಈ ಹುಳುವಿನಂತಿರುವ ಪಕ್ಷಿಗೆ ಅದೆಷ್ಟು ಗರ್ವ! ಆಕಾಶವು ತುಂಡಾಗಿ ಬಿದ್ದರೆ ಹಿಡಿದುಕೊಳ್ಳುವೆನೆಂಬ ಭ್ರಾಂತಿಯಿಂದ ಕಾಲುಗಳನ್ನು ಮೇಲೆ ಮಾಡಿ ಮಲಗುವ ಟಿಟ್ಟಿಭಕ್ಕಿರುವಂತಹ ಗರ್ವವು ಬೇರೆಲ್ಲೂ ಕಾಣಸಿಗದು. ಕುತೂಹಲಕ್ಕಾದರೂ ಇದರ ಮೊಟ್ಟೆಗಳನ್ನು ಅಪಹರಿಸಿ ಇದರ ಸಾಮರ್ಥ್ಯ ಪರೀಕ್ಷೆ ಮಾಡಲೇಬೇಕು." ಮೊಟ್ಟೆ ಇಟ್ಟದ್ದೂ ಆಯಿತು. ಒಮ್ಮೆ ಟಿಟ್ಟಿಭ ದಂಪತಿಗಳು ಆಹಾರವನ್ನು ಹುಡುಕಲು ಹೋಗಿದ್ದಾಗ ಸಮುದ್ರವು ಅಲೆಗಳನ್ನೆಬ್ಬಿಸಿ ಅವುಗಳ ಮೊಟ್ಟೆಯನ್ನು ಅಪಹರಿಸಿತು. ಟಿಟ್ಟಿಭ ದಂಪತಿಗಳು ಹಿಂದಿರುಗಿ ಬಂದಾಗ, ಮೊಟ್ಟೆಗಳು ಇಲ್ಲದ್ದನ್ನು ನೋಡಿದ ಟಿಟ್ಟಿಭೆಯು ಬಹಳ ಕೋಪ ಹಾಗೂ ದುಃಖದಿಂದ ಪ್ರಲಾಪಿಸುತ್ತಾ, ಟಿಟ್ಟಿಭಕ್ಕೆ ಹೀಗೆ ಹೇಳಿತು- "ಎಲೈ ಮೂರ್ಖನೇ, ನಾನು ಮೊದಲೇ ಹೇಳಿದ್ದೆ. ಸಮುದ್ರದ ಅಲೆಗಳಿಂದ ಮೊಟ್ಟೆಯು ನಾಶವಾಗುವುದು, ಬೇರೆಡೆಗೆ ಹೋಗೋಣ ಎಂದು. ಆದರೆ ಮೌಢ್ಯದಿಂದ ಮತ್ತು ಅಹಂಕಾರದಿಂದ ನನ್ನ ಮಾತನ್ನು ನೀನು ಕೇಳಲಿಲ್ಲ. ಹೀಗೊಂದು ಉಕ್ತಿಯಿದೆ:-

सुहृदां हितकामानां न करोतीह यो वचः ।

स कूर्म इव दुर्बुद्धिः काष्ठाद् भ्रष्टो विनश्यति ॥[61]

ಯಾರು ಹಿತವನ್ನು ಬಯಸುವ ಮಿತ್ರರ ಮಾತನ್ನು ಕೇಳುವುದಿಲ್ಲವೋ ಅವನು ಕಟ್ಟಿಗೆಯಿಂದ ಬಿದ್ದ

61. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-344, ಪು-221,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಆಮೆಯಂತೆ ನಾಶಹೊಂದುತ್ತಾನೆ. ಟಟ್ಟಿಭವು ಅದೇನೆಂದು ಕೇಳಲು ಟಟ್ಟಿಭೆಯು **ಕಟ್ಟಿಗೆಯಿಂದ ಬಿದ್ದ ಆಮೆಯ ಕಥೆ**ಯನ್ನು ಹೇಳಿತು.

ಒಂದು ಜಲಾಶಯದಲ್ಲಿ ಕುಂಬುಗ್ರೀವನೆಂಬ ಆಮೆಯಿತ್ತು. ಅಲ್ಲಿಗೆ ನಿತ್ಯವೂ ಸಂಕಟ ಮತ್ತು ವಿಕಟ ಎಂಬ ಅದರ ಹಂಸಮಿತ್ರರು ಬಂದು ಮಹರ್ಷಿ ದೇವರ್ಷಿಗಳ ಕಥೆಗಳನ್ನು ಹೇಳುತ್ತಾ ಆಮೆಯೊಡನೆ ಸೂರ್ಯಾಸ್ತದ ಸಮಯದವರೆಗೂ ಕಾಲಕಳೆದು, ತಮ್ಮ ಗೂಡಿಗೆ ವಾಪಸ್ಸಾಗುತ್ತಿದ್ದವು. ಹೀಗೇ ಕಾಲಕಳೆದಂತೆ, ಅನಾವೃಷ್ಟಿಯಿಂದ ಸರೋವರವು ಒಣಗುತ್ತಾ ಬಂತು. ಆಗ ಆಮೆ ಬಹಳ ದುಃಖಗೊಂಡಿತು. ಇದನ್ನು ನೋಡಿದ ಹಂಸಮಿತ್ರರು ಆಮೆಯನ್ನು ವಿಚಾರಿಸಿದವು. ಅದಕ್ಕೆ ಕುಂಬುಗ್ರೀವ ಹೇಳಿತು– "ನೀರಿಲ್ಲದಿದ್ದರೆ ನಮಗೆ ಬದುಕಿಲ್ಲ. ಪ್ರತಿಕೂಲ ಕಾಲದಲ್ಲೂ ಧೈರ್ಯ ಬಿಡಬಾರದು. ಏಕೆಂದರೆ ಧೈರ್ಯವೊಂದಿದ್ದರೆ ಹೇಗಾದರೂ ಉತ್ತಮ ಸ್ಥಿತಿಯನ್ನು ಪಡೆಯಬಹುದು ಸಮುದ್ರದ ಹಡಗು ಮುರಿದರೆ ನಾವಿಕನು ಹೇಗಾದರೂ ಮಾಡಿ ದಡ ತಲುಪುವುದಿಲ್ಲವೇ? ಆದ್ದರಿಂದ ನೀವೇನಾದರೂ ಒಂದು ಉಪಾಯವನ್ನು ಮಾಡಿ ನನಗೆ ಸಹಾಯ ಮಾಡಬೇಕು. ಆದ್ದರಿಂದ ಒಂದು ಗಟ್ಟಿಯಾದ ಹಗ್ಗ ಅಥವಾ ಸಣ್ಣ ಕಟ್ಟಿಗೆಯ ತುಂಡೊಂದನ್ನು ತನ್ನಿ. ಹೆಚ್ಚು ನೀರಿರುವ ಸರೋವರವೊಂದನ್ನು ಹುಡುಕಿರಿ. ನಾನು ಆ ಕಟ್ಟಿಗೆಯ ಮಧ್ಯ ಭಾಗವನ್ನು ಕಚ್ಚಿ ಹಿಡಿಯುತ್ತೇನೆ. ನೀವು ಅದರ ಎರಡು ತುದಿಗಳನ್ನು ಕಚ್ಚಿಕೊಂಡು ನನ್ನನ್ನು ಆ ಸರೋವರಕ್ಕೆ ಕರೆದುಕೊಂಡು ಹೋಗಿ" ಎಂದಿತು.

ಹಂಸಗಳು ಹಾಗೆಯೇ ಮಾಡೋಣವೆಂದು ಒಪ್ಪಿದವು. ಆದರೆ ನೀನು ಮೌನಿಯಾಗಿರಬೇಕು ಎಂದು ಒಂದು ಷರತ್ತನ್ನು ಹೇಳಿದವು. ಸರಿ, ಯೋಜನೆಯಂತೆ ಪ್ರಯಾಣ ಸಾಗುತ್ತಿತ್ತು. ದಾರಿಯಲ್ಲಿ ಒಂದು ನಗರ ಕಂಡಿತು. ಅಲ್ಲಿನ ಜನರು ಈ ಚಿತ್ರವನ್ನು ಕುತೂಹಲದಿಂದ ನೋಡುತ್ತಾ" ಏನೋ ಚಕ್ರಾಕಾರದ ವಸ್ತುವನ್ನು ಪಕ್ಷಿಗಳು ಒಯ್ಯುತ್ತಿವೆ ನೋಡಿ! ನೋಡಿ! "ಎಂದರು. ಅವರ ಕೋಲಾಹಲವನ್ನು ಕೇಳಿದ ಆಮೆಯು, ಎಚ್ಚರಿಕೆ ಮರೆತು ಬಾಯಿ ತೆರೆದು, "ಇದೇನು ಕೋಲಾಹಲ?." ಎಂದು ಹೇಳುವಷ್ಟರಲ್ಲಿ ಕೆಳಗೆ ಬಿದ್ದುಬಿಟ್ಟಿತು. ಜನರು ಅದನ್ನು ಕೊಚ್ಚಿ ಹಾಕಿಬಿಟ್ಟರು.[62] ಇಲ್ಲಿ ಎಂಥಹ ಒಂದು ನೀತಿಪಾಠವಿದೆ! ಹಿತವನ್ನು ಬಯಸುವ ಮಿತ್ರರ ಮಾತನ್ನು ಕೇಳಬೇಕು; ಮೌಢ್ಯದಿಂದ ವರ್ತಿಸಬಾರದು; ಜಾಗ್ರತೆ ಅಥವಾ ಎಚ್ಚರಿಕೆ ತಪ್ಪಬಾರದು. ಈ ಒಂದು ಪುಟ್ಟ ಕಥೆ ಕೇಳುಗರಿಗೆ ನಿಜಕ್ಕೂ ಕಣ್ಣಿಗೆ ಕಟ್ಟುವಂತಿದ್ದು, ಎಂದೂ ಮರೆಯಲಾಗದಂತಿಲ್ಲ. ಇದರ ಮುಂದೆ ಯಾವ ದುಬಾರಿಯಾದ ಪಾಠೋಪಕರಣವೂ ಇಷ್ಟು

---

62. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು–81–82, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

ಪರಿಣಾಮಕಾರಿಯಾಗಲಾರದು. ಇದೇ ಪಂಚತಂತ್ರದಲ್ಲಿ ಕಂಡುಬರುವ ಒಂದು ವಿಶಿಷ್ಟ ಶೈಕ್ಷಣಿಕ, ಮನೋವೈಜ್ಞಾನಿಕ ತಂತ್ರಗಾರಿಕೆಯಾಗಿರುತ್ತದೆ. ಸರಳ ಹಾಗೂ ಆಪ್ಯಾಯಮಾನ ಬೋಧನೆಯಾಗಿದೆ. ಅದರಲ್ಲೂ ಪ್ರಾಣಿಪಕ್ಷಿಗಳು ಇಂತಹ ಮನುಷ್ಯವರ್ತನೆಯನ್ನು ನಿರೂಪಿಸುತ್ತವೆ ಎಂಬುದೇ ಕಲಿಯುವವರಿಗೆ ಒಂದು ವಿಶೇಷ ಆಕರ್ಷಣೆಯಾಗಿರುತ್ತದೆ.

ಕಟ್ಟಿಗೆಯಿಂದ ಬಿದ್ದ ಆಮೆಯ ಕಥೆಯನ್ನು ಮುಗಿಸಿದ ಟಿಟ್ಟಿಭೆಯು ಮುಂದುವರಿದು –

अनागतविधाता च प्रत्युत्पन्नमतिस्तथा ।

द्वावेतौ सुखमेधेते यद्भविष्यो विनश्यति ॥[63]

ಅಂದರೆ, “ಅನಾಗತ ವಿಧಾತಾ ಮತ್ತು ಪ್ರತ್ಯುತ್ಪನ್ನಮತಿ– ಈ ಇಬ್ಬರೂ ಸಂತೋಷದಿಂದ ಇರುವರು. ಆದರೆ ಯದ್ಭವಿಷ್ಯನು ನಾಶಹೊಂದುವನು.” ಅದನ್ನು ಕೇಳಿದ ಟಿಟ್ಟಿಭವು ಅದೇನೆಂದು ಕೇಳಲು ಟಿಟ್ಟಿಭೆಯು **ಮೂರು ಮೀನುಗಳ ಕಥೆ**ಯನ್ನು ಹೇಳಿತು. ಅನಾಗತ ವಿಧಾತಾ, ಪ್ರತ್ಯುತ್ಪನ್ನಮತಿ ಮತ್ತು ಯದ್ಭವಿಷ್ಯತಿ ಎಂಬ ಮೂರು ಮೀನುಗಳು ಒಂದು ಜಲಾಶಯದಲ್ಲಿ ವಾಸಿಸುತ್ತಿದ್ದವು. ಅದರಲ್ಲಿ ಇನ್ನೂ ಬೇಕಾದಷ್ಟು ಮೀನುಗಳೂ ವಾಸವಾಗಿದ್ದವು. ಒಮ್ಮೆ ಅದೇ ದಾರಿಯಲ್ಲಿ ಹೋಗುತ್ತಿದ್ದ ಮೀನುಗಾರರು– “ಅಪರೂಪದ ಸರೋವರ, ಅದರ ತುಂಬಾ ಮೀನುಗಳಿವೆ. ಅಂದಿನ ಮೀನುಗಳನ್ನು ಹಿಡಿದಾಗಿದ್ದರಿಂದ ಹಾಗೂ ಸಂಜೆಯಾಗಿದ್ದರಿಂದ ನಾಳೆ ಬೆಳಗ್ಗೆ ಖಂಡಿತಾ ಬಂದು ಮೀನುಗಳನ್ನು ಹಿಡಿಯೋಣ ಎಂದು ಮಾತನಾಡಿಕೊಳ್ಳುತ್ತಿದ್ದರು. ಇದನ್ನು ಅನಾಗತ ವಿಧಾತಾ ಮೀನು ಕೇಳಿಸಿಕೊಂಡು ಎಲ್ಲಾ ಮೀನುಗಳಿಗೂ ವಿಷಯ ತಿಳಿಸಿ ಎಚ್ಚರಿಸಿತು. ಅಂದೇ ರಾತ್ರಿ ಬೇರೆ ಸರೋವರಕ್ಕೆ ಹೋಗಿಬಿಡೋಣ ಎಂದು ಸಲಹೆ ನೀಡಿತು”

विद्यमाना गतिर्येषामन्यत्रापि सुखावहा ।

तेन पश्यन्ति विद्वांसो देहभङ्गं कुलक्षयम् ॥[64]

ಬೇರೆಕಡೆಗೆ ಹೋಗಿ ಸುಖವಾಗಿ ಬದುಕುವ ಅವಕಾಶ ಇದ್ದಾಗ, “ಬುದ್ಧಿವಂತನು ತಾನು ಸ್ವದೇಶದಿಂದ ಹೊರಡುವಂತಾಯಿತು ಅಥವಾ ಕುಲವು ನಾಶವಾಯಿತು ಎಂದು ಚಿಂತಿಸುವುದಿಲ್ಲ.” ಎಂದೂ ಹೇಳಿತು.

ಅದನ್ನು ಕೇಳಿದ ಪ್ರತ್ಯುತ್ಪನ್ನಮತಿ ಸರಿಯೆಂದು ಒಪ್ಪಿ, ತಾನೂ ಒಂದು ಸಲಹೆ ನೀಡಿತು–

---

63. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–347, ಪು–224,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
64. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–349, ಪು–226,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

यस्यास्ति सर्वत्र गतिः स कस्मात्स्वदेशरागेण हि याति नाशम् ।

तातस्य कूपोऽयमिति ब्रुवाणाः क्षारं जलं कापुरुषाः पिबन्ति ॥[65]

"ಯಾರು ಎಲ್ಲಾದರೂ ಬದುಕಬಲ್ಲರೋ ಅವರು ಸ್ವದೇಶದ ವ್ಯಾಮೋಹದಿಂದ ನಾಶಹೊಂದುವುದಿಲ್ಲ. ಹೇಡಿಗಳು ಮಾತ್ರ ಅಜ್ಜನ ಬಾವಿಯೆಂದು ಹೇಳುತ್ತಾ ಉಪ್ಪು ನೀರನ್ನೇ ಕುಡಿಯುತ್ತಿರುತ್ತಾರೆ."

ಇದನ್ನೆಲ್ಲಾ ಕೇಳಿದ ಯದ್ಭವಿಷ್ಯ ಮೀನು  ನಗುತ್ತಾ, ಇವರುಗಳ ಆಲೋಚನೆ ಸರಿಯಿಲ್ಲವೆಂಬ ಅಭಿಪ್ರಾಯ ವ್ಯಕ್ತಪಡಿಸಿತು. ಪೂರ್ವಜರ ಕಾಲದ ಆ ಸರೋವರವನ್ನು ಬಿಟ್ಟುಹೋಗುವುದು ಸರಿಯಲ್ಲವೆಂದಿತು. ಆಯಸ್ಸು ಮುಗಿದಾಗ ಎಲ್ಲಿದ್ದರೂ ಸಾವು ಬಂದೇಬರುತ್ತದೆ.

अरक्षितं तिष्ठति दैवरक्षितं सुरक्षितं दैवहतं विनश्यति ।

जीवत्सनाथोऽपि वने विसर्जितः कृतप्रयत्नोऽपि गृहे विनश्यति ॥[66]

ರಕ್ಷಣೆಯಿಲ್ಲದವನು ದೈವರಕ್ಷೆಯಿದ್ದರೆ ಬದುಕುತ್ತಾನೆ. ಉತ್ತಮ ರಕ್ಷಣೆಯಿದ್ದವನು ದೈವಕೃಪೆಯಿಲ್ಲದಿದ್ದಾಗ ನಾಶವಾಗುತ್ತಾನೆ. ಕಾಡಿನಲ್ಲಿ ಬಿಟ್ಟ ಅನಾಥನು ದೈವಕೃಪೆಯಿಂದ ಬದುಕುತ್ತಾನೆ. ದೈವಕೃಪೆಯಿಲ್ಲದಿದ್ದಾಗ ಎಷ್ಟೇ ಪ್ರಯತ್ನಪಟ್ಟರೂ, ಮನೆಯಲ್ಲಿದ್ದರೂ ಕೂಡ ನಾಶವಾಗುತ್ತಾನೆ. ಆದ್ದರಿಂದ ನಾನು ಬರುವುದಿಲ್ಲ. ನಿಮಗೆ ತೋಚಿದಂತೆ ನೀವು ಮಾಡಿ." ಎಂದಿತು. ಯದ್ಭವಿಷ್ಯನ ತೀರ್ಮಾನ ತಿಳಿದುಕೊಂಡು ಅನಾಗತವಿಧಾತಾ ಮತ್ತು ಪ್ರತ್ಯುತ್ಪನ್ನಮತಿ ಮೀನುಗಳು ಇತರರೊಂದಿಗೆ ಬೇರೆಡೆಗೆ ಹೊರಟುಹೋದವು ಬೆಳಗ್ಗೆ ಯೋಜನೆಯಂತೆ ಮೀನುಗಾರರು ಬಂದರು, ಬಲೆಬೀಸಿದರು, ಯದ್ಭವಿಷ್ಯ ಹಾಗೂ ಉಳಿದ ಇತರ ಮೀನುಗಳನ್ನು ಹಿಡಿದುಕೊಂಡು ಹೊರಟರು. ಹೀಗೆ ಕಥೆಯನ್ನು ಮುಗಿಸಿದ ಟಿಟ್ಟಿಭೆಯು ಟಿಟ್ಟಿಭದೊಡನೆ ಅನೇಕ ವಿಚಾರಗಳನ್ನು ಚರ್ಚೆ ಮಾಡಿ ಹೇಳಿತು– "ನೀನು ನಿಜವಾಗಿಯೂ ಸಮುದ್ರದೊಂದಿಗೆ ಯುದ್ಧ ಮಾಡುವುದಾದರೆ ಬೇರೆ ಪಕ್ಷಿಗಳನ್ನು ಕರೆದು ಮಿತ್ರರೊಂದಿಗೆ ಸೇರಿಕೊಂಡು ಯುದ್ಧವನ್ನು ಹೂಡು, ಹುಲ್ಲಿನಿಂದ ಮಾಡಿದ ಹಗ್ಗದಿಂದ ಹೇಗೆ ಆನೆಯನ್ನೂ ಕೂಡ ಕಟ್ಟಬಹುದೋ ಹಾಗೆ ದುರ್ಬಲರಾದವರು ಗುಂಪುಗೂಡಿದಾಗ ಅವರನ್ನು ಜಯಿಸುವುದು ಕಷ್ಟಕರವು.

---

65. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–351, ಪು–227,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
66. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–352,ಪು–227–228,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

चटकाकाष्ठकुद्देन मक्षिकादर्दुरैस्तथा ।

महाजनविरोधेन कुञ्जरः प्रलयं गतः ॥[67]

"ಗುಬ್ಬಚ್ಚಿಯು ಮರಕುಟಿಗದೊಂದಿಗೆ ಸೇರಿತು. ನೊಣವು ಕಪ್ಪೆಯೊಂದಿಗೆ ಸೇರಿತು. ಇವರೆಲ್ಲರ ವಿರೋಧದಿಂದ ಆನೆಯೊಂದು ಸಾವನ್ನಪ್ಪಿತು." ಟಿಟ್ಟಿಭವು ಅದೇನೆಂದು ಕೇಳಲು ಟಿಟ್ಟಿಭೆಯು **ಗುಬ್ಬಚ್ಚಿ ದಂಪತಿ ಹಾಗೂ ಆನೆಯ ಕಥೆ**ಯನ್ನು ಹೇಳಿತು.

ಒಂದು ಕಾಡಿನಲ್ಲಿ ದಟ್ಟವಾದ ಎಲೆಯನ್ನು ಹೊಂದಿದ ತಮಾಲವೃಕ್ಷದಲ್ಲಿ ಗುಬ್ಬಿ ದಂಪತಿ ವಾಸವಾಗಿದ್ದವು. ಅನ್ಯೋನ್ಯ ದಾಂಪತ್ಯದಿಂದ ಹೆಣ್ಣು ಗುಬ್ಬಿ ಮೊಟ್ಟೆಯನ್ನಿಟ್ಟು ಅದನ್ನು ಎಚ್ಚರಿಕೆಯಿಂದ ಕಾಯುತ್ತಿತ್ತು. ಅದೇ ಸಮಯದಲ್ಲಿ ಒಂದು ಮದಗಜವು ಆ ಮರದ ಬಳಿ ಬಂದು ಗುಬ್ಬಚ್ಚಿ ಗೂಡಿದ್ದ ರೆಂಬೆಯನ್ನು ಎಳೆದು ಎಸೆಯಿತು. ಮೊಟ್ಟೆಗಳೆಲ್ಲವೂ ಪುಡಿಪುಡಿಯಾದವು. ಪೂರ್ವಜನ್ಮದ ಪುಣ್ಯವಿಶೇಷದಿಂದ ದಂಪತಿಗಳಿಗೆ ಏನೂ ತೊಂದರೆಯಾಗಲಿಲ್ಲ. ಹೆಣ್ಣು ಗುಬ್ಬಿ ತನ್ನ ಮೊಟ್ಟೆಗಳನ್ನು ಕಳೆದುಕೊಂಡು ಆಕ್ರಂದನಕ್ಕೆ ತೊಡಗಿತು. ಅದರ ಸಂಕಟವನ್ನು ನೋಡಲಾರದೆ, ಅದರ ಮಿತ್ರನಾದ ಮರಕುಟಿಕ ಪಕ್ಷಿಯು ಅದಕ್ಕೆ ಸಾಂತ್ವನ ಹೇಳಿತು. "ಮಾನ್ಯಳೇ ಸುಮ್ಮನೆ ಅಳಬೇಡ ಅದರಿಂದ ಪ್ರಯೋಜನವಿಲ್ಲ. ನಷ್ಟವಾದುದಕ್ಕೆ, ಸತ್ತುಹೋದದ್ದಕ್ಕೆ ಮತ್ತು ಕಳೆದುಹೋದದ್ದಕ್ಕೆ ಬುದ್ಧಿವಂತರು ಚಿಂತಿಸುವುದಿಲ್ಲ. ಚಿಂತಿಸಬಾರದ್ದಕ್ಕಾಗಿ ಚಿಂತಿಸುವುದು ಹಾಗೂ ಅದರಿಂದಾಗುವ ದುಃಖ –ಈ ಎರಡೂ ಅನರ್ಥಗಳು

श्लेष्माश्रु बान्धवैर्मुक्तं प्रेतो भुङ्क्ते यतरोऽवशः ।

तस्मान्न रोदितव्यं हि क्रियाः कार्याश्च शक्तितः ॥[68]

ಅಂದರೆ ಸತ್ತ ಪ್ರೇತಶರೀರವು ಕಫದಿಂದ ಕೂಡಿದ ಬಂಧುಗಳ ಕಣ್ಣೀರನ್ನು ಕುಡಿಯುತ್ತದೆ. ಆದ್ದರಿಂದ ಸತ್ತಾಗ ಅಳದೆ ಯಥಾಶಕ್ತಿ ಉತ್ತರಕ್ರಿಯೆಗಳನ್ನು ಮಾಡಬೇಕು. ಸಂತತಿಯನ್ನು ನಾಶಮಾಡಿದ ದುಷ್ಟಗಜವನ್ನು, ನೀನು ಬಂಧುವೇ ಆಗಿದ್ದಲ್ಲಿ ಕೊಲ್ಲುವ ಉಪಾಯವನ್ನು ಯೋಚಿಸು ಎಂದು ಗುಬ್ಬಿಯು ಯಾಚಿಸಿತು. ಅದಕ್ಕೆ ಮರಕುಟಿಗನು ಹೇಳಿತು– "ಯಾರು, ಯಾರ ಕಷ್ಟದಲ್ಲಿ ನೆರವಾಗುತ್ತಾರೋ ಅವರು ಜಾತಿಯನ್ನು ಮೀರಿ ಬಂಧುವಾಗುತ್ತಾರೆ. ಕಷ್ಟದಲ್ಲಾಗುವವನೇ ಮಿತ್ರ, ಹಿತಕಾರಿಯಾದವನೇ ಪುತ್ರ. ಆದ್ದರಿಂದ

---

67. **ಸುಧಾಕರ ಮಾಲವೀಯ**, ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–362,ಪು–233,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
68. **ಸುಧಾಕರ ಮಾಲವೀಯ**, ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–365, ಪು–235,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ನನ್ನ ಬುದ್ಧಿ ಪ್ರಭಾವವನ್ನು ನೋಡು. ವೀಣಾರವಾ ಎಂಬ ನೊಣವು ನನ್ನ ಸ್ನೇಹಿತೆ. ಅವಳನ್ನು ಕರೆದುಕೊಂಡು ಬರುವೆನು. ಬಳಿಕ ಮರಕುಟಿಕವು ಗುಬ್ಬಿಯೊಡನೆ. ನೊಣದ ಹತ್ತಿರ ಬಂದು ವಿಚಾರ ವಿನಿಮಯ ಮಾಡಿಕೊಂಡವು. ನೊಣ ಹೇಳಿತು– "ಈ ವಿಷಯದಲ್ಲಿ ಹೇಳುವುದೇನಿಲ್ಲ. ಪ್ರತ್ಯುಪಕಾರವನ್ನು ಪಡೆಯುವುದಕ್ಕಾಗಿಯೇ ಮಿತ್ರನಿಗೆ ಅಥವಾ ಮಿತ್ರನಮಿತ್ರನಿಗೆ ಪ್ರಿಯವಾದ ಕಾರ್ಯವನ್ನು ಮಾಡಿದರೆ ಮಿತ್ರನಾಗಿ ಏನು ಮಾಡಿದಂತಾಯಿತು? ಇದು ಸತ್ಯವಾದ ಮಾತು. ಮೇಘನಾದನೆಂಬ ಕಪ್ಪೆಯು ನನ್ನ ಸ್ನೇಹಿತ. ಅವನನ್ನು ಕರೆದು ಸೂಕ್ತವಾದುದನ್ನು ಮಾಡೋಣ. ಅನಂತರ ಮೂವರೂ ಹೋಗಿ ಮೇಘನಾದನಲ್ಲಿ ಎಲ್ಲವನ್ನೂ ಹೇಳಿಕೊಂಡರು. ಆಗ ಮೇಘನಾದವು ಹೇಳಿತು– "ಕುಪಿತರಾದ ಮಹಾಜನರ ಮುಂದೆ ಆ ಆನೆಯು ಎಷ್ಟು ಮಾತ್ರದ್ದು? ನಾವು ವಿಚಾರ ಮಾಡೋಣ. ನೊಣವೇ, ನೀನು ಮಧ್ಯಾಹ್ನದ ವೇಳೆ ಆ ಮತ್ತಗಜದ ಕಿವಿಯಲ್ಲಿ ವೀಣಾರವದಂತಹ ಶಬ್ದವನ್ನು ಮಾಡು. ಅದನ್ನು ಕೇಳುವ ಸುಖದಿಂದ ಆನೆಗೆ ಗಾಢವಾದ ನಿದ್ದೆಬರುತ್ತದೆ. ಆಗ ಮರಕುಟಿಕದ ಕೊಕ್ಕಿನಿಂದ ಕಣ್ಣುಗಳಿಗೆ ಚುಚ್ಚಲ್ಪಟ್ಟು, ದೃಷ್ಟಿ ಕಳೆದುಕೊಂಡು ಬಾಯಾರಿಕೆಯಿಂದ ನೀರನ್ನು ಹುಡುಕುತ್ತಾ ಕಂದಕದಲ್ಲಿ ನಿಂತು ವಟಗುಟ್ಟುತ್ತಿರುವ ಕಪ್ಪೆಯ ಪರಿವಾರದವರ ಶಬ್ದವನ್ನು ಕೇಳಿ ಸರೋವರವಿದೆಯೆಂದು ತಿಳಿದು ಆನೆಯು ಕಂದಕಕ್ಕೆ ಬೀಳುತ್ತದೆ ಮತ್ತು ಸಾವನ್ನಪ್ಪುತ್ತದೆ ಹೀಗೆ ಮಾಡಿದಲ್ಲಿ ವೈರಸಾಧನೆ ಮಾಡಿದಂತಾಗುತ್ತದೆ.[69] ಎಂತಹ ಇಂಜಿನಿಯರಿಂಗ್ ಪ್ಲಾನ್!

ಇದು ಒಂದು ರೀತಿ ಶೈಕ್ಷಣಿಕ ಮನೋವಿಜ್ಞಾನದಲ್ಲಿ ಸಮಸ್ಯೆ ಬಗೆಹರಿಸುವಿಕೆ. **(problem solving)** ಅಂತೂ ಯೋಜನೆಯಂತೆ ಎಲ್ಲವೂ ನಡೆದು ಆನೆ ದೊಡ್ಡ ಕಂದಕಕ್ಕೆ ಬಿದ್ದು ಸತ್ತು ಹೋಯಿತು. ಇದರ ನೀತಿಪಾಠ ಒಗ್ಗಟ್ಟಿದ್ದರೆ ಏನನ್ನೂ ಸಾಧಿಸಬಹುದು, ಒಗ್ಗಟ್ಟಿನಲ್ಲಿ ಬಲವಿದೆ. ಹಿತವಾದ ಮಿತ್ರರ ಮಾತುಗಳನ್ನು ಕೇಳಿದರೆ ಎಂಥಹ ಸಮಸ್ಯೆಯನ್ನೂ ಯೋಜಿತವಾಗಿ ಎದುರಿಸಬಹುದು. ಹೀಗೆ ಗುಬ್ಬಚ್ಚಿ ದಂಪತಿ ಕಥೆ ಮುಕ್ತಾಯವಾಗುತ್ತದೆ.

ಪುನಃ ಟಿಟ್ಟಿಭ ಈ ಕಥೆಯನ್ನು ಕೇಳಿ ತಾನೂ ಸ್ನೇಹಿತರೊಂದಿಗೆ ಸೇರಿ ಸಮುದ್ರವನ್ನು ಒಣಗಿಸುವೆನೆಂದು ನಿರ್ಧರಿಸಿ, ಬಕ, ಹಂಸ, ಮಯೂರ ಮೊದಲಾದ ಪಕ್ಷಿಗಳನ್ನು ಸೇರಿಸಿ ಸಮಾಲೋಚನೆ ನಡೆಸಿತು. ಅವುಗಳೆಲ್ಲಾ ಮಂತ್ರಾಲೋಚನೆ ಮಾಡಿ ಹೀಗೆ ಹೇಳಿದವು– "ಸಮುದ್ರವನ್ನು ಒಣಗಿಸುವುದರಲ್ಲಿ ನಾವು ಶಕ್ತರಲ್ಲ. ವ್ಯರ್ಥ ಪ್ರಯಾಸ ಬೇಡ. ನಮ್ಮ ಸ್ವಾಮಿ ಗರುಡನಿದ್ದಾನೆ. ನಮ್ಮ ಈ ಸಮಸ್ಯೆಯನ್ನು ಅವನಲ್ಲಿ ನಿವೇದಿಸಿಕೊಳ್ಳೋಣ. ಅವನು ತನ್ನವರ ಅಪಮಾನದಿಂದ ಕೋಪಗೊಂಡು ಶತ್ರುವಿನಲ್ಲಿ ಪ್ರತೀಕಾರವನ್ನು ಮಾಡುವನು. ಅದರಂತೆ

---

69. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು – 85–87, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

ಅವುಗಳೆಲ್ಲಾ ದುಃಖದಿಂದ ಅಳುತ್ತಾ ಗರುಡನ ಬಳಿಗೆ ಹೋಗಿ ಕರುಣಾಸ್ವರದಿಂದ ಟಿಟ್ಟಿಭೆಯ ಮೊಟ್ಟೆಗಳು ಸಮುದ್ರದ ಅಲೆಯಲ್ಲಿ ಕೊಚ್ಚಿಕೊಂಡು ಹೊದ ಬಗ್ಗೆ, ಪಕ್ಷಿಕುಲ ನಾಶವಾಗಿಹೋಯಿತೆಂಬ ಬಗ್ಗೆ ಹಾಗೂ ತಮ್ಮ ಎಲ್ಲ ಸಂಕಷ್ಟಗಳನ್ನು ನಿವೇದಿಸಿಕೊಂಡವು. ಗರುಡನು ಸತ್ಯಾಸತ್ಯತೆ ಪರೀಕ್ಷಿಸಿ ಪಕ್ಷಿಗಳು ಸತ್ಯವನ್ನೇ ಹೇಳುತ್ತಿವೆ ಎಂಬುದನ್ನು ಅರಿತು ಅಂದೇ ಹೋಗಿ ಸಮುದ್ರವನ್ನು ಒಣಗಿಸಿಬಿಡಬೇಕು ಎಂದು ಯೋಚಿಸಿದನು. ಅಷ್ಟರಲ್ಲಿ ವಿಷ್ಣುದೂತನೊಬ್ಬನು ಬಂದು ಭಗವನ್ನಾರಾಯಣನು ಕರೆ ಕಳುಹಿಸಿರುವುದಾಗಿ ಸಂದೇಶ ಕೊಟ್ಟನು. ಅದನ್ನು ಕೇಳಿದ ಗರುಡನು ಸ್ವಾಭಿಮಾನದಿಂದ ಹೇಳಿದನು– "ಎಲೈ ದೂತನೇ, ನನ್ನಂತಹ ಸಾಮಾನ್ಯ ಸೇವಕನಿಂದ ಭಗವಂತನಿಗೇನು ಪ್ರಯೋಜನ? ನನ್ನ ಸ್ಥಾನದಲ್ಲಿ ಬೇರೆ ಯಾರನ್ನಾದರೂ ವಾಹನವನ್ನಾಗಿ ಮಾಡಿಕೊಳ್ಳಲಿ. ಭಗವಂತನಿಗೆ ನನ್ನ ನಮಸ್ಕಾರಗಳನ್ನು ತಿಳಿಸು. ಕೃಷಿಗೆ ಯೋಗ್ಯವಲ್ಲದ ಭೂಮಿಯಲ್ಲಿ ಉಳುವುದು ಹೇಗೆ ವ್ಯರ್ಥವೋ ಹಾಗೆ ಒಬ್ಬನ ಗುಣಗಳನ್ನು ಅರಿಯಲಾರದವನನ್ನು ಪಂಡಿತನು ಆಶ್ರಯಿಸುವುದಿಲ್ಲ"

ದೂತನಿಗೆ ಇವನ ವಿಚಾರ ಅರ್ಥವಾಗಿ ನಿನಗೇನು ಅಪಮಾನವಾಗಿದೆ ನಿಜ ಹೇಳು ಎಂದು ಕೇಳಿದನು. ಆಗ ಗರುಡನು ಹೀಗೆಂದನು– " ಭಗವಂತನ ಆಶ್ರಯಸ್ಥಾನವಾಗಿರುವ ಸಮುದ್ರವು ನಮ್ಮ ಈ ಟಿಟ್ಟಿಭ ಪಕ್ಷಿಗಳ ಮೊಟ್ಟೆಗಳನ್ನು ಅಪಹರಿಸಿದೆ. ಆದ್ದರಿಂದ, ಸಮುದ್ರವನ್ನು ದಂಡಿಸದಿದ್ದರೆ ನಾನು ಭಗವಂತನ ಸೇವಕನಾಗಿರುವುದಿಲ್ಲ. ಈ ನನ್ನ ನಿಶ್ಚಯವನ್ನು ಬೇಗನೆ ಹೋಗಿ ಭಗವಂತನಿಗೆ ತಿಳಿಸು."

ದೂತನ ಮೂಲಕ ಗರುಡನು ಪ್ರಣಯಕುಪಿತನಾಗಿದ್ದಾನೆಂದು ತಿಳಿದ ಭಗವಂತನು ಬಹಳವಾಗಿ ಯೋಚಿಸಿ ಗರುಡ ಹೇಳಿದ್ದು ಸರಿಯಾಗಿಯೇ ಇದೆ ಎಂದುಕೊಂಡು, ಭಕ್ತಿಶ್ರದ್ಧೆಯಿಂದಿರುವ ಸೇವಕನನ್ನು ಅಪಮಾನಿಸಬಾರದು ಎಂದು ರುಕ್ಮಪುರದಲ್ಲಿರುವ ಗರುಡನ ಮನೆಗೆ ಹೋದನು. ಗರುಡನು ಸ್ವತಃ ಸ್ವಾಮಿಯೇ ಮನೆಗೆ ಬಂದದ್ದನ್ನು ನೋಡಿ ನಾಚಿಕೆಯಿಂದ ತಲೆತಗ್ಗಿಸಿ, ನಮಸ್ಕರಿಸಿ ಇದ್ದ ವಿಚಾರವನ್ನು ಭಗವಂತನ ಮುಂದೆ ನಿವೇದಿಸಿಕೊಂಡನು. ಅದನ್ನು ಕೇಳಿ ಭಗವಂತನು ಗರುಡನನ್ನು ಸಮಾಧಾನಪಡಿಸಿ, ಸಮುದ್ರವನ್ನು ಗದರಿಸಿ ಆಗ್ನೇಯಾಸ್ತ್ರವನ್ನು ಹೂಡಿ ಸಮುದ್ರಕ್ಕೆ ಹೇಳಿದನು– "ಎಲೈ ದುರಾತ್ಮನೇ, ಟಿಟ್ಟಿಭದ ಮೊಟ್ಟೆಗಳನ್ನು ಕೊಡು. ಇಲ್ಲದಿದ್ದರೆ ನಿನ್ನನ್ನು ನಿರ್ಜಲ ಪ್ರದೇಶವನ್ನಾಗಿ ಮಾಡಿಬಿಡುವೆನು." ಆಗ ಸಮುದ್ರವು ಭಯದಿಂದ ಟಿಟ್ಟಿಭದ ಮೊಟ್ಟೆಗಳನ್ನು ಹಿಂದಿರುಗಿಸಿತು.[70] ಟಿಟ್ಟಿಭವು ಅವುಗಳನ್ನು ಟಿಟ್ಟಿಭೆಗೆ ಕೊಟ್ಟಿತು. ಇಲ್ಲಿಗೆ ಟಿಟ್ಟಿಭ–ಸಮುದ್ರ ಕಥೆ ಮುಕ್ತಾಯ. ಕಥೆಯನ್ನು ಮುಗಿಸಿದ ದಮನಕನು ಮಿತ್ರಭೇದೋಪಾಯವನ್ನು ರಚಿಸಿದ ಅನಂತರ ಕರಟಕನೊಡನೆ ಸಂವಾದ ನಡೆಸಿ, ಕೊನೆಯಲ್ಲಿ ಒಂದು ಉಕ್ತಿಯನ್ನು ಹೇಳುತ್ತಾನೆ–

70. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು –89–92, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004

परस्य पीडनं कुर्वन् स्वार्थसिद्धिं च पण्डितः ।

मूढबुद्धिर्न भक्षेच्च वने चतुरको यथा ॥[71]

ಕಾಡಿನಲ್ಲಿದ್ದ ಚತುರಕನೆಂಬ ನರಿಯಂತೆ ಬುದ್ಧಿವಂತನು ಬೇರೆಯವರನ್ನು ಪೀಡಿಸುತ್ತಾ ತನ್ನ ಸ್ವಾರ್ಥ ಸಾಧಿಸಿಕೊಳ್ಳುತ್ತಾನೆ ಹಾಗೂ ಅವನ ರಹಸ್ಯ ವ್ಯವಹಾರವು ಯಾರಿಗೂ ತಿಳಿಯದಂತೆ ನೋಡಿಕೊಳ್ಳುತ್ತಾನೆ. ಅದು ಹೇಗೆಂದು ಕರಟಕ ಕೇಳಿದನು. ದಮನಕನು **ಸಿಂಹ ಮತ್ತು ನರಿಯ ಕಥೆ** ಹೇಳಿದನು.

ಮಿತ್ರಭೇದ ತಂತ್ರದಲ್ಲಿ ಕಂಡುಬರುವ ಮತ್ತೊಂದು ಉಪಕಥೆ – ಸಿಂಹ ಮತ್ತು ನರಿಯ ಕಥೆಯಲ್ಲಿ ಸ್ವಾರ್ಥ ಸಾಧಕನಾದ ಚತುರಕನು ಪರಪೀಡೆಯಿಂದ ಸ್ವಾರ್ಥವನ್ನು ಸಾಧಿಸುತ್ತಾನೆ. ಮೂಢ ಜನರು ಮಾತ್ರ ಮಾಂಸ ಸಿಕ್ಕರೂ ತಿನ್ನದ ಸಿಂಹತೋಳಗಳ ಹಾಗೆ ಸುಮ್ಮನಿರುತ್ತಾರೆ. ಚತುರಕ ನರಿ ಮತ್ತು ಸಿಂಹಕ್ಕೆ ಆಹಾರವಾದ ಮರಿ ಒಂಟೆಯನ್ನು ಲಪಟಾಯಿಸಿ ಅದರ ಮಾಂಸವನ್ನು ಹಲವು ದಿನಗಳ ಕಾಲ ತಿಂದಿತು. ಇದ–ರಿಂದ ಪಾಠವೆಂದರೆ, ಕಾಡಿನಲ್ಲಿದ್ದ ಚತುರಕನೆಂಬ ನರಿಯಂತೆ ಬುದ್ಧಿವಂತನು ಬೇರೆಯವರನ್ನು ಪೀಡಿಸುತ್ತಾ ತನ್ನ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾನೆ. ಹಾಗೂ ಅವನ ರಹಸ್ಯ ವ್ಯವಹಾರವು ಯಾರಿಗೂ ತಿಳಿಯದಂತೆ ನೋಡಿಕೊಳ್ಳುತ್ತಾನೆ. ಸ್ವಾರ್ಥಸಾಧಕನು ಎಂತಹ ಹೇಯ ಕೃತ್ಯಕ್ಕೂ ಹಿಂಜರಿಯಲಾರ.[72]

ದಮನಕನು ಕಥೆಯನ್ನು ಮುಗಿಸಿದ ನಂತರ ಸಂಜೀವಕ ಹಾಗೂ ಪಿಂಗಲಕನ ಮುಖಾಮುಖಿಯಾಗುತ್ತದೆ.

ಸಂಜೀವಕನು ಎಡವುತ್ತಾ, ಮೆಲ್ಲನೆ ನಡೆಯುತ್ತಾ ಸಿಂಹವಿರುವ ಜಾಗವನ್ನು ತಲುಪಿದನು. ದಮನಕನು ಮೊದಲೇ ತಿಳಿಸಿದ್ದ ಹಾಗೆ ಕೆಂಪಾದ ಕಣ್ಣುಗಳುಳ್ಳ ಪಿಂಗಲಕನನ್ನು ನೋಡಿ ಭಯಗೊಂಡು, ಶರೀರವನ್ನು ಮುದುಡಿಕೊಂಡು ಸ್ವಲ್ಪ ದೂರದಲ್ಲೇ ಕುಳಿತುಕೊಂಡನು. ಪಿಂಗಲಕನು ಆ ರೀತಿ ಬಂದು ಅವನು ಕುಳಿತದ್ದು ನೋಡಿ ದಮನಕನು ಹೇಳಿದ್ದೆಲ್ಲಾ ಸರಿಯಾಗಿಯೇ ಇದೆ ಎಂದು ಯೋಚಿಸಿ, ಕೋಪದಿಂದ ಅವನ ಮೇಲೆ ಎರಗಿದನು. ಸಂಜೀವಕನು ತನಗೆ ಸಿಂಹದ ಉಗುರಿನಿಂದ ಗಾಯವಾದರೂ ತನ್ನ ಕೊಂಬುಗಳಿಂದ ಸಿಂಹದ ಹೊಟ್ಟೆಗೆ ತಿವಿದು ಹೇಗೋ ಪಿಂಗಲಕನಿಂದ ಬಿಡಿಸಿಕೊಂಡು ಕೊಂಬುಗಳಿಂದ ಆತನನ್ನು ಕೊಲ್ಲುವ ಉದ್ದೇಶದಿಂದ ಯುದ್ಧ ಮಾಡಲು ಸಜ್ಜಾಗಿ ನಿಂತನು. ಹೀಗೆ ಇವರಿಬ್ಬರೂ ಒಬ್ಬರನ್ನೊಬ್ಬರು ಕೊಲ್ಲಲು

---

71. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–399ಪು–254,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

72. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ–1–12, ಪು – 92–95.,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

ಹವಣಿಸುತ್ತಿರುವ ಅವರನ್ನು ನೋಡಿ ಕರಟಕನು ದಮನಕನಿಗೆ ಹೇಳಿದನು–" ಎಲೈ ಮೂರ್ಖನೇ, ಇವರಿಬ್ಬರ ನಡುವೆ ವಿರೋಧವನ್ನು ತಂದಿಟ್ಟು ನೀನು ಸರಿಯಾದ ಕೆಲಸ ಮಾಡಲಿಲ್ಲ. ನಿನಗೆ ನೀತಿತತ್ವವೇ ತಿಳಿದಿಲ್ಲ." ಎಂದು ರಾಜನೀತಿ, ಯುದ್ಧನೀತಿ, ಮಂತ್ರಾಲೋಚನೆಯ ಕ್ರಮಗಳನ್ನು, ಮಂತ್ರಿಯ ಕರ್ತವ್ಯವನ್ನು ವಿವರಣಾತ್ಮಕವಾಗಿ ತಿಳಿಹೇಳಿದನು. ಕೊನೆಯಲ್ಲಿ ಮೂರ್ಖನಿಗೆ ಉಪದೇಶ ಮಾಡಿ ಏನು ಉಪಯೋಗ ಎಂದು ಹೇಳುತ್ತಾ, ಒಂದು ಉಕ್ತಿಯಿದೆ–

नानाम्यं नमते दारु नाश्मनि स्यात्क्षुरक्रिया ।

सूचीमुखं विजानीहि नाशिष्यायोपदिश्यते ॥[73]

ಅಂದರೆ ನಮಸ್ಕರಿಸಲು ಯೋಗ್ಯವಲ್ಲದ ಮರದ ದಿಮ್ಮಿಗೆ ಯಾರೂ ನಮಿಸುವುದಿಲ್ಲ. ಕಲ್ಲಿಗೆ ಕ್ಷೌರಕರ್ಮವನ್ನು ಮಾಡುವುದಿಲ್ಲ, ಅಯೋಗ್ಯ ಶಿಷ್ಯನಿಗೆ ಯಾರೂ ಉಪದೇಶಿಸುವುದಿಲ್ಲ. ಇದನ್ನು ಸೂಚೀಮುಖನನ್ನು ನೋಡಿ ತಿಳಿಯಬೇಕು. ಅದೇನೆಂದು ದಮನಕನು ಕೇಳಲು ಕರಟಕನು **ಸೂಚೀಮುಖ–ವಾನರ ಕಥೆ**ಯನ್ನು ಹೇಳಿದನು.

ವಿಷ್ಣುಶರ್ಮರು ಪಂಚತಂತ್ರ – ಮಿತ್ರಭೇದ ತಂತ್ರದ ಉಪಕಥೆ "ಸೂಚೀಮುಖ – ವಾನರ ಕಥೆಯನ್ನು ಹೇಳುತ್ತಾ ಒಂದು ಒಳ್ಳೆಯ ಬದುಕಿನ ನೀತಿ ಸನ್ನಿವೇಶವನ್ನು ಒದಗಿಸಿ – ಕಂಡಕಂಡವರಿಗೆಲ್ಲ ಉಪದೇಶ ಮಾಡಬಾರದು ಎಂಬುದನ್ನು ಬಹಳ ಸ್ವಾರಸ್ಯಕರವಾಗಿ ನಿರೂಪಿಸಿದ್ದಾರೆ. ಹಾಗೆಯೇ ರಾಜನೀತಿಯ ಬಗ್ಗೆಯೂ ಆಲೋಚನೆ ಬೆಳೆಸಿದ್ದಾರೆ. ಯಾವ ರಾಜರು ಭೃತ್ಯರೊಡನೆ ವಿಧವಿಧವಾದ ಸ್ವಾರಸ್ಯಕರವಾದ ಕಥಾಗೋಷ್ಠಿಗಳೊಂದಿಗೆ ಕಳೆಯುವರೋ ಹಾಗೂ ಬಿಲ್ಲುಬಾಣಗಳನ್ನು ಬಳಸುವ ಶ್ರಮವನ್ನು ಮಾಡುವುದಿಲ್ಲವೋ, ಅವರ ಸಂಪತ್ತನ್ನು ಶತ್ರುಗಳು ಅನುಭವಿಸುತ್ತಾರೆ. ಆದ್ದರಿಂದ ಮೂರ್ಖನಿಗೆ ಉಪದೇಶ ಮಾಡಿ ಏನು ಪ್ರಯೋಜನ? ಅದರಿಂದ ದೋಷವೇ ಹೊರತು ಒಳ್ಳೆಯದಾಗುವುದಿಲ್ಲ. ನಮಸ್ಕರಿಸಲು ಯೋಗ್ಯವಲ್ಲದ ಮರದ ದಿಮ್ಮಿಗೆ ಯಾರೂ ನಮಿಸುವುದಿಲ್ಲ. ಕಲ್ಲಿಗೆ ಕ್ಷೌರವನ್ನು ಮಾಡುವುದಿಲ್ಲ. ಅಯೋಗ್ಯ ಶಿಷ್ಯನಿಗೆ ಯಾರೂ ಉಪದೇಶಿಸುವುದಿಲ್ಲ. ಇದನ್ನು ಸೂಚಿಮುಖನನ್ನು ನೋಡಿ ತಿಳಿಯಬೇಕು. ನಿರಂತರ ಸೋಲಿನಿಂದ ಕಂಗೆಟ್ಟವನನ್ನೂ, ಜೂಜಾಟದಲ್ಲಿ ತೊಡಗಿದ್ದವನನ್ನೂ, ದುವ್ಯಸನಿಯನ್ನೂ, ಮೂರ್ಖನನ್ನೂ ನುಡಿಸಿಯೂ ಫಲವಿಲ್ಲವಂತೆ. ಮೂರ್ಖರಾಗಿಯೇ ಉಳಿದರೆ, ಅಂತಹವರಿಗೆ ಯಾರೂ ಬುದ್ಧಿ ಹೇಳುವುದಿಲ್ಲ,

---

73. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–417,ಪು–270,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಹೇಳಿದರೂ ಪ್ರಯೋಜನವಿಲ್ಲ.[74] ಸರ್ವಜ್ಞ ಎಷ್ಟು ಸೊಗಸಾಗಿ ಹೀಗೆ ಹೇಳಿರುವುದನ್ನು ಸ್ಮರಿಸಿಕೊಳ್ಳಬಹುದು. "ಮೂರ್ಖಂಗೆ ನೂರ್ಕಾಲ ಬುದ್ಧಿ ಹೇಳಿದರೂ ಗೋರ್ಕಲ್ಲ ಮೇಲೆ ಮಳೆ ಸುರಿದಂತೆ ಸರ್ವಜ್ಞ" ಇದು ರಾಜಕುಮಾರಿಗೆ ಇದು ಒಂದು ತಿಳುವಳಿಕೆ. ಮೂರ್ಖರಾಗೇ ಉಳಿದರೆ ಎಲ್ಲೆಲ್ಲೂ ಬೆಲೆಯಿಲ್ಲ. ಎಲ್ಲರಿಂದಲೂ ನಿಕೃಷ್ಟ ವಾಗಿ ಕಾಣಲ್ಪಡುತ್ತಾರೆ. ಇದು ಅವರಿಗೆ ಒಂದು ಎಚ್ಚರಿಕೆಯೂ ಹೌದು. ಹೀಗೊಂದು ಉಕ್ತಿಯಿದೆ ಎಂದು ಕರಟಕನು ಹೇಳುತ್ತಾನೆ:–

उपदेशो न दातव्यो यादृशे तादृशे जने ।

पश्य वानरमूर्खेण सुगृही निर्गृहीकृतः ॥[75]

ಎಂಥೆಂಥವರಿಗೆಲ್ಲ ಉಪದೇಶ ಮಾಡಬಾರದು, ನೋಡು ಮೂರ್ಖ ಕೋತಿಯೊಂದು ಗುಬ್ಬಚ್ಚಿಗೆ ಮನೆಯಿಲ್ಲದಂತೆ ಮಾಡಿತು. ದಮನಕನು ಅದೇನೆಂದು ಕೇಳಲು ಕರಟಕನು **ವಾನರ ಹಾಗೂ ಗುಬ್ಬಚ್ಚಿ ದಂಪತಿ ಕಥೆ** ಹೇಳುತ್ತಾನೆ.

ಮತ್ತೆ ಮುಂದಿನ ಕಥೆ– ವಾನರ ಹಾಗೂ ಗುಬ್ಬಚ್ಚಿ ದಂಪತಿ ಕಥೆಯಲ್ಲಿ ಎಂಥೆಂಥವರಿಗೆಲ್ಲ ಉಪದೇಶ ಮಾಡಬಾರದು. ಮಾಡಿದರೆ, ಕಪಿಗೆ ಬುದ್ಧಿ ಹೇಳಹೋಗಿ ತನ್ನ ಗೂಡನ್ನೇ ಕಳೆದುಕೊಂಡ ಗುಬ್ಬಿಯ ಕಥೆಯ ಹಾಗೆ ಆದೀತು ಎಂದು ಹೇಳುತ್ತಾ, ಮುಂದುವರೆಸಿ, ಕಂಡಕಂಡವರಿಗೆ, ಕೇಳದೇ ಇರುವಾಗ ಉಪದೇಶ ಮಾಡಲು ಹೋದರೆ ಅನರ್ಥವಾದೀತು. ಹೋಗುತ್ತಿದ್ದ ಮಾರಿಯನ್ನು ಸುಮ್ಮನೆ ಮೈಮೇಲೆ ಎಳೆದುಕೊಳ್ಳಬಾರದು. ಉಪದೇಶ ಮಾಡಬೇಕೆಂದರೆ ಸಜ್ಜನರಿಗೆ ಹೇಳಬೇಕು. ಪಾಂಡಿತ್ಯ ಪೂರ್ಣವಾದ ಬೋಧನೆಯನ್ನು ಅಜ್ಞಾನಿಗಳಾದವರಿಗೆ ಮಾಡಿದರೆ ಏನೂ ಫಲವಿಲ್ಲ. ಅದು ದೀಪವನ್ನುರಿಸಿ ಮಡಕೆಯನ್ನು ಅದರ ಮೇಲೆ ಕವುಚಿ ಇಟ್ಟಂತೆ. ಅದರಿಂದ ಕೊಡದೊಳಕ್ಕೂ ಬೆಳಕಿಲ್ಲ, ಹೊರಕ್ಕೂ ಬೆಳಕಿಲ್ಲ. ಹಾಗೆಯೇ ವ್ಯರ್ಥ. ಇಲ್ಲಿ ರಾಜಕುಮಾರರಿಗೆ ಒಂದು ಜಾಗೃತಿ ಮೂಡಿಸಿ, ಅವರುಗಳು ಆಸಕ್ತಿಯನ್ನುಳಿಸಿಕೊಂಡು, ವಿಚಾರಗಳನ್ನು ಸರಿಯಾಗಿ ಮನದಟ್ಟುಮಾಡಿಕೊಂಡು ಅರ್ಥಪೂರ್ಣವಾಗಿ ಕಲಿಯಲೆಂದು ಪ್ರೇರೇಪಿಸುತ್ತಾ, ಮುಂದಿನ ಅಪೇಕ್ಷಿತ ಗುರಿಯನ್ನು ಸಾಧಿಸಲು ಪ್ರೋತ್ಸಾಹಿಸಿದ್ದಾರೆ. ಇದೇ ಸನ್ನಿವೇಶದಲ್ಲಿ ವಿಷ್ಣುಶರ್ಮರು ರಾಜಕುಮಾರರಿಗೆ ರಾಜನೀತಿ ಶಿಕ್ಷಣವನ್ನು ಕರಟಕನ ಮೂಲಕ ಅಭಿವ್ಯಕ್ತಿಗೊಳಿಸಿದ್ದಾರೆ. ಚತುರೋಪಾಯಗಳಲ್ಲಿ ಸಾಮವನ್ನು

---

74. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ–1–13. ಪು–98.,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

75. **ಸುಧಾಕರ್ ಮಾಲವೀಯ,** ಶ್ರೀವಿಷ್ಣುಶರ್ಮವಿರಚಿತ ಪಂಚತಂತ್ರಂ, ಮಿತ್ರಭೇದಃ–ಶ್ಲೋ–421,ಪು–273.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಬಳಸಿ ಗೆಲ್ಲುವವನು ಸರ್ವತ್ರ ಪೂಜ್ಯ ನಾಗುತ್ತಾನೆ. ಅದರ ಬದಲಿಗೆ ಪಾಪಕರವಾದ ದಂಡವನ್ನೇ ಮುಂದೆ ಮಾಡಿದರೆ ಮಂತ್ರಿಸ್ಥಾನಕ್ಕೆ ಅವನು ಅರ್ಹನಾಗುವುದಿಲ್ಲ. ಕತ್ತಲೆಯನ್ನು ಬೆಳಕಿನಿಂದ ಕಳೆಯಬಹುದೇ ಹೊರತು ಬಲಾತ್ಕಾರದಿಂದಲ್ಲ. ಅಸಾಧ್ಯ ಸಾಹಸದಿಂದ ಸಾಧಿಸಬಹುದಾದ ಕಾರ್ಯವನ್ನು ಸಾಮೋಪಾಯದಿಂದ ಸಾಧಿಸಿದ ಮಂತ್ರಿಗಳು ನೃಪನಿಗೆ ಪ್ರಿಯರಾಗುತ್ತಾರೆ. ಕ್ರಮ ತಪ್ಪಿ ಫಲಕೊಡುವ ಕಾರ್ಯವನ್ನು ಯಾರು ಮಾಡುತ್ತಾರೋ ಅವರು ದಂಡಾಧಮರು ಎನಿಸಿಕೊಳ್ಳುತ್ತಾರೆ. ನೀತಿಶಾಸ್ತ್ರ ನಿಪುಣನಲ್ಲದ, ರಾಜಭಕ್ತಿ, ಧೈರ್ಯ, ಇಂದ್ರಿಯನಿಗ್ರಹ, ನಿಸ್ವಾರ್ಥ ಗುಣಹೀನನಾದವನ ಮಾತನ್ನು ವಂಶಪರಂಪರೆಯಿಂದ ಬಂದ ಸಚಿವನೆಂಬ ಏಕೈಕ ಕಾರಣದಿಂದ ಪಾಲಿಸಿದ ರಾಜನಿಗೆ ಎಂತಹ ವಿಷಮ ಸ್ಥಿತಿಗೆ ತಲುಪುವ ಅವಸ್ಥೆ ಒದಗಿತು. ಇದರಿಂದ ವಂಶಕ್ಕೆ ಅಪಕೀರ್ತಿಬಂದಂತಾಗುತ್ತಿತ್ತು. ನಿನ್ನದು ಧರ್ಮಬುದ್ಧಿಯನ್ನು ವಂಚಿಸಿದ ದುಷ್ಟಬುದ್ಧಿಯ ಕಥೆಯಂತಾಯ್ತು ಎಂದು ಕರಟಕನು ದಮನಕನಿಗೆ ಹೇಳಿದನು.[76]

ಈ ಸಂದರ್ಭಗಳಿಂದ ರಾಜಕುಮಾರರು ತಮ್ಮ ವರ್ತನೆಗಳಲ್ಲಿರುವ ದೋಷಗಳನ್ನು ಅರ್ಥ ಮಾಡಿಕೊಂಡು, ಒಳ್ಳೆಯ ಆಲೋಚನೆ ಹಾಗೂ ಉತ್ತಮ ವಿವೇಚನೆಯಿಂದ ಅಪೇಕ್ಷಿತ ಮಾರ್ಗದಲ್ಲಿ ಪರಿವರ್ತನೆ ಹೊಂದಲು ಹಾಗೂ ಒಳ್ಳೆಯ ಗುಣಶೀಲಗಳನ್ನು ಬೆಳೆಸಿಕೊಳ್ಳುವ ಬಗ್ಗೆ ಪ್ರೇರಿತರಾದರು. ಹೀಗೆ ಪಂಚತಂತ್ರ ನೀತಿಕಥೆಗಳು ಬಹಳ ಒಳ್ಳೆಯ ದೃಷ್ಟಾಂತಗಳನ್ನು ಒದಗಿಸಿ, ಮುಂದೆ ರಾಜ್ಯಾಡಳಿತವನ್ನು ವಹಿಸಿಕೊಳ್ಳಬೇಕಾಗಿರುವ ರಾಜಕುಮಾರರು ಹೇಗೆ ಉತ್ತಮ ವ್ಯಕ್ತಿತ್ವ ನಿರ್ಮಾಣ ಮಾಡಿಕೊಂಡು ಬದುಕಿನ ಸಾರ್ಥಕತೆಗೆ ಪ್ರಯತ್ನ ಶೀಲರಾಗಬಹುದು ಎಂಬ ಬಗ್ಗೆ ಒಳ್ಳೆಯ ಮಾರ್ಗದರ್ಶನ ಮಾಡಿವೆ. ಇಂತಹ ಅನುಭವಗಳು ಬೇರೆಡೆಯಲ್ಲಿ ಸಿಗುವುದು ಬಹಳ ದುರ್ಲಭ. ಅದಕ್ಕೇ ಹೇಳುವುದು ಸಮರ್ಥ ಗುರುಗಳನ್ನು ಪಡೆಯುವುದು ಒಂದು ಅದೃಷ್ಟವೇ. ಮುಂದುವರಿದು ದಮನಕನು ವಾನರ ಹಾಗೂ ಗುಬ್ಬಚ್ಚಿ ದಂಪತಿ ಕಥೆಯನ್ನು ಮುಗಿಸುತ್ತಾ ಒಂದು ಉಕ್ತಿಯನ್ನು ಹೇಳುತ್ತಾನೆ.

धर्मबुद्धिः कुबुद्धिश्च द्वावेतौ विदितौ मम ।

पुत्रेण व्यर्थपाण्डित्यात्पिता धूमेन घातितः ॥[77]

ಅಂದರೆ " ನನಗೆ ಧರ್ಮ ಬುದ್ಧಿ ಮತ್ತು ಪಾಪ ಬುದ್ಧಿಯೆಂಬ ಇಬ್ಬರ ಬಗ್ಗೆ ಗೊತ್ತು. ಪಾಪಬುದ್ಧಿಯು ವ್ಯರ್ಥ ಪಾಂಡಿತ್ಯದಿಂದ ತನ್ನ ತಂದೆಯನ್ನೇ ಹೊಗೆಯಲ್ಲಿ ಸಿಲುಕಿಸಿ ಕೊಂದನು ದಮನಕ ಅದೇನೆಂದು ಕೇಳಲು ಕರಟಕನು **ಧರ್ಮಬುದ್ಧಿ ಮತ್ತು ಪಾಪಬುದ್ಧಿ ಕಥೆ**ಯನ್ನು ಹೇಳಿದನು.

---

76. **ಭರತ.ಬಿ.ರಾವ್,** ಪಂಚತಂತ್ರ,-ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ-1-14, ಪು-99.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560004.

77. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-429,ಪು-277,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಒಂದಾನೊಂದು ಸ್ಥಳದಲ್ಲಿ ಧರ್ಮ ಬುದ್ಧಿ ಮತ್ತು ಪಾಪಬುದ್ಧಿ ಎಂಬ ಇಬ್ಬರು ಮಿತ್ರರು ವಾಸಿಸುತ್ತಿದ್ದರು. ಇಬ್ಬರೂ ಪರಸ್ಪರ ಮಾತನಾಡಿಕೊಂಡು ದೇಶಾಂತರ ಹೋಗಿ ಅಪಾರ ಹಣ ಸಂಪಾದನೆ ಮಾಡಿಕೊಂಡು ಬರುವ ಯೋಜನೆ ಹಾಕಿಕೊಂಡು ಹೊರಟೇಬಿಟ್ಟರು. ಆನಂತರ ಅಂದುಕೊಂಡಂತೆಯೇ ಅವರಿಬ್ಬರೂ ಬೇಕಾದಷ್ಟು ಹಣವನ್ನು ಗಳಿಸಿ ಸಂತೋಷಗೊಂಡು ಮನೆಯ ಕಡೆಗೆ ಹೊರಟರು. ಒಂದು ಉಕ್ತಿಯಿದೆ

प्राप्तविद्यार्थशिल्पानां देशान्तरनिवासिनाम् ।

क्रोशमात्रोऽपि भूभागः शतयोजनवद्भवेत् ॥[78]

ವಿದೇಶದಲ್ಲಿದ್ದುಕೊಂಡು ವಿದ್ಯೆ, ಹಣ ಮತ್ತು ಕಲೆಯನ್ನು ಸಂಪಾದಿಸಿಕೊಂಡು ಸ್ವದೇಶಕ್ಕೆ ಮರಳುವಾಗ ಕಾಲುಯೋಜನ ದಾರಿಯು ಶತಯೋಜನದಂತೆ ಭಾಸವಾಗುತ್ತದೆ. ಇನ್ನೇನು ದೇಶದ ಹತ್ತಿರ ಬರುತ್ತಿರುವಾಗ ಪಾಪಬುದ್ಧಿಯು ಧರ್ಮಬುದ್ಧಿಗೆ ಒಂದು ಸಲಹೆ ಮಾಡಿದನು. ಅದೇನೆಂದರೆ, ಎಲ್ಲಾ ಹಣವನ್ನೂ ಮನೆಗೆ ಒಯ್ಯುವುದು ತರವಲ್ಲ. ಇಲ್ಲೇ ಸ್ವಲ್ಪ ಕಾಡಿನಲ್ಲಿ ನೆಲದಲ್ಲಿ ಹೂತಿಟ್ಟು ಉಳಿದದ್ದನ್ನು ತೆಗೆದುಕೊಂಡು ಹೋಗೋಣ. ಅವಶ್ಯಕವಾಗಿ ಬೇಕಾದಾಗ ಬಂದು ತೆಗೆದುಕೊಂಡು ಹೋಗೋಣ. ಅದೂ ಅಲ್ಲದೆ ಹಣವಿದೆಯೆಂದರೆ ಎಲ್ಲೆಡೆಯೂ ಪೀಡಿಸುತ್ತಾರೆ. ಪಾಪಬುದ್ಧಿಯು ಅನ್ವರ್ಥನಾಮದಂತೆ ಕೆಟ್ಟ ಯೋಚನೆಯವನೇ ಹೌದು. ಪಾಪ ಧರ್ಮಬುದ್ಧಿ ಒಪ್ಪಿಕೊಂಡು ಹಾಗೆಯೇ ಮಾಡಿದರು. ಮತ್ತೊಂದು ದಿನ ಪಾಪಬುದ್ಧಿ ಕಾಡಿಗೆ ತೆರಳಿ ಆ ಎಲ್ಲಾ ಹಣವನ್ನೂ ತೆಗೆದುಕೊಂಡು ಗುಂಡಿಯನ್ನು ಮುಚ್ಚಿ ತನ್ನ ಮನೆಗೆ ಬಂದು ಏನೂ ಗೊತ್ತಿಲ್ಲದವನಂತಿದ್ದುಬಿಟ್ಟನು. ಹೀಗೆ ಕಾಲ ಕಳೆಯಿತು. ಒಮ್ಮೆ ದುಡ್ಡಿನ ಅಭಾವವುಂಟಾಗಿ ಅಡಗಿಸಿಟ್ಟಿದ್ದ ಸ್ಥಳಕ್ಕೆ ಹೋಗಿ ಸ್ವಲ್ಪ ಹಣ ತೆಗೆದುಕೊಂಡು ಬರುವಂತೆ ಯೋಚಿಸಲಾಯಿತು. ಹಾಗೇ ಆಗಲೆಂದು ಹೋಗಿ ನೋಡಿದರೆ ಅಲ್ಲೇನಿದೆ? ಖಾಲಿ ಪಾತ್ರೆ!! ಧರ್ಮಬುದ್ಧಿಗಿಂತ ಮೊದಲೇ ಪಾಪಬುದ್ಧಿಯು ತಲೆ ಚಚ್ಚಿಕೊಳ್ಳುತ್ತಾ, ಧರ್ಮಬುದ್ಧಿಯೇ ಹಣವನ್ನು ಕದ್ದಿದ್ದಾನೆಂದು ವಾದಮಾಡಿದನು. ಏಕೆಂದರೆ "ಅದು ಅವನಿಗೆ ಮಾತ್ರ ಗೊತ್ತಿರುವುದು" ಎಂದು. ಅಂತಿಮವಾಗಿ ಧರ್ಮಾಧಿಕಾರಿಗಳಿಗೆ ದೂರನ್ನೂ ಸಲ್ಲಿಸಲಾಯಿತು. ಅವರು ಇದರ ನ್ಯಾಯ ತೀರ್ಮಾನಕ್ಕೆ ಶಪಥಮಾರ್ಗವನ್ನು ಸೂಚಿಸಿದರು. ಪಾಪಬುದ್ಧಿಯು ಇದನ್ನೊಪ್ಪಲಿಲ್ಲ. ಈ ವಿಷಯದಲ್ಲಿ ವೃಕ್ಷದೇವತೆಗಳು ಸಾಕ್ಷಿಯಾಗಿ ನಿಲ್ಲುವರು ಎಂದು ಹೇಳಿದನು. ಧರ್ಮಾಧಿಕಾರಿಗಳಿಗೆ ಇದು ಸರಿಯೆನ್ನಿಸಿ, ದೇವತೆಗಳೇ ಸಾಕ್ಷಿ ಹೇಳುವಾಗ ಬೇರೆ ಏನು ಹೇಳುವುದಿದೆ? ಎಂದರು.

---

78. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-432,ಪು-279,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಈ ಮಧ್ಯದಲ್ಲಿ ಪಾಪಬುದ್ಧಿಯು ಮನೆಗೆ ಹೋಗಿ ತನ್ನ ತಂದೆಗೆ ಇಷ್ಟವಿಲ್ಲದಿದ್ದರೂ, ಬಹಳ ಇಕ್ಕಟ್ಟಿಗೆ ಸಿಕ್ಕಿಸಿ, ಅಲ್ಲೇ ಹತ್ತಿರದಲ್ಲಿರುವ ಶಮೀವೃಕ್ಷದಲ್ಲಿರುವ ದೊಡ್ಡ ಪೊಟರೆಯಲ್ಲಿ ಕುಳಿತುಕೊಂಡು ಧರ್ಮಬುದ್ಧಿಯೇ ಈ ಹಣವನ್ನು ಕದ್ದಿರುವುದು ಎಂದು ಹೇಳುವಂತೆ ಸಿದ್ಧಮಾಡಿಬಿಟ್ಟನು. ಅದರಂತೆಯೇ ಎಲ್ಲವೂ ನಡೆದೇ ಹೋಯಿತು. ಧರ್ಮಬುದ್ಧಿಯ ತಪ್ಪಿಗೆ ಶಾಸ್ತ್ರೋಕ್ತವಾಗಿ ಶಿಕ್ಷೆಯ ಬಗ್ಗೆ ವಿಚಾರ ಪ್ರಾರಂಭವಾಯಿತು. ಧರ್ಮಬುದ್ಧಿಯು ಆ ಮರದ ಪೊಟರೆಗೆ ಒಣಗಿದ ಎಲೆ ಮುಂತಾದವುಗಳನ್ನು ಹಾಕಿ ಬೆಂಕಿಯನ್ನು ಹೊತ್ತಿಸಿದನು ಪೊಟರೆಯಲ್ಲಿ ಬೆಂಕಿ ಉರಿಯುತ್ತಿರಲು, ಅದರೊಳಗಿಂದ ಅರೆಬೆಂದ ದೇಹವುಳ್ಳ, ಕಣ್ಣುಗಳು ಸಿಡಿದುಹೋಗಿ ಕರುಣಾಜನಕವಾಗಿ ರೋಧಿಸುತ್ತಾ ಪಾಪಬುದ್ಧಿಯ ತಂದೆಯು ಹೊರಗೆ ಬಂದನು. ಜನರೆಲ್ಲಾ ವಿಚಾರಿಸಲು "ಇದೆಲ್ಲವೂ ಪಾಪಬುದ್ಧಿಯು ಕೆಲಸ" ಎಂದು ಹೇಳಿ ಸತ್ತುಹೋದನು. ರಾಜಪುರುಷರು ಕೂಡಲೇ ಪಾಪಬುದ್ಧಿಯನ್ನು ಅದೇ ಶಮೀವೃಕ್ಷದ ಕೊಂಬೆಗೆ ಕಟ್ಟಿಹಾಕಿ, ಧರ್ಮಬುದ್ಧಿಯನ್ನು ಹೊಗಳುತ್ತಾ –

उपायं चिन्तयेत् प्राज्ञस्तथाऽपायं च चिन्तयेत् ।

पश्यतो बकमूर्खस्य नकुलेन हता बकाः ॥[79]

ಬುದ್ಧಿವಂತನು ಉಪಾಯವನ್ನು ಮತ್ತು ಅಪಾಯದ ಬಗ್ಗೆಯೂ ಚಿಂತಿಸಬೇಕು. ಇಲ್ಲದಿದ್ದರೆ ಮೂರ್ಖ ಬಕವು ನೋಡುತ್ತಿದ್ದ ಹಾಗೆ ಮುಂಗುಸಿಯು ಎಲ್ಲಾ ಬಕಗಳನ್ನು ತಿಂದಹಾಗೆ ಆಗುತ್ತದೆ. ಧರ್ಮಬುದ್ಧಿಯು ಅದೇನೆಂದು ಕೇಳಲು, ರಾಜಪುರುಷರು **ಮೂರ್ಖಬಕ ಹಾಗೂ ಮುಂಗುಸಿಯ ಕಥೆ**ಯನ್ನು ಹೇಳಿದರು.

ಈ ಕಥೆಯಲ್ಲಿ ಬಕವೇನೋ ಸರ್ಪದ ಸಾವಿಗೆ ಉಪಾಯವನ್ನು ನಿರೀಕ್ಷಿಸಿದ್ದು ಸರಿ. ತನ್ನಿಂದಾಗದಿದ್ದರೆ ಇನ್ನೊಬ್ಬರಿಂದ ಮಾಡಿಸಿಕೊಳ್ಳಬಹುದು. ಆ ಇನ್ನೊಬ್ಬ ಯಾರಾಗಬೇಕು ಎಂಬುದು ಮುಖ್ಯ. ಬಕವು ತನ್ನ ಆಹಾರದಲ್ಲಿ ಒಂದಾದ ಏಡಿಯಲ್ಲಿ ಉಪಾಯವನ್ನು ಕೇಳಿದರೆ ಅದು ಸರಿಯಾದ ದಾರಿ ತೋರಿಸೀತೇ? ಖಂಡಿತವಾಗಿಯೂ ಇಲ್ಲಿ ಉಪಾಯಕ್ಕೆ ಬದಲಾಗಿ ಅಪಾಯವಾಗುವ ಸಲಹೆಯನ್ನು ಕೊಟ್ಟೀತು ಅಲ್ಲ, ಕೊಟ್ಟೇಬಿಟ್ಟಿತು. ಅದರಿಂದ ಅದರ ವೈರಿಕುಲವೇ ನಾಶಹೊಂದಿತು. ಶತ್ರುಕುಲ ನಾಶದ ಯೋಚನೆಯ ಹೊತ್ತಲ್ಲಿ ಹೃದಯವನ್ನು ಕಲ್ಲು ಮಾಡಿಕೊಳ್ಳಬೇಕು. ಆಮೇಲೆ ಶತ್ರುಶೇಷವೂ ಉಳಿಯದಂತಹ ಸಲಹೆ ನೀಡಬೇಕು ಎಂದುಕೊಳ್ಳುತ್ತಾ ಸಲಹೆ ಕೊಟ್ಟಿತ್ತು. ಈ ಸಂದರ್ಭದಲ್ಲಿ ಸಹವಾಸ ಮಾಡಲು ಅರ್ಹರು ಯಾರು ಎಂಬುದರ

79. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ– ಮಿತ್ರಭೇದ, ಶ್ಲೋ–439, ಪು–285,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಬಗ್ಗೆ ಒಳ್ಳೆಯ ಆಲೋಚನೆ ಹಾಗೂ ಉಪಾಯವನ್ನು ಚಿಂತಿಸುವ ಸಮಯದಲ್ಲಿ ಅಪಾಯವನ್ನೂ ಯೋಚಿಸಿ ಕಾರ್ಯಸಾಧನೆ ಮಾಡಿಕೊಳ್ಳಬೇಕು ಎಂಬ ಬಗ್ಗೆ ರಾಜಕುಮಾರರಿಗೆ ಅರಿವು ಮೂಡಿಸಲಾಗಿದೆ.

ಸಹವಾಸ ಮಾಡಲು ಯಾರು ಅರ್ಹರು ಎಂಬ ವಿಚಾರವನ್ನು ಧರ್ಮಬುಧ್ಧಿ ಮತ್ತು ಪಾಪಬುದ್ಧಿ ಕಥೆಯನ್ನು ಮುಗಿಸಿದ ಕರಟಕನು ದಮನಕನಿಗೆ ಎಚ್ಚರಿಸುತ್ತಾನೆ "ಮೂಢನೇ ನೀನೂ ಕೂಡ ಉಪಾಯವನ್ನು ಚಿಂತಿಸಿದೆಯೇ ಹೊರತು ಅಪಾಯವನ್ನು ಯೋಚಿಸಲೇ ಇಲ್ಲ. ನೀನು ಪಾಪಿಷ್ಠನೇ ಹೊರತು ಸಜ್ಜನನಲ್ಲ. ಪ್ರಭುವಿಗೆ ಪ್ರಾಣಸಂಕಟ ತಂದಿಟ್ಟ ನಿನ್ನನ್ನು ನಾನು ಸರಿಯಾಗಿ ಅರ್ಥೈಸಿಕೊಂಡೆ. ಸ್ವಯಂ ನೀನೇ ನಿನ್ನ ದುಷ್ಟತನ ಹಾಗೂ ಕುಟಿಲತೆಯನ್ನು ಪ್ರದರ್ಶಿಸಿಬಿಟ್ಟೆ. ನೀನು ಪ್ರಭುವನ್ನೇ ಈ ಪರಿಸ್ಥಿತಿಗೆ ದೂಡುವೆಯಾದಲ್ಲಿ ಇನ್ನು ನಮ್ಮಂತಹವರ ಪಾಡೇನು? ಆದ್ದರಿಂದ ನೀನು ನನ್ನ ಬಳಿಯಿಂದ ತೊಲಗು. ನಿನ್ನ ಸಹವಾಸ ಬೇಡ. ಇಂತಹ ಹೊಲಸು ಕಾರ್ಯವನ್ನು ಮಾಡಿದ ನಿನ್ನನ್ನು ಕ್ಷಮಿಸಿದ ಲೋಕಕ್ಕೆ ತಪ್ಪು ಸಂದೇಶ ಕೊಟ್ಟಂತಾಗುವುದು. ಹೀಗೊಂದು ನುಡಿಯಿದೆ.

तुलां लोहसहस्त्रस्य यत्र खादन्ति मूषकाः ।

राजन् तत्र हरेच्छयेनो बालकं नात्र संशयः ॥[80]

ಎಲ್ಲಿ ಲೋಹಸಹಸ್ರದಿಂದ ಮಾಡಲ್ಪಟ್ಟ ತಕ್ಕಡಿಯನ್ನು ಇಲಿಗಳು ತಿನ್ನುತ್ತವೆಯೋ, ಅಲ್ಲಿ ಬಾಲಕನೊಬ್ಬನನ್ನು ಗಿಡುಗವು ಹಿಡಿದುಕೊಂಡು ಹೋಗುವುದರಲ್ಲಿ ಸಂಶಯವೇ ಇಲ್ಲ. ಹಿಂದೊಮ್ಮೆ ಮುಂಗುಸಿಯೊಂದು ಬಕಸಂತಾನವನ್ನೇ ತಿಂದ ಕಥೆ ನೆನಪಾಗುತ್ತದೆ. ಏಡಿಯ ಸಹವಾಸ ಮಾಡಿ ಬಕಗಳೆಲ್ಲವನ್ನೂ ಬಲಿಕೊಟ್ಟ ಮೂರ್ಖ ಬಕದಂತಾಯಿತು.[81] ದಮನಕನು ಅದೇನೆಂದು ಕೇಳಲು ಕರಟಕನು **ಲೋಹತಕ್ಕಡಿ ಹಾಗೂ ವ್ಯಾಪಾರಿಯ ಮಗನ ಕಥೆ**ಯನ್ನುಹೇಳಿದನು.

ನಗರವೊಂದರಲ್ಲಿ ಜೀರ್ಣಧನ ಎಂಬ ಹೆಸರಿನ ವ್ಯಾಪಾರಿಯ ಮಗನೊಬ್ಬನಿದ್ದನು. ವ್ಯಾಪಾರದಲ್ಲಿ ಬಹಳ ನಷ್ಟವುಂಟಾಗಿ, ದೇಶಾಂತರ ಹೋಗುವ ಮನಸ್ಸು ಮಾಡಿದನು. ವ್ಯಾಪಾರಿಯ ಮನೆಯಲ್ಲಿ ಅವನ ಪೂರ್ವಜರು ಸಂಪಾದಿಸಿದ ಭಾರವಾದ ಲೋಹದ ತಕ್ಕಡಿಯೊಂದಿತ್ತು. ಅದನ್ನು ಒಬ್ಬ ಶ್ರೇಷ್ಠಿಯ ಬಳಿ ಅಡವಿಟ್ಟು

---

೮೦. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-442,ಪು-288,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

೮೧. **ಭರತ.ಬಿ.ರಾವ್,** ಪಂಚತಂತ್ರ,-ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ-ಪು-100-103.,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560004.

ದೇಶಾಂತರ ಹೋದನು. ಬಹುಕಾಲ ಕಳೆದು ಪುನಃ ಊರಿಗೆ ಬಂದಾಗ ಆ ಶ್ರೇಷ್ಠಿಯನ್ನು ಭೇಟಿಮಾಡಿ ಅಡವಿಟ್ಟ ತಕ್ಕಡಿಯನ್ನು ವಾಪಸ್ ಕೊಡಲು ಕೇಳಿದನು. ಶ್ರೇಷ್ಠಿಯು ತಕ್ಕಡಿ ಇಲ್ಲವೆಂದು, ಇಲಿಯು ತಿಂದುಬಿಟ್ಟಿತು ಎಂದು ಹೇಳಿದನು.

ಜೀರ್ಣಧನ ಹೇಳಿದನು– "ಇಲಿ ತಿಂದರೆ ನಿನ್ನ ದೋಷವೇನೂ ಇಲ್ಲ. ಸಂಸಾರವೆಂದರೆ ಹೀಗೆಯೇ. ಯಾವುದೂ ಶಾಶ್ವತವಲ್ಲ. ನಾನು ಈಗ ನದಿಗೆ ಸ್ನಾನಕ್ಕೆ ಹೋಗುತ್ತಿದ್ದೇನೆ ನಿನ್ನ ಮಗನಾದ ಧನದೇವನನ್ನು ನನ್ನ ಸ್ನಾನದ ಪರಿಕರಗಳನ್ನು ಹಿಡಿದುಕೊಳ್ಳಲು ಜೊತೆಗೆ ಕಳುಹಿಸಿಕೊಡು" ಎಂದನು. ಶ್ರೇಷ್ಠಿ ಕಳ್ಳತನ ಮಾಡಿದ್ದರಿಂದ ಹೆದರಿ ತನ್ನ ಮಗನನ್ನು ಕಳುಹಿಸಿಕೊಟ್ಟನು. ಸುಮ್ಮನೆ ಯಾರೂ ಇನ್ನೊಬ್ಬರ ಕೆಲಸ ಮಾಡುವುದಿಲ್ಲ. ಭಯ, ಲೋಭ ಅಥವಾ ಪ್ರಯೋಜನ ದೃಷ್ಟಿಯಿಂದ ಮಾತ್ರ ಮಾಡುತ್ತಾರೆ. ಪ್ರಯೋಜನವಿಲ್ಲದೆ ಎಲ್ಲಿ ಅತಿಯಾದ ಆದರ ಸಿಗುತ್ತದೋ ಅಲ್ಲಿ ಸಂದೇಹಪಡಬೇಕು. **"ಅತಿ ವಿನಯಂ ದೂರ್ತ ಲಕ್ಷಣಂ."** ಅನಂತರ ಜೀರ್ಣಧನನು ಸ್ನಾನ ಮುಗಿಸಿ, ಆ ಹುಡುಗನನ್ನು ಒಂದು ಬೆಟ್ಟದ ಗುಹೆಯಲ್ಲಿರಿಸಿ, ಗುಹೆಯನ್ನು ದೊಡ್ಡ ಬಂಡೆಯಿಂದ ಮುಚ್ಚಿ ಹಿಂದಿರುಗಿದನು. ಇವನು ಒಬ್ಬನೇ ಬಂದದ್ದನ್ನು ನೋಡಿ ಶ್ರೇಷ್ಠಿ ಮಗನೆಲ್ಲಿ? ಎಂದು ಜೀರ್ಣಧನನನ್ನು ಕೇಳಿದನು.

ಆಗ ಜೀರ್ಣಧನನು "ಸ್ನಾನಮಾಡಿ ಬರುವುದರೊಳಗೆ ನದಿ ದಡದಲ್ಲಿದ್ದ ಅವನನ್ನು ಒಂದು ಗಿಡುಗವು ಎತ್ತಿಕೊಂಡು ಹೋಯಿತು." ಎಂದನು. ಶ್ರೇಷ್ಠಿಯು ಕೋಪಗೊಂಡು, "ಸುಳ್ಳುಗಾರ, ಏನು ಗಿಡುಗವು ಬಾಲಕನನ್ನು ಅಪಹರಿಸಲಾಗುತ್ತದೆಯೇ? ನನ್ನ ಮಗನನ್ನು ಕೊಟ್ಟುಬಿಡು. ಇಲ್ಲದಿದ್ದರೆ ರಾಜನಲ್ಲಿ ದೂರು ಕೊಡುವೆ." ಎಂದನು. ಆಗ ಜೀರ್ಣಧನ – "ಸತ್ಯವಂತನೇ ಗಿಡಗವು ಬಾಲಕನನ್ನು ಅಪಹರಿಸಲು ಅಸಾಧ್ಯವಾದಂತೆ ಇಲಿಯು ಭಾರವಾದ ಲೋಹದ ತಕ್ಕಡಿಯನ್ನು ತಿನ್ನುವುದೂ ಕೂಡ ಅಸಾಧ್ಯವೇ. ಆದ್ದರಿಂದ ನೀನೇ ಸುಳ್ಳು ಹೇಳದೆ, ಮಗನು ಬೇಕೆಂದರೆ ತಕ್ಕಡಿಯನ್ನು ಕೊಡು ಎಂದನು. ಹೀಗೆ ಜಗಳ ಮುಂದುವರೆದು ಧರ್ಮಾಧಿಕಾರಿಗಳವರೆಗೂ ಹೋಯಿತು. ಶ್ರೇಷ್ಠಿಯು ದೊಡ್ಡ ಧ್ವನಿಯಿಂದ ಕಳ್ಳ, ನನ್ನ ಶಿಶುವನ್ನು ಅಪಹರಿಸಿದ್ದಾನೆ, ಅನ್ಯಾಯವಾಗಿದೆ ಎಂದು ಕೂಗಾಡಿದನು. ಧರ್ಮಾಧಿಕಾರಿಗಳು ಜೀರ್ಣಧನನಿಗೆ ಶ್ರೇಷ್ಠಿಯ ಮಗನನ್ನು ವಾಪಸ್ಸು ಮಾಡಲು ಹೇಳಿದರು. ಅದಕ್ಕೆ ಜೀರ್ಣಧನನು "ಏನು ಮಾಡಲಿ? ನಾನು ನೋಡನೋಡುತ್ತಿದ್ದಂತೆಯೇ ಗಿಡಗವೊಂದು ಬಾಲಕನನ್ನು ಹೊತ್ತುಕೊಂಡು ಹಾರಿತು.

"ಎಲ್ಲಾದರೂ ಗಿಡಗವು ಬಾಲಕನನ್ನು ಹೊತ್ತುಕೊಂಡು ಹೋಗಲು ಸಮರ್ಥವೇ, ಸಾಧ್ಯವೇ? ನೀನು ಹೇಳುತ್ತಿರುವುದು ಸುಳ್ಳು." ಎಂದು ಧರ್ಮಾಧಿಕಾರಿಗಳು ಹೇಳಿದರು. ಅದಕ್ಕೆ ಜೀರ್ಣಧನನು ಸ್ಪಷ್ಟವಾಗಿ

ಹೇಳುತ್ತಾನೆ – "ನನ್ನ ಮಾತನ್ನು ಕೇಳಿರಿ. ಭಾರವಾದ ಲೋಹದ ತಕ್ಕಡಿಯನ್ನು ಎಲ್ಲಿ ಇಲಿಯು ತಿನ್ನಬಲ್ಲದೋ ಅಲ್ಲಿ ಗಿಡುಗವು ಬಾಲಕನನ್ನು ಖಂಡಿತಾ ಅಪಹರಿಸಬಲ್ಲದು." ಧರ್ಮಾಧಿಕಾರಿಗಳು ನಡೆದ ವೃತ್ತಾಂತವನ್ನೆಲ್ಲ ತಿಳಿದು, ನಕ್ಕು ಇಬ್ಬರಿಗೂ ಬುದ್ಧಿ ಹೇಳಿ ಬಾಲಕ ಹಾಗೂ ತಕ್ಕಡಿಯನ್ನು ಒಬ್ಬರಿಗೊಬ್ಬರು ವಾಪಸ್ಸು ಕೊಡುವಂತೆ ಮಾಡಿದರು.[82]

ಕರಟಕನು ಮುಂದುವರೆಸುತ್ತಾ, ದಮನಕನನ್ನು ಕುರಿತು ಮೂರ್ಖನೇ, ಪಿಂಗಳಕನು ಸಂಜೀವಕನಲ್ಲಿ ಪ್ರಸನ್ನನಾಗಿರುವುದನ್ನು ಸಹಿಸದೆ ನೀನು ಈ ಅಭಾಸ ಮಾಡಿದೆ. ಪ್ರಾಯಶಃ ಸತ್ಕುಲಜಾತರನ್ನು ದುಷ್ಕುಲದಲ್ಲಿ ಹುಟ್ಟಿದವರು, ಐಶ್ವರ್ಯವಂತರನ್ನು ದುರ್ಭಾಗ್ಯವಂತರು; ದಾನಿಗಳನ್ನು ಜಿಪುಣರು; ಸರಳ ಜನರನ್ನು ದುಷ್ಟರು; ಸುಂದರ ಶರೀರವುಳ್ಳವರನ್ನು ಕುರೂಪಿಗಳು; ಸಂತೋಷದಲ್ಲಿರುವವರನ್ನು ದುಃಖದಲ್ಲಿರುವವರು; ನಾನಾ ಶಾಸ್ತ್ರ ಪರಿಣಿತರನ್ನು ಮೂರ್ಖರು ನಿಂದಿಸುವುದು ಸಹಜವೇ. ಹಾಗೆಯೇ ಪಂಡಿತರು ಮೂರ್ಖರಿಂದ; ಶ್ರೀಮಂತರು ಬಡವರಿಂದ; ವ್ರತನಿರತರು ಪಾಪಿಗಳಿಂದ; ಕುಲಸ್ತ್ರೀಯರು ವ್ಯಭಿಚಾರಿಣಿಗಳಿಂದ ದ್ವೇಷಿಸಲ್ಪಡುತ್ತಾರೆ. ಆದ್ದರಿಂದ ಮೂರ್ಖನೇ ನೀನು ಹಿತವೆಂದೆಣಿಸಿ ಅಹಿತವನ್ನೇ ಮಾಡಿದೆ. ಹೀಗೊಂದು ಉಕ್ತಿಯಿದೆ:

पण्डितोऽपि वरं शत्रुर्न मूर्खो हितकारकः ।

वानरेण हतो राजा विप्राश्चोरेण रक्षिताः ॥[83]

ಹಿತವನ್ನು ಮಾಡುವ ಮೂರ್ಖನಿಗಿಂತ ಪಂಡಿತನಾದ ಶತ್ರುವೇ ಮೇಲು. ಒಂದು ಕಥೆಯಲ್ಲಿ ಮೂರ್ಖ ಮಂಗನಿಂದ ರಾಜನು ಕೊಲ್ಲಲ್ಪಟ್ಟನು ಮತ್ತು ಬ್ರಾಹ್ಮಣರು ರಕ್ಷಿಸಲ್ಪಟ್ಟರು ಎಂದು ಹೇಳುತ್ತಾ **ನೃಪಸೇವಕ, ವಾನರ, ಕಳ್ಳ ಹಾಗೂ ಬ್ರಾಹ್ಮಣರ ಕಥೆ**ಯನ್ನು ಪ್ರಾರಂಭ ಮಾಡಿದನು.

ನೃಪಸೇವಕನಾಗಿದ್ದ ವಾನರವೊಂದು ನಿತ್ಯವೂ ಅತಿಶ್ರದ್ಧಾಭಕ್ತಿಯಿಂದ ರಾಜನ ಸೇವೆಯನ್ನು ಮಾಡುತ್ತಾ, ಅವನವಿಶ್ವಾಸವನ್ನು ಗಳಿಸಿ ಸ್ವತಂತ್ರವಾಗಿ ಅಂತಃಪುರದಲ್ಲೆಲ್ಲಾ ಸ್ವತಂತ್ರವಾಗಿ ಓಡಾಡಿ–ಕೊಂಡಿತ್ತು. ಒಮ್ಮೆ ರಾಜನು ನಿದ್ದೆ ಮಾಡುತ್ತಿದ್ದಾಗ ಈ ವಾನರನು ಬೀಸಣಿಕೆಯಿಂದ ಬೀಸುತ್ತಿತ್ತು. ಆಗ ಒಂದು ನೊಣ ಬಂದು ರಾಜನ ಎದೆಯ ಮೇಲೆ ಕೂತು ಹಿಂಸೆ ಮಾಡುತ್ತಿತ್ತು. ಮೊದಲೇ ಸ್ವಭಾವದಿಂದ ಚಂಚಲವಾದ ಮಂಗ ತೋಪದಿಂದ ಹರಿತವಾದ ಕತ್ತಿಯನ್ನು ತೆಗೆದುಕೊಂಡು ನೊಣದ ಮೇಲೆ ಬೀಸಿತು.

---

82. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ– ಪು– 104–106,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

83. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ– ಮಿತ್ರಭೇದ, ಶ್ಲೋ–450,ಪು–294,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಮೊದಲೇ ಸ್ವಭಾವದಿಂದ ಚುರುಕು, ನೊಣ ಹಾರಿ ಏಟನ್ನು ತಪ್ಪಿಸಿಕೊಂಡಿತು. ಅದೇ ಏಟು ರಾಜನ ಎದೆಗೆ ತಾಕಿ, ಅವನು ಸತ್ತುಹೋದನು. ಅದಕ್ಕೇ ಹೇಳುವುದು "ಚಿರಕಾಲ ಬದುಕಲಿಚ್ಛಿಸುವ ರಾಜನು ಮೂರ್ಖ ಮಂಗನನ್ನು ಸೇವಕನನ್ನಾಗಿ ಇಟ್ಟುಕೊಳ್ಳಬಾರದು. ಮತ್ತೊಂದು ಪುಟ್ಟ ಕಥೆ – ಕಳ್ಳ ಹಾಗೂ ಬ್ರಾಹ್ಮಣರು –ಒಬ್ಬ ಮಹಾ ವಿದ್ವಾಂಸನಾದ ಬ್ರಾಹ್ಮಣನು ಪೂರ್ವಜನ್ಮದ ಯೋಗದಿಂದ ಕಳ್ಳನಾಗಿದ್ದನು. ಅವನು ವಾಸಿಸುತ್ತಿದ್ದ ನಗರಕ್ಕೆ ನಾಲ್ಕು ಬ್ರಾಹ್ಮಣರು ಬೇರೆ ದೇಶದಿಂದ ಬಂದ ಹಲವು ವಸ್ತುಗಳ ವ್ಯಾಪಾರ ಮಾಡಿಕೊಂಡು ಚೆನ್ನಾಗಿ ಕಾಲಕಳೆಯುತ್ತಿರಲು, ಇವನು ಅವರನ್ನು ನೋಡಿ, ಅವರ ಸ್ನೇಹವನ್ನು ತನ್ನ ಮಧುರ ಹಿತವಚನಗಳ ಮೂಲಕ ಗಳಿಸಿಕೊಂಡನು. ಅವರ ಮನಸ್ಸಿನಲ್ಲಿ ವಿಶ್ವಾಸ ಮೂಡಿಸಿ ಅವರ ಸೇವೆ ಮಾಡಲಾರಂಭಿಸಿದನು. ಆದರೆ "ಯಾವ ಉಪಾಯದಿಂದ ಇವರ ಧನವನ್ನು ಕದಿಯಲಿ" ಎಂಬುದು ಇವನ ಯೋಚನೆ. ಇಲ್ಲೊಂದು ಉಕ್ತಿಯಿದೆ:–

असती भवति सलज्जा क्षारं नीरं च शीतलं भवति ।

दम्भी भवति विवेकी प्रियवक्ता भवति धूर्तजनः ॥[84]

"ವ್ಯಭಿಚಾರಿಣಿಯು ಲಜ್ಜಾವಂತಳಾಗಿರುತ್ತಾಳೆ, ಉಪ್ಪುನೀರು ತಣ್ಣಗಿರುತ್ತದೆ., ಕಪಟವ್ಯಕ್ತಿಯು ವಿವೇಕಿಯಾಗಿರುತ್ತಾನೆ. ಮತ್ತು ದೂರ್ತಜನರು ಪ್ರಿಯವಚನಗಳನ್ನು ನುಡಿಯುತ್ತಾರೆ." ಆ ಬ್ರಾಹ್ಮಣರು ಎಲ್ಲಾ ವಸ್ತುಗಳನ್ನು ಮಾರಿ ಬಹುಮೂಲ್ಯವಾದ ರತ್ನಗಳನ್ನು ಖರೀದಿಸಿದರು. ಸ್ವದೇಶಕ್ಕೆ ತೆರಳಲು ಅನುವಾದರು. ದೂರ್ತ ಬ್ರಾಹ್ಮಣನು ಚಿಂತೆಯಿಂದ ದುಃಖಗೊಂಡನು. ಇವನ ಮಾತಿನ ಚಮತ್ಕಾರದಿಂದ ಅವರ ಜೊತೆಯಲ್ಲಿ ಹೊರಡಲು ಒಪ್ಪಿಗೆ ಪಡೆದು ಸಿದ್ಧನಾದನು. ಇವನ ಯೋಜನೆಯೇನೆಂದರೆ, ದಾರಿಯಲ್ಲಿ ಬ್ರಾಹ್ಮಣರಿಗೆ ವಿಷವುಣಿಸಿ ಕೊಂದು ರತ್ನಗಳನ್ನು ಪಡೆದುಕೊಳ್ಳುವುದು.

ಆ ಐವರು ಹಳ್ಳಿ ನಗರಗಳನ್ನು ದಾಟಿಕೊಂಡು ಹೋಗುತ್ತಿರುವಾಗ, ಒಂದೆಡೆ ಕಾಗೆಯೊಂದು ಭವಿಷ್ಯ ನುಡಿಯಲು ಆರಂಭಿಸಿತು.– "ಏ ಏ ಬೇಡರೇ! ಓಡಿ ! ಓಡಿ ! ಕಾಲುಲಕ್ಷ ಹಣವಿರುವ ಧನಿಕರು ಹೋಗುತ್ತಿದ್ದಾರೆ. ಅವರನ್ನು ಕೊಂದು ಹಣವನ್ನು ಪಡೆದುಕೊಳ್ಳಿ!" ಬೇಡರು ಕಾಗೆಯ ನುಡಿಯನ್ನು ಕೇಳಿದೊಡನೆ ಹೋಗಿ ಆ ಬ್ರಾಹ್ಮಣರಿಗೆ ಹೊಡೆದು ವಸ್ತ್ರಗಳನ್ನು ಕಳಚಿ ನೋಡಿದಾಗ ಹಣವು ಸಿಗಲಿಲ್ಲ. ಕಾಗೆಯು ಎಂದೂ ಸುಳ್ಳು ಹೇಳಿದ್ದಿಲ್ಲ. ಆದ್ದರಿಂದ ನಿಮ್ಮಲ್ಲಿ ಹಣವಿದ್ದರೆ ಕೊಟ್ಟು ಬಿಡಿ. ಇಲ್ಲದಿದ್ದರೆ ನಿಮ್ಮೆಲ್ಲರನ್ನೂ

---

84. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ– ಮಿತ್ರಭೇದ, ಶ್ಲೋ–451, ಪು–296,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಕೊಂದು ಚರ್ಮ ಸುಲಿದು, ಅಂಗಾಂಗಗಳನ್ನು ಹುಡುಕಿ ಹಣವನ್ನು ತೆಗೆದುಕೊಳ್ಳುತ್ತೇವೆ. ಎಂದು ಬೇಡರು ಬ್ರಾಹ್ಮಣರಿಗೆ ಎಚ್ಚರಿಕೆ ನೀಡಿದರು. ಇದನ್ನು ಕೇಳಿದ ಕಳ್ಳ ಬ್ರಾಹ್ಮಣನು ತನ್ನಲ್ಲೇ ಯೋಚಿಸಿ," ಈ ಬ್ರಾಹ್ಮಣರನ್ನು ಕೊಂದರೆ ಅವರ ಅಂಗಾಂಗಗಳನ್ನು ಹುಡುಕಿದರೆ ನನಗೂ ಹಾಗೇ ಮಾಡುತ್ತಾರೆ. ಆದ್ದರಿಂದ ರತ್ನಗಳಿಲ್ಲದ ನಾನೇ ಮೊದಲು ಇವರಿಗೆ ಶರೀರವನ್ನು ಸಮರ್ಪಿಸಿಕೊಳ್ಳುತ್ತೇನೆ. ನನ್ನಲ್ಲಿ ರತ್ನಗಳಿಲ್ಲದಕಾರಣ, ಅವರಲ್ಲೂ ಏನೂ ಇಲ್ಲವೆಂದು ಅವರನ್ನೆಲ್ಲಾ ಬಿಟ್ಟುಬಿಡುವರು. ಮೃತ್ಯುವಿಗೆ ಅಂಜಬಾರದು. ಎಂದಿದ್ದರೂ ಸಾತಲೇಬೇಕು."ಯಾರು ಗೋವಿಗಾಗಿ ಅಥವಾ ಬ್ರಾಹ್ಮಣನಿಗಾಗಿ ಪ್ರಾಣತ್ಯಾಗ ಮಾಡುವನೋ ಅವನು ಸೂರ್ಯಮಂಡಲವನ್ನು ದಾಟಿ ಸದ್ಗತಿಯನ್ನು ಪಡೆಯುವನು." ಹೀಗೆ ನಿಶ್ಚಯಿಸಿ ಸಿದ್ಧನಾದನು. ಬೇಡರು ಹಾಗೇ ಮಾಡಿ ಆತನಲ್ಲಿ ಹಣವನ್ನು ಕಾಣದಿದ್ದಾಗ ಇತರ ನಾಲ್ಕು ಬ್ರಾಹ್ಮಣರನ್ನು ಬಿಟ್ಟು ಬಿಟ್ಟರು.[೮೫]

ಕಥೆಯನ್ನು ಮುಗಿಸಿದ ಕರಟಕ – ದಮನಕರು ಸಂವಾದ ನಡೆಸುತ್ತಿದ್ದರು. ಸಂಜೀವಕನು ಪಿಂಗಲಕನೊಡನೆ ಸ್ವಲ್ಪ ಕಾಲ ಯುದ್ಧ ಮಾಡಿದ ನಂತರ ಪಿಂಗಲಕನ ತೀಕ್ಷ್ಣವಾದ ಉಗುರುಗಳ ಘಾತದಿಂದ ಸತ್ತು ನೆಲಕ್ಕುರುಳಿದನು. ಅವನು ಸತ್ತದ್ದನ್ನು ಕಂಡು ಪಿಂಗಲಕನು ಅವನ ಗುಣಗಳನ್ನು ನೆನೆಸಿಕೊಂಡು ಹೃದಯ ತುಂಬಿಬಂದವನಾಗಿ ಹೀಗೆ ನುಡಿದನು– "ಅಯ್ಯೋ, ಸಂಜೀವಕನನ್ನು ಕೊಂದು ನಾನು ಪಾಪಯುಕ್ತವಾದ ಕೆಲಸವನ್ನು ಮಾಡಿಬಿಟ್ಟೆ. ಏಕೆಂದರೆ ವಿಶ್ವಾಸಘಾತಕ್ಕಿಂತ ನೀಚ ಕೆಲಸ ಮತ್ತೊಂದಿಲ್ಲ. ಮಿತ್ರದ್ರೋಹಿ, ಕೃತಘ್ನ ಹಾಗೂ ವಿಶ್ವಾಸಘಾತಕರಾದ ಮನುಷ್ಯರು ಸೂರ್ಯಚಂದ್ರರಿರುವವರೆಗೆ ನರಕವಾಸವನ್ನನುಭವಿಸುವರು ಹೀಗೆ ಹಲವು ವಿಧದಲ್ಲಿ ಪ್ರಲಾಪಿಸುತ್ತಿರುವ ಪಿಂಗಲಕನ ಬಳಿಗೆ ಹೋಗಿ ದಮನಕನು ಹರ್ಷದಿಂದ ಹೇಳಿದನು–

"ದ್ರೋಹಿ ಹಾಗೂ ಹುಲ್ಲು ತಿನ್ನುವ ಸಂಜೀವಕನನ್ನು ಕೊಂದು ತಾವು ಈ ರೀತಿ ದುಃಖ ಪಡುವುದು ಹೇಡಿಗಳು ಅನುಸರಿಸುವ ಮಾರ್ಗದಂತಿದೆ. ಭೂಪಾಲರಿಗೆ ಇದು ಯೋಗ್ಯವಲ್ಲ. ತನ್ನ ಪ್ರಾಣಕ್ಕೇ ಅಪಾಯವನ್ನುಂಟು ಮಾಡುವವರು ಯಾರಾದರೇನು? ಅವರನ್ನು ಕೊಲ್ಲಬೇಕು." ಹೀಗೆ ದಮನಕನು ಅನೇಕ ಬುದ್ಧಿಮಾತುಗಳನ್ನು ಹೇಳಿದನು. ಅದನ್ನು ಕೇಳಿದ ಪಿಂಗಲಕನು ಸಂಜೀವಕನ ಶೋಕವನ್ನು ಬಿಟ್ಟು, ದಮನಕನನ್ನು ಮಂತ್ರಿತನ್ನಾಗಿಸಿಕೊಂಡು ರಾಜ್ಯವನ್ನಾಳಿದನು.

ಹೀಗೆ ಮಿತ್ರಭೇದದಲ್ಲಿ ಬರುವ ಈ ಕಥೆಯಲ್ಲಿ ಒಳ್ಳೆಯ ವ್ಯಕ್ತಿತ್ವ ನಿರ್ಮಾಣದಿಂದ ಮನುಷ್ಯನು ಉತ್ತಮನೆನಿಸಿಕೊಳ್ಳುವುದಕ್ಕೆ ಬೇಕಾದ ಗುಣಗಳಲ್ಲಿ ವಿಶ್ವಾಸಕ್ಕೆ ಯೋಗ್ಯನಾಗುವುದೂ ಒಂದು. ಇತರರಲ್ಲಿ

---

೮೫. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ– ಮಿತ್ರಭೇದ, ಪು–294–297,,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ವಿಶ್ವಾಸವಿಟ್ಟು ಅವರ ಮನಸ್ಸನ್ನು ಗೆಲ್ಲುವುದು ಅಷ್ಟೇ ಮುಖ್ಯ. ಈ ಗುಣವು ಒಳ್ಳೆಯ ಸಂಸ್ಕಾರದಿಂದ ಬರುತ್ತದೆ. ಬಲದಿಂದ ಸಾಧ್ಯವಾಗದ ಕೆಲಸವನ್ನು ವಿಶ್ವಾಸವೆಂಬ ಮಾನವೀಯ ಗುಣದಿಂದ ಸಾಧಿಸಬಹುದು. ಆಗ ರಾಜನು ಸರ್ವತ್ರ ಮಾನ್ಯನಾಗುತ್ತಾನೆ. ಹಾಗೆಂದು ಕಂಡಕಂಡವರಲ್ಲೆಲ್ಲಾ ವಿಶ್ವಾಸವಿಡುವುದು ಹಾಗೂ ವಿಶ್ವಾಸ ದ್ರೋಹ ಮಾಡಿದವರನ್ನು ಪುನಃ ನಂಬುವುದು ಇದೆಲ್ಲ ತಪ್ಪು. ಇದು ಹೇಗಾಗುವುದೆಂದರೆ ಇರುಳು ಕಂಡ ಬಾವಿಯಲ್ಲಿ ಹಗಲು ಬಿದ್ದಂತಾಗುವುದು. ಈ ರೀತಿಯ ಬದುಕಿನ ನೀತಿಪಾಠವನ್ನು, ಗುಣಶೀಲ ವರ್ತನೆಗಳನ್ನು ವಿಷ್ಣುಶರ್ಮರು ರಾಜಕುಮಾರರಿಗೆ ಬೋಧಿಸಿದ್ದಾರೆ. ಹಿತೋಪದೇಶದಲ್ಲಿಒಂದು ಒಳ್ಳೆಯ ಉಪದೇಶವಿದೆ:-

दानं प्रियवाक्सहितं ज्ञानमगर्वं क्षमान्वितं शौर्यम् ।

वित्तं त्यागनियुक्तं दुर्लभमेतत् चतुष्टयं लोके ।।[86]

ಅಂದರೆ, "ಪ್ರೀತಿಯಿಂದ ಮಾತಿನಿಂದ ಕೂಡಿದ ದಾನ, ಗರ್ವವಿಲ್ಲದ ಜ್ಞಾನ, ಕ್ಷಮೆಯಿಂದ ಕೂಡಿದ ಶೌರ್ಯ, ತ್ಯಾಗ ಮನೋಭಾವದಿಂದ ಕೂಡಿದ ಸಂಪತ್ತು- ಈ ನಾಲ್ಕು ಒಳ್ಳೆಯದು, ಶ್ಲಾಘನೀಯ ಗುಣಗಳು. ಆದರೆ ಇದನ್ನು ಕಾಣುವುದು ಕಷ್ಟ.

ಮತ್ತೊಂದು ಉಪಕಥೆಯಲ್ಲಿ ಶುಭಾಶುಭಗಳನ್ನು ಉಲಿಯುವ ಎರಡು ಗಿಳಿ ಸಹೋದರಿಯರು ಸಹವಾಸ ಕಾರಣದಿಂದ ಬದಲಾಗಿದ್ದರೆಂಬ ಬಗ್ಗೆನಿರೂಪಿಸಲಾಗುತ್ತದೆ. ಆದ್ದರಿಂದಲೇ ತಿಳುವಳಿಕೆ ಇಲ್ಲದವನು ಎಂತಹ ಬುಧ್ಧಿವಂತ ನಾಗಿದ್ದರೂ ಸಹವಾಸ ಕಾರಣದಿಂದ ಬದಲಾಗುತ್ತಾನೆ. ಇದರರ್ಥ ರಾಜಕುಮಾರರಿಗೆ ಅವರ ತಪ್ಪುಅರಿವಾಗುವಂತೆ ಆಲೋಚಿಸುವ ಪ್ರೇರಕವಾಗಿರುತ್ತದೆ. ವಿಷ್ಣುಶರ್ಮರು ಕಥೆಹೇಳುವುದನ್ನು ನಿಲ್ಲಿಸಿ, ರಾಜಕುಮಾರರ ಮುಖಗಳನ್ನು ಗಮನಿಸಿ ಕೇಳಿದರು." ರಾಜಕುಮಾರರೇ ದಮನಕನು ಹೇಳಿದ ಅಜ್ಞಾತನಾದವನನ್ನು ಹೆಚ್ಚು ನಂಬಬಾರದು, ವಿಶ್ವಾಸಕ್ಕೆ ತೆಗೆದುಕೊಳ್ಳಬಾರದು, ದೂರದಲ್ಲೇ ಇರಿಸಿಕೊಳ್ಳಬೇಕು ಎಂಬುದರ ಬಗ್ಗೆ ನೀವೇನು ಹೇಳುತ್ತೀರಿ? ಉತ್ತರವನ್ನು ಯೋಚಿಸಿ ನಾಳೆ ಬಂದು ಹೇಳಿ, ಆಗದೇ? ಎಂದರು. ಇದಕ್ಕೆ ರಾಜಕುಮಾರರು ಒಪ್ಪಿದರು. ಮರುದಿನ ರಾಜಕುಮಾರರು ಬಂದವರೇ ಕಾತುರದಿಂದ ಹೇಳಿದರು- "ಗುರುಗಳೇ ದಮನಕನ ಮಾತು ಸತ್ಯ. ಏಕೆಂದರೆ, ಅಪರಿಚಿತ ವ್ಯಕ್ತಿಗಳು ತಮ್ಮಮಾತಿನಲ್ಲಿ ಮರ್ಯಾದಸ್ಥರಂತೆ ಕಾಣಿಸಿದರೂ ಅವರ ಗುಣ - ಸ್ವಭಾವ - ವ್ಯಕ್ತಿತ್ವ ಎಂತಹುದೋ ಯಾರಿಗೆ ಗೊತ್ತು? ಹೀಗಾಗಿ ಬಹಳ ಕಾಲದ ಅನುಭವದಿಂದ ಬಂದ ಹೊಸಬನನ್ನು ಆಳವಾಗಿ ಪರೀಕ್ಷಿಸಿ ನೋಡಿದ ಅನಂತರವೇ

೮೬. नारायणपण्डितस्य हितोपदेश, मित्रलाभ – **122**

ಅವನಿಗೆ ನೀಡಬೇಕಾದ ಸ್ಥಾನವನ್ನು ನೀಡುವುದು ಸರಿ ಅಲ್ಲವೇ ಗುರುಗಳೇ? ಎಂದರು. ಆಗ ಗುರುಗಳು ಭೇಷ್ ಎಂದು ರಾಜಕುಮಾರರನ್ನು ಮೆಚ್ಚಿ ಹೇಳಿದರು" ನೀವೀಗ ನಿಜವಾಗಿ ರಾಜಕುಮಾರರೆ. ದಮನಕನು ಅದಕ್ಕಾಗಿ ಹೇಳಿದ ಕಥೆ ಯಾವುದು ಗೊತ್ತೇ? ಅದೇ **ಗೂಬೆಯ ಸಹವಾಸ ಮಾಡಿದ ರಾಜಹಂಸನ ಕಥೆ** ಎಂದು ಮುಂದಿನ ಕಥೆಗೆ ಆಸಕ್ತಿ ಮೂಡಿಸಿದರು. ರಾಜಕುಮಾರರ ಕಲಿಕೆ, ಆಸಕ್ತಿ ಹಾಗೂ ಆಲೋಚನೆ ಎಷ್ಟರಮಟ್ಟಿಗೆ ಬೆಳೆದಿತ್ತೆಂದರೆ "ಈಗ ನೀವು ಹೇಳಬೇಕೆಂದಿರುವ ಕಥೆ ಸ್ವಾರಸ್ಯಕರವೂ, ನೀತಿಬೋಧಕವೂ ಆಗಿದ್ದಿರಬೇಕು, ಹೇಳಿ ಆಚಾರ್ಯರೇ ಎಂದು ಕುತೂಹಲದಿಂದ ಕೇಳುವಷ್ಟು.[87] ಹೀಗೆ ರಾಜಕುಮಾರರ ಕುತೂಹಲ ಇನ್ನಷ್ಟು ಹೆಚ್ಚುವಂತೆ ಪ್ರೇರೇಪಿಸಿ ಕಥೆ ಹೇಳಲು ತೊಡಗುತ್ತಾರೆ. ಒಂದು ಕಥೆಯ ಅಂತ್ಯದಲ್ಲಿ ಒಂದು ಅಮೂಲ್ಯ ನೀತಿಬೋಧೆ, ಪುನಃ ಆ ಕೊಂಡಿ ಕಳಚದಂತೆ, ಮುಂದಿನ ಮತ್ತೊಂದು ಸ್ವಾರಸ್ಯಕರ ನೀತಿಕಥೆ. ಜೊತೆಜೊತೆಯಲ್ಲಿ ರಾಜನೀತಿ ಶಿಕ್ಷಣವೂ, ಬದುಕಿನ ನೀತಿಶಿಕ್ಷಣವೂ ದೊರಕುವಂತೆ ವಿಚಾರಗಳನ್ನು ಸಂಯೋಜಿಸಿರುವುದು ಪಂಚತಂತ್ರದ ವಿಶಿಷ್ಟತೆಗೆ ದ್ಯೋತಕವಾಗಿದೆ.



87. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಪ್ರ.ತಂ -1-12,ಪು - 64-67.(2015)ವರ್ಣಿಲ, 39/2-11,ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು-560050.

# ಅಧ್ಯಾಯ–5

## ಜ್ಞಾನಾತ್ಮಕ ಬೆಳವಣಿಗೆ ಮತ್ತು ಸಂವೇಗಾತ್ಮಕ ಬುದ್ಧಿಶಕ್ತಿಯ ವಿಕಾಸ –

ಅಧ್ಯಾಯ 5 – 1. ಸೃಜನಶೀಲತೆ–ಅರ್ಥ ಮತ್ತು ವ್ಯಾಪ್ತಿ

ಅಧ್ಯಾಯ 5 – 2.ವ್ಯಕ್ತಿತ್ವ–ಮತ್ತು–ವ್ಯಕ್ತಿತ್ವ ವಿಕಾಸ

ಅಧ್ಯಾಯ 5 – 3.ವ್ಯಕ್ತಿತ್ವ–ನಿರ್ಮಾಣ–ಹೊಂದಾಣಿಕೆ–ಸಹಬಾಳ್ವೆ – ಒಗ್ಗಟ್ಟಿನಲ್ಲಿ ಸಾಧನೆ

ಅಧ್ಯಾಯ 5 – 4. ಉತ್ತಮ ಅಭ್ಯಾಸಗಳ ಬೆಳವಣಿಗೆ

ನಾಯಕತ್ವ– ಉತ್ತಮ ನಾಯಕನ ಗುಣಗಳು.

ಅಧ್ಯಾಯ 5 – 5 पञ्चतन्त्रस्य– द्वितीयं तन्त्रम् – मित्रसम्प्राप्तिः–

: ಕಥೆಗಳ ವಿಶ್ಲೇಷಣೆ :

## ಅಧ್ಯಾಯ–5–1. ಸೃಜನಶೀಲತೆ–ಅರ್ಥ ಮತ್ತು ವ್ಯಾಪ್ತಿ

ಬೆಳವಣಿಗೆ ಹಾಗೂ ವಿಕಾಸ ಪರಸ್ಪರ ಪೂರಕ ಪದಗಳು. ಬೆಳವಣಿಗೆ ಎಂಬ ಪದ ಪರಿಮಾಣಾತ್ಮಕ ಬದಲಾವಣೆಗಳನ್ನು ಸೂಚಿಸುತ್ತದೆ. ಉದಾಹರಣೆಗೆ: ವ್ಯಕ್ತಿ ಬೆಳೆದಿದ್ದಾನೆ. ತೂಕ ಹೆಚ್ಚಿದೆ. ಎತ್ತರವಾಗಿದ್ದಾನೆ. ಈ ಬದಲಾವಣೆ ಸ್ಪಷ್ಟ ಹಾಗೂ ಗೋಚರ. ವಿಕಾಸ ಎಂಬ ಪದವು ಗುಣಾತ್ಮಕ ಬದಲಾವಣೆಗಳನ್ನು ಸೂಚಿಸುತ್ತದೆ. ಉದಾಹರಣೆಗೆ: ವ್ಯಕ್ತಿ ಮಾತನಾಡುವ, ಸುಶ್ರಾವ್ಯವಾಗಿ ಹಾಡುವ ಸಾಮರ್ಥ್ಯ ಹೊಂದಿದ್ದಾನೆ. ವಿಕಾಸವಿಲ್ಲದೆ ಒಬ್ಬ ವ್ಯಕ್ತಿ ಬೆಳೆಯಲಾರ. ಬೆಳವಣಿಗೆಯಲ್ಲಿ ಸೂಕ್ತ ಬದಲಾವಣೆಗಳಾಗದೆ ವಿಕಾಸವಿಲ್ಲ. ವಿಕಾಸ ಎಂಬ ಪದದ ವ್ಯಾಪ್ತಿ ಮಹತ್ತರವಾಗಿದೆ ಹಾಗೂ ಇದು ನಿತ್ಯ ನಿರಂತರ ಪ್ರಕ್ರಿಯೆಯಾಗಿದೆ. ಒಂದು ಸಂಸ್ಕೃತ ಶ್ಲೋಕವು ಎಷ್ಟು ಸೊಗಸಾಗಿ ಮನುಷ್ಯ ಬುದ್ಧಿಯ ವಿಕಾಸವನ್ನು ಕುರಿತು ಹೀಗೆ ಸ್ಪಷ್ಟಪಡಿಸುತ್ತದೆ:–

यः पठति लिखति पष्यति परिपृच्छति पंडितानुपाश्रयति ।

तस्य दिवाकर किरणैः नलिनीदलमिव विकास्यते बुद्धिः ॥[1]

ಅಂದರೆ, ಯಾವನು ಓದಿ, ಬರೆದು, ನೋಡಿ, ಬಗೆಬಗೆಯಾಗಿ ಪ್ರಶ್ನೆ ಮಾಡಿ, ಪಂಡಿತರನ್ನು ಆಶ್ರಯಿಸುವನೋ ಅವನ ಬುದ್ಧಿಯು ಸೂರ್ಯ ಕಿರಣಗಳಿಂದ ತಾವರೆಯ ದಳ ಅರಳುವಂತೆ ವಿಕಾಸಗೊಳ್ಳುವುದು.

ಒಬ್ಬ ವ್ಯಕ್ತಿ ಒಂದು ನಿರ್ದಿಷ್ಟ ವಯೋಮಾನ ಮತ್ತು ಹಂತವನ್ನು ತಲುಪಿದಾಗ ಬೆಳವಣಿಗೆ ಕೊನೆಗೊಳ್ಳುತ್ತದೆ. ಆದರೆ ವಿಕಾಸ ಜೀವನಪರ್ಯಂತ ಮುಂದುವರೆಯುತ್ತದೆ.[2] ಅನುವಂಶೀಯವಾಗಿ ವ್ಯಕ್ತಿಗಳು ಪಡೆದುಕೊಂಡು ಬಂದಿರುವ ಗುಣಗಳು ಮತ್ತು ಅವರ ಬುದ್ಧಿಶಕ್ತಿ ಸೃಜನಶೀಲತೆಯ ಬೆಳವಣಿಗೆ ಮೇಲೆ ಪ್ರಭಾವ ಬೀರುತ್ತವೆ. ಉದಾಹರಣೆಗೆ: ಒಬ್ಬ ದೊಡ್ಡ ಕಲಾವಿದನ ಮಗ ಒಳ್ಳೆಯ ಕಲಾವಿದನಾಗಿರುವುದು; ಸಂಗೀತ ವಿದ್ವಾಂಸನ ಮಗ ಒಳ್ಳೆಯ ಸಂಗೀತಗಾರನಾಗಿರುವುದು; ಒಬ್ಬ ವಿಜ್ಞಾನಿಯ ಮಗ ಮಹಾನ್ ವಿಜ್ಞಾನಿಯಾಗಿರುವುದು. ಹೀಗೆ ಸೃಜನಶೀಲ ಗುಣಗಳು ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಹರಿದು ಬಂದಿರುವುದನ್ನು ಕಾಣಬಹುದು. ಸೃಜನಶೀಲ ಗುಣಗಳು ಕೆಲವೊಮ್ಮೆ ಅಸಾಧಾರಣ ಪ್ರತಿಭೆಯೆಡೆಗೆ ತಲುಪಿ

---

1. **ಸುಭಾಷಿತಮಂಜರೀ**–ಸಾಮಾನ್ಯ ನೀತಿ–ಶ್ಲೋ–559, ಪು–503, ಸುಭಾಷಿತ ಭಾಂಡಾಗಾರಂ.(2001) ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18
2. **ವಾಮದೇವಪ್ಪ. ಎಚ್. ವಿ,** ಶೈಕ್ಷಣಿಕ ಮನೋವಿಜ್ಞಾನ, ಅ–2,ಪು– 44–45,(2005), ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಸೃಜನಾತ್ಮಕ ಶಕ್ತಿಗಳು ಪರಿಣಾಮಕಾರಿಯಾಗಿ ಹೊರಹೊಮ್ಮಿ ಪರಾಕಾಷ್ಠತೆಯನ್ನು ಪ್ರಾಪ್ತಿಗೊಳಿಸಿಕೊಳ್ಳುತ್ತವೆ.[3] ಇದನ್ನು ಉತ್ತಮ ಬೆಳವಣಿಗೆ ಮತ್ತು ವಿಕಾಸದ ಸಮನ್ವಯ ಸಂಕೀರ್ಣ ಪ್ರಕ್ರಿಯೆ ಎನ್ನಬಹುದು. ಪರಿಪಕ್ವನ ಮತ್ತು ಅನುಭವಗಳ ಪರಿಣಾಮವಾಗಿ ಉಂಟಾಗುವ ಪ್ರಗತಿಪರ ಸರಣೀಕೃತ ಬದಲಾವಣೆಗಳನ್ನು ವಿಕಾಸ ಎನ್ನುವರು.

## ಸೃಜನಶೀಲತೆ : CREATIVITY

"ಸೃಜನಶೀಲತೆ" ಎಂದರೆ ಸಾಮಾನ್ಯವಾಗಿ ವಸ್ತುಗಳು ಅಥವಾ ವಿಚಾರಗಳ ನಡುವೆ ಹೊಸ ಸಂಬಂಧವನ್ನು ಕಾಣುವುದು ಇಲ್ಲ ವ್ಯಕ್ತಪಡಿಸುವುದು ಎಂದರ್ಥ. ಇದು ಮೌಲ್ಯಯುತವಾದ ಮಾನವ ಗುಣಗಳಲ್ಲೊಂದು. ಸೃಜನಶೀಲ ಚಟುವಟಿಕೆಗಳು ವೈಜ್ಞಾನಿಕ ಪ್ರಗತಿಯನ್ನು ನಿರ್ಧರಿಸುತ್ತವೆ. ಯಾವ ರಾಷ್ಟ್ರಗಳು ತನ್ನ ವ್ಯಕ್ತಿಗಳಲ್ಲಿ ಸೃಜನಶೀಲತೆಯನ್ನು ಗುರ್ತಿಸಿ, ಬೆಳೆಸಿ, ಪ್ರೋತ್ಸಾಹಿಸುತ್ತವೆಯೋ ಅಂತಹ ರಾಷ್ಟ್ರಗಳು ಪ್ರಗತಿಪಥದಲ್ಲಿರುವುದನ್ನು ನಾವು ಕಾಣಬಹುದು. ಪ್ರತಿಯೊಬ್ಬ ವ್ಯಕ್ತಿಯೂ ಸೃಜನಶೀಲನಾಗಿರುತ್ತಾನೆ. ಆದರೆ ಸೃಜನಶೀಲತೆಯ ಪ್ರಮಾಣ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಸೃಜನಶೀಲ ಮಕ್ಕಳು ಸಮಾಜದ, ದೇಶದ ದೊಡ್ಡ ಆಸ್ತಿಯಿದ್ದಂತೆ. ಆದ್ದರಿಂದಲೇ ಸೃಜನಶೀಲರನ್ನು ರಾಷ್ಟ್ರದ ಮಾನವ ಸಂಪನ್ಮೂಲ ಎಂದು ಗುರುತಿಸಲಾಗಿದೆ.[4]

ಪ್ರತಿಯೊಬ್ಬ ಶಿಕ್ಷಕರು ಹಾಗೂ ಪೋಷಕರು ತಮ್ಮ ಮಕ್ಕಳ ಜ್ಞಾನಾತ್ಮಕ ಬೆಳವಣಿಗೆಗಷ್ಟೇ ಒತ್ತು ಕೊಡದೆ, ಜೀವನವನ್ನು ಯಶಸ್ವಿಯಾಗಿ ನಿರ್ವಹಿಸಲು ಅವಶ್ಯಕವಾಗಿರುವಂತಹ ಸಂವೇಗಾತ್ಮಕ ಬುದ್ಧಿಶಕ್ತಿಯನ್ನು ಬೆಳೆಸಲು ಕ್ರಮ ಕೈಗೊಳ್ಳಬೇಕಾಗಿದೆ. ಆಗ ಮಾತ್ರ ನಾವು ಸದೃಢ ಹಾಗೂ ಸೃಜನಾತ್ಮಕ ವ್ಯಕ್ತಿ ಮತ್ತು ಸಮಾಜವನ್ನು ನಿರ್ಮಾಣ ಮಾಡಲು ಸಾಧ್ಯ. ಇದನ್ನೇ ವಿಷ್ಣುಶರ್ಮರು ಪಂಚತಂತ್ರದಲ್ಲಿ ರಾಜಕುಮಾರರನ್ನು ಕೇವಲ ಸುಶಿಕ್ಷಿತರನ್ನಾಗಿ ಮಾಡದೆ, ಜೊತೆಯಲ್ಲಿ ಸಾರ್ಥಕ ಬದುಕಿನ ಕ್ರಮವನ್ನು, ರಾಜನೀತಿ ಶಿಕ್ಷಣವನ್ನು, ನೀತಿಶಿಕ್ಷಣವನ್ನು ಪರಿಣಾಮಕಾರಿಯಾಗಿ ಬೋಧಿಸಿ ಒಳ್ಳೆಯ ವ್ಯಕ್ತಿತ್ವ ನಿರ್ಮಾಣಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಮೊದಲು ವಿದ್ಯಾಬುದ್ಧಿಯ ಕಡೆಗೆ ಗಮನಕೊಟ್ಟು ಕಲಿಕೆಯ ಬಗ್ಗೆ ಒಲವನ್ನು ಮೂಡಿಸಿದ್ದಾರೆ. ಒಂದು ಸುಭಾಷಿತ ವಿದ್ಯೆ ಎಂಥಹ ಸಂಪತ್ತೆಂಬುದನ್ನು ಹೀಗೆ

---

3. **ವೀರಪ್ಪ. ಎನ್. ಎಸ್.**, ಶಿಕ್ಷಣದಲ್ಲಿ ಮನೋವಿಜ್ಞಾನ, ಅ –4, ಪು–56–57.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
4. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 3, ಪು–138.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ವರ್ಣಿಸುತ್ತದೆ:-

न चोरहार्यं न च राजहार्यं न भ्रातृभाज्यं न च भारकारी ।

व्ययेकृते वर्धते एव नित्यं विद्याधनं सर्वधनप्रधानम् ॥[5]

ಅಂದರೆ, ಯಾವುದೇ ಕಳ್ಳನಿಂದ ಕದಿಯಲಾಗದ, ರಾಜನಿಂದಲೂ ಕಸಿದುಕೊಳ್ಳಲು ಸಾಧ್ಯವಾಗದ, ಅಣ್ಣತಮ್ಮಂದಿರ ನಡುವೆ ಭಾಗ ಮಾಡಿ ಹಂಚಿಕೊಳ್ಳಲು ಸಾಧ್ಯವಾಗಧ ವ್ಯಯಿಸಿದಷ್ಟೂ ಹೆಚ್ಚಾಗುತ್ತಲೇ ಹೋಗುವ ವಿದ್ಯೆಯೆಂಬ ಧನವೇ ಎಲ್ಲಾ ಧನಗಳಲ್ಲಿ ಪರಮಶ್ರೇಷ್ಠವಾದುದು. ಇದನ್ನು ಗಳಿಸಿ ಬೆಳೆಸಿಕೊಂಡ ವ್ಯಕ್ತಿಯಲ್ಲಿ ಬೌದ್ಧಿಕ ವಿಕಾಸವಾಗುವುದರ ಜೊತೆಯಲ್ಲಿ ಹೊಸಹೊಸ ಆಲೋಚನೆಗಳು ಮತ್ತು ಕ್ರಿಯಾಶೀಲತೆ ಪ್ರಕಾಶಗೊಂಡು ಸೃಜನಶೀಲ ವ್ಯಕ್ತಿತ್ವ ನಿರ್ಮಾಣವಾಗುತ್ತದೆ.

द्वे वर्त्मनी गिरो देव्याः शास्त्रं च कविकर्म च ।

प्रज्ञोपज्ञं तयोराद्यं प्रतिभोद्भवमन्तिमम् ॥[6]

ವಾಗ್ದೇವಿಯ ಮಾರ್ಗಗಳು ಎರಡು. ಒಂದು ಶಾಸ್ತ್ರ; ಇನ್ನೊಂದು ಕಾವ್ಯ. ಮೊದಲನೆಯದು ಬುದ್ಧಿಸಾಮರ್ಥ್ಯದಿಂದ ಹುಟ್ಟುತ್ತದೆ. ಎರಡನೆಯದು ಸೃಜನಶೀಲತೆ ಅಥವಾ ಪ್ರತಿಭೆಯಿಂದಾಗುತ್ತದೆ.

ನಮ್ಮ ಶಾಲೆಗಳು ಮಕ್ಕಳಲ್ಲಿ ಸೃಜನಶೀಲತೆಯನ್ನು ಅಭಿವೃದ್ಧಿಪಡಿಸುವುದರ ಮೂಲಕ ರಾಷ್ಟ್ರದ ವಿವಿಧ ಕ್ಷೇತ್ರಗಳಿಗೆ ಅಗತ್ಯವಾದ ನಾಯಕರನ್ನು ರೂಪಿಸಬೇಕು. ಸೃಜನಶೀಲತೆಯೆಂಬುದು ಒಂದೇ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ. ವಿಜ್ಞಾನ, ಸಾಹಿತ್ಯ, ಸಂಗೀತ, ನೃತ್ಯ, ಕಲೆ, ರಾಜ್ಯಾಡಳಿತ, ವ್ಯವಸಾಯ ಮೊದಲಾದ ಎಲ್ಲ ಕ್ಷೇತ್ರಗಳಲ್ಲೂ ಕಂಡುಬರುತ್ತದೆ. ಆದರೆ ಇದರ ಪ್ರಭಾವ ಒಂದು ಕ್ಷೇತ್ರದಿಂದ ಮತ್ತೊಂದಕ್ಕೆ, ಒಬ್ಬನಿಂದ ಮತ್ತೋರ್ವನಿಗೆ ವ್ಯತ್ಯಾಸ ಕಂಡುಬರುತ್ತದೆ. **"ಸೃಜನಶೀಲತೆ"** ಎಂಬ ಪದವು ಒಂದು ನಿರ್ದಿಷ್ಟ ವ್ಯಕ್ತಿಯ ಚಟುವಟಿಕೆಯನ್ನು ಮತ್ತು ಅದರ ಮೂಲಕ ರಚಿಸಲಾದ ಮೌಲ್ಯಗಳನ್ನು ಸೂಚಿಸುತ್ತದೆ, ಅಂತೆಯೇ ಇದು ನಂತರದಲ್ಲಿ ಸಂಸ್ಕೃತಿಯ ಅಂಶಗಳಾಗಿ ಪರಿಣಮಿಸುತ್ತದೆ. ಸೃಜನಶೀಲತೆಯ ಮನೋವಿಜ್ಞಾನದ ಸಮಸ್ಯಾತ್ಮಕ ಕ್ಷೇತ್ರವು ಕಲ್ಪನೆಯ, ಒಳನೋಟ, ಚಿಂತನೆ ಮತ್ತು ಮನುಷ್ಯನ ಸೃಜನಶೀಲ ಚಟುವಟಿಕೆಯನ್ನು ಉತ್ತೇಜಿಸುವ ಇತರ ಅಂಶಗಳ ಪಾತ್ರವನ್ನು ಒಳಗೊಂಡಿದೆ.

---

5. **ಸುಭಾಷಿತಭಾಂಡಾಗಾರಂ.** **Universal Sanskrit Slokas & Subhashit-36**
6. **ಸುಭಾಷಿತಮಂಜರೀ,** ಕವಿಕಾವ್ಯ ಪ್ರಶಂಸೆ- ಶ್ಲೋ-21, ಪು-8, ಕವಿಕಂಠಾಭರಣದಿಂದ.(2001) ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18 2. ಭಟ್ಟತೌತನ ಕಾವ್ಯಕೌತುಕ.

ಸೃಜನಶೀಲತೆಗೆ ಹಲವಾರು ವ್ಯಾಖ್ಯೆಗಳನ್ನು ನೀಡಲಾಗಿದೆ. ಆದರೆ ಚೈಲ್ಡ್‌ರವರು ಹೇಳಿರುವಂತೆ ಸೃಜನಶೀಲತೆಗೆ ಯಾವುದೇ ಒಂದು ಅರ್ಥಪೂರ್ಣವಾದ, ಅಸ್ಪಷ್ಟವಲ್ಲದ ಮತ್ತು ಎಲ್ಲರೂ ಒಪ್ಪಿಕೊಂಡಂತಹ ವ್ಯಾಖ್ಯೆ ಇರುವುದಿಲ್ಲ.ಆದರೂ ಸಹ ಕೆಲವು ಸಂಶೋಧಕರು, ಮನೋವಿಜ್ಞಾನಿಗಳು ಸೂಕ್ತವಾದ ವ್ಯಾಖ್ಯೆ ನೀಡಲು ಪ್ರಯತ್ನಿಸಿದ್ದಾರೆ.

ಶಿಕ್ಷಣ ವಿಜ್ಞಾನಕೋಶದ ಪ್ರಕಾರ "ಸೃಜನಶೀಲತೆ ಎಲ್ಲಾ ಆರೋಗ್ಯವಂತ ವ್ಯಕ್ತಿಗಳು ವಿವಿಧ ಮಟ್ಟಗಳಲ್ಲಿ ಹೊಂದಿರುವ ಸಾಮರ್ಥ್ಯವಾಗಿದೆ." ಎಲ್ಲಾ ವ್ಯಕ್ತಿಗಳು ವಿವಿಧ ಮಟ್ಟದ ಸೃಜನಾತ್ಮಕ ಚಿಂತನೆ ಹೊಂದಿರುತ್ತಾರೆ. ಸೃಜನಾತ್ಮಕ ಚಿಂತನೆಯೆಂದರೆ" ಒಂದು ಸನ್ನಿವೇಶದಲ್ಲಿ ವ್ಯಕ್ತಿಯ ಊಹೆಗಳು ಮತ್ತು ತೀರ್ಮಾನಗಳು ಹೊಸದಾಗಿರುತ್ತವೆ, ಮೌಲಿಕವಾಗಿರುತ್ತವೆ, ಯುಕ್ತವಾಗಿರುತ್ತವೆ ಮತ್ತು ಅಸಾಮಾನ್ಯವಾಗಿರುತ್ತವೆ". ಸೃಜನಶೀಲ ಚಿಂತಕನೆಂದರೆ ಹೊಸ ಕ್ಷೇತ್ರಗಳನ್ನು ಅನ್ವೇಷಿಸುವವನು, ಹೊಸ ವೀಕ್ಷಣೆ ಮಾಡುವವನು, ಹೊಸ ಊಹೆಗಳನ್ನು ಮಾಡುವವನು ಮತ್ತು ಹೊಸ ತೀರ್ಮಾನಗಳನ್ನು ಕೈಗೊಳ್ಳುವಂತಹ ವ್ಯಕ್ತಿಯಾಗಿದ್ದಾನೆ." ಹೀಗೆಂದು ಸುಪ್ರಸಿದ್ಧ ಮನೋವಿಜ್ಞಾನಿ **CHARLES E.SKINNER** ಹೇಳಿದ್ದಾರೆ. ಸೃಜನಶೀಲತೆಯ ಲಕ್ಷಣಗಳನ್ನು **RALF J. HALLMAN-(Psychologist, Associate Professor of Philosophy, California) & P.W..JACKSON- (Education Scholar, Psychologist)**ರವರು ಗುರುತಿಸಿದ್ದಾರೆ. ಹಾಲ್ಮನ್ ರವರು ಸೃಜನಶೀಲತೆಯು ಒಂದು ಸಂಬಂಧ, ಸ್ವಂತಿಕೆ, ಅತಾರ್ಕಿಕ, ಆತ್ಮಸಿದ್ಧಿ ಮತ್ತು ವಿಶಾಲ ಮನೋಭಾವಗಳೆಂಬ ಐದು ಗುಣಲಕ್ಷಣಗಳನ್ನು ಗುರುತಿಸಿದ್ದಾರೆ. ಜಾಕ್ಸನ್ ರವರು ನಾಲ್ಕು ಸೃಜನಾತ್ಮಕತೆಯ ಗುಣಲಕ್ಷಣಗಳನ್ನು ಗುರುತಿಸಿದ್ದಾರೆ. ಅವುಗಳು: ಸೃಜನಶೀಲತೆಯು ಒಂದು ಅಸಾಮಾನ್ಯತೆ, ಸೂಕ್ತತೆ, ರೂಪಾಂತರ ಮತ್ತು ಸಂಕ್ಷೇಪಿಸುವಿಕೆ.[7]

**In the article "Art, Creativity and Quality of Education"- HENRY MURRAY, American Psychologist and Educator, has beautifully portrayed thus "Creativity requires intuitive sensing, imaginative positing, playful manipulation, waiting, watching, being open to the unexpected allowing and taking advantage of happy accidents, coping with risk, confusion and anxiety, being able to relinquish old patterns to synthesize the new, the better the more meaningful-better gestalt."**

7. Chauhan S.S., "**Advanced Educational Psychology**"-Vikas publishing House, Newdelhi, (1983).

ಸೃಜನಶೀಲ ಕಿಶೋರರಲ್ಲಿ **EMANUEL HAMMER-(Psychologist, West Chicago.)** ಕಂಡ ಗುಣಗಳೆಂದರೆ: ಆಳವಾದ ಭಾವನೆಗಳು, ಸ್ವಂತಿಕೆ, ನಿರ್ಧಾರ ಮತ್ತು ಹೆಬ್ಬಯಕೆ, ಅವಲೋಕಿಸುವ ಪಾತ್ರದ ಆಯ್ಕೆ, ಪುರುಷ ಮತ್ತು ಸ್ತ್ರೀ ಪತ್ರಾಂಶಗಳು, ಸಮನ್ವಯೀಕರಣ ಹೆಚ್ಚಿನ ಸ್ವಾಯತ್ತತೆ, ಬಂಡಾಯ ಪ್ರವೃತ್ತಿ, ಸ್ವಯಂ ಪ್ರಜ್ಞೆ, ಸ್ವಯಂ ಅಭಿವ್ಯಕ್ತೀಕರಣ, ಹೆಚ್ಚಿನ ತಾಳ್ಮೆ, ಭಾವನಾತ್ಮಕ ಅಭಿವ್ಯಕ್ತಿ.[8]

**Despite common curriculum examination and teaching students blossom out in myriad forms. Individuality must be respected and fostered. One of the powerful needs according to Maslow, "is the need for self actualisation". Creativity enables one to reach the summit or peak of self actualisation off and on.**

**Wallas identifies the four steps in creative thinking: preparation, incubation, illumination, revision.[9]**

**ಸೃಜನಾತ್ಮಕ ಆಲೋಚನೆಯಲ್ಲಿ ನಾಲ್ಕು ಹಂತಗಳಿವೆ. ಅವುಗಳೆಂದರೆ:**

1. **ಸಿದ್ಧತೆಯ ಹಂತ.**

ಈ ಹಂತದಲ್ಲಿ ಸಮಸ್ಯಾ ಪರಿಹಾರಕ್ಕೆ ಅವಶ್ಯಕವಾದ ಮಾಹಿತಿ ಸಂಗ್ರಹಣೆ ನಡೆಯುತ್ತದೆ. ಸಮಸ್ಯಾ ಪರಿಹಾರಕ್ಕೆ ಬೇಕಾದ ತಥ್ಯಾಂಶಗಳು, ತತ್ವಗಳು ಮತ್ತು ಸಾಮಾನ್ಯೀಕರಣಗಳನ್ನು ಕಲಿಯಲಾಗುತ್ತದೆ. ಸಂಗ್ರಹಿತ ಸಾಮಗ್ರಿಯನ್ನು ವಿಶ್ಲೇಷಿಸಿ, ವ್ಯವಸ್ಥೆಗೊಳಿಸುವ ತರಬೇತಿ ಪಡೆಯಲಾಗುತ್ತದೆ. ಸಮಸ್ಯಾ ಪರಿಹಾರದ ವಿಧಾನಗಳನ್ನು, ತಂತ್ರಗಳನ್ನು ಕಲಿಯಲಾಗುತ್ತದೆ. ನಾವು ಪಡೆಯುವ ದೀರ್ಘಕಾಲದ ಶಿಕ್ಷಣ, ವಿಶೇಷವಾದ ತರಬೇತಿಯನ್ನು ಪಡೆಯುವುದು ಸೃಜನಾತ್ಮಕ ರೀತಿಯಲ್ಲಿ ಸಮಸ್ಯಾ ಪರಿಹಾರವನ್ನು ಮಾಡುವ ಕಲಿಕೆಯ ಪೂರ್ವ ಸಿದ್ಧತೆಯೇ ಆಗಿದೆ.

2. **ಸುಪ್ತ ಚಿಂತನೆ.**

ಈ ಹಂತದಲ್ಲಿ ಪ್ರಸ್ತುತ ಸಮಸ್ಯೆಗೆ ಸಂಬಂಧಪಟ್ಟಂತೆ ಯೋಚಿಸುವುದನ್ನು ನಿಲ್ಲಿಸಿಬಿಡಬಹುದು ಅಥವಾ ಬೇರೆ ಯಾವುದೇ ಸಂಬಂಧ ಪಡೆದ ಚಟುವಟಿಕೆಯಲ್ಲಿ ಭಾಗವಹಿಸಬಹುದು. ಹೊರನೋಟಕ್ಕೆ ಹೀಗಿದ್ದರೂ ವಾಸ್ತವದಲ್ಲಿ ಈ ಹಂತದಲ್ಲಿ ಸಮಸ್ಯಾ ಪರಿಹಾರದ ದಿಸೆಯಲ್ಲಿ ಸಾಕಷ್ಟು ಪ್ರಗತಿ ಉಂಟಾಗುತ್ತದೆ. ವಿಚಾರಗಳು

---

8. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 3, ಪು–139–142..(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
9. Getzel and Jackson, "Creativity and intelligence", Newyork, Wiley(1962).

ಅವಚೇತನ ಮಟ್ಟದಲ್ಲಿ ತಮಗೆ ತಾವೇ ವ್ಯವಸ್ಥಿತಗೊಂಡು ಸಮಸ್ಯೆಯ ಪರಿಹಾರವು ಉದ್ಭವಿಸುವುದಕ್ಕೆ ಸಿದ್ಧವಾಗುತ್ತದೆ.

**3. ವಿಚಾರ ಸರಣಿ /ಜ್ಞಾನೋದಯ.**

ಈ ಹಂತದಲ್ಲಿ ಪರಿಹಾರವು ಆರ್ಕಿಮಿಡಿಸನಿಗೆ ಹೊಳೆದಂತೆ ಇದ್ದಕ್ಕಿದ್ದಂತೆ ಹೊಳೆಯಬಹುದು. ಆಲೋಚಕ ತನ್ನ ಸಮಸ್ಯೆಯ ಬಗ್ಗೆ ಒಳನೋಟವನ್ನು ಪಡೆಯಬಹುದು.

**4. ಸಮರ್ಥನೀಯ ಮತ್ತು ಪರಿಷ್ಕರಣದ ಹಂತ.**

ಈ ಹಂತದಲ್ಲಿ ಸಮಸ್ಯೆಯ ಪರಿಹಾರವನ್ನು ತಾಳೆ ನೋಡಲಾಗುವುದು. ಅದರಲ್ಲಿ ಲೋಪದೋಷಗಳು ಕಂಡುಬಂದಂರೆ ಅವುಗಳನ್ನು ನಿವಾರಿಸಿ, ಪರಿಷ್ಕರಿಸಿ, ಅದಕ್ಕೊಂದು ಸರಿಯಾದ ರೂಪ ಬರುವಂತೆ ಪ್ರಕಟಿಸಲಾಗುವುದು.

ಸೃಜನಾತ್ಮಕ ಸಾಮರ್ಥ್ಯಗಳ ಬೆಳವಣಿಗೆಯಲ್ಲಿ ಶಿಕ್ಷಣ ಪ್ರಮುಖ ಪಾತ್ರ ವಹಿಸುತ್ತದೆ. ಸೃಜನಾತ್ಮಕ ಶಕ್ತಿಗಳು ಪರಿಣಾಮಕಾರಿಯಾಗಿ ಹೊರಹೊಮ್ಮಬೇಕಾದರೆ ಅದಕ್ಕಿರುವ ಅಡ್ಡಿ ಆತಂಕಗಳನ್ನು ಶಿಕ್ಷಣದ ಮೂಲಕ ತೊಡೆದು ಹಾಕಬೇಕು. ಮಕ್ಕಳಲ್ಲಿ ಸೃಜನಶೀಲತೆಯನ್ನು ಬೆಳೆಸಬೇಕಾದರೆ ಶಿಕ್ಷಣ ಸ್ವತಂತ್ರ ಆಧಾರಿತವಾಗಬೇಕು ಅಥವಾ ಮುಕ್ತವಾಗಿರಬೇಕು. ಮಾರ್ಗದರ್ಶನ, ಕಲಿಕಾ ಪ್ರಕ್ರಿಯೆಗಳ ಮೂಲಕ ಸೃಜನಶೀಲತೆಯನ್ನು ಬೆಳೆಸಬಹುದು ಮತ್ತು ಪ್ರೋತ್ಸಾಹಿಸಬಹುದು ಎಂಬ ವಿಚಾರ ಶಿಕ್ಷಣ ತಜ್ಞರಿಗೆ ಮತ್ತು ಶಿಕ್ಷಕರಿಗೆ ತಿಳಿದಿರಬೇಕು. ಸೃಜನಾತ್ಮಕ ಪ್ರತಿಭೆಯನ್ನು ಅಭಿವೃದ್ಧಿಗೊಳಿಸಲು ತರಗತಿಯಲ್ಲಿ ಏನೆಲ್ಲಾ ಕ್ರಮಗಳನ್ನು ಕೈಗೊಳ್ಳಬಹುದು ಎಂಬ ಬಗ್ಗೆ ಕೆಲವು ಮುಖ್ಯ ವಿಚಾರಗಳನ್ನು ಪಟ್ಟಿ ಮಾಡಬಹುದು.[10]

**1. ತರಗತಿಯಲ್ಲಿ ಉತ್ತಮ ವಾತಾವರಣವನ್ನುಂಟುಮಾಡುವುದು.**

**2. ಮಕ್ಕಳು ತೋರಿಸುವ ಸಾಧನೆಗಳನ್ನು ಮುಕ್ತಕಂಠದಿಂದ ಪ್ರಶಂಸೆ ಮಾಡುವುದು.**

**3. ತನ್ನ ಸೃಜನಾತ್ಮಕ ಸಾಮರ್ಥ್ಯಗಳನ್ನು ಅಭಿವ್ಯಕ್ತಗೊಳಿಸಲು ಸರಿಯಾದ ಮಾಧ್ಯಮವನ್ನು ಆಯ್ಕೆ.**

**ಮಾಡಿಕೊಳ್ಳಲು ಮಗುವಿಗೆ ಸಹಾಯ ಮಾಡುವುದು.**

---

10. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 3, ಪು–143. ಮ(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

**4. ಸೂಕ್ತವಾದ ಅಭಿವ್ಯಕ್ತಿಯ ಮಾಧ್ಯಮವನ್ನು ಆಯ್ಕೆ ಮಾಡುವಾಗ ಆಯಾ ಮಗುವಿನ ಅಭಿರುಚಿಯನ್ನು ಗಮನಕ್ಕೆ ತಂದುಕೊಳ್ಳುವುದು.**

**5. ಸೃಜನಶೀಲ ಮಕ್ಕಳನ್ನು ಸರಿಯಾದ ರೀತಿಯಲ್ಲಿ ಮಾರ್ಗದರ್ಶನಮಾಡುವುದು ಅವಶ್ಯಕ.**

**6. ಅವರ ಚಟುವಟಿಕೆಗಳಿಗಾಗಿ ವೇಳಾಪಟ್ಟಿಯಲ್ಲಿ ಸ್ವಲ್ಪ ವೇಳೆಯನ್ನು ನಿಗದಿಪಡಿಸುವುದು ಉತ್ತಮ.**

**7. ಮಕ್ಕಳು ಅನುಭವಿಸಬಹುದಾದ ಅನುಭವಗಳಿಗೆ ಯಾವುದೇ ವಿಧವಾದ ಧಕ್ಕೆ ಉಂಟುಮಾಡದಿರುವುದು.**

**8. ಕಲಿತ ನಿಯಮಗಳನ್ನು ಅಪೂರ್ವ ಪರಿಸ್ಥಿತಿಗಳಲ್ಲಿ ಅನ್ವಯಿಸುವಂತೆ ಪ್ರೋತ್ಸಾಹಿಸುವುದು.**

**9. ಸ್ವಪ್ರೇರಿತ ಕಲಿಕೆಗೆ ಅವಕಾಶಗಳನ್ನು ಕಲ್ಪಿಸುವುದು.**

**10. ಅಧ್ಯಾಪಕರು ಬೋಧಿಸುವ ವಿಷಯವನ್ನು ಸೃಜನಾತ್ಮಕ ರೀತಿಯಲ್ಲಿ ಬೋಧಿಸುವುದು.**

**11. ಬೇರೆ ಬೇರೆ ದಿಕ್ಕುಗಳಲ್ಲಿ ಯೋಚಿಸುವಂತೆ ಮಕ್ಕಳನ್ನು ಪ್ರೋತ್ಸಾಹಿಸುವುದು.**

ಮೇಲಿನ ಮುಖ್ಯಾಂಶಗಳನ್ನು ಪಂಚತಂತ್ರ ನೀತಿಕಥೆಗಳಿಗೆ ಒರೆಹಚ್ಚಿ ಪರಿಶೀಲಿಸಿದರೆ, ಅತ್ಯಂತ ವ್ಯವಸ್ಥಿತವಾಗಿ ವಿಷ್ಣುಶರ್ಮರು ರಾಜಕುಮಾರರಿಗೆ ತಮ್ಮ ಆಶ್ರಮದಲ್ಲಿ ಉತ್ತಮ ವಾತಾವರಣವನ್ನು ಒದಗಿಸಿ, ಕಥಾನಿರೂಪಣೆ ಮಾಡುತ್ತಾ, ಮಧ್ಯೆಮಧ್ಯೆ ಕೆಲವು ಅಭಿಪ್ರಾಯ ಪ್ರಚೋದಕ ಪ್ರಶ್ನೆಗಳನ್ನು ಕೇಳುತ್ತಾ, ವಿಚಾರಗಳನ್ನು ಆಲೋಚಿಸಲು ಅವಕಾಶ ಕಲ್ಪಿಸಿ, ಸಂಪೂರ್ಣ ಸ್ವಾತಂತ್ರ್ಯ ಕೊಟ್ಟು, ರಾಜಕುಮಾರರು ಯೋಚಿಸಿ ಉತ್ತರಿಸಿದ್ದನ್ನು ಪ್ರಶಂಸಿಸುತ್ತಾ, ಒಂದು ವೇಳೆ ತಪ್ಪಾದರೆ ಬಹಳ ಬುದ್ಧಿವಂತಿಕೆಯಿಂದ ಅವರ ಅಭಿಪ್ರಾಯಗಳನ್ನು ಸರಿಪಡಿಸುತ್ತಿದ್ದರು. ಅವರ ಸೃಜನಾತ್ಮಕ ಸಾಮರ್ಥ್ಯಗಳ ಬೆಳವಣಿಗೆಗೆ ಪ್ರೋತ್ಸಾಹಿಸಿ, ಸ್ವಯಂ ಇಚ್ಛಾಶಕ್ತಿಯಿಂದ ಹೊಸ ಹೊಸ ಆಲೋಚನೆಗಳನ್ನು ಮಾಡಲು ಪ್ರೇರೇಪಿಸುತ್ತಿದ್ದರು. ಒಂದು ಸುಭಾಷಿತ ಸೂಚಿಸುವಂತೆ:-

शनैःशनैर्विनीयन्ते तर्जनै स्तोषणैरपि ।

नवा इवाश्वाः कुशलैर्बालाश्चपलचेतसः ॥[11]

ಹೊಸ ಕುದುರೆಗಳನ್ನು ಪಳಗಿಸುವಂತೆ, ಚಪಲರಾದ ಬಾಲಕರನ್ನು ಕೆಲವು ವೇಳೆ ಮುದ್ದಿಸುವುದು, ಕೆಲವು ವೇಳೆ ಸಂತೋಷಗೊಳಿಸುವುದು - ಈ ಕ್ರಮದಿಂದ ಬುದ್ಧಿಶಾಲಿಗಳು ಪಳಗಿಸಬೇಕು. ಇದನ್ನೇ

11. श्रीहरिहरविरचितं हरिहरसुभाषितम् ೨-೪೦

ವಿಷ್ಣುಶರ್ಮರು ರಾಜನಂದನರಿಗೆ ಶಿಕ್ಷಣ ನೀಡಿ ರಾಜನೀತಿ ನಿಪುಣರನ್ನಾಗಿ ಪಳಗಿಸಿದ ಕ್ರಮವಾಗಿದೆ. ಶೈಕ್ಷಣಿಕ ಮನೋವಿಜ್ಞಾನದ ಕ್ರಮವೂ ಇದನ್ನೇ ಸೂಚಿಸುತ್ತದೆ. ಅಂದರೆ ಮಕ್ಕಳಿಗೆ ಕಲಿಸುವಾಗ ಪ್ರೀತಿಯಿಂದ, ಒಳ್ಳೆಯ ವಿಚಾರಗಳನ್ನು ಪ್ರಶಂಸಿಸುತ್ತಾ, ಹಾಗೆಯೇ ದೋಷಗಳನ್ನು ತಿದ್ದಿ ಬುದ್ಧಿಹೇಳುತ್ತಾ ಪ್ರೋತ್ಸಾಹಿಸಬೇಕು. ಕೆಲವೊಮ್ಮೆ ಆರೋಗ್ಯಕರ ಶಿಕ್ಷೆಯೂ ಇರಬೇಕು.

ಸೃಜನಾತ್ಮಕತೆಯ ಬೆಳವಣಿಗೆ ಹಾಗೂ ಪೋಷಣೆಯನ್ನು ಕುರಿತು ಅಮೆರಿಕದ ಪ್ರಖ್ಯಾತ ಮನೋವಿಜ್ಞಾನಿ – **J.P. GUILFORD** ರವರು ಹೇಳಿರುವ ಪ್ರಕಾರ ಸೃಜನಾತ್ಮಕ ಪೋಷಣೆ ಎಂದರೆ " ಒಬ್ಬ ವ್ಯಕ್ತಿಯಲ್ಲಿ ಹುದುಗಿರುವ ಸೃಜನಾತ್ಮಕ ಸಾಮರ್ಥ್ಯವನ್ನು ಪೋಷಿಸಿ ಅದನ್ನು ಅಭಿವೃದ್ಧಿಗೊಳಿಸುವುದಾಗಿದೆ."

ಅವರ ಪ್ರಕಾರ ನಮಗೆ ಚಿಂತನೆಯ ಸ್ವರೂಪದ ವ್ಯಾಪಕವಾದ ಪರಿಜ್ಞಾನದ ಅವಶ್ಯಕತೆ ಇದೆ. ಈ ಪರಿಜ್ಞಾನದ ಮೂಲಕ ನಮಗೆ ವಿದ್ಯಾರ್ಥಿಗಳನ್ನು ಚಿಂತನಶೀಲರನ್ನಾಗಿಸಲು ಹಾಗೂ ಚಿಂತನೆಯ ಮಾರ್ಗಗಳನ್ನು ಅವರಿಗೆ ವಿವರಿಸಲು ಬೋಧನೆಯಲ್ಲಿ ಕೈಗೊಳ್ಳಬೇಕಾದ ವಿಶಿಷ್ಟ ಕ್ರಮಗಳ ಜ್ಞಾನ ಉಂಟಾಗುತ್ತದೆ."

**CARL ROGERS** ಎಂಬ ಅಮೆರಿಕದ ಮನೋವಿಜ್ಞಾನಿ – **and among the founders of the humanistic approach in psychology-** ರಚನಾತ್ಮಕ ಸೃಜನಾತ್ಮಕತೆಗೆ ಕಾರಣೀಭೂತವೆನಿಸಿದ ಎರಡು ಮೂಲ ಕಾರಕಾಂಶಗಳನ್ನು ಗುರುತಿಸಿದ್ದಾರೆ. ಅವುಗಳು:[12]

1. **ಮನೋವೈಜ್ಞಾನಿಕ ಸುರಕ್ಷತೆ**.

ಮಗುವಿನ ವ್ಯಕ್ತಿತ್ವವು ಶ್ರೇಷ್ಠವಾದ ನೈಜ ಮೌಲ್ಯಗಳಿಂದ ಕೂಡಿದೆ ಎಂಬುದನ್ನು ಮನಗಂಡು ಆತನನ್ನು ಗೌರವಪೂರ್ವಕವಾಗಿ ಸ್ವೀಕರಿಸಿ ಮಾನ್ಯತೆ ನೀಡಬೇಕು. ವಿದ್ಯಾರ್ಥಿ ಕೆಲವು ನೈಜ, ವಾಸ್ತವಿಕವಾದ ಮೌಲ್ಯಗಳನ್ನು ಹುದುಗಿಸಿಕೊಂಡಿದ್ದಾನೆಂಬ ತಿಳುವಳಿಕೆಯನ್ನು ಶಿಕ್ಷಕನಾದವನು ಹೊಂದಿದ್ದು, ಆ ಮೌಲ್ಯಗಳ ಬಗ್ಗೆ ಗೌರವ ಭಾವನೆ ಹೊಂದಿರಬೇಕು. ಆತನ ವೈವಿಧ್ಯಮಯ ಚಿಂತನೆಗೆ ಅವಕಾಶ ಕೊಡಬೇಕು. ಒಟ್ಟಿನಲ್ಲಿ ವಿದ್ಯಾರ್ಥಿಗಳ ಭಾವನೆಗಳು, ಅನಿಸಿಕೆಗಳು, ಸ್ಮೃತಿ ಇತ್ಯಾದಿಗಳಿಗೆ ರಕ್ಷಣೆಯನ್ನು ಒದಗಿಸಬೇಕಾದುದು ಶಿಕ್ಷಕರ ಕರ್ತವ್ಯವಾಗಿದೆ.

---

12. **ಶೈಕ್ಷಣಿಕ ಮನೋವಿಜ್ಞಾನ**, ಸಂಗ್ರಹಿಸಿದ ಮ್ಯಾಗಜಿನ್ ಹಾಳೆಗಳು, ಸೃಜನಾತ್ಮಕತೆ, ಪು–168–173,

ಮುಕ್ತವಾದ ವಿವರಣೆ ಮೂಲಭೂತ ಸಾಮರ್ಥ್ಯಗಳ ಬೆಳವಣಿಗೆಗೆ ಕಾರಣೀಭೂತವಾದ ಅಂಶವೆನಿಸಿದೆ. ಇಲ್ಲಿ ಬಾಹ್ಯ ಮೌಲ್ಯಮಾಪನಕ್ಕೆ ಮಾರ್ಗದರ್ಶನ ರೂಪವಿರಬೇಕು. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಶಿಕ್ಷಕರು ಕೇವಲ ಬೋಧಿಸುವುದು ಮಾತ್ರ ತಮ್ಮ ಕರ್ತವ್ಯವೆಂದು ತಿಳಿದುಕೊಂಡಿದ್ದಾರೆ. ಇದರೊಂದಿಗೆ ವಿದ್ಯಾರ್ಥಿಗಳನ್ನು ಚೇತನಗೊಳಿಸುವುದು ಮತ್ತು ಪ್ರೋತ್ಸಾಹಿಸುವುದನ್ನೇ ಮರೆತಿದ್ದಾರೆ. ವಿದ್ಯಾರ್ಥಿಗಳ ಭಾವನೆ ಮತ್ತು ವರ್ತನೆಗಳನ್ನು ಆತನ ದೃಷ್ಟಿಕೋನದಿಂದಲೇ ಅರ್ಥೈಸಿಕೊಳ್ಳಬೇಕು. ಹಾಗೂ ಆತನ ಆಂತರಿಕ ಜಗತ್ತನ್ನು ಪ್ರವೇಶಿಸಿ ಅವನಿಗೆ ಗೋಚರವಾಗುವಂತಹ ಅಂಶಗಳನ್ನು ತಾವೂ ಸಹ ವೀಕ್ಷಣೆ ಮಾಡಬೇಕು. ಅಂದರೆ ಅವನು ಇದ್ದಂತೆಯೇ ಅವನನ್ನು ಅರ್ಥೈಸಿಕೊಳ್ಳಬೇಕು.

**2. ಮನೋವೈಜ್ಞಾನಿಕ ಸ್ವಾತಂತ್ರ್ಯ.**

ಅರ್ಥಪೂರ್ಣವಾಗಿ, ಸ್ಪಷ್ಟವಾಗಿ ಅಭಿವ್ಯಕ್ತಿಗೊಳಿಸುವ ಸ್ವಾತಂತ್ರ್ಯವನ್ನು ವಿದ್ಯಾರ್ಥಿಗಳಿಗೆ ಒದಗಿಸಿಕೊಡಬೇಕು. ವ್ಯಕ್ತಿಗೆ ಆಲೋಚಿಸಲು, ಭಾವನೆಗಳನ್ನು ಬೆಳೆಸಿಕೊಳ್ಳಲು ತನ್ನ ತನವನ್ನು ಕಾಪಾಡಿಕೊಳ್ಳಲು ಸಂಪೂರ್ಣ ಸ್ವಾತಂತ್ರ್ಯ ಒದಗಿಸಬೇಕು. ಇದು ಮುಕ್ತತೆಗೆ ಎಡೆಮಾಡಿಕೊಡುತ್ತದೆ. ಅಲ್ಲದೆ ಗ್ರಹಿಕೆಗಳು, ಪರಿಕಲ್ಪನೆಗಳು ಸ್ವಾಭಾವಿಕ ಬೆಳವಣಿಗೆಗೆ ಕಾರಣವಾಗುತ್ತವೆ ಹಾಗೂ ಅರ್ಥಗ್ರಹಣದ ಶಕ್ತಿಯನ್ನು ವೃದ್ಧಿಸುತ್ತವೆ. ಅವನ ಸಾಧನೆಯ ಫಲಕವನ್ನು ಹಾಗೂ ಆತನ ತಪ್ಪುಗಳಿಂದ ಉದ್ಭವಿಸುವ ಪರಿಣಾಮಗಳನ್ನು ಸಹಿಸಲು ಸಿದ್ಧರಾಗಬೇಕು. ಮೌಲ್ಯಮಾಪನ ಕಾರ್ಯವು ಮಗುವಿನಲ್ಲಿಯೇ ಕೇಂದ್ರೀಕೃತವಾಗಿರಬೇಕು. ಮೌಲ್ಯಮಾಪನ ಮಟ್ಟಕ್ಕೆ ಸಂಬಂಧಿಸಿದಂತೆ ಮಗು ಹೊಣೆಗಾರನಾಗಿರಬೇಕು.

ಜೆ.ಜಿ. ಮೌಲಿಯವರು ಹೇಳುವಂತೆ ಸೃಜನಾತ್ಮಕತೆಯನ್ನು ವರ್ಧಿಸುವ ಪ್ರಮುಖವಾದ ಒಂದೇ ಕಾರಕವೆಂದರೆ ಮಾನಸಿಕ ಸ್ವಾತಂತ್ರ್ಯವನ್ನು ಒದಗಿಸುವ ವಾತಾವರಣವನ್ನು ಕಲ್ಪಿಸುವುದು. ಇದಕ್ಕನುಸಾರವಾಗಿ ಮಾನವೀಯ ಘನತೆ, ಒತ್ತಡದಿಂದ ಸ್ವಾತಂತ್ರ್ಯ ಹಾಗೂ ಸ್ವಯಂ ಪ್ರೇರಿತ ಚಟುವಟಿಕೆಗಳಿಗೆ ಪ್ರೋತ್ಸಾಹ ಹಾಗೂ ಅವಕಾಶಗಳಿಗೆ ಅನುಕೂಲಕರವಾದ ವಾತಾವರಣವನ್ನು ಕಲ್ಪಿಸಬೇಕು.

**HENRY MURRAY-(American Psychologist)** ಪ್ರಕಾರ ಮಕ್ಕಳ ಆಗತ್ಯತೆಯತ್ತ ಹೆಚ್ಚಿನ ಅವಧಾನ ಕೇಂದ್ರೀಕರಿಸುವುದು ಹಾಗೂ ಶಿಕ್ಷಕ–ವಿದ್ಯಾರ್ಥಿಗಳ ನಡುವಿನ ಮಾನಸಿಕ ದೂರವನ್ನು ಪ್ರೋತ್ಸಾಹಿಸಿ ಪೋಷಿಸುವುದರಿಂದ ಸೃಜನಾತ್ಮಕ ಅಭಿವೃದ್ಧಿಗೆ ಅವಶ್ಯಕವಾದಂತಹ ಸೂಕ್ತ ಆದರ್ಶ ಸನ್ನಿವೇಶವನ್ನು ಕಲ್ಪಿಸಬಹುದಾಗಿದೆ.

ಯಾವುದೇ ನಿರ್ದಿಷ್ಟ ನಿಯಮಗಳಾಗಲೀ ಅಥವಾ ವಿಧಾನಗಳಾಗಲೀ ಸೃಜನಶೀಲತೆಯನ್ನು ಅಭಿವೃದ್ಧಿ ಗೊಳಿಸುವಂತೆ ಕಂಡುಬರುವುದಿಲ್ಲ. ಅದೇನಿದ್ದರೂ ಕಲಿಯುವ ವ್ಯಕ್ತಿಯ ಸ್ವರೂಪ, ಅವನ ಪರಿಪಕ್ವತೆಯ ಮಟ್ಟ, ಬೋಧನೆ ಮತ್ತು ಮಾರ್ಗದರ್ಶನಕ್ಕೆ ಸಿಗುವ ಸಮಯ, ಅವಕಾಶ ಮತ್ತು ಶಿಕ್ಷಕರ ಸಾಮರ್ಥ್ಯದ ಮೇಲೆ ಅವಲಂಭಿಸಿದೆ.ಸೃಜನಶೀಲ ಸಾಮರ್ಥ್ಯ ಮತ್ತು ಚಿಂತನೆಗಳನ್ನು ಅಭಿವೃದ್ಧಿಪಡಿಸಲು ಬಳಸಬಹುದಾದ ಕ್ರಮಗಳನ್ನು ವಿವೇಚನೆಯಿಂದ ನಿರ್ದಿಷ್ಟ ಗುರಿ ಮತ್ತು ಉದ್ದೇಶಗಳಗನುಗುಣವಾಗಿ ಶಿಕ್ಷಕನು ತನ್ನ ವಿದ್ಯಾರ್ಥಿಗಳಲ್ಲಿ ರಚನಾತ್ಮಕ ವಿಮರ್ಶಾ ಕೌಶಲವನ್ನು ಬೆಳೆಸಬೇಕು. ಅವರಲ್ಲಿ ಗುರ್ತಿಸಬಹುದಾದ ಸೃಜನಶೀಲ ಸಾಮರ್ಥ್ಯಗಳ ಬಗ್ಗೆ ಮಕ್ಕಳೊಡನೆ ಚರ್ಚಿಸಿ ಪ್ರೋತ್ಸಾಹಿಸಬೇಕು. ಈ ಕಾರ್ಯವನ್ನು ಪಂಚತಂತ್ರ ಕಥೆಗಳಲ್ಲಿ ಬಹಳ ಅಚ್ಚುಕಟ್ಟಾಗಿ ಇದೆಲ್ಲ ವಿಚಾರಗಳ ಬಗ್ಗೆ ಗಮನಹರಿಸಿ ಉತ್ತಮ ಪ್ರೋತ್ಸಾಹ ನೀಡಿದ್ದಾರೆ. ರಾಜಕುಮಾರರನ್ನು ಅವರ ಸ್ವಂತ ಅನುಭವದ ಹೊರಗೆ ದೃಷ್ಟಿ ಹರಿಸುವಂತೆ ಹಾಗೂ ಸಹಜ ಅಥವಾ ಆದರ್ಶಕ್ಕಿಂತ ಭಿನ್ನವಾದ ದೃಷ್ಟಿಕೋನದಿಂದ ವಿಷಯಗಳನ್ನು ನೋಡಲು ಪ್ರೋತ್ಸಾಹಿಸಿದ್ದಾರೆ. ರಾಜಕುಮಾರರು ಸೃಜನಾತ್ಮಕ ದೃಷ್ಟಿಯಿಂದ ಭವಿಷ್ಯದ ಸಮಸ್ಯೆಗಳನ್ನು ಊಹಿಸುವ ಹಾಗೂ ಸಮಸ್ಯೆಗಳನ್ನು ಎದುರಿಸುವ ಸಾಮರ್ಥ್ಯವನ್ನು ಉತ್ತೇಜಿಸಿ, ವೈಜ್ಞಾನಿಕ ವಿಚಾರಶೀಲತೆಯನ್ನು ಬೆಳೆಸಿ ಹೊಸ ವಿಚಾರಗಳೊಡನೆ ಪ್ರಯೋಗ ಕೈಗೊಳ್ಳಲು ಪೂರ್ಣ ಸ್ವಾತಂತ್ರ್ಯವನ್ನು ಒದಗಿಸಿದ್ದಾರೆ.



# 5 – 2. ವ್ಯಕ್ತಿತ್ವ – ವ್ಯಕ್ತಿತ್ವ ವಿಕಾಸ

## ಅರ್ಥ ಮತ್ತು ವ್ಯಾಖ್ಯೆ

**"ವ್ಯಕ್ತಿತ್ವ"** ಎಂಬುದು ಅನೇಕ ಶಕ್ತಿಗಳ ಸಂಗಮ. ಆದರ್ಶ, ಸದಾಚಾರ, ಶ್ರದ್ಧೆ, ನಿಷ್ಠೆ, ದಕ್ಷತೆ ಎಚ್ಚರ, ಸನ್ನಿವೇಶಗಳೊಡನೆ ಹೊಂದಿಕೊಳ್ಳುವ ಸಾಮರ್ಥ್ಯ, ವೃತ್ತಿಪ್ರಿಯತೆ, ಪರೋಪಕಾರ ಬುದ್ಧಿ, ಪ್ರಾಮಾಣಿಕತೆ ಮುಂತಾದ ಗುಣಗಳು ವ್ಯಕ್ತಿತ್ವ ನಿರ್ಮಿಸುವ ಶಕ್ತಿಗಳು.

ಮೂಲತಃ ಆಂಗ್ಲಭಾಷೆಯ **"ಪರ್ಸನಾಲಿಟಿ"** ಎಂಬ ಪದ ಲ್ಯಾಟಿನ್ ಭಾಷೆಯ **'ಪರ್ಸೋನಾ'** ಎಂಬ ಪದದಿಂದ ಬಂದಿದೆ. ಇದರ ಅರ್ಥ ಮುಖವಾಡ. ಗ್ರೀಕ್ ಥಿಯೇಟರ್‌ಗಳಲ್ಲಿ ನಾಟಕದಲ್ಲಿ ಅಭಿನಯಿಸುವ ಪಾತ್ರಧಾರಿಗಳು ಮುಖವಾಡ ಧರಿಸುತ್ತಿದ್ದರು. ಇದರ ಮೂಲಕ ಪಾತ್ರಧಾರಿಗಳು ಜನಗಳ ಮೇಲೆ ಬೀರುತ್ತಿದ್ದ ಪ್ರಭಾವವನ್ನು ವ್ಯಕ್ತಿತ್ವ ಎಂದು ಕರೆಯುತ್ತಿದ್ದರು.[13] ಮನುಷ್ಯನು ಸಮಾಜದಲ್ಲಿ ಗೌರವದಿಂದ ಬಾಳಲು ಉತ್ತಮ ವ್ಯಕ್ತಿತ್ವ ಹೊಂದಿರಬೇಕು. ಒಂದು ಪ್ರಸಿದ್ಧ ಸುಭಾಷಿತ ಹೇಳುವಂತೆ ಗೌರವ ಸೂಚಿ **"ವಕಾರ ಪಂಚಕಗಳು"**:–

वस्त्रेण वपुषा वाचा विद्यया विनयेन च ।

वकारैः पञ्चभिर्हिनो नरो नायाति गौरवम् ॥[14]

ಅಂದರೆ, **"ವಸ್ತ್ರ, ವಪು(ಶರೀರ), ವಾಕ್, ವಿದ್ಯೆ, ವಿನಯ ಈ ಐದು ವಕಾರಗಳಿಲ್ಲದ ಮನುಷ್ಯನು ಗೌರವಕ್ಕೆ ಅರ್ಹನಾಗಲಾರನು."** ಈ ಪಂಚಸೂತ್ರಗಳನ್ನು ಪಾಲಿಸಿದ ವ್ಯಕ್ತಿ ಸಮಾಜದಲ್ಲಿ ಗೌರವಾನ್ವಿತನಾಗಿ ಬಾಳಬಲ್ಲ.

ಜನಸಾಮಾನ್ಯದಲ್ಲಿ ವ್ಯಕ್ತಿತ್ವದ ಅರ್ಥ ಹೇಳುವುದಾದರೆ, ವ್ಯಕ್ತಿತ್ವ ಎಂಬ ಪದ ಬಹಳ ಕಾಲದಿಂದಲೂ ಬಳಕೆಯಲ್ಲಿದ್ದರೂ ಒಬ್ಬೊಬ್ಬರೂ ಒಂದೊಂದು ಅರ್ಥ ಕಲ್ಪಿಸುವರು. ಒಬ್ಬರು ಅಂಗರಚನೆಯೇ ಮೊದಲಾದ ದೈಹಿಕ ಸ್ವರೂಪಕ್ಕೆ ಆ ಪದವನ್ನು ಬಳಸಿದರೆ ಮತ್ತೊಬ್ಬರು ಬಟ್ಟೆಬರೆ, ಉಡಿಗೆತೊಡಿಗೆಗಳಿಗೆ ಅದನ್ನು ಬಳಸುವರು. ಕೆಲವರು ಅವರ ಗುಣಶೀಲಗಳಿಗೆ ಆ ಪದವನ್ನು ಬಳಸಿದರೆ ಮತ್ತೆ ಕೆಲವರು ಅವರ ಪ್ರತಿಭಾಶಕ್ತಿಗೆ ಬಳಸುವರು. ಕೆಲವರು ಅವರ ಸಮಗ್ರ ಪ್ರಭಾವಕ್ಕೆ ಬಳಸಿದರೆ ಇನ್ನು ಕೆಲವರು ಯಾವುದೋ ಒಂದು ವಿಶಿಷ್ಟಾಂಶಕ್ಕೆ ಅದನ್ನು ಬಳಸುವರು. ಆದರೂ, ಶಾಸ್ತ್ರೀಯವಾಗಿ ಅರ್ಥ ಹೇಳುವಾಗ ಅವೆಲ್ಲವನ್ನೂ ಪರಿಗಣಿಸಬೇಕಾಗುತ್ತದೆ."

---

13. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 8, ಪು–303.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
14. **ಭಟ್.ವಿ ಎನ್,** ಜ್ಞಾನದೀಪ, ಅ–91, ಪು–178, ಸುಭಾಷಿತ, ವಿಶ್ವನಾಥ ಪ್ರಕಾಶನ,(1997) ಜ್ಞಾನದೀಪ,ಸಹ್ಯಾದ್ರಿನಗರ, ಶಿವಮೊಗ್ಗ –577201.

ವ್ಯಕ್ತಿಯ ಸ್ವಭಾವಾದಿ ಸಮಗ್ರ ಗುಣಸ್ವರೂಪಕ್ಕೆ ಆ ಪದವನ್ನು ಬಳಸಬೇಕಾಗುತ್ತದೆ.[15]

ಈಗ ಇದರ ಅರ್ಥದ ವ್ಯಾಪ್ತಿ ವಿಶಾಲವಾಗಿದ್ದು, ವ್ಯಕ್ತಿತ್ವ ಮನೋವಿಜ್ಞಾನವು **FRAACIS GALTON-(An English Polymath: Sociologist, Psychologist, Anthropologist)** ಮತ್ತು **SIGMUND FREUD- (Austrian Neurologist, Founder of Psychoanalysis)**ರವರ ಕಾಲದ ನಂತರ ವ್ಯವಸ್ಥಿತ ರೂಪ ಪಡೆಯಿತು. ಈಗ ಇದರ ಅರ್ಥ ನಿಜಸ್ವರೂಪವನ್ನು ಮರೆಮಾಚಿದ ಬಾಹ್ಯ ಆಕಾರಕ್ಕೆ ಮಾತ್ರ ಸೀಮಿತವಾಗಿಲ್ಲ. ವ್ಯಕ್ತಿ ತನ್ನ ನಡೆನುಡಿ ಹಾಗೂ ಕ್ರಿಯೆಗಳ ಮೂಲಕ ವ್ಯಕ್ತಪಡಿಸುವ ಸಂಪೂರ್ಣ ವರ್ತನೆಯ ಮೊತ್ತವನ್ನು ವ್ಯಕ್ತಿತ್ವ ಎನ್ನಲಾಗಿದೆ.

ವ್ಯಕ್ತಿತ್ವದ ಬಗ್ಗೆ ಹಲವಾರು ಮನೋವಿಜ್ಞಾನಿಗಳು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯೆಗಳನ್ನುನೀಡಿರುತ್ತಾರೆ.

**"ವ್ಯಕ್ತಿಯ ವ್ಯಕ್ತಿತ್ವವೆಂದರೆ ಅವನಲ್ಲಿರುವ ವಿಶೇಷ ಸ್ಥಿರಗುಣಗಳ ಸ್ವರೂಪ, ಸ್ಥಿರಗುಣವೆಂದರೆ ಅದು ಆ ವ್ಯಕ್ತಿಯನ್ನು ಇನ್ನೊಬ್ಬ ವ್ಯಕ್ತಿಯಿಂದ ಬೇರ್ಪಡಿಸುವಂತಹ ಮತ್ತು ಅವನಲ್ಲಿ ಬಹಳ ಕಾಲ ನೆಲಸಿರುವಂತಹ ಗುಣ."** ಎಂದು **J.P.GUILFORD-(American Psychologist)**ರವರು ವ್ಯಾಖ್ಯಾನಿಸಿರುತ್ತಾರೆ.

ಒಬ್ಬ ವ್ಯಕ್ತಿಯಲ್ಲಿ ಇತರರಿಗಿಂತ ಭಿನ್ನವಾಗಿ ಸಮನ್ವಯಗೊಂಡು ವ್ಯವಸ್ಥಿತವಾಗಿರುವ **"ಜ್ಞಾನಾತ್ಮಕ, ಸಂವೇಗಾತ್ಮಕ, ಚಲನಾತ್ಮಕ ಹಾಗೂ ದೈಹಿಕ ಗುಣಲಕ್ಷಣಗಳೇ ವ್ಯಕ್ತಿತ್ವ"** ಹೀಗೆಂದು "**WARENCE**" ಶಬ್ದ ಕೋಶದಲ್ಲಿ ಹೀಗೆ ಹೇಳಿದೆ. **"ವ್ಯಕ್ತಿ ಪರಿಸರದೊಂದಿಗೆ ತನ್ನದೇ ಆದ ವಿಶಿಷ್ಟ ಹೊಂದಾಣಿಕೆ ಮಾಡಿಕೊಳ್ಳಲು ಅಗತ್ಯವಾದ ಮನೋ – ದೈಹಿಕ ಅಂಶಗಳ ವಿಶಿಷ್ಟ ಸಂಘಟನೆಯೇ ವ್ಯಕ್ತಿತ್ವ."** ಎಂದು **ALL PORT** ವ್ಯಾಖ್ಯಾನಿಸಿದ್ದಾರೆ.

**HANS EYSENCK-(German born British Psychologist)**ರವರು ಹೀಗೆ ಹೇಳಿದ್ದಾರೆ– "ವ್ಯಕ್ತಿಯು ತನ್ನ ಪರಿಸರದೊಂದಿಗೆ ಸಾಧಿಸುವ ವಿಶಿಷ್ಟ ರೀತಿಯ ಹೊಂದಾಣಿಕೆಯಲ್ಲಿ ನಿರ್ಧರಿಸುವಂತಹ ಆತನ ನಡತೆ, ಸ್ವಭಾವ, ಬುದ್ಧಿಶಕ್ತಿ ಮತ್ತು ದೇಹದಾರ್ಢ್ಯ ಮೊದಲಾದ ಗುಣಗಳ ಸಾಪೇಕ್ಷ ಹಾಗೂ ಹೆಚ್ಚು ಕಡಿಮೆ ಸ್ಥಿರವಾದ ಸಂಘಟನೆಯೇ ವ್ಯಕ್ತಿತ್ವ."[16]

---

15. **ವೀರಪ್ಪ. ಎನ್.ಎಸ್**. ಶೈಕ್ಷಣಿಕ ಮನೋವಿಜ್ಞಾನ, ಅ–17, ಪು–458.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ ಮೈಸೂರು–4
16. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 8, ಪು–303.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಮೇಲ್ಕಂಡ ಕೆಲವು ಮುಖ್ಯ ವ್ಯಾಖ್ಯೆಗಳನ್ನು ಪರಿಶೀಲಿಸಿದಾಗ ಹಲವು ಲಕ್ಷಣಗಳನ್ನು ವ್ಯಕ್ತಿತ್ವ ಸ್ವರೂಪದಲ್ಲಿ ಕಾಣಬಹುದು. ವ್ಯಕ್ತಿತ್ವವು ಸ್ಥಿರವಾದುದಲ್ಲ. ಅದು ಗತಿಶೀಲ ಪ್ರಕ್ರಿಯೆಯಾಗಿದೆ. ವ್ಯಕ್ತಿಯ ವ್ಯಕ್ತಿತ್ವವು ಅನುವಂಶೀಯತೆ ಮತ್ತು ಪರಿಸರಗಳ ಫಲವಾಗಿದೆ ವ್ಯಕ್ತಿತ್ವವು ಅದ್ವಿತೀಯ ಮತ್ತು ವಿಶಿಷ್ಟವಾದುದು. ವ್ಯಕ್ತಿತ್ವವು ವ್ಯಕ್ತಿ ಹೊಂದಿರುವ ಜೀವನದ ಗುರಿಗಳ ಮೇಲೆ ಅವಲಂಬಿಸಿರುತ್ತದೆ. ವ್ಯಕ್ತಿತ್ವ ಕೇವಲ ಗುಣಲಕ್ಷಣಗಳ ಮೊತ್ತವಲ್ಲ. ಅದು ವರ್ತನೆಯ ಸ್ವರೂಪಗಳ ಒಂದು ವಿಶಿಷ್ಟ ಸಂಘಟನೆಯಾಗಿದೆ. ವ್ಯಕ್ತಿತ್ವದ ಬೆಳವಣಿಗೆ ಮತ್ತು ವಿಕಾಸದ ಮೇಲೆ ಕಲಿಕೆ ಮತ್ತು ಅನುಭವಗಳು ಪ್ರಭಾವ ಬೀರುತ್ತವೆ. ವ್ಯಕ್ತಿತ್ವವು ತನ್ನದೇ ಆದ ರಚನೆ ಹೊಂದಿದ್ದು ದೈಹಿಕ, ಜ್ಞಾನಾತ್ಮಕ, ಸಂವೇಗಾತ್ಮಕ ಹಾಗೂ ಚಲನಾತ್ಮಕ ಗುಣಗಳನ್ನು ಹೊಂದಿದೆ.

**ವ್ಯಕ್ತಿತ್ವ ವಿಕಾಸವನ್ನು ನಿರ್ಧರಿಸುವ ಅಂಶಗಳು:–**

**ಅನುವಂಶೀಯತೆ ಮತ್ತು ಪರಿಸರದ ಪಾತ್ರ:** THE ROLE OF HEREDITY AND ENVIRONMENT

ವ್ಯಕ್ತಿಯ ವ್ಯಕ್ತಿತ್ವದ ವಿಕಾಸದ ಮೇಲೆ ಅನುವಂಶೀಯತೆ ಮತ್ತು ಪರಿಸರಗಳ ನಡುವಿನ ಅಂತರ್ ಕ್ರಿಯೆಯ ಪ್ರಭಾವವನ್ನು ಕಾಣುತ್ತೇವೆ. ವ್ಯಕ್ತಿತ್ವ ವಿಕಾಸವು ಗತಿಶೀಲ ಹಾಗೂ ನಿರಂತರ ಪ್ರಕ್ರಿಯೆಯಾಗಿದೆ. ವ್ಯಕ್ತಿತ್ವದ ವಿಕಾಸವನ್ನು ನಿರ್ಧರಿಸುವ ಪ್ರಮುಖ ಅಂಶಗಳೆಂದರೆ ಜೈವಿಕ ಅಂಶಗಳು ಮತ್ತು ಸಾಮಾಜಿಕ ಅಂಶಗಳು. ಜೈವಿಕ ಅಂಶಗಳಲ್ಲಿ ಪ್ರಭಾವ ಬೀರುವ ಅಂಶಗಳೆಂದರೆ, ಅನುವಂಶೀಯತೆ, ದೈಹಿಕ ರಚನೆ ಹಾಗೂ ನಿರ್ನಾಳ ಗ್ರಂಥಿಗಳು.ಹಾಗೆಯೇ ಸಾಮಾಜಿಕ ಅಂಶಗಳಲ್ಲಿ ಪ್ರಭಾವ ಬೀರುವ ಅಂಶಗಳೆಂದರೆ ಕುಟುಂಬ, ಶಾಲೆ, ಸಮಾಜ ಹಾಗೂ ಸಂಸ್ಕೃತಿ.[17]

ಅನುವಂಶೀಯತೆಯ ಪಾತ್ರ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಮಹತ್ವಪೂರ್ಣವಾದುದು. ಅಂಕುರಾಣುಗಳು ಮತ್ತು ಅವುಗಳಲ್ಲಿರುವ ವರ್ಣತಂತುಗಳು ಹಾಗೂ ವಂಶವಾಹಿಗಳ ಮೂಲಕ ವಂಶಪರಂಪರೆಯಾಗಿ ವ್ಯಕ್ತಿಗಳು ತಮ್ಮ ಗುಣಲಕ್ಷಣಗಳನ್ನು ಪಡೆದುಕೊಳ್ಳುತ್ತಾರೆ. ಅನುವಂಶೀಯತೆಯು ವ್ಯಕ್ತಿಯ ದೈಹಿಕ ಗುಣಲಕ್ಷಣಗಳು ಹಾಗೂ ಲಿಂಗವನ್ನು ನಿರ್ಧರಿಸುವುದಾಗಿದೆ. ವ್ಯಕ್ತಿಯಲ್ಲಿ ಕಂಡು ಬರುವ ಇತರ ಸಾಮರ್ಥ್ಯಗಳು ಹಾಗೂ ಲಕ್ಷಣಗಳ ಮೇಲೆ ಇತರ ಹಲವಾರು ಅಂಶಗಳು ಪ್ರಭಾವ ಬೀರುತ್ತವೆ.

ಮಾನವಶರೀರವು ನಿರ್ಮಾಣವಾಗಿರುವುದೇ ಅನುವಂಶೀಯತೆಯಿಂದ. ಅದರಲ್ಲೂ ವಿಶಿಷ್ಟ ಶಾರೀರಿಕ ಸ್ವರೂಪಕ್ಕೆ ಅನುವಂಶೀಯತೆಯೇ ಕಾರಣವಾಗಿದೆ.[18]

---

17. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 17, ಪು–460–462. (1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
18. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ –8, ಪು–311.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

ವ್ಯಕ್ತಿಗಳ ದೈಹಿಕ ರಚನೆ –ಅವರ ಸ್ವಭಾವದ ಮೇಲೆ ಪ್ರಭಾವ ಬೀರುತ್ತದೆ. ಉತ್ತಮ ಶಾರೀರಿಕ ಬೆಳವಣಿಗೆ ಹೊಂದಿರುವ ಮಗು ದೈಹಿಕವಾಗಿ ಬಲಶಾಲಿಯೂ, ಕ್ರಿಯಾಶೀಲನೂ ಹಾಗೂ ಆರೋಗ್ಯವಂತನೂ ಆಗಿದ್ದು ಪರಿಸರದೊಂದಿಗೆ ಉತ್ತಮ ಹೊಂದಾಣಿಕೆ ಮಾಡಿಕೊಳ್ಳಬಲ್ಲನು. ಇಂಥವನು ಉತ್ತಮ ಸ್ವಯಂಪ್ರಜ್ಞೆ ಹೊಂದಿದ್ದು, ಉತ್ತಮ ಸಾಮಾಜಿಕ ಮನ್ನಣೆಗೆ ಪಾತ್ರನಾಗುತ್ತಾನೆ. ಅದೇ ಕುಂಠಿತ ಬೆಳವಣಿಗೆ ಅಥವಾ ವಕ್ರತೆ, ವಿಕಾರಗಳಿಂದ ಕೂಡಿದ್ದರೆ ಅವನಿಗೆ ಸಮಾಜದ ಹೊಂದಾಣಿಕೆಯಲ್ಲಿ ಸಮಸ್ಯೆ ಎದುರಾಗುತ್ತದೆ.

असहायः समर्थोऽपि तेजस्वी किं करिष्यति ।

निर्वाते ज्वलितो वह्निः स्वयमेव प्रशाम्यति ॥[19]

ಸಮರ್ಥನಾಗಿದ್ದರೂ ಒಬ್ಬ ತೇಜಸ್ವಿಯು ಸಹಾಯವಿಲ್ಲದಿದ್ದರೆ ಏನನ್ನು ತಾನೆ ಮಾಡಬಲ್ಲ? ಉರಿಯುವ ಬೆಂಕಿ ಗಾಳಿಯ ಸಹಾಯವಿಲ್ಲದಿದ್ದರೆ ತಾನಾಗಿಯೇ ಆರಿ ಹೋಗುತ್ತದೆ. ಅಂದರೆ ಅನುವಂಶೀಯವಾಗಿ ತೇಜಸ್ವಿ ಹಾಗೂ ಸಮರ್ಥನೇ ಆಗಿದ್ದರೂ ಅವನಿಗೆ ಸೂಕ್ತ ಪರಿಸರದ ಸಹಕಾರವಿಲ್ಲದಿದ್ದರೆ ಅವನು ಏನು ತಾನೆ ಮಾಡಿಯಾನು? ಅಮರಶಕ್ತಿ ರಾಜನ ಪುತ್ರರು ಅನುವಂಶೀಯವಾಗಿ ಏನೇ ತೇಜಸ್ವಿಗಳೂ, ರಾಜಮನೆತನದವರೂ ಆಗಿದ್ದರೂ ಸರಿಯಾದ ಪರಿಸರವಿಲ್ಲದೆ ಸ್ವೇಚ್ಛಾಚಾರಿಗಳಾಗಿ ಮಾತಾಪಿತೃಗಳಿಗೆ ಬಹಳ ವೇದನೆಯನ್ನು ತಂದೊಡ್ಡಿದ್ದರು. ಆದರೆ, ಅದೃಷ್ಟವಶಾತ್ ವಿಷ್ಣುಶರ್ಮರು, ಮೇಧಾವಿ ಶಿಕ್ಷಕರು ದೊರಕಲಾಗಿ ಪರಿವರ್ತನೆ ಹೊಂದಿದರು. ಅಂದರೆ ಗುರುಗಳು ಅಂತಹ ಆದರ್ಶ ಪರಿಸರ ಅಥವಾ ಸನ್ನಿವೇಶಗಳನ್ನು ಪಂಚತಂತ್ರಗಳಲ್ಲಿ ಅಳವಡಿಸಿ ಪ್ರೋತ್ಸಾಹಿಸಿದರು.

ಹಲವಾರು ಹಾರ್ಮೋನ್ಗಳನ್ನು ನೇರವಾಗಿ ನಮ್ಮ ರಕ್ತದೊಳಕ್ಕೆ ಸ್ರವಿಸುವುದಕ್ಕೆ ನಿರ್ನಾಳ ಗ್ರಂಥಿಗಳು ಕಾರಣಗಳಾಗಿವೆ. ಪಿಟ್ಯುಟರಿ, ಥೈರಾಯ್ಡ್, ಅಡ್ರಿನಲ್ ಮತ್ತು ಗೋನ್ಯಾಡ್ಸ್ ಮುಂತಾದ ನಿರ್ನಾಳ ಗ್ರಂಥಿಗಳು ವ್ಯಕ್ತಿಯ ದೈಹಿಕ ಬೆಳವಣಿಗೆ, ರಾಸಾಯನಿಕ ಕ್ರಿಯೆಗಳು ಮತ್ತು ಸಂವೇದನೆಗಳ ಮಟ್ಟವನ್ನು ನಿರ್ಧರಿಸುತ್ತವೆ. ಇವುಗಳು ಸ್ರವಿಸುವುದರಲ್ಲಿ ವ್ಯತ್ಯಾಸ ಉಂಟಾದಲ್ಲಿ ವ್ಯಕ್ತಿತ್ವದ ವಿಕಾಸದಲ್ಲೂ ವೈಪರೀತ್ಯ ಉಂಟಾಗುತ್ತದೆ.

ಪಿಟ್ಯುಟರಿ ಗ್ರಂಥಿಯು ಬಿಡುಗಡೆ ಮಾಡುವ ಹಾರ್ಮೋನುಗಳು ದೇಹದಲ್ಲಿರುವ ಇತರೆ ಗ್ರಂಥಿಗಳ ಚಟುವಟಿಕೆಗಳನ್ನು ನಿಯಂತ್ರಿಸುತ್ತದೆ. ಇದನ್ನು "ನಾಯಕ ಗ್ರಂಥಿ" ಎಂದು ಕರೆಯುತ್ತಾರೆ. ಥೈರಾಯ್ಡ್ ಗ್ರಂಥಿಯು ವ್ಯಕ್ತಿಯ ಜೀವರಾಸಾಯನಿಕ ಕ್ರಿಯೆ ಹಾಗೂ ಚಯಾಪಚಯ ಕ್ರಿಯೆ ದೈಹಿಕ ಹಾಗೂ ಮಾನಸಿಕ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಅಡ್ರಿನಲ್ ಗ್ರಂಥಿ, ಲೈಂಗಿಕ ಗ್ರಂಥಿಗಳು, ಮೇದೋಜೀರಕ

---

19. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಂ, ಕಾಕೋಲೂಕೀಯ, ಶ್ಲೋ–56, ಪು–459,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಗ್ರಂಥಿ, ಪ್ಯಾರಾಥೈರಾಯ್ಡ್ ಗ್ರಂಥಿ ಥೈಮಸ್ ಗ್ರಂಥಿ, ಪೀನಲ್ ಗ್ರಂಥಿ ಮುಂತಾದವುಗಳಿಂದ ಬಿಡುಗಡೆಯಾಗುವ ಹಾರ್ಮೋನುಗಳೂ ಸಹ ವ್ಯಕ್ತಿಯ ವ್ಯಕ್ತಿತ್ವದ ವಿಕಾಸದ ಮೇಲೆ ಪ್ರಭಾವ ಬೀರುತ್ತವೆ.

ಮಾನವನ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಪರಿಸರದ ಅಂಶಗಳಾದ ಭೌತಿಕ ಹಾಗೂ ಭೌಗೋಳಿಕ ಸನ್ನಿವೇಶಗಳು ಮುಖ್ಯ ಪಾತ್ರ ವಹಿಸುತ್ತವೆ. ವ್ಯಕ್ತಿತ್ವದ ಬೆಳವಣಿಗೆಯ ಮೇಲೆ ಕುಟುಂಬದ, ಸಾಮಾಜಿಕ ವಾತಾವರಣವೂ ಪ್ರಭಾವ ಬೀರುತ್ತದೆ. ಕುಟುಂಬದಲ್ಲಿ ಪೋಷಕರ ಸ್ವಭಾವ, ಮಗುವಿನ ಜನನ ಅನುಕ್ರಮ ಸ್ಥಾನ, ಸಾಮಾಜಿಕ, ಆರ್ಥಿಕ ಸ್ಥಿತಿಗತಿ, ಕೌಟುಂಬಿಕ ಸಂಬಂಧಗಳು, ಕುಟುಂಬದ ನೈತಿಕತೆ ಮುಂತಾದ ಅಂಶಗಳು ಮಗುವಿನ ವ್ಯಕ್ತಿತ್ವ ರೂಪಿಸುವಲ್ಲಿ ಮುಖ್ಯ ಪಾತ್ರ ವಹಿಸುತ್ತವೆ. ಉತ್ತಮ ಹೊಂದಾಣಿಕೆಯಿಂದ ಸಂತೋಷವಾಗಿ ಕೂಡಿ ಬಾಳುವ ಕುಟುಂಬಗಳಲ್ಲಿ ಪೋಷಕರು ಪ್ರಜಾಸತ್ತಾತ್ಮಕ ಮನೋಭಾವವುಳ್ಳವರೂ, ವಾತ್ಸಲ್ಯದಿಂದ ಕೂಡಿದವರೂ, ಕಾಳಜಿವುಳ್ಳವರೂ ಆಗಿದ್ದಲ್ಲಿ ಉತ್ತಮ ಹೊಂದಾಣಿಕೆ ಉಳ್ಳ, ಸಂತೋಷದಿಂದ ಕೂಡಿದ ಸಮತೋಲನವಾದ ವ್ಯಕ್ತಿತ್ವ ವಿಕಾಸವಾಗುವಂತೆ ಪ್ರೇರಕವಾಗುತ್ತದೆ.[20]

## ವ್ಯಕ್ತಿತ್ವ ರೂಪಿಸುವಲ್ಲಿ ಶಾಲೆ ಮತ್ತು ಶಿಕ್ಷಕರ ಪಾತ್ರ.

ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವಲ್ಲಿ, ಶಾಲೆಯಲ್ಲಿ ಶಿಕ್ಷಕರು ಹಾಗೂ ಅವರ ಸಹಪಾಠಿಗಳು ಮುಖ್ಯ ಪಾತ್ರ ವಹಿಸುತ್ತಾರೆ. ಶಿಕ್ಷಕನ ವ್ಯಕ್ತಿತ್ವ ಹಾಗೂ ಅವನ ವರ್ತನೆ, ನಡತೆ ಹಾಗೂ ಇನ್ನಿತರ ಆದರ್ಶ ಗುಣಗಳನ್ನು ಮಕ್ಕಳು ಅನುಕರಿಸಲು ಯತ್ನಿಸುತ್ತಾರೆ ಅದಕ್ಕೇ ಹೇಳುವುದು "ಶಿಕ್ಷಕನಿದ್ದಂತೆ ಶಿಷ್ಯನೂ" **(As is the teacher,so is the student.)** ಗುರುವಿನ ಮಹತ್ವವನ್ನು ಬಹಳ ಅಚ್ಚುಕಟ್ಟಾಗಿ ಒಂದು ಸೂಕ್ತಿ ಹೀಗೆ ಹೇಳುತ್ತದೆ.

पिता माता भ्राता प्रियसहचरी सूनुनिवहः सुहृत्स्वामी माद्यत्करिभटरथाश्वः परिकरः।

निमज्जन्तं जन्तुं नरककुहरे रक्षितुमलं गुरोर्धर्माऽधर्मप्रकटनपरात् कोऽपि न परः ॥[21]

ಧರ್ಮಾಧರ್ಮಗಳ ಸ್ವರೂಪವನ್ನು ವಿವರಿಸಿ ಹೇಳುವ ಗುರು ಒಬ್ಬನೇ ನರಕದಲ್ಲಿ ಮುಳುಗುವ ಮನುಷ್ಯನನ್ನು ರಕ್ಷಿಸಲು ಸಮರ್ಥನು. ಮತ್ಯಾರೂ ಇಲ್ಲ. ತಂದೆ, ತಾಯಿ, ಪ್ರಿಯೆ, ಮಕ್ಕಳು, ಮಿತ್ರ, ಒಡೆಯ, ಆನೆ, ಸೈನಿಕ, ರಥ, ಕುದುರೆ, ಪರಿವಾರಗಳು ಅವನನ್ನು ರಕ್ಷಿಸಲಾರವು.

---

20. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 8, ಪು–312–314.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
21. **ಸುಭಾಷಿತಮಂಜರೀ,** ಧರ್ಮ–ಶ್ಲೋ–102, ಪು–248, ಸೋಮಪ್ರಭಾಚಾರ್ಯನ ಸೂಕ್ತಿಮುಕ್ತಾವಲಿ–15.(2001) ಕ.ಸಾ.ಪ, ಚಾಮರಾಜಪೇಟೆ, ಬೆಂಗಳೂರು–18

ವ್ಯಕ್ತಿಯು ಸಮಾಜದಲ್ಲಿ ಪ್ರಚಲಿತವಾಗಿರುವ ವರ್ತನೆಗಳನ್ನು ರೂಢಿಸಿಕೊಳ್ಳುತ್ತಾನೆ. ಸಮಾಜೀಕರಣ ಪ್ರಕ್ರಿಯೆಯ ಫಲವೇ ವ್ಯಕ್ತಿಯ ವ್ಯಕ್ತಿತ್ವಕ್ಕೆ ಕಾರಣವಾಗಿದೆ. ಸಮಾಜವು ಸಾಮಾಜಿಕ ಸಂಬಂಧಗಳ ಸಂಗಮವೇ ಆಗಿದೆ. ಇದು ವಿವಿಧ ವ್ಯಕ್ತಿಗಳಲ್ಲಿ ಸಂಪರ್ಕ ಕಲ್ಪಿಸಿ, ಈ ಅಂತರ್ ವ್ಯಕ್ತಿ ಸಂಬಂಧಗಳು ವ್ಯಕ್ತಿಯ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರುತ್ತವೆ. ವ್ಯಕ್ತಿಯು ಸಮಾಜದಲ್ಲಿ ಸ್ವೇಚ್ಛೆಯಿಂದ ವರ್ತಿಸಲು ಸಾಧ್ಯವಿಲ್ಲ. ಸಮಾಜ ತನ್ನ ನೀತಿ ಸಂಹಿತೆಯನ್ನು ಪಾಲಿಸದವರನ್ನು ದಂಡಿಸುತ್ತದೆ. ಯಾವುದಕ್ಕೆ ಹೆದರದಿದ್ದರೂ, ವ್ಯಕ್ತಿಯು ಸಮಾಜಕ್ಕೆ ಹೆದರಬೇಕಾಗುತ್ತದೆ. ಸಮಾಜದ ನೀತಿನಿಯಮಗಳನ್ನು ಪಾಲಿಸಲೇ ಬೇಕಾಗುತ್ತದೆ. ಇವುಗಳು ವ್ಯಕ್ತಿಗಳ ವರ್ತನೆಗಳು ಹಾಗೂ ಮನೋಧೋರಣೆಗಳ ಮೇಲೆ ಪ್ರಭಾವ ಬೀರುತ್ತವೆ[22] ವ್ಯಕ್ತಿತ್ವವನ್ನು ರೂಪಿಸತಕ್ಕ ಅಂಶಗಳೆಲ್ಲ ಮೂಲತಃ ವಂಶಗತವಾಗಿ ಬಂದಿರುವಂತಹವೇ ಆದರೂ, ಅವುಗಳನ್ನು ಕ್ರಮವಾಗಿ ವ್ಯವಸ್ಥೆಗೊಳಿಸುವುದು ಬಹಳ ಮುಖ್ಯ. ಅಷ್ಟಾಗಿ ಜನ್ಮತಃ ಉತ್ತಮ ಅನುವಂಶೀಯ ವ್ಯಕ್ತಿ ರೇಖೆಗಳಿಲ್ಲದಿದ್ದರೂ, ಇರುವಷ್ಟನ್ನೇ ಆದಷ್ಟು ಉಪಯುಕ್ತ ರೀತಿಯಲ್ಲಿ ಪೋಷಿಸಿ ವ್ಯವಸ್ಥೆಗೊಳಿಸಿಕೊಂಡರೆ ನಿಸರ್ಗದತ್ತವಾಗಿ ಬಂದದ್ದನ್ನು ಬಂಗಾರ ಮಾಡಿಕೊಂಡಂತಾಗುತ್ತದೆ. ಇಲ್ಲಿ ಮತ್ತೊಂದು ಮುಖ್ಯವಾಗಿ ಕಂಡುಬರುವ ಅಂಶವೆಂದರೆ ಪ್ರಯತ್ನಶೀಲತೆ. ವಂಶಪಾರಂಪರ್ಯವಾಗಿ ಬಂದುಬಿಟ್ಟಿದೆ ಎಂದು ಬೀಗುತ್ತಾ, ಲಭ್ಯವಾಗಿರುವ ಸಾಮರ್ಥ್ಯ ಸದುಪಯೋಗಪಡಿಸಿಕೊಳ್ಳಲು ಪ್ರಯತ್ನಶೀಲರಾಗಬೇಕು.

उद्यमेन हि सिद्धयन्ति कार्याणि न मनोरथैः ।

न हि सिंहस्य सुप्तस्य प्रविशन्ति मुखे मृगाः ॥[23]

ಅಂದರೆ, ಪ್ರಯತ್ನಗಳಿಂದ ಕಾರ್ಯಗಳು ಸಿದ್ಧಿಸುತ್ತವೆಯೇ ಹೊರತು ಬರಿಯ ಬಯಕೆಗಳಿಂದಲ್ಲ. ನಿದ್ರಿಸುತ್ತಿರುವ ಸಿಂಹದ ಬಾಯಲ್ಲಿ ಮೃಗಗಳು ತಾವಾಗಿಯೇ ಬಂದು ಪ್ರವೇಶಿಸುವುದಿಲ್ಲ.

ವ್ಯಕ್ತಿಯಲ್ಲಿ ರೂಢಿಸಿರುವ ಅಭ್ಯಾಸಗಳು – ಭಾವನೆಗಳು – ಮನೋಧೋರಣೆಗಳು – ದೃಷ್ಟಿಧ್ಯೇಯಗಳು ಇವೆಲ್ಲ ವ್ಯವಸ್ಥೆಗೊಳ್ಳುವುದು ಸಮಾಜದ ಅಗತ್ಯಕ್ಕೆ ತಕ್ಕಂತೆ. ಆಗ ಮಾತ್ರ ಪ್ರತಿ ವ್ಯಕ್ತಿಯಲ್ಲೂ ಒಂದು ಅಧಿಪತಿ ಭಾವನೆ ರೂಪುಗೊಳ್ಳುತ್ತದೆ. (ಮೆಕ್ಡೂಗಲ್ ರವರು ಸೂಚಿಸಿರುವಂತೆ) ಮನಸ್ಸಿನೆಲ್ಲ ವ್ಯಾಪಾರಗಳೂ ಅದರ ಸುತ್ತ ನಡೆಯುತ್ತವೆ. ಅದರ ನಿರ್ದೇಶನದಂತೆ ಅವುಗಳೆಲ್ಲ ಕಾರ್ಯ ನಡೆಸುವಂತೆ ವ್ಯವಸ್ಥಗೊಳ್ಳುತ್ತವೆ. ಇದೇ ಐಕ್ಯತೆಯ ವ್ಯವಸ್ಥೆಯೆನ್ನುವರು. ನಮ್ಮ ಸಮಾಜ ಮತ್ತು ಸಾಂಸ್ಕೃತಿ, ನಾಗರಿಕತೆಗಳ ಅಂಗವಾಗಿ

---

22. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 17, ಪು–461, ಅ – 20, ಪು–525–527.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
23. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಸಂಪ್ರಾಪ್ತಿ– ಶ್ಲೋ–136, ಪು–393, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಬೆಳೆದುಬಂದಿರುವ ನೈತಿಕ ವ್ಯಕ್ತಿತ್ವ ವ್ಯವಸ್ಥೆಗೊಳ್ಳುತ್ತದೆ. ವ್ಯಕ್ತಿ ತನ್ನ ಭಾವನೆ, ಮನೋಧೋರಣೆಗಳು, ದೃಷ್ಟಧ್ಯೇಯಗಳು, ಆದರ್ಶಗಳು ಇವನ್ನೆಲ್ಲ ತಾನು ಬಾಳುವ ಸಾಮಾಜಿಕ, ನೈತಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳಿಗೊಪ್ಪುವಂತೆ ರೂಪಿಸಿಕೊಳ್ಳುತ್ತಾನೆ. ವ್ಯಕ್ತಿತ್ವದ ಅಂತಿಮ ಗುರಿಯೆಂದರೆ ಎಲ್ಲ ಕಾಲಕ್ಕೂ, ಎಲ್ಲ ದೇಶಕ್ಕೂ, ಎಲ್ಲ ಸಮಾಜ, ಸಂಸ್ಕೃತಿಗಳಿಗೂ ಒಪ್ಪುವ ಮೌಲ್ಯಗಳನ್ನು, ಆದರ್ಶಗಳನ್ನು ಸಾಧಿಸುವುದೇ ಆಗಿರುತ್ತದೆ ಇದನ್ನೇ **"ಸತ್ಯಂ ಶಿವಂ. ಸುಂದರಂ"** ಎಂಬ ಮಾತಿನಲ್ಲಿ ಶ್ರೇಷ್ಠ ಆದರ್ಶವನ್ನಾಗಿ ರೂಪಿಸಿಕೊಳ್ಳುವುದು.[24]

ಶಿಕ್ಷಣದ ಗುರಿ "ಪರಿಪೂರ್ಣ ವ್ಯಕ್ತಿತ್ವದ ಬೆಳವಣಿಗೆಯ ಕಡೆಗೆ" ಎಂಬ ವಿಚಾರ ಸರ್ವವೇದ್ಯವಾದುದು.[25] ಕೇವಲ ವಿಷಯ ಜ್ಞಾನ ಬೆಳೆಸುವುದೊಂದೇ ಎಂದು ಶಿಕ್ಷಕರು ತಿಳಿಯಬಾರದು. ಇಡೀ ವ್ಯಕ್ತಿತ್ವದ ಬೆಳವಣಿಗೆಗೆ ನೆರವಾಗುವ ಎಲ್ಲ ಅಂಶಗಳನ್ನೂ ಪರಿಗಣಿಸಿ ಉತ್ತಮ ಮಾರ್ಗದರ್ಶನವನ್ನು ನೀಡಬೇಕು. ಶಾಲೆಯಲ್ಲಿ ಮಗುವಿನ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರುವ ಮುಖ್ಯ ಅಂಶಗಳೆಂದರೆ– ಪಠ್ಯಕ್ರಮ, ಶಿಕ್ಷಕರು ಮತ್ತು ಸಹಪಾಠಿಗಳು. ಪಠ್ಯಕ್ರಮದ ರಚನೆ ಹೇಗಿರಬೇಕೆಂದರೆ ವಿದ್ಯಾರ್ಥಿಗಳ ವ್ಯಕ್ತಿತ್ವದ ಸಮಗ್ರ ವಿಕಾಸಕ್ಕೆ ಅನುಗುಣವಾಗಿರಬೇಕು. ಅವರ ಅವಶ್ಯಕತೆಗಳು ಮತ್ತು ಸಾಮರ್ಥ್ಯಗಳನ್ನು ಗಮನಿಸಿ, ಅದಕ್ಕೆ ಒಪ್ಪುವ ರೀತಿಯಲ್ಲಿರಬೇಕು.

ಪಠ್ಯಕ್ರಮವನ್ನು ಎಷ್ಟೇ ಸೂಕ್ಷ್ಮವಾಗಿ ಗಮನಿಸಿ, ಅತ್ಯುತ್ತಮವಾಗಿ ತಯಾರಿಸಿದ್ದರೂ, ಅದನ್ನು ಸಮರ್ಪಕವಾಗಿ ಕಾರ್ಯಗೊಳಿಸಲಾಗದಿದ್ದರೆ, ಮಕ್ಕಳಿಗೆ ಅದರಿಂದ ಏನೂ ಪ್ರಯೋಜನವಾಗಲಾರದು. ಆದ್ದರಿಂದ ನಿಗದಿತ ಪಠ್ಯಕ್ರಮವನ್ನು ಪರಿಣಾಮಕಾರಿಯಾಗಿ ಶಿಕ್ಷಕರು ನಿರ್ವಹಣೆ ಮಾಡಿದಾಗ ಮಾತ್ರ ಮಗುವಿನ ವಿಕಾಸ ಪರಿಪೂರ್ಣವೂ, ಆರೋಗ್ಯಕರವೂ ಆಗಿರುತ್ತದೆ. ಇದರ ಜೊತೆಗೆ ಶಿಕ್ಷಕರ ವ್ಯಕ್ತಿತ್ವ, ವಿದ್ಯಾರ್ಥಿಗಳೊಡನೆ ಅವರ ಸಂವಹನ, ಜ್ಞಾನ, ಬೋಧನಾ ಕೌಶಲ್ಯ, ಶಿಸ್ತು, ಸಂಯಮ, ಪರಾನುಭೂತಿ, ಸಮಯಪ್ರಜ್ಞೆ, ತತ್ವನಿಷ್ಠೆ ಇತ್ಯಾದಿಗಳು ಮಕ್ಕಳ ಮೇಲೆ ಅಪಾರ ಪ್ರಭಾವ ಬೀರುತ್ತವೆ. ಶಿಕ್ಷಕನು ಪ್ರತಿಯೊಂದು ಮಗುವನ್ನೂ ವೈಶಿಷ್ಟ್ಯಪೂರ್ಣ ವ್ಯಕ್ತಿಯಂತೆ ಪರಿಗಣಿಸಿ, ಅವನಲ್ಲಿರುವ ವೈಯಕ್ತಿಕತೆಯೇ ಅವನ ಅಮೂಲ್ಯ ಆಸ್ತಿ ಎಂಬುದನ್ನು ಗುರುತಿಸಬೇಕು. ಅವನಲ್ಲಿರುವ ಸುಪ್ತ ಪ್ರತಿಭೆಯನ್ನು ಪತ್ತೆ ಮಾಡಿ ಅದರ ಸಹಾಯದಿಂದ ತನ್ನ ಸಮೂಹ ಅಥವಾ ಸಮಾಜಕ್ಕೆ ಏನಾದರೂ ಕೊಡುಗೆ ನೀಡುವಂತೆ ಪ್ರೇರೇಪಿಸಿ ಪ್ರೋತ್ಸಾಹಿಸಬೇಕು. ಹೀಗೆ ಶಿಕ್ಷಕರು ವಿದ್ಯಾರ್ಥಿಗಳಿಗೆ ಸಮರ್ಪಕವಾಗಿ ಒಳ್ಳೆಯ ಶಿಕ್ಷಣ ಸನ್ನಿವೇಶಗಳನ್ನು ಒದಗಿಸಿ, ಉತ್ತಮ ವ್ಯಕ್ತಿತ್ವ ರೂಪಿಸಬೇಕು. ಗೀತಾಚಾರ್ಯನು ಮನಬಂದಂತೆ ನಡೆಯುವವರಿಗೆ ಒಂದು ಸೂಚನೆ ಕೊಟ್ಟಿರುತ್ತಾನೆ:–

---

24. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–17, ಪು–479–480.(1962)
ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
25. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–26, ಪು–644..(1962)
ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

यः शास्त्रविधिमुत्सृज्य वर्तते कामकारतः ।

न स सिद्धिमवाप्नोति न सुखं न परां गतिम् ॥[26]

ಅಂದರೆ, ಯಾವನು ಶಾಸ್ತ್ರ ವಿಧಾನವನ್ನು ಬದಿಗೊತ್ತಿ ಮನಸ್ಸಿಗೆ ಬಂದಂತೆ ನಡೆಯುವನೋ ಅವನು ಸಿದ್ಧಿಯನ್ನು ಪಡೆಯುವುದಿಲ್ಲ. ಅವನಿಗೆ ಸುಖವೂ ಇಲ್ಲ. ಉತ್ತಮ ಗತಿಯೂ ಇಲ್ಲ. ಇದೇ ಪರಿಸ್ಥಿತಿಯಲ್ಲಿದ್ದವರು ರಾಜಕುಮಾರರು. ಇವರನ್ನು ಪರಿವರ್ತನೆ ಮಾಡುವುದು ನಿಜಕ್ಕೂ ಒಂದು ಸವಾಲೇ ಸರಿ.

ಇದೇ ಕಾರ್ಯವನ್ನು ವಿಷ್ಣುಶರ್ಮರು ಅತ್ಯಂತ ಸರಳ ಸುಂದರ ವಾತಾವರಣ ನಿರ್ಮಾಣ ಮಾಡಿ, ಆಕರ್ಷಕ ಕಥಾ ನಿರೂಪಣೆಯ ಮೂಲಕ, ಬದುಕಿನ ನೀತಿಬೋಧೆ ಮಾಡುತ್ತಾ, ಕಥೆಗಳಲ್ಲೇ ಜೀವನದ ಎಲ್ಲ ಅನುಭವಗಳೂ ಸಿಗುವಂತೆ ದೃಷ್ಟಾಂತಗಳನ್ನು ಒದಗಿಸಿ ರಾಜನಂದನರನ್ನು ಸುಶಿಕ್ಷಿತ ರಾಜಕುಮಾರರನ್ನಾಗಿ ಪರಿವರ್ತಿಸಿ ಯಶಸ್ವಿಯಾಗಿದ್ದಾರೆ. ನೀತಿಬೋಧನಾ ಕ್ಷೇತ್ರದಲ್ಲಿ ಹಾಗೂ ಸುಂದರ ವ್ಯಕ್ತಿತ್ವ ನಿರ್ಮಾಣಕಲೆಯಲ್ಲಿ ಮಾದರಿಯಾಗಿದ್ದಾರೆ. ಹಿಂದಿನಿಂದಲೂ ಗುರುವಿನ ಮೇಲೆ ಗುರುತರವಾದ ಹೊಣೆಗಾರಿಕೆಯಿದೆ. ಗುರುವೃಂದವು ಈ ವಿಷಯವನ್ನು ಗಂಭೀರವಾಗಿ ವಿಚಾರಮಾಡಿ, ಚರ್ಚಿಸಿ ಯಾವುದೇ ಒಂದು ನಿರ್ಣಯವನ್ನು ಕೈಗೊಳ್ಳಬೇಕು. ವಿಷ್ಣುಶರ್ಮರು ಬಹಳ ಗಂಭೀರ ಚಿಂತನೆ ನಡೆಸಿ, ಅಮರಶಕ್ತಿ ರಾಜನ ಕೋರಿಕೆಗೆ ಸ್ಪಂದಿಸಿ, ರಾಜಕುವರರ ಪರಿಸ್ಥಿತಿ, ಪರಿಸರ, ಮೂಲಸ್ವಭಾವ, ವರ್ತನೆಗಳು ಇತ್ಯಾದಿಗಳನ್ನು ಪರಿಶೀಲಿಸಿ ಒಂದು ಉತ್ತಮ ನಿರ್ಣಯವನ್ನು ಕೈಗೊಂಡು, ಕಥಾ ಮಾಧ್ಯಮದಲ್ಲಿ ಬೋಧಿಸುವುದೇ ಸೂಕ್ತ ಎಂದು ತೀರ್ಮಾನಿಸಿದರು. ವ್ಯಕ್ತಿತ್ವ ವಿಕಾಸವೇ ಎಲ್ಲ ಶಿಕ್ಷಣದ ಗುರಿಯಾಗಿದೆ. ವಿವಿಧ ಸಾಮಾಜಿಕ ಹಂತಗಳಲ್ಲಿಯ ವಿದ್ಯಾರ್ಥಿಗಳ ವ್ಯಕ್ತಿತ್ವದ ವಿಕಾಸಗೊಳಿಸುವ ಕಾರ್ಯವು ಅಷ್ಟೇನೂ ಸುಲಭವಾದುದಲ್ಲ. ಶಿಕ್ಷಕನೂ ಕೂಡ ಪರಿಪೂರ್ಣ ವ್ಯಕ್ತಿತ್ವ ಹೊಂದಿದವನಾಗಿರಬೇಕು. ಹಿಂದೊಮ್ಮೆ ಮಾನವ ಸಮಾಜವು ಇಂದಿನಂತೆ ತೊಡಕಿನದಾಗಿರಲಿಲ್ಲ. ಆಗ ಜನರ ಮಾನಸಿಕ, ನೈತಿಕ ಮಟ್ಟವು ಅಪೇಕ್ಷಿತ ಮಟ್ಟದಲ್ಲಿದ್ದಿತು. ಸಮಾಜದಲ್ಲಿ ಸ್ಥಿರತೆ ಇತ್ತು. ಸಹಕಾರವಿತ್ತು. ಸೌಹಾರ್ದತೆ ನೆಲೆಸಿತ್ತು. ಆದರೆ ಇಂದಿನ ಸಮಾಜವು ಅನೇಕ ಕಾರಣಗಳ ಮೂಲಕ ಛಿದ್ರ ವಿಚ್ಛಿದ್ರವಾಗಿದೆ.

ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಿದ ಕೆಲವು ಪ್ರತಿಷ್ಠಿತ ಶಿಕ್ಷಣತಜ್ಞರು ಒಬ್ಬ ಪ್ರಸಿದ್ಧ ಶಿಕ್ಷಕ ಅಥವಾ ಉಪಾಧ್ಯಾಯನ ಲಕ್ಷಣಗಳನ್ನು ಪಂಚಶೀಲೋಪಾದಿಯಲ್ಲಿ ಹೇಳಿದ್ದಾರೆ:

---

**26. ಭಗವದ್ಗೀತಾ,** ಅ-16, ಶ್ಲೋ-23.

**1.The ability to develop relationships with their students.**

ವಿದ್ಯಾರ್ಥಿಗಳೊಂದಿಗೆ ಸೌಹಾರ್ದ ಸಂಬಂಧ ಬೆಳೆಸಿಕೊಳ್ಳುವ ಸಾಮರ್ಥ್ಯ.

**2.Patient,caring and kind personality** ತಾಳ್ಮೆ, ಮಕ್ಕಳ ಬಗ್ಗೆ ಕಾಳಜಿ ಮತ್ತು ಕರುಣಾರ್ದ್ರ ವ್ಯಕ್ತಿತ್ವ.

**3.Knowledge of learners.** ಕಲಿಯುವವರ ಬಗ್ಗೆ ಜ್ಞಾನ ವಿರಬೇಕು.

**4.Dedication to teaching.** ಬೋಧನಾ ಶ್ರದ್ಧೆ.

**5.Engaging students in leaning.** ವಿದ್ಯಾರ್ಥಿಗಳನ್ನು ಕಲಿಕೆಯಲ್ಲಿ ತೊಡಗಿಸಿಕೊಳ್ಳುವುದು.



# ೫ – ೩. ವ್ಯಕ್ತಿತ್ವ ನಿರ್ಮಾಣ–ಹೊಂದಾಣಿಕೆ–ಸಹಬಾಳ್ವೆ

# ಒಗ್ಗಟ್ಟಿನಲ್ಲಿ ಸಾಧನೆ

ವಿದ್ಯಾರ್ಥಿಗಳಿಗೆ ಅವರ ಸಹಪಾಠಿಗಳೂ ಸಹ ಅನೇಕ ವಿಷಯಗಳಲ್ಲಿ ಪ್ರಭಾವ ಬೀರುತ್ತಾರೆ. ಅಪೇಕ್ಷಿತ ಧನಾತ್ಮಕ ಪ್ರಭಾವವನ್ನುಂಟುಮಾಡುವ ಸಹಪಾಠಿಗಳಿದ್ದರೆ ಉತ್ತಮ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಅಪೇಕ್ಷಣೀಯವಲ್ಲದ ಋಣಾತ್ಮಕ ಪ್ರಭಾವವನ್ನುಂಟುಮಾಡುವ ಸಹಪಾಠಿಗಳು ಇದ್ದಲ್ಲಿ ಮಗುವಿನ ವ್ಯಕ್ತಿತ್ವ ಹಾಳಾಗುತ್ತದೆ. ಇಂಥಾ ಸಂದರ್ಭಗಳಲ್ಲಿ ಶಿಕ್ಷಕರು ಹೆಚ್ಚಿನ ಜವಾಬ್ದಾರಿಯಿಂದ ಬಹುಮುಖ ಪಾತ್ರನಿರ್ವಹಣೆಯ ಮೂಲಕ ವಿದ್ಯಾರ್ಥಿಗಳನ್ನು ಸರಿಯಾದ ಮಾರ್ಗದಲ್ಲಿ ಮುನ್ನಡೆಸಿ, ಅವರಲ್ಲಿ ಸಮಗ್ರ ವ್ಯಕ್ತಿತ್ವ ವಿಕಾಸಗೊಳ್ಳುವಂತೆ ಪ್ರೋತ್ಸಾಹಿಸಬೇಕು. ಸೂಕ್ತ ವ್ರಕ್ತಿತ್ವದ ನಿರೂಪಣೆಯಿಂದ ವೈಯಕ್ತಿಕ ಜೀವನದ ಕಷ್ಟಗಳು ಕಳೆಯುವುದರ ಜೊತೆಗೆ ಸಮಾಜದ ಸುಖ, ಶಾಂತಿ ಮತ್ತು ನೆಮ್ಮದಿಗೂ ಅವಕಾಶವಾಗುವುದು. ಅಂದರೆ ವ್ಯಕ್ತಿತ್ವ ತಮ್ಮಿಷ್ಟಕ್ಕೂ, ಸಮಾಜದ ಹಿತಕ್ಕೂ ವಿಹಿತವಾಗಿರಬೇಕು. ವೈಯಕ್ತಿಕ ಹಾಗೂ ಸಾಮಾಜಿಕ ಜೀವನದಲ್ಲಿ ಸಾಮರಸ್ಯ, ಅಂದರೆ ಸಹಬಾಳ್ವೆ, ಹೊಂದಾಣಿಕೆ ಗುಣಗಳು ಮಕ್ಕಳಲ್ಲಿ ಬೆಳೆಯುವುದು.[27] ಶಾಲೆಯಲ್ಲಿ ಅಲ್ಲಿನ ಪಾಠಪ್ರವಚನಗಳಿಂದ, ಸಾಂಸ್ಕೃತಿಕ ಚಟುವಟಿಕೆಗಳಿಂದ, ಇನ್ನಿತರ ಸಂಘಜೀವನದಿಂದ ಒಬ್ಬೊಬ್ಬರಲ್ಲೂ, ಅವರವರಿಗೊಪ್ಪುವಂತೆ, ಅವರವರ ಅಭಿರುಚಿಯನ್ನು ಬೆಳೆಸಬೇಕು.

ಮಕ್ಕಳು ಗುಂಪಾಗಿ ಸಮಸ್ಯೆಯನ್ನು ಬಿಡಿಸುವಾಗ, ವಿಷಯವನ್ನು ಚರ್ಚಿಸುವಾಗ, ಉದ್ಯಮವನ್ನು ಆಚರಿಸುವಾಗ ಹಾಗೂ ಇನ್ನಿತರ ಸನ್ನಿವೇಶಗಳಲ್ಲಿ ತೊಡಗಿರುವಾಗ ಮಾನವ ಪ್ರೇಮ, ಸೋದರ ಭಾವನೆ, ಸಹಕಾರಗುಣ, ಹೊಣೆಗಾರಿಕೆಯನ್ನು ಹಂಚಿಕೊಂಡು ನಿರ್ವಹಿಸುವ ಅಭ್ಯಾಸ ಮುಂತಾದವುಗಳು ಸ್ವಾಭಾವಿಕವಾಗಿ ಕಾರ್ಯೋನ್ಮುಖ ಆಗುತ್ತವೆ. ಪಳಗಿ ವ್ಯಕ್ತವಾಗುತ್ತವೆ. ಇಂತಹ ಅವಕಾಶ ದೊರೆತು, ಆ ವಾತಾವರಣದಲ್ಲಿ ಬೆಳೆದ ಮಕ್ಕಳ ವ್ಯಕ್ತಿತ್ವ ನಿರ್ದಿಷ್ಟವಾಗಿ ಪರಿವರ್ತನೆಗೊಂಡು ಇತರರಿಗಿಂತ ಉತ್ತಮವೆನಿಸುತ್ತದೆ.

ವಿಷ್ಣುಶರ್ಮರು ಪಂಚತಂತ್ರದಲ್ಲಿ ಬಹಳ ಉತ್ತಮ ಸೂಕ್ತಿಗಳ ಮೂಲಕ ಕಥೆಯ ಮಧ್ಯೆ ಮಧ್ಯೆ ಅರಸುಕುಮಾರರಿಗೆ ಸೂಕ್ತ ತಿಳುವಳಿಕೆಯನ್ನು ನೀಡುತ್ತಾ, ಜಾಗ್ರತೆಯನ್ನು ಮೂಡಿಸಿದ್ದಾರೆ. ಉದಾಹರಣೆಗೆ:–

---

27. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 19, ಪು–506–507.(1962)
ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

बहवो न विरोद्धव्या दुर्जया हि महाजनाः ।

स्फुरन्तमपि नागेन्द्रं भक्षयन्ति पिपीलिकाः ॥[28]

ಇಲ್ಲಿ ಮಹಾಜನರಲ್ಲಿ ಹೇಗಿರಬೇಕು, ಒಗ್ಗಟ್ಟಿನಿಂದ ಏನನ್ನೂ ಸಾಧಿಸಬಹುದು ಎಂಬ ತಿಳುವಳಿಕೆಯನ್ನು ಸೂಚಿಸಿದ್ದಾರೆ. ಅಂದರೆ, ಅನೇಕರೊಡನೆ ವಿರೋಧ ಸಲ್ಲದು. ಮಹಾಜನರನ್ನು ಗೆಲ್ಲುವುದು ಕಷ್ಟ. ಕೆರಳಿ ಏಳುವ ಸರ್ಪವನ್ನೂ ಒಟ್ಟಾದ ಇರುವೆಗಳು ತಿಂದುಹಾಕುತ್ತವೆ.

ಮಕ್ಕಳಿಗೆ ಮಾತ್ರ ಸಾಮಾಜಿಕ ಸನ್ನಿವೇಶಗಳ ಹಿನ್ನೆಲೆ ಇರಬೇಕೆಂದು ಭಾವಿಸಬಾರದು. ಉಪಾಧ್ಯಾಯ ವೃತ್ತಿ, ಶಿಕ್ಷಣ ಸಂಸ್ಥೆಗಳಿಗೂ ಇದು ಅನ್ವಯಿಸುತ್ತದೆ. ಉಪಾಧ್ಯಾಯರಿಗೆ ಆಗಾಗ್ಗೆ ಏರ್ಪಡಿಸುವ ವಿವಿಧ ರೀತಿಯ ಶಿಕ್ಷಣ ಶಿಬಿರದಲ್ಲಿ ಅಂತಹ ಸಾಮಾಜಿಕ ಜೀವನ ಲಭ್ಯವಾಗುತ್ತದೆ. ಇಲ್ಲಿ ಸಹಬಾಳ್ವೆ, ಹೊಂದಾಣಿಕೆ ಅನುಭವಕ್ಕೆ ಬರುತ್ತದೆ. ಈಚೆಗೆ ನಮ್ಮ ದೇಶದಲ್ಲಿ ಏರ್ಪಡಿಸುತ್ತಿರುವ ವಿವಿಧ ವಿಷಯಗಳನ್ನು ಕುರಿತ ವರ್ಕ್ ಶಾಪ್, ಸೆಮಿನಾರ್, ರಿಫ್ರೆಷರ್ ಕೋರ್ಸ್, ಪುನಶ್ಚೇತನ ಶಿಬಿರಗಳು, ವ್ಯಕ್ತಿತ್ವ ವಿಕಸನ ತರಬೇತಿ ಶಿಬಿರ ಮುಂತಾದವುಗಳು ಹೇಳುವುದಾದರೆ ವಿದೇಶಗಳಿಂದ, ಅದರಲ್ಲೂ ಅಮೆರಿಕಾದಿಂದ ಆಮದಾದ ಸಂಪ್ರದಾಯಗಳು. ಇವುಗಳಲ್ಲಿ ಭಾಗವಹಿಸತಕ್ಕ ಉಪಾಧ್ಯಾಯರಿಗೂ, ಇತರರಿಗೂ ತಕ್ಕಷ್ಟು ಸ್ವಾತಂತ್ರ್ಯವಿರುತ್ತದೆ. ವಿಷಯವನ್ನು ಪರಿಶೀಲಿಸುವಾಗ, ಚರ್ಚಿಸಿ ತೀರ್ಮಾನ ಕೈಗೊಳ್ಳುವಾಗ, ಮೌಲ್ಯ ನಿಷ್ಕರ್ಷಿಸುವಾಗ, ವರದಿಯನ್ನು ಸಿದ್ಧಪಡಿಸುವಾಗ, ಗುಂಪು ಗುಂಪುಗಳಾಗಿ ಸೇರುವ ವಿಚಾರ ಸರ್ವವೇದ್ಯವಾದುದು. ಈ ರೀತಿಯ ಅಧ್ಯಯನದಿಂದ ಖಂಡಿತವಾಗಿಯೂ ಹೆಚ್ಚಿನ ಪ್ರಯೋಜನವಾಗುವುದಲ್ಲದೆ, ಉಪಾಧ್ಯಾಯ ವೃತ್ತಿಗೆ ಅಗತ್ಯವಾದ ಮನೋಭಾವಗಳೂ, ಗುಣಧರ್ಮಗಳೂ ವೃದ್ಧಿಯಾಗುವುವೆಂದು ಸಂಶೋಧನೆಗಳು ಮನದಟ್ಟುಮಾಡಿವೆ. ಇಲ್ಲಿ ನಾವು ಒಗ್ಗಟ್ಟಿನಲ್ಲಿ, ಹೊಂದಾಣಿಕೆಯಿಂದ ವಿಷಯಗಳ ವಿಮರ್ಶೆ, ಕಾರ್ಯಯೋಜನೆ, ಕಾರ್ಯಸಾಧನೆ, ಯಶಸ್ವಿಯಾಗಿ ಕಂಡುಕೊಳ್ಳಬಹುದು.

बलीयसा हीनबलो विरोधं न भूतिकामो मनसाऽपि वाञ्छेत् ।

न बध्यतेऽत्यन्तबलो हि यस्मात् व्यक्तं प्रणाशोऽस्ति पतङ्गवृत्तेः ॥[29]

ಏಳಿಗೆಯನ್ನು ಬಯಸುವ. ದುರ್ಬಲನೊಬ್ಬನು ಬಲಿಷ್ಠರೊಡನೆ ಮನಸ್ಸಿನಲ್ಲಿಯೂ ವಿರೋಧವನ್ನು ಕಟ್ಟಿಕೊಳ್ಳಕೂಡದು. ಏಕೆಂದರೆ, ಅತ್ಯಂತ ಬಲಶಾಲಿ ನಾಶಕ್ಕೊಳಗಾಗುವುದಿಲ್ಲ. ಚಿಟ್ಟೆಯ ನಡತೆಯನ್ನು

28. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಾಕೋಲೂಕೀಯ-ಶ್ಲೋ-121, ಪು-505,(1993), ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.
29. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಾಕೋಲೂಕೀಯ-ಶ್ಲೋ-128, ಪು-512,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ನಡೆಯುವವನಿಗೇ ವಿನಾಶವು ಸ್ಪಷ್ಟವಾಗಿರುತ್ತದೆ. ಒಂದು ವಿಶೇಷ ಜಾಗೃತಿಯನ್ನು ವಿಷ್ಣುಶರ್ಮರು ಸೂಚಿಸಿದ್ದಾರೆ.

ಪಂಡಿತ ವಿಷ್ಣುಶರ್ಮರು ಪಂಚತಂತ್ರದ ಎರಡನೇ ತಂತ್ರ ಮಿತ್ರಸಂಪ್ರಾಪ್ತಿಯಲ್ಲಿ ಗೆಳೆಯರನ್ನು ಸಂಪಾದಿಸುವುದರ ಬಗ್ಗೆ ತಿಳಸುತ್ತಾ, ಗೆಳೆತನವನ್ನು ಹೊಂದಿದವರು ಅದನ್ನು ಎಂಥಾ ವಿಷಮಾವಸ್ಥೆಯ ಕಾಲದಲ್ಲೂ ಮೀರದೆ ಪರಸ್ಪರ ಸಹಕಾರ ಮನೋಭಾವವನ್ನು ಹೊಂದಿರಬೇಕು ಎಂಬ ಆದರ್ಶವನ್ನು ಉತ್ತಮ ನಿದರ್ಶನಗಳಂದ ಸ್ಪಷ್ಟಪಡಿಸಿದ್ದಾರೆ. ಸ್ನೇಹ ಬಹಳ ಮುಖ್ಯ, ಅದರಿಂದ ಒಗ್ಗಟ್ಟು, ಒಗ್ಗಟ್ಟಿನಲ್ಲಿ ಯಾವುದೇ ಕಾರ್ಯದಲ್ಲಿ ಯಶಸ್ಸು ಮತ್ತು ಅದರ ಪರಿಣಾಮಗಳನ್ನು ಅತ್ಯಂತ ಪ್ರಭಾವಯುತವಾಗಿ ಉತ್ತಮ ಸನ್ನಿವೇಶಗಳನ್ನು ಒದಗಿಸಿ ಚಿತ್ರಿಸಿದ್ದಾರೆ. ಸಮಾನ ಮನಸ್ಕರು ಸ್ನೇಹಿತರಾಗುವುದು ಸಹಜ. ಆದರೆ ಹಗೆಗಳು ಒಂದಾಗುವುದು ಬಹಳ ಮುಖ್ಯ. ಹಾಗೆ ಗೆಳೆತನವನ್ನು ಹೊಂದಿದವರು ಅದನ್ನು ಎಷ್ಟರಮಟ್ಟಿಗೆ ಪರಿಣಾಮಕಾರಿಯಾಗಿ ಬಳಸಿಕೊಂಡರು ಎಂಬ ಆದರ್ಶವನ್ನು ಸೊಗಸಾಗಿ ತಿಳಸಿದ್ದಾರೆ. ಚೆನ್ನಾಗಿ ಅರಿತ ವಿವೇಕಿಗಳು ಮಿತ್ರರನ್ನು ಸಂಪಾದಿಸಬೇಕು. ಮಿತ್ರರೊಂದಿಗೆ ಕಪಟದ ವ್ಯವಹಾರವನ್ನು ಮಾಡಬಾರದು. ಏಕೆಂದರೆ ಯಾರು ಮಿತ್ರರನ್ನು ಗಳಸಿಕೊಂಡು ಅವರೊಂದಿಗೆ ಕಪಟತನದಿಂದ ವರ್ತಿಸುವುದಿಲ್ಲವೋ ಅವರು ಎಂದಿಗೂ ಪರಾಭವವನ್ನು ಹೊಂದಲಾರರು.

अदेशकालज़्मनायतिक्षमं यदप्रियं लाघवकारि चात्मनः ।

योऽत्राब्रवीत्कारणवर्जितं वचो न तद्वचः स्यात् विषमेव तद्वचः ॥[30]

ಆಯಾ ದೇಶ ಹಾಗೂ ಕಾಲದ ಸ್ಥಿತಿಯನ್ನರಿಯದೆ, ಮುಂದಾಗುವುದನ್ನು ಗಮನಿಸದೆ, ತನ್ನನ್ನು ಹಗುರಗೊಳಸತಕ್ಕ, ಪ್ರಿಯವಲ್ಲದ, ಸಕಾರಣವಲ್ಲದ ಮಾತನ್ನು ಯಾರಾದರೂ ಇಲ್ಲಿ ಹೇಳದರೆ, ಅದು ಮಾತಲ್ಲ. ಅದು ವಿಷವೇ ಸರಿ. ಅಂದರೆ ಸರಿಯಾಗಿ ಪೂರ್ವಾಪರ ವಿಚಾರಮಾಡಿಕೊಂಡು ನಂತರ ಪ್ರತ್ಯಕ್ಷವಾದರೂ ಪ್ರಮಾಣಿಸಿನೋಡು ಎಂಬಂತೆ ಅರ್ಥೈಸಿಕೊಂಡು ಮಿತ್ರರನ್ನು ಸಂಪಾದಿಸಬೇಕು.ಬಹಳ ಒಳ್ಳೆಯ ಜಾಗ್ರತೆಯನ್ನು ಸೂಚಿಸಿದ್ದಾರೆ.

---

೩೦. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಾಕೋಲೂಕೀಯ-ಶ್ಲೋ-112, ಪು-498, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

## 5 – 4. ಉತ್ತಮ ಅಭ್ಯಾಸಗಳ ಬೆಳವಣಿಗೆ – ನಾಯಕತ್ವ – ಉತ್ತಮ ನಾಯಕನಿಗಿರಬೇಕಾದ ಗುಣಗಳು.

ನಾವು ಈಗಾಗಲೇ ವ್ಯಕ್ತಿತ್ವದ ಅರ್ಥ, ವ್ಯಾಖ್ಯೆ, ವ್ಯಾಪ್ತಿ ಇವುಗಳನ್ನು ವಿಚಾರ ಮಾಡುವಾಗ ವ್ಯಕ್ತಿತ್ವ ಮತ್ತು ಸಮಾಜದಲ್ಲಿ ಹೊಂದಾಣಿಕೆ, ಸಹಬಾಳ್ವೆ, ಉತ್ತಮ ಅಭ್ಯಾಸಗಳ ಬೆಳವಣಿಗೆ ಮುಂತಾದವುಗಳು ವ್ಯಕ್ತಿತ್ವ ವಿಕಾಸ ಕಾರ್ಯದಲ್ಲಿ ಎಷ್ಟರಮಟ್ಟಿಗೆ ಪ್ರಭಾವವನ್ನು ಬೀರುತ್ತವೆ ಎಂಬ ಬಗ್ಗೆ ವಿಚಾರ ಮಾಡಿದೆವು. ವಿದ್ಯಾರ್ಥಿಗಳ ಸರ್ವತೋಮುಖ ಬೆಳವಣಿಗೆ ಕಾರ್ಯದಲ್ಲಿ ಪರಿಸರ, ಶಾಲೆ, ಶಿಕ್ಷಕರು, ಪೋಷಕರು ಮಹತ್ವಪೂರ್ಣ ಜವಾಬ್ದಾರಿ ಹೊಂದಿರುತ್ತಾರೆ.

ಮಾನವ ಸಂಘಜೀವಿಯಾಗಿರುವುದರಿಂದ ಬಹಳ ಹಿಂದಿನಿಂದಲೂ, ಹಲವಾರು ರೀತಿಯ ಸಮೂಹಗಳನ್ನು ಸ್ಥಾಪಿಸಿಕೊಂಡಿದ್ದಾನೆ. ಯಾವುದೇ ಒಂದು ಸಮೂಹವು ಒಬ್ಬ ವ್ಯಕ್ತಿ ತನ್ನ ಪ್ರಾಥಮಿಕ ಹಾಗೂ ಮನೋವೈಜ್ಞಾನಿಕ ಅವಶ್ಯಕತೆಗಳೆಲ್ಲವನ್ನೂ ಪೂರೈಸಲು ಸಹಾಯ ಮಾಡುತ್ತದೆ. ಸಮೂಹದಲ್ಲಿ ಅನೇಕ ವಿಧಗಳುಂಟು :–[31]

**ಪ್ರಾಥಮಿಕ ಸಮೂಹ**–ಉದಾಹರಣೆಗೆ:–ಕುಟುಂಬ, ಗ್ರಾಮ ಸಮುದಾಯ, ಆಟದ ಗುಂಪುಗಳು ಇತ್ಯಾದಿ.

**ಅನುಷಂಗಿಕ ಸಮುದಾಯ**:–ಉದಾಹರಣೆಗೆ:– ಸಾಂಸ್ಕೃತಿಕ ಸಂಘಸಂಸ್ಥೆಗಳು. ಸಾಮಾಜಿಕ ಸೇವಾ ಸಂಸ್ಥೆಗಳು ಇತ್ಯಾದಿ.

**ಔಪಚಾರಿಕ ಸಮೂಹ**:– ಉದಾಹರಣೆಗೆ:– ಶಾಲೆ, ಕಛೇರಿ.

**ಅನೌಪಚಾರಿಕ ಸಮೂಹ**:–ಉದಾಹರಣೆಗೆ:– ದೇವಸ್ಥಾನ, ಚರ್ಚ್, ಮಸೀದಿ ಇತ್ಯಾದಿ.

ಇಲ್ಲಿ ನಾವು ಮುಖ್ಯವಾಗಿ ಗಮನಹರಿಸಬೇಕಾಗಿರುವುದು ಶಾಲೆ–ತರಗತಿ ಒಂದು ಸಮೂಹದಂತೆ ಕಾರ್ಯ ನಿರ್ವಹಿಸುತ್ತದೆ. ತರಗತಿಯು ಒಂದು ನಿರ್ದಿಷ್ಟವಾದ ಸಂರಚನೆಯನ್ನು ಹೊಂದಿದೆ. ತರಗತಿಯು ಕಲಿಕೆಗೆ ಮತ್ತು ವ್ಯಕ್ತಿತ್ವ ವಿಕಾಸಕ್ಕಾಗಿ ಒಂದೆಡೆ ಸೇರಿರುವ, ಸಮಾನ ಲಕ್ಷಣ ಹಾಗೂ ಉದ್ದೇಶಗಳನ್ನು ಹೊಂದಿರುವ ಮಕ್ಕಳ ಸಮೂಹವಾಗಿದೆ. ಇದು ತನ್ನದೇ ಆದ ನಾಯಕನನ್ನು ಹೊಂದಿದೆ. ಶಿಕ್ಷಕರೇ ತರಗತಿಯ ನಾಯಕರಾಗಿರುತ್ತಾರೆ. ಸಮುದಾಯದ ಸಾಂಸ್ಕೃತಿಕ ಹಾಗೂ ಸಾಮಾಜಿಕ ಪದ್ಧತಿಗಳು

---

31. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–7, ಪು–287.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

ತರಗತಿಯ ನಾಯಕತ್ವದ ಮೇಲೆ ವಿಶಿಷ್ಟ ಪ್ರಭಾವ ಬೀರುತ್ತವೆ. ಹೀಗೆಯೇ ಪ್ರತಿಯೊಂದು ಸಂಘ ಸಂಸ್ಥೆಗಳು ತನ್ನದೇ ಆದ ನಾಯಕನನ್ನು ಹೊಂದಿರುತ್ತದೆ.

ಸಮೂಹದ ನೀತಿಸಂಹಿತೆ ಹೆಚ್ಚಾಗಿ ನಾಯಕನ ಮೇಲೆ ಅವಲಂಬಿಸಿರುತ್ತದೆ. ಸದಸ್ಯರ ಆಲೋಚನೆಗಳು, ಮನೋಧೋರಣೆಗಳು ಹಾಗೂ ವರ್ತನೆಗಳ ಮೇಲೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಶಿಕ್ಷಕನು ಪ್ರಭಾವ ಬೀರುತ್ತಾನೆ. ನಾಯಕನು ಸಮೂಹದ ಸದಸ್ಯರ ಮೇಲೆ ಯಾವ ರೀತಿಯ ನಿಯಂತ್ರಣ ಹೊಂದಿರುತ್ತಾನೆ ಎಂಬುದರ ಆಧಾರದ ಮೇಲೆ ಮೂರು ರೀತಿಯ ನಾಯಕತ್ವದ ನಮೂನೆಗಳನ್ನು ವಿಂಗಡಿಸಬಹುದು. ಅವುಯಾವುವೆಂದರೆ,

**ಅ**. –ನಿರಂಕುಶ ಪ್ರಭುತ್ವ **ಬ**.– ಪ್ರಜಾಸತ್ತಾತ್ಮಕ ಮಾದರಿ ಮತ್ತು **ಕ**.– ನಿರ್ಬಂಧರಹಿತ ಪ್ರಭುತ್ವ ಮಾದರಿ.[32] ಇವುಗಳಲ್ಲಿ ಪ್ರಜಾಸತ್ತಾತ್ಮಕ ಮಾದರಿ ನಾಯಕತ್ವ ಅತ್ಯುತ್ತಮವಾದುದು. ಈ ರೀತಿಯ ಶಿಕ್ಷಕ ನಾಯಕರು ತರಗತಿ ಕಲಿಕೆಯ ಪ್ರಕ್ರಿಯೆಗಳನ್ನು ಯಶಸ್ವಿಯಾಗಿ ಮುನ್ನಡೆಸಬಲ್ಲರು. ಇವರು ಮಕ್ಕಳಲ್ಲಿ ನಾಯಕತ್ವದ ಗುಣಗಳನ್ನು ಗುರುತಿಸಿ, ಅವರನ್ನು ಉತ್ತಮ ನಾಯಕರನ್ನಾಗಿ ರೂಪಿಸಬಲ್ಲರು.

ಇತಿಹಾಸದಲ್ಲಿ ಕಾಣುವ ಒಂದೊಂದು ಸಾಧನೆಯಲ್ಲೂ ಒಬ್ಬೊಬ್ಬ ನಾಯಕನ ಪಾತ್ರವನ್ನು ಗುರುತಿಸಬಹುದು. ಆದರೆ ನಾಯಕನೊಬ್ಬನೇ ಯಾವ ಕಾರ್ಯವನ್ನೂ ಸಾಧಿಸಲಾರ. ಅವನನ್ನು ಒಪ್ಪಿ, ಗೌರವಿಸಿ ಹಿಂಬಾಲಿಸುವ ಪಂಗಡ ಅಗತ್ಯವಾದುದು. ತರಗತಿಯ ವಿಚಾರದಲ್ಲೂ ಅಷ್ಟೆ. ಶಿಕ್ಷಕರನ್ನು ಒಪ್ಪಿ, ಅವರ ವ್ಯಕ್ತಿತ್ವವನ್ನು ಗೌರವಿಸಿ, ಅವರ ನಾಯಕತ್ವವನ್ನು ಮೆಚ್ಚಿ ಸ್ವೀಕರಿಸಿದಾಗಲೇ ಮಕ್ಕಳು ಅವರ ಮಾರ್ಗದರ್ಶನವನ್ನು ಆಪ್ಯಾಯಮಾನವಾಗಿ ಬಳಸಿಕೊಳ್ಳುವರು. ಈ ರೀತಿಯ ಸನ್ನಿವೇಶವನ್ನು ನಿರ್ಮಿಸಿ, ಮಕ್ಕಳ ಮನಸ್ಸನ್ನು ಗೆಲ್ಲುವ ವಿಚಾರದಲ್ಲಿ ಶಿಕ್ಷಕರ ಮನೋವಿಜ್ಞಾನವೂ ಬಹಳ ಮುಖ್ಯ.

ಮೈಕೇಲ್ ಮುಂತಾದವರು ಅನೇಕ ಸಂಶೋಧನೆಗಳನ್ನು ನಡೆಸಿ, ಉಪಾಧ್ಯಾಯರು ಒಬ್ಬ ನಾಯಕನಾಗಿ ಯಾವ ರೀತಿ ವರ್ತಿಸುವುದರಿಂದ ಮಕ್ಕಳಿಗೆ ಉತ್ತಮ ಕಲಿಕಾ ಸನ್ನಿವೇಶವನ್ನು ರೂಪಿಸಿಕೊಡಬಹುದೆಂಬ ಅಂಶವನ್ನು ಬೆಳಕಿಗೆ ತಂದಿರುತ್ತಾರೆ[33] ಅವುಗಳಲ್ಲಿ ಮುಖ್ಯವಾದವುಗಳೆಂದರೆ:–

---

32. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–7, ಪು–296.(2005)ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005
33. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–12, ಪು–298.(2005)ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

**1. ಸಹಕಾರ–ಸ್ವಾತಂತ್ರ್ಯಗಳ ಮನೋಭಾವ.**

**2. ದಯೆ ಮತ್ತು ಕ್ಷಮಾಗುಣ**

**3. ಸಹನೆ.**

**4. ವಿಶಾಲ ಆಸಕ್ತಿ.**

**5. ದೈಹಿಕ ಸ್ವರೂಪ ಮತ್ತು ಹಿತಕರವೆನಿಸುವ ವರ್ತನೆ.**

**6. ನ್ಯಾಯಪರತೆ ಮತ್ತು ಪಕ್ಷವಿರಹಿತ ಗುಣ.**

**7. ಸರಸ ಮತ್ತು ಹಾಸ್ಯ.**

**8. ಒಳ್ಳೆಯ ಭಾವನೆ ಮತ್ತು ಒಂದೇ ರೀತಿಯ ಮನೋಭಾವ.**

**9. ಅನುಸರಣೆ, ಅಗತ್ಯಕ್ಕೆ ತಕ್ಕ ಅವಕಾಶ, ಸೂಕ್ತ ರೀತಿಯ ಪ್ರಶಂಸೆ.**

**10. ಬೋಧನೆಯ ವಿಷಯದಲ್ಲಿ ಪಾಂಡಿತ್ಯ.**

ಶಿಕ್ಷಕರು ಪಡೆದಿರುವ ವ್ಯಕ್ತಿತ್ವದಲ್ಲಿ ವೈವಿಧ್ಯತೆಗಳಿರುತ್ತವೆ. ಹಾಗೆಯೇ ಅವರು ವಹಿಸುವ ತರಗತಿ ನಾಯಕತ್ವದ ಸ್ವರೂಪದಲ್ಲೂ ವೈವಿಧ್ಯತೆಗಳಿರುತ್ತವೆ. ಬ್ರಾಡ್ ಫೀಲ್ ಮತ್ತು ಆಪಿಟ್ ಎಂಬುವವರು ನಡೆಸಿದ ಸಂಶೋಧನೆಯಲ್ಲಿಯೂ ಪ್ರಜಾಸತ್ತಾತ್ಮಕ ಮಾದರಿ ತತ್ವವನ್ನನುಸರಿಸಿ ನಾಯಕತ್ವವನ್ನು ವಹಿಸುವ ಶಿಕ್ಷಕರು–ವಿದ್ಯಾರ್ಥಿಗಳಲ್ಲಿ ಉತ್ತಮ ವ್ಯಕ್ತಿತ್ವ ನಿರ್ಮಾಣ ಮಾಡಬಲ್ಲರೆಂದು ಸ್ಥಿರಪಟ್ಟಿದೆ. ಇಂಥ ಉಪಾಧ್ಯಾಯರ ಬಗ್ಗೆ ಮಕ್ಕಳಲ್ಲಿ ಅಭಿಮಾನ, ಆಸಕ್ತಿ, ಗೌರವಗಳು ತಾನಾಗಿಯೇ ಮೂಡುತ್ತವೆ. ಅವರ ನಾಯಕತ್ವವನ್ನು ಒಪ್ಪಿ ಸಮಾಜಕ್ಕೆ ಸಹಕಾರಿಯಾಗುವ ಸನ್ನಿವೇಶಗಳಲ್ಲಿ ಪರಿಣಾಮಕಾರಿಯಾಗಿ ಕಲಿವನ್ನು ನಡೆಸುವರು.[34]

## ಉತ್ತಮ ನಾಯಕತ್ವದ ಲಕ್ಷಣಗಳು

ತರಗತಿಯಲ್ಲಿ ಯಶಸ್ವೀ ನಾಯಕತ್ವ ವಹಿಸಬಲ್ಲ ಉಪಾಧ್ಯಾಯರ ಲಕ್ಷಣಗಳನ್ನು ಸಂಶೋಧಕರು ನಿಷ್ಕರ್ಷೆ ಮಾಡಿ ಈ ರೀತಿ ಉಲ್ಲೇಖಿಸಿದ್ದಾರೆ.

1. ತರಗತಿಯಲ್ಲಿ ಮಕ್ಕಳು ತಮ್ಮ ಪಾಠ ಪ್ರವಚನ, ಉದ್ಯಮಗಳ ಗುರಿಯನ್ನು ತಾವೇ ಕಲೆತು ನಿರ್ಣಯಿಸಿ ಕೊಳ್ಳಲು ಅವಕಾಶ ಮಾಡಿ ಕೊಡುವರು. ಆಚರಣೆಯ ಕ್ರಮವನ್ನು ಅರಿಯಲು ಮಕ್ಕಳಿಗೆ ಸಹಾಯ ಮಾಡುವರು.

---

34. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 12.ಪು–299–300.(1962) ‘
ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

2. ಮಕ್ಕಳು ಆಯಾ ವಯಸ್ಸಿನಲ್ಲಿ ಪ್ರಕಾಶಕ್ಕೆ ಹಾತೊರೆಯುತ್ತಿರುತ್ತಾರೆ. ಅವರ ಸಾಮಾಜಿಕ ಆಕಾಂಕ್ಷೆಗಳು ತೃಪ್ತಿಗೊಳ್ಳಲು ಅವಕಾಶ ಕಲ್ಪಿಸುವರು.

3. ಉತ್ತಮ ಕಾರ್ಯ ಮಾಡಿದ ಮಕ್ಕಳನ್ನು ಪ್ರಶಂಸಿಸಿ, ಇಲ್ಲದವರನ್ನು ಎಚ್ಚರಿಸಿ, ಸೂಕ್ತವೂ, ಪಕ್ಷಪಾತವಿಲ್ಲದ್ದೂ ಆದ ಮಾರ್ಗದರ್ಶನ ನೀಡುವರು.

4. ತಮ್ಮ ವೈಯಕ್ತಿಕ ಆಶೋತ್ತರಗಳನ್ನೂ, ಮನೋಧರ್ಮವನ್ನೂ ಬದಿಗಿರಿಸಿ, ಮಕ್ಕಳ ಬೆಳವಣಿಗೆಗೆ ಸೂಕ್ತವೆನಿಸುವಂತೆ ವರ್ತಿಸುವರು.

5. ಮಕ್ಕಳು ಸಾಧಿಸಿದ ಅಭಿವೃದ್ಧಿಯ ಮೌಲ್ಯ ನಿರ್ಧಾರ ಕಾರ್ಯದಲ್ಲಿ ಮಕ್ಕಳೂ ಪಾತ್ರ ವಹಿಸುವ ಅವಕಾಶವನ್ನು ಕಲ್ಪಿಸಿ, ಅವರ ತಪ್ಪುನೆಪ್ಪುಗಳನ್ನು ಅವರೇ ಅರಿತುಕೊಳ್ಳಲು ಸಹಾಯ ಮಾಡುವರು.

ನಾಯಕ ಅಥವಾ ಗುಂಪಿನ ನೇತಾರನಾಗಬಯಸುವವನು ಮೈಯೆಲ್ಲಾ ಎಚ್ಚರವಾಗಿರಬೇಕು. ಯಾವುದೇ ಅಪಸ್ವರ ಬರದಂತೆ ಸ್ವಚ್ಛ ಮನಸ್ಸಿನಿಂದ ಶುದ್ಧಹಸ್ತನಾಗಿ ಕೆಲಸ ಮಾಡಬೇಕು. ಗುಂಪಿಗೆ ನಾಯಕನಾದ ಬಳಿಕ ಹೊಗಳಿಕೆ- ತೆಗಳಿಕೆಗಳು ಬಂದರೆ ಧೃತಿಗೆಡದೆ ಸಮಚಿತ್ತದಿಂದ ಎದುರಿಸಬೇಕು. ಸ್ತುತಿಯೊಂದಿಗೆ ನಿಂದೆಯನ್ನೂ ಸ್ವೀಕರಿಸಲು ಸಿದ್ಧನಾಗಿ दुःखेष्वनुद्विग्नमनाः सुखेषु विगतस्पृहः।[35] ಎಂಬ ಗೀತಾವಾಕ್ಯದಂತೆ ಸುಖ-ದುಃಖಗಳನ್ನು ಸಮನಾಗಿ ಸ್ವೀಕರಿಸಬಲ್ಲ ಸ್ಥಿತಪ್ರಜ್ಞನಂತಿರಬೇಕು. ಹೀಗಿದ್ದ ನಾಯಕನು ಮಾತ್ರ ಮನೋವಿಕಲತೆಗೊಳಗಾಗದೆ ಸಮರ್ಥ ರೀತಿಯಲ್ಲಿ ನೇತಾರನಾಗಿ ಸ್ಥಾನ ನಿಭಾಯಿಸಿಕೊಂಡು ಹೋಗಬಲ್ಲನು. ಇದು ಪ್ರಜಾನಾಯಕನಾದ ಒಬ್ಬ ರಾಜನಿಗೂ ಅನ್ವಯವಾಗುತ್ತದೆ.

न गणस्याग्रतो गच्छेत्सिद्धे कार्ये समं फलम् ।

यदि कार्यविपत्तिः स्यात् मुखरस्तत्र हन्यते ॥[36]

ಅಂದರೆ "ಗುಂಪಿನ ಮುಂದಾಳಾಗಿ ಹೋಗುವವರಿಗೆ ಎಚ್ಚರಿಕೆಯ ಘಂಟೆಯಾಗಿದೆ. ಗುಂಪಿನ ಮುಂದಾಳಾಗಿ ಹೋಗಬಾರದು. ಕಾರ್ಯ ಯಶಸ್ವಿಯಾದರೆ ಫಲವನ್ನು (ಗುಂಪಿನಲ್ಲಿ ಎಲ್ಲರೂ)ಸಮನಾಗಿ ಹಂಚಿಕೊಳ್ಳುತ್ತಾರೆ. ಒಂದು ವೇಳೆ ಕಾರ್ಯ ವಿಫಲವಾದರೆ ಆಗ ಮುಂದಾಳಾಗಿ ಹೋದವನನ್ನು ಎಲ್ಲರೂ ತೆಗಳುತ್ತಾರೆ.

---

35. **ಭಗವದ್ಗೀತೆ**ಯ ದ್ವಿತೀಯ ಅಧ್ಯಾಯ, ಶ್ಲೋ - 56.

36. **ಭಟ್. ವಿ.ಎನ್,** ಜ್ಞಾನದೀಪ, ಅ-54 (ಶಾರ್ಙ್ಗಧರ ಪದ್ಧತಿ) ಪು-103.(1993) ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ-577201

ಈ ರೀತಿಯ ಗುಣಗಳನ್ನು ಹೊಂದಿರುವ ಉಪಾಧ್ಯಾಯರೆಲ್ಲರೂ ನಿಜವಾಗಿಯೂ ಮಕ್ಕಳಿಗೆ ಒಳ್ಳೆಯ ನಾಯಕರಾಗಿ ವರ್ತಿಸಿ, ಅವರ ಕಲಿಕೆಯನ್ನು ಪರಿಣಾಮಕಾರಿಯಾಗಿಯೂ, ಫಲದಾಯಕವಾಗಿಯೂ ಮಾಡುವರು. ಇದೇ ಮಾದರಿ ಲಕ್ಷಣಗಳನ್ನು ಪ್ರತಿಭಾವಂತ ಶಿಕ್ಷಕ ವಿಷ್ಣುಶರ್ಮರು ಹೊಂದಿದ್ದು ಅತ್ಯಂತ ಯಶಸ್ವಿಯಾಗಿ ರಾಜನಂದನರನ್ನು ಬಹಳ ಚಾಕಚಕ್ಯತೆಯಿಂದ ಅದರಲ್ಲೂ ಅಂಥಹ ಮಂದಮತಿಗಳಿಗೆ ಉತ್ತಮ ಶಿಕ್ಷಣವನ್ನು ಕೊಟ್ಟು, ರಾಜನೀತಿ ನಿಪುಣರನ್ನೂ, ಬದುಕಿನ ರೀತಿನೀತಿಗಳನ್ನು ಅರಿತವರನ್ನಾಗಿಯೂ ಮಾಡಿದ್ದಾರೆ. ಇದು ಅವರ ಶಿಕ್ಷಕ ನಾಯಕತ್ವಕ್ಕೆ ದ್ಯೋತಕವಾಗಿದೆ.



# 5 – 5. पञ्चतन्त्रस्य –द्वितीयं तन्त्रम्– "मित्रसम्प्राप्तिः –

## ಕಥೆಗಳ ವಿಶ್ಲೇಷಣೆ

ಮಿತ್ರಲಾಭ ಅಥವಾ ಮಿತ್ರಸಂಪ್ರಾಪ್ತಿಯಲ್ಲಿ ಕಂಡುಬರುವ ಪ್ರಧಾನ ಪಾತ್ರವರ್ಗವೆಂದರೆ– ಚಿತ್ರಗ್ರೀವ ಎಂಬ ಹೆಸರಿನ ಪಾರಿವಾಳ, ಲಘುಪತನಕ ಎಂಬ ಹೆಸರಿನ ಕಾಗೆ, ಹಿರಣ್ಯಕ ಎಂಬ ಹೆಸರಿನ ಇಲಿ, ಮಂಥರಕನೆಂಬ ಆಮೆ, ಚಿತ್ರಾಂಗನೆಂಬ ಜಿಂಕೆ. ಗೆಳೆತನದ ಮಹತ್ವವನ್ನು ಒಗ್ಗಟ್ಟಿನ ಬಲವನ್ನು ಸಂಘಟನೆಯ ಶಕ್ತಿಯನ್ನು ಎತ್ತಿಹಿಡಿಯಲು ಪ್ರಾರಂಭದಲ್ಲಿ ಬರುವ ಕಾಗೆ ಮತ್ತು ಇಲಿಯ ಸ್ನೇಹತ್ವ, ಆಮೆ ಜಿಂಕೆಗಳ ಮಿತ್ರತ್ವ ಬಹಳ ಸೊಗಸಾಗಿ ಚಿತ್ರಿಸಲ್ಪಟ್ಟಿದೆ. ಆಪತ್ಕಾಲದಲ್ಲಿ ಒಂದಕ್ಕೊಂದು ಸ್ಪಂದಿಸಿ, ಸಹಕರಿಸುತ್ತಾ, ಮಾನವರೂ ಸಹ ಈ ತತ್ವವನ್ನು ತಿಳಿದುಕೊಳ್ಳಲು ಉತ್ತಮ ಪ್ರದರ್ಶನವನ್ನು ಕೊಟ್ಟು ಉಪದೇಶಿಸುತ್ತವೆ. ಈ ತಂತ್ರದಲ್ಲಿ ಆರು ಉಪಕಥೆಗಳಿದ್ದು ಕೌಶಲ್ಯ ಹಾಗೂ ಚಾಣಾಕ್ಷತನದಿಂದ ದುರ್ಬಲ ಪ್ರಾಣಿಗಳೂ ಸಹ ಕಾರ್ಯವನ್ನು ಹೇಗೆ ಸಾಧಿಸಬಹುದು ಎಂಬುದಕ್ಕೆ ನಿದರ್ಶನಗಳಾಗಿವೆ. ಬೇರೆ ಬೇರೆ ಆಹಾರಗಳನ್ನು ತಿಂದು ವಿಭಿನ್ನ ಪರಿಸರದಲ್ಲಿ ಬದುಕುವ ಪ್ರಾಣಿಗಳು ಒಳ್ಳೆಯ ಮಿತ್ರತ್ವದಿಂದ ವಿಭಿನ್ನ ಸಾಹಸಗಳಲ್ಲಿ ತೊಡಗುತ್ತವೆ. ವಿಷ್ಣುಶರ್ಮರು ಬದುಕಿನ ನಿತ್ಯವ್ಯವಹಾರಗಳ ಅನುಭವಗಳನ್ನೇ ಒದಗಿಸಿ ಬಹಳ ಸರಳವಾಗಿ ತಿಳಿಹೇಳುತ್ತಾರೆ:–

एह्यागच्छ समाश्रयासनमिदं कस्माच्चिराद् दृश्यसे
का वार्ता अतिदुर्बलोऽसि कुशलं प्रीतोऽस्मि ते दर्शानात् ।

एवं ये समुपागतान्प्रणयिनः प्रह्लादयन्त्यादरात् तेषां
युक्तमशक्ङितेन मनसा हर्म्याणि गन्तुं सदा ॥[37]

ಅಂದರೆ, "ಬನ್ನಿ ಬನ್ನಿ, ಈ ಆಸನದಲ್ಲಿ ಕುಳಿತಿರಿ, ಬಹಳ ಕಾಲದಿಂದ ಏಕೆ ಕಾಣಲಿಲ್ಲ? ಸಮಾಚಾರವೇನು? ಬಹಳ ದುರ್ಬಲರಾಗಿದ್ದೀರಲ್ಲಾ, ಕುಶಲವೇ? ನಿಮ್ಮನ್ನು ಕಂಡು ಬಹಳ ಸಂತಸವಾಯಿತು "ಈ ರೀತಿಯಲ್ಲಿ ಯಾರು ಬಂದ ಮಿತ್ರರನ್ನು ಸೌಹಾರ್ದದಿಂದ ಸಂತೋಷಪಡಿಸುವರೋ ಅಂಥವರ ಮನೆಗೆ ಯಾವ ಅನುಮಾನವೂ ಇಲ್ಲದ ಮನಸ್ಸಿನಿಂದ ಯಾವಾಗಲೂ ಹೋಗುವುದು ಸರಿಯಾದುದು.

ಈ ಅಧ್ಯಾಯದಲ್ಲಿ ವಿಶ್ಲೇಷಣೆ ನಡೆಸಿರುವ– ಶೈಕ್ಷಣಿಕ ಅಂಶಗಳ ಪ್ರಾಮುಖ್ಯತೆ, ವ್ಯಕ್ತಿಯಲ್ಲಿನ ಸೃಜನಶೀಲತೆ, ವ್ಯಕ್ತಿತ್ವ–ಅದರ ವಿಕಾಸದಲ್ಲಿ ಶಾಲೆ ಮತ್ತು ಶಿಕ್ಷಕರ ಪಾತ್ರ, ವ್ಯಕ್ತಿತ್ವ ಮತ್ತು ಹೊಂದಾಣಿಕೆ,

---

37. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಸಂಪ್ರಾಪ್ತಿ– ಶ್ಲೋ–66, ಪು–345,346,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಸಹಬಾಳ್ವೆ ಹಾಗೂ ನಾಯಕತ್ವದ ಲಕ್ಷಣಗಳು ಇತ್ಯಾದಿಗಳನ್ನು ಕುರಿತು ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ಚಿಂತನೆ ನಡೆಸಲಾಗಿದೆ.

ಪ್ರಸ್ತುತ ವಿಷ್ಣುಶರ್ಮ ವಿರಚಿತ ಪಂಚತಂತ್ರದಲ್ಲಿ ಅಳವಡಿಸಿರುವ ವ್ಯವಸ್ಥಿತ ಶಿಕ್ಷಣ ಯೋಜನೆ, ವ್ಯಕ್ತಿತ್ವ ನಿರ್ಮಾಣಕ್ಕೆ ಅವಶ್ಯಕವಾಗಿರುವ ಬೋಧನಾ ಕ್ರಮ, ಸನ್ನಿವೇಶ, ನೀತಿನಿಯಮಗಳು ಎಷ್ಟರಮಟ್ಟಿಗೆ ಪರಿಣಾಮ ಕಾರಿಯಾಗಿದೆ ಎಂಬುದನ್ನು ಪರಿಶೀಲಿಸೋಣ. ರಾಜಕುಮಾರರಲ್ಲಿದ್ದ ಮೂಲ ಮನೋಧೋರಣೆಗಳು, ವರ್ತನೆಗಳು, ಸಹವಾಸ ದೋಷ, ಸ್ವೇಚ್ಛಾಪ್ರವೃತ್ತಿ ಇತ್ಯಾದಿಗಳ ಬಗ್ಗೆ ಸೂಕ್ಷ್ಮವಾಗಿ ಗಮನಿಸಿ, ಅವರುಗಳ ಋಣಾತ್ಮಕ ವರ್ತನೆಗಳನ್ನು, ಧನಾತ್ಮಕವಾಗಿ ಪರಿವರ್ತಿಸಲು ವಿಷ್ಣುಶರ್ಮರು ಅಂಥಹ ಹಿರಿಯ ವಯಸ್ಸಿನಲ್ಲಿ ಆದರ್ಶ ಪರಿಶ್ರಮದಿಂದ ತಮ್ಮನ್ನು ತಾವು ಎಷ್ಟರಮಟ್ಟಿಗೆ ತೊಡಗಿಸಿದ್ದಾರೆಂಬುದರ ಕುರಿತು ಪಂಚತಂತ್ರದ ದ್ವಿತೀಯ ತಂತ್ರವಾದ ಮಿತ್ರಸಂಪ್ರಾಪ್ತಿ–ಮಿತ್ರಲಾಭದಲ್ಲಿ ಕಂಡು ಬರುವ ಕಥೆಗಳ ಬಗ್ಗೆ ವಿಚಾರ ಮಾಡೋಣ.

ದಿನವೂ ಸೂಕ್ತ ಸಮಯದಲ್ಲಿ ಕಥೆಗಳನ್ನು ಕೇಳುತ್ತ, ಕೇಳುತ್ತಾ ಕಥೆಗಿಂತಲೂ ಕಥೆಯ ಹಿಂದಿರುವ ವಿಚಾರಗಳನ್ನು ಕಥೆಯ ನಡುನಡುವೆ ಕೆಲವು ಒಳ್ಳೆಯ ಪ್ರಶ್ನೆಗಳು ಉದ್ಭವಿಸಿದ್ದನ್ನು, ಧೈರ್ಯದಿಂದ ಸ್ವತಂತ್ರವಾಗಿ ಕೇಳಿ, ಅರ್ಥೈಸಿಕೊಳ್ಳುವಷ್ಟರಮಟ್ಟಿಗೆ ಕೆಲವೇ ದಿನಗಳಲ್ಲಿ ಪರಿವರ್ತನೆಗೊಂಡಿದ್ದ ರಾಜಕುಮಾರರನ್ನು ಕಂಡು ವಿಷ್ಣುಶರ್ಮರಿಗೆ ಬಹಳ ಸಂತೋಷವಾಯಿತು ಹಾಗೂ ಸಮಾಧಾನವಾಯಿತು. ಏಕೆಂದರೆ ಅವರ ಬೋಧನಾ ಮಾಧ್ಯಮ–ಕಥಾನಿರೂಪಣಾ ವಿಧಾನದ ಆಯ್ಕೆ ಪರಿಣಾಮಕಾರಿಯಾಗಿದೆ ಎಂಬುದಕ್ಕೆ. ಇಂಥಹ ವಿದ್ಯಾರ್ಜನೆಯ ಪ್ರಗತಿ ಕಂಡುಬರುವ ಸಂದರ್ಭದಲ್ಲಿ ಒಬ್ಬ ಉತ್ತಮ ಶಿಕ್ಷಕನಿಗೆ ಬಹಳ ಸಂತೋಷ ಹಾಗೂ ತನ್ನ ವೃತ್ತಿಯಲ್ಲಿ ಸಾರ್ಥಕತೆ ಬಗ್ಗೆ ಹೆಮ್ಮೆಯೆನಿಸುತ್ತದೆ. ಇವರಿಗೆ ನ್ಯಾಯ, ರಾಜನೀತಿಧರ್ಮ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರಗಳನ್ನು ಕ್ರಮವಾಗಿ ಬೋಧಿಸುವ ಕಾಲ ಸನಿಹವಾಗುತ್ತಿದೆ ಎಂದೆನಿಸಿತು. ಆದ್ದರಿಂದ ಪಂಚತಂತ್ರಗಳಲ್ಲಿ ಮುಖ್ಯವಾದ ಮಿತ್ರಸಂಪಾದನೆಯನ್ನು ಕಥೆಗಳ ಮೂಲಕ ಸೂಚ್ಯವಾಗಿ ತಿಳಿಸಿಕೊಡಬೇಕೆಂದು ಸಿದ್ಧರಾದರು.[38]

ಇಲ್ಲಿ ದ್ವಿತೀಯ ಸೂತ್ರ ಮಿತ್ರಸಂಪ್ರಾಪ್ತಿ ಅಥವಾ ಮಿತ್ರಲಾಭ ಅಥವಾ ಸುಹೃಲ್ಲಾಭದ ವ್ಯವಸ್ಥಿತ ನೀತಿ ಕಥಾಗುಚ್ಛ ನಿರೂಪಣಾ ಪ್ರಾರಂಭದಲ್ಲಿ ಶೈಕ್ಷಣಿಕ ಮನೋವಿಜ್ಞಾನದ ನಿಯಮದಂತೆ ಅರಸುಕುಮಾರರಿಗೆ ಉತ್ತಮ ಪ್ರೇರಣೆಯನ್ನುಂಟುಮಾಡುತ್ತದೆ.

38. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ–2, ಪು–107. ವರ್ನಿಲ, 39/2–11, ಕಲ್ಯಾಣಿಗಾರ್ಡನ್, BSK 1st stage, ಬೆಂಗಳೂರು–560050.(2015)

असाधना अपि प्राज्ञा बुद्धिमन्तो बहुश्रुताः ।

साधयन्त्याशु कार्याणि काकाखुमृगकूर्मवत् ॥[39]

ಅಂದರೆ, ಬುದ್ಧಿವಂತರಾದವರು ಸಾಧನಗಳೂ, ಧನವೂ ಇಲ್ಲದೆ ಒಬ್ಬರೊಂದಿಗೊಬ್ಬರು ಸ್ನೇಹ ಬೆಳೆಸಿಕೊಂಡು ತಮಗೆ ಬೇಕಾದ ಕಾರ್ಯಗಳನ್ನು ಕಾಕಕೂರ್ಮಮೃಗಮೂಷಿಕಗಳ ಹಾಗೆ ಚೆನ್ನಾಗಿ ನೆರವೇರಿಸಿಕೊಳ್ಳುವರು ಎಂದು ವಿಷ್ಣುಶರ್ಮರು ಪ್ರಾರಂಭಿಸುವುದೇ ತಡ, ರಾಜಕುಮಾರರು ಬಹಳ ಕುತೂಹಲದಿಂದ ಕೇಳುತ್ತಾರೆ. ಗುರುಗಳೇ ಕಾಕಕೂರ್ಮಮೃಗಮೂಷಿಕಗಳಿಗೆ ಹೇಗೆ ಸ್ನೇಹವಾಯಿತು? ಅವು ಯಾವ ಕಾರ್ಯಗಳನ್ನು ನೆರವೇರಿಸಿಕೊಂಡವು? ನಮಗೆ ವಿವರವಾಗಿ ತಿಳಿಸಬೇಕು ಎಂದು ಹೇಳುತ್ತಾರೆ.

ವಿದ್ಯಾರ್ಥಿಗಳಲ್ಲಿ ಕಥೆ ಕೇಳುವ ಬಗ್ಗೆ ಅಪಾರವಾದ ಪ್ರೀತಿ, ಶ್ರದ್ಧೆ ಹಾಗೂ ಕುತೂಹಲವನ್ನು ವಿಷ್ಣುಶರ್ಮರು ಬೆಳೆಸಿದ್ದರು. ಈ ಲಕ್ಷಣ ಒಬ್ಬ ಪ್ರತಿಭಾನ್ವಿತ ಶಿಕ್ಷಕನ ಗುಣ. ಗಲ್ಲಕ್ಕೆ ಕೈಕೊಟ್ಟು ಗುರುಗಳು ಹೇಳುವುದನ್ನು ಕೇಳಲು ಕಾತರರಾಗಿ ಕುಳಿತಿದ್ದ ರಾಜಕುಮಾರರನ್ನು ಉದ್ದೇಶಿಸಿ ವಿಷ್ಣುಶರ್ಮರು ನಗುನಗುತ್ತಾ ಹೇಳುತ್ತಾರೆ– "ರಾಜ್ಯಕ್ಷೇಮ, ರಾಜ್ಯವಿಸ್ತಾರ, ಸಂಪತ್ತಿನ ಗಳಿಕೆ, ಶಾಂತಿ ಸಮಾಧಾನದ ಪ್ರಜೆಗಳು ಇವೆಲ್ಲದಕ್ಕೂ ರಾಜನ ಪುಣ್ಯ ಹೇಗೆ ಕಾರಣವೋ ಹಾಗೆ ಅವನ ರಾಜನೀತಿಯೂ ಮುಖ್ಯವಾಗಿರುತ್ತದೆ. ವೈರಿಗಳನ್ನು ಮಿತ್ರರನ್ನಾಗಿಸುವ ಚಾಕಚಕ್ಯತೆ ಅವನಿಗಿರಬೇಕಾಗುತ್ತದೆ. ಮಿತ್ರರ ಸಂಪಾದನೆಗಾಗಿ ಉಪಾಯಗಳನ್ನು ಹುಡುಕಬೇಕಾಗುತ್ತದೆ. ಹಾಗೆ ಮಾಡಿಕೊಂಡ ಮಿತ್ರರು ಚಿಕ್ಕವರಾಗಿರಲಿ – ದೊಡ್ಡವರಾಗಿರಲಿ, ದುರ್ಬಲರಾಗಿರಲಿ – ಸಬಲರಾಗಿರಲಿ, ಅವರಿಂದ ಉಪಕಾರವು ಸಂದಿಗ್ಧ ಸಂದರ್ಭದಲ್ಲಿ ಆಗಿಯೇ ಆಗುತ್ತದೆ.

ಮಿತ್ರಸಂಪ್ರಾಪ್ತಿಯ ಮೊದಲ ಉದಾಹರಣೆಯಾಗಿ ಪಾರಿವಾಳ ಮತ್ತು ಇಲಿಯ ಮಿತ್ರತ್ವದ ಪ್ರಸಂಗವನ್ನು ಚಿತ್ರಗ್ರೀವ ಕಪೋತರಾಜ, ಹಿರಣ್ಯಕ ಇಲಿ ಮತ್ತು ಲಘುಪತನಕ ಕಾಗೆ ಕಥೆಯ ಮೂಲಕ ಸ್ವಾರಸ್ಯವಾದ ಶ್ರುತಿಯಲ್ಲಿ ಹೇಳುತ್ತಾರೆ "ಒಗ್ಗಟ್ಟಿನಲ್ಲಿ ಬಲವಿದೆ" ಎಂಬ ಅಂಶವನ್ನು ರಾಜಕುಮಾರರಿಗೆ ತಿಳಿಹೇಳುತ್ತಾರೆ. ಬೇಡನ ಬಲೆಯಿಂದ ಬಂಧಿತರಾಗಿದ್ದ ನೂರಾರು ಸಂಖ್ಯೆಯ ಪಾರಿವಾಳಗಳು, ಬುದ್ಧಿವಂತನಾಗಿದ್ದ ಮುದಿ ಪಾರಿವಾಳದ ಸಲಹೆಯನ್ನು ಪಡೆದು ಎಲ್ಲರೂ ಒಟ್ಟಿಗೆ ಹಾರಿ ಒಂದು ವಿಪತ್ತಿನಿಂದ ಪಾರಾದವು. ಆದರೆ ಬಲೆಯಿಂದ ಬಂಧಮುಕ್ತರಾಗಬೇಕಲ್ಲಾ ಎಂದು ಯೋಚಿಸಿ, ತಮ್ಮೊಡೆಯನಾದ ಚಿತ್ರಗ್ರೀವನ ಸಲಹೆಯನ್ನು ಬಯಸಿದವು. ಚಿತ್ರಗ್ರೀವನು ಹಿರಣ್ಯರೋಮನ ಹತ್ತಿರ ಕರೆದುಕೊಂಡು ಹೋಗಿ ಪಕ್ಷಿಗಳ ಅವಸ್ಥೆಯನ್ನು ತಿಳಿಸಿ, ಸಹಾಯ ಕೋರಿದನು. ಎಂಥಹವರಿಗೂ ಕೆಲವೊಮ್ಮೆ ಕಷ್ಟದ ಪರಿಸ್ಥಿತಿ

---

39. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರ, ಮಿತ್ರಸಂಪ್ರಾಪ್ತಿ–ಶ್ಲೋ–1 ಪು–305, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಎದುರಾಗುವುದು ಎನ್ನುವುದಕ್ಕೆ ಚಿತ್ರಗ್ರೀವನು ಬಹಳ ಸೊಗಸಾಗಿ ಹೇಳುತ್ತಾನೆ. ಸೂರ್ಯಚಂದ್ರರಿಗೂ ಗ್ರಹಣವುಂಟು. ಚಂದ್ರನಿಗೂ ವೃದ್ಧಿ ಕ್ಷಯವುಂಟು. ಸಮುದ್ರಕ್ಕೂ ಉಬ್ಬರ ಇಳಿತ ಉಂಟು. ಚಂದ್ರನ ಅರೆಯಂತೆ ಭಾಗ್ಯ – ಕಪ್ಪುಗಳು ಮೇಲೆ ಕೆಳಗೆ ಹೋಗಿ ಬರುತ್ತಿರುತ್ತದೆ. ಆದ್ದರಿಂದ ವಿಧಿಯೇ ಬಲವತ್ತರವಾದದ್ದು. ಈ ಮಾತುಗಳನ್ನು ಮೆಚ್ಚಿ, ಚಿತ್ರಗ್ರೀವನನ್ನು ಬಲೆಯಿಂದ ಬಿಡಿಸಲು ಇಲಿಯು ಮುಂದಾಯಿತು. ಆಗ ಚಿತ್ರಗ್ರೀವನು "ಗೆಳೆಯ ಮೊದಲು ನನ್ನನ್ನು ನಂಬಿ ಬಂದ ಪರಿವಾರವನ್ನು ಬಿಡಿಸು, ನಂತರ ನನ್ನನ್ನು" ಎಂದು ಹೇಳಿದಾಗ ಇಲಿಯು ಚಿತ್ರಗ್ರೀವನ ರಾಜನೀತಿಯನ್ನು ಮೆಚ್ಚಿ, ಒಂದು ನೆನಪಿನಲ್ಲಿಡಬೇಕಾದ ವಿಷಯವನ್ನು ತಿಳಿಸಿದನು. "ಆಪತ್ಕಾಲಕ್ಕೆಂದು ಸಂಪತ್ತನ್ನು ರಕ್ಷಿಸಿಡಬೇಕು. ಸಂಪತ್ತು ಪರಿವಾರ ಎರಡನ್ನೂ ರಕ್ಷಿಸಬೇಕಾದ ಸಂದರ್ಭ ಬಂದಾಗ ಮೊದಲು ಪರಿವಾರವನ್ನು ರಕ್ಷಿಸಬೇಕು. ಏಕೆ ಗೊತ್ತೇ? ರಾಜನಿದ್ದರೆ ಪರಿವಾರ ಉಂಟು–ಸಂಪತ್ತೂ ಇರುತ್ತದೆ.

ಹಿರಣ್ಯಕನು ಮುಂದುವರಿಸಿ, "ಆದರೂ ಆಶ್ರಿತರನ್ನು ರಕ್ಷಿಸಬೇಕಾದದ್ದು ನೃಪಧರ್ಮ. ಧನಕನಕ, ವೈಭವ, ತ್ಯಾಗ, ಸ್ವಾತಂತ್ರ್ಯದ ಗುಣಗಳೊಂದಿಗೆ ಕೃತಜ್ಞತೆಯೂ ರಾಜನಿಗಿರಬೇಕಾದ ಗುಣ. ಅದಿಲ್ಲದವನು ಅರಸನಾಗಿ ಆಳುವುದು ಹೇಗೆ? ರಾಜನೆಂದರೆ ಹೇಗಿರಬೇಕೆಂಬುದನ್ನು ನಿನಗೆ ಹೇಳಬೇಕಾಗಿಲ್ಲ. ನೀನು ಮಾಡುತ್ತಿರುವಂತೆಯೇ ಪರಿಜನರಿಗೆ ತೊಂದರೆ ಬಂದರೆ ಅದನ್ನು ಮೊದಲು ನಿವಾರಿಸಬೇಕು. ತಾನು ಸ್ವಾರ್ಥಿಯಾಗದೆ ಇದ್ದುದನ್ನು ಎಲ್ಲರಿಗೂ ಹಂಚಬೇಕು. ತನ್ನವರು ವೈರಿಗಳಿಂದ ಬಂಧಿತರಾದರೆ ಬಿಡಿಸಬೇಕು. ಅವರು ಶತ್ರುಗಳಿಂದ ಸಾಯದಂತೆ ರಕ್ಷಿಸಬೇಕು. ಅಂತಹ ಗುಣಗಳಿಂದ ರಾಜನು ಸರ್ವತ್ರ ಆದರಣೀಯನಾಗುತ್ತಾನೆ. ಇದನ್ನೆಲ್ಲಾ ಕೇಳಿ ಹಿರಣ್ಯಕನಿಗೆ ಗೆಳೆಯನ ಬಗ್ಗೆ ಅಭಿಮಾನವೆನಿಸಿತು. ನಂತರ ಬಿಲಬಿಲದಲ್ಲಿ ಅಡಗಿದ್ದ ತನ್ನ ಪರಿವಾರದವರನ್ನೆಲ್ಲ ಬರಿಸಿ ಏಕ ಕಾಲದಲ್ಲಿ ಎಲ್ಲ ಪಕ್ಷಿಗಳ ಕಾಲಲ್ಲಿ ತೊಡಕಿ–ಕೊಂಡಿದ್ದ ಬಲೆಗಳನ್ನು ತುಂಡರಿಸಿದ. ಇದೆಲ್ಲವನ್ನೂ ನೋಡುತ್ತಿದ್ದ ಲಘುಪತನಕನಿಗೆ ಆಶ್ಚರ್ಯವಾಯಿತು ಹಾಗೂ ಅವರ ಸ್ನೇಹದ ಬಗ್ಗೆ ಅಭಿಮಾನವುಂಟಾಯಿತು. ಜೀವವೆಂಬುದು ಅನರ್ಘ್ಯ ರತ್ನವೇ ಅಲ್ಲ. ಸುವರ್ಣದ ಆಭರಣಗಳು ಅರ್ಧ ಧನ, ಆಹಾರ ಮಹಾ ಧನ. ಆದರೆ ಸು–ವಿದ್ಯೆ, ಸು–ಶೀಲ, ತಪಸ್ಸು, ಸ್ನೇಹ ಇವುಗಳು ಎಲ್ಲ ಧನಕ್ಕಿಂತ ಮಿಗಿಲಾದುದು ಎಂದು ತಾನೂ ಗುಣವಂತನಾದ ಹಿರಣ್ಯಕನೊಡನೆ ಸ್ನೇಹ ಬಯಸಿದನು. ಅದಕ್ಕೆ ಮೂಷಿಕ ಹೇಳಿತು. "ಸಮಾನ ಗುಣದವರಲ್ಲಿ ಸ್ನೇಹವು ಸಾಧು ಸಾಧ್ಯ. ನೀನು ಮಾಂಸಾಹಾರಿ, ಮಿತಿಮೀರಿದ ಆಶಾಬುರುಕ, ಮೇಲಾಗಿ ಚಪಲಚಿತ್ತನು ಹೀಗಾಗಿ ನೀನು ಸ್ನೇಹಕ್ಕೆ ಅರ್ಹನಲ್ಲ" ಎಂದು ಹೇಳಿ ತನಗೆ ಗೊತ್ತಿರುವ ಮಿತ್ರನಾಗಲು ಅರ್ಹನಾದವನ ಗುಣಗಳನ್ನು ಹೀಗೆ ಹೇಳುತ್ತಾನೆ. "ಮಿತ್ರನಾದವನು ಮಾತು, ಮನಸ್ಸು, ಕಾರ್ಯಗಳಿಂದ ಸ್ವಚ್ಛನಾಗಿರಬೇಕು. ತ್ಯಾಗ, ಶೌರ್ಯ, ಸಮಾನವಾದ ಸುಖದುಃಖ,

ದಾಕ್ಷಿಣ್ಯ, ಸತ್ಯ, ಶುಚಿಗಳು ಸ್ನೇಹಕ್ಕೆ ಮುಖ್ಯ. ಆದ್ದರಿಂದಲೇ ಹಿರಿಯರು ಹೇಳುತ್ತಾರೆ–ಸ್ನೇಹ ಬೆಳೆಸುವವರು ಕುಲೀನರಾಗಬೇಕು, ಮಾತಿಗೆ ತಪ್ಪದವನಾಗಿರಬೇಕು, ಸದ್ಗುಣಿಯೂ, ನಿರ್ಮಲ ನಡತೆಯುಳ್ಳವನೂ, ವಿಚಾರಶೀಲನೂ, ಭೇದಭಾವ ಇಲ್ಲದವನೂ ಆಗಿರಬೇಕು.[40] ಇಲ್ಲಿ ಒಂದು ಉಕ್ತಿ ಬಹಳ ಯುಕ್ತವಾಗಿರುತ್ತದೆ.

ययोरेव समं वित्तं च ययोरेव समं कुलम् ।

तयोर्मैत्री विवाहश्च न तु पुष्टविपुष्टयोः [41]

ಯಾರು ನಮಗೆ ಸಮನಾದ ಐಶ್ವರ್ಯವುಳ್ಳವರೋ, ಯಾರು ನಮಗೆ ಸಮಾನ ಕುಲದವರೋ, ಅಂತಹವರೊಂದಿಗೆ ಮಾತ್ರ ಗೆಳೆತನವನ್ನೂ, ವಿವಾಹವನ್ನೂ ಮಾಡಬೇಕು ಹೊರತು ನಮಗಿಂತ ಹೆಚ್ಚುಕಡಿಮೆ ಉಳ್ಳವರೊಂದಿಗೆ ಇವೆರಡನ್ನೂ ಮಾಡಕೂಡದು. ನಮ್ಮ ಹಿರಿಯರು ಸಾಕಷ್ಟು ಬುದ್ಧಿವಂತರು. ಅವರು ಪ್ರತಿಯೊಂದನ್ನೂ ಯಾವರೀತಿಯಲ್ಲಿ ಎಂಥಹವರೊಂದಿಗೆ ಮಾಡಬೇಕೆಂದು ಕರಾರುವಾಕ್ಕಾಗಿ ತಿಳಿಸಿದ್ದಾರೆ. ವಿವಾಹ ಹಾಗೂ ಗೆಳೆತನಗಳು ನಮ್ಮ ಜೀವನದಲ್ಲಿ ಚಿರಸ್ಥಾಯಿಯಾಗಿ ನಿಲ್ಲತಕ್ಕವುಗಳು. ಆದ್ದರಿಂದ ಮೈತ್ರಿ ಹಾಗೂ ವಿವಾಹ ಸಮಾನರೊಂದಿಗೆ ಮಾತ್ರ ಬೆಳೆಸಬೇಕೆಂದು ಅವರ ಇಂಗಿತ.

ಇಲ್ಲಿ ಪ್ರಾಣಿಪಶುಪಕ್ಷಿಗಳೂ ಮನುಷ್ಯರಂತೆ ಮಾತನಾಡಿ, ವರ್ತನೆಮಾಡಿ ಮನೋಭಾವನೆಗಳನ್ನು, ಬದುಕಿನ ಅನುಭವಗಳನ್ನು, ನೈಜವಾಗಿ ಮನುಷ್ಯರೇ ಅನುಭವಿಸುತ್ತಾ ಇರುವಷ್ಟರಮಟ್ಟಿಗೆ ಪಾತ್ರಗಳನ್ನು ನಿರ್ವಹಿಸಿರುವುದು ಪಂಚತಂತ್ರ ಕಥೆಗಳ ವೈಶಿಷ್ಟ್ಯತೆಯಾಗಿದೆ. ವ್ಯಕ್ತಿತ್ವ ವಿಕಸನ ಕಾರ್ಯದಲ್ಲಿ ಶಿಕ್ಷಕರಾಗಿ ವಿಷ್ಣುಶರ್ಮರು ಪಂಚತಂತ್ರದಲ್ಲಿ ನಡೆಸಿರುವ ಸಮರ್ಥ ಪ್ರಯತ್ನ ಮತ್ತು ಪರಿಶ್ರಮ ಆದರ್ಶವಾಗಿದ್ದು ಇತರ ಶಿಕ್ಷಕರಿಗೆ ನಿಜಕ್ಕೂ ಮಾರ್ಗದರ್ಶಕವೇ ಆಗಿರುತ್ತದೆ. ಕಲಿವಿನಲ್ಲಿ ಒಲವು, ಸೃಜನಶೀಲತೆ, ಸಹಬಾಳ್ವೆ, ಹೊಂದಾಣಿಕೆ ಹಾಗೂ ಬದುಕಿನ ಸಾರ್ಥಕತೆಗೆ ಬೇಕಾದ ತಿಳುವಳಿಕೆಯನ್ನು ಒಬ್ಬ ಪ್ರತಿಭಾನ್ವಿತ ಶಿಕ್ಷಕ ಹೇಗೆ ಬೆಳೆಸಲು ಸಾಧ್ಯವಿದೆ ಎಂಬುದನ್ನು ಪಂಚತಂತ್ರ ನೀತಿಕಥೆಗಳು ಬಹಳ ಸ್ಪಷ್ಟವಾಗಿ ನಿರೂಪಿಸುತ್ತವೆ.[42]

**ಎಳ್ಳುಮಾರುವ ಶಾಂಡಿಲಿನಿಯ ಕಥೆ**ಯಲ್ಲಿ[43] ಉಳ್ಳವರು ತಮ್ಮ ಯೋಗ್ಯತೆಗೆ ತಕ್ಕಂತೆ ದಾನ ಮಾಡಿ ಪ್ರತಿಫಲವನ್ನು ಪಡೆಯುತ್ತಾರೆ. ಬಡವನು ತುತ್ತು ಕಾಳನ್ನು ತೆತ್ತು ಪುಣ್ಯಗಳಿಸುತ್ತಾನೆ. ಧನಿಕರು ಅಧಿಕವಾದ ದಾನದಿಂದ ಏನು ಫಲಪಡೆಯುತ್ತಾರೋ, ದರಿದ್ರರು ಕವಡೆ ಕಾಸಿನ ದಾನ ಮಾಡುವುದರಿಂದ ಅದೇ

---

40. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನಮಂತ್ರ ಪಂಚತಂತ್ರ, ತಂತ್ರ–2, ಪು–108–111. ವರ್ಣಿಲ,39/2–11, ಕಲ್ಯಾಣಿಗಾರ್ಡನ್ BSK 1st stage,ಬೆಂಗಳೂರು–560050.(2015)
41. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ದ್ವಿ.ತಂ–ಶ್ಲೋ–29, ಪು–323.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
42. **Chandra Rajan,**VISNU SARMA The Panchatantra (English Translation) Introduction, PP 38-40. PenguinRandom House India Pvt.ltd, Gurgaon-122002, Haryana, India.(1993)
43. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ–2, ಪು–115–117. ವರ್ಣಿಲ, 39/2–11, ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು–560050.(2015)

ಫಲವನ್ನು ಪಡೆಯುತ್ತಾರೆ. ಧನವಂತನಲ್ಲದಿದ್ದರೂ ದಾನಿಯು ಲೋಕದ ಗೌರವ ಪಡೆಯುತ್ತಾನೆ. ಜಿಪುಣನು ಧನಿಕನಾದರೂ ಮಾನ್ಯತೆ ಪಡೆಯುವುದಿಲ್ಲ. ಬಾವಿಯ ಸಿಹಿ ನೀರನ್ನು ಜನರು ಬಯಸುತ್ತಾರೆಯೇ ಹೊರತು ಸಮುದ್ರದ ನೀರನ್ನಲ್ಲ. ತ್ಯಾಗದ ಮಹತ್ವವಿಲ್ಲದೆ ಸುಮ್ಮನೆ ಹೆಸರಿಗೆ ರಾಜ ರಾಜ ಎಂದೆನಿಸಿಕೊಂಡರೆ ಏನು ಫಲ? ತ್ಯಾಗಶಾಲಿಯಾದ ಶಿವನನ್ನು ಬಲ್ಲವರು ಮಹೇಶ್ವರನೆಂದು ಕರೆಯುತ್ತಾರೆಯೇ ಹೊರತು ನಿಧಿಯ ರಕ್ಷಕನಾದ ಕುಬೇರನನ್ನಲ್ಲ. ದಾನದಿಂದ ಬಡವನಾಗುತ್ತಿರುವವನು ಮದಜಲದ ಸ್ರಾವದಿಂದ ಕ್ಷೀಣಿಸುತ್ತಿರುವ ಆನೆಯಂತೆ ಶ್ಲಾಘ್ಯನು. ದಾನವಿಲ್ಲದೆ ಸ್ಥೂಲಗಾತ್ರನಾಗುತ್ತಿರುವ ಜಿಪುಣನು ಮದಜಲವನ್ನು ಸ್ರವಿಸದೆ ದಪ್ಪಗಾಗುತ್ತಿರುವ ಕತ್ತೆಯಂತೆ ನಿಂದ್ಯನು. ಹೀಗೆ ಶೀಲವಂತ ಮತ್ತು ಆಚಾರವಂತರಾದರೂ ದಾನವನ್ನು ಮಾಡದಿರುವವನು ಅಧೋಗತಿಯನ್ನು ತಲುಪುತ್ತಾನೆ. ವಕ್ರ ಮತ್ತು ವಿಕೃತವಾಗದಿದ್ದರೂ ಸೌತೆಕಾಯಿ ಆಯಾಸವನ್ನು ಪರಿಹರಿಸುವುದರಿಂದ ಪ್ರಶಂಸನೀಯ ಸ್ಥಾನವನ್ನು ಹೇಗೆ ಪಡೆಯುತ್ತದೋ ಹಾಗೆ ಕುರೂಪಿ ಮತ್ತು ದುರ್ವಿಚಾರಿ ಆಗಿದ್ದರೂ ಮನುಷ್ಯನು ದಾನವನ್ನು ಮಾಡುವುದರಿಂದ ಉತ್ತಮ ಗತಿಯನ್ನು ಪಡೆಯುತ್ತಾನೆ. ದೇಶ ಮತ್ತು ಕಾಲಕ್ಕೆ ಅನುಗುಣವಾಗಿ ಶ್ರದ್ಧೆಯಿಂದ ಸತ್ಪಾತ್ರನಿಗೆ ಮಾಡಿದ ದಾನವು ಅಕ್ಷಯ ಫಲವನ್ನು ಕೊಡುತ್ತದೆ ಎಂದು ವಿವೇಕಿಗಳ ಅಭಿಪ್ರಾಯ. ಅತಿ ಆಸೆ ಮಾಡಬಾರದು, ಆದರೆ ಆಸೆಯನ್ನು ಬಿಡಲೂ ಬಾರದು. ಅತಿಯಾಸೆ ಮಾಡಿದವನ ಜುಟ್ಟು ತಲೆಯ ಮೇಲೆ ನಿಂತಿರುತ್ತದೆ.

आयुः कर्म च वित्तञ्च विद्या निधनमेव च ।

पञ्चैतानि हि सृज्यन्ते गर्भस्थस्यैव देहिनः ॥[44]

ಆಯಸ್ಸು, ಕರ್ಮ, ಭಾಗ್ಯ, ವಿದ್ಯೆ ಹಾಗೂ ಸಾವು ಈ ಐದು ವಿಷಯಗಳು ಜೀವಿಗಳ ಗರ್ಭದಲ್ಲಿರುವಾಗಲೇ ನಿರ್ಧಾರವಾಗುತ್ತದೆ. ಹೀಗೆ ಬ್ರಾಹ್ಮಣನು ತನ್ನ ಪತ್ನಿಗೆ ಬುದ್ಧಿವಾದವನ್ನು ಹೇಳುವ ದೃಷ್ಟಾಂತವನ್ನು ಬಹಳ ಅಚ್ಚುಕಟ್ಟಾಗಿ, ಕುತೂಹಲಕಾರಿಯಾಗಿ ಸನ್ನಿವೇಶಗಳನ್ನು ಯೋಜಿಸಿ ಬದುಕಿನ ನೀತಿಯನ್ನು, ಜೊತೆಯಲ್ಲಿ ರಾಜನೀತಿ ಶಿಕ್ಷಣವನ್ನೂ ರಾಜಕುಮಾರರಿಗೆ ಬೋಧಿಸಿ, ಅವರಲ್ಲಿ ಅಪೇಕ್ಷಿತ ವರ್ತನೆಗಳ ಕಡೆಗೆ ಪರಿವರ್ತನೆ ಹೊಂದಿ ಉತ್ತಮ ವ್ಯಕ್ತಿತ್ವ ನಿರ್ಮಾಣಗೊಳ್ಳಲು ವಿಷ್ಣುಶರ್ಮರು ಪ್ರೇರೇಪಿಸಿ ಸೂಕ್ತ ಮಾರ್ಗದರ್ಶನ ನೀಡಿದ್ದಾರೆ.

ಮುಂದೆ ಬ್ರಾಹ್ಮಣ ಪತ್ನಿಯು ಮನೆಯಲ್ಲಿರುವ ಸ್ವಲ್ಪ ಎಳ್ಳನ್ನು ಬಿಡಿಸಿ ಅದರ ಚೂರ್ಣದಿಂದ ಅತಿಥಿ ಬ್ರಾಹ್ಮಣನಿಗೆ ಭೋಜನ ಮಾಡಿಸಲು ಸಿದ್ಧಳಾದಳು. ಆಕೆ ಆ ಎಳ್ಳನ್ನು ಸಿಪ್ಪೆ ತೆಗೆದು ಬಿಸಿನೀರಿನಲ್ಲಿ ತೊಳೆದು ಬಿಸಿಲಿನಲ್ಲಿ ಒಣಗಲು ಹಾಕಿದಳು. ಆ ಎಳ್ಳಿನ ಮೇಲೆ ನಾಯಿಯೊಂದು ಮೂತ್ರ ಮಾಡಿಬಿಟ್ಟಿತು. ವಿಧಿಯ

---

44. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ದ್ವಿ.ತಂ-ಶ್ಲೋ-84, ಪು-357,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಚತುರತೆಯಿಂದ ಇದನ್ನು ತಿನ್ನದಂತೆ ಮಾಡಿತಲ್ಲಾ! ಎಂದು ಯೋಚಿಸಿದಳು. ನಂತರ ಅದನ್ನು ಬುಟ್ಟಿಯಲ್ಲಿ ತುಂಬಿಸಿಕೊಂಡು ಮನೆಯಿಂದ ಮನೆಗೆ ಹೋಗುತ್ತಾ ಬಿಡಿಸಿದ ಎಳ್ಳಿನ ಬದಲಿಗೆ ಬಿಡಿಸದ ಎಳ್ಳನ್ನು ಕೊಡಿ ಎಂದು ಕೇಳಿದಳು. ಒಬ್ಬಳು ಗೃಹಿಣಿಯು ಸಂತೋಷದಿಂದ ಎಳ್ಳನ್ನು ಬದಲಿಸಿಕೊಳ್ಳಲು ಮುಂದೆ ಬಂದಳು. ಇದನ್ನು ಗಮನಿಸುತ್ತಿದ್ದ ಅವಳ ಮಗ ನೀತಿಶಾಸ್ತ್ರವನ್ನು ನೋಡಿ ಹೀಗೆ ಹೇಳುತ್ತಾನೆ. "ಅಮ್ಮ, ಆ ಎಳ್ಳನ್ನು ತೆಗೆದುಕೊಳ್ಳಬೇಡ. ಬಿಡಿಸದ ಎಳ್ಳನ್ನು ಬಿಡಿಸಿದ ಎಳ್ಳನೊಂದಿಗೆ ಬದಲಿಸಿಕೊಳ್ಳಬೇಡ. ಇವಳು ಹೀಗೆ ಬದಲಿಸಿಕೊಳ್ಳುವುದರಲ್ಲಿ ಯಾವುದೋ ಕಾರಣವಿರುತ್ತದೆ.[45] ಅಂದರೆ ಕಾರಣವಿಲ್ಲದೆ ಕಾರ್ಯವಿಲ್ಲ" ಇಲ್ಲಿ ಎಂತಹ ನೀತಿ ಅಡಗಿದೆ! ಸರಿಯಾಗಿ ಯೋಚಿಸದೆ ಕೆಲಸ ಮಾಡಬಾರದು. ಸ್ವಂತ ಬುದ್ಧಿ ಇರಬೇಕು. ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು, ಅತಿ ಆಸೆ ಗತಿ ಕೆಡಿಸುತ್ತದೆ. ಇಂಥದ್ದೆಲ್ಲಾ ಒಳ್ಳೆಯ ಆಲೋಚನೆಗಳು ಹಾಗೂ ಒಂದು ರೀತಿಯ ಜಾಗೃತ ಮನಸ್ಸು ಬೆಳೆಯುವಂತೆ ವಿಷ್ಣುಶರ್ಮರು ರಾಜಕುಮಾರರಿಗೆ ಆಕರ್ಷಕ ಕಥೆಗಳ ಮೂಲಕ ಉತ್ತಮ ದೃಷ್ಟಾಂತಗಳನ್ನು ಒದಗಿಸಿಕೊಟ್ಟು ತಿಳುವಳಿಕೆ ನೀಡಿದ್ದಾರೆ. ಹೀಗಾಗಿ ಪಂಚತಂತ್ರ ಕಥೆಗಳು ಬದುಕಿನ ನೀತಿ ನಿಯಮಗಳನ್ನು ಕಲಿಸಿಕೊಡುತ್ತವೆ. ಇದು ಮಕ್ಕಳಲ್ಲಿ ಒಳ್ಳೆಯ ಅಭಿಕ್ಷಮತೆ, ಮನೋಧೋರಣೆಗಳು, ಆಸಕ್ತಿ ಮತ್ತು ಮೌಲ್ಯಗಳನ್ನು ಬೆಳೆಸುತ್ತದೆ.

ಮಿತ್ರಸಂಪ್ರಾಪ್ತಿ ತಂತ್ರದಲ್ಲಿ ಬರುವ ಮತ್ತೊಂದು ಕಥೆ **"ವ್ಯಾಪಾರಿ ಪುತ್ರನ ಕಥೆ"** ಯಲ್ಲಿ :-

प्राप्तव्यमर्थं लभते मनुष्यो देवोऽपि तं लङ्घयितुं न शक्तः ।

तस्मान्न शोचामि न विस्मयो मे यदस्मदीयं न हि तत्परेषाम् ॥[46]

ಮನುಷ್ಯನು ತನಗೆ ಪ್ರಾಪ್ತವಿದ್ದಷ್ಟು ಹಣವನ್ನು ಮಾತ್ರ ಪಡೆಯುತ್ತಾನೆ. ದೇವರಿಗೂ ಕೂಡ ಅದನ್ನು ಕಸಿದುಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ನಾನು ದುಃಖಿಸುವುದಿಲ್ಲ ಅಥವಾ ಆಶ್ಚರ್ಯವನ್ನೂ ಪಡುವುದಿಲ್ಲ. ನನ್ನದಾವುದಿದೆಯೋ ಅದೆಂದಿಗೂ ಪರರದಾಗುವುದಿಲ್ಲ.

ಸಾಗರದತ್ತ ಎಂಬ ವ್ಯಾಪಾರಿಯ ಪುತ್ರನು ಒಮ್ಮೆ ನೂರು ರೂಪಾಯಿಗಳನ್ನು ಕೊಟ್ಟು ಪುಸ್ತಕವೊಂದನ್ನು ಖರೀದಿಸಿದ್ದನು. ಅದರಲ್ಲಿ ಈ ಮೇಲಿನ ಶ್ಲೋಕವು ಬರೆಯಲ್ಪಟ್ಟಿತ್ತು. ಇದನ್ನು ನೋಡಿದ ಸಾಗರದತ್ತನು ಕೋಪಿಷ್ಠನಾಗಿ ಹೀಗೆ ನುಡಿದನು "ಮೂರ್ಖನೇ ಅನವಶ್ಯಕವಾಗಿ ಹಣವನ್ನು ಹೀಗೆ

---

45. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ದ್ವಿ.ತಂ. ಪು-127-130. (2018) ಜ್ವಾಲಾಮುಖಿಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು-560004.
46. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ದ್ವಿ.ತಂ -ಶ್ಲೋ- 111, ಪು-372.(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ದುಂದುವೆಚ್ಚ ಮಾಡಿದರೆ ಧನಾರ್ಜನೆಯಾಗುವುದಾದರೂ ಹೇಗೆ? ಈ ಪದ್ಯಕ್ಕೆ ಅರ್ಥವಿಲ್ಲ. ನಿನಗೆ ಸ್ವಾರ್ಥವಿಲ್ಲ, ಬುದ್ಧಿಯೂ ಇಲ್ಲ. ಇಂದಿನಿಂದ ನೀನು ನನ್ನ ಮನೆಯಲ್ಲಿ ಇರಬೇಡ ಎಂದು ಗದರಿಸಿ ಮನೆಯಿಂದ ಹೊರಗೆ ಕಳುಹಿಸಿದನು. ಮಗನು ದುಃಖಗೊಂಡು ದೂರದ ಒಂದು ದೇಶಕ್ಕೆ ಹೋಗಿ ಯಾವುದೋ ಒಂದು ನಗರದಲ್ಲಿ ವಾಸಮಾಡತೊಡಗಿದನು.

ಆ ನಗರದ ನಿವಾಸಿಗಳು ಇವನನ್ನು ಎಲ್ಲಿಂದ ಬಂದಿರುವಿರಿ? ನಿಮ್ಮ ಹೆಸರೇನು? ಎಂದು ಕುತೂಹಲದಿಂದ ಒಬ್ಬರಾದಮೇಲೊಬ್ಬರು ವಿಚಾರಿಸಿದರು. ಇವನು ಎಲ್ಲರಿಗೂ प्राप्तव्यमर्थं लभते मनुष्यः ಎಂದು ಉತ್ತರ ನೀಡಿದನು. ಅಂದರೆ ಮನುಷ್ಯನು ಪ್ರಾಪ್ತವಿದ್ದಷ್ಟು ಹಣವನ್ನು ಮಾತ್ರ ಪಡೆಯುತ್ತಾನೆ ಎಂದು. ಅವನು ಆ ನಗರದಲ್ಲಿ ಪ್ರಾಪ್ತವ್ಯಮರ್ಥ ಎಂಬ ಹೆಸರಿನಿಂದಲೇ ಪ್ರಸಿದ್ಧನಾದನು. ಹೀಗೇ ಅವನು ಒಂದಲ್ಲೊಂದು ರೀತಿಯಲ್ಲಿ ಯಾವುದೋ ಅದೃಷ್ಟದಿಂದ ಒಬ್ಬಳು ಮಧುಮಗಳನ್ನು ಕೆರಳಿದ ಆನೆಯಿಂದ ರಕ್ಷಿಸಿದನು ಹಾಗೂ ಅವಳ ಬಲಕೈ ಹಿಡಿದು ಮಹಾಸಾಹಸದಿಂದ ಕಠೋರವಾದ ನುಡಿಗಳಿಂದ ಆ ಆನೆಯನ್ನು ಬೆದರಿಸಿದನು. ಪರಿಸ್ಥಿತಿ ಹೇಗೆ ತಿರುಗಿತೆಂದರೆ, ವರಕೀರ್ತಿಯೆಂಬ ಹೆಸರಿನ ಮಧುಮಗನನ್ನು ವಿವಾಹವಾಗಲು ನಿಶ್ಚಯಿಸಿದ್ದ ಮಧುಮಗಳು ಅವಳ ಜೀವರಕ್ಷಣೆ ಮಾಡಿದ, ಇವನಲ್ಲದೆ ಅಂದರೆ ಪ್ರಾಪ್ತವ್ಯಮರ್ಥನನ್ನು ಬಿಟ್ಟು ಬೇರಾವ ಜೀವವಿರುವವನೂ ನನ್ನ ಕೈ ಹಿಡಿಯಕೂಡದೆಂದು ನಿರ್ಧಾರಕ್ಕೆ ಬಂದುಬಿಟ್ಟಳು. ಅಷ್ಟರಲ್ಲಿ ದೊಡ್ಡ ಗುಂಪು ಸೇರಿದ್ದಲ್ಲಿಗೆ ಸುದ್ದಿಯನ್ನು ತಿಳಿದ ರಾಜಕುಮಾರಿ ಹಾಗೂ ರಾಜ ಇಬ್ಬರೂ ಬಂದರು. ಸುದ್ದಿಕೇಳಿದ ಆರಕ್ಷಕನ ಮಗಳೂ ಬಂದಳು. ರಾಜನು ನಡೆದವೃತ್ತಾಂತವನ್ನೆಲ್ಲ ನಿರ್ಭಯದಿಂದ ಹೇಳುವಂತೆ ಪ್ರಾಪ್ತವ್ಯಮರ್ಥನನ್ನು ಕೇಳಿದನು. ಆಗಲೂ ಪ್ರಾಪ್ತವ್ಯಮರ್ಥನು "प्राप्तव्यमर्थं लभते मनुष्यः"ಎಂದು ಹೇಳಿದನು. ರಾಜಕುಮಾರಿಯು ನಕ್ಕು "देवोऽपि तं लङ्घयितुं न शक्तः" ಎಂದಳು. ಆಗ ಆರಕ್ಷಕನ ಮಗಳು "तस्मान्न शोचामि न विस्मयो मे" ಎಂದಳು. ಪೂರ್ಣ ವೃತ್ತಾಂತವನ್ನು ಕೇಳಿದ ರಾಜನು ಸರಿಯಾಗಿ ತಿಳಿದುಕೊಂಡು ಪ್ರಾಪ್ತವ್ಯಮರ್ಥನಿಗೆ ಸರ್ವಾಲಂಕಾರದಿಂದ ಕೂಡಿದ ಸೇವಕಜನ ಸಮೇತಳಾದ ತನ್ನ ಮಗಳನ್ನು ಹಾಗೂ ಬಹುಮಾನವಾಗಿ ಸಾವಿರ ಗ್ರಾಮಗಳನ್ನು ಕೊಟ್ಟು ನೀನು ನನ್ನ ಮಗನಾದೆ ಎಂದು ಘೋಷಿಸಿ ಯುವರಾಜನನ್ನಾಗಿ ಮಾಡಿದನು. ಆರಕ್ಷಕನೂ ಕೂಡ ತನ್ನ ಶಕ್ತಿಗನುಸಾರವಾಗಿ ವಸ್ತ್ರಾದಿಗಳಿಂದ ಸನ್ಮಾನಮಾಡಿ ಪ್ರಾಪ್ತವ್ಯಮರ್ಥನಿಗೆ ತನ್ನ ಮಗಳನ್ನು ಕೊಟ್ಟನು.[47]

---

47. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ದ್ವಿ.ತಂ.ಪು-135-139, (2018) ಜ್ವಾಲಾಮುಖಿಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು-560004.

ಪ್ರಾಪ್ತವ್ಯಮರ್ಥನು ಒದಗಿಬಂದ, ಅದೃಷ್ಟವನ್ನು ಕಾಣುತ್ತಿರುವ ಸಂಭ್ರಮದಲ್ಲಿ ತನ್ನ ತಂದೆ ತಾಯಿಗಳನ್ನು ಮರೆಯದೆ ತನ್ನ ಜೊತೆಗೆ ಬರಮಾಡಿಕೊಂಡು ಸುಖವಾಗಿ ಕಾಲ ಕಳೆದನು. ಹೀಗೆ ಕಥೆಯನ್ನು ಹೇಳುತ್ತಾ, ವಿಷ್ಣುಶರ್ಮರು ರಾಜಕುಮಾರರ ಪ್ರತಿಕ್ರಿಯೆಯನ್ನು ನಿರೀಕ್ಷಿಸುತ್ತಾ **"ರಾಜಕುಮಾರರೇ, ಇಂತಹದು ನಿಜಜೀವನದಲ್ಲೂ ಅಲ್ಲಲ್ಲಿ ನಡೆಯುವಂತಾದ್ದೇ. ಇದು ಬರಿದೇ ಕಥೆಯಲ್ಲಿ ಬರುವ ಸಂಗತಿಗಳಲ್ಲ. ಅದೃಷ್ಟದಿಂದ ಸಂಪತ್ತು ಕೈಸೇರಬಹುದು. ಕರ್ಮಪಾತದಿಂದ ನಷ್ಟವೂ ಆಗುತ್ತದೆ. ನಮಗೆ ಕೈಗೆಟುಕುವಂತಿದ್ದ ವಸ್ತುವನ್ನು ವಿಧಿಯು ಅಪಹರಿಸುತ್ತದೆ. ಇದು ನನ್ನ ಅಭಿಪ್ರಾಯ, ನೀವೇನು ಹೇಳುವಿರಿ?"** ಎಂದು ಒಂದು ಆಲೋಚನ ಪ್ರಚೋದನಕಾರಿ ಪ್ರಶ್ನೆ ಕೇಳಿದರು.

ಬಹುಶಕ್ತಿ ಆಲೋಚನೆಮಾಡಿ **"ಸಂಪತ್ತೇ ಸರ್ವಕ್ಕೂ ಆಧಾರವೆಂದು ಅದನ್ನೇ ಬಯಸುವುದು ತಪ್ಪು"** ಎಂದನು. ಹಣದಂತೆಯೇ ರಾಜ್ಯ ವಿಸ್ತರಣೆಯೂ ನಮ್ಮ ಭ್ರಮೆಗೆ ಒಳಗಾಗುವಂತೆ ಮಾಡುತ್ತದೆ. **"ಕೊನೆಯವನಾದ ಅನಂತಶಕ್ತಿಯು"** ಗುರುಗಳೇ, ಹಣವಿದ್ದೂ ಅದನ್ನು ಉಪಯೋಗಿಸುವುದಕ್ಕಾಗದಿದ್ದರೆ ಇನ್ನಷ್ಟು ಚಿಂತೆ ಎಂದು ಹೇಳಿದನು. ಗುರುಗಳು-ಚೆನ್ನಾಗಿ ಹೇಳಿದಿರಿ. ಅನಂತಶಕ್ತಿಯ ಅನಿಸಿಕೆಯು ಒಳ್ಳೆಯ ಪ್ರತಿಕ್ರಿಯೆಯಾಗಿದೆ. ಈಗ ವಿಶ್ರಾಂತಿ ಪಡೆಯುವ ಹೊತ್ತು. ನದಿಯಲ್ಲಿ ಜಲಕ್ರೀಡೆಯಾಡಿ ಪ್ರಫುಲ್ಲಚಿತ್ತರಾಗಿ ಬನ್ನಿ ಎಂದು ವಿಷ್ಣುಶರ್ಮರು ಎದ್ದರು.[48]

ಹೀಗೆ ವಿಷ್ಣುಶರ್ಮರು ರಾಜಕುಮಾರರ ಬಗ್ಗೆ ವೈಯಕ್ತಿಕ ಗಮನಹರಿಸಿ ನೋಡುತ್ತಾ, ಅವರ ಮೂಲ ಮನೋಧೋರಣೆಗಳನ್ನು ಪರಿಶೀಲಿಸಿ, ಪರಿವರ್ತನೆ ಮಾಡುವಲ್ಲಿ, ಅವುಗಳನ್ನು ಪರಿವರ್ತಿಸಿ, ಕಲಿಕೆಯನ್ನು ಪ್ರೇರೇಪಿಸಿ, ಸೃಜನಶೀಲ ಆಲೋಚನೆಗಳೆಡೆಗೆ ಸೂಕ್ತ ಸನ್ನಿವೇಶಗಳನ್ನೊದಗಿಸಿ, ವ್ಯವಸ್ಥಿತವಾಗಿ ವ್ಯಕ್ತಿತ್ವ ನಿರ್ಮಾಣ ಮಾಡುವಲ್ಲಿ ಒಳ್ಳೆಯ ಸಾಧನೆಗೈದಿದ್ದಾರೆ. ಬದುಕಿನ ನೀತಿನಿಯಮಗಳನ್ನು ಪ್ರೀತಿಯಿಂದ ಪಾಲಿಸುವಂತೆ ಪಂಚತಂತ್ರ ಪಠ್ಯಕ್ರಮದಲ್ಲಿ ಒಂದಕ್ಕಿಂತ ಮತ್ತೊಂದು ಸ್ವಾರಸ್ಯಕರ ಪ್ರಸಂಗಗಳನ್ನು ಒಳಗೊಂಡಿರುವ ಕಥಾನಿರೂಪಣಾ ಬೋಧನಾ ಕ್ರಮದಲ್ಲಿ ಶಿಕ್ಷಣ ನೀಡಿದ್ದಾರೆ. ಆಗಿನ ಕಾಲದಲ್ಲೇ ಇಂಥಾ ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಉತ್ತಮ ಮಾರ್ಗದರ್ಶನ, ಸಲಹೆ, ಶಿಕ್ಷಣ ನೀಡಿರುವುದು ಈ ಅಮೂಲ್ಯ ಕೃತಿರತ್ನ ಪಂಚತಂತ್ರದ ವೈಶಿಷ್ಟ್ಯತೆಯಾಗಿದೆ.

ಶೈಕ್ಷಣಿಕ ಮನೋವಿಜ್ಞಾನದ ಅಂಶಗಳೆಲ್ಲ ಅದೆಷ್ಟು ಚೆನ್ನಾಗಿ ಅಡಕವಾಗಿದೆ! ಒಂದು ಕಥೆ ಮತ್ತೊಂದಕ್ಕೆ ಉತ್ತಮ ಸ್ಪಂದನೆಯೊಂದಿಗೆ ವಿಚಾರಗಳು ಸ್ಪಷ್ಟವಾಗಿ, ಅರ್ಥಪೂರ್ಣವಾಗಿ ಮುಂದಿನದೇನಿರಬಹುದೆಂದು

---

48. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ-2, ಪು-122-124.ವರ್ನಿಲ, 39/2-11, ಕಲ್ಯಾಣಿ ಗಾರ್ಡನ್,BSK 1st stage, ಬೆಂಗಳೂರು-560050.(2015)

ಬಹಳ ಕುತೂಹಲದಿಂದ ಕಾಯುತ್ತಿರುವಂತೆ ಪಂಚತಂತ್ರದ ಯೋಜನೆ ಅದ್ಭುತವಾಗಿದೆ.

ಕಲಿಕಾ ದೃಷ್ಟಿಯಿಂದ ನಿರಂತರ ಹಾಗೂ ವ್ಯಾಪಕ ಮೌಲ್ಯಮಾಪನದೊಂದಿಗೆ ವಿಶೇಷ ಜಾಗೃತಿ ಮೂಡಿಸುವ ಯಶಸ್ವೀ ಪ್ರಯತ್ನ ಪಂಚತಂತ್ರದಲ್ಲಿ ನಡೆದಿದೆ. ಶೈಕ್ಷಣಿಕ ಮನೋ ವಿಜ್ಞಾನದಲ್ಲಿ ಸೂಚಿಸಿರುವಂತೆ, ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳಾದ ಅಭಿಪ್ರೇರಣೆ, ಅವಧಾನ, ಸ್ಮೃತಿ ವಿಸ್ಮೃತಿ ಇವುಗಳಿಗೆ ಸಂಬಂಧಿಸಿದಂತೆ ಒಳ್ಳೆಯ ಕಲಿಕಾ ಸನ್ನಿವೇಶಗಳು ಆಕರ್ಷಕ ಕಥೆಗಳು, ನೀತಿಬೋಧೆಗಳು, ಸುಭಾಷಿತಗಳು, ಜಾಣ್ನುಡಿಗಳು, ನಾಣ್ನುಡಿಗಳು, ನೀತಿ ಶ್ಲೋಕಗಳು ಇವುಗಳೆಲ್ಲವನ್ನೂ ಸಮಯೋಚಿತವಾಗಿ ಸಂಯೋಜಿಸಿದ್ದು, ವಿಷಯ ಪ್ರತಿಪಾದನೆಯಲ್ಲಿ ಹಾಗೂ ಶೈಕ್ಷಣಿಕ ಮಾರ್ಗದರ್ಶನವನ್ನು ಒದಗಿಸುವ ವಿಚಾರದಲ್ಲಿ ಪಂಚತಂತ್ರವು ಒಂದು ಸಾರ್ಥಕ ಬದುಕಿನ ರೀತಿನೀತಿಗಳನ್ನು ಬೋಧಿಸುವ ಸಂಹಿತೆಯಾಗಿದೆ.

ಮರದ ಕೆಳಗೆ ವಿಶ್ರಾಂತಿ ಪಡೆದುಕೊಳ್ಳುತ್ತಿದ್ದ ರಾಜಕುಮಾರರ ಬಳಿಗೆ ವಿಷ್ಣುಶರ್ಮರು ಬಂದು ರಾಜಕುಮಾರರೇ, ಅನಂತಶಕ್ತಿಯು ಹೇಳಿದ ವಿಚಾರವು ಅರ್ಥಪೂರ್ಣವಾದುದೇ ಆಗಿದೆ. ಅದಕ್ಕೆ ಸಂಬಂಧಿಸಿದಂತೆ ಆಮೆಯು ಇಲಿಗೆ ಹೇಳಿದ ಕಥೆಯೂ ಅದೇ ಆಗಿದೆ. ಚೆನ್ನಾಗಿ ಕೇಳಿಸಿಕೊಳ್ಳಿರಿ. ಅದನ್ನು ಮಂಥರಕ ಹೇಳಿದಂತೆಯೇ ಹೇಳುತ್ತೇನೆ. ಇದೇ **ಮಂದಭಾಗ್ಯ ಸೌಮಿಲಕನ ಕಥೆ**.[49] ಈ ಕಥೆಯ ನೀತಿ ಬಹಳ ಸೊಗಸಾಗಿದೆ.

उत्पतन्ति यदाकाशे निपतन्ति महीतले ।

पक्षिणां तदपि प्राप्त्या नादत्तमुपतिष्ठति ।।[50]

ಆಕಾಶದ ಉದ್ದಗಲದಲ್ಲಿ ಪಕ್ಷಿಗಳು ಹಾರಿದರೂ ಅವುಗಳಿಗೆ ಪ್ರಾಪ್ತಿ ಇದ್ದಷ್ಟೇ ಸಿಗುತ್ತದೆ. ಅದೃಷ್ಟಕ್ಕೆ ಪುರುಷ ಪ್ರಯತ್ನವೂ ಜೊತೆಗೂಡಬೇಕು. ಎರಡು ಕೈ ಸೇರಿದರೇ ಚಪ್ಪಾಳೆಯಾಗುವುದು. ಕರ್ಮವಶದಿಂದ ಊಟ ಸಿಕ್ಕರೂ ಅದು ಬಾಯಿಗೆ ಹೋಗಲು ಕೈ ಬೇಕು. ಸತತ ಉದ್ಯೋಗಿಯಾದ ಪುರುಷಸಿಂಹನನ್ನು ಲಕ್ಷ್ಮಿಯು ಹೊಂದುತ್ತಾಳೆ. ಕುಜನರು ಎಲ್ಲಕ್ಕೂ ದೈವವನ್ನೇ ಗರಿಯಾಗಿಸಿಕೊಳ್ಳುತ್ತಾರೆ. ಆದ್ದರಿಂದ ಉದ್ಯೋಗ ಶೀಲನಾಗುವುದು ಒಳ್ಳೆಯದು. ಈ ತೀರ್ಮಾನದಿಂದ ಸೋಮಿಲಕನು ವರ್ಧಮಾನಪುರಕ್ಕೆ ಹೋಗಿ ಮೂರು ಮೂರು ವರ್ಷಗಳಲ್ಲಿ ಹೆಂಡತಿಗೆ ತೋರಿಸಿ ಅವಳನ್ನು ಸಂತೋಷಪಡಿಸಬೇಕೆಂದು ನಿರ್ಧರಿಸಿ ಊರಿಗೆ ಹೊರಟನು. ಕಾಡುದಾರಿ ಕತ್ತಲೆಯಾಯಿತು. ದಾರಿತೋರದಾಗಿ ಎದುರಿಗಿದ್ದ ಆಲದಮರವೇರಿ

49. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ-2, ಪು-124-126. ವರ್ಣಿಲ, 39/2-11, ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು-560050.(2015)

50. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ದ್ವಿ.ತಂ-ಶ್ಲೋ-128, ಪು-390.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಕೊಂಬೆಗಳೆರಡರ ನಡುವೆ ಮಲಗಿದನು. ಇವನು ನಿದ್ರಿಸುತ್ತಿರುವಾಗ ಕನಸಿನಲ್ಲಿ ಯಾರೋ ಇಬ್ಬರು ರೌದ್ರಾಕಾರವುಳ್ಳ ಪುರುಷರು ಪರಸ್ಪರ ಮಾತನಾಡುತ್ತಿದ್ದುದನ್ನು ಕೇಳಿಸಿಕೊಂಡನು. ಒಬ್ಬನು ಹೀಗೆ ಹೇಳಿದನು" ಎಲೈ ಕರ್ತನೇ ಈ ಸೋಮಿಲಕನಿಗೆ ಹೊಟ್ಟೆ ಬಟ್ಟೆಗಿಂತ ಹೆಚ್ಚಿನ ಸಂಪಾದನೆಯು ಹಣೆಯಲ್ಲಿ ಬರೆದಿಲ್ಲ ಎಂದು ನಿನಗೆ ತಿಳಿದಿಲ್ಲವೇ? ಏಕೆ ಇವನಿಗೆ ಮುನ್ನೂರು ಸುವರ್ಣ ನಾಣ್ಯಗಳನ್ನು ಕೊಟ್ಟಿರುವೆ? ಮತ್ತೊಬ್ಬನು "ಎಲೈ ಕರ್ಮನೇ, ಪ್ರಯತ್ನಶೀಲರಿಗೆ ನಾನು ಅವಶ್ಯವಾಗಿ ಕೊಡತಕ್ಕದ್ದು. ಆದರೆ ಆದರ ಪರಿಣಾಮವು ನಿನ್ನ ಅಧೀನದಲ್ಲಿದೆ. ಅನಂತರ ನೇಕಾರನು ಎದ್ದು ನೋಡಿದಾಗ ಚಿನ್ನದ ನಾಣ್ಯಗಳಿದ್ದ ಚೀಲ ಖಾಲಿಯಾಗಿತ್ತು. ಬಹಳವಾಗಿ ಚಿಂತಿಸಿದನು. ಪತ್ನಿ ಹಾಗೂ ಮಿತ್ರರಿಗೆ ಬರಿಗೈಲಿ ಹೇಗೆ ಮುಖ ತೋರಿಸಲಿ ಎಂದುಕೊಂಡು ಮತ್ತೆ ವರ್ಧಮಾನಪುರಕ್ಕೆ ಹೋದನು. ಪುನಃ ಒಂದು ವರ್ಷದಲ್ಲಿ ಮತ್ತೆ ನೂರು ಚಿನ್ನದ ನಾಣ್ಯಗಳನ್ನು ಸಂಪಾದಿಸಿ ತನ್ನ ಊರಿಗೆ ವಾಪಸಾಗುತ್ತಿದ್ದನು. ಪುನಃ ಹಿಂದಿನ ಅನುಭವವೇ ಮರುಕಳಿಸಿತು. ನಾಣ್ಯಗಳು ಮತ್ತೆ ಕಾಣದಾಯಿತು. ಕೊನೆಗೆ ಸೋಮಿಲಕನು ಹಣವಿಲ್ಲದ ನನ್ನ ಜೀವನದಿಂದ ಏನು ಪ್ರಯೋಜನ ಎಂದು ಯೋಚಿಸಿ, ಬಹಳ ಬೇಸರದಿಂದ ಜಿಗುಪ್ಸೆಗೊಂಡು ಬದುಕಬಾರದೆಂದ ನಿಶ್ಚಯಿಸಿ, ದರ್ಭೆಯಿಂದ ಮಾಡಿದ ಹಗ್ಗವನ್ನು ತನ್ನ ಕತ್ತಿಗೆ ಹಾಕಿಕೊಂಡು ನೇಣು ಬಿಗಿದುಕೊಳ್ಳಲು ಮುಂದಾದನು. ಅಷ್ಟರಲ್ಲಿ ಆಕಾಶದಲ್ಲಿಂದ ಮನುಷ್ಯನೊಬ್ಬನು ಹೀಗೆ ನುಡಿದನು." ಎಲೈ ಸೋಮಿಲಕನೇ ಈ ಸಾಹಸವನ್ನು ಮಾಡದಿರು. ನಿನ್ನ ಹಣ ಕದ್ದವನು ನಾನೇ. ಹೊಟ್ಟೆಬಟ್ಟೆಗಿಂತ ಹೆಚ್ಚಿಗೆ ಒಂದು ನಾಣ್ಯವೂ ನಿನ್ನಲ್ಲಿರುವುದನ್ನು ನಾನು ಸಹಿಸಲಾರೆನು."

ಸೋಮಿಲಕನು ದುಡಿಯುತ್ತ ಎಲ್ಲರ ಕಷ್ಟಸುಖಗಳನ್ನು ಕಂಡವ. ಅದೃಷ್ಟವನ್ನು ಅದೃಶ್ಯ ವ್ಯಕ್ತಿಯಿಂದ ಕೇಳಿ ತಿಳಿದವ. ಹೀಗಾಗಿ ತನ್ನದಲ್ಲದ್ದನ್ನು ತನಗೆ ಬೇಡವೆಂದು ಬೇರೇನೂ ಕೇಳೆನು. ನಾನು ಗಳಿಸಿದ ಸುವರ್ಣ ನಾಣ್ಯಗಳನ್ನು ನನಗೆ ಕೊಡು ಅಷ್ಟೇ ಸಾಕು ಎಂದು ಆ ಮನುಷ್ಯನನ್ನು ಕೇಳಿಕೊಳ್ಳುತ್ತಾನೆ. ಸೋಮಿಲಕನು ಸ್ವಾಭಿಮಾನಿ ಹಾಗೂ ಛಲವಾದಿ. ಬಳಿಕ ಆ ಅಶರೀರವಾಣಿ ಹೇಳುತ್ತದೆ– "ಅನುಭವಿಸದ ಹಣದಿಂದ ಏನುಮಾಡುವೆ? ಊಟಬಟ್ಟೆಗಿಂತ ಅಧಿಕ ಧನ ಪ್ರಾಪ್ತಿಯು ನಿನಗಿಲ್ಲ.[51]

ಹೀಗೆ ಕಥೆ ಹೇಳುತ್ತಿದ್ದ ವಿಷ್ಣುಶರ್ಮರು ಕಥೆ ನಿಲ್ಲಿಸಿ ರಾಜಕುಮಾರರನ್ನು ಕೇಳಿದರು–"ಖರ್ಚು ಮಾಡದೇ ಇದ್ದರೂ ಧನಿಕನನ್ನು ಜನರು ಗೌರವಿಸುವುದು ನಿಜವೇನು?

ಇಲ್ಲಿ ಗುರುಗಳು ಶಿಷ್ಯರಿಗೆ ಒಳ್ಳೆಯ ಆಲೋಚನೆ ನಡೆಸಲು ಉತ್ತಮ ಸನ್ನಿವೇಶವನ್ನು ಒದಗಿಸಿ ಪ್ರೇರೇಪಿಸಿದ್ದಾರೆ. ಹಾಗೂ ಅವರು ಎಷ್ಟರಮಟ್ಟಿಗೆ ವಿಚಾರಗಳನ್ನು ಗ್ರಹಿಸಿ, ವಿಮರ್ಶೆ ಮಾಡಬಲ್ಲರು ಎಂಬುದನ್ನು

---

51. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ–2, ಪು–125.ವರ್ಣಿಲ, 39/2–11, ಕಲ್ಯಾಣಿಗಾರ್ಡನ್, BSK 1st stage, ಬೆಂಗಳೂರು–560050.(2015)

ಪರೀಕ್ಷಿಸಿದ್ದಾರೆ. ರಾಜಕುಮಾರರು ತುಸು ಹೊತ್ತು ಚೆನ್ನಾಗಿ ಯೋಚಿಸಿ ತಮ್ಮತಮ್ಮಲ್ಲೇ ಮಾತನಾಡಿಕೊಂಡರು ಮತ್ತು ಚರ್ಚೆ ನಡೆಸಿದರು. ಇದು ಒಂದು ಸಣ್ಣ ವಿಚಾರಗೋಷ್ಠಿಯಂತೆ ನಡೆಯಿತು. ಇಲ್ಲಿ ಕೆಲವೊಮ್ಮೆ ಸಹಪಾಠಿಗಳೂ ಸಹ ವ್ಯಕ್ತಿತ್ವ ರೂಪಿಸುವಲ್ಲಿ ಮುಖ್ಯ ಪಾತ್ರ ವಹಿಸುತ್ತಾರೆಂಬ ಅಂಶ ಸ್ಪಷ್ಟವಾಯಿತು. ಮಕ್ಕಳು ಗುಂಪುಗುಂಪಾಗಿ ಸಮಸ್ಯೆಯನ್ನು ಬಿಡಿಸಲು ವಿಷಯದ ಬಗ್ಗೆ ಚರ್ಚಿಸಿ ಉತ್ತಮ ತೀರ್ಮಾನಕ್ಕೆಬರುತ್ತಾರೆ.

ಕೊನೆಯಲ್ಲಿ ಬಹುಶಕ್ತಿಯೇ ಹೇಳಿದನು– "ಪೂಜ್ಯರೇ, ಹಣವಂತನನ್ನು ಜನರು ಗೌರವಿಸುತ್ತಾರಾದರೂ, ಆ ಗೌರವದ ಹಿಂದೆ ಆ ವ್ಯಕ್ತಿಯ ದಾನ ಮಾಡುವ ಗುಣವಿದೆ. ಅಗತ್ಯವಿದ್ದವರಿಗೆ ತಮ್ಮಲ್ಲಿದ್ದ ಹಣದ ಒಂದು ಭಾಗವನ್ನು ಹಂಚಿದರೆ ಮಾತ್ರ ಜನರು ಧನಿಕನ ಬಗ್ಗೆ ಸದಭಿಪ್ರಾಯ ಹೊಂದುತ್ತಾರೆ." ಇದನ್ನು ಕೇಳಿದ ಗುರುಗಳಿಗೆ ಆನಂದವಾಯಿತು. ಇದು ಒಬ್ಬ ಪ್ರತಿಭಾವಂತ ಶಿಕ್ಷಕರ ಪ್ರತಿಕ್ರಿಯೆಯಾಗಿದೆ. ಒಂದು ಸುಭಾಷಿತದ ಉಕ್ತಿ ಹೀಗೆ ಹೇಳುತ್ತದೆ.

दानाय लक्ष्मीस्सुकृताय विद्या चिन्ता परब्रह्मविनिश्चयाच ।

परोपकाराय वचांसि यस्य वन्द्यस्त्रिलोकीतिलकः स एव ॥[52]

ಅಂದರೆ,"ಯಾವನಸಂಪತ್ತು – ದಾನಕ್ಕಾಗಿಯೂ, ವಿದ್ಯೆ ಪುಣ್ಯಕ್ಕಾಗಿಯೂ, ಚಿಂತೆ ಪರಬ್ರಹ್ಮನ ಅರಿವಿಗಾಗಿಯೂ, ಮಾತು – ಪರೋಪಕಾರಕ್ಕಾಗಿರುವುದೋ, ಅವನು ಮೂರು ಲೋಕಕ್ಕೂ ತಿಲಕಪ್ರಾಯನಾಗಿದ್ದು, ವಂದಿಸಲು ಯೋಗ್ಯನು." ಇಂಥಹವರೇ ಪೂಜ್ಯರು ಪ್ರಾತಃಸ್ಮರಣೀಯರು. ವಿಷ್ಣುಶರ್ಮರು ಇದೇ ಗೌರವಕ್ಕೆ ಪಾತ್ರರಾಗಿದ್ದಾರೆ ಎಂಬುದನ್ನು ಪಂಚತಂತ್ರದ ಅಧ್ಯಯನ ಮಾಡಿದಾಗ ತಿಳಿದುಬರುತ್ತದೆ. ಅಂದರೆ ಸಂಭಾವಿತನಾರು? ಸಾರ್ಥಕ ವ್ಯಕ್ತಿತ್ವ ಯಾವುದು ಎಂಬುದು.

ಮುಂದುವರೆಸುತ್ತಾ, ಸೋಮಿಲಕನು ಕಥೆಯೊಂದರಿಂದ "ಭದ್ರೆ, ಸಡಿಲಾಗಿರುವ ಮತ್ತು ದಪ್ಪವಾಗಿರುವ ವೃಷಣಗಳು ಬೀಳುತ್ತವೆಯೋ, ಇಲ್ಲವೋ ಎಂದು ಹದಿನೈದು ವರ್ಷಗಳು ಕಾದೆನು" ಎಂಬ ನುಡಿಯನ್ನು ಉದಾಹರಿಸಿದಾಗ ಆ ಪುರುಷನು ಅದೇನೆಂದು ಕೇಳಲು ಸೋಮಿಲಕನು **ಎತ್ತಿನ ವೃಷಣಗಳನ್ನು ಅನುಸರಿಸಿದ ನರಿಯ ಕಥೆ**ಯನ್ನು ಹೇಳಿದನು.

ಒಂದು ಪ್ರದೇಶದಲ್ಲಿ ತೀಕ್ಷ್ಣ ವಿಷಾಣ ಎಂಬ ದೊಡ್ಡ ಎತ್ತೊಂದು ವಾಸಿಸುತ್ತಿತ್ತು. ಒಮ್ಮೆ ಮದವೇರಿದ ಆ ಎತ್ತು, ಗುಂಪಿನಿಂದ ಹೊರಬಂದು ನದೀತೀರವನ್ನು ಕೊಂಬಿನಿಂದ ಮೀಟಿ ಕೆಡವುತ್ತಾ ಹಸಿರು ಹುಲ್ಲನ್ನು ಸ್ವೇಚ್ಛೆಯಿಂದ ಮೇಯುತ್ತಾ ಅರಣ್ಯವನ್ನು ತಲುಪಿತು. ಪ್ರಲೋಭಕನೆಂಬ ನರಿಯೊಂದು ಅದೇಪ್ರದೇಶದಲ್ಲಿ

---

**52. ಭಟ್. ವಿ.ಎನ್,** ಜ್ಞಾನದೀಪ, ಅ–44, ಸುಭಾಷಿತ ಸುರದ್ರುಮ, ಪು–84.(1993) ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ–577201

ವಾಸಿಸುತ್ತಿತ್ತು. ಒಮ್ಮೆ ಹೆಂಡತಿಯೊಂದಿಗೆ ನದೀತೀರದಲ್ಲಿ ಆರಾಮವಾಗಿ ಕುಳಿತಿತ್ತು. ಅದೇ ಸಮಯದಲ್ಲಿ ತೀಕ್ಷ್ಣ ವಿಷಾಣ ನೀರು ಕುಡಿಯಲು ಬಂದಿತು. ಆಗ ಅದರ ತೂಗಾಡುತ್ತಿರುವ ವೃಷಣಗಳನ್ನು ನೋಡಿದ ಹೆಣ್ಣು ನರಿ ತನ್ನ ಪ್ರಿಯತಮನಿಗೆ ಹೇಳಿತು. "ಸ್ವಾಮಿ, ತೂಗಾಡುತ್ತಿರುವ ಎತ್ತಿನ ಮಾಂಸ ಪಿಂಡಗಳನ್ನು ನೋಡು. ಈ ಕ್ಷಣವೇ ಒಂದು ಪೆಟ್ಟಿನಿಂದ ಬಿದ್ದುಬಿಡುವಂತೆ ನಿಂತಿವೆ. ಆದ್ದರಿಂದ ನೀನು ಇದನ್ನು ಹಿಂಬಾಲಿಸಲು ಆರಂಭಿಸು." ಆಗ ಗಂಡು ನರಿಯು ಹೇಳಿತು–" ಪ್ರಿಯೆ, ಇವುಗಳು ಬೀಳುತ್ತವೆಯೋ ಇಲ್ಲವೋ ಎಂದು ಹೇಳಲು ಬರುವುದಿಲ್ಲ. ಆದ್ದರಿಂದ ವ್ಯರ್ಥ ಪ್ರಯತ್ನಕ್ಕೆ ಏಕೆ ನನ್ನನ್ನು ದೂಡುತ್ತಿರುವೆ? ಇದು ಇಲಿಗಳು ಓಡಾಡುವ ಮಾರ್ಗ. ನಿನ್ನೊಂದಿಗಿದ್ದು ನೀರಿಗಾಗಿ ಬಂದ ಇಲಿಗಳನ್ನು ತಿನ್ನುತ್ತೇನೆ. ನಿನ್ನನ್ನು ಬಿಟ್ಟು ಎತ್ತಿನ ಹಿಂದೆ ಹೋದರೆ ಬೇರೆ ಯಾರಾದರೂ ಈ ಸ್ಥಳವನ್ನು ಆಶ್ರಯಿಸಿಬಿಡುತ್ತಾರೆ. ಯಾರು ಸ್ಥಿರವಾದುದನ್ನು ಬಿಟ್ಟು ಅಸ್ಥಿರವಾದುದರ ಹಿಂದೆ ಹೋಗುತ್ತಾರೋ ಅವರು ಎರಡನ್ನೂ ಕಳೆದುಕೊಂಡು ಮೂರ್ಖರಾಗುತ್ತಾರೆ."[53]

ಹೆಣ್ಣು ನರಿ ಇದನ್ನು ಒಪ್ಪದೆ ಪ್ರಿಯತಮನನ್ನು ಒಬ್ಬ ಹೇಡಿಯೆಂದು ಮೂದಲಿಸಿ ಪುರುಷನಾದವನು ಉತ್ಸಾಹಿಯಾಗಿರಬೇಕು ಎಂದು ತತ್ವ ಬೋಧನೆ ಮಾಡಿತು. ಅದನ್ನು ಕೇಳಿದ ಗಂಡು ನರಿ ಇಲಿಗಳು ದೊರೆಯುವ ಸ್ಥಾನವನ್ನು ಬಿಟ್ಟು ತೀಕ್ಷ್ಣ ವಿಶಾಣಿ ಎತ್ತನ್ನು ಅನುಸರಿಸಲು ತೊಡಗಿತು. ಸ್ತ್ರೀ ವಾಕ್ಯದಿಂದ ಪ್ರೇರಿತನಾದ ಮನುಷ್ಯನು ಮಾಡಬಾರದ ಕೆಲಸವನ್ನು ಯೋಗ್ಯವೆಂದು ತಿಳಿಯುತ್ತಾನೆ, ಹೋಗಬಾರದ ಸ್ಥಳವನ್ನು ಪ್ರಶಸ್ತವೆಂದು ಕಾಣುತ್ತಾನೆ ಹಾಗೂ ತಿನ್ನಬಾರದ್ದನ್ನು ತಿನ್ನಲು ಯೋಗ್ಯವೆಂದು ತಿಳಿಯುತ್ತಾನೆ. ಹೀಗೆ ಆ ನರಿಯು ತನ್ನ ಹೆಂಡತಿಯೊಂದಿಗೆ ಎತ್ತಿನ ಹಿಂದೆ ಅಲೆಯುತ್ತಾ ಹದಿನೈದು ವರ್ಷಗಳು ಕಳೆಯಿತು. ಎತ್ತಿನ ವೃಷಣಗಳು ಬೀಳಲೇ ಇಲ್ಲ. ಕೊನೆಗೆ ಸ್ವಸ್ಥಾನಕ್ಕೆ ಹೋಗಲು ತೀರ್ಮಾನ ಮಾಡಿದವು.

ಅದೇ ಉತ್ಸಾಹದಿಂದ ಕಥೆಯನ್ನು ಮುಂದುವರಿಸಿದರು. ಮುಂದೆ **ಬೇಡ, ಕಾಗೆ, ಆಮೆ, ಜಿಂಕೆ ಮತ್ತು ಇಲಿ ಕಥೆ**ಯಲ್ಲಿ, ಆಪತ್ತನ್ನು ಕಳೆದುಕೊಳ್ಳಲು ಬುದ್ಧಿವಂತರು ದೋಷವಿಲ್ಲದ ಮಿತ್ರರನ್ನು ಮಾಡಿಕೊಳ್ಳಬೇಕು. ಅನೇಕ ನೀತಿಬೋಧನೆಗಳಿವೆ. ಉದಾಹರಣೆಗೆ:– ಆಪತ್ತಿನಲ್ಲಿ ತನಗೆ ತಾನೇ ಹೊರತು ಹೆಂಡತಿ ಮಕ್ಕಳೂ ಅಲ್ಲ; ವಿದ್ವಾಂಸನಾದವನು ಎಲ್ಲರಿಂದಲೂ ಗೌರವಿಸಲ್ಪಡುತ್ತಾನೆ; ಕಷ್ಟ ಕಾಲದಲ್ಲಿ ಸಹಾನುಭೂತಿಯ ಮಾತುಗಳು ಸಾಂತ್ವನವನ್ನು ನೀಡುತ್ತವೆಯಂತೆ; ಜನ್ಮದಾತನು, ಉಪನಯನಗೈದವನು, ವಿದ್ಯಾಗುರು, ಅನ್ನದಾತ ಮತ್ತು ಭಯವನ್ನು ಹೋಗಲಾಡಿಸಿದವನು ತಂದೆಗೆ ಸಮಾನನಂತೆ; ಮರಣ ಕಾಲದಲ್ಲಿ ಆಪ್ತರ ದರ್ಶನವು ಉಭಯರಿಗೂ ಸೌಖ್ಯದಾಯಕವಂತೆ; ಈ ಲೋಕದ ಜೀವಿಗಳ ಕಷ್ಟವೇ ಹೀಗೆ, ಆದ ಗಾಯದ ಮೇಲೆಯೇ

---

53. **ಭರತ ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ದ್ವಿ.ತಂ. ಪು–145–146, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–560004.

ಪೆಟ್ಟು ಬೀಳುತ್ತದೆ; ತಿನ್ನಲಿಲ್ಲದಿರುವಾಗ ಹಸಿವು ಹೆಚ್ಚು; ಕಷ್ಟದ ಮೇಲೆ ಇನ್ನಷ್ಟು ಕಷ್ಟ; "ಬದುಕಿನಲ್ಲಿ ಗೆಳೆಯರು ಬೇಕು, ಪ್ರತಿಫಲ ಅಪೇಕ್ಷೆ ಇಲ್ಲದೆ ಪರಸ್ಪರರು ನೆರವಾಗಬೇಕು, ಒಗ್ಗಟ್ಟಿದ್ದರೆ ಶತ್ರುವು ಎಂತಹ ಬಲಿಷ್ಠನೇ ಆಗಿರಲಿ ಅವನನ್ನು ಸೋಲಿಸಬಹುದು, ಈ ವಿಷಯವನ್ನು ಮನನಮಾಡಿ ಬದುಕಿನಲ್ಲಿ ಅಳವಡಿಸಿಕೊಳ್ಳಿ."[54]

मित्रवान् साधयत्यर्थान् दुःसाध्यानपि वै यतः।

तस्मान्मित्राणि कुर्वीत समानान्येव चात्मनः ॥[55]

ಅಂದರೆ, ಸಾಧಿಸಲಸಾಧ್ಯವಾದ ಕೆಲಸಗಳನ್ನು ಸಹ ಸ್ನೇಹಿತನನ್ನು ಹೊಃದಿರುವವನು ಸಾಧಿಸುತ್ತಾನೆ. ಆದುದರಿಂದ ತನಗೆ ಸಮಾನರಾಗಿರುವವರನ್ನೇ ಸ್ನೇಹಿತರನ್ನಾಗಿ ಮಾಡಿಕೊಳ್ಳಬೇಕು.

ಮಿತ್ರರಿಲ್ಲದವನು ಎಂದಿಗೂ ಆಪತ್ತಿನಿಂದ ಹೊರಬರಲಾರರು. ಹೀಗೆ ಅರಿತುಕೊಂಡು ವಿವೇಕಿಗಳು ಮಿತ್ರರನ್ನು ಸಂಪಾದಿಸಬೇಕು. ಮಿತ್ರರೊಂದಿಗೆ ಕಪಟದ ವ್ಯವಹಾರವನ್ನು ಮಾಡಬಾರದು. ಏಕೆಂದರೆ ಯಾರು ಮಿತ್ರರನ್ನು ಗಳಿಸಿಕೊಂಡು ಅವರೊಂದಿಗೆ ಕಪಟದಲ್ಲಿ ವರ್ತಿಸುವುದಿಲ್ಲವೋ ಅವರು ಎಂದಿಗೂ ಪರಾಭವ ಹೊಂದುವುದಿಲ್ಲ.[56] ಕಥಾ ನಿರೂಪಣೆಯನ್ನು ಮುಗಿಸುತ್ತಾ ವಿಷ್ಣುಶರ್ಮರು ಮತ್ತೊಂದು ಉತ್ತೇಜಕ ಪ್ರಶ್ನೆ ಕೇಳಿದರು. "ಈ ಕಥೆ ನಮಗೇನು ಬೋಧಿಸುತ್ತದೆ?" ಕೂಡಲೇ ಬಹುಶಕ್ತಿ ಹೇಳಿದನು– "ನಿಷ್ಕಪಟ ಮಿತ್ರತ್ವದ ಈ ಕಥೆಯು ಒಳ್ಳೆಯ ಗೆಳೆಯನನ್ನು ಹೊಂದಬೇಕು ಎಂದು ತಿಳಿಸುತ್ತದೆ." ಅನಂತಶಕ್ತಿ ಹೇಳಿದನು – "ಎಲ್ಲರೂ ಪರಸ್ಪರ ಪ್ರಾಮಾಣಿಕತೆಯನ್ನು ಹೊಂದಬೇಕು." ನಂತರ ಉಗ್ರಶಕ್ತಿ ಹೇಳಿದನು – "ಮಿತ್ರ ಯಾರೇ ಆಗಲಿ, ಅವರಲ್ಲಿ ಭೇದಭಾವವನ್ನು ಎಣಿಸಬಾರದು". ಹೀಗೆ ಮಕ್ಕಳಿಂದಲೇ ಒಳ್ಳೆಯ ಅಭಿಪ್ರಾಯಗಳು ಹೊರಸೂಸುವಂತೆ ಪ್ರೇರೇಪಿಸುತ್ತಿದ್ದರು. ಇದು ಪ್ರತಿಭಾವಂತ ಶಿಕ್ಷಕರ ಲಕ್ಷಣ.

ಉತ್ತಮ ಶಿಕ್ಷಕರಾದವರು ತಮ್ಮಬೋಧನೆಯಲ್ಲಿ ಇಂಥಹ ಒಂದು ಮಾದರಿ ಅಂದರೆ ಮಕ್ಕಳೇ ಆಲೋಚಿಸುವಂತೆ ಮಾಡಿ ಮಕ್ಕಳಿಂದಲೇ ವಿಚಾರಗಳನ್ನು ಹೊರಸೆಳೆಯಬೇಕು. ಶಿಕ್ಷಕರೇ ಪ್ರಾರಂಭದಿಂದ ಕೊನೆಯವರೆಗೂ ಒಂದೇ ಸಮನೆ ಸೋನೆ ಮಳೆ ಸುರಿದಂತೆ ಗೊತ್ತಿರುವುದನ್ನೆಲ್ಲಾ ಏಕಮುಖವಾಗಿ ಹೇಳಿಕೊಂಡು ಹೋಗುತ್ತಿದ್ದರೆ ಅದು ಸಂಪೂರ್ಣ ವ್ಯರ್ಥ. ವಿದ್ಯಾರ್ಥಿಗಳ ಸರ್ವತೋಮುಖ ಬೆಳವಣಿಗೆಗೆ ಅವರದೇ ಸಾಮರ್ಥ್ಯಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡು, ರಚನಾತ್ಮಕ ಪ್ರೋತ್ಸಾಹ ನೀಡಿ ಉತ್ತಮ ಫಲವನ್ನು ಪಡೆಯುವಂತೆ ಬೋಧನೆ ಮಾಡಬೇಕು. ಆಧುನಿಕ ಶಿಕ್ಷಣ ಪದ್ಧತಿಯಲ್ಲಿ ಶಿಕ್ಷಕರು, ಬೋಧಕರು,

54. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ–2, ಪು–130–133. ವರ್ಣಿಲ, 39/2–11, ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು–560050.(2015)

55. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಸಂಪ್ರಾಪ್ತಿ– ಶ್ಲೋ–27, ಪು–321, (1993)ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

56. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ದ್ವಿ.ತಂ.ಪು–156. (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–560004.

ಉಪಾಧ್ಯಾಯರು ಅನ್ನುವುದಕ್ಕಿಂತ **FACILITATORS** ಅಥವಾ ಸುಗಮಗಾರರು ಎಂದು ಕರೆಯುತ್ತಾರೆ. ಇದನ್ನು "ವಿದ್ಯಾರ್ಥಿಗಳನ್ನು ಉತ್ತಮ ನಾಗರಿಕರನ್ನಾಗಿ ರೂಪಿಸುವುದಕ್ಕೆ ಮತ್ತು ವ್ಯಕ್ತಿತ್ವ ವಿಸನಗೊಳಿಸಲು ಅವರ ಭವಿಷ್ಯದ ಹಿತಕ್ಕೆ ಸುಗಮ ಮಾರ್ಗವನ್ನು ಸೂಚಿಸುವ ಸಹಾಯಕರೆಂದೂ ಹೇಳಬಹುದು. ವಿಷ್ಣುಶರ್ಮರು ಆಕಾಲದಲ್ಲಿಯೇ ರಾಜಕುಮಾರರ ಶೈಕ್ಷಣಿಕ ಮಾರ್ಗದರ್ಶನದ ವಿಚಾರದಲ್ಲಿ ಒಬ್ಬ ಒಳ್ಳೆಯ ಫೆಸಿಲಿಟೇಟರ್ ಆಗಿ ಕಾರ್ಯ ನಿರ್ವಹಿಸಿದ್ದರು. ಆದ್ದರಿಂದಲೇ ಇಂದಿಗೂ ಶಿಕ್ಷಣ ಸೇವೆ, ಬೋಧನಾ ಸೇವೆ, ಪರಿಹಾರಾತ್ಮಕ ಸೇವೆ, ರಕ್ಷಣಾ ಸೇವೆ, ಆರೋಗ್ಯ ಸೇವೆ ಇತ್ಯಾದಿ ಹೆಸರುಗಳು ಬಂದಿರುವುದಾಗಿದೆ. ಒಂದು ವಿಶೇಷ ಲಕ್ಷಣವೆಂದರೆ, ಆ ಕಾಲದಲ್ಲೇ ಇಂತಹ ಒಂದು ಮುಂದುವರಿದ ಶೈಕ್ಷಣಿಕ ಸೇವಾ ಮನೋಭಾವನೆಯನ್ನು ಪಂಚತಂತ್ರ ಯೋಜಿಸಿತ್ತು ಎಂಬುದು.

ರಾಜಕುಮಾರರು ಹೇಳಿದ ವಿಚಾರಗಳನ್ನು ಕೇಳಿದ ಗುರುಗಳಿಗೆ ಸಂತೋಷವಾಯಿತು. ಶಿಷ್ಯರಾಡಿದ ಮಾತುಗಳನ್ನೇ ಆಧಾರವಾಗಿಟ್ಟುಕೊಂಡು, ಬದುಕಿನಲ್ಲಿ ಗೆಳೆಯರು ಬೇಕು. ಪ್ರತಿಫಲಾಪೇಕ್ಷೆಯಿಲ್ಲದೆ ಪರಸ್ಪರರು ನೆರವಾಗಬೇಕು. ಒಗ್ಗಟ್ಟಿದ್ದರೆ ಶತ್ರುವು ಎಂಥಹ ಬಲಿಷ್ಠನೇ ಆಗಿರಲಿ, ಅವನನ್ನು ಪರಾಜಯಗೊಳಿಸಬಹುದು. ಈ ವಿಷಯವನ್ನು ಮನನ ಮಾಡಿಕೊಂಡು ನೀವೂ ನಿಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳಿ ಎಂದು ತಿಳುವಳಿಕೆಯನ್ನು ನೀಡಿದರು. ಅಮೃತಸದೃಶವಾದ "ಮಿತ್ರ" ಎಂಬ ಎರಡಕ್ಷರ ಮೊಟ್ಟಮೊದಲು ಯಾರಿಂದ ಸೃಷ್ಟಿಸಲ್ಪಟ್ಟಿತು ಎಂಬುದು ನಿಗೂಢ. ಆದರೆ ನಿಜವಾದ ಮಿತ್ರ ಯಾರು? ಅವನ ಲಕ್ಷಣಗಳೇನು? ಎಂಬುದನ್ನು ಭರ್ತೃಹರಿಯ ನೀತಿಶತಕದಲ್ಲಿ ಸೊಗಸಾಗಿ ಹೇಳಿರುವುದನ್ನು ಸ್ಮರಿಸಬಹುದು

पापान्निवारयति योजयते हिताय गुह्यं निगूहति गुणान् प्रकटीकरोति ।
आपद्गतं च न जहाति ददाति काले सन्मित्रलक्षणमिदं निगदन्ति सन्तः ॥[57]

ಮಿತ್ರನಾದವನು ಗೆಳೆಯನನ್ನು ಪಾಪಾಚರಣೆಯಿಂದ ತಡೆಯುತ್ತಾನೆ; ಹಿತಕರವಾದ ಕಾರ್ಯಗಳಲ್ಲಿ ತೊಡಗಿಸುತ್ತಾನೆ; ರಹಸ್ಯವನ್ನು ಬಚ್ಚಿಡುತ್ತಾನೆ; ಗುಣಗಳನ್ನು ಬಹಿರಂಗಗೊಳಿಸುತ್ತಾನೆ; ಆಪತ್ಕಾಲದಲ್ಲಿ ಕೈಬಿಡುವುದಿಲ್ಲ; ಕಷ್ಟಕಾಲದಲ್ಲಿ ಸಹಾಯ ಮಾಡುತ್ತಾನೆ; ಇವು ಒಳ್ಳೆಯ ಗೆಳೆಯನ ಲಕ್ಷಣಗಳೆಂದು ಸಜ್ಜನರು ಹೇಳುತ್ತಾರೆ. ಇಂತಹ ತಿಳುವಳಿಕೆಯನ್ನು ವಿಷ್ಣುಶರ್ಮರು ತಮ್ಮಶಿಷ್ಯರಿಗೆ ಹೇಳುತ್ತಾ, ಅವರಲ್ಲಿಯೂ ಆ ಬಗ್ಗೆ ಉತ್ತಮ ಆಲೋಚನೆಗಳು ಬೆಳೆಯುವಂತೆ ಪ್ರೋತ್ಸಾಹಿಸುತ್ತಿದ್ದರು. ಹೀಗೆ ಎರಡನೆಯ ತಂತ್ರ ಮಿತ್ರಸಂಪ್ರಾಪ್ತಿ ಭಾಗದಲ್ಲಿ ಅದ್ಭುತವಾದ ಆರು ಉಪಕಥೆಗಳಿದ್ದು, ಉತ್ತಮ ಮಿತ್ರನ ಲಕ್ಷಣಗಳನ್ನು ವಿವರಿಸಲಾಗಿದೆ. ಒಳ್ಳೆಯ ಸಹವಾಸ ಮಾಡಿದರೆ ನಮ್ಮಲ್ಲೂ ಉತ್ತಮ ಗುಣಗಳು ಬೆಳೆಯುತ್ತವೆ ಎಂಬ ಅಂಶದ ಅರಿವು ರಾಜಕುಮಾರರಿಗೆ

57. **ಭರ್ತೃಹರಿ, ನೀತಿಶತಕ,** ಪರೋಪಕಾರ ಪದ್ಧತಿ–ಶ್ಲೋ–72.

ಉಂಟಾಗಲಿ, ಮುಂದೆ ಪ್ರಜಾಪಾಲನಾ ಜವಾಬ್ದಾರಿಯನ್ನು ನಿರ್ವಹಿಸುವ ಸಂದರ್ಭದಲ್ಲೂ ನೆರವಾಗಲಿ ಎಂಬ ಸದುದ್ದೇಶದಿಂದ ಕಥಾನಿರೂಪಣೆ ಮೂಲಕ ಪರಿಣಾಮಕಾರಿ ಶಿಕ್ಷಣವನ್ನು ವಿಷ್ಣುಶರ್ಮರು ಒದಗಿಸಿದ್ದಾರೆ.

ಶೈಕ್ಷಣಿಕ ಮನೋವಿಜ್ಞಾನ ಸೂಚಿಸುವುದೇನೆಂದರೆ, ಪಾಠ ಬೋಧಿಸುತ್ತಿರುವಾಗ ಮಾನಸಿಕವಾಗಿ ಮಕ್ಕಳು ಚಟುವಟಿಕೆಯಿಂದಿರಬೇಕು. ಅವರ ಆಲೋಚನೆ, ವಿವೇಚನೆ, ತೀರ್ಮಾನ, ವಿಮರ್ಶೆ ಮುಂತಾದ ಮನಶ್ಶಕ್ತಿಗಳು ಕೆಲಸಮಾಡಲು ನೆರವಾಗುವಂತೆ ಪ್ರಶ್ನೆಗಳನ್ನು ಕೇಳಿ ಉತ್ತರ ಹೇಳಿಸುತ್ತಾ ಪಾಠವನ್ನು ಮುಂದುವರಿಸುವುದು ಮುಖ್ಯ. ಆ ಕ್ರಮದ ಮೂಲಕ ಮಕ್ಕಳು ಬೋಧಿಸಿದ್ದನ್ನು ಕಲಿಯುವುದರ ಜೊತೆಗೆ ಆಲೋಚನೆ, ವಿವೇಚನೆಯೊಂದಿಗೆ ಚಟುವಟಿಕೆಯಿಂದ ಇರುವುದನ್ನು ಕಲಿಯುತ್ತಾರೆ. ಅವರ ಮನಸ್ಸಿನ ಆ ಶಕ್ತಿಗಳೂ ಸಂಸ್ಕರಣಗೊಳ್ಳುತ್ತವೆ. ಒಂದೊಂದು ಕಥೆಯನ್ನು ಕೇಳಿದಾಗಲೂ ಮಕ್ಕಳಿಗೆ ತೃಪ್ತಿ ಸಂತೋಷಗಳು ದೊರಕುವಂತಹ ಸನ್ನಿವೇಶಗಳನ್ನು ಪಂಚತಂತ್ರ ಕಥಾಗುಚ್ಛದಲ್ಲಿ ಅಳವಡಿಸಲಾಗಿದೆ. ಹಾಗೆಯೇ ಪ್ರೋತ್ಸಾಹದ ಪ್ರಶಂಸೆಯನ್ನು ಕಾಣಬಹುದು. ಬೋಧನೆಯ ಸಾಫಲ್ಯಕ್ಕೆ ಕಲಿವೇ ಗುರುತು. ಆದ್ದರಿಂದ ಕಲಿವು ಖಚಿತವಾಗಿ ಸಿದ್ಧಿಸುವಂತೆ ಬೋಧನ ಕ್ರಮ ರೂಪುಗೊಳ್ಳಬೇಕು. ಸೂಕ್ತ ಬೋಧನ ಕ್ರಮಗಳನ್ನು ಕಂಡು ಕೊಳ್ಳಲು ಪ್ರಖ್ಯಾತ ಅಮೆರಿಕನ್ ಮನೋವಿಜ್ಞಾನಿ **THORNDIKE** ರವರು ಕಲಿವಿನ ಕೆಲವು ನಿಯಮಗಳನ್ನು ರೂಪಿಸಿದ್ದಾರೆ." ಮಕ್ಕಳು ಸ್ವತಃ ಯಾವುದಾದರೂ ಅಂಶವನ್ನು ಅರಿಯಲು ಕಾತರ ತೋರಿಸಿದಾಗ ಬೋಧಿಸಿದ ಪಾಠ ಅರ್ಥವಾಗುತ್ತದೆ. ಆಗ ಬೋಧನೆ ಯಶಸ್ವಿಯಾಗುತ್ತದೆ." ಇದನ್ನು ಪಂಚತಂತ್ರದ ಒಂದೊಂದು ತಂತ್ರವೂ, ತಂತ್ರಗಳಲ್ಲಿ ಯೋಜಿಸಿರುವ ಕಥಾಗುಚ್ಛಗಳಲ್ಲಿನ ಒಂದೊಂದು ಕಥೆಯೂ ಮುಂದಿನ ಕಥೆಗೆ ಕಾತರದಿಂದ ಕಾಯುವಂತಹ ಸನ್ನಿವೇಶಗಳನ್ನು ಅಚ್ಚುಕಟ್ಟಾಗಿ ವ್ಯವಸ್ಥೆಗೊಳಿಸಿದೆ. ಇಷ್ಟಲ್ಲದೆ ಪೂರ್ವಾನುಭವವನ್ನು ಸ್ಮರಣೆಗೆ ತಂದು ಮುಂದಿನ ಪಾಠಕ್ಕೆ ಸಜ್ಜುಗೊಳಿಸಲಾಗಿದೆ. ಹಾಗೆ ಸಜ್ಜಾಗಿರುವ ಮನಸ್ಸು ಪಾಠದ ಮೇಲೆ ಅವಧಾನವನ್ನು ಕೇಂದ್ರೀಕರಿಸುತ್ತದೆ. ಆಗ ಕಲಿವು ಸಿದ್ಧಿಸುತ್ತದೆ. ಮಕ್ಕಳಿಗೆ ನಿಷ್ಠೆಯಿಂದ, ಕಲಿಯಲು ಪರಿತಪಿಸುವಂತೆ ಮಕ್ಕಳನ್ನು ಪ್ರೇರೇಪಿಸುವುದು ಉತ್ತಮ ಬೋಧಕನ ಕರ್ತವ್ಯವಾಗಿದೆ ಎಂದು ಶೈಕ್ಷಣಿಕ ಮನೋವಿಜ್ಞಾನ ಹೇಳುತ್ತದೆ. ಪಂಚತಂತ್ರದಲ್ಲಿ ವಿಷ್ಣುಶರ್ಮರು ಇದನ್ನು ಬಹಳ ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಬೋಧಕ ವೃತ್ತಿಕೌಶಲ್ಯವನ್ನು ಮೆರೆಸಿದ್ದಾರೆ. ಒಂದು ಸಂಸ್ಕೃತ ಸುಭಾಷಿತ ಹೀಗೆ ಹೇಳುವುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು:–

यथा खनन्खनित्रेण नरो वार्यधिगच्छति ।

तथा गुरुतरां विद्यां शुश्रूषुरधिगच्छति ॥[58]

ಅಂದರೆ, ಹೇಗೆ ಗುದ್ದಲಿಯಿಂದ ನಿರಂತರ ಒಂದೇ ಕಡೆ ಗುಡ್ಡ ತೋಡುತ್ತಾ ಹೋದರೆ ಮನುಷ್ಯನಿಗೆ ಭೂಮಿಯೋಳಗಿನ ನೀರು ಸಿಗುತ್ತದೆಯೋ, ಅದೇ ರೀತಿ ಗುರುಗಳ ಸೇವೆಯನ್ನು ನಿಷ್ಠೆಯಿಂದ ಮಾಡುವ ಮತ್ತು ಅವರಿಂದ ವಿದ್ಯೆಯನ್ನು ಕಲಿಯಲು ಪರಿತಪಿಸುವ ವಿದ್ಯಾರ್ಥಿಗಳಿಗೆ ಗುರುಗಳಿಂದ ವಿದ್ಯೆಯು ಖಂಡಿತ ಲಭಿಸುತ್ತದೆ. ಆ ರೀತಿಯಲ್ಲಿ ಶಿಷ್ಯರನ್ನು ಪ್ರೇರೇಪಿಸಿ ಪ್ರೋತ್ಸಾಹಿಸಿ, ಕಲಿಕೆಯಲ್ಲಿ ಶ್ರದ್ಧಾಭಕ್ತಿಯನ್ನುಂಟು ಮಾಡುವವರೂ ಗುರುಗಳೇ. ಪಂಚತಂತ್ರದಲ್ಲಿ ಬರುವ ಸೂಕ್ತಿಯೊಂದು ಕಲಿಯುವವನ ಲಕ್ಷಣಗಳನ್ನು ಸೂಚಿಸುತ್ತದೆ.

यः सततं परिपृच्छति श्रुणोति सन्धारयत्यनिशम् ।

तस्य दिवाकरकिरणैर्नलिनीव विवर्द्धते बुद्धिः ॥[59]

ಅಂದರೆ, ಯಾವನು ಯಾವಾಗಲೂ ಪ್ರಶ್ನೆ ಮಾಡುತ್ತಾನೋ, ಕಿವಿಗೊಟ್ಟು ಕೇಳುತ್ತಾನೋ ಮತ್ತು ಯಾವಾಗಲೂ ಚೆನ್ನಾಗಿ ಮನದಟ್ಟುಮಾಡಿಟ್ಟುಕೊಳ್ಳುತ್ತಾನೆಯೋ ಅವನ ಬುದ್ಧಿಯು ಸೂರ್ಯಕಿರಣಗಳಿಂದ ತಾವರೆಯು ಹೇಗೋ ಹಾಗೆ ಬೆಳೆಯುತ್ತದೆ. ಈ ಎಲ್ಲ ಲಕ್ಷಣಗಳನ್ನೂ ಪ್ರತಿಭಾನ್ವಿತ ಗುರುಗಳಾದ ವಿಷ್ಣುಶರ್ಮರು ರಾಜನಂದನಲ್ಲಿ ಮೂಡಿಸಿದ್ದಾರೆ. ಶೈಕ್ಷಣಿಕ ಮನೋವಿಜ್ಞಾನದ ನಿಯಮಗಳು, ಕ್ರಮಗಳು ಶಿಕ್ಷಕರಿಗೆ ಇದನ್ನೇ ಸೂಚಿಸುತ್ತವೆ.



---

58. **ಮನುಸ್ಮೃತಿ,** 2-218.
59. **ಸುಧಾಕರ್ ಮಾಲವೀಯ,** ಸಂಪಾ-ಅನು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ,-ಶ್ಲೋ-87 ಪು-787 (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

# ಅಧ್ಯಾಯ–6

## ಅರಿವು–ಅರಿವೇ ಗುರು–ಮನಶ್ಶಕ್ತಿ

ಅಧ್ಯಾಯ 6–1. ಅರಿವು–ಅರ್ಥ–ವ್ಯಾಪ್ತಿ.

ಅಧ್ಯಾಯ 6–2. ಮಾನವನ ಮಹೋನ್ನತಿ– ಮನಶ್ಶಕ್ತಿಯಲ್ಲಿ.

ಅಧ್ಯಾಯ 6–3. ಬಿಂಬ ಮತ್ತು ಬಿಂಬ ಕಲ್ಪನೆ.

**Image, Imagery Imagination**

ಅಧ್ಯಾಯ 6–4. ಮೌಲ್ಯಗಳನ್ನು ಬೆಳೆಸುವಿಕೆ ಚಿಂತನ–ಮಂಥನ
ಮಾನವನಿಗೆ ಅಗತ್ಯ ಗುಣ.

ಅಧ್ಯಾಯ 6–5. पञ्चतन्त्रम्–तृतीयं तन्त्रम्– काकोलूकीयम् –
ಕಥಾ – ವಿಶ್ಲೇಷಣೆ.

## 6.1. ಅರಿವು :– ಅರ್ಥ–ವ್ಯಾಪ್ತಿ.

यदा किञ्चिज्ञोऽहं गज इव मदान्धः समभवम्

तदा सर्वज्ञोऽस्मीत्यभवदवलिप्तं मम मनः ।

यदा किञ्चित्किञ्चिद्बुधजनसकाशादवगतम्

तदा मूर्खोऽस्मीति ज्वर इव मदो मे व्यपगतः ॥[1]

ಇದರರ್ಥವೇನೆಂದರೆ, ನನಗೆ ಅಲ್ಪಜ್ಞಾನ ಲಭಿಸಿದಾಗ ಕಾಡಾನೆಯ ದರ್ಪದಂತೆ ಕುರುಡನಾಗಿ ನಾನೇ ಸರ್ವಜ್ಞನೆಂದು ಭಾವಿಸಿದ್ದೆ. ಯಾವಾಗ ಬುದ್ಧಿವಂತರ ಸಹವಾಸ ಸ್ವಲ್ಪ ಸ್ವಲ್ಪವಾಗಿ ಲಭಿಸಿತೋ, ಆಗ ನಾನು ದಡ್ಡನೆಂಬುದರ ಅರಿವಾಗಿ ಜ್ವರದಂತೆ ನನ್ನ ಗರ್ವವು ಪೂರ್ಣವಾಗಿ ಇಳಿಯಿತು. ಕವಿ ಭರ್ತೃಹರಿಯು ಜನಪ್ರಿಯ ನೀತಿಶತಕದಲ್ಲಿ ಹೀಗೆ ಅರಿವಿನ ಬಗ್ಗೆ ಬಹಳ ಸೊಗಸಾಗಿ ಹೇಳಿದ್ದಾನೆ.

ಅರಿವು ಎಂದರೆ 'ತಿಳಿವು', 'ಜ್ಞಾನ' ಎಂದು ಸಾಧಾರಣ ಭಾಷೆಯಲ್ಲಿ ಅರ್ಥೈಸಲಾಗುತ್ತದೆ. "ಅರಿವು" ಮನಶ್ಶಾಸ್ತ್ರ ಮತ್ತು ತತ್ವ ಶಾಸ್ತ್ರಗಳಲ್ಲಿ ಮನಸ್ಸಿನ ಒಂದು ಗುಣ ಅಥವಾ ಸ್ಥಿತಿ ಎಂದು ಪರಿಗಣಿಸಲಾಗುತ್ತದೆ. ಮನಶ್ಶಾಸ್ತ್ರದ ಪ್ರಕಾರ ಅರಿವು–**(Cognition)** ಸಂವೇದನೆ, ಭಾವನೆ, ಅನುಭೂತಿ**(Feeling )** ಮತ್ತು ಸಂಕಲ್ಪ ಇಚ್ಛಾಶಕ್ತಿ, ಪ್ರೇರಣೆ**(Conation)** – ಇವು ಮೂರು ಅಂತಿಮ ಕ್ರಿಯೆಗಳು. ಜೀವನದಲ್ಲಿ ಇವುಗಳನ್ನು ಪ್ರತ್ಯೇಕಿಸುವುದು ಕಷ್ಟ. ಅಂದರೆ ಈ ಮೂರೂ ಎಲ್ಲ ಕಡೆಯೂ ಒಟ್ಟಿಗೆ ಕೆಲಸ ಮಾಡುತ್ತವೆ. ಒಂದೊಂದು ಕಡೆ ಒಂದೊಂದರ ಪ್ರಭಾವ ಹೆಚ್ಚು ಇರುವುದರಿಂದ ಅವನ್ನು ಗುರುತಿಸಲು ಸಾಧ್ಯ. ಅನುಭೂತಿ ಮತ್ತು ಇಚ್ಛಾ – ಶಕ್ತಿಗಳಿಲ್ಲದೆ ಉಂಟಾಗುವ ಪ್ರಜ್ಞೆಯನ್ನು ಅರಿವು ಎನ್ನಬಹುದು. ಪ್ರಾಣಿಗಳೆಲ್ಲದರ ಮೂಲ ಪ್ರವೃತ್ತಿ ಹೊರಗಿನ ಜಗತ್ತನ್ನು ಅರಿಯುವುದಾಗಿದೆ. ಜೀವಿಗಳು ಮತ್ತು ಪರಿಸರದ ನಡುವೆ ಇರುವ ಅನಿವಾರ್ಯ ಸಂಬಂಧದ ಒಂದು ಸಾಧನವಾಗಿ ಅರಿವು ಅಥವಾ ಬೋಧೆ ಜೀವಿಯ ಪ್ರಗತಿಪಥದಲ್ಲಿ ಕಾಣಿಸಿಕೊಳ್ಳುತ್ತದೆ. ಇಂದ್ರಿಯಗಳು ಈ ಅರಿವಿನ ಸಾಧನೆಯಲ್ಲಿ ಒಂದು ವಿಧಾನವಾಗಿದೆ. ''ಅರಿವಿನ ದಾರಿಯಲ್ಲಿ ಮೊದಲ ಹೆಜ್ಜೆ ಈ ಇಂದ್ರಿಯಾನುಭವ. **(sensation)** ಆದ್ದರಿಂದ ಇಂದ್ರಿಯಗಳನ್ನು ಜ್ಞಾನ ದ್ವಾರಗಳು ಎಂದು ಕರೆಯುತ್ತಾರೆ".

ಹೀಗೆಂದು**WILLIAM JAMES** ರವರು ಹೇಳಿದ್ದಾರೆ. **EDWARD B.TITCHENER** ಬಣ್ಣಿಸಿದ್ದಾರೆ – "ಇಂದ್ರಿಯಾನುಭವಗಳು ಮೂಲಭೂತವಾದ ಮಾನಸಿಕ ಪ್ರಕಾರಗಳು" ಎಂದು. ಇಂದ್ರಿಯಾನುಭವಗಳ ಮೂಲಕ ಅರಿವಿನ ರಚನೆಯಾಗುತ್ತದೆಂದು ಇವನ ವಾದವಾಗಿದೆ. ಇಂದ್ರಿಯ ದ್ವಾರಗಳು ಮಾನವನಲ್ಲಿ

---

1. **ಭರ್ತೃಹರಿ, ನೀತಿಶತಕ,** ಮೂರ್ಖಪದ್ಧತಿ –ಶ್ಲೋ–೮.

ಹೆಚ್ಚಾಗಿದ್ದು ಅವುಗಳ ಸಾಮರ್ಥ್ಯವೂ ಅಧಿಕವಾಗಿದೆ. ಸಂವೇದನೆಗಳ ಇಂಗಿತವನ್ನು ಪರಿಷ್ಕಾರವಾಗಿ ಅರಿಯುವ ವ್ಯವಧಾನ ಮನುಷ್ಯನ ವೈಶಿಷ್ಟ್ಯವಾಗಿದೆ. ಈ ಕಾರಣದಿಂದಲೇ ಮನುಷ್ಯ ಪ್ರಕೃತಿ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಲು ಶಕ್ತನಾಗಿರುತ್ತಾನೆ. ಇಂದ್ರಿಯಗಳೊಂದೊಂದೂ ಒಂದೊಂದು ಬಗೆಯ ಪ್ರಚೋದನೆಯನ್ನು ಗ್ರಹಣಮಾಡಲು ಸಮರ್ಥವಾಗಿರುತ್ತದೆ – ಕಣ್ಣು – ಬೆಳಕನ್ನು, ಕಿವಿ – ಶಬ್ದಗಳನ್ನು, ಚರ್ಮ – ಸ್ಪರ್ಷವನ್ನು, ಮೂಗು – ವಾಸನೆಯನ್ನು ಗ್ರಹಿಸುತ್ತವೆ. ಹೀಗೆ ಇಂದ್ರಿಯಗಳಿಗೆ ಒಂದು ನಿಯತ ವ್ಯಾಪಾರವಿದೆ. ಪ್ರತ್ಯಭಿಜ್ಞೆ **(recognition)**ಯಲ್ಲಂತೂ ನಾನಾ ಇಂದ್ರಿಯಾರ್ಥಗಳ ಸಮಷ್ಟಿ ವ್ಯಾಪಾರ ಇರುತ್ತದೆ. ಇಂದ್ರಿಯಗಳು ಮಾತ್ರ ಕೆಲಸ ಮಾಡಿದರೆ ಅರಿವು ಮೂಡುವುದಿಲ್ಲ.[2] ಶ್ರೀಮದ್ಭಗವದ್ಗೀತಾಮೃತ– ಕರ್ಮಯೋಗದಲ್ಲಿ ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಬೋಧಿಸುವಾಗ ಹೀಗೆ ಉಪದೇಶಮಾಡಿದ್ದಾನೆ.

इन्द्रियाणि पराण्याहुः इन्द्रियेभ्यः परं मनः ।

मनसस्तु परा बुद्धिर्यो बुद्धेः परतस्तु सः ॥[3]

ಅಂದರೆ, ವಿಷಯಗಳಿಗಿಂತ ಇಂದ್ರಿಯಗಳು ಉತ್ತಮ. ಇಂದ್ರಿಯಗಳಿಗಿಂತ ಮನಸ್ಸು ಉತ್ತಮ. ಮನಸ್ಸಿಗಿಂತ ಬುದ್ಧಿ ಮೇಲು. ಬುದ್ಧಿಗಿಂತ ಆತ್ಮವು ಶ್ರೇಷ್ಠವೆಂದು ಹೇಳುತ್ತಾರೆ. ಇದೇ ಅಂತಿಮ 'ಮುಕ್ತಿ'' ಅರಿವು'. **(Salvation)** ಇಂದ್ರಿಯಗಳಿಂದ ಸಿದ್ಧವಾದ ಅನುಭವಗಳಿಗೆ ಅರ್ಥವನ್ನು ಸೇರಿಸಿ ಪ್ರತ್ಯಕ್ಷಾನುಭವ **(perception)** ಉಂಟಾದಾಗಲೇ ಅರಿವು ಪೂರ್ಣವಾಗುವುದು. ಆದರೆ ಇಂದ್ರಿಯಾನುಭವ ಎಲ್ಲಿ? ಯಾವಾಗ? ಬೋಧನೆಯ ಸ್ಥಿತಿಯನ್ನು ಮುಟ್ಟುತ್ತದೆ ಎಂಬುದು ಶಾಸ್ತ್ರಕ್ಕೂ, ಮನಶ್ಶಾಸ್ತ್ರಕ್ಕೂ ಸಮನಾದ ಸಮಸ್ಯೆ. ಅರಿವಿನ ಸಮಸ್ಯೆ ತತ್ವಶಾಸ್ತ್ರದಿಂದಲೇ ಮನಶ್ಶಾಸ್ತ್ರಕ್ಕೆ ಬಂದ ದತ್ತಿ. 'ಕಾಗ್ನಿಷನ್'ಎಂಬ ಆಂಗ್ಲ ಭಾಷೆಯ ಪದ 'ಗ್ಲಾಸಿಸ್' ಎಂಬ ಧಾತುವಿನಿಂದ ಬಂದದ್ದು. ಇದಕ್ಕೆ ಸಂಸ್ಕೃತದ 'ಜ್ಞಾ'ಧಾತು ಸಮಾನವಾದದ್ದು. 'ಜ್ಞಾ' ಎಂದರೆ ತಿಳಿಯುವುದು ಎಂದರ್ಥ. ಆದರೆ ಆಂಗ್ಲದ 'ಕಾಗ್ನಿಷನ್' ಪದದ ಸಹಕಾರದಿಂದ, ಒಡನೆ ಎಂಬರ್ಥದ 'ಕೊ' ಎಂಬ ಉಪಸರ್ಗಕ್ಕೂ ಪ್ರಾಧಾನ್ಯವಿದೆ. ಒಟ್ಟಾರೆ ವಸ್ತುವಿನ ಸಹಾಯದಿಂದ ತಿಳಿಯುವುದು 'ಬೋಧೆ'. ಯಾವುದಾದರೊಂದು ವಸ್ತು ಇಂದ್ರಿಯಗೋಚರವಾಗಿ ಎದುರಿಗೆ ಇದ್ದರೇನೇ ಬೋಧೆಯಾಗುವುದು. ಪ್ರತ್ಯಕ್ಷ, ಕಲ್ಪನೆ, ಪ್ರತ್ಯಯ **(concept)** ಸ್ಮೃತಿ, ನಿರೀಕ್ಷೆ, ಪ್ರತ್ಯಭಿಜ್ಞೆ ಮುಂತಾದ ಕ್ರಿಯೆಗಳೆಲ್ಲವನ್ನೂ ಬೋಧೆಯಲ್ಲಿ ಸೇರಿಸಿರುತ್ತಾರೆ.

---

2. **ಅರಿವು** – ವಿಕಿಪೀಡಿಯ, HTTPS://on.m.wikipedia.org
3. **ಶ್ರೀಮದ್ಭಗವದ್ಗೀತಾ,** ಕರ್ಮಯೋಗ – ಶ್ಲೋ–42, ಗೀತಾಪ್ರೆಸ್, ಗೋರಕ್ ಪುರ –273005.

ವಸ್ತುವು ಕಣ್ಣೆದುರಿಗಿದ್ದು ಅದು ಇಂದ್ರಿಯ ವಿವರಗಳನ್ನು ಹೊಕ್ಕು ಆ ವಸ್ತುವಿನ ಅರಿವುಂಟಾದರೆ ಅದು 'ಪ್ರತ್ಯಕ್ಷ'; ವಸ್ತು ದೂರವಿದ್ದು, ಇಂದ್ರಿಯಗಳಿಗೆ ನೇರ ಸಂಬಂಧವಿಲ್ಲದಿದ್ದರೂ ಅದರ ಅರಿವುಂಟಾದರೆ ಅದು 'ಕಲ್ಪನೆ'; ಪ್ರತ್ಯಕ್ಷದಿಂದ ಉಂಟಾದ ಚಿತ್ತದೊಳಗಿನ ಚಿತ್ತವೇ 'ಪ್ರತ್ಯಯ'; ದೂರದ ವಸ್ತು ಕಾಲದ ದೃಷ್ಟಿಯಿಂದ ಭೂತವಾಗಿದ್ದಲ್ಲಿ 'ಸ್ಮೃತಿ'; ಭವಿಷ್ಯತ್ತಾದರೆ'ನಿರೀಕ್ಷೆ'. ವಸ್ತುವಿನ ಸಾಕ್ಷಾತ್ ಅಥವಾ ಪರೋಕ್ಷ ಸಂಪರ್ಕ ಇದ್ದಾಗ ನಮ್ಮ ಚಿತ್ತವೃತ್ತಿಗಳೂ ಉದ್ಭೂತವಾಗಿ ವಸ್ತುವಿನ ವಿವರಗಳನ್ನು ಗ್ರಹಿಸುವುದು ನೈಜವಾದ ವ್ಯವಹಾರ ಎಂದು ಹೇಳಲಾಗುತ್ತದೆ. ಭಗವದ್ಗೀತೆಯಲ್ಲಿ ಜ್ಞಾನಿಯು ಎಷ್ಟು ಶ್ರೇಷ್ಠ ಅವನು ಹೇಗೆ ಭಗವಂತನಿಗೆ ಪ್ರಿಯನಾಗುತ್ತಾನೆ ಹಾಗೂ ಅವನ ಅರಿವಿನಿಂದ ಕಲ್ಪನೆ ಮತ್ತು ಪ್ರತ್ಯಕ್ಷ ಕಾಣುತ್ತಾನೆ ಎಂಬುದನ್ನು ಈ ಶ್ಲೋಕವು ತಿಳಿಸುತ್ತದೆ.

तेषां ज्ञानी नित्ययुक्त एकभक्तिर्विशिष्यते ।

प्रियो हि ज्ञानिनोऽत्यर्थमहं स च मम प्रियः ॥[4]

ಅಂದರೆ, ಅವರಲ್ಲಿ ತಿಳಿದವನು ಮಿಗಿಲಾದವನು; ನನ್ನಲ್ಲೇ ಭಕ್ತಿಯನ್ನಿಟ್ಟು, ಸದಾ ನನ್ನನ್ನು ನೆನೆಯುವವನು. ತಿಳಿದ ನಿನಗೆ ನಾನೆಂದರೆ ತುಂಬಾ ಇಷ್ಟ, ಅವನೆಂದರೆ ನನಗೂ ತುಂಬಾ ಇಷ್ಟ. ಮೇಲೆ ಹೇಳಿದ ನಾಲ್ಕು ರೀತಿಯ ಭಕ್ತರಲ್ಲಿ ಜ್ಞಾನಿ ಎಲ್ಲರಿಗಿಂತ ಶ್ರೇಷ್ಠ. ಆತ ಜ್ಞಾನಪೂರ್ವಕವಾಗಿ ಯಾವುದೇ ಫಲಾಪೇಕ್ಷೆಯಿಲ್ಲದೆ ಭಗವಂತನನ್ನು ತಿಳಿದು ಸಹಜವಾಗಿ ಪ್ರೀತಿಸುತ್ತಾನೆ. ಜ್ಞಾನಪೂರ್ವಕವಾದ ಫಲಾಪೇಕ್ಷೆಯಿಲ್ಲದ ಏಕಭಕ್ತಿಯುಳ್ಳ ಜ್ಞಾನಿ ಭಗವಂತನಿಗೆ ಹತ್ತಿರದಲ್ಲಿರುತ್ತಾನೆ.

ಇಲ್ಲಿ ಸ್ವಲ್ಪ ಮನೋವೈಜ್ಞಾನಿಕವಾಗಿ ಆಲೋಚಿಸುವ ಪ್ರಯತ್ನ ಮಾಡಿದರೆ, ಸುಪ್ರಸಿದ್ಧ ಇಂಗ್ಲಿಷ್ ಮನೋವಿಜ್ಞಾನಿ **CHARLES SPEARMAN** ಅರಿವಿನ ವಿಚಾರದಲ್ಲಿ ಒಳ್ಳೆಯ ಅಧ್ಯಯನ ನಡೆಸಿ ಅರಿವಿನ ನಿಯಮಗಳನ್ನು ಮಂಡಿಸಿ, ಅವಿಶ್ರಾಂತವಾಗಿ ಪ್ರಯೋಗಗಳನ್ನು ನಡೆಸಿದ್ದಾರೆ. ಅವರು ನಿರೂಪಿಸಿದ ಮೂರು ನಿಯಮಗಳು ಹೀಗಿವೆ:-

1. ನಾವು ಹೊರಜಗತ್ತನ್ನು ತಿಳಿಯುವುದು ಮಾತ್ರವಲ್ಲ, ಇಂದ್ರಿಯಾನುಭವವನ್ನು ಪಡೆಯುವುದು ಮಾತ್ರವಲ್ಲ, ಪ್ರಯತ್ನ ಪಡುವುದು ಮಾತ್ರವಲ್ಲ, ಉದ್ವಿಗ್ನರಾಗುವುದು ಮಾತ್ರವಲ್ಲ. ಈ ತಿಳುವಳಿಕೆಯೇ ಇಂದ್ರಿಯಾನುಭವ. ಪ್ರಯತ್ನ, ಉದ್ವೇಗ ಇವು ನಮ್ಮಲ್ಲುಂಟಾಗುವುದನ್ನು ಅರಿಯುವುದು ಸಾಧ್ಯ.

2. ಕಲ್ಪನೆಗಳ ನಡುವೆ ಸಂಬಂಧದ ಪ್ರಸಾರಗಳನ್ನು ಸ್ಪಷ್ಟಪಡಿಸುವುದು.

---

4. **ಶ್ರೀಮದ್ಭಗವದ್ಗೀತೆ,** ಅ-07, ಶ್ಲೋ-17

೩. ಎಳೆಯುವುದು ಸಹಜವಾದ ಪ್ರವೃತ್ತಿ.

ಹೀಗೆ ಈ ಮೂರೂ ನಿಯಮಗಳು ಪ್ರತೀತ್ವಸಂಬೋಧಿ**(Neogenesis)** ಎನಿಸಿಕೊಳ್ಳುತ್ತದೆ. **SPEARMAN** ರವರು ತಮ್ಮ ಪ್ರಯೋಗಗಳಿಂದ ಬುದ್ಧಿಶಕ್ತಿ, ಸ್ಮೃತಿ ಶಕ್ತಿ, ಕಲಿಕೆ ಮುಂತಾದ ಮಾನಸಿಕ ಪ್ರವೃತ್ತಿಗಳಲ್ಲಿ ಅರಿವಿನ ಪಾತ್ರವನ್ನು ವಿಶದೀಕರಿಸಿದ್ದಾರೆ. ವಿಶ್ವದಲ್ಲೇ ಮನಶ್ಶಾಸ್ತ್ರದಲ್ಲಿ ಅರಿವಿಗೆ ಪ್ರಯೋಗ ಸಿದ್ಧವಾದ ಸ್ಥಾನವನ್ನು ಒದಗಿಸಿ ಕೊಟ್ಟವರೇ ಈ **SPEARMAN** ರವರು.[5]

ಮುಂದೆ ಸಮಷ್ಟಿ ಮನಶ್ಶಾಸ್ತ್ರದ ಬೆಳವಣಿಗೆಗೆ ಅರಿವಿನ ಸ್ಥಾನವನ್ನು ಮತ್ತೆ ಸ್ಥಾಪಿಸಿದ ಮನಶ್ಶಾಸ್ತ್ರಜ್ಞರೇ ಗೆಸ್ಟಾಲ್ಟ್ ಪಂಥದವರು. ಇವರು ಪ್ರತ್ಯಕ್ಷಾನುಭವದ ವಿಚಾರವಾಗಿ ನಡೆಸಿದ ಅಧ್ಯಯನ ಅರಿವಿನ ಪ್ರಕಾರಗಳನ್ನು ಸ್ಫುಟಪಡಿಸಿತು.

ಕರ್ಟ್ ಲೆವಿನ್ ಎಂಬ ಪ್ರಖ್ಯಾತ ಮನಶ್ಶಾಸ್ತ್ರಜ್ಞ ನಿರೂಪಿಸಿದ ಚಿತ್ತಕ್ಷೇತ್ರವಾದ ಅರಿವಿನ ನೆಲೆಯನ್ನು ಚಿತ್ತವೃತ್ತಿಗಳ ವ್ಯವಹಾರದ ಹಿನ್ನೆಲೆಯಲ್ಲಿ ನಿರ್ದೇಶಿಸಿತು. ಪ್ರಸಂಗವಾದದ**(phenomenology)** ದೃಷ್ಟಿಯಿಂದ ಮನುಷ್ಯನ ಇಡೀ ವ್ಯಕ್ತಿತ್ವವನ್ನು ವ್ಯವಹಾರ ಕ್ಷೇತ್ರವೆಂದು ಪರಿಗಣಿಸಿದರೆ ಯಾವೊಂದು ವರ್ತನೆಯೂ ಈ ಕ್ಷೇತ್ರದ ವಿವರಗಳಿಂದ ನಿರ್ದಿಷ್ಟವಾಗುವುದು. ಈ ಕ್ಷೇತ್ರ ಸಂದರ್ಭ ಶುದ್ಧವಾಗಿ ವ್ಯವಸ್ಥೆಗೊಳ್ಳಲು ಅರಿವು ಮುಖ್ಯವಾದ ಸಾಧನೆ. ಅರಿವು ಕೂಡ ಒಂದು ಕ್ರಿಯೆಯೆನ್ನುವ ವಾದ ಮನಶ್ಶಾಸ್ತ್ರ ಇತಿಹಾಸದ ಮಧ್ಯಯುಗದಲ್ಲಿ ಪ್ರಚಲಿತವಾಗಿತ್ತು.

ಸಂಕೇತಸಮಷ್ಟಿ ನಿರೀಕ್ಷೆಯ**(Sign Gestalt Expectancy)** ವಾದವನ್ನು **EDWARD C.TOLMAN-** ಎಂಬ ಮತ್ತೊಬ್ಬ ಪ್ರಸಿದ್ಧ – **American Psychologist** ರವರು ಮಂಡಿಸಿದರು. ಇವರು ಅರಿವಿನ ಸಮಸ್ಯೆಯನ್ನು ಮತ್ತೊಂದು ದೃಷ್ಟಿಯಿಂದ ಅಧ್ಯಯನ ನಡೆಸಿ, ಜೀವಿ ನಿರ್ದಿಷ್ಟ ಗುರಿ ಮುಟ್ಟಲು ವ್ಯವಸ್ಥಿತವಾದ ಸಾಧನೆ ಮತ್ತು ಸಂಕೇತಗಳನ್ನು ಬಳಸಿಕೊಳ್ಳುವಾಗ ಅರಿವು ಮುಖ್ಯ. ಇಲ್ಲಿ ಅರಿವು ಎಂದರೆ ಸಾಧನ – ಸಾಧ್ಯಗಳ ನಡುವೆ ಇರುವ ಸಂಬಂಧ; ವಸ್ತುವನ್ನು ಪ್ರತ್ಯಕ್ಷದಿಂದ ಗ್ರಹಿಸುವುದು, ಅರಿಯುವುದು ಅಂದರೆ, ಅದರ ಆಕಾರ, ಸ್ವಭಾವ, ಮೌಲ್ಯ, ಪ್ರಯೋಜನ, ಇಂಗಿತಗಳನ್ನು ಗ್ರಹಿಸುವುದು, ಸ್ಮೃತಿಯಲ್ಲಿ ಧರಿಸಿಕೊಳ್ಳುವುದು – ಈ ಮೂರೂ ಅರಿವಿನ ಅಂಗಗಳು. ಖಿಔಐಒಂಓ ರವರು ಅರಿವನ್ನು ಮೂರು ಬಗೆಯಾಗಿ ವಿಂಗಡಿಸಿದ್ದಾರೆ.[6]

---

೫. **ಮೈಸೂರು ವಿ.ವಿ, ವಿಶ್ವಕೋಶ**/ಅರಿವು1, HTTPS://in.m.wikisource.org

6. **ಮೈಸೂರು ವಿ.ವಿ, ವಿಶ್ವಕೋಶ**/ಅರಿವು1, HTTPS://in.m.wikisource.org

1. ಮೂಲಭೂತ ಗುರಿಗಳಿಗೆ ಸಂಬಂಧಿಸಿದಂತೆ ತೃಪ್ತಿ ಹೊಂದಲು ಸಿದ್ಧವಾದ ಅರಿವು.**(Cathexis)**

2. ಮೂಲಭೂತ ಗುರಿಗಳಿಗೂ ಸನ್ನಿವೇಶದ ವಸ್ತುಗಳಿಗೂ ಸಂಬಂಧವನ್ನು ಕಲ್ಪಿಸಿ ಉಪಗುರಿಗಳನ್ನು ಏರ್ಪಡಿಸುವ ಅರಿವು**(Equivalent Beliefs)**

3. ಹೊರಗಿನ ಸನ್ನಿವೇಶದ ಪ್ರಸಂಗಗಳಲ್ಲಿ ಅನುಕ್ರಮವನ್ನುಂಟುಮಾಡಿ ಅದರ ಮೂಲಕ ಮುಂದೆ ಬರಬಹುದಾದ ಫಲರೂಪಿ ವಸ್ತುಗಳನ್ನು ನಿರೀಕ್ಷಿಸುವ ಅರಿವು**(Field Expectancies)** ಆಧುನಿಕ ಮನಶ್ಶಾಸ್ತ್ರವು ಮೂಲಭೂತ ಪ್ರವೃತ್ತಿಗಳಿಗೂ ಮೋಟಿವೇಷನ್ ಅರಿವಿಗೂ ಇರುವ ಸಂಬಂಧವನ್ನು ಸ್ಪಷ್ಟ ಪಡಿಸಿದೆ. ಪ್ರವೃತ್ತಿಗಳಿಂದ ವ್ಯಕ್ತಿಯಲ್ಲಿ ಒತ್ತಡಗಳು ಉಂಟಾಗುತ್ತವೆ. ಆ ಸಂದರ್ಭದಲ್ಲಿ ಒತ್ತಡಗಳನ್ನು ಕಡಿಮೆ ಮಾಡಲು ಅರಿವು ಬಲವಾಗುತ್ತದೆ. ಇದರಿಂದ ಗೌಣವಾದ ಪ್ರವೃತ್ತಿಗಳು ಅರಿವಿನ ಫಲವಾಗಿ ಗೋಚರಿಸುತ್ತವೆ. ಅರಿವು ಫಲಕಾರಿಯಾಗಬೇಕಾದರೆ ಪೂರ್ವಾನುಭವ ಅಥವಾ ಕಲಿತಕೌಶಲ ಬಹಳ ಮುಖ್ಯ. ಹೊರಗಿನ ಸನ್ನಿವೇಶವನ್ನು ಯಥಾರ್ಥವಾಗಿ ಗ್ರಹಿಸಬೇಕಾದರೆ ಮೌಲಿಕ ವೈವಿಧ್ಯವನ್ನು ಆಶ್ರಯಿಸಬೇಕಾಗುತ್ತದೆ. ವಿಭಿನ್ನಕ್ರಿಯೆಗಳನ್ನು ವ್ಯವಸ್ಥೆಗೊಳಿಸಲೂ ಸಹ ಅರಿವಿನ ನೆರವು ಅತ್ಯಾವಶ್ಯಕ.

ವಿಷ್ಣುಶರ್ಮರು ಬಹಳ ವ್ಯವಸ್ಥಿತವಾಗಿ ನೀತಿಬೋಧೆ ಮಾಡುತ್ತಲೇ, ರಾಜಕುಮಾರರಲ್ಲಿ ಸಾರ್ಥಕ ಬದುಕಿನ ಅರಿವನ್ನು ಮೂಡಿಸುವ ಉತ್ತಮ ಸನ್ನಿವೇಶಗಳನ್ನು ಒದಗಿಸಿ, ವಿಚಾರಗಳನ್ನು ಅರ್ಥೈಸಿಕೊಳ್ಳುವಂತೆ ಪ್ರೇರೇಪಿಸಿ, ಅವರ ಮೂಲ ಪ್ರವೃತ್ತಿಗಳನ್ನು ಅಪೇಕ್ಷಿತ ಮಾರ್ಗಕ್ಕೆ ಕೊಂಡೊಯ್ಯಲು ಉತ್ತಮ ಪ್ರಯತ್ನ ಮಾಡಿದ್ದಾರೆ. ಭವಿಷ್ಯದ ಬಗ್ಗೆ ಅರಿವು ಮೂಡಿಸಿದ್ದರಿಂದಲೇ, ರಾಜಕುಮಮಾರರು ಗುರುಗಳನ್ನು ನೇರವಾಗಿ ನಮಗೆ ಶಾಸ್ತ್ರಗಳನ್ನು ತಿಳಿಸುವಂತೆ ಕೋರಿಕೆ ಮಾಡಿಕೊಂಡರು. ಅವರು ತಂದೆಯ ಉತ್ತರಾಧಿಕಾರಿಯಾಗಿ ಕಾರ್ಯ ನಿರ್ವಹಿಸುವ, ಹಾಗೂ ಸಮರ್ಥ ರಾಜನಾಗಿ ಪ್ರಜಾಹಿತಧರ್ಮ ಪಾಲಿಸಿದ ತಂದೆಯ ಗೌರವ ಘನತೆಯನ್ನು ಕಾಪಾಡಿಕೊಳ್ಳಬೇಕಾದರೆ, ಅವರೂ ಅದೇ ಧರ್ಮವನ್ನು ಪಾಲಿಸಬೇಕೆಂಬ ಅರಿವು ಮೂಡಿದ್ದರಿಂದಲೇ, ಬಹಳ ಆಸಕ್ತಿಯಿಂದ ಜಾಗೃತರಾದರು. ಗುರುಗಳು ಇವರಲ್ಲಿ ಅರಿವು ಮೂಡಿಸಿದರು ಅರ್ಥಾತ್ "ಅರಿವೇ ಗುರುವಾಯಿತು" ರಾಜಕುಮಾರರ ಅದೃಷ್ಟವೇ ಸರಿ ಇಂಥಹ ಪ್ರತಿಭಾನ್ವಿತ ಹಿರಿಯ ಗುರುಗಳು ಲಭ್ಯವಾದದ್ದು. ಅವಿವೇಕ, ಅಜ್ಞಾನದ ಅಂಧಕಾರದಲ್ಲಿ ಮುಳುಗಿದ್ದ ಇವರನ್ನು ವಿಷ್ಣುಶರ್ಮರು ಸುಜ್ಞಾನದ ಪ್ರಕಾಶದೆಡೆಗೆ ಇವರನ್ನು ತಲುಪಿಸಿದರು."गुकारोऽन्धकारत्वात् रुकारो तन्निवारकः" 'ಗು' ಎಂದರೆ ಅಂಧಕಾರವೆಂಬರ್ಥವಿದೆ 'ರು'ಎಂದರೆ 'ನಾಶಪಡಿಸುವವನು' ಅಂದರೆ, ಅಂಧಕಾರವನ್ನು ನಾಶಪಡಿಸುವವನು ಎಂದಾಗುತ್ತದೆ.

## 6-2. ಮಾನವನ ಮಹೋನ್ನತಿ ಮನಶ್ಶಕ್ತಿಯಲ್ಲಿ

यज्जाग्रतो दूरमुदैति दैवं तदु सुप्तस्य तथैवेति

दूरान्गमं ज्योतिषं ज्योतिरेकं तन्मे मनः शिवसंकल्पमस्तु [7]

ಇದರ ಅರ್ಥ ಎಚ್ಚರ ಸ್ಥಿತಿಯಲ್ಲಿರುವ ಆ ಮನಸ್ಸು ಇಂದ್ರಿಯಗಳ ಮೂಲಕ ಈ ಪ್ರಪಂಚದೊಳಗೆ ಸಂಚರಿಸುತ್ತದೆ. ಅದು ಸ್ವಪ್ನಾವಸ್ಥೆಯಲ್ಲಿ ಅನೇಕ ಪ್ರಪಂಚಗಳಲ್ಲಿ ಸಂಚರಿಸುವುದು ಹಾಗೂ ದೀರ್ಘ ನಿದ್ರಾವಸ್ಥೆಯಲ್ಲಿ ಅದು ತನ್ನ ಸ್ವಸ್ಥಾನಕ್ಕೆ ಮರಳುವುದು. ಅಲ್ಲಿಯವರೆಗೂ ಸಂಚರಿಸುವ ಜ್ಞಾನ ಜ್ಯೋತಿಯು ನನ್ನ ಮನಸ್ಸೇ, ನಿನಗೆ ಸದಾ ಒಳ್ಳೆಯ ಉದ್ದೇಶವಿರಲಿ. ಹೀಗೆ ಮನಸ್ಸು ಒಂದು ರೀತಿಯ ಬೆಳಕು ಹಾಗೂ ಅದು ಅಜ್ಞಾನದ ಕತ್ತಲನ್ನು ಜ್ಞಾನದ ಮೂಲಕ ಪ್ರಕಾಶಿಸುತ್ತದೆ. ಶಿವಸಂಕಲ್ಪ ಸೂಕ್ತದಲ್ಲಿ ಮನಸ್ಸಿನ ದಿವ್ಯ ಶಕ್ತಿಯನ್ನು ಕುರಿತು ಎಂತಹ ಮನೋವೈಜ್ಞಾನಿಕ ವಿಚಾರದ ವರ್ಣನೆ! ಎಷ್ಟು ಸೊಗಸಾಗಿದೆ!

ಮಾನವನು ತನ್ನ ಪೂರ್ವಾಶ್ರಮ ಮಂಗಪೂರ್ವಜರ ಸುಳಿಯಿಂದ ವಿಕಸನ ಹೊಂದಿ ಮಹೋನ್ನತ ಪ್ರಾಣಿಯಾಗಿ ಹೊರಹೊಮ್ಮಿರುವುದು ಅವನ ಮನಶ್ಶಕ್ತಿಯ ಬೆಳವಣಿಗೆಯಿಂದ. ಕ್ರೂರ ದೃಷ್ಟ ಮೃಗಗಳಿಂದ ರಕ್ಷಿಸಿಕೊಂಡು ತನ್ನ ಶ್ರೇಷ್ಠಜನ್ಮವನ್ನು ಪ್ರಕಾಶಗೊಳಿಸಿದ್ದು ಈ ಮನಶ್ಶಕ್ತಿಯಿಂದಲೇ. ಸಂಸ್ಕೃತಿ, ನಾಗರಿಕತೆ ತೊಟ್ಟಿಲುಗಳನ್ನು ಕಟ್ಟಿ, ಭುವನ, ಸೃಷ್ಟಿ, ಮಾನವ ಇವುಗಳ ತ್ರಿವೇಣಿ ಸಂಗಮವನ್ನು ಕಲ್ಪಿಸಿ ಸೃಷ್ಟಿಯ ಶಿಖರದಂತೆ ರಾರಾಜಿಸಿದ್ದೂ ಈ ಮೂಲಕವೇ. ಮಾನವವರ್ಗ ತನಗೆ ಸಿದ್ಧಿಸಿರುವ **"ಮನಶ್ಶಕ್ತಿಯಿಂದ"** ಮಹೋನ್ನತ ಸ್ಥಾನವನ್ನು ಏರಿರುವುದು ಎಷ್ಟೋ ಜನ್ಮದ ಪುಣ್ಯಫಲ. ಕುಟುಂಬ ಜೀವನವನ್ನು ರೂಪಿಸಿಕೊಂಡು ಸಮಾಜ ಜೀವನದಲ್ಲಿ ಬೆಳಕು ಕಂಡಿರುವುದು ಇದರ ಸಹಾಯದಿಂದಲೇ. ಭೂಗ್ರಹದಲ್ಲಿ ತನ್ನ ಅಜೇಯತನವನ್ನು ಸ್ಥಾಪಿಸಿರುವುದು, ನಿಸರ್ಗದ ಮಾರಕ ಸನ್ನಿವೇಶಗಳನ್ನು ಮೆಟ್ಟಿ ನಿಂತು, ಅವುಗಳೊಡನೆ ಹೊಂದಿಕೊಂಡು, ಅವಕಾಶ ದೊರೆತಾಗ ಅವುಗಳನ್ನು ತನ್ನ ನಿಯಂತ್ರಣಕ್ಕೆ ಒಳಪಡಿಸಿ ಕೊಂಡಿರುವುದೂ ಆ ಪ್ರತಿಭೆಯಿಂದಲೇ. ಭಾವನೆಯಲ್ಲಿ, ಕೃತಿಯಲ್ಲಿ, ಸೊಗಸನ್ನು, ಸೌಂದರ್ಯವನ್ನು, ಕೌಶಲ್ಯವನ್ನು, ವೈಚಿತ್ರ್ಯವನ್ನು, ವೈಭವವನ್ನು, ಪಾವಿತ್ರ್ಯವನ್ನು ಪರಿಪುಷ್ಟಿಗೊಳಿಸಿ, ಮುಂದಿನ ಸಂತತಿಗೆ ಸುರಕ್ಷಿತವಾಗಿ ಸಂಗ್ರಹಿಸಿಟ್ಟಿದ್ದೂ ಆ ಪ್ರತಿಭೆಯಿಂದಲೇ. ಒಳ್ಳೆಯದು ಕೆಟ್ಟದ್ದು ಎಂಬುದನ್ನು ವಿಶ್ಲೇಷಿಸಿ ಅರಿತುಕೊಂಡದ್ದೂ ಇದರಿಂದಲೇ.[8] ಇಷ್ಟೆಲ್ಲಾ ಆದರೂ ಅದ್ಯಾವ ಪ್ರತಿಭೆ ಅಥವಾ ಅರಿವು ಎಂಬುದನ್ನು ಅರಿತುಕೊಳ್ಳಲು ಅವನಿಗಿನ್ನೂ ಅವಕಾಶವಾಗದಿರುವುದು ಒಂದು

---

7. **ಶಿವಸಂಕಲ್ಪ ಸೂಕ್ತ**(ಶುಕ್ಲ ಯಜುರ್ವೇದ, ವಾಜಸನೇಯ ಸಂಹಿತಾ) ಶ್ಲೋ-1.

8. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-13, ಪು-323-324.(1962)
ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

ಆಶ್ಚರ್ಯಕರ ಸಂಗತಿಯಾಗಿದೆ. ಬಹುಶಃ ಪ್ರತಿಭೆ ಎಂಬುದನ್ನು ಅರಿಯುವಷ್ಟು ಅವನ ಪ್ರತಿಭೆ ಇನ್ನೂ ಪ್ರಬುದ್ಧತೆ ಪಡೆದಿಲ್ಲವೇನೋ! ಅದೇನೇ ಇದ್ದರೂ ತತ್ವಚಿಂತಕರು ಬುದ್ಧಿಶಕ್ತಿಯನ್ನು ವಿವರಿಸಿಯೇ ಇದ್ದಾರೆ. ಸೂತ್ರದ ಅಚ್ಚುಕಟ್ಟಿನಲ್ಲಿ ಸೆರೆಹಿಡಿದುಕೊಂಡಿದ್ದಾರೆ. "ಪ್ರತಿಭೆ" ಆಳವಾದ ಸಂಬಂಧಗಳನ್ನು ಅರಿಯುವ ಶಕ್ತಿ ಎಂದು ಕಾರ್ಲ್ ಪಿಯರ್ಸನ್ ಅಭಿಪ್ರಾಯಿಸಿದ್ದಾರೆ. ಆದ್ದರಿಂದಲೇ ಮನಶ್ಶಕ್ತಿಯ ಮಹತ್ವ ಕುರಿತು ಹೀಗೆ ಹೇಳಿರುವುದು –"ಮಾನವನ ಮಹೋನ್ನತಿ ಮನಶ್ಶಕ್ತಿಯಲ್ಲಿ"[9]

ಈ ಮನಶ್ಶಕ್ತಿ ಬೆಳೆದುಬಂದ ಇತಿಹಾಸವು ಮನೋವಿಜ್ಞಾನಿಗಳು ಹಾಗೂ ತತ್ವಶಾಸ್ತ್ರಜ್ಞರಲ್ಲಿ ಕುತೂಹಲ ಹುಟ್ಟಿಸಿದೆ. ಸಾಮಾನ್ಯವಾಗಿ ಒಬ್ಬನ ಮನಶ್ಶಕ್ತಿಯನ್ನು ಪತ್ತೆಹಚ್ಚುವುದು ಅವನ ಜ್ಞಾಪಕಶಕ್ತಿಯಿಂದ, ಕಲ್ಪನೆಯಿಂದ, ಆಲೋಚನೆ ಮತ್ತು ವಿವೇಚನೆಗಳಿಂದ. ವ್ಯಕ್ತಿ ಶಿಕ್ಷಣ ಕೇವಲ ಮನಶ್ಶಕ್ತಿಯ ಬೆಳವಣಿಗೆಗೆ ಮಾತ್ರವಲ್ಲ. ಆದರೂ ಅವನ ಸಾಮಾಜಿಕ, ನೈತಿಕ ಮತ್ತು ಸಂವೇದನಾ ಜೀವನದ ಮೇಲೆ ಆ ಮನಶ್ಶಕ್ತಿ ಬಹು ಮುಖ್ಯ ಪ್ರಭಾವವನ್ನು ಬೀರುತ್ತದೆ. ಬೃಹದಾರಣ್ಯಕೋಪನಿಷತ್ತಿನ ಒಂದು ಶ್ಲೋಕದಲ್ಲಿ ಹೀಗೆ ಮನಸ್ಸನ್ನು ವಿವರಿಸಲಾಗಿದೆ.

मनसैवानुद्रष्टव्यं, नेह नानास्ति किञ्चन ।

मृत्योः स मृत्युमाप्नोति य इह नामेव पश्यति ॥[10]

ಅಂದರೆ, ಮನುಷ್ಯನಲ್ಲಿರುವ ದೈವತ್ವವೇ ಆತ್ಮದ ಅರಿವು. ಇದರಲ್ಲಿ ಮನಸ್ಸು ನೆಲಸಿರುವುದು ಮತ್ತು ಈ ಮಾಧ್ಯಮದ ಮೂಲಕ ಆತ್ಮದ ಅರಿವನ್ನು ಗ್ರಹಿಸುವುದು; ಹಾಗಾಗಿ ಇದು ಪ್ರಕಾಶಿಸುವ ದೇವದೂತ, ದೈವೀ ಮನಸ್ಸು. ಮನಸ್ಸಿನ ಮೂಲಕ ಮಾತ್ರ ಇದನ್ನು ಅರಿಯಬೇಕು, ಇದರಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲ. ಇದರಲ್ಲಿರುವ ವ್ಯತ್ಯಾಸವನ್ನು ಮೃತ್ಯುವಿನಿಂದ ಮೃತ್ಯುವೆಡೆಗೆ ಪಯಣಿಸಿದಾಗ ಅರಿಯುವುದು. ಆತ್ಮವು ಮನಸ್ಸಿನೊಂದಿಗೆ ಸೇರುತ್ತದೆ; ಮನಸ್ಸು ಇಂದ್ರಿಯಗಳೊಂದಿಗೆ, ಇಂದ್ರಿಯಗಳು ಅವುಗಳ ವಸ್ತುಗಳೊಂದಿಗೆ ಸೇರುವುದು. ಹೀಗೆ ನ್ಯಾಯಶಾಸ್ತ್ರವು ವಿವರಿಸುವುದು. ಮನಸ್ಸಿನೊಡನೆ ಸಂಪರ್ಕವಿಲ್ಲದೆ ಅವುಗಳು ಕಾರ್ಯ ನಿರ್ವಹಿಸುವುದಿಲ್ಲ.

ಜ್ಞಾನವು ಅಂತರಂಗದಿಂದ ಉದಯಿಸುವುದು ಮನಸ್ಸಿನ ಸ್ವಾಸ್ಥ್ಯದ ಸ್ಥಿತಿ ಮತ್ತು ಸ್ವಸ್ಥಿರತೆಯ ಮೇಲೆ ಮಾತ್ರ. ಆತಂಕ ಮತ್ತು ಗೊಂದಲದಿಂದ ಕೂಡಿದ ಮನಸ್ಸಿನಲ್ಲಿ ಜ್ಞಾನವು ಇರುವುದಿಲ್ಲ. ಸದ್ವರ್ತನೆಯ ವಿಧಾನಗಳ ವಿವೇಕವು ಸೇರಿಕೊಂಡು ಜ್ಞಾನಗಳ ವೈಜ್ಞಾನಿಕ ಅಡಿಪಾಯಗಳಿಗೆ ಕಾರಣವು.

---

9. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–13, ಪು–323–324.(1962)
   ಡಿ.ವಿ.ಕೆ. ಮೂರ್ತಿ,ಕೃಷ್ಣಮೂರ್ತಿಪುರಂ, ಮೈಸೂರು–4
10. **ಬೃಹದಾರಣ್ಯಕೋಪನಿಷತ್** 4.4.19

सुसारथिरश्वानिव यन्मनुष्यणान् नैनीयतेभीशुभिर्वाजिन इव ।

हृत्प्रतिष्ठितं यदजिरं जविष्ठां तन्मे मनः शिवसंकल्पमस्तु ॥[11]

ಹೇಗೆ ನುರಿತ ಸಾರಥಿಯು ಅಶ್ವಗಳನ್ನು ತನ್ನ ಆದೇಶದಂತೆ ಓಡಿಸಿ ಅವುಗಳು ತಾನೆಲ್ಲಿಗೆ ಹೋಗಬೇಕೋ ಅಲ್ಲಿಗೇ ಅವುಗಳನ್ನು ಕೊಂಡೊಯ್ಯುವಂತೆ ಮನಸ್ಸೂ ಕೂಡ ಮನುಷ್ಯನನ್ನು ಅವನ ಆಸೆಗಳೆಡೆಗೆ ಮತ್ತು ಪಶುಪ್ರವೃತ್ತಿಗಳನ್ನು ನಿರ್ಬಂಧಿಸುವುದರೆಡೆಗೆ ಮಾರ್ಗದರ್ಶನ ಮಾಡಿ ಅದು ಹೃದಯದಲ್ಲಿ ನೆಲೆಸಿ ಅವನ ಅಮರತ್ವ ಮತ್ತು ಪ್ರಕ್ಷುಬ್ದತೆಗಳಿಂದ ಬಿಡುಗಡೆ ಹೊಂದಿದಂಥಹ ನನ್ನ ಮನಸ್ಸು ಸದಾ ಒಳ್ಳೆಯ ಭಾವನೆಗಳನ್ನೇ ಹೊಂದಿರಲಿ ಎಂದು ಈ ಶ್ಲೋಕವು ಭಗವಂತನಲ್ಲಿ ಪ್ರಾರ್ಥನೆ ಸಲ್ಲಿಸುತ್ತಿದೆ. ಇಲ್ಲಿನ ಅರ್ಥ ಎಷ್ಟು ಹೃದಯಂಗಮವಾಗಿರುತ್ತದೆ ಎಂಬುದು ಸ್ವಲ್ಪ ವ್ಯಾಖ್ಯಾನ ವೃದ್ಧಿಸಿದರೆ ತಿಳಿಯುತ್ತದೆ. ಇಲ್ಲಿ ಎರಡು ಉದಾಹರಣೆಗಳಿವೆ. ಮೊದಲನೆಯದರಲ್ಲಿ "ನಡೆಸುವುದು" ಮತ್ತು "ಎರಡನೆಯದರಲ್ಲಿ" "ಹತೋಟಿಯಲ್ಲಿ ಇಟ್ಟುಕೊಳ್ಳುವುದು". ಹೇಗೆ ಸಾರಥಿಯು ಅಶ್ವಗಳನ್ನು ಹತೋಟಿಯಲ್ಲಿಟ್ಟುಕೊಂಡು ನಡೆಸುವನೋ? ಅದೇರೀತಿ ಮನಸ್ಸು ಕೂಡಾ ಜೀವಿಯನ್ನು ಹತೋಟಿಯಲ್ಲಿಟ್ಟುಕೊಂಡು ನಡೆಸುವುದು. ಈ ವಿಧದಲ್ಲಿ ವಾಸಿಸುವ ಮನಸ್ಸು ಹೃದಯದಲ್ಲಿ ಸ್ಥಾಪಿಸಿದೆ. ಏಕೆಂದರೆ ಇದು ಹೃದಯದಲ್ಲಿ ಮಾತ್ರ ಕಂಡುಬರುವುದು ಮತ್ತು ಅರಿವಾಗುವುದು. ಈ ಮನಸ್ಸು ಬಾಲ್ಯ, ಯೌವನ ಮತ್ತು ವಾರ್ಧಕ್ಯದ ಸ್ಥಿತಿಗಳಲ್ಲಿಯೂ ಸಹ ಮಾರ್ಪಾಡಾಗದೇ ಇರುವುದರಿಂದ ಅದು ಮುಪ್ಪಾಗದು. ಅದು ಅತ್ಯಂತ ವೇಗದ ಶಕ್ತಿ. "ಗಾಳಿಗಿಂತ ತ್ವರಿತವಾದದ್ದು ಬೇರೊಂದಿಲ್ಲ; ಮನಸ್ಸಿಗಿಂತ ವೇಗವಾದದ್ದು ಮತ್ತೊಂದಿಲ್ಲ. ಆ ವಿಧದ ಸುಂದರವಾದ ಮತ್ತು ದೈವೀ ನಿರ್ಣಯದ ಮನಸ್ಸು ಸದಾ ಶಿವನ ವಿಚಾರಗಳಿಂದ ತುಂಬಿರಲಿ, ಎಂದು ಶಿವಸಂಕಲ್ಪ ಸೂಕ್ತ ಸೊಗಸಾಗಿ ಮನಸ್ಸನ್ನು ಹೇಗೆ ಹತೋಟಿಯಲ್ಲಿಟ್ಟುಕೊಳ್ಳಬೇಕು ಎಂಬ ಜಾಗೃತಿಯನ್ನು ಹಾಗೂ ಮನಸ್ಸಿನ ಮಹತ್ವವನ್ನು ವರ್ಣಿಸುತ್ತದೆ. ಮನಸ್ಸಿನ ಬಗ್ಗೆ ಮತ್ತೊಂದು ವಿಚಾರವಿದೆ.

अणुमात्रं मनस्तस्मादाशा नाम लतोद्गता ।

तस्या नालमुपघ्नाय भुवनानि चतुर्दश ॥[12]

ಮನಸ್ಸು ಒಂದು ಅಣು. ಅದರಿಂದ ಆಸೆಯೆಂಬ ಬಳ್ಳಿ ಹುಟ್ಟಿದೆ. ಅದು ಹಬ್ಬುವುದಕ್ಕೆ ಹದಿನಾಲ್ಕು ಲೋಕಗಳೂ ಸಾಲವು. ಇದರ ವ್ಯಾಪ್ತಿ ಅಪರಿಮಿತ. ಇದನ್ನು ನಿಯಂತ್ರಣ ಮಾಡಿಕೊಂಡು ವ್ಯವಸ್ಥಿತವಾಗಿ

---

11. **ಶಿವಸಂಕಲ್ಪ ಸೂಕ್ತ,** ಶ್ಲೋ–06.

12. **ಸುಭಾಷಿತಮಂಜರೀ,** ಸದ್ಗುಣ ದುರ್ಗುಣ–, ಶ್ಲೋ–12, ಪು–129, ಆಶ್ಚರ್ಯಚೂಡಾಮಣಿ ವ್ಯಾಖ್ಯಾ.(2001) ಕ.ಸಾ.ಪ. ಬೆಂಗಳೂರು–18

ಸದ್ಬಳಕೆ ಮಾಡಿಕೊಳ್ಳುವುದು ನಮ್ಮ ಕೈಯಲ್ಲಿರುತ್ತದೆ. ಹೀಗೆ ಮನಸ್ಸನ್ನು ನಿಯಂತ್ರಣ ಮಾಡಿಕೊಂಡು ಒಳ್ಳೆಯ ವಿಚಾರಗಳೆಡೆ ಯೋಚಿಸುವ ಮನಸ್ಸನ್ನು ಹಾಗೂ ಅದರ ಸದ್ಬಳಕೆಯ ಆಲೋಚನೆಯನ್ನು ಬೆಳೆಸಿಕೊಳ್ಳುವಂತೆ ವಿಷ್ಣುಶರ್ಮರು ಆಕರ್ಷಕ ನೀತಿಕಥೆಗಳ ಮೂಲಕ ರಾಜನಂದನರನ್ನು ಪ್ರೇರೇಪಿಸಿ, ಆಸಕ್ತಿಯನ್ನು ಮೂಡಿಸಿದರು.



## 6-3 ಬಿಂಬ ಮತ್ತು ಬಿಂಬ ಕಲ್ಪನೆ. (IMAGERY AND IMAGINATION)

ಈ ಹಿಂದೆ ಪ್ರಾರಂಭದಲ್ಲೇ ಉಲ್ಲೇಖಿಸಿದ ಪ್ರತ್ಯಕ್ಷಾನುಭವದ ಫಲವಾಗಿ ಮನಸ್ಸಿನಲ್ಲಿ ಉಳಿದಿರುವ ಆ ವಸ್ತುವಿನ ಸ್ವರೂಪವೇ ಬಿಂಬ. ವಸ್ತುವಿನ ಸಹಾಯದಿಂದ ತಿಳಿಯುವುದೇ ಬೋಧೆ. ಹಾಗೆಯೇ ಶಬ್ದವೊಂದನ್ನು ಕೇಳಿ ಪಡೆದ ಪ್ರತ್ಯಕ್ಷಾನುಭವ ರೂಪಿಸುವ ಬಿಂಬ "ಶ್ರವಣ-ಬಿಂಬ"**(Auditory-hearing).** ರುಚಿಯ ಪ್ರತ್ಯಕ್ಷಾನುಭವದಿಂದ ದೊರಕತಕ್ಕದ್ದು "ರಸನ-ಬಿಂಬ"**(Gustatory-taste),** ಸ್ಪರ್ಶನದಿಂದ ರೂಪುಗೊಳ್ಳತಕ್ಕದ್ದು "ಸ್ಪರ್ಶನ-ಬಿಂಬ"**(Tectile-touch)**, ವಾಸನೆಯ ಪ್ರತ್ಯಕ್ಷಾನುಭವ ರೂಪಿಸತಕ್ಕದ್ದು "ಘ್ರಾಣ-ಬಿಂಬ" (ಎಂದು ಹೇಳಬಹುದು. ಇದೇ ರೀತಿಯಲ್ಲಿ ಗುರುತ್ವವೂ, ವೇದನೆಗಳೂ ತಮ್ಮ ತಮ್ಮ ಬಿಂಬಗಳನ್ನು ರೂಪಿಸುತ್ತವೆ. ಪದಾರ್ಥ, ಸನ್ನಿವೇಶ, ಶಬ್ದ, ರುಚಿ, ವಾಸನೆ ಮುಂತಾದ ವಸ್ತು, ಸನ್ನಿವೇಶಾದಿಗಳಿಂದ ನಮ್ಮ ಮನಸ್ಸಿಗೆ ಬಿಂಬ ದೊರಕುವಂತೆ ಪದಗಳಿಂದಲೂ ದೊರಕುತ್ತದೆ. ಸಕಲಶಾಸ್ತ್ರಸಂಪನ್ನ ಎಂದು ಓದಿದಾಗ, ಕೇಳಿದಾಗ ಅವರ ಸ್ವರೂಪ ನಮ್ಮ ಮನಸ್ಸಿನಲ್ಲಿ ಪ್ರತ್ಯಕ್ಷಾನುಭವ ಮೂಡಿಸಿ ಬಿಂಬವನ್ನು ರೂಪಿಸುವುದು. ಮರಳಿ ಆ ಪದವನ್ನು ಕೇಳದಿದ್ದರೂ ಆ ಚಿತ್ರವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಬಹುದು. ಇದು ಪದಗಳಿಂದ ದೊರೆತ ಸಾರಸ್ವತ ಬಿಂಬ. ರಂಗನಟನೊಬ್ಬನ ಭಾವ ವಿನ್ಯಾಸವನ್ನು ನಾಟಕದಲ್ಲಿ ನೋಡಿದಾಗ ಅವನ ಭಾವ ನಮ್ಮ ಮನಸ್ಸಿನಲ್ಲಿ ಪ್ರತ್ಯಕ್ಷಾನುಭವವನ್ನು ಮೂಡಿಸಿ ಬಿಂಬವನ್ನು ರೂಪಿಸುತ್ತದೆ. ಆನಂತರ ಅವನ ಭಾವವನ್ನು ಪುನಃ ಕಲ್ಪಿಸಿಕೊಳ್ಳಬಹುದು. ಇದೇ ಭಾವನ ಬಿಂಬವಾಗುವುದು. ಬಿಂಬ ಹೇಗೇ ದೊರತಿರಲಿ ಅದಕ್ಕೆ ಆಧಾರ ಪ್ರತ್ಯಕ್ಷಾನುಭವ. ಪ್ರತ್ಯಕ್ಷಾನುಭವಕ್ಕೆ ಆಧಾರ ನಿಜವಾದ ವಸ್ತು. ಇದೇ ವಿಚಾರವನ್ನು ಈ ಸೂತ್ರದಲ್ಲೂ ಸೂಚಿಸಬಹುದು.[13] ವಸ್ತು-------> ಪ್ರತ್ಯಕ್ಷಾನುಭವ-------> ಬಿಂಬ.

ನಾರದಸ್ಮೃತಿಯಲ್ಲಿ ಒಂದು ಶ್ಲೋಕ ಹೀಗೆ ಹೇಳುತ್ತದೆ. ಅನೇಕ ವ್ಯತಿರಿಕ್ತ ಬಿಂಬಗಳನ್ನು ಕಲ್ಪಿಸಿ ಸರಿಯಾದ ಮಾತಿನ ಅರ್ಥವನ್ನು ಸುಳ್ಳಾದ ಅರ್ಥವನ್ನಾಗಿ ಮಾಡುವುದು.

अर्था वै वाचि नियताः वाङ्मूलाः वाचि मिश्रिताः ।

यो वै तां स्तेययेद्वाचं स सर्वस्तेयकृन्नरः ॥[14]

---

13. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-13, ಪು-326-327.(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4
14. **ಸುಭಾಷಿತಮಂಜರೀ,** ಸದ್ಗುಣ-ದುರ್ಗುಣ, ಶ್ಲೋ-20, ಪು-131, ನಾರದಸ್ಮೃತಿಯಲ್ಲಿ, 2-205.(2001) ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18

ಅರ್ಥವು ಮಾತಿನಲ್ಲಿದೆ. ಅರ್ಥಕ್ಕೆ ಮಾತು ಮೂಲ. ಅರ್ಥವು ಮಾತಿನೊಡನೆ ಬೆರೆತಿದೆ. ಯಾರು ಈ ಮಾತನ್ನು ಸುಳ್ಳಾದ ಅರ್ಥವನ್ನು ಕೊಡುವಂತೆ ಆಡುತ್ತಾನೆಯೋ ಅವನು ಎಲ್ಲಾ ರೀತಿಯ ಕಳ್ಳತನವನ್ನೂ ಮಾಡಿದ ಹಾಗೆ ಆಗುತ್ತದೆ.

ಮಕ್ಕಳ ಬಿಂಬಗಳಿಗೂ ದೊಡ್ಡವರ ಬಿಂಬಗಳಿಗೂ ವ್ಯತ್ಯಾಸವಿರುತ್ತದೆ. ಅವರಿಗೆ ಶಬ್ದ ನೋಟಗಳ ಬಿಂಬಗಳೇ ಹೆಚ್ಚು. ಕೆಲವೊಮ್ಮೆ ನಿಜವಸ್ತುವಿಗೂ ಬಿಂಬಕ್ಕೂ ಮಕ್ಕಳಿಗೆ ವ್ಯತ್ಯಾಸ ತಿಳಿಯುವುದಿಲ್ಲ. ಹುಲಿಯ ಬಿಂಬವನ್ನು ಹುಲಿಯೆಂದೇ ಭಾವಿಸಿ ಹೆದರಿ ಚೀರಿಬಿಡುವರು. ಮಕ್ಕಳ ಬಿಂಬಗಳಲ್ಲಿ ಸ್ಪಷ್ಟತೆ ಇಲ್ಲದೆ ಮಬ್ಬು ಮಬ್ಬಾಗಿರುತ್ತದೆ. ಮೆದುಳು ಇಂದ್ರಿಯಗಳು ನರಗಳು ಬಲಿತಂತೆ ಬಿಂಬಗಳೂ ಸ್ಪಷ್ಟತೆಯ ಕಡೆಗೆ ತಲುಪುತ್ತವೆ.

ಬಿಂಬಗಳಲ್ಲಿ ವೈಯಕ್ತಿಕ ಭಿನ್ನತೆಯೂ ಇರುತ್ತದೆ. ಕೆಲವರಿಗೆ ಶ್ರವಣ ಬಿಂಬ ಚೆನ್ನಾಗಿದ್ದರೆ, ಇನ್ನು ಕೆಲವರಿಗೆ ದರ್ಶನ ಬಿಂಬ ಚೆನ್ನಾಗಿರುತ್ತದೆ. ಇದಕ್ಕೆ ಮನಸ್ಸಿನ ಸ್ವರೂಪದಂತೆ ಇಂದ್ರಿಯಗಳ ಗ್ರಹಣ ಶಕ್ತಿಯೂ ಕಾರಣವಾಗುತ್ತದೆ. ಮಕ್ಕಳ ಬಿಂಬಗಳ ಈ ಭಿನ್ನ ಸ್ವರೂಪಗಳನ್ನು ಅರಿತುಕೊಂಡು ಅವರವರಿಗೊಪ್ಪುವ ಬಿಂಬಗಳನ್ನು ದೊರಕಿಸುವಂತೆ ಬೋಧಿಸುತ್ತ, ವೈಯಕ್ತಿಕ ಗಮನ ಹರಿಸುವುದು ಶಿಕ್ಷಕನ ಅಗತ್ಯ ಹಾಗೂ ಕರ್ತವ್ಯ. ಯಾವುದನ್ನೇ ಬೋಧಿಸುತ್ತಿರಲಿ, ಅವರಿಂದ ಬಹುಮುಖ ಬಿಂಬಗಳು ದೊರಕುವಂತೆ ಯತ್ನಿಸಬೇಕು. ಆಗ ಮಾತ್ರ ಕಲಿವು ಪರಿಣಾಮಕಾರಿಯಾಗುವುದು.

ಹಿತೋಪದೇಶದಲ್ಲಿ ಒಂದು ತಿಳುವಳಿಕೆ ಇದೆ.

अरावप्युचितं कार्यमातिथ्यं गृहमागते ।

छेत्तुः पार्श्वगतां छायां नोपसंहरति द्रुमः ॥[15]

ಮನೆಗೆ ಬಂದ ಶತ್ರುವಿಗೂ ಸಹ ಆತಿಥ್ಯ ಮಾಡುವುದು ಒಳ್ಳೆಯ ಕೆಲಸ. ತನ್ನ ಪಕ್ಕದಲ್ಲಿ ನಿಂತಿರುವ ಮರಕಡಿಯುವವನಿಗೂ ಮರ ನೆರಳನ್ನು ಕೊಡದೇ ಇರುವುದಿಲ್ಲ. ಇಲ್ಲಿ ಭೂತಕಾಲದ ಅನುಭವದಲ್ಲಿ ಪಡೆದ ಅನುಭವ ಬೇಡ ಎಂದು ಹೇಳುತ್ತಿದ್ದರೂ, ಆ ಬಿಂಬದ ಪರಿವರ್ತನೆ ಆಗಿ ಮಾರ್ಪಾಟಾಗುತ್ತದೆ.

ಭೂತಕಾಲದಲ್ಲಿ ಹೊಂದಿದ ಪ್ರತ್ಯಕ್ಷಾನುಭವ ಮೂಡಿಸಿದ ಬಿಂಬಗಳ ಸಹಾಯದಿಂದ ಮರಳಿ ಮನಸ್ಸಿನಲ್ಲಿ ಆ ಅನುಭವಗಳನ್ನು ಸೃಷ್ಟಿಸಿಕೊಳ್ಳುವುದಕ್ಕೆ ಬಿಂಬಕಲ್ಪನೆ ಎನ್ನುತ್ತಾರೆ. ಹೀಗೆ ಕಲ್ಪಿಸಿಕೊಂಡ ಬಿಂಬ ಪ್ರತ್ಯಕ್ಷಾನುಭವದ ತದ್ರೂಪವೇ ಆಗಿದ್ದರೆ ಅದನ್ನು ನೈಜ ಬಿಂಬಕಲ್ಪನೆ ಎನ್ನುವುದು. ಇದು ಒಂದು ರೀತಿಯಲ್ಲಿ ಸ್ಮರಣೆಯೇ ಆಗುತ್ತದೆ. ಚಾರ್ಮಾಡಿ ಘಾಟ್ ತಿರುವುಗಳನ್ನು ನೋಡಿರುವವರು ಶಿರಾಡಿಘಾಟ್

15. ಹಿತೋಪದೇಶ–ಮಿತ್ರಲಾಭ–44.

ತಿರುವುಗಳನ್ನೂ ನೋಡಿದ್ದಾರೆಂದು ಭಾವಿಸೋಣ. ಅವರು ಎರಡೂ ತಿರುವುಗಳ ಬಿಂಬಗಳನ್ನು ಮನಸ್ಸಿನಲ್ಲಿ ಧರಿಸಿರುತ್ತಾರೆ. ಅವುಗಳಲ್ಲಿ ಮೊದಲ ಘಾಟ್ ತಿರುವುಗಳ ಕೆಲವು ದೃಶ್ಯಗಳೊಡನೆ, ಎರಡನೇ ಘಾಟ್‌ನ ಕೆಲವು ದೃಶ್ಯಗಳನ್ನು ಸೇರಿಸಿಕೊಂಡು, ಅವೆರಡನ್ನೂ ಹೋಲದ ಹೊಸ ದೃಶ್ಯವೊಂದರ ಸ್ವರೂಪವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಬಹುದು. ಆಗ ಅದು ಬರೀ ಸ್ಮರಣೆಯಲ್ಲ. ಆ ಚಿತ್ರ ಯಾವ ದೃಶ್ಯದ ಸಹಜ ಬಿಂಬವೂ ಅಲ್ಲ. ಅದು ಮನಸ್ಸು ರಚಿಸಿದ ಒಂದು ಹೊಸ ದೃಶ್ಯ. ಈ ಮನೋವ್ಯಾಪಾರವನ್ನು ರಚನಾತ್ಮಕ ಬಿಂಬಕಲ್ಪನೆಯೆನ್ನುವರು. ಇದು ಒಂದು ಹೊಸ ಸೃಷ್ಟಿಯಾಗುತ್ತದೆ. ಕವಿಗಳು ಹೀಗೆಯೇ ಮಾಡುವುದು. ವ್ಯಕ್ತಿಯೊಬ್ಬನನ್ನು ಅವನ ಜೀವನವನ್ನು ಪರಿಚಯ ಮಾಡಿಕೊಂಡಿರುತ್ತಾರೆ. ಹಾಗೆಯೇ ಇನ್ನೂ ಕೆಲವು ವ್ಯಕ್ತಿಗಳನ್ನೂ ಅವರ ಜೀವನವನ್ನೂ ನೋಡಿ ತಿಳಿದಿರುತ್ತಾರೆ. ಆನಂತರದಲ್ಲಿ ಅವರೆಲ್ಲರ ವ್ಯಕ್ತಿತ್ವದಿಂದಲೂ, ಜೀವನದಿಂದಲೂ ಹಲಕೆಲವು ಅಂಶಗಳನ್ನು ಆಯ್ಕೆ ಮಾಡಿಕೊಂಡು ಒಬ್ಬ ಹೊಸ ವ್ಯಕ್ತಿಯನ್ನು,ಅವನ ಜೀವನವನ್ನು ಸೃಷ್ಟಿಸಿಬಿಡುತ್ತಾರೆ. ಈ ಕಲ್ಪನಾ ವ್ಯಕ್ತಿ ಕವಿ ನೋಡಿದ್ದ ಯಾವನೂ ಅಲ್ಲ. ಆದರೆ ಅವನಲ್ಲಿ ಕಂಡುಬರುವ ಅಂಶಗಳು ಮಾತ್ರ ಕವಿ ಹಿಂದೆ ನೋಡಿದ್ದ ವ್ಯಕ್ತಿಗಳಿಂದಲೇ ಅರಿಸಿದ್ದು. ಇದೆ ಕಲ್ಪನೆಯ ಕಾರ್ಯ. ಇದರ ಸೂತ್ರಹೀಗಿದೆ-[16]

ಅನುಭವ---> ಸಾಧನೆ--->ಅನುಭವಾಂಶಗಳ ಆಯ್ಕೆ---------->ನೂತನ ಕಲ್ಪನೆ.

ರಚನಾತ್ಮಕ ಬಿಂಬ ಕಲ್ಪನೆಯಲ್ಲಿ ಮೂರು ಮಜಲುಗಳಿವೆ. ಮೊದಲನೆಯದಾಗಿ ಪ್ರತ್ಯಕ್ಷಾನುಭವಗಳನ್ನು ಪಡೆಯುವುದು. ಎರಡನೆಯದಾಗಿ ಮನಸ್ಸಿನಲ್ಲಿ ರೂಪುಗೊಂಡಿರುವ ಆ ಬಿಂಬಗಳಿಂದ ಹಲಕೆಲವು ಅಂಶಗಳನ್ನು ಆರಿಸಿಕೊಳ್ಳುವುದು. ಕೊನೆಯದಾಗಿ ಹಾಗೆ ಆರಿಸಿಕೊಂಡ ಅಂಶಗಳನ್ನು ಆರಿಸಿಕೊಳ್ಳುವುದು. ಕೊನೆಯದಾಗಿ ಹಾಗೆ ಆರಿಸಿಕೊಂಡ ಅಂಶಗಳನ್ನು ಸಮನ್ವಯವಾಗಿ ಜೋಡಿಸಿ ಹೊಸಚಿತ್ರವನ್ನು ಸೃಷ್ಟಿಸುವುದು. ಈ ರೀತಿಯ ಕಲ್ಪನೆ ಕಲಾವಿದರ ಮನಸ್ಸಿನಲ್ಲಿ ಕೃತಿರಚನೆಗೆ ಮುನ್ನ ರೂಪುಗೊಂಡ ಸಾಹಿತ್ಯ ಚಿತ್ರಶಿಲ್ಪ, ಕೆತ್ತನೆ ಇತ್ಯಾದಿಗಳು ಕಲ್ಪನಾ ಕೃತಿಗಳು. ಕಲೆಗೆ ನೆರವಾಗುವಂತೆ ಈ ರಚನಾ ಬಿಂಬಕಲ್ಪನೆಯು ವಿಜ್ಞಾನ ಸಂಶೋಧನೆಯಲ್ಲೂ ನೆರವಾಗುತ್ತದೆ.

ಸ್ವಾರಸ್ಯಕರ ಕಥೆಯೊಂದನ್ನು ಓದಿ, ಶಿಲ್ಪ ಕಲೆಯನ್ನು ವೀಕ್ಷಿಸಿ ಚಿತ್ರವೊಂದನ್ನು ಬರೆದರೆ, ಅದನ್ನು ಮೊದಲು ಕಲ್ಪಿಸಿದ ಕವಿಯ ಅಥವಾ ಶಿಲ್ಪಿಯ ಕಲ್ಪನೆಯನ್ನು ನಾವು ಚಿತ್ರದ ಮೂಲಕ ಅನುಕರಣೆ

---

**16. ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-13, ಪು- 329-332,(1962), ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

ಮಾಡಿದಂತಾಗುತ್ತದೆ. ಇದನ್ನೇ ಅನುಕರಣ ಬಿಂಬ ಕಲ್ಪನೆ ಎನ್ನುವುದು. ಪಾಠ ಬೋಧಿಸಿದಾಗ ಪದಗಳ ಮೂಲಕ ಮಕ್ಕಳು ಪಡೆಯುವ ಚಿತ್ರವೂ ಸಹ ಇದೇ ಮಾದರಿಯ ಕಲ್ಪನೆ. ಮಕ್ಕಳಿಗೆ ಪಾಠ ಮನದಟ್ಟಾಗಬೇಕಾದರೆ ಈ ರೀತಿಯ ಕಲ್ಪನೆ ಅಗತ್ಯ. ಸಾಹಿತ್ಯ, ಕಲೆ ಹಾಗೂ ಬದುಕಿನ ನೀತಿಪಾಠಗಳನ್ನು ಕಲಿಯುವಾಗ ಈ ರೀತಿಯ ಕಲ್ಪನಾಶಕ್ತಿ ಕವಿಯ, ಶಿಲ್ಪಿಯ ಅಥವಾ ನೀತಿಶಾಸ್ತ್ರಜ್ಞನ ಮನೋಭಾವವನ್ನು ಅರಿಯಲು ಬಹಳ ಅನುಕೂಲಕರ.[17]

ಹಿಂದೆ ನಾವು ಪಡೆದ ಅನುಭವಗಳಿಂದ ಅಗತ್ಯವಾದ ಸಾಮಗ್ರಿಗಳನ್ನು ಒದಗಿಸಿಕೊಂಡು ಸಮನ್ವಯವಾಗಿ ಜೋಡಿಸಿ ನೂತನ ರಚನೆಯನ್ನು ರೂಪಿಸಬೇಕಾಗುತ್ತದೆ. ಇದನ್ನು ಸೃಷ್ಟಾತ್ಮಕ ಕಲ್ಪನೆ ಎನ್ನುವರು. ಸ್ವತಂತ್ರ ಕೃತಿ ರಚನೆಗೆ ಸೃಷ್ಟಾತ್ಮಕ ಕಲ್ಪನೆ ಅಗತ್ಯ. ಕಲ್ಪನೆಗೆ ವಾಸ್ತವಿಕತೆ ನೀಡುವಂತೆ ತತ್ವಗಳ ನಿಯಮ ಪಾಲಿಸಬೇಕು. ಕಾರ್ಯಕಾರಣ ಜ್ಞಾನ ಹಾಗೂ ಸಮನ್ವಯ ದೃಷ್ಟಿ ಇದ್ದು, ಔಚಿತ್ಯಪೂರ್ಣವಾಗಿ ಇವೆಲ್ಲದರ ಅಚ್ಚುಕಟ್ಟು ಇದ್ದರೆ, ಆಗ ಉತ್ತಮ ಕಲಾಕೃತಿಯಾಗಬಲ್ಲದು. ರಚನಾತ್ಮಕ ಬಿಂಬ ಕಲ್ಪನೆಗೂ, ಸೃಷ್ಟಾತ್ಮಕ ಬಿಂಬ ಕಲ್ಪನೆಗೂ ಅಂತಹ ಹೆಚ್ಚಿನ ವ್ಯತ್ಯಾಸ ಕಂಡುಬರುವುದಿಲ್ಲ. ಹೆಚ್ಚುಕಡಿಮೆ ಎರಡೂ ಒಂದೇ ಅನ್ನುವಂತಿವೆ.

सुहृद्भिराप्तैरसकृद्विचारितं स्वयञ्च बुद्ध्या प्रवितारिताश्रयम् ।

करोति कार्यं खलु यः स बुद्धिमान् स एव लक्ष्म्या यशसाञ्च भाजनम् ॥[18]

ಅಂದರೆ, ತನ್ನ ಆಪ್ತ ಮಿತ್ರರು ಅನೇಕ ಸಲ ವಿಚಾರಮಾಡಿರುವಂಥಹದೂ, ತಾನೂ ಸಹ ತನ್ನ ಸ್ವಂತ ಬುದ್ಧಿಯಿಂದ ಚೆನ್ನಾಗಿ ಯೋಚಿಸಿರುವಂಥಾದ್ದೂ ಆದ ಕೆಲಸವನ್ನು ಬುದ್ಧಿವಂತನಾದ ಯಾವನು ಮಾಡುವನೋ ಅವನು ಸಂಪತ್ತಿಗೂ, ಯಶಸ್ಸಿಗೂ ಪಾತ್ರನಾಗುತ್ತಾನೆ. ಈ ಒಂದು ಸೂಕ್ತಿಯಲ್ಲಿ ವಿಷ್ಣುಶರ್ಮರು ಅರಸುಕುಮಾರರಿಗೆ ಹೇಗೆ ಕಾರ್ಯ ಸಾಧನೆ ಮಾಡಿಕೊಳ್ಳಬೇಕು ಎಂಬ ಬಗ್ಗೆ ಚೆನ್ನಾಗಿ ತಿಳಿಸಿದ್ದಾರೆ. ಇಲ್ಲಿ ಅನುಭವ, ಸಾಧನೆ, ಅನುಭವಾಂಶಗಳ ಬಿಂಬ, ಕಲ್ಪನೆ – ಈ ಎಲ್ಲವನ್ನೂ ಮನಸ್ಸಿಗೆ ತಂದುಕೊಂಡು ಕೂಲಂಕಶವಾಗಿ ವಿಚಾರಮಾಡಿ ಕಾರ್ಯವನ್ನು ಕೈಗೊಂಡಾಗ, ಯಶಸ್ಸಿಗೆ ಪಾತ್ರರಾಗುತ್ತಾರೆ. ಆ ಯಶಸ್ಸು ಸಂಪತ್ತನ್ನೂ ದೊರಕಿಸುತ್ತದೆ.

ಮಕ್ಕಳಲ್ಲಿ ಅದ್ಭುತವಾದ ಕಲ್ಪನಾಶಕ್ತಿ ಇರುತ್ತದೆ. ಆದರೆ ಇರುವ ಶಕ್ತಿಯನ್ನು ಸೂಕ್ತ ರೀತಿಯಲ್ಲಿ ಬಳಕೆ ಮಾಡಿಕೊಳ್ಳುವಲ್ಲಿ ಅವರು ಹಿಂದೆ ಬೀಳುತ್ತಾರೆ. ಸೋಮಾರಿತನವೋ ಅಥವಾ ಆಲೋಚನಾದೌರ್ಬಲ್ಯವೋ

17. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–13, ಪು–329–335..(1962)
ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

18. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಂ, ಕಾಕೋಲೂಕೀಯಂ–ಶ್ಲೋ–115, ಪು–499,(1962) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಅದೇನು ಕಾರಣವೋ ಗೊತ್ತಿಲ್ಲ. ಅವರಲ್ಲಿ ಅಡಗಿರುವ ಆ ಶಕ್ತಿಯು ಸೂಕ್ತ ರೀತಿಯಲ್ಲಿ ಕಾರ್ಯರೂಪಕ್ಕೆ ಬರುವಂತೆ, ಬೇಕಾದ ಅನುಭವಗಳನ್ನು ರೂಢಿಸಿಕೊಡುವುದು ಬಹಳ ಮುಖ್ಯ. ಭಿನ್ನರೀತಿಯ ವ್ಯಕ್ತಿಗಳು, ವಸ್ತುಗಳು, ಸನ್ನಿವೇಶಗಳು, ಘಟನೆಗಳು, ಭಾವನೆಗಳು ಹಾಗೂ ಇವುಗಳ ಬಿಂಬಗಳು ಮಕ್ಕಳಿಗೆ ಒದಗಿಸುವ ಕಾರ್ಯ ಶಿಕ್ಷಕರು ಮತ್ತು ಪೋಷಕರದ್ದಾಗಿದೆ. ಉದಾಹರಣೆಗೆ ಒಂದು ಆಕರ್ಷಕ ಕಥೆಯನ್ನು ಹೇಳಿ, ನಂತರದಲ್ಲಿ ಅವರಿಂದಲೇ ಅಂಥಹದೇ ಒಂದು ಸಂದರ್ಭದ ಕಥೆಕಟ್ಟಿಸಿ ಹೇಳಿಸಬಹುದು. ಹಲವಾರು ಕಥೆಗಳನ್ನು ಕೇಳಿ ಅನೇಕ ವ್ಯಕ್ತಿಗಳ ವಿಚಾರ, ವರ್ತನೆಗಳು, ಭಾವನೆಗಳನ್ನು ಪರಿಚಯಿಸಿಕೊಂಡನಂತರ ಮತ್ತೊಬ್ಬ ಉತ್ತಮ ವ್ಯಕ್ತಿಯ ವರ್ಣನೆ ಮಾಡುವಂತೆ ಪ್ರೇರೇಪಿಸಬಹುದು. ಮಕ್ಕಳ ಕಲ್ಪನಾಶಕ್ತಿಯನ್ನು ಹೆಚ್ಚಿಸಲು ಪ್ರೋತ್ಸಾಹಿಸುವ ಸಂದರ್ಭದಲ್ಲಿ ಸಾಮರಸ್ಯ, ವಾಸ್ತವಿಕತೆ, ವಿಚಾರದಲ್ಲಿ ಆದರ್ಶ ಮತ್ತು ನಿಖರತೆ ಇತ್ಯಾದಿಗಳಂದ ಕೂಡಿರುವಂತೆ ಗಮನಹರಿಸಬೇಕು. ಆಗ ಮಾತ್ರ ಕಲ್ಪನೆಯ ಚಿತ್ರಗಳು ಪರಿಚಯವಾಗಿ ಮಕ್ಕಳಲ್ಲಿ ವಿಶೇಷ ಅರಿವು ಮೂಡುತ್ತದೆ. ಈ ಕಾರ್ಯಕ್ಕೆ ಹಿಂದಿನಿಂದಲೂ ಪೌರಾಣಿಕ ಕಥೆಗಳನ್ನು ಬಳಸುತ್ತಿರುವುದು ಸರ್ವವೇದ್ಯವಾಗಿದೆ. ಮಹಾದ್ಭುತ ಪೌರಾಣಿಕ ಕಥೆಗಳಲ್ಲಿ ಕಲ್ಪನೆಯ ರಾಶಿಗಳೇ ಇರುತ್ತದೆ. ನೈಜಸ್ವರೂಪಕ್ಕೆ ಅಷ್ಟೊಂದು ಹತ್ತಿರವಲ್ಲದಿದ್ದರೂ ಅದರಲ್ಲಿ ಕಲ್ಪನೆಯ (ಕಾವ್ಯ) ಸತ್ಯತೆ ಸೊಗಸಾಗಿರುತ್ತದೆ. ಅದರಲ್ಲಿ ಬರುವ ಬೇರೆ ಬೇರೆ ಅಂಶಗಳು ಜೀವನದಿಂದ ಆರಿಸಿದ ನೈಜರೂಪದ ಅನುಭವಗಳೇ ಆಗಿರುತ್ತವೆ. ಅವುಗಳನ್ನು ಕೇಳುವುದರಲ್ಲೂ, ಹೇಳುವುದರಲ್ಲೂ ಬಹಳ ಆಸಕ್ತಿ ಉಂಟಾಗುತ್ತದೆ. ಪೌರಾಣಿಕ ಕಥೆಗಳ ಘಟನೆಗಳನ್ನು ನಿಜವೆಂದೇ ಭಾವಿಸಿ, ಅರಿತು ಆನಂದಿಸುತ್ತಾರೆ. ಕ್ರಮೇಣ, ಅವರಲ್ಲಿ ಪ್ರೌಢಚಿಂತನೆ ಮೂಡಿದಾಗ ವಾಸ್ತವಿಕತೆಯಲ್ಲಿ ಆಸಕ್ತಿ ಹೆಚ್ಚುತ್ತದೆ[19] ಹೀಗೆ ಮನಸ್ಸಿನ ಬಿಂಬಗಳು ಹಾಗೂ ಬಿಂಬಕಲ್ಪನೆಗಳು, ಮುಂದೊದಗಬಹುದಾದ ಬಾಹ್ಯ ಪ್ರಪಂಚದ ಸ್ಥಿತಿ ಗತಿಗಳನ್ನು ಕಲ್ಪಿಸಿಕೊಂಡು ಜೀವನದ ವಿವಿಧ ಸನ್ನಿವೇಶಗಳಿಗೆ ಹೊಂದಿಕೊಂಡು, ಅಗತ್ಯಕ್ಕನುಗುಣವಾಗಿ ಸಿದ್ಧತೆಗಳನ್ನು ಮಾಡಿಕೊಳ್ಳಲು ಸಹಾಯಕವಾಗುತ್ತವೆ.

हस्ती स्थूलतरः स चाङ्कुशवशः किं हस्तिमात्रोऽङ्कुशः

दीपे प्रज्वलिते प्रणश्यति तमःकिं दीपमात्रं तमः ।

वज्रेणापि हताः पतन्ति गिरयः किं वज्रमात्रो गिरिः

तेजो यस्य विराजते स बलवान्स्थलेषु कः प्रत्ययः ॥[20]

---

19. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–13, ಪು–332–333.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
20. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತ ಪಂಚತಂತ್ರಂ, ಮಿತ್ರಭೇದಃ,– ಶ್ಲೋ–358, ಪು–230–231,(1962) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಪಂಚತಂತ್ರದಲ್ಲಿ ವಿಷ್ಣುಶರ್ಮರು ಕೆಲವು ಸೂಕ್ತಿಗಳ ಮುಖಾಂತರ ಒಳ್ಳೆಯ ನಿದರ್ಶನಗಳ ಸಮೇತ ವಿಚಾರಗಳನ್ನು ಮನದಟ್ಟುಮಾಡಿರುತ್ತಾರೆ. ಈ ಒಂದು ಶ್ಲೋಕದಲ್ಲಿ ಬಿಂಬಕಲ್ಪನೆಯನ್ನು ಮೂಡಿಸಿರುವುದನ್ನು ಗಮನಿಸಬಹುದು. "ಆನೆಯು ಬಹಳ ದೊಡ್ಡದು, ಅದು ಅಂಕುಶಕ್ಕೆ ವಶವಾಗುವುದು. ಆದರೆ ಈ ಅಂಕುಶ ಆನೆಯಷ್ಟು ದೊಡ್ಡ ಪ್ರಮಾಣದಲ್ಲಿದೆಯೇ? ದೀಪವು ಪ್ರಜ್ವಲಿಸಿದಾಗ ಕತ್ತಲೆ ಅಳಿಯುವುದು ಕತ್ತಲೆ ದೀಪದಷ್ಟೇ ಇದೆಯೇ? ವಜ್ರಾಯುಧದ ಪೆಟ್ಟಿಗೆ ಬೆಟ್ಟಗಳು ಒಡೆದು ಬೀಳುತ್ತವೆ. ಬೆಟ್ಟ ವಜ್ರಾಯುಧದಷ್ಟೇ ಇದೆಯೇ? ಯಾವನು ತೇಜಸ್ಸಿನಿಂದ ಬೆಳಗುವನೋ ಅವನು ಬಲಯುತನು. ಸ್ಥೂಲವಾಗಿರುವುದರಲ್ಲಿ ಯಾವ ನೆಚ್ಚಿಕೆ?

ಒಂದು ವೇಳೆ ಬರುವ ಸನ್ನಿವೇಶಕ್ಕೆ ಹೊಂದಿಕೊಳ್ಳುವ ಉದ್ದೇಶದಿಂದ ಒಮ್ಮೆ ನಡೆಸಿದ ಸಿದ್ಧತೆಯು ಸರಿಯಾಗದಿದ್ದರೆ, ತಕ್ಷಣ ಅದನ್ನರಿತು ಉತ್ತಮಗೊಳಿಸುವ ಕಲ್ಪನಾ ಆಕಾಂಕ್ಷೆಯನ್ನು ಬೆಳೆಸಲು ಪ್ರಯತ್ನಿಸಬೇಕು. ಕ್ಷಣಕ್ಷಣಕ್ಕೂ ಬದಲಾಗುತ್ತಿರುವ ಸಮಾಜ ಜೀವನದಲ್ಲಿ ಯಶಸ್ವಿಯಾಗಿ ಕಾಲಕಳೆದು ಕೊಂಡು ಹೋಗುವ ಅನ್ವಯಶಕ್ತಿ ದೊರಕುವುದು. ಮಕ್ಕಳ ಕಲ್ಪನಾಶಕ್ತಿ ವಿವಿಧ ರೂಪದಲ್ಲಿ ಕಾರ್ಯಮುಖ ವಾಗುತ್ತದೆ. ಪಾಠಗಳನ್ನು ಬೋಧಿಸುತ್ತಿರುವ ಸಂದರ್ಭದಲ್ಲಿ ಶಿಕ್ಷಕರು, ಅದರಲ್ಲೂ ಕವನ, ನೀತಿಕಥೆ, ಕಾದಂಬರಿ ಮುಂತಾದ ಸಾಹಿತ್ಯ ಪಾಠಗಳನ್ನು ಮಾಡುವಾಗ ಮಕ್ಕಳು ಕವಿಯ ಕಲ್ಪನೆಯನ್ನು, ಅದರಲ್ಲಿನ ವಾಸ್ತವಿಕತೆಯನ್ನು ಕಾಣುವ ಭಾಗವನ್ನು ಅರಿತು ಆನಂದಿಸುವಂತೆ ಪ್ರೋತ್ಸಾಹಿಸಬೇಕು. ಈ ವಿಚಾರದಲ್ಲಿ ಪಂಚತಂತ್ರ ನೀತಿಕಥೆಗಳಲ್ಲಿ ಅದ್ಭುತವಾದ ಜೀವನ ಸನ್ನಿವೇಶವೇಶಗಳನ್ನು ಒದಗಿಸಿಕೊಟ್ಟು ಉತ್ತಮ ಕಲ್ಪನೆಗಳು, ಆಲೋಚನಾ ಗುಣಗಳನ್ನು ಬೆಳೆಸುತ್ತಾ ಮುಂದೆ ರಾಜಕುಮಾರರು ಹೇಗೆ ಮುಂದಿನ ದಿನಗಳಲ್ಲಿ ಸಾರ್ಥಕ ಬದುಕನ್ನು ಸಾಗಿಸಬೇಕು, ಪ್ರಜಾ ಪರಿಪಾಲನಾ ಜವಾಬ್ದಾರಿಯನ್ನು ನಿರ್ವಹಿಸಬೇಕು ಎಂಬೆಲ್ಲ ವಿಚಾರಗಳನ್ನು ಚೆನ್ನಾಗಿ ಆಲೋಚಿಸುವಂತೆ ಗುರುಗಳಾದ ವಿಷ್ಣಶರ್ಮರು ಪ್ರೋತ್ಸಾಹಿಸಿದ್ದಾರೆ. ಹಾಗೂ ಉತ್ತಮ ಕಲ್ಪನೆಗಳನ್ನು ಹೊಂದುವಂತೆ ಪಂಚಸೂತ್ರಗಳಲ್ಲಿ ವ್ಯವಸ್ಥಿತವಾಗಿ ಸಂಯೋಜಿಸಿದ ನೀತಿ ಕಥಾಗುಚ್ಛಗಳಲ್ಲಿ ಆನೇಕತೆಯಲ್ಲಿ ಏಕತೆಯಿಂದ ಕೂಡಿರುವ ಪಠ್ಯಕ್ರಮದಲ್ಲಿ ಬಹಳ ಪರಿಣಾಮಕಾರಿಯಾಗಿ ಬೋಧಿಸಿದ್ದಾರೆ.



## 6–4. ಜೀವನ ಮೌಲ್ಯಗಳನ್ನು ಬೆಳೆಸುವಿಕೆ

## ಚಿಂತನ–ಮಂಥನ– ಮಾನವನಿಗೆ ಒಂದು ಅಗತ್ಯ ಗುಣ

ಮಾನವನು ಸಂಘ ಜೀವಿ. ಸಮಾಜದಲ್ಲಿ ಬರೀ ಬದುಕಿದ್ದರೆ ಸಾಲದು. ಬಾಳಲೂ ಬೇಕು. ಮತ್ತೆ ಬರೀ ಬದುಕಿ ಬಾಳಿದರೂ ಸಾಲದು. ಬದುಕು ಹಸನಾಗಿರಬೇಕು. ಒಂದು ವ್ಯವಸ್ಥಿತ ಸ್ವರೂಪದಲ್ಲಿ ಹಲವಾರು ಮೌಲ್ಯಗಳನ್ನು ಹಾಗೂ ಆದರ್ಶಗಳನ್ನು ರೂಢಿಸಿಕೊಂಡು ಜೀವನ ನಡೆಸಬೇಕು. ಒಂದೊಂದು ಕ್ಷೇತ್ರದಲ್ಲೂ ಈ ಆದರ್ಶಗಳು ತಾತ್ವಿಕ ದೃಷ್ಟಿಗೆ ಆಧಾರವಾಗಿರುತ್ತವೆ. ಯಾವ ಆದರ್ಶವೇ ಆಗಲಿ, ತಜ್ಞರ ಹಾಗೂ ಅನುಭವೀ ಮುಂದಾಳುಗಳ ಪ್ರಭಾವದಿಂದ ಜನಜೀವನದಲ್ಲಿ ಬಳಕೆಗೆ ಬರುತ್ತವೆ. ಈ ಆದರ್ಶಗಳ ಪ್ರತಿಫಲನದಿಂದಲೇ ಜೀವನದ ವಿವಿಧ ಕ್ಷೇತ್ರಗಳಲ್ಲಿ ಸಂಪ್ರದಾಯಗಳು ರೂಪುಗೊಳ್ಳುತ್ತವೆ. ನೀತಿನಿಷ್ಠೆಗಳು ಪ್ರಚಾರಕ್ಕೆ ಬರುತ್ತವೆ. ಇವುಗಳೆಲ್ಲ ಆದರ್ಶಗಳ ಬುನಾದಿಯ ಮೇಲೆ ರೂಪತಾಳಿದ್ದರೂ ಇವುಗಳ ಶ್ರೇಷ್ಠತೆ, ಉಪಯುಕ್ತತೆ ಹಾಗೂ ಸಾಧುತ್ವ ಅಲ್ಲಿನ ವಾಸ್ತವಿಕ ಪ್ರಭಾವವನ್ನು ಅವಲಂಭಿಸಿರುತ್ತವೆ. ಅಂದರೆ ಆದರ್ಶಗಳ ಪ್ರಭಾವ ಮತ್ತು ಸ್ಥಾನಮಾನ, ಇವುಗಳ ಮೌಲ್ಯ ಅಥವಾ ಬೆಲೆಯನ್ನು ಅವಲಂಭಿಸಿರುತ್ತದೆ ಎಂದರ್ಥ.[21]

ಸಾಮಾನ್ಯವಾಗಿ ನಾವು ಮೌಲ್ಯಗಳನ್ನು ಕುರಿತು ಯೋಚಿಸಿದಾಗ, ನಮ್ಮ ಜೀವನ, ಸಮಾಜ, ಅರ್ಥವ್ಯವಸ್ಥೆ, ರಾಜಕಾರಣ ಇತ್ಯಾದಿಗಳನ್ನು ಮೌಲ್ಯಾಧಾರಿತವಾಗಿರಬೇಕೆಂದು ಬಯಸುತ್ತೇವೆ. ಮೌಲ್ಯಗಳು ಮನುಷ್ಯನ ಬದುಕಿಗೆ, ಬದುಕಿನ ಚಟುವಟಿಕೆಗಳಿಗೆ ಇರುವ ವ್ಯವಸ್ಥೆಗೆ ಮೆರಗನ್ನುಂಟುಮಾಡುತ್ತದೆ. ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡರೆ ಮನುಷ್ಯನ ವ್ಯಕ್ತಿತ್ವವು ಸಂಪೂರ್ಣವಾಗಿ ವಿಕಾಸಗೊಳ್ಳುತ್ತದೆ. ಮಾನವೀಯ ಮೌಲ್ಯಗಳ ಮಹತ್ವವನ್ನು ಸಾರುವ ನಿಟ್ಟಿನಲ್ಲಿ ಬೆಲೆಕಟ್ಟಲಾಗದಂತಹ ಮೌಲ್ಯ ಭಗವದ್ಗೀತೆಗೆ ಇರುತ್ತದೆ. ಗೀತೆಯು ಸರ್ವಜನಾಂಗದ ಶಾಂತಿಯ ತೋಟವಾಗಿರುತ್ತದೆ. ಇಡೀ ಮನುಕುಲಕ್ಕೆ ಅತ್ಯಂತ ಅವಶ್ಯಕ ನೀತಿಗ್ರಂಥವಾಗಿದೆ. ತತ್ವಶಾಸ್ತ್ರದ ಅಧಿಪತಿಯಾಗಿದೆ. ಇಡೀ ಮನುಕುಲಕ್ಕೆ ಸನಾತನವಾದ ತಳಹದಿ. ಸುಖ, ಶಾಂತಿ, ಸಂತೃಪ್ತಿ, ಸತ್ಯ, ಅಹಿಂಸೆ ಸರ್ವಧರ್ಮ ಸಹಿಷ್ಣುತೆ ಗೀತೆಯ ಉದ್ದೇಶವಾಗಿದೆ. ಈ ಬಗ್ಗೆ ಒಂದು ಶ್ಲೋಕವನ್ನು ಉಲ್ಲೇಖಿಸುವುದಾದರೆ:–

अद्वेष्टा सर्वभूतानां मैत्रः करुण एव च ।

निर्ममो निरहङ्कारः समदुःखसुखः क्षमी ॥[22]

---

21. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿಮನೋವಿಜ್ಞಾನ, ಅ–25,ಪು–626–627.(1962)
ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

22. भगवद्गीता, 12-13.

ಅರ್ಥಾತ್ ಯಾರಿಗೆ ಅಸೂಯೆ ಇಲ್ಲವೋ, ಎಲ್ಲಾ ಜೀವಿಗಳಿಗೆ ಯಾರು ಸ್ನೇಹಿತರೋ, ಯಾರು ನಿರಹಂಕಾರರೋ, ಸುಖದುಃಖಗಳಲ್ಲಿ – ಸಮಚಿತ್ತರೋ, ಅವರು ನನಗೆ ಬಹುಪ್ರಿಯವಾದವರು. ಚಾರಿತ್ರಾರ್ಥಕ ನಿಟ್ಟಿನಲ್ಲಲ್ಲದೇ ಮನಃಶಾಸ್ತ್ರೀಯವಾಗಿ, ತತ್ವಶಾಸ್ತ್ರವಾಗಿ ಗೀತೆಯು ಮಹಾಭಾರತದ ಸಾರವನ್ನು ತನ್ನಲ್ಲಿ ತುಂಬಿಕೊಂಡಿದೆ.

ಸತ್ಯ, ಅಹಿಂಸೆ, ಅಸ್ತೇಯ, ಅಪರಿಗ್ರಹ, ಬ್ರಹ್ಮಚರ್ಯ ಮುಂತಾದ ಆದರ್ಶಗಳನ್ನು ಮಾನವೀಯ ಮೌಲ್ಯಗಳೆಂದು ಕರೆಯುತ್ತಾರೆ. ಪ್ರಾಮಾಣಿಕತೆ, ಕರ್ತವ್ಯನಿಷ್ಠೆಗಳಿಂದ ಕೂಡಿದ ಈ ಮೌಲ್ಯಗಳಿಂದಾಗಿ ಬದುಕು ಸುಂದರ ಎನಿಸಿಕೊಳ್ಳುತ್ತದೆ. ಮೌಲ್ಯಗಳಲ್ಲಿ ಶಾರೀರಿಕ, ಆರ್ಥಿಕ, ಧಾರ್ಮಿಕ, ಚಾರಿತ್ರಿಕ, ಬೌದ್ಧಿಕ, ಆಧ್ಯಾತ್ಮಿಕ ಮತ್ತು ನೈತಿಕ ಮೌಲ್ಯಗಳು ಸರ್ವಶ್ರೇಷ್ಠವೆನಿಸಿಕೊಳ್ಳುತ್ತವೆ.

ಕಾಲ–ದೇಶಗಳಿಗನುಗುಣವಾಗಿ ಆದರ್ಶಗಳು ಭಿನ್ನತೆಯನ್ನು ವ್ಯಕ್ತಪಡಿಸುತ್ತವೆ. ಅವುಗಳ ಮೌಲ್ಯದಲ್ಲೂ ಅಷ್ಟೇ ವ್ಯತ್ಯಾಸ ಕಂಡುಬರುತ್ತದೆ. ಭಾಸನ ಕಾಲದಲ್ಲಿ ಯಾವುದು ಆದರ್ಶವೆನಿಸಿತ್ತೋ ಅದು ಈಗ ಆದರ್ಶ ಎನಿಸದಿರಬಹುದು. ಹಾಗೆಯೇ ದೇಶದೇಶಗಳಲ್ಲೂ ಆದರ್ಶಗಳು ಹಾಗೂ ಮೌಲ್ಯಗಳು ಭಿನ್ನವಾಗಿರಬಹುದು. ನಮ್ಮ ಜೀವನದ ವ್ಯವಸ್ಥಿತ ಸ್ವರೂಪವು ಆದರ್ಶ ಮತ್ತು ಮೌಲ್ಯಗಳ ಸಿದ್ಧಾಂತವನ್ನೇ ಅವಲಂಬಿಸಿರುತ್ತದೆ. ಜೀವನದ ಪ್ರಗತಿ ಎಷ್ಟೆಷ್ಟು ಸಾಧನೆಯಾಗುತ್ತಿರುತ್ತದೋ ಅಥವಾ ಪರಿವರ್ತನೆಯಾಗುತ್ತಿರುತ್ತದೋ ಹಾಗೆಯೇ ಆದರ್ಶಗಳು ಮತ್ತು ಮೌಲ್ಯವೂ ಪರಿವರ್ತನೆ ಹೊಂದುತ್ತಿರುತ್ತದೆ.

ವ್ಯಕ್ತಿತ್ವದ ಬೆಳವಣಿಗೆ ಉತ್ತಮ ಶಿಕ್ಷಣದಿಂದಾಗುತ್ತದೆ. ಸಾಮೂಹಿಕ ಜೀವನಕ್ಕಾಗಿ ವ್ಯಕ್ತಿತ್ವದ ಬೆಳವಣಿಗೆ ಮುಖ್ಯ. ಇಂಥ ಜೀವನಕ್ಕೆ ವ್ಯಕ್ತಿತ್ವ ಒಪ್ಪುವಂತಿರಬೇಕು. ಇದಕ್ಕೆ ಆ ಜೀವನದ ಆಶೋತ್ತರಗಳಿಗೆ, ಸಂಸ್ಕೃತಿ ಸಂಪ್ರದಾಯಗಳಿಗೆ, ಧರ್ಮನೀತಿ ಮುಂತಾದವುಗಳಿಗೆ ಸಮ್ಮತಿಸುವಂತಿರಬೇಕು. ಹೀಗಿರುವಲ್ಲಿ ವ್ಯಕ್ತಿತ್ವದ ಬೆಳವಣಿಗೆ ಸಾಮೂಹಿಕ ಜೀವನಕ್ಕೆ. ಕೇವಲ ವ್ಯಕ್ತಿಗಾಗಲ್ಲ. ಆ ಬೆಳವಣಿಗೆ ರೂಪುಗೊಳ್ಳಬೇಕು ಎಂಬುದು ವ್ಯಕ್ತಿಯ ಹಿತದಲ್ಲಿ ನಿಜವಾದರೂ, ಆ ಹಿತ ಅಡಗಿರುವುದು ಸಾಮಾಜಿಕ ಜೀವನದ ವ್ಯವಸ್ಥೆಯಲ್ಲಿ. ಯಾವ ಶಿಕ್ಷಣದ ಕ್ಷೇತ್ರವೇ ಆಗಲಿ ತಾನು ನೀಡುವ ಶಿಕ್ಷಣ ಅಂದಿನ ಸಮಾಜಕ್ಕೊಪ್ಪುವಂತಿದೆಯೇ ಎಂದು ಅರ್ಥ ಮಾಡಿಕೊಳ್ಳಬೇಕು. ಹಾಗೆ ಪರೀಕ್ಷಿಸಲು ಒಂದು ಮಾಪನ ವ್ಯವಸ್ಥೆ ಇದ್ದು, ಆದರ್ಶಗಳನ್ನೂ ಅವುಗಳ ಮಟ್ಟವನ್ನೂ ತಿಳಿಸಬಲ್ಲ ಒಂದು ಮೂಲಮಾನ ಬೇಕು. ಅದರಂತೆಯೇ ಮೌಲ್ಯನಿಷ್ಕರ್ಷೆಗೂ ಒಂದು ಅಳತೆಯ ಸಾಧನ ಬೇಕು. ಇದು ನಿರ್ಧಿಷ್ಟವೂ, ನಿಖರವೂ ಆಗಿರಬೇಕು.

ಶಿಕ್ಷಕರು ಮತ್ತು ಪೋಷಕರು ಬಾಲ್ಯದಿಂದಲೇ ಮಕ್ಕಳಲ್ಲಿ ಉತ್ತಮ ಮೌಲ್ಯಗಳನ್ನು ರೂಢಿಸಲು ಪ್ರಯತ್ನಿಸಬೇಕು. ಶಿಕ್ಷಣ ತಜ್ಞ ರೈಟ್‌ರವರು ತರಗತಿಗಳಲ್ಲಿ ಮೌಲ್ಯಗಳನ್ನು ಬೆಳೆಸಲು ಪಾಲಿಸಬಹುದಾದ ಕೆಲವು ಉಪಾಯಗಳನ್ನು ಸೂಚಿಸಿದ್ದಾರೆ.[23]

ಶಾಲೆಗಳಲ್ಲಿ ಮಕ್ಕಳ ಆಸಕ್ತಿಗಳು, ಅನುಭವಗಳು ಮತ್ತು ಅಗತ್ಯತೆಗಳಿಗೆ ಸಂಬಂಧಿಸಿದ ಮೌಲ್ಯಗಳನ್ನು ಚರ್ಚಿಸಬೇಕು. ನೈಜ ಸನ್ನಿವೇಶಗಳಲ್ಲಿ ಮೌಲ್ಯಗಳ ಕಲಿಕೆಯನ್ನುಂಟುಮಾಡುತ್ತಾ, ಅದು ಅವರ ಮುಂದಿನ ಅಗತ್ಯಗಳಿಗೆ ಒಪ್ಪುವುದೇ ಎಂದು ಗಮನಿಸಬೇಕು. ಶಾಲಾ ಅನುಭವಗಳು ಮಕ್ಕಳಲ್ಲಿ ಉತ್ತಮ ಗುಣಗಳನ್ನು ಬೆಳೆಸುತ್ತದೆ. ಅವುಗಳೆಂದರೆ ಮಕ್ಕಳಲ್ಲಿ ಜವಾಬ್ದಾರಿ ಪ್ರಾಮಾಣಿಕತೆ, ಕರ್ತವ್ಯ, ನಿಷ್ಠೆ, ಮಿತ್ರತ್ವ, ವಿಧೇಯತೆ ಇತ್ಯಾದಿ.

ಕ್ವಿಲೆನ್‌ರವರು ಸಾಮಾಜಿಕ ಮಹತ್ವದಿಂದ ಕೂಡಿರುವ ಹಾಗೂ ಶೈಕ್ಷಣಿಕ ಕಾರ್ಯಕ್ರಮಕ್ಕೆ ಸಂಬಂಧಿಸಿದ ಮೂಲ ಸಾಮಾಜಿಕ ಪರಿಕಲ್ಪನೆಗಳನ್ನು ಎಲ್ಲಾ ವಯೋಮಾನದ ಮಕ್ಕಳಲ್ಲಿ ಬೆಳೆಸಬಹುದಾದ ಅಗತ್ಯತೆಯನ್ನು ಚರ್ಚಿಸಿ ಕೆಲವು ಸಾಮಾಜಿಕ ಪರಿಕಲ್ಪನೆಗಳನ್ನು ಸಲಹೆ ಮಾಡಿದ್ದಾರೆ.

**1. ಮಾನವೀಯ ಮೌಲ್ಯ:**

ಸಮಾನತೆ, ಸಹನೆ, ಪರಸ್ಪರ ಗೌರವ, ಕರುಣೆ, ಅನುಭೂತಿ, ಗುಣಗಳನ್ನು ಬೆಳೆಸುವ ಮೂಲಕ ಮಾನವತ್ವವನ್ನು ರೂಢಿಸಲು ಪ್ರಯತ್ನಿಸಬೇಕು.

**2. ಸಂಸ್ಕೃತಿಯ ಸ್ವರೂಪ:**

ನಮ್ಮ ಭಾರತೀಯ ಸಂಸ್ಕೃತಿಯ ಸ್ವರೂಪ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಮಕ್ಕಳು ಅರ್ಥ ಮಾಡಿಕೊಳ್ಳಲು ಹಾಗೂ ಇತರರ ವರ್ತನೆಯನ್ನೂ ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತದೆ. ಸಾಂಸ್ಕೃತಿಕಮೌಲ್ಯಗಳು, ಆಧ್ಯಾತ್ಮಿಕಮೌಲ್ಯಗಳು ಮತ್ತು ನೈತಿಕ ಮೌಲ್ಯಗಳನ್ನು ಬೆಳೆಸಲು ಪ್ರಯತ್ನಿಸಬೇಕು. ಯೋಗ, ಧ್ಯಾನದಂತಹ ಕಾರ್ಯಕ್ರಮಗಳ ಮೂಲಕ ಆಧ್ಯಾತ್ಮಿಕ ಮೌಲ್ಯ ರೂಢಿಸಬೇಕು.

**3. ಸಾಂಸ್ಕೃತಿಕ ಬದಲಾವಣೆ:**

ನಮ್ಮ ಸಂಪ್ರದಾಯದಲ್ಲಿ, ಆಚಾರ ವಿಚಾರಗಳಲ್ಲಿ, ಉಡುಪು ಸಾಮಾಜಿಕ ಚಟುವಟಿಕೆಗಳಲ್ಲಿ ಆಗಿರುವ ಬದಲಾವಣೆಗಳನ್ನು ಎಲ್ಲರೂ ತಿಳಿದುಕೊಳ್ಳಬೇಕು. ಸಾಂಸ್ಕೃತಿಕ ಬದಲಾವಣೆ ಪ್ರಕ್ರಿಯೆಯ ಜ್ಞಾನ, ಪ್ರಸಕ್ತ

---

23. **ವಾಮದೇವಪ್ಪ. ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-3, ಪು-159-160.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005

ಸಂಸ್ಕೃತಿಯಲ್ಲಿ ಕಂಡು ಬರುವ ಬದಲಾವಣೆಗಳನ್ನು ಅರಿತುಕೊಳ್ಳಲು ಸಹಾಯಕವಾಗುತ್ತದೆ. ಹೆಚ್ಚುತ್ತಿರುವ ಸಾಂಸ್ಕೃತಿಕ ಪ್ರಭಾವಗಳಿಂದ ಸಂಸ್ಕೃತಿ ಸಂಸ್ಕೃತಿಯ ಮಧ್ಯೆ ಆಂತರ್ಸಂಬಂಧವನ್ನು ಕಾಣಬಹುದಾಗಿದೆ ಇದರಿಂದ ಮಕ್ಕಳು ಸಹಕಾರ ಮನೋಭಾವವನ್ನು, ಅದರ ಅಗತ್ಯತೆಯನ್ನೂ ಮನಗಾಣಬಹುದಾಗಿದೆ.

**4. ಪ್ರಜಾಸತ್ತಾತ್ಮಕ ಮೌಲ್ಯಗಳು:**

ಭಾರತೀಯ ಸಮಾಜದಲ್ಲಿ ಬೆಳೆಯುವಂತಹ ಪ್ರತಿ ಮಕ್ಕಳೂ ಸಹ ಪ್ರಜಾಸತ್ತಾತ್ಮಕ ಮೌಲ್ಯಗಳಾದ ಸ್ವಾತಂತ್ರ್ಯ, ಸಮಾನತೆ, ಭ್ರಾತೃಭಾವನೆ ಹಾಗೂ ಜಾತ್ಯಾತೀತತೆಯನ್ನು ರೂಢಿಸಿಕೊಳ್ಳಬೇಕು.

**5. ಪ್ರಗತಿಯ ಪರಿಕಲ್ಪನೆ:**

ಮಕ್ಕಳು ಸಂತೋಷದಿಂದ ಉತ್ತಮ ಜೀವನ ಸಾಗಿಸಲು ಪ್ರಗತಿಯ ಪರಿಕಲ್ಪನೆ ಹೊಂದಿರಬೇಕು. ಪ್ರಜಾಸತ್ತೆ ಹಾಗೂ ತಾಂತ್ರಿಕತೆ-ಈ ಪರಿಕಲ್ಪನೆಯು ಬೆಳೆಯಲು ಸಹಕಾರಿಯಾಗುತ್ತದೆ.

ಮಕ್ಕಳಲ್ಲಿ ಚಿಕ್ಕ ವಯಸ್ಸಿನಿಂದಲೇ ಮೂಲಮೌಲ್ಯಗಳಾದ ಪ್ರಾಮಾಣಿಕತೆ, ದಯೆ, ಸಹಕಾರ, ಸಭ್ಯತೆ, ಮಿತ್ರತ್ವ ಸ್ವಚ್ಛತೆ. ಉದಾರತೆ, ಸಾಮಾಜಿಕ ಕೌಶಲಗಳಲ್ಲಿ ನಿಪುಣತೆ ಮೊದಲಾದವುಗಳು ಬೆಳೆಯಲು ಶಕ್ಯವಿರುತ್ತದೆ. ಈ ಸಮಯದಲ್ಲಿ ಶಿಕ್ಷಕರು, ಪಾಲಕರು ಮಹತ್ವದ ಪಾತ್ರವಹಿಸುತ್ತಾರೆ. ಸುಸಂಸ್ಕೃತ ಸಂಸಾರದವರಿಗೆ  ಶಿಕ್ಷಣವೇ ಮೋಕ್ಷ. "ಮಕ್ಕಳಿಗೆ ತಂದೆ ಬಾಲ್ಯದೊಳ್ ಅಕ್ಕರ ವಿದ್ಯೆಯಂ ಕಲಿಸದಿರ್ದಡೆ ಕೊಂದಂ" ಎಂಬ ಗೃಹಸ್ಥಾಶ್ರಮ ಧರ್ಮಕ್ಕೆ ಅನುಗುಣವಾದ ನೀತಿಯನ್ನನುಸರಿಸಿ ತಮ್ಮಮಕ್ಕಳ ವಿದ್ಯಾಭ್ಯಾಸಕ್ಕೆ ಗಮನಕೊಟ್ಟು ಶಾಲೆಗೆ ಕಳುಹಿಸುತ್ತಾರೆ. ಶಿಕ್ಷಣದ ಮಹತ್ವವನ್ನು ಅರಿಯದಿದ್ದವರು ತಮ್ಮಮಕ್ಕಳನ್ನು ಶಾಲೆಗೆ ಕಳುಹಿಸಿ ಅವರ ಪ್ರಗತಿಗೆ ನೆರವಾಗದಿರುವುದು ಆಧುನಿಕ ಶಿಕ್ಷಣವ್ಯವಸ್ಥೆಯಲ್ಲಿ ಒಂದು ದೊಡ್ಡ ಸಮಸ್ಯೆಯೇ ಆಗಿಬಿಟ್ಟಿದೆ.[24]

ಸಮಾಜದ ಮುಖ್ಯ ಕೇಂದ್ರವಾದ ಶಾಲೆ ಅಥವಾ ಶಿಕ್ಷಣ ಕೇಂದ್ರಗಳು ಸಮಾಜದಲ್ಲಿ ಹಿತವಾದ, ಆರೋಗ್ಯಕರ ವಾತಾವರಣವನ್ನು ಸಂರಕ್ಷಿಸುವ ಉದ್ದೇಶವನ್ನು ಹೊಂದಿರಬೇಕಾಗುತ್ತದೆ. ಹಾಗಾದರೆ ಶಿಕ್ಷಣದ ಗುರಿಗಳು ಹೇಗಿರಬೇಕು ಎನ್ನುವುದಕ್ಕೆ ಮಹಾತ್ಮಾಗಾಂಧೀಜಿಯವರು ಹೀಗೆ ಹೇಳಿದ್ದಾರೆ " ಶೀಲಸಂವರ್ಧನೆ, ವ್ಯಕ್ತಿಯಲ್ಲಿ ಸಚ್ಚಾರಿತ್ರ್ಯವನ್ನು ಬೆಳೆಸುವಲ್ಲಿ ಶಿಕ್ಷಣಕೇಂದ್ರಗಳು ಯಶಸ್ವಿಯಾದರೆ ಸಮಾಜವು ತನ್ನಿಂದತಾನೇ ಸುಧಾರಿಸುತ್ತದೆ ಎಂದು ಭಾವಿಸುತ್ತೇನೆ." ಎಂದು ಹೇಳಿ ಉತ್ತಮ ವ್ಯಕ್ತಿತ್ವ ನಿರ್ಮಾಣ ಕಾರ್ಯದಲ್ಲಿ ಶೈಕ್ಷಣಿಕ

---

24. **ವಾಮದೇವಪ್ಪ. ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-3, ಪು--160,.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005

ಮಹತ್ವವನ್ನು ಸಾರಿದ್ದಾರೆ. ಶಿಕ್ಷಣ ನೀಡಿಕೆ ಒಂದು ಪವಿತ್ರ ಕಾರ್ಯ. ಇದು ಎಲ್ಲರಿಗೂ ಸುಲಭವಾಗಿ ಲಭ್ಯವಾಗುವಂತಹುದಲ್ಲ. ನಿಸ್ವಾರ್ಥತೆಯಿಂದ ಶಿಕ್ಷಣ ನೀಡಿದಷ್ಟು ಉತ್ತಮ ಫಲ ದೊರೆಯುತ್ತದೆ. ಶಿಕ್ಷಣ, ನೈತಿಕ ಪ್ರಜ್ಞೆ ಇಲ್ಲದಿದ್ದರೆ ವ್ಯಕ್ತಿಯ ವ್ಯಕ್ತಿತ್ವಕ್ಕೆ ಏನೂ ಬೆಲೆಯಿಲ್ಲ. ವ್ಯಕ್ತಿತ್ವವಿಲ್ಲದೆ ಸಮಾಜದಲ್ಲಿ ಮನ್ನಣೆಯಿಲ್ಲ. ಮನ್ನಣೆಗಾಗಿಯಾದರೂ ನೈತಿಕ ಮೌಲ್ಯಗಳ ಜ್ಞಾನಾರ್ಜನೆ ಅತ್ಯಗತ್ಯ. ಮಕ್ಕಳ ಅಥವಾ ವಿದ್ಯಾರ್ಥಿಗಳ ಮನೋಬಲ ಮತ್ತು ಬೌದ್ಧಿಕ ವಿಕಾಸಕ್ಕೆ ಕಲಿಕೆ ಒಂದು ವರವಾಗಿ ಪರಿಣಮಿಸಬೇಕು. ಈ ನಿಟ್ಟಿನಲ್ಲಿ ಶಿಕ್ಷಣ ಕೇಂದ್ರಗಳು ಮೌಲ್ಯಯುತ ಶಿಕ್ಷಣ ನಿಡುವುದರೆಡೆಗೆ ಹೆಜ್ಜೆ ಹಾಕಬೇಕು.

ಮೌಲ್ಯಗಳ ಬೆಳವಣಿಗೆ ವ್ಯಕ್ತಿಯ ಬೆಳವಣಿಗೆಗೆ ಅನುಗುಣವಾಗಿ ಬೆಳೆಯುತ್ತಾ ಹೋಗುವುದು. ವ್ಯಕ್ತಿಯು ಉತ್ತಮಗುಣ ಹಾಗೂ ಮೌಲ್ಯಗಳನ್ನು ಅಳವಡಿಸಿಕೊಳ್ಳುತ್ತಾ, ಸಮಾಜೀಕರಣದ ತನ್ನ ಪ್ರಯತ್ನ ಮತ್ತು ಪರಿಶ್ರಮದಲ್ಲಿ ಅಭಿವೃದ್ಧಿಪಡಿಸಿಕೊಳ್ಳುತ್ತಾ ಮುಂದೆ ಮುಂದೆ ಸಾಗುತ್ತಾನೆ.ಇದರ ಜೊತೆಗೆ ಶೈಕ್ಷಣಿಕ ಪ್ರಕ್ರಿಯೆಯಲ್ಲಿ, ಸಾಮಾಜಿಕ ಪರಿಕಲ್ಪನೆಗಳಾಗಿ ಮೌಲ್ಯಗಳು ಕಂಡುಬರುತ್ತವೆ. ಉದಾಹರಣೆಗೆ:- ಸಾಹಿತ್ಯ ಮತ್ತು ಸಂಗೀತ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವುದು, ಕಥೆಕವನಗಳನ್ನು ಕೇಳುವುದು ಬರೆಯುವುದರಲ್ಲಿ ಆಸಕ್ತನಾಗಿರುವುದು. ಇದರ ಫಲವಾಗಿ ಅವುಗಳ ಸೌಂದರ್ಯವನ್ನು ಆಸ್ವಾದಿಸಿ, ಆನಂದಪಡುವುದು. ಇದನ್ನೇ ಸೌಂದರ್ಯ ಪ್ರಜ್ಞೆ ಅಥವಾ ಸೌಂಧರ್ಯಾತ್ಮಕ ಮೌಲ್ಯದ ಬೆಳವಣಿಗೆ ಎನ್ನಬಹುದು.[25]

ಸಂಸ್ಕೃತ ಭಾಷೆಯು ಹಲವು ಭಾಷೆಗಳ ಜನನಿಯಾಗಿದೆ. ಭಾರತದ ವೈದಿಕ ಸಾಹಿತ್ಯದ ಅನೇಕ ಗ್ರಂಥಗಳು ಸಂಸ್ಕೃತಭಾಷೆಯಲ್ಲಿದ್ದು ಉತ್ತಮ ಮೌಲ್ಯವರ್ಧಕಗಳಾಗಿವೆ. ವಿದ್ಯಾರ್ಥಿಗಳ ಸುಸಂಸ್ಕೃತ ವ್ಯಕ್ತಿತ್ವ ನಿರ್ಮಾಣ ಕಾರ್ಯದಲ್ಲಿ ಈ ಮೌಲ್ಯಗಳು ಬಹಳ ಮುಖ್ಯವಾಗಿದ್ದು, ಇತರ ಭಾಷೆಗಳಂತೆಯೇ ಸಂಸ್ಕೃತವನ್ನು ಪ್ರಾಥಮಿಕ ಹಂತದಲ್ಲೇ ಸ್ವ ಇಚ್ಛೆಯಿಂದ ವಿದ್ಯಾರ್ಥಿಗಳು ಕಲಿತರೆ ಬಹಳ ಒಳ್ಳೆಯದು. ವ್ಯಕ್ತಿತ್ವ ವಿಕಸನದಲ್ಲಿ ಸಾಂಪ್ರದಾಯಿಕ ಶಿಕ್ಷಣದ ಜೊತೆಗೆ ನೀತಿ ಬೋಧನೆ ಅವಶ್ಯಕ. "ನೀತಿಯಿಲ್ಲದ ಶಿಕ್ಷಣ ರಾಮನಿಲ್ಲದ ಅಯೋಧ್ಯೆಯಂತೆ" ಎಂಬ ಗಾದೆ ಮಾತಿದೆ. ಬಹುಶಃ ಬಹಳಷ್ಟು ಪಾಶ್ಚಿಮಾತ್ಯ ರಾಷ್ಟ್ರಗಳು ಇದರ ಮಹತ್ವವನ್ನು ಗುರುತಿಸಿ ಸಂಸ್ಕೃತ ಭಾಷೆಯನ್ನು ಅವರು ಕಲಿಯುವ ಭಾಷೆಗಳ ಜೊತೆಯಲ್ಲಿ ಕಡ್ಡಾಯವಾಗಿ ಆಯ್ಕೆ ಮಾಡಿಕೊಂಡಿರುತ್ತವೆ.

ಮೌಲ್ಯಗಳು ಜೀವನದ ಗುರಿಯ ಆಯ್ಕೆಯ ಮೇಲೆ ಪ್ರಭಾವ ಬೀರುತ್ತವೆ. ಹಾರ್ವರ್ಡ್ ವಿಶ್ವವಿದ್ಯಾನಿಲಯದ ಮನೋವಿಜ್ಞಾನಿ **LAWRENCE KOHLBERG** ರವರ ಪ್ರಕಾರ ಜ್ಞಾನಾತ್ಮಕ ಪ್ರಕ್ರಿಯೆಗಳಾದ ಆಲೋಚನೆ ಮತ್ತು ತಾರ್ಕಿಕತೆ ಮಗುವಿನ ನೈತಿಕ ವಿಕಾಸದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ.

25. **ವಾಮದೇವಪ್ಪ. ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-3, ಪು-159-160.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಮಠಬಡಾವಣೆ, ದಾವಣಗೆರೆ-577005

ಮಕ್ಕಳಿಗೆ ದೊರೆತ ಕಲಿಕಾ ಅನುಭವ ಮತ್ತು ಅವರನ್ನು ಬೆಳೆಸಿರುವಿಕೆಯ ಮೇಲೆ ಅವಲಂಬಿಸಿರುವುದೇ ಅವರ ನೈತಿಕ ತೀರ್ಮಾನಗಳು ಹಾಗೂ ಅವರ ಬೌದ್ಧಿಕ ಮಟ್ಟ. ಮಾನವರಲ್ಲಿ ನೈತಿಕ ವಿಕಾಸದ ಪ್ರಕ್ರಿಯೆಯನ್ನು ಅಧ್ಯಯನ ಮಾಡುವ ಸಲುವಾಗಿ ಕೋಹ್ಲ್ಬರ್ಗ್‌ರವರು ನೈತಿಕ ವಿಕಾಸವನ್ನು ವ್ಯಕ್ತಿಯ ನ್ಯಾಯ ನಿರ್ಣಯ ಶಕ್ತಿಯ ವಿಕಾಸ ಎಂದು ವ್ಯಾಖ್ಯಾನಿಸುತ್ತಾರೆ. ಇದರಿಂದ ಮಕ್ಕಳ ಗುಣಧರ್ಮಗಳು ಮೌಲ್ಯಯುತವಾಗುತ್ತವೆ. ಪಿಯಾಜೆಯ ಜ್ಞಾನಾತ್ಮಕ ವಿಕಾಸದ ಹಂತಗಳಂತೆ ಕೋಹ್ಲ್ಬರ್ಗ್‌ರವರೂ ಸಹ ನೈತಿಕ ವಿಕಾಸದ ಮೂರು ಪ್ರಮುಖ ಮಟ್ಟಗಳನ್ನು ಸೂಚಿಸಿರುತ್ತಾರೆ. ಅವುಗಳೆಂದರೆ– [26]

1. ಸಾಂಪ್ರದಾಯಿಕ ಪೂರ್ವ ನೈತಿಕತೆಯ ಹಂತ ~ 4 ರಿಂದ 10 ವರ್ಷಗಳು.

2. ಸಾಂಪ್ರದಾಯಿಕ ನೈತಿಕತೆಯ ಹಂತ ~ 10 ರಿಂದ 13 ವರ್ಷಗಳು.

3. ಸ್ವಯಂ ಸ್ವೀಕೃತ ನೈತಿಕ ತತ್ವಗಳ ಹಂತ ~ 13 ವರ್ಷಗಳ ಮೇಲ್ಪಟ್ಟು.

ಇವರ ಪ್ರಕಾರ ಒಂದು ನೈತಿಕ ವಿಕಾಸ ಹಂತದಿಂದ ಇನ್ನೊಂದು ನೈತಿಕ ವಿಕಾಸ ಹಂತಕ್ಕೆ ಸಾಗುವುದು ವ್ಯಕ್ತಿಯ ಜ್ಞಾನಾತ್ಮಕ ಸಾಮರ್ಥ್ಯಗಳ ಮೇಲೆ ಅವಲಂಬಿಸಿರುತ್ತದೆಯೇ ಹೊರತು ಕೇವಲ ಪೋಷಕರ ಹಿರಿಯರ ಅಥವಾ ಸ್ನೇಹಿತರ ನೈತಿಕ ಮೌಲ್ಯಗಳಿಂದಲ್ಲ. ವಿವಿಧ ವಯೋಮಾನಗಳಲ್ಲಿ ವ್ಯಕ್ತಿಗೆ ತನ್ನಿಂದ ಸಮಾಜವು ಯಾವ ನಡವಳಿಕೆಯನ್ನು ನಿರೀಕ್ಷಿಸುತ್ತದೆ ಎಂಬುದನ್ನು ಅರಿತುಕೊಳ್ಳಲು ವಿಕಾಸಾತ್ಮಕ ಕಾರ್ಯಗಳು ಮಾರ್ಗದರ್ಶನ ನೀಡುತ್ತವೆ. ಪೋಷಕರು ತಮ್ಮ ಮಕ್ಕಳಿಂದ ಸಮಾಜ ಯಾವ ಕೌಶಲವನ್ನು ನಿರೀಕ್ಷಿಸುತ್ತದೆ ಎಂಬುದನ್ನು ತಿಳಿದು ಮಕ್ಕಳಿಗೆ ಸೂಕ್ತ ಕೌಶಲಗಳನ್ನು ಕಲಿಸಲು ಹಾಗೂ ತನ್ಮೂಲಕ ಸೂಕ್ತ ಹೊಂದಾಣಿಕೆ ಮಾಡಿಕೊಳ್ಳಲು ಇವು ನೆರವಾಗುತ್ತವೆ. ವ್ಯಕ್ತಿಗೆ ತನ್ನ ಜೀವನದ ಮುಂದಿನ ಹಂತದಲ್ಲಿ ಏನಿದೆ?ತಾನು ಏನು ಮಾಡಬೇಕಾಗಿದೆ? ಯಾವ ಜವಾಬ್ದಾರಿ ನಿರ್ವಹಿಸಲು ಸಿದ್ಧನಾಗಬೇಕು? ಎಂಬುದನ್ನು ಅರಿತು ಕಾರ್ಯನಿರತನಾಗಲು ವಿಕಾಸಾತ್ಮಕ ಕಾರ್ಯಗಳ ಅರಿವು ಮಹತ್ವಪೂರ್ಣವಾಗಿ ಸಹಕಾರಿಯಾಗುತ್ತವೆ.

ತತ್ಪರಿಣಾಮವಾಗಿ ವ್ಯಕ್ತಿಯಲ್ಲಿ ಉತ್ತಮ ಗುಣಗಳು ಬೆಳೆದು ಮೌಲ್ಯಯುತ ಬದುಕು – ಸಾರ್ಥಕ ಜೀವನದೆಡೆಗೆ ಪ್ರೇರೇಪಿತನಾಗುತ್ತಾನೆ. ಇಂಥಹ ಚಿಂತನ– ಮಂಥನ ರಾಜಕುಮಾರರ ಮನಸ್ಸಿಗೆ ಬರುವಂತೆ ಪಂಚತಂತ್ರಕಥೆಗಳ ಮೂಲಕ ಅತ್ಯಂತ ಸಮಯೋಚಿತವಾಗಿ ಸೂಕ್ತವಾದ ಸನ್ನಿವೇಶಗಳನ್ನು ಒದಗಿಸಿ, ಅವರ ಮುಂದಿನ ಹಂತದ ದಿನಗಳಲ್ಲಿ ಏನಿದೆ ಹಾಗೂ ಏನು ಮಾಡಬೇಕಾಗಿದೆ ಹಾಗೂ ಯಾವ ಜವಾಬ್ದಾರಿ ನಿರ್ವಹಿಸಬೇಕಾಗಿದೆ? ಅದಕ್ಕೆ ಹೇಗೆ ಸಿದ್ಧತೆ ನಡೆಸಬೇಕು? ಎಂಬುದನ್ನು ಗುರುಗಳಾದ ವಿಷ್ಣುಶರ್ಮರು ಬಹಳ

---

**26. ವಾಮದೇವಪ್ಪ. ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–2, ಪು–96–97.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

ಯೋಜಿತವಾಗಿ ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ನೀತಿಶಿಕ್ಷಣವನ್ನು ಬೋಧಿಸಿದ್ದಾರೆ.

कारणान्मित्रतां याति कारणादेति शत्रुताम् ।

तस्मान्मित्रत्वमेवात्र योज्यं वैरं न धीमता ॥[27]

ಯಾವುದೋ ಕಾರಣದಿಂದಲೇ ಸ್ನೇಹವುಂಟಾಗುತ್ತದೆ. ಅಂಥ ಯಾವುದೋ ಕಾರಣದಿಂದಲೇ ಶತ್ರುತ್ವವುಂಟಾಗುತ್ತದೆ. ಆದುದರಿಂದ, ಬುದ್ಧಿವಂತನಾದವನು ಸ್ನೇಹವನ್ನೇ ಇಲ್ಲಿ ಸಾಧಿಸಬೇಕು; ದ್ವೇಷವನ್ನಲ್ಲ. ಹೀಗೆ ವಿಷ್ಣುಶರ್ಮರು ಬಹಳ ಮುಖ್ಯವಾದ ನೀತಿ ವಿಚಾರಗಳನ್ನು ಅತ್ಯಂತ ಸರಳವಾಗಿ ಮನದಟ್ಟು ಮಾಡುತ್ತಾ, ಅದಕ್ಕೊಂದು ಕಥೆಯನ್ನು ಹೆಣೆದು, ಮಧ್ಯೆ ಮಧ್ಯೆ ಒಂದೊಂದು ಸೂಕ್ತಿಗಳನ್ನು ಸೇರಿಸುತ್ತಾ ಸುಲಭವಾಗಿ ರಾಜಕುಮಾರರ ಮನಪರಿವರ್ತನೆ ಮಾಡಿದ್ದಾರೆ.



27. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಸಂಪ್ರಾಪ್ತಿ, ಶ್ಲೋ-33, ಪು-326 (1962) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

## 6-5. पञ्चतन्त्रस्य-तृतीयं तन्त्रम् - "काकोलूकीयम् "

### ಕಥೆಗಳ ವಿಶ್ಲೇಷಣೆ

ಈ ಅಧ್ಯಾಯದಲ್ಲಿ ಈವರೆಗೆ ಸಂಕ್ಷಿಪ್ತವಾಗಿ ವಿಚಾರ ಮಾಡಿದ ಕೆಲವು ಮನೋವೈಜ್ಞಾನಿಕ ಹಾಗೂ ಶೈಕ್ಷಣಿಕ ಅಂಶಗಳಾದ ಅರಿವು-ಬಿಂಬ ಮತ್ತು ಬಿಂಬ ಕಲ್ಪನೆ-ಮೌಲ್ಯಗಳನ್ನು ಮಕ್ಕಳಲ್ಲಿ ರೂಢಿಸುವುದು- ಇದರಲ್ಲಿ ಪೋಷಕರು ಮತ್ತು ಶಿಕ್ಷಕರ ಪಾತ್ರಗಳು ಮುಂತಾದವುಗಳು ವ್ಯಕ್ತಿವಿಕಸನ ಕಾರ್ಯದಲ್ಲಿ ಎಷ್ಟರಮಟ್ಟಿಗೆ ಪ್ರಭಾವವನ್ನು ಬೀರುತ್ತವೆ ಎಂಬುದನ್ನು ತಿಳಿದದ್ದಾಯಿತು. ಈ ಎಲ್ಲ ಅಂಶಗಳನ್ನು ವಿಷ್ಣುಶರ್ಮರು ತಮ್ಮ ಪಂಚತಂತ್ರದಲ್ಲಿ ಹೇಗೆ ಅಳವಡಿಸಿದ್ದಾರೆಂಬುದನ್ನು ಮೂರನೆಯ ತಂತ್ರವಾದ "ಕಾಕೋಲೂಕೀಯ"ದಲ್ಲಿ ಬರುವ ಕಥೆಗಳನ್ನು ವಿಶ್ಲೇಷಿಸಿ ತಿಳಿಯೋಣ.

ಪ್ರಾರಂಭದಲ್ಲಿ, ಪಂಚತಂತ್ರದ ಮೂರನೆಯ ತಂತ್ರ ಕಾಕೋಲೂಕೀಯಮ್ ಸೂತ್ರ ಕಥೆಯ ಸೂಕ್ಷ್ಮ ಪರಿಚಯ ಮಾಡಿಕೊಳ್ಳುವುದಾದರೆ, ಮೇಘವರ್ಣನೆಂಬ ಕಾಗೆಗಳ ರಾಜ ಮತ್ತು ಅರಿಮರ್ಧನನೆಂಬ ಗೂಬೆ ಪ್ರಧಾನ ಪಾತ್ರದಲ್ಲಿ ಕಂಡುಬರುತ್ತವೆ. ಸಹಜ ವೈರಿಗಳೆನಿಸಿದ ಕಾಗೆಗಳು ಮತ್ತು ಗೂಬೆಗಳಿಗೆ ಸಂಬಂಧಿಸಿದಂತೆ ಕಥೆಗಳ ಮೂಲಕ ಯುದ್ಧನೈಪುಣ್ಯ ಹಾಗೂ ಶಾಂತಿಯ ಮಹತ್ವವನ್ನು ವಿವರಿಸಲಾಗಿದೆ. ಕಾಗೆಗಳು ದುರ್ಬಲವಾದವು, ಆದರೆ ಉತ್ತಮ ನಡತೆಯುಳ್ಳವು. ಚಿಕ್ಕ ಗುಂಪಿಗೆ ಸೇರಲ್ಪಟ್ಟ ಪಕ್ಷಿಗಳಾಗಿವೆ. ಗೂಬೆಗಳು ದೊಡ್ಡ ಗುಂಪಾಗಿದ್ದು ದುರ್ನಡತೆಯನ್ನು ಮೈಗೂಡಿಸಿಕೊಂಡಿರುವಂತಹವು. ಇಲ್ಲಿ ಬಡಪಾಯಿ ಕಾಗೆಗಳೇ ಬಲಶಾಲಿಗಳಾದ ಗೂಬೆಗಳ ರಹಸ್ಯಗಳನ್ನು, ಇತಿಮಿತಿಯನ್ನು ಚೆನ್ನಾಗಿ ಅರಿತುಕೊಂಡು ಜಾಣ್ಮೆಯಿಂದ ಜಯಗಳಿಸುತ್ತವೆ. ಒಮ್ಮೆ ಶತ್ರುವಾಗಿದ್ದವನು ನಂತರದ ಸಂದರ್ಭದಲ್ಲಿ ಪ್ರಿಯಮಿತ್ರನಾಗಿ ಮಾರ್ಪಟ್ಟಿದ್ದರೂ ಅವನಲ್ಲಿ ಸ್ನೇಹ ಬೆಳೆಸಲು ಬಹಳ ಯೋಚಿಸಬೇಕಾಗುವುದು. ಮೊದಲೆರಡು ತಂತ್ರಗಳಾದ ಮಿತ್ರಭೇದ, ಮಿತ್ರಸಂಪ್ರಾಪ್ತಿಗಳಲ್ಲಿ ಕಂಡು ಬರುವ ಆಕರ್ಷಕ ಉಪಕಥೆಗಳಲ್ಲಿ ಅಸಹಜ ಮೈತ್ರಿಯಿಂದುಂಟಾಗುವ ತೊಂದರೆಗಳು ಮತ್ತು ಒಳ್ಳೆಯ ಮಿತ್ರರನ್ನುಗಳಿಸುವುದರಿಂದುಂಟಾಗುವ ಅಪರಿಮಿತ ಲಾಭಗಳನ್ನು ಕಾಗೆ, ಇಲಿ, ಆಮೆ ಮತ್ತು ಜಿಂಕೆಯ ಸೂತ್ರ ಕಥೆಯ ಮೂಲಕ ಉತ್ತಮ ಮಿತ್ರನ ಲಕ್ಷಣಗಳನ್ನು ವಿವರಿಸಲಾಗಿದೆ. ಮುಂದೆ ಮೂರನೆಯ ತಂತ್ರವಾದ ಕಾಕೋಲೂಕೀಯದಲ್ಲಿ ಮೊದಲ ನುಡಿಯಲ್ಲಿ

न विश्वसेत्पूर्वविरोदितस्य शत्रोश्च मित्रत्वमुपागतस्य ।

दग्धां ग्रुहां पश्य उलूकपूर्णा काकप्रणीतेन हुताशनेन ॥[28]

---

28. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ., ಶ್ಲೋ-1, ಪು-435 (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಅರ್ಥಾತ್ "ಹಿಂದೆ ವಿರೋಧವನ್ನು ಮಾಡಿದ್ದ ಶತ್ರು ಈಗ ಮಿತ್ರನಾದರೂ ಕೂಡ ಅವನನ್ನು ಸಂಪೂರ್ಣವಾಗಿ ನಂಬಬಾರದು. ಕಾಗೆಯು ಹಾಕಿದ ಅಗ್ನಿಯಿಂದ ಗೂಬೆಗಳಿದ್ದ ಗುಡಿಸಲು ಸುಟ್ಟು ಹೋಯಿತು." ಎಂದು ಇದರ ಸಾರಾಂಶ. ಕಾಗೆ–ಗೂಬೆಗಳ ವೈರತ್ವದ ಕಥೆಯಲ್ಲಿ ಕಾಗೆ ಗೂಬೆಗಳು ಬದ್ಧ ವೈರಿಗಳು. ಅವುಗಳ ವೈರ ಸಾಧನೆ ಹೇಗೆಂದರೆ ಗೂಬೆ ಕುಲದ ಸಂಹಾರಕ್ಕೆ ಕಾಗೆಗಳ ರಾಜ ಮೇಘವರ್ಣ ತನ್ನ ಎಲ್ಲಾ ಸಚಿವರನ್ನು ಕರೆದು, ಶತ್ರು ಅರಿಮರ್ಧನನ ಉಪಟಳ, ಅವನ ಪ್ರಾಭಲ್ಯ ನಿತ್ಯವೂ ರಾತ್ರಿ ಬಂದು ಮೇಘವರ್ಣನ ಪಕ್ಷದವರನ್ನೆಲ್ಲಾ ಸಂಹಾರಮಾಡುತ್ತಾ ಬರುತ್ತಿದ್ದಾನೆ. ಇದಕ್ಕೆ ಹೇಗೆ ಪ್ರತೀಕಾರ ಮಾಡುವುದು. ರಾತ್ರಿಯಲ್ಲಿ ನಾವು ಅವನನ್ನು ನೋಡಲಾರೆವು ಮತ್ತು ಆತನು ಬೆಳಗ್ಗೆ ವಾಸಿಸುವ ದುರ್ಗದ ಸ್ಥಳವು ನಮಗೆ ತಿಳಿದಿಲ್ಲ. ಹೀಗಿರುವಲ್ಲಿ ನೀವೆಲ್ಲರೂ ಈ ವಿಷಯದಲ್ಲಿ ಸರಿಯಾಗಿ ಆಲೋಚಿಸಿ ಸಂಧಿ, ವಿಗ್ರಹ, ಯಾನ, ಆಸನ, ಸಂಶ್ರಯ ಮತ್ತು ದ್ವೈಧೀಭಾವ ಮುಂತಾದ ವಿಧಾನಗಳಲ್ಲಿ ಯಾವುದನ್ನು ಬಳಸಬೇಕೆಂದು ವಿಚಾರ ಮಾಡಿ ಬೇಗ ನನಗೆ ಸಲಹೆ ಮಾಡಿ ಎಂದು ವಿಷಯ ಮಂಡಿಸುತ್ತಾನೆ. ಆಗ ಆ ಸಚಿವರುಗಳು ಹೇಳಿದರು–" ನೀವು ಸರಿಯಾದುದನ್ನೇ ಕೇಳಿದ್ದೀರಿ. ಮತ್ತೆ ಸಲಹೆಯನ್ನು ಕೇಳಿದಾಗಲಂತೂ ಕಿರಾತಾರ್ಜುನೀಯಂ ಮಹಾಕಾವ್ಯದಲ್ಲಿ ಬ್ರಹ್ಮಚಾರಿ ವೇಷದಲ್ಲಿದ್ದ ಕಿರಾತನು ರಾಜನಾದ ಯುಧಿಷ್ಠಿರನಿಗೆ ದುರ್ಯೋಧನನ ವಿಷಯವನ್ನು. ಹೇಳುವಾಗ ಹೀಗೆ ಹೇಳುತ್ತಾನೆ :–

क्रियासु युक्तैनृप ! चारचक्षुषो न वञ्चनीयाः प्रभवोऽनुजीविभिः ।

अतोऽर्हसि क्षन्तुमसाधु साधु वा हितं मनोहारि च दुर्लभं वचः ॥[29]

ಅಂದರೆ " ಹೇ ರಾಜನೇ ಕರ್ತವ್ಯಗಳಲ್ಲಿ ನಿಯೋಗಿಸಲ್ಪಟ್ಟ ಸೇವಕರಿಂದ ಗೂಢಚಾರರೇ ಕಣ್ಣಾಗುಳ್ಳ ಶಿಕ್ಷಾಸಮರ್ಥರಾದ ರಾಜರು ಮೋಸಗೊಳಸಲ್ಪಡಬಾರದು. ವಂಚನೆ ಮಾಡಬಾರದೆಂಬ ಕಾರಣಕ್ಕಾಗಿ ಅಪ್ರಿಯವಾಗಲೀ, ಪ್ರಿಯವಾಗಲೀ ಕ್ಷಮಿಸಲು ಸಮರ್ಥನಾಗಿರುವೆ. ಏಕೆಂದರೆ, ಪಥ್ಯವಾದ, ಪ್ರಿಯವಾಗಿಯೂ ಇರುವ ಮಾತು ಹೊಂದಲಸಾಧ್ಯವಾಗಿದೆ." ಇದೇ ರೀತಿಯಲ್ಲಿ ಸಚಿವರುಗಳು ಹೇಳುತ್ತಾರೆ–" ಪ್ರಿಯವಾಗಿರಲಿ ಅಥವಾ ಅಪ್ರಿಯವಾಗಿರಲಿ ಸತ್ಯವಾದ ಮತ್ತು ಹಿತವಾದ ಮಾತನ್ನು ಹೇಳುತ್ತಾ ಏಕಾಂತವಾದ ಪ್ರದೇಶವನ್ನು ತಲುಪಿ ಮಂತ್ರಾಲೋಚನೆಯನ್ನು ಮಾಡಿ ಶತ್ರುತ್ವದ ಕಾರಣ ಹಾಗೂ ಅದರ ನಿಗ್ರಹವನ್ನು ಯೋಚಿಸಬಹುದು ಎಂದರು.[30]

---

29. **ಭಾರವಿ ವಿರಚಿತ ಕಿರಾತಾರ್ಜುನೀಯಂ,** ಒಂದನೇ ಸರ್ಗ ಶ್ಲೋಕ–4.
30. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತೃ.ತಂ. ಪು–157–158. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–560004

ನಂತರ ಮೇಘವರ್ಣನು ಕಾಲಕ್ರಮಕ್ಕನುಗುಣವಾಗಿ ಉಜ್ಜೀವಿ, ಸಂಜೀವಿ, ಅನುಜೀವಿ, ಪ್ರಜೀವಿ ಮತ್ತು ಚಿರಂಜೀವಿ ಎಂಬ ಪಂಚ ಸಚಿವರುಗಳನ್ನು ಪ್ರತ್ಯೇಕವಾಗಿ ಪ್ರಶ್ನಿಸುತ್ತಾ, ಅದಕ್ಕೆ ಸಂಬಂಧಪಟ್ಟ ಕೆಲವು ಕಥೆಗಳು ರಾಜಕೀಯದ ನಡೆಗಳಾಗಿ ಒಳ್ಳೆಯ ತಿಳುವಳಿಕೆಯನ್ನೂ, ರಾಜನೀತಿ ಕುಶಲತೆಯನ್ನೂ ವ್ಯಕ್ತಪಡಿಸುತ್ತವೆ ಎಂಬುದನ್ನು ತಿಳಿಯುತ್ತಾನೆ. ಕೇಳಿದ ಮಾತು, ನೋಡಿದ ಘಟನೆಗಳ ಬಗ್ಗೆ ಕೂಲಂಕಶವಾದ ಚಿಂತನ-ಮಂಥನಗಳು ಮಾನವನಿಗೆ ಅಗತ್ಯವಾದ ಗುಣ ಎಂಬುದನ್ನು ತಿಳಿಸಿಕೊಡುತ್ತವೆ. ಉಜ್ಜೀವಿನಿಯಿಂದ ಸಂಧಿಯ ಸಲಹೆ, ಸಂಜೀವಿನಿಯಿಂದ ಯುದ್ಧದ ಸಲಹೆ, ಅನುಜೀವಿಯಿಂದ ಯಾನದ ಸಲಹೆ, ಪ್ರಜೀವಿಯಿಂದ ಆಸನದ ಸಲಹೆ, ಚಿರಂಜೀವಿಯಿಂದ ಸಂಶ್ರಯದ ಸಲಹೆ. ಹೀಗೆ ಎಲ್ಲರಿಂದ ಸಲಹೆಗಳನ್ನು ಪಡೆದ ಮೇಘವರ್ಣನು ಕಾಲಕ್ರಮದಲ್ಲಿ ಬಂದ ದೂರದರ್ಶಿಯಾದ, ಸಕಲ ನೀತಿಶಾಸ್ತ್ರದಲ್ಲಿ ಪಾರಂಗತನಾದ ಸ್ಥಿರಜೀವಿ ಎಂಬ ತನ್ನ ತಂದೆಯ ವೃದ್ಧ ಸಚಿವನಿಗೆ ನಮಿಸಿ, ಅವುಗಳಲ್ಲಿ ಯಾವುದು ಯೋಗ್ಯವೋ ಅದನ್ನು ಆದೇಶಿಸುವಂತೆ ಜಾಗೃತನಾಗಿ ಕೇಳಿದನು. ಆಗ ಸ್ಥಿರಜೀವಿಯಿಂದ ದ್ವೈಧೀಭಾವದ ಸಲಹೆ ನೀಡಿ ಕಾಗೆ ಗೂಬೆಗಳ ವೈರತ್ವದ ಕಥೆ ಹೇಳಿಸಲಾಗಿದೆ. ಇಲ್ಲಿ ಬಹಳ ಸೊಗಸಾಗಿ ರಾಜನಾದವನ ಲಕ್ಷಣಗಳನ್ನು ವಿವರಿಸಲಾಗಿದೆ.

ಈ ಕಥೆಗಳಿಂದ ವಿಷ್ಣುಶರ್ಮರು ರಾಜಕುಮಾರರಲ್ಲಿ ಮುಂದಿನ ದಿನಗಳಲ್ಲಿ ಉತ್ತರಾಧಿಕಾರಿಗಳಾಗುವ ಸಂದರ್ಭಕ್ಕೆ ಸರಿಯಾಗಿ ಸುಶಿಕ್ಷಿತರಾಗಿ ರಾಜನೀತಿ ಜ್ಞಾನವನ್ನು ಪಡೆದು, ಯಾವ ರೀತಿಯಲ್ಲಿ ಪ್ರಭುಶಕ್ತಿ, ವಿವಿಧ ಶಾಸ್ತ್ರದ ಜ್ಞಾನಶಕ್ತಿ ಮತ್ತು ಉತ್ಸಾಹಶಕ್ತಿ ಸಂಪನ್ನರಾಗಬೇಕು ಎಂಬುದರ ಬಗ್ಗೆ ಬಿಂಬ - ಬಿಂಬಕಲ್ಪನೆಗಳನ್ನು ಬೆಳೆಸುವ ಸದುದ್ದೇಶದಿಂದ ಬಹಳ ಸೂಕ್ತ ನೀತಿ ನಿಯಮಗಳನ್ನು ಸುಂದರ ಕಥೆಗಳ ಮೂಲಕ ವ್ಯವಸ್ಥಿತವಾಗಿ ಬೋಧಿಸಿದ್ದಾರೆ. ರಾಜಕುಮಾರರು ಒಂದು ಸಮಗ್ರ ಪರಿವರ್ತನೆ ಹೊಂದಿ ರಾಜನೀತಿ ನಿಪುಣತ್ವಕ್ಕೆ ನೆರವಾಗುವಂತೆ ಉತ್ತಮ ಕಥೆಗಳ ಮೂಲಕ ಎಲ್ಲಾ ಅನುಭವಗಳನ್ನು ಒದಗಿಸಿಕೊಟ್ಟಿದ್ದಾರೆ. ಇದು ಪಂಚತಂತ್ರ ಕಥೆಗಳ  ವೈಶಿಷ್ಟ್ಯತೆಯಾಗಿರುತ್ತದೆ.

ಮುಂದೆ **ಮೊಲ ಮತ್ತು ಗಜೇಂದ್ರನ ಕಥೆ**ಯನ್ನು ಹೇಳುತ್ತಾ, ಅಂದರೆ ಕಾಗೆಯಿಂದ ಹೇಳಿಸುತ್ತಾ, ಎಂಥಹವರನ್ನು ರಾಜನನ್ನಾಗಿ ಮಾಡಬೇಕು ಎಂದು ತಿಳಿಸುತ್ತಾ, ರಾಜಕುಮಾರರ ಆಗಿನ ಪರಿಸ್ಥಿತಿಯಲ್ಲಿ ತಮ್ಮ ವರ್ತನೆಗಳನ್ನು ತಾವೇ ಅಂದರೆ ಸ್ವಯಂಮೌಲ್ಯಮಾಪನ ಮಾಡಿಕೊಳ್ಳುವಂತೆ ಪ್ರೇರೇಪಿಸಿದ್ದಾರೆ. ಕಥೆಯ ಮೂಲಕ ಉತ್ತಮ ಆಲೋಚನೆ, ವಿವೇಚನೆ ಮತ್ತು ವ್ಯಕ್ತಿತ್ವ ವಿಕಸನಕ್ಕೆ ಪುಷ್ಠಿಗೊಳಿಸುವಂತಹ ಮನೋಜ್ಞವಾದ ದೃಷ್ಟಾಂತಗಳನ್ನು ಒದಗಿಸಿ, ಉತ್ತಮ ಮೌಲ್ಯಗಳ ಪ್ರಾಮುಖ್ಯತೆಯನ್ನು ಸ್ಪಷ್ಟಪಡಿಸಿದ್ದಾರೆ. ಮೊಲ ಮತ್ತು ಗಜೇಂದ್ರನ ಕಥೆಯಲ್ಲಿ ಕಾಗೆಯು ಕೊನೆಯಲ್ಲಿ ಹೇಳುವ ವಿಚಾರದಲ್ಲಿ" ತನ್ನ ಜೀವನದ ಮೇಲೆ

ಆಸೆ ಇರುವವರು ನೀಚನನ್ನು, ಆಲಸಿಯನ್ನು, ಹೇಡಿಯನ್ನು, ವ್ಯಸನಕ್ಕೊಳಗಾದವನನ್ನು, ಕೃತಘ್ನನನ್ನು, ಬೆನ್ನಹಿಂದೆ ನುಡಿಯುವವನನ್ನು, ಎಂದಿಗೂ ರಾಜನನ್ನಾಗಿ ನಿಯೋಜಿಸಬಾರದು. ಹಿಂದೆ ಒಮ್ಮೆ ಮೊಲ ಮತ್ತು ಕಪಿಂಜಲನೆಂಬ ಗುಬ್ಬಿಯು ನ್ಯಾಯಕ್ಕಾಗಿ ನೀಚ ರಾಜನನ್ನಾಶ್ರಯಿಸಿ ಇಬ್ಬರೂ ನಾಶವಾಗಿಹೋದರು. ಈ ಕಥೆಯಲ್ಲಿ ಮೊಲಗಳು ಒಂದು ಸರಳ ಉದಾಹರಣೆಯೊಂದಿಗೆ ಹೀಗೆ ಜಾಗೃತಿ ಮೂಡಿಸಿವೆ–

निर्विषेणापि सर्पेण कर्तव्या महती फटा ।

विषं भवतु मा वाऽस्तु फटाऽऽटोपो भयङ्करः ।।[31]

ಏನೆಂದರೆ, ನಮ್ಮ ಪೂರ್ವಜರ ಸ್ಥಾನವನ್ನು ಅಷ್ಟು ಸುಲಭವಾಗಿ ಬಿಡಲು ಸಾಧ್ಯವಿಲ್ಲ. ಆದ್ದರಿಂದ ಆನೆಗಳಿಗೆ ಭಯವನ್ನುಂಟುಮಾಡಬೇಕು. ಆಗ ಅವುಗಳು ಹೆದರಿ ಬರದೇ ಇರಬಹುದು. ವಿಷವಲ್ಲದ ಹಾವಾದರೂ ಕೂಡ ಹೆಡೆಯನ್ನು ದೊಡ್ಡದಾಗಿ ಬಿಚ್ಚಿಬಿಡಬೇಕು. ವಿಷವಿರಲಿ, ಇಲ್ಲದಿರಲಿ, ಹೆಡೆಯು ಭಯವನ್ನುಂಟುಮಾಡುತ್ತದೆ. **ಮೊಲ–ಕಪಿಂಜಲ ಕಥೆ**ಯಲ್ಲಿ ಒಂದು ನೀತಪಾಠವಿದೆ–

न तादृक् जायते सौख्यमपि स्वर्गे शरीरिणाम् ।

दारिद्रयेऽपि हि यादृक् स्यात् स्वदेशे स्वपुरे गृहे ।।[32]

ಜೀವಿಗಳಿಗೆ ಬಡತನವಿದ್ದರೂ ತನ್ನ ದೇಶದಲ್ಲಿ, ತನ್ನ ಸ್ವಂತ ಊರಿನಲ್ಲಿ ಹಾಗೂ ತನ್ನದೇ ಮನೆಯಲ್ಲಿ ಎಂಥಹ ಸುಖ ಸಮಾಧಾನ ಸಿಗುವುದೋ ಅಂಥಹ ಸೌಖ್ಯ ಸ್ವರ್ಗದಲ್ಲೂ ಸಿಗುವುದಿಲ್ಲ. ನೀಚನ ಸಹವಾಸ ಮಾಡಿದವನಿಗೆ ಒಳ್ಳೆಯದು ಎಂದೂ ಆಗುವುದಿಲ್ಲ. ಅವನನ್ನು ಜನರು ನಂಬುವುದೂ ಇಲ್ಲ. ಮೊಲ ಮತ್ತು ಕಪಿಂಜಲನ ಸಂಭಾಷಣೆಯನ್ನು ಕೇಳಿಸಿಕೊಂಡ ಬೆಕ್ಕು ಇವರನ್ನು ನಂಬಿಸಲು ಒಂಟಿಕಾಲಲ್ಲಿ ನಿಂತಿತು. ಸೂರ್ಯನನ್ನೇ ಕಾಣುವಂತೆ ಮುಖಮಾಡಿ ಧ್ಯಾನಸ್ಥನಂತೆ ನಟಿಸಿತು. ಇದನ್ನು ಕಂಡು ಮೊಲವು ಮೋಸಹೋಯಿತು. ಆದರೆ ಗುಬ್ಬಚ್ಚಿ ಮಾತ್ರ ಬೆಕ್ಕಿಗೆ ಅಸಹಜವಾದ, ಅತಿಯಾದ ತಾಪಸಾಚಾರ ನಂಬಲರ್ಹವಲ್ಲ ಎಂದು ಗೆಳೆಯ ಮೊಲಕ್ಕೆ ಎಚ್ಚರಿಸಿತು. ತೀರ ಅತಿಯಾದ ಆಚಾರ, ಅನಾಚಾರ, ನಿಂದೆ, ಸ್ತುತಿ, ಶುಚಿ, ಅಶುಚಿ ಈ ಆರೂ ಗುಣಗಳು ದೂರ್ತ ಲಕ್ಷಣಗಳು ಎಂದಿತು. ಆದರೆ ಮೊಲ ಬೆಕ್ಕಿನ ನಟನೆಗೆ ಬೆರಗಾಗಿ ನಂಬಿಬಿಟ್ಟು ಮೋಸಹೋಯಿತು. ಆ ನೀಚನಲ್ಲಿ ವಿಶ್ವಾಸವಿಟ್ಟು ಅವರಿಬ್ಬರೂ ಬೆಕ್ಕಿನ ಬಳಿಗೆ ಹೋದರು. ಆಗ ಅದು ಒಮ್ಮೆಗೇ ಒಂದನ್ನು ಕಾಲಿನಿಂದ ಹಿಡಿದು ಮತ್ತೊಂದನ್ನು ಗರಗಸದಂತಿರುವ ಹಲ್ಲುಗಳಿಂದ ಕಚ್ಚಿ ಹಿಡಿಯಿತು.

---

31. **ಸುಧಾಕರ ಮಾಲವೀಯ,** ವಿಷ್ಣುಶರ್ಮವಿರಚಿತ ಪಂಚತಂತ್ರ, ತೃ.ತಂ–ಶ್ಲೋ–86, ಪು.ಸಂ–479.(1993) ಚೌಕಾಂಬ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ.

32. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ –92, ಪು–486,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಅವೆರಡೂ ಪ್ರಾಣ ಕಳೆದುಕೊಂಡು ಬೆಕ್ಕಿನಿಂದ ಭಕ್ಷಿಸಲ್ಪಟ್ಟವು.[33]

ಗೆಳೆಯರನ್ನು ಆಯ್ಕೆ ಮಾಡಿಕೊಳ್ಳುವಾಗಲೂ, ಪ್ರಭುಗಳನ್ನು ಆರಿಸುವಾಗಲೂ ಎಷ್ಟು ಬಗೆಯಿಂದ ಯೋಚಿಸಿದರೂ ಸಾಲದು. ಯಾರು ಯಾರೋ ಹೇಳಿದ್ದನ್ನು ಕೇಳುವುದೂ ತರವಲ್ಲ. ಸ್ವಾರ್ಥಕ್ಕಾಗಿ ಸುಳ್ಳನ್ನೇ ಹೇಳುವವರು ಹಲವರು. ಅಂಥವರಿಂದಾಗಿ ಬ್ರಾಹ್ಮಣನೊಬ್ಬನು ಮೋಸಹೋಗಿದ್ದ. ಹಾಗೆಯೇ ರಾಜರನ್ನು ಆರಿಸುವ ವಿಷಯದಲ್ಲಿ ಮೋಸಹೋಗಬಾರದು. ನಿಮ್ಮ ನಂಬಿಕೆಗಾಗಿ ಆ ಕಥೆಯನ್ನು ಕೇಳಿ ಎಂದಿತು ಕಾಗೆ ಬೇರೆ ಪಕ್ಷಿಗಳ ಮುಂದೆ. ನಂತರ **ಮೂವರು ಧೂರ್ತರು, ಬ್ರಾಹ್ಮಣ ಮತ್ತು ಆಡಿನ ಕಥೆ**.

ಯಾಗವೊಂದರ ಬಲಿಗಾಗಿ, ಆಡೊಂದನ್ನು ಕ್ರಯಕ್ಕೆ ಕೊಂಡು ಹೆಗಲಮೇಲಿರಿಸಿಕೊಂಡು ಶ್ರೋತ್ರೀಯನಾದ ವಿಪ್ರನೊಬ್ಬ ಹೋಗುತ್ತಿದ್ದುದನ್ನು ನಾಲ್ಕು ಜನ ಧೂರ್ತರು ನೋಡಿದರು. ಇವನನ್ನು ಮೋಸಗೊಳಿಸಿ ಆಡನ್ನು ಅಪಹರಿಸುವ ಎಂದು ಆಲೋಚಿಸಿ ಅವರು ಚದುರಿದರು. ಆಡಿಗಾಗಿ ಮಾತಿನ ಚಮತ್ಕಾರದಿಂದ ಆಡನ್ನು ನಾಯಿಯೆಂದು ನಂಬಿಸಿ, ಬ್ರಾಹ್ಮಣನನ್ನು ವಂಚಿಸಿದ ನಾಲ್ವರು ಬುದ್ಧಿಯ ಚಮತ್ಕಾರದಿಂದ ಆಡನ್ನು ಪಡೆದೇ ಬಿಟ್ಟರು. ಕಥೆಯನ್ನು ಮುಗಿಸಿದ ಸ್ಥಿರಜೀವಿಯು ಬಹಳ ಒಳ್ಳೆಯ ತಿಳುವಳಿಕೆ ಮಾತನ್ನು ಹೀಗೆ ಹೇಳುತ್ತಾನೆ–

बहवो न विरोद्धव्या दुर्जया हि महाजनाः ।

स्फुरन्तमपि नागेन्द्रं भक्षयन्ति पिपीलिकाः ॥[34]

"ಹೊಸದಾಗಿ ನಿಯುಕ್ತಿಯಾದ ಸೇವಕನ ವಿನಯವಾದ ಮಾತುಗಳಿಂದ, ಅತಿಥಿಗಳ ಆಕರ್ಷಕ ಮಾತುಕಥೆಯಿಂದ, ಕಾಮಿನಿಯರ ಅಳುವಿನಿಂದ ಮತ್ತು ಧೂರ್ತರ ಮಾತುಗಳಿಂದ ವಂಚನೆಗೆ ಒಳಗಾಗದವರು ಯಾರೂ ಇಲ್ಲ. ಅಲ್ಲದೆ ಅನೇಕ ದುರ್ಬಲರೊಂದಿಗೆ ವಿರೋಧವನ್ನು ಕಟ್ಟಿಕೊಳ್ಳಬಾರದು. ಅವರನ್ನು ಸೋಲಿಸುವುದು ಕಷ್ಟ. ಇರುವೆಗಳು ಬುಸುಗುಟ್ಟುತ್ತಿರುವ ಮಹಾಸರ್ಪವನ್ನು ತಿನ್ನಬಲ್ಲವು " ಎಂದು ಹೇಳುತ್ತಾ **ಇರುವೆ ಹಾಗೂ ಸರ್ಪದ ಕಥೆ**ಯನ್ನು ಹೇಳಿದನು.[35]

ನಂತರದಲ್ಲಿ ಅನೇಕ ವಿಚಾರಗಳನ್ನು ತಿಳಿಸುತ್ತಾ, ಬದುಕಿನ ನೀತಿಪಾಠವನ್ನು ಬೋಧಿಸುವುದರ ಜೊತೆಗೆ ರಾಜನೀತಿ ಶಿಕ್ಷಣವನ್ನೂ ರಾಜಕುಮಾರರಿಗೆ ವಿಷ್ಣುಶರ್ಮರು ಬಹಳ ಕ್ರಮಬದ್ಧವಾಗಿ ನೀಡುತ್ತಾ

---

33. **ಭರತ ಬಿ. ರಾವ್,** ಪಂಚತಂತ್ರ, ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, (2018) ತೃ.ತಂ. ಪು.–172–175. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.,44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–560004
34. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ –121, ಪು–505,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
35. **ಭರತ ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ,(2018) ತೃ.ತಂ. ಪು.–177–179. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–560004

ಬಂದಿದ್ದಾರೆ. ಯಾವ ಕೆಲಸಕ್ಕೆ ಯಾರು ತಕ್ಕವರೋ ಅವರೇ ಹೋಗಬೇಕು. ಅವರೇ ಮಾಡಬೇಕು. ಆಳು ಮಾಡುವ ಕೆಲಸ ಹಾಳು ಎಂದಂತೆ. ಯಾವುದೇ ಕಾರ್ಯವನ್ನು ದುಡುಕಿನಿಂದ ಕೈಗೊಳ್ಳದಿರುವುದೇ ಬುದ್ಧಿವಂತನ ಮೊದಲ ಲಕ್ಷಣ. ಆ ಕಾರ್ಯವನ್ನು ಕೈಗೆತ್ತಿಕೊಂಡ ಬಳಿಕ ಅದನ್ನು ಕೊನೆ ಮುಟ್ಟಿಸುವುದು ಅವನ ಚಾತುರ್ಯದ ವಿಶೇಷ ಲಕ್ಷಣ ಎಂಬ ನೀತಿಯ ಅರಿವಿರಬೇಕು. ಬಲ್ಲಿದನೊಡನೆ ಬಡವನ ಸ್ಪರ್ಧೆ ಕೂಡದು. ಬಂಡೆಗೆ ನಮ್ಮ ತಲೆ ಬಡಿದರೂ, ಬಂಡೆಯೇ ಬಂದು ತಲೆಗೆ ಬಡಿದರೂ ಹಾನಿ ನಮ್ಮ ತಲೆಗೇ. ಆದ್ದರಿಂದ ಅವರೊಂದಿಗೆ ಕೂಡಿ ಬಾಳುವುದೇ ನೀತಿ. ಅವಿಧೇಯನೂ, ವಿನೀತನಲ್ಲದವನೂ, ತನಗೆ ಹಿತ ಯಾವುದೆಂದು ತಿಳಿಯಲಾಗದವನೂ, ಶೀಘ್ರಕೋಪಿಯೂ, ಅಸ್ಥಿರನೂ, ಕೆಟ್ಟಪರಿವಾರದವನೂ ಆಗಿರುವಂತಹ ರಾಜನಿಗೆ ಉಪದೇಶ ಮಾಡಿದರೆ ಕೇಡಾಗುತ್ತದೆ. ಕಥೆಯಲ್ಲಿ ಅರಿಮರ್ಧನನು ಕ್ರೂರಾಕ್ಷನಿಗೆ ಹೇಳುತ್ತಾ ಅವನ ಅಭಿಪ್ರಾಯವನ್ನು ಕೇಳಿದನು. ಇದಕ್ಕೆ ಕ್ರೂರಾಕ್ಷನು ಸಲಹೆ ನೀಡುವುದೇನೆಂದರೆ, ರಕ್ತಾಕ್ಷನು ನಿರ್ದಯವಾದುದನ್ನು ಹೇಳಿರುವನು. ಹೀಗೆ ಕಥೆಯೊಂದರಲ್ಲಿ ಕೇಳಿಬರುತ್ತದೆ–

चितिकां दीपितां पश्य फटां भग्नां ममैव च ।

भिन्नश्लिष्टा तु या प्रीतिर्न सा स्नेहेन वर्द्धते ॥[36]

ಅಂದರೆ ಬೆಳಗುತ್ತಿರುವ ಚಿತೆಯನ್ನು ನೋಡು ಮತ್ತು ಗಾಯಗೊಂಡ ನನ್ನ ಹೆಡೆಯನ್ನು ನೋಡು ಒಮ್ಮೆ ಮುರಿದು ಮತ್ತೆ ತೇಪೆಹಾಕಿದ ಪ್ರೀತಿಯು ಸ್ನೇಹದಿಂದ ವರ್ಧಿಸುವುದಿಲ್ಲ. ಇದನ್ನು ಕೇಳಿದ ಅರಿಮರ್ದನನು ಅದನ್ನು ಸರಿಯಾಗಿ ತಿಳಿಸೆಂದು ಕೇಳಲು ರಕ್ತಾಕ್ಷನು **ಬ್ರಾಹ್ಮಣ ಹಾಗೂ ಸರ್ಪದ ಕಥೆ**ಯನ್ನು ಹೇಳಿದನು.

ಹರಿದತ್ತನೆಂಬ ಬ್ರಾಹ್ಮಣನು ಕೃಷಿಯನ್ನವಲಂಬಿಸಿ ಜೀವನ ನಡೆಸುತ್ತಿದ್ದನು. ಆದರೆ ಅದರಿಂದ ಅವನಿಗೆ ಏನೂ ಲಾಭವಾಗುತ್ತಿರಲಿಲ್ಲ. ಒಮ್ಮೆ ಅವನ ಜಮೀನಿನಲ್ಲಿ ಒಂದು ಮರದ ನೆರಳಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾಗ ಒಂದು ಹೆಡೆಯೆತ್ತಿದ ಸರ್ಪವನ್ನು ಕಂಡನು. ಭಕ್ತಿಯಿಂದ ಅದನ್ನು ಕ್ಷೇತ್ರಪಾಲನೆಂದು ತಿಳಿದು ಹಾಲನ್ನೆರೆದು ಪೂಜಿಸಿದನು. ನನಗೆ ನನ್ನ ಕೃಷಿಯಲ್ಲಿ ಲಾಭಬರುವಂತೆ ಅನುಗ್ರಹಿಸೆಂದು ನಾಗರಾಜನಲ್ಲಿ ಬೇಡಿಕೊಂಡು ಹಾಲಿನ ಪಾತ್ರೆಯನ್ನು ಅದರ ಮುಂದಿಟ್ಟು ಮನೆಗೆ ಹೋದನು. ಮಾರನೆಯ ದಿನ ಬಂದು ನೋಡಲು ಆ ಪಾತ್ರೆಯಲ್ಲಿ ಒಂದು ನಾಣ್ಯವಿತ್ತು. ಪ್ರತಿದಿನವೂ ಹೀಗೇ ನಡೆಯುತ್ತಿತ್ತು. ಒಂದು ದಿನ ಈ ಜವಾಬ್ದಾರಿಯನ್ನು ತನ್ನ ಮಗನಿಗೆ ಒಪ್ಪಿಸಿ ತುರ್ತು ಕಾರ್ಯ ನಿಮಿತ್ತ ಬೇರೆ ಗ್ರಾಮಕ್ಕೆ ತೆರಳಿದ್ದನು. ಮಗನು ಅದೇ ರೀತಿ ಹಾಲನ್ನಿಟ್ಟು ಬಂದನು. ಮಾರನೇ ದಿನ ನಾಣ್ಯ ಸಿಕ್ಕಿತು. ಅದನ್ನು ತೆಗೆದುಕೊಂಡು ಚಿಂತಿಸಿದನು." ಖಂಡಿತವಾಗಿಯೂ

36. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ –132, ಪು–515,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಈ ಹುತ್ತದಲ್ಲಿ ಬಹಳ ಸುವರ್ಣ ನಾಣ್ಯಗಳಿವೆ. ಈ ಸರ್ಪವನ್ನು ಕೊಂದು ಎಲ್ಲಾ ನಾಣ್ಯವನ್ನೂ ಒಮ್ಮೆಲೇ ಪಡೆಯುವೆನು" ಎಂದು ದುರಾಸೆಪಟ್ಟು, ಮತ್ತೊಂದು ದಿನ ಹಾಲನ್ನು ಕೊಡುವಾಗ ಆ ಸರ್ಪದ ತಲೆಗೆ ಕೋಲಿನಿಂದ ಹೊಡೆದುಬಿಟ್ಟನು. ಅದೃಷ್ಟವಶಾತ್ ಪ್ರಾಣವನ್ನು ಕಳೆದುಕೊಳ್ಳದ ಸರ್ಪವು ರೋಷಾವೇಶದಿಂದ ತೀವ್ರ ವಿಷವುಳ್ಳ ಹಲ್ಲುಗಳಿಂದ ಕಚ್ಚಿ ಅವನನ್ನು ಸಾಯಿಸಿತು. ಅವನ ಬಂಧುಗಳು ಬಂದು ನೋಡಿ ಅದೇ ಹೊಲದಲ್ಲಿ ಒಂದು ಚಿತೆಯನ್ನು ಸಿದ್ಧಪಡಿಸಿ ಆತನ ಸಂಸ್ಕಾರವನ್ನೂ ಮಾಡಿಬಿಟ್ಟರು. ಮರಳಿ ಊರಿಗೆ ಹಿಂದಿರುಗಿದಾಗ ಬ್ರಾಹ್ಮಣನು ಎಲ್ಲರಿಂದ ಮಗನು ಸತ್ತ ವಿಚಾರವನ್ನು ವಿವರವಾಗಿ ತಿಳಿದು ಹಾವು ಮಾಡಿದ್ದ ಕಾರ್ಯವನ್ನು ಸಮರ್ಥಿಸಿಕೊಂಡು ಹೀಗೆ ಹೇಳಿದನು.

भूतान् यो नानुगृह्णाति ह्यात्मनः शरणागतान् ।

भूतार्थास्तस्य नश्यन्ति हंसाः पद्मवने यथा ॥[37]

"ತನಗೆ ಶರಣಾಗಿ ಬಂದ ಪ್ರಾಣಿಗಳನ್ನು ಯಾರು ಅನುಗ್ರಹಿಸುವುದಿಲ್ಲವೋ, ಪದ್ಮವನದಲ್ಲಿರುವ ಹಂಸಗಳಂತೆ ಅವನ ಎಲ್ಲಾ ಸೌಕರ್ಯಗಳೂ ನಾಶವಾಗುತ್ತವೆ." ಜನರು ಅದು ಹೇಗೆಂದು ಕೇಳಲು ಬ್ರಾಹ್ಮಣನು **ಸ್ವರ್ಣಹಂಸ, ಸ್ವರ್ಣಪಕ್ಷಿ ಹಾಗೂ ರಾಜನ ಕಥೆ**ಯನ್ನು ಹೇಳಿದನು.

ಚಿತ್ರರಥನೆಂಬ ರಾಜನ ಬಳಿ ಯೋಧರಿಂದ ಸಂರಕ್ಷಿಸಲ್ಪಟ್ಟ ಒಂದು ಪದ್ಮಸರೋವರವಿತ್ತು. ಅದರಲ್ಲಿ ಸುವರ್ಣಮಯ ಹಂಸಗಳಿದ್ದವು. ಅವು ಆರು ತಿಂಗಳಿಗೊಮ್ಮೆ ಒಂದೊಂದು ಗರಿಯನ್ನು ಉದುರಿಸುತ್ತಿದ್ದವು. ಆ ಗರಿಗಳನ್ನು ರಾಜನಿಗೆ ಕೊಟ್ಟು ಸರೋವರವನ್ನು ಹಂಸಗಳು ತಮ್ಮದಾಗಿಸಿಕೊಂಡಿದ್ದವು. ಒಮ್ಮೆ ಆ ಸರೋವರಕ್ಕೆ ಒಂದು ಸ್ವರ್ಣಮಯವಾದ ದೊಡ್ಡ ಪಕ್ಷಿಯೊಂದು ಬಂದಿತು. ಅದು ತಾನೂ ಅದೇ ಸರೋವರದಲ್ಲಿರುವುದಾಗಿ ಸಾಕಷ್ಟು ವಾದಮಾಡಿ ಹಠಹಿಡಿದು ಉದ್ಧಟತನದ ಮಾತುಗಳನ್ನಾಡಿತು. ಕೊನೆಗೆ ಸ್ವರ್ಣಪಕ್ಷಿಯು ರಾಜನ ಬಳಿಗೆ ಹೋಗಿ ಹಂಸಗಳ ವಿರುದ್ಧ ದೂರನ್ನು ಹೇಳಿತು. ರಾಜನು ಆ ಪಕ್ಷಿಯ ಮಾತಿನ ಮೋಡಿಗೆ ಬಲಿಯಾಗಿ ಹಿಂದೆ ಮುಂದೆ ವಿಚಾರಮಾಡದೆ ಸೇವಕರನ್ನು ಕರೆದು ಎಲ್ಲಾ ಪಕ್ಷಿಗಳನ್ನೂ ಕೊಂದು ತನ್ನಿ ಎಂದು ಆಜ್ಞೆ ಮಾಡಿಬಿಟ್ಟನು. ರಾಜನ ಆಜ್ಞೆಯಂತೆ ರಾಜಪುರುಷರು ಬಂದೇ ಬಿಟ್ಟರು. ಆಗ ಹಿರಿಯ ಅನುಭವಿ ಹಂಸವೊಂದು ತನ್ನ ಬಾಂಧವರಿಗೆ ಎಚ್ಚರಿಸಿ ಕೂಡಲೇ ಒಂದಾಗಿ ಹಾರಿಹೋಗೋಣವೆಂದು ತೀರ್ಮಾನಿಸಿ ಎಲ್ಲವೂ ಹಾರಿ ಹೋಗಿ ಅಪಾಯವನ್ನು ಉಪಾಯದಿಂದ ತಪ್ಪಿಸಿಕೊಂಡವು. ಹೀಗೆ ಕಥೆಯನ್ನು ಮುಗಿಸಿದ ಬ್ರಾಹ್ಮಣನು ಮತ್ತೆ ಹಾಲನ್ನು ತೆಗೆದುಕೊಂಡು ಹೋಗಿ ಹುತ್ತದ ಬಳಿ ಸರ್ಪದ ಸ್ತುತಿಯನ್ನು

---

37. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ –133 ಪು.–517,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಮಾಡಿ ತಪ್ಪನ್ನು ಮನ್ನಿಸಲು ಬೇಡಿಕೊಂಡನು. ಆದರೆ ಸರ್ಪವು ಹುತ್ತದ ಬಿಲದ ದ್ವಾರದಲ್ಲೇ ಇದ್ದುಕೊಂಡು ಬ್ರಾಹ್ಮಣನಿಗೆ ಬುದ್ಧಿವಾದ ಹೇಳಿ ಬೆಲೆಬಾಳುವ ವಜ್ರದ ಮಣಿಯೊಂದನ್ನು ಕೊಟ್ಟು ಇನ್ನು ಮುಂದೆ ಬರಕೂಡದೆಂದು ಹೇಳಿ ಹುತ್ತದೊಳಕ್ಕೆ ಹೋಗಿಬಿಟ್ಟಿತು.

श्रूयते हि कपोतेन शत्रुः शरणमागतः ।

पूजितश्च यथान्यायं स्वैश्च मांसैर्निमन्त्रितः ॥[38]

ನಂತರ ಕ್ರೂರಾಕ್ಷನ ಸಲಹೆಯೇನೆಂದರೆ, ರಕ್ತಾಕ್ಷನು ನಿರ್ದಯವಾದುದನ್ನು ಹೇಳಿರುವನು ಏಕೆಂದರೆ ಶರಣಾಗತರನ್ನು ಕೊಲ್ಲುವುದಿಲ್ಲ. ಕಥೆಯಲ್ಲಿ ಕೇಳಿಬರುವ ಇದೊಂದು ಮಾತು ಸರಿಯಾಗಿಯೇ ಇದೆ. "ರಕ್ಷಣೆಯನ್ನು ಬೇಡಿಬಂದ ಶತ್ರುವನ್ನು ಪಾರಿವಾಳವು ಯಥೋಚಿತವಾಗಿ ಸನ್ಮಾನಿಸಿ ತನ್ನ ಮಾಂಸದಿಂದಲೇ ತೃಪ್ತಿಪಡಿಸಿತು" ಎಂದು.

ಅರಿಮರ್ಧನನು ಅದೇನೆಂದು ಕೇಳಲು, ಕ್ರೂರಾಕ್ಷನು **ಪಾರಿವಾಳ ಮತ್ತು ಬೇಟೆಗಾರನ ಕಥೆ**ಯನ್ನು ಹೇಳಿದನು. ಹೀಗೆ ಕಥೆಯಿಂದ ಕಥೆಗೆ ವಿಚಾರದಿಂದ ಮತ್ತೊಂದು ವಿಚಾರಕ್ಕೆ, ಒಂದು ನೀತಿಯಿಂದ ಮತ್ತೊಂದರೆಡೆಗೆ ಬಹಳ ವ್ಯವಸ್ಥಿತವಾಗಿ ವ್ಯಕ್ತಿ ವಿಕಸನ ಮಾರ್ಗದರ್ಶನ ಪಂಚತಂತ್ರದಲ್ಲಿ ಅಡಕವಾಗಿರುತ್ತದೆ. ಮಧ್ಯೆ ಮಧ್ಯೆ ನಾಯಕತ್ವದ ಲಕ್ಷಣಗಳು, ಬುದ್ಧಿಶಕ್ತಿಯ ಸಮಯೋಚಿತ ಬಳಕೆ, ಬದುಕಿಗೆ ಅವಶ್ಯಕವಾದ ನೀತಿಬೋಧೆಗಳು, ಮಾನವೀಯ ಮೌಲ್ಯಗಳು, ದುಡುಕು ತಂದೊಡ್ಡುವ ಸಮಸ್ಯೆಗಳು, ಮುಂಜಾಗ್ರತೆಯಿಂದ ಕಾರ್ಯ ನಿರ್ವಹಿಸುವುದು, ಸ್ವಯಂ ಶಿಸ್ತು, ಭವಿಷ್ಯದ ಆಗುಹೋಗುಗಳ ಬಗ್ಗೆ ಚಿಂತನೆ, ವ್ಯಕ್ತಿತ್ವನಿರ್ಮಾಣಕ್ಕೆ ಬೇಕಾದ ಅತ್ಯಮೂಲ್ಯ ಸಲಹೆ ಹಾಗೂ ಮಾರ್ಗೋಪಾಯಗಳನ್ನು ಕಾಣಬಹುದು. ಕೇವಲ ಪಠ್ಯದ ವಿಚಾರಗಳನ್ನು ಮಾತ್ರ ಬೋಧಿಸುವುದಷ್ಟೆ ಶಿಕ್ಷಕನ ಕರ್ತವ್ಯವಲ್ಲ. ವಿದ್ಯಾರ್ಥಿಗಳ ಸರ್ವತೋಮುಖ ಬೆಳವಣಿಗೆಗೆ ಸೂಕ್ತ ಸನ್ನಿವೇಶಗಳನ್ನೊದಗಿಸಿ ಸುಂದರ ವ್ಯಕ್ತಿತ್ವ ನಿರ್ಮಾಣ ಮಾಡುವಲ್ಲಿ ಶಿಕ್ಷಕರ ಜವಾಬ್ದಾರಿ ಮಹತ್ವದ್ದಾಗಿದೆ. ಈ ಒಂದು ಅಂಶವನ್ನು ಪಂಚತಂತ್ರ ಕಥೆಗಳು ಪ್ರತಿಯೊಬ್ಬ ಶಿಕ್ಷಕನಿಗೂ ಮಾದರಿಯಾಗಿವೆ. ಇದು ಒಂದು ಮನರಂಜನಾ ಕಥೆಗಳ ಗೊಂಚಲು ಎಂಬ ಅಭಿಪ್ರಾಯ ಸಾಮಾನ್ಯವಾಗಿ ಬಂದುಬಿಟ್ಟಿದೆ. ಆದರೆ ಇದನ್ನು ಸೂಕ್ಷ್ಮವಾಗಿ ಗಮನಿಸಿ ಅಧ್ಯಯನ ನಡೆಸಿದಾಗ ಮಾತ್ರ ಇದರಲ್ಲಿ ಅಡಕವಾಗಿರುವ ವ್ಯಕ್ತಿತ್ವ ನಿರ್ಮಾಣ ಕಲೆ ಮತ್ತು ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆ ಅರ್ಥವಾಗುತ್ತದೆ. ಬಹುಶಃ ಬೇಕಾದಷ್ಟು ಪಠ್ಯಕ್ರಮ ಇರಬಹುದು. ಆದರೆ ಬದುಕಿನ ನೀತಿಪಾಠ, ಸುಂದರ ವ್ಯಕ್ತಿತ್ವ ನಿರ್ಮಾಣಕ್ಕೆಬೇಕಾದ ತಿಳುವಳಿಕೆ ಮತ್ತು ಮಾರ್ಗದರ್ಶನ ನೀಡುವ ಇಂಥಹ ಸರಳ ಸುಂದರ ನೀತಿಕಾವ್ಯ ಏಕಮೇವಾದ್ವಿತೀಯ ಅನ್ನಿಸುತ್ತದೆ.

೩೮. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ-ಶ್ಲೋ -134 ಪು.-520,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಪಾರಿವಾಳ ಮತ್ತು ಬೇಟೆಗಾರನ ಕಥೆಯನ್ನು ಹೇಳಿಮುಗಿಸಿದ್ದ ಕ್ರೂರಾಕ್ಷನು ಶರಣಾರ್ಥಿಗೆ ತನ್ನನ್ನೇ ಬಲಿಯಾಗಿತ್ತ ಪಾರಿವಾಳ ದಂಪತಿಯ ಮಹಾತ್ಯಾಗವನ್ನು ತಿಳಿಸಿದನು. ಇದನ್ನು ಕೇಳಿದ ಅರಿಮರ್ಧನನು ದೀಪ್ತಾಕ್ಷನನ್ನು ಕೇಳಿದನು ಹಾಗೂ ಆ ಪರಿಸ್ಥಿತಿಯನ್ನು ಕುರಿತು ಅವನ ಅಭಿಪ್ರಾಯವನ್ನು ಮತ್ತು ಸಲಹೆಯನ್ನು ಅಪೇಕ್ಷಿಸಿದನು. ದೀಪ್ತಾಕ್ಷ ಹೇಳುತ್ತಾನೆ. "ದೇವ, ಇವನನ್ನು (ಅಂದರೆ ಸ್ಥಿರಜೀವಿ ಕಾಗೆಯನ್ನು) ಕೊಲ್ಲಬಾರದು ಏಕೆಂದರೆ ಕಥೆಯೊಂದರಲ್ಲಿ ಈ ಮಾತು ಬರುತ್ತದೆ. ಯಾರು ನನ್ನನ್ನು ಯಾವಾಗಲೂ ಉದ್ವಿಗ್ನಗೊಳಿಸುತ್ತಾಳೋ ಅವಳು ಇಂದು ನನ್ನನ್ನು ಆಲಂಗಿಸಿಕೊಳ್ಳುತ್ತಿದ್ದಾಳೆ. ಎಲೈ ಮಂಗಳಕರನೇ ನನ್ನಲ್ಲಿರುವುದನ್ನೆಲ್ಲಾ ಅಪಹರಿಸು."

हर्त्तव्यं ते न पश्यामि हर्त्तव्यं चेद्भविष्यति ।

पुनरप्यागमिष्यामि यदीयं नावगूहते ॥[39]

ಅದನ್ನು ಕೇಳಿದ ಕಳ್ಳನು ನಿನ್ನ ಮನೆಯಲ್ಲಿ ಕದಿಯುವುದಕ್ಕೆ ಏನೂ ಇಲ್ಲ, ಇದ್ದಾಗ ಬರುವೆನು ಮತ್ತು ಅವಳು ನಿನ್ನನ್ನು ಆಲಂಗಿಸಿಕೊಳ್ಳದಿದ್ದರೆ ಬರುವೆನು. ಅರಿಮರ್ಧನನು 'ಅವಳು ಯಾರನ್ನು ಆಲಂಗಿಸಿಕೊಳ್ಳುವುದಿಲ್ಲ? ಯಾರವನು ಕಳ್ಳ? ಇದನ್ನು ವಿಸ್ತಾರವಾಗಿ ಕೇಳಬಯಸುವೆನು ಹೇಳು ಎಂದು ಕೇಳಲು ದೀಪ್ತಾಕ್ಷನು **ಕಳ್ಳ ಹಾಗೂ ವೃದ್ಧ ವ್ಯಾಪಾರಿಯ ವಧುವಿನ ಕಥೆ**ಯನ್ನು ಹೇಳುತ್ತಾನೆ.[40]

ಈ ಕಥೆಯಲ್ಲಿನ ಸಾರಾಂಶವು ವಯಸ್ಸಿಗೆ ಮೀರಿದ ಚಪಲ ಇರಬಾರದು. ತಲೆಯಲ್ಲಿ ಬಿಳಿಕೂದಲಿನ ಸ್ಥಾನವು ಮನುಷ್ಯನಿಗೆ ಅಪಮಾನದ ಸ್ಥಾನವಿದ್ದಂತೆ. ಎಲುಬಿನ ತುಂಡನ್ನು ಏರಿಸಿಟ್ಟಿರುವುದರಿಂದ ಅದು ಚಂಡಾಲನ ಬಾವಿಯೆಂದು ಹೇಗೆ ಜನರು ಅದನ್ನು ತ್ಯಜಿಸುವರೋ ಹಾಗೆ ಬಿಳಿಕೂದಲಿರುವವರನ್ನು ತರುಣಿಯರು ದೂರದಿಂದಲೇ ತ್ಯಜಿಸಿಬಿಡುವರು. ದೀಪ್ತಾಕ್ಷನು ಕಥೆಯನ್ನು ಮುಂದುವರಿಸುತ್ತಾ "ಉಪಕಾರವನ್ನು ಮಾಡುವವರು ಕಳ್ಳರಿಗೂ ಕೂಡ ಒಳಿತನ್ನು ನಿರೀಕ್ಷಿಸುತ್ತಾರೆ. ಇನ್ನು ಶರಣಾಗದವರ ಬಗ್ಗೆ ಹೇಳುವುದೇನು? ಅಲ್ಲದೆ ಕಾಗೆಗಳಿಂದ ಅವಮಾನಿತನಾದ ಇವನು(ಸ್ಥಿರಜೀವಿ) ನಮ್ಮ ಲಾಭಕ್ಕಾಗಿ ಒದಗುವವನು. ಕಾಗೆಗಳ ಬಲಹೀನತೆಯ ಬಗ್ಗೆ ಆತನಿಂದ ತಿಳಿಯುವುದಕ್ಕೆ ಹಾಗೂ ಇನ್ನಿತರ ಕಾರಣಗಳಿಂದ ಆತನನ್ನು ಕೊಲ್ಲಬಾರದು. ಇದನ್ನು ಕೇಳಿದ ಅರಿಮರ್ಧನನು ಸಚಿವನಾದ ವಕ್ರನಾಸನ ಸಲಹೆಯನ್ನು ಕೇಳಿದನು. ಇದಕ್ಕೆ ಅವನು ದೇವ, ಇವನನ್ನು ಕೊಲ್ಲಬಾರದು, ಏಕೆಂದರೆ, ಪರಸ್ಪರ ಕಚ್ಚಾಡುತ್ತಿರುವ

39. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ–187 ಪು–537,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

40. **ಭರತ ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತೃ.ತಂ. ಪು.–188,189. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–560004(2018)

ಶತ್ರುಗಳಿಂದ ನಮಗೆ ಲಾಭವೇ. ಕಳ್ಳನು ಪ್ರಾಣ ಕೊಟ್ಟನು ಮತ್ತು ರಾಕ್ಷಸನು ಜೋಡಿ ಹಸುವನ್ನು ಕೊಟ್ಟನು.

शात्रवोऽपि हितायैव विवदन्तः परस्परम् ।

चौरेण जीवितं दत्तं राक्षसेन तु गोयुगम् ॥[41]

ಇದನ್ನು ಕೇಳಿದ ಅರಿಮರ್ಧನನು ಅದು ಹೇಗೆಂದು ಕೇಳಲು ವಕ್ರನಾಸನು **ಬ್ರಾಹ್ಮಣ, ಕಳ್ಳ ಹಾಗೂ ಬ್ರಹ್ಮರಾಕ್ಷಸನ ಕಥೆ**ಯನ್ನು ಹೇಳಿದನು. ಈ ಕಥೆಯಲ್ಲಿ ಇಬ್ಬರಲ್ಲಿ ನಾ ಮೊದಲು ತಾ ಮೊದಲು ಎಂಬ ಕಲಹವುಂಟಾಗುತ್ತದೆ. ಆ ಶಬ್ದದಿಂದ ಬ್ರಾಹ್ಮಣನು ಎದ್ದನು. ಆಗ ಅವನಿಗೆ ಕಳ್ಳನು ಹೇಳಿದನು "ಬ್ರಾಹ್ಮಣನೇ ಈ ರಾಕ್ಷಸನು ನಿನ್ನನ್ನು ತಿನ್ನಲು ಬಯಸುತ್ತಿರುವನು" ರಾಕ್ಷಸನು "ಬ್ರಾಹ್ಮಣನೇ ಈ ಕಳ್ಳನು ಹಸುಗಳನ್ನು ಕದಿಯಲು ಬಂದಿರುವನು. ಇದನ್ನು ಕೇಳಿದ ಬ್ರಾಹ್ಮಣನು ಸಾವಧಾನವಾಗಿ ಇಷ್ಟದೇವತಾ ಮಂತ್ರಧ್ಯಾನದಿಂದ ತನ್ನನ್ನು ರಾಕ್ಷಸನಿಂದ ರಕ್ಷಿಸಿಕೊಂಡು, ಕೋಲಿನಿಂದ ಕಳ್ಳನನ್ನು ಹೊಡೆಯುವುದರ ಮೂಲಕ ಗೋವುಗಳನ್ನು ರಕ್ಷಿಸಿಕೊಂಡನು. ಕಥೆಯನ್ನು ಮುಗಿಸಿದ ವಕ್ರಸೇನನು ತನ್ನ ಮಾತನ್ನು ಸಮರ್ಥಿಸಿಕೊಂಡನು. ಅರಿಮರ್ಧನನು ಮತ್ತೆ ಪ್ರಾಕಾರಕರ್ಣನ ಅಭಿಪ್ರಾಯ ಕೇಳಿದನು "ಪ್ರಾಕಾರಕರ್ಣನು ಹೀಗೆ ಸಲಹೆ ಮಾಡುತ್ತಾನೆ-

परस्पर मर्माणि ये न रक्षन्ति जन्तवः ।

त एव निधनं यान्ति वाल्मीकोदरसर्पवत् ॥[42]

"ಇವನನ್ನು ಕೊಲ್ಲಬಾರದು, ಏಕೆಂದರೆ ರಕ್ಷಿಸಲ್ಪಟ್ಟ ಇವನೊಂದಿಗೆ ಪರಸ್ಪರ ಪ್ರೀತಿಯಿಂದ ಸುಖವಾಗಿ ಕಾಲವು ಕಳೆಯುತ್ತದೆ. ಪರಸ್ಪರ ರಹಸ್ಯಗಳನ್ನು ರಕ್ಷಿಸಿಕೊಳ್ಳದ ಜೀವಿಗಳು ಹುತ್ತದ ಬಿಲದಲ್ಲಿದ್ದ ಹಾವಿನಂತೆ ನಾಶವಾಗಿ ಹೋಗುವರು."

ಈ ರೀತಿಯಾಗಿ ಒಂದು ಪ್ರಸಂಗದೊಡನೆ, ಮತ್ತೊಂದಕ್ಕೆ ಉತ್ತಮ ಸಂಬಂಧ ಕಲ್ಪಿಸಿ, ಗುರುಗಳು ರಾಜಕುಮಾರರ ಆಸಕ್ತಿಯನ್ನು ಪ್ರೇರೇಪಿಸಿ, ಕುತೂಹಲದಿಂದ ಮುಂದಿನ ಪ್ರಸಂಗಕ್ಕೆ ಸಾಗುವಂತೆ ಕಥೆಗಳನ್ನು ಹೆಣೆದಿರುವುದೇ ಪಂಚತಂತ್ರದ ವಿಶಿಷ್ಟ ಲಕ್ಷಣವಾಗಿದೆ. ಅಲ್ಲಲ್ಲೇ ನೀತಿವಾಕ್ಯಗಳು, ಸುಭಾಷಿತಗಳು ನಾಣ್ಣುಡಿಗಳು, ತಿಳುವಳಿಕೆ ಹಾಗೂ ಜ್ಞಾನಾರ್ಜನೆಯ ಜೀವಸತ್ವಗಳನ್ನು ಸಂದರ್ಭೋಚಿತವಾಗಿ ಸಂಯೋಜನೆ ಮಾಡಿದ್ದಾರೆ. ಬದುಕಿನ ರೀತಿನೀತಿಗಳು, ಆಚಾರ ವಿಚಾರಗಳು ಇವನ್ನೆಲ್ಲಾ ಅನುಸರಿಸಿ, ಪುಣ್ಯವಿಶೇಷದಿಂದ ಅಪರೂಪವಾಗಿ ದೊರಕಿರುವ ಮಾನವ ಜನ್ಮವನ್ನು ಹೇಗೆ ಪಾವನಗೊಳಿಸಿಕೊಂಡು ಸಾರ್ಥಕ ಪಡಿಸಿಕೊಳ್ಳಬಹುದು

---

41. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ-ಶ್ಲೋ -190 ಪು.-541,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001
42. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ-ಶ್ಲೋ -191, ಪು-545,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಎಂಬ ಜಾಗೃತಿಯನ್ನು ಮೂಡಿಸಿ, ಪಂಚತಂತ್ರವು ಉತ್ತಮ ಶಿಕ್ಷಣವನ್ನು ಅವ್ಯಾಹತವಾಗಿ ಅಂದಿನಿಂದ ಇಂದಿನವರೆಗೂ ಒದಗಿಸುತ್ತಾ ಬಂದಿದೆ. ಎಳೆಯರಿಂದ ಹಿಡಿದು ಹಿರಿಯರವರೆಗೂ ಕೇಳುಗರಾಗಿ, ಓದುಗರಾಗಿ ಎಷ್ಟೆಷ್ಟು ಸೂಕ್ಷ್ಮವಾಗಿ ಗಮನಿಸಿ, ಆತ್ಮೀಯವಾಗಿ ಅಧ್ಯಯನ ನಡೆಸುವರೋ, ಅದಕ್ಕೆ ತಕ್ಕಂತೆ ಜ್ಞಾನವನ್ನೂ ಹಾಗೂ ಮಾರ್ಗದರ್ಶನವನ್ನೂ ಪಡೆಯುವರು.

ಪಂಚತಂತ್ರದ ಮೂರನೆಯ ತಂತ್ರದಲ್ಲಿ ಬರುವ "**ಹುತ್ತದಲ್ಲಿದ್ದ ಸರ್ಪದ ಕಥೆ**ಯನ್ನು ಹೇಳುತ್ತಾ, ಪ್ರಾಕಾರಕರ್ಣನು ಅನೇಕ ಸಲಹೆಗಳನ್ನು ನೀಡುತ್ತಾ ರಾಜನೈತಿಕ ತಿಳುವಳಿಕೆಯನ್ನು ರಾಜಕುಮಾರರಿಗೆ ತಿಳಿಸಿ ಅವರನ್ನು ಜಾಗೃತಗೊಳಿಸುತ್ತಾನೆ. ಗುಟ್ಟು ರಟ್ಟಾದರೆ ಲಾಭ ಯಾರಿಗೆ? ಪೂಜ್ಯನಾದವನನ್ನು ಪುರಸ್ಕರಿಸುವ ಬದಲಿಗೆ, ಅಪೂಜ್ಯನಾದವನನ್ನು ಹೊತ್ತು ತಿರುಗಿದರೆ ದುರ್ಭಿಕ್ಷ, ಮರಣ, ಭಯ ಈ ಮೂರು ಒದಗುವುದು. ಕಣ್ಣ ಮುಂದೆ ಅಪರಾಧ ನಡೆದರೂ ಮೂಢರು ಅದರಿಂದ ಕಲಿಯುವುದಿಲ್ಲ.

प्रत्यक्षोऽपि कृतो पापे मूर्खः साम्ना प्रशाम्यति ।

रथकारः स्वकां भार्या सजारां शिरसाऽवहत् ॥[43]

ಬಡಗಿಯು ಕುಲಟೆಯಾದ ತನ್ನ ಹೆಂಡತಿಯನ್ನು ತಲೆಯ ಮೇಲೆ ಹೊತ್ತಂತೆ. ಪ್ರತ್ಯಕ್ಷವಾಗಿ ಪಾಪವನ್ನು ಮಾಡಿದರೂ ಮೂರ್ಖನು ಸವಿನುಡಿಗಳಿಂದ ಶಾಂತನಾಗುತ್ತಾನೆ ಎಂದು ಮಂತ್ರಿಗಳಿಗೆ ಹೇಳಿ ರಕ್ತಾಕ್ಷನು **ಬಡಗಿಯ ಹೆಂಡತಿಯ ಕಥೆ** ಹೇಳುತ್ತಾನೆ. ಈ ಕಥೆಯಲ್ಲಿನ ನೀತಿ ಸುಲಭದಲ್ಲಿ ಮೋಸಹೋಗುವುದು–

सूर्य भर्त्तारमुत्सृज्य पर्जन्यं मारुतं गिरिम् ।

स्वजाति मूषिका प्राप्ता स्वजातिरर्दुरतिक्रमा ॥[44]

ಒಂದು ರೀತಿಯಲ್ಲಿ ಕವಿದ ಮೌಢ್ಯ. ಸೂರ್ಯ, ಮೇಘ, ವಾಯು, ಪರ್ವತ ಮುಂತಾದವುಗಳನ್ನು ಗಂಡನಾಗಿ ಪಡೆಯುವ ಅವಕಾಶವಿದ್ದರೂ, ಅವರನ್ನೆಲ್ಲ ತ್ಯಜಿಸಿ ಕೊನೆಗೆ ಇಲಿಯು ತನ್ನ ಸ್ವಜಾತಿಯವನನ್ನೇ ಗಂಡನನ್ನಾಗಿ ಪಡೆಯಿತು. ಸ್ವಜಾತಿಯನ್ನು ಬಿಡುವುದು ಸುಲಭವಲ್ಲ. ಮಂತ್ರಿಗಳು ಅದು ಹೇಗೆಂದು ಕೇಳಲು ರಕ್ತಾಕ್ಷನು **ಇಲಿಯ ಮದುವೆಯ ಕಥೆ**ಯನ್ನು ಹೇಳುವನು. ಈ ಕಥೆಯ ನೀತಿಯೆಂದರೆ, "ಹುಟ್ಟುಗುಣ ಘಟ್ಟ ಹತ್ತಿದರೂ ಹೋಗದು."ಗೋತ್ರ ಬದಲಾದ ಮಾತ್ರಕ್ಕೆ ಆಕಾರವಾಗಲೀ, ಗುಣವಾಗಲೀ ಬದಲಾಗಬೇಕೆಂದಿಲ್ಲ. ಹುಲಿಯನ್ನು ಹಸುವೆಂದು ಕರೆದಾಕ್ಷಣ ಅದು ಹಸುವಾಗದು.[45]

43. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ –193, ಪು–549,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
44. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ –199, ಪು–557,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
45. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತೃ.ತಂ. ಪು–165–168.(2015) ವರ್ಣಿಲ, 392/2–11, ಕಲ್ಯಾಣಿ ಗಾರ್ಡನ್, BSK 1st Stage, ಬೆಂಗಳೂರು–560050

ಕಥೆಯನ್ನು ಮುಗಿಸಿದ ರಕ್ತಾಕ್ಷನು ಮಂತ್ರಿಗಳಿಗೆ ಹಾಗೂ ರಾಜನಿಗೆ ಹೇಳಿದನು-" ಅಯ್ಯೋ, ನಿನ್ನ ಮಂತ್ರಿ ಜನರು ಮೂರ್ಖರು. ನೀನೂ ಕೂಡ ಹಾಗೆಯೇ ಎಂದು ತಿಳಿಯುತ್ತೇನೆ. ಒಂದು ಉಕ್ತಿ ಇದೆ-

पूर्वं तावदहं मूर्खो द्वितीयः पाशबन्धकः।

ततो राजा च मन्त्री च सर्वं वै मूर्खमण्डलम् ॥[46]

ಮೊದಲು ನಾನು ಮೂರ್ಖ, ಎರಡನೆಯದಾಗಿ ಬೇಡನು ಮೂರ್ಖನು, ಬಳಿಕ ರಾಜ ಮತ್ತು ಮಂತ್ರಿ ಮೂರ್ಖರು, ನಾವೆಲ್ಲರೂ ಮೂರ್ಖರ ಗುಂಪಿದ್ದಂತೆ." ಆಗ ಅವರೆಲ್ಲರೂ ಅದೇನೆಂದು ಕೇಳಲು ರಕ್ತಾಕ್ಷನು **'ಚಿನ್ನದ ಹಿಕ್ಕೆಯನ್ನು ಹಾಕುವ ಪಕ್ಷಿ, ರಾಜ ಮತ್ತು ಮಂತ್ರಿಯ ಕಥೆ'**ಯನ್ನು ಹೇಳಿದನು. ಈ ಕಥೆಯ ಅಂತ್ಯದಲ್ಲಿ ಒಂದು ಉಕ್ತಿ ಹೀಗಿದೆ:

अनागतं यः कुरुते स शोभते स शोच्यते यो न करोत्यनागतम् ।

वनेऽत्र संस्थस्य समागता जरा बिलस्य वाणी न कदाऽपि मे श्रुता ॥[47]

'ಆಪತ್ತು ಬರುವ ಮೊದಲೇ ಅದನ್ನು ಯೋಚಿಸಿ ಕಾರ್ಯ ಕೈಗೊಳ್ಳುವವನು ಪ್ರಶಂಸೆಗೆ ಒಳಗಾಗುತ್ತಾನೆ. ಹಾಗೆ ಮಾಡದವನ ಪರಿಸ್ಥಿತಿ ಶೋಚನೀಯವಾಗುತ್ತದೆ. ನನಗೆ ಈ ಕಾಡಿನಲ್ಲಿದ್ದು ಮುಪ್ಪು ಬಂತು ಆದರೆ ಬಿಲವು ಮಾತನಾಡುವುದನ್ನು ಎಂದೂ ಕೇಳಿಲ್ಲ. ಅನುಯಾಯಿಗಳು  ಅದೇನೆಂದು ಕೇಳಲು ರಕ್ತಾಕ್ಷನು ಸಿಂಹ, ನರಿ ಮತ್ತು ಗುಹೆಯಕಥೆಯನ್ನು ಹೇಳಿದನು. ಇದನ್ನು ತಿಳಿದುಕೊಂಡು ನೀವೆಲ್ಲರೂ ನನ್ನೊಂದಿಗೆ ಬನ್ನಿ ಎಂದು ಹೇಳಿ ತನ್ನ ಅನುಯಾಯಿ ಪರಿಜನರೊಂದಿಗೆ ರಕ್ತಾಕ್ಷನು ದೂರ ದೇಶಕ್ಕೆ ಹೋದನು. ಇವನು ಹೊರಟ ನಂತರ ಸ್ಥಿರಜೀವಿಯು ಸಂತೋಷಭರಿತನಾಗಿ ಚಿಂತಿಸಿದನು. ರಕ್ತಾಕ್ಷನು ಹೋಗಿದ್ದು ಬಹಳ ಒಳ್ಳೆಯದಾಯಿತು. ಅವನಾದರೋ ದೂರದರ್ಶಿ, ಇವರೆಲ್ಲರೂ ಮೂಢರು. ಇನ್ನು ಇವರನ್ನು ಸುಲಭವಾಗಿ ಕೊಲ್ಲಬಹುದು. ಏಕೆಂದರೆ ಕುರಕ್ರಮದಲ್ಲಿ ಬಂದ ದೂರದರ್ಶಿಗಳಾದ ಮಂತ್ರಿಗಳನ್ನುಳ್ಳ ರಾಜನು ನಿಶ್ಚಯವಾಗಿ ಬೇಗನೆ ವಿನಾಶ ಹೊಂದುವುದಿಲ್ಲ. ಒಳ್ಳೆಯ ನೀತಿಯನ್ನು ಬಿಟ್ಟು ಪ್ರತಿಕೂಲವಾದ ನೀತಿಯನ್ನು ಉಪದೇಶಿಸುವ ಮಂತ್ರಿಗಳು ನಿಜವಾಗಿಯೂ ರಾಜನ ಶತ್ರುಗಳಿದ್ದಂತೆ.

---

46. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ-ಶ್ಲೋ -212, ಪು-574,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001
47. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ-ಶ್ಲೋ - 213, ಪು-577.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಅಪಥ್ಯ ಭೋಜನ ಮಾಡುವ ಯಾರನ್ನು ತಾನೆ ರೋಗಗಳು ಕಾಡದಿರುತ್ತವೆ? ಯಾವ ದುರ್ಮಂತ್ರಿಗಳಿಗೆ ತಾನೆ ದುರ್ನೀತಿಯಿಂದುಂಟಾದ ದೋಷವು ತಟ್ಟುವುದಿಲ್ಲ? ಸಂಪತ್ತು ಯಾರಲ್ಲಿತಾನೆ ದರ್ಪವನ್ನು ಉಂಟುಮಾಡುವುದಿಲ್ಲ? ಮೃತ್ಯುವು ಯಾರಿಗೆ ತಾನೇ ಬಾರದಿರುವುದಿಲ್ಲ? ಸ್ತ್ರೀಸಂಬಂಧವಾದ ವಿಷಯಗಳು ಯಾರನ್ನು ತಾನೆ ಪೀಡಿಸುವುದಿಲ್ಲ? ಲೋಭಿಯ ಯಶಸ್ಸು ನಾಶವಾಗುತ್ತದೆ. ಹಾಗೆಯೇ ಕಪಟಿಯ ಮೈತ್ರಿ, ಕ್ರಿಯಾಹೀನನ ಕುಲ, ಧನವನ್ನೇ ಬಯಸುವವನ ಧರ್ಮ, ದುರ್ವ್ಯಸನಿಗಳ ವಿದ್ಯೆ, ಜಿಪುಣನ ಸುಖ ಮತ್ತು ದುಷ್ಟಮೈತ್ರಿಯುಳ್ಳ ರಾಜನ ರಾಜ್ಯವು ನಾಶವಾಗುತ್ತದೆ. ಹೀಗಿರುವುದರಿಂದ ಎಲೈ ರಾಜನೇ, ನಾನು ಕತ್ತಿಯ ಅಲಗಿನ ಮೇಲೆ ನಡೆದಂಥ ಕಾರ್ಯವನ್ನು ಮಾಡಿದೆ ಎಂದು ನೀನು ಹೇಳಿದ್ದು ಯತಾರ್ಥವಾದುದೇ.

अपमानं पुरस्कृत्य मानं कृत्वा तु पृष्ठतः ।

स्वार्थमभ्युद्धरेत् प्राज्ञः स्वार्थ भ्रंशो हि मूर्खता ॥

स्कन्धेनापि वहेच्छत्रुं कालमासाध्य बुद्धिमान् ।

महता कृष्णसर्पेण मण्डूका बहवो हताः ॥[48]

ಬುದ್ಧಿವಂತನು ಅಪಮಾನವನ್ನು ಪುರಸ್ಕರಿಸಿ, ತನ್ನ ಗೌರವ ಪ್ರತಿಷ್ಠೆಗಳನ್ನು ಕಡೆಗಣಿಸಿ ಸ್ವಾರ್ಥವನ್ನು ಸಾಧಿಸಿಕೊಳ್ಳಬೇಕು. ಸ್ವಾರ್ಥವನ್ನು ಬಿಡುವುದು ಮೂರ್ಖತನವೇ ಸರಿ.ಸಮಯ ಬಂದಾಗ ಬುದ್ಧಿವಂತನು ಶತ್ರುವನ್ನು ಹೆಗಲಮೇಲಾದರೂ ಹೊರಬೇಕು. **"ಕಾರ್ಯವಾಸಿ ಕತ್ತೆ ಕಾಲುಕಟ್ಟು"** ಎಂಬ ನಾಣ್ನುಡಿಯಂತೆ. ಹಾಗೆಯೇ ಕೃಷ್ಣಸರ್ಪವೊಂದು ಕಪ್ಪೆಗಳನ್ನು ಹೊತ್ತು ಅವುಗಳನ್ನು ನಾಶಮಾಡಿತು ಎಂದು ಹೇಳಿ **"ಕಪ್ಪೆ ಮತ್ತು ಕೃಷ್ಣಸರ್ಪ"**ದ ಕಥೆಯನ್ನು ಹೇಳಿದನು.[49]

ಇದರ ನೀತಿಯೆಂದರೆ, ವಿಶ್ವಾಸ ಮೂಡಿಸಿ ಶತ್ರುವನ್ನು ನಾಶಪಡಿಸುವುದು. ಪ್ರಕೃತಿ ಧರ್ಮದಂತೆ ಸರ್ಪವೊಂದು ಮುದಿಯಾಗಿತ್ತು. ನಿಶ್ಶಕ್ತಿಯಾದುದರಿಂದ ಮೊದಲಿನಂತೆ ಆಹಾರ ಗಳಿಸಲಾರದೆ ಚಿಂತೆಯಿಂದ ಕೂಡಿತ್ತು. ಹೊಟ್ಟೆ ತುಂಬಿಸುವುದಕ್ಕಾಗಿಯೇ ಅಭಿಮಾನ, ನಾಚಿಕೆ, ಸದ್ಗುಣಗಳು – ಕೊನೆಗೆ ಎಲ್ಲವನ್ನೂ ತ್ಯಜಿಸಬೇಕಾಗುತ್ತದೆ. ಹೊಟ್ಟೆಯಿಂದಾಗಿಯೇ ಕೆಟ್ಟೆನೆಂದು ಮಾನಮರ್ಯಾದೆಗಳ ಬಿಡಲಾರೆನೆಂದಿದ್ದರೆ ಹಸಿವಿನಿಂದ ಪ್ರಾಣಬಿಡಬೇಕಾಗುವುದು. ಯಾರಿಗೂ ತಲೆಬಾಗೆನೆಂದರೆ ಹೊಟ್ಟೆ ಕೇಳದು. ಆದ್ದರಿಂದ

---

48. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ–234,ಪು–594.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
49. **ಭರತ ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತೃ.ತಂ. ಪು.– 208–210. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ, 44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–560004

ಉದರಂಭರಣಕ್ಕಾಗಿ ಮಾರ್ಗೋಪಾಯಗಳನ್ನು ಯೋಚಿಸಿತು. ಮಂದ ವಿಷಸರ್ಪವು ಕಪ್ಪೆಗಳನ್ನೆಲ್ಲಾ ಸಂತೋಷಗೊಳಿಸಲು ಅನೇಕ ರೀತಿಯ ನಡೆಗಳನ್ನು ಪ್ರದರ್ಶಿಸಿತು. ಸರ್ಪದ ಅಂಗಸ್ಪರ್ಶದ ಸುಖವನ್ನು ಕಪ್ಪೆಗಳ ರಾಜ ಜಾಲಪಾದನಿಗೆ ಪರಿಚಯಿಸಿತು. ಆಗ ಜಾಲಪಾದ ಹೇಳಿತು–"ಮಂದವಿಷ ಸರ್ಪದ ಮೇಲೆ ಕುಳಿತು ಹೋಗುವ ಸುಖವು ಆನೆ, ಕುದುರೆ, ರಥ, ಪಲ್ಲಕ್ಕಿ ಅಥವಾ ನೌಕೆಯಲ್ಲಿ ಕುಳಿತು ಹೋಗುವ ಸುಖಕ್ಕಿಂತ ಹೆಚ್ಚು" ಹೀಗೆ ಉಪಾಯದಿಂದ ಒಳ್ಳೆಯ ವಿಶ್ವಾಸ ಹಾಗೂ ನಂಬಿಕೆಯನ್ನು ಮೂಡಿಸಿ ಮುಂದಿನ ಕೆಲಸ ಆರಂಭಿಸಿತು. ಮೊದಲು ಚಿಕ್ಕಪುಟ್ಟ ಕಪ್ಪೆಗಳನ್ನು ತಿಂದು ಮುಗಿಸಿತು. ನಂತರದಲ್ಲಿ ಒಂದಷ್ಟು ಶಕ್ತಿ ಬಂದು ನಿಶ್ಶಕ್ತಿ ಕಡಿಮೆಯಾಯಿತು. ಹಾರಿ ಹಾರಿ ಓಡಿ ತಪ್ಪಿಸಿಕೊಳ್ಳುವ ದೊಡ್ಡ ದೊಡ್ಡ ಕಪ್ಪೆಗಳನ್ನು ಹಿಡಿದು ನುಂಗುವುದಕ್ಕೆ ಪ್ರಾರಂಭ ಮಾಡಿತು. ಕಾಣಕಾಣುತ್ತಿದ್ದಂತೆ ಸರೋವರದ ಕಪ್ಪೆಗಳೆಲ್ಲಾ ಬರಿದಾಗುತ್ತಾ ಬಂದಿತು. ಒಮ್ಮೆ ಬೇರೊಂದು ದೊಡ್ಡ ಕೃಷ್ಣ ಸರ್ಪವು ಆ ಪ್ರದೇಶಕ್ಕೆ ಬಂದಿತು. ಕಪ್ಪೆಗಳನ್ನು ಹೊತ್ತು ತಿರುಗುವ ಮಂದವಿಷವನ್ನು ನೋಡಿ ಆಶ್ಚರ್ಯಗೊಂಡು ಹೇಳಿತು– "ಮಿತ್ರ, ನಮ್ಮ ಆಹಾರವಾದ ಕಪ್ಪೆಗಳನ್ನು ಏಕೆ ಹೊರುತ್ತಿರುವೆ? ಇದು ಸರಿಯಲ್ಲ." ಆಗ ಮಂದವಿಷ ಹೀಗೆ ಉತ್ತರಿಸಿತು."

सर्वमेतद्विजानामि यथा वाह्योऽस्मि दर्दुरैः।

किञ्चित् कालं प्रतीक्ष्योऽहं घृतान्धो ब्राह्मणो यथा ॥[50]

ಕಪ್ಪೆಗಳಿಂದ ವಾಹನವನ್ನಾಗಿ ಮಾಡಲ್ಪಟ್ಟಿದ್ದೇನೆಂದು ನಾನು ಚೆನ್ನಾಗಿ ಬಲ್ಲೆ. ಆದರೆ **ತುಪ್ಪದಿಂದ ಕುರುಡನಾದ ಬ್ರಾಹ್ಮಣನ ಕಥೆ**ಯನ್ನು ಕೃಷ್ಣಸರ್ಪವು ಹೇಳಿತು. ನಂತರ ಹಾವು ಇನ್ನೊಂದು ಕೊಳವನ್ನರಸಿ ಹೊರಟಿತು. ಹೀಗೆ ರಾಜನೇ, ಈ ಕಥೆಯು ನನಗೆ ಗೊತ್ತಿದ್ದುದರಿಂದ, ಇದರಂತೆ ಶತ್ರುಗಳನ್ನು. ನಾಶಪಡಿಸುವ ಏಕೈಕ ಗುರಿಯನ್ನಿರಿಸಿಕೊಂಡು ಅವರು ಹೇಳಿದಂತೆ ಕೇಳಿ ಅವರಿಗೆ ವಿಶ್ವಾಸ ಹುಟ್ಟುವಂತೆ ಮಾಡಿದೆ. ಬಿಲ್ಗಾರ ಬಿಟ್ಟ ಬಾಣವು ಗುರಿ ಸೇರುತ್ತದೋ ಇಲ್ಲವೋ ಗೊತ್ತಿಲ್ಲ ಆದರೆ ಬುದ್ಧಿವಂತರ ಜಾಣತನವು ಸಂದರ್ಭ ಒದಗಿದಾಗ ಅರಸು ಸಮೇತ ಇಡೀ ರಾಜ್ಯವನ್ನೇ ನಾಶಗೊಳಿಸುತ್ತದೆ ಎಂಬುದಕ್ಕೆ ಸಾಕ್ಷಿ ಘೂಕಕುಲ ಸಂಹಾರ ಎಂದು ಹೇಳಿತು ಸ್ಥಿರಜೀವಿ.[51]

ಮುಂದೆ ಸ್ಥಿರಜೀವಿಯು ಮೇಘವರ್ಣನಿಗೆ ರಾಜನೀತಿಯ ಉಪದೇಶಮಾಡುತ್ತಾನೆ. "ದೇವ, ಆರಂಭಿಸಿದ

---

೫೦. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ– 237, ಪು–598.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

51. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತೃ.ತಂ. ಪು.–169–170.(2015) ವರ್ನಿಲ, 392/2–11, ಕಲ್ಯಾಣಿ ಗಾರ್ಡನ್, BSK 1st Stage, ಬೆಂಗಳೂರು–560050

ನಿನ್ನ ಎಲ್ಲಾ ಕೆಲಸಗಳೂ ಸಿದ್ಧಿಸಿರುವುದರಿಂದ ನೀನೇ ಭಾಗ್ಯವಂತ. ಕೇವಲ ಶೌರ್ಯದಿಂದ ಮಾತ್ರ ಕೆಲಸವು ಸಿದ್ಧಿಸುವುದಿಲ್ಲ. ಬದಲಾಗಿ ಬುದ್ಧಿಯಿಂದ ಕೈಗೊಂಡ ಕೆಲಸವು ಫಲಿಸುತ್ತದೆ. ನೀತಿ, ತ್ಯಾಗ ಹಾಗೂ ಶೌರ್ಯದಿಂದ ಕೂಡಿದ ಮನುಷ್ಯನಿಗೆ ರಾಜ್ಯವು ಲಭ್ಯವಾಗುತ್ತದೆ. ತ್ಯಾಗಿಗಳ, ವೀರರ ಹಾಗೂ ವಿದ್ವಾಂಸರ ಸಂಪರ್ಕದಲ್ಲಿ ಆಸಕ್ತಿಯಿರುವವರಿಗೆ ಗುಣವಂತಿಕೆ ಲಭಿಸುತ್ತದೆ. ಗುಣವಂತನಿಗೆ ಧನಲಾಭವಾಗುತ್ತದೆ. ಧನದಿಂದ ಸಂಪತ್ತು, ಸಂಪತ್ತಿನಿಂದ ಆಜ್ಞಾಪಿಸುವ ಪ್ರಬುದ್ಧತೆ ಮತ್ತು ಆಜ್ಞಾಗುಣದಿಂದ ರಾಜ್ಯವು ಪ್ರಾಪ್ತವಾಗುತ್ತದೆ. ಯಾವ ರಾಜನಿಗೆ ಗುಣಗಳಲ್ಲಿ ಅನುರಾಗವಿದೆಯೋ, ವ್ಯಸನಗಳಲ್ಲಿ ಅನಾದರವಿದೆಯೋ ಮತ್ತು ಒಳ್ಳೆಯ ಸೇವಕರಲ್ಲಿ ಪ್ರೀತಿ ಇದೆಯೋ, ಅವನು ಬೀಸುತ್ತಿರುವ ಚಾಮರವನ್ನೇ ವಸ್ತುವನ್ನಾಗುಳ್ಳ ಹಾಗೂ ಶ್ವೇತಛತ್ರವನ್ನೇ ಆಭರಣವಾಗುಳ್ಳ ರಾಜಶ್ರೀಯನ್ನು ಚಿರಕಾಲ ಅನುಭವಿಸುತ್ತಾನೆ. ರಾಜ್ಯವು ದಕ್ಕಿತೆಂದು ಐಶ್ವರ್ಯಮದದಿಂದ ನೀನು ವ್ಯವಹರಿಸಬಾರದು. ರಾಜನ ಸಂಪತ್ತು ಚಂಚಲವಾಗಿರುತ್ತದೆ. ರಾಜ್ಯಲಕ್ಷ್ಮಿಯನ್ನು ಪಡೆಯುವುದು ಬಿದಿರನ್ನು ಏರುವಂತೆ ಬಹಳ ಕಷ್ಟದ ಕೆಲಸ. ಬಿದಿರಿನಿಂದ ಜಾರುವಂತೆ ಯಾವಾಗ ಬೇಕಾದರೂ ಕಳೆದು ಹೋಗಬಹುದು. ರಾಜ್ಯಾಭಿಷೇಕವಾದ ಕೂಡಲೇ ಬುದ್ಧಿಯು ವಿಪತ್ತುಗಳ ಬಗ್ಗೆ ಚಿಂತಿಸಲಾರಂಭಿಸಬೇಕು. ರಾಜ್ಯಾಭಿಷೇಕದಲ್ಲಿ ಅಭಿಷೇಕ ಮಾಡುವ ಮಡಕೆಯು ಕೇವಲ ನೀರನ್ನು ಮಾತ್ರವಲ್ಲದೆ ಆಪತ್ತುಗಳನ್ನು ಕೂಡ ತಂದೊಡ್ಡುವುದು. ಆಪತ್ತುಗಳಿಗೆ ತಲುಪಲಾರದ ಜಾಗ ಎಂದು ಯಾವುದು ಕೂಡ ಇಲ್ಲ. ರಾಮನ ವನವಾಸ, ಬಲಿಯ ಬಂಧನ, ಪಾಂಡುಸುತರ ವನವಾಸ, ಯದುಗಳ ಪರಸ್ಪರ ಯುದ್ಧದಿಂದ ಮರಣ, ನಳರಾಜನ ರಾಜ್ಯ ನಿರ್ಗಮನ, ಬೃಹನ್ನಳೆಯಾದ ಅರ್ಜುನನ ನಾಟ್ಯಶಿಕ್ಷಣ, ಲಂಕೇಶ್ವರ ರಾವಣನ ಪತನ, ಇವೆಲ್ಲವನ್ನೂ ಯೋಚಿಸಿದರೆ ಎಲ್ಲವೂ ಕಾಲದ ಪ್ರಭಾವದಿಂದ ಉಂಟಾಗುತ್ತದೆ ಎಂದು ಸ್ಪಷ್ಟವಾಗುತ್ತದೆ. ಹೀಗಿರುವಾಗ ಯಾರು ಯಾರನ್ನು ತಾನೆ ರಕ್ಷಿಸಬಲ್ಲರು? ಇಂದ್ರನ ಸ್ನೇಹಿತನಾಗಿ ಸ್ವರ್ಗಕ್ಕೆ ಹೋದ ದಶರಥ ಇಂದು ಎಲ್ಲಿಗೆ ಹೋದ? ಸಾಗರದ ಸೀಮೆಯನ್ನು ನಿರ್ಧರಿಸಿದ ಸಗರ ಚಕ್ರವರ್ತಿ ಎಲ್ಲಿಗೆ ಹೋದ? ಅಂಗೈನಿಂದ ಹುಟ್ಟಿದ ವೈನ್ಯ(ಪೃಥು) ಎಲ್ಲಿಗೆ ಹೋದ? ಸೂರ್ಯನ ಮಗನಾದ ಮನು ಎಲ್ಲಿಗೆ ಹೋದ? ಇವರೆಲ್ಲರೂ ನಿಶ್ಚಯವಾಗಿ ಕಾಲಪುರುಷನ ಪ್ರಭಾವದಿಂದಲೇ ಉನ್ನತರಾಗಿ ಕಾಲದಿಂದಲೇ ಮೃತ್ಯುವಶವಾದರು. [52]

---

**52. ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತೃ.ತಂ. ಪು.-214-217.ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ,44/1,ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು-560004(2018)

मान्धाता क्व गतस्त्रिलोकविजयी राजा क्व सत्यव्रतः

देवानां नृपतिर्गतः क्व नहुषः सच्छास्त्रवान् केशवः।

मन्यन्ते सरथाः सकुञ्जरवराः शक्रासनाध्यासिनः

कालेनैव महात्मना त्वनुकृता कालेन निर्वासिताः॥[53]

ತ್ರಿಲೋಕ ವಿಜಯಿಯಾದ ಮಾಂಧಾತನು ಎಲ್ಲಿ ಹೋದ? ಸತ್ಯವ್ರತನೆಲ್ಲಿ? ದೇವತೆಗಳ ರಾಜ ನಹುಷನೆಲ್ಲಿ? ಉತ್ತಮ ಶಾಸ್ತ್ರ ಕೋವಿದನಾದ ಕೇಶವನು ಎಲ್ಲಿಗೆ ಹೋದ? ಇವರೆಲ್ಲರನ್ನೂ ರಥ ಆನೆಗಳೊಂದಿಗೆ ಇಂದ್ರನ ಆಸನವನ್ನೇರುವ ಯೋಗ್ಯರನ್ನಾಗಿ ಮಾಡಿದ್ದು, ಮಹಾತ್ಮನಾದ ಕಾಲ ಹಾಗೂ ಕಾಲನೇ ಎಲ್ಲರನ್ನೂ ನಾಶಮಾಡಿದನು.- ಅಲ್ಲದೆ ಆ ರಾಜ, ಆ ಸಚಿವರು, ಆ ಸುಂದರ ಸ್ತ್ರೀಯರು, ಆ ವನಗಳು, ಉಪವನಗಳು ಎಲ್ಲಿ ಹೋಗಿಬಿಟ್ಟವು? ಅವೆಲ್ಲವನ್ನೂ ಕಾಲನೇ ಸೃಷ್ಟಿಸಿ, ಕಾಲನೇ ನಷ್ಟ ಮಾಡಿದನು. ಆದ್ದರಿಂದ ಮತ್ತಗಜದ ಕಿವಿಯಂತೆ ಚಂಚಲವಾದ ರಾಜ್ಯಲಕ್ಷ್ಮಿಯನ್ನು ನ್ಯಾಯನಿಷ್ಠೆಯಿಂದ ಕೂಡಿದವನಾಗಿ ಅನುಭವಿಸು, ಹೀಗೆ ಹೇಳುತ್ತಾ ಇಡೀ ರಾಜನೀತಿಯ ಸರ್ವಸ್ವವನ್ನೂ ಎಳೆ ಎಳೆಯಾಗಿ ಬಿಡಿಸಿ, ರಾಜನೀತಿ ಶಿಕ್ಷಣವನ್ನು ಸರಳವಾಗಿ ಆಸಕ್ತಿಯುತ ಕಥೆಗಳ ಮೂಲಕ ವಿಷ್ಣುಶರ್ಮರು ಬಹಳ ಅಚ್ಚುಕಟ್ಟಾಗಿ ರಾಜಕುಮಾರರಿಗೆ ಮನದಟ್ಟು ಮಾಡಿದ್ದಾರೆ.

असहायः समर्थोऽपि तेजस्वी किं करिष्यति ।

निर्वाते ज्वलितो वह्निः स्वयमेव प्रशाम्यति ॥[54]

ಸಮರ್ಥನಾಗಿದ್ದರೂ ಒಬ್ಬ ತೇಜಸ್ವಿಯು ಸಹಾಯವಿಲ್ಲದಿದ್ದರೆ ಏನನ್ನು ತಾನೆ ಮಾಡಬಲ್ಲ? ಉರಿಯುವ ಬೆಂಕಿ ಗಾಳಿಯ ಸಹಾಯವಿಲ್ಲದಿದ್ದಾಗ ತಾನಾಗಿಯೇ ಆರಿಹೋಗುತ್ತದೆ. ಒಬ್ಬ ರಾಜನಾದವನು ಇಂತಹ ವಿಚಾರಗಳನ್ನು ತಿಳಿದಿರಬೇಕು. ಹೀಗೆಯೆ ಮತ್ತೊಂದು ತಿಳುವಳಿಕೆ ಮಾತು ಹೀಗೆ ಹೇಳುತ್ತದೆ.

अपन्नाशाय विबुधैः कर्तव्या सुहृदोऽमलाः ।

न तरत्यापदं कश्चिद्योऽत्र मित्रविवर्जितः ॥[55]

---

53. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ-ಶ್ಲೋ - 255, ಪು-615..(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001
54. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ,ಕಾಕೋಲೂಕೀಯ- ಶ್ಲೋ-56, ಪು-459 (1963) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001
55. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಸಂಪ್ರಾಪ್ತಿ- ಶ್ಲೋ-178, ಪು-420, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ತಮ್ಮ ಕಷ್ಟಗಳ ಪರಿಹಾರಕ್ಕಾಗಿ ತಿಳಿದವರು ಒಳ್ಳೆಯ ಸ್ನೇಹಿತರನ್ನು ಮಾಡಿಕೊಳ್ಳಬೇಕು. ಯಾರಿಗೆ ಸ್ನೇಹಿತರೇ ಇಲ್ಲವೋ ಅಂಥವನು ಯಾರೂ ಕಷ್ಟದಿಂದ ಪಾರಾಗಲಾರನು.

ಒಳ್ಳೆಯ ತಿಳುವಳಿಕೆ, ಬುದ್ಧಿವಂತಿಕೆ, ಸಮಯೋಚಿತ ಪ್ರಜ್ಞೆ, ಮೂರ್ಖತನದ ಪರಮಾವಧಿ ಅದರ ಪರಿಣಾಮ ಸಹವಾಸ ದೋಷದಿಂದುಂಟಾಗುವ ಅನಾಹುತಗಳು, ಬುದ್ಧಿಯ ವಿಪತ್ತುಗಳು, ಐಶ್ವರ್ಯದ ಮದದಿಂದ ವ್ಯವಹರಿಸಿದುದರ ಪರಿಣಾಮ, ಕಾರ್ಯಸಾಧನೆಯಲ್ಲಿ ಸಮಯ ಕಾಯಬೇಕು ಇತ್ಯಾದಿ ಅನೇಕ ಜಾಗೃತ ಅಂಶಗಳನ್ನು ಬಹಳ ವ್ಯವಸ್ಥಿತವಾಗಿ, ಮನೋವೈಜ್ಞಾನಿಕ ಹಾಗೂ ಅರ್ಥಪೂರ್ಣವಾಗಿ ಪಂಚತಂತ್ರ ಕಥೆಗಳಲ್ಲಿ ಅಡಕಗೊಳಿಸಲಾಗಿದೆ. ಅಂದಿಗೂ, ಇಂದಿಗೂ, ಎಂದೆಂದಿಗೂ ಬಹಳ ಸೂಕ್ತವಾದ ನೀತಿಪಾಠ ಇದರಲ್ಲಿ ಅಡಗಿದೆ. ಮಧ್ಯೆ ಮಧ್ಯೆ ಅನೇಕ ಉತ್ತಮ ವಿಚಾರ ಪ್ರಚೋದಕ ಪ್ರಶ್ನೆಗಳನ್ನು ಕೇಳಿ, ಆಲೋಚನೆಗೆ ಅವಕಾಶ ಮಾಡಿಕೊಡುವ ಕ್ರಮ ಶೈಕ್ಷಣಿಕ ಮನೋವಿಜ್ಞಾನದಲ್ಲಿ ಕಂಡುಬರುವ ಕ್ರಮವಾಗಿದೆ. ಇದರಿಂದ ವ್ಯಕ್ತಿಯ ವೈಯುಕ್ತಿಕ ಮೌಲ್ಯಮಾಪನ, ದೋಷಗಳನ್ನು ಪತ್ತೆಹಚ್ಚುವಿಕೆ, ಅವುಗಳನ್ನು ಸರಿಪಡಿಸುವಿಕೆ , ಉತ್ತಮ ಅಭಿಪ್ರಾಯಗಳಿಗೆ ಉನ್ನತ ಆಲೋಚನೆಗೆ ಪುರಸ್ಕಾರ – ಇದು ನಿಜಕ್ಕೂ ಒಂದು ವಿಶಿಷ್ಟ ಮಾದರಿಯ ಸರಳ ಹಾಗೂ ಪರಿಣಾಮಕಾರಿ ಬೋಧನಾ ಕ್ರಮವಾಗಿದೆ. ಸೂಕ್ತ ಕಥಾಪ್ರಸಂಗಗಳಲ್ಲಿ ಅನೇಕತೆಗಳಲ್ಲಿ ಏಕತೆಯಿಂದ ಕೂಡಿರುವ ಬದುಕಿನ ಮಂತ್ರಗಳನ್ನು ಪಂಚತಂತ್ರ ಕೃತಿರತ್ನದ ಮೂಲಕ ನೀತಿ ಶಿಕ್ಷಣ ಮತ್ತು ವ್ಯಕ್ತಿತ್ವ ನಿರ್ಮಾಣ ಕುಶಲತೆಯನ್ನು ಸಮರ್ಥವಾಗಿ ಪ್ರತಿಬಿಂಬಿಸಲಾಗಿದೆ. ಬಡತನಕ್ಕೆ ಸ್ನೇಹಿತರು ಸಿಗುವುದೂ ದುರ್ಲಭ ಎಂದು ಒಂದು ಶ್ಲೋಕವು ಒಳ್ಳೆಯ ತಿಳುವಳಿಕೆಯನ್ನು ಸರಳ ಉದಾಹರಣೆ ಮೂಲಕ ಮೂಡಿಸುತ್ತದೆ.

वनानि दहतो वह्नेः सखी भवति मारुतः ।

स एव दीपनाशाय कृशे कस्यास्ति सौहृदम् ॥[56]

ಅಂದರೆ, ಕಾಡುಗಳನ್ನು ದಹಿಸುವ ಕಿಚ್ಚಿಗೆ ಗಾಳಿಯು ಸ್ನೇಹಿತನಾಗುತ್ತಾನೆ. ಆ ಗಾಳಿಯೇ ದೀಪವನ್ನಾರಿಸುತ್ತಾನೆ. ಬಡವರಲ್ಲಿ ಯಾರಿಗೆ ತಾನೇ ಸ್ನೇಹವಿರುತ್ತದೆ? ಬಡತನದ ಪರಿಣಾಮಗಳನ್ನು ಅನುಭವಿಸುವುದು ಬಹಳ ಕಷ್ಟ.



56. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಾಕೋಲೂಕೀಯ, ಶ್ಲೋ–58,ಪು–460, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

## ಅಧ್ಯಾಯ – 7–

# ಜೀವನ ಶಿಕ್ಷಣ

## 7–1– ಜೀವನ–ಶಿಕ್ಷಣ–ಉತ್ತಮ ಬದುಕಿಗೆ ಬೇಕಾದ ನೀತಿಬೋಧೆಗಳು

ಹಿಂದಿನ ಕಾಲದಲ್ಲಿ ಪ್ರಚಲಿತದಲ್ಲಿದ್ದ ಗುರುಕುಲ ಮಾದರಿಯ ಪಾಠಶಾಲೆಗಳು ಕೇವಲ ಬೌದ್ಧಿಕ ಜ್ಞಾನಾರ್ಜನೆ ಕೇಂದ್ರವಾಗಿರದೆ, ಸಂಸ್ಕಾರ, ಮೌಲ್ಯಾಧಾರಿತ ಕೌಶಲವನ್ನೊದಗಿಸುವ ಜೀವನ ಕೌಶಲವನ್ನು ಕಲಿಸಿ ಆರೋಗ್ಯಕರ ಜೀವನಕ್ಕೆ ಸನ್ನದ್ಧಗೊಳಿಸುವ ಕೇಂದ್ರವೂ ಆಗಿ ಕಾರ್ಯ ನಿರ್ವಹಿಸುತ್ತಿದ್ದವು. ಅಂತಹ ಶಿಕ್ಷಣ ಕ್ರಮದಲ್ಲಿ ವಿದ್ಯಾರ್ಥಿಯ ಮಾನಸಿಕ, ದೈಹಿಕ, ಸಾಮಾಜಿಕ, ಆರ್ಥಿಕ, ಪ್ರಾಪಂಚಿಕ ಮತ್ತು ಬೌದ್ಧಿಕ ಸಾಮರ್ಥ್ಯವನ್ನು ವಿಕಾಸಗೊಳಿಸುವ ಕಾಯಕವು ನಡೆಯುತ್ತಿತ್ತು. ಆದರೆ ಆಧುನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಜೀವನ ಕಲಿಕೆಗೆ ಸ್ಥಾನವೇ ಇಲ್ಲವಾಗಿದೆ. ಶಿಕ್ಷಣ ಕೇವಲ ವ್ಯಾವಹಾರಿಕವಾಗಿ ನಡೆಯುವ ಪ್ರಕ್ರಿಯೆಯಾಗಿ ಬದಲಾಗಿದೆ. ಗುಣಾತ್ಮಕ ಶಿಕ್ಷಣವನ್ನೊದಗಿಸುವುದು ಶಾಲೆಗಳ ಅಥವಾ ಶೈಕ್ಷಣಿಕ ಕೇಂದ್ರಗಳ ಮುಖ್ಯ ಉದ್ದೇಶವು ನಿಜವಾಗಿದ್ದರೂ, ಗುಣಾತ್ಮಕ ಶಿಕ್ಷಣವೆಂದರೆ ಕೇವಲ ಶಾಲಾ ಹೊರಾಂಗಣ ಮತ್ತು ಒಳಾಂಗಣ ಸೌಲಭ್ಯವಷ್ಟೇ ಆಗಿರದೆ, ಜೀವನ ಮೌಲ್ಯವನ್ನು ಬಳಸಿ ಮಗುವನ್ನು ಪರಿಪೂರ್ಣ ವ್ಯಕ್ತಿಯನ್ನಾಗಿ ಸಮಾಜಕ್ಕೆ ಪರಿಚಯಿಸುವ ಪರಿಕಲ್ಪನೆಯಾಗಿದೆ. ಇದರ ಪರಿಕಲ್ಪನೆಯನ್ನು ವಿಷ್ಣುಶರ್ಮರ ಪಂಚತಂತ್ರದ ಕಾಲದಲ್ಲೇ ಕಾಣುತ್ತೇವೆ. ಇತ್ತೀಚಿನ ದಿನಗಳಲ್ಲಿ ಇದರ ಮಹತ್ವ ತಿಳಿದು, 2020ರ ಹೊಸ ಶಿಕ್ಷಣ ನೀತಿಯಲ್ಲಿ, ಈ ಪರಿಕಲ್ಪನೆಗೆ ವಿಶೇಷ ಒತ್ತನ್ನು ನೀಡಿ, ನಮ್ಮ ಕೇಂದ್ರ ಸರ್ಕಾರ ಜಾರಿಗೆ ತಂದಿರುವುದು ತುಂಬಾ ಹೆಮ್ಮೆಯ ವಿಷಯವಾಗಿದೆ. ಕೇವಲ ವಿದ್ಯೆಯಷ್ಟೇ ನಮ್ಮನ್ನು ಯಶಸ್ಸಿನೆಡೆಗೆ ಕರೆದೊಯ್ಯುವುದೆಂಬುದು ಸರಿಯಲ್ಲ. ಜೀವನ ಕೌಶಲಗಳು, ಜೀವನ ಮೌಲ್ಯಗಳು ಪ್ರತಿಯೊಬ್ಬ ವ್ಯಕ್ತಿಯ ಬದುಕಿನ ಅಂಗವಾದರೆ ಮಾತ್ರ ಆತ ಆರೋಗ್ಯಕರ ವ್ಯಕ್ತಿತ್ವವನ್ನೊಳಗೊಂಡು ಆರೋಗ್ಯಕರ ಸಮಾಜದ ನಿರ್ಮಾಣಕ್ಕೆ ಕಾರಣನಾಗುತ್ತಾನೆ ಮತ್ತು ತನ್ನ ಜೀವನದಲ್ಲೂ ಯಶಸ್ಸನ್ನು ಪಡೆಯುತ್ತಾನೆ. ಬದುಕಿನ ವ್ಯವಹಾರ ಚಾತುರ್ಯ ಹೇಗಿರಬೇಕೆಂದು ಇಲ್ಲಿ ಕವಿ ತಿಳಿಸಿದ್ದಾನೆ :–

दाक्षिण्यं स्वजने दया परजने शाठ्यं सदा दुर्जने
प्रीतिः साधुजने नयो नृपजने विद्वज्जने चार्जवम् ।
शौर्यं शत्रुजने क्षमा गुरुजने कान्ताजने धूर्तता
ये चैवं पुरुषाः कलासु कुशलास्तेष्वेव लोकस्थितिः ॥[1]

ಅಂದರೆ, ತಮ್ಮವರಲ್ಲಿ ಔದಾರ್ಯ, ಸೇವಕರಲ್ಲಿ ಕರುಣೆ, ದುರ್ಜನರಲ್ಲಿ ಒರಟುತನ, ಸಜ್ಜನರಲ್ಲಿ ಪ್ರೀತಿ,

---

1. **ಭರ್ತೃಹರಿಯ ನೀತಿಶತಕ ವಿದ್ವತ್ ಪದ್ಧತಿ** –ಶ್ಲೋ–22

ಅರಸರಲ್ಲಿ ನಯದಿಂದ ಕೂಡಿದ ವ್ಯವಹಾರ, ವಿದ್ವಾಂಸರಲ್ಲಿ ಕಲಿಯುವ ಮನೋಭಾವ, ಶತ್ರುಗಳಲ್ಲಿ ಶೂರತನ, ಹಿರಿಯರಲ್ಲಿ ಕ್ಷಮೆ, ಸ್ತ್ರೀಯರಲ್ಲಿ ದಿಟ್ಟತನಗಳು ವ್ಯವಹಾರ ಚತುರರಾದ ಕುಶಲರಾದವರಲ್ಲಿ ಸಹಜವಾಗಿಯೇ ಇರುತ್ತದೆ. ಇಂತಹವರು ಜೀವನದಲ್ಲಿ ಯಶಸ್ಸನ್ನು ಕಾಣುತ್ತಾರೆ. ಇದೇ ರೀತಿಯ ವ್ಯವಹಾರ ಚಾತುರ್ಯವನ್ನು ವಿಷ್ಣುಶರ್ಮರು ಪಂಚತಂತ್ರಗಳ ಮೂಲಕ ರಾಜನೀತಿ ಶಿಕ್ಷಣವನ್ನು ಹಾಗೂ ಬದುಕಿನ ನೀತಿಶಿಕ್ಷಣವನ್ನು ಮಂದಮತಿಗಳಾದ ಅರಸುಕುಮಾರರಿಗೆ ಒದಗಿಸಿಕೊಟ್ಟಿರುತ್ತಾರೆ. ಕೇವಲ ಪುಸ್ತಕ ಜ್ಞಾನವಿದ್ದರೆ ಮಾತ್ರ ಸಾಲದು. ಮಕ್ಕಳಿಗೆ ಒಳ್ಳೆಯಸಂಸ್ಕಾರ, ಸಂಸ್ಕೃತಿ ಆಧಾರಿತ ಜೀವನ ಶಿಕ್ಷಣ ದೊರಕಬೇಕು. ಸ್ವಾಮಿ ವಿವೇಕಾನಂದರ ಮಾತಿನಂತೆ ನಮ್ಮಲ್ಲಿ ಸುಪ್ತವಾಗಿರುವ ಪ್ರತಿಭೆಯನ್ನು ಪ್ರಕಾಶಕ್ಕೆ ತರುವ, ಗುಣ – ನಡತೆಗಳ ವಿಕಾಸಕ್ಕೆ ನೆರವಾಗುವ ಶಿಕ್ಷಣವೇ ನಿಜವಾದ ಶಿಕ್ಷಣ. ಕಲಿತದ್ದು ಸುಮ್ಮನೆ ಮನಸ್ಸಿನಲ್ಲಿ ಸಂಗ್ರಹವಾದರೆ ಶಿಕ್ಷಣದ ಗುರಿ ಈಡೇರುವಂತಿಲ್ಲ. ಅದು ಜೀವನದ ಮೇಲೆ ಪ್ರಭಾವ ಬೀರಬೇಕು. ಆ ಕಾರ್ಯ ಬಹುಮಟ್ಟಿಗೆ ಬೋಧಿಸುವ, ಕಲಿಯುವ ಕ್ರಮಗಳನ್ನೇ ಅನುಸರಿಸಿರುತ್ತದೆ. ಬೋಧಕರು ಈ ಕ್ರಮವನ್ನು ಪಾಲಿಸುವುದರಿಂದ ಆ ಕಾರ್ಯ ಸ್ವಲ್ಪ ಮಟ್ಟಿಗೆ ಯಶಸ್ವಿಯಾಗುತ್ತದೆ. ಅದೇ ರೀತಿ ಮಕ್ಕಳೂ ಕಲಿಯುವಾಗ ಒಳ್ಳೆಯ ಅಧ್ಯಯನ ಕ್ರಮವನ್ನು ಅನುಸರಿಸಬೇಕು. ಯಾವುದನ್ನೇ ಕಲಿತರೂ ಮನಃಪೂರ್ವಕವಾಗಿ ಆ ಕಾರ್ಯ ಮಾಡಬೇಕು. ಅದರಿಂದ ಅವರ ಪ್ರೇರಕಶಕ್ತಿ ಆ ಕಡೆ ವಿನಿಯೋಗವಾಗುತ್ತದೆ. ನಿಯಮ, ಸೂತ್ರ, ಸನ್ನಿವೇಶ ಮುಂತಾದವುಗಳ ಅರ್ಥವನ್ನು ಮನದಟ್ಟು ಮಾಡಿಕೊಳ್ಳಬೇಕು. ಅರ್ಥವಿಲ್ಲದ ಸಂಕೇತಗಳಾದರೆ ತಮ್ಮದೇ ಆದ ಅರ್ಥ ಕಲ್ಪಿಸಿಕೊಳ್ಳಬಹುದು. ಕಲಿವು ಕಾರ್ಯಪ್ರದವೂ, ಜೀವನಕ್ಕೆ ಅನ್ವಯಿಸುವಂಥದೂ ಆದ ಸನ್ನಿವೇಶದಲ್ಲಿ ಸಾಗಬೇಕು. ಆಗ ಕಲಿತ ಜ್ಞಾನದ ಬಳಕೆಯನ್ನು ಪ್ರಾಯೋಗಿಕವಾಗಿ ಪರಿಶೀಲಿಸಬಹುದು. ಒಟ್ಟಿನಲ್ಲಿ ಉಪಾಧ್ಯಾಯರ ಬೋಧನೆ ಮತ್ತು ಶಿಷ್ಯರ ಕಲಿವು ಇವೆರಡೂ ಕಲಿತದ್ದು ಜೀವನದಲ್ಲಿ ಪರಿಣಾಮಕಾರಿಯಾಗುವಂಥ ಶಾಸ್ತ್ರೀಯ ರೀತಿಯಲ್ಲಿ ನಡೆಯುವುದು ಅಗತ್ಯ. ಆಗ ಮಾತ್ರ ಪಡೆದ ಶಿಕ್ಷಣ ಜೀವನದಲ್ಲಿ ನಿಜವಾದ ಪ್ರಭಾವವನ್ನು ಬೀರುತ್ತದೆ.[2]

यथा कूर्मः स्वतनयान् ध्यानमात्रेण पोषयेत् ।

वेधदीक्षोपदेशश्च मानसः स्यात् तथाविधः ॥[3]

ಅಂದರೆ ಗುರುಗಳ ಸಂಕಲ್ಪಮಾತ್ರದಿಂದಲೇ ಅನುಗ್ರಹ ಅಥವಾ ಕೃಪಾದೀಕ್ಷೆ ಶಿಷ್ಯನಿಗೆ ಪ್ರಾಪ್ತವಾಗುತ್ತದೆ. ಯಾವ ರೀತಿ ಆಮೆಯು ಕೇವಲ ಮನಸ್ಸಿನಿಂದ ಚಿಂತನೆ ಮಾಡಿ ಭೂಮಿಯ ಕೆಳಗಿಟ್ಟಿರುವ ಮೊಟ್ಟೆಗಳಿಗೆ ಕಾವು ಕೊಡುತ್ತದೆ, ಮರಿಗಳನ್ನು ಬೆಳೆಸುತ್ತದೆ ಮತ್ತು ಅವುಗಳ ಪೋಷಣೆ ಮಾಡುತ್ತದೆಯೋ

2. **ವೀರಪ್ಪ.ಎನ್ ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–12, ಪು –229.(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

3. **ಕುಲಾರ್ಣವ ತಂತ್ರ,** ಉಲ್ಲಾಸ–14, ಶ್ಲೋ–37.

ಹಾಗೆಯೇ ಗುರುಗಳು ಸಂಕಲ್ಪಮಾತ್ರದಿಂದ ಶಿಷ್ಯನ ಶಕ್ತಿಯನ್ನು ಜಾಗೃತಗೊಳಿಸುತ್ತಾರೆ ಮತ್ತು ಅವನಲ್ಲಿ ಶಕ್ತಿಯ ಸಂಚಾರ ಮಾಡುತ್ತಾರೆ. ಇದೇ ಸಂಕಲ್ಪವನ್ನು ಮಾಡಿದ ವಿಷ್ಣುಶರ್ಮರು ಸರಸ್ವತಿಯ ಸೇವೆಯೆಂದು, ಅರಸುಕುಮಾರರಿಗೆ ನೀತಿಶಿಕ್ಷಣವನ್ನು ಅನುಗ್ರಹಿಸಿದ್ದಾರೆ.

काकचेष्टा वकोध्यानं श्वाननिद्रा तथैवच।

अल्पाहारी गृहत्यागी विद्यार्थी पञ्चलक्षणम् ॥[4]

ಎನ್ನುತ್ತದೆ ಒಂದು ಸಂಸ್ಕೃತ ಶ್ಲೋಕ. ಅಂದರೆ, ಒಬ್ಬ ವಿದ್ಯಾರ್ಥಿಯು ಕಾಗೆಯಂತೆ ಚುರುಕಾಗಿ, ಬಕದಂತೆ ತನ್ಮಯನಾಗಿ, ನಾಯಿಯಂತೆ ನಿದ್ದೆ ಮಾಡಿ, ಕಡಿಮೆ ಉಂಡು, ಮನೆಯ ಎಲ್ಲಾ ಸುಖಗಳನ್ನೂ ತ್ಯಾಗಮಾಡಿ ಅಧ್ಯಯನದ ಸಾಧನೆಯನ್ನು ಮಾಡಬೇಕಾಗುತ್ತದೆ. ಯಾವ ಪ್ರಮಾದಗಳೊಳಗೆ ಸಿಲುಕದೆ, ಯಾರೊಂದಿಗೂ ಹೆಚ್ಚು ಮಾತನಾಡದೆ ಎಲ್ಲರ ಮಾತುಗಳಿಗೂ ಕಿವಿ ಕೊಟ್ಟು, ಎಲ್ಲ ಅನುಭವಗಳಿಗೂ ಮನಸ್ಸು ತೆರೆದಿಟ್ಟು ಜ್ಞಾನಾರ್ಜನೆಯನ್ನೇ ಬದುಕನ್ನಾಗಿಸಿಕೊಳ್ಳಬೇಕಾಗುತ್ತದೆ. ನಮ್ಮ ಬದುಕು ಎಂಬುದು ಆಕಸ್ಮಿಕಗಳ ಅಪೂರ್ವ ಕೊಡುಗೆ. ಯೌವನ ಎನ್ನುವುದು ಬಾಲ್ಯವೃದ್ಧಾಪ್ಯಗಳ ನಡುವೆ ಸಿಕ್ಕಿದ ಅತ್ಯಮೂಲ್ಯ ಕಾಲನಿಧಿ. ಹೀಗಿರುವುದರಿಂದ ಈ ಬದುಕಿನ ಪ್ರತಿಕ್ಷಣವನ್ನೂ ಸಾಧನೆಯ ಸಾಮರ್ಥ್ಯಕ್ಕಾಗಿ ಬಳಸಿಕೊಳ್ಳಬೇಕು.

ಚಿಕ್ಕಂದಿನಲ್ಲಿ ಉತ್ತಮ ಅಭ್ಯಾಸಗಳು, ದೃಷ್ಟಿಧ್ಯೇಯಗಳು ಮತ್ತು ಭಾವನೆಗಳು, ಆಲೋಚನೆಗಳು, ವರ್ತನೆಗಳು – ಇವೆಲ್ಲ ರೂಪುಗೊಳ್ಳಬೇಕು. ಆ ಸಮಯಕ್ಕೆ ಅದು ಉಚಿತವಾದದ್ದು. ಹಾಗಾದರೆ ಮಾತ್ರ ಮುಂದೆ ಅವುಗಳು ತಮ್ಮ ಪ್ರಭಾವವನ್ನು ಪೂರ್ಣವಾಗಿ ಜೀವನದ ಮೇಲೆ ಬೀರುತ್ತವೆ. ಒಳ್ಳೆಯ ಅಭ್ಯಾಸಗಳನ್ನು ಧೃಡಪಡಿಸಿಕೊಂಡ ಮೇಲೆ ಆಗಾಗ್ಗೆ ಅವನ್ನು ಪುನರಾವರ್ತನೆ ಮಾಡಿಕೊಳ್ಳುವ ಅಭ್ಯಾಸವನ್ನಿಟ್ಟುಕೊಳ್ಳಬೇಕು. ಕೆಟ್ಟ ಅಭ್ಯಾಸಗಳನ್ನು ಕಲಿತಿದ್ದರೆ ಅವುಗಳ ಪುನರಾವರ್ತನೆ ಆಗದಂತೆ ಎಚ್ಚರ ವಹಿಸಲು ಮಾರ್ಗದರ್ಶನ ನೀಡಬೇಕು.[5] ಇದೇ ಜೀವನ ಶಿಕ್ಷಣ ಇದು ಬಾಲ್ಯದಿಂದ ಅಂತ್ಯದವರೆಗೂ ನಿರಂತರವಾಗಿ ಸಾಗುವಂಥದ್ದು. ಇದು ಬೋಧಕರ ಜವಾಬ್ದಾರಿಯಾಗಿರುತ್ತದೆ.

ಈ ಜವಾಬ್ದಾರಿಯನ್ನು ವಿಷ್ಣುಶರ್ಮರು ಬಹಳ ಪರಿಣಾಮಕಾರಿಯಾಗಿ ನಿರ್ವಹಿಸಿದ್ದಾರೆ. ರಾಜನ ಪುತ್ರರೂ ಸಹ ಒಳ್ಳೆಯ ಅಧ್ಯಯನ ಕ್ರಮವನ್ನು ಅನುಸರಿಸಿದ್ದರಿಂದಲೇ ಕೇವಲ ಆರು ತಿಂಗಳಲ್ಲಿ ನೀತಿಶಾಸ್ತ್ರ ನಿಪುಣರೂ ಬದುಕಿನಲ್ಲಿ ಚತುರರೂ ಆದರು. ಗುರುಗಳಾದ ವಿಷ್ಣುಶರ್ಮರೂ ಬಹಳ ಚಾಣಾಕ್ಷತೆಯಿಂದ

---

**4. ಸಂಸ್ಕೃತದ ಒಂದು ಆರ್ಷ ಶ್ಲೋಕ.**

**5. ವೀರಪ್ಪ ಎನ್. ಎಸ್.,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–11, ಪು–197. (1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

ಅವರಿಗೊಪ್ಪುವ ಶಿಕ್ಷಣವನ್ನು, ಜೊತೆ ಜೊತೆಯಲ್ಲಿ ಜೀವನ ಶಿಕ್ಷಣವನ್ನು ಕ್ರಮಬದ್ಧವಾಗಿ ಒದಗಿಸಿ ಕೊಟ್ಟರು. ಹಾಗೂ ಕಲಿಯುವಿಕೆಯಲ್ಲಿ ರಾಜಕುವರರಿಗೆ ಒಳ್ಳೆಯ ಪ್ರೀತಿಯನ್ನುಟುಮಾಡಿ ಪ್ರೇರೇಪಿಸಿದರು.

ಯುವಕರ ಮನಸ್ಸಿನಲ್ಲಿ ಮುಂದಿನ ತಮ್ಮ ಜೀವನೋಪಾಯದ ದೃಷ್ಟಿಯೂ ಇರುತ್ತದೆ. ಅವರು ಸ್ವತಂತ್ರವಾಗಿ ಅತಿ ಬೇಗ ಜೀವನ ಆರಂಭಿಸಬೇಕಾಗಿರುವುದರಿಂದ ಅದಕ್ಕನುಕೂಲಿಸುವ ಶಿಕ್ಷಣವೂ ಈ ಕಾಲದಲ್ಲಿ ನಡೆಯಬೇಕು. ಅವರ ಆಸಕ್ತಿಗಳನ್ನರಿತು ಅವರಿಗೊಪ್ಪುವ ಶಿಕ್ಷಣವನ್ನು ಕೊಡುವುದು ಉತ್ತಮ.[6]

ಮನೋಭಾವಗಳು ಜೀವನದಂತೆ ಕಲಿವಿನ ಮೇಲೂ ಪರಿಣಾಮ ಬೀರುವುದರಿಂದ ವ್ಯಕ್ತಿಯ ಮತ್ತು ಸಮಾಜದ ಹಿತದೃಷ್ಟಿಯಿಂದ ಉಚಿತವೆನಿಸುವ ಮನೋಭಾವಗಳನ್ನು ಬಾಲ್ಯದಿಂದಲೂ ಮಕ್ಕಳಲ್ಲಿ ಆರಂಭಿಸಿ ಬೆಳೆಸಬೇಕು. ಅವು ಅವರ ಮುಂದಿನ ಜೀವನಕ್ಕೆ ಮಾರ್ಗದರ್ಶಿಯಾಗಿ ಕೆಲಸ ಮಾಡುವುದಲ್ಲದೆ, ಆ ಆದರ್ಶಗಳ ಮುಂದಿನಲ್ಲಿ ನಡೆಯುವುದು ಒಂದು ನಿರಂತನ ಉತ್ಸಾಹವೆನಿಸುತ್ತದೆ. ಅದು ಕಲಿವಿಗೂ ಒಂದು ಪ್ರಚೋದನ ರೀತಿಯ ಫಲಪರಿಣಾಮವಾಗಿ ಕೆಲಸ ಮಾಡುತ್ತದೆ. ಮಕ್ಕಳು ಸತ್ಪೌರರಾಗುವಂತೆ, ಸದ್ವ್ಯಕ್ತಿಗಳಾಗುವಂತೆ, ಸಜ್ಜನರಾಗುವಂತೆ ಮಾಡುವ ಕಾರ್ಯದಲ್ಲಿ ಅವರ ಗುಣಶೀಲಗಳ ನಿರೂಪಣೆ ಬಹು ಮುಖ್ಯವಾದದ್ದು.

वह्निस्तस्य जलायते जलनिधिः कुल्यायते तत्क्षणात्

मेरुः स्वल्पशिलायते मृगपतिः सद्यः कुरङ्गायते ।

व्यालो माल्यगुणायते विषरसः पीयूषवर्षायते

यस्याङ्गेऽखिललोकवल्लभतमं शीलं समुन्मीलति ॥[7]

ಅಂದರೆ, ಯಾವನ ಶರೀರದಲ್ಲಿ ಸಮಸ್ತಲೋಕಗಳಿಗೂ ಅತ್ಯಂತ ಪ್ರಿಯವಾದ ಶೀಲವು ಬೆಳಗುತ್ತದೋ, ಅವನಿಗೆ ಬೆಂಕಿಯು ನೀರಿನಂತೆ ತಣ್ಣಗಾಗುತ್ತದೆ, ಸಮುದ್ರವು ಒಂದೇ ಕ್ಷಣದಲ್ಲಿ ಸಣ್ಣ ತೊರೆಯಂತಾಗುತ್ತದೆ, ಮೇರುಪರ್ವತವು ಸುಣ್ಣಕಲ್ಲಿನಂತಾಗುತ್ತದೆ, ಸಿಂಹವು ಕೂಡಲೇ ಜಿಂಕೆಯಂತೆ ಸಾಧುವಾಗುತ್ತದೆ, ಹಾವೂ ಹೂಮಾಲೆಯಂತಾಗುತ್ತದೆ, ವಿಷವೂ ಅಮೃತಧಾರೆಯಂತಾಗುತ್ತದೆ. ಇಲ್ಲಿ ಗುಣಶೀಲಗಳ ಶಕ್ತಿಯನ್ನು ವರ್ಣಿಸಲಾಗಿದೆ. ಅದು ಜೀವನದಲ್ಲಿ ಸಿದ್ಧಿಸಬೇಕು. ಹಾಗೂ ಅವರ ಬಾಲ್ಯದ

---

6. **ವೀರಪ್ಪ. ಎನ್ ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–8, ಪು–150.(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
7. **ಭರ್ತೃಹರಿಯ ನೀತಿಶತಕ,** ಶೇಷ ಭಾಗ–ಶ್ಲೋ–109.

ಶಾಲಾ ಜೀವನದಲ್ಲಿ ಅದಕ್ಕೆ ಶಾಸ್ತ್ರೀಯ ತಳಹದಿಯನ್ನು ಹಾಕಿಕೊಡಬೇಕು. ಇಲ್ಲಿ ಗುರುಗಳ ಪಾತ್ರ ಬಹಳ ಮಹತ್ವಪೂರ್ಣವಾಗಿರುತ್ತದೆ. ಭಾರತೀಯ ಪರಂಪರೆಯಲ್ಲಿ ಅನಾದಿಕಾಲದಿಂದಲೂ ಗುರುವಿನ ಮಹತ್ವವನ್ನು ಸಾರುತ್ತಾ, ಆದಿಶಂಕರರು ಹೀಗೆ ಹೇಳಿದ್ದಾರೆ:-

शरीरं सुरूपं तथा वा कलत्रं यशश्चारुचित्रं धनं मेरुतुल्यम् ।

मनश्चेन लग्नं गुरोरङ्घ्रिपद्मे ततः किं ततः किं ततः किं ततः किम् ॥[8]

ನಮಗೆ ಸುಂದರವಾದ ಶರೀರ, ಅಪಾರವಾದ ಅಂತಸ್ತು, ಕೀರ್ತಿ, ಸಂಸಾರ ಎಲ್ಲವೂ ಇದ್ದರೂ ಗುರುವಿನ ಚರಣಗಳಲ್ಲಿ ಭಕ್ತಿ ಶ್ರದ್ಧೆ ಇಲ್ಲದವನಿಗೆ ಮೋಕ್ಷವಿಲ್ಲ. ಅಂದರೆ, ಗುರುವಿಗಿಂತ ಮೀರಿದ ತತ್ವ, ತಪಸ್ಸು ಬೇರೆ ಯಾವುದೂ ಇಲ್ಲ. ಜ್ಞಾನದ ದಾರಿದೀಪವನ್ನು ತೋರುವವನಾದ ಶ್ರೀ ಗುರುವೇ ನಿನಗೆ ವಂದನೆಗಳು. ಗುರುವಿನ ಕರುಣೆಯಿಲ್ಲದೆ ಎಲ್ಲವೂ ವ್ಯರ್ಥ ಎಂದು ತಿಳಿಸುತ್ತಾ ಪ್ರತಿಯೊಂದು ಶ್ಲೋಕದ ಕೊನೆಗೂ मनश्चेन लग्नं गुरोरन्घ्रिपद्मे । ततःकिं ततःकिं ततःकिं ततःकिम् ॥ ಎಂಬ ಮಾತನ್ನು ಪದೇಪದೇ ಪುನಶ್ಚರಣ ಮಾಡುತ್ತಾ ಗುರುವಿನ ಪಾದಗಳಲ್ಲಿ ಮನಸ್ಸನ್ನು ನಿಲ್ಲಿಸದಿದ್ದರೆ ನಮ್ಮ ಸಾಧನೆ ಕಷ್ಟಸಾಧ್ಯ ಎನ್ನುತ್ತಾ ಗುರುವಿನ ಮಹತ್ವವನ್ನು ವಿವರಿಸುತ್ತಾರೆ.

ಈ ಭಾರವನ್ನು ಹೊತ್ತಿರುವವರು ಅವರಿಗೆ ದೊರೆತ ಗುರುಗಳು-ವಿವಿಧ ಮನೋಭಾವಗಳನ್ನೂ, ಅವು ವ್ಯಕ್ತಿಯ ಶಿಕ್ಷಣ ಮತ್ತು ಜೀವನಗಳಲ್ಲಿ ಬೀರುವ ಪರಿಣಾಮವನ್ನೂ ಚೆನ್ನಾಗಿ ಅರಿತಿರಬೇಕು.[9] ಇಲ್ಲಿ ಉಪಾಧ್ಯಾಯರ ಹೊಣೆಗಾರಿಕೆಯನ್ನು ಹೀಗೆ ಪಟ್ಟಿಮಾಡಬಹುದು:-

1. ಬೋಧಿಸುತ್ತಿರುವ ಪಾಠದಲ್ಲಿ ಬರುವ ನಿಯಮ, ವಿಧಿ, ವಾದ, ಸೂತ್ರ ಮುಂತಾದವುಗಳ ವ್ಯಾಪ್ತಿಯನ್ನು ವಿವರಿಸಿ, ಇತರ ಯಾವ ಯಾವ ಕ್ಷೇತ್ರಗಳಲ್ಲಿ ಅವನ್ನು ಬಳಸಬಹುದೆಂದು ಸೂಚಿಸಬೇಕು.

**2,** ಮಾಡುವ ಪಾಠದಲ್ಲಿ ಕಲಿಯುವ ಅಂಶಗಳನ್ನೇ ಅಲ್ಲದೆ ಕಲಿಯುವ ಉತ್ತಮ ಕ್ರಮವನ್ನೂ ಪ್ರಾಸಂಗಿಕವಾಗಿ ಕಲಿಯುವವರಲ್ಲಿ ಬೆಳೆಸಬೇಕು. ಅದರ ಪರಿಜ್ಞಾನವೂ ಅವರಲ್ಲಿ ಮೂಡಬೇಕು.

**3.** ಬೋಧಿಸುವ ಪಾಠದಲ್ಲಿರುವ ಹಲವಂಶಗಳು ಜೀವನದ ಇತರ ಕ್ಷೇತ್ರಗಳಿಗೆ ಹೇಗೆ ಸಂಬಂಧಿಸಿವೆ ಎಂಬ ಅಂಶವನ್ನು ವಿವರಿಸಿ, ಅಂಥ ಸಮಾನಾಂಶದ ಕ್ಷೇತ್ರಗಳಲ್ಲಿ ಅವು ಹೇಗೆ ಅಳವಟ್ಟಿವೆಯೆಂಬ ವಿಷಯವನ್ನು ವಿಶದಪಡಿಸಬೇಕು.

---

8. **ಆದಿಗುರು ಶ್ರೀ ಶಂಕರಾಚಾರ್ಯರು ರಚಿಸಿದ ಗುರ್ವಷ್ಟಕಮ್**-ಶ್ಲೋಕ-1.

9. **ವೀರಪ್ಪ ಎನ್.ಎಸ್.**, ಶಿಕ್ಷಣದಲ್ಲಿಮನೋವಿಜ್ಞಾನ, ಅ-12, ಪು-229-230.(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

4. ಬೋಧಿಸತಕ್ಕ ಸೂತ್ರ ನಿಯಮಗಳನ್ನು ಜೀವನದ ಸಮಸ್ಯೆಗಳ ಮೇಲೆ ಪ್ರಯೋಗಿಸಿ ತೋರಿಸಬೇಕು

5. ಪ್ರತಿಭಾವಂತ ವಿದ್ಯಾರ್ಥಿಗಳೇನೋ ಕಲಿತದ್ದನ್ನು ಇತರ ಕ್ಷೇತ್ರಗಳಲ್ಲಿ ಸಾಮಾನ್ಯವಾಗಿ ಪರಿಣಾಮಕಾರಿ ಆಗುವಂತೆ ಮಾಡಿಕೊಳ್ಳಬಲ್ಲರು. ಆದರೆ, ಸಾಮಾನ್ಯ ಮತ್ತು ದುರ್ಬಲ ಮನಶ್ಶಕ್ತಿಯ ಮಕ್ಕಳಿಗೆ ಅದು ಕಷ್ಟ. ಆದ್ದರಿಂದ ಕಲಿವಿನ ವ್ಯಾಪ್ತಿಯನ್ನೂ, ಪ್ರಭಾವವನ್ನೂ ಅರಿತುಕೊಳ್ಳಲು ಅವರಿಗೆ ಹೆಚ್ಚಿನ ರೀತಿಯ ಸಹಾಯವನ್ನು ನೀಡಬೇಕು.

6. ಯಾವುದನ್ನೇ ಕಲಿಯುತ್ತಿರಲಿ, ಕಲಿವು ಕೇವಲ ಅದೊಂದು ಕ್ಷೇತ್ರಕ್ಕಲ್ಲ– ಇಡೀ ಜೀವನಕ್ಕೆ ಎಂಬ ಭಾವನೆಯನ್ನು ಕಲಿಯುವವರಲ್ಲಿ ಬೆಳೆಸಬೇಕು. ಅಂದರೆ, ಬೋಧಿಸುವ ವಿಷಯದ ವೈಶಾಲ್ಯ–ವ್ಯಾಪ್ತಿಗಳನ್ನೂ, ಅರ್ಥ ವ್ಯಾಪ್ತಿಯನ್ನೂ ಸೂಚಿಸುವುದು ಮುಖ್ಯ. ಜೀವನದ ಅವಶ್ಯಕತೆಗಳ ಹಿನ್ನೆಲೆಯಲ್ಲಿ ಆ ವಿಷಯಗಳನ್ನು ಪರಿಶೀಲಿಸಬೇಕು. ಜ್ಞಾನವನ್ನು ಜೀವನದ ಬೆಳಕಿನಲ್ಲಿ ಬೋಧಿಸಬೇಕು.

ಈ ಎಲ್ಲ ಮನೋವೈಜ್ಞಾನಿಕ, ಶೈಕ್ಷಣಿಕ ಕ್ರಮಗಳನ್ನು ಪಂಡಿತ ವಿಷ್ಣುಶರ್ಮರು ಪಂಚತಂತ್ರದಲ್ಲಿ ಅಳವಡಿಸಿಕೊಂಡೇ, ರಾಜಕುಮಾರರಿಗೆ ಶಿಕ್ಷಣ ನೀಡಿದ್ದಾರೆ. ಉತ್ತಮ ಬದುಕಿನ ತಂತ್ರಗಳನ್ನು ಕಥೆಗಳ ಮಧ್ಯೆ ಮಧ್ಯೆ ತಿಳಿಸುತ್ತಾ, ಅವರ ಮುಂದಿನ ಜೀವನದ ಸಾರ್ಥಕತೆಗೆ ಅಪೇಕ್ಷಿತ ಸನ್ನಿವೇಶಗಳನ್ನು ವಿವಿಧ ದೃಷ್ಟಾಂತಗಳ ಮೂಲಕ ತಿಳಿಹಾಸ್ಯ, ವ್ಯಂಗ್ಯ, ಜಾಗೃತಿ ಹಾಗೂ ನೀತಿಬೋಧೆಯನ್ನು ಸೊಗಸಾಗಿ ಸಂಯೋಜಿಸಿ, ಒಂದು ರೀತಿಯಲ್ಲಿ ಬದುಕಿನ ಶಿಕ್ಷಣ ಅಥವಾ ಜೀವನ ಶಿಕ್ಷಣವನ್ನು ನೀಡಿದ್ದಾರೆ. ವಿದ್ಯೆಯನ್ನು ಶಿಷ್ಯರು ಹೇಗೆ ಕಲಿಯಬೇಕೆಂಬುದನ್ನು ಮಹಾಭಾರತದಲ್ಲಿ ಒಂದು ವಿಚಾರಾರ್ಹ ಶ್ಲೋಕವಿದೆ:–

आचार्यात् पादमादत्ते पादं शिष्यः स्वमेधया ।

पादं सब्रह्मचारिभ्यः पादं कालक्रमेण च ॥[10]

ಅಂದರೆ, ಶಿಷ್ಯನು ಆಚಾರ್ಯನಿಂದ ವಿದ್ಯೆಯ ಕಾಲು ಭಾಗವನ್ನು ಗ್ರಹಿಸುತ್ತಾನೆ. ಕಾಲುಭಾಗದಲ್ಲಿ ತನ್ನ ಬುದ್ಧಿಶಕ್ತಿಯಿಂದಲೂ, ಕಾಲು ಭಾಗವನ್ನು ಜೊತೆಯ ವಿದ್ಯಾರ್ಥಿಗಳಿಂದಲೂ, ಉಳಿದ ಕಾಲು ಭಾಗವನ್ನು ಕಾಲಕ್ರಮದಲ್ಲೂ ತಿಳಿದುಕೊಳ್ಳುವರು. ಎಂಬುದು ಈ ಶ್ಲೋಕದ ತಾತ್ಪರ್ಯವಾಗಿದೆ.

---

10. **ಸುಭಾಷಿತಮಂಜರೀ,** ವಿವೇಕ–ಶ್ಲೋ–18, ಪು–269(2001) ಮಹಾಭಾರತ – ಉದ್ಯೋಗ, ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18

ಶಿಕ್ಷಣ ಮಾನವನ ಪ್ರಗತಿಗೆ ಆಧಾರವಾಗಿದೆ. ಸಮಾಜ ಹಾಗೂ ವ್ಯಕ್ತಿಯ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಇದರ ಪಾತ್ರ ಮಹತ್ವದ್ದಾಗಿದೆ. ಮಾನವನ ಸಹಜ ಗುಣಗಳನ್ನು ಅಡೆತಡೆಯಿಲ್ಲದೆ ಅಭಿವೃದ್ಧಿ ಮೂಲಕ ಬೆಳೆಸುವಂತಹ ಅರ್ಥವೇ ಶಿಕ್ಷಣ. ಅಲ್ಲಿಗೆ ಶಿಕ್ಷಣವೆಂಬುದು ಮಾನವ ಸಹಜ ಸಾಮಾನ್ಯವರ್ತನೆಗಳಾದ ಕಲಿಕೆ, ಕಲೆ, ಕೌಶಲ್ಯ, ಅಭಿಪ್ರಾಯ, ನೀತಿಗಳಲ್ಲಿ ಬಯಸಿದ ಬದಲಾವಣೆಯನ್ನುತರುವ ಪ್ರಕ್ರಿಯೆಯಿಂದ ಕೂಡಿದುದಾಗಿದ್ದು, ಯುವಪೀಳಿಗೆಯು ಪ್ರಸ್ತುತ ಹಾಗೂ ಮುಂದಿನ ಜೀವನದಲ್ಲಿ ಅಪೇಕ್ಷಿತವಾದ ಸಾಧನೆಯನ್ನು ಸಾಧಿಸಲು ಸಹಾಯ ಮಾಡುವ ಒಂದು ಸುಸಜ್ಜಿತ, ಸುವ್ಯವಸ್ಥಿತ ಸಾಮಾಜಿಕ ಸಂಸ್ಥೆಯಾಗಿದೆ. ಶಿಕ್ಷಣ ಕಾರ್ಯ ಸಾಧನೆಯಲ್ಲಿ ಕೌಶಲ್ಯದ ಪಾತ್ರ ಬಹಳ ವಿಶೇಷವಾಗಿದ್ದು, ಇದು ಶಿಕ್ಷಣದ ಅವಿಭಾಜ್ಯ ಅಂಗವೇ ಆಗಿರುತ್ತದೆ. ಯಾವುದೇ ವ್ಯಕ್ತಿಯು ಸಾಧನೆಯ ಶಿಖರವನ್ನು ಏರುವುದಾದರೆ ಅದು ಕೌಶಲ್ಯಭರಿತ ಶಿಕ್ಷಣದಿಂದ ಮಾತ್ರ. ಜ್ಞಾನ, ಕೌಶಲ್ಯ, ಸೃಜನಶೀಲತೆ ಜೊತೆಗೂಡಿ ಕಾರ್ಯಪ್ರವೃತ್ತನಾದಾಗ ಮಾತ್ರ. ಕೌಶಲ್ಯದಲ್ಲಿರುವ, ಅದಮ್ಯ, ಅದ್ಭುತ ಶಕ್ತಿಯು ಎಲ್ಲರಿಗೂ ಒಲಿಯುವಂತೆ ಮಾಡುವ ಅಗೋಚರ ಬಲವಿರುವುದು ಶಿಕ್ಷಣದಲ್ಲಿಮಾತ್ರ.[11] ಇದನ್ನು ಈ ಸೂತ್ರದಲ್ಲಿಯೂ ಸೂಚಿಸಬಹುದು.[12] ಜ್ಞಾನ + ಕೌಶಲ್ಯ+ ಸೃಜನಶೀಲತೆ = ಸಾಧನೆ. ಇನ್ನು ಈ ಶಿಕ್ಷಣವನ್ನು ನೀಡುವ ಗುರುಗಳು ವ್ಯಕ್ತಿಯ ಸರ್ವತೋಮುಖ ವಿಕಾಸದಲ್ಲಿ ಬಹಳ ಮುಖ್ಯ ಪಾತ್ರ ವಹಿಸುತ್ತಾರೆ. ಅಂದರೆ:-

पात्रविशेषे न्यस्तं गुणान्तर व्रजतिं शिल्पमाधातुः ।

जलमिव समुद्रशुक्तौ मुक्ताफलतां पयोदस्य ॥ [13]

ಯೋಗ್ಯತೆಯನ್ನರಿತು ಗುರುವು ಕಲಿಸಿದ ವಿದ್ಯೆಯು ಬಹಳ ಉನ್ನತಮಟ್ಟವನ್ನೇರುತ್ತದೆ. ಮೋಡವು ಸುರಿದ ನೀರು ಕಡಲಿನ ಮುತ್ತಿನ ಚಿಪ್ಪಿನಲ್ಲಿ ಬಿದ್ದರೆ ಒಳ್ಳೆಯ ಮುತ್ತಾಗುತ್ತದೆ.

ಇತ್ತೀಚಿನ ದಿನಗಳಲ್ಲಿ ಮಕ್ಕಳಿಗೆ ಶಿಕ್ಷಣ ವ್ಯವಸ್ಥೆ ಹೇಗಿದೆಯೆಂದರೆ, ಪಠ್ಯಪುಸ್ತಕದಲ್ಲಿರುವುದನ್ನೇ ಹೇಳಿ ಹೇಳಿ ಗಿಳಿಪಾಠ ಮಾಡುವುದು. ಅಧ್ಯಯನಗಳ ಅಂಕಿ-ಸಂಖ್ಯೆಗಳ ಪ್ರಕಾರ ಸಾಕ್ಷರತೆ, ಶಾಲಾ ದಾಖಲಾತಿ ಗಣನೀಯವಾಗಿ ಹೆಚ್ಚುತ್ತಿದೆ. ಹಾಗೆಯೇ ಸ್ನಾತಕ ಸ್ನಾತಕೋತ್ತರ ಶಿಕ್ಷಣ ಪಡೆಯುವವರ ಸಂಖ್ಯೆಯೂ ಬೆಳೆಯುತ್ತಿದೆ. ವಿದೇಶಗಳಿಗೆ ಹೋಗಿ ಶಿಕ್ಷಣ ಪಡೆಯುವವರ ಸಂಖ್ಯೆಯಲ್ಲಿ ಏರುಮುಖ ಇದೆ. ಆದರೆ ಇದರ ಅರ್ಥ ನಾವು ಹೆಚ್ಚು ಆರೋಗ್ಯವಂತ ಸಮಾಜದಲ್ಲಿ ಬದುಕುತ್ತಿದ್ದೇವೆಯೇ!! ಜೀವನ

---

11. **ಶಿಕ್ಷಣ-ವಿಕಾಸ್ ಪೀಡಿಯಾ,** https://in.vikaspedia.in
12. **ಕೌಶಲ್ಯಭರಿತ ಶಿಕ್ಷಣದ ಅಗತ್ಯತೆ,** HTTPS://in.vikaspedia.in
13. **ಸುಭಾಷಿತಮಂಜರೀ,** ಸುಗುಣ - ದುರ್ಗುಣ - ಶ್ಲೋ-196, ಪು-171, ಮಾಳವಿಕಾಗ್ನಿಮಿತ್ರ, 1-6., ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18,(2001)

ನಡೆಸುತ್ತಿದ್ದೇವೆಯೇ!! ಎಂಬ ಕುತೂಹಲಕರ ಹಾಗೂ ಗಂಭೀರ ಪ್ರಶ್ನೆ ಹಾಕಿಕೊಂಡರೆ, ಸಕಾರಾತ್ಮಕ ಉತ್ತರ ಕೊಡಲು ಧೈರ್ಯ ಬಾರದಾಗಿದೆ. ಬದ್ಧತೆಯ ಪ್ರಶ್ನೆ ಯಾವುದೇ ಕ್ಷೇತ್ರದಲ್ಲೂ ನಗಣ್ಯವಾಗುತ್ತಿದೆ. ಪ್ರಾಮಾಣಿಕತೆ ಅಪರೂಪವಾಗುತ್ತಿದೆ. ಆದರೆ ಹಿಂದಿನ ಕಾಲದಲ್ಲಿ ಪಠ್ಯಪುಸ್ತಕದ ಜೊತೆಗೆ ಜೀವನ ಮೌಲ್ಯಗಳನ್ನು ಕಲಿಸುತ್ತಿದ್ದರು. ಹಿಂದೆ ಮನೆಯಲ್ಲಿ ಕಥೆ-ಪುರಾಣಗಳನ್ನು ಹೇಳುವ ಅಜ್ಜಿಯರಿರುತ್ತಿದ್ದರು. ಮಹಾಕಾವ್ಯಗಳನ್ನು ಓದುವ, ಓದಿಸುವ ಪರಿಪಾಠವಿತ್ತು. ಅಲ್ಲದೇ ಬಹುತೇಕ ಹಿರಿಯರು ಮಕ್ಕಳಿಗೆ ಮಾದರಿಯಾಗಿರುತ್ತಿದ್ದರು. ಮಕ್ಕಳ ಆಸಕ್ತಿಗನುಗುಣವಾಗಿ ವಿಷಯಗಳನ್ನು ಶಾಲೆಯಲ್ಲಿ, ಆಶ್ರಮ ಅಥವಾ ಗುರುಕುಲದಲ್ಲಿ ಕಲಿಸುತ್ತಿದ್ದರು. ನೈತಿಕ ಪಾಠ ಹೇಳುತ್ತಿದ್ದರು. ಮಹಾತ್ಮರ ಜೀವನ ಮತ್ತು ಆತ್ಮ ಚರಿತ್ರೆಯನ್ನು ಹೇಳುತ್ತಿದ್ದರು. ಅವುಗಳು ಮುಂದೆ ಆ ಮಕ್ಕಳು ತಮ್ಮ ಜೀವನದಲ್ಲಿ ಎಂಥಹ ಬದುಕನ್ನು ಸಾಗಿಸಬೇಕು ಎಂಬುದಕ್ಕೆ ಆದರ್ಶವಾಗಿರುತ್ತಿದ್ದವು ಹಾಗೂ ಮಕ್ಕಳ ಮನಸ್ಸಿನಲ್ಲಿ ಒಳ್ಳೆಯ ಆಲೋಚನೆಗಳು, ಕಲ್ಪನೆಗಳು ಮೂಡುತ್ತಿದ್ದವು. ಇದೇ ನಿಜವಾದ ಜೀವನ ಶಿಕ್ಷಣ.[14]

ಮಾನವನನ್ನು ಶಿಕ್ಷಣವು ಅರಿವಿನಿಂದ ಕೂಡಿದ ಸಹಜ ಬದುಕಿನ ಭಾಗವಾಗುವಂತೆ ಪ್ರೇರೇಪಿಸುವಂತೆ ಇರಬೇಕು. ಮಾನವನ ಜೀವನಶೈಲಿ ಅಸಹಜವಾಗಿದೆ ಎಂದುಕೊಳ್ಳೋಣ. ಈ ಮಾನವನನ್ನು ಸರಿಮಾರ್ಗಕ್ಕೆ ತರುವುದು, ಇದಕ್ಕಿರುವ ಮಾರ್ಗೋಪಾಯಗಳನ್ನು ಸೂಚಿಸುವುದು, ಮಾನವನ ಮೂಲಭೂತ ಆಕಾಂಕ್ಷೆಗಳನ್ನು ಗುರುತಿಸುವುದು, ಅವುಗಳನ್ನು ಅರಿವಿನೊಂದಿಗೆ ಪೂರೈಸಿಕೊಳ್ಳುತ್ತಿದ್ದಾನೆಯೇ ಎಂದು ಪರೀಕ್ಷಿಸುವುದು ಶಿಕ್ಷಣದ ಜವಾಬ್ದಾರಿಯಾಗಿರುತ್ತದೆ. ಈ ನಿಟ್ಟಿನಲ್ಲಿ ಶಿಕ್ಷಣದ ಮೂಲಭೂತ ದೃಷ್ಟಿಕೋನವನ್ನು ಶಿಕ್ಷಕನಾದವನು ಹೊಂದಿರುವುದು ಬಹಳ ಮುಖ್ಯ ಹಾಗೂ ಅತ್ಯಾವಶ್ಯಕ.[15] ಇಂಥಹ ದೃಷ್ಟಿಕೋನವನ್ನು ವಿಷ್ಣುಶರ್ಮರು ಹೊಂದಿದ್ದರು. ಆದ್ದರಿಂದಲೇ ಅವರು ರಚಿಸಿದ ಪಂಚತಂತ್ರ ಕಥಾ ಗುಚ್ಛದಲ್ಲಿ ಪ್ರತಿ ಕಥೆಯ ಅಂತ್ಯದಲ್ಲಿ ಒಂದು ಒಳ್ಳೆಯ ಬದುಕಿನ ನೀತಿಭೋಧೆಯನ್ನು ಸಂಯೋಜನೆ ಮಾಡಿದ್ದಾರೆ. ಅವರ ಐದು ತತ್ವಗಳು ರಾಜನ ಹಾಗೂ ಸಾಮಾನ್ಯ ವ್ಯಕ್ತಿಯ ದೈನಂದಿನ ಜೀವನಕ್ಕಾಗಿ ಮಾರ್ಗದರ್ಶಕ ತತ್ವಗಳಾಗಿವೆ.

ಒಂದು ಉತ್ಸಾಹದಿಂದ ಕೂಡಿದ ಪ್ರಯತ್ನ ನಡೆಯುವುದರ ಪರಿಣಾಮ ಏನೆಂದು ಬಹಳ ಸೊಗಸಾಗಿ ವಿಷ್ಣುಶರ್ಮರು ಪಂಚತಂತ್ರದಲ್ಲಿ ಅರಸುಕುಮಾರರಿಗೆ ತಿಳಿಹೇಳಿದ್ದಾರೆಂಬುದನ್ನು ಗಮನಿಸಬಹುದು:-

यत्रोत्साहसमारम्भो यत्रालस्यविहीनता ।

नयविक्रमसंयोगस्तत्र श्रीरचला ध्रुवम् ॥[16]

---

14. **ಶಿಕ್ಷಣದ ಸಾಮಾಜಿಕ ಜವಾಬ್ದಾರಿ,** From prajavani.net- HTTPS://www.prajavani.net
15. **ಮೌಲ್ಯವರ್ಧಿತ ಶಿಕ್ಷಣ** - ವಿಕಾಸ್ ಪಿಡಿಯ, HTTPS://in.vikaspedia.in
16. **ಸುಧಾಕರ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಂ, ದ್ವಿ.ತಂ. ಶ್ಲೋ-144- ಪು-400,(1993).ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಅಂದರೆ ಎಲ್ಲಿ ಉತ್ಸಾಹದ ಪ್ರಯತ್ನ ನಡೆಯುವುದೋ, ಎಲ್ಲಿ ಸೋಮಾರಿತನವಿರುವುದಿಲ್ಲವೋ, ಎಲ್ಲಿ ನೀತಿ – ಪರಾಕ್ರಮಗಳು ಜೊತೆಗೂಡಿರುತ್ತವೆಯೋ ಅಲ್ಲಿ ನಿಜವಾಗಿಯೂ ಸಂಪತ್ತು ಸ್ಥಿರವಾಗಿರುತ್ತದೆ. ಇಲ್ಲಿ ಎಂತಹ ಒಂದು ಬದುಕಿನ ನೀತಿ ಪಾಠವನ್ನು ಕಾಣಬಹುದು.

ಈ ಗ್ರಂಥದ ವಿಶೇಷತೆ ಏನೆಂದರೆ ಒಂದೆಡೆ ರಾಜನೀತಿ ಶಿಕ್ಷಣ ಮತ್ತೊಂದೆಡೆ ಜೀವನ ಶಿಕ್ಷಣ. ರಾಜನು ಹೇಗೆ ರಾಜ್ಯಾಡಳಿತ ನಡೆಸಬೇಕು; ಮಿತ್ರತ್ವ ಹೇಗೆ ಮತ್ತು ಯಾರ ಜೊತೆ ಬೆಳೆಸಬೇಕು; ಯಾರಲ್ಲಿ ಮೈತ್ರಿ ಬೆಳೆಸಬಾರದು; ಯೋಗ್ಯಮಂತ್ರಿಯನ್ನು ಆರಿಸುವ ಬಗೆ ಹೇಗೆ; ಮಂತ್ರಿಗಳು ವ್ಯತಿರಿಕ್ತವರ್ತನೆ ಮಾಡಿದಲ್ಲಿನ ಪರಿಣಾಮ; ಇದರ ಜೊತೆಜೊತೆಯಲ್ಲಿ ದೈನಂದಿನ ಜೀವನದಲ್ಲಿ ನಮ್ಮ ಆಚರಣೆ ಹೇಗಿರಬೇಕು; ಮುಂದಾಲೋಚನೆ, ಸಾಮಾನ್ಯ ಜ್ಞಾನ, ದುಡುಕು ಮತ್ತು ಅದರ ಪರಿಣಾಮ; ಉತ್ತಮ ಬದುಕಿಗೆ ಬೇಕಾದ ನೀತಿಬೋಧೆಗಳು; ಇದೆಲ್ಲದರ ಮಾರ್ಗದರ್ಶನವನ್ನು ಕಥೆಗಳ ಮೂಲಕ ಸರಳವಾಗಿ, ಪರಿಣಾಮಕಾರಿಯಾಗಿ ಪ್ರತಿಭಾನ್ವಿತ ಶಿಕ್ಷಕರಾದ ವಿಷ್ಣುಶರ್ಮರು ರಾಜಕುಮಾರರಿಗೆ ಬೋಧಿಸಿದ್ದಾರೆ. ಮಾನವನ ಜೀವನದಲ್ಲಿ ಉನ್ನತ ಮೌಲ್ಯಗಳನ್ನು ಪರಿಚಯಿಸಲು ಪಂಚತಂತ್ರ ಒಂದು ಉತ್ತಮ ವಿಧಾನವಾಗಿದೆ. ಇದರಲ್ಲಿನ ಸುವ್ಯವಸ್ಥಿತ ಕಥೆಗಳ ಮೂಲಕ ಮನೋವಿಜ್ಞಾನ, ವ್ಯಾವಹಾರಿಕ ಮತ್ತು ರಾಜನೀತಿಯ ಸಿದ್ಧಾಂತಗಳ ಪರಿಚಯವಾಗುತ್ತದೆ. ಸಂಸ್ಕೃತ ಕಥಾ ಸಾಹಿತ್ಯಲೋಕದ ಹೂವಿನ ತೋಟದಲ್ಲಿ ಪಂಚತಂತ್ರವು ಒಂದು ಗುಲಾಬಿ ಹೂವಿನಂತೆ ಅಲಂಕೃತವಾಗಿದ್ದು ತನ್ನ ನೀತಿ ಶಾಸ್ತ್ರದ ಕಂಪನ್ನು ಪಸರಿಸುತ್ತಿದೆ ಎಂದು ಹೇಳಬಹುದು.

निन्दन्तु नीतिनिपुणा यदि वा स्तुवन्तु
लक्ष्मीःसमाविशतु गच्छतु वा यथेष्टम् ।
अद्यैव वा मरणमस्तु युगान्तरे वा
न्याय्यात्पथः प्रविचलन्ति पदं न धीराः ॥[17]

ನೀತಿನಿಪುಣರು ನಿಂದಿಸಲಿ, ಹೊಗಳಲಿ; ಸಂಪತ್ತು ಬರಲಿ ಅಥವಾ ಹೊರಟು ಹೋಗಲಿ, ಸಾವು ಈಗಲೇ ಬರಲಿ ಅಥವಾ ಕಾಲಾಂತರದಲ್ಲಿ ಬರಲಿ ಧೀರರು ನ್ಯಾಯಮಾರ್ಗವನ್ನು ಬಿಟ್ಟು ಸ್ವಲ್ಪವೂ ಕದಲುವುದಿಲ್ಲ.

---

17. **ಭರ್ತೃಹರಿಯ ನೀತಿಶತಕ** –ಧೈರ್ಯ ಪದ್ಧತಿ– ಶ್ಲೋ–84.

ನೈತಿಕ ಎಂಬ ಪದ ವ್ಯಕ್ತಿಯ ಆಂತರಿಕ ಸ್ವರೂಪ ಮತ್ತು ಸಮಾಜ ಒಪ್ಪಿದ ಮೌಲ್ಯಗಳಗನುಗುಣವಾಗಿರುವ ವೈಯುಕ್ತಿಕ ಗುಣಗಳ ವ್ಯವಸ್ಥೆಯನ್ನು ಸೂಚಿಸುತ್ತದೆ. ಹಾರ್ವರ್ಡ್ ವಿಶ್ವವಿದ್ಯಾಲಯದ ಮನೋವಿಜ್ಞಾನಿ **LAWRENCE KOHLBERG** ರವರು ಹೇಳುವ ಪ್ರಕಾರ ಮಕ್ಕಳು ತಮ್ಮದೇ ಆದ ನೈತಿಕ ಮಾನಗಳನ್ನು ರೂಪಿಸಿಕೊಳ್ಳುತ್ತಾರೆ. ಅವುಗಳು ಸಾಮಾಜಿಕ ಪರಿಸರ ಮತ್ತು ಮಕ್ಕಳ ಜ್ಞಾನಾತ್ಮಕ ಸಂರಚನೆಯ ಅಂತರ್ ಕ್ರಿಯೆಯಿಂದ ಉದ್ಭವಿಸುತ್ತವೆ. ನೈತಿಕ ವಿಕಾಸವೆಂದರೆ ಸಾಮಾಜಿಕ ಹಾಗೂ ನೈತಿಕ ಮೌಲ್ಯಗಳನ್ನು ಕಲಿಯುವುದಾಗಿದೆ. ಇದು ಪ್ರಾಮಾಣಿಕತೆ, ದಯಾಳುತನ, ದಾನ, ಧರ್ಮ, ಸೇವೆ, ವಿಧೇಯತೆ ಇತ್ಯಾದಿ ವಿಷಯಗಳನ್ನು ಕಲಿಯುವುದಾಗಿದೆ. ಇದೆಲ್ಲ ಸುಂದರ ಬದುಕಿನ ಉತ್ತಮ ಲಕ್ಷಣಗಳು ಹಾಗೂ ಜೀವನ ಶಿಕ್ಷಣದ ಪರಿಣಾಮಗಳು. ಆದ್ದರಿಂದ ನೈತಿಕ ವಿಕಾಸವು ಪ್ರತಿಯೋರ್ವ ವ್ಯಕ್ತಿಗೂ ಸಾರ್ಥಕ ಜೀವನಕ್ಕೆ ಬೇಕಾದ ಬೆಳವಣಿಗೆಯಾಗಿದೆ. ನೈತಿಕ ವಿಕಾಸವೆಂದರೆ ಯಾವುದು ಸರಿ? ಯಾವುದು ತಪ್ಪು? ಯಾವುದು ಒಳ್ಳೆಯದು? ಯಾವುದು ಕೆಟ್ಟದ್ದು? ಎಂಬುದನ್ನು ಆಲೋಚಿಸಿ ತಿಳಿಯುವುದಾಗಿದೆ.[18] ಇಂತಹ ಪರಿಕಲ್ಪನೆಯನ್ನು ಹದಿಹರೆಯದವರು ತಮ್ಮ ಮನೋಭಾವಗಳು ಮತ್ತು ನಡತೆಯನ್ನು ಸಮಾಜದ ನಿರೀಕ್ಷಣೆಗನುಗುಣವಾಗಿ ರೂಪಿಸಿಕೊಳ್ಳಬೇಕಾದುದು ಅತ್ಯಾವಶ್ಯಕ. ನೈತಿಕ ಪರಿಕಲ್ಪನೆಗಳ ಸರಿತಪ್ಪುಗಳನ್ನು ಈ ಹಂತದಲ್ಲಿ ಸ್ವಯಂ ವಿವೇಚಿಸಿ, ನಂತರ ತಮ್ಮದೇ ಆದ ನೈತಿಕ ಸೂತ್ರಗಳನ್ನು ರೂಪಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ತರುಣತರುಣಿಯರು ತಮ್ಮ ನೈತಿಕ ನಂಬಿಕೆಗಳಿಗೆ ಅನುಗುಣವಾಗಿ ವರ್ತಿಸುತ್ತಾರೆ. ಈ ಹಂತದಲ್ಲಿ ಹದಿಹರೆಯದವರಲ್ಲಿ ಅಂತಃಪ್ರಜ್ಞೆಯು ಬೆಳವಣಿಗೆಯಾಗಿ ವ್ಯಕ್ತಿಯ ವರ್ತನೆಯನ್ನು ನಿಯಂತ್ರಿಸುತ್ತದೆ. ಅಂತಃಪ್ರಜ್ಞೆಯೆಂದರೆ ಆಂತರಿಕ ನಿರ್ಣಯ ಶಕ್ತಿ. ಸಾಮಾಜಿಕ ನಿರೀಕ್ಷೆ, ಮನ್ನಣೆ ಮತ್ತು ನಿರಾಕರಣೆಗಳು ಅದರ ಬೆಳವಣಿಗೆಗೆ ಬೇಕಾದ ಅಭಿಪ್ರೇರಣೆಯನ್ನು ಉಂಟುಮಾಡುತ್ತವೆ. ತನ್ನ ವರ್ತನೆ ಸಮಾಜದ ಅಪೇಕ್ಷೆಗೆ ವ್ಯತಿರಿಕ್ತವಾಗಿದೆಯೆನ್ನಿಸಿದರೆ ವ್ಯಕ್ತಿಯಲ್ಲಿ ದೋಷಪ್ರಜ್ಞೆ ಉಂಟಾಗುತ್ತದೆ. ಹಾಗೆಯೇ ತನ್ನ ವರ್ತನೆಯ ಬಗ್ಗೆ ಇತರರಲ್ಲಿ ಉಂಟಾಗುವ ಅಹಿತ ಭಾವನೆಯ ಪರಿವೆ ಬಂದಾಗ ಅವನಲ್ಲಿ ನಾಚಿಕೆ, ಸಂಕೋಚ ಭಾವ ಉಂಟಾಗುತ್ತದೆ. ಇದರ ಪರಿಣಾಮ ದೋಷಪ್ರಜ್ಞೆ ಹಾಗೂ ನಾಚಿಕೆಭಾವಗಳೆರಡೂ ಅಂತಃಪ್ರಜ್ಞೆಯಲ್ಲಿ ಅಂತರ್ಗತವಾಗಿ ವ್ಯಕ್ತಿಯ ವರ್ತನೆಯಲ್ಲಿ ಒಳ್ಳೆಯ ನಿಯಂತ್ರಣ ಉಂಟಾಗುತ್ತದೆ.

अधीत्य चतुरो वेदान् व्याकृत्याष्टादश स्मृतीः ।

अहो श्रमस्य वैफल्यं आत्मापि कलितो न चेत् ॥[19]

---

18. **ವಾಮದೇವಪ್ಪ ಎಚ್. ವಿ.,** ಶೈಕ್ಷಣಿಕ ಮನೋವಿಜ್ಞಾನ, ಅ–2, ಪು–57.ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.(2005)
19. **ಸುಭಾಷಿತಮಂಜರೀ,** ವಿವೇಕ– ಶ್ಲೋ–6, ಪು– 266.(2001), ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18.

ಅಂದರೆ ಆತ್ಮಜ್ಞಾನ ಎಷ್ಟು ಮುಖ್ಯ ಎಂಬುದನ್ನು ಈ ಶ್ಲೋಕವು ತಿಳಿಸುತ್ತದೆ. ನಾಲ್ಕು ವೇದಗಳನ್ನೂ ಕಲಿತು ಹದಿನೆಂಟು ಸ್ಮೃತಿಗಳನ್ನು ವ್ಯಾಖ್ಯಾನ ಮಾಡಿಯೂ ಆತ್ಮಜ್ಞಾನ ಸಂಪಾದಿಸದೇ ಹೋದಮೇಲೆ ಅಷ್ಟು ಶ್ರಮವೂ ವ್ಯರ್ಥವೇ ಸರಿ.

ಇಲ್ಲಿ ವ್ಯಕ್ತಿಯ ವರ್ತನೆಗಳ ಪರಿವರ್ತನೆಯೇ ಶಿಕ್ಷಣ. ಶಿಕ್ಷಣದ ಮೂಲಭೂತ ಉದ್ದೇಶವೇ ಅದನ್ನು ಪಡೆಯುವವನಿಗೆ ಬೆಳಕನ್ನು ನೀಡುವುದು. ಆ ಬೆಳಕಿನಲ್ಲಿ ಅವನ ಜೀವನ ಪ್ರಯಾಣವನ್ನು ಚೆನ್ನಾಗಿಸಿಕೊಳ್ಳಲು ಅವಶ್ಯಕವಾದ ಸಂಸ್ಕಾರವನ್ನು ಒದಗಿಸುವುದು.[20]

यज्जीव्यते क्षणमपि प्रथितं मनुष्यैः

विज्ञानशौर्यविभवार्यगुणैः समेतम् ।

तन्नामजीवितमिह प्रवदन्ति तज्ज्ञाः

काकोऽपि जीवति चिरञ्च बलिं च भुङ्क्ते ॥[21]

ಜ್ಞಾನ, ಪರಾಕ್ರಮ, ವೈಭವ ಮೊದಲಾದ ಸದ್ಗುಣಗಳಿಂದ ಕೂಡಿ ಮನುಷ್ಯರು ಪ್ರಖ್ಯಾತರಾಗಿ ಒಂದು ಕ್ಷಣ ಬದುಕಿದರೂ ಅದು ನಿಜವಾದ ಜೀವನ ಎಂದು ಜ್ಞಾನಿಗಳು ಹೇಳುತ್ತಾರೆ. ಕಾಗೆಯೂ ಸಹ ಬಹಳ ಕಾಲ ಬದುಕಿರುತ್ತೆ ಇತರರ ಕೆಟ್ಟ ಅನ್ನವನ್ನು ತಿಂದುಕೊಂಡು. ಹೀಗೆ ಸದ್ಗುಣಗಳಿಂದ ಕೂಡಿದ ವ್ಯಕ್ತಿಗಳ ಜೀವನ ಎಷ್ಟು ಶ್ರೇಷ್ಠ ಹಾಗೂ ಅವರ ಬದುಕು ಎಷ್ಟು ಪ್ರಶಸ್ತ ಎಂಬ ತಿಳುವಳಿಕೆಯನ್ನು ಈ ಶ್ಲೋಕದಲ್ಲಿ ಸ್ಪಷ್ಟಪಡಿಸಲಾಗಿದೆ.

ಪಂಚತಂತ್ರದಲ್ಲೂ ರಾಜಕುಮಾರರ ಸಾರ್ಥಕ ವ್ಯಕ್ತಿತ್ವ ನಿರ್ಮಾಣ ಕಾರ್ಯದಲ್ಲಿ ವಿಷ್ಣುಶರ್ಮರೂ ಇದೇ ಹಿನ್ನೆಲೆಯಲ್ಲಿ ನೀತಿಬೋಧೆಗಳ ಮೂಲಕ ಆಕರ್ಷಕ ಕಥಾ ಮಾಧ್ಯಮದಲ್ಲಿ ಸೂಕ್ತ ಸಂದರ್ಭಗಳನ್ನು ನಿರ್ಮಿಸಿ ಸಮೂಹದ ನಿರೀಕ್ಷೆಯನ್ನು ಸ್ವತಃ ಅರ್ಥೈಸಿಕೊಂಡು ಅದಕ್ಕೆ ತಕ್ಕಂತೆ ತಮ್ಮ ವರ್ತನೆಗಳನ್ನು ರೂಪಿಸಿಕೊಂಡು ಭವಿಷ್ಯತ್ ಜೀವನವನ್ನು ಸೊಗಸಾಗಿ ಸಾಗಿಸಲೆಂದು ಪ್ರೇರಣೆ ಒದಗಿಸಿದ್ದಾರೆ. ಸಾರ್ವತ್ರಿಕ ನೈತಿಕ ತತ್ವಗಳನ್ನು ಆಧರಿಸಿ, ಸದ್ವರ್ತನೆಯ ಮಾರ್ಗದರ್ಶನ ನೀಡಬಲ್ಲ ನೀತಿಸಂಹಿತೆಯನ್ನು ನಿರ್ಮಾಣಮಾಡಿ, ಅದಕ್ಕನುಗುಣವಾಗಿ ತಮ್ಮ ವರ್ತನೆಯನ್ನು ತಾವೇ ನಿಯಂತ್ರಿಸಿಕೊಳ್ಳಲು ರಾಜಕುಮಾರರು

---

20. **ವಾಮದೇವಪ್ಪ. ಎಚ್. ಎಸ್.** ಶೈಕ್ಷಣಿಕ ಮನೋವಿಜ್ಞಾನ, ಅ-2, ಪು-68-69,78-79,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005

21. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಪ್ರ.ತಂ. ಶ್ಲೋ-24, ಪು -25,( 1993).ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ವಿವೇಚಿಸುವಂತೆ ವಿಷ್ಣುಶರ್ಮರು ಆತ್ಮೀಯವಾಗಿ ಪ್ರೋತ್ಸಾಹಿಸಿದ್ದಾರೆ. ಉತ್ತಮ ಕಲಿಕಾ ಸನ್ನಿವೇಶ ಮತ್ತು ವ್ಯಕ್ತಿತ್ವದ ಸರ್ವಾಂಗೀಣ ಬೆಳವಣಿಗೆಗೆ ಬೇಕಾದ ಪರಿಸರವನ್ನು ಒದಗಿಸಿಕೊಟ್ಟಿದ್ದಾರೆ.

ಈ ಅಧ್ಯಾಯದಲ್ಲಿ ವಿಚಾರ ಮಾಡಿರುವ ಅನೇಕ ಶೈಕ್ಷಣಿಕ ಅಂಶಗಳು ಎಷ್ಟರಮಟ್ಟಿಗೆ ಶೈಕ್ಷಣಿಕ ಮನೋವಿಜ್ಞಾನದ ಪರಿಕಲ್ಪನೆಯನ್ನು ಸ್ಪಷ್ಟಗೊಳಿಸುತ್ತವೆ ಎಂಬುದಕ್ಕೆ ಶಿಕ್ಷಣದ ಬಗ್ಗೆ ಕೆಲವು ಮಹಾನ್ ವ್ಯಕ್ತಿಗಳು ಹೀಗೆ ಹೇಳಿರುವುದನ್ನು ಪರಿಶೀಲಿಸಬಹುದು.[22]

1. "ನಿಜವಾದ ಶಿಕ್ಷಣವೆಂದರೆ ಮಾನವೀಯತೆಯ ವಿಕಾಸ." .....ಸ್ವಾಮಿ ವಿವೇಕಾನಂದರು.

2. "ವಿದ್ಯಾಭ್ಯಾಸ ಯಾವ ದಿಕ್ಕಿನಲ್ಲಿ ಮನುಷ್ಯನನ್ನು ನಡೆಸುವುದೋ ಅದೇ ಅವನ ಭವಿಷ್ಯವನ್ನು ನಿರ್ಧರಿಸುವುದು." **PLATO.**

3. "ಶಿಕ್ಷಣದ ಮುಖ್ಯ ಕೆಲಸ ನಮ್ಮ ಬದುಕನ್ನು ಅರ್ಥಪೂರ್ಣವಾಗುವಂತೆ ಸಹಕರಿಸುವುದು." **SPENSER**

4. "ಶಿಕ್ಷಣ ಪ್ರತಿವ್ಯಕ್ತಿಯಲ್ಲಿ ಪರಿಪೂರ್ಣತೆಯನ್ನು ತರಬೇಕು. ಜೀವನದಲ್ಲಿ ಮುನ್ನಡೆಸುವ ಸಾಮರ್ಥ್ಯವನ್ನು ನೀಡಬೇಕು." **JIDDU KRISHNAMURTHY**

5. "ಶಿಕ್ಷಣವೆಂದರೆ ಪುಸ್ತಕದ ಜ್ಞಾನವೇ ಮಾತ್ರವಲ್ಲ. ಸಂಸಾರ, ಮನುಷ್ಯ, ಮತ್ತು ಕಾರ್ಯಕಲಾಪಗಳ ಪರಸ್ಪರ ಸಂಯೋಜನೆ." **EDMUND BURKE**

6. "ಶಿಕ್ಷಣವು ಮನುಷ್ಯನನ್ನು ಶ್ರೇಷ್ಠ ನಾಗರಿಕನನ್ನಾಗಿ ಮಾಡುತ್ತದೆ." ಡಾ. ಎಸ್. ರಾಧಾಕೃಷ್ಣನ್.

7. "ಮನುಷ್ಯರಲ್ಲಿ ಪ್ರೇಮವನ್ನು ಮೂಡಿಸುವ, ಸರಳ ಜೀವನವನ್ನು ಕಲಿಸುವ ವಿದ್ಯೆಯೇ ಶ್ರೇಷ್ಠವಾದದ್ದು." **LEO TOLSTOY,**

8. "ಶಿಕ್ಷಣವೇ ಜೀವನದ ಬೆಳಕು." ಗೊರೂರು ರಾಮಸ್ವಾಮಿ ಅಯ್ಯಂಗಾರ್.

ಮೇಲಿನ ಎಲ್ಲ ವ್ಯಾಖ್ಯಾನಗಳನ್ನು ಸೂಕ್ಷ್ಮವಾಗಿ ಗಮನಿಸಿ ವಿಶ್ಲೇಷಿಸಿದರೆ ಒಟ್ಟಾರೆ ಸಾರಾಂಶವು ಶಿಕ್ಷಣದ ಮೂಲಭೂತ ಉದ್ದೇಶವನ್ನು ಸ್ಪಷ್ಟವಾಗಿ ಮೂಲಭೂತ ಉದ್ದೇಶವನ್ನು ಸ್ಪಷ್ಟಗೊಳಿಸುತ್ತದೆ.

---

22. **ಶಿಕ್ಷಣದ ಬಗೆಗಿನ ನುಡಿಮುತ್ತುಗಳು–ಪಿಸುಮಾತು,** https://pisumathu4u.blogspot.com

ಶಿಕ್ಷಣವು ಸುಂದರ ಸುಮಧುರ ಬದುಕಿಗಾಗಿ, ಸಾರ್ಥಕ ಜೀವನಕ್ಕಾಗಿ ಎಂಬುದು ಅರ್ಥವಾಗುತ್ತದೆ. ಮಹಾತ್ಮಾ ಗಾಂಧೀಜಿಯವರು ಒಂದು ಒಳ್ಳೆಯ ಉಕ್ತಿಯನ್ನು ಮಾನವನ ಜೀವನ ಕುರಿತು ಹೇಳಿದ್ದಾರೆ. ಅದು ಎಷ್ಟು ಸರಳ ಹಾಗೂ ಅರ್ಥಗರ್ಭಿತ ಎಂದರೆ "ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ, ಭಾವನಾತ್ಮಕವಾಗಿ, ನೈತಿಕವಾಗಿ ಸಮರ್ಥರನ್ನಾಗಿಸುವುದೇ ಶಿಕ್ಷಣ" ಎಂದಿದ್ದಾರೆ. ಈ ಎಲ್ಲ ಸಾಮರ್ಥ್ಯಗಳನ್ನು ಪ್ರಾಪ್ತಿಗೊಳಿಸಿ ವ್ಯಕ್ತಿಯನ್ನು ಒಂದು ಸಾಮಾಜಿಕ ಶಕ್ತಿಯಾಗಿ ಪರಿವರ್ತಿಸಿ, ಸಾರ್ಥಕ ಜೀವನ ನಡೆಸಲು ಪ್ರೋತ್ಸಾಹಿಸುವುದೇ ಜೀವನ ಶಿಕ್ಷಣ. "**Education is life and: life is education**[23] "ಜೀವನವೇ ಶಿಕ್ಷಣ, ಶಿಕ್ಷಣವೇ ಜೀವನ" **JOHN DEWEY. According to him- "Education is not preparation for life; Education is life itself." It is through education that you can change the face of the world.**

ಎಂದಿನಿಂದಲೂ ಸಮಾಜಕ್ಕೆ ಬೇಕಾಗಿರುವುದು ಜೀವನದೊಂದಿಗೆ ಸ್ನೇಹ ಬೆಳೆಸುವ ಶಿಕ್ಷಣ. ಜ್ಞಾನವನ್ನು ಹಿಗ್ಗಿಸುವ ಸಮೂಹ ಮಾಧ್ಯಮಗಳು ಶುದ್ಧ ರಾಜಕೀಯ ಅಡಿಪಾಯ, ಪ್ರೀತಿವಾತ್ಸಲ್ಯ ತುಂಬುವ ಸಾಮಾಜಿಕ ಧಾರ್ಮಿಕ ರೀತಿನೀತಿಗಳು ತಪ್ಪನ್ನು ತಿದ್ದಿ ಹೇಳುವ ಕೌಟುಂಬಿಕ ಹಿನ್ನೆಲೆಯಿರಬೇಕು. ಪ್ರಯತ್ನ ಶೀಲತೆಯಿರಬೇಕು. ಡಿ.ವಿ.ಜಿ ಯವರು ಮಾನವನ ಯತ್ನದ ಬಗ್ಗೆ ಹೀಗೆ ಹೇಳಿರುವುದನ್ನು ಸ್ಮರಿಸಿಕೊಳ್ಳಬಹುದು.

**ಯತನ ಕರ್ತವ್ಯವದು, ನಮಗೆ ವಿದ್ಯಾಭ್ಯಾಸ, ಹಿತಪರಿಜ್ಞಾನ ಯತ್ನಾನುಭವ ಫಲಿತ**

**ಸತತಯತ್ನ ದಿನಾತ್ಮಶಕ್ತಿ ಪರಿವರ್ಧಿಪುದು ಯತನ ಜೀವನ ಶಿಕ್ಷೆ-ಮಂಕುತಿಮ್ಮ** ||[24]

"ಪ್ರಯತ್ನಿಸುತ್ತಿರುವುದು" ನಮ್ಮ ಕರ್ತವ್ಯ. ಅದು ನಮಗೆ ಶಿಕ್ಷಣವನ್ನು ಕೊಡುತ್ತದೆ. ಸಕಲರಿಗೂ ಹಿತ ಯಾವುದು ಎನ್ನುವುದರ ತಿಳುವಳಿಕೆ ಈ ಪ್ರಯತ್ನಗಳಿಂದಾಗುತ್ತದೆ. ಸತತವಾಗಿ ಪ್ರಯತ್ನಿಸುವುದರಿಂದ ನಮ್ಮ ಆತ್ಮಶಕ್ತಿ ವರ್ಧಿಸುತ್ತದೆ. ಈ ತರಹದ ಪ್ರಯತ್ನಿಸುವಿಕೆಯೇ ನಮ್ಮ ಜೀವನಕ್ಕೆ ಶಿಕ್ಷಣ. ಜೀವನ ಎನ್ನುವುದು ಅಮೂಲ್ಯವಾದದ್ದು. ಅದನ್ನು ಸಂಬಾಳಿಸಿಕೊಂಡು ಸರಿಯಾದ ದಿಕ್ಕಿನಲ್ಲಿ ಸತತ ಸ್ವಪ್ರಯತ್ನದೊಂದಿಗೆ ಸಮಾಜಕ್ಕೆ ಸ್ನೇಹಮಯವಾದ ಬದುಕು ನೀಡಬೇಕಾದದ್ದು ನಮ್ಮ ಕರ್ತವ್ಯ.[25] "ಪ್ರಯತ್ನವೇ ಪರಮೇಶ್ವರ, ಪರಿಶ್ರಮವೇ ಪರಮಪೂಜೆ "ಎಂದು ಶ್ರದ್ಧಾಭಕ್ತಿಯಿಂದ ಕಾಯಕದಲ್ಲಿ ತೊಡಗಿಸಿಕೊಳ್ಳಬೇಕು.

ವ್ಯಕ್ತಿಯ ಜೀವನ, ಸಮಾಜ, ಅರ್ಥವ್ಯವಸ್ಥೆ, ರಾಜಕಾರಣಗಳೆಲ್ಲವೂ ಮೌಲ್ಯಾಧಾರಿತವಾಗಬೇಕು.

---

**23. Narayanamurthy D.R ,** A Short Hand Book On Philosophical And Sociological Foundation Of Education, P-7.. Institute of Education, Mysore(1972)

24. **ಶ್ರೀಕಾಂತ್,** ಡಿ.ವಿ.ಜಿ.ರವರ ಮಂಕುತಿಮ್ಮನ ಕಗ್ಗ- ತಾತ್ಪರ್ಯ, ಪದ್ಯ ಸಂ-867. ಪು-296,(2012) 226, 8ನೇ ಅಡ್ಡ ರಸ್ತೆ, 19ನೇ'ಡಿ'ಮುಖ್ಯ ರಸ್ತೆ, ರಾಜಾಜಿನಗರ, 1ನೇ ಬ್ಲಾಕ್, ಬೆಂಗಳೂರು-560010.

25. **ಶಿಕ್ಷಣ ಮತ್ತು ಜೀವನ, ಸಂಪದ,** https://sampada.net

ಮೌಲ್ಯಗಳ ಅಳವಡಿಕೆಯಿಂದ ವ್ಯಕ್ತಿಯ ಬದುಕಿಗೆ ಒಂದು ನೀತಿ, ವ್ಯಕ್ತಿ ಗೌರವ ಮತ್ತು ಘನತೆ ವೃದ್ಧಿಸಿ, ಚಿನ್ನದಂತೆ ಪರಿಶುದ್ಧಗೊಂಡು ಬದುಕು ಬಂಗಾರವಾಗುವುದು. ಹಾಗೆಯೇ ವ್ಯಕ್ತಿತ್ವ ಸಂಪೂರ್ಣವಾಗಿ ವಿಕಾಸಗೊಳ್ಳುವುದು. ಮೌಲ್ಯಗಳು ನಮ್ಮ ಬದುಕಿನಲ್ಲಿ ಆಸ್ತಿ ಇದ್ದಂತೆ. ಇನ್ನು ಸಂಸ್ಕಾರ–ಸಂಸ್ಕೃತಿಗಳು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕಾದ ಮಹತ್ವದ ಮೌಲ್ಯಗಳು. ಉತ್ತಮ ಜೀವನ ನಡೆಸಬೇಕಾದರೆ ಇವೆರಡೂ ಅತ್ಯಗತ್ಯವಾಗಿದೆ. ಮೌಲ್ಯವರ್ಧನೆ ಎಂದರೆ ವ್ಯಕ್ತಿಗಳಲ್ಲಿ ನೈತಿಕ ಸದ್ಗುಣಗಳಾದ ಶ್ರದ್ಧೆ, ನಿಷ್ಠೆ, ಪ್ರಾಮಾಣಿಕತೆ, ಸಹನೆ, ಅನುಕಂಪ, ಸತ್ಯ, ನ್ಯಾಯ, ಸಚ್ಚಾರಿತ್ರ್ಯ, ಅಹಿಂಸೆ, ಸಹಕಾರ, ಬ್ರಾತೃಭಾವನೆ, ಸಹಿಷ್ಣುತಾಭಾವ ಇವೇ ಮೋದಲಾದ ಗುಣಗಳನ್ನು ಬೆಳೆಸುವುದಾಗಿರುತ್ತದೆ. ಇವೆಲ್ಲವೂ ಉತ್ತಮ ನಿತಿಬೋಧೆಯಿಂದ ಮಾತ್ರ ಸಾಧ್ಯವಾಗುವುದು.



## 7–2. ವಿದ್ಯೆ-ಬುದ್ಧಿ – ಸಾಮಾನ್ಯ ಜ್ಞಾನ.

हर्तुर्याति न गोचरं किमपि शं पुष्णाति यत्सर्वदा

ऽप्यर्थिभ्यः प्रतिपाद्यमानमनिषं प्राप्नोति वृद्धिं पराम् ।

कल्पान्तेष्वपि न प्रयाति निधनं विद्याख्यमन्तर्धनं

येषां तान् प्रति मानमुज्झत नृपाः कस्तैः सह स्पर्धते ॥[26]

ವಿದ್ಯೆಯೆಂಬ ಗುಪ್ತಸಂಪತ್ತು ದೋಚುವವರ ಕಣ್ಣಿಗೆ ಬೀಳುವುದಿಲ್ಲ. ಅದು ಬಣ್ಣಿಸಲಸಾಧ್ಯವಾದ ಹಿತವನ್ನುಂಟುಮಾಡುತ್ತದೆ. ಬೇಡುವವರಿಗೆ ಅದು ಕೊಡುತ್ತಿದ್ದರೂ ಹೆಚ್ಚುತ್ತಾಹೋಗುತ್ತದೆ. ಪ್ರಳಯಕಾಲದಲ್ಲೂ ಸಹ ಅದು ನಾಶವನ್ನು ಹೊಂದುವುದಿಲ್ಲ. ಎಲೈ ಅರಸರೇ, ಯಾರಲ್ಲಿ ಇಂತಹ ವಿದ್ಯಾಸಂಪತ್ತು ಇದೆಯೋ ಅವರಲ್ಲಿ ದರ್ಪವನ್ನು ಬಿಡಿ. ಏಕೆಂದರೆ ಅವರೊಂದಿಗೆ ಯಾರು ಸ್ಪರ್ಧಿಸಬಲ್ಲರು? ಇಲ್ಲಿ ವಿದ್ಯೆಯೆಂಬುದು ಎಂಥಹ ಸಂಪತ್ತು ! ಇದರ ಘನತೆ, ಗೌರವ ಎಷ್ಟೆಂಬುದನ್ನು ಈ ಶ್ಲೋಕದಲ್ಲಿ ಬಹಳ ಸೊಗಸಾಗಿ ವರ್ಣಿಸಲಾಗಿದೆ.

ಸಂಸ್ಕೃತ, ಪಾಳಿ ಮತ್ತು ಸಿಂಹಳ ಭಾಷೆಯಂತಹ ಹಲವಾರು ದಕ್ಷಿಣ ಏಷ್ಯಾದ ಭಾಷೆಗಳಲ್ಲಿ ವಿದ್ಯೆ ಎಂದರೆ ಸರಿಯಾದ ಜ್ಞಾನ ಅಥವಾ ಸ್ಪಷ್ಟತೆ ಎಂದು ಅರ್ಥ. ಉಪನಿಷತ್ತಿನಲ್ಲಿ ಯಾವುದು ವಿದ್ಯೆ ಮತ್ತು ಅವಿದ್ಯೆ ಎಂದು ತಿಳಿಯಲ್ಪಟ್ಟಿರುವವೋ ಅವೆರಡರ ವಿರುದ್ಧದಿಕ್ಕಿನಲ್ಲಿ, ಭಿನ್ನವಾಗಿ ಭಿನ್ನಗತಿಯುಳ್ಳವು. ನಚಿಕೇತನನ್ನು ವಿದ್ಯಾಭಿಲಾಷೆ ಉಳ್ಳವನು ಎಂದು ಭಾವಿಸಲಾಗಿದೆ.

दूरमेते विपरीते विषूचि अविद्या या च विद्येति ज़ाता ।

विद्याभीप्सिनं नचिकेतसं मन्ये न त्वा कामा बहवोऽलोलुपन्त ॥[27]

ವಿದ್ಯೆಯೆಂದರೆ ಜ್ಞಾನ. ಇದು ವಸ್ತು ಹೇಗಿದೆಯೋ ಹಾಗೆ ನೋಡುವುದು. ನೋಡುವಾಗ ಯಾವ ಬಣ್ಣದ ಕನ್ನಡಕವನ್ನೂ ಅವನು ಹಾಕಿಕೊಳ್ಳುವುದಿಲ್ಲ. ಅವಿದ್ಯೆ ಎಂದರೆ ಅಜ್ಞಾತ ವಸ್ತು. ಈಗ ತತ್ಕಾಲಕ್ಕೆ ಹೇಗೆ ಕಾಣುತ್ತದೆಯೋ ಹಾಗೆಯೇ ಮುಂದೆಯೂ ಇರುತ್ತದೆ ಎಂದು ಭಾವಿಸುವನು. ವಸ್ತುವಿನ ನಿಜಸ್ಥಿತಿಯನ್ನು ನೋಡುವುದಕ್ಕೆ ಅವನಿಗೆ ಆಸೆ ಇಲ್ಲ. ಅವಿದ್ಯೆ ಬಾಹ್ಯದಲ್ಲಿ ಕಾಣುವುದೇ ನಿಜವೆಂದು ಭಾವಿಸುವುದು. ಅಲ್ಲಿಗೆ

26. **ಭರ್ತೃಹರಿಯ ನೀತಿಶತಕ,** ವಿದ್ವತ್ ಪದ್ಧತಿ– ಶ್ಲೋ–16.
27. **ಕಠೋಪನಿಷತ್ತು,** ಅ–1, ದ್ವಿ.ವ.– ಶ್ಲೋ–4–ವಿದ್ಯೆ–ಅವಿದ್ಯೆ.

ವಿದ್ಯೆ ಮತ್ತು ಅವಿದ್ಯೆ ನೋಡುವುದಕ್ಕೆ ಪರಸ್ಪರ ವಿರೋಧ. ಅವಿದ್ಯೆಯಿಂದ ವಿದ್ಯೆಗೆ ಬಹಳ ಅಂತರವಿದೆ. ಇವೆರಡರ ಗತಿಯೂ ಭಿನ್ನವಾಗಿದೆ. ಅವಿದ್ಯೆ ನಮ್ಮನ್ನು ಸಂಸಾರದ ಗೋಜಿನಲ್ಲಿ ಹೆಚ್ಚು ಹೆಚ್ಚು ಸಿಕ್ಕಿಸುತ್ತದೆ. ಆದರೆ ವಿದ್ಯೆ ನಮ್ಮನ್ನು ಜ್ಞಾನದ ಬೆಳದಿಂಗಳಿಗೆ ಕರೆದೊಯ್ಯುವುದು. ಅವಿದ್ಯೆಯ ಪ್ರಾರಂಭಿಕ ಹಾದಿ ಸುಗಮ. ಇದರಲ್ಲಿ ಇಂದ್ರಿಯ ಸುಖಗಳನ್ನು ಅನುಭವಿಸುವಾಗ ಆನಂದವಾಗುವುದು. ನಂತರದಲ್ಲಿ ಪರಿಣಾಮಗಳು ಎದುರಾದಾಗ, ಅಬ್ಬಾ ! ಎಂಥಹ ದುರಂತಗಳನ್ನು ಸ್ವಾಗತಿಸಿಬಿಟ್ಟೆನೆಂದು ಪಶ್ಚಾತ್ತಾಪ ಉಂಟಾಗುವುದು. ಆದರೆ ವಿದ್ಯೆಯ ಹಾದಿ ಮಾತ್ರ ಬಹಳ ಕಠಿಣ. ಮೊದಮೊದಲು ನೀರಸವಾಗುವುದು ಆದರೆ ಶ್ರದ್ಧಾಭಕ್ತಿಯಿಂದ ಪರಿಶ್ರಮದಿಂದ ಮುಂದೆ ಮುಂದೆ ಸಾಗಿದರೆ ಸ್ವಾರಸ್ಯ ಹುಟ್ಟುವುದು, ಜ್ಞಾನಾನಂದ ಉಂಟಾಗುವುದು. ಶಾಂತಿ ಸಮಾಧಾನ ದೊರಕುವುದು. ಶ್ರೇಯಸ್ಸಿಗೆ ವಿದ್ಯೆಯೂ ಪ್ರೇಯಸ್ಸಿಗೆ ಅವಿದ್ಯೆಯೂ ಸಾಧನಗಳಾಗಿವೆ. ಭಗವದ್ಗೀತೆಯಲ್ಲಿ ಕೃಷ್ಣ ಪರಮಾತ್ಮನು ವಿದ್ಯೆಯನ್ನು ಕುರಿತು ಹೀಗೆ ಉಪದೇಶಿಸಿದ್ದಾನೆ.

न हि ज्ञानेन सदृशं पवित्रमिह विद्यते ।

तत्स्वयं योगसंसिद्धः कालेनात्मनि विन्दति ।।[28]

ಈ ಜಗತ್ತಿನಲ್ಲಿ ಜ್ಞಾನಕ್ಕೆ ಸಮಾನವಾಗಿ ಪವಿತ್ರಗೊಳಿಸುವಂತಹದು ನಿಸ್ಸಂಶಯವಾಗಿ ಯಾವುದೂ ಇಲ್ಲ. ಆ ಜ್ಞಾನವನ್ನು ಎಷ್ಟೋ ಕಾಲದಿಂದ ಕರ್ಮಯೋಗದ ಮೂಲಕ ಶುದ್ಧಾಂತಃಕರಣವುಳ್ಳ ಮನುಷ್ಯನು, ತನ್ನಿಂದ ತಾನೇ ಆತ್ಮನಲ್ಲಿ ಪಡೆದುಕೊಳ್ಳುತ್ತಾನೆ. ಹಾಗೆಯೇ ಸಂಸ್ಕೃತ ಕವಿ ಭರ್ತೃಹರಿ ವಿದ್ಯೆಯಿಲ್ಲದವನ ಪರಿಸ್ಥಿತಿ ಏನಾಗುವುದೆಂದು ಈ ಶ್ಲೋಕದಲ್ಲಿ:-

येषां न विद्या न तपो न दानं ज्ञानं न शीलं न गुणो न धर्मः।

ते मर्त्यलोके भुवि भारभूता मनुष्यरूपेण मृगाश्चरन्ति।।[29]

ಯಾರಲ್ಲಿ ವಿದ್ಯೆ, ತಪಸ್ಸು, ದಾನಬುದ್ಧಿ, ತಿಳುವಳಿಕೆ, ಶೀಲ, ಸದ್ಗುಣ, ಧಾರ್ಮಿಕ ನಡತೆ ಇಲ್ಲವೋ ಅವರು ಮನುಷ್ಯ ಲೋಕದಲ್ಲಿ ಭೂಮಿಗೆ ಭಾರವಾಗಿ ಮನುಷ್ಯ ರೂಪ ತಳೆದ ಮೃಗಗಳಂತೆ ಸಂಚರಿಸುತ್ತಾರೆ. ಇದರಿಂದ ಅರ್ಥವಾಗುವುದೇನೆಂದರೆ, ಮನುಷ್ಯನಾದವನಿಗೆ ವಿದ್ಯೆ ಬಹಳ ಮುಖ್ಯ. ವಿದ್ಯೆಯೊಂದಿದ್ದರೆ ಉಳಿದೆಲ್ಲ ಗುಣಗಳೂ ತಾನಾಗಿಯೇ ಪ್ರಾಪ್ತವಾಗುವುವು.

---

28. **ಭಗವದ್ಗೀತೆ** ಅ-4, ಶ್ಲೋ-38.
29. **ಭರ್ತೃಹರಿ,** ನೀತಿಶತಕ-1-13.

ನಮ್ಮ ವೇದಗಳಿಗೆ ಶ್ರುತಿಯೆಂದು ಹೆಸರು. ಆ ಕಾಲದಲ್ಲಿ ಗುರುವಿನಿಂದ ಶಿಷ್ಯರು ಕೇಳಿ ಕಂಠಸ್ಥ ಮಾಡಿ ಉದಾತ್ತ ಅನುದಾತ್ತ ಸ್ವರ ಜಟೆಗಳು ಚಾಚೂ ತಪ್ಪದಂತೆ ಸಹಸ್ರ ಸಹಸ್ರ ವರ್ಷಗಳಿಂದ ಅದನ್ನು ರಕ್ಷಿಸಿಕೊಂಡು ಬಂದಿದ್ದಾರೆ. ಭಾರತೀಯ ಶಿಕ್ಷಣ ಪರಂಪರೆಯಲ್ಲಿ ವಿದ್ಯೆಯು ಮಸ್ತಕವಾಗಬೇಕೇ ಹೊರತು ಪುಸ್ತಕಸ್ಥವಾಗಿ ಇರಬಾರದು. ಒಂದು ವೇಳೆ ಯಾರಾದರೂ ಏನಾದರೊಂದು ವಿಷಯ ಕೇಳಿದಾಗ ತಕ್ಷಣ ಉತ್ತರಿಸದೆ ಮನೆಯಲ್ಲೋ, ಲೈಬ್ರರಿಯಲ್ಲೋ ಪುಸ್ತಕ ಪರಾಮರ್ಶಿಸಿ ತಿಳಿಸುತ್ತೇನೆ ಅಂದು ಬಿಟ್ಟರೆ, ಎಷ್ಟೇ ದೊಡ್ಡ ಪಂಡಿತನಾಗಿದ್ದರೂ ಕೇಳುಗರ ದೃಷ್ಟಿಯಲ್ಲಿ ಕುಬ್ಜನಾಗಿಬಿಡುತ್ತಾನೆ. ಕಲಿತ ವಿದ್ಯೆ ಕರಗತವಾಗಿದ್ದು ತಕ್ಷಣ ಸ್ಫುರಿಸುವಂತಿರಬೇಕು. ಒಂದು ಮಾತಿದೆ "अवसर पठिता वाणी गुणगणरहितापि शोभते पुंसाम् ।" ಅಂದರೆ ಸಕಾಲದಲ್ಲಿ ಹೊರಟ ಮಾತಿನಲ್ಲಿ ಅಲಂಕಾರಾದಿಗಳು ಇಲ್ಲದಿದ್ದರೂ, ಅದಕ್ಕೆ ಎಲ್ಲಿಲ್ಲದ ಶೋಭೆಯಿರುತ್ತದೆ. "ಹೊತ್ತಿಗೊದಗಿದ ಮಾತು ಸತ್ತವನು ಎದ್ದಂತೆ; ಹೊತ್ತಾಗಿ ನುಡಿದ ಮಾತು ಕೈಜಾರಿದ ಮುತ್ತಿನಂತಿಹುದು." ಎಂದು ಕನ್ನಡದ ಕವಿ ಸರ್ವಜ್ಞನೂ ಹೇಳಿದ್ದಾನೆ.[30]

ಇನ್ನು ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ವಿದ್ಯೆಯ ಬಗ್ಗೆ ಹೇಳುವುದಾದರೆ, ಪ್ರಾರಂಭದಲ್ಲಿ ವಿದ್ಯೆ ಎಂಬುದು ಜ್ಞಾನ ಸಂಪಾದನೆಗೆ ಮೀಸಲಾಗಿತ್ತು. ಕಾಲಕ್ರಮೇಣ ವಿದ್ಯೆಯ ಪರಿಭಾಷೆ ವಿಸ್ತಾರವಾಗುತ್ತಾ, ಪ್ರಸ್ತುತ ಸಂದರ್ಭದಲ್ಲಿ ವಿದ್ಯೆ–"ವಿದ್ಯಾರ್ಥಿಯ ಸರ್ವತೋಮುಖ ಅಭಿವೃದ್ಧಿ"ಎಂದು ವ್ಯಾಖ್ಯಾನಿಸಲ್ಪಡುತ್ತಿದೆ. "ವಿದ್" ಎಂದರೆ ಜ್ಞಾನ. ಇದರ ಅಭ್ಯಾಸವೇ " ವಿದ್ಯಾಭ್ಯಾಸ ." ಹೀಗೆ ವಿದ್ಯೆಯ ಪರಿಭಾಷೆ ವಿಸ್ತಾರಗೊಳ್ಳುತ್ತಾ, ಅದರ ಗುರಿಯೂ ಹಿಗ್ಗುತ್ತಾ ಇದೆ. ಅದೇನೇ ಆಗಿರಲಿ, ಜ್ಞಾನ ಎನ್ನುವುದು ಒಂದು ಶಕ್ತಿಯಾಗಿಯೇ ಉಳಿದಿದೆ. **(Knowledge is Power.)** ಪೌಷ್ಟಿಕ ಆಹಾರವು ಮನುಷ್ಯನ ದೇಹಕ್ಕೆ ಹೇಗೆ ಶಕ್ತಿಯನ್ನು ಹೆಚ್ಚಿಸುತ್ತದೋ ಹಾಗೆಯೇ ಪರಿಪಕ್ವ ಜ್ಞಾನವು ಮಾನಸಿಕ ಶಕ್ತಿಯನ್ನು ಹೆಚ್ಚಿಸುತ್ತದೆ. ಇವೆರಡರ ಸಮತೋಲನವೇ ವಿದ್ಯಾಭ್ಯಾಸದ ಗುರಿ. **(A Sound mind in a Sound body.)** ಇದರ ಸರಳ ವ್ಯಾಖ್ಯಾನ ಸರ್ವತೋಮುಖ ಅಭಿವೃದ್ಧಿ ಎಂದಾಗುವುದು.[31]

नास्ति विद्यासमं चक्षुर्नास्ति सत्यसमं तपः।

नास्ति रागसमं दुःखं नास्ति त्यागसमं सुखम् ।।[32]

ವಿದ್ಯೆಗೆ ಸಮನಾದ ಇನ್ನೊಂದು ಕಣ್ಣು ಇಲ್ಲ. ಸತ್ಯಕ್ಕೆ ಸಮನಾದ ತಪಸ್ಸಿಲ್ಲ. ಆಸಕ್ತಿಗೆ ಸಮವಾದ

30. **ಭಟ್.ವಿ.ಎನ್,** ಜ್ಞಾನ ದೀಪ, ಅ–61, ಪು–116.(1993) ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ–577201
31. **ವೀರಪ್ಪ. ಎನ್ ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–10, ಪು – 171–176,.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
32. **ಸುಭಾಷಿತಮಂಜರೀ,** ವಿವೇಕ–ಶ್ಲೋ–56, ಪು–277(2001), ಮಹಾಭಾರತ, ಶಾಂತಿ, 175–25, ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18.

ದುಃಖವಿಲ್ಲ. ತ್ಯಾಗಕ್ಕೆ ಸಮನಾದ ಸುಖವಿಲ್ಲ. ಹೀಗೆ ವಿದ್ಯೆ ಜ್ಞಾನಾಮೂಲ್ಯವಾದ ಕಣ್ಣು ಎಂಬುದಾಗಿ ಈ ಶ್ಲೋಕದಲ್ಲಿ ಕಂಡುಬರುತ್ತದೆ.

ಪ್ರಾಚೀನ ಭಾರತದಲ್ಲಿ ವಿದ್ಯೆಗೆ ಪ್ರಮುಖ ಸ್ಥಾನವನ್ನು ನೀಡಲಾಗಿತ್ತು. **(Knowledge oriented Education)** ಅಂದಿನ ಶಾಸ್ತ್ರೀಯ ಸಮಾಜಕ್ಕೆ ಜ್ಞಾನ ಗಂಗೆಯನ್ನು ಹರಿಸಿದ ಪ್ರತಿಷ್ಠಿತ ತಕ್ಷಶಿಲಾ, ನಳಂದ ವಿಶ್ವವಿದ್ಯಾಲಯಗಳು ಇಂದಿಗೂ ಚಿರಸ್ಮರಣೆಯಲ್ಲಿವೆ. ಆ ವಿಶ್ವವಿದ್ಯಾಲಯಗಳಲ್ಲಿ ವಿದ್ಯಾಭ್ಯಾಸ ನಡೆಸಿ ಹೊರಬಂದ ವಿದ್ಯಾರ್ಥಿಗಳು ಸಕಲವಿದ್ಯಾ ಪಾರಂಗತರಾಗಿರುತ್ತಿದ್ದರು. ಐತಿಹಾಸಿಕವಾಗಿ ಗಮನಿಸಿದರೆ ಕೆಲವು ಕಡೆ ಉಲ್ಲೇಖ ಮಾಡಿರುವಂತೆ ಹಿಂದಿನ ರಾಜಮನೆತನದವರು ಅರವತ್ತ ನಾಲ್ಕು ವಿದ್ಯೆಗಳಲ್ಲಿ ಪರಿಣಿತರಾಗಿರುತ್ತಿದ್ದರಂತೆ.

ಪಂಡಿತರಾಜ ಜಗನ್ನಾಥರು ತಮ್ಮ ರಸಗಂಗಾಧರದಲ್ಲಿ ಕಲಿತ ವಿದ್ಯೆಯು ಅರ್ಥಪೂರ್ಣವಾಗಿರಬೇಕು ಎಂಬುದನ್ನು ಎಷ್ಟು ಅಚ್ಚುಕಟ್ಟಾಗಿ ಹೇಳಿದ್ದಾರೆಂದರೆ:-

शीलभारवती कान्ता पुष्पभारवती लता ।

अर्थभारवती वाणी भजते कामपि श्रियम् ॥[33]

ಶೀಲಭಾರದಿಂದ ಕೂಡಿದ ಹೆಣ್ಣು, ಪುಷ್ಪಭಾರದಿಂದ ಕೂಡಿದ ಬಳ್ಳಿ, ಅರ್ಥಭಾರದಿಂದ ಕೂಡಿದ ವಿದ್ಯೆ ಅಲೌಕಿಕ ಕಾಂತಿಯನ್ನು ಪಡೆಯುತ್ತವೆ. ಅಂದರೆ ಕಲಿತ ವಿದ್ಯೆ ಅರ್ಥಪೂರ್ಣ ಕಲಿಕೆಯಾಗಿರಬೇಕು. ಆಗಲೇ ಅದಕ್ಕೆ ಗೌರವ. ಕಂಠಪಾಠ ಮಾಡಿದ್ದಾಗಿರಬಾರದು. ಅರ್ಥ ಅರಿಯದೆ ಕಂಠಸ್ತ ಮಾಡಿದ ವಿದ್ಯೆಯು-ಕತ್ತೆಯು ಮುತ್ತು ಹವಳಗಳನ್ನು ಹೊತ್ತಂತೆ, ಅದರ ಬೆಲೆ ಅದಕ್ಕೇನು ಗೊತ್ತು ಎನ್ನುತ್ತಾನೆ ಚೂಡಾರತ್ನ.

ಎಂದಿನಿಂದ ವಿದ್ಯೆಯನ್ನು ಉದ್ಯೋಗ ಪಡೆಯುವ ಕಾರಣಕ್ಕಾಗಿ ಕಲಿಯಲಾರಂಭಿಸಿದರೋ, ಅಂದಿನಿಂದ ಅದರ ಗುರಿ ಹಾಗೂ ಮೌಲ್ಯಗಳು ಕುಂಠಿತವಾಗುತ್ತಾ ಬಂದಿತು. ಹೀಗಾಗಿ ವಿದ್ಯೆಯ ಅವಶ್ಯಕತೆ ಹೆಚ್ಚುತ್ತಿದೆ. ಅದೇನೇ ಇದ್ದರೂ ಯಾವುದೇ ಕ್ಷೇತ್ರದಲ್ಲಿ ಗುರಿ ಸಾಧಿಸಲು ವಿದ್ಯೆ ಅನಿವಾರ್ಯವೆಂಬುದನ್ನು ಸರ್ವರೂ ಒಪ್ಪುತ್ತಾರೆ. ಇತ್ತೀಚಿನ ದಿನಗಳಲ್ಲಿ ಕೇವಲ ವಿದ್ಯೆಯನ್ನು ಗಳಿಸಿದರೆ ಸಾಲದು ಜೊತೆಗೆ ತರಬೇತಿಯೂ ಬೇಕು ಅನ್ನಿಸುತ್ತದೆ. ಕಾರಣ ವಿದ್ಯೆಯಿಂದ ಜ್ಞಾನ ಪ್ರಾಪ್ತಿಯಾದರೆ ತರಬೇತಿಯಿಂದ ಪರಿಣಿತಿ ಪ್ರಾಪ್ತವಾಗುತ್ತದೆ. ಇದರಿಂದ ಕುಶಲತೆ, ಯೋಗ್ಯತೆ, ಅಂತರ್‌ದೃಷ್ಟಿ ಮತ್ತು ವೈಜ್ಞಾನಿಕ ದೃಷ್ಟಿಕೋನವನ್ನು ಪಡೆಯಬಹುದು. ಹಾಗೆಯೇ ವಿದ್ಯೆಯಿಂದ ಸಾಹಿತ್ಯ ಜ್ಞಾನ ಮತ್ತು ಗುಣಗ್ರಾಹ್ಯತೆಯನ್ನು ಬೆಳೆಸಿಕೊಳ್ಳಬಹುದು. ಹಾಗೂ ಇದರ

33. **ಸುಭಾಷಿತಮಂಜರೀ,** ಕವಿಕಾವ್ಯಪ್ರಶಂಸೆ- ಶ್ಲೋ-36, ಪು-12, (ಜಗನ್ನಾಥನ ರಸಗಂಗಾಧರ), (2001) ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18

ಉಪಯುಕ್ತತೆಯೂ ಬಹಳ ಮುಖ್ಯವಾದುದು. ಗೀತಾ ಉಪದೇಶ ಹೀಗೆ ಹೇಳುತ್ತದೆ

श्रद्धावाँल्लभते ज्ञानं तत्परः संयतेन्द्रियः ।

ज्ञानं लब्ध्वा परां शान्तिमचिरेणाधिगच्छति ॥[34]

ಜಿತೇಂದ್ರಿಯನೂ, ಸಾಧನಪರಾಯಣನೂ ಮತ್ತು ಶ್ರದ್ಧಾವಂತನೂ ಆದ ಮನುಷ್ಯನು ಜ್ಞಾನವನ್ನು ಪಡೆಯುತ್ತಾನೆ. ಹಾಗೂ ಜ್ಞಾನವನ್ನು ಪಡೆದುಕೊಂಡು ಅವನು ವಿಳಂಬವಿಲ್ಲದೆ ಭಗವತ್ ಪ್ರಾಪ್ತಿರೂಪೀ ಪರಮ ಶಾಂತಿಯನ್ನು ಹೊಂದುತ್ತಾನೆ. ಅಂದರೆ ಶ್ರದ್ಧಾರಹಿತ ಮನುಷ್ಯನು ಆ ಜ್ಞಾನ ಪ್ರಾಪ್ತಿಗೆ ಪಾತ್ರನಾಗುವುದಿಲ್ಲ.

ಗುರುಗಳಿಂದ ಜ್ಞಾನವನ್ನು ಪಡೆದು ನಂತರ ಮನನ, ನಿದಿಧ್ಯಾಸನಗಳಿಂದ ಸಾಕ್ಷಾತ್ಕಾರದ ಮಟ್ಟವನ್ನು ನಾವು ಹೊಂದಬಹುದು. ಇದಕ್ಕಾಗಿ ಶ್ರದ್ಧೆ, ತತ್ವನಿಷ್ಠೆಗಳು ಅತ್ಯಾವಶ್ಯಕ. ಶ್ರದ್ಧೆ ಇರುವಲ್ಲಿ ಕರ್ತವ್ಯದಲ್ಲಿ ಯಾವ ಲೋಪದೋಷಗಳೂ ತಲೆಹಾಕಲಾರವು. ಶ್ರದ್ಧೆ ಎಂದರೆ ಕುರುಡು ನಂಬಿಕೆಯಲ್ಲ. ವಿವೇಚನೆಯಿಂದ ನಾವು ತತ್ವಜ್ಞಾನ ಪಡೆದ ಮೇಲೆ ನಾವು ಪಡೆದ ತತ್ವಜ್ಞಾನಕ್ಕೂ ನಮ್ಮ ಕೃತಿಗೂ ಹೊಂದಿಕೆ ಇದ್ದಲ್ಲಿ ನಾವು ಶ್ರದ್ಧಾವಂತರೆನಿಸುವೆವು.

ವಿದ್ಯಾರ್ಥಿಗಳು ವಿದ್ಯಾಭ್ಯಾಸವನ್ನು ಶ್ರದ್ಧಾಭಕ್ತಿಯಿಂದ ನಡೆಸಿ, ವಿದ್ಯೆಯನ್ನು ಕಲಿತರೆ ಸ್ವಾವಲಂಭಿಗಳಾಗಿ ಉತ್ತಮ ಜೀವನವನ್ನು ನಡೆಸುವ ಸಾಮರ್ಥ್ಯವನ್ನು ಹೊಂದುತ್ತಾರೆ. ವಿದ್ಯಾವಂತ ಮನುಷ್ಯರು ತಮ್ಮ ಜೀವನದಲ್ಲಿ ಎದುರಾಗುವ ಕಷ್ಟಕಾರ್ಪಣ್ಯಗಳನ್ನು ಅಥವಾ ಸವಾಲುಗಳನ್ನು ಸಮರ್ಥವಾಗಿ ಹಾಗೂ ಧೈರ್ಯದಿಂದ ಎದುರಿಸುವರು. ವಿದ್ಯಾವಂತನು ತಾನು ಹುಟ್ಟಿ ಬೆಳೆದ ಸಮಾಜ ಮತ್ತು ದೇಶಕ್ಕೆ ಅರ್ಥಪೂರ್ಣವಾದ ಕೊಡಗೆಯನ್ನು ಕೊಡುವುದರಲ್ಲಿ ಅಸಮರ್ಥನಾದರೆ ಅಥವಾ ತಪ್ಪಿದರೆ ಅವನನ್ನು ನಿಷ್ಪ್ರಯೋಜಕ ವ್ಯಕ್ತಿ ಎಂದು ಕರೆಯಬೇಕಾಗುತ್ತದೆ. ಅವನು ಬದುಕು ಸಾರ್ಥಕವಿಲ್ಲದ್ದು. ಆದ್ದರಿಂದ ಸರಿಯಾದ ವಿದ್ಯೆಯನ್ನು ಕಲಿಯಬೇಕಾದುದು ಪ್ರತಿಯೊಬ್ಬನ ಕರ್ತವ್ಯವಾಗಿದೆ. ವಿದ್ಯೆಯನ್ನು ಕಲಿಯಲು ಮೊದಲು ಇಚ್ಛಾಶಕ್ತಿ ಇರಬೇಕು. ಉಪನಿಷತ್ತಿನ ಮತ್ತೊಂದು ಶ್ಲೋಕವು ಅವಿದ್ಯೆಯೆಂಬ ಕತ್ತಲಲ್ಲಿ ಸೋಮಾರಿಗಳಾಗಿ ನಿದ್ರಿಸುತ್ತಿರುವ ಯುವಕರಿಗೆ ಎಂಥಹ ಜಾಗೃತಿಯನ್ನು ಮೂಡಿಸಿದೆ!! ಇದು ಸಿಡಿಲ ಸಂತ ಸ್ವಾಮಿ ವಿವೇಕಾನಂದರ ಮೆಚ್ಚಿನ ಸಾಲುಗಳು.

---

34. **ಭಗವದ್ಗೀತೆ,** ಅ– 4, ಶ್ಲೋ– 39.

उत्तिष्ठत जाग्रत प्राप्य वरान्निबोधत ।

क्षुरस्य धारा निशिता दुरत्यया दुर्गं पथस्तत्कवयो वदन्ति ॥[35]

ಇದರ ಅರ್ಥ ಎದ್ದೇಳ, ಎಚ್ಚರಗೊಳ್ಳಿರಿ, ಉತ್ತಮ ಬೋಧಕನನ್ನು ಪಡೆದು ಅರಿಯಿರಿ. ಹರಿತವಾದ ಕತ್ತಿಯ ಅಲಗಿನಂತೆ ದುಸ್ತರವಾದ ಆ ಮಾರ್ಗವು ದುರ್ಗಮವೆಂದು ಕ್ರಾಂತದರ್ಶಿಗಳು ಹೇಳುತ್ತಾರೆ. ಅವಿದ್ಯೆಯೆಂಬ ನಿದ್ರೆಯಿಂದ ಎಚ್ಚರಗೊಳ್ಳಿರಿ; ಆತ್ಮದರ್ಶನಕ್ಕಾಗಿ ಎದ್ದೇಳ, ಹರಿತವಾದ ಖಡ್ಗದ ಅಲಗಿನ ಮೇಲೆ ನಡೆಯುವುದು ಕಷ್ಟಸಾಧ್ಯದಂತೆ, ಈ ಜ್ಞಾನ ಪಥವೂ ಸಹ ದುರ್ಗಮವಾದುದು ಎಂದು ಜ್ಞಾನಿಗಳು ಹೇಳುತ್ತಾರೆ. ಇದರಿಂದ ಅತ್ಯಂತ ಸೂಕ್ಷ್ಮವಾದ ಇದನ್ನು ತಿಳದು ಕೊಳ್ಳಲು, ಸೂಕ್ಷ್ಮಮತಿಯುಳ್ಳ ಸಮರ್ಥ ಆಚಾರ್ಯರನ್ನು ಹುಡುಕಿಕೊಳ್ಳ ಎಂದು ಆತ್ಮಜ್ಞಾನಕ್ಕಾಗಿ ಈ ಮಂತ್ರದಲ್ಲಿ ಜನತೆಯನ್ನು ಹುರಿದುಂಬಿಸಲಾಗಿದೆ. ಅಕ್ಷರಶಃ ಇದೇ ಸನ್ನಿವೇಶ ಪಂಚತಂತ್ರದಲ್ಲಿ ಮಂದಮತಿಗಳೂ, ಸೋಮಾರಿಗಳೂ ಆಗಿದ್ದ ರಾಜಕುಮಾರರಿಗೆ ಅಮರಶಕ್ತಿ ರಾಜನು ಸೂಕ್ಷ್ಮ ಮತಿಯುಳ್ಳ ಸಮರ್ಥ ಆಚಾರ್ಯರಾದ ವಿಷ್ಣುಶರ್ಮರನ್ನು ಹುಡುಕಿ, ಅವರ ಮೂಲಕ ರಾಜನಂದನರ ಆತ್ಮಜ್ಞಾನಕ್ಕಾಗಿ ಹುರಿದುಂಬಿಸಿರುವುದು ಕಂಡುಬರುತ್ತದೆ.

ವಿದ್ಯೆಯನ್ನು ಪಡೆಯುವ ಭಾಗ್ಯವು ಕಲಿಯುವವನಲ್ಲಿ ಇಚ್ಛಾಶಕ್ತಿ ಇದ್ದಾಗ ಮಾತ್ರ ಸಾಧ್ಯ. ಇದನ್ನು ಪ್ರೇರೆಪಿಸುವುದು ಪ್ರತಿಭಾವಂತ ಆಚಾರ್ಯರ ಆದ್ಯಕರ್ತವ್ಯ. ಒಮ್ಮೆ ಇಚ್ಛಾಶಕ್ತಿಯನ್ನು ಬೆಳೆಸಿಕೊಂಡ ಶಿಷ್ಯರು ಏನನ್ನು ಬೇಕಾದರೂ ಕಲಿತುಬಿಟ್ಟಾರು. ಈ ಒಂದು ವಿಚಾರದಲ್ಲಿ ವಿಷ್ಣುಶರ್ಮರು ರಾಜಕುಮಾರರಿಗೆ ಮೊದಲು ಮಾಡಿದ ಕೆಲಸವೆಂದರೆ, ಅವರಲ್ಲಿ ಆಸಕ್ತಿಯಿಂದ ಕಥೆ ಕೇಳುವ ಇಚ್ಛಾಶಕ್ತಿಯನ್ನು ಉದ್ದೀಪನಗೊಳಸಿದರು. ಈ ಶಕ್ತಿಯು ಅವರನ್ನು ರಾಜನೀತಿ ಶಿಕ್ಷಣ, ನೀತಿಶಾಸ್ತ್ರ, ಅರ್ಥಶಾಸ್ತ್ರ ಮುಂತಾದ ಶಾಸ್ತ್ರಗಳನ್ನು ಅರ್ಥಮಾಡಿಕೊಳ್ಳುವಷ್ಟು ಮುನ್ನಡೆಯನ್ನು ತಂದುಕೊಟ್ಟಿತು. ಮತ್ತೊಂದು ಇಂಥಹದೇ ಸಂದರ್ಭವನ್ನು ಗುಮಾನಿ ಕವಿಯ उपदेशशतकं ನಲ್ಲಿ ಕಾಣಬಹುದು:-

विद्यां कचो बुभुत्सुः शुक्रात्संजीवनीं विनीतात्मा ।

सुरपक्षगोऽपि लेभे विनयात्संसाधयेत्कार्यम् ॥[36]

ಅಂದರೆ ವಿದ್ಯೆಯನ್ನು ಕಲಿಯುವ ಇಚ್ಛೆಯುಳ್ಳವನಾಗಿದ್ದ, ವಿನಯವಂತನಾದ ಕಚನು ದೇವತೆಗಳ

35. **ಕಠೋಪನಿಷತ್ತು,** ವ-3, ಶ್ಲೋ-14

36. **ವೆಂಕಣ್ಣಯ್ಯ ತ.ಶಾ,** ಗುಮಾನಿ ಕವಿಯ ಉಪದೇಶಶತಕಮ್ (ಕನ್ನಡಾನುವಾದ) (1989). ಶ್ಲೋ-88, ಪು-81, ಶ್ರೀ ಶಾರದಾ ಟ್ರಸ್ಟ್, 4581, ಗೋಮತಿ, ನ.ರಾ.ಮೊ, ಮೈಸೂರು-570007

ಗುಂಪಿಗೆ ಸೇರಿದವನಾಗಿದ್ದೂ ಸಹ ಶುಕ್ರಾಚಾರ್ಯನಿಂದ ಸಂಜೀವಿನೀ ವಿದ್ಯೆಯನ್ನು ಕಲಿತನು. ಆದ್ದರಿಂದ ವಿನಯದಿಂದ ಕಾರ್ಯವನ್ನು ಸಾಧಿಸಿಕೊಳ್ಳಬೇಕು

## ~ ಬುದ್ಧಿ ಶಕ್ತಿ ~

ಮನೋವಿಜ್ಞಾನ ಕ್ಷೇತ್ರದಲ್ಲಿ, ಅದರಲ್ಲೂ ಇದರ ಅನ್ವಯಿಕ ವಿಜ್ಞಾನ–ಶೈಕ್ಷಣಿಕ ಮನೋವಿಜ್ಞಾನದಲ್ಲಿ ಬುದ್ಧಿಶಕ್ತಿ ಎಂಬ ಪದ ಬಹಳ ಬಳಕೆಯಲ್ಲಿರುವಂತಾದ್ದು. ಮಕ್ಕಳು ಶಾಲಾ ತರಗತಿಗಳಲ್ಲಿ ಉನ್ನತ ಶ್ರೇಣಿಯನ್ನು ಗಳಿಸಿದರೆ ಅಥವಾ ಸಮಸ್ಯೆಗಳನ್ನು ಸುಲಭವಾಗಿ ಬಿಡಿಸಿದರೆ, ಒಳ್ಳೆಯ ವಾಕ್ಚಾತುರ್ಯವನ್ನು ತೋರಿದರೆ ಅವನನ್ನು ಬುದ್ಧಿವಂತ ಅಥವಾ ಅವನ ಬುದ್ಧಿಶಕ್ತಿ ಬಹಳ ಚುರುಕಾಗಿದೆ ಎಂದೆಲ್ಲ ಸಾಮಾನ್ಯವಾಗಿ ಹೇಳುತ್ತಾರೆ. ವ್ಯಕ್ತಿಯ ಸಾಮರ್ಥ್ಯ ಹಾಗೂ ಸಾಧನೆಯನ್ನು ಸೂಚಿಸುವಂತಹ ಒಂದು ನಿರ್ಧಿಷ್ಟ ವರ್ತನೆಗೆ ಬುದ್ಧಿಶಕ್ತಿಯೇ ಕಾರಣ.[37] ಇದನ್ನು ಇನ್ನೂ ಸರಳವಾಗಿ ಹೇಳುವುದಾದರೆ ಬುದ್ಧಿಶಕ್ತಿಗೆ "ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವ ಮತ್ತು ಅವುಗಳನ್ನು ಸುಲಭವಾಗಿ ಪರಿಹರಿಸಿಕೊಳ್ಳುವ ಸಾಮರ್ಥ್ಯ" ಎಂಬ ಅರ್ಥ ನೀಡಬಹುದು

ಬುದ್ಧಿಶಕ್ತಿಯ ವ್ಯಾಪ್ತಿ ಎಷ್ಟು ವಿಶಾಲವಾಗಿದೆ ಎಂಬುದು ಪಂಚತಂತ್ರ ಕಥೆಗಳಲ್ಲಿ ಸಂಯೋಜಿಸಿರುವ ದೃಷ್ಟಾಂತಗಳನ್ನು ಗಮನಿಸಿದರೆ ಎಂಥಹವರಿಗೂ ಮನಮುಟ್ಟುವಂತೆ ಪ್ರಸ್ತುತಪಡಿಸಲಾಗಿದೆ. "ಪುರಾಣೇತಿಹಾಸ ಗಳಲ್ಲಿ ಬರುವ ಪ್ರಸಿದ್ಧ ವ್ಯಕ್ತಿಗಳಲ್ಲಿ ಅನೇಕರು ಪ್ರತಿಭಾವಂತರೆನಿಸಿರುವರು. ಅವರಲ್ಲಿ ಕೆಲವರು ಬುದ್ಧಿವಂತರು ಮಾತ್ರ. ಇನ್ನುಳಿದವರು ಬುದ್ಧಿಶಕ್ತಿಯ ಜೊತೆಗೆ ಸೂಕ್ಷ್ಮದರ್ಶನ, ಉಜ್ವಲ ರಸದೃಷ್ಟಿ, ಉನ್ನತ ಮನೋಭಾವಗಳು, ಕಾರ್ಯಯೋಜನೆ ಶಕ್ತಿ, ಅದನ್ನು ನಿರ್ವಹಿಸುವ ಕೌಶಲ್ಯ, ಕಲ್ಪನೆ, ಸಹೃದಯತೆ, ಉದಾತ್ತ ತತ್ವಚಿಂತನೆ, ಸಂಸ್ಕೃತಿ–ನಾಗರಿಕತೆಗಳನ್ನು ಪರಿಣಾಮಗೊಳಿಸುವ ವ್ಯಕ್ತಿತ್ವ ಇವೇ ಮುಂತಾದ ಗುಣಗಳನ್ನು ಬೆಳೆಸಿಕೊಂಡಿದ್ದರು. ಇದೆಲ್ಲವನ್ನೂ ಒಟ್ಟು ಸೇರಿಸಿ ಪ್ರತಿಭೆ ಎನ್ನಬಹುದು. ಈ ಪ್ರತಿಭೆಗೆ ಭದ್ರ ಬುನಾದಿಯೇ ಬುದ್ಧಿಶಕ್ತಿ.[38] ಬುದ್ಧಿಶಕ್ತಿಯನ್ನು ಜಾಗೃತಿಯಿಂದ ವ್ಯವಸ್ಥಿತವಾಗಿ, ಸಂದರ್ಭೋಚಿತವಾಗಿ ಸದುಪಯೋಗ ಮಾಡಿಕೊಂಡಾಗ ಪ್ರತಿಭೆಯಾಗುತ್ತದೆ. ಸರಳವಾಗಿ ಹೇಳುವುದಾದರೆ ಬುದ್ಧಿಶಕ್ತಿಯ ಪುಷ್ಪವಿಕಸನವೇ ಪ್ರತಿಭೆ.

न स्वल्पस्य कृते भूरि नाशयेन्मतिमान्नरः ।

एतदेवात्र पाण्डित्यं यत्स्वल्पाद् भूरिरक्षणम् ॥[39]

---

38. **ವಾಮದೇವಪ್ಪ. ಎಚ್. ವಿ,** ಶೈಕ್ಷಣಿಕ ಮನೋವಿಜ್ಞಾನ, ಅ–3, ಪು–118, (2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

38. **ವೀರಪ್ಪ. ಎನ್.ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–16, ಪು–389.(1962)ಡಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

39. **ಸುಧಾಕರ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಂ, ಪ್ರ..ತಂ.ಶ್ಲೋ–19– ಪು–19,(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಬುದ್ಧಿವಂತನಾದ ಮನುಷ್ಯ ಸ್ವಲ್ಪ ಪ್ರಯೋಜನಕ್ಕಾಗಿ ದೊಡ್ಡದನ್ನು ನಾಶಮಾಡಿಕೊಳ್ಳಬಾರದು. ಸ್ವಲ್ಪವನ್ನು ಬಿಟ್ಟುಕೊಟ್ಟು ಹೆಚ್ಚಾದುದನ್ನು ಕಾಪಾಡಿಕೊಳ್ಳುವುದೇ ಇಲ್ಲಿ ಪಾಂಡಿತ್ಯ ಅಥವಾ ಪ್ರತಿಭೆ.

प्रज्ञा नवनवोल्लेखशालिनी प्रतिभा मता ।

तदनुप्राणनाजीवद्वर्णनानिपुणः कविः ॥[40]

ಅಂದರೆ, ಹೊಸಹೊಸದಾಗಿ ಉಲ್ಲೇಖಿಸುವ ಸಾಮರ್ಥ್ಯವುಳ್ಳ ಪ್ರಜ್ಞಾಶಕ್ತಿಗೆ ಪ್ರತಿಭೆಯೆಂದು ಹೆಸರು. ಆ ಪ್ರತಿಭೆಯನ್ನು ಅವಲಂಭಿಸಿ ಜೀವಂತವಾದ ವರ್ಣನೆಯನ್ನು ಮಾಡುವುದರಲ್ಲಿ ನೈಪುಣ್ಯವಿರತಕ್ಕವನೇ ಕವಿ.

ಹೀಗೆ "ಬುದ್ಧಿಶಕ್ತಿ ಅಥವಾ ಪ್ರತಿಭೆ ನಮ್ಮ ನಿತ್ಯ ಜೀವನದಲ್ಲಿ ಹೆಜ್ಜೆಹೆಜ್ಜೆಗೂ ತನ್ನ ಮಹತ್ವವನ್ನು ತೋರುತ್ತದೆ. ಕುಳಿತಾಗ, ನಿಂತಾಗ, ನಡೆದಾಗ, ನುಡಿದಾಗ ಅದು ತನ್ನ ಪ್ರಭಾವವನ್ನು ಬೀರುತ್ತದೆ. ಸಮಾಜದಲ್ಲಿ ಭಾಗವಹಿಸಿ ಇತರರೊಡನೆ ವ್ಯವಹರಿಸುವಾಗ, ಸನ್ನಿವೇಶಗಳೊಡನೆ ವರ್ತಿಸುವಾಗ, ಕಾರ್ಯಗಳನ್ನು ನಿಯೋಜಿಸುವಾಗ, ಅವುಗಳನ್ನು ಅನುಷ್ಠಾನಕ್ಕೆ ತರುವಾಗ ಪ್ರತಿಭೆ ತನ್ನ ಕೈವಾಡವನ್ನು ತೋರಿಸುತ್ತದೆ."[41] ಇವೆಲ್ಲವೂ ಮನೋ ವಿಜ್ಞಾನದ ಲಕ್ಷಣಗಳು. ಪಂಚತಂತ್ರದ ಕಥಾಪ್ರಸಂಗಗಳಲ್ಲಿ ಈ ಎಲ್ಲವನ್ನೂ ಕಾಣಬಹುದು. ಇನ್ನೊಂದು ವಿಶೇಷವೆಂದರೆ, ಅಂದಿನ ಕಾಲದಲ್ಲಿಯೇ ಇಷ್ಟು ಮುಂದುವರಿದ ವಿಚಾರ ಜ್ಞಾನ ಇದ್ದಿತೆಂಬುದೇ, ಪಂಚತಂತ್ರವನ್ನು ಒಂದು ಸೂಕ್ಷ್ಮ ಅಧ್ಯಯನ ನಡೆಸಿದಾಗ ಕಂಡುಬರುವ ಶ್ರೇಷ್ಠ ಗುಣ.

**"ಬುದ್ಧಿ"** ಬಹಳ ಮುಖ್ಯವಾದುದು. ಭಗವಂತನು ಮಾನವನಿಗೆ ಕರುಣಿಸಿರುವ ಒಂದು ವಿಶಿಷ್ಟ ವರ. ಇದರಿಂದಲೇ ಮಾನವನ ಶ್ರೇಷ್ಠತೆ ಹಾಗೂ ಮಹೋನ್ನತಿ. ಇಂಥಹ ವರವನ್ನು ಸದುಪಯೋಗ ಮಾಡಿಕೊಂಡು, ದೊರಕಿರುವ ಪ್ರತಿಷ್ಠೆ ಹಾಗೂ ಗೌರವವನ್ನು ಉಳಿಸಿಕೊಂಡು ಜನ್ಮಸಾರ್ಥಕತೆ ಸಾಧಿಸುವುದು ಮಾನವನ ಕರ್ತವ್ಯವಾಗಿದೆ. ಶ್ರೀಮದ್ಭಗವದ್ಗೀತಾ ಸಂದೇಶ ಬುದ್ಧಿಯನ್ನು ಕುರಿತು ಹೀಗೆ ಹೇಳಿ ಎಚ್ಚರಿಸಿದೆ.

क्रोधाद्भवति सम्मोहः सम्मोहात् स्मृतिविभ्रमः।

स्मृतिभ्रंशाद्बुद्धिनाशो बुद्धिनाशात्प्रणश्यति ॥[42]

---

40. **ಸುಭಾಷಿತಮಂಜರೀ,** ಕವಿ, ಕವಿಕಾವ್ಯಪ್ರಶಂಸೆ–ಶ್ಲೋ–26, ಪು–10, ಭಟ್ಟತೌತ.(2001)ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18
41. **ವೀರಪ್ಪ. ಎನ್.ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–16, ಪು–389.(1962)ಡಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
42. **ಭಗವದ್ಗೀತೆ,** ಸಾಂಖ್ಯ ಯೋಗ, ಶ್ಲೋ–63.

ಇದರರ್ಥವು ಹೀಗಿದೆ– ಕೋಪದಿಂದ ಅವಿವೇಕವು ಆವೇಶವಾಗುತ್ತದೆ; ಅವಿವೇಕದಿಂದ ಮತಿಭ್ರಮೆ ಉಂಟಾಗುತ್ತದೆ; ಅದರಿಂದ ಬುದ್ಧಿ ನಾಶವಾಗುತ್ತದೆ; ಬುದ್ಧಿ ನಾಶವಾದರೆ ಸರ್ವನಾಶವಾದಂತೆಯೇ.

ಹಲವಾರು ಮನೋವಿಜ್ಞಾನಿಗಳು ವಿವಿಧ ಬಗೆಯ ವ್ಯಾಖ್ಯೆಗಳನ್ನು ನೀಡಿರುತ್ತಾರೆ. ಅವುಗಳಲ್ಲಿ ಕೆಲವನ್ನು ಪರಿಶೀಲಿಸೋಣ.[43]

1. "ಉತ್ತಮವಾಗಿ ಶಬ್ದಾರ್ಥ ಗ್ರಹಣ ಮಾಡಿಕೊಳ್ಳುವ, ಉತ್ತಮವಾಗಿ ನಿರ್ಣಯಗಳನ್ನು ಕೈಗೊಳ್ಳುವ, ಉತ್ತಮವಾಗಿ ತರ್ಕಿಸುವ ವ್ಯಕ್ತಿಯ ಸಾಮರ್ಥ್ಯವೇ ಬುದ್ಧಿಶಕ್ತಿಯಾಗಿದೆ."

**"It seems to us that in intelligence there is a fundamental faculty, the alteration or the lack of which,is of the utmost importance for practical life. This faculty is judgement, otherwise called good sense, practical sense, initiative, the faculty of adapting ones self to circumstances.". ALFRED BINET-French psychologist.**

2. "ವ್ಯಕ್ತಿಯ ಅಮೂರ್ತ ಆಲೋಚನಾಶಕ್ತಿಯೇ ಬುದ್ಧಿಶಕ್ತಿ. **"The ability to carry on abstract thinking" LEWIS TERMAN -American Psychologist-pioneer in Educational Psychology**

3. "ಬುದ್ಧಿಶಕ್ತಿಯೆಂದರೆ ಈ ಕೆಳಕಂಡ ಲಕ್ಷಣಗಳನ್ನೊಳಗೊಂಡ ಚಟುವಟಿಕೆಗಳನ್ನು ಕೈಗೊಳ್ಳಲು ಇರುವ ಸಾಮರ್ಥ್ಯ, ಕ್ಲಿಷ್ಟತೆ, ಸಂಕೀರ್ಣತೆ, ಅಮೂರ್ತತೆ, ಮಿತವ್ಯಯ, ಗುರಿಯೊಂದಕ್ಕೆ ಹೊಂದಿಕೊಳ್ಳುವುದು, ಸಾಮಾಜಿಕ ಮೌಲ್ಯ ಮತ್ತು ಮೌಲಿಕ ವಿಚಾರಗಳ ಉಗಮ ಮತ್ತು ಶಕ್ತಿಯನ್ನು ಕೇಂದ್ರೀಕರಿಸ ಬೇಕಾದ ಮತ್ತು ಸಂವೇಗಾತ್ಮಕ ಒತ್ತಡಗಳನ್ನು ಪ್ರತಿರೋಧಿಸಬೇಕಾದ ಸನ್ನಿವೇಶಗಳಲ್ಲಿಯೂ ಕೂಡ ಮುಂದುವರಿಯುವ ಸಾಮರ್ಥ್ಯ"

**".....The ability to undertake activities that are characterized by (1) difficulty,(2) complexity (3) abstractness (4) economy (5) adaptedness to goal,(6) social value, and (7) the emergence of originals,and to maintain such activities under conditions that demand a concentration of energy and a resistance to emotional forces.". by- GEORGE**

---

43. **ವಾಮದೇವಪ್ಪ. ಎಚ್. ವಿ,** ಶೈಕ್ಷಣಿಕ ಮನೋವಿಜ್ಞಾನ, ಅ–3, ಪು–118–119,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

**D. STODDARD-was the president of University of Illinois and the University of the State of New York-Chancellor of New York University & Long Island University. Academic Administrator.**

4. "ವ್ಯಕ್ತಿಯು ಉದ್ದೇಶಪೂರ್ವಕವಾಗಿ ವರ್ತಿಸಲು, ತರ್ಕಬದ್ಧವಾಗಿ ಯೋಚಿಸಲು ಮತ್ತು ಪರಿಸರದೊಂದಿಗೆ ಸಮರ್ಪಕವಾದ ರೀತಿಯಲ್ಲಿ ಹೊಂದಿಕೊಳ್ಳಲು ಬೇಕಾದ ಒಟ್ಟು ಸಾಮರ್ಥ್ಯವನ್ನು ಅಥವಾ ಸಾಮರ್ಥ್ಯದ ಸಮಷ್ಟಿಯನ್ನು ಬುದ್ಧಿಶಕ್ತಿ ಎಂದು ಕರೆಯಬಹುದು. **" The global capacity of a person to act purposefully,to think rationally,and to deal effectively with his environment." by DAVID WECHSLER- a Romanian-American Psychologist-developped well known intelligence scales.**.

**5. "Intelligence is what is measured by intelligent tests.". EDWIN BORING.- American Experimental Psychologist, Professor of Psychology at Clark University and at Harvard University.**

ಮೇಲಿನ ಬುದ್ಧಿಶಕ್ತಿಯ ವ್ಯಾಖ್ಯೆಗಳನ್ನು ಗಮನಿಸಿದರೆ ಅವುಗಳಲ್ಲಿ ಕಂಡುಬರುವ ಮುಖ್ಯ ಲಕ್ಷಣಗಳೆಂದರೆ, ಅಮೂರ್ತ ಚಿಂತನೆ, ಹೊಸ ಸನ್ನಿವೇಶದೊಡನೆ ಹೊಂದಾಣಿಕೆ, ಉದ್ದೇಶಪೂರ್ವಕ ವರ್ತನೆ ಸಾಧನೆಗಳ ಮಿತವ್ಯಯ ಮತ್ತು ದಕ್ಷತೆ, ಹಿಂದಿನ ಜ್ಞಾನವನ್ನು ಉಳಿಸಿಕೊಳ್ಳುವ ಮತ್ತು ಪುನರ್ ಸ್ಮರಣೆಗೆ ತಂದುಕೊಳ್ಳುವ ಸಾಮರ್ಥ್ಯ ಎಂಬುದು ಸ್ಪಷ್ಟವಾಗುತ್ತದೆ. ಮನೋವಿಜ್ಞಾನಿಗಳು ಬುದ್ಧಿಶಕ್ತಿಯ ಸ್ವರೂಪದ ಬಗ್ಗೆ ಕೆಲವು ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದಾರೆ. ಪ್ರಾರಂಭದಲ್ಲಿ ತತ್ವಜ್ಞಾನಿಗಳು ಬುದ್ಧಿಶಕ್ತಿಯ ಏಕಕಾರಕ ಸಿದ್ಧಾಂತವನ್ನು ಅಭಿವೃದ್ಧಿಪಡಿಸಿದರು. ಇವರ ಅಭಿಪ್ರಾಯದಂತೆ ಬುದ್ಧಿಶಕ್ತಿ ಜೀವನದ ಎಲ್ಲಾ ಸನ್ನಿವೇಶಗಳಲ್ಲೂ ಸಮಾನವಾಗಿ ಕಾರ್ಯನಿರ್ವಹಿಸುವಂತಹ ಒಂದು ಲಕ್ಷಣದಿಂದ ಕೂಡಿದೆ.[44]

ಕೆಲವು ಮುಖ್ಯವಾದ ಬುದ್ಧಿಶಕ್ತಿಯ ಸಿದ್ಧಾಂತಗಳನ್ನು ಬಹಳ ಸಂಕ್ಷಿಪ್ತವಾಗಿ ಪರಾಮರ್ಶನ ದೃಷ್ಟಿಯಿಂದ ತಿಳಿಯುವುದಾದರೆ–

44. **ವಾಮದೇವಪ್ಪ. ಎಚ್. ವಿ,** ಶೈಕ್ಷಣಿಕ ಮನೋವಿಜ್ಞಾನ, ಅ–3, ಪು–119–120,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

1. **ಮಾನಸಿಕ ಶಿಸ್ತಿನ ಸಿದ್ಧಾಂತ** :– ಬುದ್ಧಿಶಕ್ತಿ ಸ್ವರೂಪವನ್ನು ಕುರಿತ ಹಳೆಯ ಸಿದ್ಧಾಂತವಿದು. ಇದು ಹೆಚ್ಚು ಪ್ರಚಲಿತವಾಗಿದ್ದ ಕಾಲ 18, 19ನೇ ಶತಮಾನ. ಮನಸ್ಸು ಎನ್ನುವುದು ತಾರ್ಕಿಕತೆ, ಸ್ಮೃತಿ, ವಿಭೇದಿಕರಣ ಮತ್ತು ಕಲ್ಪನಾಶಕ್ತಿಯಿಂದ ಕೂಡಿದೆ. ಪ್ರಾಯೋಗಿಕ ಮನೋವಿಜ್ಞಾನಿಗಳು ಈ ವಾದವನ್ನು ಅಲ್ಲಗಳೆದಿದ್ದಾರೆ.

2. **ದ್ವಿಕಾರಕ ಸಿದ್ಧಾಂತ**:– ಬ್ರಿಟಿಷ್ ಮನೋವಿಜ್ಞಾನಿ **CHARLES SPEARMAN** 1904ರಲ್ಲಿ ಈ ಸಿದ್ಧಾಂತವನ್ನು ಅಭಿವೃದ್ಧಿಪಡಿಸಿದನು. ಇವನ ಪ್ರಕಾರ ಬೌದ್ಧಿಕ ಸಾಮರ್ಥ್ಯಗಳು ಎರಡು:–. ಒಂದು 'ಉ'ಕಾರಕ – ಸಾಮಾನ್ಯ ಮಾನಸಿಕ ಸಾಮರ್ಥ್ಯ.

ಮತ್ತೊಂದು 'ಖ ಕಾರಕ– ನಿರ್ದಿಷ್ಟ ಸಾಮರ್ಥ್ಯ. 'ಉ'ಕಾರಕದ ಲಕ್ಷಣಗಳೆಂದರೆ–ಹುಟ್ಟಿನಿಂದ ಪಡೆದುಕೊಂಡು ಬಂದಿರುವ ಸಾಮರ್ಥ್ಯ, ಅನುವಂಶೀಯವಾದುದು. ಇದು ಸಾಮಾನ್ಯವಾಗಿ ಮಾನಸಿಕ ಶಕ್ತಿಯಾಗಿದೆ. **'S'** ಕಾರಕದ ಲಕ್ಷಣಗಳೆಂದರೆ – ಇದು ಕಲಿತಂತಹ ಮತ್ತು ಪರಿಸರದಿಂದ ರೂಢಿತವಾದಂತಹ ಗುಣ.

3. **ಬಹುಕಾರಕ ಸಿದ್ಧಾಂತ**:– ಅಮೆರಿಕಾದ ಮನೋವಿಜ್ಞಾನಿ **E.L.THORNDIKE** ರವರು ಪ್ರಸ್ತುತ ಪಡಿಸಿದ ಸಿದ್ಧಾಂತ. ಇವರ ಪ್ರಕಾರ ನಿರ್ದಿಷ್ಟ ಉದ್ದೀಪನಗಳಿಗೆ ನಿರ್ದಿಷ್ಟ ಅನುಕ್ರಿಯೆಗಳು ಕಂಡುಬರುತ್ತವೆ. ಸಾಮಾನ್ಯ ಬುದ್ಧಿಶಕ್ತಿ ಎಂಬುದಿಲ್ಲ. ಬುದ್ಧಿಶಕ್ತಿಯ ಮಟ್ಟ, ವ್ಯಾಪ್ತಿ, ಕ್ಷೇತ್ರ ಮತ್ತು ವೇಗ ಎಂಬ ನಾಲ್ಕು ಆಯಾಮಗಳನ್ನೊಳಗೊಂಡಿದೆ. ಈ ವಾದವನ್ನು ಆಧರಿಸಿ ಥಾರ್ನ್ಡೈಕರು ಬುದ್ಧಿಶಕ್ತಿ ಪರೀಕ್ಷೆಯನ್ನು ರೂಪಿಸಿರುತ್ತಾರೆ.

4. **ಬುದ್ಧಿಶಕ್ತಿಯ ಸಮೂಹಕಾರಕ ಸಿದ್ಧಾಂತ**:– **LOUIS LEON THURSTONE - American Psychologist** ಈ ಸಿದ್ಧಾಂತವನ್ನು ಪ್ರಸ್ತುತ ಪಡಿಸಿದವರು. ಇವರ ಪ್ರಕಾರ ಬುದ್ಧಿಶಕ್ತಿ ಕೇವಲ 'ಉ'ಎಂಬ ಸಾಮಾನ್ಯ ಮಾನಸಿಕ ಸಾಮರ್ಥ್ಯವನ್ನು ಹೊಂದಿರದೆ, ಅಷ್ಟೇ ಪ್ರಮುಖವಾದಂತಹ ಹಲವಾರು ಕಾರಕಗಳು ಅಥವಾ ಸಹಜ ಸಾಮರ್ಥ್ಯವನ್ನೊಳಗೊಂಡಿದೆ.

5. **ಬುದ್ಧಿಶಕ್ತಿಯ ಮೂರು ಆಯಾಮಗಳ ಸಿದ್ಧಾಂತ**:– **J.P.GUILFORD** ರವರು 1966ರಲ್ಲಿ ಹಲವಾರು ಬುದ್ಧಿಶಕ್ತಿ ಕಾರಕಗಳ ವಿಶ್ಲೇಷಣೆಯ ಆಧಾರದ ಮೇಲೆ ಅಭಿವೃದ್ಧಿ ಪಡಿಸಿರುತ್ತಾರೆ. ಇವರ ಪ್ರಕಾರ ಮನಸ್ಸು ಮೂರು ಆಯಾಮಗಳಿಂದ ರಚಿತವಾಗಿದೆ. ಈ ವಾದದ ಪ್ರಕಾರ ಅನೇಕ ನಿರ್ದಿಷ್ಟ ಬೌದ್ಧಿಕ ಸಾಮರ್ಥ್ಯಗಳ ವಿಶಿಷ್ಟ ಸಂಘಟನೆಯೇ ಬುದ್ಧಿಶಕ್ತಿ. ಈ ಮಾದರಿ ಬೌದ್ಧಿಕ ಸಾಮರ್ಥ್ಯಗಳ ಕ್ರಿಯೆಗಳು, ವಸ್ತು ಮತ್ತು ಉತ್ಪನ್ನ ಎಂಬ ಮೂರು ಆಯಾಮಗಳನ್ನೊಳಗೊಂಡಿದೆ.

## ಸಾಮಾನ್ಯ ಜ್ಞಾನ

ಪ್ರಪಂಚ ನಮಗೆ ಪ್ರತಿ ಕ್ಷಣವೂ ವಿದ್ಯೆಯನ್ನು ಕಲಿಸಲು ತವಕಿಸುತ್ತಲೇ ಇರುತ್ತದೆ. ಆದರೆ ನಾವು ಮಾತ್ರ ಅದನ್ನು ಗ್ರಹಿಸಲೂ, ಕಲಿಯಲೂ ವಿಫಲರಾಗುತ್ತಿದ್ದೇವೆ. ವಿಶ್ವಶಿಕ್ಷಣವನ್ನು ಪಡೆಯಬೇಕಾದರೆ ನಮ್ಮಲ್ಲಿ ಬುದ್ಧಿಶಕ್ತಿಯೂ ಇರಬೇಕಷ್ಟೆ. ಈ ಬುದ್ಧಿಶಕ್ತಿಯನ್ನೇ ನಾವು ಸಾಮಾನ್ಯ ಜ್ಞಾನ**(General Knowledge)** ಎಂದು ಹೇಳುತ್ತೇವೆ. ಇದು ಎಲ್ಲ ಜ್ಞಾನಕ್ಕಿಂತಲೂ ಅಮೂಲ್ಯವೂ, ಆದರೆ ಅತ್ಯಂತ ದುರ್ಲಭ ಎನಿಸಿಕೊಂಡಿದೆ. ಸಾಮಾನ್ಯ ಜ್ಞಾನದಿಂದಲೇ ನಾವು ಜ್ಞಾನಾರ್ಜನೆಯ ಶೇ.25ರಷ್ಟನ್ನು ಕಲಿಯುತ್ತೇವೆನ್ನುವುದು ಮಹಾಭಾರತದ ಮಾತು. ನಾವು ನಮ್ಮ ಅಕ್ಕಪಕ್ಕದವರೊಡನೆ ನಮ್ಮ ಅಭಿಪ್ರಾಯಗಳನ್ನು ಹಾಗೂ ಆಲೋಚನೆಗಳನ್ನು ಎಷ್ಟರಮಟ್ಟಿಗೆ ಹಂಚಿಕೊಳ್ಳುತ್ತೇವೆ; ಅವರೊಂದಿಗೆ ಆರೋಗ್ಯಪೂರ್ಣ ಚಿಂತನ–ಮಂಥನಗಳಲ್ಲಿ ಎಷ್ಟು ತೊಡಗಿಕೊಳ್ಳುತ್ತೇವೆ ಎನ್ನುವುದು ನಮ್ಮ ಜ್ಞಾನ ಭಂಡಾರದ ಅಭಿವೃದ್ಧಿಗೆ ಸಹಕಾರಿಯಾಗಿದೆ. ನಮ್ಮ ತಿಳುವಳಿಕೆಯನ್ನು ಇನ್ನೊಬ್ಬರಲ್ಲಿ ಹಂಚಿಕೊಳ್ಳುವುದರಿಂದ ನಮ್ಮ ಅರಿವು ಪರಿಷ್ಕಾರವಾಗುವುದು. ಇದರಿಂದ ನಮ್ಮ ಕಲಿಕೆಯ ಸಾಮರ್ಥ್ಯವೂ ಹೆಚ್ಚುವುದು. ಈ ಎಲ್ಲ ಕಾರಣಗಳಿಂದ ನಮ್ಮ ಸುತ್ತಲಿನ ಜಗತ್ತಿನೊಂದಿಗೆ ನಾವು ನಿರಂತರವಾಗಿ ಸಂವಾದವನ್ನು ನಡೆಸುತ್ತಿರುವುದು ಒಳ್ಳೆಯದು.

**"ಶಾಸ್ತ್ರಗಳಲ್ಲಿ ಕುಶಲರಾಗಿದ್ದರೂ ಲೋಕವ್ಯವಹಾರ ತಿಳಿಯದ ಮೂರ್ಖ ಪಂಡಿತರು ಅಪಹಾಸ್ಯಕ್ಕೆ ಗುರಿಯಾಗುತ್ತಾರೆ."** ಅಂದರೆ ಲೋಕವ್ಯವಹಾರ ಅಥವಾ ಸಾಮಾನ್ಯ ಜ್ಞಾನ ಇಲ್ಲದೆ ಶಾಸ್ತ್ರಗಳಲ್ಲಿ ಎಷ್ಟೇ ಪಾಂಡಿತ್ಯ ಪಡೆದಿದ್ದರೂ, ಎಷ್ಟೇ ವಿದ್ಯಾವಂತನಾಗಿದ್ದರೂ, ಕುಲೀನನಾಗಿದ್ದರೂ ಬುದ್ಧಿಯಿಲ್ಲದೆ ಮೂರ್ಖನಾಗಿ ಅಪಹಾಸ್ಯಕ್ಕೆ ಒಳಗಾಗುವ ಉತ್ತಮ ನಿದರ್ಶನಗಳನ್ನು, ವಿಷ್ಣುಶರ್ಮರು ತಮ್ಮ ಪಂಚತಂತ್ರದ ಕೊನೆಯ ತಂತ್ರದಲ್ಲಿ ಬರುವ **"ನಾಲ್ಕುಮೂರ್ಖ ಪಂಡಿತರ ಕಥೆ"** ಮೂಲಕ ಬಹಳ ಸ್ವಾರಸ್ಯಕರವಾಗಿ ನಿರೂಪಿಸಿದ್ದಾರೆ.

पठन्ति वेदशास्त्राणि बोधयन्ति परस्परम् ।

न जानन्ति परं तत्वं दर्वी पाकरसं यथा ॥[45]

ವೇದಗಳನ್ನೂ, ಶಾಸ್ತ್ರಗಳನ್ನೂ ಓದುತ್ತಾರೆ. ಒಬ್ಬರಿಗೊಬ್ಬರು ಕಲಿಸುತ್ತಾರೆ. ಆದರೆ ಪರತತ್ವವನ್ನು ಅರಿತಿಲ್ಲ. ಸೌಟಿಗೆ ಅಡಿಗೆ ರುಚಿ ಗೊತ್ತೇ! ಅಂದರೆ ಬರೀ ಪುಸ್ತಕದ ಜ್ಞಾನ ಇದ್ದರೆ ಸಾಲದು, ಸ್ವಲ್ಪ ಸಾಮಾನ್ಯ ಜ್ಞಾನ ಇರಬೇಕು. ವಿಚಾರಗಳನ್ನು ಸ್ಪಷ್ಟವಾಗಿ ಆಲಿಸಿ, ವಿಚಾರಗಳ ಪೂರ್ವಾಪರದ ಬಗ್ಗೆ ಸ್ಪಷ್ಟವಾಗಿ ಆಲೋಚಿಸಿ ಪ್ರತಿಕ್ರಿಯೆ ನೀಡಬೇಕು.

45. **ಸುಭಾಷಿತಮಂಜರೀ,** ಸದ್ಗುಣ–ದುರ್ಗುಣ–ಶ್ಲೋ–183, ಪು–168, ಗರುಡಪುರಾಣ, 16–78.(2001)ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18

ಇತ್ತೀಚಿನ ದಿನಗಳಲ್ಲಿ ಒಂದು ಹೇಳಿಕೆ ಬಹಳ ಹೆಚ್ಚು ಪ್ರಚಲಿತವಾಗಿದೆ. ಅದೇನೆಂದರೆ, ಹುಡುಗ ಶ್ರೇಷ್ಠ ದರ್ಜೆಯಲ್ಲಿ ಉತ್ತೀರ್ಣ; ಬದುಕಲು ಮಾತ್ರ ಅರಿಯ. ಹೀಗೆ ಬಹಳಷ್ಟು ಜನರಿರುತ್ತಾರೆ. ಅವರಿಗೆ ಸರಿಯಾದ ತರಬೇತಿ ಇಲ್ಲದಿರುವುದೇ ಅದಕ್ಕೆ ಕಾರಣ. ಇಲ್ಲಿಯೂ ಸಹ ಬುದ್ಧಿಶಕ್ತಿಯ ಸೂಕ್ತ ಬಳಕೆ ಹಾಗೂ ಆಲೋಚನೆ ವಿವೇಚನೆ ಸಾಮಾನ್ಯಜ್ಞಾನಕ್ಕೆ ಹೆಚ್ಚಾಗಿ ನೆರವಾಗುತ್ತದೆ. "ಕೆಲವಂ ಬಲ್ಲವರಿಂದ ಕಲ್ತು, ಕೆಲವಂ ಶಾಸ್ತ್ರಂಗಳಂ ಕೇಳುತಂ?. **"ಸರ್ವಜ್ಞನೆಂಬುವನು ಗರ್ವದಿಂದಾದವನೆ ಎಲ್ಲರೊಳಗೊಂದೊಂದು ನುಡಿಗಲಿತು ವಿದ್ಯೆಯ ಪರ್ವತವೆ ತಾನಾದ ಸರ್ವಜ್ಞ"** ಎಂಬುದೂ ಕೂಡ ಶಿಕ್ಷಣ ಹೇಗೆ ಹೇಗೆಲ್ಲ ನಡೆಯಬೇಕು ಎಂಬುದನ್ನು ಮನದಟ್ಟು ಮಾಡಿಕೊಡುತ್ತದೆ.[46] ಬರೀ ಪುಸ್ತಕದ ಹುಳುವಾದರೆ ಪ್ರಯೋಜನವಿಲ್ಲ. ಜೊತೆಗೆ ಸಾಮಾನ್ಯ ಜ್ಞಾನ, ಸುಂದರ ಬದುಕಿನ ಪರಿಜ್ಞಾನದ ಪ್ರೀತಿ ಇರಬೇಕು. ಸಾಮಾನ್ಯ ಜ್ಞಾನವಿಲ್ಲದಿದ್ದರೆ, ವಿದ್ಯಾವಂತನಾದರೂ ಬುದ್ಧಿಇಲ್ಲದವನೇ ಆಗುತ್ತಾನೆ. ಆಂಗ್ಲ ಭಾಷೆಯಲ್ಲಿ **"Intelligent no doubt but lack Common sense"** ಎಂದೂ ಹೇಳುತ್ತಾರೆ.

ಮಾನವ ಇಂದು ವೈಜ್ಞಾನಿಕವಾಗಿ ಪ್ರಗತಿ ಹೊಂದಿದ್ದಾನೆ. ಆದರೆ ಸುಖ, ಶಾಂತಿಗಳಿಲ್ಲದೆ, ಹಲವಾರು ಸಮಸ್ಯೆಗಳಿಗೀಡಾಗಿದ್ದಾನೆ. ಡಾ.ರಾಧಾಕೃಷ್ಣನ್ ಇವರು ಹೇಳಿರುವ ಈ ಒಂದು ಉಕ್ತಿಯನ್ನು ಸ್ಮರಿಸಿಕೊಳ್ಳಬಹುದು. **"ಮಾನವ ಹಕ್ಕಿಯಂತೆ ಹಾರಾಡುವುದನ್ನು, ಮೀನಿನಂತೆ ಈಜುವುದನ್ನು ಕಲಿತ. ಆದರೆ ಮಾನವನಾಗಿ ಬಾಳುವುದನ್ನು ಮಾತ್ರ ಕಲಿಯಲಿಲ್ಲ."** ಅಂದರೆ ಮಾನವನಾಗಿ ಬಾಳಲು ಇರಬೇಕಾದ ಜೀವನ ಮೌಲ್ಯಗಳನ್ನು, ದೈನಂದಿನ ಬದುಕಿನ ಸಾಮಾನ್ಯ ಜ್ಞಾನವನ್ನು ಬೆಳೆಸಿಕೊಂಡಿಲ್ಲವೆಂದರ್ಥ.[47] ಸರಳವಾಗಿ ಹೇಳುವುದಾದರೆ, **"ಓದು ಒಕ್ಕಾಲು, ಬುದ್ಧಿ ಮುಕ್ಕಾಲು"**. ಒಕ್ಕಾಲಿದೆ ಆದರೆ ಮುಕ್ಕಾಲು ಇರಬೇಕಾದುದೇ ಇಲ್ಲ.

सहसा विदधीत न क्रियामविवेकः परमापदां पदम्।

वृणुते हि विमृश्यकारिणं गुणलुब्धाः स्वयमेव संपदः॥[48]

ಹಿಂದುಮುಂದು ಆಲೋಚಿಸದೆ ಯಾವುದೇ ಕೆಲಸಕ್ಕೆ ಕೈ ಹಾಕಬಾರದು, ಸರಿಯಾಗಿ ತಿಳಿಯದಿರುವಿಕೆಯು ದೊಡ್ಡ ಅಪಾಯವನ್ನುಂಟುಮಾಡುತ್ತದೆ. ಒಳ್ಳೆಯ ಗುಣಗಳನ್ನಪೇಕ್ಷಿಸುವ ಸಂಪತ್ತು ವಿಮರ್ಶೆಯಿಂದ ಕೆಲಸಮಾಡುವವನನ್ನು ತಾನಾಗಿ ಸೇರುತ್ತದೆ. ವಿಷ್ಣುಶರ್ಮರು ಬಹಳ ಚಮತ್ಕಾರದಿಂದ

---

46. **ಶಾಲೆಗಳಲ್ಲಿ ಮೌಲ್ಯಾಧಾರಿತ ಶಿಕ್ಷಣದ ಅಗತ್ಯ** – www.bangalorewavrs.com
47. **ಮೌಲ್ಯವರ್ಧಿತ ಶಿಕ್ಷಣ– ವಿಕಾಸ್ ಪೀಡಿಯಾ,** HTTPS://on.vikaspedia.in
48. **ಮಹಾಕವಿ ಭಾರವಿ ವಿರಚಿತ ಕಿರಾತಾರ್ಜುನೀಯಂ,** ಸ– 2, ಶ್ಲೋ–30.

ಮಾನವನ ಸದ್ಗುಣಗಳು ಜೊತೆ ಜೊತೆಯಲ್ಲಿ ಒಬ್ಬ ರಾಜನ ಗುಣಲಕ್ಷಣಗಳನ್ನು ಬಹಳ ಸರಳವಾಗಿ ಅರಸುಕುಮಾರರಿಗೆ ತಿಳಿಸುತ್ತಾರೆ.

गुणेषु रागो व्यसनेष्वनादरो रतिः सुभृत्येषु च यस्य भूपतेः ।

चिरं स भुङ्क्ते चलचामरांशुकां सितातपत्राभरणां नृपश्रियम् ॥[49]

ಅಂದರೆ ಯಾವ ರಾಜನಿಗೆ ಸದ್ಗುಣಗಳಲ್ಲಿ ಪ್ರೀತಿಯೂ, ಕೆಟ್ಟ ಹವ್ಯಾಸಗಳಲ್ಲಿ ಅನಾದರವೂ, ಒಳ್ಳೆಯ ಸೇವಕರಲ್ಲಿ ಸಂತೋಷವೂ ಇರುವುದೋ ಅಂಥಹವನು ಚಂಚಲವಾದ ಚಾಮರ ಮತ್ತು ವಸ್ತ್ರಗಳಿಂದ ಕೂಡಿದುದೂ, ಬೆಳ್ಗೊಡೆಯ ಆಭರಣವನ್ನು ಹೊಂದಿದುದೂ ಆದ ರಾಜ್ಯಲಕ್ಷ್ಮಿಯನ್ನು ಬಹುಕಾಲ ಅನುಭವಿಸುತ್ತಾನೆ. ಹೀಗೆ ಒಂದು ವಿಚಾರದಿಂದ ಮತ್ತೊಂದಕ್ಕೆ ಬಹಳ ಒಳ್ಳೆಯ ಸಂಬಂಧವನ್ನು ಕಲ್ಪಿಸಿ, ರಾಜನಂದನರಿಗೆ ಮನದಟ್ಟಾಗುವಂತೆ ರಾಜನೀತಿ ಶಿಕ್ಷಣವನ್ನು, ಬದುಕಿನ ನೀತಿಶಿಕ್ಷಣವನ್ನು ಅನುಗ್ರಹಿಸಿರುತ್ತಾರೆ.



49. **ಸುಧಾಕರ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಂ, ಪ್ರ..ತಂ. ಶ್ಲೋ-251, ಪು-611,(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

## 7–3. ಮೌಢ್ಯ ಮತ್ತು ಅದರ ಪರಿಣಾಮ

ಮನೋವಿಜ್ಞಾನದಲ್ಲಿ ಮೌಢ್ಯ ಎಂದರೆ **"ದಡ್ಡತನ", "ತಿಳಗೇಡಿತನ"** ಎಂಬ ಅರ್ಥವಿದೆ. ಸಾಧಾರಣ ಭಾಷೆಯಲ್ಲಿ ಮೌಢ್ಯ, ಮೂಢ, ಎಂದರೆ **"ತಿಳುವಳಿಕೆ ಇಲ್ಲದವ, ವಿವೇಚನೆಯಿಲ್ಲದೆ ನಂಬುವವ"** ಎಂದೆಲ್ಲ ಅರ್ಥ ಮಾಡಿಕೊಳ್ಳಲಾಗುತ್ತದೆ. ವೈಜ್ಞಾನಿಕ ಚಿಂತನೆಯಿಂದ ಅನೇಕ ಮೌಢ್ಯಗಳು, ಮೌಢ್ಯಾಚರಣೆಗಳು ಇತ್ತೀಚಿನ ದಿನಗಳಲ್ಲಿ ಕಡಿಮೆಯಾಗಿವೆ ಎಂದು ಹೇಳಬಹುದು. ಹಳ್ಳಿಗಾಡಿನ ಜನರಲ್ಲಿ ಮನೆಮಾಡಿದ್ದ ಮೂಢ ನಂಬಿಕೆಗಳು– ಉದಾಹರಣೆಗೆ ರಾಜಾಸ್ಥಾನದ ಸತಿಪದ್ಧತಿ, ಚಂದ್ರಗುತ್ತಿಯ ಬೆತ್ತಲೆ ಸೇವೆ, ಮಂಗಳೂರಿನ ಅಜಲು ಪದ್ಧತಿ ಮುಂತಾದವು ಹಳ್ಳಿಗಾಡಿನ ಜನರಲ್ಲಿ ವೈಜ್ಞಾನಿಕ ಚಿಂತನೆಯನ್ನು ಮೂಡಿಸಲು ಸರ್ಕಾರದ ಸತತ ಪ್ರಯತ್ನದಿಂದ ನಿರ್ಮೂಲವಾಗಿವೆ. ಆದರೆ ಜಾಗತಿಕ ಮಟ್ಟದಲ್ಲಿ ಹುಲಿಯ ಅವಯವಗಳನ್ನು ಸೇವಿಸಿದರೆ ಪುರುಷತ್ವ ವೃದ್ಧಿಯಾಗುವುದು, ಘೇಂಡಾಮೃಗದ ಕೊಂಬು ಔಷಧೀಯ ಗುಣಗಳನ್ನು ಹೊಂದಿದೆ ಎಂದು ಬಹಳ ದೊಡ್ಡ ಮೌಢ್ಯ ಹರಿದಾಡುತ್ತಿದೆ. ಈ ಮೌಢ್ಯ ಕೇವಲ ಬಡತನದಲ್ಲಿರುವ ಹಳ್ಳಿ ಜನರಲ್ಲಿ ಮಾತ್ರ ಇರುವುದಲ್ಲ, ವೈಭವೋಪೇತ ಮಹಲುಗಳಲ್ಲಿ ವಾಸಿಸುವ, ಹೆಲಿಕಾಪ್ಟರ್‌ನಲ್ಲೇ ಓಡಾಡುವ ಶ್ರೀಮಂತರಲ್ಲೂ ತುಂಬಿಕೊಂಡಿರುವುದು. ಇದರ ಪರಿಣಾಮ ಹುಲಿ ಮತ್ತು ಘೇಂಡಾಮೃಗದ ಸಂತತಿ ಅಳಿವಿನಂಚಿನಲ್ಲಿದೆ. ಇನ್ನೂ ಸರಳವಾಗಿ ಹೇಳಬೇಕೆಂದರೆ ಟಿ.ವಿ.ಗಳಲ್ಲಿ ಪ್ರದರ್ಶಿಸುವ ಆಕರ್ಷಕ ಜಾಹೀರಾತುಗಳಿಗೆ ಮನಸೋಲದವರು ಎಷ್ಟಿಲ್ಲ! ಆದರೆ ಇವುಗಳಲ್ಲಿರುವ ರಾಸಾಯನಿಕ ವಸ್ತುಗಳು ಚರ್ಮವನ್ನು, ತಲೆಕೂದಲನ್ನು, ಹಲ್ಲುಗಳನ್ನು, ಕಣ್ಣುಗಳನ್ನು ಹಾಳುಮಾಡುವ ಸಾಧ್ಯತೆಗಳವೆಯೆಂಬುದನ್ನು ತಿಳಿಸುವ ವೈಜ್ಞಾನಿಕ ಜ್ಞಾನ ಇಂದು ಬೇಕಾಗಿದೆ. ಕಣ್ಣಿಗೆ ಆಕರ್ಷಕವಾಗಿದ್ದು, ಮನೋಜ್ಞವಾಗಿದೆ ಎಂದುಬಿಟ್ಟರೆ ಸಾಕು, ಕೂಡಲೇ ಹಿಂದು ಮುಂದು ಆಲೋಚಿಸದೆ ಶರಣಾಗಿಬಿಡುವುದು. ಇದೂ ಮೌಢ್ಯವೇ ಆಗಿರುತ್ತದೆ.

ಒಂದು ಕ್ರಮಬದ್ಧವಾದ ಚಿಂತನೆ ಇಲ್ಲದಿರುವುದೇ ಮೂಢತ್ವಕ್ಕೆ ಕಾರಣ. ಮೋಹಮುದ್ಗರದಲ್ಲಿ ಆದಿಶಂಕರರು ಎಷ್ಟು ಸರಳವಾಗಿ ಮೂಢತ್ವ ಕುರಿತು ಹೇಳಿದ್ದಾರೆ–

मूढ जहीहि धनागमतृष्णां कुरु सद्बुद्धिं मनसि वितृष्णाम् ।

यल्लभसे निजकर्मोपात्तं वित्तं तेन विनोदय चित्तम् ॥[50]

ಅಂದರೆ ಮೂಢನೇ, ಹಣವು ಬರಬೇಕೆಂದು ಹಾತುವರಿಯುವುದನ್ನು ಬಿಡು; ವೈರಾಗ್ಯವೆಂಬ ಉತ್ತಮವಾದ ಬುದ್ಧಿಯನ್ನು ಮನಸ್ಸಿನಲ್ಲಿ ರೂಢಿಮಾಡಿಕೊ; ನಿನ್ನ ಕರ್ಮಕ್ಕನುಗುಣವಾಗಿ ಎಷ್ಟು ಹಣ

---

೫೦. **ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು,** ಅನುವಾದಕರು, ಮೋಹಮುದ್ಗರ, 1–ದ್ವಾದಶಮಂಜರಿ, ಶ್ಲೋ–1,(1992) ಆಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೇನರಸೀಪುರ–573211

ದೊರೆತರೆ ಅಷ್ಟರಿಂದಲೇ ಮನಸ್ಸಿಗೆ ಸಂತೋಷವನ್ನುಂಟುಮಾಡಿಕೊ.

ಇನ್ನು ಮೌಢ್ಯವನ್ನು **"ತಿಳಿಗೇಡಿತನ"** ಅನ್ನಲಾಗುತ್ತದೆ–ಅಂದರೆ ತಿಳಿದಿದ್ದೂ, ತಿಳಿಯದವನಂತೆ ವರ್ತಿಸುವುದು. ಇದು ಆಲಸ್ಯದಿಂದಲೋ, ಉದಾಸೀನತೆಯಿಂದಲೋ, ಯಾವುದೋ ಜಿಗುಪ್ಸೆಯಿಂದಲೋ ಬರುವ ಮೌಢ್ಯ. ಮಹಾ ಪ್ರತಿಭೆಯ ವ್ಯಕ್ತಿಗಳಲ್ಲಿ ವಿಚಿತ್ರ ವರ್ತನೆಯ ಸ್ವಭಾವ ಕಂಡುಬರುವುದೆಂದು **American Psychologist,"HOLLINGWORTH"**– ಎಂಬಾಕೆ ಸಂಶೋಧನೆ ನಡೆಸಿ ಘೋಷಿಸಿದ್ದಾರೆ. ಇದಕ್ಕೆ ಅನೇಕ ಕಾರಣಗಳಿವೆ. ಏಕಾಂತ ವಾಸ, ಜನಸಾಮಾನ್ಯರೊಡನೆ ಸಂಪರ್ಕ ಕಡಿಮೆ, ಪ್ರೌಢವೂ ಪಾರಿಭಾಷಿಕವೂ ಆದ ಪದಗಳ ಬಳಕೆ, ತಮ್ಮ ಉತ್ತಮ ಪ್ರತಿಭೆಯನ್ನು ಅರಿಯಲಾರದ ಒಡನಾಡಿಗಳೊಡನೆ ಅಸಮಾಧಾನ ಏನೆಲ್ಲ ವ್ಯತಿರಿಕ್ತ ವರ್ತನೆಗಳು ಇಂತಹವರಲ್ಲಿ ಕಂಡುಬರುತ್ತದೆ. ಅಂಥಹವರಲ್ಲಿ ಒಂದು ರೀತಿಯ ಜಿಗುಪ್ಸೆ ಬಂದು ಕೆಲವರು ಎಲ್ಲ ವಿಚಾರಗಳಲ್ಲೂ ಉದಾಸೀನತೆ ಬೆಳೆಸಿಕೊಂಡು ಹಲವು ವೈಚಿತ್ರ್ಯವನ್ನು ಕಾಣಿಸುತ್ತಾರೆ. ಇವರು ವಿಚಾರಗಳನ್ನು ತಿಳಿದಿದ್ದರೂ, ತಿಳಿಗೇಡಿತನ ಇರುವವರಂತೆ ಕಂಡುಬರುತ್ತಾರೆ. ಇವರಿಗೆ ಸೂಕ್ತವಾದ, ಅವರ ಸಾಮರ್ಥ್ಯಗಳಿಗೆ ಒಪ್ಪುವ ಶಿಕ್ಷಣವೂ ದೊರಕುವುದಿಲ್ಲ. ಸಾಮಾನ್ಯವಾಗಿ ಸಾರ್ವಜನಿಕ ಶಿಕ್ಷಣ ಸಂಸ್ಥೆಗಳು ಸಾಧಾರಣ ಮಟ್ಟದ ಬುದ್ಧಿಶಕ್ತಿಯವರಿಗೆಂದು ವ್ಯವಸ್ಥೆಗೊಂಡಿವೆ. ಅವುಗಳಲ್ಲಿನ ಕಾರ್ಯಕ್ರಮ, ಅಂಥವರಿಗೆ ಮಾತ್ರ ಯೋಗ್ಯವಾಗಿರುತ್ತದೆ. ಕೆಲವು ಸಂದರ್ಭದಲ್ಲಿ ಈ ಮಕ್ಕಳು ಸ್ವಲ್ಪ ದುರ್ಬಲ ಬುದ್ಧಿಶಕ್ತಿಯವರು, ಮಂದಸ್ವಭಾವದವರು, ನಡೆನುಡಿಗಳಲ್ಲಿ ಚುರುಕಿಲ್ಲದವರು. ಇಂಥಹವರಿಗೆ ಗುರುಗಳು ವೈಯಕ್ತಿಕ–ಗಮನ ನೀಡಬೇಕು.[51]

अतीत्य बन्धून् अवलङ्घ्य मित्राण्याचार्यमागच्छति शिष्यदोषः।

बालं ह्यपत्यं गुरुवे प्रदातुः नैवापराधोऽस्ति पितुर्न मातुः ॥[52]

ಅಂದರೆ ತಾಯಿತಂದೆಗಳು ಚಿಕ್ಕಂದಿನಲ್ಲಿಯೇ ತಮ್ಮ ಮಕ್ಕಳನ್ನು ಗುರುಗಳಿಗರ್ಪಿಸುತ್ತಾರೆ. ಆದುದರಿಂದ ಶಿಷ್ಯನು ಮಾಡಿದ ತಪ್ಪುಗಳಿಗೆ ಆಚಾರ್ಯನೇ ಹೊಣೆಯಾಗುತ್ತಾನೆ. ನೆಂಟರೂ, ಮಿತ್ರರೂ ಅವನ ದೋಷಗಳಿಗೆ ಭಾಗಿಯಾಗುವುದಿಲ್ಲ. ತಂದೆತಾಯಿಗಳದೂ ತಪ್ಪಿಲ್ಲ. ಇಲ್ಲಿ ಗುರುಗಳ ಹೊಣೆಗಾರಿಕೆ ಎಷ್ಟಿರುತ್ತದೆಂಬುದನ್ನು ಹೀಗೆ ಹೇಳಲಾಗಿದೆ.

---

51. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ –16, ಪು–426–429.(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
52. **ಸುಭಾಷಿತಮಂಜರೀ,** ಸದ್ಗುಣ–ದುರ್ಗುಣ, ಶ್ಲೋ–16, ಪು–130 ಪಂಚರಾತ್ರ, 1–19.(2001)ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18

ಮನೋವಿಜ್ಞಾನಿಗಳು **"ಮಹಾ ಪ್ರತಿಭೆಯೂ ಒಂದು ವೈಪರೀತ್ಯ"** ಎಂದು ಪರಿಗಣಿಸಿದ್ದಾರೆ. ಅವರಲ್ಲಿ ಕೆಲವು ವಿಲಕ್ಷಣ ಗುಣಗಳು ಕಾಣುತ್ತವೆ. ಅವರುಗಳು ಸಾಮಾಜಿಕ ಜೀವನದ ಸುಖದುಃಖಗಳಿಂದ ಹೊರತಾಗಿ, ಒಂಟಿತನ, ಅಶಾಂತಿಯನ್ನು ಮನಸ್ಸಿನಲ್ಲಿ ಹೆಚ್ಚು ಮಾಡಿಕೊಂಡು ಕೋಪತಾಪಗಳಿಗೂ, ವೈಯಕ್ತಿಕ ಆಸೆ ಆಕಾಂಕ್ಷೆಗಳಿಗೂ ತುತ್ತಾಗಬಹುದು. ಅಂಥಾ ಪ್ರತಿಭಾ ಜೀವನಕ್ಕಿಂತ ಸನ್ನಿವೇಶಕ್ಕೆ ಹೊಂದಿಕೊಂಡು ಹೋಗಬಲ್ಲ ಸಾಧಾರಣ ಜೀವನವೇ ಸರಿ ಎನ್ನಿಸಬಹುದು. ಆದ್ದರಿಂದ ಹಲವರು **"ಅತಿ ಪ್ರತಿಭಾವಂತನ ಜೀವನ ಅತಿ ದಡ್ಡನ ಜೀವನದಂತೆ ಅಷ್ಟು ಆದರಣೀಯವೆನಿಸಲಾರದು"** ಎಂದು ಹೇಳುತ್ತಾರೆ.[53]

ಈ ಸಂದರ್ಭದಲ್ಲಿ ಹಿತೋಪದೇಶದಲ್ಲಿ ಬರುವ ಒಂದು ಮಾತನ್ನು ಸ್ಮರಿಸಬಹುದು:-

सुमहान्त्यपि शास्त्राणि धारयन्तो बहुश्रुताः।

छेत्तारः संशयानां च क्लिश्यंते लोभमोहिताः ॥[54]

ಕಠಿಣತಮವಾದ ಶಾಸ್ತ್ರಗಳ ಜ್ಞಾನವನ್ನು ಹೊಂದಿರುವವರೂ, ಬಹಳ ವಿಚಾರಗಳನ್ನು ಕೇಳಿ ತಿಳಿದುಕೊಂಡವರೂ, ಇತರರ ಸಂಶಯಗಳನ್ನು ಹೋಗಲಾಡಿಸುವವರೂ ಆದವರೂ ಸಹ ಲೋಭದ ಮೋಹಕ್ಕೊಳಗಾಗಿ ಕಷ್ಟಪಡುತ್ತಾರೆ.



53. **ವೀರಪ್ಪ. ಎನ್. ಎಸ್,** ಶೈಕ್ಷಣಿಕ ಮನೋವಿಜ್ಞಾನ, ಅ - 16, ಪು-434-436. 1962. ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

54. **ಸುಭಾಷಿತಮಂಜರೀ,** ಸದ್ಗುಣ-ದುರ್ಗುಣ- ಶ್ಲೋ-331, ಪು-203(2001) ಹಿತೋಪದೇಶ, ಮಿತ್ರಲಾಭ-70.ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18

## 7-4. पञ्चतन्त्रस्य-चतुर्थं तन्त्रम्-"लब्धप्रणाशम्"-

### ಕಥೆಗಳ ವಿಶ್ಲೇಷಣೆ

ವಿಷ್ಣುಶರ್ಮ ವಿರಚಿತ ಪಂಚತಂತ್ರದ ನಾಲ್ಕನೆಯ ತಂತ್ರವಾದ "ಲಬ್ಧಪ್ರಣಾಶ"ದ ಪ್ರಾರಂಭಿಕ ನುಡಿಯಲ್ಲಿ

समुत्पन्नैषु कार्य्येषु बुद्धिर्यस्य न हीयते ।

स एव दुर्गं तरति जलस्थो वानरो यथा ॥[55]

"ಮಾಡಬೇಕಾದ ಕೆಲಸಗಳಲ್ಲಿ ಯಾರ ಬುದ್ಧಿಯು ಕುಂಠಿತವಾಗುವುದಿಲ್ಲವೋ ಅವನು ನೀರಿನಲ್ಲಿದ್ದ ಮಂಗವು ಪಾರಾದಂತೆ ಕಷ್ಟದಿಂದ ಪಾರಾಗುತ್ತಾನೆ" ಎಂದಿದೆ.

ಲಬ್ಧಪ್ರಣಾಶದ ಕಥೆ ಹೀಗಿದೆ- ಒಂದು ಸಮುದ್ರದ ತೀರದಲ್ಲಿ ಸದಾ ಫಲಗಳಿಂದ ತುಂಬಿರುವ ಜಂಬೂವೃಕ್ಷವಿತ್ತು. ಅಲ್ಲಿ ರಕ್ತಮುಖ ಎಂಬ ಮಂಗವು ವಾಸಿಸುತ್ತಿತ್ತು. ಒಮ್ಮೆ ಸಮುದ್ರದಿಂದ ಹೊರಬಂದ ಕರಾಲಮುಖ ಎಂಬ ಮೊಸಳೆಯು ಆ ಮರದ ಕೆಳಗಿರುವ ಮೃದುವಾದ ಮರಳ ಮೇಲೆ ಬಂದು ಕುಳಿತುಕೊಂಡಿತು. ಅಲ್ಲಿಂದ ಕಥೆ ಮುಂದುವರಿದಿದೆ.

ಈ ತಂತ್ರದಲ್ಲಿ **ಮಂಗ ಹಾಗೂ ಮೊಸಳೆಯ ಸೂತ್ರ ಕಥೆ**ಯಲ್ಲಿ- ಪಡೆದುಕೊಂಡದ್ದನ್ನು ಮೂರ್ಖತನದಿಂದ ಕಳೆದುಕೊಳ್ಳುವುದರ ಕುರಿತು ವಿವರಣೆ ಇರುತ್ತದೆ. ಈ ಸೂತ್ರದಲ್ಲಿ 11 ಉಪಕಥೆಗಳಿದ್ದು ಒಂದೊಂದು ದೃಷ್ಟಾಂತವೂ ಒಂದೊಂದು ಉತ್ತಮ ಬದುಕಿನ ನೀತಿಯನ್ನು ಬೋಧಿಸುತ್ತದೆ. ಜೊತೆ ಜೊತೆಯಲ್ಲಿ ರಾಜಕುಮಾರರಿಗೆ ವಿಶೇಷ ಜಾಗೃತಿಯನ್ನು ಮೂಡಿಸುತ್ತಾ, ಸುಂದರ ವ್ಯಕ್ತಿತ್ವ ನಿರ್ಮಾಣಕ್ಕೆ ಪ್ರೇರೆಪಿಸುತ್ತವೆ.

ಮೋಸಹೋಗುವವರಿದ್ದರೆ ಮೋಸ ಮಾಡುವವರಿರುತ್ತಾರೆ. ಇನ್ನೇನು ಬಯಸಿದುದು ನಮ್ಮ ಕೈಸೇರಿತು ಎನ್ನುವಷ್ಟರಲ್ಲಿ ಏನೋ ಒಂದು ಅಡ್ಡಿಯೋ, ದುಡುಕೋ ಅದನ್ನು ಕೆಡೆಸಿಬಿಡುತ್ತದೆ. **"ಕೆಟ್ಟಮೇಲೆ ಬುದ್ಧಿ ಬಂದರೆ ಏನು ಪ್ರಯೋಜನ?"** ಸಿಕ್ಕಿದ ಅವಕಾಶಗಳನ್ನು ಎಷ್ಟೋ ಬಾರಿ ಉಪಯೋಗಿಸಿಕೊಳ್ಳದೆ ಕೈಚೆಲ್ಲಿಬಿಡುತ್ತೇವೆ. ಸಮಸ್ಯೆಯಲ್ಲಿ ಸಿಕ್ಕುಹಾಕಿಕೊಂಡಾಗ ಅದರಿಂದ ಪಾರಾಗಲು ನಡೆಸಬೇಕಾದ ಕಾರ್ಯತಂತ್ರಗಳು ಒಳ್ಳೆಯ ರೀತಿಯಲ್ಲಿದ್ದರೂ, ಕೆಟ್ಟದ್ದನ್ನು ಹಾರೈಸಿ ದುರಂತಕ್ಕೀಡಾಗುವ ಬಗೆಗಳು; ಮೀರಿ ಬದುಕಿದರೆ ಆಗುವ ತೊಂದರೆಗಳು ಮತ್ತು ಅದರ ಪರಿಹಾರ ಮುಂತಾದ ಅನೇಕ ಸುಖಜೀವನದ

೫೫. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ-1, ಪು-617, (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಸೂತ್ರಗಳನ್ನು, ಸರಳಸುಂದರ ಕಥೆಗಳ ಮೂಲಕ ಸ್ಪಷ್ಟವಾಗಿ, ಅರ್ಥಪೂರ್ಣವಾಗಿ ಕೇಳುಗರಿಗೆ ಅಥವಾ ಓದುಗರಿಗೆ ಪಂಚತಂತ್ರದಲ್ಲಿ ಬೋಧಿಸಲಾಗಿದೆ.[56]

ಲಬ್ಧಪ್ರಣಾಶ ಸೂತ್ರ ಕಥೆಯಲ್ಲಿನ ಮೊದಲನೆಯ ಉಪಕಥೆ- **ಗಂಗದತ್ತ ಮತ್ತು ಪ್ರಿಯದರ್ಶನ ಸರ್ಪದ ಕಥೆ**ಯಲ್ಲಿ ಪ್ರಾರಂಭಿಕ ಒಂದು ಉಕ್ತಿ ಇದೆ

आपदि येनापकृतं येन च हसितं दशासु विषमासु ।

अपकृत्य तयोरुभयोः पुनरपि जातं नरं मन्ये ॥[57]

ಯಾರು ಆಪತ್ತಿನಲ್ಲಿ ಅಪಕಾರವನ್ನು ಮಾಡುವರೋ ಮತ್ತು ಯಾರು ವಿಷಮ ಪರಿಸ್ಥಿತಿಯಲ್ಲಿ ಅಪಹಾಸ್ಯವನ್ನು ಮಾಡುವರೋ ಅವರಿಬ್ಬರಿಗೂ ಅಪಕಾರವನ್ನು ಮಾಡಿದರೆ ಮನುಷ್ಯನಿಗೆ ಹೊಸ ಜನ್ಮ ಬಂದಂತೆ ಅಂದರೆ ಅಂತಹವರ ಮೇಲೆ ಸೇಡುತೀರಿಸಿಕೊಳ್ಳಬೇಕೆಂದು ಅರ್ಥ. ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುವ ಹಾಗೆ ಕ್ರೂರ ವೈರಿಯ ಸಂಹಾರವನ್ನು ಕ್ರೂರಿಯಿಂದಲೇ ಮಾಡಬೇಕು. ದಾಯಾದಿಗಳನ್ನು ನಿರ್ಮೂಲಗೊಳಸಲು ಸರ್ಪವನ್ನು ಕರೆತಂದ ಕಪ್ಪೆ ಕಥೆಯ ಮೂಲಕ **"ಸೇಡುತೀರಿಸಿಕೊಳ್ಳಲು ಎಂಥಹವರನ್ನು ಆಶ್ರಯಿಸಬೇಕು"** ಎಂಬೆಲ್ಲ ತಿಳುವಳಕೆಯನ್ನು. ಬಹಳ ಸೊಗಸಾಗಿ ನಿರೂಪಣೆ ಮಾಡಲಾಗಿದೆ. ದುಡುಕುನಿರ್ಣಯದಿಂದ ಮುಂದೊದಗಬಹುದಾದ ಅನಾಹುತವನ್ನು ಯೋಚಿಸದಿದ್ದರೆ ಅದರ ಪರಿಣಾಮವೇನಾಗುವುದು ಎಂಬ ಬಗ್ಗೆ ಜಾಗೃತಿಯನ್ನು ಮೂಡಿಸಲಾಗಿದೆ. ಕಾಲವು ಕಳೆದಂತೆ ಎಲ್ಲಾ ಕಪ್ಪೆಗಳನ್ನೆಲ್ಲಾ ಸರ್ಪವು ತಿಂದುಬಿಟ್ಟಿತು. ಕೇವಲ ಗಂಗದತ್ತ ಕಪ್ಪೆ ಮಾತ್ರ ಉಳಯಿತು. ಆಗ ಪ್ರಿಯದರ್ಶನ ಸರ್ಪವು ಹೇಳುತ್ತದೆ **"ಎಲೈ ಗಂಗದತ್ತನೇ, ನಾನು ಹಸಿದಿದ್ದೇನೆ. ಎಲ್ಲಾ ಕಪ್ಪೆಗಳೂ ಮುಗಿದುಹೋದವು. ನೀನು ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದಿದ್ದೀಯಾ. ಆದ್ದರಿಂದ ನನಗೆ ಏನಾದರೂ ತಿನ್ನಲು ಕೊಡು"** ಎಂದು. ಇಲ್ಲಿನ ನೀತಿಯೆಂದರೆ ಹಸಿದವನು ಯಾವ ಪಾಪವನ್ನು ತಾನೆ ಮಾಡುವುದಿಲ್ಲ? ದರಿದ್ರರಾದ ಮನುಷ್ಯರು ಕರುಣೆಯಿಲ್ಲದವರಾಗಿರುತ್ತಾರೆ ಭದ್ರೆ! ಪ್ರಿಯದರ್ಶನನಿಗೆ ಹೇಳು, ಗಂಗದತ್ತನು ಮತ್ತೆ ಬಾವಿಗೆ ಬರುವವನಲ್ಲ ಎಂದು. ಹೀಗೆ ಕಪ್ಪೆಯು ಹೇಳ ಹಲ್ಲಿಯನ್ನು ವಾಪಸ್ಸು ಕಳುಹಿಸುತ್ತದೆ.[58]

---

56. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಚತುರ್ಥ ತಂ, ಪು,-176-177 (2015)..ವರ್ಣಿಲ, ನಂ39/2-11, ಕಲ್ಯಾಣಿ ಗಾರ್ಡನ್, ಬನಶಂಕರಿ, 1ನೇ ಹಂತ, ಬೆಂಗಳೂರು-560050
57. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ-17, ಪು-632,(1993).ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001
58. **ಭರತ ಬಿ. ರಾವ್**. ಪಂಚತಂತ್ರ, ಪಂಡಿತ ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಚ.ತಂ, ಪು - 224-229.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.,44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560005.

आगतश्च गतश्चैव दृष्ट्वा सिंहपराक्रमम् ।

अकर्णहृदयो मूर्कस्तेन मृत्युवशंगतः ॥[59]

ಕೊನೆಯಲ್ಲಿ ಮಂಗನು ಹೇಳುತ್ತದೆ "ಮೂಢ ನಾನೇನು ಲಂಬಕರ್ಣನಂತೆ ಮೂರ್ಖನೇ? ಪ್ರತ್ಯಕ್ಷವಾಗಿ ಅಪಾಯವನ್ನು ನೋಡಿ ಮತ್ತೆ ಅಲ್ಲಿಗೇ ಹೋಗಿ ಮರಣವನ್ನು ಹೊಂದುವೆನೆ? ಮೊದಲು ಬಂದ ಸಿಂಹದ ಪರಾಕ್ರಮವನ್ನು ನೋಡಿ ಹೋದ ಹೃದಯ ಹಾಗೂ ಕಿವಿಗಳಿಲ್ಲದ ಮೂರ್ಖ, ಮತ್ತೆ ಹಿಂದಿರುಗಿ ಬಂದನು. ಅದನ್ನು ಕೇಳಿದ ಮೊಸಳೆಯು ಯಾರವನು ಲಂಬಕರ್ಣ? ಹೇಗೆ ಅಪಾಯವನ್ನು ಕಂಡೂ ಸಾವನ್ನಪ್ಪಿದ ? ಎಂಬುದನ್ನು ವಿವರವಾಗಿ ಹೇಳೆಂದು ಕೇಳಿತು.

ಮುಂದೆ **"ಸಿಂಹ ಮತ್ತು ಲಂಬಕರ್ಣ ಕಥೆ"**ಯನ್ನು ಮೊಸಳೆಗೆ ಮಂಗವು ಹೇಳುತ್ತಾ, ಯಾರನ್ನು ನಂಬಬೇಕು, ಹೊಗಳಿಕೆಯ ಹೊನ್ನಶೂಲ ಹಾಗೂ ಕಾಮಾತುರರಿಗೆ ಬುದ್ಧಿಯಾದರೂ ಎಲ್ಲಿಯದು? ಈ ಕಥೆಯಲ್ಲಿ ಸಿಂಹ ವನರಾಜನಾದರೇನು ನರಿಯು ಹೇಳಿದ ಕಿವಿ ಎದೆ ಇಲ್ಲದ ಕತ್ತೆ ಎಂಬುದನ್ನು ಒಪ್ಪಿಕೊಂಡ ಹಾಗೆ, ನಾನೂ(ಸಿಂಹ) ಎದೆಯನ್ನು ಮರದ ಮೇಲೆ ಇಟ್ಟಿದ್ದೇನೆ ಎಂದಾಗ ನೀನು ಒಪ್ಪಿಕೊಂಡೆ. ಹಾಗೆಯೇ ಎರಡೆರಡು ಬಾರಿ ನರಿಯ ಮಾತನ್ನು ಕೇಳಿ ಕತ್ತೆ ತನ್ನ ಮೃತ್ಯುವನ್ನು ತಾನೇ ಬರಮಾಡಿಕೊಂಡಿತು. ಒಂದು ಬಾರಿ ನಿನ್ನ ಮಾತಿಗೆ ಮರುಳಾದೆ ಎರಡನೆಯ ಬಾರಿಯೂ. ಹಾಗೆಯೇ ಮಾಡಿದೆನಾದರೆ ಆ ಕತ್ತೆಗೂ ನನಗೂ ಏನು ವ್ಯತ್ಯಾಸ ಇದ್ದಂತಾಯಿತು? ಹೋಗು, ಹೋಗು, ನಿನ್ನ ಹೆಂಡತಿಗೆ ಬೇಕಾದರೆ ನಿನ್ನ ಎದೆಯನ್ನೇ ಕೊಡು. ನನ್ನ ಸ್ನೇಹ ನಿನಗಿನ್ನು ಇಲ್ಲ" ಎಂದ ಮೇಲೆ ಇಂದಿನಿಂದ ನಿನಗೆ ಪಕ್ವವಾದ ನೇರಲೆ ಹಣ್ಣು ಕೂಡಾ ಸಿಗದು ಎಂದು ಹೇಳಿ ಮಂಗವು ಮರದಲ್ಲಿ ಮರೆಯಾಯಿತು. ಹೀಗೆ ಕಥೆಯನ್ನು ಹೇಳಿ ಮುಗಿಸಿದ ವಿಷ್ಣುಶರ್ಮರು ರಾಜಕುಮಾರರಿಗೆ ಸೂಕ್ತ ರಾಜನೀತಿಯನ್ನು ಬೋಧಿಸಿದರು. ಅದೇನೆಂದರೆ, "ರಾಜಕುಮಾರರೇ ಕಾರ್ಯಸಾಧನೆಗೆಂದು ಹೊರಟವರು ಕೆಲಸ ಆಗುವ ತನಕ ಬಾಯಿ ಮುಚ್ಚಿಕೊಂಡಿರಬೇಕು. ಅದನ್ನು ಬಿಟ್ಟು ಮಧ್ಯದಲ್ಲೇ ತನ್ನ ಬಗ್ಗೆ ಹೆಗ್ಗಳಿಕೆಯ, ಡಂಬಾಚಾರದ ಮಾತನ್ನಾಡಿದರೆ ಮಾಡಬೇಕಾಗಿರುವ ಕೆಲಸವನ್ನು ಕೆಡಿಸಿಕೊಂಡಂತೆಯೇ. 'ಮೌನಂ ಸರ್ವತ್ರ ಸಾಧನಂ.' ಆದ್ದರಿಂದ ನೃಪನೀತಿಶಾಸ್ತ್ರ ವಿಶಾರದನು ಯಾರನ್ನೂ ಪೂರ್ಣವಾಗಿ ನಂಬಬಾರದು. ಆದರೆ ನಂಬಿದಂತೆ ನಟಿಸಬೇಕು. ಹಾಗೆ ನಂಬಿದಾಗ ಅಪಾಯಕ್ಕೆ ಸಿಲುಕಿ-ಕೊಂಡರೆ ಮನಸ್ಸನ್ನು ಸ್ಥಿಮಿತದಲ್ಲಿ ಇರಿಸಿಕೊಂಡು ಅಪಾಯದಿಂದ ಪಾರಾಗುವ ಕುರಿತು ಚಿಂತಿಸಬೇಕು. ಶತ್ರುವನ್ನು ವಂಚಿಸಬೇಕು ಆಗಲೇ ನೃಪನಾದವನು ಗೆಲ್ಲುತ್ತಾನೆ." ಈ ವಿಚಾರವನ್ನು ರಾಜಕುಮಾರರೇ ನೀವೂ

59. **ಸುಧಾಕರ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಂ, ಚ..ತಂ.ಶ್ಲೋ-33, ಪು-645,(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಚಿಂತಿಸಿ ಅದರಂತೆ ನಡೆಯಲು ಸಾಧ್ಯವೇ ಎಂಬುದನ್ನು ಯೋಚಿಸಿರಿ ಎಂದು ಸೂಚಿಸಿದರು. ವಿಷ್ಣುಶರ್ಮರು ಪ್ರತಿ ಕಥೆಯ ಅಂತ್ಯದಲ್ಲೂ ಅಭಿಪ್ರಾಯ ಪ್ರಚೋದಕ ಪ್ರಶ್ನೆಗಳನ್ನು ಕೇಳುತ್ತಾ, ಅವರುಗಳ ಕಲಿಕೆಯನ್ನು ಅರ್ಥಪೂರ್ಣವಾಗುವಂತೆ ಪ್ರೋತ್ಸಾಹ ನೀಡುತ್ತಿದ್ದರು.[60] ಇದು ಬಹಳ ಉತ್ತಮ ಬೋಧನಾ ಕ್ರಮವಾಗಿದ್ದು, ಇದರಲ್ಲಿ ಕಲಿಕೆಯ ನಿರಂತರ ಹಾಗೂ ಸಮಗ್ರ ಮೌಲ್ಯಮಾಪನ ಕಂಡುಬರುತ್ತದೆ. ಮುಂದೆ ಮುಂದೆ ಇನ್ನೂ ವ್ಯವಸ್ಥಿತವಾಗಿ ವ್ಯಕ್ತಿನಿರ್ಮಾಣ ಕಾರ್ಯವನ್ನು ಕೈಗೊಂಡಿರುತ್ತಾರೆ.

ಮರುದಿನ ಎಂದಿನಂತೆ ರಾಜಕುಮಾರರು ಮತ್ತಷ್ಟು ಕಥೆ ಕೇಳಿ ತಮ್ಮನ್ನು ತಾವು ಬೆಳೆಸಿಕೊಳ್ಳಲು ಸಿದ್ಧರಾಗಿ ಕುಳಿತಿರುತ್ತಾರೆ. ಕಲಿಯುವವರಲ್ಲಿ ಈ ಸಿದ್ಧತೆ ಬಹಳ ಮುಖ್ಯ. ಇದನ್ನು ಪ್ರೇರೇಪಿಸುವವರು ಗುರುಗಳೆ. ಇಲ್ಲಿ ಒಬ್ಬ ಪ್ರತಿಭಾವಂತ ಶಿಕ್ಷಕರ ಕಲಿಸಿಕೊಡುವ ಬದ್ಧತೆ ವ್ಯಕ್ತವಾಗುತ್ತದೆ. ಒಬ್ಬ ಬೋಧಕನು ತನ್ನ ಶಿಷ್ಯರ ಸರ್ವತೋಮುಖ ಬೆಳವಣಿಗೆಗೆ, ಸುಂದರ ವ್ಯಕ್ತಿತ್ವ ನಿರ್ಮಾಣಕ್ಕೆ ಎಂತಹ ಪ್ರಾಮಾಣಿಕ ಪ್ರಯತ್ನ ನಡೆಸಬಹುದು ಎಂಬುದಕ್ಕೆ ವಿಷ್ಣುಶರ್ಮರು ಮಾದರಿಯಾಗಿದ್ದಾರೆ.

ಮುಂದುವರಿದು, ಗುರುಗಳು ಹೇಳುತ್ತಾರೆ– "ರಾಜಕುಮಾರರೇ, ತಮ್ಮ ಪುರುಷ ಧರ್ಮವನ್ನು ಅಭಿಮಾನಾಸ್ಪದವಾಗಿ ಪ್ರದರ್ಶಿಸುವವರು ನೂರಾರು ಮಂದಿ. ಆದರೆ ಅವರಲ್ಲಿ ಕೆಲವರು ಮಾತ್ರ ಹೆಣ್ಣಿಗಾಗಿ ಏನನ್ನೂಮಾಡಲು ಹೇಸದೆ ಅಪಕೀರ್ತಿಭಾಜನರಾಗುತ್ತಾರೆ. ಅವರಲ್ಲಿ ನೆನ್ನೆ ಹೇಳಿದ ಕರಾಳಮುಖನೂ ಒಬ್ಬ. ಹಾಗೆಯೇ ಪತಿವ್ರತೆಯರಾದ ಸ್ತ್ರೀಯರ ನಡುವೆ ಕೆಲವು ಹೆಂಗಸರು ಲಂಪಟರಾಗಿ ಸ್ತ್ರೀಕುಲಕ್ಕೇ ಅಪವಾದ ತರುವವರಾಗಿರುತ್ತಾರೆ ಎಷ್ಟೋ ಮಂದಿ ಕೆಟ್ಟ ಪುರುಷರಂತೆ. ಅಂತಹವರ ಬಗ್ಗೆ ಎಲ್ಲರೂ ಎಚ್ಚರಿಕೆಯಿಂದ ಇರಬೇಕಾದದ್ದು ಮುಖ್ಯ." ಎಂದು ಜಾಗೃತಿಯನ್ನು ಮೂಡಿಸಿ, ಮುಂದಿನ ಕಥೆ ಹೇಳಲೇ? ಎಂದು ಅವರ ಕುತೂಹಲ ಹಾಗೂ ಆಸಕ್ತಿಯನ್ನು ಪ್ರೇರೇಪಿಸಿ ಬಹಳ ವೈಜ್ಞಾನಿಕವಾಗಿ ಮುಂದಕ್ಕೆ ಸಾಗುತ್ತಾರೆ.[61] ಇದು ವಿಷ್ಣುಶರ್ಮರಿಗೆ ವರವಾಗಿ ಬಂದಿದ್ದ ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಗೆ ನಿದರ್ಶನವಾಗಿದೆ.

ಸ್ವಾರ್ಥವನ್ನು ಬಿಟ್ಟು ಯಾವ ಅತಿ ಮೂಢನಾದ ಕಪಟಿಯು ಸತ್ಯವನ್ನು ನುಡಿಯುವನೋ, ಅವನು ಮತ್ತೊಬ್ಬ ಯುಧಿಷ್ಠಿರನಂತೆ ಖಂಡಿತವಾಗಿಯೂ ಸ್ವಾರ್ಥವನ್ನು ನಷ್ಟ ಮಾಡಿಕೊಳ್ಳುತ್ತಾನೆ. ಎಂದು ಮಂಗವು ಹೇಳಿದಾಗ ಮೊಸಳೆಯು ಅದು ಹೇಗೆಂದು ಕೇಳುತ್ತದೆ. ಆಗ ಮಂಗವು **"ಯುಧಿಷ್ಠಿರ ಕುಂಬಾರನ ಕಥೆಯನ್ನು ಹೇಳಿದನು. ಸತ್ಯ ಹೇಳಿ ರಾಜನಿಂದ ದೇಶಭ್ರಷ್ಟನಾದ ಕುಂಬಾರ ಯುಧಿಷ್ಠಿರನ ಕಥೆಯಲ್ಲಿ ಕಂಡು ಬರುವ ನೀತಿಯೆಂದರೆ "ಸುಳ್ಳು ಹೇಳಲೂ ಸಮಯ, ಸಂದರ್ಭದ ಆಯ್ಕೆ ಮುಖ್ಯ."** ರಾಜಪುರುಷರ ಜೊತೆಗೆ

---

60. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಚತುರ್ಥ ತಂ, ಪು.–185–188,(2015). ವರ್ಣಿಲ, ನಂ39/2–11, ಕಲ್ಯಾಣಿ ಗಾರ್ಡನ್, ಬನಶಂಕರಿ, 1ನೇ ಹಂತ, ಬೆಂಗಳೂರು–560050
61. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಚತುರ್ಥ ತಂ,ಪು.–188,(2015).ವರ್ಣಿಲ, ನಂ39/2–11,ಕಲ್ಯಾಣಿ ಗಾರ್ಡನ್, ಬನಶಂಕರಿ,1ನೇ ಹಂತ,ಬೆಂಗಳೂರು–560050

ಬಂದ ಕುಂಬಾರನಿಂದ ಮೋಸಹೋದ ರಾಜನು ಕುಂಬಾರನನ್ನು ಕುತ್ತಿಗೆ ಹಿಡಿದು ಹೊರಗೆ ದೂಡಿರಿ ಎಂದು ರಾಜಭಟರಿಗೆ ಆಜ್ಞೆ ಮಾಡಿಬಿಟ್ಟನು. ಕುಂಬಾರನು ಕೈಮುಗಿದು ಹಾಗೆ ಮಾಡಬೇಡಿರೆಂದು ರಾಜನಲ್ಲಿ ಬೇಡಿಕೊಂಡನು. ನಾನೂ ಯುದ್ಧದಲ್ಲಿ ಹೋರಾಡಬಲ್ಲೆ. ಯುದ್ಧದಲ್ಲಿ ನನ್ನ ಕುಶಲತೆಯನ್ನು ನೋಡಿ ಎಂದು ದುಂಬಾಲು ಬೀಳುತ್ತಾನೆ. ಆಗ ರಾಜನು ವ್ಯಂಗ್ಯವಾಡಿ " ನೀನು ಸಕಲಗುಣ ಸಂಪನ್ನನು ಆದರೂ ಹೊರಡು, ಹೀಗೊಂದು ಉಕ್ತಿಯಿದೆ–

शूरोऽसि कृतविद्योऽसि दर्शनीयोऽसि पुत्रक ।

यस्मिन् कुले त्वमुत्पन्नो गजस्तत्र न हन्यते ॥[62]

**"ಮಗನೇ ನೀನು ಶೂರನು, ವಿದ್ಯೆಯನ್ನು ಕಲಿತವನು ಮತ್ತು ಸುಂದರನಾಗಿರುವೆ. ನಿನ್ನ ಶೌರ್ಯವನ್ನು ಮಡಿಕೆಯ ಮೇಲೆ ತೋರಿಸು. ಅದಕ್ಕೆ ತಕ್ಕದ್ದು ನಿನ್ನ ಕುಲ, ಬಲ. ಆದರೆ ನೀನು ಯಾವ ಕುಲದಲ್ಲಿ ಹುಟ್ಟಿರುವೆಯೋ, ಅಲ್ಲಿ ಆನೆಯನ್ನು ಕೊಲ್ಲಲಾಗುತ್ತದೆಯೇ ಎಂದು ನರಿಯನ್ನು ಸಿಂಹಿಣಿಯು ಕೇಳದಂತೆ ನಾನು ಈಗ ಕೇಳಬೇಕಾಗಿದೆ."** ಎಂದನು ರಾಜನು. ಕುಲಾಲನಿಗೀಗ ಕುತೂಹಲ. ಅದೇನೆಂದು ಕೇಳಲು **ಸಿಂಹ– ನರಿಯ ಮರಿಯ ಕಥೆ**ಯನ್ನು ರಾಜನು ಹೇಳಿದನು.

ಸಿಂಹಿಣಿ ಸಾಕಿದರೂ ಸಿಂಹವಾಗಿರದ ನರಿಮರಿ, ಅಂದರೆ, ಹುಟ್ಟು ಗುಣ ಸತ್ತರೂ ಹೋಗದು. ಸಿಂಹಿಣಿಗೆ ಅದರ ಪತಿ ಸಿಂಹವು ಬೇಟೆಗೆ ಹೋಗಿದ್ದಾಗ ಸಿಕ್ಕಿದ ಒಂದು ನರಿಮರಿಯನ್ನು ಅದಕ್ಕೆ ನೋವಾಗದಂತೆ ಕಚ್ಚಿ ಹಿಡಿದು ತಂದು ಕೊಟ್ಟಿತು. ಅದು ಸಿಂಹಿಣಿಯೇ ಆಗಿದ್ದರೂ ಎಳೆಯ ನರಿಯ ಮರಿಯನ್ನು ತಿನ್ನಲು ಅದರ ಮಾತೃವಾತ್ಸಲ್ಯ ಬಿಡಲಿಲ್ಲ. ಅದು ತನ್ನ ಪತಿಗೆ ಒಂದು ನೀತಿಯನ್ನು ಹೇಳಿತು. **"ತನ್ನ ಜೀವ ಹೋಗುತ್ತದೆನ್ನುವ ಸಂದರ್ಭದಲ್ಲೂ ಸ್ತ್ರೀಯನ್ನು, ಜ್ಞಾನಿಯನ್ನು, ಯತಿ, ಧರ್ಮದರ್ಶಿ, ಶಿಶುಗಳನ್ನು ಕೊಲ್ಲಬಾರದು. ಆದ್ದರಿಂದ ಒಂದು ದಿನ ಆಹಾರವಿಲ್ಲದಿದ್ದರೆ ನಾವೇನೂ ಸಾಯುವುದಿಲ್ಲ. ಹೀಗಾಗಿ ಇದನ್ನು ನನ್ನ ಮೂರನೆಯ ಮರಿಯೆಂದೇ ಸಲಹುತ್ತೇನೆ."** ಎಂದು ಹೇಳಿ ಇತರಮರಿಗಳೊಂದಿಗೆ ತನ್ನ ಎದೆ ಹಾಲನ್ನು ಉಣಿಸಿತು. ಮೂರೂ ಮರಿಗಳು ಜಾತಿಭೇದವಿಲ್ಲದೆ ಒಂದಾಗಿ ಆಡಿಕೊಳ್ಳುತ್ತಿದ್ದವು. ಹೀಗಿರುವಾಗ ಒಂದು ದಿನ ಒಂದು ಕಾಡಾನೆಯು ಮರಿಗಳ ಕಡೆಗೆ ಬಂತು. ಜಾತಿವೈರವು ಸಿಂಹದ ಮರಿಯನ್ನೂ ಬಿಟ್ಟಿರಲಿಲ್ಲ. ಅದು ಆನೆಯನ್ನು ನೋಡಿ ಕೋಪಗೊಂಡು ಅದರ ಮೇಲೆ ಹಾರಲು ಯತ್ನಿಸಿತು. ಇದನ್ನು ನೋಡಿದ ನರಿಮರಿಯು **"ಇದು ಮದ್ದಾನೆ, ನಮ್ಮ ಕುಲಶತ್ರು, ಅದರ ಸಮೀಪಕ್ಕೆ ಹೋಗಬೇಡಿ, ಹಿಂದಕ್ಕೆ ಬನ್ನಿ ಎಂದು ತಡೆದು ಓಡಿಹೋಯಿತು. ಆಗ ಪಾಪ, ಆ ಎರಡೂ ಮರಿಗಳು**

62. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ–39, ಪು–656,(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

**ಇನ್ನೊಂದರ ಮಾತುನ್ನು ಕೇಳಿ ಉತ್ಸಾಹ ಕಳೆದುಕೊಂಡವು. ಇದು ಸಹಜವಾದದ್ದು."** ರಣದಲ್ಲಿ ಸೇನಾನಾಯಕನ ಉತ್ಸಾಹದ ಮಾತುಗಳಿಗೆ ಸೈನಿಕರು ಪ್ರೇರಣೆಗೊಳ್ಳುತ್ತಾರೆ. ಒಬ್ಬನ ಉತ್ಸಾಹ ಭಂಗವಾದರೆ ಇಡೀ ಸೈನ್ಯವು ಉತ್ಸಾಹವನ್ನು ಕಳೆದುಕೊಳ್ಳುತ್ತದೆ. ಆದ್ದರಿಂದಲೇ ಭೂಪತಿಗಳು ಮಹಾಬಲರಾದ, ಶೂರ– ವೀರರಾದ, ಉತ್ಸಾಹಿಗಳಾದ ಯೋಧರನ್ನು ಬಯಸುತ್ತಾರೆ ಮತ್ತು ಅಂಜಿಕೆ ಉಳ್ಳವರನ್ನು ತ್ಯಜಿಸುತ್ತಾರೆ.[63]

ಮನೆಗೆ ಬಂದ ಸಿಂಹದ ಮರಿಗಳು ಸಹೋದರನ ಹೇಡಿತನವನ್ನು ತಂದೆತಾಯಿಗಳೊಂದಿಗೆ ಹೇಳಿ ಅಪಹಾಸ್ಯ ಮಾಡಿದವು. ಆಗ ನರಿಮರಿಯೇನು ಕಡಿಮೆಯಿಲ್ಲದೆ ಸಿಟ್ಟಿನಿಂದ ಸಿಂಹಸುತರನ್ನು ಕಠಿಣವಾಗಿ ನಿಂದಿಸಿ ನುಡಿಯಿತು. ಆಗ ಬಹಳ ಎಚ್ಚರಿಕೆಯಿಂದ ಸಿಂಹಿಣಿಯು ಶೃಗಾಲದ ಮರಿಯನ್ನು ಏಕಾಂತ–ಕ್ಕೆ ಕರೆದು ಅದು ಬದುಕಲಿ ಎಂಬ ಇಚ್ಛೆಯಿಂದ ಸಿಂಹಿಣಿಯು ತನ್ನಲ್ಲೇ ನಕ್ಕು ಬುದ್ಧಿ ಹೇಳಿ, **"ಇನ್ನೂ ಬಾಲಕರಾದ ನನ್ನ ಮಕ್ಕಳಿಗೆ ನೀನು ನರಿಜಾತಿಗೆ ಸೇರಿದವನೆಂದು ತಿಳಿಯುವ ಮೊದಲೇ ಬೇಗ ಹೋಗಿ ನಿನ್ನ ಸ್ವಜಾತಿಯವರನ್ನು ಸೇರಿಕೋ. ಇಲ್ಲದಿದ್ದರೆ ನನ್ನ ಮಕ್ಕಳಿಂದಲೇ ಸಾವನ್ನಪ್ಪುವೆ."** ಎಂದಿತು. ಈ ಮಾತುಗಳನ್ನು ಕೇಳಿ ಭಯದಿಂದ ವ್ಯಾಕುಲಗೊಂಡ ಅದು ಮೆಲ್ಲಮೆಲ್ಲನೆ ನಡೆಯುತ್ತಾ ಹೋಗಿ ಸ್ವಜಾತಿಯವರೊಡನೆ ಸೇರಿಕೊಂಡಿತು. .ಕುಲಾಲನು ಮಹಾಭಾರತದ ಯುಧಿಷ್ಠಿರನಂತೆ ಸತ್ಯವನ್ನೇ ತನ್ನ ಬಗ್ಗೆ ಹೇಳಿಕೊಳ್ಳದಿದ್ದರೆ ಯುದ್ಧದಲ್ಲಿ ಭಾಗವಹಿಸುವ ಅವಕಾಶ ದೊರಕುತ್ತಿತ್ತು. ಹೀಗಾಗಿ ಕೆಲಸದ ನಡುವೆ ನೀನು ಬಡಾಯಿ ಕೊಚ್ಚಿ–ಕೊಂಡು ನನ್ನನ್ನು ಬದುಕಿಸಿದೆ. **"ಎಲೈ ಮಕರನೇ, ಹೆಂಗಸಿಗಾಗಿ ನೀನು ಇದನ್ನೆಲ್ಲಾ ಮಾಡಿದ್ದಲ್ಲವೇ? ಎಂದಿಗೂ ಅವಿಚಾರಿಯಾದ ಹೆಂಡತಿಯ ಬಗ್ಗೆ ವಿಶ್ವಾಸ ಇಡಬಾರದು. ಇದಕ್ಕೂ ಒಂದು ನಿದರ್ಶನ ಇದೆ"** ಎಂದು ಹೇಳಿತು. ಏನದು ನಿದರ್ಶನ? ಎಂದು ಕೇಳಿದ ಮೊಸಳೆಗೆ ಕಪಿ ಹೇಳಿತೊಂದು ಹೊಸಕಥೆ. ಹೀಗೊಂದು ಕಥೆಯಿದೆ. ಅದರ ಮೊದಲು ಹೀಗೊಂದು ಉಕ್ತಿಯಿದೆ:–

यदर्थे स्वकुलं त्यक्तं जीवितार्द्धञ्च हारितम् ।

सा मां त्यजति निःस्नेहा कः स्त्रीणां विश्वसेन्नरः ॥[64]

"ಯಾವಳಿಗಾಗಿ ತನ್ನ ಕುಲವನ್ನು ಬಿಟ್ಟೆನೋ, ಅರ್ಧ ಜೀವನವನ್ನು ಕಳೆದುಕೊಂಡೆನೋ, ಸ್ನೇಹವಿಮುಖಳಾದ ಅವಳೇ ನನ್ನನ್ನು ತ್ಯಜಿಸುತ್ತಾಳೆ. ಹೀಗಿದ್ದಾಗ ಯಾರುತಾನೇ ಹೆಂಗಸನ್ನು ನಂಬಲು

63. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಚತುರ್ಥ ತಂ, ಪು, –189–190,(2015). ವರ್ನಿಲ, ನಂ39/2–11, ಕಲ್ಯಾಣಿ ಗಾರ್ಡನ್, ಬನಶಂಕರಿ, 1ನೇ ಹಂತ, ಬೆಂಗಳೂರು–560050

64. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ–45, ಪು–661,(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಸಾಧ್ಯ? ಎಂದು **"ಬ್ರಾಹ್ಮಣ, ಬ್ರಾಹ್ಮಣಿ, ಮತ್ತು ಹೆಳವನ ಕಥೆ"**ಯನ್ನು ಹೇಳಿತು. ಅಂದರೆ ಇದರ ಸಾರಾಂಶ– ಅರ್ಧ ಆಯುಷ್ಯವನ್ನು ಗಳಿಸಿ ಬದುಕಿದರೂ ಕುಂಟನನ್ನು ಕಾಮಿಸಿದ ಕೃತಘ್ನಳಾದ ಹೆಂಡತಿ–ಹೆಂಡತಿಯೂ ಕೃತಘ್ನಳಾದರೆ ಇನ್ನೇನು ಗತಿ?

ಕಥೆ ಮುಗಿಸಿದ ಮಂಗವು ಮುಂದುವರೆಸುತ್ತಾ, ಈ ವಿಷಯದಲ್ಲಿ ಬೇರೊಂದು ಕಥೆಯೂ ಇದೆ.

न किं दद्यान्न किं कुर्यात् स्त्रीभिरभ्यर्थितो नरः? ।

अनश्वा यत्र ह्रेषन्ते शिरः पर्वणि मुण्डितम् ॥[65]

ಅಂದರೆ, ಹೆಂಗಸರು ಆಗ್ರಹಿಸಿದರೆ ಮನುಷ್ಯನು ಏನನ್ನು ತಾನೆ ಕೊಡುವುದಿಲ್ಲ ಮತ್ತು ಏನನ್ನು ತಾನೆ ಮಾಡುವುದಿಲ್ಲ? ಕುದುರೆಯಿಲ್ಲದವರೂ ಕೆನೆಯುತ್ತಾರೆ ಮತ್ತು ಪರ್ವದ ದಿನವೂ ಕೇಶಮಂಡನ ಮಾಡಿಕೊಳ್ಳುತ್ತಾರೆ." ಎಂದು ಮೊಸಳೆಗೆ ಕುತೂಹಲವುಂಟುಮಾಡುತ್ತಾ **"ನಂದ–ವರರುಚಿ" ಕಥೆ**ಯನ್ನು ಹೇಳಿತು. ಮುಂದೆ ಮಂಗ ಮೊಸಳೆಯನ್ನು ಕುರಿತು "ನೀನೂ ಕೂಡ ನಂದ ಹಾಗೂ ವರರುಚಿಯಂತೆ ಸ್ತ್ರೀವಶನಾಗಿರುವೆ. ಹಾಗಾಗಿ ಅವಳು ಹೇಳಿದಳೆಂದು ನನ್ನನ್ನು ಕೊಲ್ಲಲು ಉಪಾಯ ಮಾಡಿದೆ. ಆದರೆ ನಿನ್ನ ಮಾತಿನ ದೋಷದಿಂದಲೇ ನಿನ್ನ ರಹಸ್ಯ ಹೊರಬಿತ್ತು. ಅಥವಾ ಈ ನುಡಿಗಳು ಯೋಗ್ಯವಾಗಿವೆ – ಗಿಳಿ ಮತ್ತು ಸಾರಿಕಾ ಪಕ್ಷಿಗಳು ತಮ್ಮವಾಗ್ದೋಷದಿಂದಲೇ ಬಂಧಿಸಲ್ಪಡುತ್ತವೆ; ಬಕವು ಮೌನವಾಗಿರುವುದರಿಂದ ಯಾರೂ ಅದನ್ನು ಹಿಡಿಯುವುದಿಲ್ಲ; ಮೌನವು ಸಕಲಾರ್ಥ ಸಾಧಕವು;

सुगुप्तं रक्ष्यमाणोऽपि दर्शयन् दारुणं वपुः ।

व्याघ्रचर्मप्रतिच्छन्नो वाक्कृते रासभो हतः ॥[66]

ಹುಲಿಯ ಚರ್ಮವನ್ನು ಹೊದ್ದುಕೊಂಡು ಭಯಂಕರವಾಗಿ ಕಾಣುತ್ತಾ ಚೆನ್ನಾಗಿ ರಕ್ಷಿಸಲ್ಪಟ್ಟ ಕತ್ತೆಯು ಮಾತನಾಡುವುದರಿಂದ ಕೊಲ್ಲಲ್ಪಟ್ಟಿತು;[67]

ಮೊಸಳೆಯು ಕುತೂಹಲದಿಂದ ಅದು ಹೇಗೆಂದು ಕೇಳಲು ಮಂಗ **"ವಾಚಾಳ ಕತ್ತೆಯ ಕಥೆ"**ಯನ್ನು ಹೇಳಿತು. ಈ ಕಥೆಯಲ್ಲಿ ಕಂಡು ಬರುವ ನೀತಿಯೆಂದರೆ, ಹುಲಿಯ ಚರ್ಮ ಹೊದಿಸಿಕೊಂಡರೂ ಕತ್ತೆ

---

65. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ– 46, ಪು. – 666, (1993.) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
66. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ–49, ಪು– 670, (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
67. **ಭರತ ಬಿ. ರಾವ್ ಪಂಚತಂತ್ರ,** ಪಂಡಿತ ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಚ.ತಂ, ಪು – 241–242 (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ, 44/1, ಕೆ.ಆರ್. ರಸ್ತೆ, ಬಸವನಗುಡಿ ಬೆಂಗಳೂರು–560005.

ಕತ್ತೆಯೇ! ಬಾಯಿಬಿಟ್ಟರೆ ಬಣ್ಣಗೇಡು ಎಂಬಂತೆ. ಮತ್ತೊಂದು ಕತ್ತೆ ಅರಚಿದ್ದನ್ನು ಕೇಳಿ, ತಡೆದುಕೊಳ್ಳಲಾಗದೆ ಹುಲಿಚರ್ಮ ಹೊದ್ದಿದ್ದ ಕತ್ತೆ ಕೂಗತೊಡಗಿತು. ಆಗ ಗದ್ದೆ ಕಾಯುವವರು ಇದರ ನಿಜವಾದ ಬಣ್ಣ ತಿಳಿದು, ಇದು ನಮ್ಮನ್ನು ಮೋಸಗೊಳಿಸಿತೆಂದು ತಿಳಿದು ಆ ಕತ್ತೆಯನ್ನು ಬಡಿದು ಸಾಯಿಸಿಬಿಟ್ಟರಂತೆ. ಕತ್ತೆಯು ಮೌನವಾಗಿರುತ್ತಿರೆ ಇನ್ನಷ್ಟು ಕಾಲ ಸುಖವಾಗಿರುತ್ತಿತ್ತು. ವಾಚಾಳಿಗಳು ತಮ್ಮ ದುಡುಕಿನ ಮಾತಿನಿಂದಲೇ ಸೋಲುತ್ತಾರೆ. ಮಾತನಾಡುತ್ತವೆ ಎಂಬುದರಿಂದಲೇ ಗಿಳಿ ಪೈನಗಳನ್ನು ಬಂಧಿಸುತ್ತಾರೆ. **"ಮೌನಂ ಸರ್ವತ್ರ ಸಾಧನಂ."**

ವಿಷ್ಣುಶರ್ಮರು ಕಥೆಯನ್ನು ಇಂದಿಗೆ ಇಷ್ಟು ಸಾಕು ಎಂದು ಎದ್ದಿದ್ದರು. ರಾಜಕುಮಾರರೂ ಅವರ ಜೊತೆಯಲ್ಲೇ ಎದ್ದು"ಗುರುಗಳೇ, ಕಪಿಗೆ ಎಷ್ಟೊಂದು ಕಥೆ ಗೊತ್ತಿದೆಯಲ್ಲ! ಅದು ಬುದ್ಧಿವಂತನೂ ಹೌದು. ಇಲ್ಲವಾದರೆ ಅದು ಕಥೆಹೇಳಲು ಎಲ್ಲಿರುತ್ತಿತ್ತು? ಹೆಣ್ಣು ಮೊಸಳೆಯ ಹೊಟ್ಟೆಯಲ್ಲಿ. ಅಷ್ಟೇ ಅಲ್ಲದೆ ಅದಕ್ಕೆ ಎಷ್ಟೊಂದು ನೀತಿ ತಿಳಿದಿದೆ. ಅದರಲ್ಲೂ ರಾಜನಿಗೆ ಸಂಬಂಧಿಸಿದಂತೆ. ಎಂದು ಶಿಷ್ಯರೊಬ್ಬೊಬ್ಬರೂ ಒಂದೊಂದು ಮಾತನಾಡುತ್ತ ಗುರುಗಳನ್ನು ಹಿಂಬಾಲಿಸಿದರು. ಈಗೀಗ ರಾಜಕುಮಾರರಿಗೆ ಕಥೆಗಿಂತಲೂ, ಅದು ಬೋಧಿಸುವ ರಾಜನೀತಿ ಕಡೆಗೆ ಒಲವು ಹೆಚ್ಚುತ್ತಿರುವುದನ್ನು ಗಮನಿಸುತ್ತಿದ್ದ ವಿಷ್ಣುಶರ್ಮರಿಗೆ ಸಂತೋಷವಾಯಿತು. ಕಥೆಯ ಮೂಲಕವೇ. ತಿಳಿಸಬೇಕಾದುದನ್ನು ಹೇಳಿದರೆ ಅದು ಮನಸ್ಸಿಗೆ ನಾಟುತ್ತದೆ ಎಂಬುದು ಅವರಿಗೆ ದೃಢವಾಯಿತು. ಆರು ತಿಂಗಳು ಕಾಲಾವಕಾಶ ಬೇಡ. ಅದಕ್ಕೂ ಮೊದಲು ಪಾಂಡಿತ್ಯಪೂರ್ಣರಾದ ಇವರನ್ನು ರಾಜನಿಗೆ ಒಪ್ಪಿಸಿ ತಮ್ಮ ಕರ್ತವ್ಯ ಮುಗಿಸಿದ ಧನ್ಯತಾ ಭಾವವನ್ನು ಹೊಂದಬೇಕೆಂದು ವಿಷ್ಣುಶರ್ಮರು ಬಯಸಿದ್ದರು. ಇದು ಒಬ್ಬ ಆದರ್ಶ ಶಿಕ್ಷಕನಲ್ಲಿರಬೇಕಾದ ಶೈಕ್ಷಣಿಕ ಮನೋವಿಜ್ಞಾನದ ಜ್ಞಾನ, ಕರ್ತವ್ಯ ಪ್ರಜ್ಞೆ ಹಾಗೂ ಸಾಧಿಸಬಲ್ಲೆನೆಂಬ ದೃಢ ಸಂಕಲ್ಪ.

ಇನ್ನೊಂದು ಕಥೆ– **"ರೈತನ ಹೆಂಡತಿ, ನರಿ ಮತ್ತು ವಂಚಕನ ಕಥೆ**ಯನ್ನು ಮೊಸಳೆಯು ಹೇಳಿದ್ದು. ಈ ಕಥೆಯಲ್ಲಿನ ಪರಿಸ್ಥಿತಿ ಗಂಡನೂ ಇಲ್ಲದೆ–ಮಿಂಡನೂ ಇಲ್ಲದೆ ಬೆತ್ತಲೆಯಾದ ಒಕ್ಕಲುಗಿತ್ತಿಯ ದಡ್ಡತನ. ಹೊಸ ಸೀರೆ ಸಿಗುತ್ತದೆಂದು ಉಟ್ಟ ಸೀರೆಯನ್ನು ಸುಟ್ಟರೆ–ಬೆಂಕಿಯಿಂದ ಬಾಣಲೆಗೆ ಬಿದ್ದಹಾಗೆ–ಇದ್ದುದನ್ನು ಬಿಟ್ಟು ಮತ್ತೊಂದನ್ನು ಹಾರೈಸಿದರೆ ಆಗುವ ಪರಿಣಾಮ ಎರಡೂ ಇಲ್ಲದಂತಾಗುವುದು. ಈ ಒಂದು ಬದುಕಿನ ನೀತಿಯನ್ನು ತಿಳಿಸುತ್ತಾ, ಕಳ್ಳನಿಂದ ಮೋಸಗೊಂಡು ಒಕ್ಕಲುಗಿತ್ತಿಯು ಮೈ, ಕೈ, ಕಾಲುಗಳನ್ನು ಮುದ್ದೆಮಾಡಿಕೊಂಡು ಮರಳ ದಿನ್ನೆಯಲ್ಲಿ ಕುಳಿತಿದ್ದಳು. ಆಗ ಒಂದು ಹೆಣ್ಣು ನರಿ ಬಾಯಲ್ಲಿ ಮಾಂಸದ ತುಂಡೊಂದನ್ನು ಹಿಡಿದುಕೊಂಡು ಬಂದಿತು. ನದಿ ತೀರದಲ್ಲಿ ದೊಡ್ಡ ಮೀನೊಂದು ನೀರಿನಿಂದ ಹೊರಬಿದ್ದು ದಡದಲ್ಲಿ ಕುಳಿತಿತ್ತು. ಅದನ್ನು ನೋಡಿ ಮಾಂಸದ ತುಂಡನ್ನು ಬಿಟ್ಟು ಅದು ಮೀನಿನ ಕಡೆಗೆ ಓಡಿತು. ಆ ಹೊತ್ತಿಗೆ

ಹದ್ದೊಂದು ಹಾರಿಬಂದು ಬಿದ್ದಿದ್ದ ಮಾಂಸದ ತುಂಡನ್ನು ಕಚ್ಚಿಕೊಂಡು ಹೋಯಿತು. ಇತ್ತ ದಡಕ್ಕೆ ಬಿದ್ದಿದ್ದ ಮೀನು ಎರಡು ಮೂರು ಬಾರಿ ಕುಣಿಕುಣಿದು ನೀರನ್ನು ಸೇರಿ ಬದುಕಿಕೊಂಡಿತು. ಯಾವುದೂ ದಕ್ಕದಿರಲು ಹೆಣ್ಣು ನರಿಯು ಹತಾಶವಾಗಿ ನೋಡುತ್ತಿದ್ದುದನ್ನು ಕಂಡು ಮುದುಡಿ ಕುಳಿತುಕೊಂಡಿದ್ದ ಆಕೆ ಕೇಳಿದಳು. ಎಲ್ಲಾ ಕಳೆದುಕೊಂಡೆಯಲ್ಲಾ ಮತ್ತೆ ನೋಡುತ್ತಿರುವುದು ಏನನ್ನು?[68] ಆಗ ಆ ನರಿಯು ಪತಿಯನ್ನು, ಧನವನ್ನು ಮತ್ತು ಪ್ರಿಯನನ್ನು ಕಳೆದುಕೊಂಡ ಅವಳನ್ನು ನೋಡಿ ಅಪಹಾಸ್ಯ ಮಾಡುತ್ತಾ ಹೀಗೆ ಹೇಳಿತು –

यादृशं मम पाण्डित्यं तादृशं द्विगुणं तव ।

नाभूज्जारो न भर्त्ता च किं निरीक्षसि नग्निके ॥[69]

"ನನ್ನಲ್ಲಿರುವ ಬುದ್ಧಿಗಿಂತ ಎರಡರಷ್ಟು ಬುದ್ಧಿ ನಿನ್ನಲ್ಲಿದೆ. ನಿನ್ನ ಪ್ರಿಯನೂ ಉಳಿಯಲಿಲ್ಲ, ನಿನ್ನ ಗಂಡನೂ ಉಳಿಯಲಿಲ್ಲ. ಎಲೈ ನಗ್ನಳೇ, ಏನನ್ನು ನೋಡುತ್ತಿರುವೆ? ಹೀಗೆ ಮೊಸಳೆಯು ಕಥೆಯನ್ನು ಮುಗಿಸಲು ಮತ್ತೊಂದು ನೀರಿನಲ್ಲಿರುವ ಪ್ರಾಣಿಯು ಬಂದು ಹೇಳಿತು. "ನಿನ್ನ ಮನೆಯನ್ನು ಬೇರೊಂದು ದೊಡ್ಡ ಮೊಸಳೆಯು ಆಕ್ರಮಿಸಿಕೊಂಡಿತು.

ಇದನ್ನು ಕೇಳಿ ದುಃಖಗೊಂಡ ಮನಸ್ಸಿನಿಂದ ಆ ದೊಡ್ಡ ಮೊಸಳೆಯನ್ನು ಮನೆಯಿಂದ ಹೊರದೂಡುವ ಉಪಾಯವನ್ನು ಚಿಂತಿಸುತ್ತಾ ಹೇಳಿತು." ಅಯ್ಯೋ ನನ್ನ ದುರ್ವಿಧಿಯೇ, ಏನು ಹೇಳಲಿ ನನ್ನ ಪರಿಸ್ಥಿತಿಯನ್ನು? ಗೆಳೆಯ ವೈರಿಯಾದ ಹೆಂಡತಿ ಸತ್ತುಹೋದಳು, ನನ್ನ ಮನೆಯನ್ನು ಬೇರೊಬ್ಬರು ಆಕ್ರಮಿಸಿಕೊಂಡರು. ಇನ್ನೇನನ್ನು ಕಾಣಲುಂಟೋ? ಎಂದು ಗೋಳಾಡಿತು.

ಗಾಯವಾದ ಕಡೆಯೇ ಮತ್ತೆ ಮತ್ತೆ ಏಟು ಬೀಳುತ್ತದೆ; ಆಹಾರವು ಇಲ್ಲದಿದ್ದಾಗ ಜಠರಾಗ್ನಿಯು ಚೆನ್ನಾಗಿ ಉರಿಯುತ್ತದೆ; ತೊಂದರೆಗಳಿದ್ದಾಗ ವೈರಿಗಳು ಹುಟ್ಟಿಕೊಳ್ಳುತ್ತಾರೆ; ವಿಧಿಯು ಪ್ರತಿಕೂಲವಾಗಿದ್ದ ಸಂದರ್ಭದಲ್ಲಿ ಮನುಷ್ಯರಿಗೆ ಹೇಗೆಲ್ಲ ಆಗುತ್ತದೆ. ಆದ್ದರಿಂದ ಏನು ಮಾಡುವುದು? ಮೊಸಳೆಯೊಂದಿಗೆ ಹೋರಾಡುವುದೇ? ಅಥವಾ ಸಾಮೋಪಾಯದಿಂದ ಮಾತನಾಡಿ ಹೊರಹಾಕುವುದೇ? ಅಥವಾ ಭೇದ ಇಲ್ಲವೇ ದಾನ ಮಾರ್ಗಗಳನ್ನು ಅನುಸರಿಸುವುದೇ? ಅಥವಾ ಈ ವಾನರಮಿತ್ರನನ್ನೇ ಕೇಳುವುದೇ? ತನ್ನ ಹಿತೈಷಿಗಳು ಹಾಗೂ ಗುರುವನ್ನು ಕೇಳಿ ಕೆಲಸ ಮಾಡುವುದರಿಂದ, ಆ ಕೆಲಸದಲ್ಲಿ ಎಂದಿಗೂ ವಿಘ್ನಗಳುಂಟಾಗುವುದಿಲ್ಲ ಎಂದು ತಿಳಿದವರು ಹೇಳುತ್ತಾರೆ ಎಂದೆಲ್ಲ ಯೋಚಿಸಿತು.[70]

---

68. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಚತುರ್ಥತಂ, ಪು,–197–199, (2015). ವರ್ನಿಲ, ನಂ39/2–11, ಕಲ್ಯಾಣಿ ಗಾರ್ಡನ್, ಬನಶಂಕರಿ, 1ನೇ ಹಂತ, ಬೆಂಗಳೂರು–560050
69. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ–59, ಪು – 678,( 1993).ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
70. **ಭರತ ಬಿ ರಾವ್ ಪಂಚತಂತ್ರ,** ಪಂಡಿತ ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ,

ಹೀಗೆ ಯೋಚಿಸಿ ಮತ್ತೆ ಜಂಬೂವೃಕ್ಷದಲ್ಲಿರುವ ಮರ್ಕಟನ ಸಲಹೆಯನ್ನು ಕೋರಿಕೊಂಡಿತು. ಆ ಮರ್ಕಟಕ್ಕೆ ವಿಶ್ವಾಸ ದ್ರೋಹಿ ಮೊಸಳೆಯ ಬಗ್ಗೆ ಕನಿಕರ ಮೂಡಲೇ ಇಲ್ಲ. ಆದ್ದರಿಂದಲೇ ಅದು ಹೀಗೆ ಹೇಳಿತು. "ಹೆಂಡತಿಯ ಮಾತಿನಂತೆ ನನ್ನನ್ನು ಕೊಲ್ಲಲು ಬಗೆದವನು ನೀನಲ್ಲವೇ? ಹೆಂಡತಿಯು ಲೋಕದಲ್ಲಿ ಎಲ್ಲಕ್ಕಿಂತ ಹೆಚ್ಚು ಪ್ರೀತಿಪಾತ್ರಳು ನಿಜ. ಆದರೂ ಅವಳ ಮಾತನ್ನು ಕೇಳಿ ಕೆಟ್ಟದ್ದನ್ನು ಮಾಡುವುದೇ? ನಿನ್ನ ಮೌಢ್ಯದಿಂದ ನಿನಗೆ ನೀನೇ ಕೇಡನ್ನು ತಂದುಕೊಂಡೆ. ಸಜ್ಜನರ ಮಾತನ್ನು ದರ್ಪದಿಂದ ಉಲ್ಲಂಘಿಸುವವರು ಅದೇ ದರ್ಪದಿಂದ ಮನೆಯನ್ನು ಆಕ್ರಮಿಸಿಕೊಂಡವರೊಡನೆ ಯುದ್ಧಮಾಡಿ ಓಡಿಸಬೇಕು. ಸಾಮವನ್ನು ನಮಗಿಂತ ಶ್ರೇಷ್ಠನಾದವನಲ್ಲಿ; ಭೇದೋಪಾಯವನ್ನು ಶೂರನಾದವನಲ್ಲಿ; ನೀಚನಲ್ಲಿ ದಾನವನ್ನು; ಸಮಬಲದಲ್ಲಿ ದಂಡವನ್ನು ಉಪಯೋಗಿಸಿ ಗೆಲ್ಲಬೇಕೆಂದು ಬಲ್ಲವರು ಹೇಳುತ್ತಾರೆ.

सतां वचनमादिष्टं मदेन न करोति यः ।

स विनाशमवाप्नोति घण्टोष्ट्र इव सत्वरम् ॥[71]

ಸಜ್ಜನರು ಹೇಳಿದ ಮಾತನ್ನು ಅಹಂಕಾರದಿಂದ ಯಾರು ಕೇಳುವುದಿಲ್ಲವೋ ಅವರು ಶೀಘ್ರದಲ್ಲೇ ಘಂಟಾಧಾರಿಯಾದ ಒಂಟೆಯಂತೆ ನಾಶಹೊಂದುತ್ತಾರೆಂದು ಮಂಗವು ಮುಂದಿನ ಕಥೆಗೆ ಪೀಠಿಕೆ ಹಾಕಿತು.

**"ಕೊರಳಿಗೆ ಗಂಟೆಯನ್ನು ಕಟ್ಟಿಕೊಂಡು ಜಂಬದಿಂದಾಗಿ ಹತನಾದ ಒಂಟೆ ಘಂಟೋಷ್ಟ್ರ"** ಈ ಕಥೆಯಲ್ಲಿ ಒಬ್ಬ ಬಡಗಿಯು ಬಹಳ ಪ್ರೀತಿಯಿಂದ ಒಂದು ಒಂಟೆಯನ್ನು ಸಾಕಿ, ಅದರ ಕುತ್ತಿಗೆಗೆ ಘಂಟೆಯೊಂದನ್ನು ಕಟ್ಟಿದ್ದನು. ನಿತ್ಯವೂ ಒಂಟೆಯ ಹಾಲನ್ನು ಕರೆದು ತನ್ನ ಪರಿವಾರವನ್ನು ಸಾಕುತ್ತಿದ್ದನು. ಕೆಲವೇ ವರ್ಷಗಳಲ್ಲಿ ಅವನ ಬಳಿ ಅನೇಕ ಒಂಟೆಗಳು ಹಾಗೂ ಒಂಟೆಯ ಮರಿಗಳಾದವು. ದೊಡ್ಡ ಒಂಟೆಯ ಗುಂಪನ್ನೇ ಮಾಡಿ ಅದರ ರಕ್ಷಣೆಗಾಗಿ ಕಾವಲುಗಾರನನ್ನು ನೇಮಿಸಿದನು ಅವನು ಮೊದಲು ಸಾಕಿದ ಒಂಟೆಯು ಗರ್ವದಿಂದ ನಿಧಾನವಾಗಿ ಬಂದು ಇತರರನ್ನು ಸೇರುತ್ತಿತ್ತು. ಒಂಟೆಯ ಮರಿಗಳೆಲ್ಲವೂ ಮೇಯಲು ನಗರದ ಉಪವನಕ್ಕೆ ಹೋಗುತ್ತಿದ್ದವು. ಮಂದಮತಿಯಾದ ಈ ಗರ್ವದ ಒಂಟೆಯು ಗುಂಪಿನಿಂದ ಹಿಂದೆ ಬಿದ್ದು, ಘಂಟಾಶಬ್ದವನ್ನು ಮಾಡುತ್ತಾ ಬರುತ್ತದೆ. ಯಾವುದಾದರೂ ಕ್ರೂರ ಪ್ರಾಣಿಯ ಬಾಯಿಗೆ ಸಿಕ್ಕಿದರೆ ಖಂಡಿತವಾಗಿಯೂ ಸಾವನ್ನಪ್ಪುತ್ತದೆ" ಎಂದು ಯೋಚಿಸಿ ಒಮ್ಮೆ ಉಳಿದ ಒಂಟೆಗಳು ಎಚ್ಚರಿಕೆಯನ್ನು ಸೂಚಿಸಿದ್ದವು. ಆದರೆ ಆ ಮದೋನ್ಮತ್ತನಾದ ಒಂಟೆಯು ಸಜ್ಜನರ ನುಡಿಯನ್ನೆಲ್ಲಿ ಕೇಳುತ್ತದೆ? ಒಂದು ದಿನ ಎಂದಿನಂತೆ ಸೋಮಾರಿಯಾಗಿ ತೀರಾ ಹಿಂದೆ ಬರುತ್ತಿದ್ದ

ಚ.ತಂ.ಪು -246-247,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.,44/1, ಕೆ.ಆರ್.ರಸ್ತೆ, ಬಸವನಗುಡಿ, ಬೆಂಗಳೂರು-560005

71. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ-65, ಪು.-685, (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಗಂಟೆಯ ಒಂಟೆಯನ್ನು ಸಿಂಹವೊಂದು ಕೊಂದುಬಿಟ್ಟಿತು. ಆದ್ದರಿಂದ ಸಜ್ಜನರ ಮಾತನ್ನು ಕೇಳಬೇಕೆಂದು ಬಲ್ಲವರು ಹೇಳುವುದು ಎಂದು ಮಂಗವು ಕಥೆಯನ್ನು ಮುಗಿಸಿತು.[72]

ಆಗ ಮೊಸಳೆಯು "ಅಯ್ಯಾ, ವಾನರನೇ, ಲೋಕದ ಹಿತವನ್ನು ಬಯಸುವವರು ಉಪದೇಶವನ್ನು ಎಲ್ಲರಿಗೂ ನೀಡುತ್ತಾರೆ. ಅಂಥಹವರಿಗೆ ಇಹಪರಗಳಲ್ಲಿ ಎಂದೂ ಕೇಡು ಒದಗದು. ಹೀಗಾಗಿ ಕೃತಘ್ನನಾದರೂ ನನಗೆ ಉಪದೇಶ ಮಾಡಿ ಪುಣ್ಯಾತ್ಮನಾಗು." ಎಂದಿತು. ಅದನ್ನು ಕೇಳಿದ ಮಂಗವು ಹೀಗೆ ಹೇಳಿತು– "ಭದ್ರ, ಹಾಗಾದರೆ ನಿನ್ನ ಮನೆಗೆ ಹೋಗಿ ಆ ಮೊಸಳೆಯೊಂದಿಗೆ ಯುದ್ಧ ಮಾಡು. ಸತ್ತರೆ ವೀರಸ್ವರ್ಗವನ್ನು ಪಡೆಯುವೆ. ಉಳಿದರೆ ಮನೆ ಮತ್ತು ಯಶಸ್ಸನ್ನು ಪಡೆಯುವೆ. ಯುದ್ಧವನ್ನು ಮಾಡುವುದರಿಂದ ನಿನಗೆ ಎರಡೂ ಉತ್ತಮವಾದ ಪರಿಣಾಮಗಳೇ ಆಗುವುದು. ಈ ಶ್ಲೋಕವು ಚತುರೋಪಾಯಗಳನ್ನು ಹೇಳುತ್ತದೆ. ಕೇಳು.

उत्तमं प्रणिपातेन शूरं भेदेन योजयेत् ।
नीचमल्पप्रदानेन समशक्तिं पराक्रमैः ॥[73]

ಉತ್ತಮವಾದವನನ್ನು ಸಾಮೋಪಾಯದಿಂದ, ಶೂರನನ್ನು ಭೇದೋಪಾಯದಿಂದ, ನೀಚನನ್ನು ಸ್ವಲ್ಪ ದಾನಾದಿಗಳನ್ನು ಕೊಡುವುದರಿಂದ ಹಾಗೂ ಸಮಬಲನನ್ನು ಪರಾಕ್ರಮದಿಂದ ಜಯಿಸಬೇಕು.

ಮೊಸಳೆಯು ಅದೇನೆಂದು ಕೇಳಲು ಮಂಗವು, "**ನರಿ, ಸಿಂಹ, ಹುಲಿ ಮತ್ತು ಚಿರತೆಯ ಕಥೆ**ಯನ್ನು ಹೇಳಿತು. ಈ ಕಥೆಯಲ್ಲಿ ಸತ್ತ ಆನೆಯನ್ನು ತಿನ್ನಲಾಗದೆ ಸಿಂಹ, ಹುಲಿ ಮತ್ತು ಚಿರತೆಯನ್ನು ವಂಚಿಸಿದ ಮಹಾಚತುರ ನರಿಯ ವರ್ತನೆಯ ಚಿತ್ರಣ ಕಂಡುಬರುತ್ತದೆ. ಈ ಕಥೆಯ ನೀತಿ ಊಟದ ಹೊತ್ತಿನಲ್ಲಿ ನೆಮ್ಮದಿ ಇರಬೇಕು. ಅದು ಹಂಗಿನದ್ದೂ ಆಗಿರಬಾರದು. ಚತುರೋಪಾಯಗಳಲ್ಲಿ ಯಾವುದನ್ನು ಯಾವ ಹೊತ್ತಿನಲ್ಲಿ ಉಪಯೋಗಿಸಬೇಕು ಎಂಬುದನ್ನು ಅರಿತಿರಬೇಕು. ಇದು ಬದುಕಿನ ನೀತಿ, ಬದುಕುವ ರೀತಿಯೂ ಹೌದು." ಕಥೆಯನ್ನು ಮುಗಿಸಿ ಉಪದೇಶವನ್ನು ಮುಂದುವರೆಸುತ್ತಾ ಮಂಗವು ಮೊಸಳೆಗೆ ಹೇಳುತ್ತದೆ. "ನೀನೂ ಕೂಡ ನಿನ್ನ ಜಾತಿಗೇ ಸೇರಿದ ನಿನ್ನ ಶತ್ರುವನ್ನು ಯುದ್ಧದಲ್ಲಿ ಸೋಲಿಸಿ, ಅವನು ಓಡಿಹೋಗುವಂತೆ ಮಾಡು. ಇಲ್ಲದಿದ್ದರೆ ಅಲ್ಲಿ ಸ್ಥಿರವಾಗಿ ನೆಲಸಿದ ಅವನಿಂದ ನಿನ್ನ ನಾಶವಾಗುತ್ತದೆ. ಏಕೆಂದರೆ, ಹೀಗೊಂದು ಉಕ್ತಿಯಿದೆ– "ಗೋವುಗಳಲ್ಲಿ ಸಂಪತ್ತು, ಬ್ರಾಹ್ಮಣನಲ್ಲಿ ತಪಸ್ಸು ಸ್ತ್ರೀಯರಲ್ಲಿ ಚಾಪಲ್ಯ, ಸ್ವಜಾತಿಯಲ್ಲಿ ವೈರವೆಂಬುದು ಸಹಜ.

---

72. **ಭರತ ಬಿ. ರಾವ್ ಪಂಚತಂತ್ರ,** ಪಂಡಿತ ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಚ.ತಂ.ಪು – 248–249,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560005
73. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ–70, ಪು – 691,(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ವಿದೇಶವು ಸಂಪದ್ಭರಿತವಾಗಿದೆ. ವಿವಿಧ ರೀತಿಯ ಆಹಾರಗಳು ಲಭ್ಯವಿವೆ. ನಗರದ ಸ್ತ್ರೀಯರು ಉದಾಸೀನರು. ನಗರಗಳಲ್ಲಿ ಬಯಸಿದ್ದೆಲ್ಲಾ ಸಿಗುವುದು. ಇದರಿಂದಾಗಿ ಅಲ್ಲಿನ ಹೆಂಗೆಳೆಯರಿಗೆ ಮುಂಜಾಗರೂಕತೆ ಕಡಿಮೆ. ಅಂತೆಯೇ ಅಲ್ಲಿನ ಪ್ರಾಣಿಗಳೂ ಸಹ ಹೊಸಬರನ್ನು ತಿರಸ್ಕರಿಸುತ್ತವೆ. ಮತ್ತೊಂದು ವಿದೇಶದ ದೋಷವೇನೆಂದರೆ ಅಲ್ಲಿ ಸ್ವಜಾತಿಯವರೇ ವಿರುದ್ಧವಾದುದನ್ನು ಮಾಡುತ್ತಾರೆ.[74]

सुभिक्षाणि विचित्राणि शिथिलाः पौरयोषितः ।

ऐको दोषो विदेशस्य स्वजातिर्यद् विरुध्यते ॥[75]

ವಿದೇಶವು ಸಂಪದ್ಭರಿತವಾಗಿದೆ, ವಿವಿಧ ರೀತಿಯ ಆಹಾರಗಳು ಲಭ್ಯವಿದೆ. ನಗರದ ಸ್ತ್ರೀಯರು ಉದಾಸೀನರು. ಆದರೆ ವಿದೇಶದ ಒಂದು ದೋಷವೆಂದರೆ, ಅಲ್ಲಿ ಸ್ವಜಾತಿಯವರೇ ವಿರುದ್ಧವಾದುದನ್ನು ಮಾಡುತ್ತಾರೆ.

ಪುನಃ ಮೊಸಳೆಯು ಅದೇನೆಂದು ಕೇಳಲು ಇದಕ್ಕೂ ಒಂದು ಕಥೆ ಹೇಳುತ್ತೇನೆ ಕೇಳು ಎಂದು **"ವಿದೇಶಕ್ಕೆ ಹೋದ ನಾಯಿಯ ಕಥೆ"**ಯನ್ನು ಮಂಗ ಪ್ರಾರಂಭಿಸಿತು. ಈ ಕಥೆಯಲ್ಲಿ ವಿದೇಶಕ್ಕೆ ಹೋಗಿ ಭ್ರಮನಿರಸನದಿಂದ  ಸ್ವಂತ ಊರಿಗೆ ಹಿಂದಿರುಗಿದ ನಾಯಿಯ ವಿಚಾರವಿದ್ದು, ಇದರ ನೀತಿಯೆಂದರೆ ಸ್ವದೇಶೇ ನಿಧನಂ ಶ್ರೇಯಃ.

ಆಹಾರ ಮತ್ತು ಜಲಕ್ಷಾಮವು ಬಹಳವಾಗಿ ಕಾಡಲು ಜನರು ಬೇರೆ ದೇಶಕ್ಕೆ ಗುಳೇ ಹೋಗತೊಡಗಿದರು. ಅವರೊಂದಿಗೆ ಅವರ ಹಿಂಬಾಲಕ ಜೀವಿಗಳು. ಅದರಲ್ಲಿ ಚಿತ್ರಾಂಗ ಎಂಬ ನಾಯಿಯೂ ಒಂದು. ಅಲ್ಲಿ ಒಂದು ನಗರದಲ್ಲಿ ಒಬ್ಬಳು ಜಾಗ್ರತೆ ಇಲ್ಲದ ಮನೆಯೊಡತಿಯಿರುವ ಮನೆಯನ್ನು ಹೊಕ್ಕು ಈ ನಾಯಿಯು ಬಗೆಬಗೆಯ ಆಹಾರವನ್ನು ತಿಂದು ತೃಪ್ತಿಗೊಂಡಿತು. ಆದರೆ ಆ ನಾಯಿಯು ಮನೆಯಿಂದ ಹೊರಬರುವಾಗ ಅಲ್ಲಿದ್ದ ಮದದಿಂದ ಕೂಡಿದ ಇತರ ನಾಯಿಗಳು ಚಿತ್ರಾಂಗ ನಾಯಿಯನ್ನು ಸುತ್ತುವರಿದು ದೇಹದೆಲ್ಲೆಡೆ ಕಚ್ಚುತ್ತಿದ್ದವು. ಆಗ ಚಿತ್ರಾಂಗನು **"ಅಯ್ಯೋ ಸ್ವದೇಶವೇ ಮೇಲು. ಅಲ್ಲಿ ಬರವಿದ್ದರೂ ಸುಖವಿತ್ತು. ಜಗಳಕ್ಕೆ ಯಾರೂ ಬರುತ್ತಿರಲಿಲ್ಲ. ಆದುದರಿಂದ ನನ್ನೂರೇ ಮೇಲು"** ಎಂದು ಊರಿಗೆ ಮರಳಿತು.[76] **"ಇದ್ದ ಕಡೆ ಇರಲಿಲ್ಲ, ಬಿದ್ದಗೋಡೆ ಹಾಕಲಿಲ್ಲ"**

74. **ಭರತ ಬಿ. ರಾವ್ ಪಂಚತಂತ್ರ,** ಪಂಡಿತ ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಚ.ತಂ,ಪು –250–252,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ, 44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560005
75. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ–78, ಪು–699(1993)ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
76. **ಭರತ ಬಿ ರಾವ್ ಪಂಚತಂತ್ರ,** ಪಂಡಿತ ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಚ.ತಂ,ಪು –252–253,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560005

ಎಂಬ ನಾಣ್ಣುಡಿಯಂತೆ.

ಮಂಗ ಮುಂದುವರಿಸಿ, ಮೊಸಳೆಗೆ ಹೇಳಿತು. **"ಇನ್ನೆಲ್ಲೋ ಹೊಸ ಮನೆಯನ್ನು. ಅರಸುವುದಕ್ಕಿಂತ ಇದ್ದ ಮನೆಯನ್ನು ರಕ್ಷಿಸಿಕೊಳ್ಳುವುದು ವಿಹಿತ, ಹೋಗು ನಿನ್ನ ವೈರಿ ಮಕರದೊಡನೆ ಹೋರಾಡು. ನಿನ್ನೆಲೆಗೆ ನೀನೇ ಅರಸನಾಗಿ ದೀರ್ಘಕಾಲ ಸುಖದಿಂದ ಬಾಳು"** ಎಂದಿತು ವಾನರ. ಸೂಕ್ತ ಸಲಹೆ ಸಿಕ್ಕಿತೆಂದು ಮಕರ ಅಲ್ಲಿಂದ ಹೊರಟುಹೋಯಿತು ಹೀಗೊಂದು ಉಕ್ತಿಯಿದೆ, ಬಹಳ ಯೋಗ್ಯವಾಗಿದೆ:-

अकृत्वा पौरुषं या श्रीः किं तथाऽपि सुभोग्यया ।

जरद्गवः समश्नाति दैवादुपगतं तृणम् ॥[77]

ಅಂದರೆ, **"ಪುರುಷ ಪ್ರಯತ್ನವಿಲ್ಲದೇ ಸಿಕ್ಕ ಸಂಪತ್ತಿನ ಭೋಗದಿಂದೇನು ಪ್ರಯೋಜನ? ಮುದಿ ಎತ್ತು ಕೂಡ ಭಗವಂತನು ಕರುಣಿಸಿದ ಹುಲ್ಲನ್ನು ತಿನ್ನುವುದಿಲ್ಲವೇ?"**

ಈ ರೀತಿಯಾಗಿ ನಾಲ್ಕನೆಯತಂತ್ರವಾದ - ಲಬ್ಧಪ್ರಣಾಶ - ದೊರೆತುದದರ ನಾಶ ಎಂಬುದರ ಸೂತ್ರ ಕಥೆಯ 11 ಉಪಕಥೆಗಳಲ್ಲಿ ಅತ್ಯಂತ ಮಹತ್ವಪೂರ್ಣವಾದ ರಾಜನೀತಿಯನ್ನು ಉತ್ತಮ ಬದುಕಿಗೆ ಬೇಕಾದ ಜಾಗೃತಿಯನ್ನು; ಉದಾಸೀನ, ದುಡುಕಿನ ಕಾರ್ಯದಿಂದ ಉಂಟಾಗುವ ಪರಿಣಾಮ; ಸಜ್ಜನರ ಸಲಹೆಯನ್ನು ಪಾಲಿಸುವುದರ ಮಹತ್ವವನ್ನು; ಇದ್ದದ್ದನ್ನು ಬಿಟ್ಟು ಮತ್ತೊಂದನ್ನು ಹಾರೈಸಿದರೆ ಅದರಿಂದಾಗುವ ಪರಿಣಾಮ; ವಾಚಾಳಿಗಳಿಗೆ ದುಡುಕಿನಿಂದ ಸೋಲು; ಹುಟ್ಟುಗುಣ ಸತ್ತರೂ ಹೋಗದು; ಸುಳ್ಳುಹೇಳಲೂ ಸಮಯ, ಸಂದರ್ಭದ ಆಯ್ಕೆ; ಸೇಡುತೀರಿಸಿಕೊಳ್ಳಲು ಎಂಥಹವರನ್ನು ಆಶ್ರಯಿಸಬೇಕು ಇತ್ಯಾದಿ ಉತ್ತಮ ಬದುಕಿಗೆ ಬೇಕಾದ ನೀತಿಬೋಧೆಗಳು ಬಹಳ ಯೋಜನಾಬದ್ಧವಾಗಿ, ಸರಳವಾಗಿ ವಿಷ್ಣುಶರ್ಮರು ಪಂಚತಂತ್ರದ ಮೂಲಕ ಶಿಕ್ಷಣ ಒದಗಿಸಿದ್ದಾರೆ. ಅತ್ಯಂತ ಪರಿಣಾಮಕಾರಿಯಾಗಿ, ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ಕಥಾಮಾಧ್ಯಮದ ಮೂಲಕ ಒಂದೆಡೆ ರಾಜನೀತಿ ಶಿಕ್ಷಣ ಮತ್ತೊಂದೆಡೆ ಬದುಕಿನ ನೀತಿ, ಇನ್ನೊಂದೆಡೆ ಸಾಮಾನ್ಯ ಜ್ಞಾನ, ವ್ಯಕ್ತಿತ್ವ ನಿರ್ಮಾಣ ಕೌಶಲ್ಯ ಎಲ್ಲವೂ ಒಂದೆಡೆ ಲಭ್ಯ. ಇದೇ ಪಂಚತಂತ್ರದ ವೈಶಿಷ್ಟ್ಯತೆ.

ಹೇಗೆ ಭಗವದ್ಗೀತೆಯಲ್ಲಿ ಕೃಷ್ಣ ಪರಮಾತ್ಮನು ಅರ್ಜುನನಿಗೆ ಒಳ್ಳೆಯ ಆತ್ಮಸ್ಥೈರ್ಯ ತುಂಬಿ, ಕರ್ತವ್ಯ ಹಾಗೂ ಜವಾಬ್ದಾರಿಯನ್ನು ಹುರಿದುಂಬಿಸಿ, ಜಾಗೃತಿಯನ್ನು ಮೂಡಿಸಿ, ಧೈರ್ಯದಿಂದ ಮುನ್ನುಗ್ಗಿ ಕಾರ್ಯಸಾಧನೆ ಮಾಡುವಂತೆ ಪ್ರೇರೇಪಿಸಿದ್ದಾನೆಯೋ, ಅದೇ ರೀತಿಯಲ್ಲಿ ವಿಷ್ಣುಶರ್ಮರು ರಾಜಕುಮಾರರನ್ನು

---

77. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ-80, ಪು -701,(1993).ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಪಂಚತಂತ್ರ ನೀತಿಕಥೆಗಳ ನಿರೂಪಣೆ ಮೂಲಕ ಹುರಿದುಂಬಿಸಿ ರಾಜನೀತಿ ನೈಪುಣ್ಯತೆಯನ್ನೂ, ಬದುಕಿನ ನೀತಿ ಶಿಕ್ಷಣವನ್ನೂ ಬಹಳ ಅಚ್ಚುಕಟ್ಟಾಗಿ ಒದಗಿಸಿದ್ದಾರೆ.

क्लैब्यं मा स्म गमः पार्थ नैतत्वय्युपपद्यते ।

क्षुद्रं हृदयदौर्बल्यं त्यक्त्वोत्तिष्ठ परन्तप ॥[78]

ಅಂದರೆ ಶ್ರೀ ಕೃಷ್ಣ ಹೇಳುತ್ತಾನೆ – ಹೇ ಪಾರ್ಥ! ಹೇಡಿಯಾಗಬೇಡ. ಇದು ನಿನಗೆ ತರವಲ್ಲ. ನಿನ್ನ ಹೃದಯದ ದೌರ್ಬಲ್ಯವನ್ನು ಕೊಡವಿ ಹಾಕಿಯುದ್ಧಕ್ಕೆ ಸಿದ್ಧನಾಗು, ಏಳು ಓ ವೀರನೇ! ಸಿದ್ಧನಾಗು.

ಅಂದರೆ ಕ್ಷುದ್ರವಾದ ಹೃದಯ ದೌರ್ಬಲ್ಯವನ್ನು ಕಿತ್ತೊಗೆದು ಮೇಲೆದ್ದು ನಿಲ್ಲು, ವೈರಿಗಳನ್ನು ಹಣಿಯುವವನೆ ! ಎಂದು ಉತ್ತೇಜಿಸುತ್ತಾನೆ. **"ಪರಂತಪ"** ಎಂಬ ಸಂಬೋಧನೆ ಅರ್ಜುನನ ಶೌರ್ಯವನ್ನು ಜಾಗೃತಗೊಳಿಸುವ ಶ್ರೀಕೃಷ್ಣನ ಹೂಟ ಯಶಸ್ಸು ಪಡೆಯುತ್ತದೆ. ಯಾವುದೇ ವ್ಯಕ್ತಿಯಲ್ಲಿ ಇರುವ ಅಧೈರ್ಯವನ್ನು ಹೋಗಲಾಡಿಸಿ, ಆಗುತ್ತದೋ ಇಲ್ಲವೋ ಎಂಬ ಹೊಯ್ದಾಟ ಅಥವಾ ಆತಂಕವನ್ನು ಹೋಗಲಾಡಿಸಿ, ಖಂಡಿತಾ ನೀನು ಪರೀಕ್ಷೆಯಲ್ಲಿ, ಸಂದರ್ಶನದಲ್ಲಿ ಗೆಲುವನ್ನು ಸಾಧಿಸುತ್ತೀಯ ಎಂದು ಅವನಲ್ಲಿಯ ಶಕ್ತಿಯನ್ನು ಅವಗತ ಮಾಡಿಕೊಟ್ಟು, ಆತ್ಮವಿಶ್ವಾಸವನ್ನು ಹೆಚ್ಚಿಸಿದರೆ ಆತ ಸಫಲನಾಗುತ್ತಾನೆ. ಕಾರ್ಯದಲ್ಲಿ ಯಶಸ್ಸು ಸಾಧಿಸುತ್ತಾನೆ.[79] ಹೀಗೆಯೇ ಶಿಷ್ಯರಲ್ಲಿ ಹುದುಗಿದ ಶಕ್ತಿಯನ್ನು ಗುರುಗಳು–ಶಿಕ್ಷಕರು ಹುರಿದುಂಬಿಸಿ ಆತ್ಮಸ್ಥೈರ್ಯ ತುಂಬುವ ಕೆಲಸ ಮಾಡಬೇಕಾಗಿದೆ. ಅದಕ್ಕೆ ಮೌಲ್ಯಾಧಾರಿತ ಶಿಕ್ಷಣ ಮಾತ್ರ ಮೂಲ ಆಶಯವನ್ನು ಪೂರೈಸಬಲ್ಲುದು. ಇದೇ ರೀತಿಯಲ್ಲಿ ಪಂಡಿತ ವಿಷ್ಣುಶರ್ಮರು ಪಂಚತಂತ್ರ ರೂಪಿಸಿ, ರಾಜಕುಮಾರರಿಗೆ ಒಳ್ಳೆಯ ಆತ್ಮಸ್ಥೈರ್ಯವನ್ನೂ, ಜೀವನದ ಪ್ರೀತಿಯನ್ನೂ, ಮಾತಾಪಿತೃಗಳ ಅಪೇಕ್ಷಣೀಯ ವಿಚಾರಧಾರೆಗೆ ಗೌರವವನ್ನೂ, ರಾಜನೀತಿಕೌಶಲ್ಯ ಬೆಳೆಸಿಕೊಳ್ಳಲು ಆಸಕ್ತಿಯನ್ನೂ ಪ್ರೇರೇಪಿಸಿ, ಸಾರ್ಥಕ ಬದುಕಿನ ಪಾಠವನ್ನು ಒದಗಿಸಿಕೊಟ್ಟಿರುತ್ತಾರೆ. ಇವರ ಬೋಧನಾ ಕ್ರಮ ಸರಳ, ಸ್ಫೂರ್ತಿದಾಯಕ ಹಾಗೂ ನೀತಿ ಶಾಸ್ತ್ರೋಕ್ತವಾಗಿದ್ದು, ಮಂದರಲ್ಲಿ ಮಂದನೂ ಕೂಡ ವಿಚಾರಗಳನ್ನು ಮನದಟ್ಟುಮಾಡಿಕೊಳ್ಳುವಂತೆ ಮನೋವೈಜ್ಞಾನಿಕ, ಶೈಕ್ಷಣಿಕ ಹಿನ್ನೆಲೆಯಲ್ಲಿ ಬೋಧಿಸಿದ್ದಾರೆ.



78. **ಭಗವದ್ಗೀತೆ,** ಅ–2, ಶ್ಲೋ–3

79. **ಶಾಲೆಗಳಲ್ಲಿ ಮೌಲ್ಯಾಧಾರಿತ ಶಿಕ್ಷಣ,** www.bangalorewaves.com

## ಅಧ್ಯಾಯ– ೮. ಶೈಕ್ಷಣಿಕ ಮಾರ್ಗದರ್ಶನ  ಮತ್ತು ಸಲಹೆ.

## (EDUCATIONAL GUIDANCE and COUNSELLING)

ಅಧ್ಯಾಯ ೮–1. ಮಾರ್ಗದರ್ಶನ – ಅರ್ಥ–ವ್ಯಾಖ್ಯೆ –

ವಿಧಗಳು– ಶೈಕ್ಷಣಿಕ – ವೃತ್ತಿ – ವೈಯಕ್ತಿಕ.

ಅಧ್ಯಾಯ ೮–೨. ಸಲಹೆ–ಸಮಾಲೋಚನೆ – ಅರ್ಥ–ವ್ಯಾಖ್ಯೆ–

ಅದರ ವಿಧಗಳು  ಮತ್ತು ಬಳಕೆ.

ಅಧ್ಯಾಯ ೮–೩. ಸಾಮಾನ್ಯ ಜ್ಞಾನದ ಕೊರತೆ – ಪರಿಣಾಮ –

ಪರೀಕ್ಷಿಸದೆ ಕೆಲಸಮಾಡುವುದು – ಪರಿಣಾಮ.

पञ्चतन्त्रस्य – पञ्चमं तन्त्रम् – अपरीक्षितकारकम्

ಕಥೆಗಳ ವಿಶ್ಲೇಷಣೆ.

# ಅಧ್ಯಾಯ-8

# ಮಾರ್ಗದರ್ಶನ ಮತ್ತು ಸಲಹೆ

(GUIDANCE and COUNSELLING)

## 8-1. -ಅರ್ಥ-ವ್ಯಾಖ್ಯೆ-ವಿಧಗಳು-ಶೈಕ್ಷಣಿಕ-ವೃತ್ತಿ-ವೈಯಕ್ತಿಕ

नृदेहमाद्यं सुलभं सुदुर्लभं प्लवं सुकल्पं गुरुकर्णधारम् ।

यदानुकूलेन नभस्वतेरितं पुमान् भवाब्धिं न तरेत् स आत्महा ॥[1]

ಮನುಷ್ಯದೇಹ ಹೊಂದುವುದು ಬಹಳ ಕಷ್ಟ.ಪೂರ್ವದ ಸುಕೃತವಿದ್ದರೆ ಮಾತ್ರ ಇದು ಲಭ್ಯವಾಗುತ್ತದೆ. ಅದೇ ಒಂದು ಒಳ್ಳೆಯ ದೋಣಿ. ಅದಕ್ಕೆ ಸಮರ್ಥ ಗುರುವೇ ಅಂಬಿಗ. ಅನುಕೂಲವಾದ ಗಾಳಿಯಿಂದ ಸೂಕ್ತ ಮಾರ್ಗದರ್ಶನದಲ್ಲಿ ಗಾಳಿಯಿಂದ ನಡೆಸಲ್ಪಡುತ್ತಿರುವಾಗ ಮನುಷ್ಯನು ಸಂಸಾರಸಾಗರವನ್ನು ದಾಟದೇ ಇದ್ದಲ್ಲಿ, ಅವನು ಸ್ವಯಂ ಕೊಲೆಮಾಡಿಕೊಂಡಂತೆ.

ಶಿಕ್ಷಣದ ಅಳಿವು-ಉಳಿವು ಉಪಾಧ್ಯಾಯರ ಮಾರ್ಗದರ್ಶನದ ಮೇಲೆ ಅವಲಂಬಿತವಾಗಿದೆ ಎಂದು ಕೆಲವು ಶೈಕ್ಷಣಿಕ ಮನೋವಿಜ್ಞಾನಿಗಳು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಮಾರ್ಗದರ್ಶನವನ್ನು ಶಿಕ್ಷಣದ ಅರ್ಥಶಾಸ್ತ್ರ ಎಂದು ಹೇಳಿರುತ್ತಾರೆ. ಮಾರ್ಗದರ್ಶನ ವ್ಯಕ್ತಿಗಳಲ್ಲಿ ಅಡಗಿರುವ ಸಾಮರ್ಥ್ಯಗಳನ್ನು ಗಣನೆಗೆ ತೆಗೆದುಕೊಂಡು ಅವುಗಳನ್ನು ಪ್ರೋತ್ಸಾಹಿಸುತ್ತದೆ. ಅರ್ಥಶಾಸ್ತ್ರವು ವ್ಯಕ್ತಿಯ ಸಂಪನ್ಮೂಲಗಳು ವ್ಯಕ್ತಿಯ ಸುಧಾರಣೆಗೆಂದು ಹೇಳುವಂತೆ ಮಾರ್ಗದರ್ಶನವೂ ಸಹ ವ್ಯಕ್ತಿಯಲ್ಲಿ ಅಡಗಿರುವ ಶಕ್ತಿ, ವ್ಯಕ್ತಿಯ ಹಿತ ಅಥವಾ ಸುಧಾರಣೆಗೆಂದು ಹೇಳುತ್ತದೆ. ಅನೇಕ ತಜ್ಞರು ಮಾರ್ಗದರ್ಶನದ ಬಗ್ಗೆ ವ್ಯಾಖ್ಯಾನಿಸುತ್ತಾ ಒಟ್ಟಾರೆ ಹೀಗೆ ಹೇಳಿರುತ್ತಾರೆ - "ಮಾರ್ಗದರ್ಶನ ವ್ಯಕ್ತಿಗೆ ತನ್ನ ಭವಿಷ್ಯದ ಹಿತಕ್ಕೆ ಕೊಡುವ ಸಹಾಯವೆಂದೂ, ತನ್ನ ಮತ್ತು ಸಮಾಜದ ಹಿತಕ್ಕೆ ಹೊಂದಿಕೊಂಡು,ವ್ಯಕ್ತಿಯು ತನ್ನ ಶಕ್ತಿಗಳನ್ನು ಕಂಡುಕೊಂಡು, ಉತ್ತಮ ರೀತಿಯಲ್ಲಿ ಉಪಯೋಗ ಪಡೆದುಕೊಂಡು ಸಂತೋಷದಿಂದ ಜೀವನ ನಡೆಸಿ ಜನ್ಮ ಸಾರ್ಥಕ ಪಡಿಸಿಕೊಳ್ಳುವಂತೆ ತಿಳಿಸುವ ವಿಧಾನವೇ ಮಾರ್ಗದರ್ಶನ ಎಂದು ಹೇಳಬಹುದು." ಮಾರ್ಗದರ್ಶನ ಎಂದರೆ ಬರೀ ಬೋಧನೆಯಲ್ಲ. ಇದು ಶೈಕ್ಷಣಿಕ ಕಾರ್ಯಕ್ರಮದ ಒಂದು ಅವಿಭಾಜ್ಯ ಅಂಗ. ವ್ಯಕ್ತಿ ತನ್ನ ಸಾಮರ್ಥ್ಯಕ್ಕನುಗುಣವಾದ ಜೀವನದ ಗುರಿಯನ್ನು ನಿರ್ಧರಿಸಿಕೊಂಡು, ಅದನ್ನು ಯಶಸ್ವಿಯಾಗಿ ಸೂಕ್ತ ಕಾರ್ಯವಿಧಾನಗಳೊಂದಿಗೆ ತಲುಪಲು

---

1. **ಸುಭಾಷಿತಮಂಜರೀ,** ಸಂಸಾರ-ಶ್ಲೋ-39,ಪು-23,ಭಾಗವತ, 11-20 17.ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು-18, (2001)

ನೀಡುವ ವ್ಯವಸ್ಥಿತವಾದ ಸಹಾಯವೇ ಮಾರ್ಗದರ್ಶನ.

अनिच्छंतोऽपि विनयं विद्याभ्यासेन बालकाः ।

भेषजेनेव नैरुज्यं प्रापणीयाः प्रयत्नतः ॥[2]

ಔಷಧವನ್ನು ಕೊಟ್ಟು ರೋಗವನ್ನು ಪರಿಹರಿಸುವಂತೆ, ಬಾಲಕರು ಇಚ್ಛಿಸದಿದ್ದರೂ ಅವರಿಗೆ ಪ್ರಯತ್ನಪೂರ್ವಕವಾಗಿ ವಿದ್ಯಾಭ್ಯಾಸವನ್ನು ಮಾಡಿಸಿ ನಯನೀತಿಗಳನ್ನು ಕಲಿಸಿಕೊಡಬೇಕು. ಅಂದರೆ ಅವರನ್ನು ಪ್ರೇರೇಪಿಸಿ ಸುಂದರ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಸೂಕ್ತ ಮಾರ್ಗದರ್ಶನ ಕೊಡಬೇಕು ಎಂದು ಈ ಸುಭಾಷಿತ ಹೇಳುತ್ತದೆ.

ಶಿಕ್ಷಣ ತಜ್ಞರು ಹಾಗೂ ಮನೋವಿಜ್ಞಾನಿಗಳು **"ಮಾರ್ಗದರ್ಶನ"**ಕ್ಕೆ ತಮ್ಮದೇ ಆದ ರೀತಿಯಲ್ಲಿ ಮತ್ತೆ ಕೆಲವು ವ್ಯಾಖ್ಯಾನಗಳನ್ನು ಒದಗಿಸಿದ್ದಾರೆ. ಇವುಗಳಲ್ಲಿ ಬಹಳ ವಿವರವಾದ ವ್ಯಾಖ್ಯೆಯೊಂದನ್ನು ಸುಪ್ರಸಿದ್ಧ ಮನೋವಿಜ್ಞಾನಿಗಳಾದ **CROW** ಮತ್ತು **CROW** ರವರು ನೀಡಿರುವುದನ್ನು ಗಮನಿಸಿದರೆ– **"ಮಾರ್ಗದರ್ಶನ"** ಎಂದರೆ ನಿರ್ದೇಶನವಲ್ಲ ಇದು ಒಬ್ಬರ ಅಭಿಪ್ರಾಯಗಳನ್ನು ಇನ್ನೊಬ್ಬರ ಮೇಲೆ ಬಲವಂತವಾಗಿ ಹೇರುವುದಲ್ಲ. ಇದು ಇನ್ನೊಬ್ಬ ವ್ಯಕ್ತಿಯ ಪರವಾಗಿ ನಿರ್ಧಾರ ಕೈಗೊಳ್ಳುವುದಲ್ಲ. ಇದು ಇನ್ನೊಬ್ಬರ ಜೀವನದ ಹೊರೆಯನ್ನು ಹೊರುವುದೂ ಅಲ್ಲ. ಬದಲಾಗಿ ತನ್ನ ಜೀವನವನ್ನು ತಾನೇ ನಿರ್ದೇಶಿಸಿಕೊಳ್ಳುವಂತೆ, ತನ್ನದೇ ಆದ ದೃಷ್ಟಿಕೋನ ಬೆಳೆಸಿಕೊಳ್ಳಲು, ತನ್ನ ನಿರ್ಧಾರಗಳನ್ನು ತಾನೇ ಕೈಗೊಳ್ಳುವಂತೆ, ತನ್ನ ಹೊರೆಯನ್ನು ತಾನೇ ಹೊರುವಂತೆ ಮಾಡಲು, ಯಾವುದೇ ವಯಸ್ಸಿನ ಒಬ್ಬ ವ್ಯಕ್ತಿಗೆ ಸಮರ್ಥ ಸಲಹೆ ನೀಡುವ ವ್ಯಕ್ತಿ ಒದಗಿಸುವ ಸಹಾಯವೇ ಮಾರ್ಗದರ್ಶನ."[3]

ಮಾರ್ಗದರ್ಶನವು ಒಬ್ಬ ವ್ಯಕ್ತಿಗೆ ಜೀವನದ ಗುರಿಯನ್ನು ರೂಪಿಸಿಕೊಳ್ಳಲು, ಹೊಂದಾಣಿಕೆ ಮಾಡಿಕೊಳ್ಳಲು, ಗುರಿಸಾಧನೆಯ ಮಾರ್ಗದಲ್ಲಿ ಎದುರಾಗುವ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಮತ್ತೊಬ್ಬ ವ್ಯಕ್ತಿ ನೀಡುವ ವೈಯುಕ್ತಿಕ ಸಹಾಯವಾಗಿದೆ ಎಂದು **JAMES JONES- an African-American Social Psychologist and Cultural diversity scholar** ರವರು ಸರಳವಾಗಿ ಅರ್ಥಪೂರ್ಣವಾಗಿ ಹೇಳಿದ್ದಾರೆ.

---

2. **ಸುಭಾಷಿತಮಂಜರೀ**–ಸಂಸಾರ–ಶ್ಲೋ–3,ಪು–14, ಹರಿಹರ ಸುಭಾಷಿತ,2–39.(2001) ಕ.ಸಾ.ಪ.ಚಾಮರಾಜಪೇಟೆ,ಬೆಂಗಳೂರು–18
3. **ವಾಮದೇವಪ್ಪ ಎಚ್.ವಿ,** ಶೈಕ್ಷಣಿಕ ಮನೋವಿಜ್ಞಾನ, ಅ–9, ಪು –344–345,2005.ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

ಮಾರ್ಗದರ್ಶನವೆಂದರೆ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ವೈಯಕ್ತಿಕ ಸಂತೋಷ ಮತ್ತು ಸಾಮಾಜಿಕ ಉಪಯುಕ್ತತೆಗಾಗಿ ತನ್ನ ಸ್ವಂತ ಪ್ರಯತ್ನಗಳ ಮೂಲಕ ತನ್ನ ಸಾಮರ್ಥ್ಯಗಳನ್ನು ಕಂಡುಕೊಳ್ಳಲು ಮತ್ತು ಅವುಗಳನ್ನು ಬೆಳೆಸಿಕೊಳ್ಳುವಂತೆ ಮಾಡಲು ಸಹಾಯ ಮಾಡುವ ಪ್ರಕ್ರಿಯೆಯಾಗಿದೆ.

ಸಾಮಾನ್ಯವಾಗಿ ಮಾರ್ಗದರ್ಶನ ಮತ್ತು ಸಲಹೆ ಎಂದೊಡನೆಯೇ ಇದು ಕೇವಲ ಮಾನಸಿಕ ಸಮಸ್ಯೆಗಳುಳ್ಳ, ಕಲಿಕೆಯಲ್ಲಿ ಹಿಂದುಳಿದಿರುವ, ದಿವ್ಯಾಂಗರಿಗೆ ಮಾತ್ರ ಅವಶ್ಯಕವಾಗಿರುವುದು ಎಂದು ಬಹಳ ಸಡಿಲವಾಗಿ ಹೇಳುವುದುಂಟು. ಇದು ಹೇಗೆಂದರೆ ನಿಮಾನ್ಸ್‌ನಲ್ಲಿ ಚಿಕಿತ್ಸೆ ಪಡೆದುಕೊಳ್ಳುವವರನ್ನೆಲ್ಲಾ ಒಂದು ರೀತಿಯಲ್ಲಿ ಅನುಮಾನಿಸಿದಂತೆ. ಇಂಥಹ ಯೋಚನೆ ಸರಿಯಲ್ಲ. ಒಂದಲ್ಲೊಂದು ಸಂದರ್ಭದಲ್ಲಿ ಎಲ್ಲ ಕ್ಷೇತ್ರಗಳಲ್ಲೂ, ಎಲ್ಲ ವಿಚಾರಗಳಿಗೂ ಸೂಕ್ತ ಮಾರ್ಗದರ್ಶನ ಮತ್ತು ಸಲಹೆ ಬೇಕೇಬೇಕು. ಪ್ರಸ್ತುತ ಇಲ್ಲಿ ಶಿಕ್ಷಣ ಮತ್ತು ವ್ಯಕ್ತಿತ್ವ ಬೆಳವಣಿಗೆ ವಿಚಾರದಲ್ಲಿ ವಿಶ್ಲೇಷಣೆ ಮಾಡುತ್ತಿರುವ ಸಂದರ್ಭದಲ್ಲಿ– **"Guidance and counselling is a process which helps the students to know their skills, interests, personality that will help them in further career selection. Guidance is a process in which a person is able to know his ability, interest and capacity that will help in the encounter of problem s faced by him."**[4]

ಇನ್ನು ಮಾರ್ಗದರ್ಶನದಲ್ಲಿ ಪ್ರಮುಖವಾಗಿ ಮೂರು ವಿಧಗಳಿವೆ. ಅವುಗಳೇ:–[5]

1. **ಶೈಕ್ಷಣಿಕ ಮಾರ್ಗದರ್ಶನ** : ಶೈಕ್ಷಣಿಕ ಮಾರ್ಗದರ್ಶನವು ಒಂದು ಪ್ರಕ್ರಿಯೆ. ಇದು ಒಬ್ಬ ವ್ಯಕ್ತಿ ತನಗೆ ತಾನೇ ಉತ್ತಮ ವಾತಾವರಣವನ್ನು ಕಲ್ಪಿಸಿಕೊಳ್ಳಲು ಸಹಾಯ ಮಾಡುತ್ತದೆ. ವ್ಯಕ್ತಿಗೆ ತನ್ನ ಶೈಕ್ಷಣಿಕ ಕಾರ್ಯಕ್ರಮವನ್ನು ಬುದ್ಧಿವಂತಿಕೆಯಿಂದ ಯೋಜಿಸಲು ಪ್ರೇರೇಪಿಸುತ್ತದೆ. ಆ ಕಾರ್ಯವನ್ನು ತನಗೆ ಮತ್ತು ಸಮಾಜಕ್ಕೆ ಸೂಕ್ತವಾಗುವಂತೆ ಯಶಸ್ವಿಯಾಗಿ ಕಾರ್ಯರೂಪಕ್ಕೆ ತರಲು ಸಹಾಯಕವಾಗುತ್ತದೆ ಎಂದು **RICHARD E.MAYER- (a distinguished professor of psychology at the University of California)** ಎಂಬ ಶಿಕ್ಷಣ ತಜ್ಞರು ಬಹಳ ಅಚ್ಚುಕಟ್ಟಾಗಿ ವ್ಯಾಖ್ಯಾನಿಸಿದ್ದಾರೆ.

2. **ವೃತ್ತಿ ಮಾರ್ಗದರ್ಶನ** : ವೃತ್ತಿಮಾರ್ಗದರ್ಶನ ಎಂದರೆ ವ್ಯಕ್ತಿಯು ಒಂದು ಕಾರ್ಯಕ್ಷೇತ್ರದಲ್ಲಿ ತನ್ನ ಪಾತ್ರವನ್ನು ಮತ್ತು ತನ್ನ ಬಗ್ಗೆ ಒಂದು ಸಮಗ್ರವಾದ ಮತ್ತು ಸಮರ್ಪಕವಾದ ವ್ಯಕ್ತಿ ಚಿತ್ರಣವನ್ನು ಒಪ್ಪಿಕೊಳ್ಳಲು

---

4. **Neeru Sood,** Guidance and counselling in Education, D.D.E.Tripura University, (2016) Vikas Publishing House pvt.Ltd.E-28, Sector-8, Noida-201301
5. **ವಾಮದೇವಪ್ಪ ಎಚ್.ವಿ,** ಶೈಕ್ಷಣಿಕ ಮನೋವಿಜ್ಞಾನ, ಅ – 9, ಪು – 348–355,(2005). ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

ಮತ್ತು ಅದರಲ್ಲಿ ಅಭಿವೃದ್ಧಿ ಕಾಣಲು ಮತ್ತು ಸಹಜವಾಗಿ ಈ ಕಲ್ಪನೆಯನ್ನು ಪರೀಕ್ಷಿಸಿ, ಅವನಿಗೆ ಸಂತೃಪ್ತಿ ಮತ್ತು ಸಮಾಜಕ್ಕೆ ಉಪಯುಕ್ತವಾಗಿ ಇರುವಂತೆ ಸಹಾಯ ನೀಡುವ ಪ್ರಕ್ರಿಯೆಯಾಗಿರುತ್ತದೆ ಎಂದು **DONALD EDWIN SUPER-(American Psychologist was a member of the National Career Development Association.)** ರವರು ಅಭಿಪ್ರಾಯಿಸಿದ್ದಾರೆ.

೩. **ವೈಯುಕ್ತಿಕ ಮಾರ್ಗದರ್ಶನ** : ವಿದ್ಯಾರ್ಥಿಗಳು ಶೈಕ್ಷಣಿಕ ಮತ್ತು ವೃತ್ತಿಸಮಸ್ಯೆಗಳಲ್ಲದೆ ಇನ್ನೂ ಹಲವಾರು ಇತರೆ ಸಮಸ್ಯೆಗಳನ್ನು ಎದುರಿಸುತ್ತಿರುತ್ತಾರೆ. ಅದು ತಮ್ಮ ಪೋಷಕರು ಹಾಗೂ ಕುಟುಂಬದ ಬಗ್ಗೆ, ಶಿಕ್ಷಕರ ಬಗ್ಗೆ, ತಮ್ಮಲ್ಲಿ ಅತೃಪ್ತಿ ಅಥವಾ ನಿರಾಸೆಯನ್ನುಂಟುಮಾಡುವಂತಹ ಅನುಭವಗಳ ನೆನಪು, ಅಭದ್ರತೆಯ ವಾತಾವರಣ, ಪೋಷಕರ ನಿರೀಕ್ಷೆಗಳಿಗೆ ಅನುಗುಣವಾಗಿ ಬಾಳಲು ಸಾಧ್ಯವಾಗದಿರುವುದು, ಒಡಹುಟ್ಟಿದವರ ಅಸೂಯೆ, ಹಿರಿಯರ ಒತ್ತಡ, ಪ್ರೀತಿ ವಿಶ್ವಾಸದ ಕೊರತೆ ಇಂಥಹ ಹಲವಾರು ಸಮಸ್ಯೆಗಳು ಮಕ್ಕಳ ಮಾನಸಿಕ ಸಮತೋಲನವನ್ನು ಹಾಳುಮಾಡಿ ಬಿಡುವುದು. ಇದರಿಂದ ಅವರ ಶೈಕ್ಷಣಿಕ ಸಾಮರ್ಥ್ಯವೂ ಕಡಿಮೆಯಾಗುವುದು. ಸ್ವೇಚ್ಛಾಪ್ರವೃತ್ತಿ ಬೆಳೆಯುವುದು. ಕೀಳರಿಮೆ, ಉದ್ಧಟತನ, ಸಹವಾಸ ದೋಷ ಇಂತಹ ಅನೇಕ ಸಮಸ್ಯೆಗಳು ಎದುರಾಗಬಹುದು. ಅಮರಶಕ್ತಿ ರಾಜನ ಪುತ್ರರಿಗೆ ಇದೇ ಸಮಸ್ಯೆ ಮತ್ತು ಇದೇ ಪರಿಸ್ಥಿತಿಯನ್ನು ನಾವು ಗಮನಿಸಬಹುದು.

गीर्भिर्गुरूणां परुषाक्षराभिः तिरस्कृता यान्ति नरा महत्वं ।

अलब्धशाणोत्कषणा नराणां न जातु मौलौ मणयो वसन्ति ॥[6]

ಬಹಳ ಶಿಷ್ಟಾಚಾರದಿಂದ ಕೂಡಿದ ಗುರುಗಳು ಸಿಗಬೇಕು. ಗುರುಗಳ ನಿಷ್ಠುರ ನುಡಿಗಳಿಂದ ಬಯ್ಯಲ್ಪಟ್ಟ ಜನರು ಮಹತ್ವವನ್ನೇ ಪಡೆಯುತ್ತಾರೆ. ಸಾಣೆಯಲ್ಲಿ ತೀಡಲ್ಪಡದ ರತ್ನಗಳು ಜನರ ಶಿರಸ್ಸಿನಲ್ಲಿ ಎಂದಿಗೂ ನೆಲೆಸಲಾರವು. ಇವುಗಳನ್ನು ಧೈರ್ಯ ಮತ್ತು ಆತ್ಮವಿಶ್ವಾಸದಿಂದ ಎದುರಿಸಬೇಕಾದರೆ, ಅದಕ್ಕೆ ಸೂಕ್ತ ಮಾರ್ಗದರ್ಶನ ನೀಡುವ ಸಮರ್ಥ ಗುರುಗಳು ಬೇಕು. ರಾಜಕುಮಾರರ ಅದೃಷ್ಟವೋ ಅಥವಾ ಅಮರಶಕ್ತಿ ರಾಜನ ಅದೃಷ್ಟವೋ, ಸಕಲಶಾಸ್ತ್ರ ಪಾರಂಗತರೂ, ವಿದ್ಯಾರ್ಥಿಗಳು ಮೆಚ್ಚಿದ ಪ್ರತಿಭಾನ್ವಿತ ಗುರುಗಳೂ ಆದ ವಿಷ್ಣುಶರ್ಮರು ದೊರಕಿಬಿಟ್ಟರು.

ವೈಯಕ್ತಿಕ ಮಾರ್ಗದರ್ಶನದ ಉದ್ದೇಶ ವ್ಯಕ್ತಿಯನ್ನು ಸಮಾಜದಲ್ಲಿ ಉತ್ತಮ ಹೊಂದಾಣಿಕೆಯಿಂದ

---

6. **ಸುಭಾಷಿತ ಮಂಜರೀ,** ಭಕ್ತಿ-ಶ್ಲೋ-21, ಪು-344,(ರಸ ಗಂಗಾಧರ).(2001) ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು-18

ಬಾಳಲು ಅಗತ್ಯವಾದ ಗುಣಗಳನ್ನು ಬೆಳೆಸಿಕೊಳ್ಳಲು ನೆರವು ನೀಡುವುದೇ ಆಗಿರುತ್ತದೆ. ವ್ಯಕ್ತಿಗೆ ತನ್ನ ವೈಯಕ್ತಿಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಸಹಾಯ ಮಾಡುವುದಕ್ಕೆ ವೈಯುಕ್ತಿಕ ಮಾರ್ಗದರ್ಶನ ಎಂದು ಹೇಳಬಹುದು. ಈ ಒಂದು ವೈಯಕ್ತಿಕ ಮಾರ್ಗದರ್ಶನವನ್ನು ಅತ್ಯಂತ ವ್ಯವಸ್ಥಿತವಾಗಿ ಪಂಚತಂತ್ರದ ಮೂಲಕ ವಿಷ್ಣುಶರ್ಮರು ರಾಜಕುಮಾರರಿಗೆ ಅಪೇಕ್ಷಿತವಾದ ರಾಜನೀತಿ ಶಿಕ್ಷಣವನ್ನೂ, ಬದುಕಿನ ನೀತಿ ಶಿಕ್ಷಣವನ್ನೂ ಹಾಗೂ ಸಾಮಾನ್ಯ ಜ್ಞಾನದಿಂದ ಕೂಡಿದ ವಿಶೇಷ ಜಾಗೃತಿಯನ್ನೂ ಮೂಡಿಸುವ ಪರಿಣಾಮಕಾರಿ ಮಾರ್ಗದರ್ಶನವನ್ನು ಕೇವಲ ಆರು ತಿಂಗಳುಗಳಲ್ಲೇ ನೀಡಿರುವುದು ಒಂದು ವಿಶಿಷ್ಟ ಸಾಧನೆಯಾಗಿದೆ. ರಾಜಕುಮಾರರಿಗೆ ಪಂಚತಂತ್ರ ಕಥಾಗುಚ್ಛಗಳಲ್ಲಿ ಒಂದು ವಿಚಾರಗೋಷ್ಟಿಯಂತೆ, ವಿಚಾರಗಳನ್ನು ಮನದಟ್ಟು ಮಾಡುತ್ತಾ, ಸಾಕಷ್ಟು ಚಿಂತನ–ಮಂಥನಗಳೊಂದಿಗೆ ಅವರ ಆಸಕ್ತಿಯನ್ನು ಪ್ರಚೋದಿಸಿ, ಶಿಕ್ಷಣದ ಜೊತೆಗೆ ರಾಜನೀತಿಕೌಶಲ್ಯವನ್ನು ಸ್ವಯಂ ಪ್ರೇರಿತರಾಗಿ ಬೆಳೆಸಿಕೊಳ್ಳಲು, ಉತ್ತಮ ಬದುಕಿನ ರೀತಿನೀತಿಗಳನ್ನು ಕಲಿತುಕೊಳ್ಳಲು ವಿಷ್ಣುಶರ್ಮರು ಉತ್ತಮ ಸನ್ನಿವೇಶಗಳನ್ನು ಒದಗಿಸಿ ಪ್ರೋತ್ಸಾಹಿಸಿ, ಒಳ್ಳೆಯ ಮಾರ್ಗದರ್ಶನ ನೀಡಿದ್ದಾರೆ. ಒಂದು ಸುಭಾಷಿತ ವಿದ್ಯೆ–ಶಿಕ್ಷಣದ ಮಹತ್ವವನ್ನು ಕುರಿತು ಹೀಗೆ ಸೂಚಿಸುತ್ತದೆ :–

सुन्दरोऽपि सुशीलोऽपि कुलीनोऽपि महाधनः ।

शोभते न विना विद्यां विद्या सर्वस्य भूषणम् ॥[7]

ಸುಂದರವಾದರೂ, ಒಳ್ಳೆಯ ನಡತೆಯವನಾದರೂ, ಸದ್ವಂಶದಲ್ಲಿ ಹುಟ್ಟಿದವನಾದರೂ ವಿದ್ಯೆ ಇಲ್ಲದೆ ಮನುಷ್ಯ ಶೋಭಿಸುವುದಿಲ್ಲ. ಎಲ್ಲಕ್ಕೂ ವಿದ್ಯೆಯೇ ಭೂಷಣ **"Thus, Guidance and Counselling have come to play a significant role in the field of education. The need of guidance and counselling are essential at educational and vocational levels for students so that they can choose the right courses and carriers. It can be stated in simple terms to assist and help individuals adjust to their personal, emotional, educational and occupational environment. The process of counselling and guidance helps an individual find solution to a problem and also helps in the overall development of an individual."**[8]

7. **ಸುಭಾಷಿತಮಂಜರೀ,** ಸಾಮಾನ್ಯ ನೀತಿ–ಶ್ಲೋ–596, ಪು–512, (2001) ಸುಭಾಷಿತಭಾಂಡಾಗಾರಂ. ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18

8. **Neeru Sood,** Guidance and counselling in Education,D.D.E.Tripura University, (2016)Vikas Publishing House pvt.Ltd.E-28, Sector-8, Noida-201301

## ೮-೨. ಸಲಹೆ-ಸಮಾಲೋಚನೆ-COUNSELLING

### ಅರ್ಥ - ವ್ಯಾಖ್ಯೆ - ಅದರ ವಿಧಗಳು ಮತ್ತು ಬಳಕೆ

ಕೆಲವೊಮ್ಮೆ ನಮ್ಮ ಅಂತರಾತ್ಮದಿಂದಲೋ, ಇತರ ವ್ಯಕ್ತಿ ಅಥವಾ ವಸ್ತುಗಳಿಂದಲೋ ಧ್ವನಿತವಾಗುವ ಭಾವಗಳು ನಮ್ಮ ಆಲೋಚನೆ ಮತ್ತು ವರ್ತನೆಗಳನ್ನು ರೂಪಿಸುತ್ತೇವೆ. ತಾರ್ಕಿಕವಲ್ಲದಿದ್ದರೂ, ಸಕಾರಣವಲ್ಲದಿದ್ದರೂ ಹಾದು ಬರುವ ಅಂಥ ಭಾವ ಪ್ರವಾಹವನ್ನು ನಾವು ಎರಡನೇ ಮಾತಿಲ್ಲದೆ ಒಪ್ಪಿಬಿಡುತ್ತೇವೆ. ನಮ್ಮದೇ ಎಂದು ಭಾವಿಸುತ್ತೇವೆ. ಇದನ್ನೇ ಸಲಹೆ ಅಥವಾ ಭಾವಸೂಚನೆ ಎನ್ನಬಹುದು. ಬಲವಂತದ ಒಪ್ಪಿಗೆ ಸಲಹೆಯಲ್ಲ. ಸಲಹೆ ಪಡೆಯುವವರಲ್ಲಿ ಶರಣುಭಾವವೂ ಕೊಡುವವರಲ್ಲಿ ಸಹಾನುಭೂತಿಯೂ ಇದ್ದರೆ, ಸಲಹೆ ಫಲಕಾರಿಯಾಗುತ್ತದೆ.[9] ಇನ್ನೂ ಸರಳವಾಗಿ ಸಲಹೆಯನ್ನು ಅರ್ಥೈಸಿದಾಗ "ಸಲಹೆ ಎನ್ನುವುದು ಎರಡು ವ್ಯಕ್ತಿಗಳ ನಡುವೆ ಅಂದರೆ ಒಬ್ಬ ಸಮಸ್ಯೆ ಹೊಂದಿರುವ ವ್ಯಕ್ತಿ ಮತ್ತು ಇನ್ನೊಬ್ಬ ತರಬೇತಿ ಹಾಗೂ ಅನುಭವ ಹೊಂದಿರುವ ವೃತ್ತಿಪರ ವ್ಯಕ್ತಿ. ಈ ಇಬ್ಬರ ನಡುವೆ ಏರ್ಪಡುವ ಸಂಬಂಧವೇ ಪ್ರತಿಕ್ರಿಯೆಯಾಗಿರುತ್ತದೆ. ಅಂದರೆ, ಇಲ್ಲಿ ಸಲಹೆ ನೀಡುವ ಪರಿಣಿತ ವ್ಯಕ್ತಿ, ವಿದ್ಯಾರ್ಥಿಯು ತನ್ನ ಸಮಸ್ಯೆಗಳಿಗೆ ತಾನೇ ಪರಿಹಾರಗಳನ್ನು ಕಂಡುಕೊಳ್ಳುವಂತೆ ಉತ್ತಮ ಸಲಹೆಯ ಮೂಲಕ ಪ್ರೇರೇಪಿಸುತ್ತಾನೆ ಹಾಗೂ ಜಾಗೃತಿಯನ್ನು ಮೂಡಿಸುತ್ತಾನೆ. ಸಲಹೆ ನೀಡುವ ವ್ಯಕ್ತಿ ಹಾಗೂ ಸಲಹೆ ಪಡೆಯುವ ವ್ಯಕ್ತಿಗಳಲ್ಲಿ ಪರಸ್ಪರ ಗೌರವ, ನಂಬಿಕೆ ವಿಶ್ವಾಸ, ಸ್ನೇಹ ಮತ್ತು ಸಹಕಾರ ಮನೋಭಾವನೆ ಇರಬೇಕಾಗುತ್ತದೆ. ಇದೆಲ್ಲ ಲಕ್ಷಣಗಳನ್ನೂ ವಿಷ್ಣುಶರ್ಮರು-ಗುರುಗಳು ಮತ್ತು ರಾಜಪುತ್ರರು-ಶಿಷ್ಯರು ಇವರಲ್ಲಿ ಕಾಣಬಹುದು.

ವಿವಿಧ ಶಿಕ್ಷಣ ತಜ್ಞರು ಮತ್ತು ಮನೋವಿಜ್ಞಾನಿಗಳು "ಸಲಹೆ"ಗೆ ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಾನ ನೀಡಿರುತ್ತಾರೆ. ಕೆಲವು ಮುಖ್ಯವಾದವುಗಳೆಂದರೆ:-[10]

**1. According to GILBERT C. WREN (1962) "Counselling is a dynamic and purposeful relationship between two people who approach a mutually defined problem with mutual consideration for each other to the end that the younger or less mature, or more troubled of the two is aided to a self determined resolution of his problem.**

---

೯. **ವೀರಪ್ಪ ಎನ್. ಎಸ್.,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-7-ಪು-112, (1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

10. **Neeru Sood,** Guidance and counselling in Education, D.D.E.Tripura University, (2016) Vikas Publishing House pvt.Ltd.E-28, Sector-8,Noida-201301

**2. According to ARBUCKLE,"Counselling is helping a person to come to see who he really is, what he had and does not have, what he can do easily,what he can do with difficulty and what he can not do at all. It is a close sharing of a human relationship with one who has for him a high regard; one who can offer him unconditional acceptance, but one who has no guarantees, no answers."**

**3. According to authors(Fundamentals of Counselling) SHERTZER and STONE -"Counselling is a process which facilitates meaningful understanding of self and environment and result in the establishment and or clarification of goals and values for future behaviour."**

**4. EDWIN C. LEWIS, the author of" The Psychology of Counselling, defines "Counselling is a process by which a troubled person (client) is helped to tell and behave in a more personally satisfying manner through interaction with an uninvolved person (Counsellor) who provides information and reaction which stimulate the client to develop behavior which enable him to deal more effectively with himself and his environment."[11]**

ಹೀಗೆ ಮೇಲೆ ತಿಳಿಸಿರುವ ಎಲ್ಲಾ ವ್ಯಾಖ್ಯಾನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ "ಸಲಹೆ" ಎಂಬುದು–ವಿಚಾರವನ್ನು ತಿಳಿಸುವ, ಬುದ್ಧಿಹೇಳುವ, ಸಮಾಲೋಚಿಸುವ ಒಂದು ಪ್ರಕ್ರಿಯೆಯಾಗಿರುತ್ತದೆ. ಸಲಹೆ ಅಥವಾ ಸಮಾಲೋಚನೆಯು ಒಬ್ಬ ವ್ಯಕ್ತಿಯ ತಾನೇ ಅರ್ಥಮಾಡಿಕೊಂಡು, ತಾನೇ ಒಪ್ಪಿಕೊಂಡು ಒಂದು ಒಳ್ಳೆಯ ವರ್ತನೆಯನ್ನು ಹೊಂದಿ ಉತ್ತಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವಂತೆ ಪ್ರೇರೇಪಿಸುತ್ತದೆ.

**R.L.MILLER (Prof.& Chair-Texas. A & M University, KingsVille) and J.C.DUNSMORE - Prof. of Psychological Health & Learning Sciences University, Houston.** ಇವರ ಪ್ರಕಾರ ವಿದ್ಯಾರ್ಥಿ ಸಲಹೆಯ ಪ್ರಮುಖ ಅಂಶವೆಂದರೆ, ವಿದ್ಯಾರ್ಥಿ

---

11. **Guidence and counselling Slide share - https://www.slideshare.net.**

ತನಗೆ ತಾನೇ ಸಹಾಯ ಮಾಡಿಕೊಳ್ಳುವಂತೆ ಅವನಿಗೆ ಸಹಾಯ ಮಾಡುವುದಾಗಿದೆ.

**The characteristics of Counselling can be summarized as follows:[12]**

**1. Counselling is a mutual relationship between two people.**

**2. It involves discussion.**

**3. Counselling is a face to face relationship.**

**4. It has a professional aspect to it.**

**Important Areas of Counselling:**

**1. EDUCATION "Students during their school and college years may face several problems related to education, learning and teaching. Such problems are addressed by Educational Counsellors. who are experts and experienced in this specific area"**

**2. PERSONAL:-Many people face several problems in their life which bring about changes in their attitude and are often considered a hindrance in leading a normal life. Personal counselling looks into the personal problems of an individual and enables an individual to overcome this problem.**

**3. SOCIAL: Social problems may be faced by individuals wherein they are unable to maintain social relationships and fail to adjust to the society and its ways and norms. Social counselling is provided to such people so that they can develop the skills of social acceptance, tolerance towards others and are able to lead a life in tandem with the society.**

**4. VOCATIONAL: Most people face problems in deciding about the right career option and are unable to adjust to their work area, the people around**

12. Principales of Guidance and counselling academia - edu. - https://www.academia.edu

**and also the work environment. Such people are unable to work productively. Vocational counselling is made available to such people so that they can make the right career choices and are able to adjust to their work environment so that they are able to work productively.**

ಸಲಹೆ ಅಥವಾ ಸಮಾಲೋಚನೆಯು ಕೆಲವು ವಿಧಗಳನ್ನು ಹೊಂದಿದೆ-[13]

1. **ನಿರ್ದೇಶಿತ ಸಲಹೆ (Directive Counselling)**

ಈ ವಿಧಾನದ ಪ್ರತಿಪಾದಕರು **E.G.WILLIAMSON-(served as a president of NASPA and APGA-a teacher, counsellor, scholarly researcher and an administrator.)**

ನಿರ್ದೇಶಿತ ಸಲಹೆಯಲ್ಲಿ-ಸಲಹೆಗಾರನೇ ಕೇಂದ್ರ ಬಿಂದುವಾಗಿರುತ್ತಾನೆ. ಇವನು ಸಲಹೆ ಪಡೆಯುವ ವ್ಯಕ್ತಿಗೆ ಅಥವಾ ವಿದ್ಯಾರ್ಥಿಗೆ ತನ್ನ ಸಮಸ್ಯೆಗಳಿಗೆ ಪರಿಹಾರ ಕಾಣಲು ಏನೆಲ್ಲ ಅವಶ್ಯಕ ಕ್ರಮಗಳನ್ನು ಕೈಗೊಳ್ಳಬೇಕೆಂಬುದನ್ನು ಕುರಿತು ನಿರ್ದೇಶನ ಮತ್ತು ಸಲಹೆ ನೀಡುತ್ತಾನೆ. ಸಲಹೆಗಾರನು ವೃತ್ತಿಪರನಾಗಿದ್ದು ಅನುಭವ ಹಾಗೂ ಒಳ್ಳೆಯ ವಿಷಯಜ್ಞಾನ ಹೊಂದಿದವನಾಗಿರಬೇಕು. ಆಗ ಮಾತ್ರ ಇವನು ಸಲಹೆ ಪಡೆಯುವವನ ಸಮಸ್ಯೆಯನ್ನು ಗುರುತಿಸಿ, ಅರ್ಥೈಸಿ, ವಿವರಿಸಿ, ಆಲೋಚನೆಯನ್ನು ಸರಿಯಾಗಿ ನಿರ್ದೇಶಿಸಿ ಮನವೊಲಿಸಿ ಸೂಕ್ತ ಪರಿಹಾರವನ್ನು ಒದಗಿಸಬಲ್ಲನು.

2. **ಅನಿರ್ದೇಶಿತ ಸಲಹೆ (Non-directive Counselling)**

ಇದರ ಪ್ರತಿಪಾದಕರು **CARL ROGERS,an American Psychologist.** ಈ ಮಾದರಿಯ ಸಲಹೆಯಲ್ಲಿ ಸಲಹೆ ಪಡೆಯುವವನೇ ಕೇಂದ್ರ ಬಿಂದುವಾಗಿರುತ್ತಾನೆ. ಇವನು ಸಲಹಾ ಪ್ರಕ್ರಿಯೆಯಲ್ಲಿ ಕ್ರಿಯಾತ್ಮಕವಾಗಿ ಪಾಲ್ಗೊಳ್ಳುತ್ತಾನೆ. ಸಲಹೆಗಾರನ ಸಹಾಯದೊಂದಿಗೆ ತನ್ನ ಸಮಸ್ಯೆಯ ಒಳನೋಟವನ್ನು ಪಡೆಯುತ್ತಾನೆ. ಯಾವ ಕ್ರಮ ಕೈಗೊಳ್ಳಬೇಕೆಂದು ತಾನೇ ಸೂಕ್ತ ನಿರ್ಧಾರ ತೆಗೆದುಕೊಳ್ಳುವನು. ಈ ಸಲಹೆಯಲ್ಲಿ ಸ್ವಸಹಾಯ, ಸ್ವಯಂ ಅರಿವು ಮತ್ತು ಸ್ವಯಂ ಕ್ರಿಯೆಯನ್ನು ಪ್ರೇರೇಪಿಸಿ ಪ್ರೋತ್ಸಾಹಿಸಲಾಗುತ್ತದೆ.

---

13. **ವಾಮದೇವಪ್ಪ ಎಚ್.ವಿ,** ಶೈಕ್ಷಣಿಕ ಮನೋವಿಜ್ಞಾನ, ಅ - 9, ಪು - 361-364, 2005. ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005

### ೩. ಸಮ್ಮಿಶ್ರ ಸಲಹೆ (Electic Counselling)

ಈ ಮಾದರಿಯ ಪ್ರತಿಪಾದಕರು **F. C. THORNE - Author, Editor, Honoree)** ಇದರಲ್ಲಿ ಮೇಲಿನ ಎರಡೂ ಮಾದರಿಗಳಲ್ಲಿನ ಉತ್ತಮ ಅಂಶಗಳನ್ನು ಆರಿಸಿಕೊಂಡು ಸಲಹೆಯನ್ನು ಪರಿಣಾಮಕಾರಿಯಾಗಿಸುವುದೇ ಸಮ್ಮಿಶ್ರ ಸಲಹೆಯ ಮುಖ್ಯ ಉದ್ದೇಶ. ಈ ವಿಧಾನದಲ್ಲಿ ಸಲಹೆಗಾರ ಮೊದಲು ಸಲಹೆ ಪಡೆಯುವವನೊಂದಿಗೆ ಉತ್ತಮ ಬಾಂಧವ್ಯ ಬೆಳೆಸಿಕೊಂಡು, ನಂತರ ಅವನಿಂದ ಸಮಸ್ಯೆ ಬಗ್ಗೆ ಪೂರ್ಣ ಮಾಹಿತಿ ಪಡೆದುಕೊಂಡು, ಅದನ್ನು ಚೆನ್ನಾಗಿ ವಿಶ್ಲೇಷಿಸಿ ಸಮಸ್ಯೆಗೆ ಕಾರಣಗಳನ್ನು ಗುರುತು ಮಾಡಿಕೊಳ್ಳುತ್ತಾನೆ. ಸಲಹೆ ಪಡೆಯುವವನಿಗೆ ಅವಶ್ಯಕವಾದ ಶೈಕ್ಷಣಿಕ, ಔದ್ಯೋಗಿಕ ಮಾಹಿತಿಯನ್ನು ಒದಗಿಸಲಾಗುವುದು. ಇದರ ಆಧಾರದ ಮೇಲೆ ಸನ್ನಿವೇಶವನ್ನು ಗ್ರಹಿಸಿ ತನ್ನ ಮನೋಧೋರಣೆಗಳನ್ನು ಸರಿಪಡಿಸಿಕೊಳ್ಳುತ್ತಾನೆ. ನಂತರ ಸೂಕ್ತ ತಂತ್ರವನ್ನು ಬಳಸಿಕೊಂಡು ಸೂಕ್ತ ನಿರ್ಧಾರ ಕೈಗೊಂಡು ಸಮಸ್ಯೆಯನ್ನು ಪರಿಹರಿಸಿಕೊಳ್ಳುತ್ತಾನೆ.

ಪ್ರಸ್ತುತ ಪ್ರಬಂಧದಲ್ಲಿ “ಮಾರ್ಗದರ್ಶನ ಹಾಗೂ ಸಮಾಲೋಚನೆ ಅಥವಾ ಸಲಹೆ” ಪರಿಕಲ್ಪನೆಯಲ್ಲಿ “ಶೈಕ್ಷಣಿಕ ಮಾರ್ಗದರ್ಶನ ಹಾಗೂ ಸಲಹೆ” **(GUIDANCE and COUNSELLING IN EDUCATION)** ಭಾಗವನ್ನು ಮಾತ್ರ ಪರಿಗಣಿಸಲಾಗಿದೆ. **“Students during their school and college years may face several problems related to education, learning and teaching.Such problems are addressed by Educational Counsellors.who are experts and experienced in this specific area”**[14] ವಿದ್ಯಾರ್ಥಿಯ ಸರ್ವತೋಮುಖ ಬೆಳವಣಿಗೆ ಮತ್ತು ವಿಕಾಸ ಕಾರ್ಯಕ್ಕೆ, ವರ್ತನೆಯ ಪರಿವರ್ತನೆಗೆ ಪಂಚತಂತ್ರದಲ್ಲಿ ಕಂಡುಬರುವ ವಿಷ್ಣುಶರ್ಮರು ಒಬ್ಬ ಮೇಧಾವಿ ಶಿಕ್ಷಕರಾಗಿ, ಸ್ನೇಹಿತರಾಗಿ, ಮಾರ್ಗದರ್ಶಕರಾಗಿ, ತತ್ವಜ್ಞಾನಿಯಾಗಿ ಏನೆಲ್ಲ ಸಲಹೆ ಹಾಗೂ ಸಹಕಾರವನ್ನು ಒದಗಿಸಿ, ಅರಸುಪುತ್ರರಲ್ಲಿ ಒಂದು ಒಳ್ಳೆಯ ವ್ಯಕ್ತಿತ್ವ ನಿರ್ಮಾಣ ಕಾರ್ಯವನ್ನು ಕೈಗೊಂಡಿದ್ದಾರೋ ಆ ಬಗ್ಗೆ ವಿಶ್ಲೇಷಿಸಲಾಗಿದೆ.

ಪಂಚತಂತ್ರದ ಕಥಾಮುಖದಲ್ಲಿ ಸೂಚಿಸಿರುವಂತೆ ಮಹಿಲಾರೋಪ್ಯದ ಅಮರಶಕ್ತಿರಾಜನ ಮೂವರು ಪುತ್ರರು ಶಾಸ್ತ್ರಜ್ಞಾನವನ್ನು ಅರಿಯದ ಅವಿವೇಕಿಗಳಾಗಿದ್ದರು. ಸ್ವೇಚ್ಛೆಯಾಗಿ ಕಾಲಹರಣ ಮಾಡಿಕೊಂಡಿದ್ದರು.

---

14. Guidance and counselling britannica. https://syntal.com>formidable (PDF)

ಗೊತ್ತುಗುರಿ ಇಲ್ಲದೆ, ಸರಿಯಾದ ನಿರ್ಧಾರ ಕೈಗೊಳ್ಳಲಾಗದೆ ನಿಶ್ಪ್ರಯೋಜಕರಾಗಿದ್ದರು. ಜೊತೆಗೆ ಮಂದಮತಿಗಳಾಗಿದ್ದರು. ಸಕಲಶಾಸ್ತ್ರಪಾರಂಗತರಾದ ವಿಷ್ಣುಶರ್ಮರು ಇಂಥಹವರನ್ನು ಪರಿವರ್ತಿಸಲು ಧೃಡಸಂಕಲ್ಪ ಮಾಡಿ, ಅವರ ಸಮಸ್ಯೆ ಏನೆಂಬುದನ್ನು ಸೂಕ್ಷ್ಮವಾಗಿ ಅರ್ಥೈಸಿಕೊಂಡು, ತಂದೆಯಾಗಿ ರಾಜನು ಅನುಭವಿಸುತ್ತಿದ್ದ ಕೊರಗನ್ನೂ ಸಹಾನುಭೂತಿಯಿಂದ ಪರಿಶೀಲಿಸಿ, ರಾಜನಂದನರನ್ನು ಸರಿದಾರಿಗೆ ತಂದು, ಸುಶಿಕ್ಷಿತರಾಗಿ, ರಾಜನೀತಿಬಲ್ಲವರಾಗಿ, ತಮ್ಮ ಜವಾಬ್ದಾರಿ ಹಾಗೂ ಬದುಕಿನ ನೀತಿಯನ್ನು ಕಂಡುಕೊಂಡವರಾಗಿ ಒಳ್ಳೆಯ ವ್ಯಕ್ತಿತ್ವ ನಿರ್ಮಾಣ ಮಾಡಿಕೊಳ್ಳುವಂತೆ ಶಿಕ್ಷಣ, ಮಾರ್ಗದರ್ಶನ ಹಾಗೂ ಸಲಹೆಗಳನ್ನು ನೀಡುವುದರೊಂದಿಗೆ ಅವರ ಸಮಸ್ಯೆಯನ್ನು ಅವರೇ ಅರ್ಥಮಾಡಿಕೊಳ್ಳಲು ಬಹಳ ಚಮತ್ಕಾರದಿಂದ ಅನುವುಮಾಡಿಕೊಟ್ಟಿದ್ದಾರೆ. ಇಲ್ಲಿ ಇವರೇ ಶಿಕ್ಷಕರಾಗಿ, ಸಲಹೆಗಾರು ಹಾಗೂ ಮಾರ್ಗದರ್ಶಕರಾಗಿ ಈ ಅರಸು ಪುತ್ರರ ಸಮಸ್ಯೆಗಳನ್ನು ಗುರುತಿಸಿ, ಅವರಿಗೆ ಕಲಿಕೆಯಲ್ಲಿ ಆಸಕ್ತಿಯನ್ನು ವಿಶ್ವಾಸದಿಂದ ಪ್ರೇರೇಪಿಸಿ, ತಮ್ಮ ಜವಾಬ್ದಾರಿಯನ್ನು ತಾವೇ ಅರ್ಥಮಾಡಿಕೊಂಡು ಸೂಕ್ತ ಪರಿಹಾರಕ್ಕಾಗಿ ತಾವೇ ಅರಿತು, ಸೂಕ್ತ ನಿರ್ಧಾರವನ್ನು ಕೈಗೊಳ್ಳುವಂತೆ ಪ್ರೇರೇಪಿಸಿ ಪ್ರೋತ್ಸಾಹಿಸಿದ್ದಾರೆ.

ಸಲಹೆ ಸಮಸ್ಯೆಯನ್ನು ಪರಿಹರಿಸುವುದಿಲ್ಲ. ಆದರೆ ಸಮಸ್ಯಾ ಪರಿಹಾರದಲ್ಲಿ ಸಹಾಯ ಮಾಡುತ್ತದೆ. ಸಲಹೆಯನ್ನು ನೀಡುವುದರಲ್ಲಿ ಮುಖ್ಯ ಉದ್ದೇಶಗಳನ್ನು ಸಂಕ್ಷಿಪ್ತವಾಗಿ ಹೇಳುವುದಾದರೆ:–[15]

1. ವಿದ್ಯಾರ್ಥಿಗೆ ತನ್ನ ಸಮಸ್ಯೆಗಳನ್ನು ಅರ್ಥೈಸಿಕೊಳ್ಳಲು ಮಹತ್ವದ ಅಂಶಗಳನ್ನು ಕುರಿತು ಉತ್ತಮ ಮಾಹಿತಿಯನ್ನು ಒದಗಿಸುವುದು.
2. ವಿದ್ಯಾರ್ಥಿ ಮತ್ತು ಶಿಷ್ಯರ ಮಧ್ಯೆ ಪರಸ್ಪರ ಅರ್ಥಮಾಡಿಕೊಳ್ಳುವ ಭಾವನೆಯನ್ನು ಸ್ಥಾಪಿಸುವುದು.
3. ವಿದ್ಯಾರ್ಥಿಯು ತನ್ನ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಸೂಕ್ತ ಯೋಜನೆ ರೂಪಿಸಿಕೊಳ್ಳಲು ನೆರವಾಗುವುದು.
4. ವಿದ್ಯಾರ್ಥಿಯು ತನ್ನ ಸಾಮರ್ಥ್ಯಗಳು, ಅಭಿರುಚಿಗಳು, ಆಸಕ್ತಿಗಳು ಮತ್ತು ಅವಕಾಶಗಳನ್ನು ಅರ್ಥಮಾಡಿಕೊಳ್ಳಲು ನೆರವಾಗುವುದು.
5. ವಿದ್ಯಾರ್ಥಿಯಲ್ಲಿ ವಿಶೇಷ ಸಾಮರ್ಥ್ಯಗಳು ಹಾಗೂ ಸಕಾರಾತ್ಮಕ ಮನೋಧೋರಣೆಗಳನ್ನು ಬೆಳೆಸಿ ಪ್ರೋತ್ಸಾಹಿಸುವುದು.
6. ಶೈಕ್ಷಣಿಕ ಮತ್ತು ವೃತ್ತಿ ಆಯ್ಕೆಗಳಿಗೆ ಸೂಕ್ತ ಯೋಜನೆಯನ್ನು ರೂಪಿಸಿಕೊಳ್ಳಲು ಸಹಕರಿಸುವುದು..

15. **ವಾಮದೇವಪ್ಪ ಎಚ್.ವಿ,** ಶೈಕ್ಷಣಿಕ ಮನೋವಿಜ್ಞಾನ, ಅ – 9, ಪು – 348–355,(2005). ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

## ೮-೩. ಸಾಮಾನ್ಯ ಜ್ಞಾನದ ಕೊರತೆ-ಪರಿಣಾಮ-ಪರೀಕ್ಷಿಸದೆ ಕೆಲಸ ಮಾಡುವುದರ - ಪರಿಣಾಮ - पञ्चतन्त्रस्य-पञ्चमं-तन्त्रम्-"अपरीक्षितकारकम्"

### ಕಥೆಗಳ ವಿಶ್ಲೇಷಣೆ

ಹಿಂದಿನ ಅಧ್ಯಾಯದಲ್ಲಿ ನಾಲ್ಕನೆಯ ತಂತ್ರ ಲಬ್ಧಪ್ರಣಾಶದ ಅಂತ್ಯದಲ್ಲಿ ರಾಜಕುಮಾರರನ್ನು ಕುರಿತು ವಿಷ್ಣುಶರ್ಮರು ಹೀಗೆ ಕೇಳುತ್ತಾರೆ- "ರಾಜಕುಮಾರರೇ, ಕೇಳಿದಿರಾ? ಪೂರ್ವಾರ್ಜಿತವಾಗಿ ಬಂದ ಸಂಪತ್ತು ಎಷ್ಟಿದ್ದರೇನು? ಅದು ಮುದಿದನವು ವಿಧಿಯಿಂದ ದೊರೆತ ಹುಲ್ಲನ್ನು ಮೆಂದು ಸುಖಪಟ್ಟಂತೆ, ಆಮೇಲೆ? ತಿಳಿದಿಲ್ಲ. ಅದರ ಬದಲಿಗೆ ಪೌರುಷದಿಂದ ಪಡೆದ ಧನವಿದ್ದರೆ, ಅದರಿಂದ ಸುಖಿಸುವುದು ಎಷ್ಟು ಹಿತಕರ! ಅದನ್ನು ಅನುಭವಿಸಿಯೇ ತಿಳಿಯಬೇಕು. ರಾಜಕುಮಾರರೇ ಇದು ಮುಂದೆ ನಿಮ್ಮ ಅನುಭವಕ್ಕೇ ಬರುತ್ತದೆ. ಎಂದು ತಿಳಿಸುತ್ತಾರೆ.[16] ಇಲ್ಲಿ ವಿಷ್ಣುಶರ್ಮರು ರಾಜಕುಮಾರರ ವ್ಯಕ್ತಿತ್ವ ನಿರ್ಮಾಣ ಕಾರ್ಯದಲ್ಲಿ, ಒಬ್ಬ ಸಹೃದಯಿ ಮಿತ್ರ, ಮಾರ್ಗದರ್ಶಕ ಹಾಗೂ ತ್ತತ್ವಜ್ಞಾನಿಯಾಗಿ ಕಂಡುಬರುತ್ತಾರೆ. ಇಂದಿಗೂ ಬೋಧನೆಯಲ್ಲಿ ಆಸಕ್ತಿಯುಳ್ಳ ಬೋಧಕರುಗಳಿಗೆ ಹಾಗೂ ವ್ಯಕ್ತಿ ವಿಕಸನ ತರಬೇತಿ ನೀಡಬಯಸುವ ಮಾರ್ಗದರ್ಶಕರುಗಳಿಗೆ ಮಾದರಿಯಾಗಿದ್ದಾರೆ. ಪಂಚತಂತ್ರವು ಒಂದು ಅಮೂಲ್ಯ ನೀತಿಶಿಕ್ಷಣ ಸಂಹಿತೆ ಹಾಗೂ ವ್ಯಕ್ತಿತ್ವ ವಿಕಸನ ಕೈಪಿಡಿ ಆಗಿರುತ್ತದೆ. ಹೀಗೆಯೇ ಮುಂದೆ ಸಾಗುತ್ತಾ, ವಿಷ್ಣುಶರ್ಮರು ಪಂಚತಂತ್ರದ ಐದನೆಯ ಹಾಗೂ ಕೊನೆಯ ತಂತ್ರವಾದ **"ಅಪರೀಕ್ಷಿತಕಾರಕ"-** ಅಂದರೆ ಪರೀಕ್ಷಿಸದೆ ಕೆಲಸ ಮಾಡುವುದು ಎಂಬುದರ ಬಗ್ಗೆ ಅನೇಕ ವಿಚಾರಗಳನ್ನೂ, ಅದಕ್ಕೆ ಸಮಂಜಸವಾದ ದೃಷ್ಟಾಂತಗಳನ್ನೂ ಒದಗಿಸಿಕೊಡುತ್ತಾ, ರಾಜಕುಮಾರರಲ್ಲಿ ಒಂದು ರೀತಿಯ ಪ್ರೌಢ ಚಿಂತನೆಗಳನ್ನು ಬೆಳೆಸುತ್ತಾ ಬರುತ್ತಾರೆ. ಅಪರೀಕ್ಷಿತಕಾರಕದ ಮೊದಲ ನುಡಿಯೇ ಅತ್ಯಂತ ಸ್ಪಷ್ಟವಾಗಿ, ಸಂಕ್ಷಿಪ್ತವಾಗಿ ಈ ತಂತ್ರದ ಅರ್ಥ, ಉದ್ದೇಶ ಹಾಗೂ ಮಾರ್ಗದರ್ಶನವನ್ನು ತಿಳಿಸುತ್ತದೆ.:-

कुदृष्टं कुपरिज्ञातं कुश्रुतं कुपरीक्षितम् ।

तन्नरेण न कर्त्तव्यं नापितेनात्र यत्कृतम् ॥[17]

"ಸರಿಯಾಗಿ ನೋಡದ, ಸರಿಯಾಗಿ ತಿಳಿಯದ, ಸರಿಯಾಗಿ ಕೇಳದ ಮತ್ತು ಸರಿಯಾಗಿ ಪರಿಶೀಲಿಸದ ಕಾರ್ಯವನ್ನು ಕ್ಷೌರಿಕನು ಹೇಗೆ ಮಾಡಿದನೋ ಹಾಗೆ ಮನುಷ್ಯನು ಮಾಡಬಾರದು." ಎಂಬ ವಿಶೇಷ ಜಾಗೃತಿಯನ್ನು ರಾಜಕುಮಾರರಿಗೆ ಮನದಟ್ಟು ಮಾಡಿದ್ದಾರೆ.

---

16. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ-ಲಬ್ಧಪ್ರಣಾಶ, ಪು-203 (2015)ವರ್ಣಿಲ, 39/2-11, ಕಲ್ಯಾಣಿ ಗಾರ್ಡನ್, ಬನಶಂಕರಿ 1ನೇ ಹಂತ, ಬೆಂಗಳೂರು-560050
17. **ಸುಧಾಕರ್ ಮಾಲವೀಯ,** ಸಂಪಾ-ಅನು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ,ಅಪರೀಕ್ಷಿತಕಾರಕ-ಶ್ಲೋ-1, ಪು-703,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ವಿಶಾಲ ವೃಕ್ಷದ ಕೆಳಗೆ ಸಮತಟ್ಟಾದ ಸ್ಥಳದಲ್ಲಿ ಮರದ ಪಕ್ಕದಲ್ಲಿನ ಕಲ್ಲಿನ ಸಣ್ಣ ದಿಬ್ಬದ ಮೇಲೆ ವಿಷ್ಣುಶರ್ಮರು ಕುಳಿತಿದ್ದರು. ರಾಜಕುಮಾರರು ತಮ್ಮತಮ್ಮಲ್ಲೇ ಚರ್ಚೆ ನಡೆಸಿಕೊಂಡು ಬರುತ್ತಿದ್ದರು. ಆದ್ದರಿಂದ ಅವರ ಆಗಮನ ಸ್ವಲ್ಪ ವಿಳಂಬವಾಗಿತ್ತು. ಗುರುಗಳನ್ನು ದೂರದಿಂದಲೇ ಗಮನಿಸಿದ ರಾಜಕುಮಾರರು ಬೇಗ ಬೇಗ ಹೆಜ್ಜೆ ಹಾಕಿದರು. ನಂತರ ಹೇಳುತ್ತಾರೆ "ಗುರುಗಳೇ ಈ ದಿನ ನಮ್ಮ ನಮ್ಮಲ್ಲೇ ಚರ್ಚೆನಡೆದಿತ್ತು. ಸಿಂಹವು ಸಂಜೀವಕನನ್ನು ಕೊಂದದ್ದು ಸರಿಯೇ? – ತಪ್ಪೇ? ದಮನಕನಂತಹ ಮಂತ್ರಿಯನ್ನು ನಂಬಬೇಕೇ? ಬೇಡವೇ? ಎಂದು ನಾವುಗಳು ಒಮ್ಮತದ ತೀರ್ಮಾನಕ್ಕೆ ಬರಲಾಗಲಿಲ್ಲ" ಎಂದರು. ಅದಕ್ಕೆ ಗುರುಗಳು ಹೇಳುತ್ತಾರೆ– "ಈ ವಿಷಯದಲ್ಲಿ ಹೀಗೆ ಸರಿಯಾಗಿ ಆಲೋಚಿಸುವುದರಿಂದಲೇ, ನಾವು ದೊಡ್ಡವರಾದಂತೆ, ಯಾವುದು ಸತ್ಯ–ಸೂಕ್ತ ಎಂಬುದು ತಿಳಿಯುತ್ತದೆ. ಅದು ಹಾಗಿರಲಿ, ಇವತ್ತಿನಿಂದ ಬೇರೆ ರೀತಿಯ ಕಥೆಯನ್ನು ನಿಮಗೆ ಹೇಳಬೇಕೆಂದಿದ್ದೇನೆ" ಎಂದರು.

दानाय लक्ष्मीः सुकृताय विद्या चिन्ता परब्रह्मविनिश्चयाय ।

परोपकाराय वचांसि यस्य वन्द्यस्त्रिलोकीतिलकः स एव ॥[18]

ಯಾರ ಹಣವು ದಾನಮಾಡುವುದಕ್ಕಾಗಿ, ವಿದ್ಯೆಯು ಒಳ್ಳೆ ಒಳ್ಳೆಯ ಕೆಲಸಗಳನ್ನು ಮಾಡುವುದಕ್ಕಾಗಿ, ಚಿಂತನೆಯ ಪರಬ್ರಹ್ಮವನ್ನು ತಿಳಿಯುವುದಕ್ಕಾಗಿ, ಮಾತು ಪರರ ಉಪಕಾರಕ್ಕಾಗಿ ಇರುತ್ತವೆಯೋ ಅವನೊಬ್ಬನೇ ಮೂರು ಲೋಕಗಳಿಗೂ ಶ್ರೇಷ್ಠ. ಎಂದು ಒಂದು ಸುಭಾಷಿತ ಹೇಳುತ್ತದೆ. ಇಂಥಹವನು ಒಬ್ಬ ನಾಯಕನಿದ್ದಂತೆ.

ಮುಂದುವರೆಸುತ್ತಾ, "ಪ್ರತಿಯೊಬ್ಬರಿಗೂ ತಾನು ನಾಯಕನಾಗಬೇಕು, ಇತರರನ್ನು ಆಳಬೇಕು ಎಂಬ ಮಹತ್ವಾಕಾಂಕ್ಷೆಯಿರುತ್ತದೆ. ಇನ್ನು ತಂದೆಯ ಪದವಿ ತನಗೇ ಅಲ್ಲದೆ ಬೇರೊಬ್ಬರಿಗೆ ಹೋಗಬಾರದೆಂಬ ಸ್ವಾರ್ಥ ಮೋಹವೂ ಇರುತ್ತದೆ. ಇದು ಸಹಜವೇ. ಆದರೆ ಆ ಸ್ಥಾನವನ್ನಲಂಕರಿಸಲು ಬೇಕಾದ ಯೋಗ್ಯತೆಯಿರಬೇಕಲ್ಲಾ! ಒಂದು ವೇಳೆ ಅಂಥಹ ಯೋಗ್ಯತೆ ಇಲ್ಲದಿದ್ದರೆ, ಅದನ್ನು ಸಂಪಾದಿಸಿಕೊಳ್ಳಬೇಕು. ಇತರರನ್ನು ನೋಡಿಯೋ, ಕೇಳಿಯೋ ಅದನ್ನು ಗಳಿಸಿಕೊಳ್ಳಬೇಕು. ಹೀಗಾಗಿ ಸಂಪತ್ತನ್ನು, ಶ್ರೇಯಸ್ಸನ್ನು ಗಳಿಸಿಕೊಳ್ಳಬೇಕೆಂಬುವವನು ದುಡುಕು ಸ್ವಭಾವವನ್ನು ಮೊದಲು ಬಿಡಬೇಕು. ಎಲ್ಲವನ್ನೂ ಚೆನ್ನಾಗಿ ವೀಕ್ಷಿಸಬೇಕು, ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು. ಮತ್ತೆ ಪರೀಕ್ಷಿಸಬೇಕು. ಅಂತಹ ಪರೀಕ್ಷಾ ತಂತ್ರದಿಂದ ವ್ಯಕ್ತಿಯು ಗೆಲ್ಲುತ್ತಾನೆ.

---

18. **ಸುಭಾಷಿತಮಂಜರೀ** –ಸದ್ಗುಣ–ದುರ್ಗುಣ–ಶ್ಲೋ–131, ಪು–157, (2001) ಸುಭಾಷಿತರತ್ನಭಾಂಡಾಗಾರ. ಕ.ಸಾ.ಪ. ಬೆಂಗಳೂರು–18.

ಅವನು ಸೋಲುವುದು ಯಾವಾಗ ಎಂದರೆ ವಿನಾಕಾರಣ ಕೋಪಗೊಳ್ಳುವುದರಿಂದ. ಅದರಿಂದ ತಾನೂ ಕೆಡುವುದಲ್ಲದೆ, ತನ್ನ ಜೊತೆಯಲ್ಲಿ ಇದ್ದವರನ್ನೂ ಕೆಡಿಸುತ್ತಾನೆ. ಇದಕ್ಕೆ ಸಂಬಂಧಿಸಿದಂತೆ ಒಂದು ಒಳ್ಳೆಯ ಕಥೆಯಿದೆ. ಹಾಗೆಯೇ ಇದಕ್ಕೆ ಸೇರಿಕೊಂಡಂತಹ ಬೇರೆ ಬೇರೆ ಉಪಕಥೆಗಳಿವೆ.[19] ಅವನ್ನೇ ಈಗ ಹೇಳುತ್ತೇನೆ ಕೇಳಿರಿ. ಇದು ಶೈಕ್ಷಣಿಕ ಮನೋವಿಜ್ಞಾನದಲ್ಲಿ ಸೂಚಿಸಿರುವ ಕ್ರಮವಾಗಿದೆ. ಯಾವುದೇ ಒಂದು ಪಾಠ ಬೋಧನೆಯ ಪೂರ್ವದಲ್ಲಿ ಒಂದು ಪೂರ್ವಭಾವಿ ಪರಿಚಯಾತ್ಮಕ ಪೀಠಿಕೆಯನ್ನು ಮೌಖಿಕವಾಗಿ ಹಾಕುವುದು. ಇದರ ಮೂಲ ಉದ್ದೇಶ ಮುಂದೆ ತಿಳಿಯಬೇಕಾಗಿರುವ ವಿಚಾರದ ಪರಿಚಯ, ಆ ವಿಚಾರವನ್ನು ತಿಳಿಯಲು ಕುತೂಹಲ ಮತ್ತು ಆಸಕ್ತಿಯನ್ನು ಅಭಿಪ್ರೇರಣೆ ಮಾಡುವುದಾಗಿದೆ. ವಿಷ್ಣುಶರ್ಮರು ಪ್ರತಿಯೊಂದು ಕಥೆಯನ್ನು ಹೇಳುವಾಗಲೂ ಈ ಕ್ರಮವನ್ನು ಬಹಳ ಕರಾರುವಾಕ್ಕಾಗಿ ಅನುಸರಿಸಿ, ರಾಜಕುಮಾರರ ಕಲಿಕಾ ಆಸಕ್ತಿಯನ್ನು ಹಿಡಿದಿಟ್ಟುಕೊಂಡಿದ್ದಾರೆ.

"ಅಪರೀಕ್ಷಿತಕಾರಕ"ದಲ್ಲಿ ಬರುವ ಸೂತ್ರಕಥೆಯೊಂದಿಗೆ ಹೆಣೆದುಕೊಂಡಿರುವ ಹದಿನಾಲ್ಕು ಉಪಕಥೆಗಳ ಮೂಲಕ "ಸರಿಯಾಗಿ ವಿಚಾರಮಾಡದೆ ಕೈಗೊಂಡ ಕಾರ್ಯಗಳಿಂದ ಆಗುವ ಅನಾಹುತಗಳನ್ನು ಬಹಳ ಅರ್ಥಪೂರ್ಣ ದೃಷ್ಟಾಂತಗಳೊಂದಿಗೆ ರಾಜಕುಮಾರರಿಗೆ ಮನದಟ್ಟು ಮಾಡಲಾಗಿದೆ. ಅದೇ ರೀತಿಯಲ್ಲಿ ಸಾಮಾನ್ಯ ಜ್ಞಾನದ ಕೊರತೆಯಿಂದ ಸರಿಯಾಗಿ ತಿಳಿಯದೆ, ವಿನಾಕಾರಣ ಕೋಪ, ದುಡುಕು ಮತ್ತು ಅಪರೀಕ್ಷಿತ ಕಾರಣಗಳಿಂದ ಎಂಥಹ ವಿಪರ್ಯಾಸಗಳಿಗೆ ಮನುಷ್ಯನು ಒಳಗಾಗುತ್ತಾನೆ ಎಂಬುದನ್ನು ಅರ್ಥಪೂರ್ಣವಾಗಿ ವಿವರಿಸಲಾಗಿದೆ.

ದಕ್ಷಿಣ ದೇಶದಲ್ಲಿರುವ ಪಾಟಲೀಪುತ್ರ ನಗರದಲ್ಲಿ ವಾಸಿಸುತ್ತಿದ್ದ ವ್ಯಾಪಾರಿ ಶ್ರೇಷ್ಠಿ ಮಣಿಭದ್ರನು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳ ನಿಮಿತ್ತವಾಗಿ ಕೆಲಸಗಳನ್ನು ಮಾಡುತ್ತಿದ್ದನು. ಆದರೂ ವಿಧಿಯಾಟದಿಂದ ಧನವನ್ನೆಲ್ಲಾ ಕಳೆದುಕೊಂಡನು. ಇದರಿಂದ ಬಹಳ ದುಃಖ ಹಾಗೂ ಅಪಮಾನಕ್ಕೆ ಗುರಿಯಾದನು. ತನ್ನ ದುರಾದೃಷ್ಟಕ್ಕೆ ಬಹಳವಾಗಿ ಚಿಂತಿಸಿ, ಕೊರಗಿ, ಕೊರಗಿ ಜಿಗುಪ್ಸೆ ಹೊಂದಿ, ಈ ವ್ಯರ್ಥ ಜೀವನದಿಂದ ಏನೂ ಪ್ರಯೋಜನವಿಲ್ಲವೆಂದು ತೀರ್ಮಾನಿಸಿ ಉಪವಾಸದಿಂದ ಪ್ರಾಣ ತ್ಯಜಿಸಲು ನಿಶ್ಚಯಿಸಿ ಮಲಗಿದನು ಮತ್ತು ಹೀಗೆ ಚಿಂತಿಸಿದನು.

---

19. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ-ಅಪರೀಕ್ಷಿತಕಾರಕಂ, ಪು-204-205, (2015) ವರ್ನಿಲ, 39/2-11,ಕಲ್ಯಾಣಿ ಗಾರ್ಡನ್, ಬನಶಂಕರಿ 1ನೇ ಹಂತ, ಬೆಂಗಳೂರು-560050

शीलं शौचं क्षान्तिर्दाक्षिण्यं मधुरता कुले जन्म ।

न विराजन्ति हि सर्वे वित्तविहीनस्य पुरुषस्य ॥[20]

ಅಂದರೆ, ಈ ಬಡತನಕ್ಕೆ ಧಿಕ್ಕಾರವಿರಲಿ ಉತ್ತಮ ಚರಿತ್ರೆ, ಪವಿತ್ರತೆ, ಸಹನೆ, ಸೌಜನ್ಯ, ಮಧುರನುಡಿ ಇವೆಲ್ಲವೂ ಹಣವಿಲ್ಲದವನಲ್ಲಿ ಶೋಭಿಸುವುದಿಲ್ಲ. ಪುರುಷನು ಧನರಹಿತನಾದಾಗ ಆತನ ಗೌರವ, ದರ್ಪ, ಕೌಶಲ, ಭ್ರಾಂತಿ ಮತ್ತು ಸದ್ಬುದ್ಧಿ ಎಲ್ಲವೂ ಒಮ್ಮೆಲೇ ನಾಶವಾಗಿಬಿಡುತ್ತವೆ. ವಸಂತ ಋತುವಿನಲ್ಲಿ ಗಾಳಿಯ ಚಲನೆಯಿಂದ ಹೇಗೆ ಶಿಶಿರ ಋತುವಿನ ಶೋಭೆಯು ಕ್ರಮೇಣ ನಾಶವಾಗುತ್ತದೋ ಅದೇ ರೀತಿಯಲ್ಲಿ ಬುದ್ಧಿವಂತನ ಬುದ್ಧಿಯೂ ಕೂಡ ದಾರಿದ್ರ್ಯ ಬಂದಾಗ ಕುಟುಂಬ ಪೋಷಣೆಯ ಚಿಂತೆಯಿಂದ ಪ್ರತಿದಿನವೂ ಕ್ಷೀಣಿಸುತ್ತದೆ.

विकलमिह पूर्वसुकृतं विद्यावन्तोऽपि कुलसमुद्भूताः ।

यस्य यदा विभवः स्यात् तस्य तदा दासतां यान्ति ॥[21]

ಈ ಲೋಕದಲ್ಲಿ ಪೂರ್ವಜನ್ಮದ ಪುಣ್ಯಫಲಗಳು ವ್ಯರ್ಥ, ಏಕೆಂದರೆ ವಿದ್ಯಾವಂತರು ಹಾಗೂ ಉತ್ತಮಕುಲದಲ್ಲಿ ಜನ್ಮ ಪಡೆದವರು ಕೂಡ, ಯಾರಲ್ಲಿ ಹಣವಿದೆಯೋ ಅವರ ದಾಸರಾಗುತ್ತಾರೆ. ಹೀಗೆ ಯೋಚಿಸಿ ಮಣಿಭದ್ರನು ಮತ್ತೆ ಚಿಂತಿಸಿ, ಉಪವಾಸದೊಂದಿಗೆ ಪ್ರಾಣ ತ್ಯಜಿಸುವುದಾಗಿ ನಿಶ್ಚಯಿಸಿ ಮಲಗಿದನು. ಆಗ ಅವನಿಗೆ ಕನಸಿನಲ್ಲಿ ಪದ್ಮನಿಧಿಯು ಜೈನ ಸಂನ್ಯಾಸಿಯ ವೇಷದಲ್ಲಿ ದರ್ಶನ ಲಾಭವನ್ನು ಕೊಟ್ಟು-" ಎಲೈ ಶ್ರೇಷ್ಠಿ ವೈರಾಗ್ಯವನ್ನು ಹೊಂದಬೇಡ, ನಾನು ನಿನ್ನ ಪೂರ್ವಜರು ಸಂಪಾದಿಸಿದ ಪದ್ಮವೆಂಬ ನಿಧಿ. ನಾನು ಈ ವೇಷದಲ್ಲಿಯೇ ಬೆಳಗ್ಗೆ ನಿನ್ನ ಮನೆಗೆ ಬರುವೆನು. ಆಗ ನೀನು ದೊಣ್ಣೆಯಿಂದ ನನ್ನ ತಲೆಗೆ ಹೊಡೆದರೆ ನಾನು ಚಿನ್ನಮಯವಾಗಿ ಅಕ್ಷಯನಿಧಿ ಆಗುವೆನು. ಇದು ನಿಜವೋ, ಸುಳ್ಳೋ, ಏನೂ ತಿಳಿಯದ ಶ್ರೇಷ್ಠಿಯು ಸ್ವಪ್ನದಲ್ಲಿ ಹೇಳಿದಂತೆ ಮಾಡಿಬಿಡೋಣ ಎಂದು ಯೋಚಿಸುತ್ತಿರುವ ಸಂದರ್ಭದಲ್ಲಿ ಒಬ್ಬ ಜೈನ ಸಂನ್ಯಾಸಿಯೂ ಕೂಡ ಬಂದೇ ಬಿಟ್ಟನು. ಈ ಮಧ್ಯೆ ಶ್ರೇಷ್ಠಿಯ ಹೆಂಡತಿಯ ಕಾಲುಗಳಿಗೆ ಮದರಂಗಿಯನ್ನು ಹಚ್ಚಲು ಕರೆದಿದ್ದ ಕ್ಷೌರಿಕನೂ ಬಂದನು. ಜೈನ ಸಂನ್ಯಾಸಿಯನ್ನು ನೋಡಿದ ಮಣಿಭದ್ರನು ಸಂತೋಷದಿಂದ ಮರದ ಕೋಲಿನಿಂದ ಅವನ ತಲೆಗೆ ಹೊಡೆಯಲಾಗಿ, ನಿರೀಕ್ಷಿಸಿದ್ದು ನಿಜವಾಗಿ ಶ್ರೇಷ್ಠಿಗೆ ಚಿನ್ನವು ಅಕ್ಷಯವಾಗಿ ದೊರಕಿತು. ಇದನ್ನು ನೋಡಿದ್ದ ಕ್ಷೌರಿಕನಿಗೆ ಶ್ರೇಷ್ಠಿಯು ಉಪಚರಿಸಿ, ಸ್ವಲ್ಪ ಧನವನ್ನೂ, ವಸ್ತ್ರವನ್ನೂ ಕೊಟ್ಟು, ನಡೆದ ವೃತ್ತಾಂತವನ್ನು ಯಾರಿಗೂ ಹೇಳದಂತೆ ತಾಕೀತು ಮಾಡಿದನು.

20. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ-ಶ್ಲೋ-2, ಪು-704, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

21. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ-ಶ್ಲೋ-9, ಪು-707, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಆದರೆ ದುರಾಸೆಯಿಂದ ಕೂಡಿದ ಕ್ಷೌರಿಕನು ಸುಮ್ಮನಿರುತ್ತಾನೆಯೇ !! ಬಹಳವಾಗಿ ಯೋಚಿಸಿ ತಾನೂ ಅದನ್ನೇ ಮಾಡಿದರೆ? ಅದರಲ್ಲೂ ಜೈನ ದಿಗಂಬರರನ್ನು ಆಹ್ವಾನಿಸಿ ಕೋಲಿನಿಂದ ತಲೆಗೆ ಹೊಡೆದರೆ ಅವರೆಲ್ಲರೂ ಸುವರ್ಣಮಯರಾದಾಗ ತಾನೂ ಅಪಾರ ಚಿನ್ನವನ್ನು ಪಡೆಯುವೆನೆಂದು, ಅವರನ್ನೆಲ್ಲಾ ಭೋಜನಕ್ಕೆ ತನ್ನ ಮನೆಗೆ ಆಹ್ವಾನಿಸಿದನು. ಅವನ ಪ್ರಾರ್ಥನೆಗೆ ಮರುಳಾಗಿ ಜೈನ ಮುನಿಗಳು ಸಂತೋಷದಿಂದ ಕ್ಷೌರಿಕನ ಮನೆಗೆ ಹೊರಟರು. ಕ್ಷೌರಿಕನು ಅವರನ್ನು ಮನೆಯೊಳಕ್ಕೆ ಕರೆದೊಯ್ದು ಬಾಗಿಲನ್ನು ಗಟ್ಟಿಯಾಗಿ ಹಾಕಿ, ಕಗ್ಗಲೀ ಮರದ ದೊಣ್ಣೆಯಿಂದ ಅವರ ತಲೆಗೆ ಹೊಡೆದನು. ಪಾಪ, ಅವರಲ್ಲಿ ಕೆಲವರು ಸತ್ತೇ ಹೋದರು. ಮತ್ತೆ ಕೆಲವರ ತಲೆ ತುಂಡಾಯಿತು. ಅವರು ಅರಚಿಕೊಂಡರು. ಅವರ ಆಕ್ರಂದನವನ್ನು ಕೇಳಿದೊಡನೆ ನಗರರಕ್ಷಕನು ಭಟರನ್ನು ಕಳುಹಿಸಿ, ಪತ್ತೆಮಾಡಿ ಕ್ಷೌರಿಕನನ್ನು ಬಂಧಿಸಿ ಬದುಕುಳಿದ. ಸಂನ್ಯಾಸಿಗಳೊಂದಿಗೆ ನ್ಯಾಯಾಲಯಕ್ಕೆ ಹಾಜರುಪಡಿಸಿದನು. ನ್ಯಾಯಾಧೀಶರು ಮಣಿಭದ್ರನನ್ನು ಕರೆಸಿ, ಅವನ ಮನೆಯಲ್ಲಿ ನಡೆದ ಘಟನೆಯ ವೃತ್ತಾಂತವನ್ನು ಸ್ಪಷಪಡಿಸಿಕೊಂಡರು. ಕ್ಷೌರಿಕನನ್ನು "ಸರಿಯಾಗಿ ವಿಚಾರಿಸದೇ ಕೆಲಸ ಮಾಡಿದ ದುಷ್ಟಾತ್ಮ" ಎಂದು ತೀರ್ಮಾನಿಸಿ ಶೂಲಕ್ಕೇರಿಸಲು ಆದೇಶಿಸಿದರು.[22] ಪುನಃ ಅವರು ನುಡಿಯುತ್ತಾರೆ.

अपरीक्ष्य न कर्त्तव्यं कर्त्तव्यं सुपरीक्षितम् ।

पश्चाद्भवति सन्तापो ब्राह्मण्यां नकुलार्थतः ॥[23]

"ಸರಿಯಾಗಿ ನೋಡದ, ಸರಿಯಾಗಿ ತಿಳಿಯದ, ಸರಿಯಾಗಿ ಕೇಳದ ಮತ್ತು ಸರಿಯಾಗಿ ಪರಿಶೀಲಿಸದ ಕೆಲಸವನ್ನು ಕ್ಷೌರಿಕನು ಹೇಗೆ ಮಾಡಿದನೋ ಹಾಗೆ ಮನುಷ್ಯನು ಮಾಡಬಾರದು. ಸರಿಯಾಗಿ ಪರೀಕ್ಷಿಸಿಯೇ ಕೆಲಸವನ್ನು ಮಾಡಬೇಕು. ಇಲ್ಲದಿದ್ದರೆ ಅನಂತರ ಮುಂಗುಸಿಯಿಂದ ಬ್ರಾಹ್ಮಣಿಗೆ ವ್ಯಥೆಯುಂಟಾದಂತೆ ಆಗುತ್ತದೆ."

ಮಣಿಭದ್ರನು ಅದೇನು ಕಥೆ ? ಎಂದು ಕೇಳಿದಾಗ ಆ ಧರ್ಮಾಧಿಕಾರಿಗಳು **ಬ್ರಾಹ್ಮಣಿ-ಮುಂಗುಸಿಯ ಕಥೆ**ಯನ್ನು ಹೇಳಿದರು. ಇದರ ನೀತಿಯೆಂದರೆ "ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕು ಅಥವಾ ಕಣ್ಣಾರೆ ಕಂಡರೂ ಪರಾಂಬರಿಸಿ ನೋಡು." ಈ ರೀತಿ ಮಾಡದೆ ಬ್ರಾಹ್ಮಣಿಯು ತನ್ನ ಪುತ್ರ (ಮುಂಗುಸಿಯನ್ನು)ನನ್ನು ಕೊಂದು ಶೋಕದಿಂದ ಎದೆ ಬಡಿದುಕೊಳ್ಳಲಾರಂಭಿಸಿದಳು. ಮುಂಗುಸಿಯನ್ನು ಕೊಂದು ಮನೆಗೆ ಬಂದಾಗ ಅವಳ ಮಗನು ಮಲಗಿದ್ದಂತೆಯೇ ಅಲ್ಲಿಯೇ ಮಲಗಿದ್ದನು. ಸಮೀಪದಲ್ಲಿ ಕೃಷ್ಣಸರ್ಪವೊಂದು ತುಂಡಾಗಿ

---

22. **ಭರತ ಬಿ ರಾವ್**, ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತಂ-5, ಪು-255-259, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ,44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು-560004

23. **ಸುಧಾಕರ್ ಮಾಲವೀಯ,** ಸಂಪಾ-ಅನು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ,ಅಪರೀಕ್ಷಿತಕಾರಕ-ಶ್ಲೋ-18, ಪು-717, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಬಿದ್ದಿರುವುದನ್ನು ಕಂಡಳು. ಆಗ ಅವಳಿಗೆ ನಿಜಾಂಶ ಅರಿವಾಯಿತು. ಬ್ರಾಹ್ಮಣಿಯು ಬಹಳ ದುಃಖದಿಂದ ತನ್ನ ದುಡುಕುತನಕ್ಕೆ ಪಶ್ಚಾತ್ತಾಪ ಪಟ್ಟುಕೊಂಡಳು. ಸರಿಯಾಗಿ ತಿಳಿಯದೆ, ಸರಿಯಾಗಿ ನೋಡದೆ ಹಾಗೂ ಸರಿಯಾಗಿ ಪರೀಕ್ಷಿಸದೆ ಮಾಡಿದ ಕೆಲಸ ಎಂಥಹ ಪರಿಸ್ಥಿತಿಯನ್ನುಂಟುಮಾಡಿತೆಂದು ಪ್ರಲಾಪಿಸುತ್ತಾ ಬ್ರಾಹ್ಮಣನಿಗೆ ಹೀಗೆ ಹೇಳುತ್ತಾಳೆ :-

अतिलोभो न कर्तव्यो लोभं नैव परित्यजेत् ।

अतिलोभाभिभूतस्य चक्रं भ्रमति मस्तके ॥[24]

"ಅತಿ ಲೋಭವನ್ನು ಮಾಡಬಾರದು. ಆದರೆ ಲೋಭವನ್ನು ಬಿಡಲೂಬಾರದು. ಅತಿಲೋಭದಿಂದ ಕೂಡಿದವನ ತಲೆಯಲ್ಲಿ ಚಕ್ರವು ತಿರುಗುತ್ತದೆ." ಬ್ರಾಹ್ಮಣನು ಹಾಗೆಂದರೇನು? ಎನ್ನಲು ಅವಳು **ಲೋಭದಿಂದ ಕೂಡಿದ ಚಕ್ರಧರನ ಕಥೆ**ಯನ್ನು ಹೇಳಿದಳು. ಮನುಷ್ಯನಿಗೆ ಧನದ ಸೌಕರ್ಯವಿಲ್ಲದಿದ್ದರೆ ಅವನು ಎಲ್ಲ ರೀತಿಯಿಂದಲೂ ಉಪೇಕ್ಷೆಗೊಳಗಾಗುತ್ತಾನೆ. ಈ ಕಾರಣದಿಂದ ಹೇಗಾದರೂ ಮಾಡಿ ಹಣ ಸಂಪಾದನೆ ಮಾಡಬೇಕೆಂದು ಒಂದು ನಗರದಲ್ಲಿ ನಾಲ್ವರು ಬ್ರಾಹ್ಮಣ ಪುತ್ರರು ಪರಸ್ಪರ ಗೆಳೆತನದಿಂದ ಕೂಡಿ ವಾಸಿಸುತ್ತಿದ್ದವರು; ಬಹಳ ದಾರಿದ್ರ್ಯ ಹಾಗೂ ಬಡತನಕ್ಕೆ ಸೋತಿದ್ದವರು ಒಂದು ಸಮಾಲೋಚನೆ ನಡೆಸಿದರು. ಅವರು ತಮ್ಮ ತೀರ್ಮಾನದಂತೆ ಮಿತ್ರಬಾಂಧವರು ಇರುವ ತಮ್ಮ ದೇಶ, ಊರು ಹಾಗೂ ಮನೆಯನ್ನು ಬಿಟ್ಟುಹೊರಟರು. ಉತ್ತಮ ಸ್ವಭಾವ, ಪಾವಿತ್ರ್ಯತೆ, ಕ್ಷಮಾ, ಸರಳತೆ, ದಯೆ, ಉತ್ತಮ ಕುಲದಲ್ಲಿ ಜನ್ಮ ಮುಂತಾದ ಎಲ್ಲ ಗುಣಗಳಿದ್ದರೂ, ದರಿದ್ರ, ಅಂದರೆ ವಿತ್ತವಿಹೀನನಾದ ಪುರುಷನು ಶೋಭೆಯನ್ನು ಪಡೆಯಲು ಅಸಮರ್ಥನಾಗುತ್ತಾ ಶೂರನೂ, ಮಧುರ ಮಾತುಗಾರನೂ, ಶಬ್ದಾರ್ಥಶಾಸ್ತ್ರ ಪ್ರವೀಣನೂ ಆಗಿದ್ದು ಧನಹೀನನಾಗಿದ್ದರೆ, ಆತನಿಗೆ ಯಶಸ್ಸೆಂಬುದು ಇಲ್ಲದಿರುವಾಗ ನಮಗಾದರೂ ಎಲ್ಲಿ ಮಾನ್ಯತೆ ಇದೆ? ಎಂದು ಆಲೋಚಿಸಿದರು. ಅದಕ್ಕಾಗಿ ಹಣವನ್ನು ಹೇಗಾದರೂ ಗಳಿಸಿಕೊಂಡು ಬರಬೇಕೆಂದು ದೂರ ಪ್ರಯಾಣ ಕೈಗೊಂಡರು. ಹೀಗೊಂದು ಉಕ್ತಿಯಿದೆ:-

सत्यं परित्यजति मुञ्चति बन्धुवर्गं शीघ्रं विहाय जननीमपि जन्मभूमिम् ।

संत्यज्य गच्छति विदेशमभीष्टलोकं चिन्ताकुलीकृतमतिः पुरुषोऽत्र लोके ॥[25]

---

24. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ-ಶ್ಲೋ-22, ಪು-721, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001
25. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ-ಶ್ಲೋ-27, ಪು-724- 725, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಯಾರ ಮನಸ್ಸು ಚಿಂತೆಯಿಂದ ವ್ಯಾಕುಲಗೊಂಡಿದೆಯೋ ಅವನು ಸತ್ಯವನ್ನು ತ್ಯಜಿಸುತ್ತಾನೆ. ಬಂಧುವರ್ಗವನ್ನು ಬಿಡುತ್ತಾನೆ. ಜನನಿ ಹಾಗೂ ಜನ್ಮಭೂಮಿಯನ್ನು ಹಾಗೂ ಪ್ರಿಯವಾದ ಸ್ಥಾನವನ್ನು ತ್ಯಜಿಸಿ ವಿದೇಶಕ್ಕೆ ತೆರಳುತ್ತಾನೆ. ಹೀಗೆ ಬ್ರಾಹ್ಮಣ ಪುತ್ರ ಗೆಳೆಯರು ಅವಂತೀನಗರವನ್ನು ಮೊದಲು ತಲುಪಿದರು. ಅಲ್ಲಿ ಶಿಪ್ರಾ ನದಿಯಲ್ಲಿ ಸ್ನಾನ ಮಾಡಿ ಮಹಾಕಾಲನಿಗೆ ನಮಿಸಿ ಹೋಗುತ್ತಿದ್ದಾಗ ಭೈರವಾನಂದ ಎಂಬ ಯೋಗಿಯ ದರ್ಶನವಾಗುತ್ತದೆ. ಉಭಯಕುಶಲೋಪರಿ ವಿಚಾರದೊಂದಿಗೆ ಪರಿಚಯ ಆಗುತ್ತದೆ. ಭೈರವಾನಂದರಿಗೆ ಅದ್ಭುತವಾದ ಶಕ್ತಿಯಿದೆ ಎಂದು ತಿಳಿಯುತ್ತದೆ. ಇದು ಒಳ್ಳೆಯದೇ ಆಯಿತೆಂದು ಆ ಬ್ರಾಹ್ಮಣ ಪುತ್ರರು ತಮ್ಮ ಪರಿಸ್ಥಿತಿಯನ್ನು ಮುಕ್ತವಾಗಿ ಅವರ ಮುಂದೆ ನಿವೇದಿಸಿಕೊಂಡು ಧನ ಸಿದ್ಧಿಗಾಗಿ ಏನಾದರೊಂದು ಉಪಾಯ ತಿಳಿಸಬೇಕೆಂದು ಪ್ರಾರ್ಥನೆ ಸಲ್ಲಿಸಿದರು. ಭೈರವಾನಂದರು ಅವರಿಗೆ ಅತಿಲಾಭಕರವಾದ ನಾಲ್ಕು ಸಿದ್ಧಬತ್ತಿಗಳನ್ನು ಮಾಡಿ ಅವರಿಗೆ ಕೊಟ್ಟು. ಏನು ಮಾಡಬೇಕೆಂದು ಸೂಚಿಸಿದರು. "ಹಿಮಾಲಯದ ಕಡೆ ಹೋಗಿರಿ.ಅಲ್ಲಿ ಯಾವ ಪ್ರದೇಶದಲ್ಲಿ ಬತ್ತಿಗಳು ಬೀಳುವುದೋ ಅಲ್ಲಿ ನಿಶ್ಚಯವಾಗಿಯೂ ನಿಧಿಯನ್ನು ಪಡೆಯುವಿರಿ. ಆ ಜಾಗವನ್ನು ಅಗೆದು ನಿಧಿಯನ್ನು ಪಡೆದು ಹಿಂದಿರುಗಿ ಬನ್ನಿ." ಅದರಂತೆ ಅವರು ಹೋಗುತ್ತಿದ್ದಾಗ ಒಬ್ಬನ ಕೈಯಲ್ಲಿದ್ದ ಬತ್ತಿಯು ಬಿದ್ದಿತು. ನಂತರ ಅವನು ಅಗೆದು ನೋಡಿದಾಗ ಭೂಮಿಯು ತಾಮ್ರಮಯವಾಗಿತ್ತು. ಅಲ್ಲಿಗೆ ಮೊದಲನೆಯವನು ತಾಮ್ರವನ್ನು ತೆಗೆದುಕೊಂಡು ಹಿಂದಿರುಗಿದನು. ಇನ್ನು ಉಳಿದ ಮೂವರು ಮುಂದೆ ಸಾಗಿದರು. ಮತ್ತೊಬ್ಬನ ಕೈಯಲ್ಲಿದ್ದ ಬತ್ತಿಯು ಬಿದ್ದಿತು. ಅವನು ಭೂಮಿಯನ್ನು ಅಗೆದು ನೋಡಿದಾಗ ಬೆಳ್ಳಿಮಯ ಆಗಿತ್ತು. ಉಳಿದಿಬ್ಬರು ಹಿಂದೆ ಭೂಮಿ ತಾಮ್ರಮಯ ಆಗಿತ್ತು, ಅನಂತರ ಬೆಳ್ಳಿಯಿಂದ ಕೂಡಿತ್ತು, ಮುಂದೆ ಖಂಡಿತವಾಗಿಯೂ ಚಿನ್ನಮಯವಾಗಿರಬಹುದೆಂದು ಊಹಿಸುತ್ತಾ, ಮುನ್ನಡೆದರು.ಹಾಗೆ ಮುಂದೆ ಸಾಗುತ್ತಿದ್ದಾಗ ಇನ್ನೊಬ್ಬನ ಬತ್ತಿಯು ಬಿದ್ದಿತು. ಅವನು ಭೂಮಿಯನ್ನು ಅಗೆದು ನೋಡಿದಾಗ ಚಿನ್ನಮಯವಾಗಿತ್ತು. ಅವನು ಖುಷಿಯಾಗಿ ಚಿನ್ನವನ್ನು ತೆಗೆದುಕೊಂಡು ಹಿಂದಿರುಗಿದನು. ಕೊನೆಯಲ್ಲಿ ಉಳಿದವನೊಬ್ಬನು "ಹಿಂದಿನವರೆಲ್ಲಾ ಮೂಢರೆಂದು ಹೇಳಿ ಮೊದಲು ತಾಮ್ರ, ನಂತರ ಬೆಳ್ಳಿ, ಅದರನಂತರ ಚಿನ್ನ, ಇನ್ನು ಮುಂದೆ ನನಗೆ ದೊರಕುವುದು ರತ್ನಗಳೇ." ಎಂದುಕೊಂಡು ಮುಂದೆಹೋಗುತ್ತಾ, ಭಾರವಾಗಿರುವ ಚಿನ್ನದಿಂದೇನುಪ್ರಯೋಜನ? ಎನ್ನುತ್ತಾ ಸಾಗಿದನು. ಅವನು ಏಕಾಂಗಿಯಾಗಿ ಹೋಗುತ್ತಾ, ಸೂರ್ಯನತಾಪದಿಂದ ಬಾಯಾರಿ ಬಳಲಿದವನಾಗಿ ಸಿದ್ಧಿಮಾರ್ಗವನ್ನು ಬಿಟ್ಟು ಅಲ್ಲಲ್ಲಿ ಅಲೆಯತೊಡಗಿದನು.

ಒಂದು ಮಾತಿದೆ:- प्रयत्ने समके केचिदेव स्युः फलभागिनः ।

क्षीरोदमथनाद्देवैरमृतं प्रापि नासुरैः ॥[26]

---

**26. ಸುಭಾಷಿತಮಂಜರೀ,** ಶ್ಲೋ-537,ಪು-498,ಸುಭಾಷಿತರತ್ನಭಾಂಡಾಗಾರ.(2001) ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18.

ಅಂದರೆ ಸಮಸಮವಾಗಿಯೇ ಪ್ರಯತ್ನಮಾಡಿದರೂ ಕೆಲವರಿಗೆ ಮಾತ್ರ ಫಲ ಲಭಿಸುತ್ತದೆ. ಕ್ಷೀರಸಮುದ್ರವನ್ನು ಕಡೆದಾಗ ದೇವತೆಗಳಿಗೇ ಅಮೃತ ದೊರೆಯಿತು. ರಾಕ್ಷಸರಿಗೆ ದೊರಕಲೇ ಇಲ್ಲ. ಅದು ಅವರವರ ಲಭ್ಯವೇ ಹೊರತು ದುರಾಸೆಯಂತಲ್ಲ.

ಆ ಸಂದರ್ಭದಲ್ಲಿ ಒಂದು ಸ್ಥಳದಲ್ಲಿ ಮೈಯೆಲ್ಲಾ ರಕ್ತಸಿಕ್ತನಾದ, ತಲೆಯಲ್ಲಿ ತಿರುಗುತ್ತಿರುವ ಚಕ್ರವನ್ನು ಹೊತ್ತಿರುವ ಮನುಷ್ಯನನ್ನು ನೋಡಿದನು." ಎಲೈ ಯಾರು ನೀನು? ಇದೇನು ತಿರುಗುತ್ತಿರುವ ಚಕ್ರವು ನಿನ್ನ ತಲೆಯ ಮೇಲೆ? ಇಲ್ಲೆಲ್ಲಾದರೂ ನೀರು ಸಿಗುವುದೇ? ಎಂದು ವಿಚಾರಿಸುವಷ್ಟರಲ್ಲಿ ಆ ವ್ಯಕ್ತಿಯ ತಲೆಯಮೇಲಿದ್ದ ಚಕ್ರವು ಬ್ರಾಹ್ಮಣನ ತಲೆಗೆ ಬಂದು ಸೇರಿತು. ಅದೂ ಬಹಳ ಭಾರ ಹಾಗೂ ತಲೆಯಿಂದ ಯಾವಾಗ ಇಳಿಯುವುದೋ ಎನ್ನುವಷ್ಟು ನೋವನ್ನುಂಟುಮಾಡಿತು. ಇದರ ಬಿಡುಗಡೆ ಹೇಗೆಂದು ವಿಚಾರಿಸಲಾಗಿ, ಮತ್ತೊಬ್ಬ ಯಾರಾದರೂ ಸಿದ್ಧಿಬತ್ತಿಯನ್ನು ಹಿಡಿದುಕೊಂಡು ಬಂದು ಮಾತನಾಡಿಸಿದರೆ, ಆ ಚಕ್ರವು ಅವನ ತಲೆಗೆ ಹೋಗಿ ಸೇರುತ್ತದೆಂದು ಹಿಂದಿನ ವೃತ್ತಾಂತವೆಲ್ಲಾ ತಿಳಿಯಿತು.[27]

ಈ ಕಥೆಯಲ್ಲಿನ ನೀತಿಯೆಂದರೆ, "ವಿದ್ಯಾವಂತನಾದರೂ, ಕುಲೀನನಾದರೂ ಇವನು ಅಂದರೆ ಕೊನೆಯವನು ಬುದ್ಧಿಯಿಲ್ಲದವನು." ಒಂದು ಉಕ್ತಿ ಹೀಗಿದೆ:-

वरं बुद्धिर्न सा विद्या विद्याया बुद्धिरुत्तमा ।

बुद्धिहीना विनश्यन्ति यथा ते सिंहकारकाः ॥[28]

ಬುದ್ಧಿಯೇ ಶ್ರೇಷ್ಠ, ವಿದ್ಯೆಯಲ್ಲ. ವಿದ್ಯೆಗಿಂತ ಬುದ್ಧಿಯೇ ಉತ್ತಮ. ಸಿಂಹಕ್ಕೆ ಜೀವವನ್ನು ಕೊಟ್ಟವರಂತೆ ಬುದ್ಧಿಹೀನರು ನಾಶವಾಗುತ್ತಾರೆ. ಇದನ್ನು ಕೇಳಿ ಚಕ್ರಧರನು ಅದು ಹೇಗೆಂದೆನಲು ಸುವರ್ಣ ಸಿದ್ಧಿಯು **"ಸಿಂಹವನ್ನು ಜೀವಂತಗೊಳಿಸಿದ ಮೂರ್ಖ ಬ್ರಾಹ್ಮಣರ ಕಥೆ"**ಯನ್ನು ಹೇಳುತ್ತಾನೆ. ಈ ಒಂದು ಕಥೆಯಲ್ಲಿ ಶಾಸ್ತ್ರಗಳಲ್ಲಿ ಕುಶಲರಾಗಿದ್ದರೂ, ಲೋಕವ್ಯವಹಾರವನ್ನು ತಿಳಿಯದ ಮೂರ್ಖ ಪಂಡಿತರು ಹೇಗೆ ಅಪಹಾಸ್ಯಕ್ಕೊಳಗಾಗುತ್ತಾರೆ ಎಂಬ ಉತ್ತಮ ನಿದರ್ಶನವನ್ನು ನಿರೂಪಿಸಲಾಗಿದೆ. ವಿದ್ಯೆಯ ಪರೀಕ್ಷೆಯನ್ನು ಮಾಡಲು ಹೋಗಿ, ಮೂವರು ಮೂರ್ಖ ಬ್ರಾಹ್ಮಣರೂ ಯಾವುದೋ ಒಂದು ಸತ್ತ ಪ್ರಾಣಿಯ ಮೂಳೆಗಳನ್ನು ನೋಡಿ, ಅದಕ್ಕೆ ಜೀವ ತುಂಬಿಸುವುದೆಂದು ಯೋಚಿಸಿ, ಒಬ್ಬೊಬ್ಬರು ಒಂದೊಂದು ಕೆಲಸ – ಒಬ್ಬನು ಉತ್ಸಾಹದಿಂದ ಮೂಳೆಯನ್ನು ಜೋಡಿಸಿದನು; ಮತ್ತೊಬ್ಬನು ಚರ್ಮ, ರಕ್ತ ಮಾಂಸಗಳನ್ನು ತುಂಬಿಸಿದನು;

---

27. **ಭರತ ಬಿ ರಾವ್,** ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ,(2018) ಪು-261-265, ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ,44/1, ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು-560004
28. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ-ಶ್ಲೋ-36, ಪು-734, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಮೂರನೆಯವನು ಅದಕ್ಕೆ ಪ್ರಾಣ ಕೊಡಲು ಸಿದ್ಧನಾದನು. ಅಷ್ಟರಲ್ಲಿ ಒಬ್ಬನು ಅಂದರೆ ಸುಬುದ್ಧಿಯು ಹೇಳುತ್ತಾನೆ-" ತಡೆಯಿರಿ. ನೀವೆಲ್ಲರೂ ಸಿಂಹವನ್ನು ಜೀವಂತಗೊಳಿಸುತ್ತಿದ್ದೀರಿ. ಅದು ಎಲ್ಲರನ್ನೂ ಕೊಂದುಬಿಡುತ್ತದೆ. ಆಗ ಮೂರನೆಯವನು ಹೇಳುತ್ತಾನೆ – ಮೂರ್ಖನಾದ ನಿನಗೆ ಧಿಕ್ಕಾರ ! ನಾನು ನನ್ನ ವಿದ್ಯೆಯನ್ನು ವ್ಯರ್ಥ ಮಾಡುವುದಿಲ್ಲ. ಆಗ ಸುಬುದ್ಧಿ ಹೀಗೆಂದು "ಒಂದು ಕ್ಷಣ ತಡೆ, ನಾನು ಮರವನ್ನು ಹತ್ತುತ್ತೇನೆ ಎಂದು ಏರಿಬಿಟ್ಟನು. ಆನಂತರ ಸಿಂಹಕ್ಕೆ ಜೀವವನ್ನು ಕೊಟ್ಟದ್ದಾಯಿತು. ಸಿಂಹವು ಎದ್ದದ್ದೂ ಆಯಿತು, ಮೂವರು ಬ್ರಾಹ್ಮಣರನ್ನು ಕೊಂದದ್ದೂ ಆಯಿತು. ಸುಬುದ್ಧಿಯು ಇಳಿದು ಮನೆಗೆ ಹೊರಟನು.[29]

ಕಥೆಯನ್ನು ಮುಗಿಸಿದ ಸುವರ್ಣಸಿದ್ಧಿಯು ಹೀಗೆ ಹೇಳುತ್ತಾ, ಸ್ಪಷ್ಟೀಕರಣ ಕೊಡುತ್ತಾನೆ.

अपि शास्त्रेषु कुशला लोकाचारविवर्जिताः ।

सर्वे ते हास्यतां यान्ति यथा ते मूर्खपण्डिताः ॥[30]

ಆದ್ದರಿಂದಲೇ ನಾನು ಬುದ್ಧಿಯೇ ಶ್ರೇಷ್ಠ, ವಿದ್ಯೆಯಲ್ಲ ಎಂದು ಹೇಳಿದ್ದು. ಅಲ್ಲದೆ ಶಾಸ್ತ್ರಗಳಲ್ಲಿ ಕುಶಲರಾದ ಆದರೆ ಲೋಕವ್ಯವಹಾರವನ್ನು ತಿಳಿಯದ ಮೂರ್ಖಪಂಡಿತರಂತೆ ಅಪಹಾಸ್ಯಕ್ಕೊಳಗಾಗುತ್ತಾರೆ. ಎಂದನು ಮುಂದೆ ಚಕ್ರಧರನು ಅದೇನೆಂದು ಕೇಳಲು ಸುವರ್ಣಸಿದ್ಧಿಯು ಇದಕ್ಕೆ ಲಗತ್ತಾದ ಮತ್ತೊಂದು ಕಥೆಯನ್ನು ಹೇಳುತ್ತಾನೆ. ಅದೇ **ನಾಲ್ಕು ಮೂರ್ಖಪಂಡಿತರ ಕಥೆ**. ಲೋಕವ್ಯವಹಾರ ಮತ್ತು ಸಾಮಾನ್ಯಜ್ಞಾನ ಇಲ್ಲದೆ, ಶಾಸ್ತ್ರದಲ್ಲಿ ಎಷ್ಟೇ ಪಾಂಡಿತ್ಯ ಪಡೆದಿದ್ದರೂ, ಎಷ್ಟೇ ವಿದ್ಯಾವಂತನಾಗಿದ್ದರೂ, ಕುಲೀನನಾದರೂ ಬುದ್ಧಿಯಿಲ್ಲದೆ ಮೂರ್ಖರಾಗಿ ಅಪಹಾಸ್ಯಕ್ಕೆ ಒಳಗಾಗುತ್ತಾರೆ. ಎಂಬ ವಿಚಾರವನ್ನು ಬಹಳ ಸ್ವಾರಸ್ಯಕರವಾಗಿ ನಾಲ್ಕು ಮೂರ್ಖ ಪಂಡಿತರು ಹಸಿವಿನಿಂದ ಬಳಲಿ ಅಪಹಾಸ್ಯಕ್ಕೆ ಗುರಿಯಾಗಿ ತಮ್ಮ ದೇಶಕ್ಕೆ ಹಿಂದಿರುಗಿದ ಬಗ್ಗೆ ತಿಳಿಸುತ್ತಾ, ರಾಜಕುಮಾರರಲ್ಲಿ ವಿಶೇಷ ಜಾಗೃತಿಯನ್ನು ಮೂಡಿಸಿರುವುದು ಐದನೇ ತಂತ್ರದ ಮೂಲ ಉದ್ದೇಶವಾಗಿದೆ.

ಶೈಕ್ಷಣಿಕ ಮನೋವಿಜ್ಞಾನದ ಉದ್ದೇಶವೂ ಸಹ ಶಿಕ್ಷಣದಲ್ಲಿ ಕೇವಲ ಪಠ್ಯಕ್ರಮದಲ್ಲಿರುವಷ್ಟನ್ನೇ ಬೋಧನೆ ಮಾಡಿ ವಿದ್ಯಾವಂತರನ್ನಾಗಿ ಮಾಡಿದರೆ ಸಾಲದು. "ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ ಅಂದರೆ ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ, ಭಾವನಾತ್ಮಕವಾಗಿ ಮತ್ತು ನೈತಿಕವಾಗಿ ಸಮರ್ಥರನ್ನಾಗಿಸುವುದೇ ಶಿಕ್ಷಣ" ಎಂದಿದ್ದಾರೆ ಮಹಾತ್ಮಾ ಗಾಂಧೀಜಿಯವರು." ಜೀವನದಲ್ಲಿ ನಡೆಯುವ

29. **ಭರತ ಬಿ ರಾವ್,** ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತಂ-5, ಪು-265-266, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು-560004

30. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ-ಶ್ಲೋ-39, ಪು-738, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಎಲ್ಲಾ ಘಟನೆಗಳ ಪುನರ್ ಪರಿಶೀಲನೆಯೇ ಶಿಕ್ಷಣ ಎಂದಿದ್ದಾರೆ ಜಾನ್ ಡ್ಯೂಯಿ. ಅದರಂತೆಯೇ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಪರಿಸರ ಹಾಗೂ ಅನುವಂಶೀಯತೆಯ ಲಕ್ಷಣಗಳನ್ನು ಸನ್ನಿವೇಶಗಳ ಅವಶ್ಯಕತೆಗೆ ತಕ್ಕಂತೆ ಹೇಗೆ ವಿದ್ಯಾ – ಬುದ್ಧಿಯ ಪರಿಪಕ್ವತೆಯನ್ನು ಪಡೆಯಲು ಉಪಯೋಗಿಸಿಕೊಳ್ಳಬಹುದು ಎಂಬೆಲ್ಲ ಸಾಮಾನ್ಯ ಜ್ಞಾನವನ್ನು ಒದಗಿಸುವುದೂ ಶಿಕ್ಷಣದ ಜವಾಬ್ದಾರಿಯಾಗಿರುತ್ತದೆ. ಪಂಚತಂತ್ರದಲ್ಲಿ ವಿಷ್ಣುಶರ್ಮರು ಇದೆಲ್ಲವನ್ನೂ ಅತ್ಯಂತ ವ್ಯವಸ್ಥಿತವಾಗಿ ವಿವಿಧ ಸಣ್ಣ ಸಣ್ಣ ಕಥೆಗಳ ಮೂಲಕ ಮಹತ್ವಪೂರ್ಣ ವಿಚಾರಗಳನ್ನು ರಾಜಕುಮಾರರಿಗೆ ತಿಳಿಸುತ್ತಾ, ಅವರ ಸರ್ವತೋಮುಖ ಬೆಳವಣಿಗೆಗೆ ಬಹಳ ಚೆನ್ನಾಗಿ ಪ್ರೋತ್ಸಾಹಿಸಿದ್ದಾರೆ.

ಕಲಿವನ್ನು ಪರಿಣಾಮಗೊಳಿಸತಕ್ಕ ಅಂಶಗಳನ್ನು ಶಿಕ್ಷಣ ಮನೋವಿಜ್ಞಾನವು ಸ್ಪಷ್ಟಪಡಿಸುತ್ತಾ, ಯಾವುದನ್ನೇ ಕಲಿಯುತ್ತಿರಲಿ, ಕಲಿವು ಕೇವಲ ಅದೊಂದೇ ಕ್ಷೇತ್ರಕ್ಕಲ್ಲ. ಇಡೀ ಜೀವನಕ್ಕೆ ಎಂಬ ಭಾವನೆಯನ್ನು ಮಕ್ಕಳಲ್ಲಿ ಬೆಳೆಸಬೇಕು. ಅಂದರೆ ಮಾಡುವ ಪಾಠದ ವೈಶಾಲ್ಯ – ವ್ಯಾಪ್ತಿ, ಅರ್ಥ, ಉದ್ದೇಶಗಳನ್ನು ಸೂಚಿಸಬೇಕು. ಜೀವನದ ಅವಶ್ಯಕತೆಗಳ ಹಿನ್ನೆಲೆಯಲ್ಲಿ ಆ ವಿಷಯಗಳನ್ನು ಪರಿಶೀಲಿಸಬೇಕು. ಜ್ಞಾನವನ್ನು ಜೀವನದ ಬೆಳಕಿನಲ್ಲಿ ಬೋಧಿಸಬೇಕು ಎಂದು ಸೂಚಿಸುತ್ತದೆ.[31] ಪಂಚತಂತ್ರದ ಕಥೆಗಳಲ್ಲಿ ಈ ಹಿನ್ನೆಲೆಯಲ್ಲಿಯೇ ರಾಜಕುಮಾರರಿಗೆ ನೀತಿಶಾಸ್ತ್ರ, ರಾಜನೀತಿ ಶಿಕ್ಷಣ, ನಾಯಕತ್ವದ ಲಕ್ಷಣಗಳು, ದುರಾಸೆಯೆಂಬ ದುರ್ಗುಣದ ಪರಿಣಾಮ, ಯೋಚಿಸದೆ ಕೆಲಸಮಾಡುವುದು, ಬುದ್ಧಿಶಕ್ತಿಯ ಪ್ರಾಮುಖ್ಯತೆ, ಹೇಳುವ ವಿಷಯ ಕಲಿಯುವವರಿಗೆ ಅರ್ಥಪೂರ್ಣವಾಗಿರಬೇಕು, ಕಲಿಯುವ ಪ್ರಮಾಣ ತಕ್ಕಷ್ಟಿರಬೇಕು, ಕಲಿವನ್ನು ಔಚಿತ್ಯವನ್ನರಿತು ಅಗತ್ಯವಾದಷ್ಟು ಕಾಲಕ್ಕೆ ಹರಡಿಕೊಳ್ಳುವುದು, ಇತ್ಯಾದಿ ಅನೇಕ ಶೈಕ್ಷಣಿಕ ಮನೋವಿಜ್ಞಾನ ಕ್ರಮಗಳನ್ನು ಪಂಚತಂತ್ರದಲ್ಲಿ ಕಾಣಬಹುದು. ಒಬ್ಬ ಪ್ರತಿಭಾವಂತ ಬೋಧಕ, ಸಕಲಶಾಸ್ತ್ರಪಾರಂಗತರೂ ಆದಂತಹವರಿಗೆ ಮನೋವೈಜ್ಞಾನಿಕ ಕ್ರಮಗಳು ದೈವದತ್ತವಾಗಿಯೇ ಉಪದೇಶಿಸಲ್ಪಟ್ಟಿರುತ್ತದೆ ಎಂಬುದಕ್ಕೆ ವಿಷ್ಣುಶರ್ಮರೇ ಸಾಕ್ಷಿಯಾಗಿದ್ದಾರೆ. ಹಾಗೆಯೇ ಅವರು ರಚಿಸಿದ "ವ್ಯಕ್ತಿತ್ವ ವಿಕಸನ ಮಾರ್ಗದರ್ಶೀ ಕೈಪಿಡಿ" ಎಂಬುದಕ್ಕೆ ಪಂಚತಂತ್ರವೇ ನಿದರ್ಶನವಾಗಿದೆ.

ನಾಲ್ಕು ಮೂರ್ಖ ಪಂಡಿತರ ಕಥೆಯನ್ನು ಸುವರ್ಣ ಸಿದ್ಧಿಯು ಮಗಿಸಿದ ನಂತರದಲ್ಲಿ ಚಕ್ರಧರನು ತನ್ನ ದುರವಸ್ಥೆಯ ಕಾರಣವನ್ನು ಹೇಳುತ್ತಾ ದೈವಕೃಪೆಯ ಬಗ್ಗೆ ಅದ್ಭುತವಾದ ಬೋಧನೆಯನ್ನು ಹೀಗೆ ಹೇಳಿದ್ದಾನೆ. "ನನ್ನ ದುರವಸ್ಥೆಗೆ ಸರಿಯಾದ ಕಾರಣವೆಂದರೆ ದೈವವು ಪ್ರತಿಕೂಲವಾಗಿದ್ದಲ್ಲಿ ಅತಿ ಬುದ್ಧಿವಂತರೂ ನಾಶವಾಗಿ ಹೋಗುವರು. ದೈವವು ಅನುಕೂಲವಾಗಿದ್ದಲ್ಲಿ ಮಂದಬುದ್ಧಿಯವರೂ ಕೂಡ ಅಲ್ಲೇ ಯಾವಾಗಲೂ

---

31. **ವೀರಪ್ಪ. ಎನ್.ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–12, ಪು – 241, 1962. ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

ಆನಂದದಿಂದಿರುವರು. ರಕ್ಷಣೆಯಿಲ್ಲದವನು ದೈವರಕ್ಷಣೆಯಿದ್ದರೆ ಬದುಕುತ್ತಾನೆ. ಉತ್ತಮ ರಕ್ಷಣೆಯಿದ್ದವನು ದೈವಕೃಪೆಯಿಲ್ಲದಿದ್ದರೆ ನಾಶವಾಗುತ್ತಾನೆ. ಕಾಡಿನಲ್ಲಿ ಬಿಟ್ಟ ಅನಾಥನು ದೈವಕೃಪೆಯಿಂದ ಬದುಕುತ್ತಾನೆ. ದೈವಕೃಪೆಯಿಲ್ಲದಿದ್ದಾಗ ಎಷ್ಟೇ ಪ್ರಯತ್ನಪಟ್ಟರೂ, ಮನೆಯಲ್ಲಿದ್ದರೂ ಕೂಡ ನಾಶವಾಗುತ್ತಾನೆ. ಒಂದು ಕಥೆಯಲ್ಲಿ ಹೀಗೊಂದು ಉಕ್ತಿಯಿದೆ:-

शतबुद्धिः शिरस्योऽयं लम्भते च सहस्त्रधीः ।

एकबुद्धिरह भद्रे! क्रीडामि विमले जले ॥[32]

"ಭದ್ರೆ, ಶತಬುದ್ಧಿಯು ತಲೆಯಮೇಲಿದ್ದಾನೆ. ಸಹಸ್ರಬುದ್ಧಿಯು ನೇತಾಡುತ್ತಿದ್ದಾನೆ. ಏಕಬುದ್ಧಿಯಾದ ನಾನು ಶುದ್ಧ ನೀರಿನಲ್ಲಿ ಆಡುತ್ತಿದ್ದೇನೆ. ಇದೇನು ಒಗಟಿನಂತೆ ಇದೆಯಲ್ಲಾ ಹೇಗೆ? ಎಂದು ಸುವರ್ಣ ಸಿದ್ಧಿಯು ಕುತೂಹಲದಿಂದ ಕೇಳುತ್ತಾನೆ. ಆಗ ಚಕ್ರಧರನು **ಮೀನು ಮತ್ತು ಕಪ್ಪೆಯ ಕಥೆ**ಯನ್ನು ಹೇಳುತ್ತಾನೆ.

ಒಂದು ಸರೋವರದಲ್ಲಿ ವಾಸವಾಗಿದ್ದ ಶತಬುದ್ಧಿ, ಸಹಸ್ರಬುದ್ಧಿ ಎಂಬ ಎರಡು ಮೀನುಗಳು ಏಕಬುದ್ಧಿ ಎಂಬ ಕಪ್ಪೆಯೊಡನೆ ಸ್ನೇಹ ಬೆಳೆಸಿಕೊಂಡಿದ್ದವು. ಸರೋವರದ ತೀರದಲ್ಲಿ ಸ್ವಲ್ಪ ಕಾಲ ಸುಭಾಷಿತ ಗೋಷ್ಠಿಯನ್ನನುಭವಿಸಿ ಪುನಃ ಸರೋವರಕ್ಕೆ ಹಿಂದಿರುಗುತ್ತಿದ್ದವು. ಒಮ್ಮೆ ಗೋಷ್ಠಿಯನ್ನು ನಡೆಸುತ್ತಿದ್ದಾಗ ಮೀನುಗಾರರು ಅಲ್ಲಿಗೆ ಬಂದು ಸರೋವರವನ್ನು ನೋಡಿ ಪರಸ್ಪರ ಸಮಾಲೋಚನೆ ಮಾಡಿಕೊಂಡು, ಈ ಸರೋವರದಲ್ಲಿ ಅನೇಕ ಮೀನುಗಳಿವೆ. ನಾಳೆ ಬಂದು ವಿಚಾರ ಮಾಡೋಣ ಎಂದು ಹೇಳುತ್ತಾ ತಮ್ಮ ಮನೆಗೆ ನಡೆದರು. ನಂತರ ಮೀನುಗಳಿಗೆ ಈ ವಿಚಾರ ತಿಳಿದು ಬಹಳ ಆತಂಕ ಹಾಗೂ ದುಃಖ ಉಂಟಾಗಿ ಪರಸ್ಪರ ಮಾತನಾಡಿಕೊಂಡವು. ಈ ಸಮಯದಲ್ಲಿ ಕಪ್ಪೆ ಹೇಳಿತು." ಎಲೈ ಶತಬುದ್ಧಿ, ಸಹಸ್ರಬುದ್ಧಿ ಮೀನುಗಾರರ ಮಾತನ್ನು ಕೇಳಿದಿರಲ್ಲಾ? ಈಗ ಏನು ಮಾಡುವುದು? ಇಲ್ಲೇ ನೆಲೆ ನಿಲ್ಲುವುದೋ ಅಥವಾ ಪಲಾಯನ ಮಾಡುವುದೋ ಯಾವುದು ಸರಿ? ತಿಳಿಸಿರಿ ಎಂದು ಸಲಹೆ ಕೋರಿತು.

ಸಹಸ್ರಬುದ್ಧಿಯು ನಕ್ಕು, ಹೆದರಬೇಡ. ಅವರು ಬಂದೇ ಬರುತ್ತಾರೆ ಎಂದು ಅನಿಸುತ್ತಿಲ್ಲ. ಇಷ್ಟರ ಮೇಲೆ ಬಂದರೂ ನನ್ನ ಬುದ್ಧಿ ಬಲದಿಂದ ನಿಮ್ಮನ್ನು ರಕ್ಷಿಸಿಕೊಳ್ಳುವೆನೆಂದಿತು. ಶತಬುದ್ಧಿಯು ಸಹಸ್ರಬುದ್ಧಿ ಹೇಳಿದ್ದು ಸರಿಯೆಂದು ಒಪ್ಪಿ ತಾನೂ ಸಹ ಹೀಗೊಂದು ಉಕ್ತಿಯಿದೆ ಎಂದು ಹೇಳಿತು.

---

32. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ,ಅಪರೀಕ್ಷಿತಕಾರಕ-ಶ್ಲೋ-49, ಪು-748, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

बुद्धेर्बुद्धिमतां लोके नास्त्यगम्यं हि किञ्चन ।

बुद्ध्या यतो हता नन्दाश्चाणक्येनासिपाणयः ॥[33]

ಅಂದರೆ," ಬುದ್ಧಿವಂತರ ಬುದ್ಧಿಗೆ ಸಾಧ್ಯವಾಗದ್ದು ಈ ಲೋಕದಲ್ಲಿ ಏನೂ ಇಲ್ಲ. ಖಡ್ಗಧಾರಿಗಳಾದ ನಂದರನ್ನು ಚಾಣಕ್ಯ ತನ್ನ ಬುದ್ಧಿಶಕ್ತಿಯಿಂದ ಸೋಲಿಸಲಿಲ್ಲವೇ? ಎಲ್ಲಿಗೆ ಸೂರ್ಯನ ಬೆಳಕು ತಲುಪಲಾರದೋ, ಎಲ್ಲಿಗೆ ಗಾಳಿ ತಲುಪಲಾರದೋ ಅಲ್ಲಿಗೂ ಬುದ್ಧಿವಂತರ ಬುದ್ಧಿಯು ವೇಗವಾಗಿ ತಲುಪಬಲ್ಲದು. ಆದ್ದರಿಂದ ಕೇವಲ ಮೀನುಗಾರರ ಮಾತಿನಿಂದ ಪಿತೃಪರಂಪರೆಯಿಂದ ಪ್ರಾಪ್ತವಾದ ಈ ಸ್ಥಳವನ್ನು ಬಿಡುವುದು ಸರಿಯಲ್ಲ. ಮನುಷ್ಯನಿಗೆ ಅನುಕೂಲವಿಲ್ಲದ ಜನ್ಮಸ್ಥಾನದಲ್ಲಿ ಎಂತಹ ಸುಖವು ಪ್ರಾಪ್ತವಾಗುವುದೋ ಅಂತಹ ಸುಖ ಸ್ವರ್ಗದಲ್ಲಿ ದಿವ್ಯಾಂಗನೆಯ ಸ್ಪರ್ಶದಿಂದಲೂ ಸಿಗಲಾರದು. ಆದ್ದರಿಂದ ಎಲ್ಲಿಗೂ ಹೋಗುವುದು ಬೇಡ. ನನ್ನ ಬುದ್ಧಿ ಪ್ರಭಾವದಿಂದ ನಿನ್ನನ್ನು ರಕ್ಷಿಸುವೆನು. ಕಪ್ಪೆಯು ಇದಕ್ಕೆ ಒಪ್ಪದೆ ಹೇಳಿತು "ನನ್ನ ಬುದ್ಧಿ ಪಲಾಯನ ಮಾಡುವುದೊಂದನ್ನೇ ಸೂಚಿಸುತ್ತಿದೆ, ಹೆಂಡತಿಯೊಂದಿಗೆ ಬೇರೆ ಸರೋವರಕ್ಕೆ ಹೋಗುತ್ತೇನೆ" ಎಂದು ಆ ರಾತ್ರಿಯೇ ಹೊರಟುಬಿಟ್ಟಿತು. ಮೀನುಗಾರರು ಬೆಳಗ್ಗೆ ಸರೋವರದ ಹತ್ತಿರ ಬಂದು ಸಣ್ಣ, ಮಧ್ಯಮ ಹಾಗೂ ದೊಡ್ಡ ಮೀನು, ಆಮೆ, ಕಪ್ಪೆ, ಏಡಿ ಮುಂತಾದ ಜಲಚರ ಪ್ರಾಣಿಗಳನ್ನು ಹಿಡಿದೇಬಿಟ್ಟರು. ಶತಬುದ್ಧಿ, ಸಹಸ್ರಬುದ್ಧಿ ಮೀನುಗಳು ತಮ್ಮ ಹೆಂಡತಿಯರೊಡನೆ ಅನೇಕ ವಿಧದಲ್ಲಿ ಈಜಿನಿಂದ ಚಮತ್ಕಾರ ಮಾಡಿ ರಕ್ಷಿಸಿಕೊಂಡರೂ, ಕೊನೆಗೂ ಮೀನುಗಾರರ ಬಲೆಗೆ ಸಿಕ್ಕಿ ಸತ್ತುಹೋದವು. ಮೀನುಗಾರರು ಸಂತೋಷದಿಂದ ಮನೆಕಡೆಗೆ ಹೊರಟರು. ಭಾರವಿರುವ ಶತಬುದ್ಧಿ ಮೀನನ್ನು ಒಬ್ಬ ತಲೆಗೆ ಏರಿಸಿಕೊಂಡನು. ಸಹಸ್ರಬುದ್ಧಿ ಮೀನನ್ನು ನೇತಾಡಿಸಿಕೊಂಡು ಹೊರಟನು. ಸರೋವರದ(ಕಪ್ಪೆ ಹೋಗಿ ಸೇರಿದ್ದ) ಹತ್ತಿರ ನಡೆದುಕೊಂಡು ಹೋಗುತ್ತಿದ್ದಾಗ ಅವರನ್ನು ನೋಡಿದ ಕಪ್ಪೆಯು ತನ್ನ ಹೆಂಡತಿಗೆ ಹೀಗೆ ಹೇಳಿತು. "ಪ್ರಿಯೆ, ನೋಡು, ನೋಡು ಶತಬುದ್ಧಿಯು ತಲೆಯಮೇಲಿದ್ದಾನೆ, ಸಹಸ್ರಬುದ್ಧಿಯು ನೇತಾಡುತ್ತಿದ್ದಾನೆ, ಏಕಬುದ್ಧಿಯಾದ ನಾನು ಶುದ್ಧ ನೀರಿನಲ್ಲಿ ಆಡುತ್ತಿದ್ದೇನೆ" ಎಂದು. ಚಕ್ರಧರನು ಇದರೊಂದಿಗೆ ಕಥೆಯನ್ನು ಮುಗಿಸಿದನು. ಬುದ್ಧಿಯೇ ವಿದ್ಯೆಗಿಂತ ಶ್ರೇಷ್ಠ ಎಂದು ಈಗಾಗಲೇ ಹೇಳಿದ್ದರ ಬಗ್ಗೆ ನನ್ನ ಅಭಿಪ್ರಾಯ ಹೀಗಿದೆ-" ಕೇವಲ ಬುದ್ಧಿಯಿಂದ ಕಾರ್ಯಸಾಧನವಾಗುತ್ತದೆಂದು ಹೇಳಲಾಗುವುದಿಲ್ಲ ಎಂದು ಮುಂದುವರಿಸಿದನು.[34]

---

33 **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ-ಶ್ಲೋ-46, ಪು-746, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

34 **ಭರತ ಬಿ. ರಾವ್, ಪಂಚತಂತ್ರ,** ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತಂ-5, ಪು-270-272, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1.ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು-560004

ಇದನ್ನು ಕೇಳಿದ ಸುವರ್ಣಸಿದ್ಧಿಯು– "ಹೌದು ಹಾಗಿದ್ದರೂ ಕೂಡ ಮಿತ್ರ ಹೇಳಿದ್ದನ್ನು ಪಾಲಿಸದೇ ಇರಬಾರದು. ಆದರೇನು ಮಾಡುವುದು? ನಾನು ತಡೆದರೂ ಲೋಭದಿಂದ, ವಿದ್ಯೆಯ ಅಹಂಕಾರದಿಂದ ನೀನು ನಿಲ್ಲಲಿಲ್ಲ." ಇದರ ಬಗ್ಗೆ ಹೀಗೊಂದು ಉಕ್ತಿಯಿದೆ:–

साधु मातुल! गीतेन मया प्रोक्तोऽपि न स्थितः ।

अपूर्वोऽयं मणिर्बद्धः सम्प्राप्तं गीतलक्षणम् ॥[35]

"ಆಗಲಿ ಮಾಮ, ನಾನು ಹಾಡಬೇಡ ಎಂದರೂ ಕೇಳಲಿಲ್ಲ. ಈಗ ನಿನ್ನ ಹಾಡಿನ ಪುರಸ್ಕಾರವಾಗಿ ಈ ಅಪೂರ್ವವಾದ ಮಣಿಯು ನಿನ್ನ ಕುತ್ತಿಗೆಗೆ ಕಟ್ಟಲ್ಪಟ್ಟಿದೆ" ಎಂದು ಹೇಳುತ್ತಾ, ಮುಂದೆ ಚಕ್ರಧರನಿಗೆ **ಹಾಡುವ ಕತ್ತೆ ಹಾಗೂ ನರಿಯ ಕಥೆ**ಯನ್ನು ಹೇಳಿದನು. ಈ ಸ್ವಾರಸ್ಯಕರ ಕಥೆಯಲ್ಲಿ ಉದ್ಧತ ಎಂಬ ಕತ್ತೆಯು ತನ್ನ ದಪ್ಪಗಿರುವ ದೇಹದ ಸಹಾಯದಿಂದ ಸೌತೇಕಾಯಿ ಹೊಲದ ಬೇಲಿಯನ್ನು ಮುರಿದು ಒಳಗೆ ನುಗ್ಗಿ ಸ್ನೇಹಿತನಾದ ನರಿಯೊಂದಿಗೆ ಬೇಕಾದಷ್ಟು ಸೌತೆಕಾಯಿಗಳನ್ನು ತಿಂದು ಮುಂಜಾನೆಯ ಹೊತ್ತಿಗೆ ಸ್ವಸ್ಥಾನಕ್ಕೆ ವಾಪಸ್ಸಾಗುತ್ತಿತ್ತು. ಒಮ್ಮೆ ಮದೋನ್ಮತ್ತನಾಗಿ ಆ ಕತ್ತೆಯು ನರಿಗೆ ಹೇಳುತ್ತಾ, "ರಾತ್ರಿ ನಿರ್ಮಲವಾಗಿದೆ. ನಾನು ಹಾಡಬೇಕೆಂದಿದ್ದೇನೆ. ನಾನು ಹಾಡುವ ರಾಗವನ್ನು ನೀನು ಪತ್ತೆಮಾಡಿ ಹೇಳು" ಎಂದಿತು. ಅದಕ್ಕೆ ನರಿಯು ಬಹಳಷ್ಟು ನೀತಿಬೋಧೆಯನ್ನು ಹೇಳಿ ಕತ್ತೆಗೆ ಹಾಡುವುದು ಬೇಡ, ಹಾಡಿ ಸುಮ್ಮನೆ ಅನರ್ಥಕ್ಕೆ ದಾರಿಮಾಡಿಕೊಳ್ಳಬೇಡ ಎಂದು ಎಚ್ಚರಿಸಿತು. ಕ್ಷೇತ್ರಪಾಲಕರು ಬಂದರೆ ಸಾಯಿಸಿಬಿಡುವರು ಎಂದಿತು.

सकृत्कन्दुकपातेन पतत्यार्यः पतन्नपि ।

तथा पतति मूर्खस्तु मृतपिण्डपतनं यथा ॥[36]

ಮಹಾಪುರುಷನು ಒಂದು ವೇಳೆ ಅಕಸ್ಮಾತ್ ಬಿದ್ದರೂ ಚೆಂಡಿನಂತೆ ಬೀಳುತ್ತಾನೆ. ಮತ್ತೆ ಚೇತರಿಸಿಕೊಂಡು ಮೊದಲಿಗಿಂತ ಉನ್ನತ ರೀತಿಯಲ್ಲಿ ನಡೆಯುತ್ತಾನೆ. ಆದರೆ ಮೂರ್ಖನು ಮಣ್ಣಿನ ಮುದ್ದೆಯು ಬೀಳುವಂತೆ ಮತ್ತೇಳದಂತೆ ಬೀಳುತ್ತಾನೆ. (ಕತ್ತೆಯ ಕಥೆಯೂ ಇದೇ ಆಯಿತು.)

---

35. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ–ಶ್ಲೋ–50, ಪು–749, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

36. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಂ, ದ್ವಿ.ತಂ.,ಶ್ಲೋ––165,ಪು–412, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಅದಕ್ಕೆ ಪ್ರತಿಯಾಗಿ ಕತ್ತೆಯು ವೇದದ ಸಾರಭೂತವಾದ ಸಂಗೀತ ಶಾಸ್ತ್ರದಲ್ಲಿ 185 ಗೀತೆಗಳ ಅಂಗಗಳನ್ನು ಹಿಂದೆ ಭರತಮುನಿಯೇ ತಿಳಿಸಿದ್ದಾನೆ. ಲೋಕದಲ್ಲಿ ಸಂಗೀತಕ್ಕಿಂತ ಪ್ರಿಯವಾದುದು ದೇವರಿಗೆ ಯಾವುದೂ ಇಲ್ಲ. ರಾವಣನು ತಪಸ್ಸಿನಿಂದ ಒಣಗಿದ ತನ್ನ ಕಂಠದ ನೀರಸ ಧ್ವನಿಯಿಂದ ಶಂಕರನನ್ನು ಪ್ರಸನ್ನಗೊಳಿಸಿದನು. ಆದ್ದರಿಂದ ನಾನು ಹಾಡೇ ಹಾಡುತ್ತೇನೆ. ಇಷ್ಟೇ ಅಲ್ಲದೆ ನರಿಗೆ ಯಾವುದೇ ಸಂಗೀತ ಜ್ಞಾನವಿಲ್ಲವೆಂದೂ, ಅದರ ಬೆಲೆಯೇನೆಂಬುದು ಗೊತ್ತೇ ಇಲ್ಲವೆಂದೂ ಮೂದಲಿಸಿತು. ನಂತರ ಗೀತೆಯ ಭೇದಗಳನ್ನು ವಿವರಿಸಿತು.[37] ಇಲ್ಲೊಂದು ವಿಶೇಷ ತಂತ್ರಗಾರಿಕೆಯನ್ನು ಉಪಯೋಗಿಸಿ, ವಿಷ್ಣುಶರ್ಮರು ಸಂಗೀತ ಶಿಕ್ಷಣವನ್ನೂ ಪರಿಚಯಿಸಿದ್ದಾರೆ. ಅದರಲ್ಲೂ ಗರ್ದಭಕಂಠದ ಪ್ರಾಣಿಯು ಸಂಗೀತವನ್ನು ಹೇಳಲು ಬಯಸುವುದು, ಸಂಗೀತಶಾಸ್ತ್ರದ ವಿವರಗಳನ್ನು ತಿಳಿಸುವುದು ಒಂದು ವಿಶೇಷತೆ. ಇದು ಅರಸುಕುಮಾರರಿಗೆ ಒಂದು ಹೊಸ ವಿಷಯದ ಬಗ್ಗೆ ಆಸಕ್ತಿಯನ್ನು ಪ್ರೇರೇಪಿಸಲು ಹಾಗೂ ಮನರಂಜನಾತ್ಮಕವಾಗಿ ವಿಚಾರವನ್ನು ತಿಳಿದುಕೊಳ್ಳಲು ಅನುವು ಮಾಡಿಕೊಟ್ಟಿದ್ದಾರೆ. ಈ ಸಂದರ್ಭದಲ್ಲಿ ಒಂದು ಶ್ಲೋಕವು ಹೀಗೆ ಹೇಳುವುದನ್ನು ಸ್ಮರಿಸಿಕೊಳ್ಳಬಹುದು.

उष्ट्राणां च विवाहेषु गीतं गायन्ति गर्दभाः ।

परस्परं प्रशंसन्ति अहो रूपमहो ध्वनिः ॥[38]

ಅಂದರೆ ಒಂಟೆಗಳ ಮದುವೆಗಳಲ್ಲಿ ಕತ್ತೆಗಳು ಸಂಗೀತ ಹಾಡುತ್ತವೆ. ಪರಸ್ಪರ ಹೀಗೆ ಹೊಗಳಿಕೊಳ್ಳುತ್ತವೆ. “ಆಹಾ ಏನು ರೂಪ ! ಆಹಾ ಎಷ್ಟು ಇಂಪಾದ ಧ್ವನಿ !!!”

ಹೀಗೆ ಹಾಡುವ ಕತ್ತೆ ಹಾಗೂ ನರಿಯ ಕಥೆಯ ತಂತ್ರಗಾರಿಕೆ ಬಹಳ ಸೊಗಸಾಗಿದೆ. ಇದು ಪ್ರತಿಭಾವಂತ ಶಿಕ್ಷಕರ ಬೋಧನಾ ಕೌಶಲ್ಯವಾಗಿದೆ. ಇದು ಇತ್ತೀಚಿನ ಹೊಸ ಶಿಕ್ಷಣ ನೀತಿ 2020ರಲ್ಲಿ ಕಂಡುಬರುವ **“Holistic and Multidisciplinary education”** ಸಮಗ್ರ ಹಾಗೂ ಬಹುವಿಷಯಗಳ ಅಥವಾ ವಿವಿಧ ಕೌಶಲ್ಯಗಳ ಕಲಿಕಾ ನೀತಿಗೆ ಹತ್ತಿರವಾಗಿದೆ.

---

37. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ,ಅಪರೀಕ್ಷಿತಕಾರಕ– ಪು–749–754, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
38. **ಸುಭಾಷಿತಮಂಜರೀ,** ಸಾಮಾನ್ಯ ನೀತಿ– ಶ್ಲೋ–86,ಪು–390,ಸಮಯೋಚಿತರಪದ್ಯಮಾಲಿಕಾ.(2001) ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು–18

सप्त स्वरास्त्रयो ग्रामा मूर्च्छनाश्चैकविंशतिः ।

तालास्त्वेकोनपञ्चाशत् तिस्रो मात्रा लयास्त्रयः ॥

स्थानत्रयं यतीनाञ्च षडास्यानि रसा नव ।

रागाः षड्त्रिंशतिर्भावाश्चत्वारिंशत् ततः स्मृताः ॥

पञ्चशीत्यधिकं ह्येतद्गीताङ्गानां शतं स्मृतम् ।

स्वयमेव पुरा प्रोक्तं भरतेन श्रुतेः परम् ॥

नान्यद्गीतात् प्रियं लोके देवानामपि दृश्यते ।

शुष्कस्नायुस्वराह्लादात् त्र्यक्षं जग्राह रावणः ॥[39]

ಸಂಗೀತಶಾಸ್ತ್ರದಲ್ಲಿ:-

**ಸ್ವರಗಳು**- 7 - ನಿಷಾದ, ಋಷಭ, ಗಾಂಧಾರ, ಷಡ್ಜ, ಮಧ್ಯಮ, ಧೈವತ ಮತ್ತು ಪಂಚಮ.

**ಗ್ರಾಮಗಳು**- 3 - ಷಡ್ಜ, ಮಧ್ಯಮ, ನಿಷಾದ.

**ಮೂರ್ಚ್ಛನೆಗಳು**- 21 - ಸ್ವರಗಳ ಆರೋಹಣ, ಅವರೋಹಣ, ಕ್ರಮಭೇದ.

**ತಾಳಗಳು**- 49 - ಮಾತ್ರೆಗಳು - 3, ಲಯಗಳು - 3 ಸ್ಥಾನಗಳು - 3 - ಉದಾತ್ತ, ಸ್ವರಿತ.

**ಯತಿಗಳು**- 5 - ವಿರಾಮಸ್ಥಾನಗಳು. ಆಸ್ಯಗಳು-6-ಮುಖಗಳು

**ರಸಗಳು**- 9 - ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ ಮತ್ತು ಶಾಂತ.

**ರಾಗಗಳು**- 36- ಭಾವಗಳು - 40.

ಹೀಗೆ ವೇದದ ಸಾರಭೂತವಾದ ಸಂಗೀತಶಾಸ್ತ್ರದಲ್ಲಿ 185 ಗೀತೆಗಳ ಅಂಗಗಳನ್ನು ಭರತಮುನಿ ತಿಳಿಸಿದ್ದಾರೆ. ಸಂಗೀತವು ಲೋಕಪ್ರಿಯ. ದೇವಾನುದೇವತೆಗಳೂ ಸಹ ಸಂಗೀತಕ್ಕೆ ಮನಸೋತಿದ್ದಾರೆ.

39. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ- ಶ್ಲೋ-53ರಿಂದ 56, ಪು-752,753,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಅದಕ್ಕೇ ಹೇಳುವುದು ಸಂಗೀತಕ್ಕೆ ಮನಸೋಲದವರುಂಟೆ !! ರಾವಣನು ತಪಸ್ಸಿನಿಂದ ತನ್ನ ಕಂಠದಿಂದ ಹೊರಹೊಮ್ಮಿದ ನೀರಸ ಧ್ವನಿಯಿಂದಲೇ ಈಶ್ವರನನ್ನು ಪ್ರಸನ್ನಗೊಳಿಸಿದನು. ಹೀಗಿರುವಾಗ ನನ್ನನ್ನು ಏನೂ ಅರಿಯದವನೆಂದು ತಡೆಯೊಡ್ಡುತ್ತಿರುವೆಯಾ ಅಳಿಯನೇ ಎಂದು ಗರ್ವದಿಂದ ಗರ್ದಭ ಹೇಳಿದನು.

ಕೊನೆಗೆ ನರಿಯು ಒಪ್ಪಿಕೊಂಡು "ದ್ವಾರದಲ್ಲಿ ನಿಂತು ದ್ವಾರಪಾಲಕರು ಬರುತ್ತಾರೋ ಕಾಯುತ್ತೇನೆ ಎಂದು ಹೇಳಿ ಕತ್ತೆಯನ್ನು ಅದರ ಮನಬಂದಂತೆ ಹಾಡಲು ಹೇಳಿತು. ಕತ್ತೆಯು ಹಾಡನ್ನು ಪ್ರಾರಂಭಿಸಿತು. ಅದರ ಕರ್ಕಶ ರಾಗದ ಅರಚುವಿಕೆಯನ್ನು ಕೇಳಿದ ಕ್ಷೇತ್ರ ಪಾಲಕರು ಕೋಪದಿಂದ ಬಂದು ಕತ್ತೆಯನ್ನು ನೆಲಕ್ಕೆ ಬೀಳುವಂತೆ ದೊಣ್ಣೆಯಿಂದ ಹೊಡೆದದ್ದೂ ಅಲ್ಲದೆ ಅದರ ಕೊರಳಿಗೆ ಒರಳನ್ನು ಕಟ್ಟಿ ಮತ್ತೆ ಮಲಗಿದರು. ಹೀಗೊಂದು ನುಡಿಯಿದೆ:- "ನಾಯಿಗೆ, ಕುದುರೆಗೆ ಮತ್ತು ವಿಶೇಷವಾಗಿ ಕತ್ತೆಗೆ ಹೊಡೆತದಿಂದ ಉಂಟಾದ ನೋವು ಹೆಚ್ಚು ಕಾಲ ಬಾಧಿಸುವುದಿಲ್ಲ" ಎಂದು. ಕತ್ತೆಯು ಆ ಒರಳಿನ ಸಹಿತ ಬೇಲಿಯನ್ನು ದಾಟಿಕೊಂಡು ಓಡಲಾರಂಭಿಸಿತು. ಆಗ ನರಿಯು ಅದನ್ನು ನೋಡಿ ನಗುತ್ತಾ ಹೀಗೆ ಹೇಳಿತು." ಆಗಲಿ ಮಾಮ, ನಾನು ಹಾಡಬೇಡಿ ಎಂದರೂ ಕೇಳಲಿಲ್ಲ. ಈಗ ನಿನ್ನ ಹಾಡಿನ ಪುರಸ್ಕಾರವಾಗಿ ಈ ಅಪೂರ್ವವಾದ ಮಣಿಯು ನಿನ್ನ ಕುತ್ತಿಗೆಗೆ ಕಟ್ಟಲ್ಪಟ್ಟಿದೆ. ಸುವರ್ಣಸಿದ್ಧಿಯು ಕಥೆಯನ್ನು ಮುಗಿಸುತ್ತಾ ಒಂದು ಉಕ್ತಿಯನ್ನು ಹೇಳುತ್ತಾನೆ.[40]

यस्य नास्ति स्वयं प्रज्ञा मित्रोक्तं न करोति यः ।

स एव निधनं याति यथा मन्थरकौलिकः ॥[41]

"ಯಾರಲ್ಲಿ ಸ್ವಂತ ಬುದ್ಧಿ ಇಲ್ಲವೋ ಮತ್ತು ಯಾರು ಮಿತ್ರನು ಹೇಳಿದ್ದನ್ನು ಕೇಳಬೇಕು, ಇಲ್ಲದಿದ್ದರೆ ಖಂಡಿತಾ ಅವನು ಮಂಥರಕ ನೇಕಾರನಂತೆ ಸತ್ತು ಹೋಗುತ್ತಾನೆ" ಎಂದು ಹೇಳಿ **"ಮಂಥರಕ ನೇಕಾರನ ಕಥೆ"**ಯನ್ನು ಹೇಳುತ್ತಾನೆ.

ಈ ಕಥೆಯು ಒಂದು ಒಳ್ಳೆಯ ತಿಳುವಳಿಕೆಯನ್ನು ನೀಡುತ್ತದೆ. ಯಾವಾಗಲೂ ಯಾವುದೇ ಕೆಲಸ ಮಾಡಲು ಸ್ವಂತ ಬುದ್ಧಿಯಿರಬೇಕು. ಒಂದು ವೇಳೆ ಅದರ ಕೊರತೆಯಿದ್ದಲ್ಲಿ. ಮಿತ್ರನು ಹೇಳಿದ್ದನ್ನು ಕೇಳಬೇಕು ಇಲ್ಲದಿದ್ದರೆ ಖಂಡಿತಾ ಅವನು ನಾಶವಾಗುತ್ತಾನೆ. ವಿದುರನೀತಿಯಲ್ಲೂ ಇದೇ ರೀತಿಯ ಒಂದು ಬೋಧೆ ಕಂಡುಬರುತ್ತದೆ-

---

40. **ಭರತ ಬಿ ರಾವ್,** ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತಂ-5, ಪು-273., (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು-560004
41. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ- ಶ್ಲೋ- 58, ಪು-755, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

"ತಿಳಿದು ನಾಲ್ವರೊಳೊರೆದ ಕಾರ್ಯವ

ನುಳಿವುದಿಬ್ಬರರೊಳು ಮ

ತ್ತುಳಿವುದೊಬ್ಬನನೊಬ್ಬನಿಂ ನಿಶ್ಚಯಿಸಿ ಬಳಿಕವನ

ಕಳೆದು ತಾನೇ ತನ್ನೊಳಗೆ ಬಗೆ

ಗೊಳೆ ವಿಚಾರಿಸಿ ಮಾಳ್ಪ ಕಾರ್ಯಕೆ

ಹಳಿವು ಹೊರುವುದೆ ರಾಯ ಚಿತ್ತೈಸೆಂದನಾ ವಿದುರ"[42]

ಅಂದರೆ, ಮಹಾರಾಜ, ಒಂದು ತೀರ್ಮಾನವನ್ನು ಕೈಗೊಳ್ಳಬೇಕಾದಾಗ, ಬಲ್ಲ ನಾಲ್ವರಿಗೆ ಅದನ್ನು ತಿಳಿಸಿ ಪರ್ಯಾಲೋಚನೆ ಮಾಡಬೇಕು. ಅನಂತರ ಅವರಲ್ಲಿ ಇಬ್ಬರನ್ನು ಬಿಟ್ಟು ಇನ್ನಿಬ್ಬರೊಡನೆ ವಿಚಾರ ಮಾಡಬೇಕು. ಆಮೇಲೆ ಅವರಲ್ಲೊಬ್ಬನನ್ನು ಕರೆದು ಒಬ್ಬನೊಡನೆಯೇ ಮಂತ್ರಾಲೋಚನೆಯನ್ನು ನಡೆಸಬೇಕು. ತರುವಾಯ ತಾನೊಬ್ಬನೇ ಚಿಂತಿಸಿ ತೀರ್ಮಾನವನ್ನು ಕೈಗೊಂಡಲ್ಲಿ ಅದಕ್ಕೆ ಎಂದಿಗೂ ಚ್ಯುತಿ ಇಲ್ಲ.

ಇಲ್ಲಿ ಮಂಥರಕ ಎಂಬ ನೇಕಾರನು ಒಮ್ಮೆ ವಸ್ತ್ರಗಳ ನೇಯ್ಗೆ ಕಾರ್ಯ ಮಾಡುತ್ತಿದ್ದಾಗ ಮರದ ಸಲಕರಣೆಗಳೆಲ್ಲಾ ತುಂಡಾದವು. ಪುನಃ ಹೊಸ ಸಲಕರಣೆಗಳನ್ನು ಸಿದ್ಧಪಡಿಸಿಕೊಳ್ಳಲು ಕೊಡಲಿಯನ್ನು ತೆಗೆದುಕೊಂಡು ಕಟ್ಟಿಗೆಗಾಗಿ ಕಾಡಿಗೆ ಹೋದನು. ಅಲ್ಲಿ ಒಂದು ದೊಡ್ಡ ವೃಕ್ಷವನ್ನು ನೋಡಿದನು. ಅದರ ಮೇಲೆ ಕೊಡಲಿಯನ್ನು ಬೀಸಿದನು. ಆ ವೃಕ್ಷದಲ್ಲಿ ಒಂದು ದೇವತೆಯು ಆಶ್ರಯ ಪಡೆದಿತ್ತು. "ಸಮುದ್ರದ ಅಲೆಗಳ ಹಾಗೂ ತಣ್ಣನೆ ಗಾಳಿಯ ಸ್ಪರ್ಶದ ಮಹಾಸುಖವನ್ನು ಇಲ್ಲಿ ನಾನು ಅನುಭವಿಸಿ ತೃಪ್ತನಾಗಿರುವುದರಿಂದ ಈ ವೃಕ್ಷವನ್ನು ಖಂಡಿತವಾಗಿಯೂ ರಕ್ಷಿಸಬೇಕು" ಎಂದು ಹೇಳಿತು. ಆದರೂ ನೇಕಾರನು "ಆ ಮರವನ್ನು ಕಡಿಯಲೇ ಬೇಕು, ಇಲ್ಲದಿದ್ದರೆ ಮರದ ಸಾಮಗ್ರಿಗಳಿಲ್ಲದೆ ಕೆಲಸ ನಿಂತು ಹೋಗಿ, ನನ್ನ ಕುಟುಂಬವೇ ಹಸಿವಿನಿಂದ ಬಳಲಬೇಕಾಗುತ್ತದೆ. ನನ್ನ ಉದ್ಯೋಗ ಹಾಗೂ ಸಂಪಾದನೆಗೆ ಇದೇ ಆಧಾರವೆಂದನು. ಆಗ ದೇವತೆಯು ಅವನ ಮಾತಿಗೆ ಸಂತೋಷಪಟ್ಟು," ನೀನು ಏನಾದರೂ ಇಷ್ಟವಾದುದನ್ನು ಪ್ರಾರ್ಥಿಸಿಕೊಂಡರೆ ಅದನ್ನು ಅನುಗ್ರಹಿಸುವುದಾಗಿ" ಹೇಳಿತು. ಹಾಗೂ ಮರವನ್ನು ಮಾತ್ರ ಕಡಿಯಬೇಡ, ಉಳಿಸು ಎಂದಿತು.

ನೇಕಾರನು ಮನೆಗೆ ಹೋಗಿ ಹೆಂಡತಿ, ಮಿತ್ರರನ್ನು ಕೇಳಿ ಬರುವೆನು. ನಂತರ ನೀನು ಅನುಗ್ರಹಿಸು ಎಂದು ದೇವತೆಯನ್ನು ಪ್ರಾರ್ಥಿಸಿದನು. ಅನಂತರ ಅವನು ಮನೆಯ ಕಡೆಗೆ ಹೊರಟಾಗ ತನ್ನ ಗ್ರಾಮದಲ್ಲಿ ಮಿತ್ರ ಕ್ಷೌರಿಕನನ್ನು ಕಂಡನು. ನಡೆದ ವಿಚಾರವನ್ನೆಲ್ಲಾ ಅವನಿಗೆ ತಿಳಿಸಿ ಏನನ್ನು ಪ್ರಾರ್ಥಿಸಿಕೊಳ್ಳಲಿ ಎಂದು

42. **ರಂಗನಾಥ ಶರ್ಮಾ ಎನ್,** ವಿದುರನೀತಿ (ಕುಮಾರವ್ಯಾಸನ ಕರ್ನಾಟ ಭಾರತ ಕಥಾಮಂಜರಿ), ಶ್ಲೋ – 32, ಪು – 14–15(2007), ಕ.ಸಾ.ಪ, ಬೆಂಗಳೂರು.

ಅವನ ಸಲಹೆಯನ್ನು ಕೇಳಿದನು. ಕ್ಷೌರಿಕನು "ಭದ್ರ, ಹಾಗಿದ್ದರೆ ರಾಜ್ಯವನ್ನು ಕೇಳು. ನೀನು ರಾಜನಾಗು, ನಾನು ಮಂತ್ರಿಯಾಗುವೆ. ಇಬ್ಬರೂ ಇಹಪರದಲ್ಲೂ ಸುಖವನ್ನು ಅನುಭವಿಸೋಣ"ಎಂದನು. ನೇಕಾರನು ನಂತರದಲ್ಲಿ ತನ್ನ ಹೆಂಡತಿಯ ಸಲಹೆಯನ್ನು ಕೇಳುತ್ತಾನೆ. ಹೆಂಡತಿ ಹೀಗೆ ಹೇಳುತ್ತಾಳೆ– "ಆರ್ಯಪುತ್ರ, ಕ್ಷೌರಿಕನಿಗೆಲ್ಲಿಯ ಬುದ್ಧಿ? ಅವನ ಮಾತನ್ನು ನಡೆಸಬಾರದು. ಹೊಗಳುವವರೊಂದಿಗೆ, ಸ್ತುತಿಪಾಠಕರೊಂದಿಗೆ, ನೀಚ ಕ್ಷೌರಿಕರೊಂದಿಗೆ, ಬಾಲಕರೊಂದಿಗೆ ಅಥವಾ ಹಸಿದವರೊಂದಿಗೆ ಬುದ್ಧಿವಂತನು ಮಂತ್ರಾಲೋಚನೆ ಮಾಡಬಾರದೆಂದು ಹೇಳಿದ್ದಾರೆ. ಅಲ್ಲದೆ ರಾಜ್ಯವನ್ನು ನಡೆಸುವುದು ಸುಲಭದ ಕೆಲಸವಲ್ಲ. ಬಹಳ ಕಷ್ಟ. ಸಂಧಿ, ಯುದ್ಧ, ಆಸನ, ಆಶ್ರಯ, ದ್ವೈದೀಭಾವ ಮುಂತಾದವು ಎಂದೂ ಮನುಷ್ಯನಿಗೆ ಸುಖ ಕೊಡಲಾರವು. ರಾಮನ ವನವಾಸ, ಬಲಿಯ ಬಂಧನ, ಪಾಂಡುಸುತರ ವನವಾಸ, ಯದುಗಳ ಪರಸ್ಪರ ಯುದ್ಧದಿಂದ ಮರಣ, ನಳರಾಜನ ರಾಜ್ಯ ನಿರ್ಗಮನ, ವಸಿಷ್ಠ ಶಾಪದಿಂದ ಸೌದಸನಿಂದ ರಾಕ್ಷಸ ಯೋನಿಯ ಪ್ರವೇಶ, ಕಾರ್ತವೀರ್ಯಾರ್ಜುನನ ವಧೆ, ರಾವಣನ ನಾಶ ಇವೆಲ್ಲವೂ ರಾಜ್ಯಕ್ಕಾಗಿಯೇ ಆದದ್ದು. ಇದನ್ನೆಲ್ಲಾ ಅರಿತು ಬುದ್ಧಿವಂತನಾದವನು ರಾಜ್ಯವನ್ನು ಇಚ್ಛಿಸಬಾರದು. ಈಗ ನೀನು ನಿತ್ಯವೂ ಮಾಡುತ್ತಿರುವ ಒಂದು ವಸ್ತ್ರದಿಂದ ನಮ್ಮ ಕುಟುಂಬದ ನಿರ್ವಹಣೆ ಆಗುತ್ತಿದೆ. ಈಗ ನಿನಗಾಗಿ ಮತ್ತೆರಡು ಭುಜಗಳನ್ನೂ, ಇನ್ನೊಂದು ತಲೆಯನ್ನೂ ಪ್ರಾರ್ಥಿಸಿಕೋ. ಆಗ ಎರಡು ವಸ್ತ್ರಗಳನ್ನು ಮಾಡಬಹುದು. ಇದರಿಂದ ಸಮೃದ್ಧಿಯಾಗಿ, ಗೌರವದಿಂದ ಕಾಲಕಳೆಯಬಹುದು. ಇಹಪರ ಲೋಕಗಳಲ್ಲಿಯೂ ಸುಖವು ಪ್ರಾಪ್ತವಾಗುವುದು.

ಇಲ್ಲೊಂದು ತಿಳುವಳಿಕೆ ಮಾತಿದೆ:–

उपदेशो हि मूर्खाणां प्रकोपाय न शान्तये ।

पयःपानं भुजङ्गानां केवलं विषवर्धनम् ॥[43]

ಮೂರ್ಖರಿಗೆ ಉಪದೇಶ ಮಾಡುವುದು ಅವರನ್ನು ರೇಗಿಸಲು ಕಾರಣವಾಗುತ್ತದೆಯೇ ಹೊರತು ಸಮಾಧಾನಪಡಿಸುವುದಕ್ಕಲ್ಲ. ಸರ್ಪಗಳಿಗೆ ಹಾಲನ್ನು ಕುಡಿಸುವುದು, ಕೇವಲ ಅವುಗಳ ವಿಷವನ್ನು ವೃದ್ಧಿಸಲು, ಎಂಬುದಾಗಿ. ನೇಕಾರನು ಪತಿವ್ರತಾ ಶಿರೋಮಣಿಯಾದ ತನ್ನ ಹೆಂಡತಿಯ ಮಾತನ್ನು ಒಪ್ಪಿದನು. ಹಾಗೆಯೇ ಅವನು ದೇವತೆಯನ್ನು ಪ್ರಾರ್ಥಿಸಿಕೊಂಡನು. ಕೂಡಲೇ ಎರಡು ತಲೆಗಳು ಮತ್ತು ನಾಲ್ಕು ಭುಜಗಳನ್ನು ಆ ದೇವತೆಯು ಅನುಗ್ರಹಿಸಿದಳು. ನೇಕಾರನು ಬಹಳ ಸಂತೋಷದಿಂದ ಮನೆಗೆ ಬಂದಾಗ, ಇವನನ್ನು ನೋಡಿದ ಜನರು, ವಿಚಿತ್ರ ಅವತಾರದ ಇವನೊಬ್ಬ ರಾಕ್ಷಸನೆಂದು ಭಾವಿಸಿ ಕೋಲು ಕಲ್ಲುಗಳಿಂದ ಹೊಡೆದು

---

43. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಪ್ರ.ತಂ.ಶ್ಲೋ–420, ಪು–273, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಸಾಯಿಸಿಯೇ ಬಿಟ್ಟರು. ಅದಕ್ಕೇ ಹೇಳುವುದು– ಅದೇನೇ ಇದ್ದರೂ ಸಲಹೆಗಳನ್ನು ನಾನಾ ಕಡೆಯಿಂದ ಪಡೆದುಕೊಳ್ಳುವುದು ತಪ್ಪಲ್ಲ. ಆದರೆ ತೀರ್ಮಾನ ತೆಗೆದುಕೊಳ್ಳುವಾಗ ಪೂರ್ವಾಪರ ಚೆನ್ನಾಗಿ ಆಲೋಚಿಸಿ, ವಿಶ್ಲೇಷಿಸಿ, ವಿವೇಚಿಸಿದ ನಂತರವೇ. ಅಂತಿಮವಾಗಿ ಸ್ವಂತ ಬುದ್ಧಿಯಿಂದ ನಿರ್ವಹಿಸಬೇಕು. ಇಲ್ಲವಾದರೆ ನೇಕಾರನ ಪರಿಸ್ಥಿತಿಯೇ ಎಲ್ಲರಿಗೂ. ಸ್ವಂತ ಅರಿವೂ ಇಲ್ಲ, ಮಿತ್ರನ ಸಲಹೆಯನ್ನೂ ಪಾಲಿಸದೆ ಮಂಥಾರಕ ಸತ್ತ. ಚಕ್ರಧರನು ಇದನ್ನು ಕೇಳಿ, ಹೌದು ಅದು ಸತ್ಯವೆಂದು ಹೇಳಿ ಎಲ್ಲಾ ಜನರೂ ನಂಬಿಕೆಗೆ ಅನರ್ಹವಾದ ಆಶಾ ಪಿಶಾಚಿಯ ಸುಳಿಗೆ ಸಿಲುಕಿ ಅಪಹಾಸ್ಯಕ್ಕೊಳಗಾಗುತ್ತಾರೆ ಎಂದನು.[44]

"ಯಾರೋ ಈ ಮಾತನ್ನು ಸರಿಯಾಗಿ ಹೇಳಿದ್ದಾರೆ" ಎಂದು ಮುಂದುವರಿಸಿ–

अनागतवतीं चिन्तामसम्भाव्यां करोति यः ।

स एव पाण्डुरः शेते सोमशर्मपिता यथा ॥[45]

"ಬಂದಿಲ್ಲದ ಮತ್ತು ಸಂಭವವಿಲ್ಲದ ಚಿಂತೆಯನ್ನು ಯಾರು ಮಾಡುತ್ತಾನೋ, ಅವನು ಬಿಳಿಯ ಬಣ್ಣದವನಾಗಿ ಸೋಮಶರ್ಮನ ತಂದೆಯಂತೆ ನಿದ್ರಿಸುತ್ತಾನೆ." ಸುವರ್ಣ ಸಿದ್ಧಿಯು ಇದೇನೆಂದು ಕೇಳಲು ಚಕ್ರಧರನು **ಸೋಮಶರ್ಮನ ತಂದೆಯ ಕಥೆ**ಯನ್ನು ಹೇಳುತ್ತಾನೆ.

ಒಂದು ನಗರದಲ್ಲಿ ಸ್ವಭಾವಕೃಪಣ ಎಂಬ ಬ್ರಾಹ್ಮಣ ವಾಸಿಸುತ್ತಿದ್ದನು. ಅವನು ಭಿಕ್ಷಾಟನೆ ಮಾಡಿ ಪಡೆದ, ತಿಂದು ಉಳಿದ ಹುರಿಹಿಟ್ಟಿನಿಂದ ಒಂದು ಮಡಕೆಯನ್ನು ತುಂಬಿಸಿದನು. ಆ ಮಡಕೆಯನ್ನು ನಾಗರ ಕೋಲಿಗೆ ಸಿಕ್ಕಿಸಿ ಅದರ ಕೆಳಗೆ ಮಂಚ ಹಾಕಿ ಸತತವಾಗಿ ಅದನ್ನೇ ನೋಡುತ್ತ, ರಾತ್ರಿ ಮಲಗಿ ಚಿಂತಿಸಿದನು. ತಿರುಕನ ಕನಸಿನಂತೆ, ಮಡಕೆ ತುಂಬಾ ಹುರಿದಹಿಟ್ಟು ತುಂಬಿದೆ. ದುರ್ಭಿಕ್ಷದ ಸಮಯದಲ್ಲಿ ಇದರಿಂದ ನೂರು ರೂಪಾಯಿ ಸಂಪಾದಿಸಬಹುದು, ಆ ಹಣದಿಂದ ಎರಡು ಆಡನ್ನು ಖರೀದಿಸಬಹುದು, ಆರು ತಿಂಗಳಿಗೆ ಮರಿಹಾಕುವುದರಿಂದ ಆಡುಗಳ ಹಿಂಡೇ ಆಗುವುದು, ಅವುಗಳನ್ನು ಮಾರಿ ಗೋವುಗಳನ್ನು ಕೊಳ್ಳಬಹುದು, ಗೋವುಗಳಿಂದ ಎಮ್ಮೆಗಳು, ಎಮ್ಮೆಗಳಿಂದ ಕುದುರೆಗಳು, ಕುದುರೆಗಳು ಮರಿಮಾಡಿ ಅನೇಕ ಕುದುರೆಗಳಾಗುವುವು, ಅವುಗಳನ್ನು ಮಾರಿ ತುಂಬಾ ಚಿನ್ನ ಕೊಳ್ಳಬಹುದು, ಅದರಿಂದ ಪರಸ್ಪರ ಮುಖಮಾಡಿರುವ ನಾಲ್ಕು ಮನೆಗಳುಳ್ಳ ಭವನವನ್ನು ಖರೀದಿಸುವೆನು. ಆಗ ಒಬ್ಬ ಬ್ರಾಹ್ಮಣನು ನನ್ನ ಮನೆಗೆ ಬಂದು ವಯಸ್ಸಿಗೆ ಬಂದಿರುವ ರೂಪವತಿಯಾದ ಕನ್ಯೆಯನ್ನು ಕೊಡುವನು. ನಂತರ ನನಗೊಬ್ಬ ಮಗ

---

44. **ಭರತ ಬಿ ರಾವ್,** ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ,ತಂ–5, ಪು–274–276, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು–560004

45. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ– 68, ಪು–764, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಹುಟ್ಟುವನು. ಅವನಿಗೆ ಸೋಮಶರ್ಮನೆಂದು ಹೆಸರಿಡುವೆನು. ಅವನು ಅಂಬೆಗಾಲಿಟ್ಟು ನಡೆಯುತ್ತಾ ಇರುವಾಗ ನಾನು ಅಶ್ವಶಾಲೆಯ ಹಿಂದೆ ಕುಳಿತು ಓದುತ್ತಿರುವೆನು. ಸೋಮಶರ್ಮನು ಕುದುರೆಯ ಗೊರಸಿನ ಹತ್ತಿರದಿಂದ ನನ್ನ ಬಳಿಗೆ ಬರುವನು, ನಾನು ಹೆಂಡತಿಗೆ ಕೋಪದಿಂದ "ಬಾಲಕನನ್ನು ಹಿಡಿದುಕೋ" ಎಂದು ಗದರಿಸುವೆನು, ಮನೆಕೆಲಸದ ಒತ್ತಡದಲ್ಲಿ ಅವಳಿಗೆ ಕೇಳಿಸದೆ, ನಾನು ಎದ್ದು ಅವಳಿಗೆ ಕಾಲಿನಿಂದ ಒದೆಯುವೆನು-ಹಾಗೆ ಕನಸು ಕಾಣುತ್ತಿದ್ದ ಅವನು ತನ್ನ ಕಾಲಿನಿಂದ ಒದ್ದಾಗ, ಮಡಕೆ ಒಡೆದು ತುಂಡಾಗಿ ಹಿಟ್ಟೆಲ್ಲಾ ಅವನ ಮೇಲೆ ಸುರಿದು ಮೈಯೆಲ್ಲಾ ಬಿಳಿಯಾಯಿತು.[46] ಇದೊಂದು ರೀತಿಯಲ್ಲಿ ಬಂದಿಲ್ಲದ ಹಾಗೂ ಸಂಭವವಿಲ್ಲದ ಚಿಂತೆಯಲ್ಲಿನ ಭ್ರಮೆ.

ಈ ಪುಟ್ಟ ಕಥೆಯಲ್ಲಿ ಇಲ್ಲದ ಚಿಂತೆಯನ್ನು ಮಾಡಿ, ಒಂದು ರೀತಿಯ ಹಗಲುಗನಸನ್ನು ಕಂಡು ಸಂಭವವಿಲ್ಲದ ಕಲ್ಪನೆಯನ್ನು ವ್ಯರ್ಥವಾಗಿ ಮಾಡುತ್ತಾನೋ ಅವನು ಏನನ್ನೂ ಸಾಧಿಸಲಾರ ಎಂಬ ಒಳ್ಳೆಯ ನೀತಿ ಇದೆ. ಸುವರ್ಣಸಿದ್ಧಿಹೇಳುತ್ತಾನೆ "ಲೋಭದಿಂದ ಮೋಸಗೊಂಡ ಎಲ್ಲರೂ ದುಃಖಕ್ಕೊಳಗಾಗುತ್ತಾರೆ." ಹೀಗೊಂದು ಉಕ್ತಿಯಿದೆ:-

यो लौल्यात् कुरुते कर्म नैवोदर्कमवेक्षते ।

विडम्बनामवाप्नोति स यथा चन्द्रभूपतिः ॥[47]

ಮುಂದಾಲೋಚನೆಯಿಲ್ಲದೆ, ವಿವೇಚನೆಯೂ ಇಲ್ಲದೆ ಚಂಚಲತೆಯಿಂದ ಯಾರು ಕೆಲಸ ಮಾಡುವರೋ, ಅವರು ಆಪತ್ತಿಗೆ ಗುರಿಯಾಗುವರು. ಎಂದು ಸುವರ್ಣಸಿದ್ಧಿಯು **ಮಂಗನಿಂದ ತೊಂದರೆಗೊಳಗಾದ ಚಂದ್ರಭೂಪತಿಯ ಕಥೆ**ಯನ್ನು ಹೇಳಿದನು. ಈ ಕಥೆಯಲ್ಲಿ ಚಂದ್ರ ಎಂಬ ರಾಜನು ಒಂದು ನಗರದಲ್ಲಿ ವಾಸವಾಗಿದ್ದನು. ಅವನ ಪುತ್ರರು ಮಂಗಗಳ ಗುಂಪಿನೊಂದಿಗೆ ಆಟವಾಡಿಕೊಂಡು ಅವುಗಳ ಗುಂಪಿಗೆ ನಿತ್ಯವೂ ರುಚಿರುಚಿಯಾದ ಭಕ್ಷ್ಯ ಭೋಜ್ಯಗಳನ್ನು ಕೊಟ್ಟು ಬೆಳೆಸುತ್ತಿದ್ದರು. ಈ ವಾನರರ ಒಡೆಯನು ಶುಕ್ರಾಚಾರ್ಯ, ಬೃಹಸ್ಪತಿ ಹಾಗೂ ಚಾಣಕ್ಯರ ನೀತಿಶಾಸ್ತ್ರವನ್ನು ಬಲ್ಲವನಾಗಿದ್ದು ಅದರಂತೆ ತಾನೂ ಪಾಲಿಸುತ್ತಾ ಇತರರಿಗೂ ಅದನ್ನೇ ಪಾಲಿಸುವಂತೆ ಕಲಿಸುತ್ತಿದ್ದನು. ರಾಜಗೃಹದ ರಾಜಕುಮಾರರ ವಾಹನವಾಗಿ ಟಗರುಗಳ ಗುಂಪನ್ನು ಸಾಕಿದ್ದರು. ಅದರಲ್ಲೊಂದು ಟಗರು ಜಿಹ್ವಾಚಾಪಲ್ಯದಿಂದ ಆಗಾಗ್ಗೆ ಅಡಿಗೆಮನೆಯನ್ನು ಪ್ರವೇಶಿಸಿ ಕಂಡದ್ದನ್ನೆಲ್ಲಾ ತಿನ್ನುತ್ತಿತ್ತು. ಅದಕ್ಕೆ ಅಡಿಗೆಯವರು ಕಟ್ಟಿಗೆ, ಮಣ್ಣಿನಪಾತ್ರೆ,

---

46. **ಭರತ ಬಿ ರಾವ್**, ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ,ತಂ-5, ಪು-2277-278,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ,44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು-560004

47. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ- ಶ್ಲೋ- 69, ಪು-766, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಕಂಚಿನ ಪಾತ್ರೆ ಹೀಗೆ ಸಿಕ್ಕಿದ್ದರಲ್ಲಿ ಹೊಡೆಯುತ್ತಿದ್ದರು. ಅದನ್ನು ವಾನರನು ನೋಡಿ ವಾನರನೊಡೆಯನು ಚಿಂತಿಸಿದನು. ಅಡಿಗೆಯವರ ಹಾಗೂ ಟಗರಿನ ಜಗಳ ವಾನರರ ನಾಶಕ್ಕೆ ಕಾರಣವಾಗುತ್ತದೆ. ಒಂದು ವೇಳೆ ಏನೂ ಸಿಗದೆ, ಉರಿಯುತ್ತಿರುವ ಕಟ್ಟಿಗೆಯಿಂದ ಹೊಡೆದರೆ ಆ ಟಗರು ಅಗ್ನಿಯಿಂದ ಸುಟ್ಟು ಹೋಗುತ್ತದೆ. ಉರಿಯುತ್ತಿರುವ ಅದು ಸಮೀಪದಲ್ಲಿರುವ ಅಶ್ವಶಾಲೆಯನ್ನು ಪ್ರವೇಶಿಸುತ್ತದೆ. ಆಗ ತುಂಬಾ ಹುಲ್ಲುತುಂಬಿರುವ ಅಶ್ವಶಾಲೆಯು ಹೊತ್ತಿ ಉರಿಯುತ್ತದೆ. ನಂತರ ಕುದುರೆಗಳು ಸುಟ್ಟು ಹೋಗುತ್ತವೆ ಅಶ್ವಶಾಸ್ತ್ರವನ್ನು ಬರೆದ ಶಾಲಿಹೋತ್ರನು ಹೀಗೆ ಹೇಳಿದ್ದಾನೆ.[48]

"ಕುದುರೆಯ ಅಗ್ನಿಯಿಂದ ಸುಟ್ಟ ದೋಷವು ಮಂಗದ ಕೊಬ್ಬಿನಿಂದ ಶಮನವಾಗುತ್ತದೆ. ಖಂಡಿತವಾಗಿಯೂ ಹೀಗೇ ಆಗುತ್ತದೆ." ಎಲ್ಲಾ ವಾನರರನ್ನೂ ಒಂದು ಸಭೆ ಕರೆದು ರಹಸ್ಯವಾಗಿ ಹೇಳಿದನು "ಎಲ್ಲಿ ಟಗರಿನೊಂದಿಗೆ ಅಡಿಗೆಯವರ ಜಗಳವಾಗುತ್ತದೆಯೋ ಅಲ್ಲಿ ಖಂಡಿತವಾಗಿಯೂ ವಾನರರ ನಾಶವಾಗುತ್ತದೆ; ಕಾರಣವಿಲ್ಲದೆ ಎಲ್ಲಿ ನಿತ್ಯವೂ ಜಗಳವಾಗುತ್ತದೋ ಅಂತಹ ಮನೆಯನ್ನು ಜೀವಿಸಲು ಬಯಸುವವನು ದೂರದಿಂದಲೇ ತ್ಯಜಿಸಿಬಿಡಬೇಕು; ಕಲಹಗಳಿಂದ ಭವನಗಳು ನಾಶವಾಗುತ್ತವೆ; ಕೆಟ್ಟ ಮಾತಿನಿಂದ ಮೈತ್ರಿಯು ನಾಶವಾಗುತ್ತದೆ; ಕೆಟ್ಟ ಕಾರ್ಯಗಳಿಂದ ಮನುಷ್ಯರ ಯಶಸ್ಸು ನಾಶವಾಗುತ್ತದೆ. ಆದ್ದರಿಂದ ನಮ್ಮೆಲ್ಲರ ನಾಶವಾಗುವ ಮೊದಲೇ ಈ ರಾಜಗೃಹವನ್ನು ಬಿಟ್ಟು ಕಾಡಿಗೆ ಹೋಗೋಣ." ವಾನರರೆಲ್ಲರೂ ಈ ನಂಬಲನರ್ಹವಾದ ಮಾತುಗಳನ್ನು ಕೇಳಿ ಅಹಂಕಾರದಿಂದ ನಕ್ಕು ಹೇಳಿದರು:– "ನಿನಗೆ ವಯಸ್ಸಾದ್ದರಿಂದ ಅರುಳು–ಮರುಳಾಗಿದೆ. ಅದಕ್ಕಾಗಿ ಹೀಗೆ ಮಾತನಾಡುತ್ತಿದ್ದೀಯೆ. ಬಾಯಿಯಲ್ಲಿ ಹಲ್ಲಿಲ್ಲದೆ, ನಿತ್ಯವೂ ಎಂಜಲು ಸುರಿಸುತ್ತಿರುವ ಬಾಲಕರಿಗೆ ಹಾಗೂ ವಿಶೇಷವಾಗಿ ವೃದ್ಧರಿಗೆ ಯಾವ ವಿಷಯದಲ್ಲೂ ಬುದ್ಧಿಯು ಕೆಲಸ ಮಾಡುವುದಿಲ್ಲ. ಸ್ವರ್ಗ ಸಮಾನವಾದ ವಿವಿಧ ಭೋಗಗಳಿರುವ, ರಾಜಕುಮಾರರು ತಮ್ಮ ಕೈಯಿಂದಲೇ ಅಮೃತಸದೃಶವಾದ ಭಕ್ಷ್ಯ ವಿಶೇಷಗಳನ್ನು ಕೊಡುತ್ತಿರುವ ಈ ರಾಜಗೃಹವನ್ನು ಬಿಟ್ಟು ಕಾಡಿನಲ್ಲಿ ಒಗರು, ಕಟು, ಕಾರ, ಕಹಿ, ಉಪ್ಪುಗಳಿಂದ ಕೂಡಿದ ಒರಟಾದ ಹಣ್ಣುಗಳನ್ನು ತಿನ್ನಲು ನಾವು ಬರುವುದಿಲ್ಲ."

ಇದನ್ನು ಕೇಳಿ ದುಃಖಗೊಂಡ ವಾನರರ ಮುಖಂಡನು– "ಅಯ್ಯೋ ಮೂರ್ಖರೇ, ನಿಮ್ಮ ಈ ರೀತಿಯ ಸುಖದ ಪರಿಣಾಮವನ್ನು ನೀವು ತಿಳಿದಿಲ್ಲ. ರಸವತ್ತಾದ ಆಹಾರವನ್ನು ತಿನ್ನುವ ಈ ಸುಖದ ಪರಿಣಾಮವು ಮುಂದೆ ವಿಷದಂತಿರುತ್ತದೆ. ನನ್ನ ಕುಲದ ನಾಶವನ್ನು ನಾನು ಸ್ವತಃ ನೋಡಲಾರೆನು. ಈಗಲೇ ನಾನು ಕಾಡಿಗೆ ನಡೆಯುವೆನು.

48. **ಭರತ ಬಿ ರಾವ್,** ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ,ತಂ–5, ಪು–278–282,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ,44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು–560004

मित्रं व्यसनसंप्राप्तं स्वस्थानं परपीडितम् ।

धन्यास्ते ये न पश्यन्ति देशभङ्गं कुलक्षयम् ॥[49]

ಮಿತ್ರರ ದುಃಖವನ್ನು, ಪರರ ಆಕ್ರಮಣಕ್ಕೆ ಒಳಗಾದ ಸ್ವಸ್ಥಾನವನ್ನು, ತಮ್ಮ ದೇಶ ಹಾಗೂ ಕುಲದ ನಾಶವನ್ನು ನೋಡದವರೇ ಧನ್ಯರು." ಹೀಗೆ ಹೇಳಿ, ವಾನರ ನಾಯಕನು ಕಾಡಿಗೆ ಹೊರಟೇಬಿಟ್ಟನು.[50]

ನಂತರದಲ್ಲಿ ಎಂದಿನಂತೆ ಟಗರು ಅಡಿಗೆಮನೆಗೆ ಪ್ರವೇಶ ಮಾಡಿತು. ಅಡಿಗೆಯವನು ಅದನ್ನು ಹೊಡೆಯಲು ಏನೂ ಸಿಕ್ಕದಿದ್ದಾಗ ಅರ್ದ ಉರಿದ ಕಟ್ಟಿಗೆಯೇ ಕೈಗೆ ಸಿಕ್ಕಿತು. ಅದರಿಂದಲೇ ಹೊಡೆದೂಬಿಟ್ಟನು. ಉರಿಯುತ್ತಿರುವ ದೇಹವುಳ್ಳ ಅದು ಶಬ್ದವನ್ನು ಮಾಡುತ್ತಾ, ಅಶ್ವಶಾಲೆಯನ್ನೇ ಹೊಕ್ಕಿತು. ಹುಲ್ಲಿರುವ ಅಲ್ಲಿನ ನೆಲದಲ್ಲಿ ಹೊರಳಾಡಿತು. ಬೆಂಕಿಯು ಹೊತ್ತಿಕೊಂಡಿತು. ಕೆಲವು ಕುದುರೆಗಳ ಕಣ್ಣುಗಳು ಸುಟ್ಟು ಸಿಡಿದು ಹೋದವು. ಇನ್ನು ಕೆಲವು ಕುದುರೆಗಳು ಹಗ್ಗವನ್ನು ಮುರಿದುಕೊಂಡು, ಅರ್ಧಸುಟ್ಟ ದೇಹದೊಂದಿಗೆ ಅಲ್ಲಲ್ಲಿ ಓಡಾಡುತ್ತಾ, ಕೆನೆಯುತ್ತಾ ಎಲ್ಲಾ ಜನಸಮೂಹವನ್ನು ಉದ್ವಿಗ್ನಗೊಳಿಸಿದವು. ಆನಂತರ ದುಃಖಗೊಂಡ ರಾಜನು ಅಶ್ವಚಿಕಿತ್ಸಕನನ್ನು ಕರೆಸಿ ಉಪಶಮನವನ್ನು ಕೇಳಿದನು.

कपीनां मेदसा दोषो वह्निदाहसमुद्भवः ।

अश्वानां नाशमभ्येति तमः सूर्योदये यथा ॥[51]

ಚಿಕಿತ್ಸಕನು ಶಾಸ್ತ್ರ ನೋಡಿ ಹೇಳಿದನು. ದೇವ, ಪೂಜ್ಯ ಶಾಲಿಹೋತ್ರನು ಹೀಗೆ ಹೇಳಿರುವನು "ಸೂರ್ಯೋದಯವು ಕತ್ತಲನ್ನು ಹೇಗೆ ನಾಶಮಾಡುತ್ತದೋ ಹಾಗೆ ಕಪಿಗಳ ಕೊಬ್ಬು ಕುದುರೆಗಳಲ್ಲಿ ಬೆಂಕಿಯಿಂದ ಸುಟ್ಟ ದೊಷವನ್ನು ಹೋಗಲಾಡಿಸುತ್ತದೆ. ಹಾಗಾಗಿ ಇವುಗಳು ಸುಟ್ಟ ದೋಷದಿಂದ ಸಾಯುವ ಮೊದಲೇ ಈ ಚಿಕಿತ್ಸೆಯನ್ನು ಬೇಗನೆ ಮಾಡಿಸಿ. ಆ ತಕ್ಷಣ ರಾಜನು ಎಲ್ಲಾ ಕಪಿಗಳನ್ನು ಕೊಲ್ಲಲು ಆಜ್ಞೆ ಮಾಡಿದನು. ಎಲ್ಲಾ ವಾನರರೂ ಕೊಲ್ಲಲ್ಪಟ್ಟರು. ವಾನರ ಮುಖಂಡನು ತನ್ನ ಮನೆಯವರು ಎಲ್ಲಾ ಬಂಧುಗಳ ನಾಶವನ್ನು ಕೇಳಿ ಬಹಳ ದುಃಖಗೊಂಡನು. ಊಟವನ್ನು ಬಿಟ್ಟು ಕಾಡಿನಲ್ಲಿ ಅಲೆಯುತ್ತಾ, ಹೀಗೆ ಯೋಚಿಸಿದನು. "ಈ ದುಷ್ಟ ರಾಜನ ಮೇಲೆ ನಾನು ಹೇಗೆ ಸೇಡನ್ನು ತೀರಿಸಿಕೊಳ್ಳಲಿ? ಯಾರು ಭಯದಿಂದ, ಅಥವಾ ಮತ್ಯಾವುದೋ ಪ್ರಯೋಜನ ಕಾರಣದಿಂದ ತನ್ನ ವಂಶದವರಿಗಾದ ಅವಮಾನವನ್ನು ಕ್ಷಮಿಸುವನೋ

49. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ- ಶ್ಲೋ-74, ಪು-771, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

50. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ-ಅಪರೀಕ್ಷಿತಕಾರಕಂ, ಪು-224-226, (2015) ವರ್ಣಿಲ, 39/2-11,ಕಲ್ಯಾಣಿ ಗಾರ್ಡನ್, ಬನಶಂಕರಿ 1ನೇ ಹಂತ, ಬೆಂಗಳೂರು-560050

51. **ಸುಧಾಕರ್ ಮಾಲವೀಯ,** ಸಂಪಾ-ಅನು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ,ಅಪರೀಕ್ಷಿತಕಾರಕ- ಶ್ಲೋ-75, ಪು-772, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಅವನನ್ನು ಪುರುಷಾಧಮನೆಂದು ತಿಳಿಯತಕ್ಕದ್ದು." ಹೀಗೆ ಬಾಯಾರಿಕೆಯಿಂದ ಅಲೆಯುತ್ತಿದ್ದ ಆ ವಾನರನು ಕಮಲದ ಸಮೂಹದಿಂದ ಶೋಭಿತವಾದ ಒಂದು ಸರೋವರವನ್ನು ತಲುಪಿದನು. ಅದನ್ನು ಸೂಕ್ಷ್ಮವಾಗಿ ನೋಡಿ, ಈ ಸರೋವರದಲ್ಲಿ ದುಷ್ಟ ಮೊಸಳೆಯೊಂದಿರಬಹುದೆಂದು ಅಂದಾಜು ಮಾಡಿದನು. ದೂರದಿಂದಲೇ ಕಮಲದ ನಾಳದಿಂದ ನೀರನ್ನು ಕುಡಿದನು. ಆಗ ಸರೋವರದ ಮಧ್ಯದಲ್ಲಿ ಕಂಠದಲ್ಲಿ ರತ್ನಮಾಲೆಯನ್ನು ಧರಿಸಿದ್ದ ರಾಕ್ಷಸನೊಬ್ಬ ಎದ್ದು ಬಂದು ಹೇಳಿದನು "ಈ ನೀರನ್ನು ಯಾರು ಪ್ರವೇಶಿಸುವರೋ ಅವರು ನನಗೆ ಭೋಜನವಿದ್ದಂತೆ. ನೀನು ದೂರದಿಂದಲೇ ನೀರನ್ನು ಕುಡಿದ ಅತಿಧೂರ್ತನು. ನಿನ್ನಂತಹವನನ್ನು ನಾನು ಈ ಹಿಂದೆ ನೋಡಿಯೇ ಇರಲಿಲ್ಲ. ನನಗೆ ಸಂತೋಷವಾಗಿದೆ. ನಿನಗೇನು ಬೇಕೋ ಕೇಳಿಕೋ ಎಂದನು.[52] ಅದಕ್ಕೆ ವಾನರನು ಬುದ್ಧಿವಂತಿಕೆಯಿಂದ ನೀನು ಎಷ್ಟು ತಿನ್ನಬಲ್ಲೆ? ರಾಕ್ಷಸನು ಇಂತೆಂದನು." ನೀರನ್ನು ಪ್ರವೇಶಿಸಿದ ನೂರು, ಸಾವಿರ, ಹತ್ತು ಸಾವಿರ ಮತ್ತು ಲಕ್ಷ ಜನರನ್ನೂ ತಿನ್ನಬಲ್ಲೆ. ಆದರೆ ನೀರಿನಿಂದ ಹೊರಗೆ ಒಂದು ನರಿಯೂ ನನ್ನನ್ನು ಹೆದರಿಸುತ್ತದೆ. ವಾನರನು "ಒಬ್ಬ ರಾಜನ ಜೊತೆ ನನ್ನ ಶತ್ರುತ್ವವಿದೆ. ನೀನು ನಿನ್ನ ರತ್ನಮಾಲೆಯನ್ನು ನನಗೆ ಕೊಟ್ಟರೆ ನನ್ನ ಮಾತಿನ ಮೋಡಿಯಿಂದ ಪರಿವಾರ ಸಮೇತವಾಗಿ ಆ ರಾಜನನ್ನು ಮೋಹಗೊಳಿಸಿ ಈ ಸರೋವರವನ್ನು ಪ್ರವೇಶಿಸುವಂತೆ ಮಾಡುವೆನು. ರಾಕ್ಷಸನು ನಂಬಿ ವಾನರನಿಗೆ ರತ್ನಮಾಲೆಯನ್ನು ಕೊಟ್ಟು, "ಮಿತ್ರ, ಉಚಿತವಾದುದನ್ನು ಮಾಡು" ಎಂದನು. ವಾನರನು ಕೊರಳಲ್ಲಿ ರತ್ನಮಾಲೆಯನ್ನು ಧರಿಸಿ ಮರಗಳಲ್ಲಿ ಮತ್ತು ಎತ್ತರವಾದ ಭವನದಲ್ಲಿ ಓಡಾಡುತ್ತಿದ್ದನು. ಇದನ್ನು ನೋಡಿದ ಜನರೆಲ್ಲಾ ಸೂರ್ಯನನ್ನೂ ನಾಚಿಸುವಂತಹ ಹೊಳಪಿನ ರತ್ನಮಾಲೆಯನ್ನು ಕಂಡು ಬೆರಗಾಗಿ ವಿಚಾರಿಸಿದರು. ಆಗ ವಾನರ ಹೇಳುತ್ತಾನೆ– "ಒಂದು ಅರಣ್ಯದಲ್ಲಿ ಕುಬೇರನು ನಿರ್ಮಿಸಿರುವ ಗೋಪ್ಯವಾದ ಒಂದು ಮಹಾಸರೋವರವಿದೆ. ಅದರಲ್ಲಿ ಯಾರು ರವಿವಾರದಂದು ಸೂರ್ಯನು ಅರ್ಧ ಉದಯಿಸಿರುವಾಗ ಸ್ನಾನವನ್ನು ಮಾಡುವರೋ ಅವರು ಕುಬೇರನ ಕೃಪೆಗೊಳಗಾಗಿ ರತ್ನಮಾಲೆಯು ಶೋಭಿಸುತ್ತಿರುವ ಕಂಠವುಳ್ಳವರಾಗಿ ಹೊರಗೆ ಬರುವರು. ಇದು ರಾಜನಿಗೂ ತಿಳಿದು ವಾನರನನ್ನು ಆಸ್ಥಾನಕ್ಕೆ ಕರೆಸಿ ಅದರ ಸತ್ಯತೆಯ ಬಗ್ಗೆ ವಿಚಾರಿಸಿದನು. ಅದಕ್ಕೆ ವಾನರನು ರತ್ನಮಾಲೆಯನ್ನು ರಾಜನಿಗೆ ತೋರಿಸಿ, ವಿಚಾರವನ್ನು ಸ್ಪಷ್ಟಪಡಿಸಿದನು. ರಾಜನು ದುರಾಸೆಯಿಂದ ತಾನೇ ಪರಿವಾರಸಮೇತವಾಗಿ ಹೊರಡಲು ಸಿದ್ಧನಾದನು. ಈ ಸಂದರ್ಭದಲ್ಲಿ ಒಂದು ಉಕ್ತಿ ಹೀಗಿದೆ. "ಎಲೈ ತುಷ್ಣೇ, ದೇವೀ, ನಿನ್ನ ಮಹಿಮೆಗೆ ಒಳಗಾದ ಧನಿಕರು ಅಕಾರ್ಯಗಳಲ್ಲಿ ತೊಡಗುತ್ತಾರೆ ಮತ್ತು ಹೋಗಬಾರದ ಕಡೆ ಅಲೆಯುತ್ತಾರೆ,

---

52. **ಭರತ ಬಿ ರಾವ್,** ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತಂ–5, ಪು–278–282, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು–560004

इच्छति शती सहस्त्रं; सहस्त्री लक्षमीहते ।

लक्षाधिपस्तथा राज्यं, राज्यस्थः स्वर्गमीहते ॥[53]

ನೂರು ಉಳ್ಳವನು ಸಾವಿರವನ್ನು ಬಯಸುವನು, ಸಾವಿರವುಳ್ಳವನು ಲಕ್ಷವನ್ನು, ಲಕ್ಷಾಧಿಪತಿಯು ರಾಜ್ಯವನ್ನು, ರಾಜ್ಯಾಧಿಪತಿಯು ಸ್ವರ್ಗವನ್ನೂ ಬಯಸುವನು. ಮನುಷ್ಯನಿಗೆ ವಯಸ್ಸಾದಾಗ ಕೂದಲುಗಳು ಹಣ್ಣಾಗುತ್ತವೆ. ಹಲ್ಲುಗಳು ಉದುರುತ್ತವೆ ಮತ್ತು ದೃಷ್ಟಿಯು ಮಾಸುತ್ತದೆ ಆದರೆ ಲೋಭ ಮಾತ್ರ ಯೌವನಾವಸ್ಥೆಯಲ್ಲಿಯೇ ಇರುತ್ತದೆ." ಎಂದು.

ಸರೋವರವನ್ನು ತಲುಪಿ ಮುಂಜಾನೆಯ ಸಮಯದಲ್ಲಿ ವಾನರನು ರಾಜನಿಗೆ ಹೇಳುತ್ತಾನೆ. "ಸೂರ್ಯನು ಅರ್ಧ ಉದಯಿಸಿದಾಗ ಸಿದ್ಧಿಸಮಯದಲ್ಲಿ ನಿಮ್ಮನ್ನು ಬಿಟ್ಟು ಉಳಿದವರೆಲ್ಲ ಒಮ್ಮೆಗೇ ಪ್ರವೇಶಿಸಲಿ. ನಂತರ ನಿಮ್ಮನ್ನು ನಾನು ಹಿಂದೆ ನೋಡಿದ ಸ್ಥಳಕ್ಕೆ ಕರೆದೊಯ್ದು ರತ್ನಮಾಲೆಯನ್ನು ತೋರಿಸುತ್ತೇನೆ." ಎಂದು ಬಹಳ ಯೋಜಿತವಾಗಿ ತಿಳಿಸಿದನು. ಆಗ ಪರಿವಾರದವರೆಲ್ಲಾ ಮೊದಲು ಸರೋವರವನ್ನು ಪ್ರವೇಶಿಸಿದಾಗ ರಾಕ್ಷಸನಿಂದ ತಿನ್ನಲ್ಪಟ್ಟರು. ಬಹಳ ಹೊತ್ತಾದರೂ ಹೊರಗೆ ಬಾರದಿದ್ದಾಗ ರಾಜನು ವಾನರನನ್ನು ಇದೇನೆಂದು ವಿಚಾರಿಸಿದನು. ಆಗ ವಾನರನು ಬೇಗನೆ ಮರವನ್ನೇರಿ ಹೇಳುತ್ತಾನೆ "ಎಲೈ ದುಷ್ಟ ರಾಜನೇ, ನೀರಿನೊಳಗಿರುವ ರಾಕ್ಷಸನು ನಿನ್ನ ಪರಿವಾರದವರನ್ನೆಲ್ಲಾ ಭಕ್ಷಿಸಿಯಾಯಿತು. ನನ್ನ ಕುಲವನ್ನು ನಾಶಮಾಡಿದ್ದಕ್ಕೆ ಸೇಡನ್ನು ತೀರಿಸಿಕೊಂಡಿದ್ದೇನೆ. ನೀನು ಎಷ್ಟಾದರೂ ನನಗೆ ಸ್ವಾಮಿಯೆಂದು ನಿನ್ನನ್ನು ಸರೋವರಕ್ಕೆ ಕಳುಹಿಸಲಿಲ್ಲ. ಅಪಕಾರವನ್ನು ಮಾಡಿದವರಿಗೆ ಪ್ರತ್ಯುಪಕಾರವನ್ನು ಮಾಡಬೇಕು ಹಿಂಸೆಯನ್ನು ಮಾಡಿದವರಿಗೆ ಪ್ರತಿ ಹಿಂಸೆಯನ್ನು ಮಾಡಬೇಕು. ದುಷ್ಟನ ವಿಷಯದಲ್ಲಿ ದುಷ್ಟತನವನ್ನೇ ತೋರಬೇಕು. ಇದರಲ್ಲಿ ನಾನು ಯಾವ ದೋಷವನ್ನೂ ಕಾಣೆನು. ನೀನು ನನ್ನ ಕುಲವನ್ನು ನಾಶಮಾಡಿದೆ, ಹಾಗಾಗಿ ನಾನು ನಿನ್ನ ಕುಲವನ್ನು ನಾಶಮಾಡಿದೆ." ಸುವರ್ಣಸಿದ್ಧಿಯು ಕಥೆಯನ್ನು ಮುಂದುವರೆಸುತ್ತಾ, ಮನೆಗೆ ಹೊರಡಲು ಅನುಮತಿಯನ್ನು ಕೋರಿದನು. ಚಕ್ರಧರನು :-

यस्त्यक्त्वा सापदं मित्रं याति निष्ठुरतां सुहृत् ।

कृतघ्नस्तेन पापेन नरके यात्यसंशयम् ॥[54]

"ಭದ್ರ, ಆಪತ್ಕಾಲಕ್ಕಾಗಿಯೇ ಧನ ಹಾಗೂ ಸ್ನೇಹವನ್ನು ಸಂಗ್ರಹಿಸುವರು ನನ್ನನ್ನು ಈ ಪರಿಸ್ಥಿತಿಯಲ್ಲಿ

---

53. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ- ಶ್ಲೋ-78, ಪು-777, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

54. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ- ಶ್ಲೋ-82, ಪು-780, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಬಿಟ್ಟುಹೋದರೆ ಹೇಗೆ? ಎನ್ನುತ್ತಾನೆ. ಸುವರ್ಣ ಸಿದ್ಧಿಯು, "ನೀನು ಹೇಳುವುದು ಸತ್ಯ. ಆದರೆ ನಿನ್ನ ಮುಖದ ವಿಕಾರ ಹಾಗೂ ವೇದನೆಯನ್ನು ನೋಡಿದರೆ ಬೇಗ ಇಲ್ಲಿಂದ ಹೋಗಿಬಿಡಬೇಕು, ಇಲ್ಲದಿದ್ದರೆ ನನಗೂ ಏನಾದರೂ ಅನರ್ಥವಾದೀತು ಎಂಬ ಚಿಂತೆಯು ಉಂಟಾಗುತ್ತಿದೆ." ಹೀಗೊಂದು ಮಾತು ಕಥೆಯಲ್ಲಿ ಬರುತ್ತದೆ–

यादृशी वदनच्छाया दृश्यते तव वानर ।

विकालेन गृहीतोऽसि यः परैति स जीवति ॥[55]

"ಎಲೈ ವಾನರ ನಿನ್ನ ಮುಖದಲ್ಲಿ ಯಾವ ರೀತಿಯ ಖಳೆಯು ತೋರುತ್ತಿದೆಯೋ ಅದರಿಂದ ನೀನು ವಿಕಾಲನ ವಶದಲ್ಲಿರುವೆ ಎಂದು ತಿಳಿಯುತ್ತದೆ. ಹೀಗಿದ್ದಾಗ ಓಡಿ ಹೋದವನು ಬದುಕುಳಿಯುತ್ತಾನೆ." ಚಕ್ರಧರನು ಅದು ಏನೆಂದು ಕೇಳಲು ಸುವರ್ಣಸಿದ್ಧಿಯು **"ವಿಕಾಲ ರಾಕ್ಷಸ–ವಾನರ ಕಥೆ"** ಹೇಳುತ್ತಾನೆ. ಈ ಕಥೆಯಲ್ಲಿ ಭ್ರಮೆ ಮತ್ತು ವಾಸ್ತವದ ಕುರಿತು ಸೊಗಸಾದ ಚಿತ್ರಣ ನಿರೂಪಿಸಲ್ಪಟ್ಟಿದೆ. ಮನುಷ್ಯರಿಗೆ ಶುಭಾಶುಭ ಫಲಗಳು ಭಾಗ್ಯದನುಸಾರ ಸಿಗುತ್ತವೆ. ಯಾರಿಗೆ ತ್ರಿಕೂಟಪರ್ವತವೇ ಕೋಟೆಯಾಗಿತ್ತೋ, ಸಮುದ್ರವೇ ದುರ್ಗದ ಸೀಮೆಯಾಗಿತ್ತೋ, ಯೋಧರಾದ ರಾಕ್ಷಸರಿದ್ದರೋ, ಕುಬೇರನಿಗಿಂತ ಅಧಿಕ ಸಂಪತ್ತಿತ್ತೋ, ಶುಕ್ರಾಚಾರ್ಯನಿಂದಲೇ ನೀತಿಶಾಸ್ತ್ರವು ಹೇಳಿಕೊಡಲ್ಪಟ್ಟಿತ್ತೋ, ಅಂಥಹ ರಾವಣನು ದೈವವಶದಿಂದ ನಾಶವಾದನು.

अन्धकः कुब्जकश्चैव त्रिस्तनी राजकन्यका ।

त्रयोप्यन्यायतः सिद्धाः सम्मुखे कर्मणि स्थिते ॥[56]

ಒಬ್ಬ ಕುರುಡ, ಒಬ್ಬ, ಕುಬ್ಜ ಹಾಗೂ ಒಬ್ಬಳು ಮೂರು ಸ್ಥನಗಳನ್ನುಳ್ಳ ರಾಜಕನ್ಯೆಯು ದೈವವು ಅನುಕೂಲವಾಗಿದ್ದಾಗ ಕೆಟ್ಟ ಕೆಲಸವನ್ನು ಮಾಡಿ ಕೂಡ ಸಫಲತೆಯನ್ನು ಪಡೆದರು. ಎಂದು ಚಕ್ರಧರನು ಒಂದು ಉಕ್ತಿಯನ್ನು ಹೇಳುತ್ತಾನೆ. ಸುವರ್ಣಸಿದ್ಧಿಯು ಅದೇನೆಂದು ಕೇಳಲು, **"ಒಬ್ಬ ಕುರುಡ ಒಬ್ಬ ಕುಬ್ಜ ಹಾಗೂ ಒಬ್ಬಳು ಮೂರು ಸ್ಥನಗಳುಳ್ಳ ರಾಜಕನ್ಯೆಯ ಕಥೆ"**ಯನ್ನು ಹೇಳುತ್ತಾನೆ.

ಇನ್ನೊಂದು ಪುಟ್ಟ ಕಥೆ **ರಾಕ್ಷಸನಿಂದ ಹಿಡಿಯಲ್ಪಟ್ಟ ಬ್ರಾಹ್ಮಣನ ಕಥೆ**ಯಲ್ಲಿ ಪ್ರಶ್ನಿಸುವುದು ಏಕೆ ಮುಖ್ಯ ಎಂಬ ಅಂಶವನ್ನು ರಾಜನಿಗೆ ದ್ವಾರಪಾಲಕರು ಹೇಳುತ್ತಾರೆ. ಇದರಲ್ಲಿ ಒಂದು ಜಾಗೃತಿ ಇದೆ. ಅದೇನೆಂದರೆ, ಪ್ರಶ್ನಿಸಿ ಅನುಮಾನವನ್ನು ಪರಿಹರಿಸಿಕೊಳ್ಳುವ, ಪರೀಕ್ಷಿಸಿ ಖಚಿತಪಡಿಸಿಕೊಳ್ಳುವ, ಆಮೂಲಾಗ್ರವಾಗಿ

55. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ–83, ಪು–781, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

56. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ–86, ಪು–786, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಕೇಳಿಸಿಕೊಂಡು ಅದರಂತೆ ನಡೆವ ಜನರು ಸೂರ್ಯೋದಯ ಕಾಲದಲ್ಲಿ ತಾವರೆ ಅರಳುವ ಹಾಗೆ ಮನಸ್ಸನ್ನು ವಿಕಾಸಗೊಳಿಸುತ್ತಾರೆ.

पृच्छकेन सदा भाव्यं पुरुषेण विजानता ।

राक्षसेन्द्रगृहीतोऽपि प्रश्नान्मुक्तो द्विजः पुरा ॥[57]

ಈ ಪ್ರಶ್ನಿಸುವ ಗುಣದಿಂದಲೇ ರಕ್ಕಸನ ಹಿಡಿತದಿಂದ ದ್ವಿಜನೊಬ್ಬ ಪಾರಾಗಿದ್ದನೆಂಬ ವಿಚಾರ. ಆದ್ದರಿಂದ ಬುದ್ಧಿವಂತನು ಸದಾ ಪ್ರಶ್ನೆಗಳನ್ನು ಕೇಳುತ್ತಿರಬೇಕು. ವಿವೇಕ ಇರುವ ಮನುಷ್ಯನು ತಾನು ಮಾಡಬೇಕೆಂದಿರುವ ಕೆಲಸದ ಬಗ್ಗೆ ಮೂರನೆಯವರೊಂದಿಗೆ ಪ್ರಶ್ನಿಸಬೇಕು, ಸಮಾಲೋಚನೆ ನಡೆಸಬೇಕು. ಇಂಥಹ ಸೂಕ್ತಿಗಳು, ಸುಭಾಷಿತಗಳು ನೀತಿಬೋಧೆಗಳು, ವ್ಯಕ್ತಿನಿರ್ಮಾಣ ಕೌಶಲ್ಯಗಳು ಪಂಚತಂತ್ರದಲ್ಲಿ ವ್ಯಾಪಕವಾಗಿ ಕಂಡುಬರುತ್ತವೆ.

ಚಕ್ರಧರನು ಈ ಕಥೆಯನ್ನು ಹೇಳಿ ಮುಗಿಸುವ ಸಂದರ್ಭದಲ್ಲಿ ಸುವರ್ಣ ಸಿದ್ಧಿಯು ಒಂದು ಬೋಧನೆ ಮಾಡುತ್ತಾನೆ. ಅದೇನೆಂದರೆ, ದೈವವು ಅನುಕೂಲವಾಗಿದ್ದರೆ ಎಲ್ಲವೂ ಕಲ್ಯಾಣವಾಗುತ್ತದೆ. ಆದರೂ ಸತ್ಪುರುಷರ ಮಾತುಗಳನ್ನು ಕೇಳಬೇಕು. ಅದಲ್ಲದೆ ದುರ್ವರ್ತನೆ ಮಾಡಿದವನು ನಾಶವಾಗುತ್ತಾನೆ. ಒಂದುಗೂಡಿ ಕೆಲಸ ಮಾಡದವರು–

एकोदराः पृथग्ग्रीवा अन्योऽन्यफलभक्षिणः ।

असंहता विनश्यन्ति, भारण्डा इव पक्षिणः ॥[58]

ಒಂದೇ ಹೊಟ್ಟೆ ಮತ್ತು ಎರಡು ಕುತ್ತಿಗೆಗಳದ್ದು ಭಿನ್ನವಾಗಿ ಆಹಾರ ತಿನ್ನುವ ಭೇರುಂಡ ಪಕ್ಷಿಯಂತೆ ನಾಶವಾಗುತ್ತಾರೆ. ಅವರವರ ಪ್ರಾರಬ್ಧಕ್ಕೆ ಅವರವರೇ ಹೊಣೆಗಾರರು. ಇನ್ನೊಬ್ಬರು ಅದಕ್ಕೆ ಭಾಗಿಗಳಾಗಲು ಸಾಧ್ಯವಿಲ್ಲ. ಚಕ್ರಧರನು ಅದೇನೆಂದು ಕೇಳಿದಾಗ ಸುವರ್ಣಸಿದ್ಧಿಯು **ಒಂದು ಹೊಟ್ಟೆ ಮತ್ತು ಎರಡು ಕುತ್ತಿಗೆಗಳುಳ್ಳ ಭೇರುಂಡದ ಕಥೆ** ಹೇಳಿದನು.

ಒಂದು ಸರೋವರದಲ್ಲಿ ಒಂದು ಹೊಟ್ಟೆ ಮತ್ತು ಎರಡು ಕುತ್ತಿಗೆಗಳುಳ್ಳ ಭೇರುಂಡ ಎಂಬ ಹೆಸರಿನ ಪಕ್ಷಿ ವಾಸಿಸುತ್ತಿತ್ತು. ಒಮ್ಮೆ ಅಮೃತಸದೃಶವಾದ ಹಣ್ಣೊಂದನ್ನು ಸಮುದ್ರ ತೀರದಲ್ಲಿ ಅಲೆಯುತ್ತಿದ್ದ ಅದಕ್ಕೆ ಅಲೆಗಳು ತಂದು ಹಾಕಿದವು. ವಿಧಿಯು ತನಗೆ ತಂದೊದಗಿಸಿದೆಯೆಂದು ಸಂತಸದಿಂದ ತಿಂದು

---

57. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ–88, ಪು–787, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
58. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ–94, ಪು–796, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಹಾಕಿತು. ಬಹಳ ರುಚಿಯಾಗಿದೆ ಎಂದು ಹೇಳಿದ್ದು ಕೇಳಿ ಎರಡನೆಯ ಮುಖವು ತಾನೂ ಸವಿಯುವೆನೆಂದು ಸ್ವಲ್ಪ ಕೇಳಿತು. ಆದರೆ ಮೊದಲನೇ ಮುಖ ತಮಗಿರುವುದು ಒಂದೇ ಹೊಟ್ಟೆಯೆಂದು, ಆದ್ದರಿಂದ ಒಂದೇ ತೃಪ್ತಿಯಾಗುವುದು. ಬೇರೆ ಬೇರೆ ತಿನ್ನಬೇಕಾಗಿಲ್ಲ ಎಂದು ಹೇಳಿ ಉಳಿದದ್ದನ್ನು ತನ್ನ ಪ್ರಿಯೆಗೆ ಕೊಟ್ಟಿತು. ಹೆಣ್ಣು ಪಕ್ಷಿ ಸಂತೋಷಗೊಂಡು ಆಲಿಂಗನ ಚುಂಬನ ಹಾಗೂ ಒಳ್ಳೆಯ ನುಡಿಗಳಿಂದ ಅದನ್ನು ಸಂತೋಷಗೊಳಿಸಿತು. ಎರಡನೆಯ ಮುಖಕ್ಕೆ ಬಹಳ ಉದ್ವೇಗ ಹಾಗೂ ದುಃಖವುಂಟಾಯಿತು. ಹಾಗೆಯೇ, ಒಮ್ಮೆ ಎರಡನೇ ಮುಖಕ್ಕೆ ಒಂದು ವಿಷಫಲವು ಸಿಕ್ಕಿತು. ಆಗ ಅದು ಎರಡನೆಯ ಮುಖಕ್ಕೆ ಹೇಳಿತು. "ಎಲೈ ನಿರ್ದಯಿ, ಪುರುಷಾಧಮ, ಪರರನ್ನು ಉಪೇಕ್ಷಿಸುವವನೇ, ನೀನು ನನಗೆ ಮಾಡಿರುವ ಅಪಮಾನಕ್ಕೆ ತಕ್ಕ ಶಾಸ್ತಿ ಮಾಡಲು ಈ ಹಣ್ಣನ್ನು ತಿನ್ನುವೆ, ಎಂದು ಹೇಳಿ ತಿಂದೇ ಬಿಟ್ಟಿತು. ಇನ್ನೇನು ಹೇಳುವುದು, ಇಬ್ಬರೂ ಸತ್ತರು.[59]

ಕಥೆಯನ್ನು ಮುಗಿಸಿದ ಬ್ರಾಹ್ಮಣಿಯು ಹೇಳಿದಳು– "ನೀನೂ ಕೂಡ ಅತಿಯಾದ ಲೋಭದಿಂದ ನಾನು ಹೇಳಿದ ಮಾತನ್ನು ಕೇಳಲಿಲ್ಲ. ಆದ್ದರಿಂದಲೇ ವಿಷಮ ಪರಿಸ್ಥಿತಿ ಉಂಟಾಯಿತು. ಆದ್ದರಿಂದ ಅತಿಲೋಭವನ್ನು ಮಾಡಬಾರದು. ಹೀಗೆ ಬ್ರಾಹ್ಮಣಿ ಮುಂಗುಸಿಯ ಕಥೆಯಲ್ಲಿ ದೇವಶರ್ಮನಿಗೆ ಅವನ ಹೆಂಡತಿಯು ಹೀಗೆ ಹೇಳಿದಾಗ ದೇವಶರ್ಮನು ಹೇಳುತ್ತಾನೆ– "ಯಾರ ಮನೆಯಲ್ಲಿ ತಿನ್ನಲು ಏನೂ ಇಲ್ಲದಿದ್ದಾಗ, ಜೀವನಾಧಾರಕ್ಕೆ ಭಿಕ್ಷಾಟನೆ ಮಾಡಿದರೆ ಅದು ಅತಿ ಲೋಭಕ್ಕೆ ಕಾರಣವಾಗದು. ಪರೀಕ್ಷಿಸದೆ ಕೆಲಸ ಕೈಗೊಂಡವಳು ನೀನೇ. ಬಹಳ ಸಮಯದಿಂದ ನಿನ್ನ ಪುತ್ರನಂತೆಯೇ ಸಾಕಿಸಲಹಿದ, ಸುಖದಿಂದ ಮಲಗಿದ್ದ ನಮ್ಮ ಮಗನನ್ನು ಕೃಷ್ಣಸರ್ಪದಿಂದ ಕಾಪಾಡಿದ ಮುಂಗುಸಿಯನ್ನು, ವಿಚಾರಿಸದೆಯೇ, ದುಡುಕಿ ಆತುರದಿಂದ ಕೊಂದು ಹಾಕಿರುವುದೇ ಅಪರೀಕ್ಷಿತಕಾರಕ. ಈ ಮಾತುಗಳಿಂದ ದೇವಶರ್ಮನ ಹೆಂಡತಿಗೆ ತನ್ನ ತಪ್ಪು ಅರಿವಾಗಿ, ಅಪರೀಕ್ಷಿತಕಾರಕ ದೋಷವನ್ನು ಅರ್ಥೈಸಿಕೊಂಡು, ಮುಂಗುಸಿಗಾಗಿ ಸಂತಾಪಿಸಿ ಅಪಾರ ದುಃಖ ಅನುಭವಿಸಿದಳು.

ಬಳಿಕ ಧರ್ಮಾಧಿಕಾರಿಗಳು ಮಣಿಭದ್ರನಿಗೆ ಮನೆಗೆ ಹೋಗಲು ತಿಳಿಸಿ ಉಪದೇಶ ಮಾಡಿದರು. "ನಿನ್ನ ಮನೆಗೆ ಹೋಗು. ಆದರೆ ಏಕಾಂಗಿಯಾಗಿ ಅಲ್ಲ. ಸ್ವಾದಿಷ್ಟವಾದುದನ್ನು ಒಬ್ಬನೇ ತಿನ್ನಬಾರದು. ಎಲ್ಲರೂ ಮಲಗಿರುವಾಗ ಒಬ್ಬನೇ ಎದ್ದಿರಬಾರದು. ಒಬ್ಬನೇ ಯಾತ್ರೆಯನ್ನು ಮಾಡಬಾರದು. ಒಂದು ವಿಚಾರದ ಬಗ್ಗೆ ಒಬ್ಬನೇ ಚಿಂತೆಮಾಡಬಾರದು.

---

59. **ಭರತ ಬಿ ರಾವ್,** ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ,ತಂ-5, ಪು-290-291,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ,44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು-560004

अपि कापुरुषो मार्गे द्वितीयः क्षेमकारकः ।

कर्कटेन द्वितीयेन जीवितं परिरक्षितम् ॥[60]

ಅಂಜುಬುರುಕನಾದರೂ ಮತ್ತೊಬ್ಬನನ್ನು ಜೊತೆಯಲ್ಲಿ ಕರೆದುಕೊಂಡು ಹೋಗುವುದು ದಾರಿಯಲ್ಲಿ ಸುಖಕರವಾಗಿ ಇರುತ್ತದೆ. ಏಡಿಯು ತನ್ನನ್ನು ಕರೆದುಕೊಂಡು ಹೋದ ಬ್ರಾಹ್ಮಣನ ಜೀವವನ್ನು ರಕ್ಷಿಸಿತು. ನಂತರದಲ್ಲಿ **ಬ್ರಾಹ್ಮಣ ಮತ್ತು ಏಡಿಯ ಕಥೆ**ಯನ್ನು ಹೇಳಿದರು.

ಈ ಕಥೆಯಲ್ಲಿನ ಉಕ್ತಿಗಳು ಬಹಳ ಯೋಗ್ಯವಾಗಿವೆ. ಚಂದ್ರನು ಕ್ಷೀಣಿಸುವಾಗ ಸೂರ್ಯನನ್ನು ಆಶ್ರಯಿಸುತ್ತಾನೆ. ಹಾಗೂ ವರ್ಧಿಸುವಾಗ ಸಮುದ್ರವನ್ನು ಉಕ್ಕಿಸುತ್ತಾನೆ. ಹಾಗೆಯೇ ಆಪತ್ತಿನಲ್ಲಿ ಸಹಾಯ ಮಾಡುವವರು ಬೇರೆ ಬೇರೆ ವೃದ್ಧಿಕಾಲದಲ್ಲಿ ಸಂಪತ್ತನ್ನು ಅನುಭವಿಸುವವರು ಬೇರೆ. ಮಂತ್ರ, ತೀರ್ಥ, ಬ್ರಾಹ್ಮಣ, ದೇವ, ಜ್ಯೋತಿಷಿ, ವೈದ್ಯ ಹಾಗೂ ಗುರು– ಇವರಲ್ಲಿ ಯಾರಿಗೆ ಯಾವ ಭಾವನೆ ಇರುತ್ತದೆಯೋ, ಅವರಿಗೆ ಆ ರೀತಿಯ ಸಿದ್ಧಿಯಾಗುತ್ತದೆ. ಬ್ರಹ್ಮದತ್ತನು ತನಗೆ ಸರ್ಪದಿಂದ ಬರಬಹುದಾದ ಸಾವಿನಿಂದ ಏಡಿಯು ರಕ್ಷಿಸಿತು. ಏಕೆಂದರೆ ಅವನ ತಾಯಿ ಸತ್ಯವನ್ನೇ ನುಡಿದು ಮನುಷ್ಯನು ಸಹಾಯಕ್ಕೆಂದು ಯಾರನ್ನಾದರೂ ಕರೆದುಕೊಂಡು ಹೋಗಬೇಕು ಎಂದು ಸಲಹೆಮಾಡಿ ಒಂದು ಏಡಿಯನ್ನು ಸಮೀಪದ ಕೊಳದಿಂದ ತಂದು ಕೊಟ್ಟಿದ್ದಳು. ಬ್ರಹ್ಮದತ್ತನು ತಾಯಿಯ ಮಾತಿನಲ್ಲಿ ಶ್ರದ್ಧೆಯಿರಿಸಿದ್ದರಿಂದ ಅದೇ ಏಡಿ ಇವನನ್ನು ಬದುಕಿಸಿತು. ಅದಕ್ಕೇ ಹೇಳುವುದು ಒಬ್ಬರಿಗಿಂತ ಇಬ್ಬರು ಲೇಸು. ಅದರಲ್ಲೂ ಪುರುಷನಿಗೆ ಪ್ರಯಾಣಕಾಲದಲ್ಲಿ ಯಾವುದಾದರೊಂದು ಸಹಾಯ ಬೇಕು. ಒಬ್ಬನೇ ಪ್ರಯಾಣ ಮಾಡಬಾರದು. ನಂತರ ಬ್ರಾಹ್ಮಣನು ತಾನು ಹೋಗಬೇಕಾದಲ್ಲಿಗೆ ಹೋದನು.

ಅಪರೀಕ್ಷಿತಕಾರಕದಲ್ಲಿ ಮತ್ತೊಂದು ಸುಂದರ ಹಾಗೂ ಸರಳವಾದ ಶ್ಲೋಕವು ಬಡತನದ ಬೇಗೆಯನ್ನು ಬಹಳ ಸೊಗಸಾಗಿ ತಿಳಿಸುತ್ತದೆ–

वरं वनं व्याघ्रगजादिसेवितं जलेन हीनं बहुकण्टकावृत्तम् ।

तृणानि शय्या परिधानवल्कलं न बन्धुमध्ये धनहीनजीवितम् ॥[61]

ಅಂದರೆ, ಹುಲಿ, ಆನೆ ಇವುಗಳಿಂದ ಕೂಡಿರುವುದೂ, ಜನರಿಲ್ಲದುದೂ, ಬಹಳ ಹೆಚ್ಚಾದ ಮುಳ್ಳುಗಳಿಂದ ತುಂಬಿರುವುದೂ, ಹುಲ್ಲೇ ಹಾಸುಗೆಯಾದುದೂ, ನಾರುಬಟ್ಟೆಯೇ ಉಡುಗೆಯಾದುದೂ ಆದ

60. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ–96, ಪು–801, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

61. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ–23, ಪು–722 (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಕಾಡಾದರೂ ವಾಸಿ; ಬಂಧುಗಳ ಮಧ್ಯೆ ಹಣವಿಲ್ಲದ ಬಾಳು ಸಲ್ಲದು. ಇದು ಒಂದು ರೀತಿಯಲ್ಲಿ ಬದುಕಿನ ಶಿಕ್ಷಣವೇ ಹೌದು.

ಮಣಿಭದ್ರನು ಧರ್ಮಾಧಿಕಾರಿಗಳ ಉಪದೇಶವನ್ನು ಕೇಳಿ, ಅವರ ಅನುಮತಿಯನ್ನು ಪಡೆದು ಒಬ್ಬ ಸಹಾಯಕನೊಡನೆ ತನ್ನ ಮನೆಗೆ ಹೋಗಿ ಬಹಳ ಕಾಲ ರಾಜಭೋಗಗಳನ್ನು ಅನುಭವಿಸುತ್ತಾ ಸುಖವಾಗಿ ಕಾಲ ಕಳೆದನು ಎಂಬಲ್ಲಿಗೆ ವಿಷ್ಣುಶರ್ಮವಿರಚಿತ ಪಂಚತಂತ್ರದ ಐದನೆಯತಂತ್ರವಾದ ಅಪರೀಕ್ಷಿತಕಾರಕವು ಸುಸಂಪನ್ನವಾದುದು.

ವಿಷ್ಣುಶರ್ಮರು ರಾಜಕುಮಾರರನ್ನು ಕುರಿತು, "ಕೇಳಿದಿರಾ? ರಾಜನಾದವನು ಬಹಳ ಎಚ್ಚರಿಕೆಯಿಂದ ಇರಬೇಕು. ಹಾಗೆಯೇ ಬುದ್ಧಿವಂತಿಕೆಯೂ ಮುಖ್ಯ. ವಿವೇಚನೆಯಿಂದ ಮಂತ್ರಿಗಳ ಮಾತನ್ನು ಕೇಳಬೇಕು. ಕೊನೆಗೆ ತನ್ನ ವಿವೇಕದಿಂದ ವರ್ತಿಸಬೇಕು. ರಾಜಪದವಿ ಎಂದರೆ ಆಟದ ಸಿಂಹಾಸನವಲ್ಲ. ಪುರಾಣ, ವ್ಯಾಕರಣಶಾಸ್ತ್ರ, ಇತಿಹಾಸ ಇತ್ಯಾದಿಗಳನ್ನು ಕಲಿತರೆ ಮಾತ್ರ ಆಪತ್ತಿನಿಂದ ಪಾರಾಗಲು ಸಾಧ್ಯ. ರಾಜ್ಯವನ್ನು ಉಳಿಸಿಕೊಳ್ಳಬಹುದು. ಇರಲಿ. ಇದನ್ನೆಲ್ಲಾ ಚೆನ್ನಾಗಿ ಆಲೋಚಿಸಿರಿ. ನಾಳೆ ನಾನು ನಿಮ್ಮ ಉತ್ತರಕ್ಕಾಗಿ ಕಾಯುತ್ತಿರುತ್ತೇನೆ ಎಂದು ಎದ್ದರು. ಇಲ್ಲಿ ವಿಷ್ಣುಶರ್ಮರು ರಾಜಕುಮಾರರಿಗೆ ಇದುವರೆಗೆ ತಿಳಿದಿದ್ದರ ಬಗ್ಗೆ ಮೌಲ್ಯಮಾಪನ ಮಾಡಲು ರಾಜಕುಮಾರರಿಗೆ ಮನೆಗೆಲಸವನ್ನು ಕೊಟ್ಟರು.[62]

ಮರುದಿನ ವಿಷ್ಣುಶರ್ಮರು ತಮಗಾಗಿ ಕಾಯುತ್ತಿದ್ದ ರಾಜಕುಮಾರರನ್ನು ಉದ್ದೇಶಿಸಿ– "ರಾಜಕುಮಾರರೇ, ಈ ದಿನ ಮತ್ತೊಂದು ಹೊಸಕಥೆಯನ್ನು ಎಂದು ಇನ್ನೇನು ಹೇಳಲು ಉಪಕ್ರಮಿಸಿದಾಗ ಬಹುಶಕ್ತಿಯು ಅಷ್ಟರಲ್ಲೇ ಎದ್ದು ನಿಂತು, "ಪೂಜ್ಯರೇ ನಮಗೆ ಕಥೆಯಲ್ಲಿ ಆಸಕ್ತಿ ಇಲ್ಲವಾಗಿದೆ." ಎಂದನು. ವಿಷ್ಣುಶರ್ಮರು ಅದಕ್ಕೆ ಏಕೆ? ರಾಜಕುಮಾರರೇ, ಇದುವರೆಗೂ ಕುತೂಹಲದಿಂದ ಕಥೆಗಳನ್ನು ಒಂದರ ನಂತರ ಮತ್ತೊಂದು ಕೇಳುತ್ತಿದ್ದಿರಿ. ಈಗೇಕೆ ಬೇಡವಾಯಿತು? ಕೇಳಿ ಕೇಳಿ ಬೇಸರವಾಯಿತೇ? ಎಂದರು. ಅದಕ್ಕೆ ರಾಜಕುಮಾರರು "ಹಾಗಲ್ಲ ಗುರುಗಳೇ ನೀವು ನಿಮ್ಮೊಡನೆ ನಮ್ಮನ್ನು ಕರೆತಂದದ್ದು ರಾಜನೀತಿ ಕುಶಲರನ್ನಾಗಿ ಮಾಡಲು ಎಂಬ ವಿಚಾರ ನಮಗೆ ಚೆನ್ನಾಗಿ ಅರಿವಾಗಿದೆ. ನೀವು ಏನನ್ನು ಹೇಳದಿದ್ದರೂ ನಾವೇ ಸ್ವಪ್ರಯತ್ನದಿಂದ ಅರ್ಥಮಾಡಿಕೊಳ್ಳುವಷ್ಟರ ಮಟ್ಟಿಗೆ ವಿಚಾರಶೀಲರಾಗಿದ್ದೇವೆ. ನಮಗೀಗ ಜವಾಬ್ದಾರಿ ಏನೆಂಬುದು ಅರಿವಾಗಿದೆ ಗುರುಗಳೇ," ಎಂದನು ಅನಂತಶಕ್ತಿ.

---

62. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ–ಅಪರೀಕ್ಷಿತಕಾರಕಂ, ಪು–235, (2015) ವರ್ಣಿಲ, 39/2–11, ಕಲ್ಯಾಣಿ ಗಾರ್ಡನ್, ಬನಶಂಕರಿ 1ನೇ ಹಂತ, ಬೆಂಗಳೂರು–560050.

यद्वाञ्छति दिवा मर्त्यो वीक्षते वा करोति वा ।

तत्स्वप्नेऽपि तदभ्यासाद् ब्रूते वाथ करोति वा ॥[63]

ಹಗಲಿನಲ್ಲಿ ಮನುಷ್ಯನು ಏನನ್ನು ಇಚ್ಛಿಸುತ್ತಾನೋ, ನೋಡುತ್ತಾನೋ ಅಥವಾ ಮಾಡುತ್ತಾನೋ, ಅದನ್ನೇ ಅಭ್ಯಾಸ ಬಲದಿಂದ ಕನಸಿನಲ್ಲಿಯೂ ಹೇಳುತ್ತಾನೆ ಅಥವಾ ಮಾಡುತ್ತಾನೆ. ಅಂದರೆ ಶ್ರದ್ಧಾವಂತನಾಗಿದ್ದು, ಆಸಕ್ತಿಯಿಂದ ಕೇಳಿದ್ದರೆ ನೋಡಿದ್ದರೆ ಅಥವಾ ಮಾಡಿದ್ದರೆ, ಆ ವಿಚಾರಗಳು ಕನಸುಮನಸ್ಸಿನಲ್ಲಿಯೂ ಮೆಲುಕುಹಾಕುತ್ತಿರುತ್ತದೆ ಎಂದು ಅರ್ಥೈಸಿದರೆ ಸೂಕ್ತವಾಗಿರುತ್ತದೆ. ವಿಷ್ಣುಶರ್ಮರು ಅಷ್ಟರಮಟ್ಟಿಗೆ ಅರಸುಕುಮಾರರಿಗೆ ಪ್ರೇರಣೆಮಾಡಿದ್ದಾರೆ.

"ನಿಮ್ಮನ್ನು ಈ ಮಟ್ಟಕ್ಕೆ ತರಬೇಕೆಂಬ ಪ್ರಯತ್ನವನ್ನೇ ನಾನು ಕಥೆಗಳ ಮೂಲಕ ಮಾಡಿದ್ದು. ಕಥೆಯೆಂಬುದು ಒಂದು ನೆಪವಷ್ಟೆ" ಎಂದರು ವಿಷ್ಣುಶರ್ಮರು.

ಬಹುಶಕ್ತಿ ಬಹಳ ಸಂತಸದಿಂದ ಕೈಮುಗಿದು "ಗುರುಗಳೇ ನಿಮ್ಮ ಕಥೆಗಳಲ್ಲಿ ಬರುವ ಪಾತ್ರಗಳೆಲ್ಲವೂ ಪ್ರಾಣಿಪಶುಪಕ್ಷಿಗಳಾಗಿದ್ದರೂ, ಮನುಷ್ಯರ ಜೊತೆಯಲ್ಲಿ ಮನುಷ್ಯರಂತೆಯೇ ನೀತಿನಿಯಮ, ಕರ್ತವ್ಯಗಳನ್ನು ಪಾಲಿಸುವುದರ ವಿಶೇಷತೆಯು ನಮ್ಮಲ್ಲಿ ಒಂದು ರೀತಿಯಲ್ಲಿ ನಮ್ಮ ಬುದ್ಧಿಶಕ್ತಿ ಹಾಗೂ ಆಲೋಚನೆಯ ಪುನರುಜ್ಜೀವನವನ್ನೇ ಉಂಟುಮಾಡಿತು. ಅಂದರೆ ಪ್ರಾಣಿ, ಪಶುಪಕ್ಷಿಗಳೇ ಹಾಗಿರುವಾಗ ಬುದ್ಧಿಶಕ್ತಿಯಿರುವ ನಾವು ಹಾಗಿಲ್ಲದಿದ್ದರೆ, ಎಂಥಹ ನಿಷ್ಪ್ರಯೋಜಕ, ವ್ಯರ್ಥ ಜನ್ಮವಾದೀತು ಎಂಬ ಜಾಗೃತಿ ಮೂಡಿದೆ. ನೀವು ಅವುಗಳ ದೃಷ್ಟಾಂತಗಳನ್ನು ನಿದರ್ಶನವಾಗಿಟ್ಟುಕೊಂಡು ನಮ್ಮಂಥಹ ಉದ್ಧಟರಿಗೆ ರಾಜನೀತಿ ಕೌಶಲ್ಯವನ್ನು ಕಲಿಸಿಕೊಟ್ಟಿದ್ದೀರಿ" ಎಂದನು. ಮುಂದುವರೆಸಿ___ ಆಚಾರ್ಯರೇ, ಪ್ರಾರಂಭದಲ್ಲಿ **ನರಿ, ಎತ್ತು ಸಿಂಹಗಳ ಕಥೆ**ಯನ್ನು ಕೇಳುತ್ತಿದ್ದಾಗ ಏನೂ ಅನ್ನಿಸುತ್ತಿರಲಿಲ್ಲ. ಕಥೆಯನ್ನು ಆಲಿಸುತ್ತಿದ್ದೇವಷ್ಟೆ. ನಂತರದಲ್ಲಿ ಮುಂದಿನ ಕಥೆಗಳಲ್ಲಿ ಪ್ರಾಣಿಪಶುಪಕ್ಷಿಗಳಗೂ ಮನುಷ್ಯರಂತೆ ಮಾತನಾಡುವುದು, ಚಿಂತಿಸುವುದು, ಭಾವನೆಗಳನ್ನು ವ್ಯಕ್ತಪಡಿಸುವುದು, ಕಾರ್ಯ ನಿರ್ವಹಿಸುವುದು ಎಲ್ಲಾದರೂ ಉಂಟೇ ಅನ್ನಿಸುತ್ತಿತ್ತು. ಆನಂತರದಲ್ಲಿ ನಮ್ಮ ಆಲೋಚನೆ, ವಿವೇಚನೆ ಬೆಳೆದು, ನೀವು ಈ ಪ್ರಾಣಿಪಶುಪಕ್ಷಿಗಳನ್ನು ಪಾತ್ರಗಳಲ್ಲಿ ತಂದ ವಿಶೇಷತೆ ನಮ್ಮಲ್ಲಿ ಹೆಚ್ಚಿನ ಕುತೂಹಲ ಉಳಿಯಲಿ, ಆಸಕ್ತಿ ಉಂಟಾಗಲಿ ಎಂಬುದಕ್ಕೆ ಎಂದು ಅರ್ಥವಾಯಿತು. ಕೊನೆಕೊನೆಗೆ ಪಾತ್ರಗಳ ಬಗ್ಗೆ ಯೋಚಿಸುತ್ತಾ, ಪರಕಾಯಪ್ರವೇಶ ಮಾಡಿದಂತೆ ನಮ್ಮನ್ನೇ ನಾವು ಆ ಜಾಗಗಳಲ್ಲಿ

---

63. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ- ಶ್ಲೋ-144, ಪು-79,(1993).ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಇರಿಸಿಕೊಳ್ಳುತ್ತಾ, ನಮ್ಮ ಜವಾಬ್ದಾರಿ ಏನು? ಕರ್ತವ್ಯವೇನು? ಭವಿಷ್ಯದ ನಮ್ಮ ಗುರಿ ಏನು? ಇತ್ಯಾದಿ ಅನೇಕ ವಿಚಾರಗಳ ಅರಿವುಂಟಾಗತೊಡಗಿತು.[64]

ಶೈಕ್ಷಣಿಕ ಮನೋವಿಜ್ಞಾನದ ದೃಷ್ಟಿಯಿಂದ ವಿಶ್ಲೇಷಿಸಿ, ನೋಡಿದಾಗ, ಒಂದು ಬಹಳ ಮುಖ್ಯವಾದ ಅಂಶವಿದೆ. ಅದೇನೆಂದರೆ, ಬೋಧನಾಕ್ರಮದಲ್ಲಿ ಕೆಲವು ಸೂತ್ರಗಳು ಕಂಡುಬರುತ್ತವೆ. ಉದಾಹರಣೆಗೆ:- ಸರಳದಿಂದ ಸಂಕೀರ್ಣದೆಡೆಗೆ, ಸುಲಭ ವಿಚಾರಗಳಿಂದ ಕಠಿಣ ವಿಚಾರಗಳೆಡೆಗೆ, ತಿಳಿದಿರುವ ಅಥವಾ ಪರಿಚಯವಿರುವ ವಿಚಾರಗಳಿಂದ ತಿಳಿಯದಿರುವ ಅಥವಾ ಹೊಸದರೆಡೆಗೆ, ಬೋಧನೆಯ ಈ ಮಾರ್ಗಗಳು ಬಹಳ ಪರಿಣಾಮಕಾರಿಯಾದವುಗಳು. ಇದರಿಂದ ಮಕ್ಕಳು ಸುಲಭವಾಗಿ ಗ್ರಹಿಸುವರು, ಆಸಕ್ತಿಯನ್ನು ಹೆಚ್ಚಿಸಿಕೊಳ್ಳುವರು, ಸದಾ ಕ್ರಿಯಾತ್ಮಕವಾಗಿರುವರು. ಸೃಜನಶೀಲರಾಗುವರು. ಉದಾಹರಣೆಗೆ:-

न विना पार्थिवो भृत्यैर्न भृत्याःपार्थिवं विना ।

तेषां च व्यवहारोऽयं परस्परनिबन्धनः ॥[65]

ಪಂಚತಂತ್ರದ ಐದೂ ತಂತ್ರಗಳ ಮೂಲಕ ಅನೇಕತೆಗಳಲ್ಲಿ ಏಕತೆಯಿಂದ ಕೂಡಿರುವ ಕಥಾಗುಚ್ಛಗಳಲ್ಲಿ ಈ ರೀತಿಯ ಬೋಧನಾಸೂತ್ರಗಳನ್ನು ಕಾಣಬಹುದು. ದಿನನಿತ್ಯದ ಅನುಭವಗಳನ್ನು, ಬದುಕಿನ ಪಾಠಗಳನ್ನು ವಿವಿಧ ಉತ್ತಮ ಸನ್ನಿವೇಶದಲ್ಲಿ, ಸೂಕ್ತ ದೃಷ್ಟಾಂತಗಳನ್ನು ಸಂಯೋಜನೆ ಮಾಡಿ, ಈಗಾಗಲೇ ರಾಜಕುಮಾರರಿಗೆ ತಿಳಿದಿರುವ ವಿಚಾರಗಳನ್ನು ಪ್ರಸ್ತಾಪ ಮಾಡುತ್ತಾ, ಅದರ ಮೂಲಕ ಹೊಸವಿಚಾರಗಳ ಕಡೆಗೆ ಅವರ ಗಮನವನ್ನು ಸೆಳೆದು, ಕುತೂಹಲದಿಂದ ಅವರೇ ಇನ್ನೂ ಹೆಚ್ಚಿನ ತಿಳುವಳಿಕೆ ಬೆಳೆಸಿಕೊಳ್ಳಲು ವಿಷ್ಣುಶರ್ಮರು ಮಾರ್ಗದರ್ಶನ ನೀಡಿದ್ದಾರೆ. ಇದಕ್ಕೆ ನಿದರ್ಶನವೆಂದರೆ, ರಾಜಕುಮಾರರು ತಮ್ಮ ಗುರುಗಳ ಬಗ್ಗೆ ಹೇಳಿರುವ ಅಭಿಪ್ರಾಯವೇ." ವಿದ್ಯಾರ್ಥಿಗಳೇ ಅವರ ಅಧ್ಯಾಪಕರ ಬಗ್ಗೆ ತೀರ್ಮಾನ ಕೊಡುವ ನಿಜವಾದ ನ್ಯಾಯಾಧೀಶರು.(Students are the best judges of their Teachers)

ಅನಂತಶಕ್ತಿಯು ತನ್ನ ಅಭಿಪ್ರಾಯವನ್ನು ಹೀಗೆ ಹೇಳುತ್ತಾನೆ. "ಮನುಷ್ಯರಂತೆ ಇತರ ಜೀವಿಗಳಿಗೂ ಭಾವನೆಗಳಿವೆ, ಎಂಬುದನ್ನು ಅರ್ಥೈಸಿಕೊಂಡೆವು ಗುರುಗಳೆ. ರಾಜನು ಮನುಷ್ಯರಿಗೆ ಮಾತ್ರವಲ್ಲ. ತನ್ನ ನಾಡಿನ ಎಲ್ಲವಕ್ಕೂ ರಾಜನೇ ಆಗಿರುತ್ತಾನೆ. ಹೌದು. ಹೀಗಾಗಿ ಅವನ ನೀತಿ ಎಲ್ಲರನ್ನೂ ಸಮಾನವಾಗಿ

---

64. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ-ಅಪರೀಕ್ಷಿತಕಾರಕಂ, ಪು-235-236, (2015) ವರ್ಣಿಲ, 39/2-11, ಕಲ್ಯಾಣಿ ಗಾರ್ಡನ್, ಬನಶಂಕರಿ 1ನೇ ಹಂತ, ಬೆಂಗಳೂರು-560050
65. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ- ಶ್ಲೋ-87, ಪು-49(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಕಾಣುವಂತಿರಬೇಕು" ಎಂಬುದೂ ಅರ್ಥವಾಯಿತು. "ಆದ್ದರಿಂದ ಇವತ್ತಿನಿಂದ ನಮಗೆ ನೇರವಾಗಿ ರಾಜಶಾಸ್ತ್ರ, ಅರ್ಥಶಾಸ್ತ್ರ ಮತ್ತು ಸಮಾಜಶಾಸ್ತ್ರವನ್ನು ತಿಳಿಸಿ ಗುರುಗಳೆ." ನಾವು ತಿಳಿದುಕೊಳ್ಳಲು ಸಿದ್ಧರಿದ್ದೇವೆ ಎಂದು ಮೂವರೂ ಕೈಮುಗಿದು ನಮಸ್ಕರಿಸಿದರು. ವಿಷ್ಣುಶರ್ಮರಿಗೆ ಆನಂದ ಭಾಷ್ಪವೇ ಸುರಿದು ಶಿಷ್ಯರನ್ನು ಆಲಂಗಿಸಿಕೊಂಡರು. ಇದು ನಿಜಕ್ಕೂ ಒಬ್ಬರು ಪ್ರತಿಭಾವಂತ ಬೋಧಕರ ವೃತ್ತಿತೃಪ್ತಿ, ವೃತ್ತಿ ನೀತಿ, ವೃತ್ತಿ ಗೌರವ ಹಾಗೂ ಸಾರ್ಥಕತೆ. ಇದರ ಮುಂದೆ ರಾಷ್ಟ್ರಪ್ರಶಸ್ತಿಯೂ ಸಹ ಕಡಿಮೆಯೇ. ಶೈಕ್ಷಣಿಕ ಮನೋವಿಜ್ಞಾನದಲ್ಲಿ ಒಬ್ಬ ಉತ್ತಮ ಬೋಧಕನ ಲಕ್ಷಣಗಳನ್ನು ಹೇಳುವಾಗ:–

**Wiliam Aurthur Ward** ಎಂಬ **American Motivational Speaker** ಇವರು ಉಪಾಧ್ಯಾಯರ ಬಗೆಯನ್ನು ಹೇಳಿದ್ದಾರೆ: **The Mediocre teacher tells; The Good teacher explains; The Superior teacher demonstrates; The Great teacher inspires.**

ಒಬ್ಬ ಸಾಧಾರಣ ಉಪಾಧ್ಯಾಯನು ಹೇಳುತ್ತಾನೆ; ಒಬ್ಬ ಉತ್ತಮ ಉಪಾಧ್ಯಾಯನು ವಿವರಿಸುತ್ತಾನೆ; ಒಬ್ಬ ಶ್ರೇಷ್ಠ ಉಪಾಧ್ಯಾಯನು ಪ್ರದರ್ಶನ ನೀಡುತ್ತಾನೆ. ಒಬ್ಬ ಮಹಾನ್ ಉಪಾಧ್ಯಾಯನು ಸ್ಫೂರ್ತಿ ನೀಡುವನು ಅಥವಾ ಪ್ರೇರೇಪಿಸುವನು.

ನಾವು ಇದುವರೆಗೆ ವಿಷ್ಣುಶರ್ಮರು ಮಾಡಿರುವ ಬೋಧನಾ ವಿಧಾನ, ಶಿಷ್ಯರನ್ನು ಅತ್ಯಲ್ಪ ಕಾಲದಲ್ಲೇ, ವಿಶೇಷ ಅಭಿಪ್ರೇರಣೆ, ಆಸಕ್ತಿ ತುಂಬಿ, ಕಲಿಕೆಯಲ್ಲಿ ಪ್ರೀತಿಯನ್ನುಂಟುಮಾಡಿ, ರಾಜಕುಮಾರರು ಸ್ವತಃ ಅವರುಗಳೇ ಗುರುಗಳಿಂದ ಹೆಚ್ಚು ಹೆಚ್ಚು ವಿಚಾರಗಳನ್ನು ಕುತೂಹಲದಿಂದ ತಿಳಿಯಲು ಸ್ವತಂತ್ರವಾಗಿ ಕೇಳುವಂತೆ ತಯಾರು ಮಾಡಿರುವುದನ್ನು ವಿಶ್ಲೇಷಣೆ ಮಾಡಿದಾಗ ಇವರು ಒಬ್ಬ ಪ್ರತಿಭಾನ್ವಿತ ಮಹಾನ್ ಉಪಾಧ್ಯಾಯರ ಸಾಲಿಗೆ ಬರುತ್ತಾರೆ. ಜೊತೆಯಲ್ಲಿ ಇವರ ಬೋಧನಾ ಮಾಧ್ಯಮ ಬಹಳ ಪರಿಣಾಮಕಾರಿಯಾಗಿದ್ದು, ಒಂದು ರೀತಿಯಲ್ಲಿ ಶಿಷ್ಯರಿಗೆ ಮಾತುಕತೆ ಅಥವಾ ಸಮಾಲೋಚನೆ ಕ್ರಮದಲ್ಲಿರುತ್ತದೆ. ಆಂಗ್ಲ ಪ್ರಬಂಧದ ಪಿತಾಮಹ ಫ್ರಾನ್ಸಿಸ್ ಬೇಕನ್ ಹೇಳಿರುವಂತೆ:–

**"Reading maketh a full man; Conference a ready man; and writing an exact man", "It is good in discourse and speech conversation,to vary and intermingle speech of the present occasion with arguments, tales with reasons, asking of questions with telling opinions, jest with earnest."**[66]

---

66. Francies Bacon Essays, "Off Studies".

'ಓದು' ಒಬ್ಬ ಪೂರ್ಣ ಮನಷ್ಯನನ್ನಾಗಿ ಮಾಡುತ್ತದೆ: 'ಕಾನ್ಫರೆನ್ಸ್' ಅಂದರೆ, ಬೋಧನೆಯನ್ನು ಸಮಾಲೋಚನೆ ಅಥವಾ ಮಾತುಕತೆ ಮೂಲಕ ನಡೆಸಿದಾಗ, ಕಲಿಯುವವರನ್ನು ಸಿದ್ಧಮನುಷ್ಯನನ್ನಾಗಿ ಮಾಡುತ್ತದೆ: 'ಬರವಣಿಗೆ' ನಿಖರವಾದ ಮನುಷ್ಯನನ್ನಾಗಿ ಮಾಡುತ್ತದೆ. ಹೀಗೆ ರಾಜಕುಮಾರರನ್ನು ವಿಷ್ಣುಶರ್ಮರು ಪಂಚತಂತ್ರದಲ್ಲಿ ಪ್ರಾಣಿಪಶುಪಕ್ಷಿಗಳನ್ನು ವಿವಿಧಪಾತ್ರಗಳಲ್ಲಿ ಆರೋಪಿಸಿ, ಒಂದು ವಿಶೇಷ ತಂತ್ರಗಾರಿಕೆ ಬಳಸಿ ನೀತಿಶಿಕ್ಷಣ, ಜೊತೆಜೊತೆಯಲ್ಲಿ ವ್ಯವಸ್ಥಿತವಾಗಿ ರಾಜನೀತಿ ಶಿಕ್ಷಣವನ್ನು ಸೂಕ್ತ ಸನ್ನಿವೇಶದಲ್ಲಿ ಅಳವಡಿಸಿಕೊಂಡು, ಕಥೆ, ಉಪಕಥೆ, ಸೂಕ್ತಿಗಳು, ಸುಭಾಷಿತಗಳ ಮೂಲಕ ಮೂವರು ಮಂದಮತಿಗಳನ್ನೂ ತಾವೇ ಇನ್ನೂ ಹೆಚ್ಚಿನ ವಿಚಾರಗಳನ್ನು ತಿಳಿಯುವಷ್ಟರಮಟ್ಟಿಗೆ ಸಿದ್ಧಗೊಳಿಸಿದ್ದಾರೆ.

ವಿಷ್ಣುಶರ್ಮರು ಬಹಳ ಸಂತೊಷದಿಂದ ರಾಜಕುಮಾರರನ್ನು ಕುರಿತು, "ನಾನು ಈ ದಿನಕ್ಕಾಗಿ ಕಳೆದೆರಡು ತಿಂಗಳಿನಿಂದ ಕಾಯುತ್ತಿದ್ದೆ. ನಿಮ್ಮನಿಮ್ಮಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗಮನಿಸುತ್ತಿದ್ದೆ. ನಿಮ್ಮ ತಂದೆಯವರ ಮುಂದೆ ನಾನು ಮಾಡಿದ್ದ ಪ್ರತಿಜ್ಞೆಯಂತೆ, ಆರು ಮಾಸಗಳಲ್ಲಿ ನಿಮ್ಮಗಳನ್ನು ಸಕಲಶಾಸ್ತ್ರಾದಿ ಪಾರಂಗತರನ್ನಾಗಿ ಮಾಡುತ್ತೇನೆಂದು ನಂಬಿ, ನನ್ನ ಪ್ರಯತ್ನ ನಡೆಸಿದ್ದು ಫಲಕಾರಿಯಾಯಿತು. ನೀವುಗಳು ಹೇಳಿದ ಮಾತುಗಳೆಲ್ಲವೂ ಸತ್ಯವೇ. ನಾನು ನಿರೀಕ್ಷಿಸಿದ್ದೂ ಅದೇ. ಇಂದಿನಿಂದಲೇ ನಿಮ್ಮಿಷ್ಟದಂತೆ ನೇರವಾಗಿ ನ್ಯಾಯ, ಧರ್ಮ, ನೀತಿ ಮೊದಲಾದ ಶಾಸ್ತ್ರಗಳನ್ನು, ಕಥೆಗಳ ಮೂಲಕ ಪರಿಚಯಿಸುತ್ತೇನೆ " ಎಂದರು.[67]

ನಂತರ ಮೂರೇ ಮಾಸಗಳಲ್ಲಿ ರಾಜಕುಮಾರರನ್ನು ಪರಿಪೂರ್ಣ ರಾಜನೀತಿ ಕುಶಲರನ್ನಾಗಿ ಮಾಡಿ, ಹೇಳಿದ್ದ ಸಮಯಕ್ಕಿಂತ ಸ್ವಲ್ಪ ಮೊದಲೇ ಮಹಿಲಾರೋಪ್ಯನಗರಕ್ಕೆ ಕರೆದೊಯ್ದು ಅಮರಶಕ್ತಿ ರಾಜನಿಗೊಪ್ಪಿಸಿದರು. ವಿಷ್ಣುಶರ್ಮರ ಕೋರಿಕೆಯಂತೆ ತಂದೆಯೇ ಮಕ್ಕಳ ರಾಜನೀತಿ ಪರಿಜ್ಞಾನದ ಬಗ್ಗೆ ಪರೀಕ್ಷಿಸಲು, ಅವರು ನಿರರ್ಗಳವಾಗಿ ಕೇಳಿದ್ದಕ್ಕೆಲ್ಲಾ ಸಮರ್ಪಕ ಉತ್ತರಗಳನ್ನು ನೀಡಿದರು. ಅಮರಶಕ್ತಿ ರಾಜನ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ರಾಜನು ತುಂಬಿದ ಸಭೆಯಲ್ಲಿ ವಿಷ್ಣುಶರ್ಮರನ್ನು ಗೌರವಿಸಿ ಸುವರ್ಣಾಭಿಷೇಕವನ್ನು ಮಾಡಿದನು. ವಿಷ್ಣುಶರ್ಮರನ್ನು ಸುವರ್ಣ ನಾಣ್ಯಗಳನ್ನು ಸ್ವೀಕಾರಮಾಡಬೇಕಾಗಿ ರಾಜನು ಬಹಳವಾಗಿ ಕೋರಿಕೊಂಡನು. ಆದರೆ ವಿಷ್ಣುಶರ್ಮರು ಇದಕ್ಕೆ ಒಪ್ಪಲಿಲ್ಲ. ಆದರೆ ರಾಜನ ಒತ್ತಾಯಕ್ಕೆ, ಬೇಸರವನ್ನು ಉಂಟುಮಾಡಬಾರದೆಂದು ಒಂದೇ ಒಂದು ನಾಣ್ಯವನ್ನು ಮಾತ್ರ ಸ್ವೀಕರಿಸಿ ಹೀಗೆ ಹೇಳಿದರು." ರಾಜ, ಅಗತ್ಯಕ್ಕಿಂತ ಹೆಚ್ಚಿಗೆ ಯಾರೂ ಏನನ್ನೂ ಕೂಡಿಸಿಡಬಾರದೆಂದು ರಾಜಕುಮಾರರಿಗೆ ಬೋಧಿಸಿದ ನಾನೇ ದುರಾಸೆಯಿಂದ ಎಲ್ಲವನ್ನೂ ಸ್ವೀಕರಿಸಿದರೆ, ನುಡಿಗೂ, ನಡೆಗೂ ವ್ಯತ್ಯಾಸವಾಗುವುದು. ನಿಮ್ಮೆಲ್ಲರ

---

67. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ-ಅಪರೀಕ್ಷಿತಕಾರಕಂ, ಪು-235-236, (2015) ವರ್ಣಿಲ, 39/2-11,ಕಲ್ಯಾಣಿ ಗಾರ್ಡನ್, ಬನಶಂಕರಿ 1ನೇ ಹಂತ, ಬೆಂಗಳೂರು-560050

ಪ್ರೀತಿ ಮತ್ತು ಗೌರವಕ್ಕೆ ಒಂದು ನಾಣ್ಯ ಮಾತ್ರ ಸ್ವೀಕರಿಸಿದ್ದೇನೆ."[68] ಇಲ್ಲಿ ವಿಷ್ಣುಶರ್ಮರ ವೃತ್ತಿ ಗೌರವ, ಘನತೆ ಎಷ್ಟಿತ್ತೆಂಬುದನ್ನು ನೋಡಬಹುದು. ಹೀಗೆ ಒಬ್ಬ ಆದರ್ಶ ಶಿಕ್ಷಕರಾಗಿ ಆ ಮೂರನೇ ಶತಮಾನದಲ್ಲೇ ಇಂದಿಗೂ ಯೋಚಿಸಬಹುದಾದಂಥಹ ನವನವೀನ ಚಿಂತನೆಗಳನ್ನು ಬೆಳೆಸಿಕೊಂಡಿದ್ದರು. ಬೋಧನಾ ವೃತ್ತಿಯಲ್ಲಿ ತೊಡಗಿಸಿಕೊಂಡಿರುವ ಪ್ರತಿಯೊಬ್ಬರಿಗೂ ಇವರ ವಿಚಾರಗಳು ಆದರ್ಶವಾಗಿರುತ್ತದೆ:-

यः पठति लिखति पश्यति परिपृच्छति पण्डितानुपाश्रयति ।

तस्य दिवाकरकिरणैर्नलिनीदलमिव विकास्यते बुद्धिः ॥[69]

ಯಾವನು ಓದಿ, ಬರೆದು, ನೋಡಿ, ಬಗೆಬಗೆಯಾಗಿ ಪ್ರಶ್ನೆಮಾಡಿ, ಪಂಡಿತರನ್ನು ಆಶ್ರಯಿಸುವನೋ ಅವನ ಬುದ್ಧಿಯು ಸೂರ್ಯಕಿರಣಗಳಿಂದ ತಾವರೆಯದಳ ಅರಳುವಂತೆ ವಿಕಾಸಗೊಳ್ಳುವುದು. ಹೀಗೆಯೇ ರಾಜಕುಮಾರರೂ ಸಹ ಗುರುಗಳ ಸಲಹೆ ಸೂಚನೆಗಳನ್ನು ಶಿರಸಾ ಪಾಲಿಸಿ, ಬಗೆಬಗೆಯ ಪ್ರಶ್ನೆಗಳನ್ನು ಕೇಳುತ್ತಾ, ವಿಚಾರಗಳನ್ನು ಚೆನ್ನಾಗಿ ಅರ್ಥೈಸಿಕೊಂಡು ಬಹಳ ಉತ್ತಮ ಕಲಿಕೆಯನ್ನು ರೂಢಿಸಿಕೊಂಡರು. ಗುರುಗಳ ಪ್ರೇರೇಪಣೆ ಹಾಗೂ ಅನುಗ್ರಹ ಅಷ್ಟೇ ಮುಖ್ಯವಾಗಿತ್ತು.

ಕೊನೆಯಲ್ಲಿ ವಿಷ್ಣುಶರ್ಮರು, ಕೊಟ್ಟ ಮಾತನ್ನು ಉಳಿಸಿಕೊಳ್ಳುವಂತೆ, ರಾಜಕುಮಾರರು ಶ್ರದ್ಧೆಯಿಂದ, ಸತತ ಪರಿಶ್ರಮದಿಂದ ತಮ್ಮ ವರ್ತನೆಯನ್ನು ಪರಿವರ್ತನೆ ಮಾಡಿಕೊಂಡು, ಉತ್ತಮ ವಿದ್ಯಾರ್ಥಿಗಳಾಗಿ ನಡೆದುಕೊಂಡದ್ದಕ್ಕೆ ಅಭಿನಂದಿಸಿ, ಆಶೀರ್ವದಿಸಿ ಸಭೆಯಿಂದ ನಿರ್ಗಮಿಸಿದರು. ಆಸ್ಥಾನದಲ್ಲಿದ್ದ ಸರ್ವರೂ ಎದ್ದು ನಿಂತು ಗೌರವದಿಂದ ಅವರನ್ನು ಬೀಳ್ಕೊಟ್ಟರು. ನಿಜಕ್ಕೂ ಗುರುಶಿಷ್ಯರ ಬಾಂಧವ್ಯ ಎಂದರೆ ಹೀಗಿರಬೇಕು. ಈ ಸಂದರ್ಭ ಎಷ್ಟು ಭಾವನಾತ್ಮಕವಾಗಿದೆ ಎಂದರೆ, ಆಳವಾಗಿ ಅಧ್ಯಯನ ಮಾಡುತ್ತಾ, ಕಥೆಯ ಕಲ್ಪನಾಲೋಕದಲ್ಲಿ ಕೇಂದ್ರೀಕೃತವಾದ ಮನಸ್ಸಿಗೆ ಒಂದು ಕ್ಷಣ ನಾವು ಅಲ್ಲೇ ಇದ್ದೇವೆಯೋ ಎಂದೆನ್ನಿಸಿ ವಿರಹವೇದನೆ ಉಂಟಾಗುತ್ತದೆ. ಪ್ರತಿಭಾನ್ವಿತ ಶಿಕ್ಷಕರ ವೃತ್ತಿಕೌಶಲ್ಯ, ವೃತ್ತಿಗೌರವ, ನಿಸ್ವಾರ್ಥ ಸೇವಾ ಮನೋಭಾವನೆ ಎಂಥಹ ಆದರ್ಶಪ್ರಾಯವಾಗಿದೆ !!



68. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ-ಅಪರೀಕ್ಷಿತಕಾರಕಂ, ಪು-236,(2015) ವರ್ಣಿಲ, 39/2-11, ಕಲ್ಯಾಣಿ ಗಾರ್ಡನ್, ಬನಶಂಕರಿ 1ನೇ ಹಂತ, ಬೆಂಗಳೂರು-560050

69. **ಸುಭಾಷಿತಮಂಜರೀ,** ಶ್ಲೋ-559, ಪು-503, ಸುಭಾಷಿತರತ್ನಭಾಂಡಾಗಾರ.(2001)ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18

# ಉಪಸಂಹಾರ

**"ವಿಷ್ಣುಶರ್ಮರ ಪಂಚತಂತ್ರದಲ್ಲಿ ಶೈಕ್ಷಣಿಕ ಮನೋವಿಜ್ಞಾನ ಮತ್ತು ವ್ಯಕ್ತಿತ್ವ ನಿರ್ಮಾಣ ಕಲೆ"** ಎಂಬ ವಿಷಯದ ಬಗ್ಗೆ ಅಧ್ಯಯನಮಾಡಿ ವಿವಿಧ ಅಧ್ಯಾಯಗಳಲ್ಲಿ ವಿಷಯ ಮಂಡನೆ ಮಾಡಿದ ನಂತರದಲ್ಲಿ ಪ್ರತಿಪಾದನೆಯ ಸಾರವನ್ನು ಉಪಸಂಹಾರದಲ್ಲಿ ಒದಗಿಸುವುದು ಕ್ರಮವಾಗಿದೆ.

**ಪಂಚತಂತ್ರ** ಮತ್ತು **ಹಿತೋಪದೇಶ**ಗಳೆರಡೂ ತಿಳಿಗೇಡಿ ರಾಜಕುಮಾರರಿಗೆ ರಾಜನೀತಿಯಲ್ಲಿ ತರಬೇತಿ ನೀಡಲು ರಚಿತವಾದವು. ಆದ್ದರಿಂದ ಇವುಗಳಲ್ಲಿ ಅರಸನಿಗಿರಬೇಕಾದ ರಾಜಕಾರಣ ಕುಶಲತೆಯ ಮತ್ತು ಮುತ್ಸದ್ದಿತನದ ಚಿತ್ರವಿದೆ. ವಿಶ್ವವ್ಯಾಪಿ ಪ್ರಭಾವವನ್ನುಳ್ಳ ವಿಷ್ಣುಶರ್ಮರು ರಚಿಸಿದ ಸಂಸ್ಕೃತ ಪಂಚತಂತ್ರ ಕೃತಿಯು ವಿಶ್ವಸಾಹಿತ್ಯಕ್ಕೆ ಭಾರತೀಯ ಸಾಹಿತ್ಯ ಸಮರ್ಪಿಸಿದ ದೊಡ್ಡ ಕೊಡುಗೆ. ಇದರ ವಿಶ್ವಪರ್ಯಟನವು ನಿಜಕ್ಕೂ ರೋಮಾಂಚನಕಾರಿಯಾದುದು. ಜಗತ್ತಿನ ಅನೇಕ ಭಾಷೆಗಳಿಗೆ ಅನುವಾದಗೊಂಡಿರುವ ಕೃತಿಗಳಲ್ಲಿ ಬೈಬಲ್ ನಂತರದ ಸ್ಥಾನವನ್ನು ಪಂಚತಂತ್ರ ಪಡೆದಿದೆ. ಪಂಚತಂತ್ರ ಮೂರ್ಖನನ್ನೂ ವ್ಯವಹಾರ ಕುಶಲನನ್ನಾಗಿ ಮಾಡುವ ಸಂಸ್ಕೃತ ಭಾಷೆಯ ಕೊಡುಗೆ. ವಿಶಿಷ್ಟವಾದ ಐದು ತಂತ್ರಗಳು ರಾಜನ ಮತ್ತು ಸಾಮಾನ್ಯ ವ್ಯಕ್ತಿಯ ದೈನಂದಿನ ಜೀವನಕ್ಕಾಗಿ ಮಾರ್ಗದರ್ಶಕ ತತ್ವಗಳಾಗಿವೆ. ಇದರಲ್ಲಿ ಅರ್ಥಶಾಸ್ತ್ರದ ಐದು ತಂತ್ರಗಳನ್ನು ನಿರೂಪಿಸಿರುವುದರಿಂದ **"ಪಂಚತಂತ್ರ"** ಎಂದು ಹೆಸರಾಗಿದೆ. ಇದು ಗದ್ಯಾತ್ಮಕವಾಗಿಯೇ ರಚಿತವಾಗಿದ್ದರೂ ಮಧ್ಯೆ ಮಧ್ಯೆ ಬೋಧಪ್ರದವಾದ ಮನೋವೈಜ್ಞಾನಿಕ ಅನೇಕ ನೀತಿಪ್ರದ ಶ್ಲೋಕಗಳು ಸೇರಿಕೊಂಡಿವೆ. ಸುಮಾರು ಎರಡೂವರೆ ಮಿಲೇನಿಯಮ್ ವರ್ಷಗಳಿಂದಲೂ ಪಂಚತಂತ್ರ ಕಥೆಗಳು ಮಕ್ಕಳು ಹಾಗೂ ದೊಡ್ಡವರಿಗೆ ಸಮಾನವಾಗಿ ಪ್ರತಿಕಥೆಯ ಅಂತ್ಯದಲ್ಲೂ ಒಂದು ನೀತಿಯನ್ನು ಬೋಧಿಸುತ್ತವೆ. ಕೆಲವರು ಈ ಕಥೆಗಳನ್ನು ಋಗ್ವೇದದಷ್ಟು ಹಳೆಯದು ಎಂದು ಹೇಳುತ್ತಾರೆ.[1]

ಪ್ರಬಂಧದ ವಿಷಯಕ್ಕೆ ಸಂಬಂಧಿಸಿದಂತೆ, ಮನೋವಿಜ್ಞಾನದ ವ್ಯಾಪ್ತಿಯಲ್ಲಿ ಬರುವ ಅನ್ವಯಿಕ ಮನೋವಿಜ್ಞಾನದ ಒಂದು ಶಾಖೆಯಾಗಿರುವ ಶೈಕ್ಷಣಿಕ ಮನೋವಿಜ್ಞಾನದ ಪರಿಕಲ್ಪನೆಗಳನ್ನು ಅನ್ವಯಿಸಿ ವಿಶ್ಲೇಷಿಸಲಾಗಿದೆ.

ಇದರಲ್ಲಿ ಅಡಕವಾಗಿರುವ ಶೈಕ್ಷಣಿಕ ಮನೋವಿಜ್ಞಾನ ಅಂದರೆ ಬೆಳೆಯುವ ಎಳಸಾದ ಬುದ್ಧಿ ಕೇಂದ್ರಕ್ಕೆ ಧರ್ಮ, ನೀತಿ – ವ್ಯವಹಾರಗಳನ್ನು ಪರಸ್ಪರ ಬಾಧಕವಿಲ್ಲದಂತೆ ಕಥಾ ರೂಪವಾಗಿ ಬೋಧಿಸುವ ಮೊದಲನೆಯ ಗ್ರಂಥವೆಂದರೆ ಪಂಚತಂತ್ರವೆ. ಇಲ್ಲಿನ ಪ್ರತಿಯೊಂದು ಕಥೆಯಲ್ಲೂ ಧರ್ಮವು ಆತ್ಮಸ್ಥಾನದಲ್ಲೂ,

1. सत्यकाम विद्यालंकार, अनुवादक,पंचतन्त्र, विष्णुशर्मा, भूमिका–P–05–06,राजपाल एण्ड सन्ज़,1590,मदरसा रोड,काश्मीरी गेट,–दिल्ली–110006

ನೀತಿಯು ಇಂದ್ರಿಯ ಸ್ಥಾನಗಳಲ್ಲೂ, ವ್ಯವಹಾರವು ಒಡಲಿನ ಸ್ಥಾನದಲ್ಲಿಯೂ ಇರುತ್ತದೆ. ನೀತಿಕಥೆಗಳಲ್ಲಿ ಮೃಗಪಕ್ಷಿಗಳು, ಕೆಲವೆಡೆ ಗಿಡಮರಗಳನ್ನು ನೀತಿವಿಜ್ಞಾನ ಭೋದಿಸಲು ಆರಿಸಿಕೊಂಡಿರುವುದರ ವಿಶೇಷತೆ ಏನೆಂದರೆ, ಇದು ಮಕ್ಕಳ ಬುದ್ಧಿಕೇಂದ್ರಕ್ಕೂ, ಹೃದಯಕ್ಕೂ, ಕೆಲವೆಡೆ ವಯಸ್ಕರ ಮನಸ್ಸಿಗೂ ಅತ್ಯಂತ ಪ್ರಿಯವೂ ಪರಿಣಾಮಕಾರಿಯೂ ಆಗಿರುವುದೆಂದರೆ ಯಾವ ಅತಿಶಯೋಕ್ತಿಯೇನಲ್ಲ. ಹೀಗಾಗಿ ಪ್ರಕೃತ ಒಬ್ಬ ಹಿರಿಯ ಅರ್ಥಶಾಸ್ತ್ರರಹಸ್ಯಜ್ಞರೂ, ಜೀವನವಿಜ್ಞಾನವನ್ನು ಚೆನ್ನಾಗಿಬಲ್ಲ ಪಂಡಿತಜ್ಞರೂ ಹಾಗೂ ಸಕಲಶಾಸ್ತ್ರಪರಿಣಿತರೂ ಆಗಿದ್ದ ವಿಷ್ಣುಶರ್ಮರು ಮೂಲಪುರುಷರ ಸ್ಮರಣೆಯೊಂದಿಗೆ ಪಂಚತಂತ್ರ ಗ್ರಂಥವನ್ನು ಹೊರತಂದಿರುವರು. ಇದರ ಫಲಶೃತಿಯಾಗಿ

अधीते यः इदं नित्यं नीतिशास्त्रं शृणोति च ।

न पराभवमाप्नोति शक्रादपि कदाचन ॥[2]

ಅದೇ ರೀತಿಯಲ್ಲಿ ಪಂಡಿತ ವಿಷ್ಣುಶರ್ಮರು ಮೂವರು ದಡ್ಡ ಶಿಖಾಮಣಿಗಳೆನ್ನಿಸಿಕೊಂಡಿದ್ದ ರಾಜಕುಮಾರರಿಗೆ ಒಳ್ಳೆಯ ಕಲಿಕಾ ಸನ್ನಿವೇಶ ಸೃಷ್ಟಿಸಿ, ಅವರ ಸ್ವಭಾವ ಮತ್ತು ಭಾವನೆಗಳನ್ನು ಅರಿತು, ಅವರ ಸರ್ವತೋಮುಖ ಬೆಳವಣಿಗೆಗೆ ಆಕರ್ಷಕ ನೀತಿಕಥೆಗಳನ್ನು ಭೋದಿಸುತ್ತಾ, ಭೌದ್ಧಿಕ ಪ್ರಗತಿಯತ್ತ ಮುನ್ನಡೆಸಿಕೊಂಡು, ಅವರನ್ನು ರಾಜನೀತಿ ನಿಪುಣರು ಹಾಗೂ ಬದುಕಿನ ವ್ಯವಹಾರ ಚತುರರೂ ಆಗುವಂತೆ ಉತ್ತಮ ಶಿಕ್ಷಣ ನೀಡಿದ್ದಾರೆ. ಈ ಸಾಧನೆ ನಿಜಕ್ಕೂ ಇಂದಿಗೂ ಶಿಕ್ಷಕ ವೃತ್ತಿಯಲ್ಲಿ ತೊಡಗಿಸಿ ಕೊಂಡಿರುವ ಪ್ರತಿಯೊಬ್ಬ ಶಿಕ್ಷಕನಿಗೂ ಹಾಗೂ ವ್ಯಕ್ತಿತ್ವ ವಿಕಸನ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುವ ಅನೇಕರಿಗೂ ಒಂದು ಮಾದರಿಯೂ, ಮಾರ್ಗದರ್ಶಕವೂ ಆಗಿದೆ. ಪಂಚತಂತ್ರಗಳನ್ನು ಸರಿಸುಮಾರು ಎರಡು ಸಾವಿರ ವರ್ಷಗಳ ಪೂರ್ವದಲ್ಲೇ ಬರೆಯಲಾಗಿದೆ. ಆದರೆ ಅದರಲ್ಲಿರುವ ಮೌಲಿಕ ಜ್ಞಾನದಿಂದ ಅದು ಇಂದಿಗೂ ಲೋಕಪ್ರಿಯ ಮತ್ತು ಮಾನವನ ಜೀವನದಲ್ಲಿ ಉನ್ನತ ಮೌಲ್ಯಗಳನ್ನು ಪರಿಚಯಿಸಲು ಪಂಚತಂತ್ರ ಒಂದು ಉತ್ತಮ ವಿಧಾನವಾಗಿದೆ. ಸಾಮಾನ್ಯ ಜನರೂ ಸಹ ಒಂದು ಉತ್ತಮವಾದ ಬದುಕಿನ ವ್ಯವಹಾರಗಳ ನೀತಿಶಿಕ್ಷಣವನ್ನು ಮನೋರಂಜಕವಾಗಿ, ಮನೋಜ್ಞವಾಗಿ ತಿಳಿದುಕೊಳ್ಳಲು ಅವಕಾಶವಿದೆ. ಹಾಗೆಯೇ ತಮ್ಮತಮ್ಮ ಮಕ್ಕಳಿಗೆ ಸರಳವಾಗಿ, ಆಕರ್ಷಕವಾಗಿ ಪ್ರೀತಿಯಿಂದ ಒಳ್ಳೆಯ ವ್ಯಕ್ತಿತ್ವ ವಿಕಸನಗೊಳ್ಳಲು ಮಾರ್ಗದರ್ಶನ ನೀಡಬಹುದು. ಪಂಚತಂತ್ರದಲ್ಲಿ ಒಟ್ಟು ಎಂಭತ್ತೇಳು ಕಥೆಗಳಿವೆ. ಪ್ರತಿಯೊಂದು ಕಥೆಯಲ್ಲಿ ಒಂದು ಬಹುಮೂಲ್ಯ ನೀತಿಯು ಅಡಗಿದೆ. ಈ ಕಥೆಗಳ ಮೂಲಕ ಮನೋವಿಜ್ಞಾನ, ವ್ಯವಹಾರಿಕ ಮತ್ತು ರಾಜನೀತಿ ಸಿದ್ಧಾಂತಗಳ ಪರಿಚಯ

2. सुधाकर मालवीय, सम्पादक एवं व्याक्याकार, श्री विष्णशर्मविरचितं पञ्चतन्त्रम्, कथामुखम्–श्लोक–10,पु–10, चौकाम्बा कृष्णदास अकादमी, K.37/118, Gopal Mandir Lane,PB No-1118,वाराणासी-221001 (INDIA)

ಆಗುತ್ತದೆ. ಸಂಸ್ಕೃತ ಸಾಹಿತ್ಯದಲ್ಲಿ ಪಂಚತಂತ್ರಗಳಿಗೆ ಪ್ರಮುಖ ಸ್ಥಾನ ಪ್ರಾಪ್ತವಾಗಿದೆ. ಇದು ಬಹಳ ಸೂಕ್ತವೂ, ಸಮಂಜಸವೂ ಆಗಿರುತ್ತದೆ.

ಪಂಚತಂತ್ರವನ್ನು ಒಂದು ವಿಶೇಷ ಅಧ್ಯಯನದ ಗ್ರಂಥವಾಗಿ ಪರಿಶೀಲಿಸಿದಾಗ, ಇದರಲ್ಲಿ ಪಂಚತಂತ್ರಗಳ ಕಥಾಸಂಗಮ ಬಹಳ ವ್ಯವಸ್ಥಿತವಾಗಿ ಸಂಯೋಜನೆ ಮಾಡಲಾಗಿದೆ. ಪ್ರತಿ ತಂತ್ರದಲ್ಲಿ ಒಂದು ಸೂತ್ರ ಕಥೆ, ಅದಕ್ಕೆ ಸೂಕ್ತವಾದ ಸಣ್ಣ ಸಣ್ಣ ಉಪಕಥೆಗಳು, ಪ್ರತೀ ಕಥೆಯ ಪ್ರಾರಂಭದಲ್ಲಿ ಒಂದು ಉಕ್ತಿ, ಉಕ್ತಿಯ ಅರ್ಥಪೂರ್ಣ ವಿವರಣೆಗಾಗಿ ಒಂದು ಒಳ್ಳೆಯ ಸನ್ನಿವೇಶ, ಅದಕ್ಕೆ ಸರಿಯಾದ ಪ್ರಸಂಗಗಳನ್ನು ನಿರೂಪಿಸುತ್ತಾ, ಸ್ವಾರಸ್ಯಕರವಾಗಿ ಮುಂದುವರೆದು ಅಂತ್ಯದಲ್ಲಿ ಮತ್ತೊಂದು ಉಕ್ತಿಯನ್ನು ವ್ಯಕ್ತಪಡಿಸುತ್ತಾ, ಕೊಂಡಿ ಕಳಚದಂತೆ ಮುಂದಿನ ಕಥೆಗೆ ಕೂತೂಹಲದಿಂದ ಮುನ್ನುಗ್ಗುವಂತೆ ಓದುಗರನ್ನು ಅಥವಾ ಕೇಳುಗರನ್ನು ಪ್ರೇರೇಪಿಸಿ  ಮಾರ್ಗಸೂಚನೆ ಮಾಡುತ್ತದೆ.

ಹೀಗೆ ಉಕ್ತಿಯಿಂದ ಪ್ರಸಂಗ-ಪ್ರಸಂಗದಿಂದ ನಿರೂಪಣೆ, ನಿರೂಪಣೆ ಮಧ್ಯೆ ಮಧ್ಯೆ ಸುಭಾಷಿತಗಳು, ನಾಣ್ಣುಡಿಗಳು, ಗಾದೆಗಳು, ನೀತಿಸೂಕ್ತಿಗಳು ಇತ್ಯಾದಿಗಳಿಂದ ಅಲಂಕೃತವಾಗಿದ್ದು ಕಥೆಯು ಅರ್ಥಪೂರ್ಣವಾಗಿ ಬೆಳೆದು ಅಂತ್ಯದಲ್ಲಿ ಮತ್ತೊಂದು ಉಕ್ತಿಯೊಂದಿಗೆ ಮುಕ್ತಾಯಗೊಳ್ಳುತ್ತದೆ. ಪಂಚತಂತ್ರದ ಮಿತ್ರಭೇದ ತಂತ್ರದಲ್ಲಿ ಮಿತ್ರದ್ರೋಹವನ್ನು ಕುರಿತು ಒಳ್ಳೆಯ ಎಚ್ಚರಿಕೆ ನೀಡಿರುವುದನ್ನು ಗಮನಿಸಬಹುದು:-

मित्रद्रोही कृतघ्नश्च यश्च विश्वासघातकः ।

ते नरा नरकं यान्ति यावच्चन्द्र दिवाकरौ ॥[3]

ಶೈಕ್ಷಣಿಕಮನೋವಿಜ್ಞಾನದಲ್ಲಿ, ಕಲಿಕೆ ಹಾಗೂ ಕಲಿಸುವ ವಿಚಾರದಲ್ಲಿ, ಸಮರ್ಪಕ ಬೋಧನಾ ವಿಧಾನಗಳನ್ನು ತಿಳಿಸುವಾಗ, ಪರಿಣಾಮಕಾರಿ ಕಲಿಕೆಯಾಗಬೇಕಾದರೆ ಮಕ್ಕಳನ್ನು ಕಲಿಕೆಗೆ ಮೊದಲು ಅಭಿಪ್ರೇರಿಸಬೇಕು ಮತ್ತು ಅವರ ಅವಧಾನವನ್ನು ಕಾಯ್ದುಕೊಳ್ಳಬೇಕು. ಅವರ ಸ್ಮೃತಿಶಕ್ತಿಯನ್ನು, ಆಲೋಚನಾ, ವಿವೇಚನಾ ಶಕ್ತಿಯನ್ನು ಹೆಚ್ಚಿಸುವ ಕ್ರಮಗಳನ್ನು ಕೈಗೊಳ್ಳಬೇಕು. ಕಲಿಯುತ್ತಿರುವ ಮಕ್ಕಳಮಟ್ಟಕ್ಕೆ ಸರಿಹೊಂದುವ ಬೋಧನಾಮಾಧ್ಯಮವನ್ನು ನಿಶ್ಚಯಿಸಿಕೊಳ್ಳಬೇಕು. ವಿದ್ಯಾರ್ಥಿಗಳ ಸರ್ವತೋಮುಖ ವಿಕಾಸವೇ ಶಿಕ್ಷಣದ ಪ್ರಮುಖ ಗುರಿಯಾಗಿರುವುದರಿಂದ, ಜ್ಞಾನಾತ್ಮಕವಿಕಾಸಕ್ಕೆ ಕೊಟ್ಟಷ್ಟೇ ಮಹತ್ವವನ್ನು ಸಂವೇಗಾತ್ಮಕ ಹಾಗೂ ಸಾಮಾಜಿಕ ವಿಕಾಸಕ್ಕೆ ನೀಡಬೇಕಾಗುತ್ತದೆ. ವ್ಯಕ್ತಿಯ ಅಗತ್ಯತೆಗಳು, ಪ್ರೇರಕಗಳು ಮತ್ತು ಬಯಕೆಗಳನ್ನು ತಿಳಿಯಬೇಕಾಗುತ್ತದೆ. ವಿದ್ಯಾರ್ಥಿಗಳ ಅಗತ್ಯತೆಗಳು ಹಾಗೂ ಉದ್ದೇಶಗಳನ್ನು

3. **ಸುಧಾಕರ್ ಮಾಲವೀಯ**, ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಪ್ರ.ತಂ- ಶ್ಲೋ-454,ಪು-299,ಶ್ಲೋ-9,ಪು-7,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಗಮನದಲ್ಲಿ ಇಟ್ಟುಕೊಂಡು ಪಠ್ಯಕ್ರಮವನ್ನು ಶಿಕ್ಷಣತಜ್ಞರು ಅಥವಾ ಶಿಕ್ಷಕರು ರೂಪಿಸಿಕೊಳ್ಳಬೇಕು. ವಿದ್ಯಾರ್ಥಿಗಳ ಸಾಮರ್ಥ್ಯಕ್ಕನುಗುಣವಾಗಿ ಅಗತ್ಯಜ್ಞಾನ ಹಾಗೂ, ಅವರಲ್ಲಿ ಸಾಮಾಜಿಕ ಹಾಗೂ ಭಾವನಾತ್ಮಕ ವಿಕಾಸವನ್ನು ಉತ್ತೇಜಿಸಲು ಮಾರ್ಗದರ್ಶನ ಹಾಗೂ ಸಲಹಾ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕು. ನಂತರದಲ್ಲಿ ಉತ್ತಮ ವ್ಯಕ್ತಿತ್ವನಿರ್ಮಾಣಕ್ಕೆ ಅಗತ್ಯವಾದ ಬುನಾದಿಯನ್ನು ಹಾಕಿಕೊಟ್ಟು, ಅವನನ್ನು ಉತ್ತಮ ಪ್ರಜೆಯೋ ಅಥವಾ ಪ್ರಜಾಪಾಲಕನೋ ಅವನ ಸಾಮರ್ಥ್ಯಕ್ಕೆ ತಕ್ಕಂತೆ ಜನ್ಮಸಾರ್ಥಕತೆಯತ್ತ ತಲುಪಿಸಬೇಕು.[4]

अनन्तपारं किल शब्दशास्त्रं स्वल्पं तथाऽऽयुर्बहवश्च विघ्नाः।

सारं ततो ग्रहमपास्य फल्गु हंसैर्यथा क्षीरमिवाम्बुमध्यात् ॥[5]

ಅಂದರೆ ಈ ಜೀವನವು ಶಾಶ್ವತವಲ್ಲ ಮತ್ತು ಶಾಸ್ತ್ರಗಳನ್ನೆಲ್ಲಾ ದೀರ್ಘ ಕಾಲದಿಂದ ಅಭ್ಯಾಸ ಮಾಡಬೇಕು. ಆದ್ದರಿಂದ ಶಾಸ್ತ್ರವನ್ನು ಸಂಕ್ಷೇಪದಲ್ಲಿ ಇವರಿಗೆ ಬೋಧಿಸಲು ಬಹಳ ವಿಚಾರಮಾಡಿ ಬೋಧಿಸುವ ಪ್ರತಿಭಾವಂತ ಗುರುಗಳು ಬೇಕು. ವ್ಯಾಕರಣ ಇತ್ಯಾದಿ ಶಾಸ್ತ್ರಗಳಿಗೆ ಕೊನೆಯೆಂಬುದಿಲ್ಲ. ಅಲ್ಲದೇ ಇರುವ ಕಡಿಮೆ ಆಯಸ್ಸಿನಲ್ಲಿ ವಿಘ್ನಗಳು ನೂರೆಂಟು. ಆದ್ದರಿಂದ ಹಂಸಗಳು ಹಾಲನ್ನು ನೀರಿನಿಂದ ಬೇರ್ಪಡಿಸಿ ಹೇಗೆ ಕುಡಿಯುತ್ತವೆಯೋ ಹಾಗೆ ಶಾಸ್ತ್ರಗಳಲ್ಲಿ ಸತ್ವವಿಲ್ಲದ್ದನ್ನು ಬದಿಗಿಟ್ಟು, ಕೇವಲ ಸಾರಭರಿತವಾದುದನ್ನು ಮಾತ್ರ ಕಲಿತುಕೊಳ್ಳಬೇಕು. ಹೀಗೆ ಚಮತ್ಕಾರದಿಂದ ಬೋಧಿಸಲು ವಿಷ್ಣುಶರ್ಮರೇ ಸರಿಯೆಂದು ಸುಮತಿ ಎಂಬ ಸಚಿವರು ರಾಜನಿಗೆ ಸಲಹೆ ಮಾಡಿದ್ದರು.

ಸಕಲಶಾಸ್ತ್ರಪಾರಂಗತರಾದ ವಿಷ್ಣುಶರ್ಮರು ಅಮರಶಕ್ತಿ ರಾಜನ ಮೂವರು ಮೂರ್ಖಪುತ್ರರನ್ನು ಗಮನಿಸಿ, ಅವರ ಕೌಟುಂಬಿಕ ಹಿನ್ನೆಲೆ, ಅವರು ಹೇಗೆ ಮೂರ್ಖ, ಆಲಸಿ ಹಾಗೂ ಉದ್ಧಟರಾಗಿದ್ದಾರೆ? ಅವರ ವರ್ತನೆಯಲ್ಲಿ ಪರಿವರ್ತನೆ ತರಲು ಸಾಧ್ಯವಾಗುತ್ತದೆಯೇ? ಸಾಧ್ಯವಾಗುವುದಾದರೆ ಯಾವ ರೀತಿಯ ಶಿಕ್ಷಣ ಬೋಧನೆ, ಪಠ್ಯಕ್ರಮ? ಈ ಎಲ್ಲವನ್ನೂ ಕೂಲಂಕಶವಾಗಿ ಪರಿಶೀಲಿಸಿ, ಕೇವಲ ಆರು ತಿಂಗಳುಗಳಲ್ಲಿ ನೀತಿಶಾಸ್ತ್ರ ಕುಶಲರನ್ನೂ, ವಿದ್ಯಾಬುದ್ಧಿಸಂಪನ್ನರನ್ನೂ ಮಾಡಬಲ್ಲೆನು ಎಂಬ ಧೃಢಸಂಕಲ್ಪದಿಂದ, ಚಾಣಕ್ಯನು ಹೇಗೆ ಆಯುಧಪಾಣಿಗಳಾಗಿದ್ದರೂ ನವನಂದರನ್ನು ತನ್ನ ಬುದ್ಧಿಶಕ್ತಿಯಿಂದ ಸಂಹರಿಸುವ ಪ್ರತಿಜ್ಞೆ ಮಾಡಿದನೋ, ಅದೇರೀತಿ ಪ್ರತಿಜ್ಞೆ ಮಾಡಿ, **"ಇದಕ್ಕೆ ತಪ್ಪಿದರೆ ದೇವಲೋಕಕ್ಕೆ ಕಳುಹಿಸಬಹುದು"** ಎಂದು ರಾಜನಿಗೆ ಹೇಳಿದರು. ಇಲ್ಲಿ ಶೈಕ್ಷಣಿಕ ಮನೋವಿಜ್ಞಾನದ ಕ್ರಮದಲ್ಲಿ ಹೇಗೆ ವೀಕ್ಷಣೆ**(Observation)**,

---

4. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-12,ಪು-243-245, (1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4
5. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಥಾಮುಖಂ- ಶ್ಲೋ-9,ಪು-7,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ವ್ಯಕ್ತಿ ಅಧ್ಯಯನ **(Case Study)** ಮಾಡುತ್ತಾರೆಯೋ, ಹಾಗೆಯೇ ಮೇಧಾವಿ ವಿಷ್ಣುಶರ್ಮರು ಮೊದಲು ನೈದಾನಿಕಹಂತದಲ್ಲಿ ರಾಜಕುಮಾರರ ಎಲ್ಲ ಪೂರ್ವಾಪರ ಸ್ಥಿತಿಗಳನ್ನು ಕೂಲಂಕಶವಾಗಿ ಸಂಗ್ರಹಿಸಿ, ವಿಶ್ಲೇಷಿಸಿ, ನಂತರದಲ್ಲಿ ಒಂದು ನಿರ್ಧಾರಕ್ಕೆ ಬಂದು, ಪರಿಹಾರ ಅಥವಾ ಸುಧಾರಣೆ ಹಂತದಲ್ಲಿ ವ್ಯಕ್ತಿಯಲ್ಲಿ ಅಪೇಕ್ಷಿತ ಬದಲಾವಣೆಗಳನ್ನು ತರಲು ಸೂಕ್ತ ಯೋಜನೆ ಸಿದ್ಧಪಡಿಸಿ, ಅಗತ್ಯವಾದ ಮೂಲ ಕೌಶಲಗಳನ್ನು ಬೆಳೆಸಿ, ಪರಿಹಾರವನ್ನು ಒದಗಿಸಿದ್ದಾರೆ.

ಅದೇರೀತಿ ರಾಜಕುಮಾರರನ್ನು ವಿಶ್ವಾಸಕ್ಕೆ ತೆಗೆದುಕೊಂಡು, ಅಂದರೆ ಶೈಕ್ಷಣಿಕ ಮನೋವಿಜ್ಞಾನದಲ್ಲಿ ಹೇಳುವಂತೆ **"ಬೋಧಿಸುವ ಮೊದಲು ವಿದ್ಯಾರ್ಥಿಗಳೊಡನೆ ಉತ್ತಮ ಬಾಂಧವ್ಯ ಅಥವಾ ಸಹೃದಯ ಸಂಬಂಧ (Rapport) ಬೆಳೆಸಿಕೊಳ್ಳಬೇಕು."** ಅವರಲ್ಲಿ ವಿಶೇಷ ಆಸಕ್ತಿಯನ್ನು ಪ್ರೇರೇಪಿಸಿ, ಬೋಧನಾ ಮಾಧ್ಯಮವನ್ನು ಕಥಾನಿರೂಪಣೆಯೇ ಸೂಕ್ತವಾದ ವಿಧಾನವೆಂದು ನಿರ್ಧರಿಸಿ ರಾಜನೀತಿ ಶಿಕ್ಷಣ, ನೀತಿಶಾಸ್ತ್ರ ಹಾಗೂ ಸುಂದರ ಬದುಕಿನ ಕಲೆ ಇವುಗಳೇ ಇವರ ಉಜ್ವಲ ಭವಿಷ್ಯಕ್ಕೆ ಅಪೇಕ್ಷಣೀಯ ಹಾಗೂ ಅಮರಶಕ್ತಿ ರಾಜನಿಗೆ ಅಮಿತಾನಂದಕರ ಎಂದು ಯೋಚಿಸಿ, ಸೂಕ್ತ ಪಠ್ಯಕ್ರಮ ರೂಪಿಸಿದ ವಿಷ್ಣುಶರ್ಮರ ವಿದ್ಯಾಚಮತ್ಕಾರ, ವ್ಯಕ್ತಿತ್ವ ನಿರ್ಮಾಣ ಕೌಶಲ್ಯ ಹಾಗೂ ನೀತಿಶಾಸ್ತ್ರ ಪಾಂಡಿತ್ಯ ಅತ್ಯದ್ಭುತವಾದದ್ದು. ಅವರ ಪಂಚತಂತ್ರ ಕೃತಿರತ್ನ ಅಷ್ಟೇ ಅಮೂಲ್ಯವಾದದ್ದು. ಈ ಗ್ರಂಥವು ನೀತಿಶಾಸ್ತ್ರ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಸಾಮಾನ್ಯ ಜ್ಞಾನ, ಇನ್ನೂ ಅನೇಕ ವಿಚಾರಗಳನ್ನು ಹೊಂದಿರುವ ಕಲ್ಪವೃಕ್ಷವಾಗಿದೆ. ಗಂಭೀರವಾಗಿ ಅಧ್ಯಯನ ಮಾಡಿದರೆ ಚಿಕ್ಕವರಿಂದ ಹಿಡಿದು ದೊಡ್ಡವರವರೆಗೂ ಸುವ್ಯವಸ್ಥಿತ ಕಥಾಗುಚ್ಛಗಳಲ್ಲಿ ಉತ್ತಮ ಶೈಕ್ಷಣಿಕ ಮಾರ್ಗದರ್ಶನವಿದೆ. ಆದರೆ ಮುತ್ತಿನ ಚಿಪ್ಪನ್ನಾಯುವ ಕುಶಲಕರ್ಮಿಯ ಚಾಣಾಕ್ಷತೆ ಇರಬೇಕು. ಇದು ಬದುಕನ್ನು ಹಸನುಗೊಳಿಸುವ, ವ್ಯಕ್ತಿತ್ವ ವಿಕಸನಕ್ಕೆ ನೆರವಾಗುವ ಎಲ್ಲ ವಿಚಾರಗಳೂ ಈ ವಿಶಿಷ್ಟ ಗ್ರಂಥದಲ್ಲಿದ್ದು ಬದುಕಿನ ಜ್ಞಾನಕೋಶವಾಗಿದೆ.

ಪಂಚತಂತ್ರ ನೀತಿಕಥೆಗಳು ಪ್ರಸ್ತಾವನೆಯಲ್ಲಿ ಮೂರು ಪದಗಳು ನಮಗೆ ಒಂದು ವಿಶೇಷ ಸುಳಿವನ್ನು ನೀಡುತ್ತವೆ. बुध्दिप्रबोधनम् – ಅಂದರೆ ಬೌದ್ಧಿಕ ಜಾಗೃತಿ – ಪ್ರಬುದ್ಧ – ಬೌದ್ಧಿಕ ಸಂಪೂರ್ಣ ಜಾಗೃತಿಯೊಂದಿಗೆ ಆಳವಾದ ಮತ್ತು ವ್ಯಾಪಕ ತಿಳುವಳಿಕೆಯನ್ನು ಪ್ರ–ಎಂಬ ಪೂರ್ವಪ್ರತ್ಯಯ ದಿಂದ ಸೂಚಿಸಿ ಮತ್ತು अवबोधनार्थम् – ಅಂದರೆ ಬೌದ್ಧಿಕ ಜಾಗೃತಿ ಉದ್ದೇಶದಿಂದ बुध्दि– ಬುದ್ಧಿ ಕೇವಲ ಬುದ್ಧಿಯನ್ನು ಅಷ್ಟೇ ಸೂಚಿಸುವುದಲ್ಲದೆ ಗ್ರಹಣಶಕ್ತಿಯನ್ನೂ ಸೇರಿಸಿ ಸಂಪೂರ್ಣ ಬೌದ್ಧಿಕ ಕ್ರಿಯೆಯನ್ನೇ ಸೂಚಿಸುತ್ತದೆ. ಈ ಮೂರೂ ಅಂಶಗಳು ಒಂದೇ ಗುರಿಯನ್ನು ಹೊಂದಿರುತ್ತವೆ. ಅದೇನೆಂದರೆ ಮನಸ್ಸು ಅಥವಾ ಬುದ್ಧಿಶಕ್ತಿಯ ಜಾಗೃತಿ ಮತ್ತು ಗ್ರಹಣಶಕ್ತಿ.[6]

---

6. **Chandra Rajan,** VISNU SARMA-The Pancatantra, Intro-p- xxxi, 1993, Penguin Random House India pvt.Ltd,7thFloor, Infinity Tower C, DLF Cyber City,Gurgaon-122002, Haryana, India.

ಪಂಚತಂತ್ರದಲ್ಲಿ ವಿಷ್ಣುಶರ್ಮರ ಉದ್ದೇಶವು– ರಾಜ್ಯಾಡಳಿತ ಕ್ರಮ ಮತ್ತು ಜ್ಞಾನದ ಸಂಯೋಜಿತ ಶಾಖೆಗಳು ಮತ್ತು ಕಲಿಕೆಯನ್ನು ಔಪಚಾರಿಕ ಶಿಕ್ಷಣದಲ್ಲಿ ಒದಗಿಸುವುದಾಗಿರಲಿಲ್ಲ. ಬಹುಶಃ ಸಾಂಪ್ರದಾಯಿಕ ಪದ್ಧತಿಯಲ್ಲಿ ಕಲಿಕೆಯು ಹುರುಳರಿಯದಂತೆ ವ್ಯಾಖ್ಯಾನಗಳ ಮೂಲಕ ಹಾಗೂ ನಿಯಮಬದ್ಧ ಉದಾಹರಣೆಗಳು ಒಂದು ಭಾಗವಾಗಿದ್ದು– ಸತತ ಅಭ್ಯಾಸ, ಪುನರುಚ್ಚಾರ ಮಾಡಿಮಾಡಿ ಬಾಯಿಪಾಠ ಮಾಡುವುದು, ಅರ್ಥೈಸಿಕೊಂಡು ಕಲಿಯುವುದಕ್ಕೆ ವಿರುದ್ಧವಾದುದು. ಪೀಠಿಕಾ ಭಾಗದಲ್ಲಿ ಅಮರಶಕ್ತಿ ರಾಜನ ಮಂತ್ರಿಗಳು ಹೇಳಿರುವಂತೆ, ಶಾಸ್ತ್ರೋಕ್ತವಾಗಿ ವ್ಯಾಕರಣ, ನೀತಿಶಾಸ್ತ್ರ, ತರ್ಕ ಮುಂತಾದವುಗಳನ್ನು ಕಲಿಯಬೇಕಾದರೆ ಕಡೇಪಕ್ಷ ಹನ್ನೆರಡು ವರ್ಷಗಳಾದರೂ ಬೇಕಾಗುತ್ತದೆ. ಆ ಪ್ರಯತ್ನವನ್ನೂ ಮಾಡಿ ಅನೇಕ ವಿದ್ವಾಂಸರುಗಳನ್ನು ವಿಚಾರಿಸಲಾಗಿ, ಅನೇಕರು ಬಂದು ಸಾಧ್ಯವಾಗದೆ ಹಿಂದಿರುಗಿದ್ದೂ ಇದೆ. ರಾಜಕುಮಾರರು ಅಕ್ಷರಜ್ಞಾನವಿಲ್ಲದ ಅಜ್ಞಾನಿಗಳಾಗಿಯೇ ಉಳಿದಿದ್ದರು. ಅಮರಶಕ್ತಿ ರಾಜನ ವೇದನೆಯೆಂದರೆ:–

उद्धरत्युत्तमो वंशं, मध्यमः समुपेक्षते ।

अधमस्तु कुले जातः नाशयत्यखिलं कुलम् ॥[7]

"ಮನೆಯಲ್ಲಿ ಜನಿಸಿದ ಉತ್ತಮನಾದ ಮಗನು ವಂಶವನ್ನೇ ಉದ್ಧರಿಸುತ್ತಾನೆ. ಮಧ್ಯಮನಾದವನು ಮನೆಯ ಮುನ್ನಡೆಯನ್ನು ಅರಕ್ಷಿಸುತ್ತಾನೆ. ಅಧಮನಾದವನು ಹುಟ್ಟಿದನೆಂದರೆ ತಾನು ಹಾಳಾಗುವುದಲ್ಲದೆ ವಂಶವನ್ನೇ ಹಾಳುಮಾಡುತ್ತಾನೆ."

ರೇಖೆಗಳ–ನಡುವೆ ಓದುವುದು ಅಂದರೆ ವಿಚಾರಗಳನ್ನು ಪೂರ್ಣವಾಗಿ ಅರ್ಥೈಸಿಕೊಂಡು ಕಲಿಯುವವರಿಗೊಂದು ಉತ್ತಮ ಸಲಹೆ. ಕಥೆಹೇಳುವ ಸಂಪ್ರದಾಯದಲ್ಲಿ ನಿರೂಪಣೆಯ ಪ್ರತಿ ವಿವರಗಳನ್ನೂ ಉಚ್ಚರಿಸಲು ಆಗುವುದಿಲ್ಲ. ಇದಕ್ಕೆ ಕಾರಣವೇನೆಂದರೆ ಕಥಾನಿರೂಪಕರಿಗೆ ಭಾಷೆ, ಆಂಗಿಕ ಭಾಷೆಯೇ ಬೇರೆ ಇರುತ್ತದೆ. ಒಬ್ಬ ಪ್ರತಿಭಾನ್ವಿತ ಕಥಾನಿರೂಪಕನು ಇದನ್ನು ಸಂದರ್ಭೋಚಿತವಾಗಿ, ಉತ್ತಮವಾಗಿ ಬಳಸಿಕೊಳ್ಳಬಲ್ಲನು. ಉದಾಹರಣೆಗೆ:– ಅಂಗಸನ್ನೆ ಅಥವಾ ಇಂಗಿತಸೂಚನೆ, ನಿಲುವು, ಮುಖಭಾವ, ಧ್ವನಿಯಸ್ವರ, ಒಂದು ತುಟಿಯ ತಿರುವು, ಹುಬ್ಬುಗಳ ಕಮಾನು, ಏರಿಳಿತ, ಕಣ್ಣುಗಳ ವಿಸ್ತಾರ ಅಥವಾ ಕಿರಿದಾಗುವಿಕೆ, ಒಂದು ಚಿಕ್ಕುವುದು, ತಿರಸ್ಕಾರದ ಮುಗುಳ್ನಗೆ ಅಥವಾ ಒಂದು ಸಣ್ಣ ನಗು ಇತ್ಯಾದಿಗಳು ಸಂಪುಟಗಳಷ್ಟು ತಿಳುವಳಿಕೆಯನ್ನೇ ನೀಡುತ್ತವೆ. ಅದೇ ಕಥೆಗಾರನಿಗೆ (ಬರಹಗಾರ) ಈ ಭಾಷೆಯಿರುವುದಿಲ್ಲ. ಅವನಿಗೆ ನಿಗದಿತ ಪದಗಳು ಮಾತ್ರ. ಆಗಾಗ್ಗೆ ಅಥವಾ ಸುಮಾರು ಅವನು ಬಳಸುವ ಸೂತ್ರಾನುಸಾರಿಯಾದ

---

7. **ಭಟ್ ವಿ.ಎನ್.**, ಜ್ಞಾನದೀಪ, ಅ–24,ಪು–46,47, ಸೂಕ್ತಿಮಾಲಾ,(1997)ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿ ನಗರ(ವಿನೋಬಾ ನಗರ ಬಡಾವಣೆ, ಶಿವಮೊಗ್ಗ–577201.

ಪದವಿನ್ಯಾಸಗಳು ಎಂದರೆ– **"ನಂತರ ಅವ ಹೀಗೆ ಹೇಳಿದ," "ಅವರು ಉತ್ತರಿಸಿದರು," "ಅವಳು ಕೇಳಿದಳು"** ಇತ್ಯಾದಿ. ಆಂಗಿಕ ಭಾಷೆಯಿಲ್ಲದಾಗ ಕೆಲವೊಮ್ಮೆ ಸ್ಪಷ್ಟತೆಯಿರುವುದಿಲ್ಲ. ದ್ವಂದ್ವಾರ್ಥತೆ ಉಂಟಾಗುತ್ತದೆ. ಹೀಗೆ ಕಥಾನಿರೂಪಕನ ಭಾಷೆಯು ಕಲಿಕೆಯನ್ನು ಅರ್ಥಪೂರ್ಣ ಆಗಿಸುವಲ್ಲಿ ಹೆಚ್ಚಿನ ನೆರವಾಗುತ್ತದೆಂಬುದು ಸುಸ್ಪಷ್ಟ. ಕಥೆಗಾರನು ಒದಗಿಸುವ ಸಂದರ್ಭಗಳು ಕೆಲವೊಮ್ಮೆ ಸೂಕ್ಷ್ಮಾತಿಸೂಕ್ಷ್ಮಗಳನ್ನು ಸೂಚಿಸಬಲ್ಲವು ಅಥವಾ ಸೂಚಿಸಲಾರವು ಕೂಡ. ಆದರೆ ಆಂಗಿಕಭಾಷೆ ಎಂಥಹ ವ್ಯಕ್ತಿಗೂ ಸಂಪೂರ್ಣ ತಿಳುವಳಿಕೆಯನ್ನು ನೀಡಬಲ್ಲುದು.[8]

ಬಹುಶಃ ಈ ಒಂದು ಕಾರಣದಿಂದಲೇ ಕಥಾನಿರೂಪಣಾ ಮಾಧ್ಯಮವೇ ರಾಜಕುಮಾರರಿಗೆ ಸೂಕ್ತ ಶಿಕ್ಷಣ ನೀಡಲು ಸರಿಯಾದ ಕ್ರಮವೆಂದು ವಿಷ್ಣುಶರ್ಮರು ತೀರ್ಮಾನ ಮಾಡಿದ್ದರು. ರಾಜಕುಮಾರರು– ಇವರ ವಿಚಾರವಾಗಿ ನಮಗೆ ಒಂದು ಸ್ಪಷ್ಟತೆಯಿರಬೇಕು. ಅದೇನೆಂದರೆ ಅವರು ವಾಸ್ತವವಾಗಿ ಕಲಿಯಲಾರದ ಹಂತ ತಲುಪಿದ ದಡ್ಡರಾಗಿರಲಿಲ್ಲ. ಅವರು ಅನಕ್ಷರಸ್ಥರು ಮತ್ತು ಆಲಸಿಗಳು, ದುಃಸಹವಾಸದಿಂದ ಉದ್ಧಟರಾಗಿದ್ದರಷ್ಟೆ. ಪ್ರಸಿದ್ಧ ಮನೋವಿಜ್ಞಾನಿಗಳಾದ ಲೂಯಿ. ಎಂ. ಟರ್ಮನ್ ಮುಂತಾದವರು ತಿಳಿಸಿರುವಂತೆ ಬುದ್ಧಿಶಕ್ತಿಯ ಸಂಖ್ಯಾ ಪ್ರಮಾಣದ ಪಟ್ಟಿಯ ಕೊನೆಯ ಸಾಲಿನ 20 ಕ್ಕಿಂತ ಕಡಿಮೆ ಐ.ಕ್ಯು. ಉಳ್ಳ**(Idiots)**ಮದ್ದುಗಳೇನಾಗಿರಲಿಲ್ಲ. ಅವರ ತಂದೆಯವರೇ ಹೇಳಿರುವಂತೆ ಅವರು ಯೋಗ್ಯವಾದ ತೀರ್ಪಿನ ಕೊರತೆಯಿಂದ ಬಳಲುತ್ತಿದ್ದರು. ಕಾರಣ ಕಲಿಕಾ ಹಿಂಜರಿಕೆ, ಅನಾಸಕ್ತಿ. ಇವರ ಬುದ್ಧಿಶಕ್ತಿಯನ್ನು ಹೇಗೆ ಜಾಗೃತಗೊಳಿಸುವುದೆಂಬ ಒಂದು ದೊಡ್ಡ ಸಮಸ್ಯೆಯಿಂದ ನೊಂದು, ತನ್ನ ಸಚಿವಸಂಪುಟದ ಮುಂದೆ ವಿಚಾರವನ್ನು ತಿಳಿಸಿ, ಯಾವುದಾದರೊಂದು ಮಾರ್ಗದಲ್ಲಿ ನನ್ನಕುಮಾರರ ಬುದ್ಧಿಶಕ್ತಿಯನ್ನು ಜಾಗೃತಗೊಳಿಸಿ, ರಾಜ್ಯದ ಹಿತದೃಷ್ಟಿಯಿಂದ ಉಜ್ವಲ ಭವಿಷ್ಯವನ್ನು ರೂಪಿಸಿಕೊಳ್ಳಲು ಸೂಕ್ತ ಶಿಕ್ಷಣ ವ್ಯವಸ್ಥೆಗಾಗಿ ಸಲಹೆ ಮತ್ತು ಸಹಾಯವನ್ನು ಕೋರಿದನು.

ಪಂಚತಂತ್ರದ ಮುನ್ನುಡಿಯಲ್ಲಿ ಸೂಚಿಸಿರುವಂತೆ, ಸಕಲಶಾಸ್ತ್ರಪಾರಂಗತರೂ, ಪ್ರತಿಭಾನ್ವಿತ ಜನಪ್ರಿಯ ಶಿಕ್ಷಕರೂ ಆಗಿದ್ದ ವಿಷ್ಣುಶರ್ಮರು ಆಯ್ಕೆಯಾಗಿದ್ದು, ಅಷ್ಟೇ ಧೃಡಸಂಕಲ್ಪ ಹಾಗೂ ಆತ್ಮವಿಶ್ವಾಸದಿಂದ ರಾಜಕುಮಾರರ ಬುದ್ಧಿಶಕ್ತಿಯನ್ನು ಜಾಗೃತಗೊಳಿಸಿ, ಅವರಿಗೆ ಸೂಕ್ತವಾದ ರಾಜನೀತಿ ಶಿಕ್ಷಣ ನೀಡಿ ಮುಂದಿನ ಶ್ರೇಷ್ಠ ಜವಾಬ್ದಾರಿ ವಹಿಸಿಕೊಂಡು ತಂದೆಯಂತೆಯೇ ದಕ್ಷದೊರೆಗಳಾಗುವಂತೆ ಶಿಕ್ಷಣ ನೀಡುವುದಾಗಿ ಪ್ರತಿಜ್ಞೆ ಮಾಡಿದರು.[9]

---

8. **Chandra Rajan,** VISNU SARMA-The Pancatantra, Intro-p- xxxi-xxxii, 1993,Penguin Random House India pvt.Ltd,7thFloor, Infinity Tower C,DLF Cyber City,Gurgaon-122002, Haryana, India.
9. **Chandramani.D** L, PANCHATANTRA, Introduction-P-01-02,Rupa Publications India Pvt.Ltd 1991,7/16, Ansari Road, Daryaganj,New Delhi-110002

ಪಂಚತಂತ್ರದ ಭೂಮಿಕೆಯಲ್ಲಿ ಅಮರಶಕ್ತಿ ರಾಜನನ್ನು ಕುರಿತು ಒಂದು ಸ್ಪಷ್ಟ ಚಿತ್ರಣವಿದೆ. ರಾಜ ಅಮರಶಕ್ತಿ ದಾನದಲ್ಲಿ ಕಲ್ಪವೃಕ್ಷಕ್ಕೆ ಸಮಾನಾದ, ದೊಡ್ಡ ದೊಡ್ಡ ರಾಜರ ಕಿರೀಟದಲ್ಲಿರುವ ರತ್ನಗಳ ಕಿರಣದಿಂದ ಪಾದಪೂಜೆಯನ್ನು ಪಡೆಯುತ್ತಿದ್ದ ಸಕಲಕಲಾಪಾರಂಗತ. ಸಂಕ್ಷಿಪ್ತವಾಗಿ ಹೇಳುವುದಾದರೆ, ಬಹುಮುಖ ಪ್ರತಿಭೆಯುಳ್ಳ ಆದರ್ಶ ಆಡಳಿತಗಾರ. ಇಲ್ಲಿಂದಲೇ ಒಬ್ಬ ಆದರ್ಶ ರಾಜನ ಲಕ್ಷಣಗಳೇನೆಂಬುದನ್ನು ಗುರುತಿಸಬಹುದು.

ವಿಷ್ಣುಶರ್ಮರ ಶಿಕ್ಷಣ ಶಾಸ್ತ್ರ ಅಥವಾ ಶಿಕ್ಷಣ ನೀಡುವ ಕಲೆ ವಿಭಿನ್ನ ಹಾಗೂ ನವನವೀನ. ಅವರ ಗುರಿಯೇನೆಂದರೆ, ರಾಜಕುವರರಿಗೆ ನೀಡುವ ಶಿಕ್ಷಣ–ಹೇಗೆ ಆಲೋಚಿಸಬೇಕು? ಎಂಬುದು; ಏನು ಯೋಚಿಸಬೇಕು? ಎಂಬುದಲ್ಲ. ಕೇವಲ ಪುಸ್ತಕ ಕಲಿಕೆಯು ಮನುಷ್ಯರನ್ನು ಮೂರ್ಖರನ್ನಾಗಿಸುವುದು. ಯಾವ ಮನುಷ್ಯನು ತನ್ನ ಜ್ಞಾನವನ್ನು ಬಳಸಿಕೊಂಡು ಕ್ರಿಯಾಶೀಲನಾಗುತ್ತಾನೋ ಅವನು ಬುದ್ಧಿವಂತನಾಗುವನು.

ಸಂಕ್ಷಿಪ್ತವಾಗಿ ಹೇಳುವುದಾದರೆ, ಇವರ ಶಿಕ್ಷಣ ಪದ್ಧತಿ ಮೊದಲು ಬುದ್ಧಿಶಕ್ತಿಯ ಜಾಗೃತಿ, ನಂತರ ಅವರಿಗೆ ಸೂಕ್ತವಾದ ಸಾಮಾನ್ಯಜ್ಞಾನ, ರಾಜನೀತಿ ಶಿಕ್ಷಣ ಹಾಗೂ ಸಾಮಾಜಿಕ ಬದುಕಿನ ನೀತಿ. ವಿಷ್ಣುಶರ್ಮರು ತಮ್ಮ ಗಂಭೀರ ಭರವಸೆಯನ್ನು ಆಧರಿಸಿ, ರಾಜಕುಮಾರರಿಗೆ ಶಿಕ್ಷಣ ನೀಡುವ ಕಾರ್ಯವನ್ನು ಈಡೇರಿಸಲು ಒಂದು ನವೀನ ಶಿಕ್ಷಣ ವಿಧಾನವನ್ನು ರೂಪಿಸುತ್ತಾರೆ. ಜೀವನ ಮತ್ತು ಅದರ ವೈವಿಧ್ಯಮಯ ಅನುಭವಗಳೇ ಅವರು ರೂಪಿಸಿರುವ ಪಂಚತಂತ್ರ ಪಠ್ಯಪುಸ್ತಕ. ನಿಜಜೀವನದ ಸಂದರ್ಭಗಳು ಮತ್ತು ಸಮಸ್ಯೆಗಳನ್ನು ಸರಳ ಕಥೆಗಳ ಸೋಗಿನಲ್ಲಿ ಪ್ರಸ್ತುತಪಡಿಸಿ, ವಿದ್ಯಾರ್ಥಿಗಳ ಆಸಕ್ತಿಯನ್ನು ಹಿಡಿದಿಟ್ಟು, ಆಲೋಚನೆಯೆಡೆಗೆ ಪ್ರೇರೇಪಿಸುತ್ತಿದ್ದರು. ವಿಷ್ಣುಶರ್ಮರ ಭಾವನೆಯೇನಿತ್ತೆಂದರೆ, ಒಮ್ಮೆ ರಾಜಕುಮಾರರಿಗೆ, ಜಾಗೃತಿಮೂಡಿಸಿ, ಚೆನ್ನಾಗಿ ಆಲೋಚಿಸುವ ಮತ್ತು ಮನಸ್ಸನ್ನು ರಚನಾತ್ಮಕವಾಗಿ ಬಳಸಿಕೊಳ್ಳುವ ತರಬೇತಿ ನೀಡಿದರೆ, ಜ್ಞಾನಸಂಪಾದನಾ ಆಸಕ್ತಿಯನ್ನು ಅಭಿವೃದ್ಧಿಪಡಿಸಿಕೊಳ್ಳುವಲ್ಲಿ ಬದ್ಧರಾಗುತ್ತಾರೆಂಬುದು.

ಇನ್ನೊಂದು ವಿಚಾರವೆಂದರೆ, ಪಂಚತಂತ್ರವು ಹಲವಾರು ವೈವಿಧ್ಯಮಯ ಪಾತ್ರಗಳನ್ನು ತನ್ನ ಕಥೆಗಳಲ್ಲಿ ನಿಯೋಜಿಸಿಕೊಂಡಿದೆ. ಮೇಲುವರ್ಗದಿಂದ ಕೆಳವರ್ಗದ ವರೆಗೆ; ಮಾನವಜಗತ್ತಿನ ಹಳ್ಳಿ ಮತ್ತು ಪಟ್ಟಣ; ಅದರೊಳಗೇ ಒಂದು ಮಹತ್ವಾಕಾಂಕ್ಷೆಯ ಹೊಸ ಪ್ರಪಂಚ. ಅಂದರೆ ಪ್ರಕೃತಿಯ ಜಗತ್ತು; ತನ್ನದೇ ಆದ ಕ್ರಮಾನುಗತದೊಂದಿಗೆ ಹೆಚ್ಚಿನ ಮತ್ತು ಕಡಿಮೆಯ; ಬಲವಾದ–ದುರ್ಬಲವಾದ; ಪರಭಕ್ಷಕ– ಬೇಟೆಯ ಎಲ್ಲವನ್ನೂ ಅಳವಡಿಸಿಕೊಂಡಿದೆ. ಪಂಚತಂತ್ರವು ಎರಡು ಪ್ರಪಂಚಗಳನ್ನು ಪ್ರಸ್ತುತಪಡಿಸುತ್ತದೆ. ಒಂದು ಮತ್ತೊಂದನ್ನು

ಪ್ರತಿಬಿಂಬಿಸುತ್ತದೆ. ನಮ್ಮನ್ನು ನಾವು ಹೇಗಿದ್ದೇವೋ ಹಾಗೆ ಸಹಜವಾಗಿ ನೋಡಿಕೊಳ್ಳಲು ಆಗುವುದಿಲ್ಲ. ಕನ್ನಡಿಯ ಪ್ರತಿಬಿಂಬದಲ್ಲೋ, ಮುಖಸ್ತುತಿಯಿಂದಲೋ ಅಥವಾ ಇನ್ನೊಂದು-ಹೀಗೆ ಕಂಡುಕೊಳ್ಳಬಹುದು. ಸ್ವಲ್ಪ ಹಿಂದೆ ಸರಿದುನಿಂತು ನಮ್ಮನ್ನು ಮತ್ತು ವರ್ತನೆಯನ್ನು ನೋಡಿಕೊಳ್ಳಬಹುದು. ನಮ್ಮ ದಿನನಿತ್ಯದ ಜೀವನದ ಚಲನವಲನಗಳಲ್ಲಿ ವಿಪರೀತವಾಗಿ ತೊಡಗಿಸಿಕೊಂಡಿರುವುದರಿಂದ ಘಟನೆಗಳು ಮತ್ತು ಸಂದರ್ಭಗಳ ಮಾದರಿ ಹಾಗೂ ಅರ್ಥವನ್ನು ಮತ್ತೊಬ್ಬರು ನಮ್ಮೆದುರು ಪ್ರಸ್ತುತಪಡಿಸುವವರೆಗೂ ಕಂಡುಕೊಳ್ಳಲು ಆಗುವುದಿಲ್ಲ. ಮತ್ತೊಂದೆಡೆಯಲ್ಲಿ ಯಾರೋ ಅಂತಹ ಘಟನೆ ಮತ್ತು ಸಂದರ್ಭಗಳನ್ನು ಎದುರಿಸುತ್ತಿರುವ ಚಿತ್ರವನ್ನು ನಮ್ಮ ಕಣ್ಣಮುಂದೆ ತಂದಾಗ ಮಾತ್ರ ನಾವು ಬಹಳ ಉತ್ತಮವಾಗಿ ಅರ್ಥೈಸಿಕೊಳ್ಳಬಹುದು. ಇದನ್ನೇ ಪಂಚತಂತ್ರ ನೀತಿಕಥೆಗಳಲ್ಲಿ ಬಹಳ ಪರಿಣಾಮಕಾರಿಯಾಗಿ ಮೇಧಾವಿ ವಿಷ್ಣುಶರ್ಮರು ನಿರ್ವಹಿಸಿರುತ್ತಾರೆ. ಹೀಗೆ ಪಂಚತಂತ್ರವು ಉಭಯ ದೃಷ್ಟಿಕೋನವನ್ನು ಹೊಂದಿದೆ. ಮಾನವ-ಮಾನವೇತರ-ಎರಡು ಪ್ರಪಂಚಗಳನ್ನು ಸಿದ್ಧಪಡಿಸಿ, ಸಂಭಾಷಣೆ ಹಾಗೂ ವ್ಯಾಖ್ಯಾನಗಳನ್ನು ಪರಸ್ಪರ ನಡೆಸಿಕೊಂಡು ನಿತ್ಯಜೀವನದ ಘಟನೆಗಳು ಹಾಗೂ ಸಂದರ್ಭಗಳನ್ನು ಅತ್ಯಂತ ಆಸಕ್ತಿಯಿಂದ ಗ್ರಹಿಸಿಕೊಳ್ಳಲು ಅವಕಾಶ ಕಲ್ಪಿಸಿರುವುದೇ ಪಂಚತಂತ್ರ ಪಠ್ಯವಿಧಾನದ ವಿಶಿಷ್ಟತೆಯಾಗಿದೆ. ಈ ಎರಡೂ ವಿಷಯಗಳಲ್ಲಿ- ಪಂಚತಂತ್ರವು ಭಾರತೀಯ ಮಹಾಕಾವ್ಯದಂತಿದ್ದು ಬಲವಾದ ಮತ್ತು ನಿಕಟವಾದ ಗುಣಸಾಮ್ಯವನ್ನು ಹೊಂದಿದೆ.[10]

ವಿಷ್ಣುಶರ್ಮರ ಪಂಚತಂತ್ರವು ಅನೇಕ ಹಂತಗಳಲ್ಲಿ ಸಾಮಾಜಿಕ ಬದುಕನ್ನು ಪ್ರತಿನಿಧಿಸುತ್ತದೆ. ಅದರಲ್ಲೂ ಹೆಚ್ಚು ಸ್ವಯಂ ಪ್ರಜ್ಞೆಯಿಂದ ಈ ಕಾರ್ಯವನ್ನು ನಡೆಸಿ ಸಮಾಜಕ್ಕೆ ಕನ್ನಡಿ ಹಿಡಿದಿದೆ. ಕಥೆಗಳು ಒಂದೆಡೆಯಲ್ಲಿ ಸರಳ, ಶುದ್ಧ ಹಾಗೂ ಮನೋರಂಜಕವಷ್ಟೇ ಅಲ್ಲ, ಉತ್ತಮ ನೀತಿಬೋಧಕವೂ ಆಗಿರುತ್ತದೆ. ಆತ್ಮೋನ್ನತಿ ಅಥವಾ ಶಿಕ್ಷಣವು ಪಂಚತಂತ್ರದ ಮುಖ್ಯಗುರಿಯಾಗಿದ್ದು, ಬುಧ್ಧಿವಂತಿಕೆಯಿಂದ ಮತ್ತು ಚೆನ್ನಾಗಿ ಬದುಕುವ ಕಲೆಯನ್ನು ನೀತಿಬದ್ಧವಾಗಿ ಪ್ರೇರೇಪಿಸುವುದು ಮತ್ತೊಂದೆಡೆಯಲ್ಲಿನ ಮುಖ್ಯ ಗುರಿಯಾಗಿದೆ.

ಪಂಚತಂತ್ರವನ್ನು ಮೂಲತಃ ವಿನ್ಯಾಸಗೊಳಿಸಿರುವುದು ದೊರೆಗಳ ಉಪಯೋಗಕ್ಕಾಗಿ-ರಾಜಕುಮಾರರಿಗೆ ಕನ್ನಡಿಯಂತೆ ಹಾಗೂ ಸರ್ಕಾರ ನಡೆಸುವ ಕಲೆಯಲ್ಲಿ ನ್ಯಾಯಯುತ ಆಡಳಿತಗಾರರಿಗೆ ಹಾಗೂ ಅವರ ಖಾಸಗಿ ಜೀವನ ಮತ್ತು ಸಂಬಂಧಗಳ ನಡವಳಿಕೆಯಲ್ಲಿ ಒಂದು ಮಾದರಿ ಕೈಪಿಡಿಯಾಗಿದೆ. ಮತ್ತೊಂದು ವಿಶೇಷವೆಂದರೆ, ಪಂಚತಂತ್ರದಲ್ಲಿ ನೀತಿಭೋಧೆ ಅಳವಡಿಸಿರುವುದು-ನೀತಿ ಶಿಕ್ಷಣ ಅಥವಾ ಬೋಧನೆ ಎಲ್ಲ ಜನರಿಗೂ ಅತ್ಯಾವಶ್ಯಕ. ನೀತಿಯು ಎಲ್ಲ ಹಂತಗಳಿಗೂ ಅನ್ವಯಿಸುತ್ತದೆ. ರಾಜ, ರೈತ,

10. **Chandra Rajan**, VISNU SARMA-The Pancatantra, Intro-p- xxxv-xxxvi, 1993, Penguin Random House India pvt.Ltd,7thFloor, Infinity Tower C, DLF Cyber City, Gurgaon-122002, Haryana, India.

ಪ್ರಜೆ, ಸರ್ಕಾರದ ಆಡಳಿತಯಂತ್ರ, ವೃತ್ತಿನಿರತರು, ಒಟ್ಟಾರೆ ಸಕಲಕರ್ಮಿಗಳು ಎಲ್ಲರಿಗೂ ನೀತಿಶಿಕ್ಷಣ ಬೇಕು. ಸಾಮಾನ್ಯ ಜನರು ಮಾಮೂಲು ಜೀವನೋಪಾಯ ನಡೆಸುವಲ್ಲಿಯೂ ಅವರ ಸರಿತಪ್ಪುಗಳ ಬಗ್ಗೆ ಅರಿವು ಇರಬೇಕಾಗುತ್ತದೆ ಹೀಗಾಗಿ ಪಂಚತಂತ್ರವು ಸಣ್ಣವರಿಂದ ದೊಡ್ಡವರವರೆಗೂ, ಯಾರು, ಯಾರು, ಯಾವ, ಯಾವ ದೃಷ್ಟಿ ಹಾಗೂ ಮನೋವೃತ್ತಿಯಿಂದ ಗಮನಿಸುತ್ತಾರೋ ಹಾಗೆ ಅವರಿಗೆ ಫಲಪ್ರದವಾಗುತ್ತದೆ. ಹೀಗಾಗಿ ಪಂಚತಂತ್ರವು ಒಂದು ಬಹುಮುಖ ಪ್ರತಿಭೆಯಿಂದ ಕೂಡಿರುವ ನೀತಿಶಾಸ್ತ್ರ ಗ್ರಂಥವಾಗಿದೆ.

ಪಂಚತಂತ್ರವು, ಅದರ ವಿಮರ್ಶೆಯಲ್ಲಿ ಜನರ ನಡವಳಿಕೆಗಳು ಮತ್ತು ಉದ್ದೇಶಗಳು, ವರ್ತಕರು, ಸಂನ್ಯಾಸಿಗಳು, ವಿದ್ವಾಂಸರು, ನ್ಯಾಯಾಧೀಶರು, ವಿಲಾಸ ಜೀವನದ ಪತಿ ಮತ್ತು ವಂಚಕ ಪತ್ನಿ, ಹೊಟ್ಟೆಬಾಕ ಅಥವಾ ಅಸಮರ್ಥ ಬ್ರಾಹ್ಮಣ ಮತ್ತು ಕ್ರೂರ ಬೇಟೆಗಾರ, ದುಡುಕು ಮತ್ತು ನಿರ್ಲಜ್ಜ, ಅನಾದರದ ಹಾಗೂ ಲೆಕ್ಕಾಚಾರದ ಮುಂತಾದ ಪ್ರತಿಯೊಬ್ಬನಿಗೂ ವಿಮರ್ಶೆಯ ನ್ಯಾಯಯುತ ಪಾಲು ಲಭ್ಯವಾಗುತ್ತದೆ. ಹೀಗೆ ಪಂಚತಂತ್ರದಲ್ಲಿ ಎಲ್ಲ ಶ್ರೇಣಿಯ ಮಾನವ ಚಟುವಟಿಕೆಗಳಿಗೆ ಒಂದು ಒಳ್ಳೆಯ ಶಿಕ್ಷಣ ಹಾಗೂ ನೈತಿಕ ಬೋಧನೆ ಅತ್ಯಂತ ಆಕರ್ಷಕವಾಗಿ ದೊರಕುತ್ತದೆ. ಉತ್ತಮ ವ್ಯಕ್ತಿತ್ವನಿರ್ಮಾಣಕ್ಕೆ ಪರಿಣಾಮಕಾರಿ ಮಾರ್ಗದರ್ಶನವೂ ಲಭ್ಯವಾಗುತ್ತದೆ. ಮೂರ್ಖರು ಮತ್ತು ನೀತಿ–ನಿಯಮ ಇಲ್ಲದವರು, ಅತಿಯಾದ ನಂಬಿಕೆಯುಳ್ಳವರು ಮತ್ತು ಪಿತೂರಿ ನಡೆಸುವವರನ್ನು ಸೂಕ್ಷ್ಮವಾಗಿ ಹಾಗೂ ಸಮಾನವಾಗಿ ಪಂಚತಂತ್ರ ಕಥೆಗಳಲ್ಲಿ ದಂಡಿಸಲಾಗಿದೆ ಹಾಗೂ ವರ್ತನೆಯನ್ನು ಖಂಡಿಸಲಾಗಿದೆ. ಆಡಂಬರದ ಮತ್ತು ವಾಚಾಳಿಗಳಿಗೆ ಅಪಹಾಸ್ಯಕ್ಕೆ ಗುರಿಯಾಗುವ ನಿದರ್ಶನಗಳಿವೆ. ಅಂದರೆ ಪಂಚತಂತ್ರದಲ್ಲಿ ಒಂದು ರೀತಿ ತಿದ್ದುವ ಅಥವಾ ಸರಿಪಡಿಸುವ ವಿಮರ್ಶೆಯನ್ನು ಕಾಣಬಹುದು.[11]

ಪಂಚತಂತ್ರ ಕಥೆಗಳ ಎಚ್ಚರಗೊಂಡ ಉದ್ದೇಶವೇ ಬೇರೆ ಏನೋ !! ಆದರೆ ಯುವರಾಜಕುಮಾರರೇ ಅಲ್ಲದೆ ಇತರರಿಗೂ ನೀತಿ ಬೋಧಿಸುವುದೇ ಆಗಿರುತ್ತದೆ. ಅಂದಿನಿಂದ ನೀತಿ ಅಥವಾ ಪ್ರಾಯೋಗಿಕ ಬುದ್ಧಿವಂತಿಕೆ ಯುವಮನಸ್ಸುಗಳಿಂದ ಹಿಡಿದು ಹಿರಿಮನಸ್ಸುಗಳವರೆಗೂ ಜಾಗೃತಗೊಳಿಸಿ ತರಬೇತಿ ನೀಡುವ ಉತ್ತಮ ಮಾಧ್ಯಮವನ್ನಾಗಿ ಆಚರಿಸಲಾಗುತ್ತಿದೆ. ನೈಸರ್ಗಿಕ ಜಗತ್ತು ಸ್ಥಳಾಂತರಿಸಲಾಗಿರುವ ಮಾನವ ಸಮಾಜವಾಗಿದೆ. ಉದಾಹರಣೆಗೆ ಪಂಚತಂತ್ರದ ಮೊದಲನೆಯ ತಂತ್ರದ ಸೂತ್ರಕಥೆಯಲ್ಲಿ ಬರುವ ನರಿಯು ಹೆಬ್ಬಯಕೆಯ, ಕಲ್ಲೆದೆಯ, ಅವಕಾಶವಾದಿ ರಾಜಕಾರಣಿಯಂತೆ ಏನು ಸಿಗುವುದೆಂದು ಕಾಯುತ್ತಾ ಇರುವ ಲಕ್ಷಣಗಳನ್ನು ಕಾಣಬಹುದು. ಅನೇಕ ಸಣ್ಣ, ಮಧ್ಯಮ ಹಾಗೂ ದೊಡ್ಡ ಮೀನುಗಳನ್ನು ತಿಂದ ಬಕವೊಂದು

11. **Chandra Rajan,** VISNU SARMA-The Pancatantra, Intro-p- xxviii-xxix,1993, Penguin Random House India pvt.Ltd,7thFloor, Infinity Tower C, DLF Cyber City, Gurgaon-122002, Haryana, India.

ಮಾನವ ಸ್ವಭಾವ ವಹಿಸುವ ಪಾತ್ರವನ್ನು ಕುರಿತ ಜ್ಞಾನವೇ ಆಗಿರುತ್ತದೆ. ಕಲಿವು ಹಾಗೂ ಬೋಧನೆ ಇವೆರಡಕ್ಕೂ ನಿಕಟವಾಗಿ ಸಂಬಂಧಿಸಿರುವ ಆಧಾರ ಜ್ಞಾನ. ಡಾಡ್ಸನ್ ಎಂಬ ಪಂಡಿತರು "ವ್ಯಕ್ತಿ ಸಮಾಜ ಜೀವನದಲ್ಲಿ ಸುರಕ್ಷತೆ ಮತ್ತು ತೃಪ್ತಿಗಳಿಂದ ಭಾಗವಹಿಸಲು ನೆರವಾಗುವಂತೆ ನಿರ್ದೇಶನ ನೀಡಲು ಅವನ ಕಲಿವಿಗೂ ಉಪಾಧ್ಯಾಯರ ಬೋಧನೆಗೂ ಹಲವಾರು ಮುಖಗಳಲ್ಲಿ ನೆರವಾಗುವ ಜ್ಞಾನ"[6] ಎಂದು ವ್ಯಾಖ್ಯಾನಿಸಿರುತ್ತಾರೆ. ಇತ್ತೀಚೆಗೆ, ಶಿಕ್ಷಣದ ಉದ್ದೇಶ, ವ್ಯಾಪ್ತಿ ಮತ್ತು ವೈವಿಧ್ಯತೆಗಳಲ್ಲಿ ಸಂಕೀರ್ಣತೆ ಹೆಚ್ಚಿದಂತೆ ಶಿಕ್ಷಣ ಮನೋವಿಜ್ಞಾನದ ವ್ಯಾಪ್ತಿಯು ವಿಸ್ತಾರವಾಗುತ್ತಿದ್ದು ನವನವೀನ ಸಾಧನೆಗಳು ಜರುಗುತ್ತಿವೆ. ಇದರಲ್ಲಿ ಶಿಕ್ಷಕರ ಪಾತ್ರದ ಮಹತ್ವವನ್ನು ಚರ್ಚಿಸಲಾಗಿದೆ.

ಶಿಕ್ಷಣ ಪ್ರಕ್ರಿಯೆಯಲ್ಲಿ ಸರಿಯಾದ ಶಿಕ್ಷಕನ ಪಾತ್ರವನ್ನು, ಅವನ ಘರ್ಷಣೆಗಳು, ಪ್ರೇರಣೆ, ಆತಂಕ, ಗುರು–ಶಿಷ್ಯರ–ಬಾಂಧವ್ಯ, ಅನುಭೂತಿ, ಹೊಂದಾಣಿಕೆ, ಮಹತ್ವಾಕಾಂಕ್ಷೆ, ವೃತ್ತಿ–ಘನತೆ ಮತ್ತು ವೃತ್ತಿಕೌಶಲ್ಯ, ನೀತಿಬೋಧನೆ, ಬೋಧನಾ ಮಾಧ್ಯಮ, ಪಠ್ಯಕ್ರಮ, ಮೌಲ್ಯಮಾಪನ ಇತ್ಯಾದಿಗಳ ಬಗ್ಗೆ ಶಿಕ್ಷಕರಾದವರಿಗೆ–ಶಿಕ್ಷಕರಾಗುವವರಿಗೆ ಸ್ಫೂರ್ತಿಯನ್ನು ನೀಡುವುದಾಗಿದೆ. ಪರಿಣಾಮಕಾರಿಬೋಧನೆ, ಕಲಿಕೆಯವರ್ಗಾವಣೆ, ಅಗತ್ಯ ಆದರ್ಶ ವ್ಯಕ್ತಿತ್ವ, ಆಸಕ್ತಿಗಳು, ಅಭಿಪ್ರೇರಣೆ, ಅವಧಾನ, ವಿಷಯಜ್ಞಾನ, ಶ್ರದ್ಧೆ, ಸೇವಾ ಮನೋಭಾವನೆ ಇತ್ಯಾದಿ ಗುಣಲಕ್ಷಣಗಳ ಮೇಲೆ ಬೆಳಕನ್ನು ಚೆಲ್ಲುವುದಾಗಿರುತ್ತದೆ. ಇಷ್ಟಲ್ಲದೆ ನೀತಿಪಾಠವು ಕಿರಿಯರಿಂದ ಹಿಡಿದು ಹಿರಿಯರ ತನಕ ಪ್ರತಿಯೊಬ್ಬರಿಗೂ ಅವಶ್ಯಕವಾಗಿ ಬೇಕಾಗಿರುವುದು. ಇಲ್ಲಿ ಮೌಲ್ಯಮಾಪನ ಎಂದರೆ ಮಾಡಿದ ತಪ್ಪುಗಳನ್ನು ಗುರುತಿಸಿ, ಅದನ್ನು ಸರಿಪಡಿಸಿಕೊಳ್ಳುವಂತೆ ಜಾಗೃತಿಯನ್ನುಂಟುಮಾಡುವುದು. ಅದಕ್ಕೆ ತಕ್ಕಂತೆ ಸೂಕ್ತ ಸನ್ನಿವೇಶಗಳನ್ನು ಒದಗಿಸಿ, ತಿಳುವಳಿಕೆಯನ್ನು ಬೆಳೆಸುವುದು. ಇದು ಪ್ರತಿಯೊಬ್ಬರಿಗೂ ಅವಶ್ಯಕ ಹಾಗೂ ಸಾರ್ವಕಾಲಿಕ. ಸುಮಾರು 2000 ವರ್ಷಗಳ ಹಿಂದೆಯೇ ಇಂಥಹ ಸುಧಾರಿತ ಚಿಂತನೆಯನ್ನು ಮಾಡಿ ವಿಷ್ಣುಶರ್ಮರು ಪಂಚತಂತ್ರ ರಚನೆ ಮಾಡಿದ್ದಾರೆ ಎಂಬುದು ಒಂದು ಹೆಮ್ಮೆಯ ವಿಚಾರ. ಭರತಖಂಡವು ಇಂಥಹ ಒಬ್ಬ ಪ್ರತಿಭಾವಂತ ಶಿಕ್ಷಕರನ್ನು ಕೊಡುಗೆಯಾಗಿ ನೀಡಿರುವುದು ಇನ್ನೂ ಪ್ರತಿಷ್ಠೆಯ ವಿಷಯವಾಗಿದೆ. ಮತ್ತೊಂದು ವಿಶೇಷವೆಂದರೆ, ನಮ್ಮ ದೇಶದ ಕೇಂದ್ರ ಘನ ಸರ್ಕಾರ 2020 ರ ಹೊಸ ಶಿಕ್ಷಣ ನೀತಿಯನ್ನು ಜಾರಿಗೊಳಿಸಿ–**Multi disciplinary and holistic education** ಹಾಗೂ **Universalization of Education**. (ಶಿಕ್ಷಣದ ಸಾರ್ವತ್ರೀಕರಣ, ವಿಶ್ವವ್ಯಾಪಕಗೊಳಿಸುವಿಕೆ) ಸನಾತನ ಹಾಗೂ ಸಾಂಸ್ಕೃತಿಕ ಪರಂಪರೆಯ ರಕ್ಷಣೆ) ಆದೇಶಿಸಿರುವುದು ಒಂದು ಸಂಭ್ರಮದ ವಿಚಾರವಾಗಿದೆ.

ಪಂಚತಂತ್ರದ ಕಥಾಮುಖದಲ್ಲಿ ತಿಳಿಸಿರುವಂತೆ, "ಈ ಜೀವನವು ಶಾಶ್ವತವಲ್ಲ ಮತ್ತು ಶಾಸ್ತ್ರಗಳನ್ನೆಲ್ಲಾ ದೀರ್ಘಕಾಲದಿಂದ ಅಭ್ಯಾಸಮಾಡಬೇಕು. ಶಾಸ್ತ್ರಗಳೆಲ್ಲವನ್ನೂ ಅಭ್ಯಾಸಮಾಡಲು ಒಂದು ಜನ್ಮ ಸಾಕಾಗುವುದಿಲ್ಲ.

---

6. **ವೀರಪ್ಪ ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ,ಅಧ್ಯಾಯ–2,ಪು–19–20,(1962),ಡಿ.ವಿ.ಕೆ ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

ಆದ್ದರಿಂದ ಶಾಸ್ತ್ರವನ್ನು ಸಂಕ್ಷೇಪದಲ್ಲಿ ಬೋಧಿಸುವುದಕ್ಕಾಗುತ್ತದೆಯೇ ಎಂದು ವಿಚಾರ ಮಾಡಬೇಕು. ಶಾಸ್ತ್ರಗಳ ಸಾರಮಾತ್ರವನ್ನು ತಿಳಿದುಕೊಳ್ಳಬೇಕು. ಇದಕ್ಕೆ ಸೂಕ್ತವಾದವರೆಂದರೆ, ವಿದ್ಯಾರ್ಥಿ ಸಮುದಾಯದಲ್ಲಿ ಹೆಸರುವಾಸಿಯಾದ, ಸಕಲಶಾಸ್ತ್ರ ಪಾರಂಗತರಾದ ವಿಷ್ಣುಶರ್ಮರು. ಖಂಡಿತವಾಗಿಯೂ ಮಂದಮತಿಗಳಾದ ರಾಜಕುಮಾರರನ್ನು ಬೇಗನೆ ಬುದ್ಧಿವಂತರನ್ನಾಗಿ ಮಾಡುವರು.[7] ಹೀಗೆ ಅಮರಶಕ್ತಿ ಆಸ್ಥಾನದಲ್ಲಿದ್ದ ಸಚಿವರ ಗುಂಪಿನಲ್ಲೊಬ್ಬರಾದ ಸುಮತಿ ಎಂಬುವವರು ಸಲಹೆ ಮಾಡುತ್ತಾರೆ. ಒಬ್ಬ ಶಿಕ್ಷಕನ ಬಗ್ಗೆ ಹೀಗೆ ಒಂದು ವಿಶ್ವಾಸಾರ್ಹತೆ ಅಥವಾ ಭರವಸೆ ಮೂಡಿಬರಬೇಕು. ಇನ್ನು ಇಲ್ಲಿ ಇವರ ಶಿಷ್ಯರನ್ನೂ ಪ್ರಶಂಸಿಸಲೇಬೇಕು. ಏಕೆಂದರೆ ಅವರು ಗುರುಗಳಲ್ಲಿ ಅಷ್ಟೇ ನಂಬಿಕೆ, ಶ್ರದ್ಧಾಭಕ್ತಿ ಹಾಗೂ ವಿಶ್ವಾಸವನ್ನು ಬೆಳೆಸಿಕೊಂಡಿದ್ದರು. ಒಂದು ಸುಭಾಷಿತ ಹೀಗೆ ಹೇಳುತ್ತದೆ:–

वाच्यं श्रद्धासमेतस्य पृच्छकस्य विशेषतः ।

प्रोक्तं श्रद्धाविहीनाय ह्यरण्यरुदितं भवेत् ॥[8]

ಅಂದರೆ, ಯಾರಿಗೆ (ನಮ್ಮ ಮೇಲೆ) ವಿಶ್ವಾಸವಿದೆಯೋ ಮತ್ತು ಹೆಚ್ಚಾಗಿ ಅವರು ನಮ್ಮಲ್ಲಿ (ಅದರ) ಬಗ್ಗೆ ವಿಚಾರಿಸುತ್ತಾರೆಯೋ ಅವರಿಗೆ ಉಪದೇಶಿಸಬೇಕು(ಮಾರ್ಗದರ್ಶನ ಮಾಡಬೇಕು). ಆದರೆ ವಿಶ್ವಾಸವಿಲ್ಲದೇ ಇದ್ದವರಿಗೆ ಹೇಳಿದರೆ ನಮ್ಮ ಪರಿಶ್ರಮ ನಷ್ಟ ಅಥವಾ ವ್ಯರ್ಥವಾಗುತ್ತದೆ.

ಭಾಷೆ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಸಂಶೋಧನೆ ನಡೆಸುವಾಗ ಬಹಳ ಮುಖ್ಯವಾದುದು ಭಾಷಾ ಸಾಮಗ್ರಿ ಹಾಗೂ ಜ್ಞಾನಸಾಮಗ್ರಿ. ಜ್ಞಾನವು ಕ್ರಿಯೆಯಲ್ಲಿ ಘಟಿಸುವುದು. ಹಾಗೆಯೇ ವಸ್ತು, ಭಾಷೆಗಳಲ್ಲಿ ಘನೀಭೂತಗೊಳ್ಳುವುದು. ಜ್ಞಾನವೂ ಒಳಗೊಂಡಂತೆ ಅದರ ಶೋಧಕ್ಕೆ ನೆರವಾಗುವುದು ಭಾಷೆ. ಸಂಶೋಧಕನು ತನ್ನ ಜ್ಞಾನ ಮತ್ತು ಕ್ರಿಯೆಗಳನ್ನು ಮೂರ್ತಗೊಳಿಸುವುದು ಭಾಷೆಯಿಂದ. ಆದ್ದರಿಂದ ಸಂಶೋಧನಾ ಸಂದರ್ಭದಲ್ಲಿ ಭಾಷಾಕ್ಷೇತ್ರವು ಬಹುಮುಖ್ಯ ಆಕರ ಸಾಮಗ್ರಿಯಾಗಿರುತ್ತದೆ. ಇದನ್ನು ಲಿಖಿತ ಮತ್ತು ಮೌಖಿಕ ಎಂಬುದಾಗಿ ವಿಭಾಗಿಸಬಹುದು. ಲಿಖಿತ ಸಾಮಗ್ರಿಯನ್ನು ದಾಖಲು ಸಾಮಗ್ರಿ ಮತ್ತು ಸಾಹಿತ್ಯ ಸಾಮಗ್ರಿಯೆಂದು ವಿಂಗಡಿಸಬಹುದು. ದಾಖಲು ಸಾಮಗ್ರಿಗಳನ್ನು ಶಾಸನ ಮತ್ತು ದಾಖಲೆಯೆಂದೂ, ಸಾಹಿತ್ಯವನ್ನು ಕಾವ್ಯ ಮತ್ತು ಶಾಸ್ತ್ರವೆಂದೂ ವರ್ಗೀಕರಣ ಮಾಡಲಾಗಿದೆ. ಸಾಹಿತ್ಯ ಸಂಸ್ಕೃತಿಯ ಸಂಶೋಧನ ಕಾರ್ಯದಲ್ಲಿ ಗ್ರಂಥಗಳು, ಮೌಖಿಕ ವ್ಯಾಖ್ಯಾನಗಳು ಬಹಳ ಮುಖ್ಯ ಸಾಮಗ್ರಿಗಳಾಗಿವೆ.[9] ಭರ್ತೃಹರಿಯ ನೀತಿಶತಕದಲ್ಲಿ ಹೀಗೆ ಹೇಳಿರುವುದನ್ನು ಈ ಸಂದರ್ಭದಲ್ಲಿ ಸ್ಮರಣೆ ಮಾಡಿಕೊಳ್ಳಬಹುದು:

---

7. **ಸುಧಾಕರಮಾಲವೀಯ,** ಶ್ರೀವಿಷ್ಣುಶರ್ಮವಿರಚಿತಪಂಚತಂತ್ರಮ್, ಸಂಪಾ, ವ್ಯಾಖ್ಯಾ, ಕಥಾಮುಖಮ್–ಪು.–7,8,9,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ಓರಿಯಂಟಲ್ ಪಬ್ಲಿಷರ್ಸ& ಡಿಸ್ಟ್ರಿಬ್ಯೂಟರ್ಸ್,ಏ.37/118, ಗೋಪಾಲ್ ಮಂದಿರ್ ಲೇನ್, ಪಿ.ಬಿ.ನಂ–1118, ವಾರಣಾಸಿ–221001.

8. **ಸುಭಾಷಿತಭಾಂಡಾಗಾರಂ,** बालसंस्कार– संस्कृत सुभाषिते : १

9. **ಕಲಬುರ್ಗಿ. ಎಂ.ಎಂ.** ಕನ್ನಡ ಸಂಶೋಧನ ಶಾಸ್ತ್ರ, ಅ–2, ಪು–21–25, ಸಪ್ನ ಬುಕ್ ಹೌಸ್ ಪ್ರೈ.ಲಿ.3ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು–560009.–(2015)

नैवाकृतिः फलतिनैवकुलं न शीलं

विद्यापि नैव न च यत्नकृतापि सेवा ।

भाग्यानि पूर्वतपसा खलु सञ्चितानि

काले फलन्ति पुरुषस्य यथैव वृक्षाः॥[10]

ಅಂದರೆ, ಆಕಾರವೂ, ಕುಲವೂ, ಶೀಲವೂ, ಪ್ರಯತ್ನಪೂರ್ವಕ ಮಾಡಿದ ಸೇವೆಯು ಫಲಿಸುವುದಿಲ್ಲ. ಹಿಂದಿನ ಜನ್ಮದಲ್ಲಿ ಆಚರಿಸಿದ ತಪಸ್ಸಿನಿಂದ ಸಂಗ್ರಹವಾದ ಭಾಗ್ಯಗಳು ಸಕಾಲದಲ್ಲಿ ವೃಕ್ಷಗಳಂತೆ ಫಲಕೊಡುತ್ತವೆ. ಈ ಮಹಾ ಪ್ರಬಂಧವನ್ನು ರಚಿಸಲು ಬಹಳಷ್ಟು ಮಹತ್ವಪೂರ್ಣ ವಿಚಾರಗಳ ಪ್ರಭೆಯನ್ನೊದಗಿಸಿದ ಗ್ರಂಥಗಳು ಅಪಾರ. ಅವುಗಳಲ್ಲಿ ಕೆಲವು ಆಕರ ಗ್ರಂಥಗಳಾಗಿ ನನ್ನ ಕಾರ್ಯಕ್ಕೆ ಪ್ರೇರಣಾದಾಯಕವಾಗಿವೆ. ಇನ್ನು ಕೆಲವು ಸಂಶೋಧನಾಕಾರ್ಯಕ್ಕೆ ಪುಷ್ಟಿಯನ್ನೊದಗಿಸಿವೆ. ಈ ಮಹಾಪ್ರಬಂಧ ರಚನೆಗೆ ಜ್ಞಾನದಕಿರಣಗಳನ್ನು ಒದಗಿಸಿ ವಿವಿಧ ವಿಚಾರಗಳ ಅರಿವು ಮೂಡಿಸಿ ಸಹಾಯ ಮಾಡಿದ ಗ್ರಂಥಗಳನ್ನು ಅನುಬಂಧದಲ್ಲಿ ಹೆಸರಿಸಿ ಸೂಚಿಸಲಾಗಿದೆ. ಗ್ರಂಥ ಕರ್ತೃಗಳಾದ ವಿದ್ವಾಂಸರುಗಳಿಗೆ ಕೃತಜ್ಞತೆಗಳನ್ನು ವಿನಮ್ರನಾಗಿ ಸಲ್ಲಿಸುವುದು ನನ್ನ ಕರ್ತವ್ಯವಾಗಿರುತ್ತದೆ.

अपि प्रभूतं विदुषां मतिभ्यः

महाखनिभ्यः खलु काव्यरत्नम्।

सभासु संचारितमुत्तमानां

अनर्घतामंचति मंजुतां च ॥[11]

ಅಂದರೆ, "ದೊಡ್ಡ ಗಣಿಯಿಂದ ರತ್ನವು ಹೊರಬರುವಂತೆ, ವಿದ್ವಾಂಸರ ಪ್ರತಿಭೆಯಿಂದ ರಸಪೂರ್ಣವಾದ ಕಾವ್ಯವು ಹುಟ್ಟಿದರೂ ಸಹ ರಸಿಕರ ಸಭೆಯಲ್ಲಿ ಮೆರೆದಾಗ ಆ ಕಾವ್ಯಕ್ಕೆ ಬೆಲೆ ಹೆಚ್ಚುತ್ತದೆ. ಅಲ್ಲದೆ ಮತ್ತಷ್ಟು ಸುಂದರವೂ ಆಗುತ್ತದೆ" ಎಂಬುವಂತೆ ಸಾಹಿತ್ಯ ಗೋಷ್ಠಿಯಲ್ಲಿ ವಿದ್ವಾಂಸರು ತಮ್ಮ ವಿದ್ವತ್ಪೂರ್ಣ ವ್ಯಾಖ್ಯಾನ ಶೈಲಿಯಲ್ಲಿ ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಹೆಚ್ಚು ಬೆಲೆಯನ್ನೂ, ಸೌಂದರ್ಯವನ್ನೂ ಒದಗಿಸುತ್ತಾರೆ. ಮತ್ತೊಂದು ಸುಸಂದರ್ಭ ಒದಗಿದ್ದೆಂದರೆ, ಕರೋನ-19 ಸರ್ವವ್ಯಾಪಿ ವ್ಯಾಧಿಯ ಸನ್ನಿವೇಶದಲ್ಲಿ ಭೌತಿಕ ಕಮ್ಮಟಗಳೆಲ್ಲ **(Offline Seminars)**

10. **ಭರ್ತೃಹರಿಯ ನೀತಿಶತಕ,** 10-ಕರ್ಮಪದ್ಧತಿ, ಶ್ಲೋ-97

11. **ಸುಭಾಷಿತಮಂಜರೀ,** ಕವಿಕಾವ್ಯಪ್ರಶಂಸೆ-ಶ್ಲೋ-4,ಪು-4, ಅನ್ಯೋಕ್ತಿಸ್ತಬಕ-3,ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು-18-(2001)

ಮಿಂಗಮ್ಮಟಗಳಾಗಿ **(On-line Webinars)** ಪರಿವರ್ತನೆಗೊಂಡದ್ದು ನಮಗೆ ಒಂದು ಅನಿರೀಕ್ಷಿತ ಅವಕಾಶವೊದಗಿತು ಮನೆಯಲ್ಲೇ ಕೂತು ರಾಜ್ಯ/ರಾಷ್ಟ್ರೀಯ/ ಅಂತರರಾಷ್ಟ್ರೀಯ ಸಂಗೋಷ್ಠಿಗಳು –ಕಾರ್ಯಶಾಲಾಗಳು– ಮಿಂಗಮ್ಮಟಗಳಲ್ಲಿ ಭಾಗವಹಿಸಿ, ದೇಶವಿದೇಶಗಳ ಪ್ರತಿಭಾನ್ವಿತ ವಿದ್ವಾಂಸರುಗಳ ವ್ಯಾಖ್ಯಾನಗಳನ್ನು ಕೇಳುತ್ತಾ ಜ್ಞಾನದ ರಸದೌತಣವನ್ನು ಸವಿಯುವಂತಾಯಿತು. ಅನೇಕ ಹೊಸ ವಿಚಾರಗಳನ್ನು ತಿಳಿದು ನನ್ನ ಸಂಶೋಧನಾ ಕಾರ್ಯಕ್ಕೆ ಬಹಳಷ್ಟು ಪ್ರೋತ್ಸಾಹದಾಯಕವಾಯಿತು. ಪ್ರತ್ಯಕ್ಷವಾಗಿ ಆ ಎಲ್ಲ ಕಾರ್ಯಕ್ರಮಗಳಲ್ಲಿ ಭಾಗವಹಿಸಲಸಾಧ್ಯವಾದುದು.

ನನಗೆ ಸುಮಾರು ಒಂದುನೂರ ಎಪ್ಪತ್ತೈದಕ್ಕೂ ಹೆಚ್ಚು ರಾಜ್ಯ/ರಾಷ್ಟ್ರೀಯ/ಅಂತರರಾಷ್ಟ್ರೀಯ ಮಿಂಗಮ್ಮಟಗಳು/ ಕಾರ್ಯಶಾಲಾಗಳಲ್ಲಿ ಭಾಗವಹಿಸಲು ಅವಕಾಶ ಒದಗಿತು. ಸಂಸ್ಕೃತ ವಾಙ್ಮಯದಲ್ಲಿನ ಅನೇಕ ವಿಶಿಷ್ಟ ಹಾಗೂ ವಿನೂತನ ವಿಚಾರಗಳು, ಚಿಂತನೆಗಳು, ಸಂಸ್ಕೃತಭಾಷೆ, ಸಾಹಿತ್ಯ, ಕಥಾಸಾಹಿತ್ಯ, ಕಥಾ ನಿರೂಪಣೆಯ ವೈಶಿಷ್ಟ್ಯ, ವ್ಯಕ್ತಿನಿರ್ಮಾಣದಲ್ಲಿ ನೀತಿಕಥೆಗಳ ಪ್ರಾಮುಖ್ಯತೆ, ಪಂಚತಂತ್ರದ ವಿಶ್ವವ್ಯಾಪಿ ಪ್ರಭಾವ ಇತ್ಯಾದಿ ಅನೇಕ ವಿಚಾರಗಳು ಲಭ್ಯವಾದವು.

ಹಾಗೆಯೇ ಸುಮಾರು ಐದಾರು ಸಂಶೋಧನಾ ಲೇಖನಗಳನ್ನು ವ್ಯಾಖ್ಯಾನಿಸುವ ಸದವಕಾಶವೂ ದೊರಕಿತು ಹಾಗೂ ಕೆಲವು ಲೇಖನಗಳು ಪ್ರಕಟಗೊಂಡವು ಕೂಡ. ಇದಕ್ಕೆ ಸಂಬಂಧಿಸಿದ ವಿವರಗಳ ಒಂದು ಪಟ್ಟಿಯನ್ನು ಅನುಬಂಧದಲ್ಲಿ ಕಾಣಿಸಿದ್ದೇನೆ. ಆ ಎಲ್ಲ ಅಂತರ್ಜಾಲ ಕಾರ್ಯಕ್ರಮ ವ್ಯವಸ್ಥಾಪಕರುಗಳಗೂ, ಜ್ಞಾನದ ಪ್ರಭೆಯನ್ನು ಸುಮಧುರವಾಗಿ ಸೂಸಿದ ಸಕಲ ವಿದ್ವಾಂಸರಿಗೂ ನನ್ನ ಅಭಾರ ಕೃತಜ್ಞತೆಗಳನ್ನು ಸಲ್ಲಿಸಬಯಸುತ್ತೇನೆ.



# "ವಿಷ್ಣುಷ್ಣುಶರ್ಮರ ಪಂಚತಂತ್ರದಲ್ಲಿ ಶೈಕ್ಷಣಿಕ ಮನೋವಿಜ್ಞಾನ ಮತ್ತು ವ್ಯಕ್ತಿತ್ವ ನಿರ್ಮಾಣ ಕಲೆ" ಒಂದು ವಿಮರ್ಶಾತ್ಮಕ ಅಧ್ಯಯನ

## 1. ಪೀಠಿಕೆ

येषां न विद्या न तपो न दानं ज्ञानं न शीलं न गुणो न धर्मः ।

ते मर्त्यलोके भुवि भारभूताः मनुष्यरूपेण मृगाश्चरन्ति ॥[1]

ಯಾರಲ್ಲಿ ವಿದ್ಯೆಯಾಗಲಿ, ತಪಸ್ಸಾಗಲಿ, ದಾನವಾಗಲಿ, ಜ್ಞಾನವಾಗಲಿ, ಶೀಲವಾಗಲಿ, ಗುಣವಾಗಲಿ, ಧರ್ಮವಾಗಲಿ ಇಲ್ಲವೋ ಅಂಥವರು ಈ ಮನುಷ್ಯಲೋಕದಲ್ಲಿ, ಭೂಮಿಗೆ ಭಾರವಾಗಿ ಮನುಷ್ಯ ರೂಪದಲ್ಲಿ ಸಂಚರಿಸುವ ಮೃಗಗಳು ಮಾತ್ರ. ಮಹಾಕವಿ ಭರ್ತೃಹರಿಯು ಸಾಹಿತ್ಯದ ಅಧ್ಯಯನವನ್ನು ಪುಷ್ಟೀಕರಿಸಿ ಹೇಳುವ ಸಂದರ್ಭದಲ್ಲಿ ಒಂದು ಶ್ಲೋಕದಲ್ಲಿ ಈ ಉಪಯುಕ್ತ ಟಿಪ್ಪಣಿಯನ್ನು ನೀಡಿರುತ್ತಾನೆ.

'साहित्यसङ्गीतकलाविहीनः साक्षात्पशुः पुच्छविषाणहीनः।

तृणं न खादन्नपि जीवमानः तद्भागधेयं परमं पशूनाम् ॥[2]

ಅಂದರೆ ಸಂಗೀತ ಹಾಗೂ ಸಾಹಿತ್ಯ ಕಲೆ ತಿಳಿಯದ ವ್ಯಕ್ತಿಯು ಮೃಗಗಳಲ್ಲೂ ಸಾಕ್ಷಾತ್ ಕೊಂಬು–ಬಾಲ ವಿಹೀನ (ಇಲ್ಲದ)ಪಶುವಿನಂತೆ. ಅವನು ಹುಲ್ಲನೊಂದು ತಿನ್ನದೆ ಬದುಕುತ್ತಿರುವುದು ಪಶುಗಳ ಪರಮ ಪುಣ್ಯ. ಕವಿ ಭರ್ತೃಹರಿ ಇಲ್ಲಿ ಸಾಹಿತ್ಯ, ಸಂಗೀತ, ಕಲೆಗಳ ಅರಿವಿನ ಮಹತ್ವವನ್ನು ವಿವರಿಸಿದ್ದಾನೆ. ಮಾನವ ಜನ್ಮ ದೊಡ್ಡದು. ಈ ಜನ್ಮಭಾಗ್ಯ ಪಡೆದ ಬಳಿಕ ಸಾಹಿತ್ಯಾಭಿರುಚಿ, ಸಂಗೀತಾಭಿರುಚಿ, ಕಲಾಭಿರುಚಿಗಳನ್ನು ಬೆಳೆಸಿಕೊಳ್ಳಬೇಕು.

ಸಮಗ್ರ ವಿಶ್ವದ ಸಾಹಿತ್ಯಗಳಲ್ಲೆಲ್ಲಾ ಸಂಸ್ಕೃತ ಸಾಹಿತ್ಯವು ಒಂದು ವಿಶೇಷ ಸ್ಥಾನಮಾನವನ್ನು ಹೊಂದಿದೆ. ಭಾರತೀಯ ಸಂಸ್ಕೃತಿಯ ಸ್ಪಷ್ಟ ದರ್ಶನವನ್ನು ಪಡೆಯಬೇಕಾದರೆ ಅದು ಸಂಸ್ಕೃತ ಭಾಷೆಯ ಅಧ್ಯಯನದಿಂದ ಮಾತ್ರ ಸಾಧ್ಯವೆಂದರೆ ಅತಿಶಯೋಕ್ತಿಯೇನಲ್ಲ. ಇಲ್ಲವಾದಲ್ಲಿ, ಅವರ ಜ್ಞಾನವು ಸರ್ವಥಾ ಅಪೂರ್ಣವೆನ್ನಬಹುದು. ಸಮಸ್ತ ಭಾರತೀಯ ಭಾಷೆಗಳಿಗೆ ಸಂಸ್ಕೃತ ಭಾಷೆಯು ಜನನಿಯಾಗಿದೆ. ಸಂಸ್ಕೃತವು ಭಾರತೀಯ ಧಾರ್ಮಿಕ ಜೀವನದ ಪ್ರಾಣಸ್ವರೂಪದಲ್ಲಿ ಒಂದು ಸಂಪದ್ಭರಿತ ಭಾಷೆಯಾಗಿದೆ. ಸಂಸ್ಕೃತಭಾಷೆ ಎಷ್ಟು ಪ್ರಾಚೀನ? ಇದಕ್ಕೆ ಬಹುತೇಕ ಒಂದೇ ಉತ್ತರ. "ಇದರ ಪ್ರಾಚೀನತೆಯನ್ನು ಅಳೆಯಲಾಗದಷ್ಟು ಇದು

---

1. **ಭರ್ತೃಹರಿಯ ನೀತಿಶತಕ** –1–ಮೂರ್ಖ ಪದ್ಧತಿ, ಶ್ಲೋ–13
2. **ಭರ್ತೃಹರಿಯ ನೀತಿಶತಕ,** 1–ಮೂರ್ಖಪದ್ಧತಿ ಶ್ಲೋ–12.

ಪ್ರಾಚೀನ. ಸಂಸ್ಕೃತ ವಾಙ್ಮಯ ಒಂದು ಮಹಾ ಸಮುದ್ರವಿದ್ದಂತೆ ಬಹಳ ವಿಸ್ತಾರವಾದ ವ್ಯಾಪ್ತಿಯನ್ನು ಹೊಂದಿದೆ.

रत्नगर्भा वसुंधरा । बहुरत्नजननी भारती । ಎಂಬಂತೆ ಈ ಭೂಮಿತಾಯಿ ತನ್ನ ಗರ್ಭದಲ್ಲಿ ನಾನಾ ಶಿಲಾರತ್ನಗಳನ್ನೂ ಹಾಗೂ ಮಾನವ ರತ್ನಗಳನ್ನೂ ಧರಿಸಿದ್ದಾಳೆ. ಭಾರತ ಮಾತೆಯು ಅಪಾರ ಸ್ತ್ರೀ ಪುರುಷ ರತ್ನಗಳಿಗೆ ಜನ್ಮ ನೀಡಿದ್ದಾಳೆ. ಅವಳು ಸೇವಿಸಬಲ್ಲವರಿಗೆ ಬಂಗಾರದ ಮೊಟ್ಟೆಯನ್ನೇ ಕೊಡಬಲ್ಲಳು.[3] ಅವರಲ್ಲಿ ಕವಿರತ್ನರನೇಕರು ಅಸಂಖ್ಯಾತ ಕಾವ್ಯಗಳನ್ನು ರಚಿಸಿ ಈ ವಾಙ್ಮಯದ ಹಿರಿಮೆಯನ್ನು ಪ್ರಕಾಶಗೊಳಿಸಿದ್ದಾರೆ. ಋಷಿಗಳ ದರ್ಶನರೂಪವಾದ ವೇದಗಳು, ಅವುಗಳಿಗೆ ಸಹಕಾರಿಯಾದ ವೇದಾಂಗಗಳು, ಅಷ್ಟಾದಶ ಪುರಾಣ – ಉಪಪುರಾಣಗಳು ಅಗಾಧ ಸಾಹಿತ್ಯರಾಶಿ ಒಂದೆಡೆಯಾದರೆ, ಮಹಾಕಾವ್ಯಗಳ ರಚನೆಗೆ ಪ್ರೇರಕವೂ, ಪೂರಕವೂ ಆದ ರಾಮಾಯಣ ಮಹಾಭಾರತಗಳು ಈ ವಾಙ್ಮಯದ ಕಿರೀಟಗಳಾಗಿ ಶೋಭಿಸುತ್ತಿವೆ. ಕಾಳಿದಾಸ, ಭಾಸ, ಮಾಘ, ಭಾರವಿ, ಶೂದ್ರಕ, ವಿಶಾಕದತ್ತರಂತಹ ಶ್ರೇಷ್ಠ ಕವಿಗಳ ಅನನ್ಯ ಕೃತಿಗಳು ಅತ್ಯಮೂಲ್ಯ ಹಾಗೂ ಜನಪ್ರಿಯವಾಗಿ ಉಳಿದಿವೆ.

ಈ ಮಹಾಕವಿಗಳಷ್ಟೇ ಅಲ್ಲದೆ ಅದೆಷ್ಟೋ ಬೆಳಕಿಗೆ ಬಾರದ ಬೂದಿಮುಚ್ಚಿದ ಕೆಂಡದಂತಿರುವ ಉಳಿದ ಅಜ್ಞಾತ ಕವಿಗಳು ಸಾಹಿತ್ಯ ಕೃಷಿಯಲ್ಲಿ ಪರಿಶ್ರಮಿಸಿ ಅಮೂಲ್ಯ ಕೊಡುಗೆಗಳನ್ನು ಸಾಹಿತ್ಯ ಜಗತ್ತಿಗೆ ಸಮರ್ಪಣೆ ಮಾಡಿರುತ್ತಾರೆ. ನಮ್ಮ ಭಾರತೀಯ ಸನಾತನ ಧರ್ಮ, ಸಂಸ್ಕೃತಿಯ ಪ್ರಚಾರ, ಪ್ರಸಾರ ಕಾರ್ಯದಲ್ಲಿ ಅವುಗಳ ಪಾತ್ರವೂ ಮಹತ್ವಪೂರ್ಣ. ಸಂಸ್ಕೃತ ಸಾಹಿತ್ಯ ಚರಿತ್ರೆಯನ್ನು ವಿವರಿಸುವ ಗ್ರಂಥಗಳಲ್ಲಿ ಅಜ್ಞಾತನೆಂದು ಪರಿಗಣಿಸಿದ ಯಾವ ಕವಿಯನ್ನೂ ಉದಾಸೀನ ಮಾಡದೆ, ಅವರ ಮಹತ್ಕಾರ್ಯಕ್ಕೆ ಗೌರವಾದರಗಳನ್ನು ಸಲ್ಲಿಸಿ, ಆ ಕೃತಿ ರಚನೆಯನ್ನು ಕುರಿತು ಉಲ್ಲೇಖ ಮಾಡುವುದು ಬಹಳ ಮುಖ್ಯ.[4]

उपेयुषामपि दिवं सन्निबंधविधायिनां ।

आस्त एव निरातंकं कान्तं काव्यमयं वपुः ॥[5]

---

3. **ಭಟ್.ವಿ.ಎನ್,** ಜ್ಞಾನದೀಪ, ಅ.ಸಂ–104,ಪು – 205,(1993),ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ–577201
4. **ವೆಂಕಣ್ಣಯ್ಯ. ತ.ಶಾ,** ಗುಮಾನಿ ಕವಿಯ ಉಪದೇಶಶತಕಂ (ಕನ್ನಡಾನುವಾದ) 1989. ಶ್ರೀ ಶಾರದಾ ಟ್ರಸ್ಟ್, 4581, ಗೋಮತಿ, ನ.ರಾ.ಮೊಹಲ್ಲಾ, ಮೈಸೂರು. 570007. ಪು.ಸಂ–13
5. **ಸುಭಾಷಿತಮಂಜರೀ,** ಕವಿಕಾವ್ಯಪ್ರಶಂಸೆ –ಶ್ಲೋ–9, ಪು–6, ಲೋಚನ–1. ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18(2001)

ಉತ್ತಮ ಕಾವ್ಯವನ್ನು ರಚಿಸಿದವರು ಸ್ವರ್ಗವನ್ನಡರಿದರೂ, ಅವರ ಸುಂದರವಾದ ಕಾವ್ಯಮಯ ಶರೀರವು ನಿರಾತಂಕವಾಗಿ ಇಲ್ಲಿ ಇದ್ದೇ ಇರುತ್ತದೆ.

ವಿಷಯ ವ್ಯಾಪಕತೆ ಹಾಗೂ ರಚನಾ ಕೌಶಲ್ಯಕ್ಕೆ ಸಂಸ್ಕೃತ ಸಾಹಿತ್ಯವು ಅಗ್ರಗಣ್ಯ ಸ್ಥಾನವನ್ನು ಪಡೆದಿದೆ. ಸಂಸ್ಕೃತ ಸಾಹಿತ್ಯದ ವ್ಯಾಪಕ ಅರ್ಥದಲ್ಲಿ ನಾಟಕ, ಮಹಾಕಾವ್ಯ, ಖಂಡಕಾವ್ಯ, ಆಖ್ಯಾಯಿಕಾ, ಕಥೆ, ಲಕ್ಷಣಗ್ರಂಥ ಮುಂತಾದ ಸಾಹಿತ್ಯ ಪ್ರಕಾರಗಳೂ ವಿದ್ಯಮಾನಗೊಂಡಿವೆ. ಇಷ್ಟೇ ಅಲ್ಲದೆ ಜ್ಯೋತಿಷ, ಗಣಿತ, ಆಯುರ್ವೇದ, ರಾಜನೀತಿ, ಸಂಗೀತ ಮುಂತಾದ ವಿಷಯಗಳ ಬಗ್ಗೆಯೂ ಅನೇಕಾನೇಕ ಗ್ರಂಥಗಳು ಲಭ್ಯವಿವೆ. ಧರ್ಮವೇ ಮುಂತಾದ ದರ್ಶನದ ದೃಷ್ಟಿಯಿಂದ ಸಂಸ್ಕೃತ ಸಾಹಿತ್ಯ ಬಹೂಪಯೋಗಿಯಾಗಿದೆ. ಮೆಕ್ಡೋನೆಲ್ ಬರೆಯುತ್ತಾರೆ "ಭಾರತೀಯರು ಸ್ವತಂತ್ರವಾಗಿ ಅನೇಕ ದರ್ಶನ ಸಂಪ್ರದಾಯಗಳನ್ನು ವಿಕಸಿತಗೊಳಸಿದ್ದಾರೆ. ಇದರಿಂದ ಅವರ ಶ್ರೇಷ್ಠ ಚಿಂತನಾಶಕ್ತಿಯ ಪ್ರಮಾಣ ತಿಳಿಯುತ್ತದೆ. ಪಂಚತಂತ್ರದ ಪಶುಪಕ್ಷಿಗಳ ನೀತಿಕಥೆಗಳಲ್ಲಿ ಎಂತಹ ಚಮತ್ಕಾರದ ಜೊತೆಗೆ ಸುಂದರ ಉಪದೇಶಗಳು ಭೋದಿಸಲ್ಪಟ್ಟಿವೆ! ಪಾಣಿನಿಯ ವ್ಯಾಕರಣ ಸೂತ್ರಗಳಲ್ಲಿ ಎಂಥಹ ಭಂಡಾರ ತುಂಬಿದ ಸಾಗರವಾಗಿದೆ! ಇದೆಲ್ಲವೂ ಸಂಸ್ಕೃತ ಸಾಹಿತ್ಯದ ವಿಶಿಷ್ಟತೆಯ ನಿದರ್ಶನವಾಗಿದೆ." ಸಂಸ್ಕೃತ ಸಾಹಿತ್ಯದಲ್ಲಿ ಶಬ್ದಚಮತ್ಕಾರ, ಅರ್ಥ ಚಮತ್ಕಾರಗಳ ಮೂಲಕ ಕಾವ್ಯಚಮತ್ಕಾರ ತೋರಿಸುವ ವಿಶಿಷ್ಟ ಸಂಪ್ರದಾಯ ಕಂಡುಬರುತ್ತದೆ. ಉದಾಹರಣೆಗೆ:

भारतं चेक्षुदण्डञ्च सिन्धुमिन्दुञ्च वर्णय । कालिदास कविर्ब्रूते प्रतिपर्वरसोदयम् ॥[6]

ಒಮ್ಮೆ ವಿದ್ವತ್ಸಭೆಯೊಂದರಲ್ಲಿ ಮಹಾಭಾರತ, ಕಬ್ಬು, ಸಮುದ್ರ ಮತ್ತು ಚಂದ್ರ ಈ ನಾಲ್ಕರ ವೈಶಿಷ್ಟ್ಯವನ್ನು ಒಂದೇ ವಾಕ್ಯದಲ್ಲಿ ಹೇಳುವಂತೆ ಕೇಳಲಾಯಿತು. ಎಲ್ಲಾಕವಿಗಳು "ಹೇಗೆ ಹೇಳಲು ಸಾಧ್ಯ" ಎಂದು ಅತ್ತಿತ್ತನೋಡುತ್ತಿರಲು, ಕಾಳಿದಾಸ ಮಹಾಕವಿ, "ಪ್ರತಿಪರ್ವರಸೋದಯಂ-ಪ್ರತಿಪರ್ವದಲ್ಲೂ ರಸವಿರುವಿಕೆ ಇವುಗಳ ವೈಶಿಷ್ಟ್ಯ" ಎಂದು ಹೇಳಿದಾಗ ಇಡೀ ಸಭೆಯೇ ತಬ್ಬಿಬ್ಬಾಗಿ ಕೆಲಕ್ಷಣ ಸ್ಥಬ್ಧವಾಯಿತಂತೆ. ನಾಲ್ಕರಲ್ಲೂ ಈ ವಾಕ್ಯವು ಹೇಗೆ ಅನ್ವಯಿಸಬಹುದೆಂದರೆ ಮೊದಲನೆಯದಾಗಿ ಮಹಾಭಾರತ-18 ಪರ್ವಗಳಿವೆ. ನವರಸಭರಿತವಾದ ಈ ಮಹಾಕಾವ್ಯ ಓದಲು ಪ್ರಾರಂಭಿಸಿದರೆ ಒಂದೊಂದು ಪರ್ವದಲ್ಲೂ ಒಂದೊಂದು ರಸ ಪುಟಿದೇಳುತ್ತದೆ. ಎರಡನೆಯದಾಗಿ ಇಕ್ಷುದಂಡ ಅಂದರೆ ಕಬ್ಬು. ಇದರಲ್ಲಿ ಪ್ರತಿಪರ್ವ ಎಂದರೆ ಪ್ರತಿ ಗೆಣ್ಣು ಎಂದರ್ಥ. ಕಬ್ಬಿನ ಒಂದೊಂದು ಗೆಣ್ಣು ದಾಟಿದಾಗಲೂ ರಸ ಚಿಮ್ಮುತ್ತದೆ. ಮೂರನೆಯದಾಗಿ

6. **ಭಟ್.ವಿ.ಎನ್,** ಜ್ಞಾನದೀಪ, ಅ.ಸಂ-70, ಪು -136, (1993), ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿನಗರ, ಶಿವಮೊಗ್ಗ-577201

ಸಮುದ್ರ. ಇಲ್ಲಿ ಪ್ರತಿಪರ್ವ ಎಂದರೆ ಹುಣ್ಣಿಮೆ ಎಂದರ್ಥ. ಪೂರ್ಣಚಂದ್ರನ ಸ್ವಾಗತಕ್ಕಾಗಿ ಸಮುದ್ರ ಪ್ರತಿ ಪರ್ವದಲ್ಲೂ ಕೊಬ್ಬಿ-ಉಬ್ಬಿ ಭೋರ್ಗರೆಯುವ ಸಂದರ್ಭ ಹೃದಯಂಗಮವಾಗಿರುತ್ತದೆ. ನಾಲ್ಕನೆಯದಾಗಿ ಚಂದ್ರನೂ ಹಾಗೆ. ಇಲ್ಲಿಯೂ ಪ್ರತಿಪರ್ವ ಎಂದರೆ ಹುಣ್ಣಿಮೆ ಎಂದರ್ಥ. ಹುಣ್ಣಿಮೆ ಬಂತೆಂದರೆ ಚಂದ್ರ ಮೈತುಂಬಿಕೊಂಡು ರಸರಾಜನಾಗಿ ಷೋಡಶಕಲೆಗಳಿಂದ ಮೆರೆಯುವನು. ವಿಷ್ಣುಶರ್ಮರ ಪಂಚತಂತ್ರದಲ್ಲೂ ಪ್ರಾಣಿಪಶುಪಕ್ಷಿಗಳ ನೀತಿ ಕಥೆಗಳಲ್ಲಿ ಎಂತಹ ವ್ಯಕ್ತಿತ್ವ ನಿರ್ಮಾಣ ಚಮತ್ಕಾರ ನಡೆದಿದೆ. ಇವೆಲ್ಲವೂ ಸಂಸ್ಕೃತ ಭಾಷಾವೈವಿಧ್ಯತೆಯನ್ನೂ, ಸಾಹಿತ್ಯ ಸಂಸ್ಕೃತಿಯ ಶ್ರೇಷ್ಠತೆಯನ್ನೂ ಪ್ರತಿಬಿಂಬಿಸುತ್ತದೆ. संस्कृतिः संस्कृताश्रिता ಸಂಸ್ಕೃತಿಯು ಸಂಸ್ಕೃತವನ್ನಾಶ್ರಯಿಸಿದೆ ಎಂಬುದು ಒಂದು ಪ್ರಸಿದ್ಧ ನಾಣ್ನುಡಿಯಾಗಿರುತ್ತದೆ.

द्वे वर्त्मनिगिरो देव्याः शास्त्रं च कविकर्म च ।

प्रज्योपज्ञं तयोराद्यं प्रतिभोद्भवमन्तिमम् ॥[7]

ವಾಗ್ದೇವಿಯ ಮಾರ್ಗಗಳು ಎರಡು. ಒಂದು ಶಾಸ್ತ್ರ; ಮತ್ತೊಂದು ಕಾವ್ಯ. ಮೊದಲನೆಯದು ಬುದ್ಧಿಸಾಮರ್ಥ್ಯದಿಂದ ಹುಟ್ಟುತ್ತದೆ. ಎರಡನೆಯದು ಪ್ರತಿಭೆಯಿಂದಾಗುತ್ತದೆ. ಬಹಳ ಸಂಕ್ಷಿಪ್ತವಾಗಿ ಸಾಹಿತ್ಯದ ವಿವಿಧ ಪ್ರಕಾರಗಳ ಬಗ್ಗೆ ಸೂಕ್ಷ್ಮವಾಗಿ ವಿಚಾರಮಾಡಿದರೆ, ಶಾಸ್ತ್ರಗಳು, ವೇದಗಳು, ಕಾವ್ಯ ಇತ್ಯಾದಿಗಳನ್ನು ಸಾಮಾನ್ಯ ಜನರು ಅರ್ಥೈಸಿಕೊಂಡು ಸಂತಸಪಡುವುದು ಕಷ್ಟ ಸಾಧ್ಯವೇ ಸರಿ. ಇದನ್ನು ವಿಶ್ಲೇಷಣೆ ಮಾಡಲು, ಸಂಸ್ಕೃತಿ ಸಾಹಿತ್ಯದಲ್ಲಿ ಶಾಸ್ತ್ರ ಪ್ರಕಾರಗಳ ಒಂದು ಪಕ್ಷಿನೋಟವನ್ನು ಹಾಯಿಸೋಣ.

ಸಂಸ್ಕೃತ ಸಾಹಿತ್ಯವು ವಿಶ್ವದಲ್ಲಿಯೇ ಅತ್ಯಂತ ಪ್ರಾಚೀನವಾದುದು. ವೇದ ಪುರಾಣಶಾಸ್ತ್ರ ಮುಂತಾದ ಗ್ರಂಥ ಪ್ರಕಾರಗಳಲ್ಲಿ ಋಗ್ವೇದವು ಭಾಗಶಃ "ಪ್ರಾಚೀನತಮ"ಎಂದು ನಿಶ್ಚಯಿಸಲಾಗಿದೆ. ಧರ್ಮ ಉಪಾಸನೆ, ಬ್ರಹ್ಮ ಮುಂತಾದ ವಿಷಯಗಳನ್ನು ಮುಖ್ಯವಾಗಿ ಈ ಗ್ರಂಥಗಳಲ್ಲಿ ವಿವೇಚಿಸಲಾಗಿದೆ. ಇವುಗಳ ಜೊತೆಗೆ ಇವುಗಳಿಗಿಂತ ಭಿನ್ನವಾದ ಶೈಲಿಯೂ, ವಿಷಯವೂ, ವಾಲ್ಮೀಕಿರಾಮಾಯಣ, ವೇದವ್ಯಾಸರ ಮಹಾಭಾರತ, ಕಾಳಿದಾಸನ ಶಾಕುಂತಲ ಮುಂತಾದ ಗ್ರಂಥಗಳಲ್ಲಿ ಕಾಣಬರುತ್ತದೆ. ಅತ್ಯಂತ ಪ್ರಾಚೀನತೆಯ ಕಾರಣದಿಂದ ಸಂಸ್ಕೃತ ಸಾಹಿತ್ಯವು ಅಧ್ಯಯನಾಸಕ್ತರಿಗೆ, ಸಂಶೋಧನಾರ್ಥಿಗಳಿಗೆ ಹಾಗೂ ಇತಿಹಾಸ ಶಾಸ್ತ್ರಜ್ಞರಿಗೆ ಬಹಳ ಶ್ರೇಷ್ಠ ಉಪಕಾರಿಯೂ, ಉಪಯೋಗಿಯೂ ಆಗಿರುತ್ತದೆ.

ಸಂಸ್ಕೃತ ವಾಙ್ಮಯದಲ್ಲಿ ನಾಲ್ಕೂ ಪುರುಷಾರ್ಥಗಳನ್ನು ಕುರಿತ ಶಾಸ್ತ್ರಗಳಿವೆ. ಒಂದೊಂದು ಪುರುಷಾರ್ಥವೂ ಅತಿ ಹೆಚ್ಚಿನ ಮಹತ್ವ ಪಡೆದಿವೆ. ಇತಿಹಾಸದ ಉದ್ದಕ್ಕೂ ಧರ್ಮ ಶಾಸ್ತ್ರಗಳಿವೆ. ಹಾಗೆಯೇ ಮೋಕ್ಷ

---

7. **ಸುಭಾಷಿತಮಂಜರೀ,** ಕವಿಕಾವ್ಯಪ್ರಶಂಸೆ- ಶ್ಲೋ-21, ಪು-8, ಕವಿಕಂಠಾಭರಣದಿಂದ, ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು -18 (2001)

ಶಾಸ್ತ್ರಗ್ರಂಥಗಳು ಅಥವಾ ದಾರ್ಶನಿಕ ಗ್ರಂಥಗಳಿವೆ. ಅರ್ಥ-ಕಾಮಗಳು ಮಾತ್ರ ಹೆಚ್ಚಿನ ಗಮನ ಪಡೆದಿಲ್ಲ. ಧರ್ಮಕ್ಕೆ ಪ್ರಾಧಾನ್ಯವಿದ್ದು ಅರ್ಥವಾಗಲೀ, ಕಾಮವಾಗಲೀ ಧರ್ಮಾನುಬಂಧಿ ಆಗಿರಲೇಬೇಕಾದ್ದರಿಂದ, ಇವೆರಡು ಸ್ವತಂತ್ರವಾಗಿ ವಿಶೇಷ ಚರ್ಚೆಗೆ ವಿಷಯಗಳಾಗಿಲ್ಲ. ಪ್ರಧಾನ ಅಥವಾ ಮೂಲಭೂತ ಗ್ರಂಥಗಳು ಇವೆರಡೂ ಶಾಸ್ತ್ರಗಳಿಗೆ ಒಂದೆರಡು ವ್ಯಾಖ್ಯೆಗಳು. ಒಂದೆರಡು ಸ್ವತಂತ್ರ ಕೃತಿಗಳು ಮಾತ್ರ ವಾಙ್ಮಯದ ಇತಿಹಾಸದಲ್ಲಿ ಅಲ್ಲಲ್ಲಿ ಮಿನುಗುತ್ತವೆ. ಒಂದೆರಡು ಶಾಸ್ತ್ರೇತರ ಗ್ರಂಥಗಳಲ್ಲಿಯೂ ಈ ವಿಚಾರಗಳು ಕಂಡುಬರುತ್ತವೆ. ಉದಾಹರಣೆಗೆ**: ಪಂಚತಂತ್ರ, ಶುಕಸಪ್ತಸತಿ**.

ಪ್ರಾಚೀನ ಸಂಪ್ರದಾಯದಲ್ಲಿ ಅರ್ಥಶಾಸ್ತ್ರವು ಧರ್ಮಶಾಸ್ತ್ರದ ಒಂದು ಭಾಗವಾಗಿದ್ದು ನೀತಿಶಾಸ್ತ್ರ ರೂಪದಲ್ಲಿಯೂ ಕಾಣಸಿಗುತ್ತದೆ. ಧರ್ಮಶಾಸ್ತ್ರವು ಸಮಾಜದ ವ್ಯಕ್ತಿಗಳ ಧರ್ಮಗಳನ್ನು ತೋರಿಸಿಕೊಡುತ್ತದೆ. ಸಮಾಜದ ವ್ಯಕ್ತಿಯಾಗಿ ರಾಜನ ಧರ್ಮಗಳೂ ಅವುಗಳಲ್ಲಿ ವಿಸ್ತೃತವಾಗಿವೆ. ಮುಂದೆ ಕೌಟಿಲ್ಯನ ಕೃತಿಯಲ್ಲಿ ಸ್ವತಂತ್ರ ಅರ್ಥಶಾಸ್ತ್ರವಾಗಿ ನಿರೂಪಿತವಾದರೂ ಅದು ರಾಜಧರ್ಮ ಅಥವಾ ರಾಜನೀತಿ ಶಾಸ್ತ್ರವೆಂದೇ ಯೋಚಿಸಿದ್ದಿರಬಹುದು.

सर्वशास्त्राण्यनुक्रम्य प्रयोगमुपलभ्यच ।

कौटिल्येन नरेन्द्रार्थे शासनस्य विधिः कृतः ॥[೮]

ಕಾಮಾರ್ಥಗಳನ್ನು ಕಡೆಗಣಿಸಿ ಧರ್ಮವೊಂದನ್ನೇ ಅನುಸರಿಸುವುದೆಂದರೆ ಫಲವತ್ತಾದ ಭೂಮಿಯನ್ನು ಉಳುವುದನ್ನು ಬಿಟ್ಟು ಬರಡು ಭೂಮಿಯನ್ನು ಉಳುವಂತೆ ಎಂದು ಕೌಟಿಲ್ಯನು ತಾನು ನಡೆದದ್ದನ್ನೇ ನುಡಿದಿದ್ದಾನೆ.

ವೇದಾಂಗ ಕಲ್ಪದ ಧರ್ಮಸೂತ್ರಗಳಲ್ಲಿ ರಾಜಧರ್ಮದ ನಿರೂಪಣೆ ಕಂಡುಬರುತ್ತದೆ. ಬೌಧಾಯನ ಧರ್ಮಸೂತ್ರ, ಆಪಸ್ತಂಭ ಧರ್ಮಸೂತ್ರ ಮತ್ತು ಗೌತಮ ಧರ್ಮಸೂತ್ರಗಳನ್ನು ನೋಡಬಹುದು. ಇವುಗಳಲ್ಲಿ ರಾಜನ ವರ್ತನೆ, ವ್ಯವಹಾರ, ಇದಕ್ಕೆ ಬೇಕಾದ ದಾಯಭಾಗ, ದಂಡನೆ ಮೊದಲಾದ ವಿಷಯಗಳು ಪ್ರಸ್ತಾವಿತವಾಗಿವೆ.

ಮುಂದಿನ ಮನು, ಯಾಜ್ಞವಲ್ಕ್ಯ ಮೊದಲಾದ ಸ್ಮೃತಿಗಳು ಇದೇ ಕ್ರಮವನ್ನೇ ಅನುಸರಿಸಿವೆ. ಧರ್ಮ

---

೮. **ಭಟ್ಟ ಗಂಗಾಧರ ವಿ.**, ಕೌಟಿಲ್ಯನ ಅರ್ಥಶಾಸ್ತ್ರ, ಜ್ಞಾನಸುಮ ೨೫, hareraama.in

ಸೂತ್ರಗಳನ್ನು ಬಿಟ್ಟರೆ, ಈ ಶಾಸ್ತ್ರದ ಅಂಶಗಳು ರಾಮಾಯಣದಲ್ಲಿ ಪರೋಕ್ಷವಾಗಿ ವಿವೃತವಾಗಿರುವುದನ್ನು ಕಾಣಬಹುದು. ಮಹಾಭಾರತದಲ್ಲಿ ನೇರವಾದ ಉಪದೇಶವೇ ಕಂಡುಬರುತ್ತದೆ. ಶಾಂತಿಪರ್ವದ ಬಹು ಪಾಲು ರಾಜಧರ್ಮದ ನಿರೂಪಣೆಗೆ ಮೀಸಲಾಗಿದೆ. ಶರಕಲ್ಪದಲ್ಲಿ ಮಲಗಿದ್ದ ಭೀಷ್ಮ ಯುದ್ಧಾನಂತರ ಯುಧಿಷ್ಠಿರನಿಗೆ ಉಪದೇಶ ಮಾಡಿದಂತೆ ಅಲ್ಲಿದೆ. ದುರ್ಯೋಧನನಿಗೆ ವಿದುರ ಬೋಧಿಸಿದ ನೀತಿಯೂ. "ವಿದುರನೀತಿ" ಎಂದು ಪ್ರಸಿದ್ಧವಾಗಿದೆ.

ಸಾಮಾನ್ಯ ವ್ಯಕ್ತಿಗಳ ದೃಷ್ಟಿಯಿಂದ ಉಪನಿಷತ್ತಿನಲ್ಲಿ ಬರುವ ವ್ಯಕ್ತಿಗಳೆಲ್ಲರೂ ಆಧ್ಯಾತ್ಮ ಅನುಭವಗಳನ್ನು ಸಾಕ್ಷಾತ್ಕಾರ ಮಾಡಿಕೊಂಡವರು. ಇವರನ್ನು "ಮಂತ್ರದೃಷ್ಟ" ಎಂದು ಕರೆಯುತ್ತಾರೆ. ಅಂದರೆ ಮಂತ್ರದಲ್ಲಿರುವ ಸತ್ಯವನ್ನು ಕಂಡುಕೊಂಡವರು, ಸಾಕ್ಷಾತ್ಕಾರಮಾಡಿಕೊಂಡವರು. ಆಧ್ಯಾತ್ಮಿಕ ಸತ್ಯಗಳು ಸದಾಕಾಲವೂ ವಿಶ್ವದಲ್ಲಿ ಸ್ಪಂದಿಸುವಂತಹವು. ಯಾರು ತಮ್ಮ ಶುದ್ಧ ಚಿತ್ತದಿಂದ ಅದರ ಮೇಲೆ ಮನಸ್ಸನ್ನು ಕೇಂದ್ರೀಕರಿಸುವರೋ ಅವರಿಗೆಲ್ಲ ಅದು ಲಭ್ಯವಾಗುವುದು.

ज्ञानमेव परंब्रह्म ज्ञानंबन्धाय कल्पते ।

ज्ञानात्मकमिदम् विश्वं न ज्ञानाद्विद्यते परम् ॥[९]

ಅಂದರೆ ಜ್ಞಾನವೇ ಪರಬ್ರಹ್ಮ. ಜ್ಞಾನದಿಂದಲೇ ಬಂಧನ. ಇಡೀಜಗತ್ತು ಜ್ಞಾನಸ್ವರೂಪ. ಜ್ಞಾನವನ್ನು ಬಿಟ್ಟು ಬೇರೆ ಇಲ್ಲ. ಜ್ಞಾನದಿಂದ ಮೋಕ್ಷವು ಲಭ್ಯವಾಗುತ್ತದೆ. ಮೋಕ್ಷವೇ ಪರಮಪುರುಷಾರ್ಥ. ಇದೇ ಎಲ್ಲರ ಚರಮ ಗುರಿಯಾಗಿರುತ್ತದೆ. ಅದಕ್ಕಾಗಿ ಎಲ್ಲರೂ ಆಧ್ಯಾತ್ಮಿಕ ಜ್ಞಾನವನ್ನು ಸಂಪಾದಿಸಬೇಕು. ಈ ಜ್ಞಾನವನ್ನು ಸಂಪಾದಿಸುವ ವಿಧಿವಿಧಾನಗಳನ್ನು ಕ್ರಮವಾಗಿ ತಿಳಿಸಿಕೊಡುವ ಗ್ರಂಥವೇ "ಪ್ರಸ್ಥಾನ" ಎಂದು ಕರೆಯಲ್ಪಟ್ಟಿದೆ. ಇಂತಹ ಜ್ಞಾನ ಮಾರ್ಗಗಳನ್ನು ತಿಳಿಸಿಕೊಡುವ ಗ್ರಂಥಗಳು–ಉಪನಿಷತ್ತುಗಳು, ಬ್ರಹ್ಮಸೂತ್ರಗಳು ಹಾಗೂ ಭಗವದ್ಗೀತೆಗಳಾಗಿವೆ. ಈ ತ್ರಿವಿಧ ಗ್ರಂಥಗಳನ್ನೇ "ಪ್ರಸ್ಥಾನತ್ರಯ"ಎಂದು ಹೆಸರಿಸಲಾಗಿದೆ.

ಪ್ರಸ್ಥಾನತ್ರಯಗಳಲ್ಲಿ ಉಪನಿಷತ್ತುಗಳು ಅತೀ ಮುಖ್ಯವಾದುದು. ಏಕೆಂದರೆ, ಬ್ರಹ್ಮಸೂತ್ರ ಹಾಗೂ ಭಗವದ್ಗೀತೆಗಳಿಗೆ ಉಪನಿಷತ್ತುಗಳೇ ಆಧಾರ ಗ್ರಂಥಗಳು. ಉಪನಿಷತ್ತುಗಳು, ಬ್ರಹ್ಮಸೂತ್ರ ಭಗವದ್ಗೀತೆಗಳಿಗಿಂತ ಪ್ರಾಚೀನವಾದವುಗಳೂ ಹೌದು. ಇವುಗಳು ಭಾರತೀಯ ಅಧ್ಯಾತ್ಮ ಶಾಸ್ತ್ರಕ್ಕೆ ಬುನಾದಿಯೂ ಹೌದು. ಪ್ರಾಚೀನ

9. **ಸುಭಾಷಿತಮಂಜರೀ,** ವಿವೇಕ–ಶ್ಲೋ–39, ಪು.–274, ವಿಷ್ಣುಪುರಾಣ, 2–6–48, ಕ.ಸಾ.ಪ. ಚಾಮರಾಜಪೇಟೆ,ಬೆಂಗಳೂರು–18, (2001)

ಋಷಿ ಮುನಿಗಳು ಸತ್ಯಾನ್ವೇಷಣೆಗಾಗಿ ನಡೆಸಿದ ಜಿಜ್ಞಾಸೆಗಳೂ ಇವುಗಳಲ್ಲಿ ಕಂಡುಬರುತ್ತವೆ. ಇವುಗಳ ವೈಚಾರಿಕ ದೃಷ್ಟಿ ಅತ್ಯಂತ ಮಹತ್ವಪೂರ್ಣವಾದದ್ದು. ಇಡೀ ಜಗತ್ತಿನ ಆಗು ಹೋಗುಗಳಿಗೆ ಕಾರಣವನ್ನು ಹುಡುಕುವ ಅನಾದಿ, ಅನಂತ ಶಕ್ತಿಯಸ್ವರೂಪವನ್ನು ತಿಳಿಸುವುದರೊಡನೆ, ಅದಕ್ಕೆ ಸಮಯೋಚಿತವೂ, ಸಮಂಜಸವೂ ಆದ ಅನೇಕ-ಕಥೆಗಳು, ಸಂಭಾಷಣೆಗಳು ಮನೋಜ್ಞವೂ, ಆಕರ್ಷಣೀಯವೂ ಆಗಿದ್ದು ಒಳ್ಳೆಯ ಜೀವನ ಶಿಕ್ಷಣದ ಬೋಧನೆಯಿಂದ ಕೂಡಿರುತ್ತದೆ. ಸತ್ಯಶೋಧನೆಯೇ ಉಪನಿಷತ್ತುಗಳ ಮುಖ್ಯ ಗುರಿ.[10]

ब्रह्मसत्यं जगन्मिथ्या जीवो ब्रह्मैव नापरः ।

ಬ್ರಹ್ಮವು ಸತ್ಯ, ಜಗತ್ತು ಮಿಥ್ಯಾ ಜೀವವು ಬ್ರಹ್ಮಕ್ಕಿಂತ ಬೇರೆಯಲ್ಲ. ಬ್ರಹ್ಮಸೂತ್ರಗಳನ್ನು ವೇದಾಂತ ಸೂತ್ರಗಳೆಂದೂ, ಶಾರೀರಿಕ ಸೂತ್ರಗಳೆಂದೂ ಹೆಸರಿಸಲ್ಪಟ್ಟಿದೆ. ಈ ಸೂತ್ರಗಳು ವೇದಾಂತ ದರ್ಶನದ ಕೈಪಿಡಿಯಾಗಿದ್ದು, ವೇದಾಂತ ಸೂತ್ರಗಳೆಂದೂ ಕರೆದಿದ್ದಾರೆ. ಶರೀರದಲ್ಲಿರುವ ಬ್ರಹ್ಮತತ್ವವನ್ನು ಕುರಿತು ವಿಚಾರ ಮಾಡುವುದರಿಂದ "ಶಾರೀರಿಕ ಸೂತ್ರಗಳೆಂದು" ಹೆಸರಿಸಿದ್ದಾರೆ. ಬ್ರಹ್ಮಸೂತ್ರ ಉಪನಿಷತ್ತಿನ ಮೇಲೆ ಜೀವಿಸುವ "ಉಪಜೀವಿ"ಎಂದು ಹೇಳಬಹುದು.

ಮಹಾಭಾರತದಲ್ಲಿ ಭಗವದ್ಗೀತೆಯನ್ನು "सर्वशास्त्रमयी गीता" ಎಂದು ಹೇಳಲಾಗಿದೆ. "ಭಗವದ್ಗೀತೆ" ಯು ಭಾರತೀಯರ ಶ್ರೇಷ್ಠವಾದ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಗ್ರಂಥವಾಗಿದೆ. ಇದು ಪ್ರಸ್ಥಾನತ್ರಯದಲ್ಲಿ ಎರಡನೆಯದೆಂಬ ಮಹತ್ವವನ್ನು ಪಡೆದಿದೆ. "ಭಗವದ್ಗೀತೆ" ಅತ್ಯಂತ ಜನಪ್ರಿಯವೂ, ಹೆಚ್ಚಿನ ಗೌರವಾದರಗಳಿಗೆ ಪಾತ್ರವಾದದ್ದೂ ಆಗಿರುತ್ತದೆ. "ಸರ್ವಗ್ರಾಹಿ" ಹಾಗೂ "ಸರ್ವಜನೋಪಯೋಗೀ" ಪಾವನ ಉಪದೇಶವನ್ನು ಗೀತೆಯದ್ವಾರದಿಂದ ಪರಮಾತ್ಮನು ಅಮೃತಧಾರೆಯಾಗಿ ಹರಿಸಿರುವನು. ಪರಿಮಿತ ಶಬ್ದಗಳಲ್ಲಿ ಇಡೀ ಜೀವನಶಾಸ್ತ್ರವನ್ನೇ ತಿಳಿಸಲಾಗಿದೆ. ಪಂಚಮವೇದ ಎಂದು ಕರೆಸಿಕೊಂಡ ಮಹಾಭಾರತದ ಭೀಷ್ಮ ಪರ್ವದಲ್ಲಿ "ಭಗವದ್ಗೀತೆ" ಎಂಬ ಪ್ರಸ್ಥಾನವು ನಿರೂಪಿತವಾಗಿರುವುದು. ಇದು ಏಳುನೂರು ಶ್ಲೋಕಗಳನ್ನೊಳಗೊಂಡ ಹದಿನೆಂಟು ಅಧ್ಯಾಯಗಳಲ್ಲಿ ವಿಭಾಗಿಸಲ್ಪಟ್ಟ ಪವಿತ್ರ ಗ್ರಂಥ. ಮೊದಲಿನ ಆರು ಅಧ್ಯಾಯಗಳಲ್ಲಿ ಕರ್ಮ ಮಾರ್ಗವನ್ನೂ, ಮುಂದಿನ ಆರು ಅಧ್ಯಾಯಗಳಲ್ಲಿ ಭಕ್ತಿ ಮಾರ್ಗವನ್ನೂ, ಕೊನೆಯ ಷಟ್ಕದಲ್ಲಿ ಜ್ಞಾನಮಾರ್ಗವನ್ನೂ ಪ್ರತಿಪಾದಿಸಿದೆ. ಭಗವದ್ಗೀತೆಯು ಸುಲಭವೂ, ಮನೋಹರವೂ, ಲಲಿತವೂ, ಹೃದಯಸ್ಪರ್ಶಿಯೂ ಆದ ದರ್ಶನಶಾಸ್ತ್ರ ಎನ್ನಬಹುದು. ಒಂದು ವಿಶಿಷ್ಟ ಶ್ಲೋಕವನ್ನು ಗಮನಿಸೋಣ:

10. **ಸೋಮನಾಥಾನಂದ,** ಉಪನಿಷತ್ ಪರಿಚಯ, (1973), ಪು.ಸಂ– 3,4,5. ಪ್ರಸಾರಾಂಗ, ಮೈ.ವಿ.ವಿ., ಮೈಸೂರು.

ध्यायतो विषयान्पुंसः सङ्गस्तेषूपजायते ।

सङ्गात्सञ्जायते कामः कामात्क्रोधोऽभिजायते ॥

क्रोधाद्भवति सम्मोहः सम्मोहात्स्मृतिविभ्रमः ।

स्मृतिभ्रंशाद्बुद्धिनाशो बुद्धिनाशात्प्रणश्यति ॥[11]

ಅಂದರೆ, ವಿಷಯಗಳನ್ನೇ ಚಿಂತಿಸತಕ್ಕ ಮನುಷ್ಯನಿಗೆ ಅವುಗಳಲ್ಲಿ ಆಸಕ್ತಿ ಉಂಟಾಗುತ್ತದೆ. ಆಸಕ್ತಿಯಿಂದ ಅದನ್ನು ಪಡೆತಬೇಕೆಂಬ ಹಂಬಲ ಹುಟ್ಟುತ್ತದೆ. ಆಸೆಯಿಂದ(ಅದಕ್ಕೆ ಅಡ್ಡಿಯಾದರೆ) ಕೋಪ ಜನಿಸುತ್ತದೆ. ಕ್ರೋಧದಿಂದ ಅವಿವೇಕ ಹುಟ್ಟುತ್ತದೆ. ಅದರಿಂದ ಸ್ಮರಣಶಕ್ತಿ ನಷ್ಟವಾಗುತ್ತದೆ. ಅದರಿಂದ ಬುದ್ಧಿಗೆಟ್ಟು ಮನುಷ್ಯನು ನಷ್ಟವಾಗಿ ಹೋಗುತ್ತಾನೆ. ಈ ಎಲ್ಲ ಅಂಶಗಳನ್ನೂ ಸೂಕ್ಷ್ಮವಾಗಿ ಗಮನಿಸಿದರೆ ಇಡೀ ಮನೋವಿಜ್ಞಾನವೇ ಇಲ್ಲಿ ಅಡಗಿರುವಂತೆ ತೋರುತ್ತದೆ.

ನಾಡಿನ ಗಣ್ಯವ್ಯಕ್ತಿಗಳಾಗಿದ್ದ ಅರವಿಂದ ಘೋಷ್, ಬಾಲಗಂಗಾಧರ ತಿಲಕ್, ಗಾಂಧೀಜಿ, ಡಿ.ವಿ.ಜಿ. ಮೊದಲಾದವರು “ಭಗವದ್ಗೀತೆ ಕೇವಲ ಆಧ್ಯಾತ್ಮ ಶಾಸ್ತ್ರವಷ್ಟೇ ಅಲ್ಲ; ಅದು ಜೀವನಶಾಸ್ತ್ರವೂ ಹೌದು” ಎಂದು ಪ್ರತಿಪಾದಿಸಿದ್ದಾರೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಉಪನಿಷತ್ತು, ಬ್ರಹ್ಮಸೂತ್ರ ಹಾಗೂ ಭಗವದ್ಗೀತೆಗಳು ಬಹು ಮುಖ್ಯವಾದ ಆಧ್ಯಾತ್ಮಶಾಸ್ತ್ರಗಳು. ಬ್ರಹ್ಮಸೂತ್ರ ಹಾಗೂ ಭಗವದ್ಗೀತೆಗಳು ಉಪನಿಷತ್ತುಗಳನ್ನೇ ಆಧಾರವಾಗಿ ಇಟ್ಟುಕೊಂಡು ಜೀವನಶಾಸ್ತ್ರದ ಮಹತ್ವಪೂರ್ಣ ವಿಷಯಗಳನ್ನು ಮಂಡಿಸಿವೆ. ವೇದದ ಒಂದು ಭಾಗವಾದ ಉಪನಿಷತ್ತುಗಳು ಸಮಸ್ತ ವೇದಗಳ ಸಾರರೂಪದಲ್ಲಿ ಬಂದಿವೆ. ಉಪನಿಷತ್ತುಗಳ ಸಾರಸಂಗ್ರಹವೇ ಭಗವದ್ಗೀತೆ.

गीता सुगीता कर्तव्या किमन्यैः शास्त्रसंग्रहैः ।

या स्वयं पद्मनाभस्य मुखपद्माद्विनिःसृता ॥[12]

ಗೀತೆಯು ಒಂದು ಪರಮರಹಸ್ಯಮಯ ಗ್ರಂಥವಾಗಿದೆ. ಇದರ ರಚನೆಯು ಎಷ್ಟು ಸರಳ ಮತ್ತು ಸುಂದರವಾಗಿದೆ ಎಂದರೆ ಸ್ವಲ್ಪ ಅಭ್ಯಾಸ ಮಾಡುವುದರಿಂದಲೂ ಕೂಡ ಮನುಷ್ಯನು ಇದನ್ನು ಸಹಜವಾಗಿ ತಿಳಿಯಬಲ್ಲನು. ಆದರೆ ಇದರ ಆಶಯವು ಜೀವನವಿಡೀ ನಿರಂತರ ಅಭ್ಯಾಸ ಮಾಡುತ್ತಾ ಇದ್ದರೂ ಕೂಡ ಅದರ ಕೊನೆ ಮುಟ್ಟಲಾರದಷ್ಟು ಗೂಢ ಮತ್ತು ಗಂಭೀರವಾಗಿದೆ. ಇನ್ನು ಉಪನಿಷತ್ತುಗಳು ಮತ್ತು ಬ್ರಹ್ಮಸೂತ್ರಗಳು

---

11. **ಭಗವದ್ಗೀತಾ,** 2–ಶ್ಲೋ–62,63.

12. **Goyandka Jayadayal,** Srimad Bhagavad-Gita, Gita Press, Gorakhpur,(1997), Glory of Gita,pp (I),(ii),(iii)

ಅತ್ಯಂತ ಕಠಿಣವೂ, ತರ್ಕಮಯವೂ ಆಗಿದ್ದು ಜನಸಾಮಾನ್ಯರಿಗೆ ಅರ್ಥೈಸಿಕೊಳ್ಳುವುದು ಕಷ್ಟವೇ ಸರಿ. ಆದ್ದರಿಂದ ಅವುಗಳು ಭಗವದ್ಗೀತೆಯಷ್ಟು ಜನಪ್ರಿಯವಾಗಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು. ಒಟ್ಟಿನಲ್ಲಿ ಹೇಳುವುದಾದರೆ, ಇವುಗಳನ್ನೆಲ್ಲಾ ಅಧ್ಯಯನಮಾಡಿ ಅರ್ಥೈಸಿಕೊಳ್ಳಬೇಕಾದರೆ ಒಂದು ನಿರ್ದಿಷ್ಟವಾದ ಮೂಲಜ್ಞಾನದ ಹಿನ್ನೆಲೆ ಅಥವ ಸಂಸ್ಕಾರವಿರಬೇಕೆಂದು ಯೋಚಿಸಿದರೆ ತಪ್ಪಾಗಲಾರದು. ಈ ನಿಟ್ಟಿನಲ್ಲಿ ಪರಿಶೀಲಿಸಿದರೆ, "ಪಂಚತಂತ್ರ" ನೀತಿಕಥೆಗಳು ಸಾಮಾನ್ಯವಾಗಿ ಎಲ್ಲರಿಗೂ ಚಿರಪರಿಚಿತ ಆಗಿದ್ದು, ಜೀವನದ ಮೌಲ್ಯಗಳನ್ನು ಸರಳವಾಗಿ ಪರಿಚಯಿಸುವ ಹಾಗೂ ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ ಒಳ್ಳೆಯ ಬೋಧಪ್ರದವಾದ, ಮನೋವೈಜ್ಞಾನಿಕ ಲಕ್ಷಣಗಳನ್ನು ಹೊಂದಿರುವ ನೀತಿಶಾಸ್ತ್ರ ಕೃತಿರತ್ನವಾಗಿದೆ. ಭಾರತೀಯ ಸಾಹಿತ್ಯಭಂಡಾರದಲ್ಲಿ, ಅದರಲ್ಲೂ ಸಂಸ್ಕೃತ ಸಾಹಿತ್ಯಕ್ಷೇತ್ರದಲ್ಲಿ, ಪಂಚತಂತ್ರವು ಅತ್ಯಂತ ಮುಖ್ಯವೂ, ಸ್ವಾರಸ್ಯ ಪೂರ್ಣವೂ ಆದ ಉಪದೇಶಾತ್ಮಕ ಕಲ್ಪಿತ ಕಥೆ.

आयुः कर्म च वित्तञ्च विद्या निधनमेव च ।

पञ्चैतानि हि सृज्यन्ते गर्भस्थस्यैव देहिनः॥[13]

ಆಯುಷ್ಯ, ಹಿಂದಿನ ಜನ್ಮದಿಂದ ಬರುವ ಕರ್ಮಫಲ, ಹಣ, ಗಳಿಸಬಹುದಾದ ವಿದ್ಯೆ ಮತ್ತು ಮರಣ ಈ ಐದು ವಿಷಯಗಳು ಶಿಶು ತಾಯಿಯ ಗರ್ಭದಲ್ಲಿರುವಾಗಲೇ ನಿರ್ಣಯವಾಗಿರುತ್ತದೆ. ಇಲ್ಲಿ ಪೂರ್ವ ಜನ್ಮದ ಸುಕೃತಗಳ ಕುರಿತ ಉತ್ತಮ ಜಾಗೃತಿ.

"ಪಂಚತಂತ್ರ" ಯಾರಿಗೆ ತಿಳಿದಿಲ್ಲ ಈ ಹೆಸರು? ಇಲ್ಲಿನ ಕಥೆಗಳು? ಜಾವಾದಿಂದ ಐರ್ಲೆಂಡ್ ವರೆಗೆ ವಿಶ್ವದ ಅಪಿಯಿರುವ ಎಪ್ಪತ್ತಕ್ಕೂ ಹೆಚ್ಚಿನ ಭಾಷೆಗಳಲ್ಲಿ ಪಂಚತಂತ್ರದ ಆಧಾರದ ಮೇಲೆ ಇನ್ನೂರಕ್ಕೂ ಹೆಚ್ಚು ಪ್ರಭೇದಗಳ ಕೃತಿಗಳು ರಚನೆಗೊಂಡಿವೆ. ಇದೇ ಇದರ ಹೆಚ್ಚುಗಾರಿಕೆ. ಪೈಶಾಚೀ ಭಾಷೆಯಲ್ಲಿ ಗುಣಾಢ್ಯನೆಂಬುವನು ಬರೆದ ಬೃಹತ್ಕಥೆಯನ್ನು ಆಧಾರವಾಗಿಟ್ಟುಕೊಂಡು ಸಂಸ್ಕೃತ ಪಂಚತಂತ್ರವನ್ನು ರಚಿಸಿದ ಮೇಧಾವಿ ಪಂಡಿತ "ವಿಷ್ಣುಶರ್ಮರು" (ಕಾಲ ಸುಮಾರು ಮೂರನೆಯ ಶತಮಾನ).[14] ಸಾಮಾನ್ಯವಾಗಿ ಸಂಸ್ಕೃತ ಕವಿಗಳ ಕೃತಿಗಳೆಂದರೆ ಜನರಲ್ಲಿ ಒಂದು ಅಭಿಪ್ರಾಯ ಉಂಟು. ಸಂಸ್ಕೃತ

---

13. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತ ಪಂಚತಂತ್ರ, ದ್ವಿ.ತಂ –ಶ್ಲೋ–84, ಪು–357, ಚೌಕಾಂಬ ಕೃಷ್ಣದಾಸ್ ಅಕಾಡೆಮಿ, PB. no: 1118, Oriental Publishers, K37/118 Gopalmandir Lane, Varanasi-221001(INDIA)1993.
14. ಉಪೇಂದ್ರ ಸೋಮಯಾಜಿ, ಬದುಕಿನ ಮಂತ್ರ ಪಂಚತಂತ್ರ,(2015).ಮುನ್ನುಡಿ ಪು.2.ವರ್ನಿಲ,39/2–11, Kalyani Garden, BSK 1st stage, Bangalore.

ಸಾಹಿತ್ಯವೆಂದರೆ ವೇದಾಂತ ವಿಚಾರಗಳು, ಆಧ್ಯಾತ್ಮ ಚಿಂತನೆಗಳು, ತಾತ್ವಿಕ ವಿಚಾರಗಳು, ಸೂಕ್ತಿಗಳು ಹಾಗೂ ಸುಭಾಷಿತ ಶ್ಲೋಕಗಳಿಂದ ಕೂಡಿದ್ದು, ಸ್ಮೃತಿಪುರಾಣೇತಿಹಾಸದ ವಿಷಯಗಳಿಂದ ಕೂಡಿರುವುದು, ಅತ್ಯಂತ ಶಾಸ್ತ್ರೋಕ್ತವಾಗಿ ರಚನೆಯಾಗಿರುವುದು ಎಂಬುದಾಗಿದೆ. ಇನ್ನು ಕಥೆಗಳು ಲೌಕಿಕ ವಿಚಾರಗಳಿಂದ ಕೂಡಿದ ಕೃತಿಗಳೆಂದರೆ, ಅಷ್ಟೊಂದು ಶ್ರೇಷ್ಠವಲ್ಲ, ಕೇವಲ ಮಕ್ಕಳ ಮನೋರಂಜನೆಗಾಗಿ ರಚನೆಯಾಗಿರುವಂತಹವು ಎಂಬ ಭಾವನೆಯೂ ಉಂಟು.

ಸಕಲಶಾಸ್ತ್ರ ಪಾರಂಗತ ವಿಷ್ಣುಶರ್ಮರ ಪಂಚತಂತ್ರ ನೀತಿ ಕಥೆಗಳನ್ನು ಮಕ್ಕಳಿಗಾಗಿ ಅಥವಾ ಬಾಲಬೋಧೆಗಾಗಿ ರಚಿತವಾಗಿರುವ ಗ್ರಂಥವೆಂಬ ವಿಚಾರ ಪ್ರಚಲಿತವಾಗಿದೆ. ಇದು ಮಕ್ಕಳ ಓದಿನ ಪುಸ್ತಕ, ಮಕ್ಕಳಲ್ಲಿ ಓದಿನ ಆಸಕ್ತಿಯನ್ನು ಬೆಳೆಸಲು ನೆರವಾಗುವ ಪುಸ್ತಕವೆಂಬುದು ಬಹಳ ಹಿಂದಿನಿಂದಲೂ ಬಂದಿದ್ದ ನಂಬಿಕೆಯಾಗಿದೆ. ಇತ್ತೀಚೆಗೂ ರೈಲ್ವೆ ಬುಕ್ ಸ್ಟಾಲ್, ಇತರೆ ಪುಸ್ತಕ ಮಳಿಗೆಗಳು, ಲೈಬ್ರರಿ ಇಂಥಹ ಕಡೆಗಳಲ್ಲಿ ಬೇಸರದ ಸಮಯ ಕಳೆಯಲು, ಮನೋರಂಜನೆಗಾಗಿ "ಚಂದಮಾಮ, ಪಂಚತಂತ್ರ", ಇತ್ಯಾದಿ ಕಥೆ ಪುಸ್ತಕಗಳನ್ನು ಕೊಂಡು ಓದುವುದುಂಟು. ಆದರೆ ಅದರಲ್ಲಿ ಅಷ್ಟು ಸರಳವಾಗಿ ಸುಂದರ ಬದುಕಿನ ಶಿಕ್ಷಣ ಅಡಗಿದೆ ಎಂಬುದನ್ನು ಅರಿಯಲು ಬಹುಶಃ ತಾಳ್ಮೆಯಿಂದ ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ. ಕೇವಲ ಪ್ರಾಣಿ ಪಶುಪಕ್ಷಿಗಳನ್ನು ಮನುಷ್ಯರಂತೆಯೇ ವರ್ತಿಸುವಂತೆ ಮಾಡಿ(ಆಕಾರ ಮಾತ್ರ ಬೇರೆ) ಕಥಾ ಮಾಧ್ಯಮದಲ್ಲಿ ಅದ್ಭುತವಾಗಿ ರಾಜನೀತಿ ಶಿಕ್ಷಣವನ್ನೂ, ಸಾರ್ಥಕ ಬದುಕಿನ ನೀತಿಯನ್ನೂ, ಪ್ರಭುತ್ವ ನಡೆಸಲು ಬೇಕಾದ ನಾಯಕತ್ವದ ಕೌಶಲಗಳನ್ನೂ, ವ್ಯಕ್ತಿತ್ವದ ಸರ್ವತೋಮುಖ ಬೆಳವಣಿಗೆಗೆ ಬೇಕಾದ ದಿನನಿತ್ಯದ ವ್ಯಾವಹಾರಿಕ ಚತುರತೆಯನ್ನೂ ಬೆಳೆಸುವ ಅದ್ಭುತವಾದ ಬೋಧಕವೇ ಈ "ಪಂಚತಂತ್ರ" ಎಂಬುದನ್ನು ಬಹುಶಃ ಬಹಳಷ್ಟು ಜನರು ಗುರುತಿಸಿಯೇ ಇರಲಿಲ್ಲವೇನೋ ಅನ್ನಿಸುತ್ತದೆ. ಒಂದು ಅಂಶ ಬಹಳ ಮುಖ್ಯವಾದುದೆಂದರೆ, ಈ ಎಲ್ಲವನ್ನೂ ಅರಿಯಬೇಕಾದರೆ, ಅತ್ಯಂತ ಸೂಕ್ಷ್ಮವಾಗಿ ರೇಖೆಗಳ ನಡುವೆ ಓದಿದಾಗ ಮಾತ್ರ, ಎಲ್ಲ ಗೂಢಾರ್ಥಗಳನ್ನೂ ಗ್ರಹಿಸಿಕೊಂಡಾಗ ಮಾತ್ರ ಎಂದು ಹೇಳಬಹುದು.

सकलार्थशास्त्रसारं जगति समालोक्य विष्णुशर्मेदम्।

तन्त्रैः पञ्चभिरेतच्चकार सुमनोहरं शास्त्रम् ॥[15]

ಪಂಚತಂತ್ರವು ಕೇವಲ ಮನರಂಜನೆಗಾಗಿ ಒಂದು ಕಾಲ್ಪನಿಕ ಕೆಲಸವಾಗಿದ್ದು, ಹೆಚ್ಚು

---

15. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತ ಪಂಚತಂತ್ರ, ಅವತರಣಿಕಾ–ಶ್ಲೋ–2, ಚೌಕಾಂಬ ಕೃಷ್ಣದಾಸ್ ಅಕಾಡೆಮಿ, PB. no: 1118, Oriental Publishers,K37/118 Gopalmandir Lane, Varanasi- 221001(INDIA)1993.

ಜನಪ್ರಿಯವಾಗಿರುವುದಷ್ಟೇ ಅಲ್ಲ, ಬೇರೆ ಯಾವುದೇ ಭಾರತೀಯ ಸಾಹಿತ್ಯಕ್ಕಿಂತ ಹೆಚ್ಚಿನ ಪ್ರಭಾವವನ್ನು ವಿಶ್ವ ಸಾಹಿತ್ಯದ ಮೇಲೆ ಬೀರಿರುವುದಾಗಿದೆ. ಆರ್ಥರ್ ಮ್ಯಾಕ್ಡೊನಿಲ್ ಹೇಳಿರುವಂತೆ "ಯೂರೋಪಿನ ಸಂಪೂರ್ಣ ಮಧ್ಯಯುಗದ ಕಥಾ ನಿರೂಪಣಾ ಕಾರ್ಯದ ಮೇಲೆ ಪಂಚತಂತ್ರ ನೀತಿಕಥೆಗಳು ಅಸಾಧಾರಣ ಪ್ರಭಾವವನ್ನು ಬೀರಿರುವುದಲ್ಲದೆ, ಆ ಭಾಷೆಗಳ ಸಾಹಿತ್ಯ ಕ್ಷೇತ್ರದಲ್ಲಿ ಒಂದು ರೀತಿಯ ಪುಷ್ಟೀಕರಣವನ್ನೊದಗಿಸಿದೆ. ಇದರಿಂದ ಅನೇಕ ಆವೃತ್ತಿಗಳಲ್ಲಿ ಬೆಳವಣಿಗೆಗೆ ಸಹಕಾರಿಯಾಗಿದೆ.[16]

ಜನರ ನಡವಳಿಕೆ, ಸ್ವಭಾವ, ಮನಸ್ಥಿತಿ, ಕಾರ್ಯಸಾಧನೆಯ ನೈಪುಣ್ಯ ಇತ್ಯಾದಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದ್ದ ವಿಷ್ಣುಶರ್ಮರು ಬದುಕನ್ನು ಕಟ್ಟುವಲ್ಲಿ, ಇವುಗಳ ಅಗತ್ಯತೆಯನ್ನು ಮನಗಂಡು, ಮಾನವನ ಈ ಬಗೆಯ ವರ್ತನೆಯನ್ನು ಪಶುಪಕ್ಷಿ ಹಾಗೂ ಪ್ರಾಣಿಗಳಿಗೆ ಆರೋಪಿಸಿ ಕಥೆಕಟ್ಟಿದ ಪರಿಯು ನಿಜಕ್ಕೂ ಅದ್ಭುತವಾದುದು. ಪ್ರಾಣಿಪಕ್ಷಿಗಳೂ ಮಾತನಾಡುತ್ತವೆ ಎಂಬುದೇ ಮಕ್ಕಳಿಗೆ ಒಂದು ವಿಸ್ಮಯ. ಕುತೂಹಲದಿಂದ ಕಥೆಗಳನ್ನು ಕೇಳುತ್ತಾರೆ. ಅರ್ಥೈಸಿಕೊಂಡು ಹೃದ್ಯವಾದ ಕಥೆಗಳಿಂದ ಗುಣಶೀಲಗಳನ್ನು ಗ್ರಹಿಸುತ್ತಾರೆ.[17] ಒಟ್ಟಿನಲ್ಲಿ ಕಥೆಗಳು ಕೇಳುವವರಿಗೆ, ಅದರಲ್ಲಿನ ಆಸಕ್ತಿಯನ್ನು ಪ್ರೇರೇಪಿಸುವಂತಿರಬೇಕು. ಸಮಾಜದಲ್ಲಿ ಸೂಕ್ಷ್ಮಪ್ರಜ್ಞೆಯ, ಸಂಸ್ಕಾರವಂತ, ಸುಸಂಸ್ಕೃತ, ನೀತಿವಂತ ವ್ಯಕ್ತಿಯಾಗಿ ಬದುಕುವ ಕಲೆಯನ್ನು ಸರಳವಾಗಿ ತಿಳಿಸಿ, ಸಹೃದಯತೆಯ ಸತ್ಪ್ರಜೆಯಾಗಿ, ಮಾನವ ಜನ್ಮದ ಸಾರ್ಥಕತೆಯನ್ನು ಅರಿಯುವ ಪಾಠವನ್ನು ಸರಳ ಉದಾಹರಣೆಗಳ ಮೂಲಕ ಬೋಧಿಸುವಂತಿರಬೇಕು.

यावन्नयौवनप्राप्तः शिक्ष्यते तावदात्मजः।

व्यतीतकाले केदारे कर्षणैः किं करिष्यते ॥[18]

ಅದರಲ್ಲೂ ಮಕ್ಕಳಿಗೆ ಯೌವನ ಬರುವುದರೊಳಗೆ ಶಿಕ್ಷಣವನ್ನು ಕೊಡಬೇಕು. ಕಾಲ ಮೀರಿದ ಮೇಲೆ ಗದ್ದೆಯನ್ನು ಉತ್ತರೆ ಏನಾದೀತು? ಪಂಚತಂತ್ರ ಕಥೆಗಳು ಈ ಕಾರ್ಯದಲ್ಲಿ ಗೆದ್ದಿವೆಯೆಂದು ನಿಖರವಾಗಿ ಹೇಳಬಹುದು. ಹೆಚ್ಚಾಗಿ ಪಂಚತಂತ್ರ ಕಥೆಗಳು ಮಕ್ಕಳಿಗೆಂದೇ ರಚಿಸಲ್ಪಟ್ಟಿದೆಯೆಂದು ಅನೇಕರು ಅಭಿಪ್ರಾಯಪಟ್ಟಿದ್ದಾರೆ. ಆದರೆ, ಗಂಭೀರವಾಗಿ ಚಿಂತಿಸಿ ಅದರಲ್ಲಿ ಕಾಣಬರುವ ಬದುಕಿನ ನೀತಿನಿಯಮಗಳನ್ನೂ, ಸರ್ವತೋಮುಖ ವ್ಯಕ್ತಿತ್ವದ ಬೆಳವಣಿಗೆಗೆ ಲಭ್ಯವಾಗುವ ವ್ಯಕ್ತಿವಿಕಸನ ಮಾರ್ಗದರ್ಶನವನ್ನೂ ಗಮನಿಸಿದರೆ ದೊಡ್ಡವರಿಗೂ ಈ ಕಥೆಗಳು ಮಾರ್ಗದರ್ಶಕವೇ ಆಗಿದೆ ಎಂಬುದರಲ್ಲಿ ಯಾವುದೇ ಉತ್ಪ್ರೇಕ್ಷೆ ಕಂಡುಬರುವುದಿಲ್ಲ.

---

16. **ಮ್ಯಾಕ್ಡೊನಿಲ್ರವರ ಅಭಿಪ್ರಾಯ**. (http://en.wikipedia.org/wiki/Panchatantra)

17. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಮುನ್ನುಡಿ, ಪು.2, ವರ್ನಿಲ, 39/2-11, ಕಲ್ಯಾಣಿ ಗಾರ್ಡನ್. BSK 1st stage, Bangalore.(2015)

18. **ಸುಭಾಷಿತಮಂಜರೀ, ಸಂಸಾರ** ಶ್ಲೋ-70, ಪು-29, ಹರಿಹರಸುಭಾಷಿತ, 2-54.(2001) ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18.

ಇಂದು ಎಲ್ಲವುದಕ್ಕೂ ತರಬೇತಿಯನ್ನು ನೀಡುವ ಹಾಗೂ ಪಡೆಯುವ ಯುಗವಾಗಿದೆ. ಸಮಯಪಾಲನೆ, ಕಾರ್ಯಕ್ಷಮತೆ, ವ್ಯಕ್ತಿನಿರ್ಮಾಣ ಹೀಗೆ ಹಲವು ಹತ್ತು ವಿಚಾರಗಳ ಕುರಿತು ಮಾಹಿತಿ ನೀಡುವ ಪರಿಪಾಠ ಇರುವುದು ಈ ಕಾಲ. ಬಹು ಸೂಕ್ಷ್ಮವಾಗಿ ಗಮನಿಸಿದರೆ ಪಂಚತಂತ್ರ ಕಥೆಗಳು ಆ ಕಾಲದಿಂದಲೇ ನಿರಂತರವಾಗಿ ಒಂದು ರೀತಿಯಲ್ಲಿ ತರಬೇತಿ ಕಾರ್ಯಾಗಾರವನ್ನು ನಡೆಸಿಕೊಂಡು ಬರುತ್ತಿರುವಂತಿದೆ. ವ್ಯಕ್ತಿತ್ವ ನಿರ್ಮಾಣಕ್ಕೆ ಬೇಕಾದ ಮನೋವಿಜ್ಞಾನ ಹಾಗೂ ಶಿಕ್ಷಣ, ಪಂಚತಂತ್ರದಲ್ಲಿ ಬಹಳ ಅಚ್ಚುಕಟ್ಟಾಗಿ ಹೆಣೆದುಕೊಂಡಿದೆ. ಒಬ್ಬ ವ್ಯಕ್ತಿಯ ಯಶಸ್ಸಿನ ಹಿಂದೆ ಅವನ ಕಾರ್ಯಕ್ಷಮತೆಯ ಬದ್ಧತೆಯಿದೆ. ಆ ಬದ್ಧತೆಯಿಂದ ತನಗೆದುರಾದ ವಿಷಮ ಸಂದರ್ಭಗಳನ್ನು, ಸನ್ನಿವೇಶಗಳನ್ನು ತನಗನುಕೂಲವಾಗುವಂತೆ ಹೊಂದಿಸಿಕೊಳ್ಳುತ್ತಾನೆ. ಹತ್ತು ಹಲವು ಮನೋಭಾವದ ವ್ಯಕ್ತಿಗಳೊಂದಿಗೆ ವ್ಯವಹರಿಸುವ ಕಾಲದಲ್ಲಿ, ತನ್ನದೇ ಆದ ಸ್ಥಿತಪ್ರಜ್ಞತೆಯನ್ನೂ, ಕೌಶಲವನ್ನೂ, ಮಾತುಗಾರಿಕೆಯನ್ನೂ ಮುಂದಿರಿಸಿ ಜಯಶಾಲಿಯಾಗುತ್ತಾನೆ. ಸಾಮ, ದಾನ ಭೇದಗಳನ್ನು ಯೋಜಿಸುತ್ತಾನೆ. ಎಲ್ಲರ ಮಾತನ್ನೂ ತದೇಕಚಿತ್ತದಿಂದ ಆಲಿಸುತ್ತಾನೆ. ಕೊನೆಗೆ ತನ್ನದೇ ಆದ ನಿರ್ಧಾರವನ್ನು ಕೈಗೆತ್ತಿಕೊಳ್ಳುತ್ತಾನೆ. ಆಳೂ ಆಗುತ್ತಾನೆ, ಆರಸನೂ ಆಗುತ್ತಾನೆ, ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಾನೆ, ಸಲಹೆಯನ್ನು ಪಡೆಯುತ್ತಾನೆ, ಆದೇಶವನ್ನೂ ನೀಡುತ್ತಾನೆ. ಉಪಾಯದಿಂದ ಬರಲಿರುವ ಅಪಾಯವನ್ನು ಹೋಗಲಾಡಿಸಿಕೊಳ್ಳುತ್ತಾನೆ.[19] ಹೀಗೆಲ್ಲಾ ಮಾಡಬೇಕಾದರೆ ಅವನಿಗೆ ಆ ಬಗ್ಗೆ ಸಂಪೂರ್ಣ ಜ್ಞಾನ ಇರಬೇಕು. ಇದೆಲ್ಲದಕ್ಕೂ ಒಳ್ಳೆಯ ಶಿಕ್ಷಣ ಬೇಕು. ಇಂಥಹ ಶಿಕ್ಷಣವನ್ನು – ಪಂಚತಂತ್ರ ನೀತಿಕಥೆಗಳು ಮನೋವಿಜ್ಞಾನ ಸಮೇತ, ಮನೋಜ್ಞವಾಗಿ, ಮನೋರಂಜಕವಾಗಿ ಬೋಧಿಸುತ್ತವೆ.

शीलं शौर्यं अनालस्यं पाण्डित्यं मित्रसंग्रहः।

अचोरहरणीयानि पंचैतानि अक्षयोनिधिः॥[20]

ಶುದ್ಧ ಚಾರಿತ್ರ್ಯ, ಪರಾಕ್ರಮ, ಚುರುಕುತನ, ವಿದ್ವತ್ತು, ಗೆಳೆಯರ ಸಂಗ್ರಹ ಈ ಐದೂ ಕಳ್ಳರು ಕದಿಯದ ಅಕ್ಷಯ ಸಂಪತ್ತು. ಇಲ್ಲಿ ಎಂಥಹ ಸೊಗಸಾದ ತಿಳುವಳಿಕೆ ಸೂಚಿಸಲಾಗಿದೆ.

ಇಂದಿನ ಪ್ರಗತಿಪರ ಸಮಾಜದಲ್ಲಿ ನಾವು ಕೆಲವು ಸವಾಲುಗಳನ್ನು ಎದುರಿಸಲು ಸಾಧ್ಯತೆ ಇದೆ ಎಂದು,

---

19. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಮುನ್ನುಡಿ, ಪು.2,3, ವರ್ಣಿಲ, 39/2-11, ಕಲ್ಯಾಣಿ ಗಾರ್ಡನ್ BSK 1st stage, Bangalore.(2015)

20. **ಭಟ್.ವಿ.ಎನ್,** ಜ್ಞಾನದೀಪ, ಅ.ಸಂ-97, ಪು -191, (1993), ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿನಗರ, ಶಿವಮೊಗ್ಗ-577201

ಅದಕ್ಕೆ ತಕ್ಕಂತೆ ಶೈಕ್ಷಣಿಕ ಮಾರ್ಗದರ್ಶನ ಇರಬೇಕೆಂಬುದನ್ನು ಈ ವ್ಯಾಖ್ಯಾನಗಳು ಬೆಂಬಲಿಸುತ್ತವೆ. ಇಂದಿನ ದಿನಗಳಲ್ಲಿ ಅದರಲ್ಲೂ ತಂತ್ರಜ್ಞಾನ ಮುಂದುವರೆದಿರುವ ಸಂದರ್ಭದಲ್ಲಿ ಬೇರೆ ಬೇರೆ ಮ್ಯಾನೇಜ್ಮೆಂಟ್ ಹೆಸರಲ್ಲಿ ತರಬೇತಿಗಳಿವೆ. ಆದರೆ ಹಿಂದೆ ಇಂತಹುದು ಇದ್ದಿರಲಿಲ್ಲ ತಂದೆಯ ಕಾರ್ಯಕ್ಷಮತೆಯನ್ನು ಕಂಡೋ, ಅವರೊಂದಿಗೆ ಸೇರಿಕೊಂಡೋ, ಗುರೂಪದೇಶದಿಂದಲೋ, ಪಡೆದ ಅನುಭವಗಳಿಂದ ಗೆಲ್ಲುವುದೋ, ಎದುರಾಳಿ ಪ್ರಬಲನಾಗಿದ್ದಾಗ ಸೋಲುವುದೋ ಆಗುತ್ತಿತ್ತು. ಆದರೆ ಪಂಚತಂತ್ರದಲ್ಲಿನ ವ್ಯವಸ್ಥಿತ, ಆಕರ್ಷಕ ಕಥೆಗಳನ್ನು ಆಳವಾಗಿ ಅಭ್ಯಾಸ ಮಾಡಿದರೆ, ಅದರ ಸೂಕ್ಷ್ಮಗಳನ್ನು ಮಂಥನಮಾಡಿದರೆ, ಶಿಕ್ಷಣದ ಅರ್ಥ, ಮಹತ್ವ, ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ ಬೇಕಾದ ಮಾರ್ಗದರ್ಶನ, ಜೀವನಶಿಕ್ಷಣ, ನಾಯಕತ್ವದ ಲಕ್ಷಣ, ಯಶಸ್ವೀ ಬದುಕಿನ ಹಲವು ಹತ್ತು ನೀತಿಬೋಧಕ ಉಪದೇಶಗಳು ಇಂದಿಗೂ ಪ್ರಸ್ತುತವಾಗಿದೆ. ರಾಜಕೀಯದಲ್ಲಿ, ಅಧಿಕಾರದಲ್ಲಿ, ಯಾವುದೇ ವೃತ್ತಿಶಿಕ್ಷಣ ಮಾರ್ಗದರ್ಶನದಲ್ಲಿ ಯಶಸ್ಸು ಶತಃಸಿದ್ಧ. ಹಾಗೆಯೇ ಸ್ನೇಹಿತ ಬಂಧುಗಳೊಡನೆ ವ್ಯವಹರಿಸುವಲ್ಲಿ ಪಂಚತಂತ್ರಗಳು ನೆರವಾಗುತ್ತವೆ. ಇವುಗಳ ಹಿಂದೆ ಎಂಥಹ ನೈಜ ಶೈಕ್ಷಣಿಕ ಮನೋವಿಜ್ಞಾನ ಅಡಗಿದೆ! ಹಾಗೂ ಇದನ್ನು ಬರೆದ ವಿಷ್ಣುಶರ್ಮನೆಂಬ ಬ್ರಾಹ್ಮಣ, ಶೃತಿಸ್ಮೃತಿ ಪುರಾಣೇತಿಹಾಸಗಳಲ್ಲಿ ಎಂಥಹ ನಿಷ್ಣಾತರು! ಅರ್ಥಶಾಸ್ತ್ರ ಪರಿಣಿತರು! ದೈವದತ್ತವಾಗಿ ಪಡೆದ ಅವರ ಮೇಧಾವಿತ್ವಕ್ಕೆ, ಒಳ್ಳೆಯ ಶೈಕ್ಷಣಿಕ ಮನೋವಿಜ್ಞಾನ ಅದೆಷ್ಟು ಸೊಗಸಾಗಿ ಲೇಪನವಾಗಿತ್ತು! ಎಂಬ ಕುತೂಹಲ ಮತ್ತು ಆಶ್ಚರ್ಯವು "ಪಂಚತಂತ್ರ" ಅಧ್ಯಯನ ಮಾಡಿದ ಯಾರಿಗೂ ಬರದಿರಲಾರದು. ನಿಜಕ್ಕೂ ವಿಷ್ಣುಶರ್ಮರ ಪಂಚತಂತ್ರಗಳು ನೀತಿಶಾಸ್ತ್ರಕ್ಕೊಂದು ಕೈದೀವಿಗೆಯಾಗಿದೆ. ಲೌಕಿಕಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ವೈದಿಕ ಸಾಹಿತ್ಯ, ಪುರಾಣಗಳು, ರಾಮಾಯಣ ಹಾಗೂ ಮಹಾಭಾರತ ಇವುಗಳ ಸ್ಥೂಲ ಪ್ರಸ್ತಾಪವಿದೆ. ನಂತರ ಮಹಾಕಾವ್ಯಗಳು, ಲಘುಕಾವ್ಯಗಳು, ಐತಿಹಾಸಿಕ ಕಾವ್ಯಗಳು, ಗದ್ಯ ಸಾಹಿತ್ಯ, ಜನಪ್ರಿಯ ಹಾಗೂ ನೀತಿಬೋಧಕ ಕಥೆಗಳು, ಚಂಪೂ ಹಾಗೂ ನಾಟಕಗಳು ಮುಂತಾದ ಸಂಸ್ಕೃತ ಸಾಹಿತ್ಯದ ವಿವಿಧ ಪ್ರಕಾರಗಳು ಜ್ಞಾನ ಸಾಗರದಲ್ಲಿ ಸಮೃದ್ಧವಾಗಿವೆ. ಭರ್ತೃಹರಿಯ **"ನೀತಿಶತಕ"**ದಂತಹ ಕೃತಿಗಳು ಸುಲಭವಾದ ಮಾತುಗಳಲ್ಲಿ ಸಾಮಾನ್ಯ ನೀತಿಯನ್ನು ಬೋಧಿಸುತ್ತವೆ. **ಪಂಚತಂತ್ರ, ಹಿತೋಪದೇಶ, ದ್ಯಾದ್ವಿವೇದನ ನೀತಿಮಂಜರಿ** ಮುಂತಾದ ಕೃತಿಗಳು ಕಥೆಗಳ ಮೂಲಕ ರಾಜನೀತಿ ತತ್ವಗಳನ್ನು ವಿಶದಪಡಿಸುತ್ತವೆ. ಪಂಚತಂತ್ರದಲ್ಲಂತೂ ಇದು ಹೆಚ್ಚು ಸರಳ ಮತ್ತು ಸ್ಪಷ್ಟ. ಉದಾ: ಕಾಕೋಲುಕೀಯದ ಪ್ರಾರಂಭ ಒಂದು ನಿರ್ದಿಷ್ಟ ಸಂದರ್ಭಕ್ಕೆ ಅಳವಡಿಸಿದಂತೆ ಷಾಡ್ಗುಣ್ಯವನ್ನು ಕುರಿತು ಒಂದು ಲಘು

ಪ್ರಬಂಧವೆನ್ನಬಹುದು.

ಪಂಚತಂತ್ರದಲ್ಲಿ ಅರಸುಕುಮಾರರಿಗೆ ವಿದ್ಯಾಬುದ್ಧಿಯ ಕಡೆಗೆ ಕಲಿಯುವ ಮನಸ್ಸನ್ನು ಪ್ರೇರೇಪಿಸುವಂತಿರುವ ಒಂದು ವಿಶೇಷ ಶ್ರುತಿಯನ್ನು ಕಥೆಗಳ ಮೂಲಕ ಉತ್ತಮ ತಂತ್ರಗಾರಿಕೆಯಿಂದ ವಿಷ್ಣುಶರ್ಮರು ಒಂದು ರೀತಿಯ ಚಮತ್ಕಾರವನ್ನು ನಡೆಸಿದ್ದಾರೆ. ಅಂದರೆ ಈ ಮಂದಗಾಮಿಗಳು ಸಂಪೂರ್ಣ ಪರಿವರ್ತನೆ ಹೊಂದಿ ಚುರುಕಿನ ಮುರುಕಾಗುವಂತೆ ಉತ್ತಮ ಸನ್ನಿವೇಶದಲ್ಲಿ ನೀತಿ ಬೋಧನೆ ಮಾಡಿದ್ದಾರೆ. ಒಂದು ಮನೋಹರ ಶ್ಲೋಕದಲ್ಲಿ ಪರಿವರ್ತನೆಯ ಲಕ್ಷಣಗಳನ್ನು ಬಹಳ ಚೆನ್ನಾಗಿ ಹೇಳಲಾಗಿದೆ.

वाग्देव्या सह सख्यमाचर वह ब्राह्मण माविष्कुरु

प्रावीण्यं गतिषु प्रदर्शय निजं विद्याबलं निर्मलम् ।

मीनं मा स्पृशमौक्तिकं कवलय क्रीड द्रुतं द्यौस्तले

चेदव्रीड बकाधम प्रतिभया हंसत्वमाकांक्षसि ॥[21]

ಅಂದರೆ, ಎಲೈ ಕೊಕ್ಕರೆ! ನಿನಗೆ ಹಂಸವಾಗಬೇಕೆಂಬ ಹಂಬಲವಿದೆ. ಆದರೆ ಅದಕ್ಕಾಗಿ ನೀನು ಏನೇನು ಮಾಡಬೇಕು ಗೊತ್ತೆ? ಸರಸ್ವತಿಯೊಡನೆ ಸ್ನೇಹ ಬೆಳೆಸಿಕೊಳ್ಳಬೇಕು. ಬ್ರಹ್ಮನನ್ನು ಬೆನ್ನಿನ ಮೇಲೆ ಹೊತ್ತುಕೊಳ್ಳಬೇಕು. ನಿನ್ನ ನಡಿಗೆಯಲ್ಲಿ ಕುಶಲತೆಯನ್ನು ತೋರಬೇಕು. ನಿನ್ನ ವಿದ್ಯಾಬಲವನ್ನು ಹೆಚ್ಚಿಸಿಕೊಳ್ಳಬೇಕು, ಮೀನನ್ನು ತಿನ್ನಬಾರದು, ಮುತ್ತನ್ನು ತಿನ್ನಬೇಕು. ಆಕಾಶದಲ್ಲಿ ವಿಹರಿಸಬೇಕು. ನಾಚಿಕೆಯಿಲ್ಲದ ಅಧಮ ಕೊಕ್ಕರೆಯೆ, ಈ ರೀತಿಯಾದ ಪ್ರತಿಭೆಯಿದ್ದರೆ ಹಂಸವಾಗಲು ಬಯಸು. ಹೀಗೆ ಪರಿವರ್ತನೆಯಾಗುವ ಹಂಬಲವಿದ್ದಲ್ಲಿ ಕೆಲವು ನೀತಿನಿಯಮಗಳಿಗೆ ಬದ್ಧರಾಗಿರಬೇಕಾಗುತ್ತದೆ.



21. **ಸುಭಾಷಿತಮಂಜರೀ,** ಸದ್ಗುಣ-ದುರ್ಗುಣ-ಶ್ಲೋ-278, ಪು-190, ಅನ್ಯೋಕ್ತಿಸ್ತಬಕ-71.
ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು-18 (2001)

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಸಂಸ್ಕೃತ ಸಾಹಿತ್ಯ ಕ್ಷೇತ್ರದಲ್ಲಿ ಅಧ್ಯಯನ ನಡೆಸುತ್ತಿರುವ, ಅದರಲ್ಲೂ ಸ್ನಾತಕೋತ್ತರ ಪದವಿ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದ ಸಮಯದಲ್ಲೇ ಭಾರತೀಯ ಕಥಾಸಾಹಿತ್ಯವು ವಿಶ್ವಸಾಹಿತ್ಯ ಪ್ರಪಂಚದಲ್ಲಿ ಅತ್ಯಂತ ಉತ್ಕೃಷ್ಟ ಸ್ಥಾನ ಹೊಂದಿರುವ ವಿಷಯದಲ್ಲಿ ಒಂದು ವಿಶೇಷ ಆಸಕ್ತಿ ನನ್ನಲ್ಲಿ ಮೂಡಿತ್ತು. ಸಂಸ್ಕೃತ ಕಥಾಸಾಹಿತ್ಯವು ರೋಚಕತೆ, ಸರಳತೆ, ಮಧುರತೆ, ಬಾವಾಭಿವ್ಯಕ್ತಿ ಮತ್ತು ಉಪದೇಶಾತ್ಮಕತೆಯ ಕಾರಣ ವಿಶ್ವದ ಎಲ್ಲ ವಿದ್ವಾಂಸರಿಂದ ಪ್ರಶಂಸಿಸಲ್ಪಟ್ಟಿರುವುದು ಗಮನಾರ್ಹ. ಪ್ರಸ್ತುತ ಭಾರತೀಯ ಕಥಾಸಾಹಿತ್ಯವು ವಿಶ್ವಕಥಾ ಸಾಹಿತ್ಯದ ಜನಕನೆಂದು ಪರಿಗಣಿಸಲಾಗಿದೆ. ಇದರಲ್ಲಿ ಭಾರತೀಯ ಜನಜೀವನ, ಸಂಸ್ಕೃತಿ ವಿಚಾರಧಾರೆ, ಕಾರ್ಯಕಲಾಪಗಳು ಮತ್ತು ನೈತಿಕತೆಯ ಪರಕಾಷ್ಟತೆ ಪ್ರಾಪ್ತವಾಗುವುದು.

ಸ್ವಾರಸ್ಯವೇ ಕಥೆಯ ಜೀವ,

"कथायां सरसं वस्तु गधैरेव विनिर्मितम्

क्वचिदत्र भवेदार्या क्वचिद्वक्त्रापवक्त्रके ।

आदौ पद्यैर्नमस्कारः खलादेर्वृत्तकीर्तनम् ॥[22]

ಅನೇಕ ಸಹಸ್ರ ವರ್ಷಗಳಿಂದಲೂ ಕಥೆಗಳು ಪ್ರಚಲಿತವಾಗಿವೆ. ಅವು ದೇಶವಿದೇಶಗಳಿಗೆ ಹರಡುತ್ತಾ ಸಾಗಿವೆ. ಭರತ ಖಂಡವು ಕಥೆಗಳ ಅದಿರು. ಕಥೆಗಳು ಭಾರತವು ವಿಶ್ವಕ್ಕೆ ಕೊಟ್ಟ ದೊಡ್ಡ ಕೊಡುಗೆಯಾಗಿವೆ. ಪಂಚತಂತ್ರದ ವಿಶ್ವಪರ್ಯಟನ ಕ್ರಿ.ಶ. 533ರಿಂದ ಸತತವಾಗಿ ನಡೆದಿದೆ. "ಕಥೆಗಳ ಮೂಲಕ ಶಿಕ್ಷಣ ನೀಡುವುದು ಭಾರತದ ವೈಶಿಷ್ಟ್ಯ" ಎಂದು ವಿಲಿಯಂ ಜೋನ್ಸರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕ್ರಿಸ್ತಪೂರ್ವದಷ್ಟು ಪ್ರಾಚೀನವಾದ ಕಥೆಗಳು ಭಾರತದಿಂದ ಯೂರೋಪಿನ ನಾನಾ ಭಾಗಗಳಿಗೆ ಬಂದಿವೆಯೆಂದು ಪಾಶ್ಚಾತ್ಯ ವಿಮರ್ಶಕರೂ ಅಭಿಪ್ರಾಯಪಟ್ಟಿದ್ದಾರೆ.[23] ಮನುಸ್ಮೃತಿಯಲ್ಲಿ ಒಂದು ಮಾತಿದೆ:-

बुद्धिवृद्धिकराण्याशु धनानि च हितानि च ।

नित्यं शास्त्राण्यवेक्षेत निगमांश्चैव वैदिकान् ॥[24]

---

22. **ವಿಶ್ವನಾಥನ ಸಾಹಿತ್ಯದರ್ಪಣ,** VI परिच्छेद 332-333.
(ಕಥೆಯಲ್ಲಿ ಸ್ವಾರಸ್ಯವಾದ ವಸ್ತುವನ್ನು ಗದ್ಯದಿಂದಲೇ ರಚಿಸಲಾಗುವುದು)
23. **ಕೃಷ್ಣಮೂರ್ತಿ ಕೆ, ರಂಗನಾಥ ಶರ್ಮ ಎನ್, ಸಿದ್ಧಗಂಗಯ್ಯ.ಎಚ್.ಕೆ,** ಸಂಸ್ಕೃತ ಭಾಷಾಶಾಸ್ತ್ರ ಮತ್ತು ಸಾಹಿತ್ಯಚರಿತ್ರೆ, ಸಹನಿರ್ದೇಶಕರು ಕರ್ನಾಟಕ ಸರ್ಕಾರ- ಪಠ್ಯಪುಸ್ತಕಗಳ ಮುದ್ರಣಾಲಯ,1993 (Da.Rhys Davids;ottokeller. ಅರೇಬಿಯನ್ನೈಟ್ಸ್ ಮತ್ತು ಈಸೋಪನ ಕಥೆಗಳ ಮೇಲೂ ಭಾರತೀಯ ಕಥೆಗಳ ಸಾಕಷ್ಟು ಪ್ರಭಾವವಿದೆ).
24. **ಸುಭಾಷಿತಮಂಜರೀ,** ವಿವೇಕ-ಶ್ಲೋ-72, ಮನುಸ್ಮೃತಿ, 3-19.ಪು-281,(2001)
ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18.

ಬುದ್ಧಿಯನ್ನು ಹೆಚ್ಚಿಸುವ, ವೇದಗಳಿಗೆ ವಿರುದ್ಧವಲ್ಲದ, ವ್ಯಾಕರಣ ಮೀಮಾಂಸಾ ಮೊದಲಾದ ಶಾಸ್ತ್ರಗಳನ್ನೂ, ಹಣವನ್ನು ತರುವ ಅರ್ಥಶಾಸ್ತ್ರ ಮೊದಲಾದವುಗಳನ್ನೂ, ಜನರಿಗೆ ಉಪಕಾರವಾಗುವ ವೈದ್ಯ, ಜ್ಯೋತಿಷ್ಯ ಮೊದಲಾದವುಗಳನ್ನೂ, ವೇದಾರ್ಥವನ್ನು ತಿಳಿಸುವ ಶಾಸ್ತ್ರಗಳನ್ನೂ ನಿತ್ಯವೂ ಓದಬೇಕು. ಇವುಗಳ ವಿವರಣೆಯಲ್ಲೂ ಅನೇಕ ಕಥೆಗಳು ಕಂಡುಬರುತ್ತವೆ. ಸಂಹಿತೆಗಳ ಕಾಲದಿಂದಲೂ ಭಾರತದಲ್ಲಿ ನಾನಾ ರೂಪದ ಕಥೆಗಳು ಪ್ರಚಲಿತವಾಗಿವೆ. ಸಂವಾದ ಸೂಕ್ತ, ದಾನಸ್ತುತಿ ಸೂಕ್ತ, ವಿವಾಹ ಸೂಕ್ತ ಮುಂತಾದ ಋಗ್ವೇದದ ಸೂಕ್ತಗಳಲ್ಲಿಯೇ ಉಲ್ಲೇಖವಿದೆ. ಯಮಯಮೀ ಸಂವಾದ ಸೋಮ ಮತ್ತು ಸೂರ್ಯೆಯರ ವಿವಾಹ ವೃತ್ತಾಂತವು ಕಥಾರೂಪವಾಗಿವೆ. ವೃತ್ರನೊಡನೆ ಇಂದ್ರನು ನಡೆಸುವ ಹೋರಾಟವೂ ಕಥಾರೂಪವನ್ನು ಪಡೆದಿದೆ. ಬ್ರಾಹ್ಮಣಗಳ ಉಪಾಖ್ಯಾನಗಳಲ್ಲಿರುವ ಪುರೂರವೋರ್ವಶೀ, ಶುನಃಶೇಪ ಮುಂತಾದ ಕಥೆಗಳ ಆಧಾರದಿಂದಲೇ ಶಾಕುಂತಲ ಮೊದಲಾದ ಉತ್ತಮ ಕೃತಿಗಳು ರಚನೆಯಾಗಿರುವ ವಿಚಾರ ಸರ್ವವಿದಿತ. ಉಪನಿಷತ್ತುಗಳಲ್ಲಂತೂ ಕಥೆಗಳು ಸಮೃದ್ಧವಾಗಿವೆ. ನಾಯಿಗಳು ತಮಗೊಬ್ಬ ನಾಯಕನನ್ನು ಹುಡುಕುತ್ತವೆ. ಪಕ್ಷಿಗಳ ಮಾತಿನಿಂದ ರೈಕ್ವನು ಜಾಗೃತಿಗೊಳ್ಳುತ್ತಾನೆ. ಸತ್ಯಕಾಮನು ಮೊದಲು ಎತ್ತಿನಿಂದ, ನಂತರ ಪಕ್ಷಿಗಳಿಂದ ಉಪದೇಶ ಪಡೆಯುತ್ತಾನೆ. ಪುರಾಣಗಳಲ್ಲಿಯೂ ಸಾಕಷ್ಟು ಕಥೆಗಳಿವೆ. ಮನು ಮತ್ತು ಮೀನಿನ ಕಥೆ, ಇಂದ್ರನು ಮರ್ಕಟ ಮತ್ತು ಕಪೋತ ಪಕ್ಷಿಗಳಾಗಿ ರೂಪಾಂತರಗೊಳ್ಳುವುದು ಋಗ್ವೇದದಲ್ಲಿಯೇ ಬಂದಿದೆ.ಪಶುಪಕ್ಷಿಗಳ ಕಥೆಗಳನ್ನುಳ್ಳ ಪಂಚತಂತ್ರವೇ ಮೊದಲಾದ ಪ್ರಸಿದ್ಧ ಕೃತಿಗಳಿಗೆ ಇದೆಲ್ಲವೂ ಹಿನ್ನೆಲೆಯಾಗಿದೆ. ಹೀಗೆ ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಬೆಳೆದು ಬಂದಿರುವ ಕಥೆಗಳ ರಾಶಿಯಲ್ಲಿ ದಂತಕಥೆ, ಕಟ್ಟುಕಥೆ, ಪುರಾಣ ಕಥೆ, ಮಾಯಾಕಥೆ, ಧರ್ಮಕಥೆ- ಮುಂತಾದ ಸಕಲ ಕಥಾಪ್ರಕಾರಗಳೂ ಇವೆ.[25]

ಮನುಷ್ಯನ ನಡವಳಿಕೆ ವೈಯಕ್ತಿಕವಾಗಿ ಹಾಗೂ ಸಾಮಾಜಿಕವಾಗಿ ಹೇಗಿರಬೇಕು? ಅದರಲ್ಲಿ ತಪ್ಪಾವುದು? ಸರಿಯಾವುದು? ಎಂದು ತಿಳಿಸುವುದೇ ನೀತಿಶಾಸ್ತ್ರದ ಗುರಿ. ಜೀವನಕ್ಕೆ ನೇರವಾಗಿ ಸಂಬಂಧಿಸಿದಂತೆ ಇರುವ ನೀತಿ ಶಾಸ್ತ್ರ, ಕರ್ತವ್ಯಗಳೆಂದರೇನು? ಅವು ಯಾವುವು? ಅವು ಅನಿವಾರ್ಯವೇ? ಅವನ್ನು ಸಡಿಲಿಸಬಹುದೇ? ಮುಂತಾದ ಸಮಸ್ಯೆಗಳನ್ನು ಕುರಿತು ಸಮಗ್ರವಾಗಿ, ಶಾಸ್ತ್ರೀಯವಾಗಿ ಚರ್ಚಿಸುತ್ತದೆ. ನೈತಿಕ ಮಾನವನ್ನು ಮುಂದಿರಿಸಿ, ಮಾನವನ ನಡತೆ ಅದಕ್ಕೆ ಅನುಸಾರವಾಗಿರಬೇಕೆಂದು ತಿಳಿಸುತ್ತದೆ. ಹೀಗೆ ವಿಧಿ-ನಿಷೇಧ ಗಳ ಮೂಲಕ ಮಾನವನ ನಡುವಳಿಕೆಗಳಿಗೆ ನೀತಿಶಾಸ್ತ್ರ ಮಾರ್ಗದರ್ಶನ

---

**25. A.B.Keith,"**From the earliest times of the life of the Vedic Indians in India tales of all sorts passed current among the people, however useless it may be to discriminate them as fairy tales,Marchan, or Myths or fables in the earlier stages of their development."

ನೀಡುತ್ತದೆ.[26] ಮಹಾಭಾರತದಲ್ಲಿನ ಒಂದು ನೀತಿ ಮಾರ್ಗದರ್ಶನ ಹೀಗೆ ಸೂಚಿಸುವುದನ್ನು ಕಾಣಬಹುದು:

प्रज्ञावृद्धं, धर्मवृद्धं, स्वबन्धुं, विद्यावृद्धं वयसा चापि वृद्धम् ।

कार्याकार्ये पूजयित्वा प्रसाद्य यः संपृच्छेन्न स मुह्येत् कदाचित् ॥[27]

ಬುದ್ಧಿಶಕ್ತಿಯಲ್ಲಿ ಹಿರಿಯ, ಧರ್ಮಾಚರಣೆಯಲ್ಲಿ ಹಿರಿಯ, ಆಪ್ತನಾದ ಬಂಧು, ವಿದ್ಯಾವೃದ್ಧ ಮತ್ತು ವಯೋವೃದ್ಧ-ಇವರನ್ನು ಗೌರವಿಸಿ ಸಂತೋಷಪಡಿಸಿ ಯಾವಾತನು ಕಾರ್ಯಾಕಾರ್ಯಗಳ ವಿಚಾರದಲ್ಲಿ ಅವರ ಸಲಹೆಯನ್ನು ಪಡೆಯುವನೋ ಅವನು ಎಂದಿಗೂ ಮೌಢ್ಯದಿಂದ ತಪ್ಪುದಾರಿಯನ್ನು ಹಿಡಿಯುವುದಿಲ್ಲ.

ನೀತಿಯನ್ನು ಜನಪ್ರಿಯಗೊಳಿಸುವ, ಜನರಿಗೆ ಆಪ್ಯಾಯಮಾನವಾದ ಕಥಾ ಮಾಧ್ಯಮದಿಂದ ಸರಳವಾಗಿ ಹೇಳುವ ಸದುದ್ದೇಶದಿಂದ ಹುಟ್ಟಿಕೊಂಡ ಕಾವ್ಯ ಪ್ರಕಾರವೇ ನೀತಿಕಾವ್ಯ. ನೀತಿ ಬೋಧೆಯೇ ಇವುಗಳ ಮುಖ್ಯಧ್ಯೇಯ. ಇಲ್ಲಿ ವಿಧಿಯಾಗಲಿ, ನಿಷೇಧವಾಗಲಿ ನೇರವಾಗಿ ವ್ಯಕ್ತವಾಗುವ ಬದಲು ಪರೋಕ್ಷವಾಗಿ, ಸೂಕ್ಷ್ಮವಾಗಿ, ಪ್ರಿಯವಾಗಿ ವ್ಯಕ್ತವಾಗುತ್ತವೆ. ಇಲ್ಲಿನೀತಿ, ಉಪದೇಶ, ತತ್ವಬೋಧನೆಗಳಿದ್ದರೂ, ಶುಷ್ಕಬೋಧನೆ ಅಥವಾ ಹೊರೆ ಎನಿಸುವುದಿಲ್ಲ. ಏಕೆಂದರೆ ಅವು ಕಥೆಯ ಒಂದು ಅಂಗವಾಗಿ ಬರುವುದರಿಂದ ಮನಸ್ಸಿಗೆ ಅಪ್ರಿಯವಾಗುವುದಿಲ್ಲ. ನೇರವಾದ ನಿರೂಪಣೆ, ಸರಳವಾದ ಭಾಷೆ, ಮೃದು ಮಧುರವಾದ ಪದಗಳ ಬಳಕೆ, ಮನಸ್ಸನ್ನು ಹಿಡಿದಿಟ್ಟು ಕೊಳ್ಳುವ ರಚನಾ ಕ್ರಮ ಸುಲಭ ಶೈಲಿ – ಈ ಗುಣಗಳೇ ನೀತಿಕಾವ್ಯಗಳ ಜನಪ್ರಿಯತೆಯ ಗುಟ್ಟು.[28]ಈ ಎಲ್ಲ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ವಿಶೇಷವಾಗಿ ಪರಿಗಣಿಸಿದಾಗ, ನೀತಿ ಕಾವ್ಯಗಳ ಸಾಲಿನಲ್ಲಿ ಅತ್ಯಂತ ಜನಪ್ರಿಯ ಕೃತಿಗಳೆಂದರೆ ಪಂಚತಂತ್ರ ಮತ್ತು ಹಿತೋಪದೇಶ. ಒಂದು ದೃಷ್ಟಿಯಿಂದ ಈ ಎರಡು ಕೃತಿಗಳನ್ನು ನೀತಿಕಾವ್ಯ ಎಂದು ಕರೆಯುವುದಕ್ಕಿಂತ ನೀತಿಕಥೆ ಎಂದು ಕರೆಯುವುದೇ ಹೆಚ್ಚು ಸಮಂಜಸವೇನೊ! ಇಲ್ಲಿ ಪ್ರಾಣಿ ಪಶುಪಕ್ಷಿ ಕಥೆಗಳ ಮೂಲಕ ರಾಜನೀತಿ, ವ್ಯಕ್ತಿ ನೀತಿಗಳನ್ನು ಬೋಧನೆ ಮಾಡಲಾಗಿದೆ. ಇಲ್ಲಿನ ಕಥೆಗಳಲ್ಲಿ ಮನುಷ್ಯನ ಸ್ವಭಾವ, ಮನೋಧರ್ಮ, ಮಾತು, ನಡತೆಗಳನ್ನು ಪ್ರಾಣಿಗಳಿಗೆ ಆರೋಪಿಸಲಾಗಿದೆ. ನೀತಿಕಥೆಗಳಿಗೂ ಗಾದೆಗಳಿಗೂ ಸಂಬಂಧವಿದೆ. ಕೆಲವೊಮ್ಮೆ ಗಾದೆಗಳು ನೀತಿಕಥೆಗಳ ಸಂಕ್ಷಿಪ್ತ ರೂಪವಾಗಿ ಇರುವುದೂ ಉಂಟು.

---

26. **ವೆಂಕಣ್ಣಯ್ಯ. ತ.ಶಾ,** ಗುಮಾನಿ ಕವಿಯ ಉಪದೇಶಶತಕಂ, (1989), ಪು.14, ಶ್ರೀ ಶಾರದಾ ಟ್ರಸ್ಟ್, 4581, "ಗೋಮತಿ" ನ.ರಾ.ಮೊ. ಮೈಸೂರು.570007.
27. **ಸುಭಾಷಿತಮಂಜರೀ,** ರಾಜನೀತಿ-ಶ್ಲೋ-37, ಪು-214, ಮಹಾಭಾರತ-ಉದ್ಯೋಗ ಪರ್ವ-40-23. ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು-18 (2001)
28. **ತ ಶಾ ವೆಂಕಣ್ಣಯ್ಯ,** ಗುಮಾನಿಕವಿಯ ಉಪದೇಶ ಶತಕಂ,(1989) ಪು.14, ಶ್ರೀ ಶಾರದಾ ಟ್ರಸ್ಟ್, 4581, ಗೋಮತಿ, ಎನ್ ಆರ್ ಮೊಹಲ್ಲಾ, ಮೈಸೂರು 7

ಸಂಸ್ಕೃತ ಸಾಹಿತ್ಯದಲ್ಲಿ ಪ್ರತ್ಯೇಕವಾಗಿ ನೀತಿಕಾವ್ಯಗಳನ್ನೇ ಹೇರಳವಾಗಿ ನೋಡಬಹುದು. ವಿವಿಧ ನಾಣ್ನುಡಿ, ಜಾಣ್ನುಡಿಗಳನ್ನುಳ್ಳ "ಚಾಣಕ್ಯನೀತಿಶತಕ" ಈ ಬಗೆಯ ಕಾವ್ಯಗಳಲ್ಲಿ ಮೊದಲಿಗೆ ಹೆಸರಿಸಬೇಕಾದ ಕೃತಿ. ಚಾಣಕ್ಯನೀತಿಶಾಸ್ತ್ರ, ವೃದ್ಧಚಾಣಕ್ಯ ಇತ್ಯಾದಿ ಹೆಸರುಗಳನ್ನುಳ್ಳ ಈ ಕೃತಿ ಮೂರನೇ ಶತಮಾನಕ್ಕೆ ಸೇರಿದುದು. ಆರ್ಯದೇವನ ಚತುಃಶತಕ ಆರ್ಯಶೂರನ "ಜಾತಕಮಾಲಾ", ವಸುಬಂಧುವಿನ "ಅಭಿಧರ್ಮಾದೇಶ" ರಾಜಧರ್ಮವನ್ನು ಬೋಧಿಸುವ ಕೃತಿಗಳು "ಕಾಮಂದಕನೀತಿ," ಶುಕ್ರನೀತಿಸಾರ"ಗಳಲ್ಲಿ ಕಾವ್ಯಗುಣಕ್ಕಿಂತ ಶಾಸ್ತ್ರಗುಣವೇ ಹೆಚ್ಚಾಗಿರುವಂತೆ ತೋರುತ್ತದೆ.[29] ಕಾವ್ಯರಚನೆಯಲ್ಲಿ ಆಹ್ಲಾದವನ್ನುಂಟುಮಾಡುವ ಕವಿಯ ವಕ್ರವ್ಯಾಪಾರದಿಂದ ಕೂಡಿದ ಶಬ್ದಾರ್ಥಗಳಲ್ಲಿ ವ್ಯವಸ್ಥಿತವಾಗಿರುವುದೇ ಕಾವ್ಯ.

शब्दार्थौ सहितौ वक्रकविव्यापारशालिनि ।
बन्धेव्यवस्थितौ काव्यं तद्विह्लादकारिणि ॥[30]

ಕೇವಲ ಶಬ್ದಾರ್ಥಗಳ ರಚನೆಯು ಕಾವ್ಯವಾಗಲಾರದು. ಆ ಶಬ್ದಾರ್ಥಗಳಲ್ಲಿ ಮನಸ್ಸನ್ನು ಸೆಳೆಯುವ ಶಕ್ತಿ ಇರಬೇಕು. ಈ ಶಕ್ತಿಯು ಕವಿಯ ವ್ಯಾಪಾರ ವಕ್ರತೆಯಿಂದ ಉಂಟಾಗುತ್ತದೆ ಎಂಬ ಅಭಿಪ್ರಾಯವನ್ನು ಕುಂತಕನು ತನ್ನ "ವಕ್ರೋಕ್ತಿಜೀವಿತ"ದಲ್ಲಿ ವ್ಯಕ್ತಪಡಿಸಿದ್ದಾನೆ. ಮತ್ತೊಂದೆಡೆ ಶಾಸ್ತ್ರ ಮತ್ತು ಕಾವ್ಯ ವಿಚಾರದಲ್ಲಿ ಕುಂತಕನು ಈ ಸುಂದರವಾದ ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ.

कटुकौषधवत् शास्त्रमविद्या व्याधिनाशनम् ।
आह्लाद्यमृतवत् काव्यमविवेकगदापहम् ॥[31]

ಅಂದರೆ ಶಾಸ್ತ್ರವು ಕಹಿಯಾದ ಔಷಧಿಯ ಹಾಗೆ ಅವಿದ್ಯೆ ಎಂಬ ರೋಗವನ್ನು ನಾಶಮಾಡುತ್ತದೆ. ಕಾವ್ಯವು ಆಹ್ಲಾದವೆಂಬ ಅಮೃತದ ಹಾಗೆ ಅದೇ ಅಜ್ಞಾನವೆಂಬ ರೋಗವನ್ನು ನಾಶಮಾಡುತ್ತದೆ. ಹಾಗೆಯೇ ಪಂಚತಂತ್ರ ನೀತಿ ಶಾಸ್ತ್ರ ಕಾವ್ಯ ಅತ್ಯಂತ ಸರಳವಾಗಿ, ಆಕರ್ಷಕ ಕಥಾ ಮಾಧ್ಯಮದ ಮೂಲಕ ಪರಿಣಾಮಕಾರಿಯಾಗಿ ದುರ್ವಿನೀತರಾದ ರಾಜಕುಮಾರರ ಅವಿದ್ಯೆ, ಅಜ್ಞಾನದ ಅಂಧಕಾರವನ್ನು ನಾಶಪಡಿಸಿ,

---

29. **ತ. ಶಾ. ವೆಂಕಣ್ಣಯ್ಯ,** ಗುಮಾನಿಕವಿಯ ಉಪದೇಶ ಶತಕಂ,(1989) ಪು.15, ಶ್ರೀ ಶಾರದಾ ಟ್ರಸ್ಟ್, 4581, ಗೋಮತಿ, ಎನ್ ಆರ್ ಮೊಹಲ್ಲಾ, ಮೈಸೂರು 7
30. कुन्तकस्य व. जी. 1–7.
31. कुन्तकस्य व. जी. 1–7ನೇ ಅಂತಶ್ಲೋಕ.

ರಾಜನೀತಿ ನಿಪುಣರನ್ನೂ, ಬದುಕಿನ ವ್ಯವಹಾರ ಚತುರರನ್ನಾಗಿ ಮಾಡಿದೆ ಎಂಬುದು ಗಮನಾರ್ಹ ಅಂಶವಾಗಿದೆ. ರಾಜನೀತಿ ಶಿಕ್ಷಣದ ಒಂದೊಂದು ಸೂಕ್ತಿಗಳು ಅದೆಷ್ಟು ಸರಳವಾಗಿದ್ದು ಎಂಥಹವರಿಗೂ ಅರ್ಥವಾಗುವಂತಿರುತ್ತದೆ. ಉದಾಹರಣೆಗೆ:-

य उपेक्षेत शत्रुं स्वं प्रसरन्तं यदृच्छया ।

रोगं चाऽलस्यसम्युक्तः स शनैस्तेन हन्यते ॥[32]

ಅಂದರೆ, ಸ್ವೇಚ್ಛೆಯಾಗಿ ಬೆಳೆಯುತ್ತಿರುವ ಶತ್ರುವನ್ನು ಯಾರು ಉದಾಸೀನಮಾಡುವನೋ, ಯಾವನು ಸೋಮಾರಿತನದಿಂದ ಕೂಡಿ ರೋಗವನ್ನು ಉದಾಸೀನಮಾಡುವನೋ, ಅವನು ಅದರಿಂದಲೇ ಕ್ರಮಕ್ರಮವಾಗಿ ಕೊಲ್ಲಲ್ಪಡುತ್ತಾನೆ.

ನೀತಿ ಕಾವ್ಯಗಳಲ್ಲಿ ಅತ್ಯಂತ ಪ್ರಸಿದ್ಧವಾದ (ಕ್ರಿ.ಶ. 7ನೇ) ಭರ್ತೃಹರಿಯ "ನೀತಿಶತಕ" ಜನರ ಪ್ರವೃತ್ತಿಗಳನ್ನು ಮೂರ್ಖಪದ್ಧತಿ, ಅರ್ಥ ಪದ್ಧತಿ, ಮಾನಶೌರ್ಯ ಪದ್ಧತಿ ಮುಂತಾದ ಹತ್ತು ಪದ್ಧತಿಗಳಾಗಿ ವಿಭಾಗಿಸಿ, ಪ್ರತಿಯೊಂದು ಪದ್ಧತಿಗೂ ಹತ್ತು ಶ್ಲೋಕಗಳನ್ನು ಮೀಸಲಾಗಿರಿಸಿ, ಒಟ್ಟು ನೂರು ಶ್ಲೋಕಗಳಲ್ಲಿ ಕಾವ್ಯವನ್ನು ಸುಂದರವಾದ ಶೈಲಿಯಲ್ಲಿ ಭರ್ತೃಹರಿಯು ರಚಿಸಿದ್ದಾನೆ. ಕ್ರಿ.ಶ. 9ನೇ ಶತಮಾನದ ಭಲ್ಲಟನ "ಭಲ್ಲಟಶತಕವೂ" 108 ನುಡಿಗಳನ್ನುಳ್ಳ ಅಚ್ಚುಕಟ್ಟಾಗದ ಕೃತಿ. ಸಿಲ್ಹಣನ(ಕ್ರಿ.ಶ. 12ನೇ) "ಶಾಂತಿಶತಕ" ನಾಲ್ಕು ಅಧ್ಯಾಯಗಳ ಗ್ರಂಥ. ಭರ್ತೃಹರಿಯ "ವೈರಾಗ್ಯಶತಕ"ದಿಂದ ಸ್ಫೂರ್ತಿ ಪಡೆದು ಈ ಗ್ರಂಥವನ್ನು ರಚಿಸಿರುವಂತೆ ತೋರುತ್ತದೆ. ವೈರಾಗ್ಯಶತಕದಲ್ಲಿ ತೃಷ್ಣಾದೂಷಣ, ಯಾಚ್ಞಾದೈನ್ಯದೂಷಣ, ಭೋಗಾಸ್ಥೈರ್ಯವರ್ಣನಾ ಮುಂತಾದ ಹತ್ತು ವಿಭಾಗಗಳಲ್ಲಿ ನೈತಿಕಾಂಶಗಳ ವಿವರಣೆ ಇದೆ. 108 ನುಡಿಗಳನ್ನುಳ್ಳ ಶಂಭುವಿನ "ಅನ್ಯೋಕ್ತಿಮುಕ್ತಾ ಲತಾ", ಕುಸುಮದೇವನ "ದೃಷ್ಟಾಂತಕ ಲತಾಶತಕ", ಗುಮಾನಿಯ "ಉಪದೇಶ ಶತಕಂ" ಹಾಗೂ ನಾಗರಾಜನ "ಭಾವಶತಕ"- ಈ ಕೃತಿಗಳೆಲ್ಲ ನೀತಿಕಾವ್ಯಗಳ ಕಕ್ಷೆಯಲ್ಲಿ ಬರುತ್ತವೆ.[33] ಈ ಸಂದರ್ಭದಲ್ಲಿ ಒಂದು ಉತ್ತಮವಾದ ಉದಾಹರಣೆಯಾಗಿ, ಪಂಚತಂತ್ರವನ್ನು ಹೋಲುವ, ಉದಾಸೀನತೆಗೆ ಪಕ್ಕಾಗಿ ಅಜ್ಞಾತವಾಗಿ ಉಳಿದಿರುವ ಕೃತಿಗಳಲ್ಲಿ ಕವಿ ಗುಮಾನಿಯ ಕೃತಿಗಳನ್ನು

---

31. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತ ಪಂಚತಂತ್ರ, ಕಾಕೋಲೂಕೀಯ-ಶ್ಲೋ-2,ಪು-437, ಚೌಕಾಂಬ ಕೃಷ್ಣದಾಸ್ ಅಕಾಡೆಮಿ, PB.no:1118, Oriental Publishers, K37/118 Gopalmandir Lane, Varanasi-221001(INDIA)1993.

33. **ತ. ಶಾ. ವೆಂಕಣ್ಣಯ್ಯ,** ಗುಮಾನಿಕವಿಯ ಉಪದೇಶ ಶತಕಂ,(1989) ಪು.15, ಶ್ರೀ ಶಾರದಾ ಟ್ರಸ್ಟ್, 4581, ಗೋಮತಿ, ಎನ್ ಆರ್ ಮೊಹಲ್ಲಾ, ಮೈಸೂರು 7

ಸ್ಮರಣೆಗೆ ತಂದು ಕೊಳ್ಳಬಹುದು, ವಿಶೇಷವಾಗಿ "ಉಪದೇಶಶತಕಂ". ಕವಿಯು ತನ್ನ ಕಾವ್ಯದ ಕೊನೆಯಲ್ಲಿ ಹೇಳಿಕೊಂಡಿರುವಂತೆ, "ಆರ್ಯಾ" ಛಂದಸ್ಸಿನಲ್ಲಿ ರಚಿತವಾಗಿರುವ ನೂರು ಶ್ಲೋಕಗಳ ನೀತಿಬೋಧಕ ಕೃತಿಯಾಗಿರುತ್ತದೆ. ಮಂದಮತಿಗಳಿಗೆ ಮಹದುಪಕಾರವಾಗಬೇಕೆಂಬುದು ಕವಿಯ ಮಹದಾಶಯ. ಇಲ್ಲಿನ ಪ್ರತಿಯೊಂದು ಪದ್ಯದ ಮೂರು ಪಾದಗಳು ಕಥಾಂಶವೊಂದನ್ನು ರೂಪಿಸಿದ್ದು, ಅದರ ನಾಲ್ಕನೆಯ ಪಾದ ಆ ಕಥಾಂಶದಿಂದ ಮೂಡಿಬರುವ ನೀತಿವಾಕ್ಯವನ್ನೊಳಗೊಂಡಿದೆ. ರಾಮಾಯಣ, ಮಹಾಭಾರತ, ಪುರಾಣ ಹಾಗೂ ಭಾಗವತಾದಿ ಕಥೆಗಳಿಂದ ಇಲ್ಲಿನ ಶ್ಲೋಕಗಳು ಪ್ರೇರಣೆಗೊಂಡು ರಚತವಾಗಿರುತ್ತವೆ. ಕಥೆ ಹಾಗೂ ನೀತಿಯನ್ನು ಜೋಡಿಸುವಲ್ಲಿ ಕವಿಯ ಜಾಣ್ಮೆಯು ಅಸದೃಶವಾದುದು. ಕೃತಿಯ ರಚನಾ ತಂತ್ರ ವಿಶಿಷ್ಟವಾದುದು.

ನೀತಿಶಾಸ್ತ್ರದ ವಿಧಿ-ನಿಷೇಧ ಮಾರ್ಗಗಳೆರಡನ್ನೂ ಕವಿ ಚಾಣಾಕ್ಷತನದಿಂದ ಬಳಸಿದ್ದಾನೆ. "धीरः समयम् प्रतीक्षेत" "जनापवादाद्भजेद्भीतिम्", "साम्ना मूर्खम् वशे कुर्यात्",[34] ಇತ್ಯಾದಿ ವಾಕ್ಯಗಳಲ್ಲಿ ವಿಧಿ ಮಾರ್ಗದಿಂದ ನೀತಿಯನ್ನು ಬೋಧಿಸಿದ್ದರೆ, "न सङ्कटेऽपित्यजेद्धेर्मम्", "न हि निजबन्धुर्विरोद्धव्यः", "प्राप्तैश्वर्योनदृप्तःस्यात्" ಇತ್ಯಾದಿ ವಾಕ್ಯಗಳಲ್ಲಿ ನಿಷೇಧಮಾರ್ಗದ ಅನುಸರಣೆಯನ್ನು ಕಾಣಬಹುದು. ಆದರ್ಶರಾದ ವ್ಯಕ್ತಿಗಳ ಆಚಾರ-ವಿಚಾರ, ತ್ಯಾಗ-ಔದಾರ್ಯಗಳನ್ನು, ಶೌರ್ಯ-ಸ್ಥೈರ್ಯಗಳನ್ನು ನಿರೂಪಿಸಿ ಆ ಬಳಿಕ ನೀತಿಯನ್ನು ಬೋಧಿಸಿರುವುದು ಒಂದು ವಿಶಿಷ್ಟ ಅಂಶವಾಗಿರುತ್ತದೆ. ಸಾಮಾನ್ಯವಾಗಿ ನೀತಿಬೋಧೆ ಮಾಡಿ ಅದಕ್ಕೆ ಪೂರಕವಾಗಿ ಸಾಧುಸಂತರ ಕಥೆ ಹೇಳುವುದು ವಾಡಿಕೆ. ಆದರೆ ಇಲ್ಲಿ ಮೊದಲಿಗೆ ಮಹನೀಯರ ಉದಾತ್ತ ನಡೆಯ ನಿರೂಪಣೆ, ನಂತರ ಅವರ ಆಚರಣೆಯಿಂದ ಮೂಡಿಬರುವ ನೀತಿಯ ಅಭಿವ್ಯಕ್ತಿ. ಅಲಂಕಾರಗಳ ಹೊರೆಯಿಲ್ಲದೆ, ಬೆಡಗಿಲ್ಲದ, ಕಠಿಣ ಪದಗಳ ಬೆದರಿಕೆಯಿಲ್ಲದ ಸರಳ ಸುಂದರ ನಿರೂಪಣೆ ಸರ್ವಜನ ಮನೋನಂದಕವಾದುದು.

कुतुकाय कोविदानां मूढमतीनां महोपकाराय ।

निरमात्कविर्गुमानिः शतोपदेशप्रबंधममुम् ॥[35]

---

34. **ತ. ಶಾ. ವೆಂಕಣ್ಣಯ್ಯ,** ಗುಮಾನಿಕವಿಯ ಉಪದೇಶ ಶತಕಂ,(1989) ಪು.20, ಶ್ರೀ ಶಾರದಾ ಟ್ರಸ್ಟ್, 4581, ಗೋಮತಿ, ಎನ್. ಆರ್. ಮೊಹಲ್ಲಾ, ಮೈಸೂರು 7
35. **ತ. ಶಾ. ವೆಂಕಣ್ಣಯ್ಯ,** ಗುಮಾನಿಕವಿಯ ಉಪದೇಶ ಶತಕಂ,(1989) ಶ್ಲೋಕ-102, ಶ್ರೀ ಶಾರದಾ ಟ್ರಸ್ಟ್,4581,ಗೋಮತಿ, ಎನ್ ಆರ್ ಮೊಹಲ್ಲಾ, ಮೈಸೂರು 7

ಅಂದರೆ, ನೂರು ಉಪದೇಶಗಳನ್ನೊಳಗೊಂಡ ಈ ಕೃತಿಯನ್ನು ವಿದ್ವಾಂಸರ ಕುತೂಹಲಕ್ಕಾಗಿಯೂ, ಮಂದಮತಿಗಳ ಮಹದುಪಕಾರವಾಗಲೆಂದೂ ಗುಮಾನಿ ಕವಿಯು ರಚಿಸಿದನು.

ಇದೇ ಮಾದರಿಯಲ್ಲಿ ಮಂದಮತಿಗಳಾದ ಅಮರಶಕ್ತಿ ರಾಜನ ಮೂವರು ರಾಜಕುಮಾರರಿಗೆ ಮಹದುಪಕಾರವಾಗಲೆಂದು, ಬದುಕಿನ ನೀತಿನಿಯಮಗಳು, ರಾಜನೀತಿನೈಪುಣ್ಯ, ಅರ್ಥಶಾಸ್ತ್ರ, ನೀತಿಶಾಸ್ತ್ರ ನಿಪುಣರಾಗಲೆಂದು, ರಾಜವಂಶದ ಮುಂದಿನ ರಾಜ್ಯಭಾರ ನಡೆಸಲು ಯೋಗ್ಯರನ್ನಾಗಿ ಮಾಡುವ ಸದುದ್ದೇಶದಿಂದ ಪಂಚತಂತ್ರವನ್ನು ವಿಷ್ಣುಶರ್ಮರು ರಚಿಸಿದರು. ಪಂಚತಂತ್ರ ನೀತಿಕಾವ್ಯದಲ್ಲಿ ಕಥೆಗಳ ಸರಳತೆ, ಬದುಕಿನ ಸ್ಥಿತಿ–ಗತಿಗಳ ಕುರಿತು ಮನಮುಟ್ಟುವಂತೆ ವರ್ಣನೆ ಹಾಗೂ ಕಥೆಗಳ ತಾತ್ಪರ್ಯಕ್ಕೆ ಸೂಕ್ತವಾದ ಜಾಣ್ನುಡಿಗಳು, ನಾಣ್ನುಡಿಗಳು, ಸುಭಾಷಿತಗಳು, ಸೂಕ್ತಿಗಳು, ಗಾದೆಗಳು ಮುಂತಾದವುಗಳು ಬಹಳ ಕರಾರುವಾಕ್ಕಾಗಿ ಸಂಯೋಜಿಸಲಾಗಿದೆ.ಉತ್ತಮ ಶಿಕ್ಷಣ ಮತ್ತು ವ್ಯಕ್ತಿತ್ವ ವಿಕಸನ ಮಾರ್ಗದರ್ಶನ ಸರ್ವಜನ ಮನೋನಂದಕವಾಗಿದೆ. ಅಂದರೆ ಇದು ಕೇವಲ ರಾಜಕುಮಾರರಿಗೆ ಮಾತ್ರವಲ್ಲ. ನೀತಿನಿಯಮಗಳು, ಬದುಕಿನ ಸ್ಥಿತಿ–ಗತಿಗಳ ಒಂದು ನೋಟ, ಬದುಕಿನ ಸಾರ್ಥಕತೆಗೆ ಪಾಲಿಸಬೇಕಾದ ಆಚಾರವಿಚಾರಗಳು, ಬುದ್ಧಿವಂತಿಕೆಯ ಸದುಪಯೋಗ, ಪಡೆದದ್ದನ್ನು ಮೂರ್ಖತನದಿಂದ ಕಳೆದು ಕೊಳ್ಳುವುದು, ಪರಿಕ್ಷಿಸದೆ ಅಥವಾ ಸರಿಯಾಗಿ ವಿಚಾರಮಾಡದೆ ಕೈಗೊಂಡ ಕಾರ್ಯಗಳಿಂದ ಆಗುವ ಅನಾಹುತಗಳು, ಮೈತ್ರಿಯನ್ನು ಒಡೆದುಕೊಳ್ಳುವಿಕೆ, ಒಳ್ಳೆಯ ಮಿತ್ರರನ್ನು ಗಳಿಸುವಿಕೆ ಮುಂತಾದ ವಿಚಾರಗಳು ಸಕಲರಿಗೂ ಬೇಕಾದ ತಿಳುವಳಿಕೆಯೇ ಹೌದು. ಇಂತಹ ಬದುಕಿನ ಮಂತ್ರಗಳನ್ನು, ರಾಜನೀತಿಶಿಕ್ಷಣವನ್ನು ಪಂಚತಂತ್ರದಲ್ಲಿ ಐದು ಸೂತ್ರ ಕಥೆಗಳ, ಇತರ ಎಪ್ಪತ್ತು ವಿವಿಧ ಉಪಕಥೆಗಳ ಮೂಲಕ ಆಕರ್ಷಕವಾಗಿ ಸಕಲಶಾಸ್ತ್ರ ಪಾರಂಗತರಾದ ವಿಷ್ಣುಶರ್ಮರು ನಿರೂಪಿಸಿದ್ದಾರೆ. ಪಂಚತಂತ್ರದಲ್ಲಿ ಬರುವ ಎಲ್ಲ ವಿಚಾರಗಳು, ಸಾಮಾನ್ಯ ಜ್ಞಾನ, ಬದುಕಿನ ನೀತಿಪಾಠ ಪ್ರತಿಯೊಬ್ಬರಿಗೂ ಒಂದಲ್ಲೊಂದು ರೀತಿಯಲ್ಲಿ ಅವಶ್ಯಕವಾದದ್ದು ಹಾಗೂ ಸಾರ್ವತ್ರಿಕ ಸತ್ಯವಿದ್ದಂತೆ. (Universal truth )

ಉದಾಹರಣೆಗೆ:–1. **ಸೂರ್ಯನು ಪೂರ್ವದಿಕ್ಕಿನಲ್ಲಿ ಉದಯಿಸುತ್ತಾನೆ. (Sun rises in the east)**

**2. ನಾಯಿಗಳು ಅಪರಿಚಿತರನ್ನು ಕಂಡಾಗ ಬೊಗಳುತ್ತವೆ. (Dogs bark at strangers)**

**3. ಎಸ್ಕಿಮೋಗಳು ಮಂಜು ಗುಡಿಸಲಿನಲ್ಲಿ ವಾಸಿಸುತ್ತಾರೆ.(Eskimos live in Igloos.)**

ಇವುಗಳೆಷ್ಟು ಸತ್ಯದ ವಿಚಾರಗಳೋ ಹಾಗೆಯೇ, ಯಾವುದೇ ದೇಶ, ಜನ ಹಾಗೂ ಸಮಾಜದ ಸಾರ್ವತ್ರಿಕ ಸತ್ಯದ ವಿಚಾರಗಳನ್ನೊಳಗೊಂಡಿರುವುದೇ ನೀತಿಬೋಧೆ. ಪಂಚತಂತ್ರದಲ್ಲಿ ಅಳವಡಿಸಿರುವ ಸುಭಾಷಿತಗಳು, ನೀತಿಬೋಧಕಗಳು, ಗಾದೆಗಳು ಸರ್ವಕಾಲಿಕವಾದವು. ಬದುಕಿನ ಸಾರ್ಥಕತೆಗೆ ಎಂದೆಂದೂ ಪಾಲಿಸಬೇಕಾದ ತಿಳುವಳಿಕೆಗಳು. ಬದ್ಧತೆಯ ಬದುಕಿಗೆ ಅವಶ್ಯಕವಾದ ಎಚ್ಚರಿಕೆ, ಸೂಕ್ತ ಶಿಕ್ಷಣ ಹಾಗೂ ಮಾರ್ಗದರ್ಶನ ಇವುಗಳಿಂದ ಪ್ರಾಪ್ತವಾಗುವುದು. ಜೀವದ ಹೊರಗಿನ ಹೊದಿಕೆಯೇ ಈ ಶರೀರ. ಈ ಜೀವನಿಗೆ ಐದು ಕೋಶಗಳಿವೆ ಎಂದು ಉಪನಿಷತ್ತುಗಳು ಹೇಳುತ್ತವೆ:-

जीवस्य बाह्यः अच्छादकः देहः ऐतस्य जीवस्य ।
पञ्चकोशाः भवन्ति इति उपनिषदः वदन्ति ॥[36]

ಅನ್ನಮಯಕೋಶ(ದೇಹ), ಪ್ರಾಣಮಯಕೋಶ(ಉಸಿರು), ಮನೋಮಯಕೋಶ(ಮನಸ್ಸು), ವಿಜ್ಞಾನಮಯಕೋಶ(ಜ್ಞಾನ), ಆನಂದಮಯಕೋಶ(ಸಂತೋಷ). ಜೀವನು ಜೀವಂತವಾಗಿ ಚಟುವಟಿಕೆಯಿಂದ ಗೆಲುವಾಗಿ ಇರಬೇಕಾದರೆ ಈ ಪಂಚಕೋಶಗಳು ಅತ್ಯಂತ ಮುಖ್ಯವಾದುದು. ಹಾಗೆಯೇ "ಪಂಚತಂತ್ರಗಳು– ಮಿತ್ರಭೇದ– ಮಿತ್ರಸಂಪ್ರಾಪ್ತಿ – ಕಾಕೋಲೂಕೀಯ – ಲಬ್ಧಪ್ರಣಾಶ ಮತ್ತು ಅಪರೀಕ್ಷಿತಕಾರಕ – ನೀತಿಕಥೆಗಳ ಮೂಲಕ ಎಷ್ಟರಮಟ್ಟಿಗೆ ಸ್ವಾರಸ್ಯಕರವಾಗಿದೆಯೆಂದರೆ, ಪಂಚಾಮೃತದಂತೆ ಪಾವನ ಜ್ಞಾನತೀರ್ಥವಾಗಿದ್ದು, ಸಾರ್ಥಕ ಬದುಕಿನ ರೀತಿ – ನೀತಿಗಳ ಸುಜ್ಞಾನ, ರಾಜನೀತಿಶಿಕ್ಷಣ ಮತ್ತು ಸುಮನೋಹರ ವ್ಯಕ್ತಿತ್ವ – ವಿಕಸನ ಪ್ರಾಪ್ತಿಯಾಗುವುದು. ಅದೇ ಅಜ್ಞಾನ, ಆಲಸ್ಯ, ಮೂರ್ಖತನ ಮತ್ತು ಸ್ವೇಚ್ಛಾಪ್ರವೃತ್ತಿಗೆ ಕುಂತಕನು ಹೇಳಿರುವಂತೆ ಕಟುಕೌಷಧವಾಗಿ ಅಂದರೆ "ಪಂಚಗವ್ಯತೀರ್ಥವಾಗಿ– ಶುದ್ಧಗೊಳಿಸುವ ಕಹಿಯಾದ ಔಷಧವಾಗಿ ಅವಿದ್ಯೆ, ಅಜ್ಞಾನದ ಅಂಧಕಾರವನ್ನು ನಾಶಪಡಿಸಿ ರಾಜನೀತಿ ನಿಪುಣರನ್ನೂ, ಬದುಕಿನ ವ್ಯವಹಾರ ಚತುರರನ್ನೂ ಮಾಡುವಂತಹುದು.

ಕ್ರಿ.ಶ.17ನೇ ಶತಮಾನದ ಪಂಡಿತರಾಜ ಜಗನ್ನಾಥನ "ಭಾಮಿನೀವಿಲಾಸ"ದಲ್ಲಿಯೂ, ಪದ್ಮಾನಂದ, ಅಪ್ಪಯ್ಯ ದೀಕ್ಷಿತರುಗಳ "ವೈರಾಗ್ಯಶತಕ"ದಲ್ಲಿಯೂ ನೀತಿಯ ಉಪದೇಶವಿದೆ. ಇವೆಲ್ಲಾ ನೀತಿಶಾಸ್ತ್ರ ಬೋಧಕಗಳು ಸಂದೇಹವಿಲ್ಲ. ನೀತಿ ಶಾಸ್ತ್ರ ಹಾಗೂ ಆಧ್ಯಾತ್ಮ ನಿಕಟಸಂಬಂಧವುಳ್ಳವು. ಆದರೆ ಕೇವಲ ಶುಷ್ಕ ಹಾಗೂ ನೀರಸವಾಗಿರುವಂತೆ ತೋರುವ ಶಾಸ್ತ್ರದ ಅಧ್ಯಯನ ಪಂಡಿತಪ್ರಿಯವಾಗಬಹುದೇ ಹೊರತು

36. **ತೈತ್ತರೀಯ ಉಪನಿಷತ್ ಹಾಗೂ ಆದಿಶಂಕರವಿರಚಿತ ವಿವೇಕಚೂಡಾಮಣಿಯಲ್ಲಿ ಪಂಚಕೋಶ**ಗಳ ಬಗ್ಗೆ ಶ್ಲೋಕ.

ಸಾಮಾನ್ಯರು ಅದನ್ನು ಅಧ್ಯಯನಮಾಡಿ ಅರ್ಥಮಾಡಿಕೊಂಡು ಆನಂದಿಸಲಾರರು. ಆದರೆ ಪಂಚತಂತ್ರ ನೀತಿಕಥೆಗಳನ್ನು ಅವಲೋಕನ ಮಾಡಿ ಪರಿಶೀಲಿಸಿದರೆ ಕುಂತಕನು ಹೇಳಿರುವಂತೆ, ಈ ನೀತಿಶಾಸ್ತ್ರಕಾವ್ಯವು ಅತ್ಯಂತ ಪರಿಣಾಮಕಾರಿಯಾಗಿ, ಸರಳ ಸಣ್ಣಸಣ್ಣ ಕುತೂಹಲ ಮೂಡಿಸುವ ಕಥಾ ನಿರೂಪಣೆಯ ಮೂಲಕ ದುರ್ವಿನೀತರಾದ ರಾಜಕುಮಾರರ ಅವಿದ್ಯೆ, ಅಜ್ಞಾನದ ಅಂಧಕಾರವನ್ನು ನಾಶಪಡಿಸಿ, ರಾಜನೀತಿ ನಿಪುಣರನ್ನೂ, ಬದುಕಿನ ವ್ಯವಹಾರ ಚತುರರನ್ನೂ ಮಾಡಿದೆ ಎಂಬುದು ನಿಜಕ್ಕೂ ಒಂದು ಗಮನಾರ್ಹ ಸಂಗತಿಯಾಗಿದೆ. ರಾಜನೀತಿ ಶಿಕ್ಷಣ ನೀಡುವಲ್ಲಿ ದೈನಂದಿನ ಬದುಕಿನ ವ್ಯವಹಾರಗಳನ್ನು ನಿದರ್ಶನಗಳಾಗಿ ಆಯ್ಕೆಮಾಡಿಕೊಂಡು ಅತ್ಯಂತ ಸರಳವಾಗಿ ವಿಷ್ಣುಶರ್ಮರು ಬೋಧಿಸಿದ್ದಾರೆ. ಇದು ಕೇವಲ ರಾಜಕುಮಾರರಿಗೆ ಶಿಕ್ಷಣ ಎಂದು ಕಂಡುಬಂದರೂ, ಪ್ರತಿಯೊಬ್ಬ ಸಾಮಾನ್ಯನಿಗೂ ಉತ್ತಮ ತಿಳುವಳಿಕೆ ಲಭ್ಯವಾಗುತ್ತದೆ. ಇದೇ ಪಂಚತಂತ್ರದಲ್ಲಿ ಅಡಕವಾಗಿರುವ ಶೈಕ್ಷಣಿಕ ಮನೋವಿಜ್ಞಾನದ ಲಕ್ಷಣಗಳು. ಉದಾಹರಣೆಗೆ ಒಂದು ಸೂಕ್ತಿ ಹೀಗೆ ಸೂಚಿಸುತ್ತದೆ:–

> लुब्धस्य नश्यति यशः पिशुनस्य मैत्री नष्टक्रियस्य कुलमर्थपरस्य धर्मः ।
> विद्याफलं व्यसनिनः कृपणस्य सौख्यं राज्यं प्रमत्तसचिवस्य नराधिपस्य ॥[37]

ಲೋಭಿಯ ಯಶಸ್ಸು ನಾಶವಾಗುತ್ತದೆ. ಚಾಡಿಹೇಳುವವನಿಗೆ ಸ್ನೇಹ ನಷ್ಟವಾಗುತ್ತದೆ. ವಿಹಿತವಾದಕ್ರಿಯೆಗಳನ್ನು ಮಾಡದವನ ಕುಲ ನಾಶವಾಗುತ್ತದೆ. ದುರ್ವ್ಯಸನಗಳಿಗೆ ತುತ್ತಾದವನಿಗೆ ವಿದ್ಯೆಯಫಲ ಸಿಗುವುದಿಲ್ಲ. ಜಿಪುಣನಿಗೆ ಸೌಖ್ಯ ಸಿಗುವುದಿಲ್ಲ. ಅದೇ ರೀತಿಯಲ್ಲಿ ಮೈಮರೆತ ಮಂತ್ರಿಯನ್ನು ಹೊಂದಿರುವ ರಾಜನ ರಾಜ್ಯವು ನಾಶವಾಗುತ್ತದೆ.

ಈ ದೃಷ್ಟಿಯಿಂದ ಪಂಚತಂತ್ರದ ಪರಮ ಗುರಿ ಶಿಕ್ಷಣ. ಸೂತ್ರರೂಪವಾದ ಪ್ರಧಾನ ಕಥೆಯೊಂದಿದ್ದು, ಅದರೊಡನೆ ಕಥೆ–ಉಪಕಥೆಗಳು ವಿಚಾರ ಕೊಂಡಿಗಳಿಂದ ಕೂಡಿ ಕಥೆಯ ಬೆಳವಣಿಗೆ ಆಗುತ್ತದೆ. ಒಂದೇ ಕಥೆ ಬಹು ದೀರ್ಘವಾಗಿ ಸಾಗುವುದರಿಂದ ಆಗುವ ಬೇಸರ ಇದರಿಂದ ಪರಿಹಾರವಾಗುತ್ತದೆ, ವಿಭಿನ್ನ ಸ್ವಾರಸ್ಯ ಸಿಕ್ಕುತ್ತದೆ. ಮಕ್ಕಳಿಗಂತೂ ಸಣ್ಣ ಕಥೆಗಳೇ ಬೇಕು, ಅವೂ ಪಶುಪಕ್ಷಿಗಳ ಕಥೆಗಳಾದರೆ ಇನ್ನೂ ಆಕರ್ಷಕ. "ಪಂಚತಂತ್ರ"ದಲ್ಲಿ ಮೊದಲಬಾರಿಗೆ ರೂಪತಾಳಿರುವ ಈ ಕಥಾಸಂವಿಧಾನ ಲೋಕಪ್ರಿಯವಾಗಿದೆ. ಕುತೂಹಲವನ್ನು ಕೆರಳಿಸಿ ಮನೋರಂಜನೆಯನ್ನು ಒದಗಿಸುವುದಷ್ಟೇ ಕಥೆಯ ಗುರಿಯಲ್ಲ, ನೀತಿ, ಆಚಾರ ಧರ್ಮಾದಿಗಳ ಬೋಧನೆಯೂ ಪಂಚತಂತ್ರಾಕಾರನ ಆಶಯವಾಗಿರುತ್ತದೆ. ಇದರಿಂದಾಗಿ ನಾವು

---

37. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತ ಪಂಚತಂತ್ರ, ಕಾಕೋಲೂಕೀಯ–ಶ್ಲೋ–232, ಪು–593, ಚೌಕಾಂಬ ಕೃಷ್ಣದಾಸ್ ಅಕಾಡೆಮಿ, PB.no:1118, Oriental Publishers, K37/118 Gopalmandir Lane, Varanasi-221001(INDIA)1993.

ಅರ್ಥೈಸಿಕೊಳ್ಳಬಹುದೇನೆಂದರೆ, ಪಂಚತಂತ್ರವು ಎಂಥಹ ಶೈಕ್ಷಣಿಕ ಹಾಗೂ ಮನೋವೈಜ್ಞಾನಿಕ ಅಂಶಗಳನ್ನು ತನ್ನ ಕಥಾಗುಚ್ಛದಲ್ಲಿ ಲೇಪನಮಾಡಿಕೊಂಡಿದೆ! ಎಂಬುದು.

यौवनं धनसंपत्तिः प्रभुत्वमविवेकता।

ऐकैकमप्यनर्थाय किमु यत्र चतुश्टयम् ॥[38]

ಯೌವನ, ಧನಸಂಪತ್ತು, ದೊರೆತನ, ಅವಿವೇಕ ಎಂಬ ಈ ನಾಲ್ಕರಲ್ಲಿ ಒಂದೊಂದೇ ಅನರ್ಥವನ್ನು ಹುಟ್ಟಿಸುತ್ತದೆ. ಈ ನಾಲ್ಕೂಉಳ್ಳ ಸ್ಥಳದಲ್ಲಿ ಹೇಳಬೇಕಾದುದೇನು? ವಿವೇಕವಿಲ್ಲದೆ ದುರ್ಮಾರ್ಗರಾಗಿರುವ ನನ್ನ ಪುತ್ರರಿಗೆ ನೀತಿಶಾಸ್ತ್ರವನ್ನೋದಿಸಿ ವಿವೇಕವನ್ನುಂಟುಮಾಡುವುದರಿಂದ ಅವರನ್ನು ಪುನರ್ಜನ್ಮ ಸಂಭೂತರಾಗಿ ಮಾಡತಕ್ಕ ಪುಣ್ಯಾತ್ಮರು ಯಾರಾದರೂ ಇದ್ದಾರೆಯೇ ಎಂದು ಅಮರಶಕ್ತಿ ರಾಜನು ಬಹಳ ಚಿಂತಾಕ್ರಾಂತನಾಗಿರುವ ಸಂದರ್ಭದಲ್ಲಿ, ದೇವಗುರುವಾದ ಬೃಹಸ್ಪತಿಯ ಹಾಗೆ ಸಮಸ್ತ ನೀತಿಶಾಸ್ತ್ರಗಳನ್ನೂ ತಿಳಿದ ವಿಷ್ಣುಶರ್ಮರು ಅದೃಷ್ಟವಶಾತ್ ಲಭ್ಯವಾದರು. ಆ ಮಂದಮತಿಗಳಾದ ಅರಸುಕುಮಾರರಿಗೆ ನೀತಿಶಾಸ್ತ್ರ ಶಿಕ್ಷಣ ನೀಡಲೆಂದೇ ವಿಷ್ಣುಶರ್ಮರು ಈ ಪಂಚತಂತ್ರಗಳನ್ನುಳ್ಳ ಗ್ರಂಥವನ್ನು ರಚಿಸಿದರು.

ಪಂಚತಂತ್ರ ನೀತಿಕಥೆಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ, ನಿಜಕ್ಕೂ ಕೇವಲ ಆರು ತಿಂಗಳುಗಳಲ್ಲಿ ಅಮರಶಕ್ತಿ ರಾಜನ ಮೂವರೂ ಪುತ್ರರು ಮೂರ್ಖ, ಆಲಸಿ, ಬುದ್ಧಿ ಶೂನ್ಯರಾಗಿದ್ದವರನ್ನು ಗಮನಿಸಿ ಅವರ ಮಾನಸಿಕ ಸ್ಥಿತಿಗತಿಗಳನ್ನು ಗ್ರಹಿಸಿ, ಸುಶಿಕ್ಷಿತರನ್ನಾಗಿ ಪರಿವರ್ತನೆ ಮಾಡಿ, ಜೀವನ ಶಿಕ್ಷಣ ನೀಡಿದ ಪಂಡಿತ ವಿಷ್ಣಶರ್ಮರ ವಿಚಾರ ಕುತೂಹಲಕಾರಿಯಾಗಿದೆ. ಈ ದುರ್ವಿನೀತ ರಾಜಕುಮಾರರಿಗೆ ಏನನ್ನು ಭೋದಿಸಬೇಕು? ಯಾವಾಗ ಭೋದಿಸಬೇಕು? ಹೇಗೆ ಭೋದಿಸಬೇಕು? ಹಾಗೆಯೇ ಅವರುಗಳು ಏನನ್ನು ಕಲಿಯಬೇಕು? ಏಕೆ ಕಲಿಯಬೇಕು? ಹೇಗೆ ಕಲಿಯಬೇಕು? ಎಂಬುದನ್ನೆಲ್ಲಾ ವಿಶ್ಲೇಷಣೆಗೈದು, ಈ ಜವಾಬ್ದಾರಿ ನಿರ್ವಹಿಸುವ ದೃಢ ವಿಶ್ವಾಸಹೊಂದಿ, ವಿಶಿಷ್ಟವಾದ ಐದು ತಂತ್ರಗಳ ಮೂಲಕ ಸರಣಿ ಕಥೆಗಳನ್ನು ಅತ್ಯಾಕರ್ಷಕವಾಗಿ ಹೆಣೆದು, ಪ್ರತಿಯೊಂದು ಕಥೆಗೂ ಒಂದುರಾಜನೀತಿ ಹಾಗೂ ಜೀವನಾದರ್ಶ ನೀತಿಯನ್ನು ಲೇಪಿಸಿ, ರಾಜಪುತ್ರರ ಕುತೂಹಲನ್ನು ಕೆರಳಿಸಿ ಭೋಧಿಸಿದ ಬಗೆ, ಮೇಧಾವಿ ವಿಷ್ಣುಶರ್ಮರ ನೈಜ ಮನೋವೈಜ್ಞಾನಿಕ ಕೌಶಲ್ಯವನ್ನು, ವ್ಯಕ್ತಿತ್ವ ನಿರ್ಮಾಣ ಕಲೆಯನ್ನು ಪ್ರತಿಬಿಂಬಿಸುವುದರಲ್ಲಿ ಯಾವುದೇ ಸಂದೇಹವಿಲ್ಲ. ಇವರು ಎಂಥಹ ದೃಢ ಸಂಕಲ್ಪಮಾಡಿ ದಡ್ಡ ರಾಜಕುಮಾರರನ್ನು ರಾಜನೀತಿ ನಿಪುಣರು, ಬುದ್ಧಿವಂತರು ಮತ್ತು ನಾಯಕತ್ವ ಹೊಂದಿದವರನ್ನಾಗಿ ಪರಿವರ್ತನೆ ಮಾಡಿ ಸಾಧನೆಗೈದಿದ್ದಾರೆ! ಇದರ ಹಿಂದೆ ಎಂಥಹ ಶೈಕ್ಷಣಿಕ ಮನೋವಿಜ್ಞಾನ ಅಡಗಿದೆ! ಎಷ್ಟು ಮನೋಜ್ಞವಾಗಿ ಒಂದು ಸುಂದರ ವ್ಯಕ್ತಿತ್ವ ನಿರ್ಮಾಣ

---

**38. The panchatantra or Panchopakhyana,** ಪಂಚತಂತ್ರೋತ್ಪತ್ತಿ,ಪು-2,ಶ್ಲೋ-1, Mysore Government Branch Press,1910

ಕಲೆಯನ್ನು ಈ ಶ್ಲೋಕದಲ್ಲಿ ಬೋಧಿಸಲಾಗಿದೆ ಎಂಬುದನ್ನು ಗಮನಿಸಿದರೆ ಒಂದು ಸರ್ವತೋಮುಖ ಬೆಳವಣಿಗೆಯ ಲಕ್ಷಣಗಳನ್ನು ಸರಳವಾಗಿ ತಿಳಿಹೇಳಲಾಗಿದೆಯೆಂಬುದು ಸುಸ್ಪಷ್ಟ.

उत्साहसम्पन्नमदीर्घसूत्रं क्रियाविधिज्ञं व्यसनेष्वसक्तम् ।

शूरं कृतज्ञं दृढसौहृदं च लक्ष्मीः स्वयं मार्गति वासहेतोः ॥[39]

ಉತ್ಸಾಹಸಹಿತನೂ ವ್ಯಸನಗಳಲ್ಲಿ ಆಸಕ್ತನೂ ಆಗಿ ತಿಳಿವಳಿಕೆಯನ್ನು ಪಡೆದು ಕೆಲಸಗಳಲ್ಲಿ ಪ್ರಗಲ್ಭನಾಗಿ ಬೇಸರವಿಲ್ಲದೆ ಸ್ಥಿರಚಿತ್ತನಾಗಿ, ಚಿರಕ್ರಿಯನಲ್ಲದೆ, ಸರ್ವಭೂತಸಮನೂ, ಮಿತಸತ್ಯಭಾಷಿಯೂ, ಪುಣ್ಯಕರ್ಮಗಳ ಮೇಲೆ ಬುದ್ಧಿಯುಳ್ಳವನೂ ಆಶ್ರಿತರಕ್ಷಕನೂ, ಶೂರನೂ ಕೃತಜ್ಞನೂ ಆದ ಪುರುಷನನ್ನು ಲಕ್ಷ್ಮಿ ತನ್ನಷ್ಟಕ್ಕೆ ತಾನೇ ಹೊಂದುವಳು. ಅಂದರೆ "ಕೆಲಸ ಮಾಡದೇ ಮೈಗಳ್ಳತನವುಳ್ಳ, ಸಾಹಸವಿಲ್ಲದ ಪುರುಷನನ್ನು ಲಕ್ಷ್ಮಿ ಒಲಿಯಳು" ಎಂದು ತಿಳಿಯುವುದು. ಪಂಚತಂತ್ರದಲ್ಲಿ ಐದು ಭಾಗಗಳಲ್ಲೊಂದೊಂದೂ ನೀತಿ ಶಾಸ್ತ್ರದ ತಂತ್ರಗಳನ್ನು ನಿರೂಪಿಸುತ್ತದೆ. ಮೊದಲನೆಯ ಭಾಗವಾದ ಮಿತ್ರ ಭೇದವು ಕರಟಕ ದಮನಕ ಎಂಬ ಎರಡು ನರಿಗಳು ಗಾಢ ಮಿತ್ರರಾಗಿದ್ದ ಒಂದು ಸಿಂಹ ಮತ್ತು ವೃಷಭಗಳಿಗೆ ವೈಮನಸ್ಸನ್ನು ತಂದು ಹಾಕಿ ತಾವು ಸುಖವಾಗಿದ್ದ ಕಥೆಯ ಮೂಲಕ ಭೇದ ತಂತ್ರವನ್ನು ಪ್ರತಿಪಾದಿಸುತ್ತದೆ. ಎರಡನೆಯ ಮಿತ್ರಲಾಭವು ಒಳ್ಳೆಯ ಸ್ನೇಹದ ಫಲವನ್ನು ಆಮೆ, ಜಿಂಕೆ, ಕಾಗೆ ಮತ್ತು ಇಲಿ ಇವುಗಳ ಕಥೆಯನ್ನು ಹೇಳಿ ವಿವರಿಸುತ್ತದೆ. ಮೂರನೇ ಕಾಕೋಲುಕೀಯವು ಕಾಗೆ ಮತ್ತು ಗೂಬೆ ಕಥೆಗಳ ಮೂಲಕ ನಮ್ಮ ಶತ್ರುಗಳಾದವರ ಸ್ನೇಹಬಂಧನದ ಅಪಾಯವನ್ನು ತಿಳಿಸುತ್ತದೆ. ನಾಲ್ಕನೇ ಲಬ್ಧಪ್ರಣಾಶವು ಕಪಿ ಮತ್ತು ಮೊಸಳೆಯ ಕಥೆಯಮೂಲಕ ನಮ್ಮ ಲೋಪದೋಷಗಳಿಂದ ನಾವು ನಮ್ಮಲ್ಲಿದ್ದುದನ್ನು ಹೇಗೆ ಕಳೆದುಕೊಳ್ಳಬೇಕಾಗುತ್ತದೆಂದು. ಐದನೆಯ ಅಪರೀಕ್ಷಿತ ಕಾರಕವು ಎಲ್ಲಾ ಪೂರ್ವಾಪರ ವಿಚಾರಗಳನ್ನು ಕೂಲಂಕಷವಾಗಿ ಪರಿಶೀಲಿಸದೆ ಯಾವ ಕೆಲಸವನ್ನೇ ಆಗಲಿ ದುಡುಕಿ ಮಾಡಿದರೆ ಉಂಟಾಗುವ ಕಷ್ಟನಷ್ಟಗಳನ್ನು ಅನೇಕ ಕಥೆಗಳ ಮೂಲಕ ಪ್ರತಿಪಾದಿಸಿ ತೋರಿಸುತ್ತದೆ. ಇದು ನಿಜಕ್ಕೂ ಮನೋರಂಜಕವೂ ಬದುಕಿನ ನೀತಿ ಶಿಕ್ಷಣ ಮಾರ್ಗದರ್ಶಿಯೂ ಆಗಿದೆ. ಮಾನವನ ಉತ್ತಮವಾದ ಮತ್ತು ಸಾರ್ಥಕವಾದ ಇಹಪರಗಳ ಹೊಂದಾಣಿಕೆಯಿಂದ ಕೂಡಿದ ಸುಖೀ ಜೀವನದ ಬದುಕು ಬಾಳುಗಳ ಕೈದೀವಿಗೆಯಾಗಿ ಅರ್ಥಶಾಸ್ತ್ರವೆಂಬ ಒಂದು ಉತ್ತಮ ಗ್ರಂಥರತ್ನವನ್ನು ಕೌಟಿಲ್ಯನು ರಚಿಸಿರುವುದು ಸರ್ವವೇದ್ಯವಾದ ವಿಷಯವಾಗಿದೆ. ಅದು ರಾಜ್ಯಶಾಸ್ತ್ರವೂ ಹೌದು. ಹಾಗೆಯೆ ಪ್ರತಿ

---

39. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತ ಪಂಚತಂತ್ರ, ಮಿತ್ರಸಂಪ್ರಾಪ್ತಿ-ಶ್ಲೋ-126ಪು-387, ಚೌಕಾಂಬ ಕೃಷ್ಣದಾಸ್ ಅಕಾಡೆಮಿ, PB.no:1118, Oriental Publishers, K37/118 Gopalmandir Lane, Varanasi-221001(INDIA)1993.

ಮಾನವನೂ ತನ್ನ ಅಮೂಲ್ಯವಾದ ಜೀವನವನ್ನು ಉತ್ತಮಪಡಿಸಿಕೊಳ್ಳುವ ಮತ್ತು ಹೆಜ್ಜೆ ಹೆಜ್ಜೆಗೂ ನಮ್ಮನ್ನು ಎಚ್ಚರಗೊಳಿಸಿ ಶಿಕ್ಷಣ ಕೊಟ್ಟು ಕಾಪಾಡುವ ಉತ್ತಮ ಸಂಗಾತಿಯೂ ಹೌದು ಎಂದರೆ ಅತಿಶಯೋಕ್ತಿಯೇನಲ್ಲ. ಇದರ ಆಧಾರದಲ್ಲಿಯೇ ಈ ಪಂಚತಂತ್ರವೂ ಉದಯವಾಗಿದೆ.

ಸಾಹಿತ್ಯದ ಪ್ರಯೋಜನಗಳನ್ನು ಹೇಳುವಾಗ ಭಾರತೀಯ ವಿಚಾರವಂತರ ಅಭಿಪ್ರಾಯವು ಹೀಗಿದೆ. "ಜನಸಾಮಾನ್ಯರಿಗೆ ಆಕರ್ಷಕ ರೀತಿಯಲ್ಲಿ ನೀತಿಯನ್ನು ಬೋಧಿಸುವುದೂ ಒಂದೆಂದು. ಮಮ್ಮಟನು ತನ್ನ 'ಕಾವ್ಯ ಪ್ರಕಾಶ' ದಲ್ಲಿ ಸಾಹಿತ್ಯದ ಆರು ಪ್ರಯೋಜನಗಳನ್ನು ಉಲ್ಲೇಖಿಸಿರುತ್ತಾನೆ.

काव्यं यशसेर्थकृते व्यवहारविदे शिवेतरक्षतये ।

सद्यः परनिर्वृत्तये कान्तासम्मिततयोपदेशयुजे ॥[40]

ಅಂದರೆ ಕೀರ್ತಿ, ಹಣ, ಲೌಕಿಕ ವ್ಯವಹಾರಜ್ಞಾನ, ಸಂಕಟನಿವಾರಣೆ, ತತ್ಕ್ಷಣ ಪರಮಾನಂದದ ಅನುಭವ ಮತ್ತು ಇನಿಯಳಂತೆ ಮಧುರವಾಗಿ ಉಪದೇಶ ಪ್ರದಾನ ಇವು ಆರು ಕಾವ್ಯ(ಸಾಹಿತ್ಯ) ದ ಪ್ರಯೋಜನಗಳು. ಯಾವುದಾದರೂ ಒಂದು ವಿಚಾರ ಅಥವಾ ಮಾತನ್ನು ಮೂರು ವಿಧವಾಗಿ ಹೇಳಬಹುದು. ಅವುಗಳೆಂದರೆ, ಪ್ರಭುಸಮ್ಮಿತ – ಒಡೆಯನಂತೆ ಅಪ್ಪಣೆ ಮಾಡುವುದು, ಮಿತ್ರಸಮ್ಮಿತ– ಗೆಳೆಯನಂತೆ ಒಳಿತು–ಕೆಡಕುಗಳನ್ನು ತೋರಿಸುವುದು, ಕಾಂತಾಸಮ್ಮಿತ–ಪ್ರೀತಿಯ ಹೆಂಡತಿಯಂತೆ ಮೊದಲು ಮನಸ್ಸನ್ನು ಆಕರ್ಷಿಸಿಕೊಂಡು ಅನಂತರ ಹೇಳಬೇಕಾದ ವಿಷಯವನ್ನು ಸೂಚಿಸುವುದು. ಸಾಹಿತ್ಯವು ನೀತಿಯನ್ನು ಬೋಧಿಸುವಲ್ಲಿ ಕಾಂತಾಸಮ್ಮಿತದ ಹಾದಿಯನ್ನು ಅವಲಂಬಿಸುತ್ತದೆ. ಅದು ರಸದ ಮೂಲಕ ಓದುಗರ ಮನಸ್ಸು ಹೃದಯಗಳನ್ನು ತನ್ನೆಡೆಗೆ ಆಕರ್ಷಿಸಿಕೊಂಡು ಅನಂತರ ಬೇಕು– ಬೇಡಗಳನ್ನು ಸೂಚಿಸುತ್ತದೆ. ಇನ್ನೂ ಒಂದು ವಿಶೇಷವೆಂದರೆ, ಪ್ರತಿಭಾನ್ವಿತ ಬೋಧಕರು ಮನಸೆಳೆಯುವ ಕಥೆಗಳನ್ನು ಹೇಳುತ್ತ ಹೋಗುತ್ತಾರೆ. ಕಥೆಗಳನ್ನು ಓದುವ ಅಥವಾ ಕೇಳುವ ಲವಲವಿಕೆಯಿಂದ ಅವನ್ನು ಓದತೊಡಗಿದಂತೆ ಅಥವಾ ಕೇಳತೊಡಗಿದಂತೆ ಅವುಗಳಲ್ಲಿ ಅಡಕವಾದ ನೀತಿಯ ಮಾತುಗಳು ಓದುಗನ ಅಥವಾ ಕೇಳುಗನ ಮನಸ್ಸಿನ ಮೇಲೆ ಅವನರಿವಿಲ್ಲದಂತೆ ಮೂಡುತ್ತವೆ. ನೀತಿಯ ಮಾತುಗಳನ್ನು ಹೇಳುವ ಸದುದ್ದೇಶದಿಂದಲೇ ರಚಿತವಾದ ಸಾಹಿತ್ಯಕ್ಕೆ "ನೀತಿಬೋಧಕ ಸಾಹಿತ್ಯ ಹಾಗೂ ಈ ಮಾದರಿಯಲ್ಲಿ ನೀತಿಯನ್ನು ಬೋಧಿಸುವ ಕಥಾಸಾಹಿತ್ಯಕ್ಕೆ ನೀತಿಬೋಧಕ ಕಥೆಗಳು ಎಂಬ ಹೆಸರಿದೆ. ಕಥೆಗಳಲ್ಲಿ ಪ್ರಾಣಿಗಳು ಮಹತ್ವದ

40. ಮಮ್ಮಟನ ಕಾವ್ಯಪ್ರಕಾಶ –1–2.

ಪಾತ್ರವನ್ನು ವಹಿಸಿ, ಮಾನವರಂತೆಯೇ ವರ್ತಿಸುವುದರಿಂದ "ಪ್ರಾಣಿಕಥೆಗಳು" ಎಂದು ಕರೆಯುತ್ತಾರೆ. ಸಂಸ್ಕೃತ ಸಾಹಿತ್ಯದಲ್ಲಿ, ಅದರಲ್ಲೂ ಸಂಸ್ಕೃತ ನೀತಿಬೋಧಕ ಪ್ರಾಣಿಕಥೆಗಳಲ್ಲಿ "ಪಂಚತಂತ್ರ" ಮತ್ತು "ಹಿತೋಪದೇಶ" ಎಂಬೀ ಎರಡು ಗ್ರಂಥಗಳು ಬಹಳ ಜನಪ್ರಿಯವಾಗಿವೆ. ಈ ಕಥೆಗಳನ್ನು ಮೂಲದಲ್ಲಿ ಅರಸುಕುವರರಿಗೆ ಹೇಳರುವುದರಿಂದ ಇವುಗಳಲ್ಲಿ ಅರಸನು ಹೇಗೆ ಆಳ್ವಿಕೆ ನಡೆಸಬೇಕೆಂಬುದರ ವಿವರಗಳವೆ ಆದುದರಿಂದ ಇವುಗಳನ್ನು "ನೀತಿಶಾಸ್ತ್ರ" ಎಂದರೆ "ರಾಜನೀತಿಯನ್ನು ಬೋಧಿಸುವ ಶಾಸ್ತ್ರ"ವೆಂದೂ ಕರೆಯುತ್ತಾರೆ. ಒಂದು ಸೂಕ್ತಿಯಲ್ಲಿ ದೂತನ ಲಕ್ಷಣವನ್ನು ಎಷ್ಟು ಸೊಗಸಾಗಿ ತಿಳಹೇಳಲಾಗಿದೆಯೆಂಬುದು ಹೀಗಿದೆ–

साकारो निःस्पृहो वाग्मी नानाशास्त्रविचक्षणः ।
परचित्तावगन्ता च राज्ञो दूतः स इष्यते ॥[41]

ಒಳ್ಳೆಯ ರೂಪವಂತನೂ, ನಿಃಸ್ಪೃಹನೂ, ವಾಗ್ಮಿಯೂ, ಅನೇಕಶಾಸ್ತ್ರಗಳಲ್ಲಿ ಪರಿಣಿತನೂ, ಮತ್ತೊಬ್ಬರ ಮನಸ್ಸನ್ನು ಅರಿಯ ಬಲ್ಲವನೂ ಆದಂತಹ ದೂತನನ್ನು ರಾಜನು ಬಯಸುತ್ತಾನೆ.

ಒಂದು ಉತ್ತಮವಾದ ಅಭಿರುಚಿಯನ್ನು ಹುಟ್ಟಿಸಬೇಕಾದರೆ, ಸೃಷ್ಟಿಸಹಜವಾದ ಮತ್ತು ಪ್ರಕೃತಿಸಿದ್ಧವಾದ, ಮನೋಬುದ್ಧೀಂದ್ರಿಯಗಳ ಧರ್ಮಗಳನ್ನೂ, ಅವುಗಳ ಅನಿವಾರ್ಯತೆಯನ್ನೂ, ಸದಸತ್ಪರಿಣಾಮಗಳನ್ನೂ, ವ್ಯವಹಾರಿಕವಾಗಿಯೂ, ಕಾರ್ಯಕಾರಣಬದ್ಧವಾಗಿಯೂ ತಿಳಸಬೇಕಾಗಿದೆ. ನಂತರದ ಮುಂದಿನ ಕಾಲದಲ್ಲಿ ವಿಶೇಷವಾಗಿ ಬೆಳೆಯುವ ಮಕ್ಕಳ ನವೋನವವಾದ ಧೀಪಟಲದಲ್ಲಿ ಈ ಅಂಶಗಳನ್ನು ತಿಳಯಪಡಿಸಿ ನಂಬುವ ರೀತಿಯಲ್ಲಿ ಚಿತ್ರಿಸಿದಾಗ ಮಾತ್ರ, ಅವುಗಳು ಸತ್ಪರಿಣಾಮಕಾರಿಯಾಗಿ ಮುಂದಿನ ಹೆಜ್ಜೆಯಲ್ಲಿ ವಿವೇಕಯುತವೂ, ಕಾರ್ಯಕಾರಣಬದ್ಧವೂ, ಸ್ವಪರಹಿತವೂ, ಸಾಮಾಜಿಕವೂ ಆದ ರೀತಿಯಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದಮಾತ್ಸರ್ಯಗಳ ವಿಷಪೂರಿತ ವಾತಾವರಣದಿಂದ ಹೊರಬರಲು ಸಾಧ್ಯ. ಹೀಗೆ ನಿರ್ಮಲವಾದ ಆಸ್ತಿಕರು ಪರಿಪೂರ್ಣವಾದ ಮನೋಧರ್ಮದೊಂದಿಗೆ ಉತ್ತಮ ಜೀವನವನ್ನು, ನಡೆಸಲು ಸಾದ್ಯವೆಂಬುದನ್ನು ಈ ವಿಷ್ಣುಶರ್ಮನೆಂಬ ಮಹಾಮೇಧಾವಿ, ನೀತಿಶಾಸ್ತ್ರಜ್ಞ, ಮನೋವಿಜ್ಞಾನಿ ಪಂಡಿತನೊಬ್ಬನು ಕಂಡುಕೊಂಡನು. ಹೀಗಾಗಿ ಆ ವಿಷ್ಣುಶರ್ಮನು ಈ ಭಾರತೀಯ ಅರ್ಥಶಾಸ್ತ್ರದ ಸಾರಸರ್ವಸ್ವವನ್ನೂ ಎಳೆಯರಾದ ನಮ್ಮ ಮಕ್ಕಳ ಮನೋಧರ್ಮ ಮತ್ತು ಬುದ್ಧಿಶಕ್ತಿಯ

41. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತ ಪಂಚತಂತ್ರ,ಕಾಕೋಲೂಕೀಯ–ಶ್ಲೋ–87,ಪು–480, ಚೌಕಾಂಬ ಕೃಷ್ಣದಾಸ್ ಅಕಾಡೆಮಿ, PB.no:118, Oriental Publishers, K37/118 Gopalmandir Lane, Varanasi-221001(INDIA)1993.

ಬೆಳವಣಿಗೆಗಳ ಮಟ್ಟದಲ್ಲಿ ರಂಜಕವಾಗಿಯೂ, ಕುತೂಹಲಕಾರಿಯಾಗಿಯೂ ಕಥಾರೂಪದಲ್ಲಿ ಚಿತ್ರಿಸಿದ ಒಂದು ಅದ್ಭುತವಾದ ಗ್ರಂಥರತ್ನವೇ ಈ ಪಂಚತಂತ್ರವಾಗಿದೆ.[42] ಪಂಚತಂತ್ರದ ವಿಶಿಷ್ಟತೆಯೆಂದರೆ,

पात्रविशेषे न्यस्तं गुणान्तरं व्रजति शिल्पमाधातुः ।
जलमिव समुद्रशुक्तौ मुक्ताफलतां पयोदस्य ॥[43]

ಅಂದರೆ, ಯೋಗ್ಯತೆಯನ್ನರಿತು ಗುರುವು ಕಲಿಸಿದ ವಿದ್ಯೆಯು ಬಹು ಉನ್ನತ ಮಟ್ಟವನ್ನೇರುತ್ತದೆ. ಮೋಡವು ಸುರಿದ ನೀರು ಕಡಲಿನ ಮುತ್ತಿನ ಚಿಪ್ಪಿನಲ್ಲಿ ಬಿದ್ದರೆ ಒಳ್ಳೆಯ ಮುತ್ತಾಗುತ್ತದೆ. ಹೀಗೆಯೇ ಬಹಳ ಮೇಧಾವಿ ಗುರುಗಳಾದ ಪಂಡಿತ ವಿಷ್ಣುಶರ್ಮರು ಅಮರಶಕ್ತಿ ರಾಜನ ಪುತ್ರರಿಗೆ ದೊರೆತು ಬಹಳ ಲಾಭವಾಯಿತು. ಅವರು ತಮ್ಮ ನೈಜ ಮನೋವೈಜ್ಞಾನಿಕ ಜ್ಞಾನದಿಂದ ಈ ಅರಸುಕುಮಾರರ ಯೋಗ್ಯತೆಯನ್ನು ಪರೀಕ್ಷಿಸಿ ಅವರಿಗೆ ಯಾವುದು ಸೂಕ್ತವಾಗಿದೆಯೋ, ಅಂತಹ ವಿದ್ಯೆಯನ್ನು ಉತ್ತಮ ಸನ್ನಿವೇಶಗಳನ್ನು ಆಕರ್ಷಕ ಕಥೆಗಳ ಮೂಲಕ ಸೊಗಸಾಗಿ ಕಲಿಸಿರುವ ರೀತಿ, ಕ್ರಮ, ಬೋಧನಾ ಕೌಶಲ್ಯ ಬಹಳ ಆದರ್ಶಪ್ರಾಯವಾಗಿದೆ.

ಈ ಬಗ್ಗೆ ಏಕೆ ಒಂದು ವಿಶೇಷ ಅಧ್ಯಯನವನ್ನು ನಡೆಸಬಾರದೆಂಬ ಆಲೋಚನೆ ನನ್ನ ಮನಸ್ಸಿನಲ್ಲಿ ಮೂಡಿತು. ಇದರಿಂದ ಭೋದನಾವೃತ್ತಿಯಲ್ಲಿ ಹಾಗೂ ವ್ಯಕ್ತಿವಿಕಸನ ಕ್ಷೇತ್ರದಲ್ಲಿ ಪರಿಶ್ರಮಿಸುವ ಅನೇಕರಿಗೆ ಉಪಯುಕ್ತವಾದೀತೆಂಬ ಬಾವನೆ ಗೋಚರಿಸಿತು. "ದಡ್ಡ ಮಕ್ಕಳಿಗೆ ಶಿಕ್ಷಣ ನೀಡುವುದರ ಬಗ್ಗೆ, ಅವರ ಆಸಕ್ತಿಯನ್ನು ಹಿಡಿದಿಟ್ಟು ಕಲಿಯಲು ಹೇಗೆ ಪ್ರೀತಿಯನ್ನುಂಟುಮಾಡಬಹುದು" ಈ ಬಗ್ಗೆ ಅನೇಕ ಶಿಕ್ಷಕರಿಗೆ ಮಾದರಿಯಾಗಿ ಉಪಯುಕ್ತವಾಗಬಹುದು. ಗಿಡಮರಗಳು, ಪಶುಪಕ್ಷಿಗಳು ಮನುಷ್ಯರಂತೆ ವರ್ತಿಸಿ ಮಾತನಾಡುವಂತೆ ಕುತೂಹಲಕರ ಪ್ರಸಂಗಗಳನ್ನು ಸೃಷ್ಟಿಮಾಡಿ ವರ್ತನೆಯ ಪರಿವರ್ತನೆಯನ್ನು ಜೀವಂತಿಕೆಗೊಳಿಸಬಹುದು ಎಂಬ ಶೈಕ್ಷಣಿಕ ಸನ್ನಿವೇಶಗಳನ್ನು ಪಂಚತಂತ್ರ ಕಥೆಗಳಲ್ಲಿ ಆಕರ್ಷಕವಾಗಿ ನಿರೂಪಿಸಿದ್ದಾರೆ. ಪಂಡಿತ ವಿಷ್ಣುಶರ್ಮರು.

ಈ ದಿಸೆಯಲ್ಲಿ ಪಂಚತಂತ್ರದ ಒಂದು ಸಮಗ್ರ ಅಧ್ಯಯನ ನಡೆಸಿ, ಅದರಲ್ಲಿ ಅಡಕವಾಗಿರುವ ಭೋದನಾ ವಿಧಾನದಗುಟ್ಟು, ಶೈಕ್ಷಣಿಕಮನೋವಿಜ್ಞಾನದ ಅವಲೋಕನ, ಜನರನಡವಳಿಕೆ, ಸ್ವಭಾವ, ಮನಸ್ಥಿತಿ, ಕಾರ್ಯಸಾಧನೆಯ ನೈಪುಣ್ಯ, ಜೀವನಶಿಕ್ಷಣ, ತಾತ್ವಿಕ ವ್ಯಕ್ತಿತ್ವನಿರ್ಮಾಣ, ನೀತಿಕುಶಲತೆ, ಸಾಮಾನ್ಯ ಜ್ಞಾನ

---

42. **"ಪಂಚತಂತ್ರ"**, 1chapter, ಮಿತ್ರಭೇದ(kan translation with original Sanskrit prose and verse) by Venkatanathacharya and Shivakumaraswamy. M, P

43. **ಸುಭಾಷಿತಮಂಜರೀ,** ಸದ್ಗುಣ–ದುರ್ಗುಣ–ಶ್ಲೋ–196, ಪು–171,(2001) ಕ.ಸಾ.ಪ, ಚಾಮರಾಜಪೇಟೆ, ಬೆಂಗಳೂರು–18, ಮಾಳವಿಕಾಗ್ನಿಮಿತ್ರ, 1–6.

ಇತ್ಯಾದಿಗಳನ್ನು ಕುರಿತು ಒಂದು ಮಹಾ ಪ್ರಬಂಧವನ್ನು ರಚಿಸಲು ಆಸಕ್ತಿ ಉಂಟಾಯಿತು. ಹೀಗೆ ವಿಷಯ ಪ್ರವೇಶ ಮಾಡಲಾಗಿದೆ.

ಶಿಕ್ಷಣದ ಉದ್ದೇಶ ಮತ್ತು ಗುರಿ ವ್ಯಕ್ತಿಯ ಸರ್ವಾಂಗೀಣ ವಿಕಾಸವನ್ನು ಗೈಯುವುದಾಗಿದೆ. ಮಹಾತ್ಮ ಗಾಂಧೀಜಿಯವರು ಶಿಕ್ಷಣದ ಬಗ್ಗೆ ಒಂದು ಸುಂದರವಾದ ವ್ಯಾಖ್ಯಾನ ನೀಡಿದ್ದಾರೆ. "An all-round drawing out of the best in Child and Man-Body, Mind and Spirit. All round development- Physical- Mental-Intellectual- Aesthetic-Moral and Spiritual" ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗಾಗಿ ಎಲ್ಲ ರೀತಿಯ ಮಾರ್ಗದರ್ಶನ ನೀಡುವುದೇ "ಶಿಕ್ಷಣ"ದ ಮೂಲ ಗುರಿಯಾಗಿರುತ್ತದೆ. ಹಾಗೆಯೇ ಸುಸಂಸ್ಕೃತ ಸಮಾಜವನ್ನು ನಿರ್ಮಿಸುವುದು. ಶಿಕ್ಷಣವು ಕಲಿಯುವಿಕೆಯನ್ನು ಕುರಿತದ್ದಾಗಿದೆ. ಕಲಿಯುವ ವ್ಯಕ್ತಿ, ವಿಧಾನ ಮತ್ತು ಕಲಿಯಲು ಬೇಕಾಗುವ ಸನ್ನಿವೇಶಗಳು ಶಿಕ್ಷಣ ಕ್ಷೇತ್ರದ ಆಧಾರ ಸ್ತಂಭಗಳು. ಈ ಎಲ್ಲವುಗಳನ್ನು ಶೋಧಿಸಿ, ವಿಶ್ಲೇಷಿಸಿ ವಿವರಿಸುವ ಕೆಲಸ ಮನೋವಿಜ್ಞಾನದ್ದಾಗಿದೆ. ಮಕ್ಕಳಲ್ಲಿ ಜನ್ಮತಃ ಹಲವು ಗುಣಧರ್ಮಗಳು ಅಡಗಿದ್ದರೂ ಅವು ಕಾರ್ಯರೂಪಕ್ಕೆ ಬರುವುದು ಸನ್ನಿವೇಶದ ಪ್ರಭಾವದಿಂದ. ಈ ಕ್ರಿಯಾಪ್ರತಿಕ್ರಿಯೆಗಳ ಸ್ವರೂಪವೇ ಮಕ್ಕಳು ಸನ್ನಿವೇಶಗಳೊಡನೆ ವರ್ತಿಸುವ ರೀತಿ.

ಈ ವ್ಯವಸ್ಥೆಯನ್ನು ಹುಟ್ಟು ಶಿಕ್ಷಕನೋಪಾದಿಯ ಮಹಾ ಮೇಧಾವಿ ವಿಷ್ಣುಶರ್ಮರು ಬದುಕಿನ ನೀತಿರತ್ನ "ಪಂಚತಂತ್ರ"ದಲ್ಲಿ ಉತ್ತಮ ಕಲಿಕಾ ಸನ್ನಿವೇಶಗಳನ್ನು ಆಕರ್ಷಕ ಕಥೆಗಳ ಮೂಲಕ ಕಲ್ಪಿಸಿ, ಮೂರ್ಖ ರಾಜಕುಮಾರರನ್ನು ಸುಶಿಕ್ಷಿತರನ್ನೂ, ನೀತಿಶಾಸ್ತ್ರ ನಿಪುಣರನ್ನೂ, ಬದುಕಿನ ವ್ಯವಹಾರ ಕುಶಲರನ್ನಾಗಿ ಪರಿವರ್ತಿಸಿದರು.



# ಅಧ್ಯಾಯ – 1

## ಸಂಸ್ಕೃತ ಕಥಾ ಸಾಹಿತ್ಯ – ನೀತಿಕಾವ್ಯಗಳು – ನೀತಿ ಕಥೆಗಳು

ಅಧ್ಯಾಯ –1–1. ಸಂಸ್ಕೃತ ಕಥಾ ಸಾಹಿತ್ಯದ– ಪ್ರಾಚೀನತೆ ಮತ್ತು ವೈಶಿಷ್ಟ್ಯ

ಅಧ್ಯಾಯ –1–2. ಸಂಸ್ಕೃತಸಾಹಿತ್ಯದಲ್ಲಿ ನೀತಿ ಕಾವ್ಯಗಳು– ಇದರ ಉದ್ಭವ ಮತ್ತು ವಿಕಾಸ

ಅಧ್ಯಾಯ –1–3. ನೀತಿ ಬೋಧಕ ಕಥಾ ಸಾಹಿತ್ಯ –

ಪಂಚತಂತ್ರ ನೀತಿ ಕಥೆಗಳು –

ಇದರ ವಿಶಿಷ್ಟ ಲಕ್ಷಣಗಳು

ಅಧ್ಯಾಯ –1–4. ಇದರ ಕಾಲ–ಕರ್ತೃ–ದೇಶ–ವಿಚಾರ.

ಅಧ್ಯಾಯ –1–5. ಪಂಚತಂತ್ರದ ವಿಶ್ವವ್ಯಾಪಿ ಪ್ರಭಾವ.

**ಅಧ್ಯಾಯ–1–1. ಸಂಸ್ಕೃತ–ಕಥಾಸಾಹಿತ್ಯ– ಇದರ ಪ್ರಾಚೀನತೆ ಮತ್ತು ವೈಶಿಷ್ಟ್ಯ:–**

ಭರತವರ್ಷದಲ್ಲಿ ಅನಾದಿಕಾಲದಿಂದಲೂ ನಮ್ಮ ಧಾರ್ಮಿಕ ಮನೋವ್ಯಾಪಾರವೇ ಅಲ್ಲದೆ ಲೌಕಿಕದಲ್ಲಿಯೂ ಬಹಳ ಹೆಚ್ಚಾಗಿ ಉಪಯೋಗವಾಗುತ್ತಿದ್ದ ಭಾಷೆಯೇ ಸಂಸ್ಕೃತ. ಈ ಭಾಷೆಯಲ್ಲಿಯೇ ನಮ್ಮ ಸಮಸ್ತ ಐತಿಹಾಸಿಕ, ಧಾರ್ಮಿಕ, ರಾಜನೀತಿ, ಸಾಹಿತ್ಯ ಹಾಗೂ ಸಾಂಸ್ಕೃತಿಕ ಜೀವನ ಅಭಿವ್ಯಕ್ತವಾಗುತ್ತಿತ್ತು. ಸಂಸ್ಕೃತ ಭಾಷೆಯು ಭಾರತದ ಪ್ರಾಚೀನ ಸಾಹಿತ್ಯ ಮತ್ತು ವಿಜ್ಞಾನದ ಆಕರವಾಗಿದ್ದು, ವೇದ, ಉಪನಿಷತ್ತು, ಭಗವದ್ಗೀತೆ ಮತ್ತು ವೈದಿಕ ಸಾಹಿತ್ಯದ ಚರಿತ್ರೆಯನ್ನೊಳಗೊಂಡಿರುತ್ತದೆ. ಇದು ಸಂಸ್ಕೃತ ಭಾಷೆಯ ಪ್ರಾಚೀನತೆಗೆ ಒಂದು ದ್ಯೋತಕವಾಗಿದೆ. ಇದರ ಪ್ರಾಚೀನ ಹೆಸರು **ದೇವಭಾಷೆ** ಅಥವಾ **ದೇವವಾಣಿ** ಎಂಬುದಾಗಿತ್ತು. ಕಾವ್ಯ ಮಿಮಾಂಸೆಯನ್ನು ರಚಿಸಿದ ರಾಜಶೇಖರನು ಸಂಸ್ಕೃತ ಭಾಷೆಯನ್ನು ಪಂಚಮವೇದ ಎಂದು ಸೂಚಿಸುತ್ತಾ ಹೀಗೆ ಹೇಳಿದ್ದಾನೆ.

पञ्चमीसाहित्य विद्यातियाया वरीयः।

सा हि चतुसृणां विद्यानामपि निष्पन्दः॥[1]

ಸಾಹಿತ್ಯ ವಿದ್ಯೆಯನ್ನು ಪಂಚಮವೇದ ಎಂದು ಸೂಚಿಸುತ್ತಾ, ಅನ್ವೀಕ್ಷಿಕೀ, ತ್ರಯೀ ಅರ್ಥಾತ್ ಧರ್ಮಶಾಸ್ತ್ರ, ವಾರ್ತಾ ತಥಾ ದಂಡನೀತಿ ಈ ನಾಲ್ಕು ವಿದ್ಯೆಗಳ ಜೊತೆ ಐದನೆಯದು ಸಾಹಿತ್ಯ ವಿದ್ಯೆ ಎಂದಿದ್ದಾನೆ. ಇದು ಬಹಳ ಉಪಯುಕ್ತವಾಗಿದ್ದು, ನಾಲ್ಕೂ ವಿದ್ಯೆಗಳ ಸಾರತತ್ವವೇ ಆಗಿರುತ್ತದೆ. ಆದರೆ ಕಾವ್ಯ ಮಿಮಾಂಸಕಾರರು ಅತ್ಯಂತ ಸೂಕ್ಷ್ಮ ಗ್ರಹಿಕೆಯಿಂದ ಹೇಳುವುದೇನೆಂದರೆ, "ಸಾಹಿತ್ಯ"ಎಂಬ ಶಬ್ದದ ಅರ್ಥವು ಕೇವಲ ನಾಟಕ ಕಾವ್ಯಾದಿ ಕೆಲವು ವಿಷಯಗಳ ಬೋಧನೆಯಿರುವುದನ್ನು ಮಾತ್ರವಲ್ಲ ಹಾಗೆಯೇ ಶಬ್ದಾರ್ಥ ಸಹಿತ ಭಾವವನ್ನೂ ಸಾಹಿತ್ಯ ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಅದನ್ನೇ ಕುಂತಕ सहितयोर्भावः[2] ಎಂದಿದ್ದಾನೆ.

ಸಂಸ್ಕೃತಸಾಹಿತ್ಯದಲ್ಲಿ ಎರಡು ಬಗೆ – ವೈದಿಕ – ಲೌಕಿಕ ಎಂದು. ವೈದಿಕಸಾಹಿತ್ಯದಲ್ಲಿ – ಋಗ್ವೇದ – ಯಜುರ್ವೇದ – ಸಾಮವೇದ, ಅಥರ್ವಣ ವೇದ ಎಂದು ಪ್ರಮುಖವಾಗಿ ನಾಲ್ಕು ವೇದಗಳು. ಒಂದೊಂದು ವೇದವೂ – ಸಂಹಿತೆ – ಬ್ರಾಹ್ಮಣ – ಅರಣ್ಯಕ ಎಂದು ಮೂರು ಭಾಗಗಳಿವೆ. ಎಷ್ಟು ವೇದಶಾಖೆಗಳಿವೆಯೋ ಅಷ್ಟು ಬ್ರಾಹ್ಮಣ. ಅರಣ್ಯಕ ಗ್ರಂಥಗಳು. ಅದೇ ರೀತಿ ಹಲವಾರು ಉಪನಿಷತ್ತಗಳು – ಅವುಗಳನ್ನರಿಯಲು

1. **ರಾಜಶೇಖರ,** ಕಾವ್ಯಮೀಮಾಂಸೆಯ ಶ್ಲೋ – द्वितियोध्यायः – शास्त्रनिर्देशः

2. कुन्तकस्य व.जी, 1–17 ನೇ ಕಾರಿಕೆ ವೃತ್ತಿಭಾಗ –177

ಭಾಷ್ಯಗಳು. ದ್ವೈತಾದ್ವೈತಾದಿ ಮತಕ್ಕನುಗುಣ ಹಲವು ವಿಧದ ಭಾಷ್ಯಗಳು. ವೇದಾರ್ಥವನ್ನರಿಯಲು – ನಿರುಕ್ತ – ನಿಘಂಟು, ಪ್ರಾತಿಶಾಖ್ಯ ಮುಂತಾದ ಗ್ರಂಥಗಳು. ಉಪಾಸನಾ ವಿವೇಚನೆಗಾಗಿ ಆಗಮತಂತ್ರಶಾಸ್ತ್ರ ಗ್ರಂಥಗಳಿವೆ. ವೇದಪರಂಪರೆಯ ರಕ್ಷಣೆಗಾಗಿ – ಪದ – ಕ್ರಮ – ಘನ, ಜಟೆ ಮುಂತಾದ ಪಾಠಗಳಿವೆ.

शिक्षा व्याकरणं छन्दोनिरुक्तं ज्यौतिषं तथा।

कल्पश्चेति षडङ्गानि वेदस्याहुर्मनीषिणः॥[3]

ಎಂಬ ಶ್ಲೋಕವು ತಿಳಿಸುವಂತ ಶಿಕ್ಷಾ – ವ್ಯಾಕರಣ – ಛಂದಸ್ಸು – ನಿರುಕ್ತ – ಜ್ಯೋತಿಷ ಹಾಗೂ ಕಲ್ಪಗಳೆಂದು ಆರು ವೇದಾಂಗಗಳಿವೆ. ಎಲ್ಲ ವೇದಗಳಿಗೂ ಭಾಷ್ಯಗಳನ್ನರಿಯಲು ವ್ಯಾಖ್ಯಾನ ಗ್ರಂಥಗಳಿವೆ. ಇವನ್ನೆಲ್ಲ ತಿಳಿಯಬೇಕಾದರೆ ಮಾನವನು ಅನೇಕ ಜನ್ಮಗಳಲ್ಲಿ ಅವಿರತ ಪ್ರಯತ್ನ ಮಾಡಬೇಕಾಗುತ್ತದೆ. ಲೌಕಿಕ ಸಂಸ್ಕೃತ ಸಾಹಿತ್ಯದ ಕಡೆಗೆ ಗಮನ ಹರಿಸಿದರೆ, ಪುರಾಣ, ಇತಿಹಾಸ, ಕಾವ್ಯ, ಶಾಸ್ತ್ರ ಮುಂತಾಗಿ ಸಾಹಿತ್ಯವು ಹಲವು ವಿಧ. ಆಯುರ್ವೇದವೇ ಮೊದಲಾದ ಉಪವೇದಗಳೂ ಇಲ್ಲಿವೆ. ಪುರಾಣಗಳು ಉಪ ಪುರಾಣಗಳು ಹಲವಾರು. ಪ್ರತಿಯೊಂದು ಪುರಾಣವೂ ಹತ್ತಿಪ್ಪತ್ತು ಸಾವಿರ ಶ್ಲೋಕಗಳುಳ್ಳದ್ದು. ಸರಳ ಶೈಲಿಯಲ್ಲಿ ಕಥಾನಿರೂಪಣೆಯೂ ಇವುಗಳ ವೈಶಿಷ್ಟ್ಯ. ಇತಿಹಾಸಗಳಾದ **ರಾಮಾಯಣ, ಮಹಾಭಾರತ**ಗಳು ಬಹಳ ಜನಪ್ರಿಯ. ಜನಸಾಮಾನ್ಯರಿಗೆಲ್ಲಾ ಆದರಣೀಯವಾಗಿದೆ. "कवेः कर्मकाव्यम्" – ಕವಿಯು ರಚಿಸಿದುದು ಕಾವ್ಯ. ಇಂತಹ ರಚನೆ ಶ್ರವ್ಯವಾಗಿರಬಹುದು, ದೃಶ್ಯವಾಗಿರಲೂ ಬಹುದು. ದೃಶ್ಯ ಕಾವ್ಯಗಳು ನಾಟಕಾದಿ ರೂಪಕಗಳು. ಶ್ರವ್ಯ ಕಾವ್ಯಗಳು ಗದ್ಯದಲ್ಲೂ, ಪದ್ಯದಲ್ಲೂ, ಪದ್ಯಮಿಶ್ರಿತವಾದ ಗದ್ಯದಲ್ಲೂ ರಚಿತವಾದ ಪ್ರಬಂಧಗಳು. ಪದ್ಯ ಕಾವ್ಯಗಳಲ್ಲಿ ಅವುಗಳ ದೈರ್ಘ್ಯಕ್ಕನುಗುಣವಾಗಿ ಮಹಾಕಾವ್ಯ, ಖಂಡಕಾವ್ಯ ಎಂಬ ಪ್ರಭೇದಗಳಿವೆ. ಪದ್ಯ ಕಾವ್ಯಗಳೆಲ್ಲಾ ಪ್ರಾಯಃ ರಾಮಾಯಣದ ಕಾವ್ಯ ಶೈಲಿಯಲ್ಲೇ ರಚಿತವಾದವು. ರಾಮಾಯಣ ಮಹಾಭಾರತದ ಕಾಲದಿಂದಲೂ ಸಂಸ್ಕೃತ ಭಾಷೆಯು ಪ್ರಚಲಿತವಾಗಿ ನಡೆದುಕೊಂಡು ಬರುತ್ತಿದೆ. ಕಾವ್ಯ ಜಗತ್ತಿನಲ್ಲಿ ಕವಿಯ ಮಹತ್ವವನ್ನು ಕುರಿತು ಒಂದು ಶ್ಲೋಕವಿದೆ.

अपारे काव्यसंसारे कविरेकः प्रजापतिः।

यथास्मैरोचते विश्वं तथेदं परिवर्तते ॥[4]

ಅಪಾರವಾದ ಕಾವ್ಯಜಗತ್ತಿನಲ್ಲಿ ಕವಿಯೊಬ್ಬನೇ ಸೃಷ್ಟಿಕರ್ತನಾದ ಬ್ರಹ್ಮ. ಅವನಿಗೆ ಹೇಗೆ ರುಚಿಸುವುದೋ ಹಾಗೆ ಈ ವಿಶ್ವವು ಪರಿವರ್ತನೆಗೊಳ್ಳುತ್ತದೆ ಎಂದು.

3. ಅಮರಕೋಶ, VI ವಾಗ್ವರ್ಗ–177

**4. ಆನಂದವರ್ಧನನ ಧ್ವನ್ಯಾಲೋಕ**–3–42ನೇ ಕಾರಿಕೆಯ ಪರಿಕರ ಶ್ಲೋಕ

ವೇದವು ವಿಶ್ವದ ಅತ್ಯಂತ ಪುರಾತನ ಸಾಹಿತ್ಯವಾಗಿದ್ದು, ಇನ್ನಿತರೆಲ್ಲಾ ಭಾರತೀಯ ಸಾಹಿತ್ಯದ ಉಗಮಕ್ಕೆ ನಾಂದಿಯಾಗಿದೆ. ಉಪನಿಷತ್ತು ಮತ್ತು ಭಗವದ್ಗೀತೆಗಳೆರಡನ್ನು ಪ್ರಸ್ಥಾನತ್ರಯಗಳಲ್ಲಿ ಗುರುತಿಸಲಾಗಿದ್ದು, (ಇನ್ನೊಂದು ಬ್ರಹ್ಮಸೂತ್ರ) ಭಾರತೀಯ ತತ್ವಶಾಸ್ತ್ರ ಸಂಸ್ಕೃತಿಯ ಆಧಾರಗಳಾಗಿದ್ದು ವಿಶ್ವಕ್ಕೆ ಮಾರ್ಗದರ್ಶಿಯಾಗಿವೆ. ಇವುಗಳು ಎಂದೆಂದಿಗೂ, ಎಲ್ಲೆಡೆಗೂ, ಎಲ್ಲಾ ಧರ್ಮಗಳಿಗೂ ನಿತ್ಯವೆನಿಸುವ ತತ್ವಗಳನ್ನು ಸರ್ವಭೂತಹಿತಕ್ಕಾಗಿಯೇ ಉಪದೇಶಿಸುತ್ತಿವೆ.[5] ಸಂಸ್ಕೃತ ವಾಙ್ಮಯದಲ್ಲಿ ನೀತಿಕಥಾ ಸಾಹಿತ್ಯದಲ್ಲಿ ವಿಷ್ಣುಶರ್ಮರು ರಚಿಸಿರುವ ಜನಪ್ರಿಯ ಪಂಚತಂತ್ರದಲ್ಲಿ ರಾಜಧರ್ಮದ ವಿಚಾರ ಅದೆಷ್ಟು ಅಚ್ಚುಕಟ್ಟಾಗಿ ಉಲ್ಲೇಖಿಸಲ್ಪಟ್ಟಿದೆಯೆಂದರೆ, ಮಿತ್ರಭೇದದಲ್ಲಿ ಮಂತ್ರಿ ಪದವಿಯನ್ನು ಕಳೆದುಕೊಂಡ, ದಮನಕ ನರಿಗೆ, ಕರಟಕ ನರಿಯು ಎಚ್ಚರಿಕೆಯ ಮಾತುಗಳನ್ನಾಡುತ್ತಾ, ರಾಜನ ಬಹುಮುಖ ವ್ಯಕ್ತಿತ್ವವನ್ನು ಪರ್ವತಕ್ಕೂ ಹಾಗೂ ವಿಷಸರ್ಪಕ್ಕೂ ಹೋಲಿಸುತ್ತದೆ.

दुराराध्या हि राजानः पर्वता इव सर्वदा ।

व्यालाकीर्णाः सुविषमाः कठिना दुष्टसेविताः ॥[6]

ಅಂದರೆ, ಸಿಂಹವ್ಯಾಘ್ರಾದಿ ಕ್ರೂರ ಮೃಗಗಳಿಂದಲೂ, ಕಲ್ಲು ಮುಳ್ಳುಗಳಿಂದಲೂ, ಎತ್ತರ ತಗ್ಗುಗಳಿಂದಲೂ ಕೂಡಿದ ದುರ್ಗಮ ಪರ್ವತವನ್ನೇರುವುದು ಹೇಗೆ ಕಷ್ಟಸಾಧ್ಯವೋ, ಅಂತೆಯೇ ದುಷ್ಟರೂ, ಕಪಟಿಗಳಿಂದಲೂ ಸುತ್ತುವರಿಯಲ್ಪಟ್ಟಿರುವ ರಾಜನನ್ನು ಸಮೀಪಿಸುವುದು ಅಷ್ಟೇ ದುಷ್ಕರವೆಂದು ವಿವರಿಸುತ್ತದೆ. ಶಾಸ್ತ್ರಪ್ರಪಂಚವು ಸಂಸ್ಕೃತದಲ್ಲಿ ಮಾತ್ರ ಲಭ್ಯ. ಇತರ ಭಾಷೆಗಳಲ್ಲಿಲ್ಲ. ವ್ಯಾಕರಣ, ತರ್ಕ, ಜ್ಯೋತಿಷ, ವೇದಾಂತ ಮಿಮಾಂಸ ಮುಂತಾದ ಅನೇಕ ಶಾಸ್ತ್ರಗಳಿವೆ. ಒಂದೊಂದು ಶಾಸ್ತ್ರವನ್ನೂ ತಲಸ್ಪರ್ಶಿಯಾಗಿ ಅರಿಯಲು ಒಂದು ಜನ್ಮಸಾಕಾಗುವುದಿಲ್ಲ. ಅನಂತ ''ಅಪಾರ' ಮುಂತಾದವುಗಳು ಶಾಸ್ತ್ರಕ್ಕೆ ಸಾರ್ಥಕ ವಿಶೇಷಣಗಳು. ಶಾಸ್ತ್ರಗಳು ನಮ್ಮ ಜ್ಞಾನ ಪಿಪಾಸೆಯನ್ನು ಹೆಚ್ಚಿಸುತ್ತವೆ. ಇವುಗಳ ಹೊರತಾಗಿ ವಾಸ್ತುಶಿಲ್ಪ, ಶಿಲ್ಪಶಾಸ್ತ್ರ ಮುಂತಾದ ಹಲವಾರು ವೈಜ್ಞಾನಿಕ ವಿಚಾರಗಳುಳ್ಳ ಗ್ರಂಥರಾಶಿಯೇ ಸಂಸ್ಕೃತದಲ್ಲಿದೆ. ಹೀಗೆ ಸಂಸ್ಕೃತ ಸಾಹಿತ್ಯಸಾಗರದಲ್ಲಿ ಮುತ್ತುರತ್ನಗಳು ಹಲವಾರು. ಎಲ್ಲವನ್ನು ಅರಿಯುವ ಹಂಬಲ ಸ್ವಪ್ನ ಮಾತ್ರ. ಹಾಗಿದ್ದರೂ ಶಕ್ತಿಮೀರಿ ಜ್ಞಾನವನ್ನು ಸಂಪಾದಿಸಲು ಪ್ರಾಮಾಣಿಕ ಪ್ರಯತ್ನವನ್ನಂತೂ ಮಾಡಲೇಬೇಕಾಗಿದೆ.

---

5. **ವಿನಯ್ ಕುಮಾರ್ ಭಾರದ್ವಾಜ್,** Classical Sanskrit Literature, Student Store, Biharipur, Bareily p 1,3,(1970)
6. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತ ಪಂಚತಂತ್ರಂ, ಮಿತ್ರಭೇದಃ-ಶ್ಲೋ-68, ಪು-41, ಚೌಕಾಂಬಾಕೃಷ್ಣದಾಸ್ ಅಕಾಡೆಮಿ, ಓರಿಯಂಟಲ್ ಪಬ್ಲಿಷರ್ಸ್ ಮತ್ತು ಡಿಸ್ಟ್ರಿಬ್ಯೂಟರ್ಸ್ ಕೆ.37/118, ಗೋಪಾಲ್ ಮಂದಿರ್ ಲೇನ್, ಪಿ.ಬಿ.ನಂ118, ವಾರಣಾಸಿ-221001.(1993).

ಸಂಸ್ಕೃತ ಜನಜೀವನದಲ್ಲಿ ಹಾಸುಹೊಕ್ಕಾಗಿ ಬೆಳೆದ ಭಾಷೆ. ಜೀವನದ ಎಲ್ಲ ಮುಖಗಳಲ್ಲಿಯೂ ಇದು ಬಳಕೆಗೆ ಬಂದ ಭಾಷೆ. ಧಾರ್ಮಿಕ ಹಾಗೂ ಲೌಕಿಕ ವಿಚಾರಗಳೆರಡೂ ಇವುಗಳಲ್ಲಿ ಬೆರೆತಿರುವುದನ್ನು ನಾವು ಕಾಣಬಹುದು. ಅಪಾರವಾಗಿ ಕಂಡುಬರುವ ಸಂಸ್ಕೃತ ಸಾಹಿತ್ಯ ರಾಶಿಯಲ್ಲಿ ನಾವು ಕಾವ್ಯಗ್ರಂಥಗಳಷ್ಟೇ ಪ್ರಮುಖವಾಗಿ ಶಾಸ್ತ್ರ ಗ್ರಂಥಗಳನ್ನೂ ಕಾಣಬಹುದು. ಭಾರತೀಯ ಧರ್ಮಶಾಸ್ತ್ರ ಗ್ರಂಥಗಳು ಪ್ರಾಮುಖ್ಯತೆ ಪಡೆದಿದ್ದು, ಮುಕ್ತಿಯನ್ನು ಸಾಧಿಸುವೆಡೆಗೆ ತಲುಪಿಸುತ್ತವೆ.

श्रुतिस्मृत्युदितधर्ममनुतिष्ठन् हि मानवः ।

इह कीर्तिमवाप्नोति प्रेत्यचानुत्तमं सुखम् ॥[7]

ಅಂದರೆ, ಶೃತಿ ಸ್ಮೃತಿಗಳಲ್ಲಿ ವಿಹಿತವಾದ ಧರ್ಮವನ್ನು ಆಚರಿಸುವ ಮನುಷ್ಯರು ಈ ಲೋಕದಲ್ಲಿ ಕೀರ್ತಿಯನ್ನೂ, ಪರಲೋಕದಲ್ಲಿ ಸುಖವನ್ನೂ ಹೊಂದುತ್ತಾನೆ ಎಂದು ಮನುಸ್ಮೃತಿಯಲ್ಲಿ ಹೇಳಲಾಗಿದೆ.

ಸಂಸ್ಕೃತ ಗದ್ಯ ಸಾಹಿತ್ಯದ ಉಗಮವನ್ನು ವೇದಗಳಲ್ಲಿಯೇ ಗುರುತಿಸಲಾಗಿದೆ. ಪ್ರಾರಂಭದಲ್ಲಿ ಕಥೆಗಳು ಬಿಡಿಬಿಡಿಯಾಗಿ ಆರಂಭಗೊಂಡು ಬೆಳವಣಿಗೆಯ ಹಂತದಲ್ಲಿ ನೀತಿಬೋಧನೆಯ ಅಂಶಗಳನ್ನಿರಿಸಿ ಕೊಂಡು ನೀತಿಪ್ರತಿಪಾದನೆಗಾಗಿ ಪದ್ಯಗಳನ್ನು ಬಳಸಿಕೊಳ್ಳಲಾಯಿತು. ಕಥೆಗಳಲ್ಲಿನ ಪಾತ್ರಗಳು ನೀತಿ ಬೋಧನೆಗೆ ಹೊಸ ಉಪಕಥೆಗಳನ್ನು ಉಪಯೋಗಿಸಿಕೊಂಡು ಕಥೆಗಳ ಆಕಾರವನ್ನೂ ಬೆಳಸಿದವು. ಅತ್ಯಂತ ಪ್ರಾಚೀನ ಗದ್ಯ ರಚನೆ ಮಾದರಿಯನ್ನು ನಾವು ಕೃಷ್ಣ ಯಜುರ್ವೇದದ ತೈತ್ತರೀಯ ಸಂಹಿತೆಯಲ್ಲಿ ಕಾಣಬಹುದು. ಅಥರ್ವಣ ವೇದದಲ್ಲಿ ಆರನೆಯ ಒಂದು ಭಾಗ ಗದ್ಯರೂಪದಲ್ಲಿದೆ. ಬ್ರಾಹ್ಮಣಗಳೆಲ್ಲಾ ಗದ್ಯಾತ್ಮಕವಾಗಿಯೇ ಇದೆ. ಪ್ರಾಚೀನ ಉಪನಿಷತ್ತುಗಳೂ ಪ್ರಾಯಃ ಗದ್ಯದಲ್ಲೇ ರಚಿತವಾಗಿವೆ ಹೀಗೆ ವೇದದಲ್ಲಿ ಗದ್ಯಪ್ರಯೋಗ ವ್ಯಾಪಕವಾಗಿಯೇ ಇರುವುದು ಗಮನಾರ್ಹ. ಕಥಾರೂಪದ ಗದ್ಯಕಾವ್ಯವೇ ಸಂಸ್ಕೃತ ಸಾಹಿತ್ಯದಲ್ಲಿ ಗಣ್ಯಸ್ಥಾನಪಡೆದಿರುವುದು. ಮೊದಮೊದಲು ಸಾಮಾನ್ಯಜನರಿಗೆ ರಂಜಕವಾಗಿರುವ ಜನಪ್ರಿಯ ಗದ್ಯಕಥೆಗಳು ಬಳಕೆಯಲ್ಲಿದ್ದು, ಅವೇ ಕಾಲಕ್ರಮದಲ್ಲಿ ಕಾವ್ಯಗುಣಗಳನ್ನು, ಸಂಸ್ಕೃತ ರಚನಾ ಶೈಲಿಯನ್ನು ಅಳವಡಿಸಿ **"ಗದ್ಯಕಾವ್ಯ"**ಎನ್ನಬಹುದಾದ ಮಟ್ಟಕ್ಕೇರಿ **"ಕಥಾ"**ಎಂಬ ಹೆಸರನ್ನು ತಾಳರಬೇಕೆಂದು ಹೇಳಬಹುದು. ಈ ಗದ್ಯಕಾವ್ಯಗಳು ಎಲ್ಲಾ ವಿಚಾರಗಳಲ್ಲೂ ಪದ್ಯಕಾವ್ಯದ ಹಾಗೇ ರಚಿತವಾಗಿರುತ್ತದೆ. ಗದ್ಯದಲ್ಲಿ ಸಮಾಸ ಭೂಯಸ್ತ್ವರೂಪವಾದ ಓಜಸ್ಸಿಗೆ ಪ್ರಾಧಾನ್ಯತೆ ಇರುತ್ತದೆ. ಇಷ್ಟೇ ಅವೆರಡಕ್ಕೂ ಇರುವ

7. **ಕುಮುದವಲ್ಲಿ ಕೆ ಆರ್, ಪದ್ಮಜಾ ಎಂ.ಆರ್,** ಸಂ.ಶುಕ್ರನೀತಿಯಲ್ಲಿ ರಾಜಧರ್ಮಪ್ರಸ್ತಾವನೆ-ಪು-7, (2020-21- Degree Text book) ಪ್ರಸಾರಾಂಗ, ಬೆಂಗಳೂರು ನಗರ ವಿಶ್ವವಿದ್ಯಾಲಯ,ಸೆಂಟ್ರಲ್ ಕಾಲೇಜು ಆವರಣ, ಬೆಂಗಳೂರು560001,

ವ್ಯತ್ಯಾಸ. ಆದರೆ ಪದ್ಯರೂಪದಲ್ಲಿದ್ದಿದ್ದರೂ ಗದ್ಯಕಾವ್ಯದ ಹಲಕೆಲವು ಭಾಗಗಳು ವೃತ್ತಗಂಧಿಯಾಗಿರುತ್ತದೆ. ಈಗ ಉಪಲಬ್ಧವಾಗಿರುವ ಗದ್ಯಕಾವ್ಯಗಳಲ್ಲಿ ದಂಡಿವಿರಚಿತ **"ದಶಕುಮಾರಚರಿತೆ"**ಯೇ ಅತ್ಯಂತ ಪ್ರಾಚೀನವೆಂದು ಹೇಳಬಹುದು. **"ಅವಂತಿಸುಂದರೀ ಕಥಾ"** ಮೊದಲ ಬಾರಿಗೆ 1974ರಲ್ಲಿ ಪ್ರಕಟವಾಗಿ ಅದೂ ದಂಡಿವಿರಚಿತ ಎಂದು ನಿರೂಪಿತವಾಯಿತು. ಅದು **"ಕಥಾಸಾರ"**ವೆಂಬ ಪದ್ಯದ ಜೊತೆಯಲ್ಲಿದೆ.[8]

ಹಿಂದೂ ಧರ್ಮದ ಆಧಾರಸ್ತಂಭದಂತಿರುವ ಪುರಾಣಗಳು, ಉಪಪುರಾಣಗಳು, ಆಗಮಗಳು ಸಾಹಿತ್ಯವೃಕ್ಷದ ಇನ್ನೊಂದು ಶಾಖೆ. ಇವುಗಳಲ್ಲದೆ ಫಲಪುಷ್ಪಪರ್ಣಗಳಿಂದ ಶೋಭಿಸುವ ಇನ್ನೊಂದು ಮಹಾಶಾಖೆ ಕಾವ್ಯಸಾಹಿತ್ಯ. ನಿರ್ದೋಷವಾದ ಅಲಂಕಾರಗಳು ಮತ್ತು ಗುಣಗಳಿಂದ ಕೂಡಿದ ಯುಗಲ ಕಾವ್ಯ, ಅಥವಾ ರಮಣೀಯವಾದ ಅರ್ಥವನ್ನು ಪ್ರತಿಪಾದಿಸುವ ಶಬ್ದವೇ ಕಾವ್ಯ. ರಮಣೀಯ ಅಂದರೆ ಸಹೃದಯ ವಾಚಕರಿಗೆ ಅಥವಾ ಪ್ರೇಕ್ಷಕರಿಗೆ ಲೋಕೋತ್ತರವಾದ ಚಮತ್ಕಾರವನ್ನು ಉಂಟುಮಾಡುವ ಶಕ್ತಿಯುಳ್ಳದ್ದು. ಇಂಥಹ ಕಾವ್ಯ ಕೇವಲ ಕೇಳುವುದಕ್ಕೆ ಅರ್ಹವಾದಾಗ ಅದು ಶ್ರವ್ಯ. ಅಷ್ಟೇ ಅಲ್ಲದೆ ರಂಗದ ಮೇಲೆ ಅಭಿನಯಿಸಿ ನೋಡುವುದಕ್ಕೆ ಅರ್ಹವಾದಾಗ ದೃಶ್ಯ ಎನಿಸಿಕೊಳ್ಳುತ್ತದೆ. ಶ್ರವ್ಯ ಕಾವ್ಯ ವೃತ್ತ ನಿಯಮಕ್ಕೆ ಅಂದರೆ ಛಂದಸ್ಸಿನ ನಿರ್ಬಂಧಕ್ಕೆ ಒಳಗಾಗಿದ್ದರೆ ಅದು ಪದ್ಯವಾಗುತ್ತದೆ. ಇಲ್ಲದಿದ್ದರೆ ಗದ್ಯ. ಗದ್ಯಪದ್ಯಗಳ ಮಿಶ್ರಣ ಚಂಪೂ ಆಗುವುದು. ಸಂಸ್ಕೃತದಲ್ಲಿ ಗದ್ಯ ಹೇರಳವಾಗಿದೆ. ವೇದಗಳಲ್ಲಿ ಕೃಷ್ಣ-ಯಜುರ್ವೇದ ಮತ್ತು ಅಥರ್ವಣ ವೇದಗಳು ಗದ್ಯಭಾಗಗಳನ್ನೊಳಗೊಂಡಿವೆ. ಬ್ರಾಹ್ಮಣಗಳು, ಉಪನಿಷತ್ತುಗಳಲ್ಲೂ ಗದ್ಯಕ್ಕೆ ಪ್ರಾಧಾನ್ಯವಿದೆ. ಶಾಸ್ತ್ರಗಳ ಸೂತ್ರಗಳು, ವಾರ್ತಿಕಗಳು, ಭಾಷ್ಯಗಳು ಹೆಚ್ಚಾಗಿ ಗದ್ಯದಲ್ಲಿವೆ. ಮಹಾಭಾರತ ಮತ್ತು ಭಾಗವತಗಳಲ್ಲಿ ಗದ್ಯಾಂಶವಿದೆ. ವ್ಯಾಖ್ಯಾನಗಳೆಲ್ಲಾ ಬಹುಮಟ್ಟಿಗೆ ಗದ್ಯವೇ ಆಗಿರುತ್ತದೆ. ಮಾನವನಿಗೆ ಸ್ವಭಾವತಃ ಬರುವುದು ಗದ್ಯವೇ. ಪದ್ಯವನ್ನು ಪ್ರಯತ್ನಪೂರ್ವಕವಾಗಿ ಹೆಣೆಯಬಹುದು. ಒಟ್ಟಿನಲ್ಲಿ ಹೇಳುವುದಾದರೆ, ಸಾಹಿತ್ಯದಲ್ಲಿ-ಅದು ಯಾವ ಭಾಷೆಯದೇ ಆಗಲಿ ಗದ್ಯವೇ ಹೆಚ್ಚಿರುವುದು ಸ್ವಾಭಾವಿಕವಾಗಿದೆ. ಆದ್ದರಿಂದಲೇ ರಾಜಶೇಖರನು ಕಾವ್ಯಮೀಮಾಂಸೆಯಲ್ಲಿ:- "पूर्वेहि विद्वांसो गद्यम् ददृशुर्न पद्यम्"[9] ಎಂದಿದ್ದಾನೆ. ಆದರೆ ಸಂಸ್ಕೃತ ಗದ್ಯಕಾವ್ಯ ತುಂಬ ವಿರಳವಾಗಿಯೇ ಇದೆ. ಗದ್ಯವು ಕಾವ್ಯವೆನಿಸಿಕೊಳ್ಳಲು ಶ್ಲೇಷ, ಯಮಕ, ಅನುಪ್ರಾಸ ಮುಂತಾದ ಅಲಂಕಾರಗಳನ್ನೂ, ಸಮಾಸ ಭೂಯಿಷ್ಠವಾದ ಶೈಲಿಯನ್ನೂ ಅಳವಡಿಸಿಕೊಂಡು ತನ್ನ ವೈಶಿಷ್ಟ್ಯವನ್ನು ಬೆಳೆಸಿಕೊಂಡಿತು. ಇದನ್ನೇ ಅಲಂಕಾರಿಕನಾದ ದಂಡಿಯು, "ओजः समासभूयस्त्वम् एतद् गद्यस्य जीवितम्"[10] ಎಂದು

---

8. **ಕೃಷ್ಣಮೂರ್ತಿ ಕೆ, ರಂಗನಾಥ ಶರ್ಮ ಎನ್, ಸಿದ್ಧಗಂಗಯ್ಯಕೆ,** ಸಂಸ್ಕೃತ ಭಾಷಾ ಶಾಸ್ತ್ರ ಮತ್ತು ಸಾಹಿತ್ಯಚರಿತ್ರೆ, ಅ-18, ಪು-531-549, ಕರ್ನಾಟಕ ಪಠ್ಯಪುಸ್ತಕಗಳ ಇಲಾಖೆ,(1976).
9. काव्यमीमांसा 3ನೇ ಅಧ್ಯಾಯ काव्यपुरुषोत्पत्तिः।
10. ದಂಡಿಯ ಕಾವ್ಯಾದರ್ಶ 1-80

ವಿವರಿಸಿದ್ದಾರೆ. ಹೀಗಾಗಿ ಅಪಾರವಾದ ಶಬ್ದ ಸಂಪತ್ತು ಮತ್ತು ನಿಷ್ಕೃಷ್ಟವಾದ ವ್ಯಾಕರಣಗಳಿಲ್ಲದೆ ಯಾವನೂ ಸಮರ್ಥ ಗದ್ಯಕಾರನಾಗಲಾರ. ಆದುದರಿಂದಲೇ "गद्यम् कवीनां निकषम् वदन्ति", **"ಗದ್ಯವು ಕವಿಗಳ ಒರೆಗಲ್ಲು"** ಎಂಬ ನಾಣ್ಣುಡಿ ಪ್ರಚಲಿತವಾಗಿದೆ. ಛಂದೋನಿಯಮವಿಲ್ಲದೆ ಬರೆದುದೆಲ್ಲಾ ಗದ್ಯವಾಗಬಹುದು ಆದರೆ, ಅದು ಕಾವ್ಯವೆನಿಸಿಕೊಳ್ಳಲಾರದು. ವಾರ್ತಿಕಕಾರ ಕಾತ್ಯಾಯನನು "आख्यानाख्यायिकेतिहास पुराणेभ्यश्च" ಎಂಬ ವಾರ್ತಿಕದಲ್ಲಿ **"ಆಖ್ಯಾಯಿಕಾ"** ಎಂಬ ಗದ್ಯ ಪ್ರಭೇದದ ನಾಮ ನಿರ್ದೇಶನ ಮಾಡಿದ್ದಾನೆ. ಅದರ ಭಾಷ್ಯದಲ್ಲಿ ಪತಂಜಲಿಯು ಯಯಾತಿ, ಯುವಕ್ರೀತ, ಪ್ರಿಯಂಗವ ಎಂಬುವು ಆಖ್ಯಾನಗಳೆಂದೂ, ವಾಸವದತ್ತಾ, ಸುಮನೋತ್ತರಾ ಮತ್ತು ಭೈಮರಥೀ ಎಂಬುವು ಆಖ್ಯಾಯಿಕೆಗಳೆಂದೂ ಹೇಳುತ್ತಾನೆ. ಈ ಕೃತಿಗಳು ಇಂದು ದೊರಕದಿರುವುದು ದುಃಖದ ವಿಷಯ. ಚಂಪೂಕಾವ್ಯಗಳಲ್ಲಿ ಅರ್ಧದಷ್ಟು ಗದ್ಯವಿರುತ್ತದೆ.[11]

ಚಂಪೂ ರಾಮಾಯಣದಲ್ಲಿ ಒಂದು ಸೊಗಸಾದ ಶ್ಲೋಕ ಹೀಗೆ ಗದ್ಯ – ಪದ್ಯ ಮಿಶ್ರಣದ ಸೊಗಸನ್ನು ತಿಳಿಸುತ್ತದೆ:

गद्यानुबंधरसमिश्रितपद्यसूक्तिःहृद्या हि वाद्यकलया कलितेव गीतिः।

तस्माद्दधातु कविमार्ग जुषां सुखाय चम्पूप्रबंधरचनां रसना मदीया ॥[12]

ಅಂದರೆ, ಗದ್ಯ ರಚನೆಯೊಡನೆ ಸೇರಿದ ಪದ್ಯ ಸೂಕ್ತಿಯು ಪಕ್ಕವಾದ್ಯಗಳ ಕಲೆಯಿಂದ ಸೇರಿದ ಸಂಗೀತದಂತೆ ಹೃದಯಂಗಮವಾಗಿರುತ್ತದೆ. ಆದುದರಿಂದ ನನ್ನ ನಾಲಗೆಯು, ಕವಿಗಳ ಶೈಲಿಯಲ್ಲಿ ಆನಂದ ಹೊಂದುವವರ ಸುಖಕ್ಕೆ ಚಂಪೂಕಾವ್ಯದ ರಚನೆಯನ್ನು ನೀಡಲಿ" ಎಂದಿದೆ.

ಗದ್ಯದಲ್ಲಿ ಕಥೆ ಮತ್ತು ಆಖ್ಯಾಯಿಕಾಗಳೆಂದು ಇನ್ನೆರಡು ಪ್ರಭೇದಗಳಿದ್ದು ಕಲ್ಪಿತ ವಸ್ತುವುಳ್ಳದ್ದು ಕಥೆಯಾದರೆ, ಒಬ್ಬ ನೈಜವ್ಯಕ್ತಿಯ ಚಾರಿತ್ರಿಕ ವಸ್ತುವುಳ್ಳ ಚಿತ್ರಣವೇ **'ಆಖ್ಯಾಯಿಕಾ'** ಎನಿಸಿಕೊಳ್ಳುತ್ತದೆ.

**ಆಖ್ಯಾಯಿಕೆ** ಹಾಗೂ ಕಥೆಯ ಬಗ್ಗೆ ಸೂಕ್ಷ್ಮವಾಗಿ ಕೆಲವು ಲಕ್ಷಣಗಳು ಹಾಗೂ ವ್ಯತ್ಯಾಸಗಳನ್ನು ಕಾಣಬಹುದು.

संस्कृतानाकुलश्रव्यशब्दार्थपदवृत्तिना ।

गद्येन युक्तोदात्तार्था सोच्छवासाख्यायिका मता ॥ 25 ॥

11. महाश्वेतावृत्तान्तः (ಬಾಣಕವಿಯ ಕಾದಂಬರಿಯಿಂದ ಸಂಗೃಹೀತ), ಸಂಸ್ಕೃತ ಕಾವ್ಯತರಂಗ–14, ಪ್ರಸ್ತಾವನೆ–ಪು–1–4. ಪ್ರಸಾರಾಂಗ, ಮೈಸೂರು ವಿ.ವಿ.(1980)

12. **ಚಂಪೂರಾಮಾಯಣ,** ಬಾಲಕಾಂಡ, ಶ್ಲೋ–3.

ಸಂಸ್ಕೃತ ಭಾಷೆಯ ಅಕ್ಲಿಷ್ಟ ಹಾಗೂ ಮಧುರವಾದ ಶಬ್ದಾರ್ಥಗಳಿಂದ ಸುಂದರ ಸಮಾಸಮಯವಾದ ಗದ್ಯದಲ್ಲಿದ್ದು ಉತ್ತಮವಾದ ವಿಷಯಗಳನ್ನೊಳಗೊಂಡು ಉಚ್ಛ್ವಾಸವೆಂಬ ಹೆಸರಿನ ಅಧ್ಯಾಯಗಳು ಇರುತ್ತಿದ್ದರೆ ಅಂತಹ ಕಾವ್ಯಕ್ಕೆ ಆಖ್ಯಾಯಿಕೆ ಎನ್ನುವರು.

वृत्तमाख्यायते तस्यां नायकेन स्वचेष्टितम् ।

वक्त्रं चा परवक्त्रं च काले भाव्यार्थशंसि च ॥ 26 ॥

ಅಂದರೆ, ಆಖ್ಯಾಯಿಕೆಯಲ್ಲಿ ನಾಯಕನು ತನ್ನ ಜೀವನದಲ್ಲಿ ನಡೆದ ಸಂಗತಿಯನ್ನೆಲ್ಲ ತಾನೇ ತನ್ನ ಬಾಯಿಂದ ಹೇಳಿಕೊಳ್ಳುತ್ತಾನೆ.

न वक्त्रापरवक्त्राभ्यां युक्ता नोच्छवासवत्यपि ।

संस्कृतासंस्कृता चेष्टा कथाऽपभ्रंशभाक्तथा ॥ 28 ॥

ಕಥೆಯೆಂಬ ಕಾವ್ಯಜಾತಿಯಲ್ಲಿ **ವಕ್ತ್ರ, ಅಪರವಕ್ತ್ರ,** ಛಂದಸ್ಸಿನ ಪದ್ಯಗಳಿರುವುದಿಲ್ಲ, ಉಚ್ಛ್ವಾಸಗಳೂ ಇರುವುದಿಲ್ಲ. ಅದು ಸಂಸ್ಕೃತ, ಪ್ರಾಕೃತ, ಅಪಭ್ರಂಶ ಹೀಗೆ ಯಾವ ಭಾಷೆಯಲ್ಲಿ ಬೇಕಾದರೂ ಇರಬಹುದು.

अनैः स्वचरितं तस्यां नायकेन तु नोच्यते ।

स्वगुणाविष्कृतिं कुर्यादभिजातः कथं जनः ॥ 29 ॥[13]

ಕಥೆಯಲ್ಲಿ ನಾಯಕನ ವೃತ್ತಾಂತವನ್ನು ಬೇರೆಯವರು ಹೇಳುತ್ತಾರೆ. ಅಂದರೆ, ತಾನೇ ಅದನ್ನು ಹೇಳಿಕೊಳ್ಳುವುದಿಲ್ಲ. ವಿನಯಸಂಪನ್ನನಾದ ಮನುಷ್ಯನು ತನ್ನ ಗುಣವನ್ನು ತಾನೇ ಹೇಗೆ ಹೇಳಿಕೊಂಡಾನು.

ಅಮರಸಿಂಹ ನಾಮಲಿಂಗಾನುಶಾಸನ (ಅಮರಕೋಶದಲ್ಲಿ) ಹೇಳಿರುವ ಪ್ರಕಾರ ಸಂಕ್ಷಿಪ್ತವಾದ ಆದರೆ ಸುಂದರವಾದ ಆಖ್ಯಾಯಿಕಾ ಮತ್ತು ಕಥಾ ಭೇದ ಲಕ್ಷಣವೂ ಇದಕ್ಕೆ ಹೊಂದಿಕೊಳ್ಳುತ್ತದೆ.

"आख्यायिकोपलब्धार्था", "प्रबंध कल्पना कथा" **"ಆಖ್ಯಾಯಿಕಾ"**ಪ್ರತ್ಯಕ್ಷವಾಗಿ ಕಂಡ ಸತ್ಯ ಕಥೆಯನ್ನು ಒಳಗೊಂಡಿರುತ್ತದೆ. **"ಕಥೆ"** ಕಾಲ್ಪನಿಕ ಪ್ರಬಂಧ.[14]

---

13. ಕನ್ನಡ ಕಾವ್ಯಾಲಂಕಾರ ಅಧ್ಯಾಯ – 1, ಸೂತ್ರವೃತ್ತಿ( ವಾಮನನ ಮೂಲ ಗ್ರಂಥದ ಅನುವಾದ ಹಾಗೂ ವಿವರಣೆ) ಶ್ಲೋ– 25.26, 28–29, ಪುಟ– 51, ಕೆ.ಕೃಷ್ಣಮೂರ್ತಿ ಸಂಶೋಧನಾ ಸಂಸ್ಥೆ– 22, ಚಿರಂತನ, ಕೆ.ಕೃಷ್ಣಮೂರ್ತಿ ಲೇಔಟ್ ಮೈಸೂರು–2019.
14. महाश्वेतावृत्तान्तः (ಬಾಣಕವಿಯ ಕಾದಂಬರಿಯಿಂದ ಸಂಗ್ರಹೀತ), ಸಂಸ್ಕೃತ ಕಾವ್ಯ ತರಂಗ–14, ಪ್ರಸ್ತಾವನೆ–ಪು–9..ಪ್ರಸಾರಾಂಗ, ಮೈಸೂರು ವಿ.ವಿ.(1980)

ಈ ವಿಚಾರವನ್ನು ಇಲ್ಲೇಕೆ ಪ್ರಸ್ತಾಪ ಮಾಡಬೇಕಾಯಿತೆಂದರೆ, ಪಂಚತಂತ್ರದ ಸಂಸ್ಕರಣಗಳಲ್ಲಿ **Dr. Johannes Hertel** ಹಾಗೂ **Prof. Edgerton** ಎಂಬ ಇಬ್ಬರು ಪಾಶ್ಚಾತ್ಯ ವಿದ್ವಾಂಸರು ಪಂಚತಂತ್ರದ ಮೂಲರೂಪವನ್ನು ಪತ್ತೆಹಚ್ಚಲು ಸತತ ಪರಿಶ್ರಮವನ್ನು ಹಾಕಿದರು. **Edgerton** ರವರ ತಂತ್ರಾಖ್ಯಾಯಿಕಾ, ದಕ್ಷಿಣದ ಪಂಚತಂತ್ರ, ಬೃಹತ್ಕಥಾ ಹಾಗೂ ಪೆಹ್ಲವಿ ಸಂಸ್ಕರಣಗಳಿಗೆ ಮೂಲ ಗ್ರಂಥವು ಅತ್ಯಂತ ಸಮೀಪವಿವೆಯೆಂದು ಒಪ್ಪಿರುತ್ತಾರೆ. ತಂತ್ರಾಖ್ಯಾಯಿಕಾ ಪಂಚತಂತ್ರ ಮೂಲ ಗ್ರಂಥಕ್ಕೆ ಅತ್ಯಂತ ಹತ್ತಿರದ ಮೊಟ್ಟಮೊದಲ ಸಂಸ್ಕರಣವಾಗಿರುತ್ತದೆ.[15] ಇನ್ನು ಕೆಲವು ಸಂಸ್ಕರಣಗಳ ಪರಿಚಯ ಹೀಗಿದೆ:–

1. **ತಂತ್ರಾಖ್ಯಾಯಿಕಾ** – ಇದರಲ್ಲಿ ಪಂಚತಂತ್ರದ ಮೂಲಾಂಶಗಳು ಅಧಿಕವಾಗಿದೆ. ಮೂಲ ಪಂಚತಂತ್ರಕ್ಕೆ ಬಹಳ ಹತ್ತಿರವಾಗಿದೆ. ಇದರ ಕಾಲ ಬಹುಶಃ ೩೦೦ ಈ ಎಂದು ನಂಬಲಾಗಿದೆ. ಕಾಶ್ಮೀರದಿಂದ ಶಾರದಾ ಲಿಪಿಯಲ್ಲಿ ಇದರ ಎರಡು ಪ್ರತಿಗಳು ಪ್ರಾಪ್ತಿಯಾಗಿದ್ದು, ಹರ್ಟೆಲ್ರವರು ೧೯೧೦ರಲ್ಲಿ ಈ ಸಂಸ್ಕರಣ ಪತ್ತೆಮಾಡಿದ್ದಾರೆ.

2. **ಸರಳ ಪಂಂಚತಂತ್ರ(Texts Simplicor)** ಇದರ ಕಾಲ ೧೧೦೦ ಈ ರಲ್ಲಿ. ಇದರ ಸಂಪಾದನೆಯನ್ನು ಯಾವುದೋ ಜೈನವಿದ್ವಾಂಸರು ಮಾಡಿದ್ದರು. ಬ್ಯೂಲರ್ ಮತ್ತು ಕೀಲ್ ಹಾರ್ನ್ ಇದರ ಒಂದು ಸಂಸ್ಕರಣವನ್ನು ಪತ್ತೆಮಾಡಿದ್ದರು. ಇದು ಭಾರತದಲ್ಲಿ ಅತ್ಯಧಿಕವಾಗಿ ಪ್ರಚಲಿತವಾಗಿದೆ.

3. **ಪೂರ್ಣಭದ್ರಕೃತ ಸಂಸ್ಕರಣ**:– ಇದನ್ನು ಪಂಚಾಖ್ಯಾನಕ ಎಂದೂ ಕರೆಯುತ್ತಾರೆ. ಇದರ ಸಂಪಾದನೆಯನ್ನು ಜೈನ ಕವಿ ಪೂರ್ಣಭದ್ರನು ಮಾಡಿದ್ದನು. ಇದರ ಕಾಲ ೧೧೬೯ ಈ ರಲ್ಲಿ. ಇದರಲ್ಲಿ ೨೧ ಹೊಸ ಕಥೆಗಳಿವೆ. ಇದರಲ್ಲಿ ಗುಜರಾತಿ ಹಾಗೂ ಪ್ರಾಕೃತ ಶಬ್ದಗಳ ಪ್ರಯೋಗವೂ ನಡೆದಿದೆ.

4. **ದಕ್ಷಿಣದ ಪಂಚತಂತ್ರ**:– ಇದು ಬಹುಶಃ ಐದು ಸಂಸ್ಕರಣಗಳಲ್ಲಿ ಉಪಲಬ್ಧವಾಗಿದೆ. ಇದರಲ್ಲಿ ದಕ್ಷಿಣಾತ್ಯ ಪಾಠಗಳು ಪ್ರಸ್ತುತಗೊಂಡಿವೆ. ಇದರಲ್ಲಿ ಕಥೆಗಳನ್ನು ಸಂಕ್ಷಿಪ್ತಗೊಳಿಸಿ ಹಿಡಿದಿಟ್ಟಿದೆ. ಇದು ಭಾರವಿಯ ನಂತರದ ಕಾಲದ್ದಾಗಿರುತ್ತದೆ (೬೦೦ ಈ) **Edgerton**ರವರ ಪ್ರಕಾರ ಇದರಲ್ಲಿ ಮೂಲ ಗ್ರಂಥದ ¾ ಭಾಗದಷ್ಟು ಗದ್ಯ ಭಾಗ ಹಾಗೂ ೨/೩ ರಷ್ಟು ಪದ್ಯ ಭಾಗ ಸುರಕ್ಷಿತವಾಗಿದೆ.

5. **ನೇಪಾಳದ ಪಂಚತಂತ್ರ**:– ಇದು ಒಂದು ಹಸ್ತಲಿಖಿತ ಪ್ರತಿಯಲ್ಲಿ ಕೇವಲ ಪದ್ಯಗಳಿದ್ದು, ಮತ್ತೊಂದರಲ್ಲಿ ಪದ್ಯದ ಜೊತೆ ನೇಪಾಳ ಭಾಷೆಯಲ್ಲಿ ಗದ್ಯವೂ ದೊರಕುವುದು.

6. **ಹಿತೋಪದೇಶ**:– ಇದು ನಾರಾಯಣ ಪಂಡಿತರ ಮೂಲಕ ಸಂಪಾದಿತಗೊಂಡಿದೆ. ಹಾಗೆಯೇ ಪಂಚತಂತ್ರದ

15. **Chandra Rajan,** VISNU SARMA,( English Translation)The Panchatantra,(1993) Introduction - P- liv, Penguin Random House, Gurgaon, Haryana 122002.

ಕಿಂಚಿತ್ ಪರಿವರ್ತಿತ ರೂಪವಾಗಿದೆ.

**7. ಉತ್ತರ ಪಶ್ಚಿಮೀಯ ಸಂಸ್ಕರಣ:–** ಗುಣಾಢ್ಯನು ಬೃಹತ್ಕಥೆಯಲ್ಲಿ ಈ ಸಂಸ್ಕರಣವನ್ನು ತನ್ನದಾಗಿಸಿಕೊಂಡಿದ್ದನು. ಅದು ಈಗ ಕ್ಷೇಮೇಂದ್ರಕೃತ ಬೃಹತ್ಕಥಾಮಂಜರಿ(1037) ಮತ್ತು ಸೋಮದೇವ ಕೃತ ಕಥಾಸರಿತ್ಸಾಗರ (1037 ಈ)ದಲ್ಲಿ ಸುರಕ್ಷಿತವಾಗಿದೆ.

**8. ಪಹ್ಲವಿಸಂಸ್ಕರಣ:–** ಖುಸ್ರೋ ಅನಶೇರಖ್ವಾ (531–579 ಈ) ಶಾಸನ ಕಾಲದಲ್ಲಿ ಹಕೀಮ್ ಬುರ್ಜೋಇಯಿಯು ಪಂಚತಂತ್ರವನ್ನು ಪಹ್ಲವಿ ಭಾಷೆಗೆ ತರ್ಜುಮೆ ಮಾಡಿದನು. ಈ ಅನುವಾದದಿಂದ ಸಿರಿಯಾ ಮತ್ತು ಅರಬ್ಬೀ ಭಾಷೆಯಲ್ಲೂ ಅನುವಾದಗೊಂಡಿತು. ಮತ್ತೆ ಅರಬ್ಬೀ ಅನುವಾದದಿಂದ ಯೂರೋಪಿನ ಭಾಷೆಗಳಲ್ಲಿ ಅನುವಾದ ನಡೆಯಿತು. ಈ ರೀತಿಯಾಗಿ ಅಷ್ಟ ಸಂಸ್ಕರಣಗಳು ಮೂಲ ಗ್ರಂಥ ಪಾಠಕ್ಕೆ ಅತ್ಯಂತ ಸಮೀಪದಲ್ಲಿವೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇದು ನಿಜಕ್ಕೂ ಪಂಚತಂತ್ರದ ವಿಶ್ವಪರ್ಯಟನ ಎನ್ನಬಹುದು.

ಈಗ ಉಪಲಬ್ಧವಿರುವ ಸಂಸ್ಕೃತ ಗದ್ಯ ಸಾಹಿತ್ಯದಲ್ಲಿ ಆಧುನಿಕ ದೃಷ್ಟಿಯಿಂದ ನಾಲ್ಕು ಬಗೆಯ ಕೃತಿಗಳನ್ನು ಕಾಣಬಹುದು. ಅವುಗಳೆಂದರೆ:– 1 – **ಕಥೆ 2 – ಆಖ್ಯಾಯಿಕಾ 3 – ಜನಪ್ರಿಯ 4 – ನೀತಿಬೋಧಕ ಕಥೆ**ಗಳು.

ಧರ್ಮಸೂತ್ರಗಳಿಂದ ಪ್ರಾರಂಭವಾಗಿ ಮುಂದುವರೆದ ಧರ್ಮಶಾಸ್ತ್ರದ ವಿಚಾರಗಳೇ ಮುಂದೆ ನೀತಿಶಾಸ್ತ್ರ ಗ್ರಂಥಗಳ ರೂಪದಲ್ಲಿ ವಿಶೇಷವಾಗಿ ಪರಿಗಣಿಸಿ ರಚಿತವಾಗಿರುವುದನ್ನು ಗಮನಿಸಬಹುದು. ವೇದ ಪ್ರತಿಪಾದಿತ ವಿಧಿ – ನಿಷೇಧಗಳ ಪ್ರತಿಪಾದನೆಯೇ ಈ ನೀತಿ ಗ್ರಂಥಗಳ ಮುಖ್ಯ ವಿಷಯವಾಗಿರುತ್ತದೆ. ನೀತಿ ಶಾಸ್ತ್ರದ ಮುಖ್ಯ ಉದ್ದೇಶವನ್ನು ಕುರಿತು ಹೇಳುತ್ತಾ, ಶುಕ್ರಾಚಾರ್ಯರು "ಇವುಗಳ ಜ್ಞಾನದಿಂದ ಧರ್ಮ, ಅರ್ಥ, ಮತ್ತು ಕಾಮ ಈ ಮೂರು ಪುರುಷಾರ್ಥಗಳ ಸಿದ್ಧಯುಂಟಾಗುವುದೆಂದೂ ಹಾಗೂ ಇವುಗಳ ಫಲವಾಗಿ ಮೋಕ್ಷ ಪ್ರಾಪ್ತಿಯಾಗುವುದು" ಎಂದು ತಿಳಿಸಿದ್ದಾರೆ.

"धर्मार्थकाममूलं हि स्मृतं मोक्षप्रदं यतः।" ಹೀಗೆ ನೀತಿಶಾಸ್ತ್ರದ ಪ್ರಯೋಜನ ಪುರುಷಾರ್ಥವಾದ ಮೋಕ್ಷದ ಸಾಧನೆಗೂ ಸಹಾಯಕವಾದೆ. ಇಂತಹ ನೀತಿಶಾಸ್ತ್ರಗ್ರಂಥಗಳಲ್ಲಿ ವ್ಯಾವಹಾರಿಕ ಮತ್ತು ಪ್ರಾಯೋಗಿಕ ಧರ್ಮನೀತಿ, ರಾಜನೀತಿ ಮುಂತಾದವುಗಳನ್ನು ಕುರಿತು ಬೇರೆಬೇರೆಯಾಗಿ ವಿವೇಚನೆ ಮಾಡಿರುವುದು ಕಂಡುಬರುತ್ತದೆ. ಈ ರೀತಿಯ ಧರ್ಮನೀತಿಯನ್ನು ಕುರಿತ ಗ್ರಂಥಗಳೆಂದರೆ:– ವಿಷ್ಣುಶರ್ಮರ – पञ्चतन्त्रम्, ನಾರಾಯಣಪಂಡಿತರ – हितोपदेश, ಭರ್ತೃಹರಿಯ – नीतिशतकम्, ಸೋಮದೇವನ – कथासरित्सा–गरः, ದಂಡಿಯ – दशकुमारचरितम्, ಕ್ಷೇಮೇಂದ್ರನ – बृहत्कथामञ्जरी, ಮೊದಲಾದವುಗಳು ವಿಶೇಷವಾಗಿ

ರಾಜನೀತಿಯನ್ನು ಕುರಿತು ರಚಿಸಲಾದ ಪ್ರಮುಖ ಕೃತಿಗಳು. ಕೌಟಿಲ್ಯನ – अर्थशास्त्र, ಶುಕ್ರಾಚಾರ್ಯರ – शुक्रनीति, ಕಾಮಾಂದಕ ಮುನಿಯ – कामान्दकीय नीतिसार ಈ ಗ್ರಂಥಗಳಲ್ಲಿ ಅರ್ಥಶಾಸ್ತ್ರ ಮತ್ತು ನೀತಿಶಾಸ್ತ್ರ ಎಂಬ ಪದಪ್ರಯೋಗಗಳಿದ್ದರೂ ಅವುಗಳಲ್ಲಿ ಚರ್ಚಿತವಾಗಿರುವ ಅಂಶಗಳು ಮಾತ್ರ ಒಂದೇ ಆಗಿರುತ್ತವೆ. ಈ ಗ್ರಂಥಗಳಲ್ಲಿ ವಿವರಿಸಲಾಗಿರುವ ಅನೇಕ ವಿಷಯಗಳು ಇಂದಿಗೂ ನಮ್ಮ ದೇಶದ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ವಲಯಗಳಿಗೆ ಅತ್ಯಂತ ಪ್ರಸ್ತುತವಾಗಿವೆ ಎಂಬುದು ಈ ಕೃತಿಗಳ ವಿಶಿಷ್ಟತೆಯಿಂದ ತಿಳಿದುಬರುತ್ತದೆ. ಈ ಮೂರುಕೃತಿಗಳಲ್ಲಿ ಇಂದಿಗೂ ಜಗತ್ಪ್ರಸಿದ್ಧ ಕೃತಿಯೇ ಚಾಣಕ್ಯನ ಅರ್ಥಶಾಸ್ತ್ರ ಆಗಿರುತ್ತದೆ.[16] ಇದರ ಆಧಾರದ ಮೇಲೆಯೇ ರಚಿತವಾಗಿರುವುದು ವಿಷ್ಣುಶರ್ಮರ पञ्चतन्त्रम् ।

ಸಂಸ್ಕೃತ ಕಥಾಸಾಹಿತ್ಯದ ಪ್ರಾಚೀನ ಕಥೆಗಳೆಂದರೆ ಜನಪದಕಥೆಗಳೇ ಆಗಿವೆ. ದೈವಾಂಶಸಂಭೂತರಾದ ಯಕ್ಷ, ಗಂಧರ್ವ, ವಿದ್ಯಾಧರರ ಅದ್ಭುತ, ಹಾಗೂ ರೋಮಾಂಚಕಾರಿ ಕೃತ್ಯಗಳೇ ಇವುಗಳ ವಸ್ತು. ಕಥೆಗಾರನ ಕಲ್ಪನಾಶಕ್ತಿ ಹಾಗೂ ಊಹೆ ಎಷ್ಟರಮಟ್ಟಿಗೆ ವಿಶಿಷ್ಟವಾದದ್ದಾಗಿರುತ್ತದೋ, ಅಷ್ಟೂ ಕಥೆಗಳ ಸ್ವಾರಸ್ಯ ಅಧಿಕವಾಗಿರುತ್ತದೆ. ಆಯಾ ಕಾಲದ ಮತಧರ್ಮಗಳ ಪಾತ್ರವೂ ಇಂತಹ ಜನಪ್ರಿಯ ಕಥೆಗಳ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿದೆ. ಜೈನ, ಬೌದ್ಧ ಧರ್ಮಗಳು ಇಂತಹ ಕಥೆಗಳನ್ನು ಧರ್ಮ ಪ್ರಚಾರದಲ್ಲಿ ಅತ್ಯಧಿಕವಾಗಿ ಬಳಸಿಕೊಂಡಿರುವುದನ್ನು ಕಾಣಬಹುದು. ಇಂತಹ ಕಥೆಗಳಲ್ಲಿ ಮುಖ್ಯವಾದವುಗಳೆಂದರೆ **"ಗುಣಾಢ್ಯನ–ಬೃಹತ್ಕಥಾಸಂಗ್ರಹ"**. ಸಂಸ್ಕೃತ ಸಾಹಿತ್ಯದ ಮೇಲೆ ಬೃಹತ್ಕಥೆಯ ಪ್ರಭಾವ ಅಪಾರವಾಗಿದೆ. ಇದರಿಂದ ಸಂಸ್ಕೃತ ಕವಿಗಳು ತಮ್ಮ ಕಥೆಗಳ ರೂಪರೇಷೆಗಳನ್ನು ತೆಗೆದುಕೊಳ್ಳುತ್ತಿದ್ದರು. ದನಂಜಯನು ತನ್ನ ಕೃತಿಯಾದ ದಶರೂಪಕದ ನಾಟಕಗಳ ಉಪಜೀವ್ಯ ಕಾವ್ಯಗಳಲ್ಲಿ ರಾಮಾಯಣದ ನಂತರ ಬೃಹತ್ಕಥೆಯನ್ನೂ ಹೆಸರಿಸುತ್ತಾನೆ– रामायणादि च विभाव्य बृहत्कथाञ्च ।(दशरूपक–1/38) ಇದು ಮೂಲತಃ ಪ್ರಾಕೃತದಲ್ಲಿದ್ದರೂ, ಮುಂದಿನ ಸಂಸ್ಕೃತಕವಿಗಳಿಗೆ ಪ್ರಮುಖ ಆಕರಗ್ರಂಥವಾಗಿದ್ದು, ರಾಮಾಯಣ ಮಹಾಭಾರತದಷ್ಟೇ ಪ್ರಾಧಾನ್ಯತೆ ಪಡೆದಿದೆ. ಸಂಸ್ಕೃತದಲ್ಲಿ ಉದಯನನಿಗೆ ಸಂಬಂಧಿಸಿದ ಕಾವ್ಯನಾಟಕಗಳು, ಬಾಣನ **"ಕಾದಂಬರಿ"**, ಭವಭೂತಿಯ **"ಮಾಲತೀಮಾಧವ"**, ಹರ್ಷನ **"ನಾಗಾನಂದ"**, ಮೊದಲಾದ ಅನೇಕ ಪ್ರಮುಖ ಕೃತಿಗಳಿಗೆ ಬೃಹತ್ಕಥೆಯೇ ಮೂಲ ಆಕರವಾಗಿದೆ. ದಂಡಿಯು– भूतभाषामयीं प्राहुरद्भुतार्थां बृहत्कथाम् ಎಂದು ಇದರ ಪ್ರಶಂಸೆಗೈದಿದ್ದಾನೆ. ಆದರೆ ವ್ಯಾಸವಾಲ್ಮೀಕಿಯರಿಗೆ ಸಮನೆಂದು ಮೆಚ್ಚುಗೆ ಪಡೆದಿರುವ ಗುಣಾಢ್ಯನ **"ಬೃಹತ್ಕಥೆ"** ಉಪಲಬ್ಧವಿರುವುದಿಲ್ಲ, ಆದರೆ ಅದರ ಸಂಗ್ರಹಗಳು ಮಾತ್ರ

---

16. शुक्राचार्यविरचित शुक्रनीत्यां राजधर्मः ಸಂ.ಕುಮುದವಲ್ಲಿ ಕೆ. ಆರ್. ಮತ್ತು ಪದ್ಮಜಾ ಎಂ. ಆರ್., ಪ್ರಸಾರಾಂಗ, ಬೆಂಗಳೂರು ನಗರ ವಿಶ್ವವಿದ್ಯಾಲಯ, ಸೆಂಟ್ರಲ್ ಕಾಲೇಜು ಆವರಣ, ಬೆಂಗಳೂರು–560001.
(2020-21 Degree Text)

ಉಪಲಬ್ಧವಾಗಿವೆ. **"ಕಥಾಸರಿತ್ಸಾಗರ"**ವೂ ಬೃಹತ್ಕಥೆಯ ಮತ್ತೊಂದು ಪದ್ಯಾತ್ಮಕ ಸಂಗ್ರಹ. ಇದನ್ನು ಕಾಶ್ಮೀರದ ಸೋಮದೇವನು ಕ್ರಿ.ಶ.1070ರ ಸುಮಾರಿನಲ್ಲಿ ರಚಿಸಿದನು.[17] ಬೃಹತ್ಕಥೆಯ ಜೊತೆಗೆ ಹೆಸರಿಸಬೇಕಾದ ಇನ್ನೊಂದು ಅತ್ಯಂತ ಜನಪ್ರಿಯ ಕಥಾಸಂಗ್ರಹ **"ಪಂಚತಂತ್ರ"**ಸರಳ ಗದ್ಯಪದ್ಯ ಮಿಶ್ರಿತ ಚಂಪೂ ಶೈಲಿಯಲ್ಲಿ ರಚಿತವಾದದ್ದು.

ಇದರಲ್ಲಿನ ಕಥೆಗಳು ಮಾನವನ ನಡೆ-ನುಡಿ, ರೀತಿ-ನೀತಿ, ಆಚಾರ-ವಿಚಾರಗಳನ್ನು ಮೃಗಪಕ್ಷಿಗಳಿಗೆ ಆರೋಪಿಸಿ ಹೇಳುತ್ತದೆ. ನೀತಿಬೋಧೆಯೇ ಇವುಗಳ ಮುಖ್ಯ ಗುರಿ. ಅಲ್ಲಲ್ಲಿ ತಿಳಿಹಾಸ್ಯ, ವ್ಯಂಗ್ಯಗಳು ತೋರುತ್ತವೆ. ಪಂಚತಂತ್ರ ಎಂದರೆ ಐದು ತಂತ್ರಗಳಿಂದ ಕೂಡಿದ ಕೃತಿ. ತಂತ್ರವೆಂದರೆ ಶಾಸ್ತ್ರ, ತತ್ವಸಿದ್ಧಾಂತ, ರಾಜ್ಯಭಾರ ಎಂಬೆಲ್ಲ ಅರ್ಥಗಳಿವೆ. ಇಲ್ಲಿ ರಾಜನ ಮಕ್ಕಳಿಗೆ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಮತ್ತು ನೀತಿಶಾಸ್ತ್ರವನ್ನು ಪ್ರಾಣಿಪಕ್ಷಿಗಳ ಕಥೆಗಳ ಮೂಲಕ ಬೋಧಿಸಲಾಗಿದೆ. ಪ್ರತಿಯೊಂದು ತಂತ್ರದಲ್ಲಿಯೂ ಒಂದೊಂದು ಕಥಾಮುಖವಿದೆ.[18]

ಪ್ರಾಚೀನ ಜನಪ್ರಿಯ ಕಥೆಗಳಲ್ಲಿ ಬೃಹತ್ಕಥೆಯ ಬಳಿಕ ವೇತಾಳ ಪಂಚವಿಂಶತಿಯು ಸಂಸ್ಕೃತದಲ್ಲಿ ರಚಿತವಾಗಿರುವ ಸ್ವಾರಸ್ಯವಾದ 25 ಕಥೆಗಳ ಸಂಕಲನ. ಇದರಲ್ಲಿ ಕಥಾನಿರೂಪಣೆ ಸೊಗಸಾಗಿದೆ, ಸುವ್ಯವಸ್ಥಿತವಾಗಿದೆ.



17. **Chandra Rajan,** VISNU SARMA,( English Translation)The Panchatantra,Introduction - P-xlvii-xlviii, Penguin Random House, Gurgaon, Haryana 122002.(1993)

18. 14.139.116.20. bitstream, 08-chapter-3 ಕಥೆ-ಅರ್ಥ-ಸ್ವರೂಪ-ಲಕ್ಷಣಗಳು, PDF, page-78.

## ಅಧ್ಯಾಯ – 1 – 2:

## ಸಂಸ್ಕೃತ ಸಾಹಿತ್ಯದಲ್ಲಿ ನೀತಿಕಾವ್ಯಗಳು संस्कृत साहित्ये नीतिकाव्यः।

## ನೀತಿಕಾವ್ಯದ ಉದ್ಭವ ಹಾಗೂ ವಿಕಾಸ. नीतिकाव्यस्य उद्भवः एवं विकासः

लोकयात्रा भयं लज्जा दाक्षिण्यं त्यागशीलता ।

पञ्च यत्र न विद्यन्ते न कुर्यात् तत्र संगतिम् ॥[19]

ಯಾರಲ್ಲಿ ವ್ಯವಹಾರ ಜ್ಞಾನ, ಭಯ, ನಾಚಿಕೆ, ದಾಕ್ಷಿಣ್ಯ ಸ್ವಭಾವ ಹಾಗೂ ತ್ಯಾಗಬುದ್ಧಿ ಈ ಐದು ಗುಣಗಳು ಇರುವುದಿಲ್ಲವೋ ಅಂತಹವರ ಸ್ನೇಹವನ್ನು ಮಾಡಲೇಬಾರದು.

**ನೀತಿಕಾವ್ಯದ ಹಿನ್ನೆಲೆ.**

ಸಂಸ್ಕೃತ ಸಾಹಿತ್ಯದಲ್ಲಿ ನೀತಿ ಕಾವ್ಯದ ಪ್ರಕಾರವು ಅತ್ಯಂತ ಪ್ರಾಚೀನ ಹಾಗೂ ಸಮೃದ್ಧವಾಗಿದೆ. ಈ ನೀತಿ ಕಾವ್ಯಗಳಲ್ಲಿ ಧರ್ಮ ಹಾಗೂ ಭಾರತೀಯ ದರ್ಶನದ ಮೂಲ ತತ್ವವನ್ನು ಸರಳ ಶಬ್ದಗಳಿಂದ ವ್ಯಕ್ತಗೊಳಿಸಲಾಗಿದೆ. ವೈದಿಕ ಹಾಗೂ ಲೌಕಿಕ ಎರಡೂ ಪ್ರಕಾರದ ಸಂಸ್ಕೃತ ಸಾಹಿತ್ಯ ಕ್ಷೇತ್ರದಲ್ಲಿ ನಮಗೆ ಆದರ್ಶ ಹಾಗೂ ಉಪದೇಶಾತ್ಮಕ ಪ್ರಕ್ರಿಯೆಯೂ ಸ್ಪಷ್ಟವಾಗಿ ಗೋಚರಿಸುತ್ತದೆ.

ಡಾಕ್ಟರ್ ಸೂರ್ಯಕಾಂತ್ ಜೀ ರವರ ಪ್ರಕಾರ "ಸಂಸ್ಕೃತದ ಬಹುಶಃ ಎಲ್ಲ ಗ್ರಂಥಗಳಲ್ಲೂ ನೀತಿ ವಿಷಯದ ಸೂಕ್ತಿಗಳು ಹಾಗೂ ಲೋಕೋಕ್ತಿಗಳು ಸಾಕಷ್ಟು ಹರಡಿಕೊಂಡಿರುತ್ತವೆ. ಇವುಗಳಲ್ಲಿ ಜೀವನಾನುಭವದ ವಿಚಾರಗಳು ಬಹಳಪರಿಣಾಮಕಾರಿಯಾಗಿ ಅಭಿವ್ಯಕ್ತಗೊಂಡಿರುತ್ತವೆ."

ಆಚಾರ್ಯ ಬಲದೇವ ಉಪಾಧ್ಯಾಯರು.. "ಸಂಸ್ಕೃತ ಸಾಹಿತ್ಯದಲ್ಲಿ ನೀತಿ ವರ್ಣನೆಯ ವಿಶೇಷ ಗ್ರಂಥಗಳು ಉಪಲಬ್ಧವಿರುತ್ತವೆ. ಅವುಗಳಲ್ಲಿ ಸೂತ್ರಾತ್ಮಕ ಪದ್ಧತಿಯಲ್ಲಿ ಜೀವನವನ್ನು ಸುಖಮಯ ಹಾಗೂ ಲಾಭದಾಯಕವನ್ನಾಗಿ ಮಾಡುವುದಕ್ಕಾಗಿ ನಾನಾ ಉಪಯೋಗಿ ವಿಷಯಗಳನ್ನು ವರ್ಣನೆ ಮಾಡಲಾಗಿದೆ." ವಿ.ವರದಾಚಾರ್ಯರು?. "ಈ ಪ್ರಕಾರದ ಕಾವ್ಯದಲ್ಲಿ ಧರ್ಮದರ್ಶನ, ಸದಾಚಾರ ಮತ್ತು ರಾಜನೀತಿಯ ವರ್ಣನೆಯಿರುತ್ತದೆ. ಹಿಂದೂ, ಜೈನ ಮತ್ತು ಬೌದ್ಧ ಧರ್ಮಗಳು ಈ ಪ್ರಕಾರದ ಕಾವ್ಯಗಳ ಸಮೃದ್ಧಿಗಾಗಿ ಪೂರ್ಣ ಪ್ರಯತ್ನ ನಡೆಸಿವೆ. ಈ ಪ್ರಕಾರದ ಕವಿತೆಗಳಿಗೆ ನೀತಿ ಕಾವ್ಯಗಳೆಂದು ಕರೆಯಲಾಗಿದೆ."

19. चाणक्य नीतिः 1–10

ಒಂದು ಸ್ಪಷ್ಟ ವಿಚಾರವೆಂದರೆ, ಯಾವ ಕಾವ್ಯದಲ್ಲಿ ಮಾನವ ಜೀವನದ ಕಲ್ಯಾಣಕ್ಕಾಗಿ ಸರಳ ಹಾಗೂ ಸರಸ ಶಬ್ದಗಳಲ್ಲಿ ಲೋಕವ್ಯವಹಾರ ನೀತಿಯನ್ನು ವರ್ಣನೆ ಮಾಡಲಾಗಿದೆಯೋ, ಅವುಗಳನ್ನು ನೀತಿ ಕಾವ್ಯವೆಂದು ಕರೆಯಲಾಗಿದೆ.

**ಐತಿಹಾಸಿಕತೆ:–**

"वेदस्य सर्वविद्यानिधानत्वम्" "यदिहास्ति तदन्यत्र यन्नेहास्ति न तत् क्वचित्"

ಅರ್ಥಾತ್ ಇದರಲ್ಲಿರುವುದು ಅನ್ಯತ್ರದಲ್ಲಿಯೂ ಇರುವುದು, ಇದರಲ್ಲಿರದಿರುವುದು ಮತ್ತೆಲ್ಲೂ ಇರುವುದಿಲ್ಲ. ಈ ಒಂದು ಉಕ್ತಿಯೂ ವೇದಗಳಿಗೆ ಚರಿತಾರ್ಥವಾಗಿದೆ. ಇದರನುಸಾರ ವೇದಗಳಲ್ಲಿಯೂ ಸಮಸ್ತ ತತ್ವಗಳು, ವಿದ್ಯಾ ವಿಧಾನಗಳು, ಮೂಲವಿದ್ಯಮಾನಗಳು ಲಭ್ಯವಿರುತ್ತವೆ. ಆರ್ಯರ ಸರ್ವಾಧಿಕ ಪೂಜ್ಯ ಹಾಗೂ ಪ್ರತಿಷ್ಠಿತ ಗ್ರಂಥ ಋಗ್ವೇದದಲ್ಲಿ ನೀತಿತತ್ವವು ಸಮೃದ್ಧವಾಗಿ ಉಪದೇಶಿಸಲ್ಪಟ್ಟಿದೆ. ಐತರೇಯ ಬ್ರಾಹ್ಮಣದಲ್ಲೂ ಇಂಥಹ ಅನೇಕ ಪ್ರಸಂಗಗಳನ್ನು ವಿವೇಚಿಸಲಾಗಿದೆ. ಇವುಗಳಲ್ಲಿನ ಉಪಾಖ್ಯಾನ ಮಾಧ್ಯಮದಲ್ಲಿ ನೀತಿತತ್ವ ಪ್ರಕಟಗೊಳ್ಳುತ್ತವೆ. ಉಪನಿಷತ್ತು ಹಾಗೂ ಸೂತ್ರ ಗ್ರಂಥಗಳಲ್ಲಿಯೂ ನೀತಿತತ್ವವು ಸಮೃದ್ಧವಾಗಿ ಉಪಲಬ್ಧವಿದೆ. ಸಮಸ್ತ ಸಂಸ್ಕೃತ ಸಾಹಿತ್ಯ ಇತಿಹಾಸಕಾರರ ಅಭಿಮತದಂತೆ ನೀತಿ ಪದ್ಯಗಳ ವಿಕಾಸವು ಸ್ಪಷ್ಟವಾಗಿ ಋಗ್ವೇದದ ಕಾಲದಿಂದ ಕಂಡುಬಂದಿರುತ್ತದೆ.

**ನೀತಿಕಾವ್ಯದ ವಿಶೇಷ ಲಕ್ಷಣಗಳು:**

1. **ಲೋಕವ್ಯವಹಾರದಲ್ಲಿ ಸಾಮರಸ್ಯ (Harmony in Public Behaviour)**

ನೀತಿಕಾವ್ಯಗಳಲ್ಲಿ ಕಾವ್ಯಕಾರರ ಮುಖ್ಯ ಉದ್ದೇಶವು ಸಾರ್ವಜನಿಕ ಲೋಕರಂಜನೆಯ ಜೊತೆಗೆ ಲೋಕ ವ್ಯವಹಾರದ ಶಿಕ್ಷಣವನ್ನು ಒದಗಿಸುವುದಾಗಿದೆ. ಇದರ ಪ್ರಮುಖ ಉದಾಹರಣೆಯೆಂದರೆ ಮಹಾಭಾರತದ ಶ್ರೀಮದ್ಭಗವದ್ಗೀತಾ ಹಾಗೂ ವಿದುರನೀತಿ ಎರಡೂ ಬಹಳ ದೊಡ್ಡ ಪ್ರಸಂಗಗಳಾಗಿವೆ.

2. **ಆಧ್ಯಾತ್ಮಿಕತೆ (Spirituality)**

ನೀತಿಕಾವ್ಯದಲ್ಲಿ ಆಧ್ಯಾತ್ಮ ತತ್ವವು ಸರ್ವತ್ರ ದೃಷ್ಟಿಗೋಚರವಾಗುತ್ತದೆ. ಚತುರ್ವಿಧ ಫಲಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷ ಸಂಬಂಧವಾದ ನೀತಿ ವಿಚಾರಗಳು, ಪುನರ್ಜನ್ಮದಿಂದ ಮುಕ್ತಿ, ಸತ್ಯಾನ್ವೇಷಣ ಸಂಬಂಧೀ ವಾಸ್ತವಗಳು ಪದೇಪದೇ ವಿದ್ಯಮಾನಗೊಳ್ಳುತ್ತವೆ... ಉದಾಹರಣೆಗೆ:–

वासांसि जीर्णानि यथा विहाय नवानि गृह्णाति नरोऽपराणि।

तथा शरीराणि विहाय जीर्णान्यन्यानि संयाति नवानि देही ॥[20]

ಹೇಗೆ ಮನುಷ್ಯನು ಹಳೆಯ ವಸ್ತುಗಳನ್ನು ತ್ಯಜಿಸಿ, ಬೇರೆ ಹೊಸ ವಸ್ತ್ರಗಳನ್ನು ಧರಿಸಿಕೊಳ್ಳುತ್ತಾನೆಯೋ ಹಾಗೆಯೇ ಜೀವಾತ್ಮನು ಹಳೆಯ ಶರೀರಗಳನ್ನು ಬಿಟ್ಟು ಬೇರೆ ಹೊಸ ಶರೀರಗಳಲ್ಲಿ ಪ್ರಾಪ್ತಗೊಳ್ಳುವನು.

**೩. ಸದಾಚಾರ (Virtue)**

ನೀತಿಕಾವ್ಯಗಳಲ್ಲಿ ಉನ್ನತಿಯ ಮಾರ್ಗಗಳಲ್ಲಿ ಕಂಡುಬರುವ ಸದ್ಗುಣಗಳ ಹಾಗೂ ದುರ್ಗುಣಗಳನ್ನು ಹಾಗೂ ಅವುಗಳ ಮೌಲ್ಯಗಳನ್ನು ನಿರ್ಧರಿಸುವ ಅಂಶಗಳನ್ನು ಸ್ಪಷ್ಟಪಡಿಸಲಾಗುತ್ತದೆ. ಜೀವನದ ಒಳ್ಳೆಯದು ಮತ್ತು ಕೆಟ್ಟದ್ದು, ಒಳ್ಳೆಯ ಹಾಗೂ ಕೆಟ್ಟ ವ್ಯಕ್ತಿಗಳ ಬಗ್ಗೆ ವಿಚಾರಮಾಡುತ್ತಾ ಸದ್ಗುಣಗಳ ವಿಶೇಷತೆಯ ಬಗ್ಗೆ ಸ್ಪಷ್ಟಪಡಿಸಿ ಉಪದೇಶಿಸುವುದು.

यथा चित्तं तथा वाचो  यथा वाचस्तथा क्रियाः ।

चित्ते वाचि क्रियायांच साधूनामेकरूपता ॥[21]

ಮನಸ್ಸಿನಂತೆ ಮಾತು,ಮಾತಿನಂತೆ ಕ್ರಿಯೆ.ಮನಸ್ಸು, ಮಾತು,ಕ್ರಿಯೆಗಳಲ್ಲಿ ಸತ್ಪುರುಷರು ಒಂದೇ ಬಗೆಯಾಗಿರುತ್ತಾರೆ.

**4. ಪ್ರಾಣಿಯನ್ನು ಪ್ರೀತಿಸುವುದು(Love Of the Animal)**

ನೀತಿಕಾವ್ಯಗಳಲ್ಲಿ ಪ್ರಾಣಿಪ್ರೀತಿಯ ಬಗ್ಗೆ ಅಪಾರ ನಿದರ್ಶನಗಳಿವೆ.

निर्गुणेष्वपि सत्वेषु दयां कुर्वन्ति साधवः।

नहि संहरते ज्योत्स्नां चन्द्रश्चाण्डालवेश्मनि॥[22]

ಗುಣರಹಿತವಾದ ಪ್ರಾಣಿಗಳಾದರೂ ಸಜ್ಜನರು ಅವುಗಳಲ್ಲೂ  ದಯೆಯನ್ನು ಹೊಂದಿರುತ್ತಾರೆ. ಅವರಿಗೆ ಗುಣಯುಕ್ತ ಗುಣರಹಿತ ಎಂಬ ಭೇದವಿರುವುದಿಲ್ಲ. ಚಂದ್ರನು ಚಂಡಾಲನ ಮನೆಯಾದರೂ ತನ್ನ ಕಿರಣಗಳನ್ನು ಹಿಂದಕ್ಕೆ ಪಡೆಯುವುದಿಲ್ಲ. ಅವನು ಸಜ್ಜನರ ಮನೆಯ ಮೇಲೆ ಎಷ್ಟು ಬೆಳದಿಂಗಳನ್ನು ಪಸರಿಸುವನೋ ಅಷ್ಟೇ ಚಂಡಾಲನ ಮನೆಯ ಮೇಲೂ ಪಸರಿಸುತ್ತಾನೆ. ಅಂತೆಯೇ ಸಜ್ಜನರು.

20. भगवद्गीता मूल श्लोक 2–22.
21. सुभाषितानि, संस्कृतभारती. Sanskrit pearls.
22. हितोपदेशःमित्रलाभःश्लो–61.

**೫. ನಿಜವಾದ ಸ್ನೇಹ (Real Friendship)**

ಈ ನೀತಿಕಾವ್ಯಗಳಲ್ಲಿ ನಿಜವಾದ ಸ್ನೇಹದ ಬಗ್ಗೆ ವಿಶೇಷ ಒತ್ತನ್ನು ನೀಡಲಾಗಿದೆ. ಒಳ್ಳೆಯ ಸ್ನೇಹವು ಪರಸ್ಪರ ಹೊಂದಾಣಿಕೆ, ತ್ಯಾಗ ಆಧಾರಿತವಾಗಿರುತ್ತದೆ.ಇದರಲ್ಲಿ ಬದಲಾದ ಭಾವನೆಗಳಿಗೆ ಸ್ಥಾನವೇ ಇರುವುದಿಲ್ಲ.

क्षीरेणात्मगतोदकाय हि गुणदत्ताः पुरा ते अखिला ।

क्षीरोत्तापमववेक्ष्य तेन पयसा स्वात्माकृशानौ हुतः॥

गन्तुः पावकमुन्मनस्तदभवद दृष्ट्वा तु मित्रपदं ।

युक्तं तेन जलेन शाम्यसि सतां मैत्रीपुनस्वीदृशी ॥[23]

ಮೊದಲಾಗಿ ಹಾಲು ತನ್ನಲ್ಲಿಗೆ ಬಂದು ಸೇರಿದ ನೀರಿಗೆ ತನ್ನ ಗುಣವನ್ನು ನೀಡಿತು. ಕಾಯಿಸಲ್ಪಟ್ಟಾಗ ಆ ನೀರು ಹಾಲಿನ ಸಂತಾಪವನ್ನು ಸಹಿಸಲಾಗದೆ, ತನ್ನನ್ನೇ ಬೆಂಕಿಯಲ್ಲಿ ದಹಿಸಿಕೊಳ್ಳುತ್ತದೆ. ಆಗ ಹಾಲೂ, ಗೆಳೆಯನಾದ ನೀರಿನ ಸಂಕಟವನ್ನು ನೋಡಿ, ತಾನೂ ಬೆಂಕಿಗೆ ಬೀಳಲು ಸಿದ್ಧವಾಗುತ್ತದೆ. ಆದರೆ, ನೀರಿನಿಂದ ಪುನಃ ಕೂಡಿಕೊಂಡಾಗ ಹಾಲು ತಣ್ಣಗಾಗುತ್ತದೆ. ಸಜ್ಜನರ ಗೆಳೆತನ ಇದೇ ರೀತಿಯದಾಗಿರುತ್ತದೆ.

**೬. ದುರ್ಜನ ನಿಂದೆ (Abusing the wicked)**

ಸಮಾಜಕ್ಕೆ ಸದಾಚರಣೆಯ ಶಿಕ್ಷಣ ನೀಡುವುದಕ್ಕೋಸ್ಕರ ದುಷ್ಟರ ಸ್ವಭಾವವನ್ನು ನಿರೂಪಿಸುತ್ತಾ, ಅವರ ದುರ್ಗುಣಗಳನ್ನು ನಿಂದಿಸಲಾಗುತ್ತದೆ.

**7. ಜಿಪುಣತನ, ಬಡತನ, ದಾರಿದ್ರ್ಯ(Poverty, Miserliness, Indigence)**

ಈ ಕಾವ್ಯಗಳಲ್ಲಿ, ಕೃಪಣತೆ ಮತ್ತು ದೀನತೆಯ ದೋಷಗಳನ್ನು ಉಲ್ಲೇಖಿಸುತ್ತಾ ಮಾನವ ಜೀವನದ ಮೇಲೆ ಬೀರುವ ದುಷ್ಪರಿಣಾಮಗಳನ್ನು ತಿಳಿಹೇಳಲಾಗುತ್ತದೆ.

**೮. भाग्य की अवश्यंभाविता (Must of Fate)**

ನೀತಿಕಾವ್ಯಗಳಲ್ಲಿ ವಿಧಿಯ ಅನಿವಾರ್ಯತೆ ಬಗ್ಗೆಯೂ ವರ್ಣನೆ ಮಾಡಲಾಗಿರುತ್ತದೆ.

---

23. भर्तृहरि नीतिशतकम्–श्लो–66

सृजति तावदशेषगुणाकरं पुरुषरत्नमूलकरणं भुवः ।

तदापि तक्षणभंगिंकरोति चेदह कष्टमपण्डितता विधेः ॥[24]

೯. कर्मवाद **(work is worship)**

ನೀತಿಕಾವ್ಯಗಳಲ್ಲಿ ನಿಷ್ಕಾಮ ಭಾವನೆಯಿಂದ ಕರ್ಮವನ್ನು ಕೈಗೊಳ್ಳಬೇಕು ಎಂಬ ವಿಚಾರವನ್ನು ಹೇಳುತ್ತಾ, ಕರ್ಮವಾದದ ಪ್ರಾಧಾನ್ಯತೆಯನ್ನು ಮನದಟ್ಟು ಮಾಡಲಾಗಿದೆ.

कर्मण्येवाधिकारस्ते, मा फलेषु कदाचन ।

मा कर्मफलहेतुर्भूर्मा ते संङ्गोल्स्त्वकर्मणि ॥[25]

೧೦. आशावाद **(Optimism)**

ನೀತಿಕಾವ್ಯಗಳಲ್ಲಿ ನಿರಾಶಾವಾದಕ್ಕೆ ಯಾವುದೇ ಸ್ಥಾನಮಾನವನ್ನು ನೀಡಲಾಗಿರುವುದಿಲ್ಲ.

आशाहि परमज्योतिः नैराश्यं परमंतमः (The Hope Experiment)

## नीतिकाव्यस्य उद्भवः

ನೀತಿಕಾವ್ಯಗಳ ಉದ್ಭವವು ವಿಶ್ವಸಾಹಿತ್ಯದ ಪ್ರಾಚೀನ ಗ್ರಂಥ ಋಗ್ವೇದದ ಕಾಲದಲ್ಲಿಯೇ ಉಂಟಾಗಿದೆಯೆಂದು ಮಾನ್ಯ ಮಾಡಲಾಗಿದೆ. ಇದರ ಜೊತೆಗೆ ಬ್ರಾಹ್ಮಣಗ್ರಂಥಗಳು, ಉಪನಿಷತ್ತು, ರಾಮಾಯಣ ಮಹಾಭಾರತದಲ್ಲೂ ಧರ್ಮ ಮತ್ತು ನೀತಿಯ ಸದುಪದೇಶಗಳು ಸಮ್ಮಿಳಿತವಾಗಿವೆ. ಈ ನೀತಿ ಗ್ರಂಥಗಳಲ್ಲಿ ತತ್ವಜ್ಞಾನ ಹಾಗೂ ವೈರಾಗ್ಯದ ಸುಂದರ ಸನ್ನಿವೇಶಗಳು ಕಂಡುಬರುತ್ತವೆ. ಇವುಗಳಲ್ಲಿ ಬಹುಶಃ ಎಲ್ಲ ಧಾರ್ಮಿಕ ವಿಶ್ವಾಸಗಳ ಉಲ್ಲೇಖ ಹಾಗೂ ಉಪದೇಶವಿರುತ್ತದೆ. ಈ ನೀತಿಗ್ರಂಥಗಳು ಪುರುಷ ಜೀವನದ ವ್ಯವಹಾರದಲ್ಲಿ ಬರಬಹುದಾದ ಅನೇಕ ವಿಚಾರಗಳ ಜೊತೆಜೊತೆಗೆ ಜೀವನದ ನಿಸ್ಸಾರತೆ, ನಿರರ್ಥಕತೆಯ ನಿರೂಪಣೆಯೊಂದಿಗೆ ಮಾನವ ಮಾತ್ರನಾದವನು ಜೀವನದ ಸಾರ್ಥಕತೆಗೆ ಹಾಗೂ ಮೋಕ್ಷಸಾಧನಗೆ ಮಾರ್ಗದರ್ಶನ ನೀಡುತ್ತವೆ. ಮಹಾಭಾರತದ ಎರಡು ದೊಡ್ಡ ಪ್ರಸಂಗಗಳಾದ ಶ್ರೀಮದ್ಭಗವದ್ಗೀತಾ ಹಾಗೂ ವಿದುರನೀತಿ ಸ್ವಯಂ ನೀತಿಕಾವ್ಯಗಳಾಗಿದ್ದು ಸರ್ವಶ್ರೇಷ್ಠ ಗ್ರಂಥಗಳು ಎನಿಸಿಕೊಂಡಿವೆ. ಭಗವದ್ಗೀತೆಯಂತೂ ಭಾರತೀಯ ಸಂಸ್ಕೃತಿಯ ಅಮೂಲ್ಯ ರತ್ನವಾಗಿದೆ. ಈ ಒಂದು

24. भर्तृहरि नीतिशतक –श्लो–93
25. श्रीमद्भगवद्गीता–2-47.

ಮಾಧ್ಯಮದಲ್ಲಿ ಜೀವನದ ಅನಿಯಮಿತತೆ, ಆತ್ಮದ ಅಮರತ್ವ, ನಿಷ್ಕಾಮಕರ್ಮವಾದ ಮುಂತಾದ ಶಿಕ್ಷಣ ಲಭ್ಯವಿರುತ್ತದೆ. ಇದೇ ಪ್ರಕಾರವಾಗಿ ವಿದುರನೀತಿಯಲ್ಲೂ ಕುಲಧರ್ಮ, ಸರ್ವಧರ್ಮ, ರಾಜಧರ್ಮ, ವಿಶ್ವಧರ್ಮ ಹಾಗೂ ಆತ್ಮದ ಧರ್ಮದ ವಿವಿಧ ಸ್ವರೂಪಗಳನ್ನು ಕಾಣಬಹುದು. ಈ ಕೆಳಗಿನ ಶ್ಲೋಕದಲ್ಲಿ ಸದ್ಗೃಹಸ್ಥನ ಮನೆಯಲ್ಲಿ ನಾಲ್ಕು ಜನರ ವಾಸದ ಅವಶ್ಯಕತೆಯನ್ನು ಹೇಳಲಾಗಿದೆ.

चत्वारि ते तात गृहे वसन्तु श्रियाभिजुष्टस्य गृहस्थधर्मे वृद्धो ।

ज्ञातिरवसन्नःकुलीनःसखा दरिद्रो भगिनी चानपत्या ॥[26]

ಅಂದರೆ ಎಲೈ ತಂದೆಯೇ ಗೃಹಸ್ಥ ಜೀವನದಲ್ಲಿ ಲಕ್ಷ್ಮೀಪುತ್ರನ ಮನೆಯಲ್ಲಿ ನಾಲ್ಕು ಜನರು ವಾಸ ಮಾಡುತ್ತಾರೆ. ಕುಟುಂಬದ ವೃದ್ಧರು, ಸಂಕಟದಲ್ಲಿರುವ ಶ್ರೇಷ್ಠಕುಲದವ್ಯಕ್ತಿ, ನಿರ್ಧನಮಿತ್ರ ಮತ್ತು ನಿಸ್ಸಂತಾನದ ಸಹೋದರಿ.

**ನೀತಿ ಕಾವ್ಯದ ವಿಕಾಸ:-**

1. चाणक्य नीतिः

ನೀತಿಕಾವ್ಯದ ಸರ್ವ ಪ್ರಥಮ ಸಂಗ್ರಹವು चाणक्य संग्रहः ಇದನ್ನೇ ವಿದ್ವಾಂಸರು ಚಾಣಕ್ಯನೀತಿ ಎಂದು ಕರೆಯುತ್ತಾರೆ. ಇದರಲ್ಲಿ ವ್ಯವಹಾರ ಸಂಬಂಧವಾದ ಪದ್ಯಗಳ ಜೊತೆ ರಾಜನೀತಿ ಶ್ಲೋಕಗಳ ಸದ್ಭಾವವು ಪ್ರಾಪ್ತವಾಗುತ್ತದೆ. ಈ ನೀತಿ ವಿಷಯ ಸದುಪದೇಶಗಳ ಸಂಬಂಧ ಚಂದ್ರಗುಪ್ತ ಮೌರ್ಯನ ಪ್ರಖ್ಯಾತ ಗುರು ಅಮಾತ್ಯ ಚಾಣಕ್ಯನೊಡನೆ ಸೇರಿಸಲ್ಪಟ್ಟಿದೆ. ಆದರೂ ಇದರ ಲೇಖಕ ಅರ್ಥಶಾಸ್ತ್ರ ರಚಿಸಿದ ಚಾಣಕ್ಯನೇ ಎಂಬುದಕ್ಕೆ ಸ್ಪಷ್ಟತೆಯಿರುವುದಿಲ್ಲ. ಬಹುಶಃ ಚಾಣಕ್ಯನು ಒಬ್ಬ ಪ್ರತಿಷ್ಠಿತ ರಾಜನೀತಿಜ್ಞನಾಗಿರುವ ಕಾರಣ ಇದಕ್ಕೆ ಚಾಣಕ್ಯನೀತಿ ಎಂಬ ಹೆಸರಿನಲ್ಲಿ ಖ್ಯಾತಿಗೊಂಡಿದೆ. ಡಾ.ಲುಡ್ವಿಕ್ ಸ್ಮೆರ್ನ್ಬಾಕ್ ರವರು ಚಾಣಕ್ಯನೀತಿ ಸಂಪ್ರದಾಯ ಎಂಬ ಗ್ರಂಥದಲ್ಲಿ ಚಾಣಕ್ಯನೀತಿ ಸೂಕ್ತಗಳಲ್ಲಿ ಆರು ವಾಚನಗಳ ಸಂಗ್ರಹವನ್ನು ಸಂಪಾದಿಸಿ ಪ್ರಕಾಶಿತಗೊಳಿಸಿರುತ್ತಾರೆ.

1. वृद्ध चाणक्यः- ಇದರಲ್ಲಿ ಎರಡು कुब्जास्ति ಅಂತರ್ಗತವಾಗಿದ್ದು, ಮೊದಲನೆಯದು ಸಾಮಾನ್ಯ ವಾಚನ ಹಾಗೂ ಎರಡನೆಯದು ಅಲಂಕೃತ ವಾಚನ ಎಂದು ಹೇಳಲಾಗುತ್ತದೆ. ಪ್ರಥಮ ವಾಚನದಲ್ಲಿ ಎಂಟು ಅಧ್ಯಾಯಗಳಿವೆ. ದ್ವಿತೀಯ ವಾಚನದಲ್ಲಿ ಹದಿನೇಳು ಅಧ್ಯಾಯಗಳಿವೆ. ಶ್ಲೋಕಗಳು ಅಲ್ಲಲ್ಲಿ ಅನುಷ್ಟುಪ್ ಛಂದಸ್ಸಿನಲ್ಲಿರುತ್ತವೆ.

26. विदुरनीति श्लोकः75.

೨. चाणक्य नीतिशास्त्र:– ಇದು ಮೂರನೆಯ ವಾಚನ. ಇದರ ಅವತರಣಿಕೆಯಲ್ಲಿ ನಾನಾ ಪ್ರಕಾರದ ಶಾಸ್ತ್ರಗಳಿಂದ ಉಲ್ಲೇಖಿಸಲಾಗಿದ್ದು, ರಾಜನೀತಿಯ ಸಮುಚ್ಚಯ ಹಾಗೂ ಸಮಸ್ತ ಶಾಸ್ತ್ರಗಳ ಮೂಲವನ್ನು ಹೇಳಲಾಗಿದೆ.

नाना शास्त्रोद्धृतम् वक्ष्ये राजनीति समुच्चयम्

सर्वबीजमिदं शास्त्रं चाणक्यं सारसंग्रहम् ॥[27]

ಇದರಲ್ಲಿ ಅನುಷ್ಟುಪ್ ಛಂದಸ್ಸಿನ 108 ಶ್ಲೋಕಗಳು ನಿಬದ್ಧವಾಗಿವೆ.

೩.चाणक्य सारसंग्रहम् – ಇದರಲ್ಲಿ ಮೂರು ಶತಕಗಳಿವೆ. ಪ್ರತ್ಯೇಕ ಶತಕದಲ್ಲಿ ಪೂರ್ಣ 100 ಅನುಷ್ಟುಪ್ ಛಂದಸ್ಸಿನಲ್ಲಿ ವಿದ್ಯಮಾನಗೊಂಡಿವೆ. ಇದರಲ್ಲಿ ರಾಜಕೀಯ ವಿಸ್ತೃತ ಉದೇಶಗಳ ಜೊತೆಗೆ ಲೋಕನೀತಿಯ ಸುಂದರ ಶಿಕ್ಷಣವನ್ನು ನೀಡಲಾಗಿದೆ.

आसारे खलु संसारे सारमेतच्चतुष्टयम् ।

काश्यां वासः सतां संगः गङ्गाभः शम्भु सेवनम् ॥[28]

ಅಸಾರವಾದ ಈ ಸಂಸಾರದಲ್ಲಿ ಜನರಿಗೆ ಸುಖಭ್ರಾಂತಿ ಇದೆ. ಮಕ್ಕಳು ಅಂಗುಷ್ಠದಲ್ಲಿ ಜೊಲ್ಲನ್ನು ಹೀರುತ್ತಾ ಸ್ತನ್ಯವೆಂದು ಭ್ರಮಿಸುತ್ತಾರೆ. ಈ ಉಪಯುಕ್ತ ಶ್ಲೋಕದಲ್ಲಿ ಕಾಶಿವಾಸದ ಆದ್ಯತೆಯನ್ನು ನೀಡಲಾಗಿದೆ. ಬಹುಶಃ ಇದರ ಸಂಗ್ರಹಕಾರರು ಕಾಶೀ ವಾಸಿಯಾಗಿರಬಹುದು.

4. लधु चाणक्य :– ಇದು ಐದನೆಯ ವಾಚನ. ಇದರ ಪ್ರತ್ಯೇಕ ಅಧ್ಯಾಯದಲ್ಲಿ ಹತ್ತರಿಂದ ಹದಿಮೂರರವರೆಗೆ ಶ್ಲೋಕಗಳಿವೆ. ಈ ವಾಚನವು ಭಾರತದಲ್ಲಿ ಸ್ವಲ್ಪ ತಿಳಿದಿರುವಂತಿದೆ. ಆದರೆ ಯೂರೋಪಿನಲ್ಲಿ ಇದು ಬಹಳ ಪ್ರಖ್ಯಾತವಾಗಿದೆ. ಗೆಲೆನಾಸ್ ಎಂಬ ಹೆಸರಿನ ಗ್ರೀಕ್ ಸಂಸ್ಕೃತಜ್ಞನು ಮೂಲ ಸಂಸ್ಕೃತದಿಂದ ಯೂನಾನಿ ಗ್ರೀಕ್ ಭಾಷೆಗೆ ಅನುವಾದ ಮಾಡಿ 1825 ರಲ್ಲಿ ಪ್ರಕಾಶಿತಗೊಳಿಸಿದ್ದಾನೆ.

5. चाणक्य राजनीति शास्त्रम् :– ಈ ವಾಚನವೂ ಭಾರತದಲ್ಲಿ ಅಷ್ಟೇನೂ ಪ್ರಸಿದ್ಧಿ ಪಡೆದಿರುವುದಿಲ್ಲ. ಆದರೂ ಒಂಭತ್ತನೇ ಶತಮಾನದಲ್ಲಿ ಟಿಬೆಟ್ಟಿನ ತಂಜಾವೂರಿನಲ್ಲಿ ಅನುವಾದಿತಗೊಂಡು ಸಂಗ್ರಹವಾಗಿರುತ್ತದೆ. ಈ ಟಿಬೆಟ್ಟಿಯನ್ ಅನುವಾದ ಪುನಃ ಸಂಸ್ಕೃತಕ್ಕೆ ತರ್ಜಿಮೆಗೊಂಡು ಶಾಂತಿನಿಕೇತನದಲ್ಲಿ ಪ್ರಕಾಶಿತಗೊಂಡಿರುತ್ತದೆ.

---

27. चाणक्य नीति दर्पण 1-1

28. ಸುಭಾಷಿತ ಮಂಜರೀ–ವೈರಾಗ್ಯ–श्लो–14,समयोचित पद्यमालिका –ಪು–297,ಕ.ಸಾ.ಪ.ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು–560018 (2019).

ಇದರಲ್ಲಿ ಎಂಟು ಅಧ್ಯಾಯಗಳಿದ್ದು 5382 ಶ್ಲೋಕಗಳಿವೆ. ಆದರೆ 3972 ಶ್ಲೋಕಗಳು ಮಾತ್ರ ಉಪಲಬ್ಧವಿರುತ್ತವೆ.

ಈ ಎಲ್ಲ ಗ್ರಂಥಗಳ ಕರ್ತೃ ಮಹಾತ್ಮ ಚಾಣಕ್ಯನೇ ಆಗಿದ್ದನೆಂದು ಹೇಳುವುದು ಬಹಳ ಕಠಿಣವೇ ಹೌದು. ಆದರೆ ಈ ಗ್ರಂಥಗಳಲ್ಲಿ ಒದಗಿಸಿರುವ ಶಿಕ್ಷಣ, ಉಪದೇಶ ಹಾಗೂ ನೀತಿ ವಾಕ್ಯಗಳು ಮಾನವ ಜೀವನಕ್ಕೆ ಸರ್ವಥಾ ಗ್ರಹಣ ಯೋಗ್ಯವಾಗಿರುತ್ತದೆ; ಸಾರ್ವಭೌಮ ಹಾಗೂ ಇವುಗಳಲ್ಲಿನ ಅನುಭವ ಹಾಗೂ ಬುದ್ಧಿಯ ಸೂಕ್ಷ್ಮಾಭಿವ್ಯಕ್ತಿಯುಂಟಾಗುತ್ತದೆ. ಹೀಗೆ...

नास्ति विद्यासमम् चक्षुर्नास्ति सत्यसमं तपः।

नास्ति रागसमं दुःखं नास्ति त्यागसमं सुखम्॥[29]

ಅಂದರೆ ವಿದ್ಯೆಗೆ ಸಮನಾದ ಇನ್ನೊಂದು ಕಣ್ಣಿಲ್ಲ.ಸತ್ಯಕ್ಕೆ ಸಮನಾದ ತಪಸ್ಸಿಲ್ಲ. ಆಸಕ್ತಿಗೆ ಸಮನಾದ ದುಃಖವಿಲ್ಲ. ತ್ಯಾಗಕ್ಕೆ ಸಮನಾದ ಸುಖವಿಲ್ಲ.

नात्यन्त सरलैर्भाव्यं गत्वा पश्य वनस्थलीम् ।

छिद्यन्ते रलास्तत्र कुब्जास्तिष्ठन्ति पादपाः ॥[30]

ಅರ್ಥಾತ್ ಅತ್ಯಂತ ಸರಳ ಅಥವಾ ನೇರ ಆಗಿರಬಾರದು. ಇಂತಹ ಹೇಳಿಕೆ ಎಷ್ಟೇ ನಿಖರವಾಗಿರಲಿ; ಏಕೆಂದರೆ ನಾವು ಕಾಡಿಗೆ ಹೋಗಿ ನೋಡಿದಾಗ ತಿಳಿಯುತ್ತದೆ. ನೇರ ವೃಕ್ಷಗಳು ಜನಗಳಿಂದ ಸುಲಭವಾಗಿ ಕಡಿಯಲ್ಪಡುತ್ತವೆ. ಆದರೆ ಅಂಕುಡೊಂಕು ವೃಕ್ಷವು ಕಡಿಯಲ್ಪಟ್ಟಿರುವುದಿಲ್ಲ. ಇದರ ತಾತ್ಪರ್ಯವೇನೆಂದರೆ, ಸಂಸಾರದಲ್ಲಿ ಹುಸಿ ಸಹಜತೆ ಸ್ವಭಾವವುಳ್ಳವರ ಮೂಲಕ ಸೀದಾಸಾದಾ ಜನರು ಶೋಷಿತರಾಗಿಬಿಡುತ್ತಾರೆ.

೨. नीतिद्विषष्ठिका

ಸುಂದರಪಾಂಡೆ ವಿರಚಿತ "नीतिद्विषष्ठिका" ಒಂದು ಪ್ರಾಚೀನ ಗ್ರಂಥ. ಇದರಲ್ಲಿ, ದೇಶಾತ್ಮಕ ಶೈಲಿಯಲ್ಲಿ 116 ಶ್ಲೋಕಗಳಿವೆ. ಸುಭಾಷಿತ ಗ್ರಂಥಕಾರರು ಈ ರಚನೆಯಲ್ಲಿನ ಕೆಲವು ಶ್ಲೋಕಗಳನ್ನು ಉಲ್ಲೇಖಿಸಿದ್ದಾರೆ. ಆದರೆ ಗ್ರಂಥದ ಹೆಸರನ್ನು ಎಲ್ಲಿಯೂ ಉಲ್ಲೇಖಿಸಿರುವುದಿಲ್ಲ. ಆದರೂ ಕೆಲವು ಅನ್ಯ ವಿದ್ವಾಂಸರು ಇದರ ಉಲ್ಲೇಖ ಮಾಡಿದ್ದಾರೆ. ಅದರ ವಿವರಣೆ ಈ ಕೆಳಗಿನಂತಿರುತ್ತದೆ.

---

29. ಮಹಾಭಾರತ-ಶಾಂತಿ ಪರ್ವ-ಶ್ಲೋ-175-35.
30. चाणक्य नीतिशास्त्र -07-12.

I. जनाश्रय(६०० ई)ನು ಇದರ ಉಲ್ಲೇಖ ಒಂದು ಪಂಕ್ತಿಯಲ್ಲಿ ತನ್ನ ಛಂದೋವಿಚಿತದಲ್ಲಿ ಉದ್ಧೃತಗೊಳಿಸಿದ್ದಾನೆ.

I I. कुमारिल(६५० ई) ಹಾಗೂ ಶಂಕರಾಚಾರ್ಯರು ತಮ್ಮ ಅನ್ಯ ಗ್ರಂಥಗಳಲ್ಲಿಯೂ ಶ್ಲೋಕ ರೂಪದಲ್ಲಿ ಉದ್ಧೃತಗೊಳಿಸಿದ್ದಾರೆ.

೩. बोधिचर्यावतारः – ಶಾಂತಿದೇವ ರಚಿತ ಬೋಧಿಚರ್ಯಾವತಾರ ಗ್ರಂಥವೂ ಒಂದು ನೀತಿಕಾವ್ಯ. ಇದರಲ್ಲಿ ಬೋಧಿಸತ್ವನ ಕರ್ತವ್ಯಗಳ ಉಲ್ಲೇಖವಿದೆ. ಮಾನವಮಾತ್ರನಿಂದ ಪ್ರೀತಿಯ ಮಹತ್ವದ ಬಗ್ಗೆ ಹೆಚ್ಚಿನ ಒತ್ತನ್ನು ನೀಡಲಾಗಿದೆ. ಈ ಗ್ರಂಥಕ್ಕೆ ಕೆಲವು ವಿಮರ್ಶೆಯನ್ನು ಬರೆಯಲಾಗಿದೆ. ಶಾಂತಿದೇವನು ಆರು ಶಿಕ್ಷಣ ಸಮುಚ್ಚಯ ಹಾಗೂ ಸೂತ್ರ ಸಮುಚ್ಚಯವನ್ನು ರಚಿಸಿದ್ದಾನೆ. ಆದರೆ ಈ ರಚನೆಗಳು ಅಷ್ಟೇನೂ ಪ್ರಸಿಧ್ಧಿಯಾಗಲಿಲ್ಲ.

4. नीतिशतकम् – ಭರ್ತೃಹರಿಯು ಸಂಸ್ಕೃತದ ಮಹಾನ್ ಕವಿ. ಇವನು ಕ್ರಿ.ಶ. ಒಂದನೆಯ ಶತಮಾನದಿಂದ ಏಳನೆಯ ಶತಮಾನದ ನಡುವೆ ಇದ್ದವನೆಂದು ಹೇಳಲಾಗಿದೆ. ಈತನು ರಚಿಸಿದ ಎರಡು ಕೃತಿಗಳೆಂದರೆ–

1.– ವಾಕ್ತಪಥೀಯ. 2.– ಸುಭಾಷಿತ್ರಿಶತಿ. ವಾಕ್ಯಪಥೀಯವು ವ್ಯಾಕರಣ ಶಾಸ್ತ್ರದ ದಾರ್ಶನಿಕ ತತ್ವಗಳನ್ನು ಒಳಗೊಂಡಿದ್ದರೆ ಸುಭಾಷಿತ್ರಿಶತಿಯು ನೀತಿ, ಶೃಂಗಾರ, ವೈರಾಗ್ಯಗಳನ್ನೊಳಗೊಂಡಿರುವ ಶತಕತ್ರಯವಾಗಿದೆ. ಈ ಮೂರರಲ್ಲಿ ನೀತಿಶತಕವು ನೀತಿಸಾರ ಪದ್ಧತಿ, ಪಾಂಡಿತ್ಯ ಪದ್ಧತಿ, ಮೂರ್ಖಪದ್ಧತಿ ಮುಂತಾದ ಹತ್ತು ಭಾಗಗಳನ್ನೊಳಗೊಂಡಿದೆ. ಭರ್ತೃಹರಿ ವಿರಚಿತ ನೀತಿಶತಕವು ನೀತಿಕಾವ್ಯಗಳಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿದೆ. ಇದರಲ್ಲಿರುವ ಪದ್ಯಗಳಲ್ಲಿ ಲೌಕಿಕ ವ್ಯವಹಾರ ಜ್ಞಾನದ ಸೂಕ್ಷ್ಮ ಪರಿಚಯ ಮಾಡುತ್ತಾ, ಕವಿಯು ತನ್ನ ಅನುಭವಗಳನ್ನು ಅತ್ಯಂತ ಸಹಜ, ಸರಳ, ಸ್ವಾಭಾವಿಕ ಹಾಗೂ ಸುಂದರ ಶಬ್ದಗಳಿಂದ ಪ್ರಸ್ತುತಪಡಿಸಿದ್ದಾನೆ. ಮಾನವ ಜೀವನಕ್ಕೆ ಸಂಬಂಧಿಸಿದಂತೆ ಯಾವುದೇ ವಿಷಯವಾಗಲೀ, ಯಾವುದೇ ಸಮಸ್ಯೆ ಇಲ್ಲದಂತೆ ಅದರ ಚರ್ಚೆಯನ್ನು ಈ ಗ್ರಂಥದಲ್ಲಿ ನಡೆಸಲಾಗಿದೆ. ಪರಿಶುದ್ಧ ಮಾನವ ಯಾರೆಂದರೆ ಯಾವನು ತನ್ನ ಮನದಲ್ಲಿ ಪರಮ ಸಂತೋಷದ ಅನುಭೂತಿಯನ್ನು ಪಡೆಯುತ್ತಾನೋ ಅವನು. ಅವನು ಒಂದೆಡೆ ಕರ್ಮಸಿದ್ಧಾಂತದ ವಕಾಲತ್ತನ್ನು ನಡೆಸುವವನು, ಮತ್ತೊಂದೆಡೆ ಭಾಗ್ಯವನ್ನು ಅಲ್ಲಗಳೆಯುವುದಿಲ್ಲ. ಕೆಲವು ವಿಷಯಗಳಲ್ಲಿ ಭರ್ತೃಹರಿಯ ಅಭಿಪ್ರಾಯ ಇಂದಿಗೂ ಸತ್ಯದ ಪ್ರತೀಕವಾಗಿದೆ. ಈ ಸಂಸಾರದಲ್ಲಿ ಪ್ರತಿಯೊಂದಕ್ಕೂ ಪರಿಹಾರ ಅಥವಾ ಉಪಚಾರದ ಸಂಭವವಿದೆ. ಆದರೆ ಮೂರ್ಖನಿಗಿಲ್ಲ.

शक्यो वारयितुं जलेन हुतभुक्छत्रेण सूर्यात्तप्तो

नागेन्द्रो निशिताङ्कुशेन समदो दण्डेन गोर्गदभौ ।

व्याधिर्भेषजसंङ्ग्रहैश्च विविधैर्मन्त्रप्रयोगैर्विषं

सर्वस्यौषधमस्ति शास्त्रविहितं मूर्खस्य नास्त्यौषधम् ॥[31]

ಬೆಂಕಿಯನ್ನು ನೀರಿನಿಂದ ನಂದಿಸಬಹುದು. ಕೊಡೆಯಿಂದ ಸೂರ್ಯನ ತಾಪವನ್ನು ತಡೆಯಬಹುದು. ಚೂಪಾದ ಅಂಕುಶದಿಂದ ಮದವೇರಿದ ಆನೆಯನ್ನು, ದೊಣ್ಣೆಯಿಂದ ಎತ್ತು ಕತ್ತೆಗಳನ್ನು ನಿಯಂತ್ರಿಸಬಹುದು. ಮದ್ದುಗಳಿಂದ ರೋಗಗಳನ್ನು ಗುಣಪಡಿಸಬಹುದು. ನಾನಾ ವಿಧದ ಮಂತ್ರಗಳಿಂದ ವಿಷವನ್ನು ಹೊರದೂಡಬಹುದು. ಹೀಗೆ ಎಲ್ಲವುದಕ್ಕೂ ಶಾಸ್ತ್ರದಲ್ಲಿ ಹೇಳಿದ ನಿವಾರಣೋಪಾಯವಿದೆ. ಆದರೆ ಮೂರ್ಖನನ್ನು ತಿದ್ದಲು ಯಾವ ಔಷಧವೂ ಇಲ್ಲ.

ವಿವೇಕವನ್ನು ಪರಿತ್ಯಜಿಸಿದವನ ಪತನವು ನೂರಾರು ರೀತಿಯಲ್ಲಿ ಉಂಟಾಗುತ್ತದೆ.

शिरः शर्व स्वर्गात्पशुपतिशिरस्तः क्षितिधरं

महिध्रादुत्तुङ्गादवनिमवनेश्चापि जलधिम् ।

अधोल्धो गङ्गेयं पदमुपगता स्तोकमथवा

विवेकभ्रष्टानां भवति विनिपातः शतमुखः॥[32]

ಅರ್ಥಾತ್ ಗಂಗೆಯು ಶಿವನ ತಲೆಯಮೇಲೆ, ಅಲ್ಲಿಂದ ಬೆಟ್ಟದ ಮೇಲೆ, ಅನಂತರ ಭೂಮಿಯ ಮೇಲೆ, ಭೂಮಿಯಿಂದ ಸಮುದ್ರ ಹೀಗೆ ಕೆಳಗಿನ ಸ್ಥಾನವನ್ನು ಪಡೆದಳು. ಅದೇರೀತಿ ವಿವೇಕವನ್ನು ಕಳೆದುಕೊಂಡ ದಡ್ಡರು ನೂರಾರು ವಿಧದಿಂದ ಅವನತಿಯನ್ನು ಹೊಂದುತ್ತಾರೆ.

ಶರೀರಕ್ಕೆ ಆಭರಣವಿಲ್ಲ. ಆದರೂ ಅದನ್ನು ಸುಸಜ್ಜಿತಗೊಳಿಸಲು ಸುಸಂಸ್ಕೃತ ಮಾತೇ ನಿಜವಾದ ಆಭರಣವಾಗಿದೆ.

---

31. भर्तृहरि नीतिशतकम्–श्लो–11
32. भर्तृहरि नीतिशतकम्–श्लो–10

केयूराणि न भूषयन्ति पुरुषं हारा न चन्द्रोज्वला

न स्नानं न विलेपनं न कुसुमं नालङ्कृता मूर्धजाः।

वाण्येका समलङ्करोति पुरुषं या संस्कृता धार्यते

क्षीयन्ते खलु भूषणानि सततं वाग्भूषणं भूषणम् ॥[33]

ಮಾನವೀಯ ವ್ಯವಹಾರ ಮತ್ತು ಪ್ರವೃತ್ತಿಗಳು ಹಾಗೂ ಸದಾಚಾರವನ್ನು ಭರ್ತೃಹರಿಯು ಎಷ್ಟು ಸೂಕ್ಷ್ಮ ಹಾಗೂ ವ್ಯಾಪಕ ಅಧ್ಯಯನವನ್ನು ನಡೆಸಿದ್ದಾನೆಂದರೆ, ಅದರ ತುಲನೆಯನ್ನ ಯಾರಿಂದಲೂ ಮಾಡಲಾಗುವುದಿಲ್ಲ. ಈ ನೀತಿ ತತ್ವಗಳನ್ನು ಕವಿಯು ಬಹಳ ನಿಖರವಾಗಿ ಸಮೀಕರಣಗೊಳಿಸಿ, ತನ್ನ ಜೀವನದಲ್ಲೂ ಆಚರಣೆ ಮಾಡಿದ್ದಾನೆ. ಈ ಕಾರಣದಿಂದಲೇ ಸಂಸ್ಕೃತ ಸಾಹಿತ್ಯದಲ್ಲಿ ಅವನ ನೀತಿ ವಚನಗಳು ವ್ಯಾಪಕವಾಗಿ ಪ್ರಚಾರಗೊಂಡು ಜನಪ್ರಿಯವಾಗಿವೆ. ಶಬ್ದರಚನೆ, ಅಲಂಕಾರ ವಿಧಾನ, ಛಂದಸ್ಸಿನ ರಚನೆ ಇತ್ಯಾದಿ ಎಲ್ಲ ದೃಷ್ಟಿಯಲ್ಲೂ ಈ ಶತಕವು ಪರಿಪುಷ್ಟವಾಗಿದೆ.

೫. वैराग्य शतकम् :– ವೈರಾಗ್ಯಶತಕವು ಒಂದು ಉತ್ಕೃಷ್ಟ ಶೈಲಿಯಲ್ಲಿ ಬರೆದಿರುವ ನೀತಿಕಾವ್ಯವಾಗಿದೆ. ಇದರಲ್ಲಿ ಒಂದು ಒಳ್ಳೆಯ ಶಿಕ್ಷಣದ ಬಗ್ಗೆ ವಿಶೇಷ ಗಮನಹರಿಸಲಾಗಿದೆ. ಮನುಷ್ಯರಲ್ಲಿ ಸಾಧಾರಣವಾಗಿ ದುರ್ಗುಣಗಳನ್ನು ಹೇಗೆ ದೂರಮಾಡುವುದೆಂಬುದು.

चला लक्षीश्चलाः प्राणाश्चलं जीवित यौवनम् ।

चलाचले च संसारे धर्म ऐकोहि निश्चलः॥[34]

ಇದರಲ್ಲಿ ಶಿವಭಕ್ತಿ ಬಗ್ಗೆ ಒತ್ತನ್ನು ಕೊಟ್ಟು ಸಂನ್ಯಾಸವನ್ನು ಪ್ರಶಂಸೆ ಮಾಡಲಾಗಿದೆ.

೬. मोहमुद्गरः –

ಈ ರಚನೆಯು ಶಂಕರಾಚಾರ್ಯರಿಂದ ರಚಿತವಾಗಿದೆಯೆಂದು ತಿಳಿದುಬಂದಿದೆ. ಇದರಲ್ಲಿ ಸಾಂಸಾರಿಕ ವಿಚಾರಗಳನ್ನು ಬಿಟ್ಟು ಆಧ್ಯಾತ್ಮಿಕ ಮಾಯಾಜಾಲದಲ್ಲಿ ಮುಕ್ತರಾಗುವುದರ ಬಗ್ಗೆ ಉಪದೇಶ ನೀಡಲಾಗಿದೆ. ಇವುಗಳಲ್ಲಿ ನೈತಿಕ ಹಾಗೂ ದಾರ್ಶನಿಕ ಭಾವನೆಗಳಿವೆ.

---

33. भर्तृहरि नीतिशतकम् –19.
34. भर्तृहरि वैराग्य शतकम्–श्लो–96.

7. कुट्टनीमत :–

ಕಾಶ್ಮೀರದ ರಾಜ ಜಯಪೀಡನ ಆಶ್ರಯದಲ್ಲಿ ಮಂತ್ರಿ ಹಾಗೂ ಕವಿಯಾಗಿದ್ದ ದಾಮೋದರ ಗುಪ್ತನಿಂದ ಇದು ರಚಿಸಲ್ಪಟ್ಟಿದೆ. ಇದು ಸಮಾಜಕ್ಕೆ ಶಿಕ್ಷಣ ನೀಡುವ ಒಂದು ನೀತಿಕಾವ್ಯವಾಗಿದೆ. ಇದನ್ನು ವೇಶ್ಯೆಯರ ಶಿಕ್ಷಣಗ್ರಂಥ ಎಂದೂ ಕರೆಯಲ್ಪಟ್ಟಿದೆ. ಆರ್ಯಾ ಛಂದಸ್ಸಿನಲ್ಲಿ ನಿಬದ್ಧಗೊಂಡಿರುವ ಈ ಕಾವ್ಯವು ತನ್ನ ಮಧುರತೆ ಹಾಗೂ ಸ್ನಿಗ್ಧತೆಯ ಕಾರಣ ಸಂಸ್ಕೃತ ಸಾಹಿತ್ಯದಲ್ಲಿ ಚಿರಸ್ಮರಣೀಯವಾಗಿದೆ. ಪ್ರಸ್ತುತ ಶ್ಲೋಕದಲ್ಲಿ

परमार्थ कठोरा अपि विषयगतं लोहकं मनुष्यं च ।

चुम्बक पाषाणशिलारूपाजीवाश्च कर्षन्ति ॥[35]

ಅರ್ಥಾತ್ ಈ ಪ್ರಕಾರ ಆಯಸ್ಕಾಂತೀಯ ಕಲ್ಲು ತನ್ನ ಹತ್ತಿರ ಬಂದ ಲೋಹವನ್ನು ತನ್ನೆಡೆಗೆ ಆಕರ್ಷಿಸುವಂತೆ ರೂಪದಿಂದ ಜೀವಿಗಳನ್ನು ತನ್ನೆಡೆಗೆ ಸೆಳೆಯುವ ವೇಶ್ಯೆಯರ ವಿಷಯದಲ್ಲಿ ಆಸಕ್ತ ಮನುಷ್ಯರು ಅನಿವಾರ್ಯವಾಗಿ ರೂಪದಿಂದಲೇ ಎಳೆಯಲ್ಪಡುತ್ತಾರೆ.

೮. सुभाषितरत्नसन्दोह :–

ಜೈನ ಲೇಖಕ ಅಮಿತಗತಿಯು ೨೨೮ರಲ್ಲಿ **"ಸುಭಾಷಿತರತ್ನ ಸಂದೋಹ"**ವನ್ನು ರಚಿಸಿದ್ದಾನೆ. ಇದರಲ್ಲಿ ಮೂವತ್ತೆರಡು ಅಧ್ಯಾಯಗಳಿವೆ. ಇದರಲ್ಲಿ ಜೈನ ಸಾಧುಗಳು, ದೇವತೆಗಳು ಮತ್ತು ಹಿಂದೂಗಳ ವ್ಯವಹಾರಗಳ ಬಗ್ಗೆ ಕಟು ಆಕ್ಷೇಪವಿದೆ.

೨. धर्मपरीक्षा :–

ಇದರ ರಚನೆಯೂ ಅಮಿತಗತಿಯಿಂದ ರಚಿಸಲ್ಪಟ್ಟಿದೆ. ಈ ರಚನೆಯಲ್ಲಿ ಅವನು ಹಿಂದೂ ಧರ್ಮವನ್ನು ಉಪೇಕ್ಷಿಸಿ, ಜೈನ ಧರ್ಮವನ್ನು ಉತ್ಕೃಷ್ಟವೆಂದು ಹೇಳಿದ್ದಾನೆ.

10.कला विलास :–

ಮಹಾಕವಿ ಕ್ಷೇಮೇಂದ್ರ 1050ರಲ್ಲಿ ಆ ಕಾಲದ ಧರ್ಮ ಹಾಗೂ ಸಮಾಜದ ಅನುಶೀಲನೆ ಮಾಡಿ ಈ ನೀತಿಕಾವ್ಯವನ್ನು ರಚಿಸಿದ್ದಾನೆ. ಇದರಲ್ಲಿ 10 ಅಧ್ಯಾಯಗಳಿವೆ. ಕಲಾ ವಿಕಾಸವಲ್ಲದೆ ಕ್ಷೇಮೇಂದ್ರನ ಅನ್ಯ ರಚನೆಗಳು ಈ ಕೆಳಗಿನಂತಿವೆ.

35. कुट्टनीमत श्लोकः

11. दर्पदलन :–

ಕ್ಷೇಮೇಂದ್ರನ ಈ ರಚನೆಯು 596 ಶ್ಲೋಕಗಳಿಂದ ಕೂಡಿದೆ. ಇದರಲ್ಲಿ ಏಳು ಅಧ್ಯಾಯಗಳಿವೆ. ಇದರ ಅಂತರ್ಗತದಲ್ಲಿ ಇವನು ಅಭಿಮಾನದ ನಿಂದನೆಯನ್ನು ಮಾಡಿರುತ್ತಾನೆ. ಇವನ ಅನುಸಾರವಾಗಿ ಈ ಉಚ್ಚಕುಲ, ಧನ, ವಿದ್ಯಾ, ಸೌಂದರ್ಯ, ಸಾಹಸ, ದಾನ ಇವೆಲ್ಲವೂ ತಪಸ್ಯೆಯಿಂದ ಉತ್ಪನ್ನಗೊಳ್ಳುತ್ತವೆ.

सृजति तवदशेषगुणाकरं पुरुषरत्नमूलकरणं भुवः

तदापि तक्षणभंगिंकरोति चेदहह कष्टमपण्डिततता विधेः॥[36]

ಇದರಲ್ಲಿ ಏಳು ವಿಚಾರಗಳಿದ್ದು ಇವುಗಳ ಆರಂಭದಲ್ಲಿ ವಿಷಯಾತ್ಮಕ, ಉಪದೇಶಾತ್ಮಕ ಸೂಕ್ತಿ ಹಾಗೂ ಅವುಗಳ ಉಪಯುಕ್ತತೆ ಸ್ಪಷ್ಟಪಡಿಸುತ್ತಾ, ಪ್ರಧಾನಪಾತ್ರದಲ್ಲಿ ನೀತಿಯ ಮಹತ್ವವನ್ನೂ ತಿಳಿಸಲಾಗಿದೆ.

12. चारुचर्या :–

ಇದು ಸದಾಚಾರಕ್ಕೆ ಸಂಬಂಧಿಸಿದ ಶತಕವಾಗಿರುತ್ತದೆ. ಈ ಒಂದು ಮಾಧ್ಯಮದಲ್ಲಿ ಕವಿಯು ಸುಂದರವಾದ ವ್ಯವಹಾರ ನಡೆಸಲು ಮಾನವನಿಗೆ ಅವಶ್ಯಕವಾದ ಕೆಲವು ನೀತಿನಿಯಮಗಳನ್ನು ವರ್ಣನೆ ಮಾಡಿರುತ್ತಾನೆ.

13. चतुर्वर्गसंग्रहः :–

ಇದು ಪುರುಷಾರ್ಥ ಚತುಷ್ಟಯಗಳ ವಿವರಗಳನ್ನು ನೀಡುವ ಒಂದು ಕಾವ್ಯವಾಗಿದೆ. ಇದರಲ್ಲಿ ನಾಲ್ಕು ಪರಿಚ್ಛೇದಗಳಿದ್ದು, ಅವುಗಳಲ್ಲಿ ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷಗಳ ಪ್ರಶಂಸೆಯನ್ನು ವಿವೇಚಿಸಲಾಗಿದೆ.

14. सेव्यसेवकोपदेशः :–

ಕ್ಷೇಮೇಂದ್ರನು ಇದರಲ್ಲಿ ಸೇವಕನ ದೀನತೆ ಹಾಗೂ ಸ್ವಾಮಿಜನರೊಡನೆ ದುರ್ವ್ಯವಹಾರ ಮಾಡುವವರ ಬಗ್ಗೆ ಬಹಳ ರೋಚಕವಾದ ರೀತಿಯಲ್ಲಿ ವರ್ಣನೆ ಮಾಡಿದ್ದಾನೆ. ಇದರಲ್ಲಿ ಅರವತ್ತೊಂದು ಶ್ಲೋಕಗಳಿವೆ. ಅನೇಕ ಛಂದಸ್ಸುಗಳಿಂದ ನಿಬದ್ಧವಾಗಿದ್ದು ಕಾವ್ಯದ ಶೈಲಿಯು ವಿಶಿಷ್ಟವಾಗಿದೆ.

15. समयमातृका :–

ಇದರಲ್ಲಿ ಎಂಟು ಅಧ್ಯಾಯಗಳಿವೆ. ಇದರಲ್ಲಿ ವೇಶ್ಯೆಯರ ಪ್ರಪಂಚದ ವರ್ಣನೆಯಿರುತ್ತದೆ. ಇದರಲ್ಲಿ ವೇಶ್ಯೆಯರ ಜಾಲದಿಂದ ತಪ್ಪಿಸಿಕೊಳ್ಳಲು ಶಿಕ್ಷಣ ನೀಡಲಾಗಿದೆ.

---

36. औ.वि.च,–पृ–5– क्षेमेन्द्रकृत दर्पदलनम्–

16. देशोपदेश :–

ಇದರಲ್ಲಿ ಅಂದರೆ ನರ್ಮಮಾಲಾದಲ್ಲಿ ಕವಿಯು ಹಾಸ್ಯೋಪದೇಶದ ರೂಪದಲ್ಲಿ ನೀತಿಯ ಸ್ಪಷ್ಟ ಉಪದೇಶ ನೀಡಲಾಗಿದೆ. ದೇಶೋಪದೇಶದಲ್ಲಿ ಎಂಟು ಉಪದೇಶಗಳಿವೆ. ಇದರಲ್ಲಿ ಕವಿಯ ಪ್ರಧಾನ ಲಕ್ಷ್ಯವೆಂದರೆ ಹಾಸ್ಯದಿಂದ ಸಂಕೋಚಗೊಂಡು ಯಾವುದೇ ಪುರುಷನು ದೋಷಗಳಿಂದ ಪ್ರವೃತ್ತನಾಗಲಾರ ಎಂಬುದಾಗಿದೆ.

हासेन लज्जितोउत्यन्तं न दोशेशु प्रवर्तते ।

जनस्तदुपकाराय ममायं स्वमुद्यमः ॥[37]

17. नर्ममाला :–

ಇದರಲ್ಲಿ ಮೂರು ಪರಿಚ್ಛೇದಗಳಿವೆ.

18. योगशास्त्र :–

ಜೈನ ಕವಿ ಹೇಮಚಂದ್ರನು ಈ ರಚನೆಯಲ್ಲಿ ಜೈನರ ಕರ್ತವ್ಯಗಳು ಹಾಗೂ ಜೈನ ಸಾಧುಗಳ ಮುಖಾಂತರ ಸಿದ್ಧಾಂತವನ್ನು ತಿಳಿದಿರುವವರು ಅನುಸರಿಸುವ ಕಠೋರ ನಿಯಮಗಳನ್ನು ವರ್ಣಿಸಿದ್ದಾನೆ.

19. मुग्धोपदेश :–

ಕವಿ ಜಲ್ಹಣನು (1130) ಈ ರಚನೆಯಲ್ಲಿ ವೇಶ್ಯೆಯರ ನಡೆಯುತ್ತಿರುವ ಪ್ರಪಂಚದಿಂದ ತಪ್ಪಿಸಿಕೊಳ್ಳುವ ಬಗ್ಗೆ ಶಿಕ್ಷಣ ನೀಡಲಾಗಿದೆ.

20. शान्तिशतक :–

ಶಿಲ್ಹಣ (1205) ನಿಂದ ರಚಿತವಾದ ಈ ಶತಕದಲ್ಲಿ ಮಾನಸಿಕ ಶಾಂತಿ ಪ್ರಾಪ್ತಿಗಾಗಿ ವಿಶೇಷ ಮಹತ್ವವನ್ನು ನೀಡಲಾಗಿದೆ. ಈ ರಚನೆಯಲ್ಲಿ ಭರ್ತೃಹರಿ ವಿರಚಿತ ನೀತಿಶತಕ ಮತ್ತು ವೈರಾಗ್ಯಶತಕದಿಂದ ಪೂರ್ಣ ಪ್ರಭಾವ ಪಡೆದಿರುವಂತಿದೆ ಎಂಬುದು ಸ್ಪಷ್ಟವಾಗಿ ಕಂಡುಬರುತ್ತದೆ.

21. श्रृंगारवैराग्यतरंगिणी :–

ಸೋಮಪ್ರಭನು 1267 ರಲ್ಲಿ ಈ ರಚನೆಯನ್ನು ಮಾಡಿರುತ್ತಾನೆ. ಇದರಲ್ಲಿ ಸ್ತ್ರೀಯರ ಸಂಯೋಗದಿಂದ ಉಂಟಾಗುವ ಹಾನಿಗಳು ಅಥವಾ ವೈರಾಗ್ಯದ ವಿಚಾರಗಳ ಬಗ್ಗೆ ಹೇಳಲಾಗಿದೆ.

---

37. काश्मीरिकवि क्षेमेन्द्र विरचित देशोपदेशः–प्रथम उपदेशः–श्लो –4.

22. सुभाषित नीवी :–

ವೇದಾಂತ ದೇಶಿಕ (1268–1269) ರಿಂದ ರಚಿತವಾದ ಈ ರಚನೆಯು 145 ಸುಭಾಷಿತ ಶ್ಲೋಕಗಳ ಸಂಗ್ರಹವಾಗಿದೆ.ಈ ರಚನೆಯು ಭರ್ತೃಹರಿಯ ನೀತಿಶತಕದಿಂದ ಪೂರ್ಣ ಪ್ರಭಾವಿತಗೊಂಡಿದೆ. ಇದರ ಜೊತೆಗೆ ಕವಿಯು ವೈರಾಗ್ಯ ಪಂಚಕ ಎಂಬ ಹೆಸರಿನ ರಚನೆಯನ್ನೂ ಮಾಡಿರುತ್ತಾನೆ.

23. दृष्टान्त कलिकाशतम् :–

ಕವಿ ಕುಸುಮದೇವನಿಂದ ರಚಿತವಾದ ಈ ಕಾವ್ಯವು ಅನುಷ್ಟುಪ್ ಛಂದಸ್ಸಿನಲ್ಲಿ ರಚಿತವಾಗಿದೆ. ಬಲ್ಲಭ ದೇವ(1500)ನು ಈ ಕವಿಯ ಬಗ್ಗೆ ಉಲ್ಲೇಖ ಮಾಡಿದ್ದಾನೆ. ಇದರಿಂದ ಕುಸುಮದೇವನ ಕಾಲವು ಈ ಸಮಯದಿಂದ ಪೂರ್ವದ್ದೇ ಎಂದು ಹೇಳಬಹುದು.

24. नीति मंजरी :–

ದ್ಯಾದ್ವಿವೇದನು1492 ರಲ್ಲಿ ನೀತಿಮಂಜರಿ ರಚನೆಯನ್ನು ಮಾಡಿದನು. ಇದರಲ್ಲಿ ವೃದ್ಧ ದೇವತಾ ಮೊದಲಾದ ಪ್ರಾಚೀನ ಗ್ರಂಥಗಳ ಉದಾಹರಣೆಗಳ ಮಾಧ್ಯಮದಲ್ಲಿ ಮೂಲಕ ತಿಳಿಸಲಾಗಿದೆ. ಕೆಲವು ಸ್ಥಳಗಳಲ್ಲಿ ವೇದಮಂತ್ರಗಳ ವ್ಯಾಖ್ಯೆಯನ್ನೂ ನೀಡಲಾಗಿದೆ.

25. भामिनी विलास :–

ಪಂಡಿತರಾಜ ಜಗನ್ನಾಥ(1590–1665)ಇವರಿಂದ ರಚಿತವಾದ ಭಾಮಿನೀವಿಲಾಸದಲ್ಲಿ ಕ್ರಮಶಃ ನಾಲ್ಕು ಭಾಗಗಳಿವೆ. ಅವುಗಳೆಂದರೆ–ಅನ್ಯೋಕ್ತಿ, ಶೃಂಗಾರ, ಕರುಣ ಮತ್ತು ಶಾಂತ. ಇವುಗಳಲ್ಲಿ ಕ್ರಮಶಃ 101,100,19 ಮತ್ತು 32 ಶ್ಲೋಕಗಳಿವೆ. ಅನ್ವರ್ಥ ನಾಮ ಪಂಡಿತರಾಜ ಪಾಂಡಿತ್ಯಕ್ಕೆ ಅಪಾರ ಪ್ರವೀಣನೇ ಹೌದು. ಇವನ ಕಾವ್ಯದಲ್ಲಿ ಸ್ಥಾನಪದ, ಕಾವ್ಯಸೌಂದರ್ಯ, ಅಲಂಕೃತಪದಾವಳಿ, ಭಾವಸೌಂದರ್ಯ, ರಸಪ್ರವೃತ್ತಿ, ಜ್ಞಾನಗರಿಮಾ ಮತ್ತು ಹೃದಯಗ್ರಾಹಿತದ ದರ್ಶನ ಉಂಟಾಗುತ್ತದೆ. ಉದಾ:–

सपदि विलयमेतु राज्यलक्ष्मीरूपरि पतन्त्वथवाकृपाणधाराः।

अपहरतुतरां शिरः कृतान्तो ममतु मतिर्न मनागपैतु धर्मात्॥[38]

ಅಂದರೆ, ರಾಜ್ಯಲಕ್ಷ್ಮಿಯೇ ಹೊರಟು ಹೋದರೂ, ಕತ್ತಿಯ ಹಿಡಿ ಬಿದ್ದು ಹೋದರೂ, ಮೃತ್ಯುವೇ ಬಂದರೂ ಯಾವಾಗಲೂ ಧರ್ಮವನ್ನು ಪರಿತ್ಯಾಗ ಮಾಡುವ ಮನಸ್ಸು ಮಾತ್ರ ಬರಬಾರದು.

---

38. भामिनीविलासे चतुर्थः शांतो विलासः–श्लो–27.

26. कलि विडम्बन :–

ನೀಲಕಂಠ ದೀಕ್ಷಿತ್(1630)ರು ನಾಲ್ಕು ರಚನೆಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಪ್ರಥಮವಾಗಿ ಕಲಿ ವಿಡಂಬನೆ ಇರುತ್ತದೆ. ಇವುಗಳಲ್ಲಿ ಕಲಿಯುಗದ ವಿಡಂಬನೆಯ ಉತ್ಕೃಷ್ಟ ಚಿತ್ರಣವಿದೆ. ಇದು ಒಂದು ವ್ಯಂಗ್ಯ ಪ್ರಧಾನವಾದ ಕಾವ್ಯವಾಗಿದೆ.

ಹೇಗೆಂದರೆ–

यत्र भार्यागिरो वेदाः यत्र धर्मोऽर्थसाधनम् ।

'यत्र स्वप्रतिभा मौनं तस्मै श्रीकलये नमः ॥[39]

27. सभारन्जनशतक :–

ನೀಲಕಂಠ ದೀಕ್ಷಿತರ ಇದೊಂದು ಅನ್ಯ ಕೃತಿ. ಈ ಶತಕದಲ್ಲಿ ಹೀಗೆ ಹೇಳಲಾಗಿದೆ– "ಯಾವ ಪ್ರಕಾರದ ವಿದ್ವನ್ಮಂಡಳ, ರಾಜ್ಯಸಭೆ, ವ್ಯಕ್ತಿಗಳಿಗೆ ಪ್ರಸನ್ನಗೊಳಿಸುವುದು."

28. शान्ति विलास :–

ಇದು ನೀಲಕಂಠ ದೀಕ್ಷಿತರ ಮೂರನೆಯ ಕೃತಿಯಾಗಿದೆ.ಇದರಲ್ಲಿ ಐವತ್ತೊಂದು ಶ್ಲೋಕಗಳಿವೆ. ಮಂದಾಕಾಂತಾ ಛಂದಸ್ಸಿನಲ್ಲಿ ವಿರಚಿತಗೊಂಡಿವೆ. ಈ ಕಾವ್ಯದಲ್ಲಿ ಭೌತಿಕ ಜೀವನದ ಅನಿತ್ಯತೆಯ ಚಿತ್ರಣವನ್ನು ಬಹಳ ರೋಚಕವಾಗಿ ರೂಪಿಸಲಾಗಿದೆ. ಹಾಗೆಯೇ ಮೋಕ್ಷ ಪ್ರಾಪ್ತಿಗಾಗಿ ಶಿವನಲ್ಲಿ ಪ್ರಾರ್ಥನೆಯನ್ನೂ ಮಾಡಲಾಗಿದೆ.

29. वैराग्य शतक :–

ನೀಲಕಂಠ ದೀಕ್ಷಿತರ ನಾಲ್ಕನೇ ಕೃತಿ ವೈರಾಗ್ಯಶತಕದಲ್ಲಿ ವೈರಾಗ್ಯಪೂರ್ಣ ಜೀವನವನ್ನು ನಡೆಸುವುದರ ಅನೇಕಾನೇಕ ಲಾಭದ ಬಗ್ಗೆ ತಿಳಿಹೇಳಲಾಗುತ್ತದೆ.

30. उपदेश शतकम् :–

ಅಲ್ಮೋಡಾ ನಿವಾಸಿ ಪರ್ವತೀಯ ಕವಿಯು (ಈತನ ಸಮಯ 18ನೇ ಶತಮಾನದ ಉತ್ತರಾರ್ಧ)

---

39. नीलकंठ दीक्षित–कलि विडम्बना।–दुर्जनाः–श्लो –100.

ಉಪದೇಶಶತಕವೆಂಬ ಹೆಸರಿನ ಕಾವ್ಯವನ್ನು ಆರ್ಯಾ ಛಂದಸ್ಸಿನಲ್ಲಿ ರಚಿಸಿದ್ದಾನೆ. ಇದರ ಜನೋಪಯೋಗಿ ಉಪದೇಶ ಸ್ವರೂಪದಲ್ಲಿ 100 ಶ್ಲೋಕಗಳಿವೆ.

೩1. सुभाषित कौस्तभ :-

ವೆಂಕಟಾಧ್ವರಿ(1650)ಯಿಂದ ರಚಿತವಾದ ಈ ಕಾವ್ಯವು ಉಪದೇಶಾತ್ಮಕ ಶೈಲಿಯಲ್ಲಿರುವ ನೀತಿಕಾವ್ಯ.

೩೨. लोकोक्ति मुक्तावली :-

ದಕ್ಷಿಣಾಮೂರ್ತಿ ಎಂಬ ಹೆಸರಿನ ಕವಿಯಿಂದ ರಚಿತವಾದ ಈ ಕಾವ್ಯವು ನಾನಾ ಛಂದಸ್ಸುಗಳಿಂದ ನಿಬದ್ಧಗೊಂಡಿದೆ. ಇದರಲ್ಲಿ 94 ಶ್ಲೋಕಗಳಿವೆ. ಇವುಗಳಲ್ಲಿ ವಿದ್ವತ್ಪ್ರಶಂಸೆ, ದುರ್ಜನ, ತ್ಯಾಗ, ದ್ವೈತ ನಿಂದೆ, ಶಿಕ್ಷಾ ಪದ್ಧತಿ, ವಿಷಾದ ಪದ್ಧತಿ ಹಾಗೂ ಜ್ಞಾನ ಪದ್ಧತಿಯಲ್ಲಿ ವಿಷಯಗಳು ವಿಭಜನೆಗೊಂಡು ವರ್ಣಿಸಲ್ಪಟ್ಟಿವೆ.

ಹೀಗೆ ನೀತಿಕಾವ್ಯಗಳು ಮಾನವನ ಸರ್ವಾಂಗೀಣ ಉನ್ನತಿಗಾಗಿ ಸದುಪದೇಶಗಳನ್ನು ನೀಡುವ ಸದುದ್ದೇಶದಿಂದ ರಚನೆಗೊಂಡು ಸಂಸ್ಕೃತ ಸಾಹಿತ್ಯದ ವಿಶಾಲ ಪ್ರಾಂಗಣದಲ್ಲಿ ನೀತಿಕಾವ್ಯಧಾರೆಯ ಸ್ಥಾನವು ಪವಿತ್ರ ಗಂಗಾನದಿ ಸಮಾನವಾಗಿ ಸಂಸ್ಮರಣೀಯವಾಗಿದೆ. ಈ ಗ್ರಂಥಗಳಲ್ಲಿ ನೀತಿದರ್ಶನ, ವ್ಯವಹಾರಿಕ ಜೀವನ, ರಾಜನೀತಿ, ಯುದ್ಧನೀತಿ ಮುಂತಾದ ನಾನಾವಿಧ ಮಹತ್ವಪೂರ್ಣ ವಿಷಯಗಳ ಬಗ್ಗೆ ಚರ್ಚಿಸಲಾಗಿದೆ. ಈ ಕಾರಣದಿಂದ ಅನ್ಯಕವಿಗಳೂ ಸಹ ಈ ಪ್ರಕಾರದ ಶಿಕ್ಷಾಪ್ರದ ಸೂಕ್ತಿಗಳನ್ನು ಅನೇಕ ಕಾವ್ಯಗಳಲ್ಲಿ ಸಂಕಲನವನ್ನೂ ಮಾಡಿರುತ್ತಾರೆ. ಹೀಗೆ ಸಾಹಿತ್ಯವು ಸಮಾಜದ ದರ್ಪಣವಾಗಿರುತ್ತದೆ. ಬೇರೆಬೇರೆ ಸಾಹಿತ್ಯಕಾರರು ಇದರ ದಾಯಿತ್ವವನ್ನು ಹೊಂದಿದ್ದು, ಅವರುಗಳು ತತ್ಕಾಲೀನ ಸಮಾಜೋಪಯೋಗಿ ರಚನೆಗಳ ಮಾಧ್ಯಮದಲ್ಲಿ ಮಾನವಮಾತ್ರದ ಹಿತವನ್ನು ಬಯಸಿದ್ದಾರೆ. ಈ ಕಾರ್ಯವನ್ನು ಬಹಳ ದೊಡ್ಡ ಸರಳ-ಸಹಜತೆಯಿಂದ ಕವಿಗಳು ಕೈಗೊಂಡು ಬೋಧನಾತ್ಮಕವಾಗಿ, ಉಪದೇಶಾತ್ಮಕವಾಗಿ, ಶಿಕ್ಷಣಪ್ರದವಾಗಿ ನೀತಿಕಾವ್ಯಗಳನ್ನು ರಚಿಸಿದ್ದಾರೆ. ಅವರ ನೀತಿಬೋಧನೆ ಅಂದು, ಇಂದು, ಮುಂದು, ಎಂದೆಂದೂ ಪ್ರಸ್ತುತ ಹಾಗೂ ನಿತ್ಯವಿನೂತನ.



## ಅಧ್ಯಾಯ-1-3. ಸಂಸ್ಕೃತ ಸಾಹಿತ್ಯದಲ್ಲಿ ನೀತಿಬೋಧಕ ಕಥಾ ಸಾಹಿತ್ಯ- ಪಂಚತಂತ್ರ ನೀತಿ ಕಥೆಗಳು - ಇದರ ವಿಶಿಷ್ಟ ಲಕ್ಷಣಗಳು

ಭಾರತೀಯ ಕಥಾಸಾಹಿತ್ಯದಲ್ಲಿ ನೀತಿಗೆ ಅತ್ಯುನ್ನತ ಸ್ಥಾನವಿದೆ. ಮೃಗಪಕ್ಷಿಗಳಿಗೆ ಮಾನವನ ಗುಣಗಳನ್ನು ಆರೋಪಿಸಿ, ಆ ಮೂಲಕ ಕಥೆಯನ್ನು ಚಿತ್ತರಿಸುವ ತಂತ್ರ ಇವುಗಳದ್ದಾಗಿದೆ. ಈ ಕಾರಣದಿಂದಲೇ ಇಂತಹ ಕಥೆಗಳಿಗೆ **"ಶ್ವಾಪದಾಖ್ಯಾನ"** ಎಂಬ ಹೆಸರನ್ನೂ ನೀಡಲಾಗಿದೆ. ಮತ್ತೊಂದು ಮುಖ್ಯ ವಿಚಾರವೆಂದರೆ, ಜೀವಿಯ ಸದ್ಗುಣ, ದುರ್ಗುಣಗಳು ಅದರ ಕೃತ್ಯವನ್ನವಲಂಬಿಸಿವೆ. ಜನ್ಮಾಂತರ ವಾದವೇ ಇದರ ಅಡಿಗಲ್ಲು. ಇವು ಒಂದು ಬಗೆಯ ಕಲ್ಪಿತ ಕಥೆಗಳು. "ಈ ಕಲ್ಪಿತಕಥೆಗಳೆಲ್ಲ ಮಾನವನ ರಾಜಕೀಯ ಮತ್ತು ದೈನಂದಿನ ನಿತ್ಯಜೀವನ ಕ್ಷೇತ್ರಕ್ಕೆ ಸಂಬಂಧಪಟ್ಟಂತಹವು. ಇವುಗಳು ಸಾಮಾನ್ಯವಾಗಿ ರಾಜಕುಮಾರರಿಗಾಗಿಯೇ ರಚಿತವಾದಂತಿವೆ. ಜೀವನದ ಅವಗುಣಗಳಾದ-ದುರಾಸೆ, ಡಂಭಾಚಾರ, ವಂಚನೆ, ಮೋಸಗಾರಿಕೆ, ಕೃತಜ್ಞತೆ ಇವುಗಳು ಬಹಳ ತೀಕ್ಷ್ಣವಾಗಿ ಖಂಡಿಸಲ್ಪಟ್ಟು ದಯಾಪರತೆ, ಪೂಜ್ಯತೆ, ಕರ್ತವ್ಯ ನಿಷ್ಠೆ, ರಾಜನಿಷ್ಠೆ, ಪತಿಪತ್ನಿಯರ ಪ್ರೇಮ, ಆಸಕ್ತಿ, ಅನುರಾಗಗಳು ಶ್ಲಾಘಿತವಾಗಿವೆ. ಈ ಕಥೆಗಳಲ್ಲೆಲ್ಲ ಸರಳ ಹಾಸ್ಯವೂ, ಕಟುವ್ಯಂಗ್ಯವೂ ಸ್ಫುಟವಾಗಿ ಪ್ರದರ್ಶಿತವಾಗಿವೆ. ಈ ರೀತಿಯ ಕಥೆಗಳಿಗೆ ಅತ್ಯುತ್ತಮ ನಿದರ್ಶನವೆಂದರೆ **"ಪಂಚತಂತ್ರ"** ಮತ್ತು **"ಹಿತೋಪದೇಶ"**ಗಳು.[40] " ಇಲ್ಲೊಂದು ಸುಂದರವಾದ ಶ್ಲೋಕವು ಪಾಠಕನ ಒಳ್ಳೆಯ ಗುಣಗಳನ್ನು ಹೀಗೆ ಹೇಳುತ್ತದೆ:-

माधुर्यमक्षरव्यक्तिः पदच्छेदस्तु सुस्वरः ।
धैर्यं लयसमर्थं च षडेते पाठकागुणाः ॥[41]

ಇಂಪು, ಅಕ್ಷರಸ್ಫುಟತೆ, ಪದಚ್ಛೇದ, ಸರಿಯಾದ ಸ್ವರ, ಧೈರ್ಯ, ಲಯಯುಕ್ತವಾಗಿ ಹೇಳುವುದು- ಇವು ಆರು ಪಾಠಕನ ಒಳ್ಳೆಯ ಗುಣಗಳು. ಇದು ಪಂಚತಂತ್ರ ಪಾಠಕನ ಗುಣಗಳೂ ಹೌದು. ನೀತಿಕಥೆಗಳ ನಿರೂಪಣೆ ಎಷ್ಟು ಸೊಗಸಾಗಿದೆ ಎಂದರೆ, ಅದರ, ಇಂಪು, ಅಕ್ಷರಸ್ಫುಟತೆ ಸ್ವರ, ಶೃತಿ ಮುಂತಾದವುಗಳು ಬಹಳ ಉತ್ತಮ ಸಂಯೋಜನೆಯಿಂದ ಕೂಡಿರುವುದಾಗಿದ್ದು ಕೇಳುಗರಿಗೆ ಹೃದಯಂಗಮವಾಗಿರುತ್ತದೆ. ವಿಷ್ಣುಶರ್ಮರ ಪಂಚತಂತ್ರ ನೀತಿಕಥೆಗಳ ನಿರೂಪಣಾ ಶೈಲಿಯೂ ಇದೇ ಮಾದರಿಯಲ್ಲಿ ಕೇಳುಗರಿಗೆ ಮನೋಜ್ಞವಾಗಿರುತ್ತದೆ.

---

40. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮ ವಿರಚಿತಮ್ ಪಂಚತಂತ್ರಮ್, (1993), ಭೂಮಿಕಾ-ಪು.7,8. ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ.221001.
41. **ಪಾಣಿನೀಯ ಶಿಕ್ಷಾ,** 33-55, ಸುಭಾಷಿತಮಂಜರೀ, ಕವಿ, ಕಾವ್ಯ ಪ್ರಶಂಸೆ-ಶ್ಲೋ-29, ಪು-10. ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು.(2001)

ಪಂಚತಂತ್ರ ನೀತಿಕಥೆಗಳು ಮೊದಲ ಬಾರಿಗೆ ರೂಪತಾಳಿರುವ ಲೋಕಪ್ರಿಯ ಕಥಾ ಸಂವಿಧಾನ. ಕುತೂಹಲವನ್ನು ಕೆರಳಿಸಿ ಮನೋರಂಜನೆಯನ್ನು ಒದಗಿಸುವುದಷ್ಟೇ ಕಥೆಯ ಗುರಿಯಲ್ಲ. ನೀತಿ, ಆಚಾರ, ಧರ್ಮಾದಿಗಳ ಬೋಧನೆಯೂ ಪಂಚತಂತ್ರಾಕಾರನ ಆಶಯವಾಗಿದೆ. ಅಂದರೆ ಕಥಾಮಾಧ್ಯಮವು ನೀತಿಬೋಧೆಗೆ ಉತ್ತಮ ಸಾಧನ ಎಂಬುದನ್ನು ಪಂಚತಂತ್ರವು ಸ್ಪಷ್ಟಪಡಿಸಿದೆ. ಪಂಚತಂತ್ರದ ಅನ್ವರ್ಥನಾಮವು ಐದುತಂತ್ರ (ಪ್ರಕರಣ)ಗಳಲ್ಲಿ ವಿಭಕ್ತವಾಗಿದೆ. 1. **ಮಿತ್ರಭೇದ 2. ಮಿತ್ರಸಂಪ್ರಾಪ್ತಿ 3. ಕಾಕೋಲೂಕೀಯ 4. ಲಬ್ಧಪ್ರಣಾಶ 5. ಅಪರೀಕ್ಷಿತಕಾರಕ**.

"पंचानाम् तंत्राणाम् समाहारः" ಹಾಗೂ "पंचतंत्राणि यस्मिन् समाह्रीरेते तत्" ಎಂದು ನಿಷ್ಪತ್ತಿಯನ್ನು ಹೊಂದಿರುವ ಪಂಚತಂತ್ರದ ಪ್ರತ್ಯೇಕ ತಂತ್ರಗಳೂ ಕೂಡ ಅನ್ವರ್ಥನಾಮಗಳಾಗಿವೆ. ಇದರ ಮೊದಲ ಪರಿಷ್ಕರಣವನ್ನು ಜೈನ ವಿದ್ವಾಂಸರಾದ ಪೂರ್ಣ ಭದ್ರಸೂರಿಯು 1,335 ಡಿಸೆಂಬರ್‌ನಲ್ಲಿ ಮಾಡಿರುವುದು ಈ ಶ್ಲೋಕದಿಂದ ಪ್ರಮಾಣಿತವಾಗುತ್ತದೆ.

> श्री सोममन्त्रिवचनेन विशीर्णवर्णमालोक्य शास्त्रमखिलं खलु पञ्चतन्त्रम् ।
>
> श्रीपूर्णभद्रगुरुणा गुरुणादरेण संशोधितं नृपतिरीतिविवेचनाय ॥
>
> प्रत्यक्षरं, प्रतिपदं, प्रतिवाक्यं, प्रतिकथं, प्रतिश्लोकम्।
>
> श्रीपूर्णभद्रसूरिर्विशोधयामास शास्त्रमिदम्॥[42]

ಪಂಚತಂತ್ರದ ಮೂಲಕ ಮಾನವನು ಜೀವನದಲ್ಲಿ ಹೇಗೆ ಯಶಸ್ಸನ್ನು ಕಂಡು ಯೋಗ್ಯ ಮನುಷ್ಯ ಆಗಬಹುದು, ರಾಜನೀತಿನಿಪುಣ ಆಗಬಹುದು ಎಂಬ ಬಗ್ಗೆ ಮನೋಜ್ಞವಾಗಿ, ಕ್ರಮಬದ್ಧವಾಗಿ, ಆಸಕ್ತಿಯಿಂದ ಕಲಿಯುವಂತೆ ವಿಷ್ಣುಶರ್ಮರು ತಮ್ಮ ಭೋದನಾ ವಿಧಾನದಲ್ಲಿ ಆಕರ್ಷಕ ಕಥೆಗಳು, ಉದಾಹರಣೆಗಳ ಮೂಲಕ ಕೇಳುಗರ ಮನಸ್ಸನ್ನು ಅರಿತು ಮನೋವಿಜ್ಞಾನದ ನೈಪುಣ್ಯತೆ ಮೆರೆಸಿದ್ದಾರೆ. ಈ ಅದ್ಭುತ ಪಂಚತಂತ್ರ ಕಥೆಗಳು ಮಕ್ಕಳಲ್ಲಂತೂ ಪ್ರಾಯೋಗಿಕ ಬುದ್ಧಿವಂತಿಕೆ, ನಾಯಕತ್ವದ ಕೌಶಲ್ಯ, ನೈತಿಕಮೌಲ್ಯಗಳು ಹಾಗೂ ಜ್ಞಾನ ಸಂಪತ್ತನ್ನು ಅಭಿವೃದ್ಧಿಗೊಳಿಸುತ್ತದೆ. ಇದೆಲ್ಲವೂ ಮನೋವಿಜ್ಞಾನದ ಪ್ರಜ್ವಲಿತ ಲಕ್ಷಣಗಳು. ಅದರಲ್ಲೂ ಶೈಕ್ಷಣಿಕ ಮನೋವಿಜ್ಞಾನದ ಮಜಲುಗಳು. ಪ್ರತ್ಯೇಕ ಕಥೆಗಳ ಶೀರ್ಷಿಕೆಯಲ್ಲಿ ಒಂದು ಶ್ಲೋಕವನ್ನು ರಚಿಸಲಾಗಿದ್ದು, ಅದರಲ್ಲಿ ಆ ಕಥೆಯಲ್ಲಿ ಹೊರಬರುವ ಶಿಕ್ಷಣವನ್ನು, ಅದರ ಮುಖ್ಯ ಪಾತ್ರದ ಹೆಸರನ್ನೂ ನಿರೂಪಿಸಲಾಗಿರುತ್ತದೆ.

---

42. **Shastri Guru Prasad,** ಶ್ರೀವಿಷ್ಣುಶರ್ಮವಿರಚಿತಮ್ ಪಂಚತಂತ್ರಮ್, ಪ್ರಸ್ತಾವನೆ-ಪು-9, ಪಂಚತಂತ್ರದ ಜೀರ್ಣೋದ್ಧಾರ, ಶ್ಲೋಕ-1 ಮತ್ತು2, ಚೌಕಾಂಬ ಸುರಭಾರತೀ ಪ್ರಕಾಶನ, ಓರಿಯಂಟಲ್ ಪಬ್ಲಿಶರ್ಸ & ಡಿಸ್ಟ್ರಿಬ್ಯೂಟರ್ಸ್, ಏ.37/117, ಗೋಪಾಲ್ ಮಂದಿರ್ ಲೇನ್, ಪಿ.ಬಿ.ನಂ-1129, ವಾರಣಾಸಿ-221001(2018)

ಉದಾಹರಣೆಗೆ:–

यस्य बुद्धिर्बलं तस्य निर्बुद्धिस्तु कुतो बलम् ।

वने सिंहो मदोन्मत्तः शशकेन निपातितः ॥[43]

ಅಂದರೆ– ಬುದ್ಧಿವಂತರಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಏಕೆಂದರೆ ಬುದ್ಧಿವಂತನೇ ನಿಜವಾದ ಬಲಶಾಲಿಯೇ ಹೊರತು ಬುದ್ಧಿಯಿಲ್ಲದವನು ಎಂದೂ ಬಲಶಾಲಿ ಆಗಲಾರ. ಉದಾಹರಣೆಗೆ ಮದೋನ್ಮತ್ತನಾದ ಸಿಂಹವೊಂದು ಮೊಲದಿಂದ ಹೀಗೆ ಕೊಲ್ಲಲ್ಪಟ್ಟಿತು. ಪಂಚತಂತ್ರ ಕಥಾ ಮಾಧ್ಯಮದಲ್ಲಿ ಕವಿಯು ಅನೇಕ ಸಿದ್ಧಾಂತ ವಚನಗಳನ್ನು ಪ್ರಸ್ತುತಪಡಿಸಿ, ಅವುಗಳಲ್ಲಿ ನೈತಿಕ, ಧಾರ್ಮಿಕ, ರಾಜನೈತಿಕ ಜೀವನದ ಸಾಮಾನ್ಯ ನಿಯಮಗಳನ್ನು ಹಿಡಿದಿಟ್ಟಿರುತ್ತಾನೆ.

ಕಥಾಮಾಧ್ಯಮವು ನೀತಿ ಬೋಧೆಗೆ ಉತ್ತಮ ಸಾಧನ ಎಂಬುದನ್ನು ಪಂಚತಂತ್ರವು ಸ್ಪಷ್ಟಪಡಿಸಿದೆ. ತತ್ವ ಪ್ರತಿಪಾದಕರೂ, ಪ್ರಚಾರಕರೂ ಕಥೆಗಳನ್ನು ಯಶಸ್ವಿಯಾಗಿ ಬಳಸಿಕೊಂಡಿದ್ದಾರೆ. ಈ ಕೃತಿರತ್ನವು ಪಶುಪಕ್ಷಿಗಳ ಕಥೆಗಳ ಮೂಲಕ ಕೋಮಲಮತಿಗಳಾದ ಅರಸುಕುಮಾರರಿಗೆ ಉತ್ತಮ ರಾಜಕೀಯ ಶಿಕ್ಷಣವನ್ನು ನೀಡುತ್ತದೆ. ಪಶುಪಕ್ಷಿಗಳಾದರೂ ಅವು ಮಾನವರಿಗಿಂತ ಮಿಗಿಲಾಗಿ ವರ್ತಿಸಿ ನಿತ್ಯ ಜೀವನದ ವ್ಯವಹಾರ ಕೌಶಲ್ಯ ಮತ್ತು ಸದಾಚಾರಗಳನ್ನು ಮನಮುಟ್ಟಿಸುವ ರೀತಿಯು ಅತ್ಯಾಕರ್ಷಕವಾಗಿದೆ. ಕರಟಕದಮನಕರು, ಪಿಂಗಳಕ ಮತ್ತು ಸಂಜೀವಕರ ಗಾಢ ಮೈತ್ರಿಯನ್ನು ಮುರಿಯುತ್ತವೆ. ಕಪೋತ ರಾಜನು ಆತ್ಮ ರಕ್ಷಣೆಯನ್ನು ಕಡೆಗಣಿಸಿ ವ್ಯಾಧನ ಬಲೆಯಿಂದ ಸಂಗಡಿಗರನ್ನು ಕಾಪಾಡುತ್ತಾನೆ. ಕಾಗೆಗಳು ಚಾತುರ್ಯದಿಂದ ಪ್ರಬಲ ಶತ್ರುವಾದ ಗೂಬೆಯ ನೆಲೆಯನ್ನು ಸುಡುತ್ತವೆ. ಹೆಂಡತಿಯ ಪ್ರೇರಣೆಯಿಂದ ಕೊಲ್ಲಲು ಯೋಜಿಸಿದ ಮೊಸಳೆಯಿಂದ ಕಪಿಯು ತನ್ನನ್ನು ಕಾಪಾಡಿ ಕೊಳ್ಳುತ್ತದೆ. ಕಥಾಸಂವಿಧಾನದಲ್ಲಿ ಪಂಚತಂತ್ರಾಕಾರನ ಕೈ ಪಳುಗಿದೆ. ಎಲ್ಲಿಯೂ ಜಾಡು ತಪ್ಪಿಲ್ಲ. ಬರಡಾಗಿಲ್ಲ. ಪದ್ಯಗಳೆಲ್ಲಾ ನೀತಿಯಿಂದ ತುಂಬಿ ಮನೋರಂಜಕವಾಗಿ, ಕಂಠಪಾಠ ಯೋಗ್ಯವಾಗಿ ಹಾಗೂ ಉಪದೇಶಾತ್ಮಕವಾಗಿ ರೂಪುಗೊಂಡಿವೆ. ಉದಾಹರಣೆಗೆ:–

न विश्वसेदविश्वस्ते विश्वते नातिविश्वसेत्।

विश्वासाद्भयमुत्पन्नं मूलान्यपि निकृन्तति ॥[44]

---

43. **ಸುಧಾಕರ ಮಾಲವೀಯ,** ವಿಷ್ಣುಶರ್ಮವಿರಚಿತ ಪಂಚತಂತ್ರಂ, ಮಿತ್ರಭೇದ– ಶ್ಲೋ.238. ಪು–158,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ 221001.
44. **ಸುಧಾಕರ ಮಾಲವೀಯ,** ವಿಷ್ಣುಶರ್ಮವಿರಚಿತ ಪಂಚತಂತ್ರಮ್–ಲಬ್ಧಪ್ರಣಾಶ–ಶ್ಲೋಕ 14,ಪು–630(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಅಂದರೆ, "ವಿಶ್ವಾಸವನ್ನು ಬೆಳೆಸಲು ಯೋಗ್ಯನಲ್ಲದವನಲ್ಲಿ ವಿಶ್ವಾಸವನ್ನಿಡಬಾರದು. ಹಾಗೆಯೇ ವಿಶ್ವಾಸ ಬೆಳೆಸಲು ಯೋಗ್ಯನಾಗಿದ್ದವನಲ್ಲೂ ಅತಿಯಾದ ವಿಶ್ವಾಸವನ್ನು ಬೆಳೆಸಬಾರದು. ಏಕೆಂದರೆ ವಿಶ್ವಾಸದ ಕಾರಣದಿಂದ ಉತ್ಪನ್ನವಾದ ಭಯವು ಮನುಷ್ಯನ ಮೂಲವನ್ನೇ ಕಡಿದು ಹಾಕುವುದು. ಇಂದು ನನಗೆ ಪುನರ್ಜನ್ಮ ಇದ್ದಂತೆ". ಎಂದು ವಾನರನು ಮೊಸಳೆಗೆ ಹೇಳಿದ ಮಾತು. ಮಿತ್ರಸಂಪ್ರಾಪ್ತಿ-ವರ್ತಕ ಪುತ್ರನ ಕಥೆಯಲ್ಲಿ ಬಂದಿರುವ ಈ ಪದ್ಯವು ರಾಜಕುಮಾರರಿಗೆ ಶಿಕ್ಷಣ ನೀಡುವ ಕವಿಯ ಉದ್ದೇಶವನ್ನು ಸುಂದರವಾಗಿ ಧ್ವನಿಸುತ್ತದೆ.

कोऽतिभारः समर्थानां किं दूरं व्यवसायिनाम् ।

को विदेशः सुविद्यानां कः परः प्रियवादिनाम् ॥[45]

ಸಮರ್ಥರಿಗೆ ಯಾವುದುತಾನೇ ಭಾರ? ವ್ಯವಸಾಯ ಮಾಡುವವರಿಗೆ ಯಾವುದು ತಾನೇ ದೂರ? ವಿದ್ಯಾವಂತರಿಗೆ ವಿದೇಶವುಂಟೇ? ಪ್ರಿಯ ಮಾತನಾಡುವವರಿಗೆ ಶತ್ರುಗಳುಂಟೇ? "ಓದು ಒಕ್ಕಾಲು, ಬುದ್ಧಿ ಮುಕ್ಕಾಲು" ಎಂಬ ನಾಣ್ನುಡಿಯಂತೆ ವಿದ್ಯೆಗಿಂತ ಬುದ್ಧಿ ಮುಖ್ಯ ಎಂಬ ವಿಚಾರವನ್ನು ಲೋಭದಿಂದ ಕೂಡಿದ ಚಕ್ರಧರನ ಕಥೆಯಲ್ಲಿ ಮೂರನೆಯ ಬ್ರಾಹ್ಮಣನು ಎಷ್ಟು ಸೊಗಸಾದ ಉಕ್ತಿಯನ್ನು ಹೇಳಿದ್ದಾನೆ:-

वरं बुद्धिर्न सा विद्या विद्याया बुद्धिरुत्तमा ।

बुद्धिहीना विनश्यन्ति यथा ते सिंहकारकाः ॥[46]

ಅಂದರೆ, ಬುದ್ಧಿಯೇ ಶ್ರೇಷ್ಠ, ವಿದ್ಯೆಯಲ್ಲ. ವಿದ್ಯೆಗಿಂತ ಬುದ್ಧಿಯೇ ಉತ್ತಮ. ಸಿಂಹಕ್ಕೆ ಜೀವವನ್ನು ಕೊಟ್ಟವರಂತೆ ಬುದ್ಧಿಹೀನರು ನಾಶವಾಗುತ್ತಾರೆ. ಪಂಚತಂತ್ರದಲ್ಲಿನ ಭಾಷಾ ಪ್ರಯೋಗವು ಸರಳ, ಸ್ಪಷ್ಟ ಹಾಗೂ ಅಲಂಕಾರಗಳಿಂದ ಕೂಡಿದ್ದು, ಉತ್ತಮ ದೃಷ್ಟಾಂತವು ಸಂದರ್ಭೋಚಿತವಾಗಿದ್ದು, ಓದುಗರಿಗೆ, ಕೇಳುಗರಿಗೆ ಅರ್ಥಪೂರ್ಣ ಜ್ಞಾನವನ್ನು ಒದಗಿಸುತ್ತದೆ. ಉದಾಹರಣೆಗೆ:-

रुपेणाप्रतिमेन यौवनगुणैः श्रेष्ठे कुले जन्मना

कान्त्या श्रीरिव याऽत्र साऽपि विदशां कालक्रमादागता ।

सैरिन्ध्रीति सगर्वितं युवतिभिः साक्षेपमज्ञातया

द्रौपद्या ननु मत्स्यराजभवने घृष्टं न किं चन्दनम् ?॥[47]

---

45. **ಸುಧಾಕರ ಮಾಲವೀಯ,** ಶ್ರೀವಿಷ್ಣುಶರ್ಮವಿರಚಿತಮ್ ಪಂಚತಂತ್ರಮ್, ಮಿತ್ರಸಂಪ್ರಾಪ್ತಿ-ಶ್ಲೋ.57, ಪು.337. ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.(1993)

46. **ಸುಧಾಕರ ಮಾಲವೀಯ,** ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಅಪರೀಕ್ಷಿತಕಾರಕಂ-ಶ್ಲೋ 36, ಪು.734,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

47. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಕಾಕೋಲೂಕೀಯಮ್ ಶ್ಲೋ-227, ಪು.589, (1993)ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಸೊಗಸಾದ ವರ್ಣನೆ– ಶ್ರೀ ಮಾನ್ ಯುಧಿಷ್ಠಿರನು ಕಷ್ಟಕಾಲ ಬಂದಾಗ ಒಂದು ವರ್ಷದ ಕಾಲ ತ್ರಿದಂಡವನ್ನು ಹೊರಲಿಲ್ಲವೇ? ರೂಪವಂತರಾದ, ಬಲವಂತರಾದ, ಕುಂತೀಪುತ್ರರಾದ ನಕುಲ–ಸಹದೇವರನ್ನು ವಿರಾಟ ರಾಜನು ಗೋರಕ್ಷಣೆಗೆ ಕಳಿಸಲಿಲ್ಲವೇ? ಅಪ್ರತಿಮವಾದ, ರೂಪಯೌವನವುಳ್ಳ, ಉತ್ತಮ ಕುಲದಲ್ಲಿ ಹುಟ್ಟಿದ, ಲಕ್ಷ್ಮಿಯಂತೆ ಕಾಂತಿಯನ್ನುಳ್ಳ ದ್ರೌಪದಿಯು, ಕಾಲವಶದಿಂದ ಬಂದ ಆಪತ್ತಿನ ಸಮಯದಲ್ಲಿ ಮತ್ಸ್ಯರಾಜಭವನದಲ್ಲಿರುವ ಯುವತಿಯರ ಗರ್ವದಿಂದ ಹಾಗೂ ಆಕ್ಷೇಪದಿಂದ ಕೂಡಿದ ಆಜ್ಞೆಗಳನ್ನು ಕೇಳುತ್ತಾ, ಸೈರಂಧ್ರೀ ಎಂದು ಕರೆಸಿಕೊಳ್ಳುತ್ತಾ ಗಂಧವನ್ನು ಅರೆಯಲಿಲ್ಲವೇ?

ರಾಜನೀತಿಯನ್ನು, ಕಾಲಪುರುಷನ ಪ್ರಭಾವವನ್ನು ಪರಿಣಾಮಕಾರಿಯಾಗಿ ಚಿತ್ರಿಸಿರುವ ಈ ಶ್ಲೋಕ ಎಷ್ಟು ಸೊಗಸಾಗಿದೆ !

स च नृपतिस्ते सचिवास्ताः प्रमदास्तानि काननवनानि ।

स च ते च ताश्च तानि च कृतान्तदृष्टानि नष्टानि ॥[48]

ಈ ಸಂದರ್ಭದಲ್ಲಿ ಸ್ಥಿರಜೀವಿಯಿಂದ ಮೇಘವರ್ಣನಿಗೆ ರಾಜನೀತಿಯ ಉಪದೇಶ ಎಷ್ಟು ಅರ್ಥಪೂರ್ಣವಾಗಿದೆಯೆಂದರೆ, "ತ್ರಿಲೋಕ ವಿಜಯಿಯಾದ ಮಾಂಧಾತನು ಎಲ್ಲಿಗೆ ಹೋದ? (ಸತ್ಯವ್ರತ) ಭೀಷ್ಮನು ಎಲ್ಲಿಗೆ ಹೋದ? ದೇವತೆಗಳ ರಾಜ ನಹುಷನು ಎಲ್ಲಿಗೆ ಹೋದ? ಉತ್ತಮ ಶಾಸ್ತ್ರ ಕೋವಿದನಾದ ಕೇಶವನು ಎಲ್ಲಿಗೆ ಹೋದ? ಇವರೆಲ್ಲರೂ ರಥ, ಆನೆಗಳೊಂದಿಗೆ ಇಂದ್ರನ ಆಸನವನ್ನೇರುವ ಯೋಗ್ಯರನ್ನಾಗಿ ಮಾಡಿದ್ದು ಮಹಾತ್ಮನಾದ ಕಾಲ ಹಾಗೂ ಕಾಲನೇ ಎಲ್ಲರನ್ನೂ ನಾಶಮಾಡಿದನು. ಅಲ್ಲದೆ ಆ ರಾಜ, ಆ ಸಚಿವರು, ಆ ಸುಂದರ ಸ್ತ್ರೀಯರು, ಆ ವನ–ಉಪವನಗಳು ಎಲ್ಲಿ ಹೋದವು? ಅವೆಲ್ಲವನ್ನೂ ಕಾಲನೇ ಸೃಷ್ಟಿಸಿ, ಕಾಲನೇ ನಷ್ಟ ಮಾಡಿದನು. ಆದ್ದರಿಂದ ಮತ್ತಗಜದ ಕಿವಿಯಂತೆ ಚಂಚಲವಾದ ರಾಜ್ಯಲಕ್ಷ್ಮಿಯನ್ನು ನ್ಯಾಯನಿಷ್ಠೆಯಿಂದ ಕೂಡಿದವನಾಗಿ ಅನುಭವಿಸು."[49]

ಇದನ್ನೆಲ್ಲಾ ಗಮನಿಸಿದರೆ, ವಿಷ್ಣುಶರ್ಮರು ತಮ್ಮ ಪಂಚತಂತ್ರ ಕೃತಿಯಲ್ಲಿ ಸಣ್ಣಸಣ್ಣ, ಸರಳ, ಲಲಿತ ಹಾಗೂ ಪ್ರಚಲಿತ ವ್ಯವಹಾರಿಕ ಭಾಷೆಯನ್ನು ಉಪಯೋಗಿಸುತ್ತಾ ಕೇಳುಗರಿಗೆ ತುಂಬಾ ನಿಕಟವಾಗುತ್ತಾರೆ. ಅಲ್ಲಲ್ಲಿ ಕಲ್ಪನೆಗಳು ಮತ್ತು ಅಲಂಕಾರಗಳ ಸಮಾವೇಷದಿಂದ ಕಾವ್ಯಾತ್ಮಕ ಪ್ರವಾಹವನ್ನೇ ಹರಿಸಿದ್ದಾರೆ.

---

48. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಕಾಕೋಲೂಕೀಯಮ್–ಶ್ಲೋ 256, ಪು.616. (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
49. **ಭರತ್.ಬಿ.ರಾವ್,** ಪಂಚತಂತ್ರ (ಕನ್ನಡಾನುವಾದ),2018, ಕಾಕೋಲೂಕೀಯ, ಪು.217, ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್ ರಸ್ತೆ. ಬಸವನಗುಡಿ, ಬೆಂಗಳೂರು–560004

ಇಷ್ಟಾದರೂ ಎಲ್ಲೂ ಭಾಷಾ ದೋಷಗಳು ಕಂಡುಬರುವುದಿಲ್ಲ. ಪಂಚತಂತ್ರ ಗ್ರಂಥದಲ್ಲಿ ಸರ್ವತ್ರ ಒಂದು ವ್ಯವಹಾರ ಕುಶಲ ನೀತಿಪಟುವಿನ ವ್ಯಕ್ತಿತ್ವ ವ್ಯಕ್ತಗೊಳ್ಳುತ್ತದೆ. ಗಾದೆಗಳನ್ನು ಕರಾರುವಾಕ್ಕಾಗಿ ಬಳಸಿದ್ದು, ವಿನೋದಪ್ರಿಯತೆ ಹಾಗೂ ವ್ಯಂಗ್ಯಾತ್ಮಕತೆಗೇನೂ ಕೊರತೆಯಿಲ್ಲ.



## ಅಧ್ಯಾಯ-1-4. ಪಂಚತಂತ್ರದ ಕರ್ತೃ-ದೇಶ-ಕಾಲ-ವಿಚಾರ

ಕವಿ, ಕಾಲ, ದೇಶ ಇವುಗಳ ವಿಚಾರದಲ್ಲಿ ಸಂಸ್ಕೃತ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ ಸಮಸ್ಯಗಳೇ ಹೆಚ್ಚು. ಸಾಮಾನ್ಯವಾಗಿ ಸಂಸ್ಕೃತ ಕವಿಗಳ ದೇಶಕಾಲಾದಿಗಳು ಸಂದೇಹಾಸ್ಪದವಾಗಿಯೇ ಇರುತ್ತದೆ. ಅದೂ ಅಲ್ಲದೆ ಸಾಮಾನ್ಯವಾಗಿ ಎಲ್ಲ ಕವಿಗಳೂ ತಮ್ಮತಮ್ಮ ದೇಶ, ಕಾಲ, ಕೃತಿಗಳನ್ನು ಕುರಿತು ಏನನ್ನೂ ಸರಿಯಾಗಿ ಹೇಳಿಕೊಳ್ಳದಿರುವುದೇ ಇದಕ್ಕೆ ಕಾರಣವಾಗಿರುತ್ತದೆ. ಪ್ರಾಚೀನ ಕೃತಿಗಳ ಒಂದು ಲಕ್ಷಣವೆಂದರೆ ಕೃತಿಗಳನ್ನು ಯಾರು ರಚಿಸಿದರೆಂಬುದರ ಬಗ್ಗೆ ಅನಾಮಧೇಯತೆ. ಆದ್ದರಿಂದ ಕೃತಿಗಳನ್ನು ಯಾರು ಬರೆದರೆಂಬುದೇ ತಿಳಿಯುವಂತಿರುವುದಿಲ್ಲ. ಆದರೆ ಸ್ವಲ್ಪ ಸ್ವಲ್ಪ ಅಂದಾಜಿನ ಮೇಲೆ ಇಂಥಹವರು ಬರೆದಿರಬಹುದು ಅಥವಾ ಕರ್ತೃವಿನ ಕಾಲದೇಶಾದಿಗಳ ವಿಚಾರ ತಿಳಿದಷ್ಟು ಮಾತ್ರ ಪರಿಗಣಿಸಬೇಕಾಗುವುದು. ಈ ವಿಚಾರದಲ್ಲಿ ಪಂಚತಂತ್ರವೂ ಹೊರತಾಗಿಲ್ಲ. ಬೇರೆ ಕವಿಗಳು ತಮ್ಮ ಕಾವ್ಯದಲ್ಲಿ ತಮ್ಮ ಹಿಂದಿನವರ ಅಥವಾ ಸಮಕಾಲೀನರ ಹೆಸರುಗಳನ್ನು ಉಲ್ಲೇಖಿಸಿದ್ದುದರ ಆಧಾರದ ಮೇಲೆ ಅವರ ಬಗೆಗೆ ತಿಳಿಯಬೇಕಾಗುತ್ತದೆ.

ಈ ಆಧಾರಗಳೂ ಕೆಲವೊಮ್ಮೆ ನಂಬಲರ್ಹವಾಗಿರುವುದಿಲ್ಲ. ಪಂಚತಂತ್ರದ ವಿಚಾರದಲ್ಲೂ ಕರ್ತೃವು ಪಠ್ಯದಲ್ಲಿ ಉಲ್ಲೇಖವಾಗಿರುವ "ವಿಷ್ಣುಶರ್ಮರು" ಇರಬಹುದು. ಆ ಕಾಲದಲ್ಲಿ ಅತ್ಯಂತ ಪ್ರತಿಭಾನ್ವಿತ ಕಥೆಗಾರನಾಗಿದ್ದು, ಅದ್ಭುತ ಕಲ್ಪಿತ ರಚನಾ ಕೌಶಲ್ಯವನ್ನು ಹೊಂದಿರುವ ಮೇಧಾವಿ ಹಾಗೂ ರಾಜನೀತಿ ಶಿಕ್ಷಣ ತಜ್ಞ, ಜನಪ್ರಿಯ ನೀತಿಕಥೆಗಾರನಾಗಿದ್ದು ವಿಶೇಷ ಆಸಕ್ತಿ ವಹಿಸಿ, ವಿಶಿಷ್ಟ ರಚನೆ ಮತ್ತು ಚೆನ್ನಾಗಿ ವ್ಯಾಖ್ಯಾನಿಸಿದ ಸೂತ್ರಗ್ರಂಥವು **'ಪಂಚತಂತ್ರ'** ಆಗಿರಬಹುದು.

ಅದೇನೇ ಇರಲಿ, ಶಿಷ್ಯರು ಕೇವಲ ಕೆಲವೇ ಮಾಸಗಳಲ್ಲಿ ಬಹಳ ಬುದ್ಧಿವಂತರಾಗಬೇಕಾದರೆ, ಅವರ ಗುರುಗಳು ಎಂಥಹ ಶಿಕ್ಷಣ ತಜ್ಞರಾಗಿರಬಹುದೆಂಬುದು ಗಮನಿಸಬೇಕಾದ ಅಂಶವಾಗಿದೆ.

स्थानेषु शिष्यनिवहैर्विनियुज्यमाना विद्या गुरुं हि गुणवत्तरमातनोति ।

आदाय शुक्तिषु बलाहकविप्रकीर्णैः रत्नाकरो भवति वारिभिरंबुराशिः ॥[50]

ಅಂದರೆ, ಶಿಷ್ಯರು ಸತ್ಪಾತ್ರದಲ್ಲಿ ಉಪಯೋಗಿಸಿದ ವಿದ್ಯೆಯು ಅವರ ಆಚಾರ್ಯರ ಪಾಂಡಿತ್ಯವನ್ನು ತಿಳಿಸುತ್ತದೆ. ಮೋಡಗಳಿಂದ ಸುರಿದ ನೀರಿನ ಬಿಂದುಗಳನ್ನು ಮುತ್ತಿನಚಿಪ್ಪಿನಲ್ಲಿ ಸಂಗ್ರಹಿಸಿ ಸಮುದ್ರವು ರತ್ನಾಕರವೆನಿಸಿದೆ.

---

50. **ಸುಭಾಷಿತಮಂಜರೀ,** ವಿವೇಕ-ಶ್ಲೋ-121,ಪು-292, ಅನರ್ಘರಾಘವ, 2-9 ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18. (2001)

ಭಾರತದ ಪ್ರಾಚೀನ ಕಥೆಗಳಾದ ಮಹಾಭಾರತ ಮತ್ತು ಭರತಮುನಿಯ ನಾಟ್ಯಶಾಸ್ತ್ರ ರಚನೆಯ ಬಗ್ಗೆ ಇರುವಂತೆಯೇ, ಭಾರತದಲ್ಲಿ ಈ ಸಂಪ್ರದಾಯ ಅಸಾಮಾನ್ಯವೇನಲ್ಲ. ಆದ್ದರಿಂದ ಪಂಚತಂತ್ರವನ್ನು ಅನೇಕ ಕರ್ತೃತ್ವದಿಂದ ಕೂಡಿದುದೆಂದೂ ಹೇಳಬಹುದು.

ಬಹಳ ಹಿಂದಿನಿಂದಲೂ ಮೌಖಿಕ ಸಂಪ್ರದಾಯದಂತೆ ಕಥೆಹೇಳುವುದು ಒಂದು ಪ್ರಮುಖ ಪದ್ಧತಿಯಾಗಿ ಬೆಳೆದು ಬಂದಿದೆ. ಕಥೆಹೇಳುವ ಸಂಪ್ರದಾಯವು ದೂರದ ಹಿಂದಿನ ಪೂರ್ವಸಾಕ್ಷರ ಸಮಾಜದಲ್ಲಿನ ಒಂದು ಸಮುದಾಯಿಕ ಚಟುವಟಿಕೆಯ ಮೂಲವನ್ನು ಹೊಂದಿದೆ. ಪರಂಪರಾನುಗತವಾಗಿ ಯಾವ ಕಥೆಯನ್ನೂ ಅದೇ ಮಾದರಿಯಲ್ಲಿ ಎರಡನೇ ಬಾರಿ ಹೇಳಲಾಗಿಲ್ಲ. ಹೀಗಿರುವುದರಿಂದ ಕಥಾ ಸಂಪ್ರದಾಯದ ಹೆಸರು ಮತ್ತು ಕಾಲವನ್ನು ನಿರ್ದಿಷ್ಟವಾಗಿ ಹೇಳುವುದು ಕಷ್ಟಸಾಧ್ಯವೇ ಸರಿ. ಆದರೆ ಪರಂಪರಾನುಗತವಾಗಿ ಕಥಾಸಾಹಿತ್ಯವು ಕೇಳಿ ಬರುತ್ತಿದೆ. ಪಂಚತಂತ್ರ ನೀತಿಕಥೆಗಳ ಕರ್ತೃವೂ ಒಬ್ಬ ನರೆತ,ನುರಿತ ಪ್ರಾಚೀನ ಸಾಂಪ್ರದಾಯಿಕ ಕಥೆಗಾರನಿರಬಹುದೆಂದು, ಮಹಾಭಾರತದ ಕರ್ತೃ ಎನ್ನಲಾದ ಪೌರಾಣಿಕ ವ್ಯಕ್ತಿ ವ್ಯಾಸನಂತೆ, ನಮಗೆ ಆತನ ಬಗ್ಗೆ ಮಹಾಭಾರತದ ಕರ್ತೃ ಎಂಬುದು ಎಷ್ಟು ತಿಳಿದಿದೆಯೋ, ಅದಕ್ಕಿಂತ ಪಂಚತಂತ್ರದ ಕರ್ತೃವಿನ ಬಗ್ಗೆ ಅಷ್ಟೂ ಸ್ಪಷ್ಟವಿಲ್ಲವೆನ್ನಬಹುದು. ಸಂಪ್ರದಾಯವು ಇಂತಹ ಅಸಾಧಾರಣ ಪಂಚತಂತ್ರ ಕೃತಿಯನ್ನು ರಚಿಸಿರುವ ಕರ್ತೃ **"ವಿಷ್ಣುಶರ್ಮ"** ಎಂದು ಹೇಳುತ್ತದೆ. ಆದರೆ ನಮಗೆ ಇಂಥಹ ಪ್ರತಿಭಾನ್ವಿತ ಲೇಖಕ, ಶಿಕ್ಷಣ ತಜ್ಞ ಪಂಚತಂತ್ರದಲ್ಲಿ ಯೋಜಿಸಿ, ಕಲಾತ್ಮಕವಾಗಿ ಪ್ರದರ್ಶಿಸಿರುವ ಕಥಾನಿರೂಪಣೆಯು ಲೋಕಜ್ಞಾನದ ಉನ್ನತಿಯನ್ನು ಪರಕಾಷ್ಠತೆಯೆಡೆಗೆ ಕೊಂಡೊಯ್ದಿದೆ. ಪ್ರಪಂಚದಾದ್ಯಂತ ಬೇಕಾದಷ್ಟು ಕಥಾನಿರೂಪಕರು ಶತಮಾನಗಳಲ್ಲಿ, ಅನೇಕ ಪರಿಷ್ಕರಣೆಗಳಲ್ಲಿ, ಅನೇಕ ಭಾಷೆಗಳಲ್ಲಿ ಇದೇ ಪಂಚತಂತ್ರವನ್ನು ರಚಿಸಿದ್ದರೂ, ಯಾವುದೂ ವಿಷ್ಣುಶರ್ಮರ ಪ್ರತಿಭೆಗೆ ಸಮಾನ ಇಲ್ಲವೆಂದು ಅಭಿಪ್ರಾಯಪಡಬಹುದು. ಹೇಳುವುದಾದರೆ, ಸಾಹಿತ್ಯದಲ್ಲಿ ಕಥಾನಿರೂಪಣೆಯ ಒಂದು ಪ್ರಕಾರವನ್ನೇ ವಿಷ್ಣುಶರ್ಮರು ಸೃಷ್ಟಿ ಮಾಡಿದ್ದರೆಂದರೆ ಅತಿಶಯೋಕ್ತಿಯೇನಲ್ಲ.[51] ಆದಿಕಾವ್ಯದಲ್ಲಿ ಒಂದು ಮಾತಿದೆ. ಅದರಂತೆ ಏನಾದರೊಂದು ತೀರ್ಮಾನಕ್ಕೆ ಬರಬೇಕಾಗುವುದು. ಅದೇನೆಂದರೆ:–

नातन्त्री वाद्यते वीणा नाचक्रो वर्तते रथः ।

नापतिः सुखमेधेत या स्यादपि शतात्मजा ॥[52]

---

51. **Chandra Rajan,** VISNU SARMA,( English Translation)The Panchatantra, Forward - P- 11,12.,(1993) Penguin Random House, Gurgaon, Haryana 122002.

52. **ಸುಭಾಷಿತಮಂಜರೀ,** ಸಾಮಾನ್ಯ ನೀತಿ, ಶ್ಲೋ–241, ಪು–428, ರಾಮಾಯಣ–ಅಯೋಧ್ಯಾ–39–30,(2001), ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು–18.

ತಂತಿಯಿಲ್ಲದೆ ವೀಣೆ ನುಡಿಯದು. ಚಕ್ರವಿಲ್ಲದೆ ರಥವು ಸಾಗದು. ಹಾಗೆ ನೂರು ಮಕ್ಕಳ ತಾಯಿಯಾದರೂ ಪತಿಯಿಲ್ಲದಿದ್ದರೆ ಸ್ತ್ರೀಯು ಸುಖವಾಗಿ ಇರಲಾರಳು.

ಕೆಲವೊಮ್ಮೆ ವಿಷ್ಣುಶರ್ಮ ಎಂಬ ಹೆಸರು ಅರ್ಥಶಾಸ್ತ್ರ ರಚಿಸಿದ ವಿಷ್ಣುಗುಪ್ತ ಚಾಣಕ್ಯನ ಒಂದು ಹೆಸರು ಎಂಬುದಾಗಿಯೂ ಹೇಳಲ್ಪಟ್ಟಿದೆ. ಆದರೆ ಅರ್ಥಶಾಸ್ತ್ರದ ಕರ್ತೃವೇ ನೀತಿಶಾಸ್ತ್ರವನ್ನೂ ರಚಿಸಿದ್ದಾರೆ ಎಂಬುದಕ್ಕಾಗಲೀ ಅಥವಾ ಅಲ್ಲವೆಂಬುದಕ್ಕಾಗಲೀ ಯಾವುದೇ ಪುರಾವೆಗಳು ಲಭ್ಯವಿರುವುದಿಲ್ಲ. ಹಾಗಾದರೆ ಈ ವಿಷ್ಣುಶರ್ಮರು ಯಾರಿರಬಹುದು? ಪಂಚತಂತ್ರ ಪಠ್ಯದ ಭೂಮಿಕೆಯಲ್ಲಿ ಮಾತ್ರ ಈ ಹೆಸರು ಕಂಡುಬರುತ್ತದೆ. ಇವರು ಒಬ್ಬ ಪ್ರಸಿದ್ಧ ಶಿಕ್ಷಕನಾಗಿದ್ದು, ಮಹಿಲಾರೋಪ್ಯ ನಗರದಲ್ಲಿ ವಾಸಿಸುತ್ತಿದ್ದರು. ಮಹಿಲಾರೋಪ್ಯನಗರವು ಯಾರಿಂದಲೂ ಗುರುತಿಸಲ್ಪಟ್ಟ ನಗರವಲ್ಲ. ಆದರೆ ಎಚ್.ಎಚ್. ವಿಲ್ಸನ್ ಎಂಬುವವರು ಹೇಳಿರುವಂತೆ ಮಯಿಲಾಪುರ, ನವಿಲುನಗರ–ಈಗ ತಮಿಳುನಾಡಿನ ರಾಜಧಾನಿಯ ಒಂದು ಭಾಗವಾಗಿದೆ. ಅವರೇ ಸ್ವತಃ ಅವರ ಬಗ್ಗೆ ತಿಳಿಸಿರುವಂತೆ, ಎಂಭತ್ತು ವರ್ಷದವರಾಗಿದ್ದು, ಯಾವುದೇ ಪ್ರಾಪಂಚಿಕ ಆಸೆ ಆಕಾಂಕ್ಷೆಗಳಿಲ್ಲದೆ, ಒಬ್ಬ ಪರಿಣಾಮಕಾರಿ ಶಿಕ್ಷಕನಾಗಿ, ಮೂವರು ಹಠಮಾರಿ ರಾಜಕುಮಾರರಿಗೆ ಕೇವಲ ಆರು ತಿಂಗಳುಗಳಲ್ಲಿ ಕಥೆ ಹೇಳುವ ಮೂಲಕ ಸುಶಿಕ್ಷಿತರನ್ನಾಗಿ ಮಾಡುವ ಕಾರ್ಯದಲ್ಲಿ ತೊಡಗಿದ್ದರೆಂಬ ಉಲ್ಲೇಖವಿದೆ. ಈ ರಾಜನಂದನರನ್ನು ರಾಜನೀತಿ ನಿಪುಣರೂ, ಬದುಕಿನ ಚತುರರೂ ಆಗುವಂತೆ ಮಾರ್ಗದರ್ಶನ ನೀಡಿದರು. ನಂತರದಲ್ಲಿ ಏನಾಯ್ತೆಂಬುದರ ಬಗ್ಗೆ ಏನೂ ವಿಚಾರಗಳಿಲ್ಲ. ಇಷ್ಟು ವಿಚಾರಗಳು ಪಠ್ಯದಲ್ಲಿಯೇ ಕಂಡು ಬಂದಿರುವುದರಿಂದ ಮಾಹಿತಿ ಲಭ್ಯವಾಗಿದೆ.[53]

वर्णप्रकर्षे सति कर्णिकारं दुनोति निर्गन्धतया स्म चेतः।

प्रायेण सामग्र्यविधौ गुणानां पराङ्मुखी विश्वसृजःप्रवृत्तिः ॥[54]

ಬೆಟ್ಟದಾವರೆಯು ವರ್ಣಮಯವಾಗಿ, ಸುಂದರವಾಗಿ ಕಾಣಿಸಿದರೂ ಸುವಾಸನೆಯಿಲ್ಲವಾದುದರಿಂದ ಮನಸ್ಸಿಗೆ ಬೇಸರವನ್ನುಂಟು ಮಾಡುತ್ತದೆ. ತನ್ನ ಸೃಷ್ಟಿಯಲ್ಲಿ ಬ್ರಹ್ಮನು ಎಲ್ಲಾಪದಾರ್ಥಗಳಲ್ಲಿಯೂ ಯಾವುದಾದರೊಂದು ನ್ಯೂನತೆ ಇಟ್ಟಿರುತ್ತಾನೆ. ಪೂರ್ಣವಾಗಿ ಯಾವುದನ್ನೂ ಮಾಡುವ ಅಭ್ಯಾಸವಿಲ್ಲ. ಈ ಅರಸುಕುಮಾರರಿಗೂ ತಿಳಿಗೇಡಿತನವನ್ನಿಟ್ಟು, ಪ್ರಯೋಜನಕ್ಕೆ ಬಾರದಂತೆ ಮಾಡಿಬಿಟ್ಟಿದ್ದಾನೆ. ಇಂತಹವರನ್ನು

53. **Chandra Rajan**, VISNU SARMA,( English Translation)The Panchatantra, Forward - P- 11. Penguin Random House,India Pvt.Ltd. 7th Floor, Infinity Tower,C, DLF Cyber City,(1993) Gurgaon, Haryana 122002, India.

54. **ಸುಭಾಷಿತಮಂಜರೀ**, ಸಾಮಾನ್ಯ ನೀತಿ, ಶ್ಲೋ–446,ಪು–478,ಕುಮಾರಸಂಭವ.ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು,–18,(2001)

ಪರಿವರ್ತನೆ ಮಾಡಿ, ಉತ್ತಮ ವ್ಯಕ್ತಿತ್ವ ನಿರ್ಮಾಣ ಮಾಡಿ, ಮಾನವ ಜನ್ಮದ ಸಾರ್ಥಕತೆ ಕಾಣುವಂತೆ ಶಿಕ್ಷಣ ಮತ್ತು ಮಾರ್ಗದರ್ಶನ ನೀಡುವ ಜವಾಬ್ದಾರಿಯನ್ನು ವಿಷ್ಣುಶರ್ಮರು ಸಮರ್ಪಕವಾಗಿ ನಿರ್ವಹಿಸಿದ್ದಾರೆ.

ಮತ್ತೊಂದು ಸಾಧ್ಯತೆಯೇನೆಂದರೆ, ಪಂಚತಂತ್ರ ನೀತಿಕಥೆಗಳಲ್ಲಿ ಕಂಡು ಬರುವ ಪಾತ್ರಗಳು ಮಾನವ–ಪ್ರಾಣಿ–ಪಕ್ಷಿಗಳು. ಅವುಗಳ ಲಕ್ಷಣಗಳು ಹೇಗೆ ಸಂದರ್ಭೋಚಿತವಾಗಿ ಕಲ್ಪಿಸಲ್ಪಟ್ಟಿದೆಯೋ ಅದೇ ರೀತಿ ಪಂಚತಂತ್ರ ಕೃತಿಯ ಪೀಠಿಕಾ ಭಾಗದಲ್ಲಿ ವಿಷ್ಣುಶರ್ಮರೂ ಸಹ ಒಂದು ಕಾಲ್ಪನಿಕ ಪಾತ್ರವೇಕಾಗಿರಬಾರದು? ಒಬ್ಬ ಅನಾಮಧೇಯ ನಿರೂಪಕ, ಕಥಾಮುಖದಲ್ಲಿ ಕರ್ತೃವು ವಿಷ್ಣಶರ್ಮನೆಂದೂ, ಅದ್ಭುತ ಕಥೆಗಾರರ ಸಾಲಿನಲ್ಲಿ ಮೊದಲನೆಯವರೆಂದೂ, ಅಮರಶಕ್ತಿ ರಾಜನ ಪುತ್ರರು ಮೊದಲ ಪ್ರೇಕ್ಷಕ ಶಿಷ್ಯರು. ಬಹುಶಃ ವಿಷ್ಣುಶರ್ಮರು ಮೂಲರೂಪ ಕಥೆಗಾರನೆಂದೂ ಕಂಡುಬರುತ್ತದೆ.[55]

ಅದೇನೇ ಇರಲಿ, ಪಂಚತಂತ್ರ ಕೃತಿ ರಚನೆಯು ಸಂಸ್ಕೃತ ಸಾಹಿತ್ಯ ಕ್ಷೇತ್ರದಲ್ಲಿ ಒಂದು ವಿಶಿಷ್ಟವಾದ, ಅಸಾಧಾರಣ, ಅಮೂಲ್ಯ ಕೃತಿರತ್ನವಾಗಿದ್ದು, ಸಾಹಿತ್ಯದ ಒಂದು ಪ್ರಕಾರವಾಗಿರುತ್ತದೆ. ಅಂದಿನಿಂದ ಇಂದಿನವರೆಗೂ, ಎಲ್ಲ ವಯಸ್ಸಿನ ಮಕ್ಕಳಿಗೂ, ದೊಡ್ಡವರಿಗೂ ಆಪ್ಯಾಯಮಾನವಾದ ಮಾರ್ಗದರ್ಶಕ ನೀತಿಕಥಾಗುಚ್ಛ. ಬದುಕಿನ ರೀತಿ, ರಾಜನೀತಿ ಹಾಗೂ ವ್ಯಕ್ತಿತ್ವ ನಿರ್ಮಾಣಕ್ಕೆ ಉತ್ತಮ ಪ್ರೇರಣೆ ನೀಡುವಂತಹ **"ಅನರ್ಘ್ಯ ಕೃತಿ"** ಎನ್ನಬಹುದು. **"ಪಂಚತಂತ್ರದ ಹೆಸರು ಹೇಗೆ ಬಂತು?"** ಎಂದು ಯಾರಾದರೂ ಯೋಚಿಸಿದರೆ, ಪಂಚತಂತ್ರದಲ್ಲಿ ಬರುವ ಎಲ್ಲ ಪಾತ್ರಗಳೂ ವಿಶಿಷ್ಟವಾದವುಗಳು. ಒಂದು ವ್ಯಕ್ತಿತ್ವ ನಿರ್ಮಾಣ ಕಾರ್ಯದಲ್ಲಿ ಪಂಚೇಂದ್ರಿಯಗಳಂತೆ ಶಬ್ದ, ಸ್ಪರ್ಶ, ರಸ, ರೂಪ ಮತ್ತು ಗಂಧವೆಂಬ ಪಂಚ ವಿಷಯಗಳಲ್ಲಿ ವ್ಯಕ್ತಿ ನಿರ್ಮಾಣ ತಂತ್ರವನ್ನು, ಪಂಚಾಮೃತ ಸವಿಯ ಕಥಾಮಾಧ್ಯಮದಲ್ಲಿ ಭೇದ, ಪರೀಕ್ಷೆ, ವಿಶ್ವಾಸ, ವಂಚನೆ, ಮಿತ್ರಕಾರ್ಯ ಮುಂತಾದ ಪಂಚತಂತ್ರಗಳನ್ನು ಸುವ್ಯವಸ್ಥಿತವಾಗಿ ಸಂಯೋಜಿಸಿರುವ ಶಿಕ್ಷಣ ಗ್ರಂಥವಾಗಿದೆ. ಪಂಚತಂತ್ರವು ಕೆಲವು ಮುಖ್ಯ ಸೂಚನೆಗಳನ್ನು ಹಾಗೂ ಜಾಗೃತಿಗಳನ್ನು ತಿಳಿಸುತ್ತಾ ತಪ್ಪುಗಳನ್ನು ತಿದ್ದಿ ತಿಳುವಳಿಕೆ ಬೆಳೆಸುವ ಕಾರ್ಯವನ್ನೂ ಮಾಡುತ್ತದೆ. ಇದು ನೀತಿಶೀಕ್ಷಣದ ಮುಖ್ಯ ಲಕ್ಷಣವಾಗಿದೆ. ಉದಾಹರಣೆಗೆ ಒಂದು ಸೂಕ್ತಿಯನ್ನು ಪರಿಶೀಲಿಸಬಹದು

मानाद्वा यदि वा लोभात् क्रोधाद्वा यदि वा भयात् ।

यो न्यायमन्यथा ब्रूते स याति नरकं नरः ॥[56]

55. **Chandra Rajan,** VISNU SARMA,( English Translation)The Panchatantra,(1993) Forward -P-12,48. (1993)Penguin Random House,India Pvt.Ltd, 7th Floor, Infinity Tower,C,DLF Cyber City,Gurgaon, Haryana 122002.India.

**56. ಸುಧಾಕರಮಾಲವೀಯ,** ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಮ್, ಕಾಕೋಲೂಕೀಯಮ್–ಶ್ಲೋ–108, ಪು.494,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಅಹಂಕಾರದಿಂದಾಗಲೀ, ಆಸೆಯಿಂದಾಗಲೀ, ಕೋಪದಿಂದಾಗಲೀ, ಭಯದಿಂದಾಗಲೀ, ಯಾವ ಮನುಷ್ಯನು ನ್ಯಾಯವನ್ನು ಬೇರೆ ರೀತಿಯಲ್ಲಿ ಹೇಳುವನೋ ಅವನು ನರಕಕ್ಕೆ ಹೋಗುತ್ತಾನೆ.

ಭಾರತೀಯ ಸಾಹಿತ್ಯ ಭಂಡಾರದಲ್ಲಿ ಸಂಸ್ಕೃತ ಪಂಚತಂತ್ರವು ಅತ್ಯಂತ ಮುಖ್ಯವೂ, ಸ್ವಾರಸ್ಯಪೂರ್ಣವೂ ಆದ ಉಪದೇಶಾತ್ಮಕ ಕಲ್ಪಿತ ಕಥೆಗಳ ಸಂಕಲನ. ಇದು ಅತ್ಯಂತ ಜನಪ್ರಿಯವೂ, ಮನೋಜ್ಞವೂ ಮತ್ತು ಮನೋ ವೈಜ್ಞಾನಿಕವೂ ಆಗಿರುವ ನೀತಿಕಥಾ ಗುಚ್ಛ. ಪಂಚತಂತ್ರದಲ್ಲಿ ಭಾರತದ ಎಲ್ಲ ನೀತಿಶಾಸ್ತ್ರಗಳು ಅಂದರೆ, ಮನು, ಶುಕ್ರ ಮತ್ತು ಚಾಣಕ್ಯನ ನೀತಿವಾಕ್ಯಗಳ ಸಾರಾಂಶವನ್ನು ಕಥಾರೂಪದಲ್ಲಿ ಕಾಣ ಬಹುದಾಗಿದೆ. ಇದರಲ್ಲಿ ಅರ್ಥಶಾಸ್ತ್ರದ ಐದು ತಂತ್ರಗಳನ್ನು ರೂಪಿಸಿರುವುದರಿಂದ ಇದಕ್ಕೆ ಪಂಚತಂತ್ರ ಎಂದು ಹೆಸರಾಯಿತೆಂಬ ಅಭಿಪ್ರಾಯವೂ ಇರುತ್ತದೆ. ಮೂರ್ಖನನ್ನೂ ವ್ಯವಹಾರ ಕುಶಲನನ್ನಾಗಿ ಮಾಡುವ ಅಪರೂಪದ ಸಂಸ್ಕೃತ ಭಾಷೆಯ ಕೊಡುಗೆ.[57] ಪಂಚತಂತ್ರ ಈ ಶಬ್ದದ ವ್ಯುತ್ಪತ್ತಿಯು ಸಂಸ್ಕೃತ ಭಾಷೆಯಿಂದಾಗಿದೆ. **'ಪಂಚ'** ಎಂದರೆ **'ಐದು' 'ತಂತ್ರ'** ಎಂದರೆ **'ತತ್ವ'**. ಪಂಚತಂತ್ರದ ಅರ್ಥ ಐದು ತತ್ವಗಳು ಎಂದಾಯಿತು. ವಿಶಿಷ್ಟವಾದ ಐದು ತಂತ್ರಗಳು ರಾಜನ ಹಾಗೂ ಸಾಮಾನ್ಯ ವ್ಯಕ್ತಿಯ ದೈನಂದಿನ ಜೀವನಕ್ಕಾಗಿ ಮಾರ್ಗದರ್ಶಕ ತತ್ವಗಳಾಗಿವೆ. ಪಂಚತಂತ್ರವು ಸಂಸ್ಕೃತ ಸಾಹಿತ್ಯದಲ್ಲಿ ಒಂದು ಚಂಪೂ ಕಾವ್ಯವಾಗಿದೆ. ಇದು ಗದ್ಯಾತ್ಮಕವಾಗಿಯೇ ರಚಿತವಾಗಿದ್ದರೂ ಮದ್ಯೆ ಮದ್ಯೆ ಬೋಧಪ್ರದವಾದ ಅನೇಕ ಶ್ಲೋಕಗಳನ್ನು ವಿಶಿಷ್ಟ ಉದ್ದೇಶ ದಿಂದ ಸೇರಿಸಲ್ಪಟ್ಟಿದೆ. ಪ್ರಸಿದ್ಧೋಕ್ತಿಗಳು, ಲೋಕೋಕ್ತಿಗಳು, ಮಾರ್ಗದರ್ಶಕ ಸೂಕ್ತಿಗಳು, ಆಧಿಕ್ಯವಾಕ್ಯಗಳು ಮುಂತಾದವುಗಳನ್ನು ಶ್ಲೋಕಗಳ ಮೂಲಕ ಅಭಿವ್ಯಕ್ತಗೊಳಿಸಲಾಗಿದೆ. ಸಾಮಾನ್ಯವಾಗಿ ಭಾವನೆಗಳನ್ನು ಉತ್ತುಂಗಕ್ಕೇರಿಸುವ ಸಲುವಾಗಿ, ಸಮಯೋಚಿತವಾಗಿ ಇವುಗಳಿಂದ ಕಥಾ ನಿರೂಪಣೆ ಪರಿಣಾಮಕಾರಿ ಹಾಗೂ ಅರ್ಥಪೂರ್ಣವಾಗಿರುವಂತೆ ಸಂಯೋಜಿಸಲಾಗಿದೆ.[58] ಈ ಒಂದು ಶ್ಲೋಕವು ಅದೆಷ್ಟು ಸರಳ ಹಾಗೂ ಅರ್ಥಪೂರ್ಣವಾಗಿದೆ–

बलीयसा हीनबलो विरोधं न भूतिकामो मनसाऽपि वाञ्छेत् ।

न बध्यतेऽत्यन्तबलो हि यस्मात् व्यक्तं प्रणाशोऽस्ति पतङ्गवृत्तेः॥[59]

ಏಳಿಗೆ ಬಯಸುವ ದುರ್ಬಲನೊಬ್ಬನು ಬಲಿಷ್ಠರೊಡನೆ ಮನಸ್ಸಿನಲ್ಲಿಯೂ ವಿರೋಧವನ್ನು ಕಟ್ಟಿಕೊಳ್ಳ ಕೂಡದು. ಏಕೆಂದರೆ ಅತ್ಯಂತ ಬಲಶಾಲಿ ನಾಶಕ್ಕೊಳಗಾಗುವುದಿಲ್ಲ. ಚಿಟ್ಟೆಯನಡತೆಯನ್ನು

57. सत्यकाम विद्यालंकार (अनुवादक), पंचतन्त्र, विष्णुशर्मा,भूमिका–पृ.5,6.(2017), राजपाल एन्ड सन्ज,1590,मदरसारोड, काश्मीरी गेट, दिल्ली–110006.

58. **Chandra Rajan** VISNU SARMA The Panchatantra(English Translation) Introduction-pp 53.(1993) Penguin Random House India, Gurgaon Haryana-122002.

59. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಕಾಕೋಲೂಕೀಯಮ್–ಶ್ಲೋ–128, ಪು.512, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ– 221001.

ನಡೆಯುವವನಿಗೇ ವಿನಾಶವು ಸ್ಪಷ್ಟವಾಗಿದೆ.

ಮಂದರಲ್ಲಿ ಮಂದಬುದ್ಧಿಯವರೂ ಸಹ ಈ ಸುಂದರ ಸರಳ ಕಥೆಗಳಲ್ಲಿನ ಗಹನವಾದ ನೀತಿಶಿಕ್ಷಣವನ್ನು ಪಡೆದುಕೊಳ್ಳಲು ಪಂಚತಂತ್ರವು ಮಾರ್ಗದರ್ಶಕವಾಗಿದೆ. ಸುಮಾರು 160 ವರ್ಷಗಳ ಹಿಂದೆಯೇ ಇಂಗ್ಲೆಂಡಿನ ಪ್ರಸಿದ್ಧ ವಿದ್ವಾಂಸರಾದ ಸರ್ ವಿಲಿಯಂ ಜೇಮ್ಸ್ ರವರು ಪಂಚತಂತ್ರ ನೀತಿಕಥೆಗಳನ್ನು ಕುರಿತು ಹೀಗೆ ಹೇಳಿದ್ದಾರೆ. "ಅವರ(ಹಿಂದೂಗಳ) ನೀತಿಶಾಸ್ತ್ರ ಅಥವಾ ನೀತಿ ವ್ಯವಸ್ಥೆಯನ್ನು (ವಿದ್ವಾಂಸ ವಿಷ್ಣುಶರ್ಮರು) ಇನ್ನೂ ಸಂರಕ್ಷಿಸಿ ಬಹಳ ಸುಂದರವಾದ ನೀತಿಕಥಾಗುಚ್ಛದಲ್ಲಿ ಹಿಡಿದಿಟ್ಟಿದ್ದಾರೆ. ಅರ್ಥಾತ್ ಹಿಂದೂಗಳ ನೀತಿಶಾಸ್ತ್ರ ಇಲ್ಲಿಯತನಕ ಸುರಕ್ಷಿತವಾಗಿದೆ. ಹಾಗೂ ವಿಷ್ಣುಶರ್ಮರ ಪಂಚತಂತ್ರ ಕಥೆಗಳು ಅತ್ಯಂತ ಪ್ರಾಚೀನವಲ್ಲದಿದ್ದರೂ, ಬದುಕಿನ ಚತುರತೆಯ ನೀತಿಪಾಠವನ್ನು, ರಾಜನೀತಿಕ ಮತ್ತು ಧಾರ್ಮಿಕ ಜೀವನದ ಸಾಮಾನ್ಯ ನಿಯಮಗಳನ್ನು ಹಿಡಿದಿಟ್ಟಿವೆಯೆಂದು ಅಭಿಪ್ರಾಯಪಟ್ಟಿರುತ್ತಾರೆ. ಉದಾಹರಣೆಗೆ, ಪಂಚತಂತ್ರದ ಅಂತಿಮ ತಂತ್ರ **"ಅಪರೀಕ್ಷಿತಕಾರಕ"**ದ ಅಂತ್ಯದಲ್ಲಿ ಒಂದು ಸರಳ ಸುಂದರ ಶ್ಲೋಕದ ಮೂಲಕ ಮನುಷ್ಯಮಾತ್ರರಿಗೆ ಎಂಥಹ ವಿಚಾರಪೂರ್ಣ, ಸುಪರೀಕ್ಷಿತ ಕಾರ್ಯಕೈಗೊಳ್ಳಬೇಕೆಂಬ ಬಗ್ಗೆ ಶಿಕ್ಷಣವನ್ನು ನೀಡಲಾಗಿದೆ. ಪಂಚತಂತ್ರದ ಉದ್ದೇಶವೇನೆಂದರೆ, ಅರಸುವಂಶಜಾತರಾದ ರಾಜಕುಮಾರರು ಮಂದಮತಿಗಳಾಗಿ ಸ್ವೇಚ್ಛೆಯ ಬದುಕನ್ನು ನಡೆಸುತ್ತಾ, ವಂಶದ ಕೀರ್ತಿಪತಾಕೆಯನ್ನು ಏರಿಸದೆ ಉನ್ನತಿಗೆ ಬರದಿದ್ದರೆ ಅವರ ಜನ್ಮ ವ್ಯರ್ಥವೇ. ಇವರಿಗೆ ಸೂಕ್ತ ಶಿಕ್ಷಣವನ್ನೂ, ಬದುಕಿನ ಶಿಕ್ಷಣವನ್ನು ಒದಗಿಸಿ, ತಂದೆತಾಯಿಗಳ ಸಂಕಟವನ್ನು ಪರಿಹರಿಸಬೇಕೆಂಬುದು.

किं तेन जातु जातेन मातुर्यौवनहारिणा ।

आरोहति न यः स्वस्य वंशस्याग्रे ध्वजो यथा ॥[60]

ಅಂದರೆ ಧ್ವಜಸ್ಥಂಭದ ಮೇಲಕ್ಕೆ ಪತಾಕೆ ಏರುವಂತೆ, ಯಾವಾತನು ತನ್ನ ವಂಶದ ಮೇಲೇರಿ ಉನ್ನತಿಗೆ ಬರುವುದಿಲ್ಲವೋ ಅವನು ಹುಟ್ಟಿದ್ದರಿಂದ ಏನು ಫಲ? ತಾಯಿಯ ಯೌವನವನ್ನು ಅಪಹರಿಸಿದವನು ಆತ ಎಂದು ಈ ಶ್ಲೋಕವು ಹೇಳುತ್ತದೆ. ಅಮರಶಕ್ತಿ ರಾಜನು ಬಹಳ ವಿಚಾರಮಾಡಿ, ತನ್ನಪುತ್ರರನ್ನು ಪ್ರತಿಭಾವಂತ ಶಿಕ್ಷಕರಾಗಿ ಕೀರ್ತಿ ಪಡೆದಿದ್ದ ಪಂಡಿತ ವಿಷ್ಣುಶರ್ಮರಿಗೆ ಬಹಳ ನಂಬಿಕೆಯಿಂದ ಒಪ್ಪಿಸಿದನು.

---

60. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಮಿತ್ರಭೇದಃ–ಶ್ಲೋ 27, ಪು.26(1993),. ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ– 221001.

मन्त्रे तीर्थे द्विजे देवे दैवज्ञे भेषजे गुरौ ।

यादृशी भावना यस्य सिद्धिर्भवति तादृशी ॥[61]

ಅಂದರೆ, ಮಂತ್ರ, ತೀರ್ಥಕ್ಷೇತ್ರ, ವಿಪ್ರರು, ದೇವರು, ದೈವಜ್ಞರು, ವೈದ್ಯರು ಮತ್ತು ಗುರುಗಳಲ್ಲಿ ನಮ್ಮ ನಂಬಿಕೆ ಹಾಗೂ ವಿಶ್ವಾಸ ಹೇಗೆ ಇರುತ್ತದೆಯೋ, ಅದಕ್ಕನುಗುಣವಾಗಿ ಫಲಪ್ರಾಪ್ತಿಯಾಗುವುದು. "यद्भावं तद्भवति" ಜಗತ್ತಿನಲ್ಲಿ ಲಭ್ಯವಿರುವ ಸಕಲ ಅರ್ಥಶಾಸ್ತ್ರಗಳ ಸಾರವನ್ನು ಪರಿಶೀಲಿಸಿ ವಿಷ್ಣುಶರ್ಮರು ಪಂಚತಂತ್ರಗಳಿಂದ ಕೂಡಿದ ಈ ಸುಮಧುರ ಶಾಸ್ತ್ರವನ್ನು ರಚಿಸಿರುವರು. ಈ ಶಾಸ್ತ್ರವು ಒಂದು ಉತ್ತಮವಾದ ಶೈಕ್ಷಣಿಕ ಮನೋವಿಜ್ಞಾನದ ಲೇಪನದೊಂದಿಗೆ ವ್ಯಕ್ತಿಯಲ್ಲಿನ ವ್ಯಕ್ತಿತ್ವದ ಬೆಳವಣಿಗೆಗೆ ಮಾರ್ಗದರ್ಶಕವಾಗಿದೆ. ಸರಳ ಸುಂದರ ಆಕರ್ಷಕ ಕಥೆಗಳನ್ನು ಹೆಣೆದು, ಎಂಥಹ ಆಸಕ್ತಿಯಿಲ್ಲದ ಅಜ್ಞಾನಿಯಲ್ಲೂ ಕಲಿಕೆಯ ಅಕ್ಕರೆಯನ್ನು ಪ್ರೇರೇಪಿಸುತ್ತದೆ. ಜೊತೆಗೆ ಅನೇಕ ಸೂಕ್ತ, ನೀತಿನಿಯಮಗಳನ್ನು ಬೋಧಿಸುವ ಸುಭಾಷಿತಗಳನ್ನು ಮಧ್ಯೆ ಮಧ್ಯೆ ಸೇರಿಸಿ ಸುಂದರ ವ್ಯಕ್ತಿತ್ವ ನಿರ್ಮಾಣಕ್ಕೆ ಪೂರಕವಾದ ಬುದ್ಧಿವಿಕಸನ ವಿಷಯಗಳನ್ನು ಹಿಡಿದಿಟ್ಟಿದ್ದಾರೆ. ನಾಯಕತ್ವದ ಲಕ್ಷಣ, ರಾಜನೀತಿ ನೈಪುಣ್ಯ, ಪ್ರಜಾಹಿತಧರ್ಮ, ಸಂಘಟನಾ ಚಾತುರ್ಯ, ದೇಶಪ್ರೇಮ, ವಿಚಾರಮಾಡಿ ಕ್ರಮಕೈಗೊಳ್ಳುವ ಲಕ್ಷಣ, ಮೂರ್ಖತನದಿಂದ ಒದಗಬಹುದಾದ ಅನಾಹುತಗಳು, ಶತ್ರುಗಳನ್ನು ಗೆಲ್ಲಲು ಬಳಸಬಹುದಾದ ಸಂಧಿವಿಗ್ರಹ, ಯಾನ, ಆಸನ, ಸಂಶ್ರಯ ಮತ್ತು ದ್ವೈಧೀಭಾವ, ತಂತ್ರಗಳು, ಒಳ್ಳೆಯ ಮಿತ್ರರನ್ನುಗಳಿಸುವುದರಿಂದ ಏನೂ ವಿಶೇಷ ಸಲಕರಣೆಯಿಲ್ಲದೆಯೇ ಆಪತ್ತಿನಿಂದ ದೂರವಾಗುವ ಬಗೆ ಹೇಗೆ? ಇತ್ಯಾದಿಗಳ ಕುರಿತು ಒಂದು ವಿಶಿಷ್ಟತಂತ್ರಜ್ಞಾನವನ್ನೇ ಅತ್ಯಂತ ನೈಪುಣ್ಯತೆಯಿಂದ ವಿಷ್ಣುಶರ್ಮರು ಪಂಚತಂತ್ರದ ಕಥಾಮಾಧ್ಯಮದ ಮೂಲಕ ಅಳವಡಿಸಿದ್ದಾರೆ.

ಪ್ರೊ. ಮೂರಲೆಯವರು ಪಂಚತಂತ್ರ–ಹಿತೋಪದೇಶದ ಭೂಮಿಕೆಯನ್ನು ಬರೆಯುವ ಸಂದರ್ಭದಲ್ಲಿ ಹೀಗೆ ಬರೆದಿದ್ದಾರೆ. ಇದು ನಮಗೆ ಬಹಳ ದೂರ ಪ್ರದೇಶ ಮತ್ತು ಸಮಯದಿಂದ ಬಂದಿದೆ ಎಂದರೆ "ಒಂದು ಲೌಕಿಕ ಬುದ್ಧಿವಂತಿಕೆಯ ಕೈಪಿಡಿಯಾಗಿ, ಆ ಪ್ರದೇಶದ ಮತ್ತು ಸಮಯದ ಧಾರ್ಮಿಕ ಸ್ಫೂರ್ತಿಯನ್ನು ಇಲ್ಲಿಯವರೆಗೂ ಪ್ರೇರೇಪಿಸುವುದಾಗಿದ್ದು, ಪ್ರತಿ ಪಂಚತಂತ್ರದ ನೀತಿ ಕಥೆಯೂ ಈಗಲೂ ಮಾನವನ ವ್ಯಕ್ತಿತ್ವದ ಬೆಳವಣಿಗೆಗೆ, (ಎರಡು ಮೂರು ಸಾವಿರ ವರ್ಷಗಳ ಹಿಂದೆಯೇ) ಸುಜ್ಞಾನಿಗಳಿಂದ ಉಲ್ಲೇಖಿಸಲ್ಪಟ್ಟ ಪ್ರತಿ ಸೂತ್ರವೂ ಮಾನವನ ಸರ್ವತೋಮುಖ ಬೆಳವಣಿಗೆಗೆ, ಅಂದಿನಿಂದ ಇಂದಿನವರೆಗೂ ಮನೆಯಲ್ಲಾಗಲೀ, ಧಾರ್ಮಿಕ ಪ್ರವಚನ ನೀಡುವ ದೇವಾಲಯದಲ್ಲಾಗಲೀ ಅಥವಾ ಸತ್ಸಂಗದಲ್ಲಾಗಲೀ ಉಲ್ಲೇಖಿಸಿ ಜಾಗೃತಿ ಮೂಡಿಸಬಹುದಾಗಿದೆ.[62]

---

61. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ–ಶ್ಲೋ–98, ಪು–804, (1993), ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

62 **ಸತ್ಯ ಕಾಮ್ ವಿದ್ಯಾಲಂಕಾರ್,** ಅನುವಾದಕರು, ಪಂಚತಂತ್ರ–ವಿಷ್ಣುಶರ್ಮ, ಭೂಮಿಕಾ–ಪು 6.(2017)

औषधार्थसुमन्त्राणां बुद्धेश्चैव महात्मनाम् ।

असाध्यं नास्ति लोकेऽत्र यद्ब्रह्माण्डस्य मध्यगम् ॥[63]

ಔಷಧ, ಹಣ, ಮಂತ್ರಾಲೋಚನೆ, ಮಹಾತ್ಮರ ಬುದ್ಧಿಶಕ್ತಿ ಇವುಗಳಿಗೆ ಅಸಾಧ್ಯವಾದದ್ದು ಈ ಬ್ರಹ್ಮಾಂಡದ ನಡುವೆ ಇಲ್ಲ.

ಪಂಚತಂತ್ರದ ಮೂಲ ಸಂಸ್ಕರಣೆಯು ಬಹುಶಃ ಕ್ರಿ.ಪೂ. ೨೦೦ರಲ್ಲಿಯೇ ಹಿಂದೂ ವಿದ್ವಾಂಸರಾದ ವಿಷ್ಣುಶರ್ಮರಿಂದ ರಚಿತವಾಗಿರುವ ಅಭಿಪ್ರಾಯವಿದೆ. ಇದರಲ್ಲಿ ಬರುವ ಅನೇಕ ಕಥೆಗಳು ಇನ್ನೂ ಹಳೆಯದು ಎಂದೆನಿಸುತ್ತವೆ. ಇದರ ಮೂಲ ಋಗ್ವೇದ ಮತ್ತು ಉಪನಿಷತ್ತುಗಳ ಕಾಲದಿಂದಲೇ (ಕ್ರಿ.ಪೂ. 1500 ರಿಂದ ಕ್ರಿ.ಪೂ. ೫೦೦) ಎಂದು ಕಂಡುಬರುತ್ತದೆ. ಕೆಲವು ಇಂಡೋ–ಯೂರೋಪಿಯನ್ ವಿದ್ವಾಂಸರು ಅಭಿಪ್ರಾಯ ಪಡುವಂತೆ **"ಪಂಚತಂತ್ರ ನೀತಿಕಥೆಗಳು"** ಉಳಿದಿರುವ ಭಾರತೀಯ ನೀತಿಕಥೆಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದದ್ದು. ಪಂಚತಂತ್ರದ ಬಹು ಪ್ರಾಚೀನತೆಯ ಮತ್ತು ವ್ಯಾಪಕ ವಲಸೆಯ ಕಾರಣ ಇದರ ಪ್ರಭಾವದ ಕುರುಹುಗಳನ್ನು ಸ್ಥಳ ಹಾಗೂ ಕಾಲಾನ್ವಯ ಸಾಹಿತ್ಯದ ಕ್ಷೇತ್ರ ಕಾರ್ಯದಲ್ಲಿ ಪತ್ತೆ ಮಾಡಬಹುದು. ಉದಾಹರಣೆಗೆ **ಅರೇಬಿಯನ್ ನೈಟ್ಸ್, ದಿ ಗೆಸ್ಟಾ ರೋಮನೋರಮ್,** ಬೊಕಾಷಿಯೋನ **ಡೆಕಮಿರಾನ್** ಮತ್ತು ಛಾಸರನ **ಕ್ಯಾಂಟರ್ಬರೀ ಟೇಲ್ಸ್, ದಿ ಫೇಬಲ್ಸ್ ಆಫ್ ಲಾ ಫಾಂಟೇನ್** ಇತ್ಯಾದಿ. **ದಿ ಅರೇಬಿಯನ್ ನೈಟ್ಸ್** ಮತ್ತು **ಲಾ ಫಾಂಟೈನ್ ಫೇಬಲ್ಸ್** ಈ ಎರಡೂ ಕೃತಿಗಳಲ್ಲಿ ಸುಸ್ಪಷ್ಟ ಹಾಗೂ ಗಮನಾರ್ಹ ಪ್ರಭಾವವನ್ನು **ಪಂಚತಂತ್ರ**ವು ಬೀರಿದೆ ಎಂಬುದನ್ನು ಕಾಣಬಹುದು. **ಲಾ ಫಾಂಟೈನ್ ಫೇಬಲ್ಸ್**ನ ಎರಡನೇ ಆವೃತ್ತಿಯ ಮುನ್ನುಡಿಯಲ್ಲಿ **ಲಾ ಫಾಂಟೈನ್** ಸ್ಪಷ್ಟವಾಗಿ ಹೇಳಿರುವಂತೆ ಅದರಲ್ಲಿನ ಹೊಸ ಮೂಲ ವಸ್ತುವಿನ ಹೆಚ್ಚು ಭಾಗವು ಭಾರತೀಯ ಋಷಿ ವಿವೇಚನೆಯುಳ್ಳದ್ದು ಹಾಗೂ ಕೃತಿಯು ಈಸೋಪನ ನೀತಿಕಥೆಗಳಿಗಿಂತ ಹಿಂದಿನದಾಗಿರುತ್ತದೆ. ಯೂರೋಪಿನ ಹಲವಾರು ವಿವಿಧ ಭಾಷೆಗಳ ಆವೃತ್ತಿಗಳಲ್ಲಿ ಸಂಸ್ಕೃತ ಪಂಚತಂತ್ರ ನೀತಿಕಥೆಗಳನ್ನು **"ಬಿದ್ಪಾಯ್"** ಎಂದೂ, ಸಂಸ್ಕೃತದಲ್ಲಿ **"ವಿದ್ಯಾಪತಿ"** ಎಂದೂ ಕರೆಯಲ್ಪಟ್ಟಿದೆ. ಇನ್ನೂ ವಿಶೇಷವೆಂದರೆ ಭಾರತೀಯ ಸ್ಥಳ ಮತ್ತು ವ್ಯಕ್ತಿಗಳ ಹೆಸರುಗಳು ಬೇರೆಬೇರೆ ಪ್ರದೇಶ ಹಾಗೂ ಭಾಷೆಯನ್ವಯ ರೂಪಾಂತರಗೊಂಡಿರುತ್ತದೆ. **ಎ.ಬಿ. ಕೀತ್** ಮತ್ತು **ಥಾಮಸ್ ಬಿ. ಇರ್ವಿಂಗ್** ಸೂಚಿಸಿರುವಂತೆ **ಕಲಿಲಾ ವಾ ದಿಮ್ನ** ಆವೃತ್ತಿಯಲ್ಲಿ **'ವಿದ್ಯಾಪತಿ'** ಎಂಬ ಸಂಸ್ಕೃತ ಹೆಸರನ್ನೇ ವಂಚನೆಯಿಂದ ಆರಿಸಿಕೊಳ್ಳಲಾಗಿದೆ.

"It comes to us from a far place and time,as a manual of worldly wisdom, inspired throughout by the religion of its place and time….every fable of Panchatantra can still be applied to human character every maxim quoted from the wise men of two or three thousand years ago when parted from the local accidents of form, might find its time for being quoted now in church or at home."Rajpal &Sons,1590, Madarasa Road, Kashmiri Gate,Delhi-110006

೬೩. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಮಿತ್ರಭೇದಃ–ಶ್ಲೋ–219, ಪು–132,(೧೯೯೩) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಆದರೂ **"ವಾಜಪೇಯಿ"** ಪದದ ವಿಚಿತ್ರ ಭಾಷಾಂತರವಾಗಿದೆ. ಇದು ಒಂದು ಕುಟುಂಬದ ಉಪನಾಮ ಅಥವಾ ಹೆಸರು. ಇದರ ಆಧುನೀಕೃತ ಹೆಸರೇ **ಬಜಪಾಯ್** ಎಂಬುದು. ವಾಜಪೇಯಿ ಯಾಗವನ್ನು ಕೈಗೊಳ್ಳುವ ಬ್ರಾಹ್ಮಣ ಕುಟುಂಬದ ಗೌರವಾನ್ವಿತ ಶೀರ್ಷಿಕೆಯೂ ಹೌದು. ಪಂಚತಂತ್ರವು ದೇಶದ ಆಂತರಿಕ ಜನಪ್ರಿಯತೆಯನ್ನು ಸಮಾನ ಇಲ್ಲದೆ ಶತಮಾನಗಳಲ್ಲಿ, ಅನೇಕ ಪುನರಾವರ್ತನೆ ಪಡೆದು ಸಂಸ್ಕೃತಭಾಷಾ ಆವೃತ್ತಿಯಲ್ಲಿ, ಭಾಷಾಂತರಗಳಲ್ಲಿ ಬಹಳ ಪ್ರಸಿದ್ಧಿಯನ್ನು ಪಡೆದಿದೆಯೆಂದು ಭಾರತೀಯ ಭಾಷೆಗಳು ಸೂಚಿಸುತ್ತವೆ.[64] ಪಂಚತಂತ್ರವು ಭಾರತೀಯರು ಅರಿತಿರುವ ವಿಜ್ಞಾನದ ಒಂದು ಭಾಗವಾಗಿದೆ. ಅದೇ ನೀತಿಶಾಸ್ತ್ರ. ಇದನ್ನು ಸಂಸ್ಕೃತದಲ್ಲಿ ಸನ್ನಡತೆಯ ಬದುಕಿನ ನೀತಿಯನ್ನು ಬೋಧಿಸುವ (ಜಾಗೃತಗೊಳಿಸುವ) ಪುಸ್ತಕ.

एकम् हन्यान्न वा हन्यात् इत्यादिषुर्मुक्तो धनुष्मता ।

बुद्धिर्बुद्धिमता सृष्टा हन्ति राष्ट्रं सनायकम् ॥[65]

ಈ ಗ್ರಂಥವು ಮಾನವನು ಹೇಗೆ ನಂಬಲು ಯೋಗ್ಯರಾದ ಹಾಗೂ ಪ್ರಾಮಾಣಿಕರಾದ ಸ್ನೇಹಿತರನ್ನು ಆಯ್ಕೆ ಮಾಡಿಕೊಳ್ಳಬಹುದು. ಸಂಕಷ್ಟ ಅಥವಾ ತೊಂದರೆಗಳನ್ನು ಎದುರಿಸುವ ಹಾಗೂ ಬಹಳ ಬುದ್ಧಿವಂತಿಕೆಯಿಂದ ಪರಿಹಾರವನ್ನು ಕಂಡುಕೊಳ್ಳಬಹುದು, ಎಂಬ ತಿಳುವಳಿಕೆಯನ್ನು ನೀಡುತ್ತದೆ. ವಂಚನೆ, ಮೋಸ, ತಟವಟಗಳು ಇತ್ಯಾದಿಗಳಿಂದ ಕೂಡಿರುವ ಈ ಪ್ರಪಂಚದಲ್ಲಿ ಶಾಂತಿ ಮತ್ತು ಹೊಂದಾಣಿಕೆಯಿಂದ ಬದುಕುವ ಕಲೆಯನ್ನು ಬೋಧಿಸಲು ಪ್ರಯತ್ನಿಸುತ್ತದೆ. ಉದಾಹರಣೆಗೆ–

अम्भसा भिद्यते सेतुस्तथा मन्त्रोऽप्यरक्षितः ।

पैशुन्याद्भिद्यते स्नेहो भिद्यते वाग्भिरातुरः ॥[66]

ಬಹಳ ನೀರಿನಿಂದ ಕಟ್ಟೆ ಒಡೆದು ಹೋಗುವುದು; ಗುಟ್ಟುಪಡಿಸದೆ ಇದ್ದರೆ ಆಲೋಚನೆ ಹೊರಗೆ ಬೀಳುವುದು; ಚಾಡಿಯಿಂದ ಸ್ನೇಹವು ನಶಿಸುವುದು; ಮಾತುಗಳಿಗೆ ಹೆದರಿದವನು ಕೆಟ್ಟು ಹೋಗುವನು. ಆದಕಾರಣ ಅಧೈರ್ಯದಿಂದ ತ್ವರೆಪಟ್ಟರೆ ಕೆಲಸ ಕೆಟ್ಟು ಹೋದೀತು. ಧೈರ್ಯವನ್ನವಲಂಬಿಸಿ ನಿಧಾನವಾಗಿ ವಿಚಾರಿಸಬೇಕು.

ವಿಷ್ಣುಶರ್ಮರ ಕಥೆಹೇಳುವ ಕಲೆ ಹೇಗಿದೆಯೆಂದರೆ, ಒಂದು ಗಂಭೀರ ತತ್ವಶಾಸ್ತ್ರಕ್ಕೆ ಮಧುರವಾದ

---

**64. Chandra Rajan,** VISNU SARMA,( English Translation)The Panchatantra, Forward - P-20. (1993) Penguin Random House India Pvt.Ltd,7th Floor, Infinity Tower,C,DLF Cyber City,, Gurgaon, Haryana 122002.India.

**65. ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್–ಮಿತ್ರಭೇದಃ–ಶ್ಲೋ–215, ಪು.127,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

**66. ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ–ಶ್ಲೋ–111, ಪು–58,(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಅಲಂಕಾರ ಕೊಟ್ಟು, ಕೇಳುಗರಲ್ಲಿ ಶ್ರದ್ಧೆ ಹಾಗೂ ಕಲಿಕಾ ಪ್ರೇರಣೆಯನ್ನು ಪ್ರೋತ್ಸಾಹಿಸುವಂತಿದೆ. ಕಥೆಯೊಳಗೆ ಕಥೆಗಳನ್ನು ಹೆಣೆದು, ಕಥೆಯ ಚೌಕಟ್ಟಿಗೆ ಒಂದು ಒಳ್ಳೆಯ ಬದುಕಿನ ನೀತಿಯನ್ನು ಲೇಪಿಸಿ, ಕೇಳುಗರು ಬಹಳ ಕುತೂಹಲದಿಂದ ಉತ್ತರ ಭಾಗಗಳನ್ನು ತಿಳಿಯಲು ತವಕಿಸುವಂತೆ ಮಾಡಿದ್ದಾರೆ. ಹೀಗೆಯೇ ಇದು ಒಂದು ತಂತ್ರದಿಂದ ಮತ್ತೊಂದು ತಂತ್ರದೆಡೆಗೆ ಕೇಳುಗರನ್ನು, ಓದುಗರನ್ನು ತಡೆರಹಿತವಾಗಿ ಮುನ್ನುಗ್ಗುವಂತೆ ಪ್ರೋತ್ಸಾಹಿಸಿ ಪ್ರೇರೇಪಿಸುತ್ತದೆ. ಒಂದು ನೀತಿಕಥೆಯು ಮತ್ತೊಂದನ್ನು ಅನುಸರಿಸಿ ಆಯಾ ಸಂದರ್ಭಕ್ಕೆ ತಕ್ಕಂತೆ ವ್ಯಕ್ತಿಗಳು, ಪ್ರಾಣಿಗಳು, ಸ್ಥಳ ಅಥವಾ ಪ್ರದೇಶಗಳನ್ನು ಹಾಗೂ ಆಯಾ ಗುಣಲಕ್ಷಣಗಳಿಗೆ ಅಂದರೆ ಪ್ರೀತಿ, ದ್ವೇಷ, ಅನುಕಂಪ, ಸ್ವಾರ್ಥ, ಧೈರ್ಯ, ಬುದ್ಧಿವಂತಿಕೆ, ದಡ್ಡತನ, ಸಣ್ಣತನ, ವಿಶಾಲ ಮನಸ್ಸು ಮುಂತಾದ ಸ್ವಭಾವಗಳನ್ನು ಸಂಯೋಜಿಸಿ ಕಥೆಯಲ್ಲಿ ಹೆಚ್ಚಿನ ಶಿಕ್ಷಣವನ್ನು ವಿಷ್ಣುಶರ್ಮರು ಒದಗಿಸಿದ್ದಾರೆ. ಮೊದಲು ಶಿಷ್ಯರನ್ನು ಶ್ರದ್ಧೆಯಿಂದ ಕೇಳುಗರನ್ನಾಗಿ, ಕಲಿಕೆಯಲ್ಲಿ ಆಸಕ್ತರನ್ನಾಗಿ, ರಾಜವಂಶಜಾತರಾದ್ದರಿಂದ ರಾಜ್ಯಭಾರ ಹಾಗೂ ಪ್ರಜಾ ಸೇವಾಸಕ್ತರನ್ನಾಗಿಸಿ ಹಂತಹಂತವಾಗಿ ಸೂಕ್ತ ಪಠ್ಯಕ್ರಮವನ್ನು ರಚಿಸಿ ರಾಜನೀತಿ ಶಿಕ್ಷಣವನ್ನು ಸರಳವಾಗಿ ಹಾಗೂ ಸೂಕ್ಷ್ಮವಾಗಿ ಬೋಧನೆ ಮಾಡಿದರು. ಭಾಗವತದಲ್ಲಿ ಹೀಗೊಂದು ಮಾತು ಸಮಂಜಸವಾಗಿರುತ್ತದೆ.

श्रद्धधानाय भक्ताया विनीतायानसूयवे ।

भूतेषु कृतमैत्राय शुश्रूषाभिरताय च ॥[67]

ಶ್ರದ್ಧೆಯಿಂದ ಕೂಡಿರುವವನಿಗೆ, ಭಕ್ತನಿಗೆ, ವಿನೀತನಿಗೆ, ಹೊಟ್ಟೆಕಿಚ್ಚಿಲ್ಲದವನಿಗೆ, ಎಲ್ಲಾ ಪ್ರಾಣಿಗಳಲ್ಲಿಯೂ ಸ್ನೇಹದಿಂದಿರುವವನಿಗೆ, ಸೇವೆಯಲ್ಲಿ ಅಥವಾ ಕೇಳುವುದರಲ್ಲಿ ಇಚ್ಛೆಯುಳ್ಳವನಿಗೆ ಜ್ಞಾನಾಮೃತದ ಉಪದೇಶವನ್ನು ನೀಡಬೇಕು. ಮಾನವನ ಸರ್ವತೋಮುಖ ಬೆಳವಣಿಗೆಗೆ ಸೂಕ್ತವಾದ ನೀತಿಬೋಧೆಯನ್ನು ಅಳವಡಿಸಿ, ವರ್ತನೆಗಳು –ಅವುಗಳ ಪರಿವರ್ತನೆ, ಕ್ರಮವಾಗಿ ಯೋಚಿಸುವ ವಿಧಾನ, ನೀತಿನಿಯಮಗಳ ಪಾಲನೆ, ಶಿಸ್ತು ಸಂಯಮದಿಂದ ಉತ್ತಮ ವ್ಯಕ್ತಿತ್ವನಿರ್ಮಾಣ ಇತ್ಯಾದಿಗಳನ್ನು ಕುರಿತು ಪಂಚತಂತ್ರ ನೀತಿಕಥೆಗಳನ್ನು ಅಚ್ಚುಕಟ್ಟಾಗಿ ವಿಷ್ಣುಶರ್ಮರು ನಿರೂಪಿಸಿ, ವ್ಯಕ್ತಿತ್ವ ವಿಕಸನ ಕಲೆಯ ಬೈಬಲ್ನಂತೆ ರಚಿಸಿದ್ದಾರೆ. ಪಂಚತಂತ್ರ ನಿಜಕ್ಕೂ ಒಂದು ಅಪರೂಪದ ಕೃತಿರತ್ನವು. ಇದರ ವಿಶೇಷತೆ ಎಂದರೆ, ತತ್ವ ಶಾಸ್ತ್ರ, ಮನೋವಿಜ್ಞಾನ, ರಾಜನೀತಿ, ಸಂಗೀತ, ಖಗೋಳಶಾಸ್ತ್ರ, ಮಾನವೀಯ ಸಂಬಂಧ ಇತ್ಯಾದಿಗಳನ್ನು ಒಂದೇ ಪುಸ್ತಕದಲ್ಲಿ ವಿಧಿವತ್ತಾಗಿ ಅಡಕಗೊಳಿಸಿ, ಅಷ್ಟೇ ಸರಳ ಹಾಗೂ ಸೊಗಸಾದ ಶೈಲಿಯಲ್ಲಿ ವಿವರಿಸಿ ವಿಶ್ಲೇಷಿಸಲಾಗಿದೆ. ವಿಷ್ಣುಶರ್ಮರು ಹೆಚ್ಚು ಹೆಚ್ಚು ಜ್ಞಾನವನ್ನೊದಗಿಸಿ, ಮಂದಮತಿಗಳಾದ ರಾಜಕುಮಾರರಲ್ಲಿ

---

67. **ಸುಭಾಷಿತಮಂಜರೀ,** ಸಾಮಾನ್ಯ ನೀತಿ –ಶ್ಲೋ–389, ಪು–463, ಭಾಗವತ, 3–32–41(2001). ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು–18

ಒಳ್ಳೆಯ ವ್ಯಕ್ತಿತ್ವ ನಿರ್ಮಾಣ ಮಾಡಬೇಕೆಂದೇ ಈ ಅದ್ಭುತ ಸಂಯೋಜನೆಯನ್ನು ಸಂಶೋಧನಾತ್ಮಕವಾಗಿ ಅನುಗೊಳಿಸಿರುವಂತೆ ಕಂಡುಬರುತ್ತದೆ.[68] ಇದು ಕೇವಲ ಆ ರಾಜಕುಮಾರರನ್ನಷ್ಟೇ ಅಲ್ಲದೆ, ಸುಮಾರು ಕಳೆದ 2200 ವರ್ಷಗಳಿಂದಲೂ ಈ ವಿಶಿಷ್ಟವಾದ ಪಂಚತಂತ್ರ ನೀತಿಕಥೆಗಳನ್ನು ಕೇಳುತ್ತಾ ಹಾಗೂ ಓದುತ್ತಾ ಬಂದಿರುವ ಲಕ್ಷಾಂತರ ವ್ಯಕ್ತಿಗಳು ಹೆಚ್ಚಿನ ಜ್ಞಾನ ಪಡೆದಿರುವುದರಲ್ಲಿ ಯಾವುದೇ ಸಂಶಯವಿಲ್ಲ. ಹಾಗೆಯೇ ಇಂದಿಗೂ ಪಂಚತಂತ್ರ ನೀತಿಕಥೆಗಳು ಮಾನವನಿಗೆ ಉತ್ತಮ ನೀತಿಶಿಕ್ಷಣ, ವರ್ತನಾ ಕಲೆ ಹಾಗೂ ವ್ಯಕ್ತಿತ್ವ ನಿರ್ಮಾಣ ಕಾರ್ಯದಲ್ಲಿ ಅತ್ಯಂತ ಪ್ರಸ್ತುತವಾಗಿದೆ.

ಇದರ ವಿಶಿಷ್ಟತೆ, ಜನಪ್ರಿಯತೆ ಅಳೆಯಲಾಗದ್ದು. ಈ ಗ್ರಂಥದ ಮೂಲ ಉದ್ದೇಶ ಕೇವಲ ಮಕ್ಕಳನ್ನು ಸನ್ನಡತೆಯಹಾದಿಯಲ್ಲಿ ಕೊಂಡೊಯ್ಯುವುದಷ್ಟೇ ಅಲ್ಲ, ದೊಡ್ಡವರೂ ಇದನ್ನು ಸೂಕ್ಷ್ಮವಾಗಿ ಅಭ್ಯಸಿಸಿದರೆ, ಸುಂದರ ವ್ಯಕ್ತಿತ್ವ ರೂಪಿಸಿಕೊಂಡು, ಬದುಕನ್ನು ಹಸನುಗೊಳಿಸಿಕೊಂಡು ಸಾರ್ಥಕಪಡಿಸಿಕೊಳ್ಳಬಹುದು. ಪಂಚತಂತ್ರ ಕಥೆಗಳಲ್ಲಿ ಕಂಡುಬರುವ ಪ್ರತಿಯೊಂದು ಸಂದರ್ಭಗಳು ಪ್ರಸಂಗಗಳು ಬಹಳ ಕ್ರಮಬದ್ಧ ವಾಗಿದ್ದು, ಕರಾರುವಾಕ್ಕಾಗಿ ಮಾನವನ ಸನ್ನಡತೆಗೆಬೇಕಾದ ನೀತಿಶಿಕ್ಷಣವನ್ನು ದೊರಕಿಸಿಕೊಡುತ್ತವೆ. ಒಂದು ಉತ್ತಮ ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ಮಾರ್ಗದರ್ಶೀ ಸೂತ್ರಗಳನ್ನು ಪಂಚತಂತ್ರವು ಕ್ರಮಬದ್ಧವಾಗಿ ಕಲ್ಪಿಸಿಕೊಟ್ಟಿದೆ.

वनेऽपि सिंहा मृगमांसभक्ष्या बुभुक्षिता नैव तृणं चरन्ति ।

एवं कुलीना व्यसनाभिभूता न नीतिमार्गं परिलङ्घयन्ति ॥[69]

ಪ್ರಾಣಿಗಳ ಮಾಂಸವನ್ನು ತಿನ್ನುವ ಅಭ್ಯಾಸವುಳ್ಳ ಸಿಂಹಗಳು ಕಾಡಿನಲ್ಲಿ ಹಸಿವಾದಾಗಲೂ ಹುಲ್ಲನ್ನು ತಿನ್ನುವುದಿಲ್ಲ. ಹಾಗೆಯೇ ಒಳ್ಳೆಯವಂಶದಲ್ಲಿ ಹುಟ್ಟಿದವರು ಕಷ್ಟಗಳಗೋಸ್ಕರವಾದರೂ ನೀತಿಯ ಮಾರ್ಗವನ್ನೆಂದೂ ಮೀರುವುದಿಲ್ಲ. ಹೀಗಾಗಿ ರಾಜಕುಮಾರರಿಗೆ ನೀತಿಪಾಠವೇ ಸೂಕ್ತವೆಂದು, ಅದರಲ್ಲೂ ಕಥಾಮಾಧ್ಯಮ ಮತ್ತೂ ಉತ್ತಮವೆಂದು ವಿಷ್ಣುಶರ್ಮರು ನಿರ್ಧರಿಸಿ ಅದಕ್ಕೆ ತಕ್ಕಂತೆ ನೀತಿಕಥಾಗುಚ್ಛವನ್ನು ಸಮರ್ಪಕವಾಗಿ ಸಂಯೋಜಿಸಿದ್ದಾರೆ.

ಪಂಚತಂತ್ರ ನೀತಿಕಥೆಗಳು ವಿಶ್ವದ ಮೂವತ್ತಕ್ಕೂ ಹೆಚ್ಚು ಭಾಷೆಗಳಿಗೆ ಭಾಷಾಂತರಗೊಂಡಿದೆ.

---

68. **ಸುಧಾಕರ್ ಮಾಲವೀಯ,** (ಅನುವಾದಕರು), ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಭೂಮಿಕಾ–ಪು.10.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
69. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಲಬ್ಧಪ್ರಣಾಶಮ್–ಶ್ಲೋ–71, ಪು–,692,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ವಿಷ್ಣುಶರ್ಮರ ಮೂಲ ಕಥೆಯನ್ನು ಆಯಾ ದೇಶ, ವಾತಾವರಣ, ಜನಜೀವನಕ್ಕೆ ತಕ್ಕಂತೆ ಕೆಲವು ಹೆಚ್ಚಿನ ವಿವರಗಳಿಂದ ಅಲಂಕರಿಸಿ ಹೆಸರುಗಳನ್ನೂ ಬದಲಿಸಿ ಪ್ರಕಟಿಸಿರುವ ಬಹಳಷ್ಟು ಪರಿಷ್ಕರಣೆಗಳಿವೆ. ಆದರೆ ಅವುಗಳ ನೀತಿ ಸನ್ನಡತೆಯ ಬದುಕಿನ ಸೂತ್ರಗಳು, ವ್ಯಕ್ತಿತ್ವ ವಿಕಸನದ ಮಾರ್ಗದರ್ಶನಗಳು ಮಾತ್ರ ಒಂದೇ ಆಗಿರುತ್ತವೆ. ಪಂಚತಂತ್ರವು ಒಂದು ಜ್ಞಾನದ ಚಿಲುಮೆ. ಇದರಲ್ಲಿ ನಿರಂತರವಾಗಿ ಜ್ಞಾನದ ಬುಗ್ಗೆಯು ಹೊಸ ಹೊಸ ಚಿಂತನೆಗಳನ್ನು ಹೊರಹೊಮ್ಮಿಸುತ್ತಿರುತ್ತದೆ. ಹೀಗಿರುವುದರಿಂದಲೇ ಬೈಬಲನ್ನು ಬಿಟ್ಟರೆ ಪ್ರಪಂಚದಲ್ಲೇ ಅತ್ಯಂತ ಹೆಚ್ಚು ಪ್ರಕಟಣೆಗಳನ್ನು ಕಂಡಿರುವ ಜನಪ್ರಿಯ ಗ್ರಂಥವೆಂದರೆ ಅದು ಪಂಚತಂತ್ರವೆ. ವಿಶ್ವದ ಐವತ್ತಕ್ಕೂ ಹೆಚ್ಚು ಭಾಷೆಗಳಲ್ಲಿ ಸುಮಾರು ಇನ್ನೂರ ಐವತ್ತು ಪಂಚತಂತ್ರ ಸಂಸ್ಕರಣಗಳು ಪ್ರಕಾಶಿತಗೊಂಡಿದೆ ಎಂದು ತಿಳಿದುಬಂದಿದೆ.[70] ಮೇಲ್ನೋಟಕ್ಕೆ ಪಂಚತಂತ್ರದಲ್ಲಿ ಕೇವಲ ನೀತಿಯ ವಿಚಾರಗಳು ತಿಳಿದುಬರುತ್ತದೆ ಎನ್ನಿಸಿದರೂ, ಸ್ವಲ್ಪ ಸೂಕ್ಷ್ಮವಾಗಿ ಗಮನಿಸಿದರೆ, ಅವರವರ ಅನುಭವಕ್ಕೆ ಸಂಬಂಧಪಟ್ಟಂತೆ ಇನ್ನಷ್ಟು, ಮತ್ತಷ್ಟು ಸೃಜನಾತ್ಮಕ ಭಾವನೆಗಳನ್ನು, ಬದುಕಿನ ನೀತಿನಿಯಮಗಳನ್ನು ಈ ಕಥೆಗಳಿಂದ ಪಡೆದುಕೊಳ್ಳಬಹುದು. ಉತ್ತಮ ವ್ಯಕ್ತಿತ್ವನಿರ್ಮಾಣ ಕಲೆಯನ್ನು ಗುರುತಿಸಿಕೊಳ್ಳಬಹುದು. ಸಮಯ, ಸ್ಥಳಗಳಿಗನುಗುಣವಾಗಿ ಪಂಚತಂತ್ರವು ಒಂದು ಲೌಕಿಕಬುದ್ಧಿವಂತಿಕೆಯ ಕೈಪಿಡಿಯಾಗಿದೆ. ವ್ಯವಹಾರ ಕುಶಲತೆ, ಲೌಕಿಕ ವಿವೇಕ, ಸನ್ನಡತೆ ಮುಂತಾದ ಲೋಕಜ್ಞಾನ ಸಂಪತ್ತನ್ನೇ ಅಡಗಿಸಿಕೊಂಡಿರುವ ಜ್ಞಾನಕೋಶವಾಗಿದೆ.

वचस्तत्र प्रयोक्तव्यं यत्रोक्तं लभते फलम् ।

स्थायीभवति चात्यन्तं रागः शुक्लपटे यथा ॥[71]

ಅಂದರೆ, ಬಿಳಿಯಬಟ್ಟೆಯ ಮೇಲೆ ಹಾಕಿದ ಬಣ್ಣ ಸ್ಥಿರವಾಗಿ ನಿಲ್ಲುವುದು. ಹಾಗೆ ಎಲ್ಲಿ ಹೇಳಿದ ಮಾತು ಸ್ಥಿರವಾಗಿ ನಿಂತು ಪ್ರಯೋಜನಕಾರಿಯಾಗುವುದೋ, ಅಲ್ಲಿ ಮಾತು ಹೇಳಬೇಕು. ಹೀಗೆಯೇ ಎಲ್ಲಿ? ಹೇಗೆ? ಯಾವ ಸಂದರ್ಭದಲ್ಲಿ ಏನು ತಿಳಿಸಬೇಕೋ ಹಾಗೆ ಒಂದು ಶಾಸ್ತ್ರೀಯ ಕ್ರಮದಲ್ಲಿ ಎಲ್ಲ ವಿಚಾರಗಳಲ್ಲಿಯೂ ಸೂಕ್ತ ತಿಳುವಳಿಕೆ, ಜಾಗೃತಿ ಪಂಚತಂತ್ರಗಳ ಮೂಲಕ ಮೂಡಿಸಿರುವುದೇ ವಿಷ್ಣುಶರ್ಮರ ಬೋಧನಾ ವಿಶಿಷ್ಟತೆ.

ಬಹುಶಃ ಇಷ್ಟೊಂದು ಸರಳ ಮತ್ತು ಆಕರ್ಷಕವಾಗಿ ಲೋಕಜ್ಞಾನವನ್ನು ಪಸರಿಸುವ ಮತ್ತೊಂದು ಕೃತಿಯನ್ನು ನಾವು ಕಾಣಲಾರೆವು. ಬೇರೆಬೇರೆ ವಿಷಯಜ್ಞಾನವನ್ನು ಹೆಚ್ಚಿಸುವ ಅನೇಕ ಅದ್ಭುತ ಗ್ರಂಥಗಳು,

---

70. **ಸುಧಾಕರ್ ಮಾಲವೀಯ,** (ಅನುವಾದಕರು) ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಭೂಮಿಕಾ–ಪು.31.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ. ವಾರಣಾಸಿ–221001.

71. **ಸುಧಾಕರ ಮಾಲವೀಯ,** ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಮಿತ್ರಭೇದಃ–ಶ್ಲೋ–34,ಪು.28,(1993)ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಜ್ಞಾನಕೋಶಗಳು ಕಂಡುಬರುವುದು. ಆದರೆ ಲೌಕಿಕ ಜ್ಞಾನ, ಬದುಕಿನ ಕಲೆ, ಕಾರ್ಯಯೋಜನೆ, ಆತ್ಮವಿಶ್ವಾಸ, ದುಡುಕಿನ ಪರಿಣಾಮ, ಅಜ್ಞಾನದ ಅನಾಹುತ ಇತ್ಯಾದಿ ವಿಷಯಗಳ ತಿಳುವಳಿಕೆ ಮತ್ತು ಜಾಗೃತಿಯನ್ನು ಮೂಡಿಸುವ ಅನುಪಮ ಗ್ರಂಥವೇ ಈ ಪಂಚತಂತ್ರವಾಗಿದೆ. ಇದು ಬದುಕಿನ ಜ್ಞಾನ ಭಂಡಾರದ ಒಂದು ಅಮರ ಕೃತಿ. ಸುಂದರ ಬದುಕಿಗೆ ಬೇಕಾದ ನೀತಿಯನ್ನು, ಜಾಗೃತಿಯನ್ನು ಆಪ್ಯಾಯಮಾನವಾಗಿ ಕೇಳುಗರು ಪ್ರೀತಿಯಿಂದ ಆಸ್ವಾದಿಸುವಂತೆ ಅನುವು ಮಾಡುವುದರಲ್ಲಿ **ಪಂಚತಂತ್ರ**ವು ಏಕಮೇವಾದ್ವಿತೀಯಮ್ ಎನ್ನುವಂತಿದೆ. ಕಥಾಮಾಧ್ಯಮವು ನೀತಿಬೋಧೆಗೆ ಉತ್ತಮ ಸಾಧನ ಎಂಬುದನ್ನು ಪಂಚತಂತ್ರವು ಸ್ಪಷ್ಟಪಡಿಸಿದೆ. ಪಂಚತಂತ್ರದ ಅನ್ವರ್ಥನಾಮವು ಐದು ತಂತ್ರ(ಪ್ರಕರಣ)ಗಳಲ್ಲಿ ವಿಭಕ್ತವಾಗಿದೆ.:–

1. **ಮಿತ್ರಭೇದ**. 2. **ಮಿತ್ರಸಂಪ್ರಾಪ್ತಿ** 3. **ಕಾಕೋಲುಕೀಯ** 4. **ಲಬ್ಧಪ್ರಣಾಶ** 5. **ಅಪರೀಕ್ಷಿತಕಾರಕ**.

ಪಂಚತಂತ್ರದಲ್ಲಿ ಐದು ಭಾಗಗಳೊಂದೊಂದೂ ನೀತಿ ತಂತ್ರ ಶಾಸ್ತ್ರಗಳನ್ನು ನಿರೂಪಿಸುತ್ತದೆ. ಮೊದಲನೇ ಭಾಗವಾದ **ಮಿತ್ರ ಭೇದವು** ಕರಟಕ ದಮನಕ ಎಂಬ ಎರಡು ನರಿಗಳು ಗಾಢ ಮಿತ್ರರಾಗಿದ್ದ ಒಂದು ಸಿಂಹ ಮತ್ತು ವೃಷಭಗಳಿಗೆ ವೈಮನಸ್ಸನ್ನು ತಂದುಹಾಕಿ ತಾವು ಸುಖವಾಗಿದ್ದ ಕಥೆಯ ಮೂಲಕ ಭೇದ ತಂತ್ರವನ್ನು ಪ್ರತಿಪಾದಿಸುತ್ತದೆ. ಎರಡನೆಯ **ಮಿತ್ರಲಾಭ**ವು ಒಳ್ಳೆಯ ಸ್ನೇಹದ ಫಲವನ್ನು ಆಮೆ, ಜಿಂಕೆ, ಕಾಗೆ ಮತ್ತು ಇಲಿ ಇವುಗಳ ಕಥೆಯನ್ನು ಹೇಳಿ ವಿವರಿಸುತ್ತದೆ. ಮೂರನೇ **ಕಾಕೋಲೂಕೀಯ**ವು ಕಾಗೆ ಗೂಬೆಯ ಕಥೆ ಮೂಲಕ ನಮ್ಮ ಶತ್ರುಗಳಾದವರ ಸ್ನೇಹ ಬಂಧನದ ಅಪಾಯಗಳನ್ನು ತಿಳಿಸುತ್ತದೆ. ನಾಲ್ಕನೆಯ **ಲಬ್ಧಪ್ರಣಾಶ**ವು ಕಪಿ ಮತ್ತು ಮೊಸಳೆಯ ಮೂಲಕ ನಮ್ಮ ಲೋಪದೋಷಗಳಿಂದ ನಾವು ನಮ್ಮಲ್ಲಿದ್ದುದನ್ನು ಹೇಗೆ ಕಳೆದುಕೊಳ್ಳಬೇಕಾಗುತ್ತದೆಂದು ತಿಳಿಸುತ್ತದೆ. ಐದನೆಯ **ಅಪರೀಕ್ಷಿತಕಾರಕ**ವು ಎಲ್ಲಾ ಪೂರ್ವಾಪರ ವಿಚಾರಗಳನ್ನು ಕೂಲಂಕಷವಾಗಿ ಪರಿಶೀಲಿಸದೆ ಯಾವ ಕೆಲಸವನ್ನೇ ಆಗಲಿ ದುಡುಕಿಮಾಡಿದರೆ ಉಂಟಾಗುವ ಕಷ್ಟನಷ್ಟಗಳನ್ನು ಅನೇಕ ಕಥೆಗಳ ಮೂಲಕ ಪ್ರತಿಪಾದಿಸಿ ತೋರಿಸುತ್ತದೆ. ಹೀಗೆ ಪಂಚತಂತ್ರದಲ್ಲಿ ಐದು ತಂತ್ರಗಳಲ್ಲಿನ ಒಟ್ಟು ಐದು ಸೂತ್ರಕಥೆಗಳನ್ನು ಹೊರತುಪಡಿಸಿ ಇತರ ಎಪ್ಪತ್ತು ಕಥೆಗಳು ಇವೆ.[72]

ಪಂಚತಂತ್ರದಲ್ಲಿ ಸಾಮಾನ್ಯವಾಗಿ ನೀತಿಯ ಮಾತುಗಳು ಪದ್ಯದ ರೂಪದಲ್ಲಿವೆ ಮತ್ತು ಆ ಮಾತನ್ನು ಸಮರ್ಥಿಸಲು ಗದ್ಯದಲ್ಲಿ ಕಥೆ ಹೇಳಲಾಗಿದೆ. ಎಲ್ಲ ಪದ್ಯಗಳನ್ನೂ ಕಥೆಗಾರನೇ ರಚಿಸಿಲ್ಲ. ರಾಮಾಯಣ ಮಹಾಭಾರತಾದಿ ಕಾವ್ಯಗಳಿಂದಲೂ ಸ್ಮೃತಿಗಳಿಂದಲೂ, ಸುಭಾಷಿತಗಳಿಂದಲೂ ಮತ್ತು ಸೂಕ್ತಿಗಳಿಂದಲೂ

---

72. **ಭರತ ಬಿ ರಾವ್** (ಕನ್ನಡ ಅನುವಾದಕರು), ಪಂಚತಂತ್ರ, ಪು–8,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ. 44/1, ಕೆ.ಆರ್.ರಸ್ತೆ, ಬಸವನಗುಡಿ, ಬೆಂಗಳೂರು–560004.

ಅನೇಕ ಶ್ಲೋಕಗಳನ್ನು ಕಥೆಗಾರರು ತಮಗೆ ಬೇಕಾದಂತೆ ಆಯ್ಕೆಮಾಡಿಕೊಂಡಿದ್ದಾರೆ. ಇದೂ ಒಂದು ರೀತಿಯಲ್ಲಿ ಶೈಕ್ಷಣಿಕ ಮನೋವಿಜ್ಞಾನದ ಪ್ರಕಾರ **"Syllabus Framing"** ಪಠ್ಯಕ್ರಮ ಯೋಜನೆಯಿದ್ದಂತೆ.

ಈ ಎಲ್ಲ ಅಂಶಗಳನ್ನೂ ಪರಿಶೀಲಿಸಿ ವಿಶ್ಲೇಷಿದರೆ, ಪಂಚತಂತ್ರ ಗ್ರಂಥದ ಮೂಲಕ ಮೇಧಾವಿ ವಿಷ್ಣುಶರ್ಮರು ಅದೆಷ್ಟು ವಿಪುಲವಾಗಿ ಪಂಚಸೂತ್ರಗಳ ಅಳವಡಿಕೆಯಲ್ಲಿ ಅನೇಕತೆಗಳಲ್ಲಿ ಏಕತೆಯಿಂದ ಕೂಡಿರುವಂತೆ ಕಥೆಗಳನ್ನು ಹೆಣೆದು, ಪ್ರಾಣಿಗಳ ವರ್ತನೆಯನ್ನು ಮನುಷ್ಯರ ಅಪರಾವತಾರವೆಂಬಂತೆ ಪ್ರತಿಬಿಂಬಿಸುತ್ತಾ, ಒಬ್ಬ ಉತ್ತಮ ರಾಜನೀತಿ ಶಿಕ್ಷಣತಜ್ಞನಾಗಿ, ಶೈಕ್ಷಣಿಕ ಮನೋವಿಜ್ಞಾನಿಯಾಗಿ ಸರಳ ಸುಂದರ ಉದಾಹರಣೆಗಳನ್ನು ನೀಡುತ್ತಾ ದುರ್ವಿನೀತ ರಾಜನಂದನರನ್ನು ಸಂಪೂರ್ಣ ಯೋಗ್ಯರನ್ನಾಗಿ ಮಾಡಿ ರಾಜನೀತಿ ನಿಪುಣತ್ವಕ್ಕೆ ಒಳ್ಳೆಯ ಕಲಿಕಾ ತರಬೇತಿಯನ್ನೊದಗಿಸಿ ಪರಿವರ್ತನೆ ಮಾಡಿದ್ದಾರೆ. ಇದನ್ನೇ ಶೈಕ್ಷಣಿಕ ಮನೋವಿಜ್ಞಾನದ ಪ್ರಸಿದ್ಧ ವ್ಯಾಖ್ಯಾನಗಳಲ್ಲಿ ಪ್ರತಿಪಾದಿಸಿರುವುದು. ಉದಾಹರಣೆಗೆ ಕೆಲವನ್ನು ಗಮನಿಸಬಹುದು:–

**"Learning is the modification of behaviour through experience and training."** ಎಂದು ಪ್ರಸಿದ್ಧ ಮನೋವಿಜ್ಞಾನಿ ಗೇಲ್ಸ್ ಮತ್ತು ಇತರರು ಕಲಿಕೆಯನ್ನು ಕುರಿತು ವ್ಯಾಖ್ಯಾನಿಸಿದ್ದಾರೆ. **"Learning is any change in behaviour,resulting from behaviour."** ಹೀಗೆ ಗಿಲ್ಫೋರ್ಡ್ ಹೇಳಿದ್ದಾರೆ.

**"Learning is the modification of our ready made behaviour due to experience."** ಎಂದು ಮನಶ್ಶಾಸ್ತ್ರಜ್ಞ ಕೋಲ್ವಿನ್ ವ್ಯಾಖ್ಯಾನಿಸಿದ್ದಾರೆ.[73] ಅಲ್ಲಿಗೆ ಒಂದು ಸ್ಪಷ್ಟವಾದ ಅರ್ಥವನ್ನು ಹೀಗೆ ಮಾಡಿಕೊಳ್ಳಬಹುದು – **"Education is the modification of human behavior"**- ಶಿಕ್ಷಣವು ಮಾನವ ನಡವಳಿಕೆಯ ಮಾರ್ಪಾಡು ಅಥವಾ ವರ್ತನೆಯ ಪರಿವರ್ತನೆ." ಎಂದು. ಈ ಪರಿವರ್ತನೆಯನ್ನೇ ಪಂಚತಂತ್ರದಲ್ಲಿ ವಿಷ್ಣುಶರ್ಮರು ರಾಜಕುಮಾರರ ರಾಜನೀತಿ ಶಿಕ್ಷಣ ಹಾಗೂ ಜೀವನ ಶಿಕ್ಷಣ ವಿಚಾರದಲ್ಲಿ ಬಹಳ ಪರಿಣಾಮಕಾರಿಯಾಗಿ ಕೈಗೊಂಡಿರುತ್ತಾರೆ. ಇದೇನು ಸುಲಭ ಸಾಧ್ಯ ಕಾರ್ಯವಲ್ಲ. ಒಬ್ಬ ವಿಶಿಷ್ಟ ಕಥಾಶಿಲ್ಪಿ, ಸಿದ್ಧಾಂತ ಬದ್ಧ ಶಿಕ್ಷಕ. ಮೇಧಾವಿ ರಾಜನೀತಿ ಶಾಸ್ತ್ರಜ್ಞ, ಅರ್ಥಶಾಸ್ತ್ರಜ್ಞ ಕಲ್ಪನೆ ಮತ್ತು ಅಲಂಕಾರ ಸಮಾವೇಶವನ್ನು ನಡೆಸಬಲ್ಲ ಸಾಮರ್ಥ್ಯವುಳ್ಳ, ಅಪಾರ ಭಾಷಾವಿಜ್ಞಾನ ಚಾತುರ್ಯವುಳ್ಳ

---

73. Robert M. Gagne, "Conditions of Learning" (relevent chapters) 1965, 1975, 1978 editions.

ವಿಷ್ಣುಶರ್ಮರಂತಹ ಸಕಲಶಾಸ್ತ್ರಪಾರಂಗತರಿಂದ ಮಾತ್ರ ಸಾಧ್ಯವೆನ್ನಿಸುತ್ತದೆ.

ಸಂಸ್ಕೃತ ಸಾಹಿತ್ಯದ ವಿಶಿಷ್ಟತೆಯನ್ನು ಕುರಿತು ಒಬ್ಬ ಪಾಶ್ಚಾತ್ಯ ವಿದ್ವಾಂಸರಾದ ವಿಂಟರ್ನಿಟ್ಸ್ ಹೀಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. "ಯಾವ ಮನುಷ್ಯನು ಸಂಸ್ಕೃತಿ, ಸಾಹಿತ್ಯದ ಪ್ರಾರಂಭಿಕ ದಿನಗಳ ಪರಿಸ್ಥಿತಿಯನ್ನು ತಿಳಿಯಲು ಇಚ್ಛಿಸುತ್ತಾನೋ, ಅವನು ಭಾರತ ದೇಶಕ್ಕೆ ಶರಣು ಹೋಗಬೇಕು. ಏಕೆಂದರೆ ಅಲ್ಲೊಂದು ಭಾರತೀಯ ಸಂಸ್ಕೃತಿಯ ಅತ್ಯಂತ ಪ್ರಾಚೀನ ಸಾಹಿತ್ಯವು ಅಡಗಿ ಸುರಕ್ಷಿತವಾಗಿದೆ.. ಯಾವ ಸಾಹಿತ್ಯವು ಕವಿಕುಲಗುರು ಕಾಳಿದಾಸನಂತಹ ಮಹಾಕವಿಯನ್ನು ಪಡೆದಿದೆಯೋ, ಯಾವ ಸಾಹಿತ್ಯವು ಕಠಿಣ ಹೃದಯದಲ್ಲೂ ಕರುಣಾರಸವನ್ನು ಉತ್ಪತ್ತಿ ಮಾಡುವಂತೆ ಚಿತ್ರಿಸುವ ಭವಭೂತಿಯಂತಹ ನಾಟಕಕಾರನನ್ನು ಹೊಂದಿದೆಯೋ, ಅದ್ಭುತ ಕಲ್ಪನಾ ಶ್ರೇಷ್ಠಗುಣದ ಬಾಣಭಟ್ಟನಿಂದ ಓಜಸ್ವಿ **"ಕಾದಂಬರಿ"**ಗದ್ಯ ಕಥಾಸಾಹಿತ್ಯ ರಚಿತವಾಗಿ ಭಂಡಾರ ತುಂಬಿಕೊಂಡಿತೋ, ತನ್ನ ಪೀಯೂಶವರ್ಷಿಣಿ ವಾಣಿಯಿಂದ ಜಯದೇವಕವಿಯ **"ಗೀತಗೋವಿಂದ"** ಕೋಮಲಕಾಂತಿಯ ಪದಾವಳಿಯು ಸೇರಿಕೊಂಡಿತೋ, ಕಾವ್ಯ ಮತ್ತು ದರ್ಶನ ಸಮನ್ವಯದ ಚಿತ್ರಣವನ್ನು ಬಿಡಿಸಿದ ಶ್ರೀಹರ್ಷನಂತಹ ಸರಸ್ವತೀಪುತ್ರರು ಅಲಂಕರಿಸಲ್ಪಟ್ಟರೋ, ಯಾವುದರಲ್ಲಿ ಷಡ್ದರ್ಶನದ ಪ್ರೌಢ ವಿಚಾರಾವಳಿ ಜೊತೆಯಲ್ಲಿ ಕೌಟಿಲ್ಯನ ಅರ್ಥಶಾಸ್ತ್ರ ಎಂಬ ಸಮಾಜಶಾಸ್ತ್ರ ಗ್ರಂಥವು ಸೇರ್ಪಡೆಯಾಯಿತೋ, ಶೈಕ್ಷಣಿಕ ಮನೋವಿಜ್ಞಾನದಿಂದ ಅಲಂಕೃತವಾದ ಪಂಡಿತ ವಿಷ್ಣುಶರ್ಮರ ಪಂಚತಂತ್ರ ನೀತಿಕಥೆಗಳ ಭಂಡಾರ ಸೇರ್ಪಡೆಯಾಯಿತೋ ಅಂತಹ ಸಂಸ್ಕೃತ ಸಾಹಿತ್ಯ ಮಹತ್ವಪೂರ್ಣ ವಾದುದು ವಿಶಿಷ್ಟವಾದುದು ಮತ್ತು ಅವರ್ಣನೀಯ."[74]



74. Untitled Shodhaganga, shodhaganga.inflibnet.ac.in PDF,08-chapter-1,.pdf, ಅಧ್ಯಾಯ-1ಪು-4,5.

## ಅಧ್ಯಾಯ–1–5. ಪಂಚತಂತ್ರದ ವಿಶ್ವವ್ಯಾಪಿ ಪ್ರಭಾವ.

ನೀತಿಕಥಾ ಸಾಹಿತ್ಯವು ಕಾಲ್ಪನಿಕ ಕಥೆಗಳು ಹಾಗೂ ನೀತಿಕಥೆಗಳಿಂದ ಕೂಡಿದ್ದು ವಾಸ್ತವ ವಿಚಾರಗಳಿಗೆ ಸಂಬಂಧಪಡದ ಅಲೌಕಿಕ, ಅಪ್ರಾಕೃತ ಅಂಶಗಳನ್ನೊಳಗೊಂಡ, ಪ್ರಾಣಿಪಕ್ಷಿಗಳ ಪಾತ್ರಗಳಿಂದ ಕೂಡಿದುದು, ಸೊಗಸಾದ ಆನಂದದಾಯಕ ಮನರಂಜನೆಯನ್ನು ನಿಭಾಯಿಸುವಂತಹದು ಎಂಬ ಒಂದು ಸಾಮಾನ್ಯ ಅಭಿಪ್ರಾಯ ಎಲ್ಲೆಡೆಯಲ್ಲೂ ಕಂಡುಬರುತ್ತದೆ. ಆದರೆ ಸಂಸ್ಕೃತ ಸಾಹಿತ್ಯ ಕ್ಷೇತ್ರದಲ್ಲಿ ನೀತಿಕಥೆಗಳ ಉದ್ದೇಶವೇ ಬೇರೆಯಾಗಿದೆ. ಅಂದರೆ ಇದರಲ್ಲಿ ಕಂಡುಬರುವ ಪಾತ್ರಗಳು ಮತ್ತು ಅದರ ಗುಣಲಕ್ಷಣಗಳು ನೈತಿಕ ಹಾಗೂ ಸಾರ್ಥಕ ಬದುಕಿನ ಶಿಕ್ಷಣವನ್ನು ನೀಡುವುದೇ ಮೂಲ ಉದ್ದೇಶವಾಗಿರುತ್ತದೆ. ಸಂಸ್ಕೃತ ನೀತಿಕಥೆಗಳು ಉಪದೇಶಾತ್ಮಕ, ಶಿಕ್ಷಣಾತ್ಮಕ, ಜ್ಞಾನಾತ್ಮಕ ಹಾಗೂ ಪ್ರತಿಪಾದಕ ಲಕ್ಷಣಗಳಿಂದ ಕೂಡಿದುದಾಗಿದೆ. ಹೀಗಿರುವುದರಿಂದಲೇ ಅವುಗಳಲ್ಲಿನ ಸುಪ್ತ ಚೇತನವು ಸ್ಪಷ್ಟವಾಗಿ ಹಾಗೂ ಪರ್ಯಾಲೋಚನೆಯಿಂದ ವಿಶ್ವಸಾಹಿತ್ಯದ ಮೇಲೆ ಮಹತ್ತರವಾದ ಪ್ರಭಾವವನ್ನು ಬೀರಿದೆ.

ಭಾರತ ದೇಶ ಹಳ್ಳಿಗಳ ದೇಶ. ಹೆಚ್ಚಿನ ಜನರು ದೈವದತ್ತವಾದ ಪ್ರಕೃತಿಯ ಮಡಿಲಿನಲ್ಲಿ ವಾಸಿಸುತ್ತಿರುವುದರಿಂದ, ಅವರ ಸಾಮಾನ್ಯ ಜೀವನವೂ ನೈಸರ್ಗಿಕವಾಗಿಯೇ ಉತ್ತಮ ಸಂಸ್ಕಾರ ಹಾಗೂ ಸಂಸ್ಕೃತಿಯಿಂದ ಬೆಳೆದುಬಂದಿರುತ್ತದೆ. ಪ್ರಕೃತಿಗೆ ಸಮೀಪ ವಾಸಿಸುವುದರಿಂದ ಮಾನವನ ಚಿಂತನೆಗಳನ್ನು ಮತ್ತು ಭಾವನೆಗಳನ್ನು ಪ್ರಾಣಿಪಕ್ಷಿಗಳಿಗೆ ಆರೋಪಿಸಿ, ಅವುಗಳಿಂದಲೇ ನೈತಿಕ, ರಾಜಕೀಯ ಹಾಗೂ ಜ್ಞಾನಾತ್ಮಕ ವರ್ತನೆಗಳನ್ನು ಪ್ರತಿಬಿಂಬಿಸಿ, ವಿಶೇಷ ಆಕರ್ಷಣೆಯಿಂದ ನೀತಿಶಿಕ್ಷಣವನ್ನೊದಗಿಸುವುದು ಸಂಸ್ಕೃತ ನೀತಿಕಥಾ ಸಾಹಿತ್ಯದ ವಿಶಿಷ್ಟ ಲಕ್ಷಣವಾಗಿದೆ ಬಹಳ ಹಿಂದಿನ ಇಂಥಹ ನೀತಿಕಥಾ ಸಾಹಿತ್ಯ ನಮಗೆ ಅಲಭ್ಯ. ಆದರೆ ಅವುಗಳ ಪಠ್ಯದಿಂದ ಪಡೆಯಲಾದ **"ಪಂಚತಂತ್ರ"** ಮತ್ತು **"ಆಖ್ಯಾಯಿಕಾ"**–ಕಾಶ್ಮೀರಿ ಆವೃತ್ತಿಯೇ ಅತ್ಯಂತ ಪ್ರಾಚೀನ ಹಾಗೂ ಮೂಲ ನೀತಿಕಥಾ ಸಾಹಿತ್ಯವಾಗಿದೆ. ಭಾರತೀಯ ಮತ್ತು ಗ್ರೀಕ್ ನೀತಿಕಥೆಗಳಲ್ಲಿ ಒಂದು ಸ್ಪಷ್ಟ ಸಮಾನಾಂತರತೆ ಕಂಡುಬರುತ್ತದೆ. **Wagener** ರವರ ಅಭಿಪ್ರಾಯದಂತೆ **"ಗ್ರೀಸ್ ಕಾಲ್ಪನಿಕ ಕಥೆಗಳು ಭಾರತೀಯ ಸ್ವೀಕೃತಿ"** ಎಂದಿದ್ದಾರೆ. "**Benfey**ರವರು **"ಸಾಮಾನ್ಯವಾಗಿ ನೀತಿಕಥೆಗಳು–ಕಾಲ್ಪನಿಕ ಕಥೆಗಳು ಮೂಲ ಭಾರತೀಯ ಜನ್ಯ"** ಎಂಬ ತೀರ್ಮಾನಕ್ಕೆ ಬಂದಿರುತ್ತಾರೆ. ಆದರೆ **"ಭಾರತೀಯ ಕಾಲ್ಪನಿಕ ಕಥೆಗಳು ಗ್ರೀಸ್ನಿಂದ ಪಡೆದದ್ದಾಗಿದೆ."** ಎಂದು ಒಂದು ವಿವಾದಾಸ್ಪದ ಹೇಳಿಕೆ ಕೊಟ್ಟಿರುತ್ತಾರೆ.[75] **WEBER-(GermanSociologist, Historian)** ರವರ ಅಭಿಪ್ರಾಯದಲ್ಲಿ

---

75. **Chandra Rajan,** VISNU SARMA,( English Translation)The Panchatantra, INTRO- P- XV, XVI (1993) Penguin Random House India Pvt.Ltd,7th Floor, Infinity Tower,C,DLF Cyber City,, Gurgaon, Haryana 122002.India.

**"ಕಾಲ್ಪನಿಕ ಕಥೆಗಳು–ನೀತಿಕಥೆಗಳು ಭಾರತೀಯ ಜನ್ಯ. ಅದರಲ್ಲೂ ಅದರ ಸರಳತೆಯೇ ಆ ಯುಗದ ಹೆಗ್ಗುರುತು.** "**KELLER** ರವರೂ ಇದೇ ಅಭಿಪ್ರಾಯವನ್ನು ಸಮರ್ಥಿಸಿಕೊಂಡು **"ಪ್ರಾಣಿಪಕ್ಷಿಗಳ ಮೇಲೆ ಮಾನವನ ಸ್ವಭಾವ ಮತ್ತು ವರ್ತನೆಗಳನ್ನು ಒಂದು ತಾರ್ಕಿಕ ಅನುಕ್ರಮದಿಂದ ಆರೋಪಿಸುವ ಸಿದ್ಧಾಂತ ಭಾರತೀಯ ಜನ್ಯವೇ."** ಎಂದು ಹೇಳಿದ್ದಾರೆ. ಫೇಬಲ್ಗಳ ಜನ್ಯತೆ ಹಾಗೂ ಪ್ರಸರಣಕಾರ್ಯದಲ್ಲಿ ಈಜಿಪ್ಟ್‌ನ ಪಾತ್ರವೂ ಸಂಭಾವ್ಯವಿರುವುದಾಗಿ ಕೆಲವು ವಿದ್ವಾಂಸರು ಅಭಿಪ್ರಾಯಿಸುವರು. ಅದೇನೇ ಇರಲಿ, ಬಹಳ ಮುಖ್ಯವಾದ ಅಂಶವೆಂದರೆ ಭಾರತೀಯ ನೀತಿಬೋಧಕ ಕಥೆಗಳು ಕಾಲ್ಪನಿಕಕಥೆಗಳು ಪಾಶ್ಚಿಮಾತ್ಯ ನೆಲದಲ್ಲಿ ಅಲ್ಲಿನ ಭಾಷೆಗಳಿಗೆ ತರ್ಜುಮೆಗೊಂಡಿರುವುದಂತೂ ಸುಸ್ಪಷ್ಟ.[76] **KHOSRO ANUSHIRVAN(A.D.550-578-)** ಆಳ್ವಿಕೆಯ ಕಾಲದಲ್ಲಿ **Physician** (ಭೌತಶಾಸ್ತ್ರಜ್ಞ) **BURZOE** ಪಂಚತಂತ್ರವನ್ನು ಪಹ್ಲವಿ ಭಾಷೆಗೆ ತರ್ಜುಮೆ ಮಾಡಿರುತ್ತಾನೆ. ಅದೇ **A.D.**570 ರಲ್ಲಿ ಅದನ್ನು **BUD** ಗೆ ಸಲ್ಲಿಸಲಾಗಿ ಅವನು ಸಿರಿಯಾ ಭಾಷೆಗೆ ಅನುವಾದಿಸಿದನು. ಮತ್ತೆ ಸುಮಾರು **A.D.**750 ರಲ್ಲಿ **Abdallah in al-Moqaffa** ನಿಂದ ಅರಬ್ಬೀ ಆವೃತ್ತಿ ಸಿದ್ಧಗೊಂಡಿತು. ಆನಂತರದಲ್ಲಿ ಪಾಶ್ಚಾತ್ಯ ಆವೃತ್ತಿಗಳು ಪ್ರಕಟಗೊಂಡವು. ಸಿರಿಯಾ ಭಾಷೆಯಿಂದ ಗ್ರೀಸ್ ಭಾಷೆಗೆ, ಅಲ್ಲಿಂದ ಇಟಲಿ ಹಾಗೂ ಜರ್ಮನಿ ಭಾಷಾ ಆವೃತ್ತಿಗಳು ಮತ್ತು ಅದರ ವಿವಿಧ ಪ್ರತಿರೂಪಗಳು ಕಂಡುಬಂದವು. ಹೀಗೆ ಪಂಚತಂತ್ರವು ಭಾರತದ ಹೊರಗೂ ಪಾಶ್ಚಿಮಾತ್ಯ ಸಾಹಿತ್ಯದ ಮೇಲೆ ವ್ಯಾಪಕ ಪ್ರಭಾವವನ್ನು ಬೀರಿದೆ.[77]

ಆದ್ಯತೆಯ ಬಗ್ಗೆ ಏನೇ ವಿವಾದವಿದ್ದರೂ, ಅದರ ಬಗ್ಗೆ ವಾಗ್ವಾದ ಮಾಡದೆ, ನೀತಿಬೋಧಕ–ಕಥೆಗಳು ಹಾಗೂ ಕಾಲ್ಪನಿಕ ಕಥೆಗಳು ಕೇವಲ ಮನರಂಜನೆ, ಸೊಗಸಾದ ಆನಂದ ಮಾತ್ರ ನೀಡದೆ, ಅದನ್ನೂ ಮೀರಿದ ಒಂದು ವಿಶಿಷ್ಟ ಉದ್ದೇಶವನ್ನು ಹೊಂದಿರುತ್ತವೆ. ಒಂದು ಪ್ರಸಿದ್ಧ ಸಂಸ್ಕೃತ ಶ್ಲೋಕ ಹೀಗೆ ವಿವರಿಸುತ್ತದೆ :–

यन्नवे भाजने लग्नः संस्कारो नान्यथा भवेत् ।

कथाच्छलेन बालानां नीतिस्तदिह कथ्यते ॥[78]

ಅಂದರೆ, ಹೊಸದಾಗಿ ತಯಾರಿಸಿದ ಮಣ್ಣಿನ ಪಾತ್ರೆಗಳ ಉಪಯೋಗ ಮಾಡಿ ಹೇಗೆ ಸಕಲ ಸಂಸ್ಕಾರಾದಿಗಳನ್ನು ಮಾಡಲಾಗುತ್ತದೆಯೋ, ಹಾಗೆಯೇ ಹೊಸದಾಗಿ ವಿಕಸಿತವಾಗುತ್ತಿರುವ ಬುದ್ಧಿಯುಳ್ಳ ಬಾಲಕರಿಗೆ ಕಥೆಗಳ ಮಾಧ್ಯಮದಿಂದ **"ಹಿತೋಪದೇಶ"** ಗ್ರಂಥಗಳಲ್ಲಿ ಈ ನೀತಿಯು ಹೇಳಲ್ಪಟ್ಟಿದೆ. ಇದೇ

76. Chandramani G.L., translation _Panchatantra- Preface- Page: V, Roopa Publication Ind.Pvt.Ltd. 7/16, Ansari road, Dariyaganj, Newdelhi-110002-1991

**77. Sadhu Ram,** " Essays on Sanskrit Literature,C-28,P-242-245, Munshi Ram Manhattan All, Oriental Book Sellers & Publishers,PB-1165,Nai Sarak,Delhi-6 Aug 1965.

78. **ನಾರಾಯಣ ಪಂಡಿತ ಸಂಗೃಹೀತ ಹಿತೋಪದೇಶ,** ಪ್ರಾಸ್ತಾವಿಕಾ–ಶ್ಲೋ–8.ಚೌಕಾಂಬಾ ಸಂಸ್ಕೃತ ಭವನ, ವಾರಣಾಸಿ.

ಧಾಟಿಯಲ್ಲಿ ಪಂಚತಂತ್ರದ ನೀತಿಕಥೆಗಳ ಮೂಲಕ ಸರಳ, ಆಕರ್ಷಕ ನಿರೂಪಣಾ ಮಾಧ್ಯಮದಿಂದ ರಾಜನೀತಿಶಿಕ್ಷಣ, ಮೌಲ್ಯಾಧಾರಿತ ಬದುಕಿನ ಶಿಕ್ಷಣವನ್ನು ರಾಜನಂದನರಿಗೆ ಮನಮುಟ್ಟುವಂತೆ ಪಂಡಿತ ವಿಷ್ಣುಶರ್ಮರು ಬೋಧಿಸಿದ್ದಾರೆ.

ಮತ್ತೊಂದು ಬಹಳ ಮುಖ್ಯ ವಿಚಾರವೆಂದರೆ, ವಿಷ್ಣುಶರ್ಮರು ಅರಸುಕುಮಾರರಿಗೆ ಕೇವಲ ಆರು ತಿಂಗಳುಗಳೊಳಗಾಗಿ ಉತ್ತಮ ಶಿಕ್ಷಣವನ್ನು ಒದಗಿಸಿ ರಾಜನೀತಿ ನಿಪುಣರನ್ನಾಗಿ ಮಾಡುತ್ತೇನೆಂದು ಪ್ರತಿಜ್ಞೆ ಮಾಡಿದ್ದು ಸರಿಯಷ್ಟೆ. ಅವರನ್ನು ಉತ್ತಮ ವ್ಯಕ್ತಿತ್ವದೆಡೆಗೆ ಪ್ರೋತ್ಸಾಹಿಸಿ ಪ್ರೇರೇಪಿಸಿದ್ದೂ ಸರಿಯಷ್ಟೆ. ಅದಕ್ಕೆ ತಕ್ಕಂತೆ ಸ್ಪಂದಿಸಿ, ಬದುಕಿನ ನೀತಿಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿ, ಒಂದು ಸುಭಾಷಿತ ಹೇಳುವಂತೆ :–

कुरु गुरुवचो निपीतं भूयो भूयो विचिन्तयाधीतम् ।

विद्या गुरुपदिष्टा चिरपरिमृष्टा विभूषणं वपुषः ॥[79]

ಗುರುವಿನ ಉಪದೇಶವನ್ನು ಕುಡಿ. ಕಲಿತದ್ದನ್ನು ಮತ್ತೆಮತ್ತೆ ಚಿಂತನೆ ಮಾಡು. ಗುರೂಪದಿಷ್ಟವಾದ ವಿದ್ಯೆ ಬಹಳ ಕಾಲ ಚಿಂತನೆಗೊಳಗಾದರೆ ದೇಹಕ್ಕೆ ಭೂಷಣವಾಗಿರುತ್ತದೆ. ಹೀಗೆಯೇ ಅರಿತು ಗುರುಗಳಲ್ಲಿ ಭಕ್ತಿಶ್ರದ್ಧೆಯನ್ನಿಟ್ಟುಕೊಂಡು ರಾಜನಂದನರೂ ಸಾಧನೆಗೈದಿದ್ದಾರೆ. ವಿಷ್ಣುಶರ್ಮರು ಒಂದು ಅದ್ಭುತ ವಾಣಿಯನ್ನು ಹಿಡಿದು, ಅಂದರೆ ಒಳ್ಳೆಯ ಕಥಾನಿರೂಪಣಾ ಮಾಧ್ಯಮದಲ್ಲಿ ವಿಶೇಷ, ಸರಳ ಹಾಗೂ ಆಕರ್ಷಕ ಕಥೆಗಳನ್ನು ಹೆಣೆದು, ಮನಸ್ಸನ್ನು ಕೇಂದ್ರೀಕೃತಗೊಳಿಸಿಕೊಂಡು ಶ್ರವಣ ಹಾಗೂ ಮನನ ಮಾಡುವಂತೆ ಶಿಷ್ಯರನ್ನು ಪ್ರೇರೇಪಿಸಿದ್ದಾರೆ. ಇವರ ನಿರೂಪಣಾ ಶೈಲಿ, ಕೃತಿಮಾಡಿದ ವಾಣಿ ಇಲ್ಲಿ ಬಹಳ ಪ್ರಾಮುಖ್ಯತೆ ಪಡೆದಿರುತ್ತದೆ. ವೇದಾಂತ ದೇಶಿಕದಲ್ಲಿನ ಒಂದು ಶ್ಲೋಕ ವಾಣಿಯ ಮಹತ್ವವನ್ನು ಹೀಗೆ ವರ್ಣಿಸುತ್ತದೆ:–

संतोषार्थं विमृशति मुहुः सद्भिरध्यात्मविद्याम्

नित्यं ब्रूते निशमयति च स्वादुसुव्याहृतानि ।

अंगीकुर्वन्नघललितां वृत्तिमादेहपातात्

दृष्टादृष्टस्वभरविगमे दत्तदृष्टिः प्रसन्नः ॥[80]

---

79. हरिहरविरचितं हरिहरसुभाषितम् , ೩–೩
೮೦. **ವೇದಾಂತ ದೇಶಿಕ,**

ಅಂದರೆ, ದೇವರಲ್ಲಿ ಮೊರೆಹೊಕ್ಕ ಭಕ್ತನು ಸಂತೋಷಕ್ಕಾಗಿ ಪಂಡಿತರೊಡನೆ ಆಧ್ಯಾತ್ಮ ವಿದ್ಯೆಯನ್ನು ಕುರಿತು ಚರ್ಚಿಸುತ್ತಾನೆ, ಒಳ್ಳೆಯ ಮಾತನ್ನು ಹೇಳುತ್ತಾನೆ ಮತ್ತು ಕೇಳುತ್ತಾನೆ. ಈ ಲೋಕದ ಅಥವಾ ಇತರ ಲೋಕದ ಸುಖಗಳಲ್ಲಿ ಆಸೆಪಡದೆ ಅಂತ್ಯದವರೆಗೂ ಪಾಪಕರವಿಲ್ಲದ ಭಗವದಾರಾಧನೆ ರೂಪವಾದ ಕೆಲಸಗಳನ್ನು ಮಾಡುತ್ತಾನೆ. ಹೀಗೆ ರಾಜಕುಮಾರರಿಗೆ ವಿಷ್ಣುಶರ್ಮರು ಬಹಳ ಉತ್ತಮ ಸನ್ನಿವೇಶಗಳನ್ನೊದಗಿಸಿ ಅವರ ಮನಸ್ಸನ್ನು ಕಥೆಗಳ ಮೂಲಕ ಆಕರ್ಷಿಸಿ ನೀತಿ ವಿಚಾರಗಳನ್ನು ಕುತೂಹಲದಿಂದ ತಿಳಿಯುವಂತೆ ಪ್ರೇರೇಪಿಸಿ, ವಿಶಿಷ್ಟ ಮಾದರಿಯಲ್ಲಿ ಶಿಕ್ಷಣ ನೀಡಿದ್ದಾರೆ. ಒಳ್ಳೆಯ ಮಾತುಗಳನ್ನು ಹೇಳಿದ್ದಾರೆ. ಮಂದ ಮತಿಗಳಾಗಿದ್ದ ರಾಜಕುಮಾರರು ಹಾಗೂ ಅವರ ಸ್ಥಿತಿಗಳನ್ನು ಕುರಿತು ಕೊರಗುತ್ತಿದ್ದ ಅಮರಶಕ್ತಿ ರಾಜನ ಬಗ್ಗೆ ಕರುಣಾರ್ದ್ರಹೃದಯಿಯಾಗಿ ವಯೋವೃದ್ಧರೂ, ಜ್ಞಾನವೃದ್ಧರೂ ಆದ ವಿಷ್ಣುಶರ್ಮರು ಶಿಕ್ಷಣ ಹಾಗೂ ಉತ್ತಮ ವ್ಯಕ್ತಿತ್ವನಿರ್ಮಾಣಕ್ಕೆ ಪಂಚತಂತ್ರಗಳ ಮೂಲಕ ಆದರ್ಶ ಯೋಜನೆಯನ್ನು ಕೈಗೊಂಡಿರುತ್ತಾರೆ.

वाचा निर्मलया सुधामधुरया यां नाथ शिक्षामदाः
तां स्वप्नेऽपि न संस्मराम्यहमहंभावावृतो निस्त्रपः ।
इत्यागःशतशालिनं पुनरपि स्वीयेषु मां बिभ्रतः
त्वत्तो नास्ति दयानिधिर्यदुपते मत्तो न मत्तः परः ॥[81]

ಸ್ವಚ್ಛವಾದ ಅಮೃತದಂತೆ ರುಚಿಯಾದ ಮಾತುಗಳಿಂದ ನೀನು ಕಲಿಸಿದ್ದೆಲ್ಲವನ್ನೂ ಮರೆತು ಅಹಂಕಾರದಿಂದ ನಾಚಿಕೆಯಿಲ್ಲದೇ ನೂರಾರು ತಪ್ಪುಗಳನ್ನು ಮಾಡಿದರೂ ದಯೆಯಿಂದ ನನ್ನನ್ನು ತನ್ನವರಲ್ಲಿ ಸೇರಿಸಿಕೊಂಡಿರುವೆ. ಇದನ್ನು ಯೋಚಿಸಿದರೆ ನಿನಗಿಂತಲೂ ಕರುಣಾಳುಗಳಿಲ್ಲ, ನನಗಿಂತಲೂ ಕೊಬ್ಬಿದವರಿಲ್ಲ. ಇದು ಗುರು ಶಿಷ್ಯರಿಗೆ ಅನ್ವಯಿಸುತ್ತದೆ. ಆದರೆ, ಇಲ್ಲಿ ಗುರುಗಳಾದ ವಿಷ್ಣುಶರ್ಮರು ಒಳ್ಳೆಯ ಶ್ರುತಿ ಮಾಡಿದ ಪಂಚತಂತ್ರ ಕಥೆಗಳ ಸುಮಧುರ ನಿರೂಪಣಾವಾಣಿಯಿಂದ ರಾಜಕುಮಾರರ ಸ್ವೇಚ್ಛವರ್ತನೆಗಳನ್ನು ಬಹಳ ಅಚ್ಚುಕಟ್ಟಾಗಿ ಪರಿವರ್ತಿಸಿ ಉತ್ತಮ ವ್ಯಕ್ತಿತ್ವ ನಿರ್ಮಾಣ ಮಾಡಿರುತ್ತಾರೆ. ಇಂತಹ ವಿಶಿಷ್ಟ ಲಕ್ಷಣಗಳೇ ಪಂಚತಂತ್ರ ವಿಶ್ವವ್ಯಾಪಿ ಪ್ರಭಾವವನ್ನು ಬೀರಲು ಕಾರಣವಾಗಿದೆ.



81. करुणालहरि

# ಅಧ್ಯಾಯ–2

## ಶಿಕ್ಷಣದಲ್ಲಿ ಮನೋವಿಜ್ಞಾನ

ಅಧ್ಯಾಯ –2 – 1. ಮನೋವಿಜ್ಞಾನ; ಪೀಠಿಕೆ– ವ್ಯಾಪ್ತಿ– ಪಾತ್ರ

**Psychology- Introduction-Scope-It's Role**

ಅಧ್ಯಾಯ 2 – 2. ಶೈಕ್ಷಣಿಕ ಮನೋವಿಜ್ಞಾನ

–ಅನ್ವಯಿಕ ವಿಜ್ಞಾನ–ಅರ್ಥ–ವ್ಯಾಖ್ಯೆ–ಪ್ರಾಮುಖ್ಯತೆ.

**Educational Psychology-Applied Science-meaning-definition-importance**

ಅಧ್ಯಾಯ 2 – 3. ಶಿಕ್ಷಣದಲ್ಲಿ ಮನೋವಿಜ್ಞಾನದ ಮಹತ್ವ.

**Importance of Psychology in Education**

ಅಧ್ಯಾಯ 2 – 4. ಪಂಚತಂತ್ರ ನೀತಿಕಥೆಗಳಲ್ಲಿ ಕಂಡುಬರುವ ಕೆಲವು

ಶೈಕ್ಷಣಿಕ ಮನೋವಿಜ್ಞಾನದ ಹಾಗೂ

ವ್ಯಕ್ತಿತ್ವನಿರ್ಮಾಣ ಪರಿಕಲ್ಪನೆಗಳ ವಿಶ್ಲೇಷಣೆ.

## ಅಧ್ಯಾಯ 2-1. ಮನೋವಿಜ್ಞಾನ-ಪೀಠಿಕೆ-ವ್ಯಾಪ್ತಿ-ಪಾತ್ರ

समदोषः समाग्निश्च समधातुमलक्रियः ।

प्रसन्नात्मेन्द्रियमनाः स्वस्थ इत्यभिधीयते ॥[1]

ಸಮತೋಲನಸ್ಥಿತಿಯಲ್ಲಿರುವ ದೋಷಗಳು - ಹಿತಕರ ಸ್ಥಿತಿಯಲ್ಲಿರುವ ಕಿಚ್ಚು (ಅಗ್ನಿ) ಸುಸ್ಥಿಯಲ್ಲಿರುವ ಅಂಗಾಂಶಗಳು ಹಾಗೂ ಅವುಗಳ ಜೀವದ್ರವ್ಯಕ್ರಿಯೆಯ ಪರಿಣಾಮಗಳು, ಜೊತೆಗೆ ಬುದ್ಧಿ, ಮನಸ್ಸು ಮತ್ತು ಆತ್ಮಗಳ ಸಮಸ್ಥಿತಿಯನ್ನು ತರುವುದರ ಮೂಲಕ ಆರೋಗ್ಯ ಸ್ಥಿತಿಯನ್ನು ರೂಪಿಸುತ್ತವೆ. ಸ್ವಸ್ಥವಾದ ಮಾನವ, ಶರೀರಮಾತ್ರದಿಂದಲೇ ಏನನ್ನಾದರೂ ಸಾಧಿಸಬಹುದು. **HEALTH IS WEALTH** ಎಂಬ ಹೇಳಿಕೆ ಇದನ್ನು ಮತ್ತೆ ಮತ್ತೆ ಸ್ಪಷ್ಟಪಡಿಸುತ್ತದೆ. "ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಬೇಡಿ ಹುಚ್ಚಪ್ಪಗಳಿರಾ" ಎಂಬ ದಾಸವಾಣಿಯೂ ಸಹ ಮಾನವಜನ್ಮದ ಹಿರಿಮೆಗರಿಮೆಗಳನ್ನು ಸಾರುತ್ತದೆ. ಮತ್ತೊಂದು- ಸುಭಾಷಿತವು ಶರೀರಪ್ರಾಪ್ತಿಯ ಮಹತ್ವವನ್ನು ಸೂಚಿಸುತ್ತದೆ:-

पुनर्वित्तं पुनर्मित्रं पुनर्भार्या पुनर्मही ।

एतत्सर्वं पुनर्लभ्यं न शरीरं पुनःपुनः ॥[2]

ಭಾಗ್ಯವಶದಿಂದ ಲಭ್ಯವಾಗಿರುವ ಶರೀರವನ್ನು ಜತನದಿಂದ ಕಾಪಾಡುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ. ಸ್ವಾಮಿ ವಿವೇಕಾನಂದರೂ ಸಹ ಶರೀರವನ್ನು ಕುರಿತು ಬಹಳ ಒಳ್ಳೆಯ ಮಾತನ್ನು ಹೇಳಿದ್ದಾರೆ." ಈ ದೇಹವು ಜೀವಾತ್ಮನು ವಾಸಿಸುವ ಸ್ಥಳ. ಇದರ ಮೂಲಕವೇ ಕರ್ಮಗಳನ್ನು ಮಾಡುವುದು. ಯಾರು ಇದನ್ನು ಒಂದು ನರಕ ಕುಂಡವನ್ನಾಗಿ ಮಾಡುತ್ತಾರೋ, ಅವರು ದೋಷಿಗಳು ಮತ್ತು ಇದನ್ನು ಕಡೆಗಣಿಸುವವರು ದ್ರೋಹಿಗಳು." ಆರೋಗ್ಯವೆಂದರೆ ಕೇವಲ ಶಾರೀರಿಕ ಸುಸ್ಥಿತಿ ಮಾತ್ರವಲ್ಲ. ಬದಲಾಗಿ ಇಂದ್ರಿಯ,ಮನಸ್ಸು ಹಾಗೂ ಆತ್ಮವಿಷಯಕವಾಗಿಯೂ ಇರುತ್ತದೆಂಬುದೂ ಸನಾತನ ಭಾರತೀಯ ಚಿಂತನೆಯಾಗಿರುತ್ತದೆ. ಗೀತಾಚಾರ್ಯನೂ ಸಹ:-

युक्ताहारविहारस्य युक्तचेष्टस्य कर्मसु ।

युक्तस्वप्नावबोधस्य योगो भवति दुःखहा ॥[3]

---

1. सुश्रुत, सू.अ. -75/41
2. **ಚಾಣಕ್ಯ ನೀತಿ** - (14/3)
3. **ಭಗವದ್ಗೀತಾ,** षष्ठोऽध्यायः-श्लोक-17.

ಎಂಬುದಾಗಿ ಆರೋಗ್ಯ ಹೇಗೆ ಕಾಪಾಡಿಕೊಳ್ಳಬೇಕೆಂದು ಮನೋಜ್ಞವಾಗಿ ಹೇಳಿದ್ದಾನೆ. ಯುಕ್ತವಾದ ಆಹಾರ, ವಿಹಾರ, ನಡವಳಿಕೆ, ಕ್ರಿಯಾಕಲಾಪಗಳು, ನಿದ್ರೆ, ಜಾಗರಣೆಗಳನ್ನು ಅಭ್ಯಾಸಮಾಡಿಕೊಂಡರೆ ಶಾರೀರಿಕ ಹಾಗೂ ಮಾನಸಿಕ ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳಬಹುದು. ಪ್ರತಿಯೊಬ್ಬ ಮಾನವನಿಗೂ ಭಗವಂತನು ಅನುಗ್ರಹಿಸಿರುವ ಅಸಾಧಾರಣ ಸಂಪತ್ತೆಂದರೆ ಅದು **"ಮನಸ್ಸು"** ಇದನ್ನು ಬುದ್ಧಿ, ಚಿತ್ತ, ಚೇತ, ಮಾನಸ ಎಂದೆಲ್ಲ ಅನೇಕ ಹೆಸರುಗಳಿಂದ ಕರೆಯುತ್ತಾರೆ. ಇತರ ಯಾವ ಪ್ರಾಣಿಗಳಿಗೂ ಭಗವಂತನು ಇಂಥಹ ಸಂಪತ್ತನ್ನು ಕೊಡಮಾಡಲಿಲ್ಲ. ಈ ವಿಷಯದಲ್ಲಿ ಮಾನವನೇ ಭಾಗ್ಯವಂತನು. ಈ ಮನಸ್ಸು ಅತ್ಯಂತ ಸೂಕ್ಷ್ಮವೂ, ಪವಿತ್ರವೂ ದುರ್ಬಲವೂ ಆಗಿರುವಂಥಾದ್ದು. ಸ್ವಲ್ಪ ಆಧ್ಯಾತ್ಮಿಕ ದೃಷ್ಟಿಯಿಂದ ಚಿಂತನೆ ಮಾಡಿದರೆ ಇಂಥ ಮನಸ್ಸಿನಿಂದ ಮೋಕ್ಷವೂ ದೊರಕುತ್ತದೆ, ಬಂಧನವೂ ಆಗುತ್ತದೆ. ಇದನ್ನು ಯೋಗವಾಸಿಷ್ಠದಲ್ಲಿ ಬಹಳ ಅಚ್ಚುಕಟ್ಟಾಗಿ ಹೇಳಲಾಗಿದೆ:

मन एव मनुष्याणां कारणं बन्धमोक्षयोः ।

बन्धाय विषयासक्तं मुक्त्यै निर्विषयं स्मृतम् ॥[4]

ಅಂದರೆ ವಿಷಯಾನುಸಂಧಾನದಲ್ಲಿ ಮುಳುಗಿಬಿಟ್ಟಾಗ ಇದರಿಂದ ಬಂಧವೇ ಉಂಟಾಗುತ್ತದೆ. ವಿಷಯ ಧ್ಯಾನದಿಂದ ದೂರವಾದಾಗ ಇದೇ ಮನಸ್ಸು ಮುಕ್ತಿಗೂ ಸಾಧನವಾಗುವುದು. ಈ ಮನಸ್ಸೇ ಬಂಧನಕ್ಕೂ, ಮೋಕ್ಷಕ್ಕೂ ನಿಮಿತ್ತವಾಗುತ್ತದೆ. ಮನುಸ್ಮೃತಿಯಲ್ಲಿ ಹೇಳಿರುವಂತೆ

दृष्टिपूतं न्यसेत्पादं वस्त्रपूतं जलं पिबेत् ।

सत्यपूतां वदेद्वाचं मनःपूतं समाचरेत् ॥[5]

ಕಣ್ಣಿನಿಂದ ನೋಡಿ ಹೆಜ್ಜೆ ಇಡಬೇಕು; ಬಟ್ಟೆಯಿಂದ ಶೋಧಿಸಿ ನೀರನ್ನು ಕುಡಿಯಬೇಕು; ಸತ್ಯದಿಂದ ಶುದ್ಧವಾದ ಮಾತನ್ನಾಡಬೇಕು; ಮನಸ್ಸಿನಿಂದ ಪವಿತ್ರವಾದ ಕೆಲಸವನ್ನು ಮಾಡಬೇಕು. ಯಾವುದಕ್ಕೂ ಮೊದಲು ಮನಸ್ಸಿರಬೇಕು. ಮನಸ್ಸಿನ ಮಹತ್ವದ ಮೂರು ತಪಸ್ಸುಗಳನ್ನು ಕುರಿತು ಭಗವದ್ಗೀತೆಯಲ್ಲಿ ಗೀತಾಚಾರ್ಯನು ಬಹಳ ಉತ್ತಮ ವ್ಯಾಖ್ಯಾನವನ್ನು ಕೊಟ್ಟಿರುತ್ತಾನೆ:-

4. ब्रह्मबिन्दूपनिषद्, श्लो-2

5. **ಸುಭಾಷಿತಮಂಜರೀ,** ಧರ್ಮ-ಶ್ಲೋ-65 ಮನುಸ್ಮೃತಿ, 6-46. ಪು-239,(2001) 12 ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18.

देवद्विजगुरुप्राज्ञपूजनं शौचमार्जवम् ।

ब्रह्मचर्यमहिंसा च शारीरं तप उच्यते ॥

अनुद्वेगकरं वाक्यं सत्यं प्रियहितं च यत् ।

स्वाध्यायाभ्यसनं चैव वाङ्मयं तप उच्यते ॥

मनःप्रसादः सौम्यत्वं मौनमात्मविनिग्रहः ।

भावसंशुद्धिरित्येतत्तपो मानसमुच्यते ॥[6]

ದೇವ, ದ್ವಿಜ, ಗುರು ಜ್ಞಾನಿಗಳ ಪೂಜನ, ಶುಚಿತ್ವ, ಸರಳತೆ, ಬ್ರಹ್ಮಚರ್ಯ ಮತ್ತು ಅಹಿಂಸೆ-ಇವುಗಳು ಕಾಯಿಕ ತಪಸ್ಸು. ಮನಸ್ಸಿಗೆ ಉದ್ವೇಗವನ್ನುಂಟುಮಾಡದ ಮತ್ತು ಸತ್ಯವೂ ಪ್ರಿಯವೂ ಹಿತಕರವೂ ಆದ ನುಡಿ, ವೇದಾಭ್ಯಾಸ-ಇವುಗಳು ವಾಙ್ಮಯವಾದ ತಪಸ್ಸು. ಮನಸ್ಸಿನ ಪ್ರಸನ್ನತೆ, ಸೌಮ್ಯತೆ, ಮಿತಭಾಷಣ, ಮನಶ್ಶುದ್ಧಿ - ಇವುಗಳು ಮಾನಸ ತಪಸ್ಸು. ಹೀಗೆ ಮನಸ್ಸನ್ನು ಒಂದು ವಿಚಾರದೆಡೆ ಕೇಂದ್ರೀಕೃತಗೊಳಿಸಿ ಶ್ರದ್ಧಾಭಕ್ತಿಯಿಂದ ಧ್ಯಾನಾಸಕ್ತರಾಗಬೇಕೆಂಬುದೇ ತಪಸ್ಸು, ತಪಸ್ಸಿನ ಮೂಲವೇ ಮನಸ್ಸು ಹಾಗೂ ಇದರ ನಿಯಂತ್ರಣ. ಅದಕ್ಕೇ ಜ್ಞಾನಿಗಳು ಹೇಳುತ್ತಾರೆ ಭಗವದ್ಗೀತೆಗಿಂತ ದೊಡ್ಡ ಮನೋವಿಜ್ಞಾನದ ಗ್ರಂಥ ಬೇಕೇ?

ಇನ್ನು ವೈಜ್ಞಾನಿಕವಾಗಿ ಚಿಂತನೆ ಮಾಡಿದಾಗ, ಮನೋವಿಜ್ಞಾನವು ಹೇಗೆ ಒಂದು ಸ್ವತಂತ್ರ ವಿಷಯವಾಗಿ ಬಹಳಷ್ಟು ಆಧುನಿಕ ಅಭಿವೃದ್ಧಿಯನ್ನು ಕಂಡಿರುವುದಾಗಿದೆ. ಶಿಕ್ಷಣ ಕ್ಷೇತ್ರದಲ್ಲಂತೂ ಇದರ ಪಾತ್ರ ಮಹತ್ವಪೂರ್ಣದ್ದಾಗಿರುತ್ತದೆ. ಶಿಕ್ಷಣಶಾಸ್ತ್ರ ಹಾಗೂ ಮನೋವಿಜ್ಞಾನವು ಪರಸ್ಪರ ಅವಿನಾಭಾವ ಸಂಬಂಧವನ್ನು ಬೆಳೆಸಿಕೊಂಡಿದೆ. ಒಂದನ್ನು ಅಗಲಿ ಮತ್ತೊಂದು ಇರಲಾರದು. ಕಲಿಕೆಯೂ, ಬೋಧನೆಯೂ ಅಸ್ವಾದನೀಯವಾಗುವುದರಲ್ಲಿ ಶೈಕ್ಷಣಿಕ ಮನೋವಿಜ್ಞಾನದ ಪ್ರಾಧಾನ್ಯತೆಯಿರುತ್ತದೆ. ಶಿಕ್ಷಣ ಮತ್ತು ಮನೋವಿಜ್ಞಾನದ ಸಂಬಂಧ ಕಣ್ಣಿಗೆ ಕಾಣುವುದಿಲ್ಲ, ಆದರೆ ಒಂದಿಲ್ಲದೆ ಮತ್ತೊಂದರ ಕ್ರಿಯೆ ನಡೆಯುವುದಿಲ್ಲ. ಪಂಚತಂತ್ರದಲ್ಲೇ ಇದಕ್ಕೆ ಸಮಂಜಸವಾದ ಒಂದು ವಿಚಾರ ಬರುತ್ತದೆ:-

यच्छञ्जलमपि जलदो वल्लभतामेति सकललोकस्य ।

नित्य प्रसारितकरो मित्रोऽपि न वीक्षितुं शक्यः ॥[7]

---

6. भगवद्गीता, 17-14, 15, 16

7. **ಸುಧಾಕರ್ ಮಾಲವೀಯ,** ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಮಿತ್ರಸಂಪ್ರಾಪ್ತಿ-ಶ್ಲೋ-78, ಪು-353, (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಅದೇನೆಂದರೆ, ಮೋಡವು ಬರಿಯ ನೀರನ್ನು ಕೊಡುತ್ತಿದ್ದರೂ ಎಲ್ಲ ಜನರಿಗೂ ಪ್ರಿಯವಾಗಿರುತ್ತದೆ. ಅದು ಅವಶ್ಯಕವೂ ಹೌದು. ಸೂರ್ಯನು (ಮಿತ್ರನಾಗಿದ್ದರೂ) ಕಿರಣಗಳನ್ನು ಹರಡುತ್ತಾನೆ –ಕೈ ನೀಡಿಕೊಂಡಿರುತ್ತಾನಾದ್ದರಿಂದ ಅವನನ್ನು ಕಣ್ಣೆತ್ತಿ ನೋಡಲೂ ಸಾಧ್ಯವಿಲ್ಲ. ಆದರೆ ಅವನ ಕಿರಣಗಳು ಪ್ರತಿಯೊಂದು ಜೀವರಾಶಿಗಳಗೂ ತನ್ನ ಪ್ರಭೆಯಿಂದ ಪಾಲನೆಪೋಷಣೆ ಮಾಡುತ್ತಾನೆ. ಹೀಗೆಯೇ ಮನೋವಿಜ್ಞಾನವು ಶಿಕ್ಷಣ ಕ್ಷೇತ್ರದ ಪ್ರತಿಯೊಂದು ಕಾರ್ಯ ವ್ಯವಸ್ಥೆಯಲ್ಲೂ ತನ್ನ ಪ್ರಭೆಯಿಂದ ಕ್ರಮಬದ್ಧವಾದ ಅಭಿಜ್ಞಾನವನ್ನೊದಗಿಸಿ ಪೋಷಿಸುತ್ತದೆ.

ಪ್ರತಿಯೊಬ್ಬ ಯಶಸ್ವೀ ಶಿಕ್ಷಕ, ಬೋಧಕ ಅಥವಾ ಅದ್ಯಾಪಕ ತನ್ನ ಪವಿತ್ರವಾದ ಬೋಧನಾ ಕಾರ್ಯದಲ್ಲಿ ಜವಾಬ್ದಾರಿಯನ್ನು ವಹಿಸಿಕೊಂಡಾಗ ಆತನಿಗೆ ಮನೋವಿಜ್ಞಾನದ ಅಭಿಜ್ಞಾನ ಇರಬೇಕಾದುದು ಅತ್ಯಾವಶ್ಯಕ. ಒಂದು ನಿರ್ದಿಷ್ಟವಾದ ಮನೋವಿಜ್ಞಾನ ಮತ್ತು ಶೈಕ್ಷಣಿಕ ಮನೋವಿಜ್ಞಾನದ ಅಧ್ಯಯನವು ಪ್ರತಿ ಬೋಧಕರಿಗೆ ಮಾನವ ಪರಂಪರೆಯಿಂದ ಬಂದಿರುವ ಮನುಷ್ಯನ ಸ್ವಭಾವದಲ್ಲಿನ ಜಟಿಲತೆಗಳು ಮತ್ತು ವೈಭವಗಳನ್ನು ಅಂತರ್ದೃಷ್ಟಿಯಿಂದ ನೋಡಲು ನೆರವಾಗುತ್ತದೆ. ಶಿಕ್ಷಣವು ಒಂದು ಪ್ರಕ್ರಿಯೆಯಾಗಿ ಪರಿಕಲ್ಪನೆ ಮಾಡಿಕೊಂಡಾಗ ಮಗುವಿನ ವರ್ತನೆಯಲ್ಲಿ ಅಪೇಕ್ಷಣೀಯ ಬದಲಾವಣೆಗಳನ್ನು ತರಲು ಮನೋವಿಜ್ಞಾನದ ಸಮರ್ಪಕ ಜ್ಞಾನವು ಮಗುವನ್ನು ಅಥವಾ ಕಲಿಕಾ ವ್ಯಕ್ತಿಯನ್ನು ಸಂಪೂರ್ಣವಾಗಿ ಅರ್ಥೈಸಿಕೊಂಡು, ಸೂಕ್ತವಾದ ಶಿಕ್ಷಣವನ್ನು ಒದಗಿಸಲು ಸಹಾಯಕವಾಗಿರುತ್ತದೆ.[8]

“ಜೀವಿಗಳ ವರ್ತನೆಯನ್ನು ಕುರಿತ ಶಾಸ್ತ್ರ ಮನೋವಿಜ್ಞಾನ. ಇದರ ಒಂದು ಶಾಖೆ ಶೈಕ್ಷಣಿಕ ಮನೋವಿಜ್ಞಾನ. ಮನೋವಿಜ್ಞಾನದೆಡೆಗೆ ಅರ್ಥೈಸಿಕೊಳ್ಳಲು ಪ್ರಯತ್ನಿಸಿದರೆ, ಮನೋವಿಜ್ಞಾನವು ಮೂಲತಃ ತತ್ವಶಾಸ್ತ್ರದ ಬಾಹ್ಯವೃದ್ಧಿಯಾಗಿದೆ.” ಮನೋವಿಜ್ಞಾನ ಎಂಬ ಪದವು ಮೂಲ ಗ್ರೀಕ್ ಪದಗಳಾದ **PSYCHE-** ಮತ್ತು **LOGOS-** ನಿಂದ ಪಡೆಯಲಾಗಿದೆ[9]. “ಪ್ರಾಚೀನ ಕಾಲದಿಂದಲೂ ಬಂದಿರುವ ಒಂದು ನಂಬಿಕೆಯೆಂದರೆ, ಮಾನವನು ಜೀವಂತವಾಗಿರುವವರೆಗೆ ದೇಹದಲ್ಲಿ ಆತ್ಮ ಇರುವುದೆಂದೂ ಹಾಗೂ ಈ ಆತ್ಮದ ಅಧ್ಯಯನವೇ ಆತ್ಮಜ್ಞಾನ. ಆತ್ಮಜ್ಞಾನಕ್ಕೂ ಮನೋವಿಜ್ಞಾನಕ್ಕೂ ಇತ್ತೀಚಿನವರೆಗೂ ಯಾವ ವ್ಯತ್ಯಾಸವನ್ನೂ ಕಲ್ಪಿಸಿರಲಿಲ್ಲ. ಹದಿನೇಳನೇ ಶತಮಾನದಲ್ಲಿ **RENE DESCARTES** ಎಂಬ ಫ್ರೆಂಚ್ ತತ್ವಜ್ಞಾನಿ ಹಾಗೂ ಗಣಿತಶಾಸ್ತ್ರಜ್ಞ **“ಆತ್ಮ ಮತ್ತು ಮನಸ್ಸು ಇವೆರಡೂ ಪ್ರತ್ಯೇಕ”** ಎಂದು ಘೋಷಿಸಿದನು.

---

8. BhatiaHansRaj, “A text book of Educaional Psychology”, Asia Publication House, Bombay-1. (1905)-Sect.1, Intro. Chap-1-PP-4-7

9. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಪು–2,(2009) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳುಬಡಾವಣೆ, ದಾವಣಗೆರೆ–577005.

ಮನಸ್ಸು ದೇಹದಲ್ಲಿದ್ದರೂ ತನ್ನದೇ ಆದ ರೀತಿಯಲ್ಲಿ ಕೆಲಸ ಮಾಡುತ್ತದೆಂದು ಸೂಚಿಸಿದನು. ಮನಸ್ಸಿನೊಡನೆ ಅಂಟಿಕೊಂಡು ಸಾಗಿಬಂದಿದ್ದ ಆತ್ಮವನ್ನು ಬಿಡುಗಡೆ ಮಾಡಿದನು. ಆ ವೇಳೆಗೆ ನರಗಳು, ಮಾಂಸಖಂಡಗಳು, ರಸಗ್ರಂಥಿಗಳು, ಜ್ಞಾನೇಂದ್ರಿಯಗಳು ಇವುಗಳ ಬಗ್ಗೆ ವಿವರಣೆ ದೊರಕುವಂತಾಗಿತ್ತು. ಅದರ ಫಲವಾಗಿ ಮನೋವಿಜ್ಞಾನಕ್ಕೆ ಒಂದು ಸ್ಪಷ್ಟ ಅರ್ಥ ಬಂತು. ಅಂದಿನಿಂದ ಅದು ಆತ್ಮವಿಜ್ಞಾನದಿಂದ ಬೇರ್ಪಟ್ಟು ಮನೋವಿಜ್ಞಾನವಾಯಿತು. ಪ್ರಯೋಗಗಳನ್ನು ನಡೆಸಿ ಮನಸ್ಸಿನ ವ್ಯಾಪಾರಗಳ ಬಗ್ಗೆ ತತ್ವ ಸಿದ್ಧಾಂತಗಳನ್ನು ರೂಪಿಸುವ ಯತ್ನ ಆರಂಭವಾಯಿತು."[10]

**"ಮನಸ್ಸು"** ಎಂಬ ಪದ ಎಲ್ಲರಿಗೂ ತಿಳಿದಿರುವುದೇ ಆಗಿದೆ. ನಾವು ಪ್ರಪಂಚವನ್ನು ಅರಿತು ಅರ್ಥ ಮಾಡಿಕೊಳ್ಳುವುದು ಮನಸ್ಸಿನಲ್ಲಿ. ನಮ್ಮ ವಿವಿಧ ವರ್ತನೆಗಳಿಗೆ ಆಧಾರವಾಗಿರತಕ್ಕ ಅಂಗವೂ ಮನಸ್ಸೇ. ನಮ್ಮ ಆಲೋಚನೆ, ವಿವೇಚನೆ, ಸಂವೇದನೆ, ಆಸಕ್ತಿ, ನೆನಪು, ಮರೆವು, ದುಃಖದುಮ್ಮಾನ, ಕರುಣೆ, ಅನುಕಂಪ ಇವೆಲ್ಲಕ್ಕೂ ಆಧಾರ ಮನಸ್ಸೇ. ಆದರೆ ಅದು ಎಲ್ಲಿದೆ? ಮೆದುಳಿನಲ್ಲಿದೆಯೇ? ಹಾಗಾದರೆ ನರಮಂಡಲದ ಯಾವುದಾದರೂ ಒಂದು ಭಾಗದಲ್ಲಿದೆಯೇ? ದೇಹದ ವಿವಿಧ ಅಂಗಗಳ ವ್ಯಾಪಾರಗಳು ಮನಸ್ಸಿನೊಡನೆ ಸಂಬಂಧಿಸಿವೆ. ಒಂದನ್ನಗಲಿ ಇನ್ನೊಂದು ತನ್ನ ಕಾರ್ಯ ನಡೆಸುವಂತಿಲ್ಲ. ಹಾಗಾದರೆ ದೇಹ–ನರಮಂಡಲವನ್ನೇ ಮನಸ್ಸು ಆವರಿಸಿದೆಯೇ? ಗೀತೆಯಲ್ಲಿ ಒಂದು ಮಾತು ಹೀಗಿದೆ:–

श्रोत्रं चक्षुः स्पर्शनं च रसनं घ्राणमेव च ।

अधिष्ठाय मनश्चायं विषयानुपसेवते ॥[11]

ಜೀವಾತ್ಮನು ಕಿವಿ, ಕಣ್ಣು, ಚರ್ಮ, ನಾಲಗೆ, ಮೂಗು ಮತ್ತು ಮನಸ್ಸು ಇವುಗಳನ್ನು ಆಶ್ರಯಿಸಿ ವಿಷಯಗಳನ್ನು ಅನುಭವಿಸುತ್ತಾನೆ.

ಮನಸ್ಸಿಗೆ ಎರಡು ಭಾಗಗಳಿರುತ್ತವೆ. ಅವುಗಳೆಂದರೆ– ಬಾಹ್ಯಮನಸ್ಸು ಮತ್ತು ಅಂತರ್ಮನಸ್ಸು. ಮನಸ್ಸಿನ ಎರಡೂ ಭಾಗಗಳ ಕಾರ್ಯ ಬೇರೆ ಬೇರೆಯದಾಗಿರುತ್ತದೆ. ನಾವು ಯಾವ ವಿಚಾರವನ್ನು ಅರಿತು–ಕೊಂಡು ಮಾಡುತ್ತೇವೆಯೋ, ಆ ವಿಚಾರ ಬಾಹ್ಯ ಮನಸ್ಸಿನದಾಗಿರುತ್ತದೆ. ಅಂತರ್ಮನ ಬಾಹ್ಯಮನದ ಪಟ್ಟು ದೊಡ್ಡದು. ನಮ್ಮ ಆಗುಹೋಗುಗಳಲ್ಲಿ ಅಂತರ್ಮನದ ಸಹಭಾಗವು ದೊಡ್ಡದಾಗಿರುತ್ತದೆ. ಮನಸ್ಸಿನ ನೆಲೆಯನ್ನು ಗುರುತಿಸುವುದು ಇಂದಿಗೂ ಸಾಧ್ಯವಾಗಿರುವುದಿಲ್ಲ.ಆದರೆ ಮನಸ್ಸು ನಿರ್ವಹಿಸುವ ವ್ಯಾಪಾರಗಳನ್ನೂ,

---

10. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಪು–17,18.(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4.
11. भगवद्गीता, अध्याय–15, श्लोकः–9.

ಅವುಗಳ ಸ್ವರೂಪವನ್ನೂ ನಾವು ನಿರಂತರ ಅನುಭವಿಸುತ್ತಿದ್ದೇವೆ. ಹಾದಿಯಲ್ಲಿ ಹಸಿವಿನಿಂದ ಬಳಲುತ್ತಿರುವ ಬಡ ವ್ಯಕ್ತಿಯೊಬ್ಬನನ್ನು ಕಂಡಾಗ ಅವನ ಕಷ್ಟಗಳ ಸ್ವರೂಪ ನಮಗೆ ಅರ್ಥವಾಗುತ್ತದೆ. "ಪ್ರಜ್ಞೆ" ತಕ್ಷಣ ಮನಸ್ಸಿನಲ್ಲಿ ಮರುಕ ಹುಟ್ಟಿಸುತ್ತದೆ. ಅದೇ "ರಸಭಾವ" ಆಗ ಏನಾದರೂ ಸಹಾಯ ಮಾಡಬೇಕೆನ್ನಿಸುತ್ತದೆ. ಇದೇ **"ಸಂಕಲ್ಪ"** ಇವು ಮೂರು ಮನೋವ್ಯಾಪಾರದ ಘಟ್ಟಗಳು. ಆದರೆ ನಾವು ಆ ಸ್ಥಿತಿಗಳನ್ನು ಅನುಭವಿಸಬಲ್ಲೆವಷ್ಟೆ. ಕೊನೆಯ ಘಟ್ಟಕ್ಕೆ ಅಂಟಿಕೊಂಡಂತೆ ಮತ್ತೊಂದು ಘಟ್ಟವಿದೆ. ಅದೇ ನಾವು ಆ ವ್ಯಕ್ತಿಗೆ ಮಾಡುವ ಸಹಾಯ. ಇದನ್ನೇ **"ವರ್ತನೆ"** ಎಂದು ಕರೆಯುವುದು. ಇದೊಂದೇ ನಮಗೆ ಕಾಣುವ ವ್ಯಾಪಾರ. ಹೀಗೆ ಮನಸ್ಸಿನ ವ್ಯಾಪಾರವನ್ನು ವಿವರಿಸಲು ಅನೇಕ ದೃಷ್ಟಾಂತಗಳನ್ನು ಕೊಡಬಹುದು.

ಮನೋವ್ಯಾಪಾರಗಳು ಯಾವಾಗಲೂ ಸಮಗ್ರ ಕ್ರಿಯೆಯಾಗಿ ನಡೆಯುತ್ತವೆ.[12] ಒಂದು ಸುಭಾಷಿತ ಹೇಳುತ್ತದೆ:–

अनिच्छंतोऽपि विनयं विद्याभ्यासेन बालकाः ।

भेषजेनेव नैरुज्यं प्रापणीयाः प्रयत्नतः ॥[13]

ಔಷಧವನ್ನು ಕೊಟ್ಟು ಖಾಯಿಲೆಯನ್ನು ಪರಿಹರಿಸುವಂತೆ, ಬಾಲಕರು ಇಚ್ಛಿಸದಿದ್ದರೂ ಅವರಿಗೆ ಪ್ರಯತ್ನಪೂರ್ವಕವಾಗಿ ವಿದ್ಯಾಭ್ಯಾಸವನ್ನು ಮಾಡಿಸಿ ನಯನೀತಿಗಳನ್ನು ಕಲಿಸಿಕೊಡಬೇಕು ಇದೇ ಕಾರ್ಯವನ್ನು ವಿಷ್ಣುಶರ್ಮರು ತಿಳಿಗೇಡಿಗಳಾಗಿದ್ದ ರಾಜಕುಮಾರರನ್ನು ಬಹಳ ಸಮಾಧಾನದಿಂದ ಆಸಕ್ತಿಯನ್ನು ಪ್ರೇರೇಪಿಸಿ ಅವರಿಗೊಪ್ಪುವ ವಿದ್ಯೆಯನ್ನು ಕಲಿಸಿಕೊಟ್ಟರು.

ಅಂತಿಮವಾಗಿ ಕಂಡುಕೊಂಡದ್ದೇನೆಂದರೆ, ಪ್ರಸಿದ್ಧ ಮನೋವಿಜ್ಞಾನಿ **"ವುಡ್ವರ್ಥ್"** ರವರು ಬಹಳ ಸುಂದರವಾಗಿ ಸಂಕ್ಷಿಪ್ತಗೊಳಿಸಿರುವಂತೆ "ಮನೋವಿಜ್ಞಾನವು ಮೊದಲು ಆತ್ಮವನ್ನು ಕಳೆದುಕೊಂಡಿತು, ನಂತರ ಮನಸ್ಸು, ತದನಂತರ ಪ್ರಜ್ಞೆ. ಆದರೆ ಇನ್ನೂ ಉಳಿಸಿಕೊಂಡಿರುವುದೆಂದರೆ ವರ್ತನೆ. ಈ ವರ್ತನೆಯನ್ನು ಪರಿವರ್ತನೆ ಮಾಡುವ ವಿಜ್ಞಾನವೇ ಶೈಕ್ಷಣಿಕ ಮನೋವಿಜ್ಞಾನ. ಅಲ್ಲಿಗೆ ಮನಶ್ಶಾಸ್ತ್ರವನ್ನು ಒಂದು ವಿಜ್ಞಾನ ಎಂದು ಕರೆಯಲಾಗುತ್ತದೆ. ಏಕೆಂದರೆ ಮನೋವಿಜ್ಞಾನವು ವ್ಯಕ್ತಿಗಳ ಮತ್ತು ಗುಂಪಿನ ವರ್ತನೆಯನ್ನು ವಿಶ್ಲೇಷಿಸಲು, ಊಹಿಸಲು ಅಗತ್ಯವಾದ ದತ್ತಾಂಶವನ್ನು ಸಂಗ್ರಹಿಸಲು ವೈಜ್ಞಾನಿಕ ವಿಧಾನವನ್ನು ಬಳಸಿಕೊಳ್ಳುತ್ತದೆ. ಇದು ಕಣ್ಣಿಗೆ ಕಾಣಬಹುದಾದ ವರ್ತನೆಗಳನ್ನು ಗಣನೆಗೆ ತೆಗೆದುಕೊಳ್ಳುತ್ತದೆ. ವಸ್ತುನಿಷ್ಠ ನಿದರ್ಶನ ಅಥವಾ ಸಾಕ್ಷ್ಯಾಧಾರಗಳಿದ್ದಲ್ಲಿ ಮಾತ್ರ ನೈಜ ವರ್ತನೆಯನ್ನು ಸ್ಥಿರಪಡಿಸುತ್ತದೆ. ಮನೋವಿಜ್ಞಾನವು

12. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–2, ಪು–23, 24, 25.(1962)
ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

13. हरिहरविरचितं हरिहरसुभाषितम् , 2–39

ವೈಜ್ಞಾನಿಕವಾಗಿ ವರ್ತನೆಯನ್ನು ಅರ್ಥ ಮಾಡಿಕೊಳ್ಳಲು, ನಿಯಂತ್ರಿಸಲು, ಮತ್ತು ಮುನ್ಸೂಚಿಸಲು ಸಹಾಯ ಮಾಡುತ್ತದೆ. ಮನೋವಿಜ್ಞಾನದಲ್ಲಿ ಮಾನವನ ವರ್ತನೆಯನ್ನು ಅಧ್ಯಯನ ಮಾಡಲು ಮತ್ತು ಸಾಂಪ್ರದಾಯಿಕ ಅಭಿಪ್ರಾಯಗಳನ್ನುಪರೀಕ್ಷಿಸಲು "ವೈಜ್ಞಾನಿಕ ವಿಧಾನಗಳನ್ನು ಬಳಸಲಾಗುತ್ತಿರುವುದರಿಂದ ಮನೋವಿಜ್ಞಾನವು ಒಂದು ವರ್ತನಾ ವಿಜ್ಞಾನವಾಗಿದೆ.ಇದನ್ನು ಪ್ರಭಾವಶಾಲಿಯಾಗಿ ಪ್ರಚುರಪಡಿಸಿದವನು ಅಮೆರಿಕನ್ ಮನೋವಿಜ್ಞಾನಿಯಾದ **J.B.Watson** ಇವನ ಪ್ರಕಾರ ಮನೋವಿಜ್ಞಾನವು ವರ್ತನೆಯ ಅಧ್ಯಯನವಾಗಿದ್ದು, ವರ್ತನೆ ಎಂದರೆ ವಸ್ತು ನಿಷ್ಠವಾಗಿ ವೀಕ್ಷಿಸಬಹುದಾದ ಯಾವುದೇ ಒಂದು ಕ್ರಿಯೆ ಅಥವಾ ಚಟುವಟಿಕೆ"[14] ಎಂದು ವ್ಯಾಖ್ಯಾನಿಸಿರುತ್ತಾನೆ. ಮನೋವಿಜ್ಞಾನಕ್ಕೆ ವೈಜ್ಞಾನಿಕವಾದ ವ್ಯಾಖ್ಯೆ ನೀಡಲು ಹಲವಾರು ಮನೋವಿಜ್ಞಾನಿಗಳು ಪ್ರಯತ್ನಿಸಿದ್ದಾರೆ. ಅವುಗಳಲ್ಲಿ ಕೆಲವು ಹೀಗಿವೆ.[15]

1. "ಪರಿಸರಕ್ಕೆ ಸಂಬಂಧಿಸಿದಂತೆ ವ್ಯಕ್ತಿಯ ಚಟುವಟಿಕೆಗಳ ವೈಜ್ಞಾನಿಕ ಅಧ್ಯಯನವೇ ಮನೋವಿಜ್ಞಾನ" ಎಂದಿದ್ದಾರೆ. **ROBERT S. WOODWORTH and** ಮಾರ್ಕ್ವಿಸ್.

2. "ಜೀವನದಲ್ಲಿ ನಾವು ಎದುರಿಸುವ ಎಲ್ಲಾ ಬಗೆಯ ಸನ್ನಿವೇಶಗಳಿಗೆ ತೋರುವ ಪ್ರತಿಕ್ರಿಯೆಯನ್ನು ಕುರಿತು ಅಭ್ಯಸಿಸುವುದೇ ಮನೋವಿಜ್ಞಾನ"ಎಂದಿದ್ದಾರೆ **CHARLES E SKINNER**

3. "ವರ್ತನೆಯ ವೈಜ್ಞಾನಿಕ ಅಧ್ಯಯನವೇ ಮನೋವಿಜ್ಞಾನ, ಹಾವಭಾವಗಳು, ಮಾತು ಮತ್ತು ದೈಹಿಕ ಬದಲಾವಣೆಗಳು ಇಂತಹ ವೀಕ್ಷಣೀಯ ವರ್ತನಾ ಪ್ರಕ್ರಿಯೆಗಳು ಮತ್ತು ಆಲೋಚನೆಗಳು ಹಾಗೂ ಕನಸುಗಳು ಇಂತಹ ಊಹಿಸಬೇಕಾದ ಪ್ರಕ್ರಿಯೆಗಳನ್ನು ಅದರ ವಿಷಯ ಒಳಗೊಂಡಿದೆ." ಎಂದಿದ್ದಾರೆ. **KENNETH CLARK and GEORGE ARMITAGE MILLER**

ಜೀವಿಗಳ ಎಲ್ಲಾ ಚಟುವಟಿಕೆಗಳು ವರ್ತನೆಯಲ್ಲದೆ ಬೇರೆಯಲ್ಲ. ಅಂದರೆ ವ್ಯಕ್ತಿಯ, ವಯಸ್ಕರ, ಮಗುವಿನ, ಪ್ರಾಣಿಗಳ ಅಥವಾ ಗುಂಪಿನ ವರ್ತನೆಯನ್ನು ಗಮನಿಸುವುದೆಂದು ಒಂದು ವಿಶಾಲ ಅರ್ಥದಲ್ಲಿ ತಿಳಿಸಲಾಗಿದೆ. ವರ್ತನೆಯ ಮಾರ್ಪಾಡೇ ಶಿಕ್ಷಣ. ಶಿಕ್ಷಣವೇಶಕ್ತಿ. ಇಲ್ಲಿವರ್ತನೆ ಅಧ್ಯಯನಕ್ಕೆ–ಮನಶ್ಶಾಸ್ತ್ರವನ್ನು, ಅದೇ ವರ್ತನೆಯನ್ನು ಮಾರ್ಪಾಡು ಮಾಡಲು–ಶಿಕ್ಷಣಶಾಸ್ತ್ರವನ್ನು ಅವಲಂಬಿಸಬೇಕಾಗುತ್ತದೆ. ಇವೆರಡೂ ಅವಿನಾಭಾವ ಸಂಬಂಧ ಹೊಂದಿರುವುದಾಗಿದೆ. ಇದನ್ನೇ ಅನ್ವಯಿಸಿ ಶೈಕ್ಷಣಿಕ ಮನೋವಿಜ್ಞಾನ ಎಂದು

---

**14. ವಾಮದೇವಪ್ಪ ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಪು.2,(2009) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳುಬಡಾವಣೆ, ದಾವಣಗೆರೆ–577005.

**15. ವಾಮದೇವಪ್ಪ ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಪು.3.(2009), ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳುಬಡಾವಣೆ, ದಾವಣಗೆರೆ– 577005.

ಹೇಳುವುದು. ಶೈಕ್ಷಣಿಕ ಮನೋವಿಜ್ಞಾನವು ಅನ್ವಯಿಕ ಮನೋವಿಜ್ಞಾನದ ಒಂದು ಶಾಖೆ. ಮನೋವಿಜ್ಞಾನದ ಜ್ಞಾನವನ್ನು ಶೈಕ್ಷಣಿಕ ಕ್ಷೇತ್ರಕ್ಕೆ ಅನ್ವಯಿಸುವ ಪ್ರಯತ್ನವಾಗಿದೆ. ಇದರೊಳಗೆ ಮನೋವೈಜ್ಞಾನಿಕ ತತ್ವಗಳನ್ನು ಹಾಗೂ ತಂತ್ರಗಳನ್ನು ಶೈಕ್ಷಣಿಕ ಸನ್ನಿವೇಶಗಳಲ್ಲಿ ಮಾನವನ ವರ್ತನೆಗಳಿಗೆ ಅನ್ವಯಿಸಲಾಗುತ್ತದೆ. **"Education is the modification of behavior**." ಕೊಠಾರಿ ಶಿಕ್ಷಣ ಆಯೋಗದ ವರದಿಯಲ್ಲಿ **"The destiny of our nation is being shaped in her classrooms"** ಎಂದು ಪ್ರಾರಂಭಿಕ ವಾಕ್ಯದಲ್ಲಿ ತಿಳಿಸಿರುವ ವಿಚಾರ ಸರ್ವಕಾಲಿಕವಾದುದು. ಅಂದರೆ ಯಾವುದೇ ಒಂದು ರಾಷ್ಟ್ರದ ಭವ್ಯ ಭವಿಷ್ಯತ್ ನಿರ್ಧಾರವಾಗುವುದು ಅಲ್ಲಿನ ವ್ಯವಸ್ಥಿತ ತರಗತಿ ಕೋಣೆಗಳಲ್ಲಿ ."ಎಂದು ಶಿಕ್ಷಣದ ಮಹತ್ವದ ಬಗ್ಗೆ ಸ್ಪಷ್ಟಪಡಿಸಿದೆ. ಸದೃಢಮನಸ್ಸಿನ ಆರೋಗ್ಯವಂತ, ಸಂತೋಷದಾಯಕ, ಉಲ್ಲಾಸದ ಯುವಕರು ಭಾರತದ ಆರ್ಥಿಕಾಭಿವೃದ್ಧಿಗೆ ಬೇಕಾಗಿದ್ದಾರೆ ಎಂದು ಗಾಂಧೀಜಿ ಹೇಳಿದ ಮಾತು ಇಂದಿಗೂ ಎಷ್ಟೊಂದು ಸತ್ಯವೆನಿಸುತ್ತದೆ. ಇಂದು ಶಿಕ್ಷಣದ ರಕ್ಷಣೆ ಮುಖ್ಯವೆನಿಸುತ್ತದೆ. ಹಾಗೆಯೇ ಸ್ವಾಮಿ ವಿವೇಕಾನಂದರು ಹೇಳಿರುವ ಮಾತು ಎಷ್ಟು ಪ್ರಸ್ತುತವಾಗಿದೆ. "ಶಿಕ್ಷಣವೆಂದರೆ, ಕೇವಲ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುವುದು ಅಥವಾ ನೌಕರಿಯನ್ನು ಪಡೆದುಕೊಳ್ಳುವುದಲ್ಲ, ಅದು ಒಂದು ಸ್ಥಿರವಾದ ನೈಜ ಚಾರಿತ್ರ್ಯ ಮತ್ತು ಮಾನವತ್ವ ನಿರ್ಮಿಸುವುದಾಗಿರಬೇಕು" ಇದನ್ನೇ ವಿಷ್ಣುಶರ್ಮರು ಪಂಚತಂತ್ರದ ಮೂಲಕ ಅರಸುಕುಮಾರರ ಸರ್ವತೋಮುಖ ಬೆಳವಣಿಗೆಗೆ ನೀತಿಶಿಕ್ಷಣ, ರಾಜನೀತಿ ಶಿಕ್ಷಣವನ್ನು ವ್ಯವಸ್ಥೆಗೊಳಿಸಿದ್ದಾರೆ. ಉದಾಹರಣೆಗೆ ಒಂದು ಸುಭಾಷಿತದಲ್ಲಿ ಹೇಳಿರುವಂತೆ:–

भये वा यदि वा हर्षे संप्राप्ते यो विमर्षयेत् ।

कृत्यं न कुरुते वेगान्न स संतापमाप्नुयात् ॥[16]

ಭಯವುಂಟಾದಾಗ ಅಥವಾ ಸಂತೋಷವುಂಟಾದಾಗ ಯಾವಾತನು ನಿಧಾನವಾಗಿ ಯೋಚಿಸುತ್ತಾನೆಯೋ, ತಟ್ಟನೆ ಯಾವನು ಕೆಲಸ ಮಾಡುವುದಿಲ್ಲವೋ, ಅವನು ದುಃಖವನ್ನು ಹೊಂದುವುದಿಲ್ಲ ಇದನ್ನೇ ಉತ್ತಮ ಸನ್ನಿವೇಶಗಳನ್ನು ಒದಗಿಸಿ, ಆಕರ್ಷಕ ಕಥೆಗಳನ್ನು ಜೋಡಿಸಿ ಕೊನೆಯ ತಂತ್ರ. "ಅಪರೀಕ್ಷಿತಕಾರಕ"ದಲ್ಲಿ ವಿವರವಾಗಿ ತಿಳಿಸಿದ್ದಾರೆ.

ಈ ಒಂದು ಮಹತ್ವಪೂರ್ಣ ವಿಚಾರವನ್ನಿಟ್ಟುಕೊಂಡು ಭಾರತದ ಘನ ಸರ್ಕಾರವು 2020ರ ನೂತನ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ಜಾರಿಗೆ ತಂದಿರುವುದು ಬಹಳ ಸಂತೋಷದ ವಿಷಯವಾಗಿದೆ. ಇದು ಬಹುವಿಷಯಗಳ ಶಿಕ್ಷಣವನ್ನು ಉತ್ತೇಜಿಸುತ್ತದೆ. ಹಾಗೆಯೇ ನೀತಿಶಿಕ್ಷಣದ

---

16. **ಸುಭಾಷಿತಮಂಜರೀ, ವಿವೇಕ** ಶ್ಲೋ–73, ಪು–281, (2001) ಸುಭಾಷಿತರತ್ನಭಾಂಡಾಗಾರ ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18

ವಿಚಾರದಲ್ಲೂ ಮಹತ್ವವನ್ನು ನೀಡಿದೆ. ಇದು ಮಾನವನ ಸರ್ವತೋಮುಖ ಬೆಳವಣಿಗೆಗೆ ಪ್ರೇರಕ ಹಾಗೂ ಪೂರಕವಾಗಿರುತ್ತದೆ. ಶಿಕ್ಷಣಶಾಸ್ತ್ರವು ವ್ಯಕ್ತಿಯ ಬೆಳವಣಿಗೆಯೊಂದಿಗೆ ಸಂಬಂಧಿಸಿದ ಶಿಕ್ಷಣ ವಿದ್ಯಮಾನಗಳ ಒಂದು ವ್ಯವಸ್ಥೆಯಾಗಿದೆ. ಅದೇ ಮನೋವಿಜ್ಞಾನವು, ಒಬ್ಬ ವ್ಯಕ್ತಿಯನ್ನು, ಅವನ ಮನಸ್ಸನ್ನು ಅಧ್ಯಯನ ಮಾಡುವುದು. ಇಂಥಹ ಒಂದು ಹಿನ್ನೆಲೆಯನ್ನು ಆ ಕಾಲದಲ್ಲೇ ವಿಷ್ಣುಶರ್ಮರು ಪಂಚತಂತ್ರದಲ್ಲಿ ಎಷ್ಟರಮಟ್ಟಿಗೆ ವ್ಯವಸ್ಥೆಗೊಳಿಸಿದ್ದಾರೆಂಬುದು ಇದರ ಅಧ್ಯಯನದಿಂದ ತಿಳಿದುಬರುತ್ತದೆ. ಅವರು ಅಳವಡಿಸಿರುವ ಸೂಕ್ತಿಗಳು, ನೀತಿಪಾಠಗಳು, ಕಥಾಗುಚ್ಛಗಳು ಬದುಕಿನ ಶಿಕ್ಷಣವನ್ನು ಮನೋಜ್ಞವಾಗಿ ಒದಗಿಸುತ್ತವೆ. ಉತ್ತಮ ಗುಣಗಳು, ವರ್ತನೆಗಳು ಹೇಗೆ ವ್ಯಕ್ತಿತ್ವವಿಕಸನದಲ್ಲಿ ಎಂತಹ ಪಾತ್ರ ವಹಿಸುತ್ತವೆ ಹಾಗೂ ದುರ್ವರ್ತನೆಗಳು ಹೇಗೆ ವ್ಯಕ್ತಿತ್ವವನ್ನು ನಾಶಗೊಳಿಸುತ್ತವೆ ಎಂಬುದರ ಬಗ್ಗೆ ವಿಶೇಷ ಜಾಗೃತಿಯನ್ನು ಹಾಗೂ ಎಚ್ಚರಿಕೆಯನ್ನು ಒದಗಿಸಿ ನೀತಿಬೋಧಕವಾಗಿದೆ. ಉದಾಹರಣೆಗೆ ಒಗ್ಗಟ್ಟಿನಲ್ಲಿ ಬಲವಿದೆ ಎಂಬುದನ್ನು ಎಂಥಹ ಸರಳವಾಗಿ ಅರ್ಥೈಸಲಾಗಿದೆ.

बहूनामप्यसाराणां समवायो हि दुर्जयः ।

तृणैरावेष्यते रज्जुर्यया नागोऽपि बद्धयते ॥[17]

ಅಂದರೆ ಕಡಿಮೆ ಶಕ್ತಿಯುಳ್ಳ ಅನೇಕ ವಸ್ತುಗಳು ಒಂದುಗೂಡಿದಾಗ ಅದನ್ನು ಗೆಲ್ಲುವುದು ಅಶಕ್ಯವಾಗುತ್ತದೆ. ಹುಲ್ಲುಗಳಿಂದ ಹೊಸೆಯಲ್ಪಟ್ಟ ಹಗ್ಗದಿಂದ ಆನೆಯೂ ಕೂಡ ಕಟ್ಟಲ್ಪಡುತ್ತದೆ.



17. **ಸುಧಾಕರ್ ಮಾಲವೀಯ,** ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿ ತಂಪಂಚತಂತ್ರಮ್, ಮಿತ್ರಭೇದಃ– ಶ್ಲೋ–361, ಪು–232, (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

# ಅಧ್ಯಾಯ–2–2. ಶೈಕ್ಷಣಿಕ ಮನೋವಿಜ್ಞಾನ–ಅನ್ವಯಿಕವಿಜ್ಞಾನ–ಅರ್ಥ–ವ್ಯಾಖ್ಯೆ–ಪ್ರಾಮುಖ್ಯತೆ

ಶೈಕ್ಷಣಿಕ ಮನೋವಿಜ್ಞಾನ ಎಂಬ ಶಬ್ದ **"ಶಿಕ್ಷಣ"** ಮತ್ತು **"ಮನೋವಿಜ್ಞಾನ"** ಎಂಬ ಎರಡು ಶಬ್ದಗಳಿಂದ ಕೂಡಿದೆ. ಶಿಕ್ಷಣದ ಗುರಿ ವ್ಯಕ್ತಿಯ ಸರ್ವಾಂಗೀಣ ವಿಕಾಸವನ್ನು ಹೊಂದುವುದಾಗಿದೆ. ಶಿಕ್ಷಣವು ಕಲಿಯುವಿಕೆ ಕುರಿತದ್ದಾಗಿದೆ. ಕಲಿಯುವ ವ್ಯಕ್ತಿ, ವಿಧಾನ ಮತ್ತು ಕಲಿಯಲು ಬೇಕಾಗುವ ಸನ್ನಿವೇಶಗಳು ಶಿಕ್ಷಣ ಕ್ಷೇತ್ರದ ಆಧಾರ ಸ್ಥಂಭಗಳು. ಈ ಎಲ್ಲವುಗಳನ್ನೂ ಶೋಧಿಸಿ, ವಿಶ್ಲೇಷಿಸಿ ವಿವರಿಸುವ ಕೆಲಸ ಮನೋವಿಜ್ಞಾನದ್ದಾಗಿದೆ.

**ಮಹಾತ್ಮ ಗಾಂಧೀಜಿ ಮತ್ತು ಥಾಮಸ್ ಆಲ್ವ ಎಡಿಸನ್**

ಕಲಿಯುವಿಕೆ ಪರಿಣಾಮಕಾರಿಯಾಗಿ ಸಾಗಬೇಕಾದರೆ ಬೋಧಿಸುವಿಕೆ ಮನೋವೈಜ್ಞಾನಿಕ ತತ್ವಗಳಿಗೆ ಅನುಗುಣವಾಗಿ ಸಾಗಬೇಕು. ಮನೋವಿಜ್ಞಾನವು ಏನು? ಏಕೆ? ಮತ್ತು ಹೇಗೆ? ಎಂಬ ಮೂರು ಮೂಲಭೂತ ಪ್ರಶ್ನೆಗಳಿಗೆ ತೃಪ್ತಿಕರವಾದ ಉತ್ತರವನ್ನು ಕಂಡುಕೊಳ್ಳಲು ಪರಿಶ್ರಮಿಸುವುದು. ಕಲಿಯುವಿಕೆ ಮತ್ತು ಕಲಿಸುವಿಕೆಯಲ್ಲಿ ಈ ಪ್ರಶ್ನೆಗಳು ಬಹಳ ಮುಖ್ಯವಾಗುವುದು. ಶಿಕ್ಷಕನು ಏನನ್ನು ಬೋಧಿಸಬೇಕು? ಏಕೆ ಬೋಧಿಸಬೇಕು? ಹೇಗೆ ಬೋಧಿಸಬೇಕು? ಮತ್ತು ಯಾವಾಗ ಬೋಧಿಸಬೇಕು? ಎಂಬುದೆಲ್ಲವನ್ನೂ ಕರಾರುವಾಕ್ಕಾಗಿ ವಿಶ್ಲೇಷಣೆಗೈದು ಶಿಕ್ಷಣವನ್ನು ನೀಡಬೇಕು. ಅದೇ ರೀತಿಯಲ್ಲಿ ವಿದ್ಯಾರ್ಥಿಯು ಏನು ಕಲಿಯಬೇಕು? ಏಕೆ ಕಲಿಯಬೇಕು? ಮತ್ತು ಹೇಗೆ ಕಲಿಯಬೇಕು? ಎಂಬುದನ್ನೆಲ್ಲಾ ಗಮನದಲ್ಲಿಟ್ಟುಕೊಂಡು ಕಲಿಯಬೇಕು. ಈ ಒಂದು ವೈಜ್ಞಾನಿಕ ಜ್ಞಾನವನ್ನು ಒದಗಿಸಿಕೊಡುವುದೇ ಶೈಕ್ಷಣಿಕ ಮನೋವಿಜ್ಞಾನ.[18] ಆಧ್ಯಾತ್ಮಿಕ ಚಿಂತನೆಯಿಂದ ವಿಚಾರಮಾಡಿದರೆ, ನಿಜವಾಗಿಯೂ ಭಗವದ್ಗೀತೆಗಿಂತ ಮತ್ತೊಂದು ಮನೋವೈಜ್ಞಾನಿಕ ಗ್ರಂಥ ಮತ್ತೊಂದಿಲ್ಲವೆನಿಸುತ್ತದೆ. ಭಾಗವತದಲ್ಲಿ ಮನಸ್ಸಿನ ಮಹತ್ವವನ್ನು ಕುರಿತು ಒಂದು ಸೊಗಸಾದ ಶ್ಲೋಕವಿದೆ:–

यदृच्छयोपपन्नेन संतुष्टो वर्तते सुखम् ।

नासंतुष्टस्त्रिभिर्लोकैरजितात्मोपसादितैः ॥[19]

---

18. **ಶೈಕ್ಷಣಿಕ ಮನೋವಿಜ್ಞಾನದ ಅರ್ಥ,** https://m.facebook.com
19. **ಸುಭಾಷಿತಮಂಜರೀ**–ಸಂಸಾರ–ಶ್ಲೋ–54, ಪು–26, ಭಾಗವತ 8–19–24, ಕ.ಸಾ.ಪ.(2001), ಚಾಮರಾಜಪೇಟೆ, ಬೆಂಗಳೂರು–18

ಅಂದರೆ ಅಕಸ್ಮಾತ್ತಾಗಿ ಬಂದ ಹಣದಿಂದ ತೃಪ್ತಿಹೊಂದಿದವನು ಸುಖವಾಗಿರುತ್ತಾನೆ. ಆದರೆ ಮನಸ್ಸನ್ನು ಗೆಲ್ಲದವನು ಮೂರು ಲೋಕಗಳು ತನ್ನವಾದರೂ ಅತೃಪ್ತನಾಗಿ ಸುಖಿಯಾಗಲಾರನು.

ಈ ಸಂದರ್ಭದಲ್ಲಿ ಶಿಕ್ಷಣ ಎಂಬ ಪದದ ಅರ್ಥ ಮತ್ತು ವ್ಯಾಖ್ಯೆಯ ಬಗ್ಗೆ ಸ್ವಲ್ಪ ತಿಳಿಯುವುದು ಸೂಕ್ತವೆಂದು ತೋರುತ್ತದೆ. ಶಿಕ್ಷಣ ಎಂಬ ಪದವು **"Educare", "Educe"** ಎಂಬ ಲ್ಯಾಟಿನ್ ಪದದಿಂದ ಬಂದಿದೆ, ಇದರ ಅರ್ಥ ಒಳ್ಳೆಯ ಗುಣವನ್ನು "ಹೊರತೆಗೆ" ಅಥವಾ "ಬೆಳೆಸು" ಎಂಬುದಾಗಿದೆ. ವ್ಯಕ್ತಿಯಲ್ಲಿ ಒಳ್ಳೆಯ ಗುಣವನ್ನು ಬೆಳೆಸುವುದೇ ಶಿಕ್ಷಣ ಎಂದಿದ್ದಾರೆ, ಶಿಕ್ಷಣದ ಬಗ್ಗೆ ಅನೇಕ ಶಿಕ್ಷಣ ತಜ್ಞರುಗಳು, ಧರ್ಮಗುರುಗಳು, ತತ್ವಜ್ಞಾನಿಗಳು ತಮ್ಮದೇ ಆದ ವ್ಯಾಖ್ಯಾನವನ್ನು ನೀಡಿರುವರು.ಮುಖ್ಯವಾಗಿ ಕೆಲವನ್ನು ಮಾತ್ರ ಉಲ್ಲೇಖಿಸುವುದಾದರೆ:-[20]

1. "ಪೀಳಿಗೆಯಿಂದ ಪೀಳಿಗೆಗೆ ಆಗುವ ಜ್ಞಾನದ ವರ್ಗಾವಣೆಯೇ ಶಿಕ್ಷಣ" ಎಂದಿದ್ದಾರೆ

   **CROW LASTER AND CROW ALICE**

2. "ಪ್ರತಿ ವ್ಯಕ್ತಿಯೂ ಪರಿಪೂರ್ಣನಾಗಿ ಬೆಳೆಯುವಂತೆ ಯೋಗ್ಯ ಪರಿಸರವನ್ನು ನಿರ್ಮಿಸುವುದೇ ಶಿಕ್ಷಣ"

   ಎನ್ನುತ್ತಾರೆ **T.P .NUNN**

3. "ಬದಲಾಗುತ್ತಿರುವ ಸಮಾಜದ ವಾತಾವರಣಕ್ಕೆ ಹೊಂದಿಕೊಂಡು ಹೋಗುವಂತೆ ಮಾಡುವುದೇ ಶಿಕ್ಷಣ"

   **BANERJEE**

4. "ಜೀವನದಲ್ಲಿ ನಡೆಯುವ ಎಲ್ಲಾ ಘಟನೆಗಳ ಪುನರ್ ಪರಿಶೀಲನೆಯೇ ಶಿಕ್ಷಣ."ಎಂದಿದ್ದಾರೆ

   **JOHN DEWEY**

5. "ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ, ಭಾವನಾತ್ಮಕವಾಗಿ ಮತ್ತು ನೈತಿಕವಾಗಿ ಸಮರ್ಥರನ್ನಾಗಿಸುವುದೇ ಶಿಕ್ಷಣ"ಎಂದಿದ್ದಾರೆ (**"By Education I mean an all-round drawing out of the best in the child and man - - body, mind and spirit."**) ಮಹಾತ್ಮ ಗಾಂಧೀಜಿ.

6. **"Education is the manifestation of perfection which is already in man."** "ಈಗಾಗಲೇ ಮಾನವನಲ್ಲಿ ಅಡಗಿರುವ ಸುಪ್ತ ಚೇತನವನ್ನು ಅಭಿವ್ಯಕ್ತಿಗೊಳಿಸುವುದೇ ಶಿಕ್ಷಣ." ಎಂದು ವೀರ ಸಂನ್ಯಾಸಿ ಸ್ವಾಮಿ ವಿವೇಕಾನಂದರು ಹೇಳಿದ್ದಾರೆ.

---

20. **ಶಿಕ್ಷಣ-ವಿಕಾಸ್ ಪೀಡಿಯಾ,** https://kn.vikaspedia.in

7. “ಮಗುವು ಮಾನವನಾಗಿ, ನಾಗರಿಕನಾಗಿ, ಎಲ್ಲರೊಡನೆ ಸ್ನೇಹ, ಘನತೆ ಮತ್ತು ಗೌರವದಿಂದ ವರ್ತಿಸುವಂತೆ ಮಾಡುವುದೇ ಶಿಕ್ಷಣ”ಎಂದಿದ್ದಾರೆ. ಡಾ.ರಾಧಾಕೃಷ್ಣನ್.

8. **“Education is life and;life is education.”Hence it follows by that,”Whatever that broadens our mental horizon, deepens our insight, refines our reactions, stimulates our thoughts and feelings”-educates us. rightly said by Lodge.**

9. **“Education does not mean teaching people what they do not know. It means teaching them-to behave as they do not behave.”. RUSKIN**

10. **“Education is a process of dispelling error and discovering truth.” SOCRATES (469-399 B.C)**

11. **“Education is a process of attaining happiness through politics, Ethics and Metaphysics”. ARISTOTLE (384-322 B.C)**

12. **“Education consists of giving body and soul,all the perfection of which it is susceptible.” PLATO (429-384 B.C.)**

13. **“Education is that which fits the individual for the effective Service of the church, State, duties of home and occupation.”. MARTIN LUTHER (1483-1546 A.D.)**

14. **“Education means a natural, progressive and systematic development of all the powers of man.”. PESTALOZZI (1784-1827)**

15. **The Chief aim of education is that which does not merely give us information but makes out life,in harmony with all existence. “RABINDRANATH TAGORE(1861-1941 A.D.**

**16. I call,therefore,a complete and generous education that which fits man to perform justly, skilfully and magnanimously, all the offices both private and public, of peace and war.". JOHN MILTON (1603-1674 A.D.)**

**From a close analysis of these definitions of education certain common features can be enumerated as follows:-**

**a. Education is a biological as well as sociological necessity for human beings.**

**b. Education is what happens to a human being from his birth to death.(some go even to the extent of including prenatal period)**

**c. Education is a process or an activity deliberately employed by the adult members of a society to modify and shape the behaviour of young ones in the society.**

**d.?.Education is an art of training.**

**e. Education is an integrated, continuous reorganisation of human activities and experiences."**

**f. Education is a tri-polar process operating between the teacher and the taught; taught and the content (subject matter) and teacher and the subject matter in a social environment.**

**g. Education is a process which attempts at an all round development of the child.**

**h. Education has something to do with learning.It is not a simple process but a complex one. It is being influenced by many interrelated factors.**

ಶಿಕ್ಷಣಕ್ಕೊಂದು ವೃತ್ತಿವಿಜ್ಞಾನ ಬೇಕು. ಯಾವ ವೃತ್ತಿಯೇ ಆಗಲಿ ತನ್ನದೇ ಆದ ಆದರ್ಶಗಳನ್ನೂ, ಮೌಲ್ಯಗಳನ್ನೂ ಪಡೆದಿರುವುದು ಮುಖ್ಯ. ತನ್ನದೇ ಆದ ಅನುಸರಣೆ ಕ್ರಮಗಳನ್ನು ರೂಢಿಸಿಕೊಂಡಿರಬೇಕು.

ಆಗ ಮಾತ್ರ ಅದು ವ್ಯವಸ್ಥಿತ ವೃತ್ತಿಯಾಗಿ ಬೆಳೆದು ವೃದ್ಧಿಯಾಗುತ್ತದೆ. ಈ ವಿಚಾರ ಶಿಕ್ಷಣ ವೃತ್ತಿಗೂ ಅನ್ವಯಿಸುತ್ತದೆ. ಅದು ತನ್ನ ಕಾರ್ಯಕ್ಷೇತ್ರದ ಗುರಿಯನ್ನು ಕಂಡುಕೊಳ್ಳಲು ಜೀವನ ತತ್ವವನ್ನೂ, ಸಮಾಜ ಶಾಸ್ತ್ರವನ್ನೂ ಆಧಾರಮಾಡಿಕೊಂಡಿದೆ. ಈ ಗುರಿಯನ್ನು ಸಾಧಿಸಲು ನೆರವಾಗುವ ಪಠ್ಯವಸ್ತು, ಬೋಧನಾ ಉಪಕರಣಗಳು, ಬೋಧನಾ ಮಾದರಿ, ಶಾಲೆಯ ಕಾರ್ಯಕ್ರಮ, ಆಡಳಿತವ್ಯವಸ್ಥೆ ಇತ್ಯಾದಿಗಳನ್ನು ರಚಿಸಿಕೊಳ್ಳಲು ಬಹುಮಟ್ಟಿಗೆ ಮನೋವಿಜ್ಞಾನವನ್ನು ಅವಲಂಬಿಸಿದೆ. ಇದರಿಂದ ವೃತ್ತಿಯ ಶಾಸ್ತ್ರೀಯ ಸ್ವರೂಪ ಸಮೃದ್ಧಗೊಳ್ಳುತ್ತದೆ.[21]

ಹೀಗೆ ಶಿಕ್ಷಣದ ಬಗ್ಗೆ ಹಲವಾರು ಶಿಕ್ಷಣ ತಜ್ಞರು, ದಾರ್ಶನಿಕರು, ಧರ್ಮಗುರುಗಳು, ತತ್ವ ಜ್ಞಾನಿಗಳು ತಮ್ಮದೇ ಆದ ವ್ಯಾಖ್ಯಾನಗಳನ್ನು ನೀಡಿರುವರು. ಒಟ್ಟಿನಲ್ಲಿ ಕ್ರೋಢೀಕರಿಸಿ ಪರಿಶೀಲಿಸಿದಾಗ ಎಲ್ಲವೂ ಒಂದೇ ಗುರಿಯೆಡೆಗೆ ತಲುಪುತ್ತವೆ.

आकाशात् पतितं तोयं यथा गच्छति सागरम् ।

सर्वदेव नमस्कारः केशवं प्रतिगच्छति ॥[22]

ಆಕಾಶದಿಂದ ಬಿದ್ದ ಪ್ರತಿ ಮಳೆಹನಿಯೂ ಹೇಗೆ ಸಾಗರವನ್ನು ಸೇರುತ್ತದೆಯೋ, ಹಾಗೆ ಎಲ್ಲಾ ದೇವರುಗಳಿಗೆ ಸಲ್ಲಿಸಿದ ನಾಮಸ್ಮರಣೆಯು ಕೇಶವನಿಗೆ ಹೋಗಿ ಸೇರುತ್ತದೆ. ಹೀಗೆಯೇ ಶಿಕ್ಷಣಕ್ಕೆ ನೀಡಿರುವ ವ್ಯಾಖ್ಯೆಗಳೆಲ್ಲವೂ ಒಂದೇ ಅರ್ಥದೆಡೆಗೆ ತಲುಪುತ್ತವೆ. ಎಂದಿನಿಂದಲೂ ಶಿಕ್ಷಣ ಕ್ಷೇತ್ರದಲ್ಲಿ ಕಲಿಕೆ ಮತ್ತು ಕಲಿಸುವಿಕೆಯಲ್ಲಿ ಮನೋವಿಜ್ಞಾನ ಉದಯವಾಯಿತು. ಶೈಕ್ಷಣಿಕ ಮನೋವಿಜ್ಞಾನದ ಮೂಲ ಉದ್ದೇಶ ವೈಜ್ಞಾನಿಕವಾಗಿ ಶಿಕ್ಷಣ ರಂಗಕ್ಕೆ ಮನೋವೈಜ್ಞಾನಿಕ ಸೂತ್ರಗಳನ್ನು ಅಳವಡಿಸುವುದರ ಮೂಲಕ ಕಲಿಯುವ ವ್ಯಕ್ತಿಗೂ, ಕಲಿಸುವ ಶಿಕ್ಷಕನಿಗೂ ಅವರವರ ಕಾರ್ಯ ನಿರ್ವಹಣೆಯಲ್ಲಿ ಸಹಾಯ ಮಾಡುವುದಾಗಿದೆ.

ಶಿಕ್ಷಣದ ಪ್ರಮುಖ ಪ್ರಕ್ರಿಯೆಯು ಕಲಿಕೆಯ ಸಾಮಾನ್ಯ ನಿಯಮಗಳಾದ ಸಾದೃಶ್ಯ-ವೈದೃಶ್ಯ ಮತ್ತು ಸಾಮೀಪ್ಯ ಕುರಿತಾದ ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲ್ನ ವಿಚಾರಧಾರೆ ಶೈಕ್ಷಣಿಕ ಮನೋವಿಜ್ಞಾನದ ಬೆಳವಣಿಗೆಗೆ ನಾಂದಿಯಾಯಿತು. ಮಗುವಿನ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಆತನ ಕುಟುಂಬದ ಪಾತ್ರವನ್ನು ಒತ್ತಿ ಹೇಳಿದವನು ಗ್ರೀಕ್ ತತ್ವ ಜ್ಞಾನಿ **DEMOCRITUS.** ಮಾನವನ ಬೆಳವಣಿಗೆಯ ತತ್ವಗಳ ಮೇಲೆ ಶಿಕ್ಷಣವನ್ನಾಧರಿಸಲು ಪ್ರಯತ್ನಿಸಿದವನು ಶಿಕ್ಷಣತಜ್ಞ, ತತಜ್ಞಾನಿ ತನ್ನ ಪ್ರಸಿದ್ಧವಾದ ಗ್ರಂಥ "ಎಮಿಲ"ಯಲ್ಲಿ

---

21. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-1, ಪು-10, ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4 (.1962).
22. **ಸಂಧ್ಯಾವಂದನೆ ಮಂತ್ರಗಳು,** ಸಂಧ್ಯೋಪಸ್ಥಾನ ಶ್ಲೋಕ.

ಶಿಕ್ಷಣ ನೀತಿ ಯೋಜನೆಯನ್ನು ವಿವರಿಸಿದ್ದಾನೆ. **"JOHN LOCKE"-English Philosopher and Physician, Father of Liberalism,** 'ಇಂದ್ರಿಯಾನುಭವ' ವಾದದ ಪ್ರತಿಪಾದಕನಾಗಿದ್ದು, ನವಜಾತ ಶಿಶುವಿನ ಮನಸ್ಸು ಕಾಯಸಿದ್ಧತೆಗೆ ಅಣಿಯಾಗಿರುವುದಿಲ್ಲವೆಂದು ಹೇಳುತ್ತಾನೆ. ಆದರೆ ಅವನ ಪ್ರಜ್ಞೆಯ ಮೂಲಕ ಬಾಹ್ಯ ಪ್ರಪಂಚದಿಂದ ಸಂವೇದನಾಶೀಲತೆಯ ಸಂಸ್ಕಾರ ಪಡೆಯುವ ಸಾಮರ್ಥ್ಯವನ್ನು ಹೊಂದಿರುತ್ತಾನೆಂದು ಪ್ರತಿಪಾದಿಸಿದ್ದಾನೆ.ಇವನ ಬರವಣಿಗೆಗಳಿಂದ ಪ್ರಭಾವಿತರಾಗಿದ್ದವರುಗಿ **OLTAIRE** ಮತ್ತು **JEAN-JACQES ROUSSEAU** ಹಾಗೂ ಹಲವಾರು **Scottish Enlightenment Thinkers.** ಮತ್ತೊಬ್ಬ ಶಿಕ್ಷಣ ತಜ್ಞ **"JOHANN HEINRICH PESTALOZZI" the Philanthropic Educator Of Zurich**,ಪರಿಣಾಮಕಾರಿ ಬೋಧನೆಗೆ ಕಲಿಯುವ ಮಕ್ಕಳ ಶಾರೀರಿಕ ಮತ್ತು ಮಾನಸಿಕ ಸಿದ್ಧತೆಗಳ ಅರಿವು ಅವಶ್ಯಕವೆಂದು ಪ್ರತಿಪಾದಿಸಿದ್ದಾನೆ **JOHANN FRIEDRICH HERBART(1776-1841)-** ಇವನನ್ನೇ ಅನುಸರಿಸಿ ಶಿಕ್ಷಣದ ತತ್ವಸಿದ್ಧಾಂತಗಳಿಗೂ ಮನೋವಿಜ್ಞಾನವೇ ತಳಹದಿ ಆಗಬೇಕೆಂದು ಪ್ರತಿಪಾದಿಸಿದ್ದಾನೆ. ಪೆಸ್ಟಾಲೊಜಿಯ ಹಾಗೆಯೇ ಜಾನ್ ಹರ್ಬಾರ್ಟನು ಸಹಶಿಕ್ಷಕರ ತರಬೇತಿ ಶಾಲೆಯನ್ನು ತೆರೆದು, ಮೊಟ್ಟಮೊದಲ ಬಾರಿಗೆ ಶಿಕ್ಷಣದಲ್ಲಿ ಬೋಧನೆಯ ಪಂಚಸೋಪಾನಗಳನ್ನು ರಚಿಸಿದನು.[23]

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದರೆ ಶೈಕ್ಷಣಿಕ ಮನೋವಿಜ್ಞಾನ "ಶಿಕ್ಷಣ" ಹಾಗೂ "ಮನೋವಿಜ್ಞಾನ" ಕ್ಷೇತ್ರಗಳ ಸಂಗಮವಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಶೈಕ್ಷಣಿಕ ಮನೋವಿಜ್ಞಾನದ ಪ್ರಮುಖ ಕಾರ್ಯವೆಂದರೆ ಶೈಕ್ಷಣಿಕ ಪ್ರಕ್ರಿಯೆಯ ತಾತ್ವಿಕ ಮತ್ತು ಕ್ರಿಯಾತ್ಮಕ ಸ್ವರೂಪವನ್ನು ಅರ್ಥ ಮಾಡಿಕೊಳ್ಳಲು ಶಿಕ್ಷಕರು ಮತ್ತು ಶಿಕ್ಷಣ ಪ್ರಕ್ರಿಯೆಯಲ್ಲಿ ತೊಡಗಿರುವವರಿಗೆ ನೆರವು ನೀಡುವುದಾಗಿದೆ. ಮನೋವಿಜ್ಞಾನವು ಪ್ರಾರಂಭದಲ್ಲಿ ತತ್ವಶಾಸ್ತ್ರದ ಒಂದು ಶಾಖೆಯಾಗಿತ್ತು. ಕಳೆದ ಶತಮಾನದಲ್ಲಿ ಶಿಕ್ಷಣವೇತ್ತರು ಶೈಕ್ಷಣಿಕ ಮನೋವಿಜ್ಞಾನವನ್ನು ಮನೋವಿಜ್ಞಾನದ ಒಂದು ಪ್ರತ್ಯೇಕ ಶಾಖೆಯನ್ನಾಗಿ ರೂಪಿಸಿ ಬೆಳೆಸುವ ಅಗತ್ಯವನ್ನು ಮನಗಂಡರು.**HERMANN EBBINGHAUS- German Psychologist, EDWARD THORNDIKE - American Psychologist** ಮುಂತಾದವರು ನಡೆಸಿದ ಕಲಿಕೆಗೆ ಸಂಬಂಧಿಸಿದ ಕೆಲವು ಪ್ರಯೋಗಗಳಿಂದ ಈ ಜ್ಞಾನದ ಅಡಿಪಾಯವನ್ನು ಹಾಕಿದವರೆನ್ನಬಹುದು.[24] ಶಿಕ್ಷಣಕ್ಕೆ ಸಂಬಂಧಪಟ್ಟ ಅನೇಕ ಸಮಸ್ಯೆಗಳನ್ನು ಆ ಜ್ಞಾನದ ಸಹಾಯದಿಂದ ಬಿಡಿಸುವ ಪ್ರಯತ್ನ ನಿರಂತರವಾಗಿ ನಡೆದು ಬಂದಿದೆ.

---

23. **ಶೈಕ್ಷಣಿಕಮನೋವಿಜ್ಞಾನ** –ವಿಕಿಪೀಡಿಯ https://in.mwikipedia.org ಐತಿಹಾಸಿಕ ಹಿನ್ನೆಲೆ.
24. **ವೀರಪ್ಪ. ಎನ್.ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–2, ಪು–20,(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

## 2 – 3. ಶಿಕ್ಷಣದಲ್ಲಿ ಮನೋವಿಜ್ಞಾನದ ಮಹತ್ವ

ಇಂದಿನ ದಿನಗಳಲ್ಲಿ ಶೈಕ್ಷಣಿಕ ಮನೋವಿಜ್ಞಾನವು ಶಿಕ್ಷಣ ಕ್ಷೇತ್ರದಲ್ಲಿ ಅಪಾರವಾದ ಪ್ರಭಾವವನ್ನು ಬೀರುತ್ತಲಿದೆ. ಕಲಿಕೆ ಮತ್ತು ಬೋಧನೆಗಳಲ್ಲಿ ಇದರ ಪಾತ್ರ "ಮನೋವಿಜ್ಞಾನದ ಪ್ರಭಾವವಿಲ್ಲದ ಶಿಕ್ಷಣವೇ ಇಲ್ಲ" ಎನ್ನುವಷ್ಟರಮಟ್ಟಿಗಿದೆ. ಶೈಕ್ಷಣಿಕ ಮನೋವಿಜ್ಞಾನದ ಪ್ರಧಾನ ಗುರಿಯು ಶಿಕ್ಷಕ ತನ್ನ ವೃತ್ತಿಯ ಬೇಡಿಕೆಗಳನ್ನು ಯಶಸ್ವಿಯಾಗಿ ಪೂರೈಸಲು ಅಗತ್ಯವಾದ ತತ್ವಗಳು ಮತ್ತು ಸಾರ್ವತ್ರೀಕರಣಗಳನ್ನು ವ್ಯವಸ್ಥಿತ ರೂಪದಲ್ಲಿ ಒದಗಿಸುವುದಾಗಿದೆ. ಶೈಕ್ಷಣಿಕ ಮನೋವಿಜ್ಞಾನವೆಂದರೆ ಉತ್ತಮವಾದ ಶೈಕ್ಷಣಿಕ ಸನ್ನಿವೇಶಗಳನ್ನೊದಗಿಸಿ ವ್ಯಕ್ತಿ ವಿಕಾಸದ ಕ್ರಮಬದ್ಧ ಅಧ್ಯಯನ ನಡೆಸುವುದಾಗಿದೆ. ಇದು ಒಬ್ಬ ವ್ಯಕ್ತಿಯನ್ನು ಅರ್ಥಾತ್ ವಿದ್ಯಾರ್ಥಿಯನ್ನು ಜವಾಬ್ದಾರಿಯುತ ನಾಗರಿಕ, ಉತ್ಪಾದನಾತ್ಮಕ ಹಾಗೂ ಸೃಜನಶೀಲ ವ್ಯಕ್ತಿಯನ್ನಾಗಿ ಮಾಡುವ ಮೂಲಕ ಅವನಲ್ಲಿ ಸರ್ವತೋಮುಖ ಅಭಿವೃದ್ಧಿಯನ್ನು ಉಂಟುಮಾಡುವಲ್ಲಿ ಶಿಕ್ಷಕನಿಗೆ ಅಥವಾ ಮಾರ್ಗದರ್ಶಕನಿಗೆ ಸಹಾಯ ಮಾಡುವುದಾಗಿರುತ್ತದೆ.

ವ್ಯಕ್ತಿ ಹಾಗೂ ಸಮಾಜದ ಹಿತ ಅಗತ್ಯಗಳಿಗೊಪ್ಪುವಂತೆ ಸೂಕ್ತ ಸನ್ನಿವೇಶ ರಚನೆಯಿಂದ ಮೂಲ ಸ್ವಭಾವವನ್ನು ಮಾರ್ಪಡಿಸುವುದೇ ಶಿಕ್ಷಣ ಎಂದು **JOHN B.WATSON-(American Psychologist)** ವಿವರಿಸಿ, ಶಿಕ್ಷಣಕ್ಕೊಂದು ನೂತನ ಅರ್ಥವನ್ನು ಕಲ್ಪಿಸಿದ್ದಾನೆ. ಜೊತೆಗೆ ಮನೋವಿಜ್ಞಾನವನ್ನು "ವರ್ತನೆಯ ಜ್ಞಾನ" ಎಂದು ತೋರಿಸಿಕೊಟ್ಟಿದ್ದಾನೆ. ಹಾಗೆಯೇ "ಮಾನವನ ವರ್ತನೆ ಹಾಗೂ ಮಾನವನ ಅಂತರ ಸಂಬಂಧಗಳ ಅಧ್ಯಯನವೇ ಮನೋವಿಜ್ಞಾನ" ಎಂದು **CROW AND CROW** ವ್ಯಾಖ್ಯಾನಿಸಿರುತ್ತಾರೆ.[25]

ಹುಟ್ಟಿನಿಂದ ಪ್ರೌಢಾವಸ್ಥೆಯವರೆಗಿನ ವ್ಯಕ್ತಿಯ ವಿಕಾಸದ ವಿವಿಧ ಹಂತಗಳನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಶಾಸ್ತ್ರವೇ ಶೈಕ್ಷಣಿಕ ಮನೋವಿಜ್ಞಾನ ಎಂದು ಜಡ್‌ರವರು ಹೇಳಿರುತ್ತಾರೆ. ಅದೇ ರೀತಿಯಲ್ಲಿ ಪೀಲ್‌ರವರು ಒಂದು ಸರಳ ವ್ಯಾಖ್ಯೆಯನ್ನು ನೀಡಿರುತ್ತಾರೆ. ಅದೇನೆಂದರೆ, "ಶೈಕ್ಷಣಿಕ ಮನೋವಿಜ್ಞಾನವು ಶಿಕ್ಷಣವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಶಾಸ್ತ್ರವಾಗಿದೆ."

ಮತ್ತೊಂದು ವ್ಯಾಖ್ಯೆಯನ್ನು ಎನ್. ಎಸ್. ವೀರಪ್ಪ ಇವರು ನೀಡುತ್ತಾ, "ಶಿಕ್ಷಣದಲ್ಲಿ ಮಾನವ ಸ್ವಭಾವ ವಹಿಸುವ ಪಾತ್ರವನ್ನು ಕುರಿತ ಜ್ಞಾನವೇ ಶೈಕ್ಷಣಿಕ ಮನೋವಿಜ್ಞಾನ, ಎಂದರೆ ಅದು ಕಲಿವು ಮತ್ತು ಬೋಧನೆ –ಇವೆರಡಕ್ಕೂ ನಿಕಟವಾಗಿ ಸಂಬಂಧಿಸಿರುವ ಆಧಾರ ಜ್ಞಾನ" ಎಂದು ತಿಳಿಸಿದ್ದಾರೆ.

---

**25. ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–2, ಪು–27, 28. ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4.(1962)

ಶೈಕ್ಷಣಿಕ ಮನೋವಿಜ್ಞಾನವು ಬೋಧನಾ-ಕಲಿಕೆ ಪ್ರಕ್ರಿಯೆಯ ಮತ್ತು ಶೈಕ್ಷಣಿಕ ಪ್ರಕ್ರಿಯೆಯ ಅಥವಾ ಪರಿಸ್ಥಿತಿಯ ಅಧ್ಯಯನಕ್ಕೆ ತನ್ನ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಂಡಿದೆ. ಇದು ಅಭಿವೃದ್ಧಿ ಹೊಂದುತ್ತಿರುವ ಹಾಗೂ ತೀವ್ರ ಬೆಳವಣಿಗೆ ಕಾಣುತ್ತಿರುವ ಒಂದು ವಿಜ್ಞಾನವಾಗಿದೆ. ಇದರ ವ್ಯಾಪ್ತಿಯು ತುಂಬಾ ವಿಶಾಲವಾಗಿದ್ದು, ಶೈಕ್ಷಣಿಕ ಮನೋವಿಜ್ಞಾನ ಕ್ಷೇತ್ರದಲ್ಲಿ ನಡೆಯುತ್ತಿರುವ ಅಧ್ಯಯನಗಳಿಂದ ಅದರ ವ್ಯಾಪ್ತಿ ದಿನೇದಿನೇ ಹೆಚ್ಚಾಗುತ್ತಿದೆ.[26]

ಅಮೆರಿಕ ಮನೋವಿಜ್ಞಾನ ಸಂಘದ ಶೈಕ್ಷಣಿಕ ಮನೋವಿಜ್ಞಾನ ವಿಭಾಗವು1947 ರಲ್ಲಿ ಒಂದು ಸಮಿತಿಯನ್ನು ನೇಮಕ ಮಾಡಿ ಶೈಕ್ಷಣಿಕ ಮನೋವಿಜ್ಞಾನವನ್ನು ಸ್ಪಷ್ಟವಾಗಿ ವ್ಯಾಖ್ಯಾನಿಸಿ ಅದರ ವ್ಯಾಪ್ತಿಯನ್ನು ಗೊತ್ತುಪಡಿಸಿತು ಹಾಗೂ ಮನೋವಿಜ್ಞಾನದ ವಿವಿಧ ಶಾಖೆಗಳ ನಡುವಿನ ಸಂಬಂಧವನ್ನು ಸೂಚಿಸಿತು. ಅದರ ಪ್ರಕಾರ ಶೈಕ್ಷಣಿಕ ಮನೋವಿಜ್ಞಾನದ ವ್ಯಾಪ್ತಿಯಲ್ಲಿ ಈ ಕೆಳಕಂಡ ವಿಷಯಗಳನ್ನು ಪಟ್ಟಿಮಾಡಿತು.[27]

1. **ಮಾನವನ ಬೆಳವಣಿಗೆ ಮತ್ತು ವಿಕಾಸ;** ದೈಹಿಕ, ಜ್ಞಾನಾತ್ಮಕ, ಸಾಮಾಜಿಕ ಮತ್ತು ಸಂವೇಗಾತ್ಮಕ ವಿಕಾಸಗಳ ಮೇಲೆ ಅನುವಂಶೀಯತೆ ಮತ್ತು ಪರಿಸರಗಳ ಪ್ರಭಾವ, ಅಭಿಪ್ರೇರಣೆ, ಬುದ್ಧಿಶಕ್ತಿ, ಸಹಜ ಸಾಮರ್ಥ್ಯಗಳು, ಆಸಕ್ತಿ ಹಾಗೂ ವೈಯುಕ್ತಿಕ ಭಿನ್ನತೆಗಳು.

2. **ಕಲಿಕೆ;** ಕಲಿಕೆಯ ಸಾಮಾನ್ಯ ಸ್ವರೂಪ, ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳು, ತಾರ್ಕಿಕತೆ, ಕೌಶಲ್ಯಗಳು, ಸಮಸ್ಯೆ ಪರಿಹಾರ, ಸ್ಮರಣೆ ಮತ್ತು ಕಲಿಕೆಯ ವರ್ಗಾವಣೆ.

3. **ವ್ಯಕ್ತಿತ್ವ ಮತ್ತು ಹೊಂದಾಣಿಕೆ;** ವ್ಯಕ್ತಿತ್ವದ ವಿಕಾಸ; ವಿದ್ಯಾರ್ಥಿ ಮತ್ತು ಶಿಕ್ಷಕರ ಮಾನಸಿಕ ಆರೋಗ್ಯ. ವಿಶಿಷ್ಟ ಮಕ್ಕಳ ಶಿಕ್ಷಣ, ವಿದ್ಯಾರ್ಥಿಗಳ ಚಾರಿತ್ರ್ಯದ ವಿಕಾಸ ಮತ್ತು ಸಾಮಾಜಿಕ ಅಂತರ್ ಕ್ರಿಯೆ.

4. **ಅಳತೆ ಮತ್ತು ಮೌಲ್ಯಮಾಪನ;** ಮೌಲ್ಯಮಾಪನದ ಸಾಮಾನ್ಯ ತತ್ವಗಳು, ಬುದ್ಧಿ ಶಕ್ತಿ, ಸಹಜ ಸಾಮರ್ಥ್ಯಗಳು, ಕಲಿಕೆ ಮತ್ತು ಹೊಂದಾಣಿಕೆಗಳ ಮಾಪನ ಹಾಗೂ ಮಾಪನ ಫಲಶ್ರುತಿಗಳ ಕಾರ್ಯಾಚರಣೆ.

5. **ಶೈಕ್ಷಣಿಕ ಮನೋವಿಜ್ಞಾನದ ತಂತ್ರಗಳು ಮತ್ತು ವಿಧಾನಗಳು;** ಶೈಕ್ಷಣಿಕ ಸಮಸ್ಯೆಗಳ ವೈಜ್ಞಾನಿಕ ಅಧ್ಯಯನ, ಸಂಖ್ಯಾಶಾಸ್ತ್ರದ ತಂತ್ರಗಳು ಮತ್ತು ತರಗತಿ ಬೋಧನಾ ಸಮಸ್ಯೆಗಳನ್ನು ಕುರಿತು ಶೈಕ್ಷಣಿಕ ಸಂಶೋಧನೆಗಳನ್ನು ಕೈಗೊಳ್ಳುವುದು.

---

26. **ವಾಮದೇವಪ್ಪ ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-1, ಪು-7,8.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005.
27. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-1, ಪು-8. (2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005.

ಒಟ್ಟಿನಲ್ಲಿ ಯಾವುದು ಶೈಕ್ಷಣಿಕವೋ ಅಥವಾ ಯಾವುದು ತರಗತಿಯಲ್ಲಿ ವಿದ್ಯಾರ್ಥಿಯ ವರ್ತನೆಯನ್ನು ಅಧ್ಯಯನ ಮಾಡುತ್ತದೋ ಅದೆಲ್ಲವೂ ಶೈಕ್ಷಣಿಕ ಮನೋವಿಜ್ಞಾನದ ವ್ಯಾಪ್ತಿಯಲ್ಲಿ ಬರುತ್ತದೆ.

ಜೀವಿಯ ವರ್ತನೆಯನ್ನು ಮನೋವಿಜ್ಞಾನವು ಅಧ್ಯಯನ ಮಾಡುತ್ತಾ, ವ್ಯಕ್ತಿ ಮತ್ತು ವಸ್ತುನಿಷ್ಠೆಯ ಆಧಾರದ ಮೇಲೆ ಪರಿಶೀಲಿಸಿದಾಗ ಬೋಧನಾ–ಕಲಿಕೆಯ ವಿಚಾರದಲ್ಲಿ ಶಿಕ್ಷಕನು ಹಲವಾರು ಸಮಸ್ಯೆಗಳನ್ನು ಎದುರುಗೊಳ್ಳಬೇಕಾಗುತ್ತದೆ. ಇವು ಯಾವುವೆಂದರೆ, ಮಕ್ಕಳಲ್ಲಿನ ಅಸಾಮಾನ್ಯ ವರ್ತನೆಗಳಿಂದ ಉಂಟಾಗುವಂತದ್ದು. ಮಕ್ಕಳವರ್ತನೆಯನ್ನು ಅಧ್ಯಯನ ಮಾಡಿ ಅವರ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಹಿಡಿಯಲು ಪ್ರತಿಯೊಬ್ಬ ಶಿಕ್ಷಕನೂ ಮನೋವಿಜ್ಞಾನದ ವಿವಿಧ ವಿಧಾನಗಳನ್ನು ತಿಳಿದಿರಬೇಕು. ಏಕೆಂದರೆ ಶೈಕ್ಷಣಿಕ ಮನೋವಿಜ್ಞಾನವು ವಿದ್ಯಾರ್ಥಿಗಳ ವರ್ತನಾ ಸಮಸ್ಯೆಗಳ ಬಗ್ಗೆ ಅರಿತುಕೊಳ್ಳಲು ಕೆಲವು ವಿಧಾನಗಳು ಮತ್ತು ತಂತ್ರಗಳನ್ನು ವೈಜ್ಞಾನಿಕವಾಗಿ ವ್ಯವಸ್ಥೆಗೊಳಿಸಿದೆ.[28] ಅವುಗಳಲ್ಲಿ ಕೆಲವು ಪ್ರಮುಖವಾದವುಗಳೆಂದರೆ:–

1. **ಅಂತರಾವಲೋಕನ(INTROSPECTION):–** ಈ ವಿಧಾನವನ್ನು **"EDWARD BRADFORD TITCHENER"** ಎಂಬ ಬ್ರಿಟಿಷ್ ಮನೋವಿಜ್ಞಾನಿ ರೂಪಿಸಿದನು. ಈ ವಿಧಾನದಿಂದ ವ್ಯಕ್ತಿಯು ತನ್ನ ಆಲೋಚನೆಗಳು, ಭಾವನೆಗಳು ಹಾಗೂ ಪ್ರೇರಣೆಗಳ ಸಂದರ್ಭದಲ್ಲಿ ಮಾನಸಿಕ ಪ್ರಕ್ರಿಯೆಗಳನ್ನು ಪರೀಕ್ಷಿಸಿಕೊಳ್ಳಲು ಸಾಧ್ಯವಾಗುತ್ತದೆ.

2. **ವೀಕ್ಷಣೆ (OBSERVATION) :-** ಈ ವಿಧಾನವು ವರ್ತನಾ ವಾದಿಗಳಿಂದ ಪ್ರಾರಂಭಗೊಂಡಿದ್ದು, ಕ್ರಮಬದ್ಧವಾದ ವೀಕ್ಷಣಾ ಪದ್ಧತಿಯಾಗಿದೆ. ಈ ವಿಧಾನವನ್ನು ಹೆಚ್ಚು ಬೆಳಕಿಗೆ ತಂದವನು ವರ್ತನಾವಾದಿ ಜೆ.ಬಿ. ವ್ಯಾಟ್ಸನ್. ಒಂದು ನಿರ್ದಿಷ್ಟ ಉದ್ದೇಶ ಸಾಧನೆಗಾಗಿ ವ್ಯಕ್ತಿಯ ಬಾಹ್ಯ ವರ್ತನೆಯನ್ನು ಅಧ್ಯಯನ ಮಾಡುವುದಕ್ಕೆ ವೀಕ್ಷಣೆ ಎನ್ನುತ್ತಾರೆ. ವೀಕ್ಷಣಾ ವಿಧಾನದಲ್ಲಿ ವ್ಯಕ್ತಿಯ ವರ್ತನೆಯ ಬಗ್ಗೆ ಇಂದ್ರಿಯಾನುಭವವನ್ನು ಪಡೆದು ಅದನ್ನು ವಿಶ್ಲೇಷಿಸಲಾಗುತ್ತದೆ. ನಂತರ ಅದನ್ನು ಅರ್ಥೈಸಲಾಗುತ್ತದೆ.

3. **ಪ್ರಾಯೋಗಿಕ ವಿಧಾನ (EXPERIMENTATION) :-WILHELM MAXIMILIAN WUNDT -The Germam Physiologist, Philosopher and Professor, 1879** ರಲ್ಲಿ ಜರ್ಮನಿಯ ಲೈಪಿಗ್ಸ್ ಎಂಬಲ್ಲಿ ಮೊಟ್ಟಮೊದಲ ಮನೋವೈಜ್ಞಾನಿಕ ಪ್ರಯೋಗಾಲಯವನ್ನು ತೆರೆದನು. ಪ್ರಾಯೋಗಿಕ ವಿಧಾನಕ್ಕೆ ಹೆಚ್ಚು ಪ್ರಚಾರ ನೀಡಿದನು. ವೈಜ್ಞಾನಿಕ ಮತ್ತು ವಸ್ತುನಿಷ್ಠತೆ ಹೊಂದಿರುವ ವರ್ತನೆಯ ಅಧ್ಯಯನವಾದ ಮನೋವಿಜ್ಞಾನಕ್ಕೆ ವಿಜ್ಞಾನದಷ್ಟೇ ಮಹತ್ವದ ಸ್ಥಾನಮಾನ ತಂದುಕೊಟ್ಟ ವಿಧಾನವಿದು. ಈ ವಿಧಾನವು

---

**28. ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ. ಪು–12–25,(2005). ಶ್ರೇಯಸ್ ಪಬ್ಲಿಕೇಷನ್ಸ್. ತರಳಬಾಳು ಬಡಾವಣೆ, ದಾವಣಗೆರೆ–577005.

ವರ್ತನೆಯನ್ನು ಅರ್ಥಮಾಡಿಕೊಳ್ಳಲು, ನಿಯಂತ್ರಿಸಲು ಮತ್ತು ಮುನ್ಸೂಚಿಸಲು ನೆರವಾಗುತ್ತದೆ.

4. **ವ್ಯಕ್ತಿ ಅಧ್ಯಯನ(CASE STUDY) :–** ಡಿ. ಎಫ್. ಡಿ.ಬುಕ್ಸ್ ಎಂಬ ತಜ್ಞನು ಈ ವಿಧಾನವನ್ನು ಹೆಚ್ಚಾಗಿ ಬಳಕೆಗೆ ತಂದವನು. ವ್ಯಕ್ತಿ ಅಧ್ಯಯನವು ಒಬ್ಬ ವ್ಯಕ್ತಿ ಅಥವಾ ಒಂದು ಸಂಸ್ಥೆಯ ಆಳವಾದ ಅಧ್ಯಯನವನ್ನು ನಡೆಸುತ್ತದೆ. ಈ ವಿಧಾನದಲ್ಲಿ ಒಬ್ಬ ವರ್ತನಾ ಸಮಸ್ಯೆಯುಳ್ಳ ವ್ಯಕ್ತಿಯ ಬಗ್ಗೆ ಅಥವಾ ಒಂದು ಸಂಸ್ಥೆಯ ಬಗ್ಗೆ ವಿವರವಾದ ಮಾಹಿತಿಯನ್ನು ಸಂಗ್ರಹಿಸಿ ನ್ಯೂನತೆಗೆ ಕಾರಣಗಳನ್ನು ಪರಿಶೋಧಿಸಿ ಸೂಕ್ತ ನಿವಾರಣಾ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ.

5. **ಸಂದರ್ಶನ(INTERVIEW) :-** ಸಂದರ್ಶನವನ್ನು ಸಾಮಾನ್ಯವಾಗಿ ಸಲಹಾ ಕಾರ್ಯಕ್ರಮಗಳಲ್ಲಿ ಬಳಸಲಾಗುತ್ತದೆ. ಸಂದರ್ಶನ ಒಂದು ಸಂವಹನ ಪ್ರಕ್ರಿಯೆಯಾಗಿರುತ್ತದೆ ಅಥವಾ ಅಂತರ್ ಕ್ರಿಯೆಯಾಗಿರುತ್ತದೆ. ಇದರಲ್ಲಿ ಸಂದರ್ಶಿತ ವ್ಯಕ್ತಿಯು ಅವಶ್ಯಕವಾದ ಮಾಹಿತಿಯನ್ನು ಮುಖಾಮುಖಿ ಸನ್ನಿವೇಶದಲ್ಲಿ ಶಾಬ್ದಿಕವಾಗಿ ನೀಡುವನು. ಹಲವಾರು ಸಂಶೋಧನಾ ಸನ್ನಿವೇಶಗಳಲ್ಲಿ ವ್ಯಕ್ತಿಗಳಿಂದ ಉಪಯುಕ್ತವಾದ ಮಾಹಿತಿಯನ್ನು ಸಂಗ್ರಹಿಸಲು ಬಳಸಬಹುದಾದ ಒಂದು ಪರಿಣಾಮಕಾರಿ ವಿಧಾನವಾಗಿದೆ.

6. **ಪರೀಕ್ಷಾ ವಿಧಾನ(TESTING):–** ಪ್ರಯೋಗಶಾಲೆಯ ಸಹಾಯವಿಲ್ಲದೆ ಮನಶ್ಶಾಸ್ತ್ರಜ್ಞನು ಪರೀಕ್ಷೆಗಳನ್ನು ಉಪಯೋಗಿಸಿ ಯಾವುದೇ ರೀತಿಯ ಮಾಹಿತಿಗಳನ್ನು ಸಂಗ್ರಹಿಸಬಹುದು. ಇದನ್ನು ಮಕ್ಕಳ ಸಾಮರ್ಥ್ಯಗಳು, ಆಸಕ್ತಿ ಹಾಗೂ ಮನೋಭಾವಗಳನ್ನು ಅಳೆಯಲು ಉಪಯೋಗಿಸಲಾಗುತ್ತದೆ. ಪರೀಕ್ಷಾ ವಿಧಾನ ಆಧುನಿಕ ಮನೋವಿಜ್ಞಾನದ ಒಂದು ಪ್ರಮುಖ ಸಂಶೋಧನಾ ಸಾಧನವಾಗಿರುತ್ತದೆ.

7. **ಸಮೀಕ್ಷಾ ವಿಧಾನ(SURVEY METHOD):-** ವಿದ್ಯಾರ್ಥಿಗಳ ವೈಯಕ್ತಿಕ ಭಿನ್ನತೆಗಳನ್ನು ಅಧ್ಯಯನ ಮಾಡಲು ಈ ವಿಧಾನವನ್ನು ಬಳಸುತ್ತಾರೆ. ಈ ವಿಧಾನವನ್ನು ಸರ್ವೇಕ್ಷಣ ಅಥವಾ ಕ್ಷೇತ್ರ ಅನ್ವೇಷಣ ವಿಧಾನವೆಂತಲೂ ಕರೆಯುತ್ತಾರೆ. ಶೈಕ್ಷಣಿಕ ಮನೋವಿಜ್ಞಾನದ ಅಧ್ಯಯನಗಳಲ್ಲಿ ಪ್ರತಿದರ್ಶನವನ್ನು ನೇರವಾಗಿ ವೀಕ್ಷಿಸುವಂತಹ ಸಂಖ್ಯಾಶಾಸ್ತ್ರೀಯ ಸಮೀಕ್ಷೆಗಳನ್ನು ಬಳಸಿಕೊಳ್ಳುತ್ತಾರೆ. ಹೆಚ್ಚು ಜನರಿಂದ ಮಾಹಿತಿಯನ್ನು ಸಂಗ್ರಹಿಸಬೇಕಾದಾಗ, ಇತರ ವಿಧಾನಗಳನ್ನು ಅನುಸರಿಸಲು ಸಾಧ್ಯವಾಗದಿದ್ದಾಗ ಈ ವಿಧಾನವನ್ನು ಅನುಸರಿಸಬಹುದು.

ಕಳೆದ ಶತಮಾನದಲ್ಲಿ ಹಲವಾರು ಮನೋವೈಜ್ಞಾನಿಕ ಪಂಥಗಳು ಶೈಕ್ಷಣಿಕ ಸಿದ್ಧಾಂತ ಮತ್ತು ಪ್ರಾಯೋಗಿಕ ಉಪಯೋಗಗಳ ಮೇಲೆ ಹೆಚ್ಚಿನ ಪ್ರಭಾವ ಬೀರಿದೆಯೆಂಬುದನ್ನು ಕಾಣಬಹುದು.

ಮನೋವಿಜ್ಞಾನದ ಕ್ರಮಬದ್ಧ ಬೆಳವಣಿಗೆಯನ್ನು ಅರ್ಥಮಾಡಿಕೊಂಡು ವಿದ್ಯಾರ್ಥಿಗಳ ವರ್ತನೆಯನ್ನು ವಿವಿಧ ವಿಧಾನಗಳಿಂದ ಅಧ್ಯಯನ ನಡೆಸಲು ಮನೋವೈಜ್ಞಾನಿಕ ಪಂಥಗಳು ಸಹಾಯಕವಾಗುತ್ತವೆ. ಮನೋವಿಜ್ಞಾನ ಕ್ಷೇತ್ರ ಬೆಳೆದಂತೆ ಹಾಗೂ ಅದರ ವಿಚಾರ ವ್ಯಾಪ್ತಿ ಹೆಚ್ಚಾದಂತೆ ಹಲವಾರು ಮನೋ-ವೈಜ್ಞಾನಿಕ ಪಂಥಗಳು ಜನ್ಮತಾಳಿದವು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ,

**1. ರಚನಾ ಪಂಥ. 2. ಕ್ರಿಯಾತ್ಮಕ ಪಂಥ 3. ವರ್ತನಾ ಪಂಥ. 4. ಗೆಸ್ಟಾಲ್ಟ್ ಪಂಥ. 5. ಮನೋವಿಶ್ಲೇಷಣಾ ಪಂಥ. 6. ಮಾನವತಾ ಪಂಥ 7. ಜ್ಞಾನಾತ್ಮಕ ಪಂಥ 8. ಜ್ಞಾನ ಸಂರಚನಾ ಪಂಥ**

ಇವುಗಳಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಹೆಚ್ಚಿನ ಕೊಡುಗೆ ನೀಡಿರುವಂತಹವುಗಳು:-

1. **ವರ್ತನಾ ಪಂಥ (BEHAVIOURISM):-** ಮನೋವಿಜ್ಞಾನದಲ್ಲಿ **J.B. WATSON** ರವರು ತಮ್ಮ ಪ್ರಸಿದ್ಧ" ವರ್ತನಾ ವಾದವನ್ನು ಮಂಡಿಸಿ, ಮನೋವಿಜ್ಞಾನವನ್ನು ಪ್ರಾಣಿಗಳು ಹಾಗೂ ಮಾನವರ ವರ್ತನೆಯ ವಸ್ತುನಿಷ್ಠ ಅಧ್ಯಯನವನ್ನಾಗಿ ಬೆಳೆಸಿ, ಮನೋವಿಜ್ಞಾನದಲ್ಲಿ ಕ್ರಾಂತಿಯನ್ನುಂಟು ಮಾಡಿದರು. ಇವರ ವಾದವನ್ನು ಜೊತೆಗೂಡಿ ಪ್ರತಿಪಾದಿಸಿದವರೆಂದರೆ- **IVAN PAVLOV-Russian Physiologist, B.F. SKINNER-American Psychologist, CLARK LEONARD HULL - American psychologist, EDWIN RAY GUTHRIE - Behavioral Psychologist, Philosopher, VLADIMIR BEKHTEREV-Russian Neurologist and the Father of Objective Psychology.** ವರ್ತನಾ ಪಂಥವು ಕಲಿಕೆ ಹಾಗೂ ಅಭಿಪ್ರೇರಣೆಯು ಮನೋವಿಜ್ಞಾನಕ್ಕೆ ಮಹತ್ವದ ಕೊಡುಗೆ ಕೊಟ್ಟಿದೆ. ಮಾನವನ ಬೆಳವಣಿಗೆ ಮತ್ತು ವಿಕಾಸದಲ್ಲಿ ಪರಿಸರದ ಪ್ರಭಾವ ಹಾಗೂ ಅದರ ಮಹತ್ವವನ್ನು ತಿಳಿಸುತ್ತದೆ. ಪರಿಸರದೊಂದಿಗೆ ನಿರಂತರ ಸಂಪರ್ಕ ಹೊಂದುವುದರಿಂದ ಎಲ್ಲ ವರ್ತನೆಗಳನ್ನು ಕಲಿಯಲು ಸಾಧ್ಯವೆಂದು ತಿಳಿಸುತ್ತದೆ.

2. **ಗೆಸ್ಟಾಲ್ಟ್ ಪಂಥ, (GESTALTISM):-**

ಈ ಪಂಥಸ್ಥಾಪಕರು **MAX WERTHEIMER - Austro - Hungarian born Psychologist, One of the three founders of Gestalt Psychology -** ಈ ಪಂಥದ ವಾದದ ವಿಚಾರವೇನೆಂದರೆ, ಕಲಿಕೆಯೆಂದರೆ ಒಳನೋಟವನ್ನು ನಿರ್ಮಿಸುವುದಾಗಿರುತ್ತದೆ. ಒಂದು ಸಮಸ್ಯೆಗೆ ಪರಿಹಾರವನ್ನು ಪಡೆಯುವುದೇ ಒಳನೋಟ ಕಲಿಕೆಯಾಗಿರುತ್ತದೆ. ಕಲಿಯುವಿಕೆಯಲ್ಲಿ ಅರ್ಥಗ್ರಹಣೆಗೆ ಗೆಸ್ಟಾಲ್ಟ್ ವಾದವು ಪ್ರಧಾನ ಸ್ಥಾನವನ್ನು ಕಲ್ಪಿಸಿರುತ್ತದೆ. ಯಾವ ಒಂದು ಪ್ರಚೋದನೆಯು ತನ್ನ ಪರಿಸರದಲ್ಲಿಯ ಇತರ

ಅಂಶಗಳೊಡನೆ ಹೇಗೆ ಒಂದು ಅರ್ಥಪೂರ್ಣ ಸಂಬಂಧವನ್ನು ಪಡೆದಿರುತ್ತದೆಯೋ, ಆ ಸಂಬಂಧವನ್ನು ಅರ್ಥೈಸಿದಾಗ ಒಳನೋಟದ ಕಲಿಕೆಯು ತನ್ನಷ್ಟಕ್ಕೆ ತಾನೇ ಮೂಡುತ್ತದೆ. ಗೆಸ್ಟಾಲ್ಟ್ ವಾದಿಗಳು "ಕಲಿಕೆಯು ಒಂದು ಗುರಿ ನಿರೂಪಿತ, ಸಂಶೋಧನಾತ್ಮಕ ಮತ್ತು ಆಲೋಚನಾತ್ಮಕ ಕ್ರಿಯೆ" ಎಂದು ಪ್ರತಿಪಾದಿಸುತ್ತಾರೆ. ಶಿಕ್ಷಣ ಕ್ಷೇತ್ರಕ್ಕೆ ಗೆಸ್ಟಾಲ್ಟ್ ಪಂಥವು ಕಲಿಕೆಯಲ್ಲಿ ಸಂಬಂಧಗಳ ಗ್ರಹಿಕೆ, ಪುನರ್ರಚನೆ ಹಾಗೂ ಪೂರ್ಣತೆಗೆ ಮಹತ್ವದ ಕೊಡುಗೆ ಕೊಟ್ಟಿರುತ್ತದೆ. ಇಂದಿನ ಶಿಕ್ಷಣದಲ್ಲಿ ಬಳಕೆಯಾಗುತ್ತಿರುವ ಅಂತರ್ – ಶಿಸ್ತಿನ ವಿಧಾನ(**Inter-disciplinary approach**)ಗೆಸ್ಟಾಲ್ಟ್ ಪಂಥದ ಕೊಡುಗೆಯೇ ಹೌದು. ಸಮಸ್ಯಾ ಪರಿಹಾರ ವಿಧಾನ ಮತ್ತು ಕಲಿಕೆಯ ನೂತನ ವಿಧಾನಗಳನ್ನು ಗೆಸ್ಟಾಲ್ಟ್ ಮನೋವಿಜ್ಞಾನಿಗಳು ಒದಗಿಸಿರುತ್ತಾರೆ.

**3. ಮನೋವಿಶ್ಲೇಷಣಾ ಪಂಥ(PSYCHOANALISM):–**

ಈ ಪಂಥದ ಸ್ಥಾಪಕರು **SIGMUND FREUD-Austrian Neurologist and the founder of Psychoanalysis.** ಈ ಪಂಥವು ಮಾನವನ ವರ್ತನೆಯನ್ನು ವಿಶ್ಲೇಷಣೆ ಮಾಡುವಲ್ಲಿ ರಚನಾ ಪಂಥ, ಕ್ರಿಯಾತ್ಮಕ ಪಂಥ, ವರ್ತನಾ ಪಂಥಗಳಿಗೆ ವಿರುದ್ಧವಾದ ಅಭಿಪ್ರಾಯವನ್ನು ಮಂಡಿಸುತ್ತದೆ. ಈ ಪಂಥದ ಪ್ರಕಾರ ವ್ಯಕ್ತಿಯ ಮನಸ್ಸಿನ ಅಜಾಗೃತ ಮಟ್ಟದಲ್ಲಿರುವ ಪ್ರಚೋದನೆಗಳು ವ್ಯಕ್ತಿಯ ವರ್ತನೆ ಅಥವಾ ಆಲೋಚನೆಗಳ ಮೂಲಕ ಅಭಿವ್ಯಕ್ತ ಗೊಳ್ಳಲು ಪ್ರಯತ್ನಿಸುತ್ತವೆ. ಈ ಅಜಾಗೃತ ಅಭಿಪ್ರೇರಣೆಯೇ ಮನೋವಿಶ್ಲೇಷಣೆಯ ಮೂಲಾಂಶವಾಗಿದೆ. ಅಜಾಗೃತ ಅವಸ್ಥೆಯಲ್ಲಿರುವ ವಿಷಯವನ್ನು ಹೊರಸೆಳೆಯಲು "ಮುಕ್ತ ಸಹಚರ್ಯ" ವಿಧಾನ ಮತ್ತು ಸ್ವಪ್ನ ವಿಶ್ಲೇಷಣೆ ಕ್ರಮಗಳನ್ನು ಸೂಚಿಸಲಾಗಿದೆ. ಶಿಕ್ಷಣ ಕ್ಷೇತ್ರಕ್ಕೆ ಈ ಪಂಥದ ಮುಖ್ಯ ಕೊಡುಗೆಯೆಂದರೆ – ವ್ಯಕ್ತಿಯ ವರ್ತನೆಯನ್ನು ಅಧ್ಯಯನ ಮಾಡಲು ಮನೋವಿಶ್ಲೇಷಣಾ ವಿಧಾನವನ್ನು ಕೊಟ್ಟಿರುತ್ತದೆ. ಶಿಕ್ಷಣದ ಪ್ರಾಮುಖ್ಯತೆಯನ್ನು ತಿಳಿಸುವುದರ ಜೊತೆಗೆ ಬಾಲ್ಯಾವಸ್ಥೆಯಲ್ಲಿ ಉತ್ತಮ ಹಾಗೂ ಆರೋಗ್ಯಕರ ವಾತಾವರಣ ಒದಗಿಸಬೇಕೆಂದು ಸೂಚಿಸುತ್ತದೆ. ಮಕ್ಕಳಲ್ಲಿ ಹುದುಗಿರುವ ಭಾವನೆಗಳನ್ನು ಅಥವಾ ದಮನಕ್ಕೊಳಗಾಗಿರುವ ಭಾವನೆಗಳನ್ನು ವ್ಯಕ್ತಪಡಿಸಲು ಸೂಕ್ತ ಸಹಪಠ್ಯ ಚಟುವಟಿಕೆಗಳು ಹಾಗೂ ಒಳ್ಳೆಯ ಹವ್ಯಾಸಗಳನ್ನು ಬೆಳೆಸುವಂತಹ ಚಟುವಟಿಕೆಗಳನ್ನು ಶಾಲಾ ಕಾರ್ಯಕ್ರಮಗಳಲ್ಲಿ ಜೋಡಿಸಿಕೊಳ್ಳಬೇಕು.

**4. ಮಾನವತಾ ಪಂಥ**[29] **CARL ROGERS - American Psychologist and ABRAHAM MASLOW - American Psychologist** ಮುಂತಾದವರು ಮಾನವತಾ ಪಂಥದ ಪ್ರತಿಪಾದಕರು. ಈ ಪಂಥ ಮಾನವನಲ್ಲಿ ಪ್ರಾಣಿಗಳಿಂದ ಪ್ರತ್ಯೇಕಿಸುವಂತಹ ಮಾನವೀಯಗುಣಗಳನ್ನು ಪ್ರತಿಪಾದಿಸುತ್ತದೆ. ಇವರ

---

29. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–1, ಪು–28. ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005 (2005)

ಪ್ರಕಾರ **"Self-actualization"** (ಆತ್ಮ-ವಾಸ್ತವೀಕರಣ) ಮಾನವನ ಮೂಲಭೂತ ಪ್ರೇರಕ ಶಕ್ತಿ. ಇಲ್ಲಿ ಪರಿಸರವನ್ನಾಗಲೀ, ಮಾತಾಪಿತೃಗಳನ್ನಾಗಲೀ, ಸಮಾಜದಲ್ಲಿರುವವರನ್ನಾಗಲೀ ದೂಷಣೆ ಮಾಡುವಂತಿಲ್ಲ. ವ್ಯಕ್ತಿಯು ತನ್ನ ಚಟುವಟಿಕೆಗಳಿಗೆ ತಾನೇ ಕಾರಣನಾಗುವನು. ಹೀಗಾಗಿ ಆಯ್ಕೆಯ ಸ್ವಾತಂತ್ರ್ಯವಿದೆ, ನಿರ್ವಹಣಾ ಸ್ವಾತಂತ್ರ್ಯವಿದೆ. ಶಿಕ್ಷಣ ಕ್ಷೇತ್ರಕ್ಕೆ ಇದರ ಕೊಡುಗೆಯೇನೆಂದರೆ, ಮಾನವ ತನ್ನ ಸಾಮರ್ಥ್ಯದಲ್ಲಿ ಆತ್ಮವಿಶ್ವಾಸಹೊಂದಿ ಮಹತ್ವದ ಸಾಧನೆಯೆಡೆಗೆ ಸಾಗಲು ಪ್ರೇರೇಪಿಸಬೇಕು. ಸಮಾಜ ಮತ್ತು ಶಾಲೆಯ ಮಧ್ಯೆ ಒಳ್ಳೆಯ ಬಾಂಧವ್ಯ ಬೆಳೆಸಬೇಕು. ಉತ್ಪಾದನಾತ್ಮಕ ಹಾಗೂ ಸಹಕಾರ ಮನೋಭಾವವನ್ನು ಮಕ್ಕಳಲ್ಲಿ ಪ್ರೇರೇಪಿಸಬೇಕು.

೫. **ಜ್ಞಾನಾತ್ಮಕ ಪಂಥ:-** ಈ ನವೀನ ಪಂಥದ ಪ್ರತಿಪಾದನಾ ವಿಚಾರವೆಂದರೆ, ಜ್ಞಾನಾತ್ಮಕ ಕ್ರಾಂತಿ. ಜ್ಞಾನಾತ್ಮಕ ಮನೋವಿಜ್ಞಾನ ಮಾನವನ ಆಲೋಚನೆ, ಸ್ಮೃತಿ, ಭಾಷಾ ವಿಕಾಸ, ಪ್ರತ್ಯಕ್ಷಾನುಭವಗಳು, ಪರಿಕಲ್ಪನೆಗಳ ವಿಕಾಸ ಮುಂತಾದ ಮಾನಸಿಕ ಕಾರ್ಯಗಳಾದ ಒಳನೋಟ, ಸೃಜನಶೀಲತೆ ಮತ್ತು ಸಮಸ್ಯಾಪರಿಹಾರಗಳನ್ನು ಅರಿಯಲು ಪ್ರಯತ್ನಿಸುತ್ತದೆ. ಜ್ಞಾನಾತ್ಮಕ ಮನೋವಿಜ್ಞಾನಿಗಳು ವರ್ತನಾವಾದಿಗಳ ಉದ್ದೀಪನ - ಅನುಕ್ರಿಯೆಯ ಮಾದರಿ ಕಲಿಕೆಯನ್ನು ಸಂಪೂರ್ಣವಾಗಿ ವಿರೋಧಿಸುತ್ತಾರೆ. ಈ ಪಂಥದ ಮೂಲ ಗೆಸ್ಟಾಲ್ಟ್ ವಾದಿಗಳ ಜ್ಞಾನಾತ್ಮಕ ದೃಷ್ಟಿಕೋನದಿಂದ ಪ್ರಾರಂಭವಾಯಿತೆಂದು ಹೇಳಬಹುದು. ಸಂಕ್ಷಿಪ್ತವಾಗಿ ಹೇಳುವುದಾದರೆ, ಜ್ಞಾನಾತ್ಮಕ ಮನೋವಿಜ್ಞಾನವು ವರ್ತನಾ ಪ್ರಕ್ರಿಯೆಯನ್ನು, ಈ ವ್ಯವಸ್ಥೆಯಲ್ಲಿ ಪರಿಸರದಿಂದ ಒಳಬರುವ ಉದ್ದೀಪನವನ್ನು 'ಒಳಬರುವ ಮಾಹಿತಿ' - **input** ಎಂತಲೂ, ಮಾನವನ ಮನಸ್ಸಿನ ಜ್ಞಾನಾತ್ಮಕ ಕಾರ್ಯಕ್ಷಮತೆಯನ್ನು 'ಪ್ರಕ್ರಿಯೆ'-**process** ಎಂತಲೂ ಮತ್ತು ಜ್ಞಾನಾತ್ಮಕ ಕಾರ್ಯಕ್ಷಮತೆಯ ಫಲಿತಾಂಶವನ್ನು 'ಉತ್ಪನ್ನ'-**output** ಎಂದು ವಿವರಿಸಬಹುದು. ಜ್ಞಾನಾತ್ಮಕ ಪಂಥದ ಪ್ರಮುಖ ಪ್ರತಿಪಾದಕರು **JEAN PIAGET - Swiss Psychologist known for his work on child development,** ಮಕ್ಕಳಲ್ಲಿ ಜ್ಞಾನಾತ್ಮಕ ಸಾಮರ್ಥ್ಯಗಳ ವಿಕಾಸ ಮತ್ತು ಜ್ಞಾನಾತ್ಮಕ ಪ್ರಕ್ರಿಯೆ ಹೇಗೆ ನಡೆಯುತ್ತದೆ ಎಂಬುದನ್ನು ತಿಳಿಯಲು ಶ್ರೇಷ್ಠ ಅಧ್ಯಯನ ನಡೆಸಿರುತ್ತಾರೆ. ಈ ಪಂಥದ ಮತ್ತೊಬ್ಬ ಸ್ಥಾಪಕರು-**EDWARD TOLMAN American Psychologist and a Professor at the University Of California** ಇವರು ಕಲಿಕೆ, ಆಲೋಚನೆ ಮತ್ತು ಸೃಜನಾತ್ಮಕ ಕಾರ್ಯನಿರ್ವಹಣೆ ಕ್ಷೇತ್ರದಲ್ಲಿ ಮಹತ್ವಪೂರ್ಣ ಕೊಡುಗೆಯನ್ನು ನೀಡಿರುತ್ತಾರೆ.[೩೦]

---

೩೦. **ವೀರಪ್ಪ ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-11- ಪು-208-214.(1962), ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

## 2-4."श्रीविष्णुशर्मविरचितं पञ्चतन्त्रम्"ನೀತಿಕಥೆಗಳಲ್ಲಿ ಕಂಡುಬರುವ ಕೆಲವು ಶೈಕ್ಷಣಿಕ ಮನೋವಿಜ್ಞಾನ ಹಾಗೂ ವ್ಯಕ್ತಿತ್ವನಿರ್ಮಾಣ-ಪರಿಕಲ್ಪನೆಗಳ-ವಿಶ್ಲೇಷಣೆ

ಹೀಗೆ ಶೈಕ್ಷಣಿಕ ಮನೋವಿಜ್ಞಾನದ ಕೆಲವು ಪ್ರಮುಖ ವಿಚಾರಗಳ ಒಂದು ಪಕ್ಷಿನೋಟವನ್ನು ನೋಡಿದ ಉದ್ದೇಶವೇನೆಂದರೆ, ವಿಷ್ಣುಶರ್ಮರ ಸಂಸ್ಕೃತ ಪಂಚತಂತ್ರ ಚಂಪೂ ಕಾವ್ಯವನ್ನು ಸೂಕ್ಷ್ಮವಾಗಿ ಈ ನಿಟ್ಟಿನಲ್ಲಿ ಗಮನಿಸಿ ವಿಶ್ಲೇಷಣೆ ಮಾಡಿದಾಗ ಎಷ್ಟು ಸಹಜವಾಗಿ ಕಲಿಕೆ ಹಾಗೂ ಕಲಿಸುವಿಕೆ ಪರಿಣಾಮಕಾರಿಯಾಗಿದೆ, ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಎಷ್ಟು ಸುವ್ಯವಸ್ಥಿತವಾಗಿದೆ ಎಂಬುದನ್ನು ಕಂಡುಕೊಳ್ಳಬಹುದು. ವಿಮರ್ಶಾತ್ಮಕವಾಗಿ, ಹೋಲಿಕೆ ಮಾಡಿ ಪಂಚತಂತ್ರದಲ್ಲಿನ ಶೈಕ್ಷಣಿಕ ಮನೋವಿಜ್ಞಾನದ ಲಕ್ಷಣಗಳನ್ನು ಹಾಗೂ ವ್ಯಕ್ತಿ ವಿಕಸನಕ್ಕೆ ನೆರವಾಗುವ ನೀತಿಶಿಕ್ಷಣದ ಅಂಶಗಳನ್ನೂ ಕಾಣಬಹುದು.

ವಿಷ್ಣುಶರ್ಮರು ತಮ್ಮ ಪಂಚತತ್ವಗಳಲ್ಲಿ ಬಣ್ಣ ಬಣ್ಣದ ಸಣ್ಣ ಸಣ್ಣ ನೀತಿಕಥೆಗಳ ಒಂದು ಅನ್ಯೋನ್ಯ ಸಂಗಮದಲ್ಲಿ ಒಳ್ಳೆಯ ಪಠ್ಯಕ್ರಮ ಆಯ್ಕೆ ಮಾಡಿಕೊಂಡಿದ್ದಾರೆ. ಶಿಕ್ಷಣವು ಸಹಜವಾಗಿ ಶಿಕ್ಷಕರ ಸೂಕ್ತ ಮಾರ್ಗದರ್ಶನದಿಂದ ಸಂಭವಿಸುತ್ತದೆ. ವ್ಯಕ್ತಿಪರಿವರ್ತನಾ ಸನ್ನಿವೇಶಗಳನ್ನು ಸ್ವಾರಸ್ಯವಾದ ಒಂದೇ ಪಡಿಯಚ್ಚಿನ ಪ್ರಾಣಿಗಳನ್ನೊಳಗೊಂಡ ಆಕರ್ಷಕ ಉದಾಹರಣೆಗಳಂದ ಮೂವರು ಮುಗ್ಧ ರಾಜಕುಮಾರರ ವ್ಯಕ್ತಿತ್ವ ವಿಕಸನಕ್ಕೆ ರಚಿಸಿದ ಜನಪ್ರಿಯ ನೀತಿಕಾವ್ಯ ಈ ಪಂಚತಂತ್ರವಾಗಿದೆ.[31]

ಈ ಅಮೂಲ್ಯ ಗ್ರಂಥದಲ್ಲಿಯೇ ಅಂದರೆ ಭೂಮಿಕೆಯಲ್ಲಿ ಸೂಚಿಸಿರುವಂತೆ ದಾಕ್ಷಿಣಾತ್ಯದಲ್ಲಿದ್ದ ಮಹಿಲಾರೋಪ್ಯನಗರದ ರಾಜನಾದ ಅಮರಶಕ್ತಿಯ ಮಕ್ಕಳು ಮೂವರು. ಅವರುಗಳೆಂದರೆ ಬಹುಶಕ್ತಿ, ಉಗ್ರಶಕ್ತಿ ಮತ್ತು ಅನಂತಶಕ್ತಿ. ಈ ಮೂವರೂ ಮೂರ್ಖ, ಆಲಸಿ ಮತ್ತು ಬುದ್ಧಿಶೂನ್ಯರಾಗಿದ್ದರು. ತನ್ನ ದುರ್ವಿನೀತ ಮಕ್ಕಳ ವಿಚಾರವಾಗಿ ರಾಜನು ಸದಾ ಚಿಂತೆಗೊಳಗಾಗಿದ್ದನು. ರಾಜನು ವೃದ್ಧನಾಗಿದ್ದನು. "ನನ್ನ ನಂತರ ಈ ರಾಜ್ಯಭಾರವನ್ನು ಯಾರು ಸಂಭಾಳಿಸುವರು ಎಂಬ ವಿಚಾರವಾಗಿ ರಾಜನಿಗೆ ಚಿಂತೆ ಸದಾ ಕಾಡುತ್ತಿತ್ತು. ತನ್ನ ಮೂರ್ಖ ಮಕ್ಕಳನ್ನು ನೋಡಿ ಅವನಿಗೆ ಪುನಃಪುನಃ ಒಂದೇ ವಚನ ಸ್ಮರಣೆಗೆ ಬರುತ್ತಿತ್ತು.

अजातमृतमूर्खेभ्यो मृतजातौ सुतौ वरम् ।

यतस्तौ स्वल्पदुःखाय यावज्जीवं जडो दहेत् ॥[32]

31. **ಪಂಚತಂತ್ರ** -ವಿಕಿಪೀಡಿಯ, ಹುರುಳು, https://googleweblight.com

32. **ಸುಧಾಕರ್ ಮಾಲವೀಯ,** ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಮ್, ಕಥಾಮುಖಂ-ಶ್ಲೋ-4,(1993). ಪು-4 ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಅಜಾತ-ಜನಿಸದ ಮೃತ ಮತ್ತು ಮೂರ್ಖ ಪುತ್ರರಿಗಿಂತ ಪುತ್ರರು ಜನ್ಮ ತಾಳದಿರುವುದೇ ಉತ್ತಮ. ಏಕೆಂದರೆ ಮೊದಲೆರಡು ಕಾರಣಗಳಿಂದಾಗುವ ದುಃಖ ಅಲ್ಪ ಸಮಯದ್ದಾಗಿದ್ದರೆ, ಮೂರ್ಖ ಪುತ್ರರಿಂದ ಮನಸ್ಸು ಸುಟ್ಟಂತಾಗುತ್ತದೆ. ಇದರಿಂದ ಆ ರಾಜನ ವ್ಯಥೆ ಯಾವ ಪರಕಾಷ್ಠತೆಯನ್ನು ತಲುಪಿತ್ತೆಂದು ಸ್ಪಷ್ಟವಾಗುತ್ತದೆ.

ಆ ರಾಜನ ಆಸ್ಥಾನದಲ್ಲಿ ಸುಮಾರು ೫೦೦ಜನ ಪಂಡಿತರಿದ್ದರು. ಒಂದು ದಿನ ಚಿಂತಾಕ್ರಾಂತನಾಗಿದ್ದ ರಾಜನು ಪಂಡಿತರನ್ನೆಲ್ಲಾ ಕರೆದು "ನನ್ನ ಮಕ್ಕಳು ಚತುರರಾಗಲು ಏನಾದರೂ ಮಾಡಿ" ಎಂದು ಕೋರಿದನು. ಯಾರೂ ಮುಂದೆ ಬರಲಿಲ್ಲ. ಆದರೆ ಅವರು ಒಂದು ಅಭಿಪ್ರಾಯ ಸೂಚಿಸಿದರು."ವಿಷ್ಣುಶರ್ಮ ಎಂಬ ಪಂಡಿತರು,ಶಿಕ್ಷಕ ವೃತ್ತಿಯಿಂದ ನಿವೃತ್ತರಾಗಿರುವವರು, ಅವರೇ ನಿಮ್ಮ ಮಕ್ಕಳನ್ನು ಬುದ್ಧಿವಂತರನ್ನಾಗಿ ಮಾಡಲು ಸಮರ್ಥರು. ನೀವು ನಿಮ್ಮ ಮಕ್ಕಳನ್ನು ಅವರಿಗೆ ಒಪ್ಪಿಸಿಬಿಡಿ. ಮುಂದಿನದೆಲ್ಲವನ್ನೂ ಅವರು ನೋಡಿಕೊಳ್ಳುತ್ತಾರೆ."

ರಾಜನು ತನ್ನ ಪುತ್ರರು ಮೂರ್ಖರೂ, ಕುಮಾರ್ಗದಲ್ಲಿ ನಡೆಯುವವರೂ ಆಗಿರುವರೆಂಬುದನ್ನು ಮನಗಂಡು ಈ ರೀತಿ ಯೋಚಿಸುತ್ತಾನೆ कोऽर्थः पुत्रेण जातेन, यो न विद्वान्न धार्मिकः ಅಂದರೆ ಯಾವ ಪುತ್ರನು ವಿದ್ವಾಂಸನೂ, ಗುಣಶಾಲಿಯೂ, ಧರ್ಮಾತ್ಮನೂ, ವಶವರ್ತಿಯೂ ಆಗಿರುವುದಿಲ್ಲವೋ, ಅವರುಗಳು ಇರುವುದೇ ವ್ಯರ್ಥ. ನನ್ನ ಪುತ್ರರನ್ನು ಯಾವ ರೀತಿಯಲ್ಲಿ ಗುಣಶಾಲಿಗಳನ್ನಾಗಿಸಲಿ? ಈ ರೀತಿ ಯೋಚಿಸುತ್ತಾ, ವಿಷ್ಣುಶರ್ಮರನ್ನು ಆಹ್ವಾನಿಸಿದನು. ತನ್ನ ಇಚ್ಛೆಯನ್ನು ತಿಳಿಸಿದನು ಮತ್ತು ತನ್ನ ರಾಜ್ಯದಲ್ಲಿ ಅವರಿಗೆ ಪಾಲು ಕೊಡುವುದಾಗಿ ನಿವೇದಿಸಿಕೊಂಡನು. ಬೃಹಸ್ಪತಿಯಂತೆ ನೀತಿಶಾಸ್ತ್ರದ ತತ್ವಗಳನ್ನು ಚೆನ್ನಾಗಿ ಅರಗಿಸಿಕೊಂಡಿದ್ದ ವಿಷ್ಣುಶರ್ಮರು ಈ ರೀತಿ ಹೇಳುತ್ತಾರೆ देव! महाकुलसम्भूता एते राजपुत्राः, तन्मया नीतिं ग्राहयितुं शक्यन्ते। ರಾಜಪುತ್ರರು ಉಚ್ಚಕುಲದಲ್ಲಿ ಜನಿಸಿದವರಾದ್ದರಿಂದ ಇವರಿಗೆ ನೀತಿಶಾಸ್ತ್ರದ ಉಪದೇಶವನ್ನುಮಾಡಿ ಯೋಗ್ಯರನ್ನಾಗಿಸುತ್ತೇನೆ.

ಪಂಚತಂತ್ರದ ಭೂಮಿಕೆಯಲ್ಲಿ ವಿಷ್ಣುಶರ್ಮರು ಹೀಗೆ ಹೇಳುತ್ತಾ ಪ್ರಾರಂಭಿಸಿರುವುದನ್ನೂ ಗಮನಿಸಬಹುದು.

"एतत्पञ्चतन्त्रकं नाम नीतिशास्त्रं बालावबोधनार्थं भूतले प्रवृत्तम् ।"

ಈ ಪಂಚತಂತ್ರಗಳಿಂದ ಕೂಡಿದ ನೀತಿಶಾಸ್ತ್ರವು ಈ ಭುವಿಯ ಮೇಲೆ ಸೃಷ್ಟಿಯಾಗಿರುವುದು ಯುವಕರ ಜ್ಞಾನೋದಯಕ್ಕೆ ಅಥವಾ ಜ್ಞಾನದ ಬೋಧನೆಗಾಗಿ. ಅಂದರೆ ಇದು ಶಿಕ್ಷಣ ನೀಡುವುದಕ್ಕಾಗಿ "

ಆದರೆ ವಿಷ್ಣುಶರ್ಮರು ಒಬ್ಬ ಆದರ್ಶ ಶಿಕ್ಷಕರಾಗಿದ್ದರಿಂದ ರಾಜನು ಘೋಷಣೆ ಮಾಡಿದ ಬಹುಮಾನಕ್ಕೆ ತಮ್ಮ ಜ್ಞಾನವನ್ನು ಮಾರಲು ನಿರಾಕರಿಸಿದರು. ಇದು ಒಂದು ವೃತ್ತಿಯ ಘನತೆ ಮತ್ತು ಗೌರವವನ್ನು ಸೂಚಿಸುತ್ತದೆ.

ಆ ದುರ್ವಿನೀತ ಮಕ್ಕಳನ್ನು ಆರು ಮಾಸಗಳಲ್ಲಿ ವ್ಯವಹಾರ ಕುಶಲರನ್ನೂ, ರಾಜನೀತಿ ನಿಪುಣರನ್ನೂ ಮತ್ತು ದೇವತೆಗಳ ರಾಜ ಇಂದ್ರನನ್ನೂ ಜಯಿಸುವಷ್ಟು ಸಮರ್ಥರನ್ನಾಗಿಸುವ ವಚನ ನೀಡಿದರು. ರಾಜನು ಬಹಳ ಸಂತೋಷದಿಂದ ತನ್ನ ಪುತ್ರರನ್ನು ವಿಷ್ಣುಶರ್ಮರ ಜೊತೆ ಕಳುಹಿಸಿಕೊಟ್ಟನು. ವಿಷ್ಣುಶರ್ಮರು ರಾಜನಂದನರನ್ನು ಕರೆದುಕೊಂಡು ಹೋಗಿ, ಅವರಿಗಾಗಿ ಮಿತ್ರಭೇದ, ಮಿತ್ರಸಂಪ್ರಾಪ್ತಿ, ಕಾಕೋಲೂಕೀಯ, ಲಬ್ಧಪ್ರಣಾಶ ಮತ್ತು ಅಪರೀಕ್ಷಿತಕಾರಕ ಎಂಬ ಐದು ತಂತ್ರಗಳನ್ನು ರಚಿಸಿ ಆ ರಾಜನಂದನರಿಗೆ ಪಾಠ ಮಾಡಿದರು. ಅವರೂ ಕೂಡ ಆ ತಂತ್ರಗಳನ್ನು ಅಭ್ಯಾಸ ಮಾಡಿ ಆರು ತಿಂಗಳಲ್ಲಿ ಅವರು ವಚನ ಕೊಟ್ಟಿದ್ದಂತೆ ನಿಪುಣರಾದರು.

अधीते य इदं नित्यं नीतिशास्त्रं श्रृणोति च ।
न पराभवमाप्नोति शक्रादपि कदाचन ॥[33]

ಅಂದಿನಿಂದ ಆ ನೀತಿಶಾಸ್ತ್ರವು ಪಂಚತಂತ್ರವೆಂಬ ಹೆಸರಿನಿಂದ ಜಗತ್ಪ್ರಸಿದ್ಧವಾಯಿತು. ಅಷ್ಟೇ ಅಲ್ಲದೆ "ಯಾರು ನಿತ್ಯ ಈ ನೀತಿಶಾಸ್ತ್ರವನ್ನು ಅಧ್ಯಯನ ಮಾಡುವರೋ ಅವರು ಇಂದ್ರನಿಂದ ಕೂಡ ಸೋಲನ್ನು ಕಾಣಲಾರರು." ಎಂದು ಪ್ರಖ್ಯಾತಿ ಪಡೆಯಿತು.[34]

ಈ ಸಂದರ್ಭದಲ್ಲಿ ಸಂಕ್ಷಿಪ್ತವಾಗಿ ಪಂಚತಂತ್ರ ನೀತಿಕಥೆಯ ಪೂರ್ವಭಾವಿ ವಿಚಾರಗಳನ್ನು ಸ್ಮರಣೆಗೆ ತಂದುಕೊಂಡ ಕಾರಣವೇನೆಂದರೆ, ರಾಜನ ಪರಿಸ್ಥಿತಿಯನ್ನು ಗಮನಿಸಿ, ಕಾರ್ಯಯೋಜನೆಗೆ ಮುನ್ನ ಚೆನ್ನಾಗಿ ಆಲೋಚಿಸಿ, ಸೂಕ್ತ ಪಠ್ಯಕ್ರಮ ಮತ್ತು ಬೋಧನಾ ಮಾಧ್ಯಮ ಆಯ್ಕೆಮಾಡಿ, ಶಿಕ್ಷಣ ನೀಡುವ ವಿಷ್ಣುಶರ್ಮರ ಮನೋವೈಜ್ಞಾನಿಕ ಕೌಶಲ್ಯವನ್ನು ಗುರುತಿಸಲು ಸಾಧ್ಯವಾಗುತ್ತದೆ. ತಮ್ಮ ಸೂಕ್ಷ್ಮಮತಿಯಿಂದ ರಾಜನ ಮತ್ತು ಅವನ ಪುತ್ರರ ಮನಸ್ಸು ಹಾಗೂ ಪರಿಸ್ಥಿತಿಯನ್ನರಿತು, ದೃಢಸಂಕಲ್ಪದಿಂದ ಐದು ತಂತ್ರಗಳನ್ನು ರಚಿಸಿ ವಿವಿಧಕಥೆಗಳ ಮಾಧ್ಯಮದಿಂದ ಆ ಮಕ್ಕಳಿಗೆ ಬದುಕಿನ ವ್ಯವಹಾರ ಜ್ಞಾನ ಕಲಿಸಲು ಸನ್ನದ್ಧರಾದರು. ವಿಷ್ಣುಶರ್ಮರಿಗೆ ಶೈಕ್ಷಣಿಕ ಮನೋ ವಿಜ್ಞಾನದ ಜ್ಞಾನ ಬಹುಶಃ ದೈವದತ್ತವಾಗಿಯೇ ಬಂದು ಬಿಟ್ಟಿತ್ತು. ಕಥೆಗಳ ಮೂಲಕ ಬೋಧನೆ ಎಷ್ಟರಮಟ್ಟಿಗೆ ಪರಿಣಾಮಕಾರಿ ಎಂಬ ಬಗ್ಗೆ ವಿಷ್ಣುಶರ್ಮರಿಗೆ ತಿಳಿದಿತ್ತು. ಹಾಗೆಯೇ

---

೩೩. **ಸುಧಾಕರ್ ಮಾಲವೀಯ,** ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಮ್ ಪಂಚತಂತ್ರಮ್, ಕಥಾಮುಖಂ–ಶ್ಲೋ–10,ಪು–10, (1993), ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

34. सुधाकर मालवीय, श्री विष्णशर्मविरचितं पञ्चतन्त्रम्, कथामुखम्, PP 8,9,10. चौकाम्बा कृष्णदास अकादमी, वारणासी –221001. (1993)

ಮಕ್ಕಳ ಆಸಕ್ತಿಯನ್ನು ಹೆಚ್ಚಿಸಲು ಇದೊಂದು ವಿಶಿಷ್ಟ ಕಲೆಯೆಂಬುದೂ ಅರಿವಿತ್ತು. ಈ ಒಂದು ಒಳ್ಳೆಯ ಪರಿಜ್ಞಾನದಿಂದ ಅಚ್ಚುಕಟ್ಟಾದ ಕಥೆಯ ಚೌಕಟ್ಟಿನಲ್ಲಿ ಪಂಚಸೂತ್ರಗಳನ್ನು ಅಡಕಗೊಳಿಸಿ, ಪ್ರತಿ ಕಥೆಯೊಂದಿಗೆ ಒಂದು ವ್ಯಕ್ತಿತ್ವ ನಿರ್ಮಾಣಕ್ಕೆ ಅಣಿಯಾದ ನೀತಿಯನ್ನು ಅಳವಡಿಸಿ ಮಂದಮತಿಗಳಾದ ರಾಜಕುಮಾರರಿಗೆ ಶಿಕ್ಷಣವನ್ನೊದಗಿಸಲು ಸೂಕ್ತ ಪಠ್ಯಕ್ರಮವನ್ನು ರಚಿಸಿದ್ದಾರೆ.[35]

ಮನೋವಿಜ್ಞಾನವು ವ್ಯಕ್ತಿಯ ವಿವಿಧ ಹಂತಗಳಲ್ಲಿ ಬೆಳವಣಿಗೆಯ ಲಕ್ಷಣಗಳು, ಬೌದ್ಧಿಕವಿಕಾಸ, ಪರಿಕಲ್ಪನಾ ಬೆಳವಣಿಗೆಯ ಮಟ್ಟ, ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳ ಬಗ್ಗೆ ಚರ್ಚಿಸುತ್ತದೆ. ಈ ಜ್ಞಾನವನ್ನು ಬಳಸಿಕೊಂಡು ಶಿಕ್ಷಣತಜ್ಞ ಅಥವಾ ಶಿಕ್ಷಕ ತನ್ನ ವಿದ್ಯಾರ್ಥಿಗಳ ಅಗತ್ಯತೆ ಹಾಗೂ ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ಪಠ್ಯಕ್ರಮವನ್ನು ರೂಪಿಸಿಕೊಳ್ಳುತ್ತಾನೆ. ಅರ್ಥಪೂರ್ಣವಾದ ಪಠ್ಯಕ್ರಮ ಮಾತ್ರ ವಿದ್ಯಾರ್ಥಿಗಳನ್ನು ಕಲಿಕೆಗೆ ಪ್ರೇರೇಪಿಸುತ್ತದೆ. ಪಂಚತಂತ್ರದಲ್ಲಿ ವಿಷ್ಣುಶರ್ಮರು ಹೀಗೆ-ಯೇ ರಾಜಕುಮಾರರ ವರ್ತನೆಯಲ್ಲಿ ಅಪೇಕ್ಷಿತ ಬದಲಾವಣೆಗಳನ್ನು ತರುವ ಉದ್ದೇಶವಿಟ್ಟುಕೊಂಡೇ ಪಠ್ಯಕ್ರಮವನ್ನು ರೂಪಿಸಿಕೊಂಡಿದ್ದಾರೆ. (ಅಮರಶಕ್ತಿ ರಾಜನ ಅಪೇಕ್ಷೆಯಂತೆ) ಮಹಾಭಾರತದಲ್ಲಿ ಒಂದು ಒಳ್ಳೆಯ ಸೂಕ್ತಿಯನ್ನು, ಹೇಳಲಾಗಿದೆ:-

नित्यं क्रोधात्तपो रक्षेत् धर्मं रक्षेच्छ मत्सरात् ।

विद्यां मानापमानाभ्यामात्मानं तु प्रमादतः॥[36]

ಕ್ರೋಧಬರದಂತೆ ತಪಸ್ಸನ್ನೂ, ಹೊಟ್ಟೆಕಿಚ್ಚುಪಡದೆ ಧರ್ಮವನ್ನೂ ರಕ್ಷಿಸಬೇಕು. ಮಾನ-ಅಪಮಾನಗಳಿಗೆ ಜಗ್ಗದ ವಿದ್ಯೆಯನ್ನು ಸಂಗ್ರಹಿಸಿ ಉಳಿಸಿಕೊಳ್ಳಬೇಕು. ತಪ್ಪುದಾರಿ ತುಳಿಯದಂತೆ ತನ್ನ ಆತ್ಮವನ್ನು ಕಾಪಾಡಿಕೊಳ್ಳಬೇಕು. ಬದುಕಿನ ನೀತಿಯನ್ನು ಕಂಡುಕೊಳ್ಳಬೇಕು.

ಶಿಕ್ಷಣವು ಚರಿತ್ರಾ ಪೂರ್ವಕಾಲದಲ್ಲಿಯೇ ಪ್ರಾರಂಭವಾಗಿತ್ತು. ಆಗಿನ ಪದ್ಧತಿ ಮೌಖಿಕವಾಗಿ ಹಾಗೂ ಕಥೆ ಹೇಳುವ ಮೂಲಕ, ಅನುಕರಣೆ ಮೂಲಕ ಶಿಕ್ಷಣ ನೀಡುವುದು, ಅನೌಪಚಾರಿಕವಾಗಿತ್ತು. ನಂತರದಲ್ಲಿ ಶಿಕ್ಷಣ ಶಾಸ್ತ್ರ ಅಭಿವೃದ್ಧಿಗೊಂಡಂತೆ ಔಪಚಾರಿಕ ಶಿಕ್ಷಣ ಪ್ರಾರಂಭವಾಯಿತು. ಉಪನಿಷತ್ತುಗಳ ಪರಿಕಲ್ಪನೆಯನ್ನು ಆಧರಿಸಿದ್ದ ಪ್ರಾಚೀನ ಗುರುಕುಲಗಳಲ್ಲಿ ಪ್ರಮುಖವಾದ ನಾಲ್ಕು ಸೂತ್ರಗಳಿದ್ದವು ಅವುಗಳೆಂದರೆ ಸ್ವಚಿಂತನೆ, ಸ್ವಅನುಶಾಸನ, ಸ್ವಾವಲಂಬನೆ ಹಾಗೂ ಸ್ವಾಧ್ಯಾಯ. ಈ ಗುರುಕುಲದಲ್ಲಿ ವ್ಯಕ್ತಿತ್ವ ನಿರ್ಮಾಣವು

---

35. **ಭರತ.ಬಿ.ರಾವ್,** ಪಂಚತಂತ್ರ, ಪಂಡಿತ ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಪು-10,11.(2018) Jwalamukhi MudranalayaPvt,Ltd, 44/1KRRoad, Basavanagudi,Bengaluru-560004.

36. **ಸುಭಾಷಿತಮಂಜರೀ**-ಸದ್ಗುಣ-ದುರ್ಗುಣ-ಶ್ಲೋ-173,ಪು-166, ಮಹಾಭಾರತ-ವನಪರ್ವ-213-29, ಕ.ಸಾ.ಪ. ಬೆಂಗಳೂರು-18(2001)

ಪ್ರಮುಖವಾಗಿರುತ್ತದೆ. ಸಮಾಜವು ಎಂದೂ ಸಮಜ(ಪಶು ಸಮೂಹ) ಆಗಬಾರದು. ಸುಶಿಕ್ಷಿತ ಜನರಿದ್ದಾಗ ಮಾತ್ರ ಇದು ಸಾಧ್ಯ. ವ್ಯಕ್ತಿಯು ಸ್ವತಃ ವಿಕಸಿತನಾಗಲಾರ. ಮೊದಲು ಮನೆಯಲ್ಲಿ ತಂದೆ ತಾಯಿಗಳ ಮೂಲಕ ನಂತರ ಸಾಮಾಜಿಕ ಪರಿವೇಶದ ಮೂಲಕ ಅಧಿಶೀಲ ಶಿಕ್ಷಣ ಪಡೆದನಂತರ ಅಧಿಚಿತ್ತ ಶಿಕ್ಷಣ ಪಡೆಯಲು ಬಾಲಕರನ್ನು ಹಿಂದೆ ಗುರುಕುಲಕ್ಕೆ ಕಳುಹಿಸಲಾಗುತ್ತಿತ್ತು. ಮುಂದೆ ಅಲ್ಲಿಯೇ ಅಧಿಪ್ರಜ್ಞೆ ಶಿಕ್ಷಣ ಪಡೆದು ಸ್ವಾವಲಂಬಿ ಜೀವನ ನಡೆಸಲು ಸಮರ್ಥರಾದ ಯುವಕರು ಸಿದ್ಧರಾಗುತ್ತಿದ್ದರು. ಇಲ್ಲಿ ಗುರುಶಿಷ್ಯರ ಚಿತ್ತಾಪಹಾರಕರಾಗಿ ತಮ್ಮ ಆಚರಣೆಯ ಮೂಲಕ ವಿವೇಚನೆ, ಧಾರಣೆ, ಸ್ಮರಣೆ, ಕಲ್ಪನೆ ಮುಂತಾದ ಶಕ್ತಿಗಳನ್ನು ವಿಕಾಸಪಡಿಸುವುದರ ಮೂಲಕ ಸಂಸ್ಕಾರ ನೀಡುತ್ತಿದ್ದರು. ಇಲ್ಲಿ ಸಹಜವಾಗಿಯೇ ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ಕಾರ್ಯಕ್ರಮಗಳು ನಡೆಯುತ್ತಿದ್ದವು ಶಿಷ್ಯರು ಆಚಾರ್ಯರ ನಡತೆಯನ್ನು ಅನುಸರಿಸುತ್ತ ಜ್ಞಾನ ಪಡೆಯುತ್ತಿದ್ದರು. "ಜ್ಞಾನದ ಪರಕಾಷ್ಠೆಯೇ ವೈರಾಗ್ಯ ಎಂಬ ವಿಚಾರದಲ್ಲಿ ಶ್ರದ್ಧೆಯಿರುತ್ತಿತ್ತು. ದೈವೀಗುಣದ ವರ್ಧನೆ, ಅಸುರೀಗುಣದ ಮರ್ಧನ, ನಿರೋಗಿತೆ, ಶಾರೀರಿಕ ದೃಢತೆ, ವಿನಯಶೀಲತೆ, ಕರ್ತವ್ಯ ಪ್ರಜ್ಞೆ ಮುಂತಾದ ಗುಣಲಕ್ಷಣಗಳು ಈ ಶಿಕ್ಷಣದಲ್ಲಿ ಸಹಜವಾಗಿಯೇ ವಿಕಸಿತಗೊಳ್ಳುತ್ತಿದ್ದವು. ಗುರುಕುಲಗಳಲ್ಲಿ ವ್ಯವಹಾರ ಭಾಷೆ ಸಂಸ್ಕೃತವೇ ಆಗಿರುತ್ತಿತ್ತು. ಸದ್ವ್ಯಕ್ತಿ ನಿರ್ಮಾಣದ ಮೂಲಕ ಸ್ವಸ್ಥ ಸಮಾಜವನ್ನು ನಿರ್ಮಿಸುವುದು ಗುರುಕುಲದ ಅಂತಿಮ ಗುರಿಯಾಗಿತ್ತು. ಇಲ್ಲಿ ಕಲಿತ ವ್ಯಕ್ತಿಗಳು ಮುಂದೆ ಸದ್ಗೃಹಸ್ಥರಾಗಿ ಯಥಾರ್ಥ ಜೀವನವನ್ನು ನಡೆಸಬಹುದು ಅಥವಾ ನೈಷ್ಠಿಕ ಬ್ರಹ್ಮಚಾರಿಗಳಾಗಿ ವಿದ್ಯಾಪ್ರಸಾರ, ಸ್ವಾಧ್ಯಾಯ, ಪ್ರವಚನದಲ್ಲಿ ತೊಡಗಬಹುದು. ಸಮಾಜದ ಏಳಿಗೆಗೆ ಸಾಧಕರಾಗಬಹುದು. ಸಮಾಜ ಸೇವೆಯ ಮೂಲಕ ಸಮಾಜದಲ್ಲಿ ದೈವದೃಷ್ಟಿ, ಧರ್ಮನಿಷ್ಠೆ, ರಾಜಪ್ರಜ್ಞೆ, ರಾಜನೀತಿ, ಸಮರ್ಥನಾಯಕತ್ವ ಹಾಗೂ ರಾಷ್ಟ್ರಭಕ್ತಿಯನ್ನು ಉದ್ದೀಪನಗೊಳಿಸುವವರೂ ಆಗಬಹುದು.[37]

ಈ ಒಂದು ಕ್ರಮದಲ್ಲೇ ವಿಷ್ಣುಶರ್ಮರು ಸೂಕ್ತ ಶೈಕ್ಷಣಿಕ ಸನ್ನಿವೇಶಗಳನ್ನೊದಗಿಸಿ, ಪುರಾತನ ಮೌಖಿಕ ಪರಂಪರೆಗಳ ಮೇಲೆ ಆಧರಿಸಿ ಪ್ರಾಣಿಗಳ ಸಣ್ಣನೀತಿಕಥೆಗಳನ್ನು ಒಳಗೊಂಡ ಮೂಲ ಸಂಸ್ಕೃತ ಕಾವ್ಯವನ್ನು ಕವಿತೆ ಹಾಗೂ ಗದ್ಯದಲ್ಲಿ, ಮೂಲತಃ ಭಾರತೀಯ ಪ್ರಾಣಿಗಳ ಕಥೆಗಳ ಮೇಲೆ ಆಧಾರಿತವಾಗಿ ಪಂಚತಂತ್ರ ಪಠ್ಯಕ್ರಮವನ್ನು ರಚಿಸಿದ್ದಾರೆ. ಹೀಗೆ ಇಲ್ಲಿ ಶೈಕ್ಷಣಿಕ ಮನೋವಿಜ್ಞಾನವು ಪರೋಕ್ಷವಾಗಿ ಪ್ರಾರಂಭದಿಂದಲೂ ಅಂದರೆ ಪ್ರಾಚೀನ ಗುರುಕುಲಶಿಕ್ಷಣ ಕಾಲದಿಂದಲೂ ತನ್ನಪಾತ್ರವನ್ನು ನೆರಳನಂತೆ ಹಿಂಬಾಲಿಸಿದೆ. ಇದರಲ್ಲಿ ಅಡಕವಾಗಿರುವ ಶೈಕ್ಷಣಿಕಮನೋವಿಜ್ಞಾನವೆಂದರೆ ಬೆಳೆಯುವ ಎಳಸಾದ ಬುದ್ಧಿಕೇಂದ್ರಕ್ಕೆ ಧರ್ಮ – ನೀತಿ ವ್ಯವಹಾರಗಳನ್ನು ಪರಸ್ಪರ ಬಾಧಕವಿಲ್ಲದಂತೆ ಕಥಾರೂಪವಾಗಿ ಬೋಧಿಸುವ

37. https://kn.m.wikipedia.org ಗುರುಕುಲ–ವಿಕಿಪೀಡಿಯ.

ಪ್ರಪ್ರಥಮ ಗ್ರಂಥ ಪಂಚತಂತ್ರವಾಗಿದೆ. ಇಲ್ಲಿನ ಕಥಾಸಂಕಲನದಲ್ಲಿ, ಪ್ರತಿಯೊಂದು ಕಥೆಯಲ್ಲೂ ಧರ್ಮವು ಆತ್ಮ ಸ್ಥಾನದಲ್ಲೂ, ನೀತಿಯು ಇಂದ್ರಿಯ ಸ್ಥಾನಗಳಲ್ಲೂ, ವ್ಯವಹಾರವು ಒಡಲಿನ ಸ್ಥಾನದಲ್ಲಿಯೂ ಇರುತ್ತದೆ. ನೀತಿಕಥೆಗಳಲ್ಲಿ ಕಂಡುಬರುವ ಕಥೆಗಳಲ್ಲಿ ಮೃಗಪಕ್ಷಿಗಳು, ಕೆಲವೆಡೆ ಗಿಡಮರಗಳನ್ನು ನೀತಿವಿಜ್ಞಾನ ಬೋಧಿಸಲು ಆಯ್ಕೆ ಮಾಡಿಕೊಂಡಿರುವ ವಿಶೇಷತೆ ಏನೆಂದರೆ ಕೇಳುಗರಿಗೆ ಒಂದು ನಾವೀನ್ಯತೆ, ಆಕರ್ಷಣೆ ಮತ್ತು ಪ್ರಾಣಿಪಶುಪಕ್ಷಿಗಳೇ ಅಂಥಹ ನೀತಿ ಮಾರ್ಗದಲ್ಲಿ ಮಾನವನಿಗೂ ಮಿಗಿಲಾಗಿ ನಡೆಯುತ್ತಿರುವುದನ್ನು ನೋಡಿದಾಗ, ಇನ್ನು ಮನುಷ್ಯರಾದವರು ಹೇಗಿರಬೇಕು? ಎಂಬ ಭಾವನೆಯನ್ನು ಬಡಿದೆಬ್ಬಿಸುವುದಾಗಿದೆ. ಕಲಿಸುವಿಕೆಯಲ್ಲಿ ಇದೊಂದು ಆದರ್ಶ ವಿಧಾನವಾಗಿದೆ. ಇಲ್ಲಿ ಶೈಕ್ಷಣಿಕ ಮನೋವಿಜ್ಞಾನ ಹಾಗೂ ವ್ಯಕ್ತಿತ್ವ ನಿರ್ಮಾಣ ಕಲೆಯ ಲಕ್ಷಣಗಳು ಎಷ್ಟರಮಟ್ಟಿಗೆ ಪಂಚತಂತ್ರದಲ್ಲಿ ಪ್ರಜ್ವಲಿತಗೊಂಡಿದೆ ಎಂಬುದನ್ನು ಕಾಣಬಹುದು. ಇದು ಮಕ್ಕಳ ಬುದ್ಧಿಕೇಂದ್ರಕ್ಕೂ, ಹೃದಯಕ್ಕೂ, ಕೆಲವೆಡೆ ವಯಸ್ಕರಮನಸ್ಸಿಗೂ ಅತ್ಯಂತ ಪ್ರಿಯವೂ, ಪರಿಣಾಮಕಾರಿಯೂ ಆಗಿರುವುದು.[38] ಭಗವದ್ಗೀತೆಯಲ್ಲಿ ಒಂದು ಬೋಧನೆ ಹೀಗಿರುತ್ತದೆ:-

यः शास्त्रविधिमुत्सृज्य वर्तते कामकारतः ।

न स सिद्धिमवाप्नोति न सुखं न परां गतिम् ॥[39]

ಅಂದರೆ ಯಾವನು ಶಾಸ್ತ್ರವಿಧಾನವನ್ನು(ಕ್ರಮಬದ್ಧವಾದ ಶಿಕ್ಷಣವನ್ನು) ಬದಿಗೊತ್ತಿ ಮನಸ್ಸಿಗೆ ಬಂದಂತೆ ಸ್ವೇಚ್ಛೆಯಾಗಿ ಕಾಲಕಳೆಯುವನೋ ಅವನು ಎಂದೂ ಸಿದ್ಧಿಯನ್ನು ಪಡೆಯುವುದಿಲ್ಲ. ಅವನಿಗೆ ಸುಖವೂ ಇಲ್ಲ. ಉತ್ತಮ ಗತಿಯೂ ಇಲ್ಲ. ಇದು ಅಮರಶಕ್ತಿ ರಾಜನ ತಿಳಿಗೇಡಿ ಮೂವರು ಪುತ್ರರಿಗೇ ಹೇಳಿದಂತಿದೆ. ಇದಕ್ಕೆ ಸೂಕ್ತವಾಗಿ ವಿಷ್ಣುಶರ್ಮರು ಪಂಚತಂತ್ರದಲ್ಲಿ ಹೀಗೆ ಎಚ್ಚರಿಸಿದ್ದಾರೆ:-

यस्य धर्मविहीनानि दिनान्यायान्ति यान्ति च ।

स लोहकारभस्त्रेव श्वसन्नपि न जीवति ॥[40]

ಧರ್ಮದ ಆಚರಣೆ ಇಲ್ಲದೆ ಯಾರ ದಿನಗಳು ವ್ಯರ್ಥವಾಗಿ ಕಳೆದುಹೋಗುತ್ತವೆಯೋ ಅಂಥವನು ಕಮ್ಮಾರನ ತಿದಿಯಂತೆ ಉಸಿರಾಡುತ್ತಿದ್ದರೂ ಬದುಕಿರುವವನಲ್ಲ. ಅರಸುವಂಶದಲ್ಲಿ ಜನಿಸಿದ ರಾಜಕುಮಾರರು ತಮ್ಮವಂಶದ ಧರ್ಮವನ್ನು ಅರಿಯದೆ ದುಃಸಹವಾಸದಲ್ಲಿ ಸ್ವೇಚ್ಛೆಯಿಂದ ಕಾಲಹರಣ ಮಾಡುತ್ತಿದ್ದರು.

---

**38. Chandra Rajan,** Translated from Sanskrit, VISNU SARMA, The Panchatantra, PP-27,28,35,38,39. PenguinRandom House India Pvt.Ltd, Gurgaon-122002, Haryana,

39. भगवद्गीता, 16-23.

40. **ಸುಧಾಕರ್ ಮಾಲವೀಯ,** ಅನುವಾದಕರು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಮ್, ಕಾಕೋಲೂಕೀಯ-ಶ್ಲೋ-97, ಪು-489, (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಪಂಚತಂತ್ರವನ್ನು ಸುಮಾರು ಎರಡು ಸಾವಿರ ವರ್ಷಗಳ ಪೂರ್ವದಲ್ಲೇ ರಚಿಸಲಾಗಿದೆ. ಆದರೆ ಅದರಲ್ಲಿರುವ ಮೌಲಿಕ ಜ್ಞಾನದಿಂದ ಅದು ಇಂದಿಗೂ ಲೋಕ ಪ್ರಿಯವಾಗಿದೆ. ಸಾಮಾನ್ಯ ಜನರೂ ಸಹ ಒಂದು ಉತ್ತಮವಾದ ಬದುಕಿನ ವ್ಯವಹಾರಗಳ ನೀತಿಶಿಕ್ಷಣವನ್ನು ಮನೋರಂಜಕವಾಗಿ, ಮನೋಜ್ಞವಾಗಿ ತಿಳಿದುಕೊಳ್ಳಲು ಅವಕಾಶವಿದೆ. ಅದೇರೀತಿಯಲ್ಲಿ ಪೋಷಕರೂ ಸಹ ತಮ್ಮ ತಮ್ಮ ಮಕ್ಕಳಿಗೆ ಸರಳವಾಗಿ, ಸನ್ನಿವೇಶಗಳನ್ನು ಆಕರ್ಷಕವಾಗಿ ಒದಗಿಸಿ ಪ್ರೀತಿಯಿಂದ ಉತ್ತಮ ವ್ಯಕ್ತಿತ್ವ ವಿಕಸನಕ್ಕೆಮಾರ್ಗದರ್ಶನ ಮಾಡಬಹುದು. ಪಂಚತಂತ್ರದಲ್ಲಿ ಮುಖ್ಯವಾಗಿ ಬೋಧನಾ ಮಾಧ್ಯಮ-ಕಥಾನಿರೂಪಣೆ, ಪಠ್ಯಕ್ರಮ-ನೀತಿಶಿಕ್ಷಣ ಹಾಗೂ ಬದುಕಿನ ವ್ಯವಹಾರಗಳ ಬಗ್ಗೆ ವಿಶೇಷ ಜಾಗೃತಿ ಸುಮಧುರವಾಗಿ ಅಡಕವಾಗಿದೆ. ಬೋಧನಾ ಸಲಕರಣೆಗಳು-ಕಥೆಗಳು-ಕಥೆಯೊಳಗೆ ಉಪಕಥೆಗಳು- ಪ್ರತಿ ಕಥೆಯಲ್ಲೂ ಒಂದು ಬಹುಮೂಲ್ಯ ವ್ಯಕ್ತಿತ್ವನಿರ್ಮಾಣ ನೀತಿಯನ್ನು ಅಳವಡಿಸಲಾಗಿದ್ದು, ಬೋಧಪ್ರದವಾದ ಹಾಗೂ ಉಪದೇಶಾತ್ಮಕ ಲಕ್ಷಣಗಳನ್ನು ಕಾಣಬಹುದು.

ಪಂಚತಂತ್ರ ಕಥಾ ಮಾಧ್ಯಮದಲ್ಲಿ ಕವಿಯು ಅನೇಕ ಸಿದ್ಧಾಂತ ವಚನಗಳನ್ನು ಪ್ರಸ್ತುತಪಡಿಸಿ ಅವುಗಳ ನೈತಿಕ ಧಾರ್ಮಿಕ, ರಾಜನೀತಿಕ ಜೀವನದ ಸಾಮಾನ್ಯ ನಿಯಮಗಳನ್ನು ಹಿಡಿದಿಟ್ಟಿದ್ದಾರೆ. ಸಣ್ಣ ಸಣ್ಣ ಹಾಗೂ ಪ್ರಚಲಿತ ವ್ಯಾವಹಾರಿಕ ಭಾಷೆಯನ್ನು ಪ್ರಯೋಗಿಸುತ್ತಾ ಕೇಳುಗರಿಗೆ ತುಂಬಾ ನಿಕಟವಾಗುತ್ತಾರೆ. ಇದನ್ನೇ ಮನೋವಿಜ್ಞಾನದಲ್ಲಿ "ಪರಾನುಭೂತಿ" ಅಥವಾ ಆಂಗ್ಲ ಭಾಷೆಯಲ್ಲಿ "ಎಂಪಥಿ"**(Empathy)** ಎನ್ನುತ್ತಾರೆ. ಇದು ಯಾವುದೇ ವೃತ್ತಿ, ನಾಯಕತ್ವ, ಮುಖಂಡತ್ವ ವಹಿಸಿಕೊಂಡ ವ್ಯಕ್ತಿಯಲ್ಲಿರಬೇಕಾದ ಗುಣವಿದು. ಬೋಧಕ ಅಥವಾ ಶಿಕ್ಷಕರಲ್ಲಂತೂ ಈ ಗುಣ ಬಹಳ ಮುಖ್ಯ. ಆಗ ಮಾತ್ರ ಕಲಿಯುವವರ ಮಟ್ಟಕ್ಕಿಳಿದು, ಸಕಾರಾತ್ಮಕ ಮನೋಭಾವನೆಯಿಂದ, ಅತ್ಯಂತ ಸಂಯಮದಿಂದ ಕಲಿಕೆಯಲ್ಲಿ ಪ್ರೀತಿಯನ್ನುಂಟು ಮಾಡಬಹುದು.

ಶೈಕ್ಷಣಿಕ ಹಾಗೂ. ಮನೋವೈಜ್ಞಾನಿಕವಾಗಿ, ಪಂಚತಂತ್ರ ನೀತಿಕಥೆಗಳನ್ನು ವಿಶ್ಲೇಷಿಸಿದರೆ, ಇಲ್ಲಿ ಬಹಳ ಮುಖ್ಯವಾದ ಒಂದು ಅಂಶವನ್ನು ಗಮನಿಸಬಹುದು. ಅದೇನೆಂದರೆ, ಬೋಧನಾ ಕ್ರಮದಲ್ಲಿ ಕೆಲವು ಸೂತ್ರಗಳು ಕಂಡು ಬರುತ್ತವೆ. ಉದಾಹರಣೆಗೆ **ಸರಳದಿಂದ-ಸಂಕೀರ್ಣದೆಡೆಗೆ, ಸುಲಭ ವಿಚಾರಗಳಿಂದ-ಕಠಿಣ ವಿಚಾರಗಳೆಡೆಗೆ,ತಿಳಿದುದರಿಂದ-ತಿಳಿಯದಿದ್ದುದರಕಡೆಗೆ, ದಿನನಿತ್ಯದ ವಿಚಾರಗಳಿಂದ- ವಿಶೇಷ ವಿಚಾರಗಳೆಡೆಗೆ ಇತ್ಯಾದಿ**. ಈ ಒಂದು ಕ್ರಮದ ಬೋಧನೆಯನ್ನನುಸರಿಸಿದಾಗ, ವಿದ್ಯಾರ್ಥಿಗಳು ಸುಲಭವಾಗಿ ವಿಚಾರಗಳನ್ನು ಗ್ರಹಿಸುವರು, ಆಸಕ್ತಿಯನ್ನು ಹೆಚ್ಚಿಸಿಕೊಳ್ಳುವರು, ಸದಾ ಕ್ರಿಯಾತ್ಮಕ ಹಾಗೂ ಸೃಜನಶೀಲರಾಗುವರು. ಪಂಚತಂತ್ರದ ಐದೂ ತಂತ್ರಗಳ ಮೂಲಕ ಅನೇಕತೆಗಳಲ್ಲಿ ಏಕತೆಯಿಂದ ಕೂಡಿರುವ ಕಥಾಗುಚ್ಛಗಳಲ್ಲಿ ಇದೇ

ಸೂತ್ರವನ್ನು ಕಾಣಬಹುದು. ಇದಕ್ಕೆ ನಿದರ್ಶನವೆಂದರೆ ರಾಜಕುಮಾರರು ನಿತ್ಯವೂ ಕಥೆಗಳನ್ನು ಆಸಕ್ತಿಯಿಂದ ಕೇಳಿ ವಿಚಾರಗಳನ್ನು ಗ್ರಹಿಸಿಕೊಳ್ಳುತ್ತಿದ್ದರು. ಪಂಚತಂತ್ರದ ಐದನೆಯ ತಂತ್ರ ಅಪರೀಕ್ಷಿತಕಾರಕದಲ್ಲಿ ಬರುವ ಕೊನೆಯ ಕಥೆ ಹೇಳುತ್ತಿದ್ದ ಸಂದರ್ಭದಲ್ಲಿ, ವಿಷ್ಣುಶರ್ಮರು ಹೀಗೆ ಹೇಳುತ್ತಾರೆ." ಮಣಿಭದ್ರನು ಧರ್ಮಾಧಿಕಾರಿಗಳ ಉಪದೇಶವನ್ನು ಕೇಳಿ ಅವರ ಅನುಮತಿಯನ್ನು ಪಡೆದು ಒಬ್ಬ ಸಹಾಯಕನೊಡನೆ ತನ್ನ ಮನೆಗೆ ಹೋಗಿ ಬಹಳಕಾಲ ಭೋಗಗಳನ್ನು ಅನುಭವಿಸುತ್ತಾ ಸುಖವಾಗಿ ಕಾಲ ಕಳೆದನು ಎಂಬಲ್ಲಿಗೆ ವಿಷ್ಣುಶರ್ಮವಿರಚಿತ ಪಂಚತಂತ್ರದ ಐದನೆಯ ತಂತ್ರವಾದ ಅಪರೀಕ್ಷಿತಕಾರಕವು ಸಂಪೂರ್ಣವಾದುದು." ಎಂದು ಹೇಳುತ್ತಾ, ವಿಷ್ಣುಶರ್ಮರು ರಾಜಕುಮಾರರನ್ನು ಕುರಿತು "ಕೇಳಿರಿ ರಾಜನಾದವನು ಬಹಳ ಎಚ್ಚರಿಕೆಯಿಂದ ಇರಬೇಕು. ಹಾಗೆಯೇ ಬುದ್ಧಿವಂತಿಕೆಯೂ ಮುಖ್ಯ. ವಿವೇಚನೆಯಿಂದ ಮಂತ್ರಿಗಳ ಮಾತನ್ನು ಕೇಳಬೇಕು. ಕೊನೆಗೆ ತನ್ನ ವಿವೇಕದಂತೆ ವರ್ತಿಸಬೇಕು. ರಾಜಪದವಿಯೆಂದರೆ ಆಟದ ಸಿಂಹಾಸನವಲ್ಲ. ಪುರಾಣ, ವ್ಯಾಕರಣ ಶಾಸ್ತ್ರ, ಇತಿಹಾಸ ಇತ್ಯಾದಿಗಳನ್ನು ಕಲಿತರೆ ಮಾತ್ರ ಆಪತ್ತಿನಿಂದ ಪಾರಾಗಲು ಸಾಧ್ಯ. ರಾಜ್ಯವನ್ನು ಉಳಿಸಿಕೊಳ್ಳಬಹುದು. ಇರಲಿ ಇದನ್ನೆಲ್ಲಾ ಚೆನ್ನಾಗಿ ಆಲೋಚಿಸಿ ನಿಮ್ಮ ಅಭಿಪ್ರಾಯಗಳನ್ನು ನಾಳೆ ತಿಳಿಸುವಿರಂತೆ."[41] ಹೀಗೆ ಹೇಳಿ ರಾಜಪದವಿಯ ಮಹತ್ವ ಕುರಿತು ಚಿಂತನೆ ಮಾಡಲು ಪ್ರೇರೇಪಿಸಿದರು. ಇದನ್ನೇ ಪ್ರೇರಣೆ ಅಥವಾ ಉತ್ತೇಜನ**(Motivation)** ಎಂದು ಶೈಕ್ಷಣಿಕ ಮನೋವಿಜ್ಞಾನವು ತಿಳಿಸುತ್ತದೆ. ಈ ರೀತಿಯಾಗಿ ಶಿಕ್ಷಕನಾದವನು ಸಂಪೂರ್ಣ ವಿಷಯಜ್ಞಾನ, ಮನೋವಿಜ್ಞಾನ ಹಾಗೂ ಬೋಧನಾ ಕೌಶಲ್ಯಗಳ ಪರಿಜ್ಞಾನ ಹೊಂದಿರಬೇಕು.

अन्तःसारैरकुटिलैरच्छिद्रैः सुपरीक्षितैः ।
मन्त्रिभिर्धार्यते राज्यं सुस्तम्भैरिव मन्दिरम् ॥[42]

ಒಳಗೆ ಗಟ್ಟಿಯಾಗಿ, ನೇರವಾಗಿದ್ದು, ಒಡಕುಗಳಿಲ್ಲದೆ, ಚೆನ್ನಾಗಿ ಪರೀಕ್ಷಿಸಲ್ಪಟ್ಟಿರುವ ಒಳ್ಳೆಯ ಕಂಬಗಳು ಕಟ್ಟಡದ ಭಾರವನ್ನು ಹೊರುವಂತೆ, ಒಳಗೆ ಸತ್ವವನ್ನುಳ್ಳವರೂ, ಮೋಸವಿಲ್ಲದವರೂ, ಚೆನ್ನಾಗಿ ಪರೀಕ್ಷಿಸಲ್ಪಟ್ಟವರೂ ಆದ ಮಂತ್ರಿಗಳೇ ರಾಜ್ಯದ ಭಾರವನ್ನು ನಿರ್ವಹಿಸುತ್ತಾರೆ. ಮಂತ್ರಿಗಳೂ ರಾಜನಿಗೆ ಉತ್ತಮ ಸಲಹೆಗಳನ್ನು ಕೊಡುವ ವಿದ್ಯಾವಂತ ಗುರುಗಳೇ ಇದ್ದಂತೆ.

---

41. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ-5, ಪು.235.(2015) ವರ್ಣಿಲ, 39/2-11,ಕಲ್ಯಾಣಿ ಗಾರ್ಡನ್, ಬನಶಂಕರಿ, 1ನೇ ಹಂತ, ಬೆಂಗಳೂರು-560050.
42. **ಸುಧಾಕರ್ ಮಾಲವೀಯ,** ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂಪಂಚತಂತ್ರಮ್, ಮಿತ್ರಭೇದಃ- ಶ್ಲೋ-137, ಪು-74, (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಈ ಸಂದರ್ಭದಲ್ಲಿ ಶಿಕ್ಷಣ ತಜ್ಞರಾದ ರವೀಂದ್ರನಾಥ ಟ್ಯಾಗೋರ್‌ರವರು ಆದರ್ಶ ಶಿಕ್ಷಕರ ಲಕ್ಷಣವನ್ನು ಎಷ್ಟು ಸೊಗಸಾಗಿ ತಿಳಿಸಿರುವುದನ್ನು ಸ್ಮರಿಸಿಕೊಳ್ಳಬಹುದು. **" A teacher can never truly teach unless he is still learning himself.A lamp cannot light another lamp unless it continues to burn it's own flame."** "ಅಂದರೆ ಒಬ್ಬ ಶಿಕ್ಷಕನು ತಾನೇ ಸರಿಯಾದ ತಿಳುವಳಿಕೆ ಬೆಳೆಸಿಕೊಳ್ಳುತ್ತಿರುವುದಿಲ್ಲವಾದರೆ, ನಿಜವಾಗಿಯೂ ಮತ್ತೊಬ್ಬರಿಗೆ ಬೋಧಿಸಲು ಸಮರ್ಥನಾಗಲಾರನು. ತಾನೇ ಉರಿಯದಿರುವ ದೀಪವು ಮತ್ತೊಂದು ದೀಪವನ್ನು ಹಚ್ಚಿ ಉರಿಸಲು ಸಾಧ್ಯವಾಗುವುದಿಲ್ಲ." ಒಬ್ಬ ಉತ್ತಮ ಶಿಕ್ಷಕನು ಸದಾ ಒಬ್ಬ ಉತ್ತಮ ವಿದ್ಯಾರ್ಥಿಯಾಗಿರಬೇಕು. ಸರಿಯಾದ ಶಿಕ್ಷಣವನ್ನು ಸರಿಯಾದ ಶಿಕ್ಷಕರಿಂದ ಮಾತ್ರ ಪಡೆಯಲು ಸಾಧ್ಯ.

**"As is the teacher so is the student." "As you sow,so you reap"**[43]

"ವರ್ತನೆಯ ನರ್ತನಕೆ ಪರಿವರ್ತನೆಯ ಶೃಂಗಾರ" ಎಂಬ ಕವಿವಾಣಿಯಂತೆ ಮಗುವಿನ ಅನಾರೋಗ್ಯಕರ ವರ್ತನೆಯನ್ನು ತಿದ್ದಿತೀಡಿ ಆರೋಗ್ಯಕರ ವರ್ತನೆಯೆಡೆಗೆ ಪರಿವರ್ತಿಸಿ ಬದಲಾವಣೆಯ ಶೃಂಗಾರ ಮಾಡುವ ಶಿಕ್ಷಣ ಸಂಸ್ಥೆಗಳಿಗೆ ಸ್ವಾಗತ. ಸ್ವಾಮಿವಿವೇಕಾನಂದರು "ಈಗಾಗಲೇ ಮಗುವಿನ ಅಂತರಂಗದಲ್ಲಿ ಹುದುಗಿರುವ ಪರಿಪೂರ್ಣತೆ ಮತ್ತು ದೈವತ್ವವನ್ನು ಹೊರತರುವುದೇ ಶಿಕ್ಷಣ ಎಂದು ಶಿಕ್ಷಣದ ಮಹತ್ವವನ್ನು ಕುರಿತು ವರ್ಣಿಸಿದ್ದಾರೆ. ಈ ಹಾದಿಯಲ್ಲಿ ಶಿಕ್ಷಣ ಸಂಸ್ಥೆಗಳು ಸಾಗಿದರೆ, ಇಲ್ಲಿ ಸೇವೆ ಸಲ್ಲಿಸುವ ಗುರುಗಳಲ್ಲಿ ಗುರುತ್ವಾಕರ್ಷಣ ಶಕ್ತಿ ಸಮೃದ್ಧಿಯಾದರೆ ಸಾಮಾಜಿಕರಲ್ಲಿ ಮೌಲ್ಯ ವರ್ಧನೆ ಖಚಿತ.[44] ಸುಂದರ ಸಮಾಜವೆಂಬ ತೋಟದ ಮಾಲೀಕರೆ ಶಿಕ್ಷಕರು. ಸಮಾಜದ ಪ್ರತಿಯೊಬ್ಬ ಸಾಧಕನ ಹಿಂದೆಯೂ ಶಿಕ್ಷಕನ ಶ್ರಮ ಇದ್ದೇ ಇರುತ್ತದೆ. ಮಕ್ಕಳ ಲಾಲನೆಪಾಲನೆಯಲ್ಲಿ ತಾಯಿಯ ಪಾತ್ರ ಎಷ್ಟುಮುಖ್ಯವೋ, ಹಾಗೆಯೇ ಮಕ್ಕಳ ಬೌದ್ಧಿಕ ಪ್ರಗತಿ ಸಾಧಿಸುವಲ್ಲಿ ಶಿಕ್ಷಕನ ಪಾತ್ರವೂ ಅಷ್ಟೇ ಮುಖ್ಯವಾಗಿದೆ. ಊರಿಗೆ ದಾರಿಯನ್ನು ಆರು ತೋರಿದರೇನು? ಎಂಬ ವಿಶಾಲ ಮನೋಭಾವ ನಮಗೆ ದಾರಿ ದೀಪವಾಗಬೇಕು. ನಮ್ಮ ಸುತ್ತಮುತ್ತಲಿನ ಪ್ರಾಣಿಪಶುಪಕ್ಷಿಗಳ ಸಾಂಘಿಕ ಬದುಕು ಎಷ್ಟು ಅದ್ಭುತ ಮತ್ತು ಅನುಕರಣೀಯ. ಪೂರ್ವಾಧ್ಯಯನವಿಲ್ಲದ ಅಧ್ಯಾಪಕ, ಉತ್ತರಾಧ್ಯಯನವಿಲ್ಲದ ವಿದ್ಯಾರ್ಥಿ, ಶಿಕ್ಷಣಕ್ಕೆ ಶೋಭೆ ತರಲಾರರು. ಸುಭಾಷಿತವೊಂದರಲ್ಲಿ ಅಧ್ಯಾಪಕರ ಬಗ್ಗೆ ಎಷ್ಟು ಚೆನ್ನಾಗಿ ಹೇಳಲಾಗಿದೆ.

---

43. **ಚಿತ್ತಿದಂತೆ ಬೆಳೆ.**
44. **ಮೌಲ್ಯವರ್ಧಿತ ಶಿಕ್ಷಣ** –ವಿಕಾಸ್ ಪೀಡಿಯಾ, https://in.vikaspedia.in

ಅಧ್ಯಾಪಕನು ಸುಮ್ಮನೆ

वाच्यतां समयो अतीतः स्पष्टमग्रे भविष्यति ।

इति पाठयतां ग्रंथे काठिण्यं कुत्र विद्यते ॥

ಅಂದರೆ "ಓದಿಕೊಂಡು ಹೋಗು, ವೇಳೆಯಾಯಿತು, ಮುಂದೆ ಎಲ್ಲವೂ ನಿನಗೇ ತಿಳಿಯುತ್ತದೆ" ಎಂದುಕೊಂಡು ಹೋದರೆ ಪಾಠದ ಮಧ್ಯದಲ್ಲಿ ಅಂಥವರಿಗೆ ಏನೂ ಕಷ್ಟ ಬರಲಾರದು ಆದರೆ ಇದು "ಜ್ಞಾನಾಭ್ಯಾಸ" ಅಥವಾ "ವಿದ್ಯಾಭ್ಯಾಸ" ವಾದೀತೆ ಹೊರತು "ವಿದ್ಯೆ" ಎನಿಸಲಾರದು." ಅದಕ್ಕಾಗಿ ವಿದ್ಯೆ ಜ್ಞಾನದಾಯಿನಿಯಾಗಬೇಕಾದರೆ ಸಾಕಷ್ಟು ಪೂರ್ವಾಧ್ಯಯನ, ಹಿತ-ಮಿತ ಶ್ರದ್ಧೆ, ಸರಿಯಾಗಿ ಅರ್ಥವಾದ ಮೇಲೇ ತೃಪ್ತಿ ಪಟ್ಟುಕೊಳ್ಳುವ ಸ್ವಭಾವ ಇವು ವಿದ್ಯಾರ್ಥಿಯಲ್ಲಿ ಮೂಡಿದಾಗ ಮಾತ್ರ ದೇಶವು ಒಳ್ಳೆಯ ವಿದ್ಯಾವಂತರನ್ನು ಪಡೆಯಲು ಸಾಧ್ಯ.[45] ಉಪಾಧ್ಯಾಯರೂ ಸಹ ಮಕ್ಕಳಿಗೆ ಅರ್ಥಪೂರ್ಣ ಬೋಧನೆ ಮಾಡಿದ ನಂತರದಲ್ಲಿ ಅವರ ಪ್ರತಿಕ್ರಿಯೆಗಳನ್ನು ನೋಡಿದನಂತರವೇ ತೃಪ್ತಿಪಟ್ಟುಕೊಳ್ಳುವ ಸ್ವಭಾವದವರಾಗಿರಬೇಕು.

ಪಂಚತಂತ್ರದಲ್ಲಿ ವಿಷ್ಣುಶರ್ಮರು ಒಳ್ಳೆಯ ಪ್ರತಿಭಾನ್ವಿತ ಗುರುಗಳಾಗಿ, ರಾಜಕುಮಾರರಿಗೆ ಅರ್ಥಪೂರ್ಣ ವಿದ್ಯೆ, ರಾಜನೀತಿ ಶಿಕ್ಷಣ, ಬದುಕಿನ ನೀತಿ, ಸಾಮಾನ್ಯಜ್ಞಾನ ಇತ್ಯಾದಿಗಳನ್ನು ಅತ್ಯಂತ ಸಮಯೋಚಿತವಾಗಿ ಸೂಕ್ತ ಪಂಚತಂತ್ರಗಳನ್ನು ರಚಿಸಿ, ಉತ್ತಮ ಕಥಾ ಸನ್ನಿವೇಶದಲ್ಲಿ ವೈಯುಕ್ತಿಕ ಗಮನಹರಿಸಿ, ಬೋಧನೆ ಮಾಡಿದ್ದಾರೆ. ಇದು ನಿಜಕ್ಕೂ ಶೈಕ್ಷಣಿಕ ಮನೋವಿಜ್ಞಾನದ ಅನುಕ್ರಮವಾಗಿದೆ. ಇದೇ ಪಂಚತಂತ್ರದ ಒಂದು ವಿಶಿಷ್ಟ ಹಾಗೂ ಆದರ್ಶ ಗುಣವಾಗಿರುತ್ತದೆ. ವಿಷ್ಣುಶರ್ಮರು ಒಂದು ಒಳ್ಳೆಯ ತಂತ್ರವನ್ನು ಬಳಸಿ ಪಂಚತಂತ್ರ ಕಥೆಗಳು ಆಕರ್ಷಕ ಹಾಗೂ ಮನೋಜ್ಞವಾಗಿರುವಂತೆ ಸಂಯೋಜನೆ ಮಾಡಿದ್ದಾರೆ. ಮಾತನಾಡುವ ಪ್ರಾಣಿಗಳು ಮತ್ತು ಪಕ್ಷಿಗಳು ಭಾರತೀಯ ಸಾಹಿತ್ಯದಲ್ಲಿ ಬಹಳ ಹಿಂದಿನಿಂದಲೂ ಕಂಡುಬಂದಿರುತ್ತದೆ. ಋಗ್ವೇದದಲ್ಲಿ ಸರಮ ದೇವಶುನೀ ಋಷಿಗೆ ಹಸುಗಳನ್ನು ಹುಡುಕಿಕೊಟ್ಟ ಹೆಣ್ಣು ನಾಯಿ, ಮನುಷ್ಯರಿಗೆ ಹಸುಗಳ ಹಾಲನ್ನು ದೊರಕಿಸಿಕೊಟ್ಟ ಕೀರ್ತಿ ಇದರದ್ದೇ. ಅಸುರರು ಕದ್ದೊಯ್ದ ಹಸುಗಳನ್ನು ಇಂದ್ರನಿಗೆ ಪತ್ತೆ ಮಾಡಿ ಕೊಟ್ಟದ್ದೂ ಇದೇ. ಸರಮೆಗೆ ಮೊದಲು ಇಂದ್ರದೇವಪಕ್ಷಿ ಸುಪರ್ಣನನ್ನು ಹಸುಗಳ ಪತ್ತೆಗಾಗಿ ಕಳುಹಿಸಿರುತ್ತಾನೆ. ಆದರೆ ಸುಪರ್ಣ ಫಣಿಗಳ ಆಮಿಷಕ್ಕೆ ಮಣಿದು ಇಂದ್ರನನ್ನು ವಂಚಿಸುತ್ತಾನೆ.

45. **ವಿ.ಎನ್.ಭಟ್**. ಜ್ಞಾನದೀಪ, ಅ.ನಂ-8, ಪು-19.(1993) ವಿಶ್ವನಾಥ ಪ್ರಕಾಶನ ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ-577201

ಆದರೆ ಸರಮ ಯಾವ ಲೋಭಕ್ಕೂ ಒಳಗಾಗದೆ ಇಂದ್ರನಿಗೆ ನಿಷ್ಠೆಯಾಗಿ ಉಳಿಯುತ್ತಾಳೆ. ಈ ಕಾರಣಕ್ಕೆ ನಾಯಿಯನಿಷ್ಠೆ ವಿಶೇಷವಾಗಿ ಗುರುತಿಸಲ್ಪಡುತ್ತದೆ ಅನ್ನುವುದೊಂದು ಕಥೆ. ವೇದ ಕಥನಗಳನ್ನು ಸರಿಯಾಗಿ ಅರ್ಥಮಾಡಿಕೊಂಡರೆ ಯಾವ ಪ್ರಾಣಿಯೂ ಹೆಚ್ಚಲ್ಲ, ಯಾವುದೂ ಕಡಿಮೆಯಿಲ್ಲ. ಯಾವುದೂ ದೈವಿಕವಲ್ಲ, ಯಾವುದೂ ದೈವಿಕ ಅಲ್ಲದೆಯೂ ಇಲ್ಲ. ಎಲ್ಲ ಪ್ರಾಣಿಗಳೂ ಪರಸ್ಪರ ಪೂರಕ ಅನ್ನುವುದು ತಿಳಿಯುತ್ತದೆ. ಅಂದಿನಿಂದ ಸರಮಾ, ಸಾರಮೇಯಗಳು ಮನುಷ್ಯರ ಗೆಳೆಯರಾದರು ಎನ್ನುವುದೊಂದು ಕಥೆ.

ಮಹಾಭಾರತದಲ್ಲಿ ದಮಯಂತಿಯು ನಳಮಹಾರಾಜನನ್ನು ಕೇವಲ ಒಂದು ಸುವರ್ಣ ಹಂಸದಿಂದ ಅವನ ಸದ್ಗುಣಗಳು ಹಾಗೂ ಸಾಧನೆಗಳನ್ನು ಕೇಳಿ ಪ್ರೀತಿಸಿದಳು ಹಾಗೂ ವಿವಾಹವಾದಳು.[46]

ಛಾಂದೋಗ್ಯೋಪನಿಷತ್ ಕಥೆಯಲ್ಲಿ ಹಂಸಪಕ್ಷಿಯು ರೂಪ, ಹೋರಿಯರೂಪ, ಜಲಚರ ಪಕ್ಷಿಯ ರೂಪದಲ್ಲಿ ಬಂದು ಬ್ರಾಹ್ಮಣ ವಿದ್ಯಾರ್ಥಿ ಸತ್ಯಕಾಮನಿಗೆ ವಾಸ್ತವದ ಸ್ವರೂಪಕ್ಕೆ ಸಂಬಂಧಿಸಿದ ವಿಷಯಗಳನ್ನು ತಿಳಿಸುತ್ತಾ ಶಿಕ್ಷಣ ಕೊಡುವುದು.

ಬಹಳಷ್ಟು ಪ್ರಾಚೀನ ಸಂಸ್ಕೃತಿಗಳಲ್ಲಿ ಮಾನವನಲ್ಲದ ಸ್ವರೂಪದಲ್ಲಿನ ಜೀವನ ಪಕ್ಷಿಗಳು, ಪ್ರಾಣಿಗಳು ಮತ್ತು ಮರಗಳೂ ಸಹ ಅತಿಮಾನುಷ ಸಾಮರ್ಥ್ಯ ಮತ್ತು ಶಕ್ತಿಗಳನ್ನು ಪಡೆದಿವೆಯೆಂದೂ, ವಿಶೇಷ ರೀತಿಯ ಬುದ್ಧಿವಂತಿಕೆ ಮತ್ತು ಪವಿತ್ರತೆಯ ವಿಶೇಷ ಬಾಂಧವ್ಯ ಹೊಂದಿರುವುದಾಗಿಯೂ ನಂಬಲಾಗಿತ್ತು. ಹಾಗೂ ಭಾರತೀಯ ಚಿಂತನೆ ಮತ್ತು ನಂಬಿಕೆಯು ಮಾನವ ಮತ್ತು ಅಮಾನವೀಯ ಜೀವಿಗಳ ಶ್ರೇಣಿಯಲ್ಲಿ ಪೂರ್ತಿಯಾಗಿ ವ್ಯತ್ಯಾಸಗಳನ್ನು ಮಾಡಿರಲಿಲ್ಲ. ಎಲ್ಲವೂ ಒಂದು ರೀತಿಯಲ್ಲಿ ಇಡಿಯೇ. ಎಲ್ಲವೂ ಮಾನವನಲ್ಲಿರುವ ದೈವತ್ವದ ಕಿಡಿಯನ್ನು ಪಡೆದಿರುವಂತಹವೇ ಎಂಬ ನಂಬಿಕೆಯಿತ್ತು. ವಿಶ್ವ ದೃಷ್ಟಿಕೋನದಿಂದ ಪುಟಿದ ಸಾಹಿತ್ಯ ಸಂಪ್ರದಾಯದಲ್ಲಿ ಮೇಲೆ ವಿವರಿಸಲಾಗಿರುವಂತೆ ಬುದ್ಧಿವಂತಿಕೆಯ ಮಾತುಗಳನ್ನು ಮಾನವನಲ್ಲದ ಪಾತ್ರಗಳಲ್ಲಿ ನುಡಿಸುವುದು ಸ್ವಾಭಾವಿಕವಾಗಿ ಬೆಳೆದುಬಂದಿತ್ತು. ಮಾನವ ಹಾಗೂ ನೈಸರ್ಗಿಕ ಪ್ರಪಂಚದಲ್ಲಿ ಸರಾಗವಾಗಿ ಸಂವಹನ ನಡೆಸಬಹುದು. ಮತ್ತು ಪರಸ್ಪರ ಅಭಿಪ್ರಾಯ ವ್ಯಕ್ತಪಡಿಸಬಹುದು.[47] ವಿಷ್ಣುಶರ್ಮರಿಗೆ ಈ ಒಂದು ಪೂರ್ವ ನಿದರ್ಶನದ ಅರಿವಿದ್ದು, ನೈಸರ್ಗಿಕ ಪ್ರಪಂಚದ ಪ್ರಾಣಿಗಳು, ಪಕ್ಷಿಗಳು ಮತ್ತು ಇತರ ಜೀವಿಗಳು ಬೋಧನೆಗೆ ಅಥವಾ ಶಿಕ್ಷಣಕ್ಕೆ ಅತ್ಯುತ್ತಮ ಸಾಧನಗಳು. ನೈಜ ರಾಜಕೀಯ ಸಂದರ್ಭ ಹಾಗೂ ನೀತಿಗೆ ಸಂಬಂಧಿಸಿದ ವಿಚಾರಗಳಿಗೆ ಅತ್ಯಂತ ಸಮಂಜಸವಾದುದು ಎಂಬ ಅಭಿಪ್ರಾಯ ಹೊಂದಿದ್ದರು. ಈ ತಂತ್ರವನ್ನು ಅತ್ಯಂತ ಸಮರ್ಪಕವಾಗಿ ಬಳಸಿ ಪಂಚತಂತ್ರ ಕಥೆಗಳನ್ನು ಸರಳವೂ,

---

**46. 1) Chandra Rajan,** Translated from Sanskrit,VISNU SARMA,The Panchatantra, PP-40, Penguin Random House India Pvt.Ltd, Gurgaon-122002, Haryana(1993)

**2).** ಸರಮಾ ದೇವಶುನೀಃ ಋಷಿಗೆ ಹಸುಗಳನ್ನು ಹುಡುಕಿಕೊಟ್ಟ ಹೆಣ್ಣು ನಾಯಿ, HTTPS://aralimara.com Aug 27, 2018.

**47. Chandra Rajan,** Translation from Sanskrit, VISNU SARMA, The Panchatantra, Introduction -PP-37-39.(1993) Penguin Random House India Pvt.Ltd.Gurgaon-122002.Haryana.India.

ಆಕರ್ಷಕವೂ, ಅರ್ಥಪೂರ್ಣವೂ ಮತ್ತು ಸ್ವಾರಸ್ಯಕರವೂ ಆಗಿರುವಂತೆ ಹೆಣೆದಿಟ್ಟಿರುತ್ತಾರೆ. ಸಾರವಾದುದನ್ನು ಹೇಗೆ ಸ್ವೀಕರಿಸಬೇಕೆಂದು ಪಂಚತಂತ್ರದ ಕಥಾಮುಖದಲ್ಲಿ ಹೇಳಲಾಗಿದೆ:-

अनन्तपारं किल शब्दशास्त्रं स्वल्पं तथाऽऽयुर्बहवश्च विघ्नाः ।

सारं तथो ग्राहमपास्य फल्गु हसैर्यथा क्षीरमिवाम्बुमध्यात् ॥[48]

ಶಬ್ದಶಾಸ್ತ್ರ ಕೊನೆಯಿಲ್ಲದ್ದು. ಆಯಸ್ಸೋ ಬಹಳ ಕಡಿಮೆಯಾದದ್ದು, ತೊಂದರೆಗಳೋ ಅಪಾರವಾಗಿವೆ. ಆದುದರಿಂದ ಅಸಾರವಾದುದನ್ನು ತ್ಯಾಗಮಾಡಿ ಸಾರವಾದುದನ್ನು ನೀರಿನ ಮಧ್ಯದಿಂದ ಹಾಲನ್ನು ಬೇರ್ಪಡಿಸಿ ಹಂಸವು ತೆಗೆದುಕೊಳ್ಳುವಂತೆ ಗ್ರಹಿಸಬೇಕು. ಅಂದರೆ ಶಾಸ್ತ್ರಾಧ್ಯಯನ ಮಾಡಲು ಬಹಳ ವರ್ಷಗಳೇ ಬೇಕು. ಆಯಸ್ಸಿರುವವರೆಗೆ ಪ್ರಯತ್ನಿಸಿದರೂ ಪೂರ್ಣಾಧ್ಯಯನ ಮಾಡಲು ಸಾಧ್ಯವಿಲ್ಲ. ಹೀಗಿರುವಾಗ ರಾಜನಂದನರಿಗೆ ಯಾವುದು ಅತ್ಯಾವಶ್ಯಕ ಆಗಿದೆಯೋ ಅಂಥಹ ಶಿಕ್ಷಣವನ್ನು ನೀಡಲು ಬಹಳ ತಂತ್ರಗಾರಿಕೆ ಹಾಗೂ ಬೋಧನಾ ಕೌಶಲ್ಯವಿರಬೇಕು. ಅದಕ್ಕೆ ಬಹಳ ಸೂಕ್ತವಾದ ಶಿಕ್ಷಕರೆಂದರೆ ವಿದ್ಯಾರ್ಥಿಗಳ ಮೆಚ್ಚಿನ ಪ್ರತಿಭಾವಂತ ವಿಷ್ಣುಶರ್ಮರೇ ಸರಿ ಎಂದು ಆಸ್ಥಾನದಲ್ಲಿದ್ದ ವಿದ್ವಾಂಸರುಗಳು ಅಮರಶಕ್ತಿ ರಾಜನಿಗೆ ಸಲಹೆ ನೀಡಿದ ಸಂದರ್ಭದಲ್ಲಿ ಈ ಮಾತು ಬಂದಿರುತ್ತದೆ.



48. **ಸುಧಾಕರ್ ಮಾಲವೀಯ,** ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂಪಂಚತಂತ್ರಮ್, ಕಥಾಮುಖ, ಶ್ಲೋ-9, ಪು-7 (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

## ಅಧ್ಯಾಯ – ೩

## ವ್ಯಕ್ತಿತ್ವದ ಬೆಳವಣಿಗೆ ಮತ್ತು ವಿಕಾಸ Personality development

ಅಧ್ಯಾಯ ೩–1. ವ್ಯಕ್ತಿಯ ಬೆಳವಣಿಗೆಯಲ್ಲಿ ಮೂಲ ಸ್ವಭಾವ ಮತ್ತು ಸನ್ನಿವೇಶದ ಪ್ರಭಾವ–ವೈಯಕ್ತಿಕ ಭಿನ್ನತೆಗಳು. **Individual Differences**

ಅಧ್ಯಾಯ ೩–2. ಕಲಿಕೆ–ಅರ್ಥ–ಸ್ವರೂಪ. **Learning-meaning-nature**

ಅಧ್ಯಾಯ ೩–೩. ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳು–

ಅಭಿಪ್ರೇರಣೆ– **(Motivation)**

ಅವಧಾನ. **(Attention)**

ಅಧ್ಯಾಯ ೩–4. ಸ್ಮೃತಿ–ವಿಸ್ಮೃತಿ–––ಕಲಿಕೆಯ ವರ್ಗಾವಣೆ.

**(Memory-Forgetting-Transfer of learning)**

ಅಧ್ಯಾಯ ೩–೫. पञ्चतन्त्रस्य–प्रथमं तन्त्रम् – मित्रभेदः ಕಥೆಗಳ ವಿಶ್ಲೇಷಣೆ

**೩–1 ವ್ಯಕ್ತಿಯ ಬೆಳವಣಿಗೆಯಲ್ಲಿ ಮೂಲ ಸ್ವಭಾವ ಮತ್ತು ಸನ್ನಿವೇಶದ ಪ್ರಭಾವ – ವೈಯಕ್ತಿಕ ಭಿನ್ನತೆಗಳು.**

ಮಾನವನ ಸರ್ವತೋಮುಖ ವಿಕಾಸವೇ ಶಿಕ್ಷಣದ ಗುರಿ. ಹಾಗೆಂದರೆ, ವ್ಯಕ್ತಿಯ ಶಾರೀರಿಕ, ಮಾನಸಿಕ, ಬೌದ್ಧಿಕ, ಸಾಮಾಜಿಕ, ನೈತಿಕ ಮತ್ತು ಆಧ್ಯಾತ್ಮಿಕ ವಿಕಾಸವೇ ಶಿಕ್ಷಣದ ಗುರಿ. "शरीरमाद्यम् खलुधर्मसाधनम्"– "ಆರೋಗ್ಯವಂತ ಶರೀರದಲ್ಲಿ ಆರೋಗ್ಯವಂತ ಮನುಷ್ಯ." **"A Sound Mind in a Sound Body."** ಅದೇ ರೀತಿಯಲ್ಲಿ ಆರೋಗ್ಯವಂತ ಮನುಷ್ಯನಲ್ಲಿ ಆರೋಗ್ಯವಂತ ಮನಶ್ಶಕ್ತಿ.[1]

सुवर्णापुष्पितां पृथ्वीं विचिन्वन्ति नरास्त्रयः।

शूरश्च कृतविद्यश्च यश्च जानाति सेवितुम् ॥[2]

ಮಹಾಭಾರತದಲ್ಲಿ ಬರುವ ಈ ಉಕ್ತಿ ಎಷ್ಟು ಅರ್ಥಪೂರ್ಣವಾಗಿದೆ. ಶೂರರು, ವಿದ್ಯಾವಂತರು, ಚೆನ್ನಾಗಿ ಸೇವೆ ಮಾಡಬಲ್ಲವರು – ಈ ಮೂವರೂ ಭೂಮಿಯಲ್ಲಿ ಸುವರ್ಣಪುಷ್ಪಗಳನ್ನು ಬೆಳೆಯಬಲ್ಲರು ಅಂದರೆ, ಮೊದಲನೆಯದಾಗಿ ತಾಯ್ನಾಡಿಗಾಗಿ ಜೀವವನ್ನೂ ಅರ್ಪಿಸಬಲ್ಲ ಶೂರ ಅವಳ ಸೇವೆಯನ್ನು ಚೆನ್ನಾಗಿ ಮಾಡಬಲ್ಲ. "ವೀರ ಮರಣಂ ತೃಣಂ–ಅವನಿಗೆ ಮರಣವೇ ಮಹಾನವಮಿ. ಎರಡನೆಯದು ದೇಶವನ್ನು ಸೇವಿಸುವ ಇನ್ನೊಂದು ವರ್ಗ ವಿದ್ಯಾವಂತರು. ತಮ್ಮ ಬುದ್ಧಿ ಶಕ್ತಿಯಿಂದ ನವ ಪೀಳಿಗೆಯನ್ನು ಅಣಿಗೊಳಿಸಿ, ದೇಶವನ್ನು 'ಜ್ಞಾನಂ – ವಿಜ್ಞಾನ ಸಹಿತಂ ಎಂಬಂತೆ ಜ್ಞಾನ – ವಿಜ್ಞಾನಗಳಲ್ಲಿ ಮುನ್ನಡೆ ಸಾಧಿಸುವಂತೆ ಮಾಡಿ, ಸರಿಯಾದ ದಿಕ್ಕಿನಲ್ಲಿ ಒಯ್ಯಬಲ್ಲ ಸಾಮರ್ಥ್ಯ ವಿದ್ಯಾವಂತರಿಗೆ ಮಾತ್ರ ಇರುತ್ತದೆ.

ಇನ್ನು ಮೂರನೆಯದಾಗಿ ಯಾವುದೇ ಸೇವಾ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದರೂ, ವೃತ್ತಿ ದ್ರೋಹ ಬಗೆಯದೆ ಪ್ರತಿಯೊಬ್ಬರೂ ಸೇವೆ ಸಲ್ಲಿಸಿದರೆ, ದೇಶ ಅಭಿವೃದ್ಧಿ ಹೊಂದುವುದು. ಒಟ್ಟಾರೆ ಹೇಳುವುದಾದರೆ ದೇಶಕ್ಕಾಗಿ ಮಡಿಯುವ, ಮಿಡಿಯುವ, ದುಡಿಯುವ ಶೂರ, ವಿದ್ಯಾವಂತ, ಸೇವಕರು ಮಾತ್ರ ಭೂಮಿಯಲ್ಲಿ ಬಂಗಾರ ಬೆಳೆಯಬಲ್ಲರು.[3] ಈ ನಿಟ್ಟಿನಲ್ಲಿ ಮನುಷ್ಯನ ವ್ಯಕ್ತಿತ್ವ ರೂಪುಗೊಳ್ಳಬೇಕು. ಅದಕ್ಕೆ ಸೂಕ್ತವಾದ ಸನ್ನಿವೇಶಗಳನ್ನು ಪ್ರತಿಭಾವಂತ ಗುರುಗಳಾದವರು ಅವರ ಶಿಷ್ಯರಿಗೆ ಒದಗಿಸಿ ಸುಂದರ ವ್ಯಕ್ತಿತ್ವ ನಿರ್ಮಾಣ ಮಾಡುತ್ತಾರೆ. ಇದೇ ಕಾರ್ಯವನ್ನು ವಿಷ್ಣುಶರ್ಮರು ರಾಜಕುಮಾರರ ವಿಚಾರದಲ್ಲಿ ಅದ್ಭುತವಾದ ಸಾಧನೆಗೈದಿದ್ದಾರೆ.

---

1. deck.org>kreedothsava Sri Rama Vidya Kendra Trust.
2. **ಸುಧಾಕರ್ ಮಾಲವೀಯ,** ಸಂಪಾ – ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–46, ಪು–34, ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001 (1993)
3. **ವಿ.ಎನ್.ಭಟ್,** ಜ್ಞಾನದೀಪ, ಅ.ನಂ–104, ಪು–205. ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ577201 (1993).

अज्ञानमालस्य जडत्व निद्रा प्रमादमूढत्व मुखास्तमोगुणाः ।

एतैः प्रयुक्तो न हि वेत्ति किंचि न्निद्रालुवत् स्तम्भवदेव तिष्टति[4]

ಅಜ್ಞಾನ, ಆಲಸ್ಯ, ಜಡತ್ವ, ನಿದ್ರೆ, ಅವಧಾನವಿಲ್ಲದಿರುವಿಕೆ, ಮೂಢತನ ಮುಂತಾದವುಗಳು ತಮಸ್ಸಿನ ಗುಣಗಳು. ಇವುಗಳಿಂದ ಕೂಡಿರುವವನಿಗೆ ಏನೊಂದೂ ತಿಳಿಯುವುದಿಲ್ಲ. ಅವನು ನಿದ್ರಿಸುವನಂತೆಯೂ ಕಂಬದಂತೆಯೂ ಜಡನಾಗಿರುತ್ತಾನೆ. ರಾಜಕುಮಾರರ ಪರಿಸ್ಥಿತಿಯೂ ಇದೇ ರೀತಿಯಾಗಿತ್ತು. ವಿಷ್ಣುಶರ್ಮರು ಇಂಥಹವರಿಗೆ ಸೂಕ್ತ ಪರಿಸರವನ್ನೊದಗಿಸಿ, ಕಲಿಯುವುದರಲ್ಲಿ ಆಸಕ್ತಿಯನ್ನೂ, ಒಲವನ್ನೂ ಮೂಡಿಸಿದ್ದಾರೆ.

ಮನುಷ್ಯನ ರಚನೆ, ಶರೀರದ ಸಂವಿಧಾನವನ್ನು ಸ್ವಲ್ಪ ಸೂಕ್ಷ್ಮವಾಗಿ ಗಮನಿಸಿದರೆ ಇದೊಂದು ಅದ್ಭುತ ಸೃಷ್ಟಿ ಎನ್ನಿಸುತ್ತದೆ. ಇದರ ಬಗ್ಗೆ ಇನ್ನೂ ಹೆಚ್ಚು ಹೆಚ್ಚು ಅರ್ಥೈಸಿಕೊಳ್ಳಲು ಪ್ರಯತ್ನಿಸಿದರೆ ಈ ಅದ್ಭುತ ಜೀವಿ, ಮಾನವ ನಿರ್ಮಾಣವನ್ನು ಆ ಪ್ರಕೃತಿಯು ಎಷ್ಟೊಂದು ವಿಶಿಷ್ಟವಾಗಿ, ಅತ್ಯಂತ ವ್ಯವಸ್ಥಿತವಾಗಿ ಕೈಗೊಂಡಿದೆ !!! ಯಾವ ವಿಜ್ಞಾನಿ ಅಥವಾ ನಿರ್ಮಾತೃವಿನಿಂದಲೂ ಇಷ್ಟು ಕರಾರುವಾಕ್ಕಾಗಿ ರಚಿಸಲಸಾಧ್ಯವೆನ್ನಬಹುದು. ಮತ್ತೊಂದು ವಿಶೇಷವೆಂದರೆ, ಒಬ್ಬ ವ್ಯಕ್ತಿಯಲ್ಲಿರುವ ಲಕ್ಷಣಗಳನ್ನು, ಮತ್ತೊಬ್ಬನಲ್ಲಿ ಮೂಡಿಸಿಲ್ಲ. ಆ ವ್ಯಕ್ತಿಯು ಎಷ್ಟರಮಟ್ಟಿಗೆ ತಂದೆ ತಾಯಿಗಳ ಲಕ್ಷಣವನ್ನು ಹೋಲುತ್ತಾನೆ. ಅದೇ ಬೇರೆ ಸದಸ್ಯರಂತೆ ಇರುವುದಿಲ್ಲ. ಮನಶ್ಶಾಸ್ತ್ರಜ್ಞರು ಇದನ್ನೇ "ವೈಯುಕ್ತಿಕ ಭಿನ್ನತೆಗಳು" ಎನ್ನುತ್ತಾರೆ.

ಎಲ್ಲಾ ಜೀವಿಗಳಲ್ಲೂ ಅಂದರೆ ಮಾನವರಲ್ಲಾಗಲೀ ಅಥವಾ ಇನ್ನಿತರ ಪ್ರಾಣಿಗಳಲ್ಲಾಗಲೀ ಗಾತ್ರ, ಆಕಾರ, ಬಾಹ್ಯ ಚಹರೆ, ಅನುಕ್ರಿಯೆಯ ವೇಗ ಇತ್ಯಾದಿ ಇನ್ನೂ ಹಲವಾರು ವರ್ತನೆಗಳಲ್ಲಿ ನಾವು ವ್ಯತ್ಯಾಸಗಳನ್ನು ಕಾಣುತ್ತೇವೆ. ಹೀಗೆ ವ್ಯಕ್ತಿಗಳ ಅನೇಕ ಲಕ್ಷಣಗಳಲ್ಲಿ ಭಿನ್ನತೆಯನ್ನು ಕಾಣುತ್ತೇವೆ. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ಹಾಗೆ ಇರುವುದಿಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ಸಹ ಅದ್ವಿತೀಯ. ಮಾನವರಾದ ನಾವು ಕೆಲವು ಲಕ್ಷಣಗಳಲ್ಲಿ ಸಮತೆ ಕಂಡುಬಂದರೂ ಸಹ ಹಲವಾರು ವಿಷಯಗಳಲ್ಲಿ ಭಿನ್ನರಾಗಿದ್ದೇವೆ. ವೈಯಕ್ತಿಕ ಭಿನ್ನತೆಗೆ ಒಂದು ಮನೋವೈಜ್ಞಾನಿಕ ಪಾರಿಭಾಷಿಕ ಪದವಾಗಿ ಈ ಕೆಳಕಂಡಂತೆ ವ್ಯಾಖ್ಯಾನಿಸಬಹುದಾಗಿದೆ. "ಒಬ್ಬನನ್ನು ಇನ್ನೊಬ್ಬನಿಂದ ಬೇರ್ಪಡಿಸುವಂತಹ ಲಕ್ಷಣಗಳು ಮತ್ತು ತನ್ಮೂಲಕ ಪ್ರತಿಯೊಬ್ಬ ವ್ಯಕ್ತಿಯನ್ನು ಅದ್ವಿತೀಯನನ್ನಾಗಿ ಮಾಡುವಂತಹ ಲಕ್ಷಣಗಳನ್ನು ವೈಯಕ್ತಿಕ ಭಿನ್ನತೆಗಳು"[5] ಎಂದು ಕರೆಯಬಹುದು. ವ್ಯಕ್ತಿವ್ಯಕ್ತಿಗಳಿಗೂ ಕೇವಲ ದೈಹಿಕ ಭಿನ್ನತೆಗಳಷ್ಟೇ ಅಲ್ಲದೆ ಸ್ವಭಾವ, ನಡೆನುಡಿ, ಆಚಾರವಿಚಾರಗಳಲ್ಲೂ ಬೇಕಾದ ಹಾಗೆ ವ್ಯತ್ಯಾಸ ಕಂಡುಬರುತ್ತದೆ. ಶೈಶವದಲ್ಲಿ ಕಾಣದ ಈ ವ್ಯತ್ಯಾಸಗಳು ವಯಸ್ಸಾದಂತೆ

4. **ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು,** ಶಂಕರಾಚಾರ್ಯವಿರಚಿತ ವಿವೇಕಚೂಡಾಮಣಿ,(2005), ಅ– 3, ಶ್ಲೋ–115, ಪು–35, ಆಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೇನರಸೀಪುರ 573211

5. **ಎಚ್. ವಿ.ವಾಮದೇವಪ್ಪ,** ಶೈಕ್ಷಣಿಕ ಮನೋವಿಜ್ಞಾನ, ಅ–3, ಪು–111.(1962) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಚೆನ್ನಾಗಿ ವ್ಯಕ್ತಪಡುತ್ತವೆ. ಒಂದೇ ಕಡೆ ಬೆಳೆದವರು, ಒಂದೇ ಕುಟುಂಬದಲ್ಲಿ ಜನಿಸಿದ್ದವರಲ್ಲೂ ವ್ಯತ್ಯಾಸಗಳು ಕಂಡುಬರುತ್ತದೆ. ಒಬ್ಬರನ್ನೊಬ್ಬರು ಗುರುತು ಹಚ್ಚಲು ಈ ವೈವಿಧ್ಯ ನಿಜಕ್ಕೂ ಸಹಕಾರಿ. ಸಮಾಜ ಜೀವನದ ಸೊಗಸಿಗೂ ಈ ವೈವಿಧ್ಯ ಅಗತ್ಯವೆನಿಸುತ್ತದೆ. ಉತ್ತಮ ಸ್ವಭಾವಾದಿ ಗುಣಗಳನ್ನು ಪಡೆದಿರುವವರು ಜೀವನದಲ್ಲಿ ಹೆಚ್ಚಿನ ಯಶಸ್ಸು ಗಳಿಸುವುದು ಸ್ವಾಭಾವಿಕ.

गुणवत्तरपात्रेण छाद्यन्ते गुणिनां गुणाः ।

रात्रौ दीपशिखाकान्तिर्न भानावुदिते सति ॥[6]

ಅಂತಹ ಯಶಸ್ಸು ಯಾರಿಗೆ ತಾನೇ ಬೇಡವೆನ್ನಿಸುತ್ತದೆ? ಇದು ಎಲ್ಲರಿಗೂ ಆಗತ್ಯವೇ. ಹಾಗಿದ್ದಲ್ಲಿ ಈ ವೈವಿಧ್ಯಕ್ಕೆ ಕಾರಣಗಳೇನಿರಬಹುದು? ಆ ಕಾರಣಗಳು ಜನ್ಮಗತವಾದವೇ? ಅಥವಾ ಜೀವನದಲ್ಲಿ ಕಾಣತಕ್ಕವೇ? ಏನಿರಬಹುದು?

ತಂದೆತಾಯಿಗಳ ದೈಹಿಕ ಮತ್ತು ಮಾನಸಿಕ ಲಕ್ಷಣಗಳು ಮಕ್ಕಳಿಗೆ ವಂಶಗತವಾಗಿ ಬರುತ್ತವೆ. ಹೀಗೆ ಅನುವಂಶೀಯವಾಗಿ ಬರುವ ಮೂಲ ಸ್ವಭಾವವೇ ವ್ಯಕ್ತಿಯ ಮಾನಸಿಕ, ದೈಹಿಕ ಮತ್ತು ಸಾಮಾಜಿಕ ಅಭಿವೃದ್ಧಿಗೆ ಕಾರಣವೆಂದು ಕೆಲವರ ವಾದವಿದೆ. ಮಗುವಿನ ಇಡೀ ಭವಿಷ್ಯವನ್ನು ನಿರ್ಧರಿಸತಕ್ಕದ್ದು ಅನುವಂಶೀಯತೆ ಎಂದು ಸಾಧಿಸಲು ಪ್ರಯತ್ನಿಸುವರು. ಈ ಪಂಥದಲ್ಲಿ ಯತ್ನಿಸಿದವರೆಂದರೆ **Rousseau, Galton, Plato, Pearson** ಮುಂತಾದವರು. ಮತ್ತೆ ಕೆಲವರು ಇದನ್ನೊಪ್ಪದೆ ವಂಶಗತವಾಗಿ ಬಂದಿರುವ ಮೂಲ ಸ್ವಭಾವಗಳು ಹೇಗೇ ಇರಲಿ, ಅವರ ಶಿಕ್ಷಣಾಭಿವೃದ್ಧಿ, ವ್ಯಕ್ತಿತ್ವ ಭವಿಷ್ಯ ಜೀವನದ ಸ್ವರೂಪ – ಇವನ್ನೆಲ್ಲಾ ರೂಪಿಸತಕ್ಕದ್ದು ಅವರು ವಾಸಿಸುವ ಸನ್ನಿವೇಶ ಮತ್ತು ಪಡೆಯುವ ಶಿಕ್ಷಣದ ಸ್ವರೂಪ ಎಂದು ವಾದಿಸುವರು. ಈ ಪಂಥದಲ್ಲಿ ವಾದಿಸಿದವರೆಂದರೆ **Spencer, Watson, Newman, Weisman** ಇನ್ನಿತರರು. ಈ ವಾದ – ವಿವಾದಗಳನ್ನು **(Nature-Nurture-Controversy)** "ಪ್ರಕೃತಿ–ಪರಿಸರವಾದ" ಎಂದು ಕರೆಯುತ್ತಾರೆ.[7]

ಅನುವಂಶೀಯತೆಯನ್ನು ಪ್ರಕೃತಿಯೆಂದೂ, ಪರಿಸರವನ್ನು ಪಾಲನೆ ಮತ್ತು ಆರೈಕೆಯೆಂದೂ ಅನುವಾದ ಮಾಡಬಹುದು. ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ ಇವೆರಡೂ ಬಹುಮುಖ್ಯವೇ.

---

6. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–310, ಪು–199, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
7. **ಎನ್.ಎಸ್.ವೀರಪ್ಪ,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–4, ಪು–52ರಿಂದ54. (1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿ ಪುರಂ, ಮೈಸೂರು–4.

ಇವೆರಡನ್ನೂ ವ್ಯಕ್ತಿಯ ಬೆಳವಣಿಗೆಗೆ ಹಾಗೂ ಅಭಿವೃದ್ಧಿಯಲ್ಲಿ ಅನ್ಯೋನ್ಯಾವಲಂಬನಗಳೆಂದು ಕರೆಯಬಹುದು. ಇವು ನಿರಂತರ ಪರಸ್ಪರ ಪೂರಕವಾಗಿದ್ದು, ಅನುವಂಶೀಯತೆ ಮತ್ತು ಪರಿಸರಗಳ ನಡುವಿನ ಅನ್ಯೋನ್ಯ ಕ್ರಿಯೆಯ ಫಲಿತವೇ ವಿಕಾಸ. ಅನುವಂಶೀಯತೆ ಬಂದೂಕವನ್ನು ಗುಂಡಿನಿಂದ ಭರ್ತಿಮಾಡಿದರೆ, ಪರಿಸರವು ಬಂದೂಕಿನ ಕುದುರೆ ಅಥವಾ ಪ್ರಚೋದಕವನ್ನು ಎಳೆಯುವುದು. ಅಂದರೆ ವ್ಯಕ್ತಿಯಲ್ಲಿ ಅಂತರ್ಗತವಾಗಿರುವ ಅನುವಂಶೀಯ ಅಂಶಗಳು ಮತ್ತು ಪರಿಸರದ ಅಂಶಗಳು ವ್ಯಕ್ತಿಯ ವಿಕಾಸದ ಮೇಲೆ ಪ್ರಭಾವ ಬೀರುತ್ತವೆ. ಇವೆರಡರ ಪ್ರಭಾವವನ್ನು ಯಾವುದರಿಂದಲೂ ಪ್ರತ್ಯೇಕಿಸಲು ಸಾಧ್ಯವಿಲ್ಲ. ವ್ಯಕ್ತಿಯ ವಿಕಾಸವು ವ್ಯಕ್ತಿ ಹಾಗೂ ಅವನ ಪರಿಸರದ ಅನ್ಯೋನ್ಯ ಕ್ರಿಯೆಯ ಉತ್ಪನ್ನವಾಗಿದೆ.

ಮನೋವೈಜ್ಞಾನಿಕ ಗುಣಗಳಾದ ಆದರ್ಶಗಳು, ಆಸಕ್ತಿಗಳು ಮತ್ತು ಮನೋಭಾವಗಳು ಪರಿಸರದಿಂದ ಪ್ರಭಾವಿತವಾಗುತ್ತವೆ. ವ್ಯಕ್ತಿಗಳು ತಮ್ಮ ಗುಣಲಕ್ಷಣಗಳನ್ನು ಅಂಕುರಾಣುಗಳು ಮತ್ತು ಅವುಗಳಲ್ಲಿರುವ ವರ್ಣತಂತುಗಳ ಹಾಗೂ ವಂಶವಾಹಿನಿಗಳ ಮೂಲಕ ವಂಶಪಾರಂಪರ್ಯವಾಗಿ ಪಡೆದುಕೊಳ್ಳುತ್ತಾರೆ. ಕಣ್ಣಿನ ಬಣ್ಣ, ಕೂದಲು ಹಾಗೂ ಚರ್ಮಗಳ ಬಣ್ಣ, ತಲೆಯಗಾತ್ರ, ಕೈಬೆರಳು ವಿನ್ಯಾಸ, ಲೈಂಗಿಕ ಪಕ್ವತೆಯ ಕಾಲ ಮತ್ತು ದೇಹದ ದೃಢತೆ ಇತ್ಯಾದಿಗಳು ಮುಖ್ಯವಾಗಿ ಅನುವಂಶೀಯ ಗುಣಗಳಿಂದ ನಿರ್ಧರಿಸಲ್ಪಡುತ್ತವೆ.[8] ಇನ್ನು ಉತ್ತಮ ಪರಿಸರವನ್ನು ಒದಗಿಸಿಕೊಟ್ಟರೆ ಉತ್ತಮನಾಗುತ್ತಾನೆ, ವ್ಯತ್ಯಾಸವಾದರೆ ಅಧಮನೂ ಆಗುತ್ತಾನೆ. ಹಿತೋಪದೇಶದಲ್ಲಿ ಸರಳವಾಗಿ ಹೀಗೆ ಹೇಳಲ್ಪಟ್ಟಿದೆ:–

यदाऽसत्सङ्गरहितो भविष्यसि भविष्यसि ।

यदाऽसज्जनगोष्ठीषु पतिष्यसि पतिष्यसि ॥[9]

ಸಜ್ಜನರ ಸಹವಾಸದಲ್ಲಿ ನಿರತನಾದರೆ ಖಂಡಿತವಾಗಿ ನೀನು ಬದುಕುವೆ. ಹಾಗೆಯೇ ಕೆಟ್ಟವರ ಗುಂಪಿನಲ್ಲಿ ಬಿದ್ದರೆ ಖಂಡಿತವಾಗಿಯೂ ಬೀಳುತ್ತೀಯೆ. ಎಂಥಹ ಪರಿಸರ ಸಿಗುವುದೋ ಹಾಗೇ ಆಗುವೆ ಎಂದು ಸೂಚಿಸುತ್ತದೆ. ಅದಕ್ಕೇ ಮಕ್ಕಳಿಗೆ ಅನುವಂಶೀಯ ಗುಣಗಳ ಜೊತೆಗೆ ಉತ್ತಮ ಪರಿಸರವನ್ನೂ ಕಲ್ಪಿಸಿಕೊಡಬೇಕಾದದ್ದು ನಮ್ಮ ಕರ್ತವ್ಯ.

ವಿದ್ಯೆ ಕಲಿಸುವ ಶಿಕ್ಷಕರು ಹಾಗೂ ಪೋಷಕರು ಮಕ್ಕಳ ಸರ್ವತೋಮುಖ ಅಭಿವೃದ್ಧಿಯ ವಿಚಾರದಲ್ಲಿ ಈ ಮೇಲಿನ ಎಲ್ಲ ಮನೋವೈಜ್ಞಾನಿಕ ಅಂಶಗಳನ್ನು ಅರಿತುಕೊಂಡು, ಅವರಿಗೆ ಉತ್ತಮವಾದ ಸಾಮಾಜಿಕ ಅನುವಂಶೀಯತೆಯ ಬುನಾದಿಯಲ್ಲಿ ಸುಸಂಸ್ಕೃತ, ಸೃಜನಶೀಲ ಪರಿಸರವನ್ನು

---

8. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–2 ಪು–47, 48. ಶ್ರೇಯಸ್ ಪಬ್ಲಿಕೇಷನ್ಸ್,(2005) ತರಳಬಾಳು ಬಡಾವಣೆ, ದಾವಣಗೆರೆ–577005.
9. **ನಾರಾಯಣ ಪಂಡಿತರ** ಹಿತೋಪದೇಶ– ಮಿ.ಲಾ. ಶ್ಲೋ–207.

ಒದಗಿಸಿಕೊಡುವುದು ಬಹಳ ಮುಖ್ಯವಾದ ವಿಚಾರ.

ಪಂಚತಂತ್ರ ನೀತಿಕಾವ್ಯವನ್ನು ಈ ದೃಷ್ಟಿಯಿಂದ ವಿಶ್ಲೇಷಿಸಿದರೆ, ಹಿರಿಯ ಅನುಭವೀ ವಿದ್ವಾಂಸರೂ, ಪ್ರತಿಭಾನ್ವಿತ ಶಿಕ್ಷಕರೂ ಆಗಿದ್ದ ವಿಷ್ಣುಶರ್ಮರು ಅಮರಶಕ್ತಿ ರಾಜನ ಮೂವರು ಪುತ್ರರನ್ನು ಬಹಳ ವಿಶೇಷವಾಗಿ ಗಮನಿಸಿದ್ದಾರೆ. ಅವರು ಪಡೆದಿರುವ ಅನುವಂಶೀಯ ಲಕ್ಷಣಗಳನ್ನು ಪರಿಶೀಲಿಸಿ, ಅವರಲ್ಲಿರುವ ವೈಯಕ್ತಿಕ ಭಿನ್ನತೆಗಳನ್ನು ಗುರುತಿಸಿ, (ಒಬ್ಬ ಮೂರ್ಖ, ಮತ್ತೊಬ್ಬ ಆಲಸಿ, ಇನ್ನೊಬ್ಬ ಮೂರ್ಖ, ಆಲಸಿ) ಅವರಿಗೆ ತಕ್ಕುದಾದ ಉತ್ತಮ ಪರಿಸರವನ್ನೊದಗಿಸಿ, ಸನ್ನಿವೇಶ, ಸಮಸ್ಯೆ, ಜ್ಞಾನ, ವಯೋಗುಣ, ಗ್ರಹಣಶಕ್ತಿ ಇವುಗಳ ಕಾರ್ಯಕಾರಣ ಬದ್ಧ ಪಠ್ಯಕ್ರಮ, ಬೋಧನಾ ವಿಧಾನವನ್ನು ಅಳವಡಿಸಿ, ಕೋಮಲಮತಿಗಳಾದ ಬಹುಶಕ್ತಿ, ಉಗ್ರಶಕ್ತಿ ಮತ್ತು ಅನಂತಶಕ್ತಿ ಇವರುಗಳನ್ನು ಸುಶಿಕ್ಷಿತರನ್ನಾಗಿ, ರಾಜನೀತಿ ಕುಶಲರನ್ನಾಗಿ ಮಾರ್ಪಡಿಸಿ, ಉತ್ತಮ ವ್ಯಕ್ತಿತ್ವ – ನಿರ್ಮಾಣ ಮಾಡಿರುವುದರಲ್ಲಿ ನಿಜಕ್ಕೂ ಪಂಚತಂತ್ರದಲ್ಲಿ ಒಂದು ಅಸಾಮಾನ್ಯ ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆ ಅಡಗಿದೆಯೆಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ.

वंशभवो गुणवानपि सङ्गविशेषेण पूज्यते पुरुषः।

न हि तुम्बीफलविकलो वीणादण्डः प्रयाति महिमानम् ॥[10]

ಉತ್ತಮ ವಂಶದಲ್ಲಿ ಹುಟ್ಟಿರಲಿ, ಗುಣವಂತನಾಗಿರಲಿ, ಸತ್ಸಂಗ ವಿಶೇಷದಿಂದ ಪುರುಷನು ಪೂಜ್ಯನಾಗುತ್ತಾನೆ. ಸೋರೆಬುರುಡೆ ಇಲ್ಲದಿದ್ದಲ್ಲಿ ವೀಣಾದಂಡಕ್ಕೆ ಯಾವ ಮಹಿಮೆಯೂ ದೊರಕದು. ವೀಣಾದಂಡವು ವಂಶಭವ, ಅಂದರೆ ಬಿದಿರಿನಿಂದ ಆದದ್ದು; ಗುಣವಾನ್ ಅಂದರೆ ತಂತಿಗಳಿಂದ ಯುಕ್ತವಾದದ್ದು. ಇಲ್ಲಿ ವಂಶವೂ ಮುಖ್ಯ ಅದಕ್ಕೆ ತಕ್ಕಂತೆ ಗುಣ ಅರ್ಥಾತ್ ಪರಿಸರವೂ ಮುಖ್ಯ. ಅಂತೆಯೇ, ಮಕ್ಕಳಲ್ಲಿ ಜನ್ಮತಃ ಹಲವು ಗುಣ – ಧರ್ಮಗಳು ಅಡಗಿದ್ದರೂ ಅವು ಕಾರ್ಯರೂಪಕ್ಕೆ ಬರುವುದು ಸನ್ನಿವೇಶದ ಪ್ರಭಾವದಿಂದ ಸನ್ನಿವೇಶದ ಆ ಪ್ರಭಾವಕ್ಕೆ ಪ್ರತಿಕ್ರಿಯಾರೂಪದಲ್ಲಿ ಮೂಲ ಸ್ವಭಾವಗಳು ವರ್ತಿಸುತ್ತವೆ. ಉದಾಹರಣೆಗೆ – ಸಂಗ್ರಹಾಸಕ್ತಿಯ ಹುಟ್ಟುಗುಣವನ್ನು ಪರಿಶೀಲಿಸಿದರೆ, ಪದಾರ್ಥಗಳನ್ನು ಕಂಡೊಡನೆಯೆ ಮಗುವು ಅದನ್ನು ಆಯ್ದುಕೊಳ್ಳುತ್ತದೆ. ಇಲ್ಲಿ ಪದಾರ್ಥವನ್ನು ಕಾಣುವುದೇ ಸನ್ನಿವೇಶದ ಪ್ರಭಾವ 'ಕ್ರಿಯೆ'. ಈ ಕ್ರಿಯಾ ಪ್ರತಿಕ್ರಿಯೆಗಳ ಸ್ವರೂಪವೇ ಮಕ್ಕಳು ಸನ್ನಿವೇಶಗಳೊಡನೆ ವರ್ತಿಸುವ 'ರೀತಿ'. ಅದನ್ನು ವ್ಯಕ್ತಿಯ ಮತ್ತು ಸಮಾಜದ ಹಿತಗಳಿಗೊಪ್ಪುವಂತೆ ರೂಪಿಸುವುದೇ ಶಿಕ್ಷಣವ್ಯವಸ್ಥೆ.[11] ಈ ವ್ಯವಸ್ಥೆಯನ್ನು

---

10. **ಸುಭಾಷಿತಮಂಜರೀ,** ಸಾಮಾನ್ಯ ನೀತಿ–ಶ್ಲೋ–367, ಪು–458–ರಸಗಂಗಾಧರ. ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು(2001)
11. **ವೀರಪ್ಪ. ಎನ್.ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–3, ಪು–40–42.(1962) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಸಕಲ ಶಾಸ್ತ್ರಪಾರಂಗತರಾದ ವಿಷ್ಣುಶರ್ಮರು ಪಂಚತಂತ್ರದ ಮೂಲಕ ಮಂದಮತಿಗಳಾದ ಮೂವರು ರಾಜಕುಮಾರರನ್ನು ಸುಶಿಕ್ಷಿತರನ್ನಾಗಿ ಮಾಡಲು ಉತ್ತಮ ಕಲಿಕಾ ಸನ್ನಿವೇಶವನ್ನು ಆಕರ್ಷಕ ಕಥೆಗಳ ಅದ್ಭುತ ಸಂಕಲನದಿಂದ ಕಲ್ಪಿಸಿ ಕೊಟ್ಟಿದ್ದಾರೆ. ವಂಶಗತವಾಗಿ ಬರುವ ಸಂಗ್ರಹಾಸಕ್ತಿ ಉಚಿತ ರೀತಿಯಲ್ಲಿ ಸಂಸ್ಕಾರಗೊಳ್ಳದಿದ್ದರೆ ವ್ಯಕ್ತಿ ಜಿಪುಣನಾಗಬಹುದು, ದುರಾಸೆಗೂ ತುತ್ತಾಗಬಹುದು. ನಿರಾಸೆಯಾದಾಗ ಹುಚ್ಚನೂ ಆಗಬಹುದು. ಅದರಿಂದ ಅವನ ವ್ಯಕ್ತಿತ್ವಕ್ಕೆ ಕಳಂಕ ಬರುವುದರ ಜೊತೆಗೆ ಅವನು ಸಮಾಜ ಜೀವನಕ್ಕೆ ಘಾತುಕನಾಗಿಯೂ ಪರಿಣಮಿಸಬಹುದು. ಮಕ್ಕಳ ಈ ತೀಕ್ಷ್ಣವಾಗಿರುವ ಹುಟ್ಟುಗುಣವನ್ನು ಅಂತಹ ಅಹಿತ ಮಾರ್ಗದಲ್ಲಿ ಬೆಳೆಯುವುದನ್ನು ತಪ್ಪಿಸುವುದು ಅಗತ್ಯವಿದೆ. ಜೊತೆಗೆ ಅವು ಹಿತವೆನಿಸುವ ಮಾರ್ಗದಲ್ಲಿ ಪಳಗುವಂತೆ ಮಾಡುವುದು ಶಿಕ್ಷಣದ ಕೆಲಸ.

वाञ्छा सज्जनसङ्गमे परगुणे प्रीतिर्गुरौ नम्रता विद्यायां व्यसनं स्वयोषिति रतिर्लोकापवादाद्भयम् ॥
भक्तिः शूलिनि शक्तिरात्मदमने संसर्गमुक्तिः खले येष्वेते निवसन्ति निर्मलगुणास्तेभ्यो नरेभ्यो नमः ॥[12]

"ಸಜ್ಜನರ ಸಹವಾಸದಲ್ಲಿ ಆಸೆ, ಪರರ ಗುಣದಲ್ಲಿ ಪ್ರೀತಿ, ಗುರುವಿನಲ್ಲಿ ವಿಧೇಯತೆ, ವಿದ್ಯೆಯಲ್ಲಿ ಆಸಕ್ತಿ, ತನ್ನ ಹೆಂಡತಿಯಲ್ಲಿ – ಸುಖಪಡುವಿಕೆ, ಲೋಕಾಪವಾದ ದೆಸೆಯಿಂದ – ಹೆದರಿಕೆ, ಶಿವನಲ್ಲಿ – ಭಕ್ತಿ, ಮನೋನಿಗ್ರಹದಲ್ಲಿ – ಶಕ್ತಿ, ದುರ್ಜನರಲ್ಲಿ – ಸಹವಾಸತ್ಯಾಗ, ಈ ನಿರ್ಮಲಗುಣಗಳು ಯಾರಲ್ಲಿವೆಯೋ ಆ ಮಹಾತ್ಮರಿಗೆ ನಮಸ್ಕಾರ."

ಹೀಗೆ ಸದ್ಗುಣಗಳಿಂದ ಉತ್ತಮ ವ್ಯಕ್ತಿತ್ವ ನಿರ್ಮಾಣಮಾಡಿಕೊಂಡು ಬದುಕನ್ನು ಸಾರ್ಥಕಪಡಿಸಿಕೊಳ್ಳುವಂತೆ ಪ್ರೇರೆಪಿಸುತ್ತಾ, ನೀತಿಶಿಕ್ಷಣದ ಮೂಲಕ ವಿಷ್ಣುಶರ್ಮರು ರಾಜಕುಮಾರರನ್ನು ಬದುಕಿನ ನೀತಿಕುಶಲರು ಹಾಗೂ, ರಾಜನೀತಿ ಪರಿಣಿತರನ್ನಾಗಿ ಪರಿವರ್ತನೆ ಮಾಡಿದ್ದಾರೆ.

ಪ್ರತಿಭಾನ್ವಿತ ಶಿಕ್ಷಕರಾದ ವಿಷ್ಣುಶರ್ಮರು ಈ ಮೂವರು ದುರ್ವಿನೀತರಾದ ರಾಜಕುಮಾರರನ್ನು ಕ್ರಮಬದ್ಧ ವೀಕ್ಷಣೆಗೊಳಪಡಿಸಿ, ಅವರುಗಳ ವೈಯಕ್ತಿಕ ಭಿನ್ನತೆಗಳು, ಜನ್ಮತಃ ಹೊಂದಿರುವ ಗುಣಧರ್ಮಗಳು, ಒಂದು ವೇಳೆ ಪ್ರತಿಕೂಲ ಸನ್ನಿವೇಶದ ಪರಿಣಾಮದಿಂದ ಅವರ ವರ್ತನೆಗಳು ಅಹಿತ ಮಾರ್ಗದಲ್ಲಿ ಬೆಳೆಯುತ್ತಿದೆಯೇ? ಇವೆಲ್ಲವನ್ನೂ ಪರಿಶೀಲಿಸಿ, ಅವರಲ್ಲಿ ಯಾವ ಅಪೇಕ್ಷಿತ ಬದಲಾವಣೆಗಳನ್ನು ತರಬಹುದು ಎಂಬುದರ ಬಗ್ಗೆ ಕೂಲಂಕಶವಾಗಿ ವಿಚಾರಮಾಡಿದ್ದಾರೆ. ಬದುಕಿನ ವ್ಯವಹಾರಗಳ ನೀತಿಪಾಠವನ್ನು ರಾಜನೀತಿ ಶಿಕ್ಷಣದೊಂದಿಗೆ ಹಸನುಮಾಡಿ, ನಾಣ್ಣುಡಿಗಳು, ಸುಭಾಷಿತಗಳು, ಸೂಕ್ತಿಗಳು ಹಾಗೂ ನೀತಿಶ್ಲೋಕ ಮಿಶ್ರಿತ

---

12. **ಭರ್ತೃಹರಿಯ ನೀತಿಶತಕ,** ಸುಜನ ಪದ್ಧತಿ – ಶ್ಲೋ–62.

ಕಥಾಸಂಕಲನದ ಪಠ್ಯಕ್ರಮವನ್ನು ಸಿದ್ಧಪಡಿಸಿದ್ದಾರೆ. ಉತ್ತಮ ಶೈಕ್ಷಣಿಕ ಸನ್ನಿವೇಶಗಳನ್ನು ಅದರಲ್ಲೂ ದಿನನಿತ್ಯದ ಬದುಕಿನ ವ್ಯವಹಾರಗಳ ವಿಚಾರಗಳನ್ನೇ, ಪ್ರಾಣಿಪಶುಪಕ್ಷಿಗಳಿಗೆ ಆರೋಪಿಸಿ,ಪರಕಾಯಪ್ರವೇಶ ಮಾಡಿ ವರ್ತಿಸುವಂತೆ ಒಂದು ವಿಶಿಷ್ಟ ತಂತ್ರಗಾರಿಕೆಯನ್ನು ರೂಪಿಸಿದ್ದಾರೆ.

ಇನ್ನೊಂದು ವಿಶೇಷತೆಯೆಂದರೆ ವಿಷ್ಣುಶರ್ಮರು ಪಂಚತಂತ್ರದಲ್ಲಿ ಅಳವಡಿಸಿರುವ ಬೋಧನಾ ಮಾಧ್ಯಮ. "ಕಥಾನಿರೂಪಣಾ" ಮಾದ್ಯಮ. ಅದರಲ್ಲೂ ಬಹಳ ಮುಖ್ಯವಾಗಿ "ನಿರೂಪಣಾ ಶೃತಿ." ಶೃತಿ ಹೇಗಿದೆಯೆಂದರೆ, ತಾಳ, ಲಯ ಬದ್ಧವಾಗಿ ನಿರೂಪಿಸಿರುವ ಶೈಲಿ, ಆ ಧ್ವನಿ, ಹೇಳುವ ಸನ್ನಿವೇಶ ಎಷ್ಟರಮಟ್ಟಿಗೆ ಹೊಂದಿದೆಯೆಂದರೆ, ಸಂಗೀತ ಕ್ಷೇತ್ರದಲ್ಲಿ ಶೃತಿ, ಆಲಾಪನೆ, ಭಾವ, ರಾಗ, ತಾಳ, ಪಲ್ಲವಿ, ನುಡಿ ಮತ್ತು ಸ್ವರ ಮಾಧುರ್ಯ ಹೇಗೆ ಒಂದು ಹಾಡಿನ ಇಂಪನ್ನು, ಶಾಸ್ತ್ರೀಯ ಲಕ್ಷಣಗಳೊಂದಿಗೆ ಆಕರ್ಷಕ ಹಾಗೂ ಸುಶ್ರಾವ್ಯಗೊಳಿಸುವುದೋ; ಏನಾದರೊಂದು ಆಧ್ಯಾತ್ಮ ಚಿಂತನೆ ಅಥವಾ ಬದುಕಿನ ನೀತಿಯನ್ನು ಸೂಚಿಸುವುದೋ, ಹಾಗೆಯೇ ಕೇಳುಗರ ಮನಸ್ಸನ್ನು ಹಿಡಿದಿಟ್ಟು, ಬದುಕಿನ ನೀತಿಶಿಕ್ಷಣವನ್ನು, ಸುಂದರ ವ್ಯಕ್ತಿತ್ವನಿರ್ಮಾಣ ಕೌಶಲ್ಯವನ್ನು ಬೋಧಿಸುವ ಕಥಾ-ಸಂಗಮವೇ ಈ ಪಂಚತಂತ್ರ. ಇಲ್ಲಿ ಕಂಡು ಬರುವ ವ್ಯವಸ್ಥೆಗೆ ಶೈಕ್ಷಣಿಕ ಮನೋವಿಜ್ಞಾನದ ಅಂಶಗಳು ತುಂಬಾ ನೆರವಾಗುತ್ತವೆ.

ಪಾಠಪ್ರವಚನ ಹಾಗೂ ವ್ಯಕ್ತಿತ್ವದ ಬೆಳವಣಿಗೆಗೆ ಸಂಬಂಧಿಸಿದಂತೆ ನೂತನ ವಿಷಯಗಳನ್ನೂ, ಗುಣಲಕ್ಷಣಗಳನ್ನೂ ಸಂಗ್ರಹಿಸುವುದಕ್ಕೆ, ಹೆಚ್ಚು ಮಂದಿ ಉತ್ತಮ ಸ್ನೇಹಿತರನ್ನು ಮಾಡಿಕೊಳ್ಳುವುದಕ್ಕೆ, ಉತ್ತಮ ವಿಚಾರಗಳು, ಚಿತ್ರಗಳು ಇತ್ಯಾದಿಗಳನ್ನು ಸಂಗ್ರಹಿಸುವ ಕಾರ್ಯಕ್ಕೆ ತಿರುಗಿಸಿದರೆ ವಂಶಗತವಾಗಿ ಬರುವ ಸಂಗ್ರಹಾಸಕ್ತಿಯ ಸದ್ವಿನಿಯೋಗವಾದಂತಾಗುವುದು.

मन्दोऽप्यमन्दतामेति संसर्गेण विपश्चितः ।

पंकच्छिदः फलस्येव निकषेणाबिलं पयः ॥[13]

ಪಂಡಿತರ ಸಹವಾಸ ಅಥವಾ ಬುದ್ಧಿವಂತರ ಸ್ನೇಹದಿಂದ ದಡ್ಡನೂ ಪಂಡಿತ ಅಥವಾ ಬುದ್ಧಿವಂತನಾಗುತ್ತಾನೆ. ಬಗ್ಗಡವಾದ ನೀರು ಕತಕಬೀಜದ ಸಂಪರ್ಕದಿಂದ ತಿಳಿಯಾಗುವುದಿಲ್ಲವೇ? ಹೀಗೆಯೇ ಮಂದಮತಿಗಳಾದ ರಾಜಕುಮಾರರಿಗೆ ಪಂಡಿತೋತ್ತಮರಾದ ವಿಷ್ಣುಶರ್ಮರು ಗುರುಗಳಾಗಿ ಲಭ್ಯವಾದುದರಿಂದ, ಅವರೂ ರಾಜನೀತಿ ನಿಪುಣರಾಗಲು ಸಾಧ್ಯವಾಯಿತು. ಜೊತೆಗೆ ವ್ಯಕ್ತಿಗೆ ಆದರಣೀಯವೂ, ಸಮಾಜ ಜೀವನಕ್ಕೆ ಹಿತಕರವೂ ಎನಿಸುವ ಗುಣಶೀಲಗಳು ಬೆಳೆಯುತ್ತವೆ.

---

13. **ಸುಭಾಷಿತಮಂಜರೀ,** ಸದ್ಗುಣ-ದುರ್ಗುಣ- ಶ್ಲೋ-221, ಪು-177, मालविकाग्निमित्र, 2-7.(2001)
ಕ.ಸಾ.ಪ.ಚಾಮರಾಜಪೇಟೆ. ಬೆಂಗಳೂರು-18

ಮೂಲಸ್ವಭಾವವನ್ನು ಸಂಸ್ಕರಿಸಲು ಏರ್ಪಡಿಸಿಕೊಳ್ಳುವ ಇಂತಹ ಕಾರ್ಯಕ್ರಮಗಳೇ ಶಿಕ್ಷಣ ಸನ್ನಿವೇಶಗಳು. ಕೋಪ, ಬೇಸರ, ವ್ಯಸನ, ಸಂತೋಷ, ಉತ್ಸಾಹ, ಭಯ, ಆಶ್ಚರ್ಯ, ಕಷ್ಟ, ಕೋಮಲತೆ, ಕರ್ಕಶ ಪ್ರೀತಿ ಇತ್ಯಾದಿ ಮನೋರಸಗಳನ್ನು ಸಂವೇದನೆಗಳೆಂದೂ ಕರೆಯುತ್ತಾರೆ. ಒಂದೊಂದು ಸಂವೇದನೆಯೂ ಒಂದೊಂದು ಹುಟ್ಟುಗುಣಕ್ಕೆ ಸಂಬಂಧಿಸಿದುದಾಗಿದೆ. ಈ ಗುಣಗಳು ಕಾರ್ಯಮುಖವಾದಾಗ ಆಯಾ ಮನೋರಸ ಪ್ರಕಾಶಕ್ಕೆ ಬರುವುದು ಎಂದು ಭಾವಿಸಲಾಗಿದೆ. ಅವನ್ನು ಪ್ರತ್ಯೇಕವಾಗಿ ಕಾಣಲಾಗದಿದ್ದರೂ ಅವುಗಳ ಫಲವಾಗಿ ಮಾಡುವ ದೈಹಿಕ ವರ್ತನೆಗಳಂದ ಕಂಡುಕೊಳ್ಳಬಹುದು. ಈ ಸಂವೇದನೆಗಳು ಉಚಿತ ರೀತಿಯಲ್ಲಿ ಸಂಸ್ಕರಿಸುವ ಕಾರ್ಯ ಶಿಕ್ಷಣದ ಒಂದು ಬಹುಮುಖ್ಯ ಅಂಶವಾಗಿದೆ. ವ್ಯಕ್ತಿಗೂ ಸಮಾಜಕ್ಕೂ ಹಿತವೆನಿಸುವ ಅಭ್ಯಾಸಗಳಂತೆ ಮನೋಭಾವವೂ, ದೃಷ್ಟಿಧ್ಯೇಯಗಳೂ ರೂಪುಗೊಳ್ಳಬೇಕು. ಹುಟ್ಟುಗುಣಗಳು ವ್ಯಕ್ತಿತ್ವದ ಮಂದಿರವನ್ನು ರೂಪಿಸಲು ಇಟ್ಟಿಗೆಗಳಂತೆ ಸಹಕಾರಿಯಾದರೆ, ಆ ಇಟ್ಟಿಗೆಗಳನ್ನು ಹದವರಿತು ಬಂಧಿಸುವ ಗಾರೆಯಂತೆ ನೆರವಾಗುತ್ತವೆ.[14]

ಇದನ್ನು ಚೆನ್ನಾಗಿ ಮನಗಂಡಿರುವ ವಿಷ್ಣುಶರ್ಮರು ಪಂಚತಂತ್ರದಲ್ಲಿ ವ್ಯವಸ್ಥಿತವಾದ ಶಿಕ್ಷಣ ಸನ್ನಿವೇಶಗಳನ್ನು ಒದಗಿಸಿ ರಾಜಕುಮಾರರಿಗೆ ಉತ್ತಮ ನೀತಿಪಾಠವನ್ನು ಬೋಧಿಸಿದ್ದಾರೆ. ಇದು ಶಿಕ್ಷಕರಿಗೆಲ್ಲಾ ಒಂದು ಆದರ್ಶವೇ ಸರಿ. ಅದರಲ್ಲೂ ಮಂದಮತಿಗಳಿಗೆ ಹೇಗೆ ಶಿಕ್ಷಣ ನೀಡಬಹುದು ಎಂಬುದಕ್ಕೆ ಒಂದು ಮಾದರಿಯಾಗಿದೆ. ತೀಕ್ಷ್ಣಮತಿಯ ಮಕ್ಕಳಿಗೆ ಶಿಕ್ಷಣ ನೀಡುವುದು ಬಹಳ ದೊಡ್ಡ ವಿಚಾರವಲ್ಲ ಅಥವಾ ಸಾಧನೆಯೂ ಅಲ್ಲ. ಮಂದಮತಿಗಳನ್ನು ಅರ್ಥಮಾಡಿಕೊಂಡು ಅವರಿಗೆ ಕಲಿಕೆಯಲ್ಲಿ ಆಸಕ್ತಿಯನ್ನು ಪ್ರೇರೇಪಿಸಿ, ಶಿಕ್ಷಣ ಕೊಟ್ಟು ಸುಶಿಕ್ಷಿತರನ್ನಾಗಿ ಮಾಡುವುದು ಒಂದು ಸವಾಲೇ ಹೌದು. ಅದು ಒಬ್ಬ ಪ್ರಾಮಾಣಿಕ ಶಿಕ್ಷಕನ ಲಕ್ಷಣ. ಇಂಥಹ ಪ್ರಾಮಾಣಿಕ ಕಾರ್ಯವನ್ನು ವಿಷ್ಣುಶರ್ಮರು ಪಂಚತಂತ್ರದಲ್ಲಿ ಬಹಳ ಯಶಸ್ವಿಯಾಗಿ ನಿರ್ವಹಿಸಿದ್ದಾರೆ.

भूतानां प्राणिनः श्रेष्ठाः प्राणिनां बुद्धिजीविनः

बुद्धिमत्सु नराःश्रेष्ठाः नराणां सात्विकाः स्मृताः ।

सात्विकेषु च विद्वाम्सः विद्वत्सु कृतबुद्धयः

कृतबुद्धिषु कर्तारः कर्तृषु ब्रम्हवेदिनः ॥[15]

---

14. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–3, ಪು–41–44.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4.

15. मनुस्मृतिः – 1 – 96,97.

ಲೋಕದಲ್ಲಿ ಜಡವಸ್ತುಗಳಿಗಿಂತಲೂ ಪ್ರಾಣಿಗಳು ಶ್ರೇಷ್ಠ. ಅವುಗಳಲ್ಲಿ ಬುದ್ಧಿಯನ್ನುಪಯೋಗಿಸುವ ಇರುವೆ, ನರಿ ಮೋದಲಾದವುಗಳು ಉತ್ತಮ. ಬುದ್ಧಿಜೀವಿಗಳಲ್ಲಿ ಮಾನವ, ಮಾನವರಲ್ಲಿ ಒಳ್ಳೆಯವರು, ಒಳ್ಳೆಯವರಲ್ಲಿ ವಿದ್ಯಾವಂತರು, ವಿದ್ಯಾವಂತರಲ್ಲಿ ಪರಿಣಿತರು, ಪರಿಣಿತರಲ್ಲಿ ಆಚರಿಸುವವರು, ಆಚರಿಸುವವರಲ್ಲಿ ಬ್ರಹ್ಮಜ್ಞಾನಿಗಳು ಶ್ರೇಷ್ಠ ಎಂಬಂತೆ ವಿಷ್ಣುಶರ್ಮರು ಒಬ್ಬ ಶ್ರೇಷ್ಠ ಶಿಕ್ಷಕರಾಗಿದ್ದಾರೆ.



## 3-2 ಕಲಿಕೆ:- ಅರ್ಥ-ವ್ಯಾಖ್ಯೆ-ವ್ಯಾಪ್ತಿ-ಸ್ವರೂಪ

ಓದು ಬರಹ ಲೆಕ್ಕಾಚಾರಗಳನ್ನೇ **"ಕಲಿವು"** ಎನ್ನುವುದು ಮನೋವಿಜ್ಞಾನದ ಪ್ರಕಾರ ಒಂದು ಸಂಕುಚಿತ ಅರ್ಥವಾಗುತ್ತದೆ. ಮುಂದೆ ಬರುವ ಸಮಸ್ಯೆಗಳನ್ನು ಸೂಕ್ತರೀತಿಯಿಂದ ಎದುರಿಸುವಂತೆ ಮೂಲ ವರ್ತನೆಗಳನ್ನು ಅನುಭವಗಳ ಮೂಲಕ ಮಾರ್ಪಡಿಸುವುದೇ ಶಿಕ್ಷಣ. ಹಾಗೆ ಯಾವೊಂದು ಮೂಲ ವರ್ತನೆ ಮಾರ್ಪಟ್ಟರೂ ಅದು ಕಲಿವಾಗುತ್ತದೆ. ಮಕ್ಕಳು ಓದುಬರಹ, ಲೆಕ್ಕಾಚಾರಗಳ ಜೊತೆಗೆ ಸಾಂಸ್ಕೃತಿಕ ಅಂಶಗಳನ್ನೂ, ಸಂಪ್ರದಾಯಗಳನ್ನೂ ಕಲಿಯುವರು; ಕೌಟುಂಬಿಕ ಜೀವನಕ್ಕೆ ಸಂಬಂಧಿಸಿದ ನಡವಳಿಕೆಗಳನ್ನೂ ಕಲಿಯುವರು; ಪ್ರೀತಿ, ದ್ವೇಷ, ಭೀತಿ, ಆತ್ಮವಿಶ್ವಾಸ- ಇವನ್ನೂ ಬೆಳೆಸಿಕೊಳ್ಳುವರು; ವ್ಯಕ್ತಿತ್ವಕ್ಕೆ ಸಂಬಂಧಿಸಿದ ಅನೇಕ ಗುಣಶೀಲಗಳನ್ನೂ ರೂಪಿಸಿಕೊಳ್ಳುವರು; ತಮ್ಮ ಅಗತ್ಯಗಳನ್ನು ಅರಿತುಕೊಳ್ಳುವರು. ಇವೆಲ್ಲವೂ ಹೊಸದಾಗಿ ಸಿದ್ಧಿಸಿದವೇ. ಆದರೂ ಅವೆಲ್ಲ ವಂಶಗತವಾಗಿ ಬಂದ ಹಲವು ಮೂಲವರ್ತನೆಗಳಿಂದ ಮಾರ್ಪಟ್ಟವು. ಮನೋವಿಜ್ಞಾನ ಬಹು ಮಟ್ಟಿಗೆ ಆ ಮೂಲ ವರ್ತನೆಗಳ ಪರಿಚಯ ಮಾಡಿಕೊಟ್ಟು, ಅವನ್ನು ಉಚಿತ ರೀತಿಯಲ್ಲಿ ಬೆಳೆಸುವ ಕಾರ್ಯವನ್ನು ತೋರಿಸಿ ಕೊಡುತ್ತದೆ. ಅಂದರೆ ಆ ವಿಜ್ಞಾನದ ಬಹು ಭಾಗ ಕಲಿವಿಗೆ ಸಂಬಂಧಪಟ್ಟಂತೆ ರೂಪುಗೊಂಡಿರುತ್ತದೆ.[16] ವಿಷ್ಣುಶರ್ಮರು ಪಂಚತಂತ್ರದ ಮೂಲಕ ಈ ಹಿನ್ನೆಲೆಯಲ್ಲೇ ರಾಜಕುಮಾರರಿಗೆ ಉತ್ತಮ ಶಿಕ್ಷಣವನ್ನು ಒದಗಿಸಿ ವ್ಯಕ್ತಿತ್ವ ನಿರ್ಮಾಣ ಕೈಗೊಂಡಿದ್ದಾರೆ.

प्रसह्य मणिमुद्धरेन्मकरवक्त्रदंष्ट्राङ्करा ।

त्समुद्रमपि संतरेत्प्रचलदुर्मिमालाकुलम् ॥

भुजङ्गमपि कोपितं शिरसि पुष्पवद्धारये-

न्न तु प्रतिनिविष्टमूर्खजनचित्तमाराधयेत् ॥[17]

ಮೊಸಳೆಯ ಬಾಯೊಳಗಿನ ಹಲ್ಲುಗಳ ಮಧ್ಯದಲ್ಲಿ ಸಿಕ್ಕಿಕೊಂಡ ರತ್ನವನ್ನೂ ಹಠಾತ್ತಾಗಿ ಹೊರಗೆ ತೆಗೆಯಬಹುದು. ಏಳುತ್ತಿರುವ ಅಲೆಗಳ ಸಾಲುಗಳಿಂದ ಕ್ಷುಬ್ಧವಾದ ಸಮುದ್ರವನ್ನೂ ಕೂಡ ದಾಟಬಹುದು. ಸಿಟ್ಟಿಗೆದ್ದ ಹಾವನ್ನೂ ಕೂಡ ಹೂವಿನಂತೆ ತಲೆಯಲ್ಲಿ ಧರಿಸಬಹುದು. ಆದರೆ ಹಟಮಾರಿಯಾದ ಮೂರ್ಖನ ಮನಸ್ಸನ್ನು ಮೆಚ್ಚಿಸಲಾಗುವುದಿಲ್ಲ. ಅಂದರೆ ಮೂರ್ಖರಿಗೆ ವಿದ್ಯೆ ಕಲಿಸುವುದು ಬಹಳ ಕಷ್ಟದ ಕೆಲಸ.

---

16. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ-11, ಪು-185,186.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4.
17. **ಭರ್ತೃಹರಿಯ ನೀತಿಶತಕ,** ಮೂರ್ಖಪದ್ಧತಿ ಶ್ಲೋ-4.

ಒಬ್ಬರಲ್ಲ, ಇಬ್ಬರಲ್ಲ ಮೂವರು ಮೂರ್ಖ ರಾಜಕುಮಾರರಿಗೆ ರಾಜನೀತಿ ಶಿಕ್ಷಣ ನೀಡಿ, ಸಾರ್ಥಕ ಬದುಕಿನ ನೀತಿನಿಯಮಗಳನ್ನು ಕಲಿಸಿ ಸಾಧನೆಗೈದಿದ್ದಾರೆ ಮೇಧಾವಿ ಶಿಕ್ಷಕರಾದ ವಿಷ್ಣುಶರ್ಮರು.

ಮನೋವಿಜ್ಞಾನದಲ್ಲಿ ಕಲಿವೇ ಪ್ರಧಾನ ಅಧ್ಯಯನದ ಭಾಗವಾಗಿರುತ್ತದೆ. ಕಲಿಕೆ ಎಂದರೆ ವ್ಯಕ್ತಿಯ ವರ್ತನೆಯಲ್ಲಿ ಬದಲಾವಣೆಗಳನ್ನು ತರುವುದಾಗಿದೆ. ಮಾನವರು ತಮ್ಮ ಜೀವನಪೂರ್ತಿ ಅನೇಕ ಬದಲಾವಣೆಗಳನ್ನು ಹೊಂದುತ್ತಿರುತ್ತಾರೆ. ಮಾನವನಿಗೆ ಕಲಿಕೆ ಅನಿವಾರ್ಯ ಹಾಗೂ ಅಗತ್ಯ. ಅವನ ಭವಿಷ್ಯ ಅವನು ಮಾಡಿಕೊಳ್ಳುವ ನಾನಾ ಬಗೆಯ ಕಲಿಕೆಯ ಮೇಲೆಯೇ ಅವಲಂಭಿಸಿರುತ್ತದೆ. ಈ ರೀತಿಯ ಕಲಿಕೆ, ಜ್ಞಾನ, ಕುಶಲತೆ, ಆಸಕ್ತಿ, ನಾನಾ ಬಗೆಯ ಸಾಮರ್ಥ್ಯಗಳು ಮತ್ತು ಅಭಿರುಚಿಗೆ ಸಂಬಂಧಿಸಿರಬಹುದು. ಇವುಗಳನ್ನು ವ್ಯವಸ್ಥಿತ ರೀತಿಯಲ್ಲಿ ಮಕ್ಕಳಿಗೆ ಒದಗಿಸಿಕೊಡುವುದೇ ಶಿಕ್ಷಣದ ಮುಖ್ಯ ಕರ್ತವ್ಯವಾಗಿರುತ್ತದೆ. ಆದುದರಿಂದ ಶಿಕ್ಷಣದ ಯಾವುದೇ ಹಂತದಲ್ಲಿ ಕಲಿಕೆ ಮುಖ್ಯವಾಗುತ್ತದೆ. ವಿವಿಧ ಅನುಭವಗಳಿಂದ ಮಕ್ಕಳು ಕಲಿಯುತ್ತಾರೆ. ಇದರಿಂದ ಅವರ ವರ್ತನೆಯಲ್ಲಿ ಸೂಕ್ತ ಪರಿವರ್ತನೆಯಾಗುತ್ತದೆ. ಇದನ್ನೇ "ಕಲಿಕೆ" ಎನ್ನುತ್ತಾರೆ. ಮೂಲವರ್ತನೆಗಳನ್ನು ಅನುಭವಗಳ ಮೂಲಕ ಮಾರ್ಪಡಿಸುವುದೇ ಶಿಕ್ಷಣ. **"Education is the modification of behavior."** ಕಲಿಕೆಗೆ ಸರ್ವಮಾನ್ಯ ವ್ಯಾಖ್ಯೆಯನ್ನು ನೀಡುವುದು ಬಹಳ ಕಷ್ಟದ ಕೆಲಸ. ಏಕೆಂದರೆ ವಿವಿಧ ಸಿದ್ಧಾಂತಗಳನ್ನು ಮಂಡಿಸಿರುವ ಮನೋವಿಜ್ಞಾನಿಗಳು ಬೇರೆ ಬೇರೆ ದೃಷ್ಟಿಕೋನದಿಂದ ಕಲಿಕೆಗೆ ತಮ್ಮದೇ ಆದ ವ್ಯಾಖ್ಯಾನ ನೀಡಿರುತ್ತಾರೆ. ಕೆಲವು ಮುಖ್ಯ ವ್ಯಾಖ್ಯೆಗಳೆಂದರೆ:–[18]

1. "ಅನುಭವಗಳಿಂದ ವರ್ತನೆಯಲ್ಲುಂಟಾಗುವ ಬದಲಾವಣೆಯೇ ಕಲಿಕೆ." **GATES**

2."ತರಬೇತಿ ಮತ್ತು ಅಭ್ಯಾಸಗಳ ಮೂಲಕ ವರ್ತನೆಯ ಉಗಮ ಮತ್ತು ಮಾರ್ಪಾಟನ್ನು ಉಂಟುಮಾಡುವ ಪ್ರಕ್ರಿಯೆಯೇ ಕಲಿಕೆ." **CRONBACK.LEE..J.**

3. "ಒಬ್ಬ ವ್ಯಕ್ತಿಯ ವರ್ತನೆ, ಒಳನೋಟ, ಆಸಕ್ತಿ, ಚಿಂತನೆ ಇವುಗಳಲ್ಲಿ ಉಂಟಾಗುವ ಬದಲಾವಣೆಯೇ ಕಲಿಕೆ." **BLAIR & SIMPSON .**

4. "ಪೂರ್ವ ವರ್ತನೆಯ ಆಧಾರದ ಮೇಲೆ ವ್ಯಕ್ತಿಯ ವರ್ತನೆಯಲ್ಲಿ ಹೆಚ್ಚು ಕಾಲ ನೆಲಸಿರುವಂತಹ ಬದಲಾವಣೆಯೇ ಕಲಿಕೆ.," **MELVIN H. MARX**

5. "ಸನ್ನಿವೇಶದ ಅವಶ್ಯಕತೆಗಳನ್ನು ಪೂರೈಸಲು ವರ್ತನೆಯಲ್ಲಿ ಆಗುವ ಎಲ್ಲಾ ಮಾರ್ಪಾಟುಗಳನ್ನು ಕಲಿಕೆ ಎನ್ನುವರು. **GARDNER MURPHY**

---

**18. ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–5, ಪು–222,223.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

6. " ಪ್ರಯತ್ನ ಮತ್ತು ಅನುಭವದ ಪರಿಣಾಮವಾಗಿ ಉಂಟಾಗುವ ಶಾಶ್ವತ ಬದಲಾವಣೆಯೇ ಕಲಿಕೆ.

**WALTER V. BINGHAM**

ಮೇಲಿನ ವ್ಯಾಖ್ಯೆಗಳನ್ನು ವಿಶ್ಲೇಷಿಸಿದಾಗ ಕಲಿಕಾ ಪ್ರಕ್ರಿಯೆಯ ಕೆಲವು ಪ್ರಮುಖ ಅಂಶಗಳನ್ನು ಕಾಣಬಹುದು. ಅವುಗಳೆಂದರೆ, ಅನುಭವದ ಪರಿಣಾಮವಾಗಿ ವರ್ತನೆಯಲ್ಲಾಗುವ ಶಾಶ್ವತವಾದ ಬದಲಾವಣೆಗಳೇ ಕಲಿಕೆ. ಆದರೆ ವರ್ತನೆಯ ಎಲ್ಲಾ ಬದಲಾವಣೆಗಳೂ ಕಲಿಕೆಯಲ್ಲ. ಔಷಧಿಗಳು, ಮಾದಕ ಪದಾರ್ಥಗಳು ಆಯಾಸ, ಪರಿಪಕ್ವನ, ಅಪಘಾತಗಳು – ಇವುಗಳಿಂದುಂಟಾಗುವ ಬದಲಾವಣೆ ಶಾಶ್ವತವಾಗಿದ್ದರೂ ಸಹ ಅದನ್ನು 'ಕಲಿಕೆ' ಎನ್ನಲಾಗುವುದಿಲ್ಲ. ಕಲಿಕೆಯನ್ನು ನೇರವಾಗಿ ವೀಕ್ಷಿಸಲು ಸಾಧ್ಯವಾಗದಿದ್ದರೂ, ಅದನ್ನು ವ್ಯಕ್ತಿಯ ಚಟುವಟಿಕೆಗಳಲ್ಲಿ ಕಾಣಬಹುದಾಗಿದೆ. "ಕಲಿಕೆ" ಎನ್ನುವುದು ವ್ಯಕ್ತಿಯ ಕೆಲಕಾಲ ನೆಲಸಿರುವಂತಹ ಸ್ವರೂಪದ ಬದಲಾವಣೆಗಳನ್ನು ಒಳಗೊಳ್ಳುತ್ತದೆ. ಕಲಿಕೆ ಎನ್ನುವುದು ಅಭ್ಯಾಸ ಮತ್ತು ಅನುಭವಗಳ ಮೇಲೆ ಅವಲಂಬಿಸಿರುವಂಥಾದ್ದು. ಹೊಸ ವರ್ತನೆಗಳನ್ನು, ಜ್ಞಾನವನ್ನು, ಕೌಶಲ್ಯವನ್ನು, ಗುರಿಗಳನ್ನು ಪರಿಚಯ ಮಾಡಿಕೊಳ್ಳುವುದು ಮೊದಲ ಭಾಗವಾದರೆ, ಹಾಗೆ ಕಲಿತದ್ದನ್ನು ದೃಢಪಡಿಸಿಕೊಳ್ಳುವುದು ಎರಡನೆಯ ಭಾಗ. ನೂತನ ವಿಷಯಗಳನ್ನು ಹೊಸ ಸನ್ನಿವೇಶಗಳಿಗೆ ಅನ್ವಯಿಸುವ ಜ್ಞಾನ, ಕಾರ್ಯವಿಧಾನ ಮುಂತಾದವುಗಳು ಹೆಚ್ಚು ಪ್ರಯೋಜನಕಾರಿಯಾಗಬೇಕಾದರೆ ಅವು ವ್ಯಕ್ತಿಯ ಇಷ್ಟದಂತೆ ಸುಲಭವಾಗಿ ನಡೆಯುವಂತೆ ಪಳುಗಬೇಕು.

ಒಟ್ಟಿನಲ್ಲಿ ಕಲಿಕೆ ಅಭ್ಯಾಸ ಮತ್ತು ಅನುಭವಗಳಿಂದ ಉಂಟಾಗುವ ವರ್ತನೆಯಲ್ಲಿನ ಬದಲಾವಣೆ ಅಥವಾ ಮಾರ್ಪಾಟು ಎಂದಾಯಿತು. 'ಕಲಿಕೆ' ವಿಕಾಸವನ್ನು ಸಹಕರಿಸುವ ಅಥವಾ ಬೆಂಬಲಿಸುವ ಒಂದು ಪ್ರಕ್ರಿಯೆ ಎಂದು ಹೇಳಬಹುದು. ಆದ್ದರಿಂದ ಶೈಕ್ಷಣಿಕ ಪ್ರಕ್ರಿಯೆಗಳನ್ನು ಬೆಳವಣಿಗೆ ಮತ್ತು ವಿಕಾಸದ ಪ್ರಕ್ರಿಯೆಗಳೊಂದಿಗೆ ಸಮನ್ವಯಗೊಳಿಸಬೇಕೆಂಬುದನ್ನು ಅಧ್ಯಾಪಕರು ಸದಾ ಸ್ಮರಣೆಯಲ್ಲಿಟ್ಟುಕೊಳ್ಳುವುದು ಒಳ್ಳೆಯದು. ಶೈಕ್ಷಣಿಕ ಮನೋವಿಜ್ಞಾನಿಗಳು ಕಲಿಕೆಯಲ್ಲಿ ಹಲವಾರು ಘಟಕಗಳನ್ನು ಗುರುತಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದವೆಂದರೆ:–[19]

---

19. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–5, ಪು–224,225.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

**1. ಕಲಿಯುವ ವ್ಯಕ್ತಿ–**

ಕಲಿಯಲು ಬರುವ ವ್ಯಕ್ತಿ ತನ್ನದೇ ಆದ ವ್ಯಕ್ತಿತ್ವ ಮತ್ತು ಅನುಭವಗಳನ್ನು ಪಡೆದಿರುತ್ತಾನೆ. ಅವನಿಗೆ ತನ್ನದೇ ಆದ ಆಸೆ, ಅವಶ್ಯಕತೆಗಳು, ಶಕ್ತಿಸಾಮರ್ಥ್ಯಗಳು ಹಾಗೂ ಆಸಕ್ತಿ ಅಭಿರುಚಿಗಳಿರುತ್ತವೆ. ಇವುಗಳೊಂದಿಗೆ ಅವನು ಕಲಿಯುವ ಸನ್ನಿವೇಶಕ್ಕೆ ಬರುತ್ತಾನೆ. ಅವನಿಗೆ ಕಲಿಯಲು ಆಸಕ್ತಿಯಿರಬಹುದು ಆದರೆ ಕಲಿಯುವ ಸಾಮರ್ಥ್ಯ ವಿಲ್ಲದಿರಬಹುದು. ಕಲಿಯುವ ಉದ್ದೇಶವಿರಬಹುದು, ಆದರೆ ಅದಕ್ಕೆ ಶಾರೀರಿಕ, ಮಾನಸಿಕ, ಸಾಮಾಜಿಕ ಅಥವಾ ಇನ್ನಾವುದೇ ಅಡಚಣೆ ಇರಬಹುದು.

**2. ಕಲಿಯುವ ಸನ್ನಿವೇಶ:–**

ಕಲಿಕೆಯ ಸನ್ನಿವೇಶ ಸಂದರ್ಭಗಳು ಒಂದೊಂದು ವ್ಯಕ್ತಿಗೂ ಭಿನ್ನವಾಗಿರುತ್ತದೆ. ಒಂದೇ ಸನ್ನಿವೇಶ ಅದೇ ವ್ಯಕ್ತಿಗೆ ಬೇರೆ ಬೇರೆ ಕಾಲದಲ್ಲಿ ಭಿನ್ನವಾಗಿರಬಹುದು ಅಂದರೆ ಕಲಿಕೆಯ ಸನ್ನಿವೇಶ ಕಲಿಯುವ ವ್ಯಕ್ತಿಯ ಅವಿಭಾಜ್ಯ ಅಂಗವಾಗಿರುತ್ತದೆ. (ಮತ್ತು ಕಲಿಯಬೇಕಾದ ವಸ್ತುವನ್ನವಲಂಭಿಸಿರುತ್ತದೆ.

**3. ಕಲಿಯುವ ಪ್ರಕ್ರಿಯೆ:–**

ಇದು ಒಂದು ಸಂಕೀರ್ಣ ವಿಚಾರ. ಕಲಿಯುವ ಪ್ರಕ್ರಿಯೆ ಹೀಗೇ ನಡೆಯುತ್ತದೆ ಎಂದು ಹೇಳುವುದು ತುಂಬಾ ಕಷ್ಟ. ಸಾಮಾನ್ಯವಾಗಿ ಕಲಿಯುವ ಪ್ರಕ್ರಿಯೆ ಕಲಿಯುವ ವ್ಯಕ್ತಿ, ಕಲಿಕೆಯ ಸನ್ನಿವೇಶ ಮತ್ತು ಕಲಿಯಬೇಕಾದ ವಸ್ತುವನ್ನವಲಂಭಿಸಿರುತ್ತದೆ.

**4. ಕಲಿಸುವ ವ್ಯಕ್ತಿ.**

ಕಲಿಕೆಯು ಕಲಿಸುವ ಅಧ್ಯಾಪಕನನ್ನು ಅವಲಂಭಿಸಿರುತ್ತದೆ. ಇಲ್ಲಿ ಅವನ ಹಿನ್ನೆಲೆ, ಅನುಭವ, ಸಾಮರ್ಥ್ಯಗಳು ಮತ್ತು ಅವನ ವ್ಯಕ್ತಿತ್ವ ಪ್ರಧಾನ ಪಾತ್ರ ವಹಿಸುತ್ತವೆ. ವಿದ್ಯಾರ್ಥಿಯು ಶಾಲೆ ಅಥವಾ ಗುರುಕುಲದ ಒಳಗೆ ಮತ್ತು ಹೊರಗೆ ಕಲಿತದ್ದಕ್ಕೆಲ್ಲಾ ಅಧ್ಯಾಪಕರೇ ನೇರವಾಗಿ ಕಾರಣರಲ್ಲದಿದ್ದರೂ ಕಲಿಕೆಯ ನಿರ್ದೇಶನ, ಪ್ರೇರಣೆ, ಅಭಿಪ್ರೇರಣೆ, ಅವಧಾನ, ಅವಲೋಕನ ಮತ್ತು ಲಕ್ಷ್ಯಗಳಲ್ಲಿ ಅವರ ಪಾತ್ರ ಮಹತ್ವದ್ದಾಗಿರುತ್ತದೆ." ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" ಎಂಬ ದಾಸವಾಣಿಯಂತೆ ಗುರುವಿನ ಆಶೀರ್ವಾದ ಮಹತ್ವಪೂರ್ಣವಾದದ್ದು.

**೫. ಕಲಿಯುವ ವಸ್ತು:**

ಕಲಿಯಬೇಕಾದ ವಸ್ತು ಕಲಿಯುವ ಹಾಗೂ ಕಲಿಸುವ ಕ್ರಮವನ್ನು ನಿರ್ಧರಿಸುತ್ತದೆ. ಕಲಿಯುವ ವಸ್ತು ವ್ಯಕ್ತಿಯ ವಿವಿಧ ವಯೋಮಾನದಲ್ಲಿ ಕಲಿಯಬೇಕಾದ ಅಂಶಗಳನ್ನು ಸೂಚಿಸುತ್ತದೆ.

**ಕಲಿಕೆಯ ಬಗ್ಗೆ ಗಮನದಲ್ಲಿಟ್ಟುಕೊಳ್ಳಬೇಕಾದ ಕೆಲವು ಅಂಶಗಳು ಹೀಗಿವೆ:–**

ಕಲಿಕೆ ವ್ಯಾಪಕವಾದುದು. ಅದು ಜೀವನದ ಎಲ್ಲಾ ಪ್ರಾಕಾರಗಳಗೂ ಸಂಬಂಧಪಟ್ಟಿರುತ್ತದೆ. ಅದು ವ್ಯಕ್ತಿಯ ಬೌದ್ಧಿಕ, ಸಾಮಾಜಿಕ ಹಾಗೂ ಸಂವೇಗಾತ್ಮಕ ವಲಯಗಳಗೆ ಸಂಬಂಧಿಸಿರುತ್ತದೆ. ಕಲಿಕೆ ವರ್ತನೆಯ ನಿರಂತರ ಬದಲಾವಣೆ. ಅದು ಜೀವನಪೂರ್ತಿ ನಡೆಯುತ್ತಲೇ ಇರುತ್ತದೆ. ಅದಕ್ಕೇ ಹೇಳುವುದು "ಜೀವನಪೂರ್ತಿ ಕಲಿಯುವುದು ಇದ್ದೇ ಇದೆ" ಎಂದು. ಕಲಿಕೆ ವಿಕಾಸಾತ್ಮಕ ಹಾಗೂ ವರ್ತನೆಯ ಸರಿಯಾದ ರೂಪ ಕಲಿಕೆಗಳು ಯಾವಾಗಲೂ ಗುರಿಗಳಗೆ ಸಂಬಂಧಿಸಿದ್ದು. ಈ ಗುರಿಗಳನ್ನು ವೀಕ್ಷಣಾ ಸಾಧ್ಯವಾದ ವರ್ತನೆಗಳನ್ನಾಗಿ ನಿರೂಪಿಸಬಹುದು. ಕಲಿಕೆಗೂ ಆಸಕ್ತಿಗಳಗೂ ನಿಕಟವಾದ ಸಂಬಂಧವಿದೆ. ಯಾವುದೇ ವ್ಯಕ್ತಿ ಅವನಿಗೆ ಆಸಕ್ತಿಯಿರುವ ವಿಷಯಗಳನ್ನು ಬೇಗ ಕಲಿಯುತ್ತಾನೆ. ಕಲಿಕೆಯು ಸಿದ್ಧತೆ ಮತ್ತು ಪ್ರೇರಣೆಯನ್ನು ಅವಲಂಬಿಸಿರುತ್ತದೆ.[20]

ಕಲಿಯುವ ಕ್ರಮವನ್ನನುಸರಿಸಿ ಕಲಿವನ್ನು ಸ್ಥೂಲವಾಗಿ ನಾಲ್ಕು ವಿಧಗಳಾಗಿ ವಿಂಗಡಿಸಬಹುದು. ಇವುಗಳು ಬಹಳ ಮುಖ್ಯವಾಗಿದ್ದು, ಇದರ ಪರಿಚಯದಿಂದ ಶಿಕ್ಷಕರ ಕಾರ್ಯಕ್ಕೆ ತುಂಬಾ ಸಹಕಾರಿಯಾಗುವುದು.

**1. ಪರಿವರ್ತನ ರೀತಿಯ ಕಲಿವು.**

ವ್ಯಕ್ತಿಯ ಮೂಲ ಸ್ವಭಾವಗಳನ್ನು ಹಲವು ಸನ್ನಿವೇಶಗಳ ರಚನೆಯಿಂದ ಮಾರ್ಪಡಿಸುವುದು ಸಾಧ್ಯ. ಈ ಮೂಲಕ ಸಾಧ್ಯವಾಗುವ ಕಲಿವನ್ನು ಪರಿವರ್ತನಾ ರೀತಿಯ ಕಲಿವೆನ್ನುತ್ತೇವೆ.

**2. ಅನುಕರಣ ರೀತಿಯ ಕಲಿವು.**

ಚಿಕ್ಕವರಿರುವಾಗ ಮಕ್ಕಳು ದೊಡ್ಡವರಾಡುವ ಮಾತನ್ನು, ಮಾಡುವ ಕೆಲಸವನ್ನು ನೋಡಿ ತಾವೂ ಅದರಂತೆ ಮಾಡಲು ಪ್ರೇರಿತರಾಗಿ, ಆಚರಿಸಿ ಕಲಿಯುತ್ತಾರೆ. ಇದೇ ಅನುಕರಣ ರೀತಿಯ ಕಲಿವು.ಸಮಾಜದ ಆಚಾರ– ವ್ಯವಹಾರಗಳನ್ನು, ಸಂಪ್ರದಾಯಗಳನ್ನು, ಆದರ್ಶ ಪುರುಷರ ದೃಷ್ಟಿಧ್ಯೇಯಗಳನ್ನು ಕಲಿಯಲು ಅನುಕರಣದಿಂದ ಸಾಧ್ಯವಾಗುತ್ತದೆ. ಅನುಕರಣ ಎರಡು ರೀತಿಯದ್ದಾಗಿದೆ. 'ಪ್ರಾಸಂಗಿಕ' ಮತ್ತು 'ಉದ್ದೇಶಪೂರ್ವಕ' ಅನುಕರಣ.

---

೨೦. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–೫, ಪು–೨೨೪,೨೨೫.(೨೦೦೫) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–೫೭೭೦೦೫.

**೩. ತಿದ್ದಿಕೊಂಡು ಕಲಿಯುವಿಕೆ**.

ಯಾವುದಾದರೊಂದು ಹೊಸ ಕೆಲಸ ಮಾಡಬೇಕಾಗಿ ಬಂದಾಗ ಆಚರಿಸಲು ಪ್ರಯತ್ನಿಸಿ, ಸರಿಯಾಗದಿದ್ದರೆ ತಿದ್ದಿಕೊಂಡು ಪುನಃ ಆಚರಿಸಿ, ಆಕಸ್ಮಿಕವಾಗಿ ಸರಿಯಾದ ರೀತಿಯಲ್ಲಿ ಒಮ್ಮೆ ಮಾಡಿಬಿಟ್ಟರೆ, ಅದನ್ನು ಅನಂತರ ದೃಢಪಡಿಸಿಕೊಳ್ಳುತ್ತೇವೆ. ಈ ರೀತಿಯ ಕಲಿವಿಗೆ ತಿದ್ದಿಕೊಂಡು ಕಲಿಯುವಿಕೆ ಎನ್ನುತ್ತೇವೆ. ಹಾಗೆ ಕಲಿಯುವಾಗ ನಮ್ಮ ಮುಂದಿರುವ ಸಮಸ್ಯೆಯನ್ನು ಪರೀಕ್ಷಿಸಿ ಅದನ್ನು ಬಿಡಿಸಬೇಕಾದ ಕ್ರಮವನ್ನು ವಿವೇಚಿಸಿಕೊಂಡು ಕಾರ್ಯಮುಖವಾಗುವುದು ಕಂಡು ಬರುವುದಿಲ್ಲ. ಯಾವ ಪ್ರಾಣಿಗಳಲ್ಲೂ ವಿವೇಚನೆಯಿಂದ ಕಲಿಯುವುದು ಕಂಡು ಬರುವುದಿಲ್ಲ ಎಂದು ಥಾರ್ನ್ಡೈಕರು ವಾದಿಸಿರುವರು. ಆದರೆ ಮೆಕ್ಡೂಗಲ್, ಕಾಯ್ಲರ್ ಮುಂತಾದವರು ಅವುಗಳಲ್ಲೂ ವಿವೇಚನೆ ಉಂಟೆಂದು ಹೇಳಿದ್ದಾರೆ. ಇದನ್ನು ಸಮರ್ಥಿಸಲು ಕಾಯ್ಲರ್ ರವರು ಅನೇಕ ಪ್ರಯೋಗಗಳನ್ನು ನಡೆಸಿರುವರು. ಒಂದು ಚಿಂಪಾಂಜಿ ಜಾತಿಯ ಕಪಿಯು ಗಳುವಿಗೆ ಗಳುವನ್ನು ಸೇರಿಸಿದರೆ ಉದ್ದವಾಗುವುದನ್ನು ಅದು ಕಲಿತರೂ, ಆ ಗಳು ಬಾಳೆಹಣ್ಣನ್ನು ಪಡೆಯಲು ಅವಶ್ಯಕವೆಂಬುದನ್ನು ಅರಿತುಕೊಂಡದ್ದು ವಿವೇಚನೆಯಿಂದ ಎಂದು ಕಾಯ್ಲರ್ ವಾದಿಸಿರುವರು.[21]

ಥಾರ್ನ್ಡೈಕರು ನಡೆಸಿದ ಇನ್ನೊಂದು ಪ್ರಯೋಗದಲ್ಲಿ ಬೆಕ್ಕು ಅಗುಣಿ ತೆಗೆಯುವುದನ್ನು ಮೊದಲನೆಯ ಸಲ ಅದು ಕಲಿತದ್ದು ವಿವೇಚನೆಯಿಂದಲ್ಲ, ಆಕಸ್ಮಿಕವಾಗಿ. ಇವರು ಈ ಪ್ರಯೋಗದ ಆಧಾರದ ಮೇಲೆ ಪ್ರಾಣಿಗಳಲ್ಲಿ ತಿದ್ದಿಕೊಂಡು ಕಲಿಯುವುದು ಮಾತ್ರ ಸಾಧ್ಯ ಎಂದು ವಾದಿಸಿದರು. ಕೆಲವರು ಆ ಬೆಕ್ಕಿನಲ್ಲೂ ವಿವೇಚನೆ ಇತ್ತು ಎಂದು ವಾದಿಸಿರುವರು. ಏಕೆಂದರೆ ಒಮ್ಮೆ ಆಕಸ್ಮಿಕವಾಗಿ ಅದನ್ನು ಕಲಿತರೂ ಮುಂದೆ ಅದನ್ನು ದೃಢಪಡಿಸಿಕೊಳ್ಳುವಾಗ, ಅದೇ ಸರಿಯಾದ ರೀತಿಯೆಂದು ಅದಕ್ಕೆ ತೋರಿರಬೇಕು. ಆದ್ದರಿಂದ ಅದರಲ್ಲೂ ವಿವೇಚನೆ ಇದೆ ಎಂದು ಕಂಡು ಬರುತ್ತದೆ.

**4. ವಿವೇಚನಾ ರೀತಿಯ ಕಲಿವು**.

ನಮ್ಮ ಮುಂದಿರುವ ಕೆಲಸವನ್ನು ಆರಂಭಿಸುವುದಕ್ಕೆ ಮೊದಲು ಅದನ್ನು ಹೇಗೆ ಮಾಡಬಹುದೆಂಬ ಆಲೋಚನೆ ನಡೆಸಿ ಕ್ರಮವನ್ನರಿತುಕೊಂಡು, ಅನಂತರ ಅದನ್ನು ಆರಂಭಿಸಿದರೆ ಆ ಕಾರ್ಯ ಬೇಗ ಯಶಸ್ವಿಯಾಗಬಲ್ಲದು. ಅಂತಹ ಕಲಿವನ್ನು ವಿವೇಚನಾ ರೀತಿಯ ಕಲಿವೆನ್ನುತ್ತೇವೆ.

---

21. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ-11, ಪು-188-194.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

**WOLFGANG KOHLER German Psychologist and Phenomenologist**ರವರು ಪ್ರಾಣಿಗಳಲ್ಲಿ ಅಂಥ ವಿವೇಚನೆ ಇದೆಯೆಂದೂ, **E.L.THONDIKE** ರವರು ಇಲ್ಲವೆಂದೂ ಹೇಳುವರು. ಆದರೆ ವಾಸ್ತವವಾಗಿ ಇವರಿಬ್ಬರ ಅಭಿಪ್ರಾಯಕ್ಕೂ ಮಧ್ಯಸ್ಥವಾಗಿದೆ ಅಂದರೆ" ಯಾವುದು ತಿದ್ದಿಕೊಂಡು ಕಲಿಯುವ ರೀತಿಯೆಂದು ಒಬ್ಬರು ಭಾವಿಸುತ್ತಾರೋ ಅದರಲ್ಲೂ ವಿವೇಚನೆ ಇದ್ದೇ ಇದೆ. ಎಂದು. ಮಾನವನ ಕಲಿವಿನ ಕ್ರಮದಲ್ಲಿ ವಿವೇಚನೆ ಪ್ರಧಾನ ಪಾತ್ರ ವಹಿಸುವುದಾದರೂ ತಿದ್ದಿಕೊಂಡು ಕಲಿಯುವ ರೀತಿಯೂ ಇದೆ. ಮೊದಮೊದಲಿನ ಕಲಿವಿನಲ್ಲಿ ತಿದ್ದಿಕೊಳ್ಳುವಿಕೆ ಪ್ರಧಾನವಾಗಿದ್ದರೂ ಅದು ಪ್ರಬುದ್ಧವಾದಂತೆ ವಿವೇಚನೆಯೇ ಹೆಚ್ಚಾಗಿ ಕಂಡುಬರುತ್ತದೆ. ಇವೆರಡು ರೀತಿಗಳೂ ಕಲಿವಿನ ಎರಡು ಧ್ರುವಗಳಂತಿವೆ.

ವರ್ತನೆಗಳು ಸ್ಥಿರಗೊಂಡು ವ್ಯಕ್ತಿಯ ಜೀವನದಲ್ಲಿ ಪಾತ್ರ ವಹಿಸುವಂತಾಗಬೇಕು. ಆಗ ಮಾತ್ರ ಕಲಿವು ಪೂರ್ಣವಾಗುವುದು. ಹಾಗೆ ವರ್ತನೆಗಳನ್ನು ಮಾರ್ಪಡಿಸಿ ದೃಢಗೊಳಿಸಲು ಸಹಕರಿಸುವ ಸನ್ನಿವೇಶಗಳೇ ಕಲಿವಿನ ನಿಯಮಗಳು. ಉಪಾಧ್ಯಾಯರು ತಮ್ಮ ಪಾಠಬೋಧನೆಯ ಕ್ರಮವನ್ನು ಕಲಿವಿನ ನಿಯಮಗಳನ್ನು ಅನುಸರಿಸಿಯೇ ರೂಪಿಸಿಕೊಳ್ಳಬೇಕು. ಕಲಿವನ್ನು ಸಾಧಿಸದ ಬೋಧನೆ ಬೋಧನೆಯೇ ಅಲ್ಲ. ಕಲಿವು ಖಚಿತವಾಗಿ ಸಿದ್ಧಿಸುವಂತೆ ಬೋಧನಕ್ರಮ ರೂಪುಗೊಳ್ಳಬೇಕು. ಅಂಥ ಉಚಿತ ಬೋಧನ ಕ್ರಮವನ್ನು ಕಂಡುಕೊಳ್ಳಲು ಥಾರ್ನ್ಡೈಕರು ಕೆಲವು ನಿಯಮಗಳನ್ನು ರೂಪಿಸಿದ್ದಾರೆ. ಅವುಗಳೆಂದರೆ:–[22]

1. **ಆಚರಣೆಯ ನಿಯಮ**:– ನಾವು ಯಾವ ವರ್ತನೆಯನ್ನು ಆಚರಿಸುತ್ತೇವೆಯೋ ಆ ವರ್ತನೆ ದೃಢಗೊಂಡು ಕಲಿವು ಸಿದ್ಧಿಸುತ್ತದೆ.

2. **ಫಲಾಫಲಗಳ ನಿಯಮ**:–ಸಂತೋಷವನ್ನು, ಜಯವನ್ನು ತರತಕ್ಕದ್ದನ್ನು ಕಲಿಯುತ್ತೇವೆ. ಅಹಿತ, ನೋವು, ಸೋಲು ಇವುಗಳನ್ನು ಹುಟ್ಟಿಸುವಂಥದ್ದನ್ನು ಕಲಿಯಲಾರೆವು.

3. **ಸಿದ್ಧತೆಯ ನಿಯಮ**:– ಸಿದ್ಧವಿರುವಾಗ ಕಲಿಯುತ್ತೇವೆ. ಸಿದ್ಧವಿಲ್ಲದಿರುವಾಗ ಕಲಿಯಲಾರೆವು.

4. **ಉದ್ದೇಶದ ನಿಯಮ**:– ಉದ್ದೇಶಪೂರ್ವಕವಾದದ್ದನ್ನು ನಾನು ಕಲಿಯುತ್ತೇವೆ. ಉದ್ದೇಶರಹಿತವಾದದ್ದನ್ನು ಕಲಿಯುವುದು ಕಷ್ಟ. ಇದರಂತೆ ಕಲಿಯುವ ನಿಯಮಗಳನ್ನು ಅನುಸರಿಸಿಯೇ ಬೋಧಿಸುವ ಕ್ರಮ ರೂಪುಗೊಳ್ಳಬೇಕು. ಆಗ ಮಾತ್ರ ಬೋಧಿಸಿದ್ದನ್ನು ವಿದ್ಯಾರ್ಥಿಗಳು ಕಲಿಯಬಲ್ಲರು.

---

22. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–11, ಪು–196–200.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

## ೩-೩. ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳು.

## ಅಭಿಪ್ರೇರಣೆ - ಅವಧಾನ

ಶಿಕ್ಷಣ ವ್ಯವಸ್ಥೆಯಲ್ಲಿ ಬಹುಮಟ್ಟಿಗೆ ಶಿಕ್ಷಕರು ತಮ್ಮ ನಿಯಂತ್ರಣಕ್ಕೆ ಒಳಪಟ್ಟ ವಿದ್ಯಾರ್ಥಿಗಳ ಮನೋವ್ಯಾಪಾರಗಳನ್ನು ಸೂಕ್ತ ರೀತಿಯಲ್ಲಿ ಬಳಸಿಕೊಳ್ಳುವುದಾಗಿದೆ. ಆ ಮೂಲಕ ಕಲಿವು ಆದಷ್ಟು ಬೇಗ ಪರಿಣಾಮಕಾರಿಯಾಗಿ ಸಿದ್ಧಿಸುವಂತೆ ಮಾಡಬೇಕಾವುದು. ಅಂತಹ ಅಂಶಗಳಲ್ಲಿ ಕೆಲವು ಮುಖ್ಯವಾದವುಗಳನ್ನು ಗಮನಿಸೋಣ.[23]

- ~ **ಕಲಿವಿಗೆ ಸಿದ್ಧತೆ.**
- ~ **ಕಲಿವಿಗೆ ಪ್ರೇರಕಶಕ್ತಿ**
- ~ **ಕಲಿವಿನ ಮೇಲೆ ಮನೋಭಾವಗಳ ಪರಿಣಾಮ.**
- ~ **ಕಲಿವಿಗೆ ಅನುಭವಗಳ ವ್ಯವಸ್ಥೆ ಮತ್ತು ಸಂವಿಧಾನದ ಅಚ್ಚುಕಟ್ಟು.**
- ~ **ಕಲಿವಿನಲ್ಲಿ ಅಭ್ಯಾಸದ ಪಾತ್ರ.**
- ~ **ಕಲಿವಿಗೆ ಸಾಮಾಜಿಕ ಸನ್ನಿವೇಶಗಳು**
- ~ **ಮನಸ್ಸಿನ ಸಂಸ್ಕಾರ(ಶಿಸ್ತು)ಮತ್ತು ಕಲಿವಿನಲ್ಲಿ ಅದರ ಪಾತ್ರ.**
- ~ **ಆಯಾಸ ಮತ್ತು ಕಲಿವಿನ ಮೇಲೆ ಬೀರುವ ಪರಿಣಾಮ.**
- ~ **ಆಸಕ್ತಿ ಮತ್ತು ಅವಧಾನ.**
- ~ **ದೌರ್ಬಲ್ಯಗಳು ಮತ್ತು ಚಿಕಿತ್ಸಾ ಶಿಕ್ಷಣ.**

---

23. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿಮನೋವಿಜ್ಞಾನ, ಅ-12, ಪು-222,223.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

## ಅಭಿಪ್ರೇರಣೆ (MOTIVATION)

ನಮ್ಮ ವರ್ತನೆಗಳಗೆಲ್ಲ ಮನಶ್ಶಕ್ತಿಯೇ (ಕಾರಣ) ಆಧಾರ. ಅದೇ ಚಾಲಕ ಶಕ್ತಿ. ಆ ಚಾಲಕ ಶಕ್ತಿ ನಮ್ಮ ಮನಸ್ಸಿನ ಕೆಲವು ಗತಿಗಳೊಡನೆ ಸಂಬಂಧಿಸಿದೆ.ಇದನ್ನೇ ಆಂಗ್ಲಭಾಷೆಯಲ್ಲಿ **Motivation** ಎಂದು ಕರೆಯುತ್ತಾರೆ.ಈ ಪದವು ಲ್ಯಾಟಿನ್ ಮೂಲ ಮೂವರ್ಸ್ ಎಂಬ ಪದದಿಂದ ಬಂದಿದೆ. ಇದರ ಅರ್ಥ ಚಲಿಸುವಂತೆ ಮಾಡು, ಕಾರ್ಯೋನ್ಮುಖನಾಗುವಂತೆ ಮಾಡು ಎಂದಾಗಿರುತ್ತದೆ. ಇದನ್ನೇ ಕನ್ನಡ ಭಾಷೆಯಲ್ಲಿ ಅಭಿಪ್ರೇರಣೆ ಎಂದು ಕರೆಯುತ್ತೇವೆ. ಇದರ ಅರ್ಥ ವ್ಯಕ್ತಿಯನ್ನು ಕಾರ್ಯೋನ್ಮುಖನನ್ನಾಗಿ ಅಥವಾ ಕ್ರಿಯಾಶೀಲನನ್ನಾಗಿ ಮಾಡುವಂತಹ ಪ್ರಕ್ರಿಯೆಯಾಗಿದೆ.[24]

"ಅಭಿಪ್ರೇರಣೆ ಎಂದರೆ ನಿರ್ದಿಷ್ಟ ಗುರಿಯೆಡೆಗೆ ಕಾರ್ಯೋನ್ಮುಖನಾಗುವಂತೆ ಮಾಡುವ ಪ್ರಕ್ರಿಯೆಯಾಗಿದೆ.

ಆದರೆ ಈ ಮೊದಲು ಆ ಗುರಿಯೆಡೆಗೆ ಅತ್ಯಲ್ಪ ಅಥವಾ ಯಾವುದೇ ಆಕರ್ಷಣೆ ಇಲ್ಲದಿರಬಹುದು." ಎಂದು **H.W.BERNARD–** ವ್ಯಾಖ್ಯಾನಿಸಿದ್ದಾರೆ.

"ಅಭಿಪ್ರೇರಣೆಯು ವರ್ತನೆಯನ್ನು ಹುರಿದುಂಬಿಸುವ, ಪೋಷಿಸುವ ಮತ್ತು ನಿರ್ದೇಶಿಸುವ ಸಂಕೀರ್ಣ ಆಂತರಿಕ ಪ್ರಕ್ರಿಯೆಗಳ ಸಂಯೋಜನೆಯಾಗಿದೆ." ಎಂದು **WILLIAM C. MORSE** ಮತ್ತು **G. MAX WINGO** ವ್ಯಾಖ್ಯಾನಿಸಿದ್ದಾರೆ.

ಮತ್ತೊಬ್ಬರು **American** ಮನೋವಿಜ್ಞಾನಿ – **ABRAHAM MASLOW** ಎಂಬುವವರು "ಅಭಿಪ್ರೇರಣೆ ಎನ್ನುವುದು ನಿರಂತರ, ಚಲನಶೀಲ ಹಾಗೂ ಸಂಕೀರ್ಣ ಪ್ರಕ್ರಿಯೆಯಾಗಿದೆ ಮತ್ತು ಇದು ಪ್ರತಿಯೊಂದು ಜೀವಿಯಲ್ಲಿಯೂ ಕಂಡುಬರುವ ಒಂದು ಸಾಮಾನ್ಯ ಲಕ್ಷಣವಾಗಿದೆ." ಎಂದು ವ್ಯಾಖ್ಯಾನಿಸಿದ್ದಾರೆ.

ಒಂದು ನಿರ್ದಿಷ್ಟ ರೀತಿಯಲ್ಲಿ ವರ್ತಿಸುವಂತೆ ಪ್ರೋತ್ಸಾಹಿಸುವ, ಪ್ರೇರೇಪಿಸುವ ಮನೋಭಾವವನ್ನು ಸಂಕಲ್ಪ ಎನ್ನುವುದು. ಇದನ್ನು ಉದ್ದೇಶ ಉತ್ತೇಜಕ, ಪ್ರೇರಕ ಎಂದೂ ಕರೆಯಬಹುದು. ಕಲಿವು ಕೇವಲ ಒಂದು ಕ್ಷೇತ್ರಕ್ಕಲ್ಲ. ಇಡೀ ಜೀವನದ ಅವಶ್ಯಕತೆಗಳ ಪೂರೈಕೆಗೂ ಹೌದು. ಜ್ಞಾನವನ್ನು ಜೀವನದ ಬೆಳಕಿನಲ್ಲಿ ಬೋಧಿಸಬೇಕು.[25]

---

24. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–6, ಪು–259,(2005)ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
25. **ವೀರಪ್ಪ.. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–12, ಪು–231.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

ಬದುಕಿನ ಸಾರ್ಥಕತೆಗೆ ಪ್ರೇರೇಪಿಸುವಂತಿರಬೇಕು. ಅಭಿಪ್ರೇರಣೆಯು ವ್ಯಕ್ತಿಯನ್ನು ಕ್ರಿಯೆಯಲ್ಲಿ ತೊಡಗುವಂತೆ ಮಾಡುವುದಲ್ಲದೆ, ವ್ಯಕ್ತಿಯಲ್ಲಿ ಶಕ್ತಿಯನ್ನು ತುಂಬುತ್ತದೆ. ವ್ಯಕ್ತಿಯ ಕ್ರಿಯೆಯನ್ನು ಅಥವಾ ಚಟುವಟಿಕೆಯನ್ನು ನಿರ್ದೇಶಿಸುತ್ತದೆ; ಅಥವಾ ಅದರಲ್ಲಿ ಆಸಕ್ತಿ ಉಳಿದುಕೊಳ್ಳುವಂತೆ ಮಾಡುತ್ತದೆ. ಗುರಿಯನ್ನು ತಲುಪುವ ಕಾರ್ಯಗತಿಯಲ್ಲಿ, ಅವನು ಎಲ್ಲಾ ಸಾಧ್ಯ ಪರ್ಯಾಯಗಳನ್ನು ಪ್ರಯತ್ನಿಸಿ ನೋಡುತ್ತಾನೆ.

ಸಾಮಾನ್ಯವಾಗಿ ಎರಡು ರೀತಿಯ ಅಭಿಪ್ರೇರಣೆಗಳನ್ನು ಕಾಣುತ್ತೇವೆ. ಅವುಗಳು ಆಂತರಿಕ ಅಭಿಪ್ರೇರಣೆ ಮತ್ತು ಬಾಹ್ಯ ಅಭಿಪ್ರೇರಣೆ. ಆಂತರಿಕ ಅಭಿಪ್ರೇರಣೆಯು ವ್ಯಕ್ತಿಯ ಒಳಗಿನಿಂದಲೇ ಹೊಮ್ಮುವಂತಹದು. ಇದು ಜೀವಿಯ ಬಯಕೆ ಮತ್ತು ಸಹಜವಾದ ಪ್ರವೃತ್ತಿಗಳಿಗೆ ನೇರವಾಗಿ ಸಂಬಂಧಿಸಿದೆ. ಆಂತರಿಕ ಪ್ರೇರಣೆಯಿದ್ದಾಗ ಕಲಿಕೆಯ ಪುಷ್ಟೀಕರಣ ಅಥವಾ ಪುನರ್ಬಲವನ್ನು ತಾನೇ ಒದಗಿಸುತ್ತದೆ. ಅರ್ಥಪೂರ್ಣ ಕಲಿಕೆ ಮುಂದಿನ ಕಲಿಕೆಯ ಅಪೇಕ್ಷೆಯನ್ನು ಹುರಿದುಂಬಿಸುತ್ತದೆ. ಉದಾಹರಣೆಗೆ ವಾದ್ಯ ನುಡಿಸುವುದು ವ್ಯಕ್ತಿಗೆ ಆನಂದವನ್ನುಂಟುಮಾಡುತ್ತದೆ. ಶಿಕ್ಷಕನಿಗೆ ಬೋಧನೆ ತೃಪ್ತಿಯನ್ನು ನೀಡುತ್ತದೆ.[26]

ಇನ್ನು ಬಾಹ್ಯ ಅಭಿಪ್ರೇರಣೆ ಎಂದರೆ ಇದು ಜೀವಿಗೆ ದೇಹದ ಹೊರಗಡೆಯಿಂದ ಬರುವುದಾಗಿದೆ. ತಾನು ತೊಡಗಿರುವ ಚಟುವಟಿಕೆಗಳು ಲಾಭದಾಯಕವಾಗಿರುವುದರಿಂದ ವ್ಯಕ್ತಿಯು ಆ ಚಟುವಟಿಕೆಗಳಲ್ಲಿ ತೊಡಗುತ್ತಾನೆ. ದೊರಕುವ ಲಾಭ ಅಥವಾ ಮೆಚ್ಚುಗೆಯೇ ಪ್ರೇರಕವಾಗಿರಬಹುದು. ಉದಾಹರಣೆಗೆ ಬಟ್ಟೆ ಹೊಲಿಯುವ ಕಾರ್ಯದಲ್ಲಿ ತೊಡಗಿರುವುದು. ಅದು ಅವನಿಗೆ ಜೀವನೋಪಾಯವನ್ನು ಒದಗಿಸುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ತನ್ನದೇ ಆದ ಆಕಾಂಕ್ಷೆ ಮಟ್ಟ ಹೊಂದಿರುತ್ತಾನೆ. ಈ ಪರಿಕಲ್ಪನೆಯನ್ನು ಮೊಟ್ಟಮೊದಲು ಪರಿಚಯಿಸಿದವನು **HOPPE** ಎಂಬ ಜರ್ಮನ್ ಮನೋವಿಜ್ಞಾನಿ. ಇವನ ಪ್ರಕಾರ ಎಲ್ಲ ವ್ಯಕ್ತಿಗಳೂ ಜೀವನದಲ್ಲಿ ಹಲವಾರು ಗುರಿಗಳನ್ನು ಹೊಂದಿರುತ್ತಾರೆ. ಈ ಗುರಿಯನ್ನು ತಲುಪಲು ಇಚ್ಛಿಸುವ ಕಾರ್ಯದ ಮಟ್ಟ ಅಥವಾ ಆತ್ಮವಿಶ್ವಾಸದ ಮಟ್ಟವನ್ನು ಆಕಾಂಕ್ಷೆಯ ಮಟ್ಟವೆಂದು ಕರೆಯುತ್ತಾರೆ. ಇದು ಒಂದು ಪ್ರಬಲ ಆಂತರಿಕ ಪ್ರೇರಕವಾಗಿ ಕಾರ್ಯ ನಿರ್ವಹಿಸುತ್ತದೆ. ಅಭಿಪ್ರೇರಣೆ ಒಂದು ಗುರಿ ನಿರ್ದೇಶಿತ ವರ್ತನೆ. ಶಿಕ್ಷಕ ಕಲಿಯುವವನಿಗೆ ಅಣಿಗೊಳಿಸುವಂತಹ ಗುರಿಯಾಗಿದೆ ಅಥವಾ ಕಲಿಯುವವನನ್ನು ತನ್ನಷ್ಟಕ್ಕೆ ತಾನೇ ಗುರಿ ಅಣಿ ಮಾಡಿಕೊಳ್ಳುವಂತೆ ಬೆಂಬಲಿಸುವುದು. ಇದು ಕಲಿಕೆಯ ಚಟುವಟಿಕೆಯನ್ನು ನಿರ್ದೇಶಿಸುವಲ್ಲಿ ಮತ್ತು ಕಾಪಾಡಿಕೊಳ್ಳುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಈ ಎರಡೂ ರೀತಿಯ ಪ್ರೇರಣೆಗಳಲ್ಲಿ ಆಂತರಿಕ ಅಭಿಪ್ರೇರಣೆ ಕಲಿಯುವವನ್ನು ಪ್ರಚೋದಿಸಿ, ಉತ್ಸಾಹಭರಿತನನ್ನಾಗಿ ಮಾಡುವುದರ ಮೂಲಕ ಬೋಧನಾ–ಕಲಿಕಾ ಪ್ರಕ್ರಿಯೆಯಲ್ಲಿ ಉತ್ತಮ ಫಲಿತಾಂಶ ತರಬಲ್ಲುದು.[27]

---

26. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–6, ಪು–260–264.(2005)ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
27. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–6, ಪು–260,264,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಅಭಿಪ್ರೇರಣೆ ವಿಚಾರ ಗಮನದಲ್ಲಿಟ್ಟುಕೊಂಡು ವಿಷ್ಣುಶರ್ಮರ ಪಂಚತಂತ್ರದ ಬಗ್ಗೆ ಯೋಚಿಸಿದರೆ, ಅದೆಷ್ಟು ಹೃದಯಂಗಮವಾಗಿ ಆ ರಾಜಕುಮಾರರನ್ನು ಅಭಿಪ್ರೇರಣೆಗೊಳಿಸಿ, ಉತ್ತಮ ಮಹತ್ವಾಕಾಂಕ್ಷೆಯನ್ನು ಅವರ ಮನಸ್ಸಿನಲ್ಲಿ ಉದ್ಭವಿಸುವಂತೆ ಪ್ರೋತ್ಸಾಹಿಸಿ ಕೇವಲ ಆರು ತಿಂಗಳುಗಳಲ್ಲಿ ರಾಜನೀತಿ ನಿಪುಣರು, ಬದುಕಿನ ನೀತಿ ಅರಿತವರು ಹಾಗೂ ಸುಶಿಕ್ಷಿತರನ್ನಾಗಿ ಪರಿವರ್ತಿಸಿರುವುದು ಒಂದು ಅಸಾಧಾರಣ ಅಭಿಪ್ರೇರಣಾ ಶಕ್ತಿಯಿಂದ ಎಂದು ಸ್ಪಷ್ಟವಾಗಿ ಹೇಳಬಹುದು. ಇಂಥಹ ಪ್ರತಿಭಾವಂತ ಶಿಕ್ಷಕರು ಬಹಳ ವಿರಳವೇ ಸರಿ.

स्तिमितोन्नतसञ्चारा जनसंतापहारिणः ।

जायन्ते विरला लोके जलदा इव सज्जनाः ॥[28]

ಅಂದರೆ ಸ್ಥಿರವಾದ ಬಹಳ ಎತ್ತರದಲ್ಲಿ ಸಂಚರಿಸುವುವೂ, ಜನರ ಸಂತಾಪವನ್ನು ಕಳೆಯುವುವೂ ಆದ ಮೋಡಗಳಂತೆ ಲೋಕದಲ್ಲಿ ಉನ್ನತವಾದ ನಡತೆಯುಳ್ಳವರೂ, ಜನರ ಕಷ್ಟಗಳನ್ನು ಪರಿಹರಿಸುವವರೂ ಆದ ಸಜ್ಜನರು ಬಹಳ ವಿರಳರು.

## ಅವಧಾನ ~ATTENTION

ಕಲಿವನ್ನು ಪರಿಣಾಮಕಾರಿಗೊಳಸತಕ್ಕ ಕೆಲವು ಮುಖ್ಯ ಅಂಶಗಳಲ್ಲಿ ಅವಧಾನ ಮತ್ತು ಆಸಕ್ತಿ ಒಂದು ವಿಶಿಷ್ಟ ಪಾತ್ರವನ್ನು ವಹಿಸುತ್ತವೆ. **DUMVILLE**– ಎಂಬ ಶೈಕ್ಷಣಿಕ – ಮನೋವಿಜ್ಞಾನಿಯು ಅವಧಾನ ಕುರಿತು ಹೀಗೆ ವ್ಯಾಖ್ಯಾನಿಸಿದ್ದಾರೆ:– "ಒಂದು ವಸ್ತುವಿನ ಬದಲು ಮತ್ತೊಂದು ವಸ್ತುವಿನ ಮೇಲೆ ಪ್ರಜ್ಞಾನುಭವದ ಕೇಂದ್ರೀಕರಣವೇ ಅವಧಾನ. ಎಲ್ಲಾ ಸೃಜನಶೀಲ ಚಟುವಟಿಕೆಗಳಲ್ಲಿ ಇದು ಅಗತ್ಯವಾದ ಅಂಶವಾಗಿದೆ. ನಿರ್ದಿಷ್ಟ ಉದ್ದೀಪನಗಳ ಕಡೆಗೆ ಗಮನಹರಿಸುವ ಪ್ರಕ್ರಿಯೆಯೇ ಅವಧಾನ. ಅವಧಾನ ಪ್ರಕ್ರಿಯೆಯೆಂದರೆ ಸಂವೇದನೆಗೆ ಅಥವಾ ಗ್ರಹಿಕೆಗೆ ಸಿದ್ಧವಾಗಿದೆ ಎಂದರ್ಥ. ಅದು ಒಂದು ಕ್ರಿಯಾಶೀಲ–ಪ್ರಕ್ರಿಯೆ. ಇದು ಕೆಲವು ಸಲ ಇಂದ್ರಿಯಗಳ ಮತ್ತು ಇಡೀ ನರವ್ಯೂಹದ ಹೊಂದಾಣಿಕೆಯನ್ನು ಒಳಗೊಂಡಿರುತ್ತದೆ.[29]

ಸರಳವಾಗಿ ಹೇಳುವುದಾದರೆ ಒಂದು ಅಂಶದ ಕಡೆ ಪ್ರಜ್ಞೆಯನ್ನು ಕೇಂದ್ರೀಕರಿಸುವುದೇ " ಅವಧಾನ. "ಟಾರ್ಚ್ ಬೆಳಕನ್ನು ವಿಸ್ತಾರವಾದ ಬಯಲಿನಲ್ಲಿ ಬಿಟ್ಟರೆ ಬೆಳಕು ಹರಡಿಹೋಗಿ ಅಲ್ಲಿರುವ ವಸ್ತುಗಳು ಮಂಕಾಗಿ ಗೊಂದಲಮಯವಾಗಿ ಗೋಚರಿಸುವುವು. ಅದೇ ಬೆಳಕನ್ನು ಒಂದು ವಸ್ತುವಿನ ಮೇಲೆ ಮೊನೆಮಾಡಿದರೆ ಅದು ಪ್ರಕಾಶಮಾನವಾಗಿ ಸ್ಪಷ್ಟವಾಗಿ ಗೋಚರಿಸುತ್ತದೆ.

---

28. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ– ಶ್ಲೋ –30, ಪು –27,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

29. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–6, ಪು–265,,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಅದೇ ರೀತಿಯಲ್ಲಿ ಒಂದು ಕಾಲದಲ್ಲಿ ನಮ್ಮ ಮನಸ್ಸು ಅನೇಕ ವಸ್ತುಗಳ ಕಡೆ ಗಮನಕೊಟ್ಟರೆ ಅವಧಾನ ಚೆಲ್ಲಿಹೋಗಿ, ಶಕ್ತಿ ಕುಂದಿಹೋಗಿ, ಅದರ ಬಿಂಬ ಮನಸ್ಸಿನಲ್ಲಿ ಪರಿಣಾಮಕಾರಿಯಾಗಿ ರೂಪುಗೊಳ್ಳುವುದಿಲ್ಲ. ಅದೇ ಗಮನವನ್ನು ಒಂದಂಶದ ಮೇಲೆ ಕೇಂದ್ರೀಕರಿಸಿದಾಗ ಮನಸ್ಸಿಗೆ ಅದರ ಬಿಂಬ ಸ್ಪಷ್ಟವಾಗಿ ಬಿದ್ದು ಉತ್ತಮ ಸ್ಪರ್ಶಾನುಭವ ಉಂಟಾಗುತ್ತದೆ. ಹೀಗೆ ವಿಷಯ, ಸನ್ನಿವೇಶ, ಶಬ್ದ, ವಾಸನೆ, ರುಚಿ ಮುಂತಾದವನ್ನು ಸ್ಪಷ್ಟವಾಗಿ ಪರಿಚಯಮಾಡಿಕೊಡುವುದೇ ಅವಧಾನದ ಮೂಲ ಉದ್ದೇಶವಾಗಿದೆ.

ಕಲಿವಿನ ಮೇಲೆ ಅವಧಾನದ ಪ್ರಭಾವ ಬಹಳ ಮುಖ್ಯವಾದುದು. ಪಾಠದ ಆರಂಭದಲ್ಲಿ ಮಕ್ಕಳು ಈಗಾಗಲೇ ತಿಳಿದಿರುವ ವಿಷಯದ ಕಡೆ ಮೊದಲು ಅವರ ಗಮನ ಸೆಳೆಯುತ್ತೇವೆ. ಹಾಗೆಯೇ ಅದಕ್ಕೆ ಸಂಬಂಧಿಸಿದಂತೆ ಒಂದು ಹೊಸ ವಿಷಯದ ಕಡೆಗೂ ತಿರುಗಿಸುತ್ತೇವೆ. ಕಾರಣ, ಹೊಸ ಜ್ಞಾನ ನಮಗೆ ಪರಿಚಯವಾಗುವುದು ಹಳೆಯ ಜ್ಞಾನದ ಜೊತೆ ಸೇರಿಕೊಳ್ಳುವುದರಿಂದ. ಅದಕ್ಕೇ, ಶೈಕ್ಷಣಿಕ ಮನೋವಿಜ್ಞಾನದ ಸೂಚಿತ ಕ್ರಮದಂತೆ ಯಾವುದೇ ಬೋಧನೆಗೆ ಮೊದಲು ಪಾಠಕ್ಕೆ ಪೀಠಿಕೆ ಹಾಕಿ, ಅದರ ಕೊನೆಯಲ್ಲಿ ಕಲಿಯುವವರ ಗಮನವನ್ನು ಹಳೆಯ ಪರಿಚಿತ ವಿಷಯದಿಂದ ಹೊಸ ವಿಷಯದ ಕಡೆಗೆ ಸೆಳೆದು– "ಮಕ್ಕಳೇ, ಈ ದಿನ ಇಂತಹದೇ ಒಂದು ವಿಷಯವನ್ನು ತಿಳಿಯೋಣವೇ?" ಎಂದಾಗ, ಅವರಿಗೆ ಆ ವಿಷಯವನ್ನು ಕಲಿಯುವುದು ಅವಶ್ಯಕವೂ, ಪ್ರಿಯವೂ, ಆಸಕ್ತಿಯುತವೂ ಆಗುತ್ತದೆ. ಅವರ ಅವಧಾನ ಆ ವಿಷಯದ ಮೇಲೆ ಕೇಂದ್ರೀಕೃತವಾಗುತ್ತದೆ. ಅವರ ಕಲಿವು ಸರಾಗವೂ ಯಶಸ್ವಿಯೂ ಆಗುತ್ತದೆ.[30] ಈ ಕ್ರಮವನ್ನೇ ವಿಷ್ಣುಶರ್ಮರು ಪಂಚತಂತ್ರದಲ್ಲಿ ಬಹಳ ಅಚ್ಚುಕಟ್ಟಾಗಿ ಅನುಸರಿಸಿ, ರಾಜಕುಮಾರರ ಗಮನವನ್ನು ರಾಜನೀತಿ ಶಿಕ್ಷಣ ಹಾಗೂ ಉತ್ತಮ ಬದುಕಿನ ನೀತಿನಿಯಮಗಳೆಡೆಗೆ ಆಕರ್ಷಕ ದೃಷ್ಟಾಂತಗಳ ಮೂಲಕ ಕೇಂದ್ರೀಕೃತಗೊಳಿಸಿದ್ದಾರೆ.

सत्यधर्मविहीनेन न सन्दध्यात्कथञ्चन ।

सुसन्धितोऽप्यसाधुत्वादचिराद्याति विक्रियाम् ॥[31]

ಸತ್ಯ, ಧರ್ಮ, ಇವುಗಳನ್ನು ಹೊಂದಿರದವನ ಜೊತೆಗೆ ಹೇಗಾದರೂ ಸಂಧಿ ಮಾಡಿಕೊಳ್ಳಕೂಡದು. ಒಳ್ಳೆಯ ರೀತಿಯಲ್ಲಿ ಸಂಧಿಮಾಡಿಕೊಂಡಿದ್ದರೂ ಅವನು ಅಸಾಧುವಾದ ಕಾರಣ ಬಹಳ ಬೇಗ ವಿರೋಧಿಯಾಗುತ್ತಾನೆ. ರಾಜನೀತಿಯನ್ನು ಎಷ್ಟು ಚೆನ್ನಾಗಿ ತಿಳಿಹೇಳಿರುವುದು ಕಂಡುಬರುತ್ತದೆ.

---

30. **ವೀರಪ್ಪ. ಎನ್.ಎಸ್**. ಶೈಕ್ಷಣಿಕ ಮನೋವಿಜ್ಞಾನ, ಅ–12, ಪು–264–265.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

31. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಾಕೋಲೂಕೀಯ, ಶ್ಲೋ– 24, ಪು –446,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಮತ್ತೊಂದು ಉದಾಹರಣೆ ಕೊಡುವುದಾದರೆ – ಐದನೆಯ ತಂತ್ರ ಅಪರೀಕ್ಷಿತಕಾರಕ ಸೂತ್ರಕಥಾ ಪ್ರಾರಂಭದಲ್ಲಿ ರಾಜಕುಮಾರರನ್ನು ಕುರಿತು " ಇವತ್ತಿನಿಂದ ಬೇರೆ ರೀತಿಯ ಕಥೆಗಳನ್ನು ನಿಮಗೆ ಹೇಳುತ್ತೇನೆ. ಪ್ರತಿಯೊಬ್ಬರಿಗೂ ತಾನು ನಾಯಕನಾಗಬೇಕು, ಇತರರನ್ನು ಆಳಬೇಕು ಎಂಬ ಮಹತ್ವಾಕಾಂಕ್ಷೆ ಇರುತ್ತದೆ. ಇನ್ನು ತಂದೆಯ ಪದವಿ ತನಗಲ್ಲದೆ ಇನ್ನೊಬ್ಬರಿಗೆ ಹೋಗಬಾರದು ಎಂಬ ಸ್ವಾರ್ಥ ವ್ಯಾಮೋಹವೂ ಇರುತ್ತದೆ. ಹಾಗೆ ಇರುವುದು ಸಹಜವೇ.ಆದರೆ ಆ ಸ್ಥಾನವನ್ನಲಂಕರಿಸಲು ಬೇಕಾದ ಯೋಗ್ಯತೆ ಇರಬೇಕಲ್ಲ?ಅಂತಹ ಯೋಗ್ಯತೆ ಇಲ್ಲದಿದ್ದರೆ, ಅದನ್ನು ಇತರರನ್ನು ನೋಡಿಯೋ, ಕೇಳಿಯೋ ಗಳಿಸಿಕೊಳ್ಳಬೇಕು. ಇದಕ್ಕೆ ಒಳ್ಳೆಯ ಪರಿಶ್ರಮ ಹಾಗೂ ಪ್ರಯತ್ನವಿರಬೇಕು. ಇದಕ್ಕೆ ಸಂಬಂಧಿಸಿದಂತೆ ಕಥೆಯೊಂದಿದೆ ಮತ್ತು ಅದಕ್ಕೆ ಸೇರಿಕೊಂಡಂತಹ ಬೇರೆ ಕಥೆಗಳಿವೆ. ಅವನ್ನೇ ಈಗ ಹೇಳುತ್ತೇನೆ ಕೇಳಿ."[32] ಹೀಗೆ ಉತ್ತಮ ಪೀಠಿಕೆಯೊಂದಿಗೆ ಪರಿಚಿತ ವಿಚಾರಗಳ ಮೂಲಕ ಹೊಸ ವಿಚಾರಗಳ ಕಡೆಗೆ ವಿಷ್ಣುಶರ್ಮರು ರಾಜಕುಮಾರರ ಗಮನವನ್ನು ಅವರ ಉಜ್ವಲ ಭವಿಷ್ಯದೆಡೆಗೆ ಕೇಂದ್ರೀಕರಿಸುತ್ತಾರೆ.

ಅವಧಾನವನ್ನು ಕೆಲವು ವಿಧಗಳಾಗಿ ವಿಂಗಡಿಸಲಾಗಿದೆ. ಅವುಗಳನ್ನು ದೊರಕಿಕೊಳ್ಳುವ ಕ್ರಮವನ್ನು ಪರಿಚಯಿಸಿಕೊಳ್ಳುವುದು ಸೂಕ್ತವಾದುದು.[33]

**1. ಸ್ವಾಭಾವಿಕ ಅವಧಾನ:–**

ಹುಟ್ಟು ಗುಣದ ಮೂಲಕ ಬರುವ ಮನಶ್ಶಕ್ತಿ ಸ್ವಪ್ರೇರಣೆಯಿಂದ ಉಚಿತ ಸನ್ನಿವೇಶಗಳ ಕಡೆಗೆ ಪ್ರವಹಿಸುತ್ತದೆ. ಅದು ಸ್ವಾಭಾವಿಕವಾಗಿ ಪ್ರವಹಿಸುವುದರಿಂದ ಮಕ್ಕಳಿಗೆ ಅತಿ ಹೆಚ್ಚಿನ ಪ್ರಮಾಣದಲ್ಲಿ ಶಕ್ತಿ ವ್ಯಯವಾಗುವುದಿಲ್ಲ. ಇದು ಬಹಳ ತೀಕ್ಷ್ಣವಾಗಿ ರುವುದರಿಂದ ಕಲಿವಿಗೂ ಅನುಕೂಲಕರ.

**2. ಒತ್ತಾಯದ ಅವಧಾನ:–**

ಬೋಧನೆಯಲ್ಲಿ ಎಲ್ಲ ಕಾಲದಲ್ಲೂ ಸ್ವಾಭಾವಿಕ ಅವಧಾನವನ್ನೇ ಒದಗಿಸಿಕೊಳ್ಳುವುದು ಸಾಧ್ಯವಿಲ್ಲ. ಕಾರಣ ಆ ಹುಟ್ಟು ಗುಣಗಳು ಯಾವುದೋ ನಿರ್ದಿಷ್ಟ ಮಾರ್ಗದಲ್ಲಿ ಕಾರ್ಯಮುಖವಾಗತಕ್ಕವು. ಮಕ್ಕಳಿಗೆ ಕಲಿಯಬೇಕಾದ ಅನೇಕ ವಿಷಯಗಳಲ್ಲಿ ಆಸಕ್ತಿಯಿರುವುದಿಲ್ಲ. ಆದರೂ ಅವರು ಅದನ್ನು ಕಲಿಯುವುದು ಕಡ್ಡಾಯವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಆ ಕಾರ್ಯಕ್ಕೆ ಅವರ ಸ್ವಾಭಾವಿಕ ಅವಧಾನವನ್ನು

---

32. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ–5–ಅಪರೀಕ್ಷಿತಕಾರಕ, ಪು–205,(2015) ವರ್ನಿಲ 39/2–11,ಕಲ್ಯಾಣಿ ಗಾರ್ಡನ್,BSK 1stStage, ಬೆಂಗಳೂರು–560050
33. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–12, ಪು–265–267.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4.

ಒತ್ತಾಯವಾಗಿ ಬಳಸಿಕೊಳ್ಳಬೇಕಾಗುತ್ತದೆ.

**೩. ಆರ್ಜಿತ ಅವಧಾನ :–**

ಒಮ್ಮೆ ನೀತಿಪಾಠಕ್ಕೆ ಒತ್ತಾಯದ ಅವಧಾನವನ್ನು ಬಳಸಿಕೊಂಡಿದ್ದೇವೆಂದು ಭಾವಿಸೋಣ.ಅವರಿಗೆ ನೀತಿಪಾಠದಲ್ಲಿ ಪ್ರೀತಿ ಹುಟ್ಟುವಂತೆ ಪ್ರೇರೇಪಿಸಿದರೆ ಅದು ಅವರ ಆಸೆಯ ವಿಚಾರವಾಗುತ್ತದೆ. ಇದರಿಂದ ಅವಧಾನ ಸುಲಭವಾಗಿ ದೊರಕುತ್ತದೆ. ಒತ್ತಾಯವಾಗಿ ಒದಗಿಸಿಕೊಂಡಿದ್ದರೂ ಆದಷ್ಟು ಬೇಗ ಅದು ಆರ್ಜಿತ ರೂಪಕ್ಕೆ ಪರಿವರ್ತನೆಯಾಗಬೇಕು. ಹೀಗೆ ಕಲಿಯುವ ವಿಷಯದಲ್ಲೇ ಆರಂಭವಾಗುವ ಪ್ರೀತಿಯಿಂದ ಪರಿವರ್ತನೆಯಾಗುವ ಒತ್ತಾಯದ ಅವಧಾನ ಸ್ವಾಭಾವಿಕ ಅವಧಾನದಷ್ಟೇ ಸರಾಗವಾಗಿ ದೊರಕುತ್ತದೆ. ಇದರಿಂದ ಶ್ರಮವೂ ಕಡಿಮೆ ಮತ್ತು ಕಲಿವೂ ಯಶ್ವಿಯಾಗುವುದು.

ಸುಲಭವಾಗಿ ಅವಧಾನವನ್ನು ದೊರಕಿಸಿಕೊಳ್ಳುವುದಕ್ಕೂ, ನಂತರ ಅದು ಕದಲದಂತೆ ನೋಡಿಕೊಳ್ಳುವುದಕ್ಕೂ ನೆರವಾಗುವ ಸಾಧನಗಳಲ್ಲಿ ಬಹು ಮುಖ್ಯವಾಗಿ ಮಕ್ಕಳಿಗೆ ಬಂದಿರುವ ಒಂದು ಗುಣವೆಂದರೆ "ಆಸಕ್ತಿ". ಹಲವರು ಇದನ್ನು ಅವಧಾನವೆಂದೂ ಭಾವಿಸುವರು. ಅವಧಾನ ಪ್ರವಹಿಸುವ ಮಾರ್ಗವನ್ನು ನಿಷ್ಕರ್ಷಿಸುವ ಮನೋಭಾವವೇ ಆಸಕ್ತಿ. **MCDOUGALL - American Psychologist** ರವರು ಹೇಳಿರುವಂತೆ, ಆಸಕ್ತಿ ಅವಧಾನದ ಸ್ಥಾವರ ರೂಪ. ಅವಧಾನ ಆಸಕ್ತಿಯ ಕಾರ್ಯಸ್ವರೂಪ. ಕಾರ್ಯರೂಪಕ್ಕೆ ಬರದೆ ಮನಸ್ಸಿನಲ್ಲಿ ಅಡಗಿರುವ ಅವಧಾನವೇ ಆಸಕ್ತಿ, ಕಾರ್ಯರೂಪಕ್ಕೆ ಬಂದಾಗ ಅವಧಾನ. ರಚನೆ, ಕಾತರ, ಹೋರಾಟ, ಸಂಘಾಭಿಲಾಷೆ ಇತ್ಯಾದಿ ಹುಟ್ಟುಗುಣಗಳು ಆಸಕ್ತಿಗಳು. ಭೀತಿ, ಆಹಾರಾನ್ವೇಷಣೆ, ಸಂಗ್ರಹ ಇವುಗಳಿಂದಲೂ ಹಲವು ಆಸಕ್ತಿಗಳು ಹುಟ್ಟುತ್ತವೆ. ಇವುಗಳು ಪ್ರಕೃತಿದತ್ತವಾಗಿ ಬರುವ ಸಹಜ ಆಸಕ್ತಿಗಳು. ಸ್ವಾಭಾವಿಕ ಅವಧಾನಕ್ಕೆ ಸ್ವಾಭಾವಿಕ ಆಸಕ್ತಿಗಳೇ ಕಾರಣ. ಆರ್ಜಿತ ಅವಧಾನಕ್ಕೆ ಪರಿವರ್ತಿತ ಆಸಕ್ತಿಗಳೇ ಆಧಾರ.[34]



---

೩4. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–12, ಪು–272.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4.

## ೩-೪- ಸ್ಮೃತಿ ಮತ್ತು ವಿಸ್ಮೃತಿ-ಕಲಿಕೆಯ ವರ್ಗಾವಣೆ

ಅನುಭವಗಳು ಮನಸ್ಸಿನಲ್ಲಿ ಗುರುತುಗಳನ್ನು ನಿಲ್ಲಿಸುತ್ತವೆ. ಹಾಗೆ ಮನಸ್ಸಿನಲ್ಲಿ ಸಂಗ್ರಹವಾಗುವ ಅನುಭವದ ಮುದ್ರಿಕೆಗಳನ್ನು ಬಿಂಬಗಳೆಂದು ಕರೆಯುತ್ತಾರೆ. ಆ ಬಿಂಬಗಳನ್ನು ಮುಂದೆ ನಾವು ಪುನಃ ಮನಸ್ಸಿನಲ್ಲಿ ಚಿತ್ರಿಸಿಕೊಂಡು ಅದರ ಅನುಭವಗಳನ್ನು ಮರುಕಳಿಸಿ ಪಡೆಯುವುದಕ್ಕೆ ನೆನಪು, ಸ್ಮೃತಿ ಅಥವಾ ಜ್ಞಾಪಕಶಕ್ತಿ ಎನ್ನಲಾಗಿದೆ. ಸರಳವಾಗಿ ಹೇಳುವುದಾದರೆ, ಕಲಿತ ವಿಷಯವನ್ನು ನೆನಪಿನಲ್ಲಿಟ್ಟುಕೊಳ್ಳುವ ಪ್ರಕ್ರಿಯೆಯೇ ಸ್ಮೃತಿ. ಈ ಸ್ಮೃತಿ ಶಕ್ತಿ ಇಲ್ಲದೆ ನಾವು ಏನನ್ನೂ ಕಲಿಯಲು ಸಾಧ್ಯವಿಲ್ಲ. ನೆನಪೆಂಬ ಮಾನಸಿಕ ವ್ಯಾಪಾರದಲ್ಲಿ ಮೂರು ಉಪಕ್ರಿಯೆಗಳಿವೆ. ಮೊದಲನೆಯದಾಗಿ ಇಂದ್ರಿಯಗಳ ಮೂಲಕ ಮನಸ್ಸು ಪ್ರತ್ಯಕ್ಷವಾಗಿ ಅನುಭವ ಪಡೆಯಬೇಕು. ಎರಡನೆಯದಾಗಿ ಈ ಅನುಭವಗಳನ್ನು ಮನಸ್ಸು ಬಿಂಬ ರೂಪದಲ್ಲಿ ಧರಿಸಬೇಕು. ಕೊನೆಯದಾಗಿ ಅಗತ್ಯವೆನಿಸಿದಾಗ ಆ ಬಿಂಬಗಳು ಭಾವನೆಗಳ ರೂಪವನ್ನು ತಾಳಿ ಸ್ಮರಣೆಗೆ ಬರಬೇಕು. ಸಾಂಪ್ರದಾಯಿಕವಾಗಿ ಕೊನೆಯ ಮಾನಸಿಕ ವ್ಯಾಪಾರವನ್ನು ಜ್ಞಾಪಕಶಕ್ತಿ ಎಂದು ಕರೆಯಲಾದರೂ ಒಟ್ಟಾರೆ ಮೂರು ಮಾನಸಿಕ ವ್ಯಾಪಾರಗಳನ್ನೂ ಒಟ್ಟಿಗೆ ಸೇರಿದಂತೆ ನೆನಪು ಅಥವಾ ಜ್ಞಾಪಕಶಕ್ತಿ ಎಂದು ಕರೆಯುವುದು ಹೆಚ್ಚು ಶಾಸ್ತ್ರೀಯವಾಗಿರುತ್ತದೆ.[೩೫]

ಸಂಸ್ಕೃತ ಕಥಾಸಾಹಿತ್ಯದ ಒಂದು ಶ್ಲೋಕ ಹೀಗೆ ಹೇಳುತ್ತದೆ.

काव्यशास्त्रविनोदेन कालोगच्छति धीमताम् ।

व्यसनेन च मूर्खाणां निद्रया कलहेन वा ॥[36]

ಅಂದರೆ, ಬುದ್ಧಿವಂತರ ಸಮಯವು ಸಾಹಿತ್ಯ, ಶಾಸ್ತ್ರ ಗ್ರಂಥಗಳನ್ನು ಓದುವುದರಿಂದ ಸಿಗುವ ಮನರಂಜನೆಯಿಂದ ಕಳೆಯುತ್ತದೆ. ಆದರೆ, ಮೂರ್ಖರ ಸಮಯವು ದುಶ್ಚಟಗಳಲ್ಲಿ, ನಿದ್ದೆಯಲ್ಲಿ ಅಥವಾ ಜಗಳದಲ್ಲಿ ಕಳೆಯುತ್ತದೆ.

ಭಾಷೆಗಳಲ್ಲಿ ಮುಖ್ಯವೂ, ಮಧುರವೂ, ದಿವ್ಯವೂ ಆದುದು ಸಂಸ್ಕೃತ. ಅದರಿಂದ ಆ ಭಾಷೆಯ ಕಾವ್ಯ ಮಧುರ, ಅದಕ್ಕಿಂತಲೂ ಸುಭಾಷಿತ ಮಧುರ. ಇಲ್ಲಿನ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಲಭ್ಯವಾಗುವ ನೀತಿಪಾಠಗಳು, ಸೂಕ್ತಿಗಳು, ಶ್ಲೋಕಗಳು, ಅಜ್ಞಾನದ ಅಂಧಕಾರವನ್ನು ಹೋಗಲಾಡಿಸುವುದಲ್ಲದೆ ಸುಜ್ಞಾನದ ಬೆಳಕು ಚೆಲ್ಲಿ ಬದುಕನ್ನು ಹಸನು ಮಾಡುವುದಾಗಿದೆ. ಇದಲ್ಲದೆ ಸ್ತೋತ್ರಗಳು ಸುಭಾಷಿತಗಳು ಮತ್ತು ನೀತಿ

---

**೩೫. ವೀರಪ್ಪ.ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ-14, ಪು-೩೩೯-೩೪೦.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4.

36. **ನಾರಾಯಣ ಪಂಡಿತರ ಹಿತೋಪದೇಶ**. 1-32.

ಪಾಠಗಳ ಪಠಣ ನಮ್ಮ ಉಚ್ಛಾರಣೆ ಮತ್ತು ನೆನಪಿನ ಶಕ್ತಿಯನ್ನು ಹೆಚ್ಚಿಸುವುದೂ ಆಗಿರುತ್ತದೆ. ಇದನ್ನರಿತ ಪ್ರಪಂಚದ ಅನೇಕ ದೇಶಗಳು ತಮ್ಮ ಶಾಲೆಗಳ ಪಠ್ಯಕ್ರಮಕ್ಕೆ ಸಂಸ್ಕೃತ ಭಾಷೆಯನ್ನು ಸೇರಿಸುವುದಲ್ಲದೆ ಶಾಲೆಯ ಪ್ರಾರ್ಥನಾ ಶ್ಲೋಕಗಳನ್ನು ಆಯ್ಕೆಮಾಡಿಕೊಂಡಿರುತ್ತಾರೆ. ವೇದಗಳ ಕಾಲದಿಂದಲೂ ಋಷಿಮುನಿಗಳು ನೆನಪಿನ ಶಕ್ತಿಯಿಂದಲೇ ವೇದಮಂತ್ರಗಳನ್ನು ಉಚ್ಛಾರಣೆ ಮಾಡುತ್ತಿದ್ದರು.

ಸ್ಮೃತಿ ಅಥವಾ ಜ್ಞಾಪಕಶಕ್ತಿ ಕುರಿತು ಕೆಲವು ಮನೋವಿಜ್ಞಾನಿಗಳು ತಮ್ಮದೇ ಆದ ವ್ಯಾಖ್ಯಾನವನ್ನು ಒದಗಿಸಿದ್ದಾರೆ." ಹಿಂದೆ ಕಲಿತಂತಹ ವಿಷಯಗಳನ್ನು ಅನುಭವಗಳನ್ನು ಪುನಃ ಸ್ಮರಣೆಗೆ ತರುವುದೇ ಸ್ಮೃತಿ" ಎಂದು **ROBERT S. WOODWORTH & MARK WEISS-(AmericanPsychologists)** ವ್ಯಾಖ್ಯಾನಿಸಿದ್ದಾರೆ. ಹಾಗೆಯೇ **RYBURN-(Educational Psychologist)** ರವರು ಇನ್ನೂ ಸ್ವಲ್ಪ ವಿವರವಾಗಿ ವ್ಯಾಖ್ಯಾನಿಸಿ "ನಾವು ಪಡೆದ ಅನುಭವಗಳನ್ನು ಸಂಗ್ರಹಿಸಿಡುವ ಶಕ್ತಿ ಮತ್ತು ಅನುಭವಗಳು ಜರುಗಿದ ಸ್ವಲ್ಪ ಕಾಲಾನಂತರ ಪ್ರಜ್ಞಾನುಭವಕ್ಕೆ ತಂದುಕೊಳ್ಳುವ ಸಾಮರ್ಥ್ಯವೇ ಸ್ಮೃತಿ ಎಂದು ಹೇಳಿದ್ದಾರೆ.[37] ಸ್ಮೃತಿಯ ಮೇಲೆ ಪ್ರಭಾವ ಬೀರುವ ಹಲವಾರು ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳಿವೆ. ಕೆಲವು ಮುಖ್ಯವಾದುದನ್ನು ಗಮನಿಸಿದರೆ- ವೈಯಕ್ತಿಕ ಭಿನ್ನತೆಗಳು, ಆಸಕ್ತಿ, ಅಭಿಪ್ರೇರಣೆ, ಕಲಿಯುವವನ ಮನೋಧೋರಣೆ, ಕಲಿಕೆಯ ಪ್ರಮಾಣ, ಕಲಿಯುವ ವಿಷಯ, ಪುನರಾವರ್ತನೆ ಇತ್ಯಾದಿ. ಸ್ಮೃತಿ ಅಥವಾ ಸ್ಮರಣೆಯಲ್ಲಿ ಕೆಲವು ವಿಧಾನಗಳಿವೆ. ಅವು ಯಾವುವೆಂದರೆ- ಅಂತರ ಮತ್ತು ನಿರಂತರ ಅಭ್ಯಾಸ, ಇಡಿ ಮತ್ತು ಬಿಡಿ ವಿಧಾನ, ಅರ್ಥಪೂರ್ಣ ಕಲಿಕೆ ಮತ್ತು ಕಂಠಪಾಠ ಸಂಯೋಜನಾ ವಿಧಾನ.[38]

ನಮ್ಮ ಅನುಭವಕ್ಕೆ ಬಂದ ಅನೇಕ ವಿಚಾರಗಳನ್ನು ನಾವು ನೆನಪಿಡುತ್ತೇವೆ. ಸಮಯ ಬಂದಾಗ ಅವನ್ನು ಸ್ಮರಿಸಿಕೊಳ್ಳುತ್ತೇವೆ. ಆದರೆ ಕೆಲವನ್ನು ಸ್ಮರಿಸಿಕೊಳ್ಳಲಾರೆವು. ಮನಸ್ಸಿನ ಆ ಸ್ಥಿತಿಯನ್ನೇ 'ಮರೆವು' ಅಥವಾ 'ವಿಸ್ಮೃತಿ' ಎಂದು ಕರೆಯುತ್ತೇವೆ." ಹಿಂದೆ ಕಲಿತಂತಹ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗದಿರುವುದು ಅಥವಾ ಹಿಂದೆ ಪಡೆದ ಅನುಭವಗಳನ್ನು ಅಗತ್ಯವಾದಾಗ ಪುನಃಸ್ಮರಣೆಗೆ ತಂದುಕೊಳ್ಳಲಾಗದಿರುವುದನ್ನು ವಿಸ್ಮೃತಿ ಅಥವಾ ಮರೆವು ಎನ್ನುವುದು" ಎಂದು ಡ್ರೀವರ್‌ರವರು ವ್ಯಾಖ್ಯಾನಿಸಿದ್ದಾರೆ. ಮತ್ತೊಬ್ಬರು ಮನೋವಿಜ್ಞಾನಿ **BHATIA H.R.** ಹೀಗೆ ಹೇಳಿದ್ದಾರೆ- "ಒಂದು ವಿಚಾರ ಅಥವಾ ಹಲವು ವಿಚಾರಗಳನ್ನು ಮೂಲ ಉದ್ದೀಪನದ ಅನುಪಸ್ಥಿತಿಯಲ್ಲಿ ಪುನಃ ಸ್ಮರಣೆಗೆ ತಂದುಕೊಳ್ಳಲು ಸಾಧ್ಯವಾಗದಿರುವುದನ್ನು ವಿಸ್ಮೃತಿ ಅಥವಾ ಮರೆವು ಎನ್ನುವರು.[39] ವಿಸ್ಮೃತಿಯಲ್ಲಿ ವಿಧಗಳು ಎರಡು. ಅವುಗಳೆಂದರೆ.

37. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-6, ಪು-268,269.(2005), ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ -577005.
38. **ವಾಮದೇವಪ್ಪ. ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-6, ಪು-270-272.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ. ದಾವಣಗೆರೆ-577005.
39. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ -6, ಪು -272.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005.

**1. ಸಾಮಾನ್ಯ ರೀತಿಯ ಮರೆವು ಅಥವಾ ನಿಷ್ಕ್ರಿಯ ಅಥವಾ ಸ್ವಾಭಾವಿಕ ಮರೆವು.**

ನೆನೆಸದೆ ದೀರ್ಘಕಾಲ ಬಿಡುವುದರಿಂದ, ಇತರ ಅನುಭವಗಳ ಅತಿಕ್ರಮಣದಿಂದ ಮತ್ತು ಹೊಸ ಅನುಭವಗಳ ಸಂಗಡ ಬೆರೆತು ಆಗುವ ಗೊಂದಲಗಳಂದ ಹುಟ್ಟುವುದೇ ಸಾಧಾರಣ ರೀತಿಯ ಮರೆವು.

**2. ಅಸಾಮಾನ್ಯ ರೀತಿಯ ಮರೆವು ಅಥವಾ ಕ್ರಿಯಾತ್ಮಕ ಅಥವಾ ಪ್ರೇರಿತ ಮರೆವು.**

ದೊಡ್ಡ ಶಬ್ದದಿಂದಲೋ, ಆಘಾತದಿಂದಲೋ, ಮೆದುಳಿನ ಭಾಗ ಘಾಸಿಯಾದಾಗಲೋ ಮರೆವು ಸಂಭವಿಸಬಹುದು. ಹಾಗೆಯೇ ಮನಸ್ಸಿನ ಕೆಲವು ಕಹಿ ಅನುಭವಗಳ ಪ್ರಭಾವದಿಂದಲೂ ಮರೆವು ಮೂಡಬಹುದು. ಇವೆರಡೂ ಅಸಾಧಾರಣ ರೀತಿಯವಾಗಿದ್ದು, ಶಿಕ್ಷಣಕ್ಕೆ ಅಷ್ಟಾಗಿ ಸಂಬಂಧಿಸಿರುವುದಿಲ್ಲ. ಆದ್ದರಿಂದ ಸಾಧಾರಣ ರೀತಿಯ ಮರೆವಿನ ಪರಿಚಯ ಮಾತ್ರ ಶಿಕ್ಷಕರಿಗೆ ಅವಶ್ಯಕ ಎನ್ನಬಹುದು.[40]

ಸಾಮಾನ್ಯವಾಗಿ ಮರೆವು ಒಂದು ಮಾನಸಿಕ ದೌರ್ಬಲ್ಯ ಎಂದು ಅಭಿಪ್ರಾಯ ಇದೆ. ಆದರೆ ಅದೂ ಒಂದು ಸ್ವಾಭಾವಿಕ ಮನೋವ್ಯಾಪಾರ ಹೌದು. ಮಾನಸಿಕ ಆರೋಗ್ಯಕ್ಕೆ ಇದೂ ಅವಶ್ಯಕವಾದದ್ದು. ನಿತ್ಯ ಜೀವನದ ಎಲ್ಲಾ ಅನುಭವಗಳನ್ನೂ ಮನಸ್ಸು ಗ್ರಹಿಸಿಡಬೇಕಾದರೆ ದೊಡ್ಡ ಹೊರೆಯಾದೀತು. ಅವುಗಳಲ್ಲಿ ಕೆಲವು ಉಪಯುಕ್ತವೇನೋ ಹೌದು, ಮಿಕ್ಕವು ಕಹಿ ಅನುಭವಗಳು, ಇನ್ನು ಕೆಲವು ಅನಗತ್ಯವಾದವು. ಅಂತಹ ಅನುಭವಗಳನ್ನು ಮರೆತರೇ ಮನಸ್ಸಿಗೆ ನೆಮ್ಮದಿ, ಆರೋಗ್ಯ. ಈ ದೃಷ್ಟಿಯಿಂದ ಮರೆವು ಅಹಿತ ವ್ಯಾಪಾರವೇನಲ್ಲ. ನಿಜಕ್ಕೂ ಇದು ಒಂದು ವರವೇ ಹೌದು.

## ~ಕಲಿಕೆಯ ವರ್ಗಾವಣೆ~

ಇನ್ನೊಂದು ಬಹಳ ಮುಖ್ಯವಾದ ಶಿಕ್ಷಣದ ಗುರಿಯಿದೆ. ಅದೇನೆಂದರೆ, ವ್ಯಕ್ತಿಯು ತನ್ನ ಜೀವನದಲ್ಲಿ ಎದುರಾಗುವ ಹೊಸ ಸನ್ನಿವೇಶಗಳನ್ನು ಪರಿಣಾಮಕಾರಿಯಾಗಿ ಎದುರಿಸಲು ಸಮರ್ಥನನ್ನಾಗಿ ಮಾಡುವುದು. ಒಂದು ಸನ್ನಿವೇಶದಲ್ಲಿ ಕಲಿತ ಜ್ಞಾನ ಹಾಗೂ ಕೌಶಲಗಳು ಮುಂದಿನ ಸನ್ನಿವೇಶದಲ್ಲಿ ಸಮಸ್ಯೆಗಳನ್ನು ಎದುರಿಸಲು ಸಹಕಾರಿಯಾಗುತ್ತದೆ. ಹೀಗೆ ಒಂದು ಸನ್ನಿವೇಶದಲ್ಲಿ ಕಲಿತದ್ದು ಇನ್ನೊಂದು ಹೊಸ ಸನ್ನಿವೇಶದಲ್ಲಿ ಉಪಯೋಗಿಸಲ್ಪಡುವುದಕ್ಕೆ ಅಥವಾ ಪ್ರಭಾವ ಬೀರುವುದಕ್ಕೆ **"ಕಲಿಕೆಯ ವರ್ಗಾವಣೆ"** ಎಂದು ಕರೆಯುತ್ತಾರೆ.

"ಕಲಿಕೆಯ ವರ್ಗಾವಣೆಯೆಂದರೆ ಒಂದು ಸನ್ನಿವೇಶದಲ್ಲಿ ಕಲಿತ ಜ್ಞಾನ, ತರಬೇತಿ ಕುಶಲತೆ ಹಾಗೂ ಅಭ್ಯಾಸಗಳನ್ನು ಇನ್ನೊಂದು ಸನ್ನಿವೇಶಕ್ಕೆ ವರ್ಗಾಯಿಸುವುದಾಗಿದೆ." ಎಂದು **SORENSON-Educational Psychologist** ವ್ಯಾಖ್ಯಾನಿಸಿದ್ದಾರೆ.

---

40. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ -14, ಪು -354-355.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

"ಒಂದು ಸನ್ನಿವೇಶದಲ್ಲಿ ಕಲಿತ ವಿಷಯಗಳ ಸಾಮಾನ್ಯೀಕರಣವೇ ಕಲಿಕೆಯ ವರ್ಗಾವಣೆ" ಎಂದು **C.H.JUDD -(Theory of Generalization)** ಹೇಳಿದ್ದಾರೆ.[41]

ನಮ್ಮ ಮನೋಧೋರಣೆಗಳು, ಅಭ್ಯಾಸಗಳು ಹಾಗೂ ಆಸಕ್ತಿಗಳು ವರ್ಗಾವಣೆಯಾಗುವ ಮೂಲಕ ಮುಂದಿನ ವಿವಿಧ ಸನ್ನಿವೇಶಗಳಲ್ಲಿ ನೆರವಾಗುತ್ತವೆ. ಇದೇ ಕಲಿಕೆಯ ವರ್ಗಾವಣೆ. ಕಲಿಕೆಯ ವರ್ಗಾವಣೆ ಮೂರು ವಿಧದಲ್ಲಾಗುತ್ತದೆ. ಒಂದು ಸನ್ನಿವೇಶದಲ್ಲಿ ನಾವು ಏನನ್ನು ಕಲಿಯುತ್ತೇವೆಯೋ ಅದರ ಕಾರಣದಿಂದ ಇನ್ನೊಂದು ಸನ್ನಿವೇಶದಲ್ಲಿ ಕಲಿಕೆ ಹೆಚ್ಚು ಪರಿಣಾಮಕಾರಿಯಾಗುತ್ತದೆ. ಇದನ್ನು ಧನಾತ್ಮಕ ವರ್ಗಾವಣೆ**(Positive Transfer)** ಎನ್ನುತ್ತಾರೆ. ಒಂದು ಸನ್ನಿವೇಶದಲ್ಲಿ ಕಲಿತ ವಿಷಯವು ಇನ್ನೊಂದು ಕ್ಷೇತ್ರದ ಕಲಿಕೆಗೆ ಅಡ್ಡಿಯನ್ನುಂಟುಮಾಡಿದರೆ ಅದನ್ನು ಋಣಾತ್ಮಕ ವರ್ಗಾವಣೆ**(Negative Transfer)** ಎನ್ನುತ್ತಾರೆ. ಒಂದು ಸನ್ನಿವೇಶದಲ್ಲಿ ಕಲಿತ ವಿಷಯ ಅಥವಾ ಪಡೆದ ಅನುಭವ ಇನ್ನೊಂದು ಸನ್ನಿವೇಶದಲ್ಲಿ ಯಾವುದೇ ಪರಿಣಾಮ ಬೀರದಿದ್ದಾಗ, ಅಂತಹ ವರ್ಗಾವಣೆಯನ್ನು ಶೂನ್ಯ ವರ್ಗಾವಣೆ **(Zero Transfer)** ಎನ್ನುತ್ತಾರೆ.[42]

ಕಲಿಕೆಯ ವರ್ಗಾವಣೆಯು ಶಿಕ್ಷಣ ಕ್ಷೇತ್ರದಲ್ಲಿ ಮಹತ್ವದ ಪಾತ್ರವನ್ನು ವಹಿಸಿದೆ. ಹಿಂದೆ ಗಳಿಸಿದ ಅನುಭವದ ವರ್ಗಾವಣೆ ಹೆಚ್ಚಾದಷ್ಟು ಹೊಸ ಸನ್ನಿವೇಶದಲ್ಲಿ ಬೇರೆ ವಿಷಯಗಳನ್ನು ಕಲಿಯುವುದು ಸುಲಭವಾಗುತ್ತದೆ. ಬೋಧಕನಿಗೆ ತಾನು ಬೋಧನೆ ಮಾಡುತ್ತಿರುವ ವಿಷಯದ ಯಾವ ತತ್ವಗಳು, ನಿಯಮ ಅಥವಾ ಸಾಮಾನ್ಯೀಕರಣಗಳ ಕಲಿಕೆಯ ಇತರ ಕ್ಷೇತ್ರಗಳಿಗೆ ವರ್ಗಾಯಿಸಲ್ಪಡಬೇಕು ಎಂಬುದರ ಕುರಿತು ಸ್ಪಷ್ಟ ಅರಿವು ಇರಬೇಕು. ಪರಿಕಲ್ಪನೆಗಳು ಅಥವಾ ಕಾರ್ಯದಲ್ಲಿ ಸಾಕಷ್ಟು ಅನುಭವ ಒದಗಿಸಿ ಮೂಲ ಕ್ರಿಯೆ ಅಥವಾ ಕಾರ್ಯದ ಬಗ್ಗೆ ಹೆಚ್ಚಿನ ತರಬೇತಿ ನೀಡಿದರೆ ಮುಂದಿನ ಸನ್ನಿವೇಶಕ್ಕೆ ಹೆಚ್ಚಿನ ಧನಾತ್ಮಕ ವರ್ಗಾವಣೆಯಾಗುವ ಸಾಧ್ಯತೆಯಿರುತ್ತದೆ. ವಿದ್ಯಾರ್ಥಿಗಳು ಅರ್ಥಪೂರ್ಣವಾಗಿ ಮತ್ತು ಒಳನೋಟಗಳ ಮೂಲಕ ಕಲಿಯಲು ಪ್ರೋತ್ಸಾಹಿಸಬೇಕು. ಪ್ರಾಯೋಗಿಕ ಸನ್ನಿವೇಶಗಳು ಮತ್ತು ಸೂಕ್ತ ಅನುಭವಗಳ ಮೂಲಕ ಉತ್ತಮ ಆದರ್ಶವನ್ನು ಬೆಳೆಸಬೇಕು.

ಪಂಚತಂತ್ರದಲ್ಲಿ ಮೊದಲನೆಯದಾಗಿ, ಮಾನವ ಪ್ರಪಂಚದ, ಅನುಭವಗಳು ವರ್ತನೆಗಳು, ಭಾವನೆಗಳನ್ನು ಪ್ರಾಣಿಪಶುಪಕ್ಷಿಗಳಿಗೆ ಆರೋಪಿಸಿ ಆಕರ್ಷಕ ಕಥೆಗಳನ್ನು ವ್ಯವಸ್ಥಿತವಾಗಿ ಹೆಣೆಯಲಾಗಿದೆ. ಆ

---

41. **ವಾಮದೇವಪ್ಪ. ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-6, ಪು-278,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ. ದಾವಣಗೆರೆ-577005
42. **ವಾಮದೇವಪ್ಪ ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ -6, ಪು -278,279.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005.

ಕಥೆಗಳಿಂದ ಪಡೆದ ಅನುಭವಗಳು, ವರ್ತನೆಗಳು  ಕೇಳುಗರಿಗೆ ಮನೋಜ್ಞವಾಗಿ ಗ್ರಹಿಸಲು ಸಾಧ್ಯವಾಗುತ್ತದೆ. ಅಲ್ಲಿ ಅವರು ಪಡೆದ ಜ್ಞಾನವನ್ನು ತಮ್ಮ ಜೀವನಕ್ಕೆ ಅಳವಡಿಸಿಕೊಂಡಾಗ ಅದ್ಭುತವಾದ ಕಲಿಕೆಯ ವರ್ಗಾವಣೆ ಉಂಟಾಗುತ್ತದೆ. ರಾಜನೀತಿ, ಸಾರ್ಥಕ ಬದುಕಿನ ನೀತಿನಿಯಮಗಳು ಮಂದಮತಿಗಳಾದ ಅರಸುಕುಮಾರರಿಗೆ ಕೇಳುತ್ತ, ಕೇಳುತ್ತ ಅರ್ಥಪೂರ್ಣವಾಗಿ ಗ್ರಹಿಸುತ್ತಾ, ಪಡೆದ ಜ್ಞಾನವನ್ನು  ಮುಂದೆ ಮುಂದೆ ಅವರ ಜೀವನಕ್ಕೆ ಅಳವಡಿಸಿಕೊಂಡಾಗ, ಅವರು ಎಷ್ಟರಮಟ್ಟಿಗೆ ಪರಿವರ್ತಿತರಾದರು ಎಂಬುದು ತಿಳಿದದ್ದೇ ಆಗಿರುತ್ತದೆ. ಇಂಥಹ ಕಲಿಕೆಯ ವರ್ಗಾವಣೆಗೆ ಮೇಧಾವಿ ಶಿಕ್ಷಕರಾದ ವಿಷ್ಣುಶರ್ಮರು ಅಷ್ಟೇ ವ್ಯವಸ್ಥಿತ ಸನ್ನಿವೇಶಗಳನ್ನು ಹಾಗೂ ದೃಷ್ಟಾಂತಗಳನ್ನು ಒದಗಿಸಿ ಪ್ರೋತ್ಸಾಹಿಸಿದ್ದಾರೆ.



# ३-५. पञ्चतन्त्रस्य– प्रथमं तन्त्रम्– * मित्रभेदः *

## ಕಥೆಗಳ ವಿಶ್ಲೇಷಣೆ.

ಪಂಚತಂತ್ರದಲ್ಲಿನ ಮೊದಲ ತಂತ್ರ **"ಮಿತ್ರಭೇದ"**ವು ಉಳಿದ ನಾಲ್ಕು ತಂತ್ರಗಳಿಗಿಂತಲೂ ಅತ್ಯಂತ ವಿಸ್ತೃತ ಗ್ರಂಥಭಾಗವಾಗಿರುತ್ತದೆ. ಗೆಳೆತನದಲ್ಲಿ ಒಡಕು ಅಥವಾ ಭೇದ ಮೂಡಲು ಕಾರಣವಾಗುವಂಥ ಸನ್ನಿವೇಶಗಳನ್ನು ಈ ತಂತ್ರದ ಕಥೆಗಳು ಪ್ರದರ್ಶಿಸುತ್ತವೆ. ರಾಜ ಪದವಿಯನ್ನು ಹೊಂದಿದ್ದ ಪಿಂಗಳಕ ಎಂಬ ಒಂದು ಸಿಂಹ, ಆ ರಾಜನ ಮಂತ್ರಿ ಸ್ಥಾನವನ್ನು ತುಂಬಿದ್ದ ಕರಟಕ, ದಮನಕ ಎಂಬ ಎರಡು ನರಿಗಳು ಮತ್ತು ಸಂಜೀವಕನೆಂಬ ಎತ್ತು ಇವುಗಳು ಮುಖ್ಯ ಭೂಮಿಕೆಯಲ್ಲಿ ಕಂಡುಬರುತ್ತವೆ. ಕಪಟತನಕ್ಕೆ ಹೆಸರುವಾಸಿಯಾದ ನರಿಗಳು ಸಿಂಹ ಹಾಗೂ ಎತ್ತಿನ ಮಧ್ಯೆ ಹಗೆತನವನ್ನು ಮೂಡಿಸಿ ಎತ್ತಿನ ಅಂತ್ಯಕ್ಕೆ ಕಾರಣವಾಗುವುದೇ ಈ ಗ್ರಂಥ ಭಾಗದ ತಿರುಳಾಗಿದೆ. ಈ ತಂತ್ರದಲ್ಲಿ ಒಟ್ಟು ಇಪ್ಪತ್ತೆರಡು ಉಪಕಥೆಗಳು ಬಹಳ ಉತ್ತಮ ಸನ್ನಿವೇಶಗಳನ್ನೊದಗಿಸಿ ಮಿತ್ರತ್ವದಲ್ಲಿ ಹಗೆತನ ಅದರಿಂದ ಒಡಕು ಅಥವಾ ಭೇದ ಮತ್ತು ಅದರ ಪರಿಣಾಮವನ್ನು ಬಹಳ ಅಚ್ಚುಕಟ್ಟಾಗಿ ಪ್ರತಿಬಿಂಬಿಸುತ್ತವೆ.

ಪಂಚತಂತ್ರದ ಮೊದಲನೆಯ ತಂತ್ರವಾದ ಮಿತ್ರಭೇದದ ಮೊದಲ ನುಡಿ ಒಳ್ಳೆಯ ಗಾಢವಾದ ಸ್ನೇಹ ಹೇಗೆ ನಾಶವಾಯಿತು ಎಂಬುದರಿಂದ ಪ್ರಾರಂಭವಾಗುತ್ತದೆ. ಬಹಳ ಒಳ್ಳೆಯ ತಿಳುವಳಿಕೆಯನ್ನು ಸೂಕ್ತಿಗಳ ರೂಪದಲ್ಲಿ ಸರಳ ಹಾಗೂ ಆಕರ್ಷಕ ಕಥೆಗಳ ಮೂಲಕ ರಾಜನಂದನರಿಗೆ ಬೋಧಿಸಲಾಗಿರುತ್ತದೆ. ಉದಾಹರಣೆಗೆ:–

मृगा मृगैः सङ्गमनुव्रजन्ति गावश्च गोभिस्तुरगास्तुरङ्गैः।

मूर्खाश्च मूर्खैः सुधियः सुधीभिः समानशीलव्यसनेषु सख्यम् ॥[43]

ಮೃಗಗಳು – ಮೃಗಗಳೊಡನೆ, ಹಸುಗಳು – ಹಸುಗಳೊಡನೆ, ಕುದುರೆಗಳು – ಕುದುರೆಗಳೊಡನೆ, ಮೂರ್ಖರು ಮೂರ್ಖರೊಡನೆ, ವಿದ್ವಾಂಸರು – ವಿದ್ವಾಂಸರೊಡನೆ ಸೇರುತ್ತಾರೆ. ಗುಣಶೀಲಾಭ್ಯಾಸಗಳು ಸಮಾನವಾಗಿದ್ದವರೊಡನೆ ಸ್ನೇಹ ಬೆಳೆಯುತ್ತದೆ.

ವ್ಯಕ್ತಿಯ ಬೆಳವಣಿಗೆಯಲ್ಲಿ ಮೂಲಸ್ವಭಾವ ಮತ್ತು ಸನ್ನಿವೇಶಗಳ ಪ್ರಭಾವ, ವೈಯುಕ್ತಿಕ ಭಿನ್ನತೆಗಳು, ಅಭಿಪ್ರೇರಣೆ, ಅವಧಾನ, ಸ್ಮೃತಿ, ವಿಸ್ಮೃತಿ, ಕಲಿಕೆಯ ವರ್ಗಾವಣೆ ಇವುಗಳ ಬಗ್ಗೆ ಶೈಕ್ಷಣಿಕ ಮನೋವಿಜ್ಞಾನದಲ್ಲಿ

---

43. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ–ಶ್ಲೋ –305, ಪು –196,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಕಂಡು ಬರುವಂತೆ ವಿಚಾರಮಾಡಿ, ಕಲಿವಿನ ಬಗ್ಗೆ ಇವುಗಳು ಹೇಗೆ ಪರಿಣಾಮಕಾರಿಯಾಗಬಲ್ಲವು ಎಂಬುದರ ಬಗ್ಗೆ ಪರಿಚಯಮಾಡಿಕೊಂಡಂತಾಯಿತು. ಈ ಹಿನ್ನೆಲೆಯಲ್ಲಿ ಪಂಚತಂತ್ರ ನೀತಿ ಕಾವ್ಯದ ವ್ಯವಸ್ಥಿತ ಕಥಾಸಂಕಲನದಲ್ಲಿ ಈ ಮನೋವೈಜ್ಞಾನಿಕ ಹಾಗೂ ಶೈಕ್ಷಣಿಕ ಅಂಶಗಳನ್ನು ಎಷ್ಟರಮಟ್ಟಿಗೆ ಕಾಣಬಹುದು ಎಂಬುದನ್ನು ವಿಶ್ಲೇಷಿಸೋಣ.

ಪ್ರತಿಭಾನ್ವಿತ ಶಿಕ್ಷಕರೂ, ಸಕಲ ಶಾಸ್ತ್ರಪಾರಂಗತರೂ ಆದ ವಿಷ್ಣುಶರ್ಮರು ಕಥೆಯ ಚೌಕಟ್ಟನ್ನೇ ಬಹಳ ಅಚ್ಚುಕಟ್ಟಾಗಿ ನಿರ್ಮಿಸಿ, ಅದರೊಳಗೆ ಸಣ್ಣಸಣ್ಣ ಉಪಕಥೆಗಳನ್ನು ಸಂಯೋಜಿಸಿ ಸಮರ್ಪಕವಾದ ದೃಷ್ಟಾಂತಗಳನ್ನೊದಗಿಸಿ, ರಾಜಕುಮಾರರಿಗೆ ಆಸಕ್ತಿಯುತವಾಗಿ, ಅರ್ಥಪೂರ್ಣವಾಗಿ ಬದುಕಿನ ವ್ಯವಹಾರ ನೀತಿಯನ್ನು, ವ್ಯಕ್ತಿತ್ವ ನಿರ್ಮಾಣ ಕೌಶಲ್ಯವನ್ನು ಸೂಕ್ತ ಸಮಯದಲ್ಲಿ ಒದಗಿಸಿ ಬೋಧಿಸುತ್ತಾ, ಚಮತ್ಕಾರಯುತವಾಗಿ ಅದರಲ್ಲೇ, ಅವರ ಅವಧಾನ, ಆಸಕ್ತಿ, ಸ್ಮರಣಶಕ್ತಿ ಮತ್ತು ಚಿಂತನಶೀಲತೆಯನ್ನು ಸೆರೆ ಹಿಡಿದಿದ್ದಾರೆ ಎಂಬುದು ಬಹಳ ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಹಿಂದೆ ಸಂಕ್ಷಿಪ್ತವಾಗಿ ವಿಶ್ಲೇಷಿಸಿರುವ ಕಲಿಕೆ – ಅದರ ಅರ್ಥ – ಕಲಿಯುವ ಕ್ರಮ, ಕಲಿಯುವ ವಿಧಗಳು, ಕಲಿಕಾ ನಿಯಮಗಳು, ಕಲಿಕಾ ಸಿದ್ಧಾಂತಗಳು ಇತ್ಯಾದಿ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ವಿಷ್ಣುಶರ್ಮರ ಪಂಚತಂತ್ರದ ಅಧ್ಯಯನ ನಡೆಸಿದಾಗ ನಮಗೆ ಬಹಳಷ್ಟು ಶೈಕ್ಷಣಿಕ, ಮನೋವೈಜ್ಞಾನಿಕ ವಿಚಾರಗಳು ಪ್ರತಿಬಿಂಬಿಸುತ್ತವೆ. ಮನೋವಿಜ್ಞಾನದಲ್ಲಿ ಕಲಿವೇ ಪ್ರಧಾನವಾದದ್ದು. ಹಾಗೆಯೇ ಪಂಚತಂತ್ರದಲ್ಲಿ ಕಂಡು ಬರುವ ಮೂವರು ದುರ್ವಿನೀತ ರಾಜಕುಮಾರರ ಮೂಲ ಸ್ವಭಾವ ಮತ್ತು ವರ್ತನೆಗಳನ್ನು ಗುರುತಿಸಿ, ಅಂದರೆ ಅವರು ಸೋಮಾರಿಗಳು, ಆಲಸಿಗಳು, ಮೂರ್ಖರು, ಬುದ್ಧಿಶೂನ್ಯರು ಎಂಬುದನ್ನು ಗಮನಿಸಿ, ಮೊದಲೇ ಮೂರ್ಖರಿಗೆ ಉಪದೇಶ ಮಾಡುವುದು ಅಲ್ಲ ಎಂದು ಒಂದು ಸೂಕ್ತಿ ಹೇಳುತ್ತದೆ:–

उपदेशो हि मूर्खाणां प्रकोपाय न शान्तये

पयःपानं भुजङ्गानां केवल विषवर्धनम् ॥[44]

ಮೂರ್ಖರಿಗೆ ಉಪದೇಶಮಾಡುವುದು ಅವರನ್ನು ರೇಗಿಸಲು ಕಾರಣವಾಗುತ್ತದೆಯೇ ಹೊರತು ಸಮಾಧಾನಪಡಿಸಲಲ್ಲ. ಸರ್ಪಗಳಿಗೆ ಹಾಲನ್ನೆರೆಯುವುದು, ಕೇವಲ ಅವುಗಳ ವಿಷವನ್ನು ಹೆಚ್ಚಿಸುವುದು. ಇಂಥಹ ಸಂದರ್ಭದಲ್ಲಿ ವಿಷ್ಣುಶರ್ಮರು ತೆಗೆದುಕೊಂಡಿರುವ ನಿರ್ಧಾರವು ಎಂಥಹವರೂ ಆಶ್ಚರ್ಯಪಡುವಂತಿದೆ.

---

44. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ ಶ್ಲೋ –420, ಪು–273(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ವಿಷ್ಣುಶರ್ಮರು ಅವರಿಗೆ ಅಗತ್ಯವಾದ ಹಾಗೂ ಅಪೇಕ್ಷಿತವಾದ ಪರಿವರ್ತನೆ ಅಥವಾ ಮಾರ್ಪಾಟು ಮಾಡಿ ಹೊಸವರ್ತನೆಗಳನ್ನು, ಜ್ಞಾನವನ್ನು, ಕೌಶಲ್ಯವನ್ನು, ದೃಷ್ಟಿಧ್ಯೇಯಗಳನ್ನು ಪರಿಚಯಮಾಡಿ ಕೊಡುವ ಪ್ರಯತ್ನವನ್ನು ಕಲಿವಿನ ಮೊದಲ ಭಾಗವಾಗಿ ವಿಶಿಷ್ಟವಾದ ಪಂಚಸೂತ್ರಗಳನ್ನು ರಚಿಸಿದರು. ರಾಜಕುಮಾರರು ಮುಂದೆ ಯುವರಾಜ ಪದವಿಗೆ ಅರ್ಹರಾಗಬೇಕಾದವರು. ದಕ್ಷಿಣಾತ್ಯ ದೇಶದ ಮಹಿಲಾರೋಪ್ಯ ನಗರದಲ್ಲಿ ದಾನದಲ್ಲಿ ಕಲ್ಪವೃಕ್ಷಕ್ಕೆ ಸಮನಾದ, ದೊಡ್ಡ ದೊಡ್ಡ ರಾಜರ ಕಿರೀಟದಲ್ಲಿರುವ ರತ್ನಗಳ ಕಿರಣಗಳಿಂದ ಪಾದಪೂಜೆಯನ್ನು ಪಡೆಯುತ್ತಿದ್ದ, ಸಕಲಕಲಾ ಪಾರಂಗತನಾದ "ಅಮರಶಕ್ತಿ"ಎಂಬ ರಾಜನು ಈ ರಾಜಕುಮಾರರ ತಂದೆ. ಆದರೇನು ಮಾಡುವುದು ಈ ಮಕ್ಕಳು ಶಾಸ್ತ್ರ ಜ್ಞಾನವನ್ನರಿಯದ ಅವಿವೇಕಿಗಳು. ಹೇಗೆ ಕರುವನ್ನು ನೀಡದ ಮತ್ತು ಹಾಲನ್ನು ಕೊಡದ ಹಸುವಿನಿಂದ ಏನೂ ಪ್ರಯೋಜನ ಇಲ್ಲವೋ ಹಾಗೆ ಬುದ್ಧಿವಂತನಲ್ಲದ, ವಿನಯಶೀಲನಲ್ಲದ ಮಗನಿಂದ ಏನೂ ಪ್ರಯೋಜನವಿಲ್ಲ. ಸತ್ಕುಲದಲ್ಲಿ ಮೂರ್ಖ ಮಕ್ಕಳು ಹುಟ್ಟುವುದಕ್ಕಿಂತ, ಅಂತಹ ಮಕ್ಕಳ ಮರಣವೇ ಲೇಸು. ಎನ್ನುವಷ್ಟರಮಟ್ಟಿಗೆ ರಾಜನು ಚಿಂತಾಕ್ರಾಂತನಾಗಿದ್ದನು.[45]

वरं गर्भस्रावे वरमृतुषु नैवाभिगमनम्

वरं जातः प्रेतो वरमपि च कन्यैव जनिता ।

वरं वन्ध्या भार्या वरमपि च गर्भेषु वसति

र्न चविद्वान्रूपद्रविणगुणयुक्तोऽपि तनयः ॥[46]

ಅಂದರೆ ಮೂರ್ಖನಾಗಿ ಹುಟ್ಟುವುದಕ್ಕಿಂತ ಗರ್ಭಪಾತವೋ, ಋತುಕಾಲದಲ್ಲಿ ಹೆಂಡತಿಯೊಡನೆ ಕೂಡದೆ ಇರುವುದೋ, ಹುಟ್ಟಿ ಸತ್ತು ಹೋಗುವುದೋ, ಹೆಣ್ಣಾಗಿ ಹುಟ್ಟುವುದೋ, ಹೆಂಡತಿಗೆ ಮಕ್ಕಳಾಗದಿರುವುದೋ ಅಥವಾ ಮಗುವು ಗರ್ಭದಿಂದ ಹೊರಗೆ ಬರದೇ ಇರುವುದೋ – ಇದು ಯಾವುದಾದರೂ ಒಳಿತು. ಆದರೆ ರೂಪ, ದ್ರವ್ಯ, ಗುಣ ಸಂಪನ್ನನಾಗಿದ್ದರೂ ಮೂರ್ಖ ಪುತ್ರನಾಗಿದ್ದರೆ, ಅದು ಸರಿಯಲ್ಲ.

---

**45. Chandra Rajan,** VISNU SARMA (Eng.Trns) Introduction- pp-xxxii,1993. Penguin Random House India Pvt.Ltd. 7th Floor, Infinity Tower C, DLF Cyber City, Gurgoan,-122002, Haryana, India

46. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಥಾಮುಖಮ್ ಶ್ಲೋ –5, ಪು –4,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಈ ಮಕ್ಕಳ ಬುದ್ಧಿ ವಿಕಸನಗೊಳಸುವ ಕುರಿತು ಏನಾದರೂ ಉಪಾಯವಿದೆಯೇ? ಎಂದು ಅವನ ಆಶ್ರಯದಲ್ಲಿದ್ದ ಪಂಡಿತರಲ್ಲಿ ವಿಚಾರಿಸಲಾಗಿ, ಅವರಲ್ಲಿ ಸುಮತಿ ಎಂಬ ಸಚಿವನು ಹೀಗೆ ಸಲಹೆ ನೀಡಿದರು." ಈ ಜೀವನ ಶಾಶ್ವತವಲ್ಲ ಮತ್ತು ಶಾಸ್ತ್ರಗಳನ್ನೆಲ್ಲಾ ದೀರ್ಘಕಾಲದಿಂದ ಅಭ್ಯಾಸ ಮಾಡಬೇಕು.ಹೀಗಿರುವಾಗ ಶಾಸ್ತ್ರವನ್ನು ಸಂಕ್ಷೇಪದಲ್ಲಿ ಇವರಿಗೆ ಬೋಧಿಸುವುದಕ್ಕೆ ಆಗುತ್ತದೆಯೇ ಎಂದು ವಿಚಾರಮಾಡಬೇಕು. ವ್ಯಾಕರಣ ಮುಂತಾದ ಶಾಸ್ತ್ರಗಳಿಗೆ ಕೊನೆಯೆಂಬುದಿಲ್ಲ. ಅಲ್ಲದೆ ಇರುವ ಕಡಿಮೆ ಆಯಸ್ಸಿನಲ್ಲಿ ವಿಘ್ನಗಳು ಹಲವಾರು. ಹಾಗಾಗಿ ಹಂಸಕ್ಷೀರ ನ್ಯಾಯದಂತೆ ಶಾಸ್ತ್ರಗಳಲ್ಲಿ ಅಷ್ಟೇನೂ ಮುಖ್ಯವಲ್ಲದ ವಿವರವಾದದ್ದನ್ನು ಬಿಟ್ಟು ಕೇವಲ ಸಾರಮಾತ್ರವನ್ನು ತಿಳಿದುಕೊಳ್ಳಬೇಕಾಗುತ್ತದೆ. ಬಹಳ ಗಂಭೀರ ಚಿಂತನೆ ಮಾಡಿ ನೋಡಿದ್ದರಲ್ಲಿ, ಈ ಪ್ರದೇಶದಲ್ಲಿ ಸಕಲಶಾಸ್ತ್ರ ಪಾರಂಗತರಾದ, ವಿದ್ಯಾರ್ಥಿ ಸಮುದಾಯದಲ್ಲಿ ಹೆಸರುವಾಸಿಯಾದ ವಿಷ್ಣುಶರ್ಮರೆಂಬ ಬ್ರಾಹ್ಮಣರಿದ್ದಾರೆ. ಅವರು ಖಂಡಿತವಾಗಿಯೂ ಇವರನ್ನು ಬುದ್ಧಿವಂತರನ್ನಾಗಿ ಮಾಡುವರು." ರಾಜನು ವಿಷ್ಣುಶರ್ಮರನ್ನು ಆಸ್ಥಾನಕ್ಕೆ ಆಹ್ವಾನಿಸಿ, ತನ್ನ ವಿಚಾರವನ್ನು ನಿವೇದಿಸಿಕೊಂಡನು. ಪರಿಸ್ಥಿತಿಯನ್ನು ಗಮನಿಸಿದ ವಿಷ್ಣುಶರ್ಮರು ರಾಜನ ಸಹಾಯಕ್ಕೆ ಸಿದ್ಧರಾದರು. ಸಿಂಹನಾದದಿಂದ ಈ ರೀತಿ ಪ್ರತಿಜ್ಞೆ ಮಾಡಿದರು.

यद्यहं षण्मासाभ्यन्तरे तव पुत्रान्नयशास्त्रं प्रत्यनन्यसदृशान्न

करिष्यामि,ततो नार्हति देवो देवमार्ग संदर्शयितुम् ।[47]

ಕೇವಲ ಆರು ಮಾಸಗಳಲ್ಲಿ ಆ ಕಾರ್ಯ ನಿರ್ವಹಿಸುವುದಾಗಿ ವಚನವಿತ್ತರು.[48] ವಿಷ್ಣುಶರ್ಮರು ತಮ್ಮ ಆಶ್ರಮದಲ್ಲಿ ರಾಜಪುತ್ರರಿಗೆ ಶುಭ ಮಹೂರ್ತದಲ್ಲಿ ವಿದ್ಯೆಕಲಿಸತೊಡಗಿದ ಸಂದರ್ಭದಲ್ಲಿ ರಾಜಪುತ್ರರ ಗಮನ ಎಲ್ಲೋ ಇದ್ದಿತ್ತು. ರಾಜಕುಮಾರರು ಕಲಿಯಲು ಸಿದ್ಧರಾಗೇ ಇರಲಿಲ್ಲ. ಬಹಳ ಉದ್ಧಟರಾಗಿದ್ದು ಸ್ವೇಚ್ಛಾಪ್ರವೃತ್ತಿಯಿಂದ ಕೂಡಿದ್ದರು. ಅವರನ್ನು ಹೇಗೆ ಬದಲಾಯಿಸುವುದೆಂಬುದೇ, ಅಷ್ಟೆಲ್ಲಾ ಉಪಾಯಗಳನ್ನು ಬಲ್ಲ ಪ್ರತಿಭಾನ್ವಿತ ವಿಷ್ಣುಶರ್ಮರಿಗೇ ಒಂದು ಕಗ್ಗಂಟಾಯಿತು. ಪ್ರಾರಂಭದಲ್ಲಿ ಕಥಾ ಮಾಧ್ಯಮ ಆಯ್ಕೆ ಮಾಡಿಕೊಂಡು ಕಲಿಸಲು ಪ್ರಯತ್ನಿಸಿದರೆ "ಗೋರ್ಕಲ್ಲ ಮೇಲೆ ಮಳೆ ಸುರಿದಂತೆ" ವ್ಯರ್ಥವಾಗುತ್ತಿತ್ತು. ಮಾರನೆಯ ದಿನ ಹೇಗಾದರೂ ಮಾಡಿ ಅವರಲ್ಲಿ ಕುತೂಹಲ ಮೂಡಿಸಲು ಯೋಚಿಸುತ್ತಿರುವಾಗ, ರಾಜಕುಮಾರರು ಬಿಲ್ಲು ಬಾಣಗಳನ್ನು ಹಿಡಿದು ಬೇಟೆಗೆ ಹೊರಟಿದ್ದರು. ಈ ಸಮಯವನ್ನೇ ವಿಷ್ಣುಶರ್ಮರು ಉಪಯೋಗಿಸಿಕೊಂಡು ರಾಜಕುಮಾರರನ್ನು ಪ್ರೀತಿಯಿಂದ ಮಾತನಾಡಿಸಿ," ಈ ವನ ನಿಮಗೆ ಪರಿಚಯವಿಲ್ಲದ್ದು, ನಾನು ನಿಮಗೆ ದಾರಿ ತೋರಿಸುತ್ತೇನೆ"

47. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಥಾಮುಖಮ್, ಪು -9, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

48. **ಭರತ.ಬಿ.ರಾವ್,** ಪಂಡಿತ ವಿಷ್ಣುಶರ್ಮ ವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಕಥಾಮುಖ - ಪು -9-10.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್.ರಸ್ತೆ, ಬೆಂಗಳೂರು-560004.

ಎಂದರು. ರಾಜಕುಮಾರರಿಗೆ ಬಹಳ ಆನಂದವಾಯಿತು. ಅರಣ್ಯದ ತರುಲತೆ, ಮೃಗಪಕ್ಷಿಗಳನ್ನು ತೋರಿಸುತ್ತಾ, **"ಇದು ಆಶ್ರಮ. ಇಲ್ಲಿ ಬೇಟೆಯಿಲ್ಲ." "ಅರಣ್ಯದೊಳಕ್ಕೆ ಹೋಗಬೇಕು. ಅಲ್ಲಿಯ ತನಕ ನಿಮಗೆ ಬೇಸರವಾಗದಂತೆ ಒಂದು ಕಥೆ ಹೇಳಲೇ?"** ಎಂದು ವಿಷ್ಣುಶರ್ಮರು ರಾಜಕುಮಾರರನ್ನು ಕೇಳಿದರು. ರಾಜಕುಮಾರರಿಗೆ ಬಹಳ ಸಂತೋಷವಾಯಿತು. **"ಆಯಿತು ಗುರುಗಳೇ ಹೇಳಿ"**ಎಂದು ಕುತೂಹಲದಿಂದ ಕಥೆಗಾಗಿ ಕಿವಿಯರಳಿಸಿದರು. ಹೀಗೆ ವಿಷ್ಣುಶರ್ಮರು ಒಳ್ಳೆಯ ಅವಧಾನ, ಅಭಿಪ್ರೇರಣೆ, ಆಸಕ್ತಿಯನ್ನುಂಟುಮಾಡಿ, ರಾಜಕುಮಾರರು ಅವರೇ ಇಷ್ಟಪಟ್ಟು ಕಥೆ ಕೇಳುವಂತೆ ಹುರಿದುಂಬಿಸಿದರು. ಇಲ್ಲಿ ಕಲಿಸುವಿಕೆಯಲ್ಲಿ ಅವರಲ್ಲಿದ್ದ ದೃಢಸಂಕಲ್ಪ ಹಾಗೂ ಶ್ರದ್ಧೆ ಹೇಗಿತ್ತೆಂದು ಯೋಚಿಸಬಹುದು.

ರಾಜಕುಮಾರರನ್ನು ವಿದ್ಯಾರ್ಥಿಗಳಾಗಿ ಸ್ವೀಕರಿಸಿದ ವಿಷ್ಣುಶರ್ಮರು ಅವರುಗಳ ಮನಸ್ಸನ್ನರಿತು ಅವರೊಡನೆ ಒಂದು ಸಹೃದಯಿ ಸಂಬಂಧವನ್ನು ಬೆಳೆಸಿಕೊಂಡು **"ಪ್ರೀತಿಯ ರಾಜಕುವರರೇ"** ಎಂದು ಸಂಬೋಧಿಸುತ್ತ, **"ಒಂದು ದಿನ ಏನಾಯಿತು ಗೊತ್ತೇ?", "ಮೊನ್ನೆ ನಾವು ರಾಜಧಾನಿಯಿಂದ ಬರುವಾಗ ವಿಶಾಲವಾದ ಹೊಲಗಳಲ್ಲಿ ಎತ್ತರವಾಗಿ ಬೆಳೆದ ಕಬ್ಬನ್ನು ನೋಡಿದ್ದೆವು ಅಲ್ಲವೇ?" "ಹಾಗಾದರೆ ಈಗ ಹೇಳಿದ ಕಥೆಯನ್ನು ನೀವು ಮೂವರೂ ಸೇರಿ ಹೇಳಿ ನೋಡೋಣ." "ಒಂದಲ್ಲ ನೂರಾರು ಕಥೆ ಹೇಳ್ತೇನೆ. ಆದರೆ ನಾನು ಕೇಳಿದಾಗ ನೀವು ಆ ಕಥೆಯನ್ನು ಹೇಳಬೇಕು."**[49] ಹೀಗೆಲ್ಲ ಸ್ಫೂರ್ತಿದಾಯಕ ಪ್ರಶ್ನೆಗಳನ್ನು ಕೇಳುತ್ತಾ, ಅವರಲ್ಲಿ ಕಥೆಯ ಕಡೆ ಗಮನಸೆಳೆದರು – ಅವಧಾನವನ್ನುಂಟುಮಾಡಿದರು.

ಮನುಸ್ಮೃತಿಯಲ್ಲಿ ಹೇಳಿರುವಂತೆ ರಾಜಕುಮಾರರು ಬಹಳ ಶ್ರದ್ಧಾಭಕ್ತಿಯಿಂದ ವಿದ್ಯೆಯನ್ನು ಪಡೆಯಲು ಸಿದ್ಧರಾದರು. ಗುರುಗಳು ಶಿಷ್ಯರನ್ನು ಅಷ್ಟರ ಮಟ್ಟಿಗೆ ಪ್ರೇರೇಪಿಸಿ ಪರಿವರ್ತನೆ ಮಾಡಿದ್ದರು.

यथाखनन् खनित्रेण नरो वार्यधिगच्छति ।

तथा गुरुगतां विद्यां शुश्रूषुरधिगच्छति ॥[50]

ಗುದ್ದಲಿಯಿಂದ ಕಷ್ಟಪಟ್ಟು ಅಗೆಯುತ್ತಾ ಮನುಷ್ಯನು ಹೇಗೆ ನೀರನ್ನು ಹೊಂದುತ್ತನೋ, ಅದರಂತೆ–ಯೇ ಸೇವೆ ಮಾಡುತ್ತಾ, ಮಾಡುತ್ತಾ ಗುರುವಿನಲ್ಲಿನ ವಿದ್ಯೆಯನ್ನು ಪಡೆಯುತ್ತಾನೆ.

ಸ್ಮರಣೆಯಲ್ಲಿಟ್ಟುಕೊಂಡು ಪುನಃ ಕೇಳಿದಾಗ ಹೇಳಬೇಕೆಂದು ಅಭಿಪ್ರೇರಣೆ ನೀಡುತ್ತಾ, ಸ್ಮೃತಿ–

---

**49. ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, (ಕನ್ನಡ) ಮಿತ್ರಭೇದ– ಪು–19–20.(2015) ವರ್ಣಿಲ, 39/2–11, ಕಲ್ಯಾಣಿ ಗಾರ್ಡನ್, BSK 1ಸ್ಟೇಜ್, ಬೆಂಗಳೂರು–560050.

**50.** ಮನುಸ್ಮೃತಿ, 2–218.

ವಿಸ್ಮೃತಿಯನ್ನು ಆಗಾಗ್ಗೆ ಪರಿಚಯಿಸಿ, ಆ ಬಗ್ಗೆ ಜಾಗೃತಿ ಮೂಡಿಸಿದರು. ಅದಕ್ಕೆ ಸ್ಪಂದಿಸಿದ ಶಿಷ್ಯರು **"ಗುರುಗಳೇ, ನರಿಯೇ ಜಾಣ ಅಲ್ವಾ, ಹೀಗಿದ್ದೇ ಇನ್ನೊಂದು ಕಥೆ ಹೇಳಿ"**ಎಂದು ಕುತೂಹಲದಿಂದ ಕೇಳುವಂತೆ ಪ್ರೇರೇಪಿಸಿದ್ದಾರೆ. ಇದು ಪಂಚತಂತ್ರದಲ್ಲಿ ಕಂಡು ಬರುವ ಶೈಕ್ಷಣಿಕ ಮನೋವಿಜ್ಞಾನ. ವಿಷ್ಣುಶರ್ಮರ ಬೋಧನಾ ಪ್ರತಿಭೆ ಹಾಗೂ ಕಲಿಸುವ ಶ್ರದ್ಧೆಯನ್ನು ಸೂಚಿಸುತ್ತದೆ. ಕಥೆ ಹೇಳುವುದರ ಮಧ್ಯೆ ಮಧ್ಯೆ ಕೆಲವು ಅಭಿಪ್ರಾಯ ಪ್ರಚೋದಕ ಪ್ರಶ್ನೆಗಳನ್ನು ಕೇಳುತ್ತಾ ರಾಜಕುಮಾರರ ಕಲಿಕೆ ಹಾಗೂ ಸ್ಮರಣಶಕ್ತಿಯನ್ನು ಗಮನಿಸಿ ಪ್ರೋತ್ಸಾಹ ನೀಡುತ್ತಿದ್ದುದು ವಿಷ್ಣುಶರ್ಮರ ಶಿಕ್ಷಕ ವೃತ್ತಿಕೌಶಲ್ಯವನ್ನು ತಿಳಿಸುತ್ತದೆ.

ರಾಜಕುಮಾರರು ಪುನಃ ಹೇಳಿದ, ಅದರಲ್ಲೂ ಕ್ರಮತಪ್ಪಿದರೂ, ಅದನ್ನು ಸರಿಪಡಿಸಿಕೊಂಡು ಕಥೆಯನ್ನು ಹೇಳಿದಾಗ, ವಿಷ್ಣುಶರ್ಮರಿಗೆ ಸಂತೋಷ ಹಾಗೂ ಸಮಾಧಾನವುಂಟಾಯಿತು. ಕಥೆಯ ಮೂಲಕವೇ ಈ ಮಕ್ಕಳನ್ನು ತಿದ್ದಬೇಕೆಂದು ನಿಶ್ಚಯಿಸಿದರು. ಈ ಕಾರಣದಿಂದಲೇ, ರಾಜಕುಮಾರರಿಗೆ ಅಗತ್ಯವಾಗಿ ಬೇಕಾಗಿರುವ ರಾಜನೀತಿಶಾಸ್ತ್ರ, ಅರ್ಥಶಾಸ್ತ್ರ, ನೀತಿಶಾಸ್ತ್ರ, ಬದುಕಿನ ಸಾರ್ಥಕತೆಗೆ ಬೇಕಾದ ತಿಳುವಳಿಕೆ ಇತ್ಯಾದಿಗಳನ್ನು ಪಂಚಸೂತ್ರಗಳಲ್ಲಿ ವ್ಯವಸ್ಥಿತವಾಗಿ ಅಳವಡಿಸಿ, ಆಯ್ದ ಸುಭಾಷಿತಗಳನ್ನು, ನಾಣ್ಣುಡಿಗಳನ್ನು, ನೀತಿ ಶ್ಲೋಕಗಳನ್ನು ಸೇರಿಸಿ, ಆಕರ್ಷಕ ಕಥೆಗಳನ್ನು ಸಂಯೋಜನೆ ಮಾಡಿ ಉತ್ತಮ ಪಠ್ಯಕ್ರಮವನ್ನು ವಿಷ್ಣುಶರ್ಮರು ರಚಿಸಿದ್ದಾರೆ.[51] ವಿವೇಕಚೂಡಾಮಣಿಯಲ್ಲಿ ಒಂದು ಮಾತಿದೆ:–

शब्दजालं महारण्यं चित्तभ्रमणकारणम् ।

अतः प्रयत्नाज्ञा तव्यं तत्वज्ञात्तत्त्वमात्मनः ॥[52]

ಅಂದರೆ ಶಬ್ದಜಾಲವೆಂಬುದು ದೊಡ್ಡ ಅರಣ್ಯ. ಬುದ್ಧಿಯು ದಾರಿತಪ್ಪಿ ಭ್ರಮಿಸುವುದಕ್ಕೆ ಇದು ಕಾರಣ. ಆದ್ದರಿಂದ ತತ್ವವನ್ನರಿತ ಗುರುವಿನಿಂದ ಆತ್ಮತತ್ವವನ್ನು ಅರಸಿ ತಿಳಿದುಕೊಳ್ಳಬೇಕು. ಹೀಗೆಯೇ ಸಕಲಶಾಸ್ತ್ರಪಾರಂಗತರಾದ ವಿಷ್ಣುಶರ್ಮರನ್ನು ಅಮರಶಕ್ತಿ ರಾಜನು ತನ್ನ ಕುಮಾರರಿಗೆ ಸೂಕ್ತ ಶಿಕ್ಷಣವನ್ನು ನೀಡಿ ಅವರ ಜನ್ಮ ಸಾರ್ಥಕಪಡಿಸಬೇಕೆಂಬುದಾಗಿ ಕೋರಿಕೊಂಡನು. ಅವರಿಗೆ ಸೂಕ್ತವಾದ ಪಠ್ಯಕ್ರಮವನ್ನು ಮೇಧಾವಿ ವಿಷ್ಣುಶರ್ಮರು ಸಿದ್ಧಮಾಡಿಬಿಟ್ಟರು.

ಪಂಚಸೂತ್ರಗಳಲ್ಲಿ ಸಂವಿಧಾನಗೊಳಿಸಿರುವ ಪಂಚತಂತ್ರ ನೀತಿಕಥೆಗಳು ಅತ್ಯಂತ ವ್ಯವಸ್ಥಿತವಾಗಿ ಸಂಕಲನಗೊಂಡಿದ್ದು, ಅದರಲ್ಲೂ ಒಂದೊಂದು ಕಥೆಯೂ ಮುಂದಿನ ಕಥೆಗೆ ಪ್ರೇರಕವಾಗಿರುತ್ತದೆ. ಒಂದು

---

**51. Chandramani.G.L,** Panchatantra (English), Preface-PP-5,6. Rupa Publications India Pvt. Ltd.1991, 7/16, Ansari Road, Daryaganj, New Delhi-110002.

೫೨. **ವಿವೇಕಚೂಡಾಮಣಿ** –ಶ್ಲೋ–೬೦.

ಕಥೆಯ ಅಂತ್ಯ ಮತ್ತೊಂದು ಕಥೆಗೆ ಸರಪಳಿಕೊಂಡಿಯಂತೆ ಸಂಪರ್ಕ ಸಂಯೋಜಿಸುವಂತೆ ವಿಷ್ಣುಶರ್ಮರು ಸಿದ್ಧಪಡಿಸಿ ರಾಜಕುಮಾರರನ್ನು ಆಸಕ್ತಿಯುತವಾಗಿ ಮುನ್ನಡೆಸಿ ವಿದ್ಯೆ ಕಲಿಯುವಂತೆ ಪ್ರೇರೇಪಿಸಿರುವ ಇವರ ಬೋಧನಾ ಪ್ರತಿಭೆಯು ಯಾವ ಶೈಕ್ಷಣಿಕ ಮನೋವಿಜ್ಞಾನದ ನೀತಿ–ನಿಯಮಗಳ ಮುಂದೆ ಕಡಿಮೆಯಾಗಿದೆ !!! ಇಷ್ಟಲ್ಲದೆ ಕಥೆ ಹೇಳುವ ಕಲೆ, ಶೃತಿ, ಧ್ವನಿ, ಇವೆಲ್ಲವೂ ಕೇಳುಗನು ತಾನೇ ಆ ಅನುಭವದಲ್ಲಿ ತೇಲಾಡುತ್ತಿದ್ದಾನೆಯೋ ಎಂಬಂತೆ ಮನಸ್ಸನ್ನು ಸೆರೆಹಿಡಿದು ಬಿಡುತ್ತದೆ.ಈ ವಿಷಯದಲ್ಲಿ ವಿಷ್ಣುಶರ್ಮರಿಗೆ ಅಸಾಧಾರಣ ಕೌಶಲ್ಯವಿದ್ದಿತೆಂದು ಹೇಳಬಹುದು. ಕಥೆಹೇಳುವ ಸಂದರ್ಭದಲ್ಲಿ ಆಗಾಗ್ಗೆ ಜಾಗೃತಿಯಿಂದ ರಾಜಕುಮಾರರ ಆಸಕ್ತಿ ಹಾಗೂ ಅವರ ಕಲಿಕೆಯನ್ನು ಪರೀಕ್ಷಿಸಲು ಮಧ್ಯೆ ಮಧ್ಯೆ ಗಮನ ಸೆಳೆಯುವ ಪ್ರಶ್ನೆಗಳನ್ನು ಕೇಳುತ್ತಾ, ಕಲಿತದ್ದನ್ನು ದೃಢಪಡಿಸುತ್ತಾ, ಮುಂದಿನ ಕಲಿವಿಗೆ ಪ್ರಚೋದಕ ಸನ್ನಿವೇಶಗಳನ್ನು ಒದಗಿಸಿ ಪ್ರೋತ್ಸಾಹಿಸುತ್ತಾ ಇದ್ದುದೇ ವಿಷ್ಣುಶರ್ಮರ ಬೋಧನಾ ಪ್ರತಿಭೆಯೆನ್ನಬಹುದು.

ಪಂಚತಂತ್ರದ ಐದು ತಂತ್ರಗಳು, ಮನುಷ್ಯರಿಗೆ, ವಿಶೇಷವಾಗಿ ರಾಜರಾದವರಿಗೆ ಕಾರ್ಯಸಾಧನೆಯಲ್ಲಿ ಉಪಯೋಗಕ್ಕೆ ಬರುತ್ತದೆ ಎಂಬುದನ್ನು, ವಿವಿಧ ಕಥೆಗಳ ಮೂಲಕವೇ ಅರಿವು ಮೂಡಿಸುವುದು ಸೂಕ್ತ ಎಂದು ವಿಷ್ಣುಶರ್ಮರು ನಿರ್ಧರಿಸಿದರು.

ಮೊದಲನೆಯ ತಂತ್ರ ಮಿತ್ರಭೇದ – ಭೇದ ಎಂದರೆ ಒಡೆಯುವುದು; ಮಿತ್ರರ ನಡುವೆ ಬೆಳದಿರುವ ಸ್ನೇಹವನ್ನು ಅಪನಂಬಿಕೆಯಿಂದ ಬದ್ಧ ದ್ವೇಷಕ್ಕೆ ಪರಿವರ್ತಿಸುವುದು; ವಿಶ್ವಾಸ ಕೆಡುವಂತೆ ಚಾಡಿ ಬೆಸೆಯುವುದು. ಇದು ರಾಜಕೀಯದಲ್ಲಂತೂ ಬಹಳ ಮುಖ್ಯ. ಚತುರೋಪಾಯಗಳಲ್ಲೊಂದಾದ ಭೇದ ಪರಸ್ಪರರು ಬೆರೆತಿರುವ ಸಂದರ್ಭದಲ್ಲಿ ಅವರಲ್ಲಿ ಒಡಕುಮೂಡಿಸುವುದು.ಇದರಿಂದ ಇಬ್ಬರೂ ದುರ್ಬಲರಾಗುತ್ತಾರೆ. ಕಾರಣ ಶಕ್ತಿಯು ಇಬ್ಭಾಗವಾಗುತ್ತದೆ. ಅದನ್ನು ಸಾಧಿಸುವ ತಂತ್ರ–ಪ್ರತಿತಂತ್ರ, ಉಪಾಯ– ಅಪಾಯ, ಎಲ್ಲಿ? ಹೇಗೆ ನಡೆಯಬೇಕು? ವಂಚನೆ – ಕಪಟತನ, ಪ್ರಭುಶಕ್ತಿ, ಮುಗ್ಧ ಸ್ವಭಾವದ ಪರಿಣಾಮ ಇತ್ಯಾದಿಗಳ ಸ್ವರೂಪದ ಅರಿವು ಇದ್ದಾಗ ಮಾತ್ರ ಆ ಸಂದರ್ಭದಲ್ಲೊದಗುವ ಸಮಸ್ಯೆಯಿಂದ ಪಾರಾಗುವ ದಾರಿ ಸುಲಭವಾಗುತ್ತದೆ, ಎಂಬುದನ್ನು ತಿಳಿಸುವ ಹಲವು ಕಥೆಗಳು ಈ ಸೂತ್ರದಲ್ಲಿ ಹೆಣೆದುಕೊಂಡಿವೆ.[53] ಪಂಚತಂತ್ರದ ಮೊದಲನೆಯ ತಂತ್ರವಾದ ಮಿತ್ರಭೇದದ ಮೊದಲ ನುಡಿ ಹೀಗಿದೆ :–

वर्धमानो महान्स्नेहः सिंहगोवृषयोर्वने ।

पिशुनेनातिलुब्धेन जम्बुकेन विनाशितः ॥[54]

---

**೫3. ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಮಿತ್ರಭೇದ – ಪು–18.(2015) ವರ್ನಿಲ, 39/2–11, ಕಲ್ಯಾಣಿ ಗಾರ್ಡನ್, BSK 1ನೇ ಹಂತ, ಬೆಂಗಳೂರು – 560050.

**೫4. ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ – 1, ಪು – 11,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಅಂದರೆ, "ಒಂದು ಕಾಡಿನಲ್ಲಿ, ಒಮ್ಮೆ ಸಿಂಹ ಹಾಗೂ ಎತ್ತಿಗೂ ಗಾಢವಾದ ಸ್ನೇಹವುಂಟಾಗಿರಲು, ದುಷ್ಟನಾದ ಹಾಗೂ ಅತಿಲೋಭಿಯಾದ ನರಿಯಿಂದ ಆ ಸ್ನೇಹವು ನಾಶಮಾಡಲ್ಪಟ್ಟಿತು.

ಮಿತ್ರಭೇದದಲ್ಲಿ ಕಾಡಿನ ರಾಜನಾದ ಸಿಂಹ ಹಾಗೂ ನಾಡಿನಿಂದ ಬಂದ ಎತ್ತಿನ ಮಧ್ಯೆ ಉಂಟಾದ ಅಸಹಜ ಸ್ನೇಹದ ಮೋಹದಲ್ಲಿ ಸಿಂಹವು ಕರ್ತವ್ಯ ಭ್ರಷ್ಠನಾಗಿ, ಅದರ ಪ್ರಜೆಗಳು ತೊಂದರೆಗೆ ಒಳಗಾದಾಗ ಮಂತ್ರಿಯಾಗಿದ್ದ ನರಿಯು ಈ ಮೈತ್ರಿಯನ್ನು ಹೇಗೆ ಒಡೆಯಿತೆಂಬುದನ್ನು ಈ ತಂತ್ರದಲ್ಲಿ ಇಪ್ಪತ್ತೆರಡು ಉಪಕಥೆಗಳ ಮೂಲಕ ತೋರಿಸಲಾಗಿದೆ.[55] ಕಾರ್ಯ ಸಾಧನೆಗಾಗಿ ಗೆಳೆಯರಲ್ಲಿ ಭೇದವುಂಟುಮಾಡುವ ಬಗ್ಗೆ ವಿವಿಧ ಉಪಕಥೆಗಳ ಮೂಲಕ ಒಳ್ಳೆಯ ಸನ್ನಿವೇಶಗಳನ್ನು ರಚಿಸಿ, ಧನಾರ್ಜನೆಯ ಉಪಾಯಗಳು; ಹಣವಿರುವವರ ಬಳಿ ಮಿತ್ರರು ಮತ್ತು ಬಾಂಧವರು ಮುತ್ತಿಬಿಡುತ್ತಾರೆ; ಈ ಲೋಕದಲ್ಲಿ ಸಂಬಂಧವಿಲ್ಲದವರೂ ಕೂಡ ಹಣವಂತರ ಸಂಬಂಧಿಗಳೆನಿಸಿಬಿಡುತ್ತಾರೆ; ಬಡವರಲ್ಲಿ ಅವರ ಸ್ವಜನರೂ ದುರ್ಜನರಂತೆ ನಡೆದುಕೊಳ್ಳುತ್ತಾರೆ[56] ಇತ್ಯಾದಿ ಅನೇಕ ತಿಳುವಳಿಕೆಗಳನ್ನು ನೀಡುತ್ತಾ, ರಾಜಕುಮಾರರೇ ತಮ್ಮ ಪರಿಸ್ಥಿತಿಯಬಗ್ಗೆ ತಾವೇ ಯೋಚಿಸಿ, ಸಹವಾಸದೋಷದಿಂದ ಉದ್ಧಟತನ, ಸ್ವೇಚ್ಛಾ ಮನೋಧೋರಣೆ ಬೆಳೆಸಿಕೊಂಡು ವ್ಯಕ್ತಿತ್ವವನ್ನು ಹಾಳುಮಾಡಿಕೊಂಡಿರುವ ಕುರಿತು ಅರಿವನ್ನು ಮೂಡಿಸಲಾಗಿದೆ. ಅಪಾತ್ರರೊಡನೆ ಸ್ನೇಹ ಮಾಡುವುದರ ಪರಿಣಾಮ, ದುಷ್ಟರ ಸಹವಾಸ, ಸ್ವಾರ್ಥಸಾಧಕರ ಮಧ್ಯೆ,ಮೂರ್ಖರ ಸಹವಾಸ ಇವೆಲ್ಲ ತಕ್ಕುದಲ್ಲ ಹಾಗೂ ಅದರಿಂದಾಗಿ ಅಪರೂಪವಾಗಿ ದೊರಕಿರುವ ಬದುಕಿನ ಸದುಪಯೋಗ ಮತ್ತು ಸಾರ್ಥಕತೆ ಅಸಾಧ್ಯ ಎಂಬ ವಿಚಾರವನ್ನು ತಿಳಿಸಿ ವಿಷ್ಣುಶರ್ಮರು ರಾಜಕುಮಾರರನ್ನು ಜಾಗೃತಗೊಳಿಸಿದ್ದಾರೆ. ಆಸಕ್ತಿಯಿಂದ ಕಥೆಗಳನ್ನು ಕೇಳುವಂತೆ ಪ್ರೇರೇಪಿಸಿದ್ದಾರೆ.ಇಂತಿರಬೇಕು ಸಜ್ಜನರ ನಡವಳಿಕೆ ಎಂಬ ಸುಭಾಷಿತದಲ್ಲಿ ಸೂಚಿಸಿರುವಂತೆ:

अभिवादनशीलस्य नित्यं वृद्धोपसेविनः।

चत्वारि तस्य वर्धन्ते आयुर्विद्या यशोबलम् ॥[57]

ಅಂದರೆ," ಗೌರವಾರ್ಹರಿಗೆ ವಂದಿಸುವ ಪ್ರಭಾವವುಳ್ಳ, ನಿತ್ಯವೂ ಗುರುಹಿರಿಯರ ಸೇವೆಮಾಡುತ್ತಾ, ಅವರಿಗೆ ತಗ್ಗಿ, ಬಗ್ಗಿ ನಡೆಯಬಲ್ಲವನಿಗೆ ಆಯುಷ್ಯ, ವಿದ್ಯೆ, ಯಶಸ್ಸು ಮತ್ತು ಬಲ ಈ ನಾಲ್ಕೂ ಹೆಚ್ಚಾಗುತ್ತವೆ."

---

೫೫. **ಭರತ.ಬಿ.ರಾವ್**, ಪಂಡಿತ ವಿಷ್ಣುಶರ್ಮ ವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಕಥಾಮುಖ, ಪು– 8 (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್ ರಸ್ತೆ, ಬೆಂಗಳೂರು–560004.

೫೬. **ಭರತ.ಬಿ.ರಾವ್**, ಪಂಡಿತ ವಿಷ್ಣುಶರ್ಮ ವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಕಥಾಮುಖ–ಪು – 13–14.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.,44/1, ಕೆ.ಆರ್ ರಸ್ತೆ, ಬೆಂಗಳೂರು–560004.

57. **ಭಟ್.ವಿಎನ್**, ಜ್ಞಾನದೀಪ, ಅ–3, ಪು–5.(ಸುಭಾಷಿತರತ್ನ ಭಾಂಡಾಗಾರಂ) ವಿಶ್ವನಾಥ ಪ್ರಕಾಶನ, (1993) ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ–577201.

ಎಂಬುದನ್ನು ತಿಳಿಸಿದ್ದಾರೆ.

ರಾಜಕುಮಾರರ ಮೂಲಸ್ವಭಾವಗಳನ್ನು ಉತ್ತಮ ಅನುಭವಗಳ ಮೂಲಕ ಮಾರ್ಪಡಿಸುವ ಒಂದು ಪ್ರಾಮಾಣಿಕ ಪ್ರಯತ್ನವನ್ನು ವಿಷ್ಣುಶರ್ಮರು ಮಾಡಿರುತ್ತಾರೆ. ಅನುಭವಗಳನ್ನು ನೀಡುವ ಉದ್ದೇಶದಿಂದ, ರಾಜಕುಮಾರರು ಇಷ್ಟಪಟ್ಟು ಕಲಿಯುವಂತಹ ಶೈಕ್ಷಣಿಕ ಸನ್ನಿವೇಶಗಳನ್ನು ಸುಂದರ ನೀತಿಕಥೆಗಳ ಮೂಲಕ, ಪರಿಣಾಮಕಾರಿಯಾದ ಬೋಧನೆ ಹಾಗೂ ಉತ್ತಮ ಉಪದೇಶವನ್ನು ನೀಡುತ್ತಾ, ಅವರನ್ನು ಸುಶಿಕ್ಷಿತರನ್ನಾಗಿ, ರಾಜನೀತಿನಿಪುಣರನ್ನಾಗಿ, ಬದುಕಿನ ವ್ಯವಹಾರ ಚತುರರನ್ನಾಗಿ ಮಾಡಿದ್ದಾರೆ. ಪಾಠದ ಜೊತೆಗೆ ಪ್ರಾಸಂಗಿಕವಾಗಿ ಅವರ ಗುಣಶೀಲಗಳನ್ನು ಸಂಸ್ಕರಿಸುವಂತಹ ನೈತಿಕ ವಿಚಾರಗಳನ್ನು ಸರಳ ಕಥೆಗಳು, ನೀತಿಶ್ಲೋಕಗಳು, ಸುಭಾಷಿತಗಳ ಮೂಲಕ ತಿಳಿಸಿದ್ದಾರೆ. ಒಂದೊಂದು ಕಥೆಯನ್ನು ಕೇಳಿದಾಗಲೂ, ಒಂದೊಂದು ಹೊಸ ವಿಚಾರ,ಅದರಲ್ಲೊಂದು ವ್ಯಕ್ತಿತ್ವ ನಿರ್ಮಾಣ ಅಂಶ ಅಡಕವಾಗಿರುವಂತೆ ರೂಪಿಸಿರುವುದು ಪಂಚತಂತ್ರದ ವೈಶಿಷ್ಟ್ಯತೆ. ಅನುಚಿತ ರೀತಿಯಲ್ಲಿ ತೊಡಗುವ ವ್ಯಕ್ತಿಯನ್ನು ಅತೃಪ್ತಿ ಅಸಂತೋಷಗಳಾಗುವಂತೆ ಸನ್ನಿವೇಶಗಳನ್ನು ರಚಿಸಿ ಅವನನ್ನು ಆ ಕಾರ್ಯದಿಂದ ಹೊರಗೆಳೆಯುವಂತೆ ಮಾಡಿ, ಜೊತೆಗೆ ಉಚಿತ ರೀತಿಯ ಕಲಿವಿನೆಡೆಗೆ ಹೆಜ್ಜೆ ಇಡುವಂತೆ ಪಂಚತಂತ್ರದಲ್ಲಿ ವಿಷ್ಣುಶರ್ಮರು ಯೋಜಿಸಿದ್ದಾರೆ. ಪ್ರಾಪಂಚಿಕ ಸುಖದ ಲಕ್ಷಣಗಳನ್ನು ಹೇಳಿಕೊಟ್ಟಿದ್ದಾರೆ. ಮಹಾಭಾರತದಲ್ಲಿ ಹೀಗೆ ಹೇಳಲ್ಪಟ್ಟಿದೆ.

आरोग्यमानृण्यमविप्रवासः सद्भिर्मनुष्यैः सह संप्रयोगः ।

स्वप्रत्यया वृत्तिरभीतवासः षड् जीवलोकस्य सुखानि राजन् ।।[58]

ಅಂದರೆ ಆರೋಗ್ಯಭಾಗ್ಯ, ಸಾಲವಿಲ್ಲದಿರುವಿಕೆ, ಆತ್ಮೀಯರಿಂದ ದೂರವಿಲ್ಲದಿರುವುದು, ನಂಬಿಕೆಯುಳ್ಳ ಉದ್ಯೋಗ, ಭಯವಿಲ್ಲದ ಜೀವನ, ಸಜ್ಜನರ ಸಹವಾಸ ಈ ಆರು ಪ್ರಾಪಂಚಿಕ ಸುಖಗಳೆನಿಸುವುವು. ಇದೆಲ್ಲ ಪ್ರಾಪಂಚಿಕ ಬದುಕಿನ ವ್ಯವಹಾರ ಚತುರತೆಯ ಲಕ್ಷಣಗಳು.

ವಿಷ್ಣುಶರ್ಮರು ಕಥೆ ಹೇಳುತ್ತಾ, ಅನೇಕ ಉಪಯುಕ್ತ ವಿಚಾರಗಳನ್ನು ಒಳ್ಳೆಯ ತಾಳಮೇಳದಿಂದ ಅಂದರೆ ರಾಜಕುಮಾರರ ಮನಸ್ಸು, ಅವರ ಮೂಲ ವರ್ತನೆ, ಕಲಿಕೆಯಲ್ಲಿನ ಆಸಕ್ತಿ ಮುಃತಾದವುಗಳನ್ನು ಬಹಳ ಸೂಕ್ಷ್ಮವಾಗಿ ಗಮನಿಸುತ್ತಾ ಅವರಿಗೊಪ್ಪುವಂತೆ ಕೆಲವು ನೀತಿ ಬೋಧೆಯನ್ನು ಮಾಡುತ್ತಾ, ಅವರ

---

58. **ಸುಭಾಷಿತಮಂಜರೀ,** ಸಂಸಾರ–ಶ್ಲೋ–11, ಪು–16, ಮಹಾಭಾರತ, ಉ.ಪ–33–89. ಕ.ಸಾ.ಪ.(2001) ಚಾಮರಾಜಪೇಟೆ, ಬೆಂಗಳೂರು.

ಮೇಲಿನ ಹತೋಟಿಯನ್ನು ಸಾಧಿಸುತ್ತಾರೆ. ನಂತರ ಕಥಾನಿರೂಪಣಾ ವಿಧಾನವೇ ರಾಜಕುಮಾರರನ್ನು ಬುದ್ಧಿವಂತರನ್ನಾಗಿ ಮಾಡಲು ಸೂಕ್ತ ಕ್ರಮ ಎಂದು ತೀರ್ಮಾನಿಸಿಕೊಂಡರು.

ಉಜ್ಜಯಿನಿ ಎಂಬ ಒಂದು ಶ್ರೀಮಂತ ನಗರದಲ್ಲಿ ವರ್ಧಮಾನಕನೆಂಬ ಸಜ್ಜನ ವ್ಯಾಪಾರಿ ಇದ್ದನು. ಒಂದು ಬಾರಿ ಬಂಡಿ ತುಂಬಾ ಸರಕನ್ನು ಹೇರಿಕೊಂಡು ಮಧುರಾ ನಗರದ ಕಡೆಗೆ ವ್ಯಾಪಾರಕ್ಕೆ ಹೊರಟಿದ್ದನು. ಅವನ ಬಂಡಿಯನ್ನು ವೇಗವಾಗಿ ಕೊಂಡೊಯ್ಯುವ ಸಾಮರ್ಥ್ಯವುಳ್ಳ, ದಷ್ಟಪುಷ್ಟವಾದ ಎತ್ತುಗಳೆರಡು– ಸಂಜೀವಕ ಮತ್ತು ನಂದಕ. ಯಮುನಾ ತೀರದಲ್ಲಿ ವ್ಯಾಪಾರಿಯ ಸಾರ್ಥವು ಚಲಿಸುತ್ತಿದ್ದಾಗ, ಕಾಲುಗಳು ಕೆಸರಿನಲ್ಲಿ ಸಿಕ್ಕಿ ಸಂಜೀವಕನು ಬಿದ್ದುಬಿಟ್ಟನು. ಅವನ ಪರಿಸ್ಥಿತಿಗೆ ಮರುಗಿ ವರ್ಧಮಾನಕನು ಮೂರು ರಾತ್ರಿಗಳು ಅಲ್ಲೇ ತಂಗಿದನು. ಆನಂತರ ಸಾರ್ಥದಲ್ಲಿದ್ದ ಇತರ ವ್ಯಾಪಾರಿಗಳು ಹೇಳಿದರು " ಎಲೈ ಶ್ರೇಷ್ಠೀ, ಏನಿದು ಹೀಗೆ ಒಂದು ಎತ್ತಿನ ಸಲುವಾಗಿ ಹುಲಿಸಿಂಹಗಳಿರುವ ಈ ಅಪಾಯಕಾರಿಯಾದ ಅಡವಿಯಲ್ಲಿ ಇಡೀ ಸಾರ್ಥವನ್ನೇ ಸಂಕಟಕ್ಕೀಡು ಮಾಡಿರುವೆ? ಬುದ್ಧಿವಂತನಾದವನು ಸ್ವಲ್ಪಕ್ಕೋಸ್ಕರ ಹೆಚ್ಚಿನದನ್ನು ಕಳೆದುಕೊಳ್ಳುವುದಿಲ್ಲ. ಆದ್ದರಿಂದ ಹೆಚ್ಚಿನದಕ್ಕಾಗಿ ಸ್ವಲ್ಪವನ್ನು ಬಿಟ್ಟುಬಿಡುವುದೇ ಜಾಣತನವು." ವರ್ಧಮಾನಕನು ಅವರ ಮಾತುಗಳನ್ನು ಒಪ್ಪಿ ಸಂಜೀವಕನ ರಕ್ಷಣೆಗಾಗಿ ಜನರನ್ನು ನೇಮಿಸಿ, ಸಾರ್ಥದೊಂದಿಗೆ ಅಲ್ಲಿಂದ ಹೊರಟನು.

ಅಪಾಯಕಾರಿ ಅರಣ್ಯದಲ್ಲಿ ಇರಲಿಚ್ಛಿಸದ ಆರಕ್ಷಕರು ಸಂಜೀವಕನನ್ನು ಅಲ್ಲಿಯೇ ಬಿಟ್ಟು ನಡೆದರು. "ಸಂಜೀವಕನು ಸತ್ತುಹೋದನು, ಅವನಿಗೆ ಅಗ್ನಿಸಂಸ್ಕಾರ ಮಾಡಿದೆವು."[59] ಎಂದು ಹೇಳಿಬಿಟ್ಟರು. ಆಯಸ್ಸು ಗಟ್ಟಿಯಾಗಿದ್ದುದರಿಂದ ಸಂಜೀವಕನು ಯಮುನಾ ನೀರಿನಿಂದ ಮಿಶ್ರಿತವಾದ ತಂಪಾದ ಗಾಳಿಯ ಬೀಸುವಿಕೆಯಿಂದ ಚೇತರಿಸಿಕೊಂಡವನಾಗಿ, ಅಲ್ಲಿಂದ ಹೇಗೋ ಎದ್ದು ಯಮುನಾ ತೀರವನ್ನು ತಲುಪಿದನು. ಅಲ್ಲಿ ಪಚ್ಚೆ ಹರಳಿನಂತಹ ಎಳೆಹುಲ್ಲಿನ ಮೇಲ್ಭಾಗವನ್ನು ತಿನ್ನುತ್ತಾ, ತಿನ್ನುತ್ತಾ ಶಿವನ ನಂದಿಯಂತೆ ದಷ್ಟಪುಷ್ಟ ಹಾಗೂ ಶಕ್ತಿವಂತನಾದನು. ಪ್ರತಿದಿನವೂ ಹುತ್ತದ ತುದಿಗಳನ್ನು ಕೊಂಬುಗಳಿಂದ ಛೇದಿಸುತ್ತಾ, ಗರ್ಜಿಸುತ್ತಾ ವಾಸವಾಗಿದ್ದನು. ಇಲ್ಲಿ ಒಂದು ಉಕ್ತಿ ಸರಿಯಾಗಿಯೇ ಇದೆ.

अरक्षितं तिष्ठति दैवरक्षितं सुरक्षितं दैवहतं विनश्यति ।

जीवत्यनाथोऽपि वने विसर्जितः कृतप्रयत्नोऽपि गृहे विनश्यति ॥[60]

---

59. **ಭರತ.ಬಿ ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ. ತಂ– ಪು–15, 2018. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು–560004
60. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ – 20, ಪು – 21,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಇದರರ್ಥ– “ರಕ್ಷಣೆಯಿಲ್ಲದವನು ದೈವರಕ್ಷೆಯಿದ್ದರೆ ಬದುಕುತ್ತಾನೆ; ಉತ್ತಮ ರಕ್ಷಣೆಯಿದ್ದವನು ದೈವಕೃಪೆಯಿಲ್ಲದಿದ್ದರೆ ನಾಶವಾಗುತ್ತಾನೆ; ಕಾಡಿನಲ್ಲಿ ಬಿಟ್ಟ ಅನಾಥನು ದೈವಕೃಪೆಯಿಂದ ಬದುಕುತ್ತಾನೆ; ದೈವಕೃಪೆಯಿಲ್ಲದಿದ್ದಾಗ ಎಷ್ಟೇ ಪ್ರಯತ್ನಪಟ್ಟರೂ ಮನೆಯಲ್ಲಿದ್ದರೂ ಕೂಡ ನಾಶವಾಗುತ್ತಾನೆ.

ಒಂದು ದಿನ ಪಿಂಗಳಕನೆಂಬ ಬಾಯಾರಿದ ಸಿಂಹವೊಂದು ತನ್ನ ಮೃಗ ಪರಿವಾರದೊಡನೆ ಯಮುನಾ ತೀರಕ್ಕೆನೀರು ಕುಡಿಯಲು ಬಂದನು. ಆ ಸಮಯದಲ್ಲಿ ಸಂಜೀವಕನ ಗಂಭೀರವಾದ ಕೂಗನ್ನು ದೂರದಿಂದಲೇ ಕೇಳಿ ಪಿಂಗಲಕನು ವ್ಯಾಕುಲ ಹೃದಯದವನಾಗಿ ಭಯಗೊಂಡರೂ ಅದನ್ನು ತೋರ್ಪಡಿಸದೆ ಒಂದು ಆಲದ ಮರದ ಕೆಳಗೆ ನಾಲ್ಕು ಮಂಡಲಗಳುಳ್ಳ ವ್ಯೂಹ ರಚನೆ ಮಾಡಿ ಕುಳಿತುಕೊಂಡನು. ಅವನ ಚತುರ್ಮಂಡಲ ಹೇಗಿತ್ತೆಂದರೆ –– ಮಧ್ಯ ಭಾಗದಲ್ಲಿ ಸಿಂಹ, ಅನಂತರದ ಸುತ್ತಿನಲ್ಲಿ ಅನುಯಾಯಿಗಳು ಅಂದರೆ ಮಂತ್ರಿಗಳು ಮುಂತಾದವರು, ಅವರ ಸುತ್ತ ಮಧ್ಯಮ ವರ್ಗದ ಸೇವಕರು, ಕೊನೆಯ ಸುತ್ತಿನಲ್ಲಿ ಗೂಢಚಾರರು, ಸೈನಿಕರು ಮುಂತಾದವರು. ಇದೆಲ್ಲಾ ಪ್ರಾಣಿಗಳ ಗುಂಪೇ ಆಗಿದ್ದರೂ ಒಂದು ರಾಜನ ಸಭೆಗಿಂತ ಏನೂ ಕಡಿಮೆಯಾಗಿರಲಿಲ್ಲ.

ಪಿಂಗಲಕನಿಗೆ ಅಧಿಕಾರಭ್ರಷ್ಟರಾದ ಮಂತ್ರಿಪುತ್ರರಾದ ಕರಟಕ – ದಮನಕರೆಂಬ ಇಬ್ಬರು ನರಿಗಳು ಅನುಯಾಯಿಗಳು. ಅವರಿಬ್ಬರು ತಮ್ಮಲ್ಲೇ ಮಂತ್ರಾಲೋಚನೆಯಲ್ಲಿ ತೊಡಗಿದರು. ದಮನಕ ಕೇಳಿದನು– “ಎಲೈ ಮಂಗಳಕರ ಕರಟಕನೇ, ಈ ನಮ್ಮ ಸ್ವಾಮಿ ಪಿಂಗಳಕನು ಬಾಯಾರಿದ್ದವನು, ನೀರು ಕುಡಿಯಲು ಯಮುನಾ ತೀರಕ್ಕೆ ಹೋದವನು ನೀರು ಕುಡಿಯದೆ ಹಿಂದಿರುಗಿ ಬಂದು ವ್ಯೂಹ ರಚನೆ ಮಾಡಿ ದುಃಖ ತಪ್ತನಾಗಿ ಈ ಆಲದ ಮರದ ಕೆಳಗೆ ಕುಳಿತಿರುವನು. ಇದು ಯಾವ ಕಾಣದಿಂದ? ಕರಟಕನು ಹೇಳುತ್ತಾನೆ –“ಮಂಗಳಕರನೇ, ಈ ವ್ಯಾಪಾರದಿಂದ(ಸಂಬಂಧಪಡದ ವ್ಯವಹಾರದಿಂದ ನಮಗೇನು? ಏಕೆಂದರೆ ಹೀಗೊಂದು ಉಕ್ತಿಯಿದೆ –

अव्यापारेषु व्यापारं यो नरः कर्तुमिच्छति ।

स एव निधनं याति कीलोत्पाटीव वानरः ॥[61]

ಯಾವ ಮನುಷ್ಯನು ತನಗೆ ಸಂಬಂಧಿಸದ ವ್ಯಾಪಾರದಲ್ಲಿ ಮೂಗು ತೂರಿಸುವನೋ, ಆತನು(ಮರದಿಂದ) ಬೆಣೆಯನ್ನು ಕಿತ್ತ ಮಂಗನಂತೆ ಸಾವನ್ನಪ್ಪುತ್ತಾನೆ. “ಹೇಳಿಕೆಯಿಲ್ಲದೆ ಊಟಕ್ಕೆ, ಕರೆಯದೇ ಇದ್ದ ಮಾತುಕತೆಗೆ ಹೋಗಬಾರದಂತೆ. ಹಾಗೆ ಹೋದದ್ದೇ ಆದರೆ, ದಾರಿಯನ್ನು ಹೋಗುವ ಮಾರಿಯನ್ನು

61. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ –21, ಪು– 22, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಅಕ್ಷತೆ ಕೊಟ್ಟು ಮನೆಯೊಳಕ್ಕೆ ಕರೆಸಿದಂತಾದೀತು. **"ರಾಜಕುಮಾರರಲ್ಲಿ ಒಬ್ಬ ಕೇಳಿದ– "ಗುರುಗಳೇ, ಅದೇನು ಕಥೆ – ಕಪಿ ಕೀಲನ್ನು ಕಳಚಿದ್ದು? ಹೇಳಿ"** ಎಂಬುದಾಗಿ.

ವಿಷ್ಣುಶರ್ಮರು ಮನಸ್ಸಿನಲ್ಲೇ ಖುಶಿಪಟ್ಟುಕೊಂಡು –"ಅಬ್ಬಾ! ರಾಜಕುಮಾರರಿಗೆ ಕಥೆ ಕೇಳುವ ಆಸಕ್ತಿ ಬೆಳೆಯುತ್ತಿದೆ, ಇನ್ನು ಇವರನ್ನು ತಿದ್ದಬಹುದು" ಆದ್ದರಿಂದ ಉತ್ಸಾಹದಿಂದಲೇ ಬೆಣೆಯನ್ನು ಕಿತ್ತ ಮಂಗನ ಕಥೆಯನ್ನು ಹೇಳತೊಡಗಿದರು. ಹೀಗೆ ಇವರ ಬೋಧನಾ ಕ್ರಮ ಮನೋವೈಜ್ಞಾನಿಕವಾಗಿತ್ತು. ಶಿಷ್ಯರ ಆಸಕ್ತಿಯನ್ನು ಪ್ರೇರೇಪಿಸಿ, ಪಾಠದ ಪೂರ್ವಸಿದ್ಧತಾ ಕಾರ್ಯವನ್ನು, ಪೀಠಿಕೆಗೆ ಪೂರಕವಾದ ಒಂದು ದೃಷ್ಟಾಂತವನ್ನು ವಿವರಿಸಿ ಮುಂದಿನ ಪಾಠಕ್ಕೆ ಸುಗಮವಾದ ಮಾರ್ಗವನ್ನು ರೂಪಿಸುತ್ತಿದ್ದರು. ಮಿತ್ರಭೇದ ಸೂತ್ರ ಕಥೆಯಲ್ಲಿ ಬಹಳ ನೀತಿಯುತ ವಿಚಾರಗಳನ್ನು ರಾಜಕುಮಾರರಿಗೆ ಬೋಧಿಸಿದ್ದಾರೆ. ಉದಾಹರಣೆಗೆ– ಧನಾರ್ಜನೆಯ ಉಪಾಯಗಳು, ಸಂಜೀವಕನ ವನಪ್ರವೇಶ, ಪಿಂಗಲಕನಿಂದ ವ್ಯೂಹ ರಚನೆ, ಕರಟಕ–ದಮನಕರ ಮಂತ್ರಾಲೋಚನೆ ಮುಂತಾದ ಪ್ರಸಂಗಗಳಲ್ಲಿ – ರಾಜನೀತಿ ಶಿಕ್ಷಣದ ಪರಿಚಯವನ್ನು ಸರಳವಾಗಿ ಹಾಗೂ ಆಕರ್ಷಕವಾಗಿ ಪ್ರಾಣಿಗಳೇ ಮನುಷ್ಯರಷ್ಟು ಭಾವನೆಗಳನ್ನು ವ್ಯಕ್ತಪಡಿಸುವಂತೆ ಉತ್ತಮ ಬೋಧನಾ ತಂತ್ರವನ್ನು ವಿಷ್ಣುಶರ್ಮರು ಅಳವಡಿಸಿದ್ದಾರೆ. ಆಲದ ಮರದ ಕೆಳಗೆ ಮೃಗ ಪರಿವಾರ ಸೇರಿ ಒಂದು ಅದ್ಭುತವಾದ ರಾಜನ ಆಸ್ಥಾನ ಮತ್ತು ರಾಜಸಭೆಯ ಪರಿಕಲ್ಪನೆಯನ್ನು ಮೂಡಿಸಿದ್ದಾರೆ.

ಬೆಣೆಯನ್ನು ಕಿತ್ತ ಮಂಗನ ಕಥೆ ಬಹಳ ಚಿಕ್ಕ ಕಥೆ, ಆದರೆ ಒಂದು ಒಳ್ಳೆಯ ತಿಳುವಳಿಕೆಯನ್ನು ಬೆಳೆಸುವುದು.

ಕಪಿಚೇಷ್ಟೆ ಎಂಬುವುದು ವಾಡಿಕೆ. ಆದರೆ ಇದು ಎಷ್ಟು ಅರ್ಥಪೂರ್ಣವಾಗಿದೆಯೆಂದು ಈ ಪುಟ್ಟ ಕಥೆ ಸ್ಪಷ್ಟ ಪಡಿಸುತ್ತದೆ. ಒಮ್ಮೆ ಒಂದು ನಗರದ ಸಮೀಪದ ವೃಕ್ಷ ಸಮೂಹದ ಮಧ್ಯೆ ವ್ಯಾಪಾರಿಯ ಮಗನೊಬ್ಬನು ಒಂದು ದೇವಸ್ಥಾನ ಕಟ್ಟುವ ಕಾರ್ಯ ನಡೆಸುತ್ತಿದ್ದನು. ಕೆಲಸ ಮಾಡುತ್ತಿದ್ದ ಕಾರ್ಮಿಕರು ಮಧ್ಯಾಹ್ನದ ಸಮಯದಲ್ಲಿ ಊಟಕ್ಕೆ ನಗರಕ್ಕೆ ಹೋಗುತ್ತಿದ್ದರು.ಒಮ್ಮೆ ತಮ್ಮ ಸಹಜ ಸ್ವಭಾವದಂತೆ ಅತ್ತಿತ್ತ ತಿರುಗಾಡುತ್ತಿದ್ದ ಮಂಗಗಳ ಹಿಂಡೊಂದು ಅಲ್ಲಿಗೆ ಬಂತು. ಕೆಲಸದ ಆವರಣದಲ್ಲಿ ಬಡಗಿಯೊಬ್ಬನು ಅರ್ದ ಸೀಳಿದ ಅರ್ಜುನ ವೃಕ್ಷದ ಸ್ಥಂಭಕ್ಕೆ ಕಗ್ಗಲಿ ಮರದ ಬೆಣೆಯನ್ನು ಸಿಕ್ಕಿಸಿ ಹೋಗಿದ್ದನು. ಮಂಗಗಳು ಮನಸೋಇಚ್ಛೆ ಮರಗಳ ಮಧ್ಯೆ ಆಡಲು ತೊಡಗಿದವು. ಆಗ ಒಂದು ಮೃತ್ಯು ಸನ್ನಿಹಿತವಾದ ಮಂಗವು ಬೆಣೆಯನ್ನು ಸಿಕ್ಕಿಸಿದ್ದ ಮರದ ದಿಮ್ಮಿಯ ಮೇಲೆ ಕುಳಿತು, ಕೈಗಳಿಂದ ಬೆಣೆಯನ್ನು ಎಳೆದು ಕಿತ್ತಾಗ, ಅದರ ವೃಷಣಗಳು ಸೀಳಿದ್ದ

ಮರದ ಮಧ್ಯೆ ಸಿಕ್ಕಿ ಜಜ್ಜಿ ಹೋಗಿದ್ದರಿಂದ ಸತ್ತುಹೋಯಿತು.ಬೇಡದ ಕೆಲಸಕ್ಕೆ ಕೈಹಾಕಿದ್ದರಿಂದ ವಾನರ ತನ್ನ ಜೀವವನ್ನು ಅನ್ಯಾಯವಾಗಿ ಕಳೆದುಕೊಂಡಿತು. ಈ ಕಥೆಯ ನೀತಿ:–

ಕರಟಕ ಹೇಳುತ್ತಾನೆ– "अव्यापारेषु इति । आवयोर्भक्षितशेष आहारोऽस्त्येव तत्किमनेन व्यापारेण ?" ಅಂದರೆ, ಸಂಬಂಧಿಸದ ವ್ಯಾಪಾರದಲ್ಲಿ ತಲೆಹಾಕಬಾರದು. ನಾವು ತಿಂದು ಉಳಿದ ಆಹಾರವು ಇನ್ನೂ ಇದೆಯಲ್ಲವೇ? ನಮಗೇಕೀ ವ್ಯಾಪಾರ? ಯಾವಾಗಲೂ ನಮಗೆ ಸಂಬಂಧಪಡದಿರುವ ವಿಚಾರಗಳಿಗೆ ಅನ್ಯಥಾ ತಲೆಹಾಕಿ ಫಜೀತಿಮಾಡಿಕೊಳ್ಳಬಾರದು.

ಇನ್ನು ಮೊನ್ನೆ, ಮೊನ್ನೆ, ನೀರು ಕುಡಿಯಲು ಹೋದ ಮೃಗರಾಜ ಸಿಂಹವು ಒಮ್ಮೆಗೇ ಬೆದರಿ ಹಿಂದೆ ಬಂದಿದ್ದೇಕೆ? ಎಂಬುದನ್ನು ತಿಳಿಯಲು ದಮನಕನು ಧೈರ್ಯದಿಂದ ಕೇಳಿದನು. ಆಗ ಸಿಂಹವು ಯೋಚಿಸಿ ತನ್ನ ದುಗುಡವನ್ನು ಹೇಳಿಕೊಳ್ಳಲು ಮನದಲ್ಲೇ ಯೋಚಿಸಿ ಹೀಗೆ ಹೇಳಿತು– "ಸಚಿವೋತ್ತಮನೇ, ನೀನೂ ಕೇಳಿದ್ದಿರಬಹುದು. ಮೋಡದ ಮೊಳಗಿಗಿಂತ, ಆನೆಯ ಘೀಳಿಡುವಿಕೆಗಿಂತ ಭಯಂಕರವಾದ, ಈ ಹಿಂದೆ ಎಂದೂ ಕೇಳಿರದ ಉಗ್ರವಾದ ನಾದವದು. ಆ ಮೊಳಗು ಈ ಕಾಡನ್ನು ಸೇರಿಕೊಂಡ ವಿಚಿತ್ರ, ಭಯಾನಕ ಪ್ರಾಣಿಯದ್ದಾಗಿರಬೇಕು. ಆದ್ದರಿಂದ ಈ ಕಾಡನ್ನೇ ಬಿಟ್ಟು ಹೋಗುವ ಯೋಚನೆ ಮಾಡಿದ್ದೇನೆ." ಅದಕ್ಕೆ ಕರಟಕನು ಹೇಳಿದನು– " ಛೇ, ಛೇ.. ಇಷ್ಟಕ್ಕೆಲ್ಲಾ ಹೆದರುವುದೇ, ಅಪಾಯದ ಮೂಲವನ್ನು ಶೋಧನೆ ಮಾಡಿದರೆ ಭಯದ ಬುಡವನ್ನೇ ಕಿತ್ತೆಸೆಯಲು ಸಾಧ್ಯವಾಗುತ್ತದೆ. ನಮ್ಮ ಕಲ್ಪನೆಗೂ ಮೀರಿದ, ಬೇರೆಯದ್ದೇ ಆದ ಸತ್ಯ ಅಲ್ಲಿರಬಹುದು. ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು ಎಂಬ ಗಾದೆಯೇ ಇದೆಯಲ್ಲ. ಹೀಗೆ ಭಯಗ್ರಸ್ಥ ಪಿಂಗಲಕನೊಂದಿಗೆ ದಮನಕನ ಸಂವಾದ ಬಹಳ ದೀರ್ಘವಾಗಿ ನಡೆಯುತ್ತದೆ. ಬಹಳ ಉಪಯುಕ್ತ ರಾಜನೀತಿ ಶಿಕ್ಷಣ ಹಾಗೂ ನಾಯಕನಾದವನು ತಿಳಿದುಕೊಳ್ಳಬೇಕಾದ ರಾಜಧರ್ಮ ಪ್ರಜಾ ಪರಿಪಾಲನಾ ನೀತಿನಿಯಮಗಳೆಡೆಗೆ ರಾಜಕುಮಾರರು ಆಲೋಚನೆ ಮಾಡುವಂತೆ ಈ ಸೂತ್ರಕಥೆಯ ಮೂಲಕ ವಿಷ್ಣುಶರ್ಮರು ಪ್ರೇರೇಪಿಸಿದ್ದಾರೆ. ಹೀಗೊಂದು ಉಕ್ತಿಯಿದೆ :–

पूर्वमेव मया ज्ञातं पूर्णामेतद्धि मेदसा।

अनुप्रविश्य विज्ञातं यावच्चर्म च दारु च ॥[62]

ಅಂದರೆ," ಇದರಲ್ಲಿ ಮಾಂಸವು ತುಂಬಿದೆಯೆಂದು ತಿಳಿದಿದ್ದೆ. ಆದರೆ ಪ್ರವೇಶಿಸಿ ನೋಡಿದಾಗ ಕೇವಲ

62. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ – 117, ಪು – 61,.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಚರ್ಮ ಹಾಗೂ ಮರದ ಕಡ್ಡಿಗಳಿದ್ದವು ಎಂದು ದಮನಕನು ದೃಷ್ಟಾಂತವೊಂದನ್ನು ಹೇಳಲು, ಪಿಂಗಳಕನು ಅದೇನೆಂದು ಕೇಳಿದನು. ಆಗ ದಮನಕನು **ಗೋಮಾಯು ದುಂದುಭಿ ಕಥೆ**ಯನ್ನು ಹೇಳಿದನು.

ಹಸಿವಿನಿಂದ  ಆಹಾರವನ್ನು ಹುಡುಕಿಕೊಂಡು ಗೋಮಾಯು ಎಂಬ ಒಂದು ಅಂಜುಬುರುಕ ನರಿ ಅಲೆಯುತ್ತಾ ಇರುವಾಗ ಎರಡು ಸೈನ್ಯಗಳ ಮಧ್ಯೆ ಯುದ್ಧವಾಗಿದ್ದ ಒಂದು ಪ್ರದೇಶವನ್ನು ತಲುಪಿತು. ಜೋರು ಗಾಳಿ ಬೀಸುತ್ತಿದ್ದರ ಪರಿಣಾಮ ಲತೆಗಳ ಕಾಂಡಗಳು ಅಲ್ಲಿದ್ದ ನಗಾರಿಗೆ ಬಡಿದಾಗ ಒಂದು ಶಬ್ದ ಬರುತ್ತಿದ್ದುದನ್ನು ಆ ನರಿಯು ಕೇಳಿಸಿಕೊಂಡು ಭಯಭೀತಿಯಿಂದ ಯೋಚಿಸಿತು. "ಅಯ್ಯೋ ನಾನು ಸತ್ತಂತೆಯೇ, ಈ ಶಬ್ದವನ್ನು ಮಾಡುತ್ತಿರುವ ಪ್ರಾಣಿಯ ದೃಷ್ಟಿಗೆ ಬೀಳುವುದರೊಳಗಾಗಿ ಇಲ್ಲಿಂದ ಜಾಗ ಖಾಲಿ ಮಾಡಿಬಿಡುವುದು ಒಳ್ಳೆಯದು " ಎಂದುಕೊಂಡಿತು. ಪುನಃ ಮತ್ತೊಂದು ತರಹ ಚಿಂತಿಸಿ, ಪೂರ್ವಜರು ನೆಲಸಿದ್ದ ಕಾಡನ್ನು ಒಮ್ಮೆಲೇ ಬಿಟ್ಟುಹೋಗುವುದು ಸರಿಯಲ್ಲ ಏಕೆಂದರೆ, ಭಯದ ಅಥವಾ ಸಂತೋಷದ ಸಂದರ್ಭದಲ್ಲಿ ಆತುರಪಡಬಾರದು. ಬದಲಾಗಿ ವಿಚಾರಮಾಡಿ ಯಾರು ಕೆಲಸ ಕೈಗೊಳ್ಳುವನೋ ಅವನು ದುಃಖವನ್ನು ಹೊಂದುವುದಿಲ್ಲ. ಆದ್ದರಿಂದ ಅದೇನು ಶಬ್ದವೆಂದು ತಿಳಿಯಲು ಅಪೇಕ್ಷಿಸಿತು. ಹೀಗೆ ವಿಚಾರಮಾಡಿ ಧೈರ್ಯದಿಂದ ಮೆಲ್ಲಗೆ ನಡೆಯುತ್ತಿದ್ದಾಗ ನಗಾರಿ (ದುಂದುಭಿ)ಯನ್ನು ಕಂಡಿತು. ಅದರ ಹತ್ತಿರ ಹೋಗಿ ಸರಿಯಾಗಿ ಪರಿಶೀಲಿಸಿ ಕುತೂಹಲದಿಂದ ತಾನೂ ಒಮ್ಮೆ ಅದಕ್ಕೆ ಹೊಡೆಯಿತು. ನಂತರ ಹರ್ಷದಿಂದ ಅದೊಂದು ರಕ್ತಮಾಂಸಗಳಿಂದ ತುಂಬಿರುವ ಪ್ರಾಣಿಯೆಂದು ತಿಳಿದು, ತನಗೆ ಭೂರಿಭೋಜನ ಪ್ರಾಪ್ತವಾಯಿತೆಂದು ಯೋಚಿಸಿತು. ನಗಾರಿಯ ದಪ್ಪ ಚರ್ಮವನ್ನು ಕಷ್ಟಪಟ್ಟು ಹೇಗೋ ಒಂದು ಕಡೆ ತೂತು ಮಾಡಿ ಒಳಹೊಕ್ಕಿತು. ಆದರೆ ಒಳಗೆ ರಕ್ತಮಾಂಸದ ಬದಲು ಕೇವಲ ಚರ್ಮ ಹಾಗೂ ಮರದ ಕಡ್ಡಿಗಳಿವೆಯೆಂದು ತಿಳಿಯಿತು. ಹೊರಗೆ ಬಂದು ತನ್ನನ್ನು ತಾನೇ ಹಾಸ್ಯಮಾಡಿಕೊಂಡಿತು.

ಕಥೆಯನ್ನು ಮುಗಿಸಿದ ದಮನಕ "ಆದ್ದರಿಂದಲೇ ಕೇವಲ ಶಬ್ದಕ್ಕೆ ಹೆದರಬಾರದೆಂದು ನಾನು ಹೇಳುವುದು "ಎಂದನು. ಆಗ ಪಿಂಗಲಕನು ಹೇಳುತ್ತಾನೆ– "ನೋಡು, ನನ್ನ ಪರಿವಾರದವರೆಲ್ಲರೂ ಭಯದಿಂದ ವ್ಯಾಕುಲಗೊಂಡು ಓಡಿಹೋಗಲು ಯೋಚಿಸುತ್ತಿರುವರು. ಹೀಗಿದ್ದಲ್ಲಿ  ನಾನು ಹೇಗೆ ಧೈರ್ಯವನ್ನು ತಾಳಲಿ? ಇದನ್ನು ಕೇಳಿದ ದಮಕನು ಪಿಂಗಲಕನಿಗೆ ಧೈರ್ಯ ತುಂಬಿ, ಶಬ್ದದ ಕಾರಣವನ್ನ ತಾನೇ ಸ್ವತಃ ಹೋಗಿ ತಿಳಿದು ಬರುವುದಾಗಿ ಹೇಳಿ ಹೊರಟನು. ಪಿಂಗಲಕನು ನಿನ್ನ ದಾರಿಯು ಮಂಗಳಕರವಾಗಲಿ ಎಂದು ಹರಸಲು, ದಮನಕನು ಅವನಿಗೆ ನಮಸ್ಕರಿಸಿ ಸಂಜೀವಕನು ಮಾಡಿದ ಶಬ್ದವನ್ನು ಅನುಸರಿಸುತ್ತಾ ಹೊರಟನು.[63]

---

63. **ಭರತ.ಬಿ ರಾವ್**, ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ. – ಪು–28–32, 2018. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು–560004

ನಂತರದಲ್ಲಿ ಮಂತ್ರಿಪದವಿಯನ್ನು ಪಡೆಯಲು ಪಿಂಗಳಕನೊಂದಿಗೆ ದಮನಕನ ಒಪ್ಪಂದವಾಗುತ್ತದೆ. ದಮನಕನಿಂದ ಪಿಂಗಲಕ– ಸಂಜೀವಕನ ಮಧ್ಯೆ ಮೈತ್ರಿ ಸ್ಥಾಪನೆಯಾಗುತ್ತದೆ. ಹಾಗೆಯೇ ಅನೇಕ ರಾಜಧರ್ಮ ಮತ್ತು ರಾಜನೀತಿಗೆ ಸಂಬಂಧಿಸಿದಂತೆ ಒಳ್ಳೆಯ ತಿಳುವಳಿಕೆ ವಿಚಾರಗಳನ್ನು ದಮನಕ ಪಿಂಗಲಕನ ಸಂಭಾಷಣೆ ಮೂಲಕ ಹೇಳುತ್ತಾ ಬರುತ್ತಾರೆ. ಇಲ್ಲಿ ವಿಷ್ಣುಶರ್ಮರು ರಾಜನೀತಿ– ಶಿಕ್ಷಣವನ್ನು ಬಹಳ ಅಚ್ಚುಕಟ್ಟಾಗಿ ಕಥೆಯೊಳಗೆ ಒಂದು ವಿಚಾರ ಗೋಷ್ಠಿಯಂತೆ ಸಂಯೋಜಿಸಿ ರಾಜಕುಮಾರಿಗೆ ಬೋಧಿಸಿದ್ದಾರೆ. ಇಲ್ಲಿ ಹೀಗೊಂದು ಉಕ್ತಿಯಿದೆ:–

तथा च यो न पूजयते गर्वादुत्तमाधममध्यमान् ।

भूपसंमानमान्योऽपि भ्रश्यते दन्तिलो यथा ॥[64]

ಅಂದರೆ, " ಯಾರು ಗರ್ವದಿಂದ ರಾಜನ ಆಶ್ರಯದಲ್ಲಿರುವ ಉತ್ತಮ, ಮಧ್ಯಮ ಹಾಗೂ ಅಧಮ ವ್ಯಕ್ತಿಗಳನ್ನು ಗೌರವಿಸುವುದಿಲ್ಲವೋ, ಆತನು ದಂತಿಲನಂತೆ ತನ್ನ ಪದವಿಯನ್ನು ಕಳೆದುಕೊಳ್ಳುವನು. ಸಂಜೀವಕನು ಅದನ್ನು ಅರ್ಥೈಸಿ ಹೇಳಬೇಕೆಂದು ಕೇಳಲು ದಮನಕನು **ದಂತಿಲ–ಗೋರಂಭರ ಕಥೆ**ಯನ್ನು ಹೇಳಿದನು.

ಇದನ್ನೆಲ್ಲಾ ಕೇಳುತ್ತಿದ್ದ ರಾಜಕುಮಾರನೊಬ್ಬ ಗುರುಗಳನ್ನು ಹೀಗೆ ಕೇಳುತ್ತಾನೆ– "ಗುರುಗಳೇ, ದಂತಿಲನ ಕಥೆ ಏನು? ಮಂತ್ರಿಯಾಗಿದ್ದ ನರಿ ಅದನ್ನೇಕೆ ಹೇಳಿತು? ಗುರುಗಳು– ಅದಾ? ನೋಡಿ "ರಾಜಕುವರರೇ, ರಾಜನೆಂದರೆ ಅದೊಂದು ದೊಡ್ಡ ಅಧಿಕಾರ, ಇದರಿಂದಾಗಿಯೇ ಗರ್ವ. ಇದು ಒಮ್ಮೆ ದೊರೆತರೆ ಮತ್ತೆ ಅದರಿಂದ ತಪ್ಪಿಸಿಕೊಳ್ಳಲು ಆಗದು. ಅಂತಹ ಕಾಲದಲ್ಲಿ ರಾಜನಿಗೆ ಎಲ್ಲರ ಮೇಲೂ ಅನುಮಾನ ಆರಂಭವಾಗುತ್ತದೆ. ಯಾರು ತನ್ನನ್ನು ಕೊಲ್ಲುವರೋ, ಕೊಂದು ಅಧಿಕಾರ ಹೊಂದುವರೋ ಎಂಬ ಭಯ; ತನ್ನವರು ಯಾರಾದರೂ ಶತ್ರುಗಳೊಂದಿಗೆ ಕೈ ಜೋಡಿಸುವರೋ ಎಂದು ಎಲ್ಲರನ್ನೂ ಸಂಶಯದಿಂದ ಕಾಣುತ್ತಾನೆ. ತನ್ನ ಆಪ್ತರ ಮೇಲೂ ಅಪನಂಬಿಕೆ. ಅದಕ್ಕೆ ವರ್ಧಮಾನಪುರದ ರಾಜನೇ ಸಾಕ್ಷಿ. ರಾಜಕುಮಾರರು ಬಹಳ ಕುತೂಹಲದಿಂದ "ಅಲ್ಲಿ ಏನು ನಡೆಯಿತು, ಆಚಾರ್ಯ? ರಾಜಕುಮಾರರಿಗೆ ಕಥೆ ಕೇಳುವುದರಲ್ಲಿ ಆಸಕ್ತಿ ಹೆಚ್ಚಿತೆಂದರೆ ಇನ್ನು ನನ್ನ ಕೆಲಸ ಪೂರ್ಣವಾದಂತೆ. ಈ ಕಥೆಗಳ ಮೂಲಕವೇ ರಾಜನೀತಿಯನ್ನು ಬೋಧಿಸುವುದು ಸುಲಭವೆಂದುಕೊಂಡು ವಿಷ್ಣುಶರ್ಮರು ಮುಂದುವರೆಸುತ್ತಾರೆ.

---

64. **ಸುಧಾಕರ್ ಮಾಲವೀಯ,** ಸಂಪಾದಕರು, ಅನುವಾದಕರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ – 141, ಪು – 76,,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಮಿತ್ರಭೇದದಲ್ಲಿ **ಬೆಣೆಯನ್ನು ಕಿತ್ತ ಮಂಗನ ಪರಿಸ್ಥಿತಿ – ಆಶಾಢಭೂತಿ – ನರಿ – ದೂತಿಯಕಥೆ**ಯಲ್ಲಿನ ನೀತಿ – ಬುದ್ಧಿವಂತನು ಆಪತ್ಕಾಲದಲ್ಲಿ ಪ್ರತಿಕೂಲ ಪರಿಸ್ಥಿತಿ ಇದ್ದರೂ ಕೂಡ ಬುದ್ಧಿಯ ನೆರವನ್ನು ಪಡೆಯಲೇಬೇಕು, ಪ್ರಯತ್ನವನ್ನು ಬಿಡಬಾರದು. – ಅಕಸ್ಮಾತ್ ಘುಣಾಕ್ಷರ ನ್ಯಾಯದಿಂದಾದರೂ ಬುದ್ಧಿಬಲದಿಂದ ಕಾರ್ಯಸಿದ್ಧಿ ಆಗಬಹುದು ಎಂಬ ತಿಳುವಳಿಕೆಯನ್ನು ಮೂಡಿಸಲಾಗಿದೆ. **ಕಾಗೆ – ಚಿನ್ನದ ಹಾರ – ಕೃಷ್ಣಸರ್ಪದ ಕಥೆ**ಯಲ್ಲಿ ಕಾಗೆಯು ಚಿನ್ನದ ಹಾರವನ್ನು ಕದ್ದ ಕಾರಣದಿಂದ ಕೃಷ್ಣಸರ್ಪವು ಹೇಗೆ ನಾಶವಾಯಿತೋ ಹಾಗೆ ಪರಾಕ್ರಮದಿಂದ ಯಾವುದು ಸಾಧ್ಯವಿಲ್ಲವೋ, ಅದು ಉಪಾಯದಿಂದ ಸಾಧ್ಯ.[65]

उपायेन जयो यादृग् रिपोस्तादृङ् न हेतिभिः ।

उपायज्ञोऽल्पकायोऽपि न शूरैः परिभूयते ॥[66]

ನರಿ ಹೇಳುತ್ತದೆ:– "ಈ ವಿಷಯದಲ್ಲಿ ಸ್ವಲ್ಪವೂ ದುಃಖಿಸುವುದು ತರವಲ್ಲ. ಉಪಾಯದಿಂದಲ್ಲದೇ ಆ ಲೋಭಿಯನ್ನು ಕೊಲ್ಲಲು ಸಾಧ್ಯವಿಲ್ಲ. ಉಪಾಯದಿಂದ ಹೇಗೆ ಶತ್ರುಗಳನ್ನು ಗೆಲ್ಲಬಹುದೋ ಆ ರೀತಿ ಆಯುಧಗಳಿಂದ ಕೂಡ ಗೆಲ್ಲಲು ಸಾಧ್ಯವಿಲ್ಲ.

ಇಂತಹ ಅನೇಕ ವಿಚಾರಗಳನ್ನು ಸಣ್ಣ ಸಣ್ಣ ಕಥೆಗಳ ಮೂಲಕ ದುರ್ವಿನೀತ ರಾಜಕುಮಾರಿಗೆ ಬೋಧಿಸುತ್ತಾ, ಅವರುಗಳ ಆಲೋಚನೆ, ವಿವೇಚನೆ, ವಿಮರ್ಶೆ, ತೀರ್ಮಾನ ಮುಂತಾದ ಮನಶ್ಶಕ್ತಿಗಳು ಕೆಲಸ ಮಾಡಲು ನೆರವಾಗುವಂತೆ ಪ್ರಶ್ನೆಗಳನ್ನು ಕೇಳಿ ಉತ್ತರ ಹೇಳಿಸುತ್ತಾ, ವಿಷ್ಣುಶರ್ಮರು ಮುಂದು ಮುಂದಿನ ಅಂಥಹ ಅರ್ಥಪೂರ್ಣ ಕಥೆಗಳ ನಿರೂಪಣೆಯನ್ನು ಮುಂದುವರಿಸಿ ಕಲಿವಿನೆಡೆಗೆ, ಉತ್ತಮ ವ್ಯಕ್ತಿತ್ವ ನಿರ್ಮಾಣಕ್ಕೆ ಸಮಯೋಚಿತವಾಗಿ ಸನ್ನಿವೇಶಗಳನ್ನು ಒದಗಿಸಿಕೊಟ್ಟಿರುತ್ತಾರೆ. ಮತ್ತೊಂದು ಉದಾಹರಣೆಯೆಂದರೆ:– ಮೂರು ಮೀನಿನ ಕಥೆಯಲ್ಲಿ ಪ್ರತ್ಯುತ್ಪನ್ನಮತಿ ಮೀನು ಹೀಗೆ ಹೇಳುತ್ತದೆ.

यस्यास्ति सर्वत्र गतिः स कस्मात् स्वदेशरागेण हि याति नाशम् ।

तातस्य कूपोऽयमिति ब्रुवाणाः क्षारं जलं कापुरुषाः पिबन्ति ॥[67]

ಯಾರಿಗೆ ಎಲ್ಲ ಕಡೆಯೂ ಅವಕಾಶವಿರುವುದೋ ಅಂಥವನು ಏಕೆ ತನ್ನ ದೇಶದ ಮೇಲಿನ ಆಸೆಯ ಕಾರಣ ನಾಶ ಹೊಂದುತ್ತಾನೆ? ಕೈಲಾಗದವರೀಗ 'ತಂದೆ ತೋಡಿದ ಬಾವಿ' ಎಂದು ಹೇಳುತ್ತಾ

65. **ಸುಧಾಕರ್ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಭೂಮಿಕಾ – ಪು– 13–17. ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
66. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–231,ಪು–148,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
67. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–351,ಪು–227,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಉಪ್ಪು ನೀರುನ್ನು ಕುಡಿಯುತ್ತಾರೆ. ಅಂದರೆ ಯಾರು ಎಲ್ಲಾದರೂ ಬದುಕಬಲ್ಲರೋ ಅವರು ಸ್ವದೇಶದ ಮೋಹದಿಂದ ನಾಶಹೊಂದುವುದಿಲ್ಲ. ಹೇಡಿಗಳು ಮಾತ್ರ ಅಜ್ಜನ ಬಾವಿಯೆಂದು ಹೇಳುತ್ತಾ ಉಪ್ಪುನೀರನ್ನೇ ಕುಡಿಯುತ್ತಿರುತ್ತಾರೆ.

ಸಹವಾಸ ದೋಷದಿಂದ ಏನೆಲ್ಲ ಅನಾಹುತಗಳಾಗುತ್ತವೆ ಎಂಬುದನ್ನು ಶುಭಾಶುಭಗಳನ್ನು ಉಲಿಯುವ ಎರಡು ಗಿಳಿ ಸಹೋದರಿಯರ ಕಥೆಯಲ್ಲಿ ಬರುವ ವಿಚಾರಗಳನ್ನು ರಾಜಕುಮಾರರಿಗೆ ಮನದಟ್ಟು ಮಾಡಿ, ಅವರುಗಳು ಸಹವಾಸ ದೋಷದಿಂದ ಹೇಗೆ ಉದ್ಧಟರಾಗಿ ಸ್ವೇಚ್ಛಾ ಪ್ರವೃತ್ತಿಯಿಂದ ವ್ಯರ್ಥವಾಗಿ ಕಾಲಹರಣ ಮಾಡುತ್ತಿದ್ದರೆಂಬ ಬಗ್ಗೆ ಅವರೇ ವಿಮರ್ಶಿಸಿಕೊಳ್ಳುವಂತೆ ಪ್ರೇರೇಪಿಸಿ, ಜಾಗೃತಿ ಮೂಡಿಸಿದರು. ಅಪಾತ್ರರಲ್ಲಿ ಗೆಳೆತನ ಸಲ್ಲದು ಎಂಬುದನ್ನು–ಬಡಾಯಿ ಗೂಬೆಯ ಸಹವಾಸದಿಂದ ಹತನಾದ ರಾಜಹಂಸದ ಕಥೆಯಿಂದ ಸ್ಪಷ್ಟಪಡಿಸಿದ್ದಾರೆ. ಹೀಗೆ ವಿಷ್ಣುಶರ್ಮರು ಬಹಳ ಚಮತ್ಕಾರದಿಂದ, ರಾಜಕುಮಾರರ ದುರ್ವರ್ತನೆಗಳನ್ನು ಮಾರ್ಪಾಟು ಗೊಳಿಸುತ್ತಾ, ಅನುಚಿತ ವರ್ತನೆಗಳನ್ನು ತಳ್ಳಿಹಾಕಿ ಉಚಿತವಾದುದನ್ನು ಆರಿಸಿಕೊಳ್ಳುವಂತೆ ಕಲಿವಿನ ರೂಢಿ ಮಾಡಿಸಿದರು. ಪಂಚತಂತ್ರದ ಮೊದಲನೆಯ ತಂತ್ರ "ಮಿತ್ರಭೇದ"ದಲ್ಲಿ ಉತ್ತಮ ನೀತಿಬೋಧನೆ ಮಾಡುತ್ತಾ, ವಿಷ್ಣುಶರ್ಮರು ರಾಜಪುತ್ರರಿಗೆ ನೈಜ ಜೀವನದ ಸನ್ನಿವೇಶಗಳಿಗೆ ಉಪಯುಕ್ತವಾಗುವಂತಹ ಕಲಿಕೆಯ ಅನುಭವಗಳನ್ನು ಒದಗಿಸಿಕೊಟ್ಟಿದ್ದಾರೆ. ಇಲ್ಲಿ ಪಡೆದ ಅನುಭವಗಳನ್ನು ಮುಂದೆ ಅವರಿಗೆ ಹೊಸ ಸನ್ನಿವೇಶಗಳಲ್ಲಿ ಕಾರ್ಯರೂಪಕ್ಕೆ ಬರುವಂತೆ, ಅಂದರೆ ಕಲಿಕೆಯ ವರ್ಗಾವಣೆಯಾಗುವ ಮುಂದಾಲೋಚನೆಯಿಂದಲೇ ತರಬೇತಿ ನೀಡಿದ್ದಾರೆ. ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು – ಸ್ವಂತ ಬುದ್ಧಿ ಒಂದಿರಬೇಕು – ಬುದ್ಧಿ ಬಲವೇ ಮೇಲು – ಅಪಾತ್ರರಲ್ಲಿ ಗೆಳೆತನ ಸಲ್ಲದು – ಕಾರ್ಯಸಾಧನೆಗೆ ಸಮರ್ಥರ ನೆರವು, ಉಪಾಯದಿಂದ ಅಪಾಯವನ್ನು ತಪ್ಪಿಸಿಕೊಳ್ಳುವುದು ಮುಂತಾದ ಮಿತ್ರಭೇದ ಸೂತ್ರದ ಉಪ ಕಥೆಗಳಲ್ಲಿ, ಮುಂದೆ ರಾಜನಾಗುವವನಿಗೆ ಬಹಳ ಮುಖ್ಯವಾಗಿ ಇರಬೇಕಾದ ಗುಣಲಕ್ಷಣಗಳನ್ನು ಅರ್ಥಪೂರ್ಣ ದೃಷ್ಟಾಂತಗಳಲ್ಲಿ ತಿಳಿಸಲಾಗಿದೆ.[68] ಇವುಗಳಿಂದ ಅಥವಾ ಈ ಸನ್ನಿವೇಶಗಳಿಂದ ಪಡೆದ ಜ್ಞಾನವು ಅಥವಾ ಅನುಭವವು ಧನಾತ್ಮಕವಾಗಿ ವರ್ಗಾವಣೆಯಾಗುತ್ತದೆ. ಇದೇ ನಾವು ಶೈಕ್ಷಣಿಕ ಮನೋವಿಜ್ಞಾನದಲ್ಲಿ ಕಾಣುವ "ಕಲಿಕೆಯ ವರ್ಗಾವಣೆ."

सहृदामुपकारकारणाद् द्विषतामप्यपकारकारणात् ।

नृपसंश्रय इष्यते बुधैर्जठरं को न बिभति केवलम् ।।[69]

68. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಭೂಮಿಕಾ–ಪು –14–15.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

69. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–22, ಪು–24,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಇಲ್ಲಿ ಮಿತ್ರರಿಗೆ ಉಪಕಾರವನ್ನೂ ಶತ್ರುಗಳಿಗೆ ಅಪಕಾರವನ್ನೂ ಮಾಡುವುದಕ್ಕಾಗಿ ಲೋಕದಲ್ಲಿಯ ಜನರು ಅರಸರನ್ನು ಸೇವಿಸುತ್ತಾರೆಯೇ ಹೊರತು ತಮ್ಮ ಹೊಟ್ಟೆಗಳ ಹೊರೆವುದಕ್ಕಲ್ಲ. ಅದಕ್ಕೋಸ್ಕರ ಸೇವಿಸುವುದಕ್ಕಿಂತ ಸಾಯುವುದೇ ಮೇಲು. ಯಾರ ಬದುಕಿನಿಂದ ಹಲವರು ಸುಖವಾಗಿರುತ್ತಾರೋ ಅಂತಹವನ ಬದುಕು ಸಾರ್ಥಕ. ಕೇವಲ ಹೊಟ್ಟೆಗಾಗಿ ಬದುಕುವುದಾದರೆ, ಮೂಗಿನಿಂದ ಚುಚ್ಚಿಕೊಂಡು ತಿನ್ನುವ ಕಾಗೆ ತನ್ನ ಹೊಟ್ಟೆ ತುಂಬಿಕೊಳ್ಳುವುದಿಲ್ಲವೇ? ಯಾವನು ಅಲ್ಪವಾದರೂ ಸಹ ವಿಜ್ಞಾನ, ಶೌರ್ಯ, ಐಶ್ವರ್ಯಾದಿ ಗುಣಗಳಿಂದ ಕೂಡಿ ಬದುಕುವನೋ ಅವನ ಬದುಕೇ ನಿಜವಾದ ಬದುಕು ಎಂದು ಪ್ರಾಜ್ಞರು ನುಡಿದಿದ್ದಾರೆ.

जीविते यस्य जीवन्ति विप्रा मित्राणि बान्धवाः।

सफलं जीवितं तस्य आत्मार्थं को न जीवति ॥[70]

ಯಾವ ಮನುಷ್ಯನು ತನ್ನಲ್ಲಿ, ಇತರರಲ್ಲಿ, ಬಂಧುವರ್ಗದಲ್ಲಿ, ದೀನರಲ್ಲಿ, ಸೇವಕವರ್ಗದಲ್ಲಿ ದಯೆಯಿಂದ ಕೂಡಿರುವುದಿಲ್ಲವೋ, ಆತನ ಬದುಕು ನಿಷ್ಪ್ರಯೋಜಕ, ನಿರರ್ಥಕ. ಇಂಥಹವನು ಬದುಕಿ ಫಲವಾದರೂ ಏನಿದೆ? ಕಾಗೆಯು ಕೂಡ ಬಲಿರೂಪದಲ್ಲಿ ಹಾಕಿದ ಆಹಾರವನ್ನು ತಿಂದು ದೀರ್ಘ ಕಾಲ ಬದುಕುತ್ತದೆ. ವಿಷ್ಣುಶರ್ಮರು ಬದುಕಿನ ನೀತಿಪಾಠವನ್ನು ಎಷ್ಟು ಸರಳವಾಗಿ, ಉತ್ತಮ ಉದಾಹರಣೆಯೊಂದಿಗೆ ಅರ್ಥಪೂರ್ಣ ಶಿಕ್ಷಣ ನೀಡಿದ್ದಾರೆಂಬುದು ಗಮನಾರ್ಹ ನಿದರ್ಶನವಾಗಿದೆ. ಜೊತೆಯಲ್ಲಿ ರಾಜನೀತಿ ಶಿಕ್ಷಣವನ್ನೂ ಸೂಕ್ತ ಸನ್ನಿವೇಶಗಳನ್ನು ಬಳಸಿಕೊಂಡು ಬೋಧನೆ ಮಾಡಿದ್ದಾರೆ:–1

स्थानेष्वेव नियोज्यन्ते भृत्याश्चाभरणानि च ।

न हि चूडामणिः पादे प्रभवामीति बध्यते ॥[71]

ಅಂದರೆ ಸೇವಕರನ್ನೂ, ಆಭರಣಗಳನ್ನೂ ಅವರವರಿಗೆ ತಕ್ಕಜಾಗದಲ್ಲಿ ನಿಯೋಜಿಸಬೇಕು. ನಾನು ರಾಜ, ಸಾಮರ್ಥ್ಯವಿದೆ ಎಂದುಕೊಂಡು ತಲೆಯಲ್ಲಿರಬೇಕಾದ ಚೂಡಾಮಣಿಯನ್ನು ಕಾಲಿನಲ್ಲಿ ಧರಿಸಲಾಗುತ್ತದೆಯೇ?

---

70. **ಹಿತೋಪದೇಶ**. ನಾರಾಯಣ ಪಂಡಿತ ,ಸಹೃದ್ಭೇದ–ಶ್ಲೋ–11,

71. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದ– ಶ್ಲೋ–78, ಪು–46,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಪಂಚತಂತ್ರ ಪಠ್ಯವನ್ನು ಹೇಗೆ ಯೋಜಿಸಿದೆಯೆಂದರೆ, ಕೆಲವು ಪ್ರಮುಖ ತೋರ್ಗಂಬಗಳನ್ನು ಹೊಂದಿಸಿ ವಿಷಯಗಳನ್ನು ಮನದಟ್ಟು ಮಾಡುವ ವ್ಯವಸ್ಥೆಯಿದೆ. ಉದಾಹರಣೆಗೆ ಮಿತ್ರಭೇದದ ಕಥೆಯಲ್ಲಿ ಬರುವ ಎತ್ತು ಸಂಜೀವಕನನ್ನು ಸಕಲವಿದ್ಯಾಸಂಪನ್ನನಂತೆ, ಒಬ್ಬ ಒಳ್ಳೆಯ ಬೋಧಕನಂತೆ ಚಿತ್ರಿಸಲಾಗಿದೆ. ಎರಡನೆಯ ತಂತ್ರ ಮಿತ್ತಸಂಪ್ರಾಪ್ತಿ ಚೌಕಟ್ಟಿನ ಕಥೆಗಳಲ್ಲಿ ಬರುವ ನಾಲ್ವರು ಮಿತ್ರರು – ಲಘುಪತನಕ, ಹಿರಣ್ಯಕ, ಚಿತ್ರಗ್ರೀವ, ಮಂಥರಕ ಇವರುಗಳು ಕಲಿಕೆಯ ನಿಧಿಯೊಡನೆ ವಿದ್ವಾಂಸರುಗಳಿದ್ದಂತೆ ಪ್ರತಿಬಿಂಬಿಸಲಾಗಿದೆ.[72] ಸರಿಯಾದ ಕಲಿಕೆಯನ್ನು ಪ್ರಾಯೋಗಿಕ ಪ್ರಜ್ಞೆಯಿಂದ ನಡೆಸುವುದು, ಅದೂ ಅಲ್ಲದೆ ಜೀವನಕ್ಕೆ ಸರಿಯಾದ ವರ್ತನೆಯನ್ನು ಸಂಯೋಜಿಸಲಾಗಿದೆ. ನಾಲ್ವರೂ ಸ್ನೇಹಿತರು ಪ್ರತ್ಯೇಕ ಜೀವನವನ್ನು ನಡೆಸುವರು. ಆದರೆ ಪ್ರತಿನಿತ್ಯ ಸರೋವರದ ಬದಿಯಿರುವ ನೆರಳನ್ನು ಕೊಡುವ ಒಂದು ವಿಶಾಲ ಆಲದ ಮರದ ಆಶ್ರಯದಲ್ಲಿ ಅನೇಕ ವಿಚಾರಗಳನ್ನು ಚರ್ಚಿಸಲು ಸೇರುತ್ತಿದ್ದರು. ಕಾನೂನು, ಅರ್ಥಶಾಸ್ತ್ರ, ರಾಜಕೀಯ ಮತ್ತು ಇತರ ಸಂಬಂಧಿತ ವಿಷಯಗಳು(ಧರ್ಮ, ಅರ್ಥ, ಇತ್ಯಾದಿ) ಚರ್ಚಿಸಲ್ಪಡುತ್ತಿದ್ದವು. ಅಲ್ಲೊಂದು ಸಮುದಾಯ ಆದರ್ಶಪ್ರಾಯವಾಗಿ ಅರಣ್ಯ ಕುಟೀರಗಳಲ್ಲಿ ಪ್ರಾಚೀನ ಋಷಿಗಳು, ಕೆಲವು ಕಾಡಿನ ನಿವಾಸಿಗಳು ಮತ್ತು ಸರೋವರ ತೀಕ್ಷ್ಣಬುದ್ಧಿ ಹೊಂದಿದ್ದು ಅಚ್ಚುಕಟ್ಟಾಗಿ ನುಡಿಗಟ್ಟು ಮಾಡಬಹುದಾಗಿತ್ತು. ಅವರೆಷ್ಟು ಸುಶಿಕ್ಷಿತರಾಗಿದ್ದರೆಂದರೆ, ವಿವಿಧ ವಿಷಯಗಳ ಬಗ್ಗೆ ಸಂವಾದ ನಡೆಸುವಷ್ಟು ಸಮರ್ಥರಿದ್ದರು. ಮಾನವ ಜಗತ್ತಿನ ಅನೇಕ ತಜ್ಞರು ತಮ್ಮ ಅಲ್ಪ ಪಾಂಡಿತ್ಯವನ್ನೇ ತತ್ಪರತೆಯಿಂದ ಬೀಗುತ್ತಿದ್ದವರೂ ಅಸೂಯೆಪಡುವಂತೆ, ಇತರ ಕ್ಷೇತ್ರಗಳನ್ನು ನೋಡದಂತೆ ಪಠ್ಯದ ಚಿತ್ರಣ ಕಂಡುಬರುತ್ತದೆ. ಇದರ ಮುಖ್ಯ ಉದ್ದೇಶವೇನೆಂದರೆ, ನೈಸರ್ಗಿಕ ಜಗತ್ತನ್ನು ಮಾನವ ಜಗತ್ತಿಗೆ ಸ್ಥಳಾಂತರಿಸಿ ಒಂದು ವಿಶೇಷ ಆಕರ್ಷಣೆ ಹಾಗೂ ಆಸಕ್ತಿಯನ್ನು ಮೂಡಿಸಿ ಶಿಕ್ಷಣ ಅಥವಾ ಕಲಿಕೆಯನ್ನು ಪರಿಣಾಮಕಾರಿಯಾಗಿ ಒದಗಿಸುವುದು.[73] ಇದು ವಿಷ್ಣುಶರ್ಮರು ಯೋಜಿಸಿರುವ ಒಂದು ವಿಶಿಷ್ಟ ಬೋಧನಾ ವಿಧಾನವಾಗಿರುತ್ತದೆ.



**72. Chandra Rajan,** VISNU SARMA,(Eng, translation), Introduction-pp-xxxix,1993. Penguin Random House India Pvt. Ltd., 7th Floor, Infantry Tower, C, DLF Cyber City, Gurgaon-122002, Haryana, India

**73. Chandra Rajan,** VISNU SARMA The Panchatantra (English),(1993). Introduction- PP-39-40. Penguin Random House India Pvt.Ltd. 7thFloor, Infantry Tower C,DLF Cyber City, Gurgaon-12202.Haryana, India.

# ಅಧ್ಯಾಯ – 4

## ಮನಶ್ಶಕ್ತಿಯ ವ್ಯಾಪಕ ಸ್ವರೂಪ – ಕಲಿಕೆ ಮತ್ತು ವ್ಯಕ್ತಿತ್ವದ ಮೇಲೆ ಅದರ ಪ್ರಭಾವ

## ಅಧ್ಯಾಯ:– 4–1. ಉನ್ನತ ಮಟ್ಟದ ಮನೋವ್ಯಾಪಾರಗಳು

ಮಾನವನ ಮನಶ್ಶಕ್ತಿ ಕಣ್ಣಿಗೆ ಕಾಣದಿದ್ದರೂ, ಅನೇಕ ರೂಪದಲ್ಲಿ ಅವನ ವರ್ತನೆಯ ಮೇಲೆ ಪ್ರಭಾವ ಬೀರುತ್ತಿರುತ್ತದೆ. ಕಲ್ಪನೆ, ನೆನಪು, ಆಲೋಚನೆ ಇವುಗಳನ್ನು ಉನ್ನತ ಮನಶ್ಶಕ್ತಿಗಳು ಎಂದು ಕರೆಯುತ್ತಾರೆ. ಇವುಗಳು ಇನ್ನಿತರ ವ್ಯಾಪಾರಗಳ ಮೇಲೂ ತಮ್ಮ ಪ್ರಭಾವ ಬೀರುತ್ತವೆ. ನಮ್ಮ ದೃಷ್ಟಿ ಧ್ಯೇಯಗಳು, ಆರ್ಜಿತ ಆಸಕ್ತಿಗಳು, ಮನೋಭಾವಗಳು, ಸಂವೇದನೆಯ ಸ್ವರೂಪ – ಈ ಎಲ್ಲ ರೀತಿಯ ಮನೋವ್ಯಾಪಾರಗಳೂ ಉನ್ನತ ಮನಶ್ಶಕ್ತಿಯಿಂದ ಪ್ರಚೋದಿತವಾಗುತ್ತವೆ. ಅದೇ ರೀತಿ ನಮ್ಮ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದ ನಡೆನುಡಿಗಳು, ಅಭ್ಯಾಸಗಳು, ಕೌಶಲ್ಯಗಳು, ಗುಣಶೀಲಗಳು – ಈ ಎಲ್ಲ ವರ್ತನೆಗಳಲ್ಲೂ ಇವುಗಳ ಪ್ರಭಾವವನ್ನು ಕಾಣಬಹುದು. ವ್ಯಕ್ತಿ ಸಮಾಜ ಜೀವನದಲ್ಲಿ, ರಾಷ್ಟ್ರ ಮತ್ತು ಮಾನವ ಬಾಂಧವ್ಯದಲ್ಲಿ ವಹಿಸುವ ಪಾತ್ರವೂ ಈ ಉನ್ನತ ಮನಶ್ಶಕ್ತಿಗಳ ಪ್ರಭಾವದಿಂದಲೇ ರೂಪುಗೊಳ್ಳುವುದು.[1]

सुजीर्णमन्नं, सुविचक्षणःसुतः

सुशासिता स्त्री नृपतिः सुसेवितः।

सुचिन्त्यचोक्तं सुविचार्य यत्कृतं

सुदीर्घकालेऽपि न हि याति विक्रियाम् ॥[2]

ಅಂದರೆ "ಚೆನ್ನಾಗಿ ಜೀರ್ಣವಾದ ಆಹಾರ, ಒಳ್ಳೆಯ ಬುದ್ಧಿವಂತ ಮಗ, ಚೆನ್ನಾಗಿ ತಿದ್ದಿದ ಹೆಣ್ಣು, ಸರಿಯಾದ ರೀತಿಯಲ್ಲಿ ಸೇವಿಸಿದ ರಾಜ, ಚೆನ್ನಾಗಿ ಯೋಚಿಸಿ ನುಡಿದ ಮಾತು, ವಿಚಾರಿಸಿ ಮಾಡಿದ ಕಾರ್ಯ, ಇವು ಎಂದೆಂದೂ ಕೆಟ್ಟ ಪರಿಣಾಮ ಬೀರಲಾರವು. ವ್ಯಕ್ತಿಯ ಶೈಕ್ಷಣಿಕ ಬೆಳವಣಿಗೆಯ ದೃಷ್ಟಿಯಿಂದ ಅವುಗಳು ಅತ್ಯಂತ ಪರಿಣಾಮಕಾರಿಯೆನಿಸುವ ಮನೋವ್ಯಾಪಾರಗಳು.

ಒಂದು ವ್ಯಕ್ತಿಯ ಮನಶ್ಶಕ್ತಿಯನ್ನು ಪತ್ತೆಹಚ್ಚುವುದು, ಅವನ ಜ್ಞಾಪಕಶಕ್ತಿಯಿಂದ, ಕಲ್ಪನೆಯಿಂದ ಮತ್ತು ಆಲೋಚನೆ ವಿವೇಚನೆಗಳಿಂದ. ಈ ದೃಷ್ಟಿ ಆಧುನಿಕ ಸಂಶೋಧನೆಗಳ ಬೆಂಬಲವನ್ನು ಗಳಿಸಿದೆ. ಒಬ್ಬನ ಪ್ರತಿಭೆಯನ್ನು ಅಳೆಯುವಾಗ ಈ ಮೂರನ್ನೂ ಪರಿಗಣಿಸುವುದು ಬಹಳ ಮುಖ್ಯ ಎಂಬುದು ಸ್ಥಿರಪಟ್ಟಿದೆ. ಈ ಎಲ್ಲ ಕಾರಣಗಳಿಂದ ಇವು ಮೂರೂ ಉನ್ನತ ಮಟ್ಟದ ಮನೋವ್ಯಾಪಾರಗಳೆಂದು ಪರಿಗಣಿತವಾಗಿವೆ.[3]

---

1. **ವೀರಪ್ಪ. ಎನ್.ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–13, ಪು–324.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
2. **ನಾರಾಯಣ ಪಂಡಿತರ ಹಿತೋಪದೇಶ,** ಮಿತ್ರಲಾಭ–22
3. **ವೀರಪ್ಪ. ಎನ್.ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–13, ಪು–324,325.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

ಶಿಕ್ಷಣ ಕೇವಲ ಮನಶ್ಶಕ್ತಿಯ ಬೆಳವಣಿಗೆಗೆ ಮಾತ್ರವಲ್ಲವೆಂಬುದನ್ನು ಅಲ್ಲಗಳೆಯುವಂತಿಲ್ಲ. ಆದರೂ ಅವನ ಸಾಮಾಜಿಕ, ನೈತಿಕ ಮತ್ತು ಸಂವೇದನಾ ಜೀವನದ ಮೇಲೆ ಆ ಮನಶ್ಶಕ್ತಿ ಬಹು ಮುಖ್ಯ ಪಾತ್ರ ವಹಿಸುತ್ತದೆ. ಈ ಕಾರಣದಿಂದಲೇ ಎಲ್ಲ ಕಾಲದ ಶಿಕ್ಷಣವೇತ್ತರೂ ಅದರ ಬೆಳವಣಿಗೆಗಾಗಿ ಹೆಚ್ಚಿನ ಆಸ್ಥೆ ತೋರುತ್ತಾ ಬಂದಿದ್ದಾರೆ. ವ್ಯಕ್ತಿ ಸಮಾಜ ಜೀವನದಲ್ಲಿ, ನೀತಿವಂತನಾಗಿ, ಸುಸಂಸ್ಕೃತನಾಗಿ ಬಾಳುವಾಗ ಮೇಲಿನ ಮೂರು ಉನ್ನತ ಮನೋವ್ಯಾಪಾರಗಳು ವಹಿಸುವ ಪಾತ್ರದ ಪ್ರಾಮುಖ್ಯತೆ ತಾನಾಗಿ ಸ್ಪಷ್ಟಪಡುತ್ತದೆ. ಶಾಲೆ ಅಥವಾ ಆಶ್ರಮದ ಜೀವನದಲ್ಲಿ ಮಕ್ಕಳ ವ್ಯಕ್ತಿತ್ವದ ವಿವಿಧ ಮುಖಗಳನ್ನು ರೂಪಿಸಿ ಬೆಳೆಸುವಾಗ ಆ ಮನಶ್ಶಕ್ತಿಗಳನ್ನು ಹೆಜ್ಜೆ ಹೆಜ್ಜೆಗೂ ಬಳಸಿಕೊಳ್ಳಬೇಕಾಗುತ್ತದೆ. ಮಾನಸಿಕ ಚಿಂತನೆಯು ಮಾನವಚಿಂತನೆ, ನಡವಳಿಕೆ, ಬೆಳವಣಿಗೆ, ವ್ಯಕ್ತಿತ್ವ, ಭಾವನೆ, ಪ್ರೇರಣೆ ಮತ್ತು ಹೆಚ್ಚಿನದನ್ನು ಅಧ್ಯಯನಮಾಡುವ ವ್ಯಾಪಕ ಕ್ಷೇತ್ರವಾಗಿದೆ. ಮನೋವಿಜ್ಞಾನದ ಉತ್ಕೃಷ್ಟ ಮತ್ತು ಆಳವಾದ ತಿಳುವಳಿಕೆಯನ್ನು ಪಡೆದುಕೊಳ್ಳುವುದು ಜನರಿಗೆ ಅಥವಾ ವ್ಯಕ್ತಿಗೆ ತಮ್ಮದೇ ಕಾರ್ಯಗಳ ಒಳನೋಟಗಳನ್ನು ಸಾಧಿಸಲು ಸಹಕಾರ ಮಾಡುತ್ತದೆ. ಮನಶ್ಶಕ್ತಿಯನ್ನು ಸದ್ಬಳಕೆ ಮಾಡಿಕೊಂಡು ಸದ್ಗುಣಗಳಿಂದ ಕೂಡಿದ ಸುಂದರ ವ್ಯಕ್ತಿತ್ವ ಬೆಳೆಸಿಕೊಳ್ಳಬೇಕು. ಭಾಗವತದಲ್ಲಿ ಒಂದು ಒಳ್ಳೆಯ ಮಾತಿದೆ:-

इन्द्रियैर्विषयाकृष्टैराक्षिप्तं ध्यायतां मनः ।

चेतनां हरते बुद्धेः स्तम्बस्तोयमिव ह्रदात् ॥[4]

ಅಂದರೆ ವಿಷಯ ಸುಖಗಳ ಆಕರ್ಷಣೆಗೊಳಪಟ್ಟ ಇಂದ್ರಿಯಗಳಿಂದ ಧ್ಯಾನಮಾಡುವವರ ಮನಸ್ಸು ಚಂಚಲವಾಗುತ್ತದೆ ಮತ್ತು ಮಡುವಿನಿಂದ ನೀರನ್ನು ಜೊಂಡುಹುಲ್ಲು ಹೀರುವಂತೆ ಬುದ್ಧಿಯ ಚೈತನ್ಯ ಶಕ್ತಿಯನ್ನು ಅಪಹರಿಸುತ್ತದೆ.

ಪಂಚತಂತ್ರದಲ್ಲಿ ವಿಷ್ಣುಶರ್ಮರು ರಾಜಪುತ್ರರಿಗೆ ಅವರ ಮನಶ್ಶಕ್ತಿಯ ಬೆಳವಣಿಗೆಗೆ ಸಾಕಷ್ಟು ಪ್ರೋತ್ಸಾಹ ನೀಡಿ, ಕೇವಲ ಆರುತಿಂಗಳುಗಳೊಳಗಾಗಿ, ಬದುಕಿನ ವ್ಯವಹಾರ ಜ್ಞಾನ, ರಾಜನೀತಿ ಜ್ಞಾನ ಪಡೆದು ಪವಾಡ ಸದೃಶ ಬದಲಾಗುವಂತೆ ಪ್ರೇರೇಪಿಸಿದ್ದರು. ವಿವಿಧ ಸರಳ ಸುಂದರ ಕಥೆಗಳ ಮೂಲಕ ವ್ಯವಹಾರ ಜ್ಞಾನ ಕಲಿಸಿದರು. ವಿಷ್ಣುಶರ್ಮರು ರಾಜಪುತ್ರರಿಗೆ ಜ್ಞಾನ ನೀಡಿದ್ದಲ್ಲದೆ, ಜ್ಞಾನದ ಮಹತ್ವ ಅರಿಯುವಂತೆ ಉತ್ತಮ ಸನ್ನಿವೇಶಗಳನ್ನು ರೂಪಿಸಿ, ಪಶುಪಕ್ಷಿಗಳಿಗೆ ಮಾನವ ವರ್ತನೆಗಳನ್ನು ಲೇಪಿಸಿ ಒಂದು ಚಮತ್ಕಾರಯುತ ತಂತ್ರವನ್ನು ಅಳವಡಿಸಿ, ಆ ಜ್ಞಾನವನ್ನು ಯಾವಾಗ, ಎಲ್ಲಿ ಮತ್ತು ಹೇಗೆ ಬಳಸಿಕೊಳ್ಳಬೇಕೆಂಬುದನ್ನೂ ಕಲಿಸಿದ್ದರು. ಇಂಥಹ ಸಾಧನೆಗೆ ಕಾರಣ ಮನಶ್ಶಕ್ತಿಯೇ ಎಂಬುದು ಬಹಳ ಸ್ಪಷ್ಟವಾಗಿ ಗೋಚರಿಸುತ್ತದೆ.

4. ಶ್ರೀಮದ್ಭಾಗವತಮಹಾಪುರಾಣ, - 4-22-30

ಇಲ್ಲಿ ಕಲಿಸುವವರ ದೃಢ ಸಂಕಲ್ಪ ಕಲಿಯುವವರ ಇಚ್ಛಾಶಕ್ತಿ ಇವೆರಡಕ್ಕೂ ಮನಶ್ಶಕ್ತಿಯೇ ಆಗಿರುತ್ತದೆ. ಇಂತಹ ಮನಶ್ಶಕ್ತಿಯನ್ನು ಕುರಿತ ಕ್ರಮಬದ್ಧವಾದ, ಸುವ್ಯವಸ್ಥಿತ ಜ್ಞಾನವೇ ಮನೋವಿಜ್ಞಾನ, ಇದರ ಸದ್ಬಳಕೆ ಮಾಡಿಕೊಳ್ಳುವ ಪರಿಜ್ಞಾನವೇ ಶೈಕ್ಷಣಿಕ ಮನೋವಿಜ್ಞಾನ.



### 4–2. ಆಲೋಚನೆ–ವಿವೇಚನೆ–ಆಲೋಚಿಸದೆ ತೀರ್ಮಾನಕ್ಕೆ ಬರುವುದರ ಅಪಾಯ

ವೈಜ್ಞಾನಿಕ ನೆಲೆಗಟ್ಟಿನಿಂದ ಮನಸ್ಸು, ಪ್ರಜ್ಞೆ, ವರ್ತನೆಗಳ ಹಾಸುಬೀಸನ್ನು ಮನೋವಿಜ್ಞಾನವು ತನ್ನ ಅಧ್ಯಯನದ ವ್ಯಾಪ್ತಿಗೊಳಪಡಿಸುತ್ತದೆ. ಇವುಗಳಲ್ಲಿ ಅನೇಕ ಕ್ರಿಯೆಗಳು, ಪರಿಕಲ್ಪನೆಗಳು, ಸಂರಚನೆಗಳು ಕಂಡುಬರುತ್ತವೆ. ಪ್ರವೃತ್ತಿ, ಅಭಿಪ್ರೇರಣೆ, ಆಲೋಚನೆ, ಕಲಿಕೆ, ಸೃಜನಶೀಲತೆ ಸಂವೇದನೆ, ಬುದ್ಧಿ ಶಕ್ತಿ, ಗತಿಕೌಶಲ ಸ್ಮೃತಿ, ವಿಸ್ಮೃತಿ–ಹೀಗೆ ಹಲವು ಹತ್ತು ವಿಚಾರಗಳ ಪಟ್ಟಿಯನ್ನೇ ಮಾಡಬಹುದು.

ನಮಗೆ ದೊರಕುವ ಪ್ರತ್ಯಕ್ಷಾನುಭವಗಳು ಇಂದ್ರಿಯಾನುಭವದ ಮೂಲಕ ಭಾವನೆಗಳಾಗಿ ಮನಸ್ಸಿನಲ್ಲಿ ಸೇರಿಕೊಳ್ಳುತ್ತವೆ. ಅವುಗಳು ಹಾಗೆಯೇ ಸುಮ್ಮನೆ ಉಳಿಯದೆ ಒಂದಕ್ಕೊಂದು ಸಂಬಂಧ ಕಲ್ಪಿಸಿಕೊಂಡು ನೂತನ ಜ್ಞಾನದ ನಿರ್ಮಾಣದಲ್ಲಿ ತೊಡಗುತ್ತವೆ. ಹೊಸ ಜ್ಞಾನವನ್ನು ಪಡೆಯಲು ಉಂಟಾಗುವ ಆ ಉನ್ನತ ಮಟ್ಟದ ಮನೋವ್ಯಾಪಾರವೇ "ಆಲೋಚನೆ". ಅದಕ್ಕೆ ಸ್ಮರಣೆ ಮತ್ತು ಕಲ್ಪನೆ ಸಹಾಯ ಮಾಡುವ ಮನೋವ್ಯಾಪಾರಗಳು. ಆಲೋಚನೆ ವಂಶಗತವಾಗಿ ಬರುವ ಬುದ್ಧಿ ಶಕ್ತಿಗೆ ಸಂಬಂಧಿಸಿದ ಪ್ರಕ್ರಿಯೆ.[5] ಸನ್ನಿವೇಶಗಳಲ್ಲಿ ಕಂಡುಬರುವ ಬದಲಾವಣೆಗೆ ಹೊಂದಿಕೊಳ್ಳುವ ಅಗತ್ಯ ನಿರಂತರವೂ ಇರುತ್ತದೆ. ಪ್ರಾಣಿಗಳಲ್ಲಿ ಅಷ್ಟಾಗಿ ಕಂಡುಬರದ ಆಲೋಚನೆ ಮಾನವನಲ್ಲಿ ಎದುರಾಗುವ ಸಮಸ್ಯೆಗಳನ್ನು ಬಿಡಿಸಿಕೊಳ್ಳುವಾಗ ನಿರ್ದಿಷ್ಟ ಪಾತ್ರ ವಹಿಸುತ್ತದೆ. ಸನ್ನಿವೇಶಗಳೊಡನೆ ಹೊಂದಾಣಿಕೆ ಮಾಡಿಕೊಳ್ಳುವಾಗಲೂ ಆಲೋಚನೆ ಮಾರ್ಗ ತೋರಿಸುವುದು. ವಿಧವಿಧವಾದ ಸಮಸ್ಯೆಗಳು ನಮ್ಮ ನಿತ್ಯಜೀವನದಲ್ಲಿ ಏಳುತ್ತಲೇ ಇರುತ್ತವೆ. ಇದರ ಜೊತೆಗೆ ವಾತಾವರಣದ ಎಡರು ತೊಡರುಗಳೂ ಕಾದಿರುತ್ತವೆ. ಸಾಮಾಜಿಕ ಸಮಸ್ಯೆಗಳೂ ಎದುರಾಗುತ್ತವೆ. ಅವುಗಳನ್ನೆಲ್ಲಾ ಬಿಡಿಸಿ ಅಗತ್ಯವಾದಂತೆ ನಡೆದರೆ ನಾವು ಸುಖವಾಗಿ ಬದುಕಿ ಬಾಳಬಹುದು. ಹೀಗಾಗಿ ಜೀವನದಲ್ಲಿ ಹುಟ್ಟಿಕೊಳ್ಳುವ ಎಲ್ಲ ಎಡರು ತೊಡರುಗಳನ್ನೂ ಪರಿಹರಿಸಿ ಯಶಸ್ವಿಯಾಗಿ ಬಾಳಲು "ಆಲೋಚನೆ" ಮಾನವನಿಗೆ ನಿತ್ಯ ನಿರಂತರ ನೆರವಾಗುವ ವರಪ್ರಸಾದವಾಗಿದೆ.ಸರಿಯಾಗಿ ಆಲೋಚಿಸಿ, ವಿಚಾರಿಸಿ ಮಾಡಿದ ಕಾರ್ಯದ ಬಗ್ಗೆ ಕವಿ ಭಾರವಿ ಒಂದು ಒಳ್ಳೆಯ ಸೂಕ್ತಿಯನ್ನು ಹೇಳುತ್ತಾನೆ.

सहसा विदधीत न क्रियां अविवेकः परमापदां पदम् ।

वृणुतेहि विमृश्यकारिणं गुणलुब्धाः स्वयमेव संपदः ॥[6]

---

5. **ವೀರಪ್ಪ. ಎನ್.ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–15, ಪು–364,365.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

6. भारवि विरचित किरातार्जुनीयम् – 2–30

ಅಂದರೆ ಯಾವ ಕಾರ್ಯವನ್ನೇ ಆಗಲೀ, ವಿಚಾರಿಸದೇ ಮಾಡಬಾರದು ಅವಿವೇಕವೆಂಬುದು ಆಪತ್ತುಗಳಿಗೆಲ್ಲಾ ಮೂಲ.ವಿಮರ್ಶಿಸಿ ಕೆಲಸಮಾಡುವ ಗುಣವಂತನೆಡೆ ಸಂಪತ್ತುಗಳು ತಾನಾಗಿ ಬಂದು ನೆಲೆಸುತ್ತವೆ. ಈ ಮಾತು. ಅಕ್ಷರಶಃ ನಿಜ. ಈ ಆಲೋಚನಾ ಶಕ್ತಿಯನ್ನು ರಾಜಕುಮಾರರಲ್ಲಿ ಬೆಳೆಸಲೆಂದೇ ವಿಷ್ಣುಶರ್ಮರು ತಮ್ಮ ಪಂಚತಂತ್ರದಲ್ಲಿ, ಅತ್ಯಂತ ವ್ಯವಸ್ಥಿತವಾಗಿ ಶೈಕ್ಷಣಿಕ ಸನ್ನಿವೇಶಗಳನ್ನು ಮತ್ತು ಸಮಯೋಚಿತವಾದ ದೃಷ್ಟಾಂತಗಳನ್ನು ಒದಗಿಸಿ ಪ್ರೇರೇಪಿಸಿದ್ದಾರೆ.

ಆಲೋಚನೆಯ ಕಾರ್ಯ ಮುಖ್ಯವಾಗಿ ಮಾನಸಿಕವಾದದ್ದು. ಅದನ್ನು ನೋಡಿ ತಿಳಿಯುವಂತಿಲ್ಲ. ಆದರೆ ಅದರಿಂದಾಗುವ ಅನುಭವವನ್ನು ನಾವೇ ಅರಿತುಕೊಳ್ಳಬಹುದು. ಇದು ನರಮಂಡಲಕ್ಕೆ ಸಂಬಂಧಿಸಿದ್ದರೂ ಕೆಲವು ನಿರ್ದಿಷ್ಟ ರೀತಿಯ ದೈಹಿಕ ವರ್ತನೆಗಳನ್ನು ಕಾಣಿಸುತ್ತದೆ. ಉದಾಹರಣೆಗೆ: ಮಾಂಸಖಂಡಗಳು ಬಿಗಿಯಾಗುವುದು, ಕಣ್ಣಿನ ನೋಟ ಕೇಂದ್ರೀಕರಿಸಿದಂತೆ ಕಾಣುವುದು ಇತ್ಯಾದಿ. ಕೆಲವೊಮ್ಮೆ ಆಲೋಚನೆಯ ಫಲವಾಗಿ ಮಾಡುವ ರಸಾಭಾವವೂ ದೈಹಿಕ ವರ್ತನೆಗಳಲ್ಲಿ ಕಾಣಿಸಿಕೊಳ್ಳುವುದು. ಉದಾಹರಣೆಗೆ:– ತೃಪ್ತಿಯಾಗುವಂತೆ ಆಲೋಚನೆ ನಡೆದರೆ ಮುಖದಲ್ಲಿ ಮಂದಹಾಸ, ವಿನೂತನ ಅಂಶ ಗೋಚರಿಸಿದರೆ ನಗುವುದು, ಅಹಿತವಾಗಿದ್ದಲ್ಲಿ ಜೋಲು ಮುಖ, ಸಮಸ್ಯೆ ಆಗ್ರಹದ್ದೆನಿಸಿದರೆ ಮುಖದಲ್ಲೂ ಆ ಭಾವ, ಕೋಪ ಇತ್ಯಾದಿಗಳನ್ನು ಗಮನಿಸಬಹುದು.[7] ಇಲ್ಲಿ ಬಹಳ ಮುಖ್ಯವಾಗಿ ಮನಸ್ಸು ಹತೋಟಿಯಲ್ಲಿರಬೇಕು.

अवशेन्द्रियचित्तानां हस्तिस्नानमिव क्रिया ।

दुर्भगाभरणप्रायो ज्ञानं भारः क्रियां विना ॥[8]

ಅಂದರೆ ಇಂದ್ರಿಯಗಳೂ ಮನಸ್ಸೂ ವಶದಲ್ಲಿರದವರಿಗೆ ಧಾರ್ಮಿಕ ಕ್ರಿಯೆಗಳು ಆನೆಗೆ ಮಾಡಿಸಿದ ಸ್ನಾನದಂತೆ(ವ್ಯರ್ಥ); ಯೋಗ್ಯವಾದ ಕೃತಿಯಿಲ್ಲದ ಜ್ಞಾನವು ವಿಧವೆಯು ಧರಿಸಿದ ಒಡವೆಗಳಂತೆ ಬರಿ ಹೊರೆ.

ಆಲೋಚನೆಗೂ ಸಹ ಇತರ ಎಲ್ಲ ಮಾನಸಿಕ ವ್ಯಾಪಾರಗಳಂತೆ ಒಂದು ಸನ್ನಿವೇಶದ ಪ್ರಚೋದನೆ ಅಗತ್ಯವಾದುದು. ಆಲೋಚನೆ ಸಾಗುವ ಮಾರ್ಗ ಮತ್ತು ಉದ್ದೇಶಗಳ ಆಧಾರದ ಮೇಲೆ ನಾಲ್ಕು ವಿಧವಾದ ಆಲೋಚನೆಗಳನ್ನು ಗುರುತಿಸಬಹುದು.

---

7. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–15, ಪು–365,366.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
8. **ನಾರಾಯಣ ಪಂಡಿತರ ಮಿತ್ರಲಾಭ**, ಶ್ಲೋ – 18

**1. ಆಕಸ್ಮಿಕ ಆಲೋಚನೆ:**

ಅನುಭವಗಳು ಎಡೆ ಸಿಕ್ಕಿದಂತೆ ಸಂಬಂಧ ಕಲ್ಪಿಸಿಕೊಳ್ಳುತ್ತವೆ. ಕಾರ್ಯಕಾರಣ ದೃಷ್ಟಿಗಳು ಆ ಸಂಬಂಧವನ್ನು ನಿರ್ದೇಶಿಸುವುದಿಲ್ಲ. ಇಂತಹ ಆಲೋಚನೆಯಿಂದ ನಮಗೆ ಯಾವ ಹೊಸ ಜ್ಞಾನವೂ ಉದ್ಭವಿಸುವುದಿಲ್ಲ. ಯಾವ ಗುರಿಯನ್ನೂ ಮುಟ್ಟುವುದಿಲ್ಲ. ಯಾವ ಶಿಕ್ಷಣವೂ ದೊರಕುವುದಿಲ್ಲ. ಹಳೆಯ ಅನುಭವಗಳನ್ನು ಮಾತ್ರ ಸ್ಮರಣೆಗೆ ತಂದುಕೊಳ್ಳಬಹುದು. ಇದೆಲ್ಲ ಕಾರಣಗಳಿಂದ ಆಕಸ್ಮಿಕ ಆಲೋಚನೆಯನ್ನು ಸೋಮಾರಿಯ ಆಲೋಚನೆಯೆಂದೂ ಕರೆಯಬಹುದು.

**2. ಭ್ರಾಂತಿಯ ಆಲೋಚನೆ:**

ಮತ್ತೊಬ್ಬರು ಆಲೋಚಿಸಿ ತೀರ್ಮಾನಿಸಿರುವ ಅಂಶವನ್ನು ಅರಿತಾಗ, ಇದು ನಾವೇ ನಿರ್ದರಿಸಿದ್ದೆಂದು ಕೆಲವರು ಭಾವಿಸುತ್ತಾರೆ. ಇದು ಆಲೋಚನೆಯೇ ಅಲ್ಲ.

**3. ಜ್ಞಾನವರ್ಧಕ ಆಲೋಚನೆ:**

ಇದು ಹಿಂದಿನ ಅನುಭವಗಳ ಜೊತೆಗೆ ಹೊಸದೊಂದನ್ನು ಸೇರಿಸಿಕೊಳ್ಳುವುದು. ಹೊಸ ಜ್ಞಾನವು ನಮ್ಮ ಮನಸ್ಸಿಗೆ ಬರುವಾಗ ಹಳೆಯದರೊಡನೆ ಸಮನ್ವಯವಾಗಿ ಜ್ಞಾನದ ಒಟ್ಟು ಮೊತ್ತ ಅಧಿಕವಾಗುತ್ತದೆ. ಹೀಗೆ ಹಳೆಯದು ಹೊಸದರೊಡನೆ ಸಮನ್ವಯಗೊಂಡು ಜ್ಞಾನವರ್ಧಿಸುವಾಗ ಆಲೋಚನೆ ನಡೆಯಬೇಕಾಗುತ್ತದೆ. ಇದನ್ನು ಜ್ಞಾನಪೂರಕ ಆಲೋಚನೆಯೆಂದೂ ಕರೆಯಬಹುದು.

**4. ಉದ್ದೇಶಪೂರ್ವಕ ಆಲೋಚನೆ:**

ಯಾವುದಾದರೊಂದು ಸಮಸ್ಯೆ ಎದುರಾದಾಗ ಒಂದು ನಿರ್ದಿಷ್ಟ ತೀರ್ಮಾನಕ್ಕೆ ಬರಲು ಕೆಲವೊಮ್ಮೆ ಉದ್ದೇಶಪೂರ್ವಕವಾಗಿ ಪ್ರಯತ್ನಿಸುತ್ತೇವೆ. ಈಗಾಗಲೇ ಗೊತ್ತಿರುವ ಹಳೆಯ ಅನುಭವಗಳನ್ನು ಸ್ಮರಣೆಗೆ ತಂದುಕೊಂಡು ಆಲೋಚನೆ ನಡೆಸಿ ಹೊಸದೊಂದು ವಿಷಯ ತಿಳಿದುಕೊಂಡು ಸಮಸ್ಯೆಗೆ ಪರಿಹಾರವನ್ನು ಕಾಣುತ್ತೇವೆ. ಈ ರೀತಿಯ ಆಲೋಚನೆಯನ್ನೇ ಉದ್ದೇಶಪೂರ್ವಕ ಅಥವಾ ಸಮಸ್ಯಾಪರಿಹಾರಕ ಆಲೋಚನೆ ಎನ್ನಬಹುದು.[9] ಚರಿತ್ರೆ, ಕಥೆ, ಕಾದಂಬರಿಗಳಲ್ಲಿ ಹಿಂದಿನವರ ಜೀವನ ಪರಿಚಯ, ಅವರ ಪರಾಕ್ರಮ ಅಥವಾ ಸಾಧನೆ ಇವುಗಳ ವಿಚಾರ ಹೆಚ್ಚಾಗಿದ್ದರೆ, ಸ್ವತಂತ್ರವಾಗಿ ಆಲೋಚಿಸಿ ಸಮಸ್ಯೆಗಳನ್ನು ಬಿಡಿಸುವ ಅವಕಾಶ

9. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–15, ಪು–367–369. (1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

ದೊರಕುತ್ತದೆ. ಶಿಕ್ಷಕರು ಈ ಬಗ್ಗೆ ವಿಶೇಷ ಗಮನಹರಿಸಿ, ಮಕ್ಕಳಲ್ಲಿ ಉತ್ತಮ ಆಲೋಚನಾ ಶಕ್ತಿಯನ್ನು ಬೆಳೆಸಲು ಪ್ರೋತ್ಸಾಹಿಸಿ ಮುಂದೆ ಜೀವನದಲ್ಲಿ ಬರಬಹುದಾದ ಸಮಸ್ಯೆಗಳನ್ನು ಸ್ವಂತ ಆಲೋಚನಾ ಶಕ್ತಿಯಿಂದ ಬಿಡಿಸಿಕೊಳ್ಳುವಂತೆ ಪ್ರೇರೇಪಿಸಬೇಕು.

ಪಂಚತಂತ್ರದಲ್ಲಿ, ವಿಷ್ಣುಶರ್ಮರು ಒಂದು ವಿಶೇಷವಾದ ತಾಂತ್ರಿಕತೆಯನ್ನು ಬಳಸಿ, ಆಕರ್ಷಕ ನೀತಿಕಥೆಗಳ ಮೂಲಕ ರಾಜಕುಮಾರರಲ್ಲಿ ಉತ್ತಮ ಆಲೋಚನಾ ಶಕ್ತಿಯನ್ನು ಬೆಳೆಸಿದ್ದಾರೆ. ಉತ್ತಮ ಆಲೋಚನೆಯಿಂದಲೇ ರಾಜಕುಮಾರರು ಪ್ರಾಣಿಪಶುಪಕ್ಷಿಗಳೇ ಮಾನವರಂತೆ ವರ್ತಿಸುವಾಗ, ಮಾನವರಾದ ನಾವು ಹೀಗಿದ್ದೀವಲ್ಲಾ!! ಎಂದು ಸ್ವಯಂ ಮೌಲ್ಯಮಾಪನ ಮಾಡಿಕೊಂಡು ಇದು ಒಂದು ನಾಚಿಕೆಯ ವಿಷಯ ಎಂದು ಆಲೋಚನೆ ನಡೆಸಿದ್ದರಿಂದಲೇ, ಬಹಳ ಒಳ್ಳೆಯ ಪರಿವರ್ತನೆ ಹೊಂದಿ, ಶಾಸ್ತ್ರಗಳನ್ನು ಕಲಿಯಲು ಮುಂದಾದರು.

ಮನೋವ್ಯಾಪಾರದಲ್ಲೆಲ್ಲಾ ಅತ್ಯುನ್ನತ ಮಟ್ಟದ್ದೆಂದರೆ ಅದೇ "ವಿವೇಚನೆ" ಉದ್ದೇಶಪೂರ್ವಕವಾಗಿ ಆಲೋಚನೆಯಲ್ಲಿ ತೊಡಗುವ ಸಂದರ್ಭದಲ್ಲಿ ನಾವು ಮನಸೋಇಚ್ಛೆ ಮುಂದುವರಿಯುವಂತಿಲ್ಲ. ನಮ್ಮ ಹಿಂದಿನ ಅನುಭವಗಳ ಆಧಾರದ ಮೇಲೆ ಆಲೋಚಿಸಿದರೂ ಕುರುಡರಂತೆ ತೀರ್ಮಾನಕ್ಕೆ ಬರುವಂತಿಲ್ಲ. ಸಂಬಂಧ ಕಲ್ಪಿಸುವಾಗ ಸರಿತಪ್ಪುಗಳನ್ನು ಹೆಜ್ಜೆ ಹೆಜ್ಜೆಗೂ ವಿವೇಚನೆ ನಡೆಸಿ ಮುಂದುವರಿಯಬೇಕು. ಮಾತುಗಳನ್ನು ಆಡುವಾಗಲೂ ವಿವೇಚನೆಯಿಂದ ಸಮಯ ಸಂದರ್ಭಕ್ಕೆ ಹಿತವಾಗಿ, ಆತ್ಮೀಯವಾಗಿರಬೇಕು ರಾಮಾಯಣದಲ್ಲಿ ಇದರ ಬಗ್ಗೆ:-

सुलभाः पुरुषा राजन् सततं प्रियवादिनः ।

अप्रियस्य तु पथ्यस्य वक्ता श्रोता च दुर्लभः ॥[10]

"ಎಲೈ ರಾಜನೇ, ಯಾವಾಗಲೂ ಪ್ರಿಯವಾದ ಮಾತನ್ನು ಹೇಳುವ ವ್ಯಕ್ತಿಗಳು ಸುಲಭವಾಗಿ ಸಿಗುತ್ತಾರೆ. ಕೇಳಲು ಅಪ್ರಿಯವಾದರೂ, ಹಿತಕರವಾದ ಮಾತನ್ನು ಹೇಳುವವರು, ಹೇಳಿದರೆ ಕೇಳುವವರು ಸಿಗುವುದು ಕಷ್ಟ. ಕವಿ ಭಾರವಿ ಹೇಳುವಂತೆ "हितं मनोहारि च दुर्लभं वचः"[11] ಅಂದರೆ ಹಿತವೂ ಮನೋಹರವೂ ಆದ ಮಾತು ಸಿಗುವುದು ಕಷ್ಟ. ಹಿತವಾಗಿದ್ದರೆ ಮನೋಹರವಾಗಿರದು, ಮನೋಹರವಾಗಿದ್ದರೆ ಹಿತವಾಗಿರದು ಅಧರಕ್ಕೆ ಕಹಿ, ಉದರಕ್ಕೆ ಸಿಹಿ, ಔಷಧಿಯ ಹಾಗೆ-ಕುಡಿಯಲು ಕಹಿಯಾದರೂ, ಆರೋಗ್ಯಕ್ಕೆ ಹಿತಕರ. ಹೀಗೆ ಹಿರಿಯರ ಉಪದೇಶ, ಶಾಲೆಯಲ್ಲಿ ಪಾಠ-ಪ್ರವಚನಗಳು ಇತ್ಯಾದಿಗಳು ಕೇಳಲು

10. **ವಾಲ್ಮೀಕಿರಾಮಾಯಣ**-ಯುದ್ಧಕಾಂಡ-10-21.
11. **ಭಾರವಿಯ ಕಿರಾತಾರ್ಜುನೀಯ 1-4**

ಕಠೋರವಾಗಿದ್ದರೂ, ಅದರಂತೆ ನಡೆದಾಗ, ಹಿತಕಾರಿ. ಅದಕ್ಕೇ ಮಾತಿನಲ್ಲಿ ವಿವೇಚನೆ ಇರಬೇಕು.

ಯಾವುದೇ ಸಮಸ್ಯೆಯ ಪರಿಹಾರಕ್ಕೆ, ಮೊದಲು ಅದಕ್ಕೆ ಸಂಬಂಧಿಸಿದಂತೆ ಬೇಕಾದ ಅಂಶಗಳನ್ನು ಸಂಗ್ರಹಿಸಿ ವಾಸ್ತವಿಕ ರೀತಿಯಲ್ಲಿ ಆಲೋಚನೆ ನಡೆಸಬೇಕು. ಮುಂಜಾಗ್ರತೆಯೊಂದಿಗೆ ಸಮಸ್ಯೆಯನ್ನು ಸಮರ್ಥವಾಗಿ ಎದುರಿಸಲು ಯಾವ ಮಾರ್ಗ ಯೋಗ್ಯವೆಂಬುದನ್ನು ಅರಿತುಕೊಳ್ಳುವುದು ಬಹಳ ಮುಖ್ಯವಾದುದು. ಇಲ್ಲಿ ವಿವೇಚನೆ ಉತ್ತಮ ತೀರ್ಮಾನದೆಡೆಗೆ ಬರಲು ನೆರವಾಗುತ್ತದೆ.

ನಮ್ಮ ವಿವೇಚನೆ ಕಾರ್ಯೋನ್ಮುಖವಾಗುವ ಮಾರ್ಗವನ್ನು ಪ್ರಸಿದ್ಧ ಶಿಕ್ಷಣ ತಜ್ಞ ಜಾನ್ ಡ್ಯೂಯಿ ರವರು ಐದು ಹಂತಗಳಲ್ಲಿ ಸೂಚಿಸಿದ್ದಾರೆ.[12] ಇದನ್ನು ವಿವೇಚನೆಯ "ಪಂಚಸೋಪಾನ" ಎಂದು ಕರೆಯುತ್ತಾರೆ. ಅವುಗಳೆಂದರೆ:

**1. ಸಮಸ್ಯೆಯನ್ನು ಕಾಣುವುದು**.

ಶಿಕ್ಷಣ ನೀಡುವ ಸಂದರ್ಭದಲ್ಲಿ ಪಾಠ ಬೋಧಿಸುವಾಗ ಕಲಿಯಬೇಕಾದ ಹೊಸ ವಿಚಾರವನ್ನು ಸಮಸ್ಯೆಯ ರೂಪದಲ್ಲಿ ವಿದ್ಯಾರ್ಥಿಗಳ ಮುಂದೆ ಬರುವ ಹಾಗೆ ಮಾಡಬೇಕು. ಮುಂದೆ ಸಾಗಲು ಅದನ್ನು ಬಿಡಿಸುವ ಅಗತ್ಯವನ್ನು ಅವರು ಕಂಡುಕೊಳ್ಳುವಂತೆ ಪ್ರೋತ್ಸಾಹಿಸಬೇಕು. ಆಗ ಅವರು ಆ ಕಾರ್ಯಕ್ಕೆ ತಮ್ಮ ಮನಶ್ಶಕ್ತಿಯನ್ನು ಒದಗಿಸಿಕೊಂಡು ಕ್ರಿಯಾಶೀಲರಾಗುವರು. ಅದರ ಅಗತ್ಯದ ಅರಿವಿರುವುದರಿಂದ ಸ್ವಪ್ರೇರಣೆಯಿಂದ ಆಸಕ್ತಿ ವಹಿಸುವರು. ಇದನ್ನೇ ವಿಷ್ಣುಶರ್ಮರು ಪಂಚತಂತ್ರದಲ್ಲಿ, ಪ್ರಾರಂಭಿಕವಾಗಿ ಯಾವುದರಲ್ಲೂ ಆಸಕ್ತಿಯಿಲ್ಲದೆ, ಸ್ವೇಚ್ಛಾಪ್ರವೃತ್ತಿಯಿಂದ, ಸೋಮಾರಿಗಳಾಗಿ ಕಾಲಕಳೆಯುತ್ತಿದ್ದ ರಾಜಕುಮಾರರಿಗೆ ವಿದ್ಯೆ ಕಲಿಸುವುದು ಬಹಳ ಕಷ್ಟದ ಕೆಲಸ ಎಂಬುದನ್ನು ಬಹಳ ಸೂಕ್ಷ್ಮವಾಗಿ ಪರಿಶೀಲಿಸಿ, ಈಗಾಗಲೇ ಅವರು ಒಮ್ಮೆ ಎಡವಿದ್ದಾರೆಂಬುದನ್ನು ಗಮನಿಸಿ ಮುಂದಿನ ಕಾರ್ಯಯೋಜನೆ ಹಾಕಿಕೊಳ್ಳುತ್ತಾರೆ.

तावदस्खलितं यावत्सुखं याति समे पथि ।

स्खलिते च समुत्पन्ने विषमञ्च पदे पदे ॥[13]

ಎಲ್ಲಿಯವರೆಗೆ ಒಮ್ಮೆಯೂ ಎಡವುದಿಲ್ಲವೋ ಅಲ್ಲಿಯವರೆಗೆ ಸುಖವಾಗಿ ಸಮವಾದ ಹಾದಿಯಲ್ಲಿ ನಡೆಯುತ್ತಾನೆ. ಒಮ್ಮೆ ಎಡವಿದಾಗ ಮುಂದೆ ಹೆಜ್ಜೆ ಹೆಜ್ಜೆಗೂ ಹಾದಿ ವಿಷಮವಾಗುತ್ತದೆ. ಇಂಥಹ

---

12. **ವೀರಪ್ಪ. ಎನ್ ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ-15, ಪು- 370-383,(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

13. **ಸುಧಾಕರ್ ಮಾಲವೀಯ,** ಸಂಪಾ, ಹಾಗೂ ವ್ಯಾಖ್ಯಾ, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಸಂಪ್ರಾಪ್ತಿ, ಶ್ಲೋ-184, ಪು-425,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಸಂದರ್ಭದಲ್ಲಿ ನಾನು ಸಿದ್ಧನಿದ್ದೇನೆಂದು ಸಿಂಹ ಗರ್ಜನೆ ಮಾಡಿದ ವಿಷ್ಣುಶರ್ಮರ ಅಸಾಧಾರಣ ಪ್ರಯತ್ನ ಆದರ್ಶಪ್ರಾಯವಾದದ್ದು. ಉತ್ತಮ ವಾತಾವರಣ ನಿರ್ಮಾಣ ಮಾಡಿ, ಒಳ್ಳೆಯ ಸನ್ನಿವೇಶ, ಸಂದರ್ಭದಲ್ಲಿ ಸ್ವಪ್ರೇರಣೆಯಿಂದ ಅವರ ಸಮಸ್ಯೆಯನ್ನು ಸಮರ್ಥವಾಗಿ ಎದುರಿಸುವಂತೆ ಸರಳ ಸುಂದರ ಕಥೆಗಳ ಮೂಲಕ ಮಾರ್ಗದರ್ಶನ ನೀಡಿದ್ದಾರೆ.

**2. ಸಮಸ್ಯೆಯ ಸ್ಪಷ್ಟೀಕರಣ**

ಪಾಠದ ಪ್ರಾರಂಭದಲ್ಲಿಯೇ ಆ ದಿನ ತಿಳಿಯಬೇಕಾದ ವಿಚಾರವನ್ನು ಸಮಸ್ಯೆಯ ರೂಪದಲ್ಲಿ ಸ್ಪಷ್ಟಪಡಿಸಬೇಕು. ಇದರಿಂದ ಆ ಕಾರ್ಯ ಸಾಧನೆಗೆ ಪೂರಕವಾದ ಅಂಶಗಳನ್ನು ಸಂಗ್ರಹಿಸುವುದಕ್ಕೆ ಹಾಗೂ ಸಮಸ್ಯೆಯನ್ನು ಬಿಡಿಸಲು ಸೂಕ್ತ ಮಾರ್ಗವನ್ನು ಕಂಡುಕೊಳ್ಳಲು ಸಹಾಯಕವಾಗುತ್ತದೆ. ಒಂದು ವೇಳೆ ಸಮಸ್ಯೆಯು ಬಹು ವ್ಯಾಪ್ತಿವುಳ್ಳದ್ದಾಗಿದ್ದರೆ, ಉಪಸಮಸ್ಯೆಗಳನ್ನಾಗಿ ವಿಂಗಡಿಸಿಕೊಂಡು, ಒಂದೊಂದನ್ನಾಗಿ ಬಿಡಿಸುವ ಏರ್ಪಾಡು ಮಾಡಿಕೊಳ್ಳಬೇಕಾಗುತ್ತದೆ.

**3. ಅಂಕಿಅಂಶಗಳ ಮತ್ತು ಅನುಭವಗಳ ಸ್ಮರಣೆ ಮತ್ತು ಸಂಬಂಧ ಕಲ್ಪನೆ:**

ಬಿಡಿಸಬೇಕಾದ ಸಮಸ್ಯೆ ಹೆಚ್ಚು ಹೆಚ್ಚು ಸ್ಪಷ್ಟವಾದಂತೆ, ಅಗತ್ಯವಾದ ಅಂಕಿಅಂಶಗಳ ಸ್ವರೂಪ ತಿಳಿಯುತ್ತದೆ. ಆಗ ನಮ್ಮ ಮನಸ್ಸಿನಲ್ಲಿರುವ ಅನುಭವದ ದೊಡ್ಡ ರಾಶಿಯಿಂದ ಅವಶ್ಯಕವಾದದ್ದನ್ನು ಮಾತ್ರ ಆರಿಸಿಕೊಳ್ಳುವಂತೆ ಮನಸ್ಸು ಸೂಚಿಸುತ್ತದೆ. ನಂತರ ಎದುರಿಸಬೇಕಾದ ಸಮಸ್ಯೆಗೆ ಸಂಬಂಧ ಕಲ್ಪಿಸಿಕೊಂಡು ಪರಿಹಾರಕಾರ್ಯಕೈಗೊಳ್ಳಲು ಸುಲಭವಾಗುತ್ತದೆ.

**4. ಊಹೆಯ ನಿರೂಪಣೆ:**

ಸಮಸ್ಯೆಯ ಪರಿಹಾರ ಮಾರ್ಗವು ಅಗತ್ಯವಾದ ಅಂಕಿಅಂಶಗಳನ್ನು ಆಯ್ಕೆ ಮಾಡಿಕೊಂಡಾಗ ಮಾತ್ರ ಸಾಧ್ಯವಾಗುತ್ತದೆ. ಸಂಗ್ರಹಿಸಿದ ಅಂಶಗಳ ಸಂಬಂಧ ಕಲ್ಪಿಸಿ ಜೋಡಿಸುತ್ತಿರುವ ಸಮಯದಲ್ಲಿ ಉತ್ತರ ಹೊಳೆಯುವ ಸಂಭವವಿರುತ್ತದೆ. ಆದರೆ ಅಂತ್ಯ ತೀರ್ಮಾನವಾಗಲಾರದು. ಅಂತ್ಯ ತೀರ್ಮಾನಕ್ಕೆ ಬರುವ ಮುನ್ನ ಅದರ ಸಾಧುತ್ವವನ್ನು ಪರಿಶೀಲಿಸಬೇಕು. ಆನಂತರ ಆ ತೀರ್ಮಾನ ಎಲ್ಲ ರೀತಿಯ ಸಂದರ್ಭಗಳಿಗೆ ಒಪ್ಪುವುದೇ ಇಲ್ಲವೇ ಎಂದು ಪರೀಕ್ಷಿಸಬೇಕು. ಒಂದು ವೇಳೆ ಒಪ್ಪದಿದ್ದರೆ, ಸರಿಹೊಂದದ ಸನ್ನಿವೇಶಗಳಾವುವು ಎಂದು ಆಲೋಚಿಸಿ, ಪುನಃ ಅವುಗಳಿಗೆ ನಮ್ಮ ಊಹೆಯನ್ನು ಒರೆಹಚ್ಚಿ ನೋಡಿ ಪರಿಷ್ಕರಣೆ ಮಾಡಬೇಕಾಗುತ್ತದೆ. ಇದನ್ನೇ ಊಹೆಯ ನಿರೂಪಣೆ ಎಂದು ಕರೆಯುವರು.

**೫. ನಿರ್ಧಾರದ ಪುರಸ್ಕಾರ ಅಥವಾ ತಿರಸ್ಕಾರ.**

ಒಂದು ವೇಳೆ ಊಹಿಸಿದ ಉತ್ತರ ಅಥವಾ ತೀರ್ಮಾನ ತಪ್ಪಾಗಲೂಬಹುದು ಅಥವಾ ಸರಿಯಾದ್ದೂ ಆಗಿರಬಹುದು. ಎಲ್ಲ ಸಂದರ್ಭಗಳಿಗೂ ಒಪ್ಪುವಂತಿದ್ದು ನಿರ್ದಿಷ್ಟವಾದ್ದೆಂದು ತಿಳಿದರೆ ಅದನ್ನು ಸ್ವೀಕರಿಸಬಹುದು. ಇಲ್ಲವಾದರೆ ಮತ್ತೆ ಆಲೋಚನೆ ನಡೆಸಬೇಕಾಗುವುದು. ಎಲ್ಲ ಸಂದರ್ಭಗಳಿಗೂ ಅನ್ವಯಿಸಬಹುದೆಂದು ಧೃಢಪಟ್ಟ ಮೇಲೂ ಆ ತೀರ್ಮಾನವನ್ನು ಕೆಲವು ನೂತನ ಸಮಸ್ಯೆಗಳನ್ನು ಬಿಡಿಸಲು ಪ್ರಯೋಗಿಸಿ ನೋಡುವುದು ಉತ್ತಮ. ನಂತರ ಸಾಧುವಾದುದನ್ನು ಆಯ್ಕೆ ಮಾಡಿ, ಸಾರ್ವತ್ರಿಕ ವ್ಯಾಪ್ತಿಗೆ ಸೂಕ್ತವಾಗಿದೆಯೇ ಎಂದು ತಿಳಿದು ತೀರ್ಮಾನ ತೆಗೆದುಕೊಳ್ಳುವುದು. ಇಲ್ಲದಿದ್ದರೆ ತಿರಸ್ಕರಿಸಬೇಕಾಗುವುದು.

ಈ ರೀತಿ ನಮ್ಮ ಆಲೋಚನೆಗಳು ಮೇಲಿನ ಪಂಚಸೋಪಾನ ಹಂತದಲ್ಲಿ ಹಾದುಹೋಗುವುದು ಉತ್ತಮ. ಅಲ್ಲಿಗೆ ಅದು ಒಂದು ರೀತಿಯ ಶಾಸ್ತ್ರೀಯ ಆಲೋಚನೆಯಾಗಿರುತ್ತದೆ. ಈ ಎಲ್ಲ ಅಂಶಗಳನ್ನು ಪರಿಶೀಲಿಸದೆ, ಆತುರವಾಗಿ ನಿರ್ಧಾರಕ್ಕೆ ಬಂದರೆ ಆಲೋಚನೆಯಲ್ಲಿ ನಿರ್ದಿಷ್ಟತೆ ಇರುವುದಿಲ್ಲ. ಆತುರದಿಂದ ಮಾಡುವ ದೋಷಮಯ ತೀರ್ಮಾನಗಳು ನಮ್ಮ ನಿತ್ಯ ಜೀವನದಲ್ಲಿ ಸಮಸ್ಯೆಗಳನ್ನು ಜಟಿಲಗೊಳಿಸುತ್ತವೆಯೇ ಹೊರತು, ಬಿಡಿಸಲು ಸರಳಗೊಳಿಸುವುದಿಲ್ಲ. ಇದರಿಂದ ಅಭಿಪ್ರಾಯ ಭಿನ್ನತೆ ಹೆಚ್ಚಿ ಸಾಮಾಜಿಕ ಕ್ಷೋಭೆಯೂ ತಲೆದೋರಬಹುದು.[14] ಸಂಸ್ಕೃತ ಕವಿ ಭರ್ತೃಹರಿ ನೀತಿಶತಕದಲ್ಲಿ ಎಷ್ಟು ಸರಳವಾಗಿ ಸೂಚಿಸಿರುವುದನ್ನು ಸ್ಮರಿಸಿಕೊಳ್ಳಬಹುದು.

कर्मायत्तं फलं पुंसां बुद्धिः कर्मानुसारिणी ।

तथापि सुधिया भाव्यं सुविचार्यैव कुर्वता ॥[15]

ಜನರಿಗೆ ಫಲವು ಕರ್ಮಗಳಿಗೆ ಅಧೀನವಾಗಿರುತ್ತದೆ. ಬುದ್ಧಿಯು ಕರ್ಮವನ್ನು ಅನುಸರಿಸುತ್ತದೆ. ಆದರೂ ಕೂಡ ಒಳ್ಳೆಯ ಬುದ್ಧಿವಂತನು ಚೆನ್ನಾಗಿ ವಿಮರ್ಶಿಸಿಯೇ ಕೆಲಸವನ್ನು ಮಾಡುವವನಾಗಿರಬೇಕು.

ವಿವಿಧ ಅಂಶಗಳನ್ನು ಜಾಣತನದಿಂದ ಜೋಡಿಸಿಕೊಂಡು, ಸೂಕ್ತ ಸಂಬಂಧ ಕಲ್ಪಿಸಿಕೊಂಡು, ಅವುಗಳ ಸಂಬಂಧದಲ್ಲಿ ಅಡಗಿರುವ ಸತ್ಯಾಂಶವನ್ನು ಅರಸಿ ಧೃಢಪಡಿಸಿಕೊಳ್ಳುವುದೇ ಶಾಸ್ತ್ರೀಯ ಆಲೋಚನೆಯಲ್ಲಿ ನಡೆಯಬೇಕಾದ ಮನೋವ್ಯಾಪಾರ. ಹೀಗಾಗಿ ಇದು ಒಂದು ಕೌಶಲ್ಯದ ಕಾರ್ಯವಾಗಿದೆ. ಇದಕ್ಕೆ ಸಾವಧಾನ ಮನಶ್ಶಾಂತಿ ಬಹು ಮುಖ್ಯ. ಕೆಲವೊಮ್ಮೆ ಆಲೋಚನೆ ನಡೆಸುವ ಸಂದರ್ಭದಲ್ಲಿ ಆತುರವೋ, ಬೇಸರವೋ

---

14. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–15, ಪು–375.(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
15. **ಭರ್ತೃಹರಿ,** ನೀತಿಶತಕ 9– ದೈವ ಪದ್ಧತಿ, ಶ್ಲೋ–90.

ಸುಳಿದುಬಿಟ್ಟರೆ, ನಮ್ಮ ಆಲೋಚನೆ ಅಡ್ಡದಾರಿ ಹಿಡಿದು, ಗೊಂದಲವನ್ನುಂಟುಮಾಡಿ, ಯಾವುದೋ ಒಂದು ತೀರ್ಮಾನಕ್ಕೆ ಬಂದುಬಿಡುವುದು ಉಂಟು. ಈ ತೀರ್ಮಾನ ಹೆಚ್ಚಿನ ಸಂದರ್ಭಗಳಲ್ಲಿ ಅಸಾಧುವೇ ಆಗಿಬಿಡುತ್ತದೆ. ಇನ್ನು ಕೆಲವು ಸಂದರ್ಭಗಳಲ್ಲಿ ಹಿಂದಿನಿಂದ ಬಂದಿರುವ ಅನೇಕ ನಂಬಿಕೆಗಳು ನಮ್ಮ ಮಾನಸಿಕ ಜೀವನದಲ್ಲಿ ಭಾಗವಹಿಸಿಬಿಡುತ್ತವೆ. ಅವುಗಳು ಸರಿಯೋ ತಪ್ಪೋ ಎಂದು ವಿವೇಚನೆ ಮಾಡದೆ ನಮ್ಮ ಆಲೋಚನೆಗಳಿಗೆ ಮೂಲ ಆಧಾರಗಳನ್ನಾಗಿ ಬಳಸಿಕೊಂಡುಬಿಟ್ಟರೆ, ತೀರ್ಮಾನ ದೋಷಮಯವಾಗಿ, ವಾಸ್ತವಿಕತೆಗೆ ದೂರವಾಗಿ ಬಿಡುತ್ತದೆ.[16] ಅದಕ್ಕೇ ಹೇಳುವುದು "ಆತುರಗಾರನಿಗೆ ಬುದ್ಧಿ ಮಟ್ಟು"ಎಂದು. ವಿಷ್ಣುಶರ್ಮರು ಪಂಚತಂತ್ರ ಕಥೆಗಳಲ್ಲಿ ಬಹಳಷ್ಟು ಕಡೆ ಈ ಎಚ್ಚರಿಕೆ ಕೊಡುತ್ತಾ ಜಾಗೃತಿ ಮೂಡಿಸಿದ್ದಾರೆ. ಉದಾಹರಣೆಗೆ ಕಣ್ಣಾರೆ ಕಂಡರೂ ಪರಾಂಬರಿಸಿ ನೋಡು, ಬುದ್ಧಿ ಬಲವೇ ಮೇಲು, ಅವರವರ ಅನರ್ಥಕ್ಕೆ ಅವರವರೇ ಜವಾಬ್ದಾರರು ಇತ್ಯಾದಿ.

ಇನ್ನೂ ಅನೇಕ ವಿಚಾರಗಳು ಆಲೋಚನೆಯನ್ನು ಅಡ್ಡದಾರಿಗೊಯ್ಯುತ್ತವೆ. ಅವುಗಳಲ್ಲಿ ಅಭಿಮಾನ ಪಕ್ಷಪಾತಗಳು, ಪೂರ್ವಜ್ಞಾನದ ಪ್ರಭಾವ, ಶಬ್ದಾಡಂಭರದ ಹೊಯ್ಲು, ವಿವೇಚನೆಯ ಅಪ್ರಬುದ್ಧ ಸ್ವರೂಪ ಇತ್ಯಾದಿಗಳು. ಅಭಿಪ್ರಾಯಗಳ ವೈಯಕ್ತಿಕ ಅಭಿಮಾನ ಏಕಮುಖ ತೀರ್ಮಾನಗಳಿಗೆ ದಾರಿಮಾಡಿಕೊಡುತ್ತದೆ. ಅವೆರಡರಲ್ಲಿ ಒಂದನ್ನು ತೀರ್ಮಾನಿಸುವ ಅಗತ್ಯತೆಯಿರುತ್ತದೆ. ಅಂತಹ ಸಂದರ್ಭದಲ್ಲಿ ಅಭಿಮಾನ ಯಾವ ಕಡೆಗೆ ಜಾಸ್ತಿ ಇದೆಯೋ, ಆ ಕಡೆಗೆ ವಾಲುತ್ತದೆ. ಅಲ್ಲಿ ತೀರ್ಮಾನ ತಪ್ಪಾಗುತ್ತದೆ. ಉದಾಹರಣೆಗೆ–ಭಾರವಿ ದೊಡ್ಡ ಕವಿಯೋ? ದಂಡಿ ದೊಡ್ಡ ಕವಿಯೋ? ಎಂಬುದನ್ನು ತೀರ್ಮಾನಿಸುವಾಗ ಅನೇಕ ಅಂಶಗಳನ್ನು ಇಬ್ಬರಿಂದಲೂ ಆರಿಸಿ, ಪರಿಗಣಿಸಿ, ತೂಗಿ ಒಂದು ತೀರ್ಮಾನಕ್ಕೆ ಬರಬೇಕಾಗುತ್ತದೆ. ಒಬ್ಬೊಬ್ಬರಲ್ಲಿ ಒಂದೊಂದು ಪ್ರತಿಭೆ ಪ್ರಕಾಶಮಾನವಾಗಿರುವುದರಿಂದ, ಭಾರವಿಯು ಕೆಲವು ಅಂಶಗಳಲ್ಲಿ ದೊಡ್ಡವನಾದರೆ ದಂಡಿಯು ಇನ್ನು ಕೆಲವಂಶಗಳಲ್ಲಿ ದೊಡ್ಡವನೆನಿಸುತ್ತಾನೆ.

सर्वस्य हि परीक्ष्यन्ते स्वभावा नेतरे गुणाः ।

अतीत्य हि गुणान्सर्वान स्वभावो मून्घ्रि वर्तते ॥[17]

ಅಂದರೆ ಎಲ್ಲರ ವಿಷಯದಲ್ಲಿ ಹುಟ್ಟುಗುಣವನ್ನೇ ಪರೀಕ್ಷಿಸುತ್ತಾರೆ, ಹೊರತು ಇತರ ಗುಣಗಳನ್ನಲ್ಲ. ಏಕೆಂದರೆ, ಎಲ್ಲ ಗುಣಗಳನ್ನೂ ಹುಟ್ಟುಗುಣವು ಮೀರಿಸಿ ಇರುತ್ತದೆ. ಕೆಲವರ ಗುಣಗಳು

16. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–15, ಪು – 375–377.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

17. **ನಾರಾಯಣಪಂಡಿತರ ಮಿತ್ರಲಾಭ**– ಶ್ಲೋ–20.

ವಂಶಪಾರಂಪರ್ಯವಾಗಿ, ಮತ್ತೆ ಕೆಲವು ಸ್ವಪ್ರಯತ್ನ, ಸನ್ನಿವೇಶ ಮತ್ತು ಅಭ್ಯಾಸ ಬಲದಿಂದ ಬಂದಿರುವುದೂ ಇರುತ್ತದೆ. ಆಲೋಚನೆಮಾಡುವಾಗ ಇದೆಲ್ಲವನ್ನೂ ಗಮನಿಸಬೇಕಾಗುತ್ತದೆ. ಪಕ್ಷಪಾತವಿಲ್ಲದೆ ತೆರೆದ ಮನಸ್ಸಿನಿಂದ ಎಲ್ಲ ಅಂಶಗಳ ಕಡೆಗೂ ಗಮನವಿಟ್ಟು ಆಲೋಚಿಸಿದಾಗ ತೀರ್ಮಾನವು ಸಾಧುವೂ, ಮಧ್ಯಸ್ಥವೂ ಆಗಿರುವುದು ಕಂಡುಬರುತ್ತದೆ.[18]

ವಿವೇಚನೆಯ ಅಪ್ರಬುದ್ಧ ಸ್ವರೂಪವೂ ಕೆಲವೊಮ್ಮೆ ನಮ್ಮ ತೀರ್ಮಾನಗಳನ್ನು ತಪ್ಪುಗೊಳಿಸುವುದು. ನಮ್ಮ ಆ ವಿವೇಚನಾ ಶಕ್ತಿಗೆ ನಿಲುಕದ ಹಲವು ಸಮಸ್ಯೆಗಳು ಕಂಡು ಬರುತ್ತವೆ. ಉದಾಹರಣೆಗೆ- ದೇವರು ಇದ್ದಾನೆಯೇ? ಇಂತಹ ಸಮಸ್ಯೆಗಳನ್ನು ಬಿಡಿಸಲು ಬಲು ಕಷ್ಟ. ಇದನ್ನು ಬಿಡಿಸಲು ಅಗತ್ಯವಾದ ಅಂಕಿಅಂಶಗಳು ಯಾವುದೆಂಬುದು ಇಂದಿಗೂ ದೊರೆತಿಲ್ಲ. ಜೊತೆಗೆ ಮಾನವನ ಮನಸ್ಸು ಆಲೋಚಿಸುವಾಗ ಎಲ್ಲ ಕಾಲಗಳಲ್ಲೂ ಯಂತ್ರದಂತೆ ಕರಾರುವಾಕ್ಕಾಗಿ ಕೆಲಸಮಾಡುವುದೆಂದೂ ನಂಬಲಾಗುವುದಿಲ್ಲ.

ನಿರ್ದಿಷ್ಟ ತೀರ್ಮಾನಗಳಿಗೆ ಆಲೋಚನೆ ಒಂದು ಪ್ರಮುಖ ಮಾರ್ಗವಾದರೂ ಇತರ ಮಾರ್ಗಗಳಿಲ್ಲದಿಲ್ಲ. ನಮ್ಮ ಧಾರ್ಮಿಕ ಹಾಗೂ ಕಲ್ಪನೆಯ ತೀರ್ಮಾನಗಳು ನಮ್ಮ ಸಂಸ್ಕೃತಿಯೊಡನೆ ಹಾಸುಹೊಕ್ಕಾಗಿ ಹೆಣೆದು ಕೊಂಡಿವೆ. ಧರ್ಮ, ಸಾಹಿತ್ಯ, ಕಲೆ ಮುಂತಾದ ಕ್ಷೇತ್ರಗಳಲ್ಲಿ ಕಾಣಬಹುದು. ಶಾಸ್ತ್ರೀಯ ರೀತಿಯ ಯೋಚನೆಗೆ ನಿಲುಕದ ಅಂಶಗಳೆಷ್ಟೋ ಮಾನವನ ಧರ್ಮದೃಷ್ಟಿಗೂ, ಕಲ್ಪನಾ ಜೀವನಕ್ಕೂ ಗೋಚರಿಸಬಹುದು.

ಉತ್ತಮ ಶಿಕ್ಷಣದಿಂದ ಆಲೋಚಿಸುವ ಅಭ್ಯಾಸಗಳನ್ನು ಬೆಳೆಸುವುದು ಶಿಕ್ಷಣದ ಗುರಿಯಾಗಿದೆ. ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಆಲೋಚಿಸುವ ಅಭ್ಯಾಸವಿರಬೇಕು. ಆಲೋಚಿಸುವ ಕ್ರಮವೂ ಗೊತ್ತಿರಬೇಕು. ವಂಶಗತವಾಗಿ ಬಂದಿರುವ ಆಲೋಚನಾ ಶಕ್ತಿಯನ್ನು ಹೆಚ್ಚಿಸಲಾಗದಿದ್ದರೂ ಅದು ಶಾಸ್ತ್ರೀಯ ರೀತಿಯಲ್ಲಿ ಕಾರ್ಯನಿರ್ವಹಿಸುವ ಅಭ್ಯಾಸದ ಸೌಲಭ್ಯವನ್ನೂ, ಕ್ರಮದ ಪರಿಚಯವನ್ನೂ ದೊರಕಿಸಿಕೊಡುವ ವಿಚಾರದಲ್ಲಿ ಶಾಲೆಗಳು, ವಿದ್ಯಾಶ್ರಮಗಳು ಪ್ರಧಾನ ಪಾತ್ರ ವಹಿಸುತ್ತವೆ. ಅಂತಹ ಕೆಲವು ಮುಖ್ಯ ಅಂಶಗಳನ್ನು ಪರಿಶೀಲಿಸುವುದಾದರೆ,

---

**18. ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ -15, ಪು - 375-376.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

**1. ಪದಗಳ ಸರಿಯಾದ ಅರ್ಥ ಪರಿಚಯ.**

**2. ಅಂಕಿಅಂಶಗಳಲ್ಲಿ ನಂಬಿಕೆ ಮತ್ತು ಆಸಕ್ತಿ.**

**3. ಆಲೋಚಿಸದೆ ತೀರ್ಮಾನಕ್ಕೆ ಬರುವುದರ ಅಪಾಯ.**

**4. ಆಲೋಚಿಸಬೇಕಾದ ವಿಷಯದ ಸ್ಪಷ್ಟೀಕರಣ.**

**5. ಉಪಾಧ್ಯಾಯರ ಆದರ್ಶ.**

**6. ಆಲೋಚನೆಯ ಶಾಸ್ತ್ರೀಯ ಕ್ರಮದ ಪರಿಚಯ.**

**7. ಕಲಿಕೆಯ ಕಾರ್ಯಕ್ರಮದಲ್ಲಿ ಆಲೋಚನೆಗೆ ಅವಕಾಶ ಹೆಚ್ಚಿರಬೇಕು**

ಹೇಗೆ ವ್ಯಾಕರಣದಿಂದ ಭಾಷೆಯ ಮೇಲೆ ಹಿಡಿತ ಸಾಧಿಸಬಹುದೋ, ಹಾಗೆಯೇ ಆಲೋಚನೆಯ ಸರಿಯಾದ ಕ್ರಮವನ್ನು ಅರಿತರೆ ಆಲೋಚಿಸುವ ಕಾರ್ಯವೂ ಚೆನ್ನಾಗಿ ನಡೆಯುತ್ತದೆ. ಪ್ರಶ್ನೆಗಳನ್ನು ಹಾಕಿಕೊಂಡು ಮಕ್ಕಳು ಕುತೂಹಲದಿಂದ ಕೇಳುವ ಪ್ರಶ್ನೆಗಳಿಗೆ ಸೂಕ್ತ ಉತ್ತರ ಹೇಳಿಕೊಂಡು, ಆಲೋಚಿಸಿ ತಾವೇ ವಿಷಯವನ್ನು ಕ್ರಮವಾಗಿ ಪರಿಚಯ ಮಾಡಿಕೊಳ್ಳುವಂತೆ ಬೋಧನೆ ಮಾಡುವುದು ಒಂದು ಆದರ್ಶ ಕ್ರಮ. ಇದರಿಂದ ಮಕ್ಕಳು ಚೆನ್ನಾಗಿ ಕಲಿಯುವರು. ಜೊತೆಯಲ್ಲಿ ಆಲೋಚಿಸುವ ಅವಕಾಶವನ್ನೂ ಗಳಿಸುವರು. ಇದನ್ನೇ ಸಂವಾದಾತ್ಮಕ ಬೋಧನೆ ಎನ್ನುವರು. ವಿಷ್ಣುಶರ್ಮರು ರಾಜಕುವರರಿಗೆ ವಿದ್ಯೆಯನ್ನು ಕಲಿಸಲು ಇದೇ ಮಾದರಿಯ ಬೋಧನಾ ಕ್ರಮವನ್ನು ಅನುಸರಿಸಿ, ಉತ್ತಮ ಮಾರ್ಗದರ್ಶನ ನೀಡುತ್ತಿದ್ದರು. ಪಾಠಬೋಧನೆ ಕೇವಲ ಉಪಾಧ್ಯಾಯರ ತೀರ್ಮಾನಗಳಂತೆ ಇರಬಾರದು. ಮಕ್ಕಳ ವಿವೇಚನೆಗೆ ಅವಕಾಶ ಕಲ್ಪಿಸುವಂತಿರಬೇಕು. ಆಗ ಮಕ್ಕಳಿಗೆ ಆಲೋಚಿಸುವ ಅವಕಾಶವೂ ದೊರೆತು, ಶಾಸ್ತ್ರೀಯ ರೀತಿಯಲ್ಲಿ ಆಲೋಚಿಸುವ ಅಭ್ಯಾಸವೂ ಬೆಳೆಯುತ್ತದೆ. ವ್ಯಕ್ತಿಯ ಮತ್ತು ಸಮಾಜ ಜೀವನದಲ್ಲಿ ಆತುರದ ತೀರ್ಮಾನಗಳಿಂದ ಒದಗಬಹುದಾದ ದುರಂತಗಳು ಹೆಚ್ಚಿನ ಮಟ್ಟಿಗೆ ತಪ್ಪುತ್ತವೆ.[19]



19. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 15, ಪು – 378–383.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು –4

## 4–3. ಮನೋಧೋರಣೆಗಳು: ವರ್ತನೆಗಳು–ಪರಿವರ್ತನೆ

### ಶೀಲಸಂಪನ್ನತೆ

ಸಮಾಜದ ಅಗತ್ಯತೆಗಳು ಹಾಗೂ ಅಪೇಕ್ಷೆಗಳಿಗನುಗುಣವಾಗಿ ಮಕ್ಕಳ ವರ್ತನೆಯನ್ನು ಮಾರ್ಪಡಿಸುವುದೇ ಶಿಕ್ಷಣದ ಪ್ರಮುಖ ಉದ್ದೇಶವಾಗಿದೆ. ಮಾನವನ ವರ್ತನೆ ಹಲವಾರು ಗುಣಗಳ ಗಣಿಯಾಗಿದೆ. ಅವುಗಳಲ್ಲಿ ಬಹಳ ಮುಖ್ಯವಾದ ಗುಣವೆಂದರೆ ಮನೋಭಾವಗಳು ಅಥವಾ ಮನೋಧೋರಣೆಗಳು. ಮನೋಭಾವಗಳು ಜನ್ಮತಃ ಬಂದವಲ್ಲ. ಇವು ಜೀವನದಲ್ಲಿ ರೂಢಿಸಿಕೊಂಡಂತಹವು. ಯಾವುದೇ ಒಂದು ಸನ್ನಿವೇಶದಲ್ಲಿ ಒಬ್ಬ ವ್ಯಕ್ತಿಯು ನಿರ್ದಿಷ್ಟ ರೀತಿಯಲ್ಲಿ ವರ್ತಿಸುವಂತೆ ಮಾಡುವ ಇಂಥ ಆರ್ಜಿತ ಪ್ರವೃತ್ತಿಗಳನ್ನು ಮನೋಭಾವಗಳು**(Attitudes)** ಎಂದು ಕರೆಯುವರು.[20] ಒಂದು ವಿಷಯದ ಕಲಿಕೆ, ಹವ್ಯಾಸಗಳು, ಆಸಕ್ತಿಗಳು ಹಾಗೂ ಇತರ ಮನೋ–ದೈಹಿಕ ಅಂಶಗಳನ್ನು ರೂಢಿಸಿಕೊಳ್ಳುವಿಕೆಯು ವ್ಯಕ್ತಿ ಹೊಂದಿರುವ ಮನೋಧೋರಣೆಗಳ ಸ್ವರೂಪದಿಂದ ಪ್ರಭಾವಿತವಾಗುತ್ತವೆ.

"ನಿರ್ದಿಷ್ಟ ವಸ್ತುಗಳಿಗೆ ವ್ಯಕ್ತಿಯು ತೋರುವ ಅನುಕ್ರಿಯೆಯ ಮೇಲೆ ನಿರ್ದೇಶಕ ಅಥವಾ ಚಲನಶೀಲ ಪ್ರಭಾವ ಬೀರುವ ಅನುಭವಗಳಿಂದ ಸಂಘಟಿಸಲ್ಪಟ್ಟ ಮಾನಸಿಕ ಮತ್ತು ನರಮಂಡಲದ ಸ್ಥಿತಿಯೇ ಮನೋಧೋರಣೆ" ಎಂದು **GORDON WILLARD ALLPORT,** ಎಂಬ ಸಮಕಾಲೀನ ಅಮೆರಿಕಾದ ಸಾಮಾಜಿಕ ಮನಶ್ಶಾಸ್ತ್ರಜ್ಞರು ವ್ಯಾಖ್ಯಾನಿಸಿದ್ದಾರೆ. ಮತ್ತೊಬ್ಬ ಮನಶ್ಶಾಸ್ತ್ರಜ್ಞ **FRANK N. FREE-MAN- (Canadian born American Educational Psychologist)** ಹೀಗೆ ಹೇಳಿದ್ದಾರೆ– "ನಿರ್ದಿಷ್ಟ ಸನ್ನಿವೇಶಗಳು, ವ್ಯಕ್ತಿಗಳು, ವಸ್ತುಗಳು ಇಂಥವುಗಳ ಉದ್ದೀಪನೆಗೆ ನಿರ್ದಿಷ್ಟ ಅನುಕ್ರಿಯೆ ತೋರುವಂತೆ ಮಾಡುವ ಮನಸ್ಸಿನ ಪೂರ್ವಸಿದ್ಧ ಸ್ಥಿತಿಯೇ ಮನೋಧೋರಣೆ. ವಿಷ್ಣುಪುರಾಣದಲ್ಲಿ ಒಂದು ಸರಳ ವಿವರಣೆ ಹೀಗಿದೆ:–

तस्मात् दुःखात्मकं नास्ति न च किञ्चित्सुखात्मकम् ।

मनसः परिणामोऽयं सुखदुःखादिलक्षणः ॥[21]

ಮನೋಧೋರಣೆಗಳು ಅನುಭವ ಜನ್ಯವಾಗಿದ್ದು, ಬೌದ್ಧಿಕ, ಜೈವಿಕ, ಸಾಮಾಜಿಕ ಮತ್ತು ಸಂವೇಗಾತ್ಮಕ ಅಂಶಗಳನ್ನೊಳಗೊಂಡಿರುತ್ತದೆ. ವ್ಯಕ್ತಿಯ ವರ್ತನೆಯ ಮೇಲೆ ಕ್ರಿಯಾಶೀಲ ಪ್ರಭಾವ

---

**20. ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 20, ಪು –520..(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು –4

**21 ವಿಷ್ಣುಪುರಾಣ 2–6–47.**

ಬೀರುತ್ತವೆ. ಮನೋಧೋರಣೆಯ ವಿನ್ಯಾಸಗಳು ವಿವಿಧವಾಗಿವೆ. ಅವುಗಳೆಂದರೆ:– ಆರೋಗ್ಯ, ಜೀವನ, ಸಾವು, ಜನಸಂಖ್ಯೆ, ಸಂಗೀತ, ಕಲೆ, ಆಟಗಳು, ಸರ್ಕಾರ, ಧರ್ಮ, ರಾಜನೀತಿ ಇತ್ಯಾದಿ. ಇವುಗಳ ಬಗ್ಗೆ ಪ್ರತಿಯೊಬ್ಬನೂ ತನ್ನದೇ ಆದ ಮನೋಭಾವವನ್ನು ಹೊಂದಿರುತ್ತಾನೆ.[22]

ಮನೋಭಾವನೆಗಳು ಮೊದಮೊದಲು ಆಕಸ್ಮಿಕವಾಗಿ ರೂಪುಗೊಳ್ಳುವುದು. ಕ್ರಮಕ್ರಮವಾಗಿ ನಮಗೆ ಅರಿವೇ ಇಲ್ಲದಂತೆ ಧೃಢಗೊಳ್ಳುತ್ತಾ ಹೋಗುವುದು. ಮನೋಧೋರಣೆ ಕುರಿತು ಅನೇಕ ವಿಷಯಗಳಲ್ಲಿ ಸಂಶೋಧನೆಗಳನ್ನು ಸಮಾಜವಿಜ್ಞಾನ ನಡೆಸಿದೆ. ಕೆಲವು ವ್ಯಕ್ತಿಗಳು ಸರಳವಾಗಿ ಹೊಂದಿಕೊಳ್ಳುವ, ಸ್ನೇಹಮಯಿ, ಮನಬಿಚ್ಚಿ ಮಾತನಾಡುವ, ಸಹಾಯ ಹಸ್ತವನ್ನು ಚಾಚುವ ಸ್ವಭಾವವುಳ್ಳವರು ಧನಾತ್ಮಕ ಮನೋಧೋರಣೆಯನ್ನು ಹೊಂದಿರುತ್ತಾರೆ. ಇನ್ನು ಕೆಲವು ವ್ಯಕ್ತಿಗಳು ಅಸೂಯೆಯ ಭಾವನೆ, ಯಾವಾಗಲೂ ತಪ್ಪನ್ನು ಹುಡುಕುವ, ಮಾತುಮಾತಿಗೆ ಜಗಳ ಕಾಯುವ, ಸ್ವಪ್ರತಿಷ್ಟೆಯ, ಸ್ವಾರ್ಥವನ್ನೇ ಯೋಚಿಸುವ, ಏಕಾಂತ ಬಯಸುವ ಸ್ವಭಾವವುಳ್ಳವರು ಋಣಾತ್ಮಕ ಮನೋಧೋರಣೆಯನ್ನು ಹೊಂದಿರುತ್ತಾರೆ.[23]

ಮಕ್ಕಳಿಗೆ ಆದರ್ಶಗಳನ್ನು ಮನಸ್ಸಿಗೆ ಹಿತವಾಗುವ ಹಾಗೂ ಹಿತವಾಗುವ ಸನ್ನಿವೇಶಗಳನ್ನು ಒದಗಿಸಿ ಮನೋಭಾವಗಳನ್ನು ಮೂಡಿಸಬೇಕು. ಹಾಗೆಯೇ ಕ್ರಮವಾಗಿ ಕೆಲವು ಮೌಲ್ಯಗಳಿಗನುಗುಣವಾದ ಅನುಭವದ ಸನ್ನಿವೇಶಗಳನ್ನು ನೀಡುತ್ತಾ, ಉತ್ತಮ ವ್ಯಕ್ತಿತ್ವನಿರ್ಮಾಣ ಮಾಡಬೇಕಾದುದು ಶಿಕ್ಷಕರ ಕರ್ತವ್ಯ.

बालः पुत्रो नीतिवाक्योपचारैः कार्ये कार्ये यत्नतः शिक्षणीयः ।

लेखा लग्ना याऽमपात्रे विचित्रा नासौ नाशं पाककालेऽपि याति ॥[24]

ಬಾಲಕನಾಗಿದ್ದಲೇ ಪುತ್ರನಿಗೆ ನೀತಿಯನ್ನು ಹೇಳಿ ಪ್ರತಿಯೊಂದು ಕಾರ್ಯದಲ್ಲಿಯೂ ಶಿಕ್ಷಣವನ್ನು ಕೊಡಬೇಕು. ಹಸಿಯ ಗಡಿಗೆಯಲ್ಲಿ ರಚಿಸಿದ ವಿಚಿತ್ರವಾದ ರೇಖೆಗಳು ಗಡಿಗೆಯನ್ನು ಸುಟ್ಟಾಗಲೂ ಅಳಿಸದೆ ಇರುತ್ತವೆ.

ಮಕ್ಕಳಲ್ಲಿ ಬೆಳೆಯಬೇಕಾದ ಎಲ್ಲ ಉಚಿತ ಮನೋಭಾವಗಳಿಗೂ ಶಿಕ್ಷಕರ ಜೀವನದ ಆದರ್ಶ ಲಕ್ಷಣಗಳಿಂದ ದೊರಕುವಂತಿರಬೇಕು.ಆದ್ದರಿಂದ ಶಿಕ್ಷಕರು ಆದರ್ಶ ಮಾನವರಾಗಬೇಕು. ಸಮಾಜದ ಆದರ್ಶಗಳಲ್ಲಿ ಪಳುಗಿರಬೇಕು. ಧೃಢಚಿತ್ತ, ಸತ್ಯಸಂಧತೆ, ಸಮಾಜ ಎತ್ತಿ ಹಿಡಿಯುವ ಜೀವನ ತತ್ವ ಈ

---

22. **ವಾಮದೇವಪ್ಪ. ಎಚ್. ವಿ,** ಶೈಕ್ಷಣಿಕ ಮನೋವಿಜ್ಞಾನ, ಅ – 3, ಪು –150–151.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
23. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 3, ಪು –151.(2005)ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
24. **ಸುಭಾಷಿತಮಂಜರೀ** –ಸಂಸಾರ– ಶ್ಲೋ–48, ಪು–25, (2001) ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18.

ಅಂಶಗಳಲ್ಲಿ ಶಿಕ್ಷಕರು ಅಥವಾ ಬೋಧಕರು ಆದರ್ಶ ಜೀವಿಗಳೆನಿಸಿರಬೇಕು. ತಮ್ಮ ವರಿಷ್ಠ ವ್ಯಕ್ತಿತ್ವದ ಮೂಲಕ ತಮ್ಮ ಆ ಆದರ್ಶಗಳು ಮಕ್ಕಳಲ್ಲಿ ಸಮಾಜಹಿತಕ್ಕೊಪ್ಪುವ ಮನೋಧೋರಣೆಯನ್ನು ರೂಪಿಸುವ ಶಿಲ್ಪಿಗಳಾಗಬೇಕು.

ಇಂದಿನ ಮಕ್ಕಳು ಮುಂದಿನ ಪ್ರಜೆಗಳು. ಮುಂದೆ ಹತ್ತಾರು ವರ್ಷ ಬಾಳಬದುಕುತ್ತಾರೆ. ಜೀವನದಲ್ಲಿ ಶಾಲೆಯ ಬಗ್ಗೆ ಅವರು ತಾಳಬಹುದಾದ ಮನೋಧೋರಣೆ ಅವರ ಮುಂದಿನ ಜೀವನದ ಮೇಲೆ ಅಪಾರ ಪರಿಣಾಮ ಬೀರುತ್ತದೆ. ಹೀಗಿರುವುದರಿಂದ ಮಕ್ಕಳು ಶಾಲೆಯ ಬಗ್ಗೆ ವಿಶಿಷ್ಟ ಅಭಿಮಾನದ ಮನೋಭಾವನೆಯನ್ನು ಬೆಳೆಸಿಕೊಳ್ಳುವಂತೆ ಮಾಡುವುದು ಶಾಲೆಯ ಹಾಗೂ ರಾಷ್ಟ್ರದ ಹಿತದೃಷ್ಟಿಯಿಂದ ಅಗತ್ಯವಾಗಿರುತ್ತದೆ. ಇದರೊಡನೆ ಸಾಹಿತ್ಯ, ಸಂಸ್ಕೃತಿ, ಕಲೆ, ಸದ್ಭಾವನೆ, ಸಜ್ಜನಿಕೆ, ಸತ್ಯ ಇವೆಲ್ಲದರ ಬಗ್ಗೆಯೂ ಹಿತಕರವಾದ ಮನೋಧೋರಣೆ ಮೂಡುವ ಸಂಭವ ಹೆಚ್ಚಿರುತ್ತದೆ. ಇದರಿಂದ ಮಕ್ಕಳಲ್ಲಿ ಅಹಿತಕರ ದುರ್ವವರ್ತನೆಗಳು ಹಿತಕರ ಸದ್ವರ್ತನೆಗಳಗೆ ಪರಿವರ್ತನೆಗೊಂಡು ಶೀಲಸಂಪನ್ನತೆ ಪ್ರಾಪ್ತವಾಗುವುದು.[25] ಮಕ್ಕಳಿಗೆ ಒಳ್ಳೆಯ ಸಹವಾಸ ಹಾಗೂ ಉತ್ತಮ ಪರಿಸರವನ್ನು ಒದಗಿಸಿಕೊಡಬೇಕು.

शिशौ प्रविशतः प्रायः प्रतिवेशिगुणागुणौ ।

गंधोऽन्यसंनिधेरेव संक्रामति समीरणे ॥[26]

ಮಕ್ಕಳಲ್ಲಿ ನೆರೆಮನೆಯವರ ಸದ್ಗುಣಗಳೂ, ದುರ್ಗುಣಗಳೂ ಸಾಮಾನ್ಯವಾಗಿ ಸೇರಿಕೊಳ್ಳುತ್ತವೆ, ಗಾಳಿಯಲ್ಲಿ ಇನ್ನೊಂದು ವಸ್ತುವಿನ ವಾಸನೆ ಸೇರಿಕೊಳ್ಳುವಂತೆ.

ಮನೋಭಾವನೆಗಳು ಮುಖ್ಯವಾಗಿ ನಾಲ್ಕು ಆಯಾಮಗಳನ್ನೊಳಗೊಂಡಿರುತ್ತದೆ. ಅವು ಯಾವುವೆಂದರೆ – ತೀವ್ರತೆ, ದಿಕ್ಕು, ವ್ಯಾಪಕತೆ ಮತ್ತು ಅವಧಿ. ಮನೋಧೋರಣೆಯ ತೀವ್ರತೆ ಎಂದರೆ ವ್ಯಕ್ತಿಯ ವರ್ತನೆಯನ್ನು ಎಷ್ಟರಮಟ್ಟಿಗೆ ಪ್ರೇರೇಪಿಸುತ್ತದೆಂಬುದನ್ನು ಸೂಚಿಸುತ್ತದೆ. ಉದಾಹರಣೆಗೆ:– ಉಪಾಧ್ಯಾಯರ ಬಗ್ಗೆ ತೀವ್ರ ಋಣಾತ್ಮಕ ಮನೋಭಾವನೆ ಹೊಂದಿರುವ ವ್ಯಕ್ತಿಯು ನೇರವಾಗಿ ತನ್ನ ಕೋಪವನ್ನು ಅವರ ಮೇಲೆ ತೀರಿಸಿಕೊಳ್ಳಲಾಗುವುದಿಲ್ಲ. ಅದಕ್ಕೆ ಅವನು ಆ ಉಪಾಧ್ಯಾಯರ ಬಗ್ಗೆ ಸಾರ್ವಜನಿಕ ಸ್ಥಳಗಳಲ್ಲಿ ಕೆಟ್ಟ ಹೇಳಿಕೆ ಬರೆಯುವುದು ಅಥವಾ ಅವರ ಆಸ್ತಿ ಹಾಳುಮಾಡುವುದರ ಮೂಲಕ ಪರೋಕ್ಷವಾಗಿ ತನ್ನ ಭಾವನೆ ವ್ಯಕ್ತಪಡಿಸುತ್ತಾನೆ.ಹೀಗೆ ಮನೋಧೋರಣೆಗಳು ಧನಾತ್ಮಕವಾಗಿ, ಋಣಾತ್ಮಕವಾಗಿ ಅಥವಾ ತಟಸ್ಥವಾಗಿ

---

**25**. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 20, ಪು–519–522.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

**26**. हरिहरविरचितं हरिहरसुभाषितम्– 2–51.

ಈ ಮೂರೂ ದಿಕ್ಕುಗಳಲ್ಲಿ ಪ್ರಕಟಗೊಳ್ಳಬಹುದು. ಉದಾಹರಣೆಗೆ-ಸ್ನೇಹಿತನ ಬಗ್ಗೆ ಧನಾತ್ಮಕ ಧೋರಣೆ, ವೈರಿಯ ಬಗ್ಗೆ ಋಣಾತ್ಮಕ ಧೋರಣೆ, ಅಪರಿಚಿತನ ಬಗ್ಗೆ ತಟಸ್ಥ ಧೋರಣೆ. ಮನೋಧೋರಣೆಗಳಲ್ಲಿ ಕೆಲವು ನಿರ್ದಿಷ್ಟ ವರ್ತನೆಗಳ ಮೇಲೆ ಪ್ರಭಾವ ಬೀರಿದರೆ, ಇನ್ನು ಕೆಲವು ವ್ಯಕ್ತಿಯ ಎಲ್ಲಾ ವರ್ತನೆಗಳ ಮೇಲೆ ಪ್ರಭಾವ ಬೀರುತ್ತವೆ. ಉದಾಹರಣೆಗೆ:- ಮನೋಧೋರಣೆಗಳು ವ್ಯಕ್ತಿಯಲ್ಲಿ ಎಷ್ಟು ಕಾಲ ನೆಲಸಿರುತ್ತವೆ ಎಂಬುದೇ ಅವಧಿ ಆಯಾಮದ ಸೂಚಿ. ಹೆಚ್ಚು ತೀವ್ರತೆ ಹೊಂದಿರುವವು ಹೆಚ್ಚು ಕಾಲ ನೆಲೆಗೊಳ್ಳುತ್ತವೆ, ಕಡಿಮೆ ತೀವ್ರತೆ ಹೊಂದಿರುವವು ಹೆಚ್ಚು ಕಾಲ ನೆಲೆಗೊಳ್ಳುವುದಿಲ್ಲ.[27]

ಮನೋಭಾವಗಳು ವ್ರಕ್ತಿತ್ವದ ಸ್ವರೂಪದ ಒಂದು ಅಂಗವಾಗಿ ಹೋಗಿರುತ್ತವೆ. ಅವುಗಳು ಒಮ್ಮೆ ರೂಪುಗೊಂಡು ಸರಿಯಾಗಿ ಒಂದು ವ್ಯಕ್ತಿತ್ವದಲ್ಲಿ ವ್ಯವಸ್ಥೆಗೊಂಡಿದ್ದರೆ ಮತ್ತೆ ಬದಲಾವಣೆ ಹೊಂದುವುದು ಕಷ್ಟ. ಅವುಗಳ ಆಧಾರದಿಂದಲೇ ನಿಶ್ಚಿತ ರೂಪವನ್ನು ತಾಳಿ ರುವ ದೃಷ್ಟಿ ಧ್ಯೇಯಗಳು ಅಷ್ಟೆ. ಆದರೆ ಮನೋಭಾವಗಳು ಅಪಕ್ವವಾಗಿ ವ್ಯವಸ್ಥೆಯಾಗಿದ್ದಲ್ಲಿ ನೇರವಾದ ಬೋಧನೆಯಿಂದ ಬದಲಾಗಬಲ್ಲವು. ಎಲ್ಲ ಮಟ್ಟಗಳ ಶಿಕ್ಷಣ ಸಂಸ್ಥೆಗಳಲ್ಲೂ ಈ ಬಗ್ಗೆ ವಿಶೇಷ ಕಾಳಜಿ ವಹಿಸಿ ವ್ಯಕ್ತಿಯಲ್ಲಿನ ಗುಣಶೀಲಗಳ ಧನಾತ್ಮಕ ಬೆಳವಣಿಗೆಗೆ ಸೂಕ್ತ ಬೋಧನೆ ಹಾಗೂ ಮಾರ್ಗದರ್ಶನ ನೀಡಬೇಕು.

ಸಾಮಾನ್ಯವಾಗಿ ವ್ಯಕ್ತಿಯ ಶೀಲಸಂಪನ್ನತೆಗೂ, ನೈತಿಕ ಶಿಕ್ಷಣಕ್ಕೂ ಸಂಬಂಧವಿರುವುದು ಸರ್ವವೇದ್ಯವಾದುದು. ನೈತಿಕ ಶಿಕ್ಷಣ, ಸಾಮಾಜಿಕ ಜೀವನಕ್ಕೆ ಬೇಕಾಗುವ ಗುಣಶೀಲಗಳನ್ನು ನಿರೂಪಿಸಿದರೆ, ವ್ಯಕ್ತಿತ್ವ ನಿರೂಪಣೆಯಲ್ಲಿ ಅದರ ಪ್ರಭಾವ ಪ್ರಾಧಾನ್ಯಕ್ಕೆ ಬರುತ್ತದೆ.ನೇರವಾದ ನೀತಿಬೋಧೆ, ಉಪಾಧ್ಯಾಯರ ಮೇಲ್ಪಂಕ್ತಿ, ಇತರ ಹಿರಿಯರ ಆದರ್ಶ ಇವು ವ್ಯಕ್ತಿ ಜೀವನದ ಮೇಲೆ ಅತ್ಯಂತ ಪ್ರಭಾವಕಾರಿಯಾಗುತ್ತದೆ.[28] ಇನ್ನೂ ಯಾವ ಮನೋಧೋರಣೆಯೂ ರೂಪುಗೊಳ್ಳದ ಎಳೆಯ ದಿನಗಳ ಮಕ್ಕಳ ಗುಣಶೀಲಗಳನ್ನು ತಿದ್ದುವಾಗ ನೇರವಾದ ಬೋಧನೆ ಅದರ್ಶ ಮತ್ತು ಆದೇಶಗಳು ಸೂಕ್ತವಾದರೆ ಆ ಮಕ್ಕಳ ವಿವೇಚನೆಯನ್ನು ಪರಿವರ್ತಿಸುವ ಮತ್ತು ಸ್ವಪ್ರೇರಣೆಯಿಂದ ಅಂತಹ ಪರಿವರ್ತನೆಗಳನ್ನು ಸ್ವೀಕರಿಸುವ ಕಾರ್ಯಕ್ರಮಗಳನ್ನು ಉಪಾಧ್ಯಾಯರು ವ್ಯವಸ್ಥೆ ಮಾಡಿಕೊಡುವುದು ಅವಶ್ಯಕವಾಗಿರುತ್ತದೆ. ಈ ಸಮಯದಲ್ಲಿ ತಿಳಹೇಳದ ಮಾತುಗಳು ಅವರ ವಯಸ್ಕರ ಜೀವನಕ್ಕೂ ಅನ್ವಯಿಸುವಂತಿರಬೇಕು. शीलं परं भूषणं ಅಂದರೆ ಶೀಲಕ್ಕಿಂತ ಮಿಗಿಲಾದ ಭೂಷಣವಿಲ್ಲ. ವ್ಯಾಸ ಮಹರ್ಷಿಗಳು ಮಹಾಭಾರತದಲ್ಲಿ ಹೀಗೆ ಹೇಳಿದ್ದಾರೆ–

---

27. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ– 3, ಪು – 151–152.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
28. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ –20, ಪು –530–531.(1962)ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

शीलं प्रधानं पुरुषे तद् यस्येह प्रणश्यति ।

न तस्य जीवितेनार्थो न धनेन न बन्धुभिः ॥[29]

ಮನುಷ್ಯನಿಗೆ ಶೀಲ ಎಲ್ಲಕ್ಕಿಂತ ಮುಖ್ಯ. ಅದು ಇಲ್ಲದ ಬಳಿಕ ಅಂಥ ವ್ಯಕ್ತಿಯ ಸಂಪರ್ಕದಿಂದಾಗಲೀ, ಬಾಂಧವ್ಯದಿಂದಾಗಲೀ, ಜೀವನದಿಂದಾಗಲೀ ಏನೂ ಅರ್ಥವಿಲ್ಲ. "कुरूपता शीलतया विराजते " ಎಂಬಂತೆ ಶೀಲದಿಂದ ಕುರೂಪವೂ ಸುರೂಪವಾಗುತ್ತದೆ.

ವ್ಯಕ್ತಿಯ ಗುಣಶೀಲಗಳ ನಿರೂಪಣೆಯಲ್ಲಿ ಸಮಾಜದ ಸಂಸ್ಕೃತಿ, ಸಂಪ್ರದಾಯಗಳು ನಿರ್ದಿಷ್ಟ ಪ್ರಭಾವವನ್ನು ಬೀರುತ್ತವೆ. ಗುಣಶೀಲಗಳು ವ್ಯಕ್ತಿ ತಾನು ತಳೆದಿರುವ ಮೌಲ್ಯಕ್ಕನುಗುಣವಾಗಿ ರೂಪಿತವಾಗುತ್ತವೆ. ಈ ಮೌಲ್ಯವು ಸಮಾಜದ ಆಸೆಆಕಾಂಕ್ಷೆಗಳನ್ನೂ, ಸಂಸ್ಕೃತಿ ಸಂಪ್ರದಾಯಗಳನ್ನೂ ಅವಲಂಬಿಸಿರುತ್ತದೆ. ಅಪೇಕ್ಷಿತ ಮನೋಭಾವನೆಗಳನ್ನು ಬೆಳೆಸುವಿಕೆ ಮತ್ತು ಮನೋಭಾವನೆಗಳನ್ನು ಏರ್ಪಡಿಸುವಿಕೆ ಉಂಟಾಗುವುದು ಶಾಲಾ ಅನುಭವಗಳಿಂದ ಹಾಗೂ ಶಿಕ್ಷಕರ ಪ್ರಭಾವದಿಂದ, ಕೆಲವು ಘಟನೆಗಳು, ಪಠ್ಯ ಹಾಗೂ ಸಹ ಪಠ್ಯ ಚಟುವಟಿಕೆಗಳಿಂದ. ಶಾಲೆಗಳಲ್ಲಿ ನೀತಿಶಿಕ್ಷಣವನ್ನು ಬೋಧಿಸುವಾಗ ಶ್ರೇಷ್ಠ ವ್ಯಕ್ತಿಗಳ ಜೀವನಚರಿತ್ರೆ ಮತ್ತು ಅವರ ತತ್ವಗಳು ಮಕ್ಕಳಿಗೆ ದಾರಿದೀಪವಾಗಲು ಮಾರ್ಗದರ್ಶನ ಮಾಡಬೇಕು. ಇದರಿಂದ ಅವರ ಅನೇಕ ಅನಪೇಕ್ಷಿತ ವರ್ತನೆಗಳು ಪರಿವರ್ತನೆಗೊಂಡು ಉತ್ತಮ ಗುಣಶೀಲಗಳನ್ನು ಬೆಳೆಸಿಕೊಂಡು ಆದರ್ಶವಾಗಿ ಬದುಕುವರು.[30] ಮಕ್ಕಳು ತಮ್ಮ ಭಾವನೆಗಳನ್ನು ಮುಕ್ತವಾಗಿ ಅಭಿವ್ಯಕ್ತಿಗೊಳಿಸಲು ಅವಕಾಶ ಕಲ್ಪಿಸಿಕೊಡಬೇಕು. ಶಾಲೆಯ ಚಟುವಟಿಕೆಗಳಲ್ಲಿ ಭಾಗವಹಿಸಿ ಯೋಜನೆಗಳಲ್ಲಿ ಪಾಲ್ಗೊಳ್ಳುವುದು, ಸಾಂಸ್ಕೃತಿಕ ಚಟುವಟಿಕೆಗಳು ಮತ್ತು ಪಠ್ಯ ವಿಷಯಗಳಲ್ಲಿ ಚರ್ಚೆ ಮುಂತಾದ ಕ್ರಿಯಾತ್ಮಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಂತೆ ಆಸಕ್ತಿ ಕೆರಳಿಸಿ, ಅವರು ಸತ್ಕಾರ್ಯ, ಸನ್ನಡತೆಯೆಡೆಗೆ ಗಮನಹರಿಸುವಂತೆ ಪ್ರೋತ್ಸಾಹಿಸಬೇಕು. ಇದರಿಂದ ಅವರಲ್ಲಿ ಅಶಿಸ್ತು, ಅಶಾಂತಿ, ಅವಿಧೇಯತೆ, ಅನಾಸಕ್ತಿ ಇತ್ಯಾದಿ ವರ್ತನೆಗಳು ಪರಿವರ್ತನೆಗೊಂಡು ಉತ್ತಮ ಗುಣಶೀಲಗಳೆಡೆಗೆ ಆಸಕ್ತಿ ಹೊಂದಿ ಜಾಗೃತರಾಗುವರು.

ಇಂದಿನ ದಿನಗಳಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಒಂದು ದೊಡ್ಡ ಕೊರಗು ಕಾಡುತ್ತಿದೆ. ಅದೇನೆಂದರೆ, ಅಂಕಗಳಿಗಾಗಿ, ವೃತ್ತಿಗಾಗಿ, ಶಿಕ್ಷಣವಾಗಿಬಿಟ್ಟಿದೆ. ಜ್ಞಾನವೃದ್ಧಿ, ನೀತಿ, ಗುಣ ಸಂಪತ್ತು, ಬದುಕಿನ ಸಾರ್ಥಕ್ಯ ಲಕ್ಷಣಗಳು ಮತ್ತುಜೀವನ ಮೌಲ್ಯಗಳನ್ನು ಕಾಣುತ್ತಿಲ್ಲ. ಹಿಂದೆ ಗುರುಕುಲಗಳಲ್ಲಿ, ಶಿಷ್ಯರ ಬಗ್ಗೆ ವೈಯಕ್ತಿಕ

---

**29. ಭಟ್.ವಿ.ಎನ್,** ಜ್ಞಾನದೀಪ, ಅ–92–ಪು–191 (ವ್ಯಾಸಮಹರ್ಷಿಗಳು–ಮಹಾಭಾರತದಲ್ಲಿ). ವಿಶ್ವನಾಥ ಪ್ರಕಾಶನ,(1997) ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ–577201.

**30. ವೀರಪ್ಪ. ಎನ್.ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ –20, ಪು – 531–537. ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4.

ಗಮನಹರಿಸಿ, ಬದುಕಿನ ವ್ಯವಹಾರಗಳ ಕುರಿತು ಅನೇಕ ವಿಚಾರಗಳನ್ನು ಮನದಟ್ಟು ಮಾಡುತ್ತಾ, ವಿವಿಧ ರೀತಿಯ ಸಾಮಾಜಿಕ ಮತ್ತು ನೈತಿಕ ಮೌಲ್ಯಗಳನ್ನು ಕಲಿಸುತ್ತಿದ್ದರು. ಗುರುಹಿರಿಯರನ್ನು ಕಂಡರೆ ಅಪಾರ ಗೌರವ, ಭಕ್ತಿ, ಶ್ರದ್ಧೆ, ವಿಧೇಯತೆ ಮುಂತಾದ ಗುಣಗಳಿಂದ ಶಿಷ್ಯರು ಸಂಸ್ಕಾರವಂತರಾಗಿ ಕಂಡುಬರುತ್ತಿದ್ದರು.

श्रद्धावाँल्लभते ज्ञानं तत्परः संयतेन्द्रियः।

ज्ञानं लब्ध्वा परां शान्तिमचिरेणाधिगच्छति ॥[31]

ಶ್ರದ್ಧಾವಂತನೂ, ತತ್ಪರನೂ, ಜಿತೇಂದ್ರಿಯನೂ, ಆದವನಿಗೆ ಜ್ಞಾನವು ಲಭಿಸುತ್ತದೆ. ಜ್ಞಾನವು ಬರುತ್ತಲೇ ಅವನು ಮುಕ್ತಿಯನ್ನು ಪಡೆಯುತ್ತಾನೆ. ಹೀಗೆಂದು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸುತ್ತಾ ಜ್ಞಾನದ ಮಹತ್ವವನ್ನು ತಿಳಿಸುತ್ತಾನೆ.

विद्या ददाति विनयं विनयाद्याति पात्रताम् ।

पात्रत्वाद्धनमाप्नोति धनाद्धर्मं ततः सुखम् ॥[32]

ವಿದ್ಯೆಯು ವಿನಯವನ್ನು ಕೊಡುತ್ತದೆ. ವಿನಯದಿಂದ ಸ್ಥಾನವು ಸಿಗುತ್ತದೆ. ಸ್ಥಾನದಿಂದ ಹಣವು ದೊರಕುತ್ತದೆ. ಆ ಹಣದ ದಾನಧರ್ಮದಿಂದ ನಂತರ ಸುಖವು ಉಂಟಾಗುತ್ತದೆ. ಈ ಉಕ್ತಿಗಳು ಅಕ್ಷರಶಃ ಅರ್ಥಬದ್ಧವಾಗಿ ಕಂಡು ಬರುತ್ತಿದ್ದವು. ಅಂದರೆ, ಪಂಚತಂತ್ರದಲ್ಲಿ ವಿಷ್ಣುಶರ್ಮರು ಬಹಳ ವ್ಯವಸ್ಥಿತವಾಗಿ ರಾಜಕುಮಾರರಿಗೆ ಗುರುಕುಲ ಪದ್ಧತಿಯನ್ನು ಅನುಸರಿಸಿ, ಶಿಷ್ಯರಿಗೆ ಶ್ರದ್ಧಾಭಕ್ತಿಯಿಂದ ಇಷ್ಟಪಟ್ಟು ಕಲಿಯುವಂಥಹ ವಾತಾವರಣ ಒದಗಿಸಿ ಕೊಟ್ಟಿರುತ್ತಾರೆ. ಯಾವ ಯಾವ ಸಂದರ್ಭದಲ್ಲಿ ಎಷ್ಟು ತಿಳಿಸಬೇಕೋ ಅಷ್ಟನ್ನು, ಹಿತಮಿತವಾಗಿ ಆಕರ್ಷಕ ಪುಟ್ಟ ಪುಟ್ಟ ಕಥೆಗಳ ಮೂಲಕ ಬೋಧಿಸಿದ್ದಾರೆ. ಸುಂದರ ವ್ಯಕ್ತಿತ್ವ ನಿರ್ಮಾಣಕ್ಕೆ ಉತ್ತಮ ಬುನಾದಿಯನ್ನು ಹಾಕಿದ್ದಾರೆ.

ಈಗಿನ ಶಿಕ್ಷಣ ವ್ಯವಸ್ಥೆಯಲ್ಲಿ ಪಠ್ಯಕ್ರಮ ಪಾಠಗಳ ವೇಳಾಪಟ್ಟಿಯಲ್ಲಿ ವಾರಕ್ಕೊಂದು ಅವಧಿಯನ್ನು ನೀತಿಪಾಠಕ್ಕಾಗಿ ಮೀಸಲಿಟ್ಟಿರುವುದೇನೋ ನಿಜ. ಆದರೆ ಈ ಅವಧಿ ಒಂದು ರೀತಿಯಲ್ಲಿ ಬಿಡುವಿನ ಸಮಯವಿದ್ದಂತೆ. ಅದು ಯಾವ ಉದ್ದೇಶದಿಂದ ಸಂಯೋಜಿಸಲ್ಪಟ್ಟಿದೆಯೋ, ಅದರಂತೆ ಹೆಚ್ಚಿನ ರೀತಿಯಲ್ಲಿ ಪ್ರಯೋಜನವಾಗುತ್ತಿಲ್ಲ. ಹಿಂದಿನ ಕಾಲದಲ್ಲಿ, ಇಂಥಹ ತಯಾರಿ ಮನೆಯಿಂದಲೇ ಪ್ರಾರಂಭವಾಗಿ, ಶಾಲೆ ಅಥವಾ ಆಶ್ರಮದಲ್ಲಿಯೂ ಹೆಚ್ಚಿನ ಪ್ರೋತ್ಸಾಹ ದೊರಕುತ್ತಿತ್ತು. ಉದಾಹರಣೆಗೆ:– ಹಿಂದೆ

31. **ಭಗವದ್ಗೀತೆ**, ಅ – 4, ಶ್ಲೋ–39.
32. **ಉಪನಿಶತ್ತಿನ ಒಂದು ಪ್ರಸಿದ್ಧ ಶ್ಲೋಕ.**

ಗಾಂಧೀಜಿ, ಶಿವಾಜಿಯಂತಹ ಮಹಾನುಭಾವರು ತಾಯಿಯಿಂದ ಕಲಿತ ಕಲಿಕೆಯಲ್ಲಿನ ಪ್ರೀತಿ ಹಾಗೂ ರಾಮಾಯಣ ಮತ್ತು ಮಹಾಭಾರತ ಮಹಾಕಾವ್ಯಗಳ ಕಥೆಗಳನ್ನು ಶ್ರದ್ಧಾಭಕ್ತಿಯಿಂದ ಕೇಳಿ ಅದರ ನೀತಿಪಾಠವನ್ನು ಅವರ ಜೀವನದಲ್ಲಿ ಅಳವಡಿಸಿಕೊಂಡು ಶ್ರೇಷ್ಠ ವ್ಯಕ್ತಿಗಳಾಗಿ ಬಾಳಿ ಬದುಕಿ ಇತಿಹಾಸದ ಪುಟಗಳಲ್ಲಿ ಅಮರರಾದರು. ವಿನಯೋಪೇತ ವಿದ್ಯೆಯು ಎಂಥಹವರ ಮನಸ್ಸನ್ನೂ ಆಕರ್ಷಿಸುತ್ತದೆ.

विद्या नाम नरस्य रूपमधिकं प्रच्छन्नगुप्तं धनम्

विद्या भोगकरी यशस्सुखकरी विद्या गुरूणां गुरुः ।

विद्या बन्धुजनो विदेशगमने विद्या परा देवता

विद्या राजसु पूजिता न तु धनं विद्याविहीनः पशुः ॥[33]

ವಿದ್ಯೆಯೆಂಬುದು ಮನುಷ್ಯನ ವಿಶೇಷವಾದ ರೂಪ. ಹಾಗೂ ಅದು ಅವನ ಬಚ್ಚಿಟ್ಟು ಕಾಪಾಡಲ್ಪಟ್ಟ ಧನ. ವಿದ್ಯೆಯು ಅವನಿಗೆ ಸುಖಸಂತೋಷಗಳನ್ನೂ, ಕೀರ್ತಿ ಪ್ರತಿಷ್ಠೆಗಳನ್ನು ತಂದುಕೊಡುತ್ತದೆ. ಅದು ಅವನ ಗುರುಗಳ ಗುರು. ವಿದೇಶಕ್ಕೆ ಹೊರಟಾಗ ಅದು ಅವನ ಬಂಧು. ಅದೇ ಅವನಿಗೆ ಪರದೈವ. ಅದು ರಾಜರಲ್ಲಿ ಪೂಜಿಸಲ್ಪಟ್ಟಿದೆ. ಹಣವಲ್ಲ. ವಿದ್ಯೆಯಿಲ್ಲದವನು ಪಶು. ವಿದ್ವತ್ತು ಮತ್ತು ರಾಜತ್ವ ಎಂದಿಗೂ ಸಮಾನವಾದದ್ದಲ್ಲ. ರಾಜನು ತನ್ನ ದೇಶದಲ್ಲಿ ಮಾತ್ರ ಪೂಜಿತನಾಗುತ್ತಾನೆ. ಆದರೆ ವಿದ್ವಾನ್ ಸರ್ವತ್ರ ಪೂಜ್ಯತೇ.



೩೩. **ಭರ್ತೃಹರಿಯ ನೀತಿಶತಕ,** ವಿದ್ವತ್ ಪದ್ಧತಿ– ಶ್ಲೋ–೨೦,

# 4-4. पञ्चतन्त्रस्य प्रथमंतन्त्रम्–मित्रभेदः

**ಕಥೆಗಳ ವಿಶ್ಲೇಷಣೆ ಮುಂದುವರೆದಿದೆ**

ಈ ಮೇಲೆ ವಿಶ್ಲೇಷಣೆ ಮಾಡಿದ ಉನ್ನತ ಮಟ್ಟದ ಮನೋವ್ಯಾಪಾರಗಳಾದ ಆಲೋಚನೆ – ವಿವೇಚನೆ ಹಾಗೂ ಕೆಲವು ಜಾಗೃತ ಎಚ್ಚರಿಕೆಯ ತಿಳುವಳಿಕೆಗಳಾದ – ಕಾರ್ಯಸಾಧನೆಯಲ್ಲಿ ಮುಂದಾಲೋಚನೆ – ದುಡುಕು ಅಥವಾ ಆತುರ – ಪರೀಕ್ಷಿಸದೆ ಕೆಲಸ ಮಾಡುವುದು, ಅದರ ಪರಿಣಾಮ – ವರ್ತನೆಗಳ ಪರಿವರ್ತನೆ ಮೂಲಕ ಶೀಲ ಸಂಪನ್ನತೆ ಮುಂತಾದ ಅನೇಕ ಮನೋವೈಜ್ಞಾನಿಕ ವಿಚಾರಗಳು ಶಿಕ್ಷಣ ಕ್ಷೇತ್ರದಲ್ಲಿ ಎಷ್ಟು ಪ್ರಾಮುಖ್ಯತೆ ಪಡೆದಿದೆ ಎಂಬುದರ ಬಗ್ಗೆ ಸಂಕ್ಷಿಪ್ತವಾಗಿ ತಿಳಿದದ್ದಾಯಿತು. ಇದೇ ವಿಚಾರಗಳು ವಿಷ್ಣುಶರ್ಮರ ಪಂಚತಂತ್ರದಲ್ಲಿ ಹೇಗೆ ನೈಜವಾಗಿ ಅಡಕಗೊಂಡಿರಬಹುದೆಂದು ಪರಿಶೀಲಿಸಿದಾಗ ಈ ಕೆಲವು ಅಂಶಗಳನ್ನು ಗಮನಿಸಬಹುದು. ಬಹಳ ವಿಶಿಷ್ಟವಾಗಿ ರಚಿಸಿರುವ ಪಂಚತಂತ್ರವು ಒಬ್ಬ ಪ್ರತಿಭಾನ್ವಿತ, ಅನುಭವೀ, ಸಕಲ ಶಾಸ್ತ್ರಪಾರಂಗತ, ವಿದ್ಯಾರ್ಥಿ ಸಮುದಾಯದಲ್ಲಿ ಜನಪ್ರಿಯರಾದ ಪಂಡಿತ ವಿಷ್ಣುಶರ್ಮರ ಅಮೂಲ್ಯ ಕೃತಿ.

ದಕ್ಷಿಣ ಭಾರತದಲ್ಲಿ ಒಂದು ಪ್ರಾಚೀನ ನಗರವಾದ ಮಹಿಲಾರೋಪ್ಯದ ಅರಸು ಅಮರಶಕ್ತಿ. ಅರಸನು ಸಕಲ ಕಲಾಪಾರಂಗತ. ದಾನದಲ್ಲಿ ಕಲ್ಪವೃಕ್ಷಕ್ಕೆ ಸಮಾನನು. ವೈಭವಯುತ ಆಸ್ಥಾನದಲ್ಲಿ ಉನ್ನತವಾದ ರತ್ನಸಿಂಹಾಸನದಲ್ಲಿ ವೀರಮಂಡಿಯೊಡನೆ ಗಾಂಭೀರ್ಯವೇ ಆಕಾರ ಪಡೆದಂತೆ ಗಂಭೀರವಾಗಿ ಮಂಡಿಸಿರುವ ರಾಜ. ಇಷ್ಟೆಲ್ಲ ಇದ್ದರೂ ಅರಸನ ಮುಖದಲ್ಲಿ ಮಾತ್ರ ಚಿಂತೆಯ ಗಾಢ ದುಗುಡದ ಭಾವ. ಈ ರಾಜನ ಕುವರರು ಮೂವರು. "ರಾಜಯೋಗ ಆದರೆ ದರಿದ್ರಜಾತಕ" ಎಂಬಂತೆ ಅತ್ಯಂತ ಮೂರ್ಖರು. ಅಧಿಕಾರ ಮದದಿಂದ, ಯೌವನದ ಸೊಕ್ಕಿನಿಂದ, ಯಥೇಚ್ಛ ಸಂಪತ್ತಿನ ಗರ್ವದಿಂದ, ಸಹವಾಸ ದೋಷದಿಂದ ಉದ್ಧಟರಾಗಿ ವರ್ತಿಸುವ ಪ್ರವೃತ್ತಿಯನ್ನು ಬೆಳೆಸಿಕೊಂಡಿರುವರು.[34] ಇವರಲ್ಲಿ ಉತ್ತಮ ಆಲೋಚನೆ ನಡೆಸುವ ಪರಿಜ್ಞಾನ, ಭವಿಷ್ಯದ ಕಲ್ಪನೆ, ತಂದೆಯವರ ಆತಂಕದ ಬಗ್ಗೆ ಯಾವ ಯೋಚನೆಗಳೂ ಬಂದೇ ಇರಲಿಲ್ಲ ಎನ್ನುವಂತೆ ಕಾಣಿಸುತ್ತಿದ್ದರು. ಕವಿ ಭರ್ತೃಹರಿ ಪ್ರಶ್ನೋತ್ತರ ರೂಪದಲ್ಲಿ ಹೇಳಿರುವುದನ್ನು ಈ ಸಂದರ್ಭದಲ್ಲಿ ಅನ್ವಯಿಸಬಹುದು:–

---

34. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಕಥಾಮುಖ–ಪು–9.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

को लाभो गुणिसङ्गमः किं असुखं प्राज्ञेतरैः संङ्गतिः

का हानिः समयच्युतिर्निपुणता का धर्मतत्त्वे रतिः ।

कः शूरो विजितेन्द्रियः प्रियतमा कानुव्रता किं धनं

विद्या किं सुखमप्रवासगमनं राज्यं किमाज्ञाफलम् ॥[35]

ಲಾಭ ಯಾವುದು? – ಗುಣವಂತರ ಸಹವಾಸ. ಸುಖವಲ್ಲದ್ದು ಯಾವುದು? – ಪ್ರಾಜ್ಞರಲ್ಲದವರ ಸಹವಾಸ. ನಷ್ಟವು ಯಾವುದು? – ಸಮಯ ಅಥವಾ ಅವಕಾಶವನ್ನು ಕಳೆದುಕೊಳ್ಳುವುದು. ನೈಪುಣ್ಯ ಯಾವುದು? – ಧರ್ಮದ ತತ್ವದಲ್ಲಿ ಆಸಕ್ತಿ. ಶೂರನು ಯಾರು? – ಇಂದ್ರಿಯಗಳನ್ನು ಜಯಿಸಿದವನು. ಪ್ರಿಯತಮೆಯು ಯಾರು? – ಅನುಸರಿಸಿ ನಿಷ್ಠೆಯಿಂದ ಇರುವವಳು. ಹಣವು ಯಾವುದು? – ವಿದ್ಯೆಯು. ಸುಖವು ಯಾವುದು? – ಪ್ರವಾಸ ಹೋಗದಿರುವುದು. ರಾಜ್ಯ ಯಾವುದು? – ಆಜ್ಞಾ ಫಲವು.

ಮುಂದಿನ ರಾಜ್ಯಾಡಳಿತ ಹೊಣೆಯನ್ನು ಅತ್ಯಂತ ಮೂರ್ಖರಾಗಿರುವ ಮಕ್ಕಳು ಹೇಗೆ ಹೊತ್ತಾರು !! ಎಂಬ ಚಿಂತೆ ರಾಜನ ಹಾಗೂ ರಾಣಿಯ ನೆಮ್ಮದಿ ಕೆಡಿಸಿಬಿಟ್ಟಿದೆ. ಇಂಥಹ ಸಂಕಷ್ಟಪರಿಸ್ಥಿತಿಯಲ್ಲಿ ನೆರವಿಗೆ ಪತ್ತೆಯಾಗಿ ಆಯ್ಕೆಯಾದವರೇ ಪ್ರಖ್ಯಾತ ಅರ್ಥಶಾಸ್ತ್ರಜ್ಞ, ರಾಜ್ಯಶಾಸ್ತ್ರಜ್ಞ ಚಾಣಕ್ಯರಿಂದ ಪ್ರಭಾವಿತರಾದ ವಿಷ್ಣುಶರ್ಮರು. ರಾಜಕುಮಾರರ ಮೂಲವರ್ತನೆಗಳ ಬಗ್ಗೆ ಹಾಗೂ ಸನ್ನಿವೇಶಗಳಿಂದ ಉಂಟಾಗಿರುವ ವ್ಯತ್ಯಾಸಗಳ ಬಗ್ಗೆ ಬಹಳ ಸೂಕ್ಷ್ಮವಾಗಿ ಗಮನಿಸಿ, ಒಳ್ಳೆಯ ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಪೂರ್ವಾಪರ ಚಿಂತನೆ ನಡೆಸಿ, ಅವರ ಆಸಕ್ತಿ, ಆಲೋಚನೆಗಳ ಧನಾತ್ಮಕ ಬೆಳವಣಿಗೆಗೆ ಏನು ಮಾಡಬೇಕು? ಎಂಬುದರ ಕುರಿತು ಬಹಳ ವಿವೇಚನಾ ಪೂರ್ವಕ ಯೋಚನೆ ನಡೆಸಿದರು, ಇವರಿಗೆ ಬದುಕಿನ ನೀತಿನಿಯಮ, ಶಿಸ್ತು, ಸಂಯಮ, ಇವುಗಳನ್ನು ಆಸಕ್ತಿಯಿಂದ ಬೆಳೆಸಿಕೊಳ್ಳಲು ಯಾವ ರೀತಿಯಲ್ಲಿ ಪ್ರೇರೇಪಿಸಬಹುದು? ಮುಂತಾದ ವಿಚಾರಗಳನ್ನು ತಮ್ಮ ಅನುಭವಕ್ಕೆ ಒರೆಹಚ್ಚಿ, ವಿಮರ್ಶಿಸಿ, ಅಂತಿಮವಾಗಿ ಶಿಕ್ಷಣವನ್ನು ನೀತಿಕಥೆಗಳ ಮೂಲಕವೇ ನೀಡಬೇಕಾಗುತ್ತದೆಂಬ ನಿರ್ದಾರಕ್ಕೆ ಬಂದರು. ಇವರುಗಳನ್ನು ಸುಶಿಕ್ಷಿತರನ್ನಾಗಿ ಮಾಡುವ ಹಾಗೂ ಇವರು ಮುಂದಿನ ಭವಿಷ್ಯ ಜೀವನದಲ್ಲಿ ಉತ್ತಮ ಗುಣಗಳನ್ನು ಬೆಳೆಸಿಕೊಂಡು, ಒಳ್ಳೆಯ ವ್ಯಕ್ತಿತ್ವ ನಿರ್ಮಾಣ ಮಾಡಿಕೊಳ್ಳುವಂತೆ ಉತ್ತಮ ಶೈಕ್ಷಣಿಕ ಸನ್ನಿವೇಶಗಳನ್ನು ಒದಗಿಸಿಕೊಟ್ಟು, ವರ್ತನೆಗಳನ್ನು ಅಪೇಕ್ಷಿತ ಮಾರ್ಗಕ್ಕೆ ಕೊಂಡೊಯ್ಯುವಂತೆ ಮಾಡುವುದಾಗಿ ಸವಾಲನ್ನು ಸ್ವೀಕರಿಸಿದರು. ಇದು ನಿಜಕ್ಕೂ ವಿಷ್ಣುಶರ್ಮರಲ್ಲಿದ್ದ ಆತ್ಮವಿಶ್ವಾಸ ಹಾಗೂ ಧೃಢ ಸಂಕಲ್ಪವನ್ನು ಸೂಚಿಸುತ್ತದೆ.

---

೩೫. **ಭರ್ತೃಹರಿ**– ನೀತಿಶತಕ – ಶೇಷ ಭಾಗ– ಶ್ಲೋ–104.

ಈ ರಾಜಕುಮಾರರಿಗೊದಗಿದ್ದ ದುಃಸಹವಾಸದಿಂದ ಉದ್ಧಟರಾಗಿ ಬೆಳೆಯುತ್ತಿರುವ ಮನೋಧೋರಣೆಯನ್ನು ಪರಿವರ್ತನೆ ಮಾಡುವ ಸದುದ್ದೇಶದಿಂದ ಮೊದಲನೆಯ ತಂತ್ರ ಮಿತ್ರಭೇದದ ಮೂಲಕ ಅಂದರೆ, ಚತುರೋಪಾಯಗಳಲ್ಲಿ ಮೂರನೆಯದೇ ಭೇದ. ಇದರಲ್ಲಿ ಪರಸ್ಪರರು ಬೆರೆತಿರುವಾಗ ಅವರು ಅಭೇದ್ಯರಾಗುತ್ತಾರೆ. ಮೊದಲು ಮಿತ್ರರನ್ನು ಬೇರ್ಪಡಿಸುವುದರ ಬಗ್ಗೆ ರಾಜಕುಮಾರರು ಪರಿಜ್ಞಾನ ಹೊಂದಿದರೆ, ಸಹವಾಸ ದೋಷಗಳಿಂದ ಉಂಟಾಗುವ ಅನಾಹುತಗಳ ಅರಿವುಂಟಾಗುತ್ತದೆ.[36] ನಂತರದಲ್ಲಿ ಉಪಾಯ-ಅಪಾಯಗಳನ್ನರಿತು ಉತ್ತಮ ಮಿತ್ರರನ್ನು ಹೇಗೆ ಸಂಪ್ರಾಪ್ತಿ ಮಾಡಿಕೊಳ್ಳುವುದು ಎಂಬ ಬಗ್ಗೆ ರಾಜಕುಮಾರರೇ ವಿವೇಚನೆಯಿಂದ ಆಲೋಚನೆ ಬೆಳೆಸಿಕೊಳ್ಳುತ್ತಾರೆಂದು ವಿಷ್ಣುಶರ್ಮರು ಚಿಂತನೆ ನಡೆಸಿದ್ದಾರೆ. ಆಗಾಗ್ಗೆ ಕೆಲವು ಮುಖ್ಯ ಸೂಚನೆಗಳನ್ನು ಕೊಡುತ್ತಾರೆ: ಒಳ್ಳೆಯ ಸಹವಾಸ ಮಾಡಬೇಕು:-

जाड्यं धियो हरति सिञ्चति वाचि सत्यं मानोन्नतिं दिशति पापमपाकरोति ।

चेतः प्रसादयति दिक्षु तनोति कीर्तिं सत्सङ्गतिः कथय किं न करोति पुंसाम् ॥[37]

ಸತ್ಪುರುಷರ ಸಹವಾಸವು ಬುದ್ಧಿಯ ಜಡತ್ವ ಹೋಗಲಾಡಿಸುತ್ತದೆ. ಮಾತಿನಲ್ಲಿ ಸತ್ಯ ಚಿಮುಕಿಸುತ್ತದೆ. ಗೌರವವನ್ನು ಹೆಚ್ಚಿಸುತ್ತದೆ. ಪಾಪವನ್ನು ದೂರಮಾಡುತ್ತದೆ. ಮನಸ್ಸನ್ನು ಪ್ರಸನ್ನಗೊಳಿಸುತ್ತದೆ.. ಎಲ್ಲಾ ದಿಕ್ಕುಗಳಲ್ಲಿಯೂ ಕೀರ್ತಿಯನ್ನು ಹರಡುತ್ತದೆ, ಸತ್ಸಹವಾಸವು ಜನರಿಗೆ ಏನು ತಾನೇ ಮಾಡುವುದಿಲ್ಲ? ಹೇಳು.

ಹಿಂದಿನ ಅಧ್ಯಾಯದಲ್ಲಿ ಪಂಚತಂತ್ರದ ಪ್ರಥಮ ತಂತ್ರ ಮಿತ್ರಭೇದದ ಕೆಲವು ಕಥೆಗಳ ವಿಶ್ಲೇಷಣೆ ಮಾಡಿದ್ದಾಗಿತ್ತು. ಈ ಅಧ್ಯಾಯದಲ್ಲಿ ಇನ್ನುಳಿದ ಕಥೆಗಳನ್ನು ವಿಶ್ಲೇಷಿಸಿ, ವಿಷ್ಣುಶರ್ಮರ ಪಂಚತಂತ್ರದಲ್ಲಿ ಶೈಕ್ಷಣಿಕ ಮನೋವಿಜ್ಞಾನ, ಉತ್ತಮ ವ್ಯಕ್ತಿತ್ವ ನಿರ್ಮಾಣ ಕಲೆ ಹಾಗೂ ಸುಂದರ ಬದುಕಿನ ಮಾರ್ಗದರ್ಶನದ ವಿಚಾರಗಳನ್ನು ಪತ್ತೆ ಮಾಡೋಣ.

ಮೂರನೆಯ ಉಪಕಥೆ "ಸ್ವಂತ ಬುದ್ಧಿ ಒಂದಿರಬೇಕು ಎಂಬುದರ ಮೂಲಕ ದಂತಿಲ-ಗೋರಂಭರ ಕಥೆ ಹೇಳುತ್ತಾ, ರಾಜಮಾನ್ಯ ದಂತಿಲನು ರಾಜಪರಿವಾರದಿಂದ ಅಲಕ್ಷಿಸಲ್ಪಟ್ಟು, ಕೊನೆಗೆ ಅರಮನೆಗೂ ಬರದಂತೆ ಶಿಕ್ಷಿಸಲ್ಪಟ್ಟನು. ಇದಕ್ಕೆ ಕಾರಣ ಕಸಗುಡಿಸುವಾತನೊಬ್ಬನಿಗೆ ಇವನು ಹಿಂದೆ ಮಾಡಿದ್ದ ಅವಮಾನ. ಇದರಿಂದ ಭಂಗಿತನಾದ ಆತ ಈ ದಂತಿಲನಿಗೆ ರಾಜಾನುಗ್ರಹ ತಪ್ಪುವಂತೆ ಹೇಗೆ ಮಾಡಬಹುದು ಎಂದು ಯೋಚಿಸಿ ಬಹಳ ಬುದ್ಧಿವಂತಿಕೆಯಿಂದ ಒಂದು ತಂತ್ರ ಹೂಡಿ ರಾಜನಿಗೆ ಒಂದು ರೀತಿಯ ಮಾನಸಿಕ ಗೊಂದಲ ಹಾಗೂ ಕಳವಳ ಹುಟ್ಟು ಹಾಕಿ ಒಡಕನ್ನುಂಟುಮಾಡಿದ್ದನು.

---

36. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಪ್ರ.ತಂ. ಮಿತ್ರಭೇದ-ಪು-18.(2015) ವರ್ಣಿಲ,39/2-11, ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು-560050

37. **ಭರ್ತೃಹರಿಯ ನೀತಿಶತಕ,** ವಿದ್ವತ್ ಪದ್ಧತಿ-ಶ್ಲೋ-23.

ರಾಜಾನುಗ್ರಹವಿರುವಷ್ಟು ಕಾಲ ನೀಚ, ಹೇಡಿ, ಮಾನಹೀನ, ಮೂಢರಾಗಿದ್ದರೂ ಗೌರವಕ್ಕೆ ಪಾತ್ರರಾಗುತ್ತಾರೆಂದುಕೊಂಡು ದಂತಿಲನು ಗೋರಂಭನೊಡನೆ ತಾನು ಹಿಂದೆ ಮಾಡಿದ್ದ ತಪ್ಪಿಗೆ ಕ್ಷಮಾಪಣೆ ಕೇಳಿಕೊಂಡು ರಾಜಾಶ್ರಯವಿಲ್ಲದ ತನ್ನ ಪರಿಸ್ಥಿತಿಯನ್ನು ಹೇಳಿಕೊಂಡನು. ಗೋರಂಭನು ದಂತಿಲನ ಉಪಚಾರದಿಂದ ಪ್ರಸನ್ನನಾಗಿ, ಪುನಃ ತನ್ನ ಸ್ವಂತ ಬುಧ್ಧಿಯಿಂದ ಮತ್ತೊಂದು ತಂತ್ರ ಹೂಡಿ, ರಾಜನ ಮನಸ್ಸನ್ನು ಗೆದ್ದು, ರಾಜನೂ ಸ್ವಂತ ಬುಧ್ಧಿಯಿಂದ, ಒಳ್ಳೆಯ ಆಲೋಚನೆ, ವಿವೇಚನೆಯಿಂದ ಅಸಂಬದ್ಧ ಪ್ರಲಾಪವನ್ನು ಕೇಳಿ ತಪ್ಪು ಮಾಡಿದೆನೆಂದು ಪಶ್ಚಾತ್ತಾಪಪಟ್ಟು ದಂತಿಲನನ್ನು ಬರಮಾಡಿಕೊಂಡು ಮೊದಲಿನಂತೆ ಗೌರವಿಸಿದನು.[38]

आकुलीनोऽपि मूर्खोऽपि भूपालं योऽत्र सेवते ।

अपि सम्मानहीनोऽपि स सर्वत्र प्रपूज्यते ॥[39]

ದಂತಿಲನು  ಗೋರಂಭನ ಬಗ್ಗೆ ಯೋಚಿಸಿ ಹೀಗೆ ಒಂದು ನೀತಿಯನ್ನು ಹೇಳುತ್ತಾನೆ. "ಇದು ಖಂಡಿತವಾಗಿಯೂ ಗೋರಂಭನ ಕೆಲಸವೇ. ಉತ್ತಮ ಕುಲದವನಲ್ಲದಿದ್ದರೂ, ಮೂರ್ಖನಾಗಿದ್ದರೂ, ಗೌರವಯೋಗ್ಯನಲ್ಲದಿದ್ದರೂ ಯಾರು ರಾಜನ ಸೇವೆಯಲ್ಲಿರುವನೋ ಅವನು ಎಲ್ಲ ಕಡೆಯೂ ಗೌರವಕ್ಕೆ ಪಾತ್ರನಾಗುತ್ತನೆ.ರಾಜನ ಸೇವೆಯಲ್ಲಿದ್ದವನು ನೀಚನಾಗಿರಲಿ ಅಥವಾ ಅಂಜುಬುರುಕನಾಗಿರಲಿ, ಆತನು ಯಾರಿಂದಲೂ ಸೋಲನ್ನು ಕಾಣುವುದಿಲ್ಲ

ವಿಷ್ಣುಶರ್ಮರು ಮಿತ್ರಭೇದ ಕಥೆಯನ್ನು ಮುಂದುವರೆಸಿ... "ಹೀಗಾಗಿ ಸಂಜೀವಕನೆ, ರಾಜನಿಗೆ ಚಾಡಿ ಹೇಳಿಕೊಡುವ ನೀಚ ಚತುರರನೇಕರು ಅವನನ್ನು ಸುತ್ತುವರಿದಿರುತ್ತಾರೆ. ಅಸ್ಥಿರನಾದ ರಾಜನು ಸುಲಭದಲ್ಲಿ ಅವರ ಮಾತಿಗೆ ಮರುಳಾಗುತ್ತಾನೆ. ಆದ್ದರಿಂದ ಪಿಂಗಳಕನ ಮುಂದೆ ನೀನು ನುಡಿವಾಗ, ನಡೆವಾಗ ಎಚ್ಚರವಿರಲಿ" ಎಂದು ದಮನಕನು ಹೇಳಿದ್ದಕ್ಕೆ ಸಮ್ಮತಿ ದೊರಕಿತು.

"ರಾಜಕುಮಾರರೇ, ಮತ್ತೆಲ್ಲವೂ ಏನು ಆಗಬೇಕೋ ಅದರಂತೆ ಆಯಿತು." ಎಂದು ಹೇಳಿ ರಾಜಕುಮಾರರು ಈ ಬಗ್ಗೆ ಆಲೋಚಿಸಲು ಅನುವು ಮಾಡಿಕೊಟ್ಟರು.

"ಅಂದರೆ, ಗುರುಗಳೇ ಆದದ್ದಾದರೂ ಏನು? ಎಂದು ಕೇಳಿದನು ಬಹುಶಕ್ತಿ. ಗುರುಗಳು– "ಇದಕ್ಕೆ ಉತ್ತರವನ್ನು ನಾನು ಹೇಳುವುದಿಲ್ಲ. ನೀವೇ ಊಹಿಸಿ ತಿಳಿದುಕೊಳ್ಳಬೇಕು.

---

38. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಪಂಚತಂತ್ರದ ಕನ್ನಡಾನುವಾದ, ಮಿತ್ರಭೇದ–32–36.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–560004.

39. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–159, ಪು–86,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ನಾಳೆಯವರೆಗೆ ನಿಮಗೆ ಸಮಯ ಕೊಟ್ಟಿದ್ದೇನೆ. ನಾಳೆ ಬೆಳಗ್ಗೆ ಇಲ್ಲಿಗೆ ಬನ್ನಿ. ಏನಾಯಿತು ಎಂದು ನೀವು ಹೇಳಬೇಕು. ಮತ್ತೆ ನಾನು ಕಥೆಯನ್ನು ಮುಂದುವರಿಸುತ್ತೇನೆ." ಎಂದಿದ್ದಾರೆ. ಮುಂದೇನಾಗಿದ್ದಿರಬಹುದು ಎಂಬುದರ ಬಗ್ಗೆ ರಾಜಕುಮಾರರು ತಮ್ಮ ತಮ್ಮಲ್ಲೇ ಹಾಗಲ್ಲ, ಹೀಗೆ, ಯಾಕೆ ಹಾಗೆ? ಅದಲ್ಲ, ಇದು ಎಂದು ಚರ್ಚಿಸುತ್ತಿದ್ದರು. ಗುರುಗಳು ಇವರು ಚರ್ಚಿಸುತ್ತಿರುವುದನ್ನು ಕಂಡು ಸಮಾಧಾನ ಪಟ್ಟರು. ಒಂದು ರೀತಿಯಲ್ಲಿ ವೃತ್ತಿಯಲ್ಲಿನ ತೃಪ್ತಿ. ಇಲ್ಲಿ ನಾವು ಗಮನಿಸಬಹುದು, ವಿಷ್ಣುಶರ್ಮರು ಎಂತಹ ಒಳ್ಳೆಯ ಸನ್ನಿವೇಶವನ್ನೊದಗಿಸಿ ಆಲೋಚಿಸುವ, ವಿವೇಚನೆಯಿಂದ ಚರ್ಚಿಸುವ ತರಬೇತಿಯನ್ನು ರಾಜಕುಮಾರರಿಗೆ ನೀಡಿದ್ದಾರೆ. ಒಂದು ನೈಜ ವಿಚಾರಗೋಷ್ಠಿಯನ್ನೇ ಏರ್ಪಡಿಸಿದ್ದಂತೆ. ಇದು ಒಬ್ಬಆದರ್ಶ ಶಿಕ್ಷಕನ ಬೋಧನಾ ಕೌಶಲ್ಯ ಹಾಗೂ ಗುಣಲಕ್ಷಣ. ನಿಧಾನವಾಗಿಯಾದರೂ ರಾಜಕುಮಾರರು ಕಥೆಯ ಆಳಕ್ಕೆ ಇಳಿಯುತ್ತಿದ್ದಾರೆ ಎಂಬ ತೃಪ್ತಿ ಗುರುಗಳಿಗಾಯಿತು. ಮರುದಿನ ವಿಷ್ಣುಶರ್ಮರು ಬರುವುದರೊಳಗೆ ರಾಜಕುಮಾರರು ಬಂದು ಕುಳಿತಾಗಿತ್ತು.[40] ಹೀಗೊಂದು ಕಥೆಯು ಬರುತ್ತದೆ :-

जम्बुको हुडुयुद्धेन वयं चाषाढभूतिना ।

दूतिका परकार्येण त्रयो दोषाः स्वयंकृताः ॥[41]

"ನರಿಯು ಟಗರುಗಳ ಕಾಳಗದಿಂದ, ನಾವು ಆಶಾಢಭೂತಿಯಿಂದ ಹಾಗೂ ದೂತಿಯು ನೇಕಾರನಿಂದ ತೊಂದರೆಗೊಳಗಾದೆವು. ಆದರೆ ಈ ಮೂವರೂ ಸ್ವಯಂಕೃತ ಅಪರಾಧದಿಂದಲೇ ತೊಂದರೆಗೊಳಗಾದರು."

ಇದನ್ನು ಕೇಳಿದ ಕರಟಕ ಅದೇನೆಂದು ಕೇಳಲು ದಮನಕನು **ಆಶಾಢಭೂತಿ – ನರಿ – ದೂತಿಯ ಕಥೆ** ಹೇಳಿದನು.

ಒಂದು ನಿರ್ಜನವಾದ ಪ್ರದೇಶ, ಅಲ್ಲೊಂದು ಮಠ.ಅಲ್ಲಿ ದೇವಶರ್ಮನೆಂಬ ಸಂನ್ಯಾಸಿಯು ವಾಸವಾಗಿದ್ದನು. ಅನೇಕ ಸಜ್ಜನರು ಅವನಿಗೆ ದಾನವಾಗಿ ಕೊಟ್ಟ ಬೆಲೆಬಾಳುವ ವಸ್ತ್ರಗಳನ್ನು ಮಾರುವುದರಿಂದ ಅವನಲ್ಲಿ ಅಪಾರ ಹಣ ಸೇರಿತ್ತು. ದುಡ್ಡಿನ ವಿಷಯದಲ್ಲಿ ಅವನು ಯಾರನ್ನೂ ನಂಬದೆ ಹಗಲು ರಾತ್ರಿ ಧನವನ್ನು ತನ್ನ ಪಂಚೆಯ ಸೆರಗಿನಲ್ಲೇ ಕಟ್ಟಿಕೊಂಡಿರುತ್ತಿದ್ದನು. ಅಂತಹ ಧನದ ಬಗ್ಗೆ ಹೀಗೊಂದು ನುಡಿ ಬಹಳ ಯೋಗ್ಯವಾಗಿದೆ.

अर्थानामर्जने दुःखमर्जितानां  च रक्षणे ।

आये दुःखं व्यये दुःखं धिगर्थाः कष्टसंश्रयाः ॥[42]

---

40. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಪ್ರ.ತಂ.-ಪು-34-35.(2015)ವರ್ನಿಲ, 39/2-11, ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು-560050.
41. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-173,ಪು-96,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.
42. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-174, ಪು-97,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಅಂದರೆ, ಧನ ಸಂಪಾದನೆ ಮಾಡುವುದರಲ್ಲಿ ದುಃಖ ಮತ್ತು ಸಂಪಾದನೆ ಮಾಡಿದ್ದನ್ನು ರಕ್ಷಿಸಿಕೊಳ್ಳುವುದರಲ್ಲೂ ದುಃಖ. ಸಂಪಾದನೆ ಹಾಗೂ ವ್ಯಯ ಎರಡು ಸಮಯದಲ್ಲೂ ದುಃಖವುಂಟಾಗುತ್ತದೆ. ಹೀಗೆ ಕಷ್ಟವನ್ನೇ ತಂದೊಡ್ಡುವ ಹಣದ ಬಗ್ಗೆ ಧಿಕ್ಕಾರವಿರಲಿ.

ಒಮ್ಮೆ ಆಷಾಢಭೂತಿ ಎಂಬ ಪರರ ಹಣವನ್ನು ಕದಿಯುವುದರಲ್ಲಿ ನಿಷ್ಣತನಾದ ಧೂರ್ತನು ಸಂನ್ಯಾಸಿಯ ಹಣದ ವಿಚಾರ ತಿಳಿದುಕೊಂಡು ಹೇಗೆ ಕದಿಯಬಹುದೆಂದು ಚಿಂತಿಸಿ, ಮಾತಿನ ಮೋಡಿಯಿಂದ ಇವನ ವಿಶ್ವಾಸ ಗಳಿಸಿ ಶಿಷ್ಯನಾಗಲು ಯೋಜನೆ ಹಾಕಿಕೊಂಡನು. ಸಂನ್ಯಾಸಿಯ ಬಳಿ ಹೋಗಿ 'ಓಂ ನಮಃ ಶಿವಾಯ' ಎಂದು ನುಡಿದು, ಬಹಳ ಬುದ್ಧಿವಂತಿಕೆಯಿಂದ ಶಿಷ್ಯನಾಗಲು ಒಪ್ಪಿಗೆ ಪಡೆದೇ ಬಿಟ್ಟನು. ದೇವಶರ್ಮನು ಧೂರ್ತನಿಗೆ ಕೆಲವು ಷರತ್ತುಗಳ ಮೇಲೆ, ದೀಕ್ಷೆಯನ್ನು ಅನುಗ್ರಹಿಸಿ ಶಾಸ್ತ್ರೋಕ್ತವಾಗಿ ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಿದನು.

ಆಶಾಢಭೂತಿಯು ಗುರುವಿಗೆ ಉತ್ತಮ ಸೇವೆ ಮಾಡಿ ಸಂತೋಷಪಡಿಸಿದನು. ಹೀಗಿದ್ದರೂ ಗುರುವು ತನ್ನ ಬಳಿ ಇಟ್ಟುಕೊಂಡಿದ್ದ ಹಣದ ಗಂಟನ್ನು ಕೈ ಬಿಡುತ್ತಿರಲಿಲ್ಲ. ಹೀಗೇ ಕಾಲಕಳೆಯುತ್ತಿರಲು ಆಶಾಢಭೂತಿಯು ಬಹಳವಾಗಿ ಚಿಂತಿಸಿ, ಸಂನ್ಯಾಸಿಯನ್ನು ಹೇಗಾದರೂ ಮಾಡಿ, ಕೊಂದಾದರೂ, ಹಣವನ್ನು ಹೊಡೆದುಕೊಳ್ಳಲು ಯೋಜಿಸುತ್ತಿದ್ದನು. ಇದೇ ಸಮಯದಲ್ಲಿ ಒಂದು ಉಪನಯನ ಸಂಸ್ಕಾರ ಮಾಡಲು ದೇವಶರ್ಮನು ಶಿಷ್ಯನೊಂದಿಗೆ ಹತ್ತಿರದ ಒಂದು ಗ್ರಾಮಕ್ಕೆ ಹೊರಟನು. ಮಧ್ಯದಲ್ಲಿ ಒಂದು ನದಿಯನ್ನು ತಲುಪಿ, ಅಲ್ಲಿ, ಸ್ನಾನ, ದೇವರ ಅರ್ಚನೆ ಮಾಡಿದ ಬಳಿಕ ಪ್ರಯಾಣ ಮುಂದುವರಿಸಲು ಯೋಚಿಸಿದರು. ಈ ಮಧ್ಯೆ ದೇವಶರ್ಮನು ಪ್ರಕೃತಿಯ ಕರೆಗೆ ಹೋಗಬೇಕಾಗಿ ಬಂದಾಗ ಶಿಷ್ಯನನ್ನು ನಂಬಿ ತನ್ನ ಬಟ್ಟೆಯ ಗಂಟನ್ನು ನೋಡಿಕೊಳ್ಳಲು ಹೇಳಿ ಅವನ ಬಳಿ ಕೊಟ್ಟು ಹೊರಟನು. ಈ ಸದವಕಾಶವನ್ನು ಉಪಯೋಗಿಸಿಕೊಂಡು ಗಂಟನ್ನು ಎತ್ತಿಕೊಂಡು ಬೇಗನೆ ಅಲ್ಲಿಂದ ನಡೆದನು. ಅಂತೂ ದೇವಶರ್ಮನು ಆಶಾಢಭೂತಿಯಿಂದ ಮೋಸಹೋದನು. ಅಲ್ಲಿಂದ ಮುಂದೆ ಹಲವಾರು ರೀತಿಯಲ್ಲಿ ವಿಲಾಪಿಸಿ, ಮೆಲ್ಲಮೆಲ್ಲಗೆ ನಡೆಯುತ್ತಾ ಸಾಯಂಕಾಲದ ಸಮಯಕ್ಕೆ ಒಂದು ಗ್ರಾಮ ಸೇರಿದನು. ಅಲ್ಲಿ ಮತ್ತೊಂದು ತರಹ ವಿಚಿತ್ರ ಅನುಭವ ಪಡೆದನು. ಇಲ್ಲಿ ಒಂದು ನೀತಿ ವ್ಯಕ್ತಗೊಂಡಿದೆ:-

अवध्यो ब्राह्मणो बालः स्त्री तपस्वी च रोगभाक् ।

विहिता व्यङ्गिता तेषमपराधे महत्यपि ॥[43]

---

43. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-214,ಪು-126,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

" ಬ್ರಾಹ್ಮಣ, ಬಾಲಕ, ಸ್ತ್ರೀ, ತಪಸ್ವಿ, ರೋಗಿಷ್ಟ–ಇವರು ಮಹಾ ತಪ್ಪನ್ನು ಮಾಡಿದ್ದರೂ ಕೊಲ್ಲಬಾರದು. ಕೇವಲ ಅಂಗಹೀನರನ್ನಾಗಿ ಮಾಡಬೇಕು. ತನ್ನ ಕರ್ಮದಿಂದಲೇ ಇವಳ ಮೂಗು ಕತ್ತರಿಸಲ್ಪಟ್ಟಿದೆ. ಈಗ ರಾಜನ ಶಿಕ್ಷೆಯಂತೆ ಇವಳ ಕಿವಿಯನ್ನು ಕತ್ತರಿಸಬೇಕು." ಹಣ ಕಳೆದುಕೊಂಡ ದೇವಶರ್ಮ, ಅನ್ಯಾಯಕ್ಕೆ ನೆರವಾಗಿ ಮೂಗು ಕೊಯ್ಯಿಸಿಕೊಂಡ ಕ್ಷೌರಿಕನ ಹೆಂಡತಿ, ಅವರವರ ಅನರ್ಥಕ್ಕೆ ಅವರವರೇ ಜವಾಬ್ದಾರರು. ನಂಬಿಕೆಯಿಟ್ಟವನನ್ನು ವಂಚಿಸುವುದು ಸುಲಭವೆಂಬಂತೆ ಆಶಾಢಭೂತಿ ಕಾಲುಕಿತ್ತ. ದೇವಶರ್ಮನ ವ್ಯಥೆ ಸ್ವಲ್ಪ ಹೊತ್ತು ಮಾತ್ರ. ನಂತರ ತನ್ನನ್ನು ತಾನೇ ಸಂತೈಸಿಕೊಂಡ ಜೇನುಹುಳು ಸಂಗ್ರಹಿಸಿಟ್ಟ ಮಧುವನ್ನು ಯಾರೋ ಅಪಹರಿಸುತ್ತಾರೆ. ಈಗ ತನ್ನದೂ ಹಾಗೇ ಆಯಿತು. ಹಣ ಇದ್ದರೆ ಅದನ್ನು ಅನುಭವಿಸಬೇಕು, ಇಲ್ಲವೇ ಪರೋಪಕಾರಕ್ಕಾಗಿ ಅದನ್ನು ವಿನಿಯೋಗಿಸಬೇಕು. ಹಾಗೆ ಮಾಡದೇ ಹೋದಲ್ಲಿ ಹೀಗೆಯೇ ಆಗುತ್ತದೆ. ಎಲ್ಲವೂ ಅದೃಷ್ಟವಶ. ಕಳೆದ ಹಣ ನನ್ನದಲ್ಲವೆಂದೇ ಭಾವಿಸುತ್ತೇನೆ ಎಂದುಕೊಂಡ, ಸುಖದುಃಖವನ್ನು ಸಮಾನವಾಗಿ ಸ್ವೀಕರಿಸುವ ಸ್ಥಿತಪ್ರಜ್ಞನಂತೆ. ನಿಜಕ್ಕೂ ಎಂತಹ ಅದ್ಭುತವಾದ ಅನುಭವವನ್ನು ಒದಗಿಸಿ, ವಿಷ್ಣುಶರ್ಮರು ನೀತಿಪಾಠವನ್ನು ಎಷ್ಟು ಸೊಗಸಾಗಿ ಬೋಧಿಸಿದ್ದಾರೆ. ಇದು ಒಂದು ರೀತಿಯ ನಿತ್ಯ ಸತ್ಯ. ಹೀಗಾಗಿ ಪಂಚತಂತ್ರ ಪ್ರಾಚೀನ ಜನಪ್ರಿಯ ನೀತಿಕಥೆಯಾಗಿದ್ದರೂ ನಿತ್ಯಹರಿದ್ವರ್ಣ ವಿಚಾರಧಾರೆ ಸರ್ವಕಾಲಿಕ ಹಾಗೂ ಸದಾ ವಿನೂತನವಾಗಿದೆ. ಇಲ್ಲಿ ಒಂದು ಮಾತಿದೆ:–

सुप्रयुक्तस्य दम्भस्य ब्रह्माप्यन्तं न गच्छति ।

कौलिको विष्णुरूपेण राजकन्यां निषेवते ॥[44]

ಸದಾ ಪ್ರಯತ್ನಶೀಲನಾಗಿರುವವನಿಗೆ ದೈವವೂ ಕೂಡ ಒಲಿಯುತ್ತದೆ." ಸರಿಯಾಗಿ ಯೋಚಿಸಿ ಮಾಡಿದ ಮೋಸಜಾಲದಿಂದ ಬ್ರಹ್ಮನೂ ಕೂಡ ಬಿಡಿಸಿಕೊಂಡು ಬರಲಾರ. ಹಾಗೆ ಬೀಸಿದ ಬಲೆಯಿಂದ ವಿಷ್ಣುರೂಪವನ್ನು ಧರಿಸಿದ ನೇಕಾರನೊಬ್ಬನು ರಾಜಕನ್ಯೆಯನ್ನು ರಮಿಸಿದನು "ಕರಟಕನು ಇದನ್ನು ಕೇಳ, ಅದು ಹೇಗೆಂದು ಕೇಳಲು ದಮನಕನು **ಮಿಥ್ಯಾವಿಷ್ಣು– ನೇಕಾರ ಕಥೆ**ಯನ್ನು ಹೇಳದನು.

ಒಂದಾನೊಂದು ರಾಜ್ಯದಲ್ಲಿ ನೇಕಾರ ಮತ್ತು ಬಡಗಿ ಸ್ನೇಹಿತರಾಗಿದ್ದರು. ಯಾವಾಗಲೂ ಒಟ್ಟಿಗೆ ಕಾಲಕಳೆಯುತ್ತಿದ್ದರು. ಒಮ್ಮೆ ಆ ರಾಜ್ಯದ ದೇವಸ್ಥಾನವೊಂದರಲ್ಲಿ ಜಾತ್ರಾಮಹೋತ್ಸವವು ಜರುಗಿತು. ಅಲ್ಲಿಗೆ ನಾನಾ ದೇಶಗಳಿಂದ ಬಂದ ಜನರ ಗುಂಪಿನ ಮಧ್ಯೆ ಅಲೆಯುತ್ತಿದ್ದ ಈ ಮಿತ್ರರು ಆನೆಯ ಮೇಲೆ ಕುಳಿತಿರುವ ಸರ್ವಲಕ್ಷಣ ಸಂಪನ್ನಳಾದ ಸಖಿಯರಿಂದ ಹಾಗೂ ಅಂತಃಪುರದ ನಪುಂಸಕರಿಂದ ಸುತ್ತುವರೆಯಲ್ಪಟ್ಟ,

44. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ– ಮಿತ್ರಭೇದ, ಶ್ಲೋ–218, ಪು–129, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ದೇವದರ್ಶನಕ್ಕಾಗಿ ಬಂದಿದ್ದ ರಾಜಕನ್ಯೆಯನ್ನು ನೋಡಿದರು. ಅವಳನ್ನು ನೋಡಿದ ಕೂಡಲೇ ನೇಕಾರನು ವಿಷವೇರಿದಂತೆ, ದುಷ್ಟ ಗ್ರಹದಿಂದ ಪೀಡಿತನಾದಂತೆ, ಮನ್ಮಥನ ಬಾಣಗಳಿಂದ ಹೊಡೆಯಲ್ಪಟ್ಟಂತೆ ನೆಲದ ಮೇಲೆ ಬಿದ್ದನು. ಅವನನ್ನು ಆ ಸ್ಥಿತಿಯಲ್ಲಿ ನೋಡಿದ ಬಡಗಿಯು ದುಃಖಿತನಾಗಿ ಆಪ್ತಜನರ ಸಹಾಯದಿಂದ ಅವನನ್ನು ಎತ್ತಿಕೊಂಡು ಮನೆಗೆ ಬಂದನು. ಅವನಿಗೆ ವಿವಿಧ ಚಿಕಿತ್ಸೆಗಳನ್ನು ಮಾಡಿಸಿದ ಮೇಲೆ ಬಹು ಕಾಲದ ನಂತರ ನೇಕಾರನು ಗುಣಮುಖನಾದನು. ನಂತರದಲ್ಲಿ ಬಡಗಿಯು ಮಿತ್ರ ನೇಕಾರನಿಗೆ ಏನಾಗಿತ್ತೆಂಬುದರ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸಿ, ಬಹಳಷ್ಟು ಬುದ್ಧಿವಂತಿಕೆಯಿಂದ ಅವನ ದುಃಖಕ್ಕೆ ಪರಿಹಾರೋಪಾಯಗಳ ಭರವಸೆ ಮೂಡಿಸಿ, ಕಾರಣವನ್ನು ತಿಳಿದುಕೊಂಡನು. ಅದೇನೆಂದರೆ, ಅಂದು ರಾಜಕನ್ಯೆಯನ್ನು ನೋಡಿದ ನಂತರದಲ್ಲಿ ಕಾಮಬಾಧೆಯಿಂದ ಆ ಪರಿಸ್ಥಿತಿ ಉಂಟಾಯಿತೆಂದು ಒಪ್ಪಿಕೊಂಡನು." ಹಾಗಿದ್ದಲ್ಲಿ ಸುದೈವದಿಂದ ನಮ್ಮ ಮನೋರಥವು ಸಿದ್ಧವಾದಹಾಗೆಯೇ, ಇಂದೇ ಅವಳೊಂದಿಗೆ ಸಮಾಗಮವನ್ನು ನಡೆಸು."ಹೀಗೆಂದು ಬಡಗಿಯು ನೇಕಾರನಿಗೆ ಹೇಳಿದನು. ನೇಕಾರನು ಆಗಲೇ ಸಾಯಲು ಸಿದ್ಧನಾಗಿದ್ದವನು, ಬಡಗಿಯ ಮಾತಿಗೆ ಆಶ್ಚರ್ಯಗೊಂಡು, ಅಪಹಾಸ್ಯ ಮಾಡುತ್ತಿರಬಹುದೆಂದುಕೊಂಡನು. ಆಗ ಬಡಗಿಯು"ಮಿತ್ರ, ನನ್ನ ಬುದ್ಧಿ ಬಲವನ್ನು ನೋಡು " ಎಂದು ಹೇಳಿ, ಆ ಕೂಡಲೇ ವರುಣವೃಕ್ಷದ ಮರದಿಂದ ಕೀಲನಿಂದ ಸಂಚರಿಸುವಂತಹ ರೆಕ್ಕೆಯುಳ್ಳ ಗರುಡನನ್ನು ಮತ್ತು ಶಂಖ, ಚಕ್ರ, ಗದೆ, ಪದ್ಮ, ಕಿರೀಟ, ಕೌಸ್ತುಭಮಣಿ ಮುಂತಾದ ವಿಷ್ಣುವಿನ ಎಲ್ಲಾ ಲಕ್ಷಣಗಳನ್ನು ನಿರ್ಮಿಸಿದನು. ನಂತರ ಗರುಡನ ಮೇಲೆ ನೇಕಾರನನ್ನು ಕುಳ್ಳಿರಿಸಿ, ವಿಷ್ಣುವಿನ ಎಲ್ಲಾ ಚಿನ್ಹೆಗಳನ್ನು ತೊಡಿಸಿ, ಕೀಲಿನಿಂದ ಹೇಗೆ ಗರುಡನನ್ನು ನಡೆಸುವುದೆಂದು ತೋರಿಸಿಕೊಟ್ಟನು. ಮತ್ತೆ ಹೇಳಿದನು " ಗೆಳೆಯ ಏಕಾಂಗಿಯಾಗಿ ಏಳು ಅಂತಸ್ತಿನ ಭವನದಲ್ಲಿರುವ ರಾಜಕನ್ಯೆಯ ಅಂತಃಪುರಕ್ಕೆ ರಾತ್ರಿ ಈ ವಿಷ್ಣುರೂಪದಲ್ಲಿ ಹೋಗಿ ಮುಗ್ಧಸ್ವಭಾವದ ಅವಳನ್ನು ನೀನು ವಾಸುದೇವನೆಂದು ನಂಬಿಸಿ, ನಿನ್ನ ಸುಳ್ಳುನುಡಿಗಳಿಂದ ಅವಳನ್ನು ರಂಜಿಸಿ ವಾತ್ಸಾಯನನು ತಿಳಿಸಿರುವ ರೀತಿಯಲ್ಲಿ ಅವಳ ಸಮಾಗಮ ನಡೆಸು"

ನೇಕಾರನು ಅದರಂತೆಯೇ ಅನುಸರಿಸಿ ರಾಜಕುಮಾರಿಗೆ ವಿಷ್ಣುಭಗವಾನ್ ಎಂದೇ ನಂಬಿಸಿ, ಗಾಂಧರ್ವ ವಿವಾಹ ಮಾಡಿಕೊಂಡಂತಹವನಾಗಿ ಕೆಲಸ ಸಾಧಿಸಿಯೇಬಿಟ್ಟನು. ಇವನ ಆಸೆ ನೆರವೇರಿತು. ಗೆಳೆಯನ ಉಪಕಾರವನ್ನು ಮನದಲ್ಲೇ ನೆನೆದನು. ಇರುಳಿನ ಅಂತ್ಯದಲ್ಲಿ ಮನೆಗೆ ಸಂತೋಷದಿಂದ ಹಿಂದಿರುಗಿ ಗೆಳೆಯನಿಗೆ ಕೃತಜ್ಞತೆ ಹೇಳಿದ. ಹೀಗೆ ಹಲವಾರು ರಾತ್ರಿ ಕಳೆದವು.[45]

---

45. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಪಂಚತಂತ್ರದ ಕನ್ನಡಾನುವಾದ, ಮಿತ್ರಭೇದ, ಪು-50-56.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1,ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು-560004

ಆ ದಿನ ದಾಸಿಯೊಬ್ಬಳು ರಾಜಕುಮಾರಿಯ ಚಿಗುರು ತುಟಿಯಲ್ಲಾದ ಗಾಯವು ಅನುಮಾನವನ್ನು ಮೂಡಿಸಲು, ರಾಜನಲ್ಲಿಗೆ ವರದಿ ಮಾಡುತ್ತಾಳೆ. ಇದರಿಂದಾಗಿ ರಾಜನು ವ್ಯಾಕುಲಗೊಂಡು ಮಹಾರಾಣಿಗೆ ವಿಷಯವನ್ನು ಸೂಕ್ಷ್ಮವಾಗಿ ತಿಳಿಸಿದ. ರಾಣಿಯು ತಡಮಾಡದೆ, ಎಚ್ಚರಿಕೆಯಿಂದ ಗಮನಿಸಿ ವಿಚಾರಣೆ ಮಾಡಿದಾಗ ಅನುಮಾನ ಸ್ಥಿರವಾಯಿತು. ನಿಜಾಂಶವೆಲ್ಲವನ್ನೂ ರಾಜಕನ್ಯೆ ತಿಳಿಸಬೇಕಾಯಿತು. ಪರೀಕ್ಷಿಸಲಾಗಿ, ಗರುಡವಾಹನನಾಗಿ ಅವತರಿಸಿದ ಶಂಖಚಕ್ರಗಧಾಪದ್ಮಧಾರಿಯಾಗಿರುವ ಭಗವಂತನನ್ನು ಕಂಡು ಪುಳಕಿತರಾದರು. ನಂತರ ರಾಜನು ತಡಮಾಡದೆ ಸೈನ್ಯವನ್ನು ಸಂಘಟಿಸಿ ನೆರೆ ರಾಜ್ಯದ ಮೇಲೆ ಸೇನಾಸಾಗರವನ್ನು ಹರಿಸಿದ. ರಾಜ್ಯವನ್ನು ಗೆದ್ದನು. ಆತ್ಮವಿಶ್ವಾಸ ಹೆಚ್ಚಿತು. ಬೇರೆ ಪ್ರದೇಶಗಳನ್ನು ಗೆಲ್ಲುತ್ತಲೇ ಹೋದನು. ಆಗ ಉಳಿದ ರಾಜರೆಲ್ಲಾ ಒಂದಾಗಿ ಈತನನ್ನು ಎದುರಿಸಲು ಸಿದ್ಧರಾದರು. ಇತ್ತ ಒಗ್ಗಟ್ಟಾದ ಶತ್ರು ರಾಜರು ಯಾವ ಭಯವೂ ಇಲ್ಲದೆ ರಾಜನ ನಾಡನ್ನೆಲ್ಲಾ ಆಕ್ರಮಿಸಿದರು. ಕೊನೆಗೆ ರಾಜನಿಗೆ ಉಳಿದದ್ದು ಕೋಟೆ ಮಾತ್ರ. ಇನ್ನೊಂದು ಕಡೆ ಮಡದಿ ಕೇಳಿದಾಗಲೆಲ್ಲ ನೇಕಾರನು ಬಹಳ ಬುದ್ಧಿವಂತಿಕೆಯಿಂದ ನಂಬಿಸಿ ಹಲವು ರಾತ್ರಿಗಳನ್ನು ಅವಳೊಂದಿಗೆ  ಕಳೆದ. ಆಗ ನಾರಾಯಣನೊಂದಿಗೆ ರಾಜಕನ್ಯೆಯು ಬೇಡಿಕೊಂಡಳು. ಈಗ ಶತ್ರುಗಳನ್ನು ಪರಾಜಯಗೊಳಿಸಬೇಕಾದ ಸಂದರ್ಭ ಒದಗಿಯೇ ಬಂತು. ರಾಜಕನ್ಯೆಯು ವಿನಯಪೂರ್ವಕವಾಗಿ ಹೇಳುತ್ತಾಳೆ " ಭಗವನ್, ನೀನು ಅಳಿಯನಾಗಿರುವಾಗ ನನ್ನ ತಂದೆ-ಯು ಶತ್ರುಗಳಿಂದ ಸೋಲುವುದರಲ್ಲಿ ಅರ್ಥವಿಲ್ಲ. ಆದ್ದರಿಂದ ಕೃಪೆಮಾಡಿ ಎಲ್ಲ ಶತ್ರುಗಳನ್ನು ಕೊಂದುಬಿಡು "ಇದನ್ನು ಕೇಳಿದ ನೇಕಾರನು ಯೋಚಿಸಿದನು. "ಕೋಟೆಯು ನಾಶವಾದರೆ ನನಗೆ ರಾಜಕುಮಾರಿಯಿಂದ ವಿಯೋಗವಾಗುತ್ತದೆ. ಆದ್ದರಿಂದ ಗರುಡ ಯಂತ್ರವನ್ನೇರಿ, ಆಯುಧಗಳನ್ನು ಹಿಡಿದು ಆಕಾಶದಲ್ಲಿ ಶತ್ರುಗಳಿಗೆ ಕಾಣಿಸಿಕೊಳ್ಳುತ್ತೇನೆ. ಒಂದು ವೇಳೆ ನನ್ನನ್ನು ವಾಸುದೇವನೆಂದು ತಿಳಿದು ಭ್ರಾಂತರಾದಲ್ಲಿ ರಾಜನ ಸೈನಿಕರು ಅವರನ್ನು ಸೋಲಿಸಬಹುದು. ಕೋಟೆಯನ್ನು ಉಳಿಸುವ ಪ್ರಯತ್ನದಲ್ಲಿ ನಾನು ಸತ್ತರೂ ಚಿಂತೆಯಿಲ್ಲ.

गवामर्थे ब्राम्हणार्थे स्वाम्यर्थे स्वीकृतेऽथवा ।

स्थानार्थे यस्त्यजेत्प्राणांस्तस्य लोकाः सनातनाः ॥[46]

"ಧನ, ಭೂ, ಗೋ, ಸ್ತ್ರೀ ರಕ್ಷಣೆಗಾಗಿ ಸಾಯುವುದರಿಂದ ಪ್ರಾಪ್ತವಾಗುವ ಸತ್ಯಲೋಕ ನನಗೂ ಸಿಕ್ಕೀತು."[47]

46. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-226ಪು-143,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

47. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಪಂಚತಂತ್ರದ ಕನ್ನಡಾನುವಾದ, ಮಿತ್ರಭೇದ-ಪು-55-56.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು-560004

ಅಷ್ಟರಲ್ಲಿ ಆ ಕಡೆ ಭೂತಭವಿಷ್ಯದ್ವರ್ತಮಾನಗಳನ್ನು ತಿಳಿಯುವ ಭಗವನ್ನಾರಾಯಣನು, ನೇಕಾರನ ಎಲ್ಲಾ ಚೇಷ್ಟೆ ವಿಚಾರವನ್ನು ತಿಳಿದು, ಗರುಡನನ್ನು ಸ್ಮರಿಸಿಕೊಂಡು, ಗರುಡ ಬಂದಾಗ ಹೀಗೆ ಭಗವನ್ನಾರಾಯಣನ ಪ್ರೇರಣೆಯಾಯಿತು– "ಶತ್ರುಗಳ ಬಾಣಗಳಿಂದ ವಿಷ್ಣುವೇಷಧಾರಿ ನೇಕಾರನು ಸಾಯುತ್ತಾನೆ. ಕ್ಷತ್ರಿಯರೆಲ್ಲರೂ ಸೇರಿ ಗರುಡ ಹಾಗೂ ವಿಷ್ಣುವನ್ನು ಕೊಂದರು ಎಂಬ ಕಳಂಕ ಬಂದು ಮುಂದೆ ಲೋಕದಲ್ಲಿ ವಿಷ್ಣುಪೂಜೆಯನ್ನು ಮಾಡುವುದಿಲ್ಲ. ನೀನು ಕೂಡಲೇ ಆ ಮರದ ಗರುಡನಲ್ಲಿ ಸೇರಿ–ಕೊ, ಚಕ್ರವು ಚಕ್ರವನ್ನು ಸೇರಲಿ, ನಾನೂ ಕೂಡ ನೇಕಾರನ ಶರೀರವನ್ನು ಪ್ರವೇಶಿಸಿ ಆತನಿಂದ ಶತ್ರುಸಂಹಾರ ಮಾಡಿಸುತ್ತೇನೆ. ಶತ್ರುಗಳ ನಾಶದಿಂದ ನಮ್ಮ ಮಹಿಮೆಯೂ ಹೆಚ್ಚುತ್ತದೆ" ಎಂದು. ಯೋಜಿಸಿದಂತೆ ಎಲ್ಲವೂ ನಡೆದು ಭಗವಾನ್ ವಿಷ್ಣು ಗರುಡನನ್ನೇರಿ ಸ್ವಸ್ಥಾನವನ್ನು ಸೇರಿದ. ನೇಕಾರನಿಗೆ ಈಗ ಆಶ್ಚರ್ಯ, ತಾನು ಹೀಗೆ ಮಾಡಿದೆನೇ ಎಂದು. ಅದೇ ಮದದಿಂದ ತಲೆ ಎತ್ತಿ ಗರ್ವದಿಂದ ಭೂತಳಕ್ಕೆ ಇಳಿದು ನಡೆದು ಬರುತ್ತಿರುವಾಗ ಅವನನ್ನು ಜನ ಗುರ್ತಿಸಿದರು. ನೇಕಾರನು ಮೊದಲಿನಿಂದ ಹಿಡಿದು ಎಲ್ಲಾ ವೃತ್ತಾಂತವನ್ನೂ ತಿಳಿಸಿದನು. ಸಂತೋಷಗೊಂಡ ರಾಜನು ಪ್ರಜೆಗಳ ಸಮ್ಮುಖದಲ್ಲಿ ವಿವಾಹ ವಿಧಿಯಿಂದ ರಾಜಕನ್ಯೆಯನ್ನು ಅವನಿಗೆ ಸಮರ್ಪಿಸಿ ರಾಜ್ಯವನ್ನು ಕೊಟ್ಟನು. ನೇಕಾರನು ಅವಳೊಡನೆ ಪಂಚೇಂದ್ರಿಯಗಳಿಂದೊದಗುವ ವಿಷಯಸುಖಗಳನ್ನು ಅನುಭವಿಸುತ್ತಾ ಸುಖದಿಂದ ಕಾಲಕಳೆದನು.

ಕಥೆಯನ್ನು ಕೇಳಿದ ಕರಟಕನಿಗೆ ದಮನಕ ಹೇಳಿದ ಕಥೆ ಮತ್ತು ಮಾತಿನ ಮೇಲೆ ಭರವಸೆ ಮೂಡಲಿಲ್ಲ. ಆದ್ದರಿಂದಲೇ" ಗೆಳೆಯಾ, ನಿನ್ನ ಮಾತೇನೋ ಕೇಳಲು ಹಿತ. ಆದರೆ ಬುದ್ಧಿಯುಳ್ಳ ಸಂಜೀವಕನ ವಿಷಯದಲ್ಲಿ ನಿನ್ನ ಜಾಣತನ ನಡೆಯದೆಂದು ನನ್ನ ಅನಿಸಿಕೆ. ಪಿಂಗಳಕನಿಂದ ಸಂಜೀವಕನನ್ನು ಅಗಲಿಸಲು ನೀನು ಅಸಮರ್ಥನೇ ಆಗುವೆ." ಎಂದನು. ಆಗ ದಮನಕನು– "ತಮ್ಮಾ, ನಾನು ಅಸಮರ್ಥನಾದರೂ ಸಮರ್ಥನಾಗಿದ್ದೇನೆ. ಏಕೆಂದರೆ,

उपायेन हि यत्कुर्यात्तन्न शक्यं पराक्रमैः ।

काक्या कनकसूत्रेण कृष्णसर्पो निपातितः॥[48]

ಕಾಗೆಯು ಚಿನ್ನದ ಸರವನ್ನು ಕದ್ದ ಕಾರಣದಿಂದ ಕೃಷ್ಣಸರ್ಪವು ಹೇಗೆ ನಾಶವಾಯಿತೋ, ಹಾಗೆ ಪರಾಕ್ರಮದಿಂದ ಯಾವುದು ಸಾಧ್ಯವಿಲ್ಲವೋ ಅದು ಉಪಾಯದಿಂದ ಸಾಧ್ಯ." ಕರಟಕ ಅದೇನೆಂದು ಕೇಳಲು, ದಮನಕನು **ಕಾಗೆ – ಚಿನ್ನದ ಹಾರ – ಕೃಷ್ಣಸರ್ಪದ ಕಥೆ**ಯನ್ನು ಹೇಳಿದನು.

---

48. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–228, ಪು–146,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ತನಗೆ ಶಕ್ತಿ ಇಲ್ಲದಿದ್ದರೂ ಸಾಮರ್ಥ್ಯವುಳ್ಳವರ ಸಹಾಯವನ್ನು ಪಡೆದು ಕಾರ್ಯಸಾಧನೆ ಮಾಡಿಕೊಂಡ ವಿಚಾರವನ್ನು ತಿಳಿಸುತ್ತಾ ರಾಜಕುಮಾರರಿಗೆ ಸ್ವತಃ ಅವರ ಕೈನಿಂದ ಆಗದಿದ್ದ ಸಂದರ್ಭದಲ್ಲಿ, ಸಾಮರ್ಥ್ಯವುಳ್ಳವರ ನೆರವನ್ನಾದರೂ ಪಡೆದು ಕಾರ್ಯ ಸಾಧನೆ ಮಾಡಿಕೊಳ್ಳುವ ಆಲೋಚನೆಯನ್ನು ವಿಷ್ಣುಶರ್ಮರು ಪ್ರೇರೇಪಿಸಿದ್ದಾರೆ. ಅಲ್ಲೊಂದು ನದಿ. ತೀರದಲ್ಲಿ ಒಂದು ದೊಡ್ಡ ಆಲದ ಮರವಿತ್ತು. ಅದರಲ್ಲಿ ಕಾಗೆಯ ಜೋಡಿಯೊಂದು ವಾಸವಾಗಿತ್ತು. ಅವುಗಳು ಮರಿಹಾಕಿದ ಸಂದರ್ಭದಲ್ಲಿ ಮರದ ಪೊಟರೆಯಲ್ಲಿದ್ದ ಕೃಷ್ಣಸರ್ಪವೊಂದು ಬಂದು ತಿಂದುಬಿಡುತ್ತಿತ್ತು. ಇದರಿಂದ ಬೇಸರಗೊಂಡ ಕಾಗೆ ದಂಪತಿಗಳು ಮತ್ತೊಂದು ಮರದ ಬುಡದಲ್ಲಿ ವಾಸವಾಗಿದ್ದ ಮೆಚ್ಚಿನ ಗೆಳೆಯನಾದ ನರಿಯ ಬಳಿಗೆ ಹೋಗಿ ಹೇಳಿಕೊಂಡವು

यस्य क्षेत्रं नदीतीरे भार्या च परसंगता ।

ससर्पे च गृहे वासः कथं स्यात्तस्य निर्वृत्तिः ॥[49]

ಅಂದರೆ "ಯಾರ ಮನೆಯು ನದೀತೀರದಲ್ಲಿದೆಯೋ, ಯಾರ ಹೆಂಡತಿಯು ಪರಪುರುಷನ ಸಂಗ ಮಾಡುತ್ತಾಳೋ, ಯಾರ ಮನೆಯಲ್ಲಿ ಹಾವು ನೆಲಸಿದೆಯೋ, ಅವರಿಗೆ ನೆಮ್ಮದಿಯೆಂಬುದು ಇದೆಯೇ? ಸರ್ಪವಿರುವ ಮನೆಯಲ್ಲಿ ವಾಸಮಾಡುವುದರಿಂದ ಸಾವು ಖಂಡಿತ. ಸರ್ಪವು ಗ್ರಾಮದ ಸೀಮೆಯಲ್ಲಿದ್ದರೂ ಅದರಿಂದಲೂ ಕೂಡ ಪ್ರಾಣಭಯವಿರುತ್ತದೆ. ಹೀಗಿದ್ದಾಗ ನಮ್ಮ ಆಲದ ಮರದಲ್ಲಿ ಸರ್ಪವಿರುವುದರಿಂದ ನಮಗೂ ಕೂಡ ಪ್ರತಿದಿನವೂ ಪ್ರಾಣಭಯವು ಕಾಡುತ್ತಿದೆ." ಅದಕ್ಕೆ ನರಿಯು– "ಈ ವಿಷಯದಲ್ಲಿ ಸ್ವಲ್ಪವೂ ದುಃಖಿಸುವುದು ತರವಲ್ಲ. ಉಪಾಯದಿಂದಲ್ಲದೇ ಆ ಲೋಭಿಯನ್ನು ಕೊಲ್ಲಲು ಸಾಧ್ಯವಿಲ್ಲ. ಉಪಾಯದಿಂದ ಹೇಗೆ ಶತ್ರುಗಳನ್ನು ಗೆಲ್ಲಬಹುದೋ ಆ ರೀತಿ ಆಯುಧಗಳಿಂದ ಕೂಡ ಗೆಲ್ಲಲು ಸಾಧ್ಯವಿಲ್ಲ. ಹೀಗೊಂದು ಮಾತಿದೆ:–

भक्षयित्वा बहून्मत्स्यानुत्तमाधममध्यमान् ।

अतिलौल्याद् बकःकश्चिन्मृतः कर्कटकग्रहात् ॥[50]

"ಅನೇಕ ಸಣ್ಣ,ಮಧ್ಯಮ ಹಾಗೂ ದೊಡ್ಡ ಮೀನುಗಳನ್ನು ತಿಂದ ಬಕವೊಂದು ಅತಿಯಾಸೆಯಿಂದ ಏಡಿಯಿಂದ ಸಾವನ್ನಪ್ಪಿತು." ಕಾಗೆಗಳು ಅದು ಹೇಗೆಂದು ಕೇಳಲು, ನರಿಯು **ಬಕ ಹಾಗೂ ಏಡಿಯ ಕಥೆ** ಯನ್ನು ಹೇಳಿತು.

---

49. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–229,ಪು–147,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
50. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–232,ಪು–148,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಒಂದು ವನಪ್ರದೇಶದಲ್ಲಿ ಸರೋವರವೊಂದಿತ್ತು. ಅಲ್ಲಿ ಒಂದು ಬಕಪಕ್ಷಿ ವಾಸವಾಗಿತ್ತು. ವಯೋಧರ್ಮದ ದೌರ್ಬಲ್ಯದಿಂದ ಮೀನನ್ನು ಹಿಡಿಯಲೂ ಆಗುತ್ತಿರಲಿಲ್ಲ. ಹಸಿವಿನಿಂದ ಬಳಲುತ್ತಾ ಒಮ್ಮೆ ಸರೋವರದ ತೀರದಲ್ಲಿ ಕುಳಿತುಕೊಂಡು ಕಣ್ಣೀರು ಹಾಕುತ್ತಿತ್ತು. ಆಗ ಒಂದು ಏಡಿಯು ಇತರ ಜಲಚರಗಳೊಂದಿಗೆ ಬಂದು ಅದರ ದುಃಖವನ್ನು ಕಂಡು ತಾನೂ ಮರುಕಗೊಂಡು ಆದರಪೂರ್ವಕವಾಗಿ ಹೇಳಿತು." ಮಾಮ ಏಕೆ ಇಂದು ಆಹಾರ ಸೇವಿಸುತ್ತಿಲ್ಲ? ಕೇವಲ ಕಣ್ಣೀರು ಸುರಿಸುತ್ತಾ ನಿಟ್ಟುಸಿರುಬಿಡುತ್ತಾ ಕುಳಿತಿರುವೆ? ಮತ್ಸ್ಯಭಕ್ಷಣದ ಬಗ್ಗೆ ಅತೀವ ವೈರಾಗ್ಯ ಮೂಡಿರುವುದರಿಂದ ಉಪವಾಸ ಕೈಗೊಂಡಿದ್ದೇನೆ ಎಂದು ಬಕ ಹೇಳಿತು. ಮುಂದುವರೆದು ಆ ಸರೋವರದಲ್ಲಿ ಇನ್ನು ಹನ್ನೆರಡು ವರ್ಷ ಕಾಲ ಅನಾವೃಷ್ಟಿಯಾಗುವುದೆಂದು ಜ್ಯೋತಿಷಿಯೊಬ್ಬರಿಂದ ಕೇಳಿದೆ ಎಂದು ಹೇಳಿತು. ಮುಂದೆ ಬಹಳ ಸಂಕಷ್ಟದ ದಿನಗಳು ಬರುತ್ತವೆ. ಕ್ಷಾಮ, ಬರಗಾಲ ಬಹಳ ಘೋರವಾಗುತ್ತದೆ. ಗ್ರಹಗತಿಗಳು ಬಹಳ ಕ್ರೂರವಾಗಿದೆ ಎಂದು ಹೇಳಿತು. ಇದನ್ನೆಲ್ಲಾ ಕೇಳಿದ ಏಡಿಯು ಸರೋವರದಲ್ಲಿದ್ದ ಇತರ ಪ್ರಾಣಿಗಳಿಗೂ ಬಕಪಕ್ಷಿಯ ಮಾತನ್ನು ತಿಳಿಸಿತು. ಎಲ್ಲ ಜರಚರಗಳೂ ಬಕಪಕ್ಷಿಯ ಬಳಿಗೆ ಬಂದು ಸೂಕ್ತ ಪರಿಹಾರವನ್ನು ಕೋರಿದವು. ಆಗ ಬಕವು ಬುದ್ಧಿವಂತಿಕೆಯಿಂದ ಒಂದು ಉಪಾಯವನ್ನು ಹೇಳಿತು." ಈ ಜಲಾಶಯದ ಹತ್ತಿರದಲ್ಲಿಯೇ ಹೆಚ್ಚು ನೀರಿನಿಂದ ತುಂಬಿದ, ಕಮಲಗಳಿಂದ ಶೋಭಿತವಾದ, ನಲವತ್ತು ವರ್ಷಗಳ ಕಾಲ ಅನಾವೃಷ್ಟಿಯಾದರೂ ಒಣಗದ ಒಂದು ಸರೋವರವಿದೆ. ಯಾರು ನನ್ನ ಬೆನ್ನೇರುವರೋ ಅವರನ್ನು ಅಲ್ಲಿಗೆ ಕರೆದುಕೊಂಡು ಹೋಗಬಲ್ಲೆ " ಎಂದಿತು. ಬಕಪಕ್ಷಿಯ ಮೇಲೆ ವಿಶ್ವಾಸಮೂಡಿ ಆ ಜಲಚರರು ತಂದೆ, ಮಾಮ, ಅಣ್ಣ ಎಂದು ಕರೆಯುತ್ತಾ ನಾ ಮುಂದು, ತಾಮುಂದು ಎನ್ನುತ್ತಾ ಅದರ ಸುತ್ತ ನೆರೆದರು. ದುರಾತ್ಮನಾದ ಬಕಪಕ್ಷಿಯು ಒಂದೊಂದಾಗಿ ಅವುಗಳನ್ನು ಬೆನ್ನಮೇಲೆ ಕೂರಿಸಿಕೊಂಡು ಸರೋವರದ ಹತ್ತಿರದಲ್ಲಿದ್ದ ಒಂದು ಬಂಡೆಯ ಮೇಲೆ ಅವುಗಳನ್ನು ಇಳಿಸಿ ಸ್ವೇಚ್ಛೆಯಿಂದ ಭಕ್ಷಿಸಿಯಾಯಿತು. ಪುನಃ ಬಂದು ಅನೇಕ ಸುಳ್ಳುಗಳನ್ನು ಹೇಳುತ್ತಾ ಆಹಾರ ಸಂಪಾದನೆ ಮಾಡುತ್ತಿತ್ತು.[51]

ಆದರೆ ಏಡಿಯು ಎಲ್ಲಾ ಗಮನಿಸುತ್ತಾ, ನನ್ನ ಪ್ರಾಣ ರಕ್ಷಣೆ ಮಾಡು, ಏಕೆಂದರೆ ನಿನ್ನೊಡನೆ ಮೊದಲು ಸ್ನೇಹದಿಂದ ಮಾತನಾಡಿದವನು ನಾನು ಎಂದು ಬಕಪಕ್ಷಿಗೆ ನೆನಪು ಮಾಡಿತು. ಮೀನಿನ ಮಾಂಸವನ್ನು ತಿಂದು ತಿಂದು ಬೇಜಾರಾಗಿದೆ, ಏಡಿಯನ್ನು ಫಲ್ಯದಂತೆ ತಿಂದುಬಿಡುವೆನೆಂದು ಯೋಚಿಸಿ, ಅದನ್ನು ಬೆನ್ನ ಮೇಲೆ ಕೂಳ್ಳಿರಿಸಿಕೊಂಡು ಮೀನುಗಳನ್ನು ಕೊಲ್ಲುತ್ತಿದ್ದ ಬಂಡೆಯ ಬಳಿಗೆ ಹೊರಟಿತು. ಏಡಿಯು

51. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಪು–149–157,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ದೂರದಿಂದಲೇ ಆ ಬಂಡೆಯ ಮೇಲೆ ಮೀನಿನ ಮೂಳೆಗಳ ರಾಶಿಯನ್ನು ನೋಡಿತು. ಇನ್ನೆಷ್ಟು ದೂರ? ಎಂದು ಕೇಳಿತು. ಬಕವು ತನ್ನ ಮಂದ ಬುದ್ಧಿಯಿಂದ ಏಡಿಯನ್ನು ಜಲಚರ ಪ್ರಾಣಿ, ಭೂಮಿಯಲ್ಲಿ ಬದುಕಲಾರದೆಂದು ತಿಳಿಯಿತು. ನಗುತ್ತಾ, ನಿನ್ನ ಇಷ್ಟ ದೇವರನ್ನು ಸ್ಮರಣೆ ಮಾಡಿಕೊ, ನಿನ್ನನ್ನೂ ಈ ಬಂಡೆಯ ಮೇಲೆ ಬೀಳಿಸಿ ಭಕ್ಷಿಸುತ್ತೇನೆ ಎಂದಿತು. ಕೂಡಲೇ ಏಡಿಯು ಕಮಲದ ತೊಟ್ಟಿನಂತೆ ಬಿಳಿಯಾಗಿ ಹಾಗೂ ಮೃದುವಾಗಿರುವ ಬಕದ ಕತ್ತನ್ನು ತನ್ನ ಎರಡು ಹಲ್ಲುಗಳಿಂದ ಕಚ್ಚಿ ಸಾಯಿಸಿತು. ನಂತರ ಬಕದ ಕತ್ತನ್ನು ಹಿಡಿದುಕೊಂಡು ಮೆಲ್ಲಮೆಲ್ಲಗೆ ಸರೋವರ ತಲುಪಿತು. ಜಲಚರರಿಗೆ ಏಡಿ ವಾಪಸ್ಸು ಬಂದದ್ದು ನೋಡಿ ಆಶ್ಚರ್ಯವೋ ಆಶ್ಚರ್ಯ. ಏಡಿಯು ನಗುತ್ತಾ" ಮೂರ್ಖರೇ, ಸುಳ್ಳು ನುಡಿಯುವ ಆ ಬಕವು ಮೋಸದಿಂದ ಎಲ್ಲರನ್ನೂ ಹತ್ತಿರದಲ್ಲಿರುವ ಬಂಡೆಯ ಮೇಲೆ ಎಸೆದು ತಿಂದುಬಿಟ್ಟಿತು. ನನ್ನ ಆಯಸ್ಸು ಗಟ್ಟಿಯಿರುವುದರಿಂದ ಆ ವಿಶ್ವಾಸ ಘಾತಕನ ಅಭಿಪ್ರಾಯವನ್ನು ತಿಳಿದು, ಅದನ್ನು ಸಾಯಿಸಿ ಅದರ ಕತ್ತನ್ನು ತಂದಿರುವೆ. ಸಾಕು ನಿಮ್ಮ ಸಂಭ್ರಮ. ಇಂದಿನಿಂದ ಎಲ್ಲಾ ಜಲಚರಗಳೂ ಕ್ಷೇಮದಿಂದಿರಬಹುದು." ಎಂದು ಹೇಳಿತು.

ನರಿಯು ಕಥೆಯನ್ನು ಮುಗಿಸಿದಾಗ, ಕೇಳಿದ ಕಾಗೆ– ಆ ದುಷ್ಟ ಸರ್ಪವು ಸಾವನ್ನಪ್ಪುವ ಬಗೆ ಹೇಗೆ ಉಪಾಯವನ್ನು ತಿಳಿಸು ಎಂದಿತು. ನರಿಯು–" ಯಾವುದಾದರೂ ರಾಜ್ಯದ ನಗರಕ್ಕೆ ಹೋಗಿ, ಎಚ್ಚರದಿಂದಿಲ್ಲದ ಯಾವುದಾದರೂ ಧನಿಕನ ಅಥವಾ ರಾಜನ ಅಥವಾ ಮಂತ್ರಿಯ ಚಿನ್ನದ ಸರ ಅಥವಾ ಹಾರವನ್ನು ತಂದು ಆ ಸರ್ಪದ ಪೊಟರೆಯಲ್ಲಿ ಹಾಕಿದರೆ, ಅದನ್ನು ಇಟ್ಟುಕೊಂಡಿರುವ ಸರ್ಪವು ಸಾಯಿಸಲ್ಪಡುತ್ತದೆ. ಈ ಉಪಾಯವನ್ನು ತಿಳಿದ ಕಾಗೆ ದಂಪತಿಗಳು ಸಂತೋಷದಿಂದ ಹಾಗೇ ಮಾಡಿದವು. ಅದರಲ್ಲೂ ಅಂತಃಪುರಕ್ಕೆಹೋಗಿ ಚಿನ್ನದ ಸರ ಹಾರಿಸಿಕೊಂಡು ತಂದು ಸರ್ಪವಿದ್ದ ಪೊಟರೆಯೊಳಗೆ ಹಾಕಿದವು. ಅದನ್ನು ನೋಡಿದ ಅಂತಃಪುರ ರಕ್ಷಕರು ಹಿಂಬಾಲಿಸಿಕೊಂಡು ಬಂದು ಹೆಡೆಯನ್ನು ಬಿಚ್ಚಿ ಕುಳಿತಿದ್ದ ಸರ್ಪವನ್ನು ದೊಣ್ಣೆಯಿಂದ ಹೊಡೆದು ಕೊಂದು ಸರವನ್ನು ಪಡೆದು ವಾಪಸಾದರು. ದಂಪತಿಗಳು ಸುಖವಾಗಿ ನಿಶ್ಚಿಂತರಾಗಿ ಮರದಲ್ಲಿ ವಾಸಮಾಡಿದವು. ಕೊನೆಯಲ್ಲಿ ದಮನಕನು–

यस्य बुद्धिर्बलं तस्य निर्बुद्धेस्तु कुतो बलम् ।

वने सिंहो मदोन्मत्तः शशकेन निपातितः ॥[52]

ಆದ್ದರಿಂದ ಉಪಾಯದಿಂದ ಕೆಲಸ ಮಾಡಬೇಕೆಂದು ನಾನು ಹೇಳುವುದು. ಬುದ್ಧಿವಂತರಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಏಕೆಂದರೆ ಬುದ್ಧಿವಂತನೇ ನಿಜವಾದ ಬಲಶಾಲಿಯೇ ಹೊರತು

---

52. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–237,ಪು– 157,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಬುದ್ಧಿಯಿಲ್ಲದವನು ಎಂದೂ ಬಲಶಾಲಿಯಾಗಲಾರ. ಉದಾಹರಣೆಗೆ ಮದೋನ್ಮತ್ತನಾದ ಸಿಂಹವೊಂದು ಮೊಲದಿಂದ ಹೀಗೆ ಕೊಲ್ಲಲ್ಪಟ್ಟಿತು.

ಕರಟಕ ಅದೇನೆಂದು ಕೇಳಲು– ದಮನಕನು **ಸಿಂಹ – ಮೊಲದ ಕಥೆ**ಯನ್ನು ಹೇಳಿದನು.

ಸಿಂಹ–ಮೊಲದ ಕಥೆಯಲ್ಲಿ ಉಪಾಯದಿಂದ ಅಪಾಯವನ್ನು ತಪ್ಪಿಸಿಕೊಳ್ಳುವುದರ ಜಾಗೃತಿಯನ್ನು ಸರದಿಯಂತೆ ಆಹಾರವಾಗಿ ಬಂದ ಮೊಲ ಮತ್ತು ಬಾವಿಯಲ್ಲಿ ಬಿದ್ದು ಪ್ರಾಣ ಕಳೆದುಕೊಂಡ ಸಿಂಹದ ವೃತ್ತಾಂತವನ್ನು ಸ್ವಾರಸ್ಯಪೂರ್ಣವಾಗಿ ಹೇಳಿದರು. ಇದರಿಂದ ರಾಜಕುಮಾರರಿಗೆ ಉಪಾಯದಿಂದ ಕೆಲಸ ಮಾಡಬೇಕು, ಇದಕ್ಕೆ ಬುದ್ಧಿವಂತಿಕೆ ಬೇಕು, ಬುದ್ಧಿವಂತನೇ ನಿಜವಾದ ಬಲಶಾಲಿಯೇ ಹೊರತು ಬುದ್ಧಿಯಿಲ್ಲದವನು ಎಂದೂ ಬಲಶಾಲಿಯಾಗಲಾರ– **"Knowledge is Power"** ಎಂಬ ಅರಿವನ್ನು ಮೂಡಿಸಿದಂತಾಯಿತು. ಮದೋನ್ಮತ್ತನಾದ ಸಿಂಹವೊಂದು ತನ್ನ ಮೂರ್ಖತನದಿಂದ ಬಾವಿಯ ನೀರಿನಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಗರ್ಜಿಸಿತು. ಆಗ ಬಾವಿಯಿಂದ ಅದಕ್ಕೆರಡರಷ್ಟು ಪ್ರತಿಧ್ವನಿಸಿದ್ದು, ನೀರಿನಲ್ಲಿ ಮೂಡಿದ್ದ ಪ್ರತಿಬಿಂಬ ಶತ್ರುವಿನದ್ದೆಂದು ತಿಳಿದು ಬಾವಿಗೆ ಹಾರಿ ಪ್ರಾಣವನ್ನೇ ಕಳೆದುಕೊಂಡಿತು. ಅದೇ ಮೊಲವು ತನ್ನ ಬುದ್ಧಿವಂತಿಕೆಯಿಂದ ಎಲ್ಲಾ ಪ್ರಾಣಿಗಳಿಗೆ ಆನಂದವನ್ನುಂಟುಮಾಡಿ ಸುಖವಾಗಿ ಕಾಡಿನಲ್ಲಿ ವಾಸ ಮಾಡಿತು. ಸಿಂಹದ ಕೋಪ, ಶತ್ರುತ್ವ "ಆತುರಗಾರನಿಗೆ ಬುದ್ಧಿ ಮಟ್ಟು"ಎಂಬಂತೆ ಬಾವಿಯಲ್ಲಿ ಕಂಡದ್ದು ಪ್ರತಿಬಿಂಬ ಎನ್ನುವಷ್ಟೂ ಆಲೋಚನೆ ಮಾಡಲಾಗಲಿಲ್ಲವಲ್ಲ!! ಎಂದು ರಾಜಕುಮಾರರು ಗಟ್ಟಿಯಾಗಿ ನಕ್ಕುಬಿಟ್ಟರು. ಆಗ ಗುರುಗಳು ಹೇಳುತ್ತಾರೆ – ಅದಕ್ಕೂ ಕಾರಣವಿದೆ "ತನ್ನಂತಹವರು ಇನ್ನೊಬ್ಬರು ಇರಬಾರದು ಎಂಬುದು; ಅಂತಹವರು ಇದ್ದರೆ ಅದನ್ನು ಸಹಿಸದೆ ಇರುವುದು. ಈ ಎರಡು ದುರ್ಗುಣದಿಂದಾಗಿ ಕೋಪಗೊಂಡ ಸಿಂಹವು ಸತ್ಯಾಸತ್ಯತೆಗಳನ್ನು ನಿರ್ಣಯಿಸುವ ಶಕ್ತಿಯನ್ನು ಕಳೆದುಕೊಂಡಿತ್ತು. ಆದ್ದರಿಂದ ಕೋಪವು ಎಂದಿಗೂ ತರವಲ್ಲ. ಉಪಾಯಚತುರನು ಏನನ್ನೂ ಸಾಧಿಸಿಯಾನು. ಇದು ಎಲ್ಲರಿಗೂ ಪಾಠವಾಗಬೇಕು" ಎಂದರು. ಹೌದು ಪ್ರತಿಯೊಬ್ಬರಿಗೂ ಇದು ಒಳ್ಳೆಯ ಪಾಠವೆ.[53]

ದಮನಕನು ರಾಜಧರ್ಮಕ್ಕೆ ಸಂಬಂಧಿಸಿದಂತೆ ಅನೇಕ ನೀತಿ ಉಪದೇಶಗಳನ್ನು ಹೇಳುತ್ತಾನೆ. ದುಷ್ಟರು ಹಾಗೂ ಸಜ್ಜನರ ಸಹವಾಸ, ಅದರ ಪರಿಣಾಮ ಇತ್ಯಾದಿ ಬಹಳ ಉಪಯುಕ್ತ ಮಾಹಿತಿಗಳನ್ನು ಸೂಕ್ತ ದೃಷ್ಟಾಂತಗಳೊಂದಿಗೆ ತಿಳಿಹೇಳುತ್ತಾ, ಈ ಒಂದು ಉಕ್ತಿಯನ್ನು:–

---

53. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ–1–7,ಪು – 60–64,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

न ह्यविज्ञातशीलस्य प्रदातव्यः प्रतिश्रयः ।

मत्कुणस्य च दोषेण हता मन्दविसर्पिणी ॥[54]

ಅಂದರೆ, ಒಬ್ಬರ ಸ್ವಭಾವವನ್ನು ತಿಳಿಯದೆ ಅವರಿಗೆ ಆಶ್ರಯವನ್ನು ಕೊಡಬಾರದು, ಕೊಟ್ಟರೆ ತಿಗಣೆಯ ತಪ್ಪಿನಿಂದ ಹೇನೊಂದು ಹೇಗೆ ನಾಶವಾಯಿತೋ ಹಾಗಾಗುತ್ತದೆ." ಪಿಂಗಲಕನು ಅದೇನೆಂದು ಕೇಳಿದಾಗ ದಮನಕನು **ಹೇನು ಹಾಗೂ ತಿಗಣೆಯ ಕಥೆ**ಯನ್ನು ಹೇಳಿದನು.

ಒಬ್ಬ ಮಹಾರಾಜ, ಅವನ ಆಸ್ಥಾನದಲ್ಲಿ ಒಂದು ಮಂಚ. ಅಲ್ಲಿ ಬಿಳಿಯ ವಸ್ತ್ರಗಳು ಎರಡು. ಅದರ ಮಧ್ಯೆ ಮಂದವಿಸರ್ಪಿಣೀ ಎಂಬ ಹೇನು ವಾಸವಾಗಿತ್ತು. ಅದು ರಾಜನ ರಕ್ತವನ್ನು ಆಸ್ವಾದಿಸುತ್ತಾ ಸುಖವಾಗಿತ್ತು. ಒಮ್ಮೆ ಅಲ್ಲಿಗೆ ಎಲ್ಲಿಂದಲೋ ಅಲೆಯುತ್ತಾ, ಅಗ್ನಿಮುಖ ಎಂಬ ತಿಗಣೆ ಬಂತು. ಇದನ್ನು ನೋಡಿದ ಹೇನು ಬೇಸರದಿಂದ ಕೇಳಿತು– "ಎಲೈ ಅಗ್ನಿಮುಖ, ಉಚಿತವಲ್ಲದ ಆ ಸ್ಥಳಕ್ಕೆ ಏಕೆ ಬಂದಿರುವೆ? ಯಾರಾದರೂ ನೋಡುವ ಮೊದಲೇ ಇಲ್ಲಿಂದ ಹೊರಟುಹೋಗು." ತಿಗಣೆ ಹೇಳಿತು– "ದೇವಿ, ಮನೆಗೆ ಬಂದವನು ದುಷ್ಟನಾದರೂ ಹೀಗೆ ಹೇಳುವುದು ಸರಿಯಲ್ಲ. ನೀಚ ಜನರು ಮನೆಗೆ ಬಂದರೂ ಸಜ್ಜನರು ಅವರನ್ನು ಸೌಹಾರ್ದತೆಯಿಂದಲೇ ಕುಶಲೋಪರಿಗಳನ್ನು ಕೇಳುತ್ತಾ ಉಪಚರಿಸುತ್ತಾರೆ. ಗೃಹಸ್ಥಧರ್ಮವನ್ನು ಆಚರಿಸಿದವರಿಗೆ, ಬೇಗನೆ ಸ್ವರ್ಗ ಪ್ರಾಪ್ತಿಯಾಗುತ್ತದೆಂದು ಬಲ್ಲವರು ಹೇಳುತ್ತಾರೆ. ಈಗಾಗಲೇ ಎಷ್ಟೋ ಜನರ ರಕ್ತವನ್ನು ಕುಡಿದು ಅದರ ರುಚಿ ವೈವಿಧ್ಯವನ್ನು ಸವಿದಿದ್ದೇನೆ. ಈಗ ರಾಜನ ರಕ್ತದ ರುಚಿಯನ್ನು ಕಾಣುವ ಅವಕಾಶವು ಅನಾಯಾಸವಾಗಿ ಸಿಕ್ಕಿದೆ. ಹಸಿವಿನಿಂದ ಬಳಲಿ ಆಹಾರಾರ್ಥಿಯಾಗಿ ಬಂದಿದ್ದೇನೆ. ಹೀಗೆ ನೀನೊಬ್ಬಳೇ ರಾಜನ ರಕ್ತ ಹೀರುವುದು ಸರಿಯಲ್ಲ."

ಅದನ್ನು ಕೇಳಿ ಮಂದವಿಸರ್ಪಿಣೀ ಹೇಳಿತು– "ತಿಗಣೆಯೇ, ನಾನು ರಾಜನು ನಿದ್ದೆ ಮಾಡಿದಾಗ ಅವನ ರಕ್ತವನ್ನು ಹೀರುತ್ತೇನೆ. ನೀನಾದರೋ ಅಗ್ನಿಮುಖ ಮತ್ತು ಚಪಲನು. ಆದ್ದರಿಂದ ನನ್ನ ಜೊತೆಗೆ ಮಾತ್ರ ರಕ್ತ ಪಾನವನ್ನು ಮಾಡುವುದಾದರೆ ಇಲ್ಲಿ ಇರು. ಇಷ್ಟಬಂದಷ್ಟು ರಕ್ತವನ್ನು ಆಸ್ವಾದಿಸು." ಸಿಕ್ಕಿದ ಅವಕಾಶವನ್ನು ತನ್ನ ಅನುಕೂಲಕ್ಕೆ ಬಳಸಿಕೊಳ್ಳದವ ಮೂಢ. ಅಂತಹವನು ತಾನಾಗಬಾರದೆಂದು ತಿಗಣೆಯು ಮಂದವಿಸರ್ಪಿಣೀಗೆ ಹೀಗೆ ಹೇಳಿತು– "ದೇವೀ, ನನ್ನ ಮನೆದೇವರಾಣೆ, ನೀನು ರಾಜನ ರಕ್ತವನ್ನು ಕುಡಿದಾದ ಮೇಲೆಯೇ ನಾನು ರಕ್ತ ಪಾನ ಮಾಡುವೆನು. ನನ್ನನ್ನು ನಂಬು." ಎಂದಿತು.

54. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–275, ಪು–179,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ರಾಜನು ಮಂಚವೇರಿ ಮಲಗಿಕೊಂಡನು. ಆಗ ಜಿಹ್ವಾ ಚಾಪಲ್ಯದಿಂದ ಅತ್ಯಂತ ಉತ್ಸಾಹದಿಂದ ಇನ್ನೂ ಎಚ್ಚರವಾಗಿರುವ ರಾಜನನ್ನು ಕಚ್ಚೇಬಿಟ್ಟಿತು. ಯಾರದ್ದೇ ಆಗಲಿ ಸ್ವಾಭಾವಿಕವಾಗಿ ಬಂದ ಸ್ವಭಾವವನ್ನು ಮಾತೊಂದರಿಂದ ಬದಲಿಸುವುದು ಶಕ್ಯವಲ್ಲ. ತಣ್ಣಗಿನ ನೀರು ಶಾಖದಿಂದ ಬಿಸಿಯಾದರೂ ಮತ್ತೆ ಮೊದಲಿನಂತೆ ತಣ್ಣಗಾಗಿಯೇ ಆಗುತ್ತದೆ. ಒಂದು ವೇಳೆ ಬೆಂಕಿ ತಂಪಾಗಬಹುದು, ಚಂದ್ರನು ಸುಡುವಂತೆ ಆಗಬಹುದು, ಆದರೆ ಮನುಷ್ಯರ ಸ್ವಭಾವವನ್ನು ಬದಲಿಸಲಸಾಧ್ಯ. ಆಗ ರಾಜನು ಸೂಜಿಮೊನೆಯಿಂದ ಚುಚ್ಚಿದಂತಾಗಿ ತಟ್ಟನೆ ಹಾಸಿಗೆಯಿಂದೆದ್ದು, ಕಂಚುಕಿಯನ್ನು ಕರೆದು ಕಚ್ಚಿದ ಹುಳವನ್ನು ಹುಡುಕುವಂತೆ ಆಜ್ಞಾಪಿಸಿದ. ಆಗ ಅಂತಃಪುರದವರು ಚಾದರವನ್ನು ಸೂಕ್ಷ್ಮವಾಗಿ ಗಮನಿಸಿ, ಹುಡುಕಿ ಸಂದಿಯಲ್ಲಿದ್ದ ಹೇನನ್ನು ಕೊಂದರು. ತಿಗಣೆಯು ತಕ್ಷಣ ಮಂಚದ ಒಳಭಾಗದಲ್ಲಿ ಸೇರಿಕೊಂಡಿತು. ಕಥೆಯನ್ನು ಮುಗಿಸಿ ದಮನಕನು ಪಿಂಗಲಕನಿಗೆ" ಇದನ್ನು ತಿಳಿದುಕೊಂಡು ನೀನು ಸಂಜೀವಕನನ್ನು ಕೊಲ್ಲು. ಇಲ್ಲದಿದ್ದರೆ, ಆವನೇ ನಿನ್ನನ್ನು ಕೊಲ್ಲುವನು." ಎಂದು ಸಲಹೆ ಮಾಡಿದನು.[55] ಹೀಗೊಂದು ಉಕ್ತಿಯಿದೆ–

त्यक्ताश्चाभ्यन्तरा येन बाह्याश्चाभ्यन्तरीकृताः ।

स एव मृत्युमाप्नोति यथा राजा ककुद्द्रुमः ॥[56]

ಅಂದರೆ, "ಯಾರು ತನ್ನವರನ್ನು ದೂರಮಾಡಿ, ಪರರನ್ನು ಹತ್ತಿರದಲ್ಲಿಟ್ಟುಕೊಳ್ಳುವನೋ, ಅವನು ಮೂರ್ಖ ಚಂಡರವನಂತೆ ನಾಶವಾಗುವನು." ಪಿಂಗಲಕನು ಅದೇನೆಂದು ಕೇಳಲು, ದಮನಕನು **ಚಂಡರವ ನರಿಯ ಕಥೆ**ಯನ್ನು ಹೇಳಿದನು.

ದಟ್ಟಾರಣ್ಯವೊಂದರಲ್ಲಿ ಚಂಡರವನೆಂಬ ನರಿಯೊಂದು ಜಿಹ್ವಾಚಾಪಲ್ಯಕ್ಕೊಳಗಾಗಿ ಆಹಾರವನ್ನು ಹುಡುಕುತ್ತಾ ನಗರಕ್ಕೆ ಬಂತು. ಅಲ್ಲಿದ್ದ ನಾಯಿಗಳು ನರಿಯನ್ನು ಕಂಡು ಅಟ್ಟಿದವು, ಕಚ್ಚಿದವು. ನರಿಯು ಜೀವಭಯದಿಂದ ಓಡಿಹೋಗುತ್ತಿದ್ದಾಗ ಅಲ್ಲೊಂದು ಅಗಸನ ಮನೆ ಹೊಕ್ಕಿತು. ಅಲ್ಲಿ ಬಟ್ಟೆ ಹಾಕಲು ದೊಡ್ಡ ಹಂಡೆಯೊಂದನ್ನು ಇಟ್ಟಿದ್ದರು. ಅದರ ತುಂಬಾ ನೀಲಿ ನೀರಿತ್ತು. ನಾಯಿಗಳ ಆಕ್ರಮಣದ ಗಾಬರಿಯಿಂದ ನರಿಯು ಹಂಡೆಯೊಳಗೆ ಬಿದ್ದು ಹೋಯಿತು. ಅಲ್ಲಿಂದ ಹೊರಬಂದಾಗ ಅದರ ಮೈಯೆಲ್ಲಾ ನೀಲಿ ಬಣ್ಣವಾಯಿತು. ಅದನ್ನು ನೋಡಿದ ನಾಯಿಗಳು ನರಿಯೆಂದು ಗುರುತಿಸದೆ ದಿಕ್ಕಾಪಾಲಾಗಿ ಓಡಿದವು. ಚಂಡರವ ನರಿಯೂ ಕಾಡಿನತ್ತ ಸಾಗಿತು. ಒಮ್ಮೆ ಅಂಟಿಕೊಂಡ ನೀಲಿಬಣ್ಣವು ಅಷ್ಟು ಸುಲಭವಾಗಿ ತನ್ನ ಬಣ್ಣವನ್ನು ಬಿಡುವುದಿಲ್ಲ.

---

**೫೫. ಭರತ.ಬಿ.ರಾವ್,** ಪಂಚತಂತ್ರ, – ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು – 67–69, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

**೫೬. ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–282, ಪು–184,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಒಂದು ಉಕ್ತಿಯಿದೆ–

वज्रलेपस्य मूर्खस्य नारीणां कर्कटस्य च ।

एको ग्रहस्तु मीनानां नीलीमद्यपयोर्यथा ।।[57]

ಇದರರ್ಥ ವಜ್ರಲೇಪ, ಮೂರ್ಖ, ನಾರಿಯರು, ಮೊಸಳೆ, ಮೀನು, ನೀಲಿಬಣ್ಣ ಹಾಗೂ ಮದ್ಯಪಾನ– ಇವುಗಳು ಒಮ್ಮೆ ಹಿಡಿದುಕೊಂಡರೆ, ಎಂದಿಗೂ ಬಿಡುವುದಿಲ್ಲ.

ಹೀಗೆ ಮೈಯೆಲ್ಲಾ ನೀಲಿಯಾಗಿರುವ ನರಿಯನ್ನು ನೋಡಿದ ಕಾಡಿನ ಪ್ರಾಣಿಗಳೆಲ್ಲ ಭಯಗ್ರಸ್ಥರಾಗಿ, ವ್ಯಾಕುಲಗೊಂಡು ದಿಕ್ಕಾಪಾಲಾಗಿ ಓಡುತ್ತಿದ್ದವು. ಇದನ್ನು ನೋಡಿದ ನರಿಯು ಅವುಗಳ ಭಯವನ್ನು ಗ್ರಹಿಸಿ, ಮೊದಲೇ ಬುದ್ಧಿವಂತ ನರಿ ಒಂದು ಉಪಾಯ ಹೊಳೆಯಿತು, ಪ್ರಾಣಿಗಳನ್ನೆಲ್ಲಾ ಹತ್ತಿರಕ್ಕೆ ಕರೆದು ಹೀಗೆ ಹೇಳಿತು – "ನನ್ನ ಹೆಸರು ಕುಕುದ್ರುಮ. ಬ್ರಹ್ಮನು ನನ್ನನ್ನು ಸೃಷ್ಟಿಮಾಡಿ, ಪ್ರಾಣಿಗಳಿಗೆ ಯಾರೂ ರಾಜನಿಲ್ಲದಿರುವುದರಿಂದ ನನ್ನನ್ನು ಎಲ್ಲಾ ಪ್ರಾಣಿಗಳಿಗೆ ಪ್ರಭುವೆಂದು ನಿಯೋಜನೆ ಮಾಡಿದ್ದಾನೆ. ನಾನು ಇಂದಿನಿಂದ ಮೂರುಲೋಕಗಳಲ್ಲಿಯೂ ಪ್ರಾಣಿಗಳ ಒಡೆಯನಾಗಿರುವೆ. ಇದನ್ನು ಕೇಳಿದ ಸಿಂಹ, ಹುಲಿ ಮುಂತಾದ ಪ್ರಾಣಿಗಳು ಒಪ್ಪಿ ನರಿಯಸುತ್ತ ನಿಂತವು. ನರಿಯು ಸಿಂಹಕ್ಕೆ ಮಂತ್ರಿಪದವಿ, ಹುಲಿಗೆ ತನ್ನ ಮಲಗುವ ಸ್ಥಾನದ ರಕ್ಷಣೆಯ ಜವಾಬ್ದಾರಿ, ಚಿರತೆಗೆ ತಾಂಬೂಲವನ್ನು ತಯಾರಿಸುವ ಕಾರ್ಯ ಕೊಟ್ಟಿತು. ಆದರೆ ತನ್ನ ಜಾತಿಯವರಾದ ನರಿಗಳನ್ನು ಬಹಳ ದೂರ ಇಟ್ಟು, ಮಾತನ್ನೂ ಕೂಡ ಆಡುತ್ತಿರಲಿಲ್ಲ. ಹೀಗೆ ರಾಜ್ಯಭಾರಮಡುತ್ತಿದ್ದ ನರಿಗೆ ಸಿಂಹ ಮುಂತಾದವುಗಳು ಪ್ರಾಣಿಗಳನ್ನು ಬೇಟೆಯಾಡಿ ಆಹಾರವನ್ನು ಒದಗಿಸುತ್ತಿದ್ದವು. ನರಿಯೂ ಬುದ್ಧಿವಂತಿಕೆಯಿಂದ ರಾಜಧರ್ಮವನ್ನು ಪಾಲನೆ ಮಾಡುತ್ತಾ, ಅದನ್ನೆಲ್ಲಾ ಇತರ ಪ್ರಾಣಿಗಳಿಗೆ ಹಂಚುತ್ತಿತ್ತು. ಹೀಗೇ ಎಲ್ಲವೂ ಚೆನ್ನಾಗಿ ನಡೆಯುತ್ತಿದ್ದಾಗ, ಒಮ್ಮೆ ರಾಜಸಭೆಯಲ್ಲಿದ್ದಾಗ ದೂರದಲ್ಲಿ ಒಂದು ನರಿಗಳ ಗುಂಪು ಊಳಿಡುವ ಶಬ್ದ ಕೇಳಿಬಂತು. ಆ ಶಬ್ದವನ್ನು ಕೇಳಿದೊಡನೆ ರಾಜನಿಗೆ ಶರೀರವೆಲ್ಲಾ ಪುಳಕಿತಗೊಂಡಿತು. ಕಣ್ಣಲ್ಲಿ ಆನಂದ ಭಾಷ್ಪವೇ ತುಂಬಿಕೊಂಡಿತು. ರಾಜನು ಎದ್ದು ಜೋರಾಗಿ ಊಳಿಟ್ಟುಬಿಟ್ಟನು. ಪ್ರಾಣಿಗಳೆಲ್ಲ ಮುಖಮುಖ ನೋಡಿಕೊಂಡು, ರಾಜನು ನರಿಯೆಂದು ತಿಳಿದು ತಲೆತಗ್ಗಿಸಿ ಮೂರ್ಖರಾದ ಬಗ್ಗೆ ನಾಚಿಕೊಂಡವು. ನರಿಯ ಮೋಸಕ್ಕೆ ಒಳಗಾದ ಸಿಂಹ ಮುಂತಾದವುಗಳು ನರಿಯನ್ನು ಒಂದೇ ಏಟಿಗೆ

---

57. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–283,ಪು–185,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಕೊಂದವು. ಮುಂದೆ ದಮನಕನು ಸಂಜೀವಕನಲ್ಲಿ ಮಿತ್ರಭೇದದ ಪ್ರಯೋಗ ಮಾಡುತ್ತಾನೆ.ಇಲ್ಲಿಯೂ ಸಾಕಷ್ಟು ರಾಜಧರ್ಮದ ವಿಚಾರಗಳನ್ನು ಸಮಯೋಚಿತವಾಗಿ ತಿಳಿಸುತ್ತಾ ಬರುತ್ತಾನೆ. ದಮನಕನು– "ಎಲೈ ಮಿತ್ರನೇ, ಹಾಗಿದ್ದರೆ ನನಗೇನೂ ಭಯವಿಲ್ಲ, ಪಿಂಗಲಕನು ದುರ್ಜನರ ಕಾರಣದಿಂದ ನಿನ್ನಮೇಲೆ ಕೋಪಗೊಂಡಿದ್ದರೂ, ನಿನ್ನ ಮಾತಿನ ಧಾಟಿಯಿಂದ ಆತನ ಕೋಪವು ಶಮನವಾಗುತ್ತದೆ." ಎಂದು ಸಂಜೀವಕನಿಗೆ ಹೇಳುತ್ತಾನೆ. ಆಗ ಸಂಜೀವಕನು ದಮನಕ ಹೇಳಿದ ಮಾತು. ಸರಿಯಾಗಿಲ್ಲ, ದುರ್ಜನರು ಅಲ್ಪರಾದರೂ ಅವರೊಡನೆ ವಾಸಮಾಡುವುದು ತರವಲ್ಲ. ಏನಾದರೂ ಉಪಾಯಮಾಡಿ ಅವರು ಖಂಡಿತಾ ಕೊಂದುಹಾಕುವರು ಎಂದು.

बहवः पण्डिताः क्षुद्राः सर्वे मायोपजीविनः।

कुर्युः कृत्यमकृत्यं वा उष्ट्रे काकादयो यथा ॥[58]

ಕಾಗೆ ಮುಂತಾದವುಗಳೆಲ್ಲವೂ ಸೇರಿ ಒಂಟೆಯನ್ನು ಹೇಗೆ ನಾಶಮಾಡಿದವೋ ಹಾಗೆ ಹಲವು ನೀಚರಾದ ಹಾಗೂ ಮೋಸವನ್ನವಲಂಭಿಸಿ ಬದುಕುವ ಪಂಡಿತರು ವಿವೇಕವಿಲ್ಲದ ಕೆಲಸವನ್ನು ಮಾಡುವರು. ದಮನಕನು ಅದೇನೆಂದು ಕೇಳಲು ಸಂಜೀವಕನು **ಒಂಟೆ ಕಾಕಾದಿ ಕಥೆ**ಯನ್ನು ಹೇಳಿದನು.

ವನಪ್ರದೇಶವೊಂದರಲ್ಲಿ ಮದೋತ್ಕಟವೆಂಬ ಸಿಂಹ ವಾಸವಾಗಿತ್ತು. ಚಿರತೆ, ಕಾಗೆ ಮತ್ತು ನರಿ ಅದರ ಅನುಯಾಯಿಗಳಾಗಿದ್ದವು. ಒಮ್ಮೆ ಕಾಡಿನಲ್ಲಿ ಕ್ರಥನಕನೆಂಬ ಒಂದು ಒಂಟೆಯನ್ನು ನೋಡಿದವು. ಸಿಂಹವು ಹಿಂದೆಂದೂ ಅಂತಹ ಪ್ರಾಣಿಯನ್ನು ನೋಡಿರಲಿಲ್ಲ. ಅದು ಅರಣ್ಯ ವಾಸಿಯೋ ಅಥವಾ ಗ್ರಾಮವಾಸಿಯೋ ಎಂದು ತಿಳಿದುಕೊಳ್ಳುವ ಕುತೂಹಲದಿಂದ ಕಾಗೆಯನ್ನು ಕೇಳಿತು. ಕಾಗೆಯು ಅದು ಒಂಟೆಯೆಂದು ಹೇಳುತ್ತಾ, ಅದು ತಿನ್ನಲು ಯೋಗ್ಯವಾದುದು. ಆಗ ಸಿಂಹವು "ಮನೆಗೆ ಬಂದವರನ್ನು ನಾನು ಕೊಲ್ಲುವುದಿಲ್ಲ" ಏಕೆಂದರೆ, ವಿಶ್ವಾಸ ಹಾಗೂ ನಿರ್ಭಯದಿಂದ ಮನೆಗೆ ಬಂದ ಶತ್ರುವನ್ನು ಕೊಂದರೂ ಕೂಡ ನೂರು ಬ್ರಾಹ್ಮಣರನ್ನು ಕೊಂದ ಪಾಪ ಬರುತ್ತದೆ. ನಂತರ ಅದರ ಅನುಚರರು ಒಂಟೆಯಲ್ಲಿ ವಿಶ್ವಾಸ ಮೂಡಿಸಿ, ಅಭಯಪ್ರಧಾನವನ್ನು ಮಾಡಿ ಮದೋತ್ಕಟನ ಬಳಿಗೆ ಕರೆದುಕೊಂಡು ಬಂದವು. ಸಿಂಹವು ಒಂಟೆಯನ್ನು ಆಹ್ವಾನಿಸಿ, ಅಲ್ಲಿಯೇ ಮರಕತಮಣಿಯಂತಿರುವ ಹುಲ್ಲಿನ ಅಗ್ರಭಾಗವನ್ನು ನಿರ್ಭಯದಿಂದ ತಿನ್ನುತ್ತಾ ಸದಾ ನನ್ನ ಬಳಿ ಇರು "ಎಂದುಹೇಳಿತು. ಹೀಗಿರಲು ಒಮ್ಮೆ ಸಿಂಹಕ್ಕೆ ಬಲಿಷ್ಠವಾದ ಆನೆಯೊಂದಿಗೆ ಯುದ್ಧವಾಯಿತು.

ಆನೆಯ ದಂತದ ಪ್ರಹಾರದಿಂದ ಸಿಂಹವು ಗಾಯಗೊಂಡು ಹೇಗೋ ಪ್ರಾಣ ಉಳಿಸಿಕೊಂಡಿತು. ಬಹಳ

58. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–311, ಪು–200,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ನೋವಿನಿಂದ ಬೇಟೆಯಾಡುವುದೂ ಸಾಧ್ಯವಾಗಲಿಲ್ಲ. ಸಿಂಹವು ತನ್ನ ಅನುಯಾಯಿಗಳನ್ನು ಕರೆದು "ಎಲ್ಲಾದರೂ, ಯಾವುದಾದರೂ ಪ್ರಾಣಿ ಸಿಗುತ್ತದೆಯೇ ಎಂದು ಹುಡುಕಿರಿ " ಎಂದು ಹೇಳಿತು. ಅಂತಹ ಸಂಕಷ್ಟ ಪರಿಸ್ಥಿತಿಯಲ್ಲೂ, ಆಹಾರವನ್ನು ಒದಗಿಸುವ ಪ್ರಜಾಪಾಲನಾ ಕಾರ್ಯ ರಾಜಧರ್ಮವಾಗಿರುತ್ತದೆ. ರಾಜನ ಅಪ್ಪಣೆಯಂತೆ, ಅನುಯಾಯಿಗಳು ಪ್ರಾಣಿಗಾಗಿ ಹುಡುಕಾಡಿದರೂ ಎಲ್ಲಿಯೂ ಸಿಗದಿದ್ದಾಗ, ತಮ್ಮ ತಮ್ಮಲ್ಲೇ ಮಾತನಾಡಿಕೊಂಡು ಕ್ರಂಥಕನನ್ನೇ ಕೊಂದು ತಿಂದು ಹಸಿವು ಶಮನ ಮಾಡಿಕೊಳ್ಳುವುದು ಸರಿಯೆಂದು ಯೋಚಿಸಿದವು. ಎಲ್ಲವೂ ಸೇರಿಕೊಂಡು ಬಹಳ ಉಪಾಯ ಹೂಡಿ ಅಭಯಪ್ರಧಾನ ಮಾಡಿದ್ದ ಒಂಟೆಯನ್ನೇ "ಸ್ವತಃ ತನ್ನ ಪ್ರಾಣವನ್ನು ತಾನೇ ಸ್ವಯಂ ಇಚ್ಛೆಯಿಂದ ಕೊಟ್ಟು ಉಳಿದವರ ಹಸಿವನ್ನು ನೀಗಿಸಿಕೊಳ್ಳಿ ಎಂದು ಹೇಳುವಷ್ಟರಮಟ್ಟಿಗೆ ತಯಾರಿ ಮಾಡಿಬಿಟ್ಟವು. ಯಾವಾಗ ಒಂಟೆ ಮುಗ್ಧತೆಯಿಂದ ಹೀಗೆ ಹೇಳಿತೋ, ರಾಜನೂ ಅಂತಿಮವಾಗಿ ಒಪ್ಪಿದನೋ ಆ ಕೂಡಲೇ ನರಿ ಮತ್ತು ಚಿರತೆ ಒಂದೊಂದು ಕಡೆಯಿಂದ ಒಂಟೆಯ ಹೊಟ್ಟೆಯನ್ನು ಸೀಳಿಬಿಟ್ಟವು. ಕಾಗೆಯು ಅದರ ಕಣ್ಣುಗಳನ್ನು ಕುಕ್ಕಿ ತೆಗೆದುಹಾಕಿತು. ಒಟ್ಟಿನಲ್ಲಿ ನೀಚ ಪಾಂಡಿತ್ಯವುಳ್ಳ ಆ ಪ್ರಾಣಿಗಳೆಲ್ಲಾ ಸೇರಿ ಒಂಟೆಯನ್ನು ತಿಂದುಹಾಕಿದವು.

ಹೀಗೆ ಕಥೆಯನ್ನು ಹೇಳಿ ಮುಗಿಸಿದ ದಮನಕನು "ತಿಳಿಯಿತಲ್ಲ ಸಂಜೀವಕ, ಮೋಸ ಹೋಗುವವರು ಇರುವವರೆಗೆ ಮೋಸ ಮಾಡುವವರು ಇದ್ದೇ ಇರುತ್ತಾರೆ. ಆದ್ದರಿಂದ ಅಂತಹವರು ಹತ್ತಿರ ಬರುವತನಕ ಅವರಿಗಾಗಿ ಹೆದರಬೇಕು, ಹತ್ತಿರ ಬಂದಾಗ ಮತ್ತೆ ಭಯಪಡಬಾರದು. ನೀರಲ್ಲಿ ಪೂರ್ತಿ ಮುಳುಗಿದ ಮೇಲೆ ಚಳಿ ಏನು, ಮಳೆ ಏನು? ಹೀಗಾಗಿ ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಶತ್ರುವನ್ನು ಎದುರಿಸುವುದೇ ಸೂಕ್ತ" ಎಂದಿದ್ದ.[59] ಮತ್ತೆ ಸಂಜೀವಕ ಮತ್ತು ದಮನಕನು ರಾಜನೀತಿಯ ಬಗ್ಗೆ ಕೆಲವು ಮುಖ್ಯ ವಿಚಾರಗಳನ್ನು ಚರ್ಚಿಸುತ್ತಾ, ಕೊನೆಯಲ್ಲಿ ದಮನಕನು ಹೇಳುತ್ತಾನೆ–

शत्रोर्विक्रममज्ञात्वा वैरमारभते हि यः ।

स पराभवमाप्नोति समुद्रष्टिट्टिभाद्यथा ॥[60]

ಶತ್ರುವಿನ ಪರಾಕ್ರಮವನ್ನು ತಿಳಿಯದೇ ಯಾವನು ವೈರತ್ವವನ್ನು ಆರಂಭಿಸುತ್ತಾನೋ ಅವನು ಸಮುದ್ರವು ಟಿಟ್ಟಿಭ ಪಕ್ಷಿಯಿಂದ ಸೋತಂತೆ ಸೋಲನ್ನು ಕಾಣುತ್ತಾನೆ. ಸಂಜೀವಕನು ಅದೇನೆಂದು ಕೇಳಲು ದಮನಕನು **ಟಿಟ್ಟಿಭ – ಸಮುದ್ರ ಕಥೆ**ಯನ್ನು ಹೇಳಿದನು. "ಸ್ವಪ್ರಯತ್ನದೊಂದಿಗೆ ದೈವಬಲವು ಸೇರಿದರೆ ಅಸಾಧ್ಯವಾದುದನ್ನು ಸಾಧಿಸಬಹುದಾಗಿದೆ. ಅದಕ್ಕೆ ಶಕ್ತಿಯೇ ಬೇಕೆಂದೇನಿಲ್ಲ. ಯುಕ್ತಿಯಿಂದ

59. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು–74–79, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.
60. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–337, ಪು–217,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಶತ್ರುವಿನ ದೌರ್ಬಲ್ಯವನ್ನು ಅರಿತು ಅಥವಾ ಇನ್ನೊಬ್ಬರ ಸಹಾಯವನ್ನು ಪಡೆದು ಕಾರ್ಯದಲ್ಲಿ ಯಶಸ್ಸು ಪಡೆಯಲಾಗುತ್ತದೆ ಎಂಬುದಕ್ಕೆ ಟಿಟ್ಟಿಭ ದಂಪತಿಯ ಗೆಲುವೇ ಸ್ಪಷ್ಟ ಉದಾಹರಣೆ.

ಒಂದು ಸಮುದ್ರ ತೀರ ಪ್ರದೇಶದಲ್ಲಿ ಟಿಟ್ಟಿಭ ದಂಪತಿಗಳು ವಾಸವಾಗಿದ್ದವು. ಟಿಟ್ಟಿಭೆಯು ಗರ್ಭವತಿಯಾಗಿದ್ದು, ಪ್ರಸವದ ಕಾಲ ಪ್ರಾಪ್ತವಾದಾಗ ತನ್ನ ಮೊಟ್ಟೆಗಳನ್ನಿಡಲು ಸುರಕ್ಷಿತವಾದ ಜಾಗವೊಂದನ್ನು ಹುಡುಕಲು ಟಿಟ್ಟಿಭನಿಗೆ ಹೇಳಿತು. ಅದಕ್ಕೆ, ಸಮುದ್ರಪ್ರದೇಶವೇ ರಮಣೀಯವಾಗಿರುವಾಗ ಅಲ್ಲಿಯೇ ಹೆರಿಗೆ ಕಾರ್ಯ ನಿರ್ವಹಿಸೋಣವೆಂದು ಟಿಟ್ಟಿಭ ಸಲಹೆ ಮಾಡಿತು. ಆದರೆ, ಟಿಟ್ಟಿಭೆ ಇದನ್ನು ಒಪ್ಪಲಿಲ್ಲ. ಏಕೆಂದರೆ ಪೂರ್ಣಿಮೆಯ ದಿನದಂದು ಸಮುದ್ರದ ಅಲೆಗಳು ಮದಗಜವನ್ನು ಕೂಡ ಎಳೆದುಕೊಂಡು ಹೋಗುವಷ್ಟು ಜೋರಾಗಿರುತ್ತದೆ. ಮತ್ತೊಂದು ಸುರಕ್ಷಿತ ಸ್ಥಳಕ್ಕೆ ಹೋಗುವುದು ಒಳ್ಳೆಯದು ಎಂದಳು ಟಿಟ್ಟಿಭೆ. ಅದನ್ನು ಕೇಳಿ ಟಿಟ್ಟಿಭ ನಕ್ಕು ಬಹಳ ಉಡಾಫೆ, ಅಹಂಕಾರ ಹಾಗೂ ಮೌಢ್ಯದ ಮಾತುಗಳನ್ನಡುತ್ತಾ ಬರೀ ಪ್ರತಿಷ್ಠೆ ಮಾತುಗಳನ್ನಾಡಿತು. ಈ ಮಾತುಗಳನ್ನು ಸಮುದ್ರವೂ ಕೇಳಿಸಿಕೊಂಡು ಯೋಚಿಸಿತು–"ಈ ಹುಳುವಿನಂತಿರುವ ಪಕ್ಷಿಗೆ ಅದೆಷ್ಟು ಗರ್ವ! ಆಕಾಶವು ತುಂಡಾಗಿ ಬಿದ್ದರೆ ಹಿಡಿದುಕೊಳ್ಳುವೆನೆಂಬ ಭ್ರಾಂತಿಯಿಂದ ಕಾಲುಗಳನ್ನು ಮೇಲೆ ಮಾಡಿ ಮಲಗುವ ಟಿಟ್ಟಿಭಕ್ಕಿರುವಂತಹ ಗರ್ವವು ಬೇರೆಲ್ಲೂ ಕಾಣಸಿಗದು. ಕುತೂಹಲಕ್ಕಾದರೂ ಇದರ ಮೊಟ್ಟೆಗಳನ್ನು ಅಪಹರಿಸಿ ಇದರ ಸಾಮರ್ಥ್ಯ ಪರೀಕ್ಷೆ ಮಾಡಲೇಬೇಕು." ಮೊಟ್ಟೆ ಇಟ್ಟದ್ದೂ ಆಯಿತು. ಒಮ್ಮೆ ಟಿಟ್ಟಿಭ ದಂಪತಿಗಳು ಆಹಾರವನ್ನು ಹುಡುಕಲು ಹೋಗಿದ್ದಾಗ ಸಮುದ್ರವು ಅಲೆಗಳನ್ನೆಬ್ಬಿಸಿ ಅವುಗಳ ಮೊಟ್ಟೆಯನ್ನು ಅಪಹರಿಸಿತು. ಟಿಟ್ಟಿಭ ದಂಪತಿಗಳು ಹಿಂದಿರುಗಿ ಬಂದಾಗ, ಮೊಟ್ಟೆಗಳು ಇಲ್ಲದ್ದನ್ನು ನೋಡಿದ ಟಿಟ್ಟಿಭೆಯು ಬಹಳ ಕೋಪ ಹಾಗೂ ದುಃಖದಿಂದ ಪ್ರಲಾಪಿಸುತ್ತಾ, ಟಿಟ್ಟಿಭಕ್ಕೆ ಹೀಗೆ ಹೇಳಿತು– "ಎಲೈ ಮೂರ್ಖನೇ, ನಾನು ಮೊದಲೇ ಹೇಳಿದ್ದೆ. ಸಮುದ್ರದ ಅಲೆಗಳಿಂದ ಮೊಟ್ಟೆಯು ನಾಶವಾಗುವುದು, ಬೇರೆಡೆಗೆ ಹೋಗೋಣ ಎಂದು. ಆದರೆ ಮೌಢ್ಯದಿಂದ ಮತ್ತು ಅಹಂಕಾರದಿಂದ ನನ್ನ ಮಾತನ್ನು ನೀನು ಕೇಳಲಿಲ್ಲ. ಹೀಗೊಂದು ಉಕ್ತಿಯಿದೆ:–

सुहृदां हितकामानां न करोतीह यो वचः ।

स कूर्म इव दुर्बुद्धिः काष्ठाद् भ्रष्टो विनश्यति ।।[61]

ಯಾರು ಹಿತವನ್ನು ಬಯಸುವ ಮಿತ್ರರ ಮಾತನ್ನು ಕೇಳುವುದಿಲ್ಲವೋ ಅವನು ಕಟ್ಟಿಗೆಯಿಂದ ಬಿದ್ದ

61. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–344, ಪು–221,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಆಮೆಯಂತೆ ನಾಶಹೊಂದುತ್ತಾನೆ. ಟಿಟ್ಟಿಭವು ಅದೇನೆಂದು ಕೇಳಲು ಟಿಟ್ಟಿಭೆಯು **ಕಟ್ಟಿಗೆಯಿಂದ ಬಿದ್ದ ಆಮೆಯ ಕಥೆ**ಯನ್ನು ಹೇಳಿತು.

ಒಂದು ಜಲಾಶಯದಲ್ಲಿ ಕುಂಬುಗ್ರೀವನೆಂಬ ಆಮೆಯಿತ್ತು. ಅಲ್ಲಿಗೆ ನಿತ್ಯವೂ ಸಂಕಟ ಮತ್ತು ವಿಕಟ ಎಂಬ ಅದರ ಹಂಸಮಿತ್ರರು ಬಂದು ಮಹರ್ಷಿ ದೇವರ್ಷಿಗಳ ಕಥೆಗಳನ್ನು ಹೇಳುತ್ತಾ ಆಮೆಯೊಡನೆ ಸೂರ್ಯಾಸ್ತದ ಸಮಯದವರೆಗೂ ಕಾಲಕಳೆದು, ತಮ್ಮ ಗೂಡಿಗೆ ವಾಪಸ್ಸಾಗುತ್ತಿದ್ದವು. ಹೀಗೇ ಕಾಲಕಳೆದಂತೆ, ಅನಾವೃಷ್ಟಿಯಿಂದ ಸರೋವರವು ಒಣಗುತ್ತಾ ಬಂತು. ಆಗ ಆಮೆ ಬಹಳ ದುಃಖಗೊಂಡಿತು. ಇದನ್ನು ನೋಡಿದ ಹಂಸಮಿತ್ರರು ಆಮೆಯನ್ನು ವಿಚಾರಿಸಿದವು. ಅದಕ್ಕೆ ಕುಂಬುಗ್ರೀವ ಹೇಳಿತು– "ನೀರಿಲ್ಲದಿದ್ದರೆ ನಮಗೆ ಬದುಕಿಲ್ಲ. ಪ್ರತಿಕೂಲ ಕಾಲದಲ್ಲೂ ಧೈರ್ಯ ಬಿಡಬಾರದು. ಏಕೆಂದರೆ ಧೈರ್ಯವೊಂದಿದ್ದರೆ ಹೇಗಾದರೂ ಉತ್ತಮ ಸ್ಥಿತಿಯನ್ನು ಪಡೆಯಬಹುದು ಸಮುದ್ರದ ಹಡಗು ಮುರಿದರೆ ನಾವಿಕನು ಹೇಗಾದರೂ ಮಾಡಿ ದಡ ತಲುಪುವುದಿಲ್ಲವೇ? ಆದ್ದರಿಂದ ನೀವೇನಾದರೂ ಒಂದು ಉಪಾಯವನ್ನು ಮಾಡಿ ನನಗೆ ಸಹಾಯ ಮಾಡಬೇಕು. ಆದ್ದರಿಂದ ಒಂದು ಗಟ್ಟಿಯಾದ ಹಗ್ಗ ಅಥವಾ ಸಣ್ಣ ಕಟ್ಟಿಗೆಯ ತುಂಡೊಂದನ್ನು ತನ್ನಿ. ಹೆಚ್ಚು ನೀರಿರುವ ಸರೋವರವೊಂದನ್ನು ಹುಡುಕಿರಿ. ನಾನು ಆ ಕಟ್ಟಿಗೆಯ ಮಧ್ಯ ಭಾಗವನ್ನು ಕಚ್ಚಿ ಹಿಡಿಯುತ್ತೇನೆ. ನೀವು ಅದರ ಎರಡು ತುದಿಗಳನ್ನು ಕಚ್ಚಿಕೊಂಡು ನನ್ನನ್ನು ಆ ಸರೋವರಕ್ಕೆ ಕರೆದುಕೊಂಡು ಹೋಗಿ" ಎಂದಿತು.

ಹಂಸಗಳು ಹಾಗೆಯೇ ಮಾಡೋಣವೆಂದು ಒಪ್ಪಿದವು. ಆದರೆ ನೀನು ಮೌನಿಯಾಗಿರಬೇಕು ಎಂದು ಒಂದು ಷರತ್ತನ್ನು ಹೇಳಿದವು. ಸರಿ, ಯೋಜನೆಯಂತೆ ಪ್ರಯಾಣ ಸಾಗುತ್ತಿತ್ತು. ದಾರಿಯಲ್ಲಿ ಒಂದು ನಗರ ಕಂಡಿತು. ಅಲ್ಲಿನ ಜನರು ಈ ಚಿತ್ರವನ್ನು ಕುತೂಹಲದಿಂದ ನೋಡುತ್ತಾ" ಏನೋ ಚಕ್ರಾಕಾರದ ವಸ್ತುವನ್ನು ಪಕ್ಷಿಗಳು ಒಯ್ಯುತ್ತಿವೆ ನೋಡಿ! ನೋಡಿ! "ಎಂದರು. ಅವರ ಕೋಲಾಹಲವನ್ನು ಕೇಳಿದ ಆಮೆಯು, ಎಚ್ಚರಿಕೆ ಮರೆತು ಬಾಯಿ ತೆರೆದು, "ಇದೇನು ಕೋಲಾಹಲ?." ಎಂದು ಹೇಳುವಷ್ಟರಲ್ಲಿ ಕೆಳಗೆ ಬಿದ್ದುಬಿಟ್ಟಿತು. ಜನರು ಅದನ್ನು ಕೊಚ್ಚಿ ಹಾಕಿಬಿಟ್ಟರು.[62] ಇಲ್ಲಿ ಎಂಥಹ ಒಂದು ನೀತಿಪಾಠವಿದೆ! ಹಿತವನ್ನು ಬಯಸುವ ಮಿತ್ರರ ಮಾತನ್ನು ಕೇಳಬೇಕು; ಮೌಢ್ಯದಿಂದ ವರ್ತಿಸಬಾರದು; ಜಾಗ್ರತೆ ಅಥವಾ ಎಚ್ಚರಿಕೆ ತಪ್ಪಬಾರದು. ಈ ಒಂದು ಪುಟ್ಟ ಕಥೆ ಕೇಳುಗರಿಗೆ ನಿಜಕ್ಕೂ ಕಣ್ಣಿಗೆ ಕಟ್ಟುವಂತಿದ್ದು, ಎಂದೂ ಮರೆರಯುವಂತಿಲ್ಲ. ಇದರ ಮುಂದೆ ಯಾವ ದುಬಾರಿಯಾದ ಪಾಠೋಪಕರಣವೂ ಇಷ್ಟು

62. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು–81–82, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

ಪರಿಣಾಮಕಾರಿಯಾಗಲಾರದು. ಇದೇ ಪಂಚತಂತ್ರದಲ್ಲಿ ಕಂಡುಬರುವ ಒಂದು ವಿಶಿಷ್ಟ ಶೈಕ್ಷಣಿಕ, ಮನೋವೈಜ್ಞಾನಿಕ ತಂತ್ರಗಾರಿಕೆಯಾಗಿರುತ್ತದೆ. ಸರಳ ಹಾಗೂ ಆಪ್ಯಾಯಮಾನ ಬೋಧನೆಯಾಗಿದೆ. ಅದರಲ್ಲೂ ಪ್ರಾಣಿಪಕ್ಷಿಗಳು ಇಂತಹ ಮನುಷ್ಯವರ್ತನೆಯನ್ನು ನಿರೂಪಿಸುತ್ತವೆ ಎಂಬುದೇ ಕಲಿಯುವವರಿಗೆ ಒಂದು ವಿಶೇಷ ಆಕರ್ಷಣೆಯಾಗಿರುತ್ತದೆ.

ಕಟ್ಟಿಗೆಯಿಂದ ಬಿದ್ದ ಆಮೆಯ ಕಥೆಯನ್ನು ಮುಗಿಸಿದ ಟಿಟ್ಟಿಭೆಯು ಮುಂದುವರಿದು –

अनागतविधाता च प्रत्युत्पन्नमतिस्तथा ।

द्वावेतौ सुखमेधेते यद्भविष्यो विनश्यति ॥[63]

ಅಂದರೆ, "ಅನಾಗತ ವಿಧಾತಾ ಮತ್ತು ಪ್ರತ್ಯುತ್ಪನ್ನಮತಿ– ಈ ಇಬ್ಬರೂ ಸಂತೋಷದಿಂದ ಇರುವರು. ಆದರೆ ಯದ್ಭವಿಷ್ಯನು ನಾಶಹೊಂದುವನು." ಅದನ್ನು ಕೇಳಿದ ಟಿಟ್ಟಿಭವು ಅದೇನೆಂದು ಕೇಳಲು ಟಿಟ್ಟಿಭೆಯು **ಮೂರು ಮೀನುಗಳ ಕಥೆ**ಯನ್ನು ಹೇಳಿತು. ಅನಾಗತ ವಿಧಾತಾ, ಪ್ರತ್ಯುತ್ಪನ್ನಮತಿ ಮತ್ತು ಯದ್ಭವಿಷ್ಯತಿ ಎಂಬ ಮೂರು ಮೀನುಗಳು ಒಂದು ಜಲಾಶಯದಲ್ಲಿ ವಾಸಿಸುತ್ತಿದ್ದವು. ಅದರಲ್ಲಿ ಇನ್ನೂ ಬೇಕಾದಷ್ಟು ಮೀನುಗಳೂ ವಾಸವಾಗಿದ್ದವು. ಒಮ್ಮೆ ಅದೇ ದಾರಿಯಲ್ಲಿ ಹೋಗುತ್ತಿದ್ದ ಮೀನುಗಾರರು– "ಅಪರೂಪದ ಸರೋವರ, ಅದರ ತುಂಬಾ ಮೀನುಗಳಿವೆ. ಅಂದಿನ ಮೀನುಗಳನ್ನು ಹಿಡಿದಾಗಿದ್ದರಿಂದ ಹಾಗೂ ಸಂಜೆಯಾಗಿದ್ದರಿಂದ ನಾಳೆ ಬೆಳಗ್ಗೆ ಖಂಡಿತಾ ಬಂದು ಮೀನುಗಳನ್ನು ಹಿಡಿಯೋಣ ಎಂದು ಮಾತನಾಡಿಕೊಳ್ಳುತ್ತಿದ್ದರು. ಇದನ್ನು ಅನಾಗತ ವಿಧಾತಾ ಮೀನು ಕೇಳಿಸಿಕೊಂಡು ಎಲ್ಲಾ ಮೀನುಗಳಿಗೂ ವಿಷಯ ತಿಳಿಸಿ ಎಚ್ಚರಿಸಿತು. ಅಂದೇ ರಾತ್ರಿ ಬೇರೆ ಸರೋವರಕ್ಕೆ ಹೋಗಿಬಿಡೋಣ ಎಂದು ಸಲಹೆ ನೀಡಿತು"

विद्यमाना गतिर्येषामन्यत्रापि सुखावहा ।

तेन पश्यन्ति विद्वांसो देहभङ्गं कुलक्षयम् ॥[64]

ಬೇರೆಕಡೆಗೆ ಹೋಗಿ ಸುಖವಾಗಿ ಬದುಕುವ ಅವಕಾಶ ಇದ್ದಾಗ, "ಬುದ್ಧಿವಂತನು ತಾನು ಸ್ವದೇಶದಿಂದ ಹೊರಡುವಂತಾಯಿತು ಅಥವಾ ಕುಲವು ನಾಶವಾಯಿತು ಎಂದು ಚಿಂತಿಸುವುದಿಲ್ಲ." ಎಂದೂ ಹೇಳಿತು.

ಅದನ್ನು ಕೇಳಿದ ಪ್ರತ್ಯುತ್ಪನ್ನಮತಿ ಸರಿಯೆಂದು ಒಪ್ಪಿ, ತಾನೂ ಒಂದು ಸಲಹೆ ನೀಡಿತು–

---

63. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–347, ಪು–224,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
64. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–349, ಪು–226,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

यस्यास्ति सर्वत्र गतिः स कस्मात्स्वदेशरागेण हि याति नाशम् ।

तातस्य कूपोऽयमिति ब्रुवाणाः क्षारं जलं कापुरुषाः पिबन्ति ॥[65]

"ಯಾರು ಎಲ್ಲಾದರೂ ಬದುಕಬಲ್ಲರೋ ಅವರು ಸ್ವದೇಶದ ವ್ಯಾಮೋಹದಿಂದ ನಾಶಹೊಂದುವುದಿಲ್ಲ. ಹೇಡಿಗಳು ಮಾತ್ರ ಅಜ್ಜನ ಬಾವಿಯೆಂದು ಹೇಳುತ್ತಾ ಉಪ್ಪು ನೀರನ್ನೇ ಕುಡಿಯುತ್ತಿರುತ್ತಾರೆ."

ಇದನ್ನೆಲ್ಲಾ ಕೇಳಿದ ಯದ್ಭವಿಷ್ಯ ಮೀನು ನಗುತ್ತಾ, ಇವರುಗಳ ಆಲೋಚನೆ ಸರಿಯಿಲ್ಲವೆಂಬ ಅಭಿಪ್ರಾಯ ವ್ಯಕ್ತಪಡಿಸಿತು. ಪೂರ್ವಜರ ಕಾಲದ ಆ ಸರೋವರವನ್ನು ಬಿಟ್ಟುಹೋಗುವುದು ಸರಿಯಲ್ಲವೆಂದಿತು. ಆಯಸ್ಸು ಮುಗಿದಾಗ ಎಲ್ಲಿದ್ದರೂ ಸಾವು ಬಂದೇಬರುತ್ತದೆ.

अरक्षितं तिष्ठति दैवरक्षितं सुरक्षितं दैवहतं विनश्यति ।

जीवत्सनाथोऽपि वने विसर्जितः कृतप्रयत्नोऽपि गृहे विनश्यति ॥[66]

ರಕ್ಷಣೆಯಿಲ್ಲದವನು ದೈವರಕ್ಷೆಯಿದ್ದರೆ ಬದುಕುತ್ತಾನೆ. ಉತ್ತಮ ರಕ್ಷಣೆಯಿದ್ದವನು ದೈವಕೃಪೆಯಿಲ್ಲದಿದ್ದಾಗ ನಾಶವಾಗುತ್ತಾನೆ. ಕಾಡಿನಲ್ಲಿ ಬಿಟ್ಟ ಅನಾಥನು ದೈವಕೃಪೆಯಿಂದ ಬದುಕುತ್ತಾನೆ. ದೈವಕೃಪೆಯಿಲ್ಲದಿದ್ದಾಗ ಎಷ್ಟೇ ಪ್ರಯತ್ನಪಟ್ಟರೂ, ಮನೆಯಲ್ಲಿದ್ದರೂ ಕೂಡ ನಾಶವಾಗುತ್ತಾನೆ. ಆದ್ದರಿಂದ ನಾನು ಬರುವುದಿಲ್ಲ. ನಿಮಗೆ ತೋಚಿದಂತೆ ನೀವು ಮಾಡಿ." ಎಂದಿತು. ಯದ್ಭವಿಷ್ಯನ ತೀರ್ಮಾನ ತಿಳಿದುಕೊಂಡು ಅನಾಗತವಿಧಾತಾ ಮತ್ತು ಪ್ರತ್ಯುತ್ಪನ್ನಮತಿ ಮೀನುಗಳು ಇತರರೊಂದಿಗೆ ಬೇರೆಡೆಗೆ ಹೊರಟುಹೋದವು ಬೆಳಗ್ಗೆ ಯೋಜನೆಯಂತೆ ಮೀನುಗಾರರು ಬಂದರು, ಬಲೆಬೀಸಿದರು, ಯದ್ಭವಿಷ್ಯ ಹಾಗೂ ಉಳಿದ ಇತರ ಮೀನುಗಳನ್ನು ಹಿಡಿದುಕೊಂಡು ಹೊರಟರು. ಹೀಗೆ ಕಥೆಯನ್ನು ಮುಗಿಸಿದ ಟಿಟ್ಟಿಭೆಯು ಟಿಟ್ಟಿಭದೊಡನೆ ಅನೇಕ ವಿಚಾರಗಳನ್ನು ಚರ್ಚೆ ಮಾಡಿ ಹೇಳಿತು– "ನೀನು ನಿಜವಾಗಿಯೂ ಸಮುದ್ರದೊಂದಿಗೆ ಯುದ್ಧ ಮಾಡುವುದಾದರೆ ಬೇರೆ ಪಕ್ಷಿಗಳನ್ನು ಕರೆದು ಮಿತ್ರರೊಂದಿಗೆ ಸೇರಿಕೊಂಡು ಯುದ್ಧವನ್ನು ಹೂಡು, ಹುಲ್ಲಿನಿಂದ ಮಾಡಿದ ಹಗ್ಗದಿಂದ ಹೇಗೆ ಆನೆಯನ್ನೂ ಕೂಡ ಕಟ್ಟಬಹುದೋ ಹಾಗೆ ದುರ್ಬಲರಾದವರು ಗುಂಪುಗೂಡಿದಾಗ ಅವರನ್ನು ಜಯಿಸುವುದು ಕಷ್ಟಕರವು.

65. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–351, ಪು–227,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

66. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–352,ಪು–227–228,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

चटकाकाष्ठकुट्टेन मक्षिकादर्दुरैस्तथा ।

महाजनविरोधेन कुञ्जरः प्रलयं गतः ।।[67]

"ಗುಬ್ಬಚ್ಚಿಯು ಮರಕುಟಗದೊಂದಿಗೆ ಸೇರಿತು. ನೊಣವು ಕಪ್ಪೆಯೊಂದಿಗೆ ಸೇರಿತು. ಇವರೆಲ್ಲರ ವಿರೋಧದಿಂದ ಆನೆಯೊಂದು ಸಾವನ್ನಪ್ಪಿತು." ಟಿಟ್ಟಿಭವು ಅದೇನೆಂದು ಕೇಳಲು ಟಿಟ್ಟಿಭೆಯು **ಗುಬ್ಬಚ್ಚಿ ದಂಪತಿ ಹಾಗೂ ಆನೆಯ ಕಥೆ**ಯನ್ನು ಹೇಳಿತು.

ಒಂದು ಕಾಡಿನಲ್ಲಿ ದಟ್ಟವಾದ ಎಲೆಯನ್ನು ಹೊಂದಿದ ತಮಾಲವೃಕ್ಷದಲ್ಲಿ ಗುಬ್ಬಿ ದಂಪತಿ ವಾಸವಾಗಿದ್ದವು. ಅನ್ಯೋನ್ಯ ದಾಂಪತ್ಯದಿಂದ ಹೆಣ್ಣು ಗುಬ್ಬಿ ಮೊಟ್ಟೆಯನ್ನಿಟ್ಟು ಅದನ್ನು ಎಚ್ಚರಿಕೆಯಿಂದ ಕಾಯುತ್ತಿತ್ತು. ಅದೇ ಸಮಯದಲ್ಲಿ ಒಂದು ಮದಗಜವು ಆ ಮರದ ಬಳಿ ಬಂದು ಗುಬ್ಬಚ್ಚಿ ಗೂಡಿದ್ದ ರೆಂಬೆಯನ್ನು ಎಳೆದು ಎಸೆಯಿತು. ಮೊಟ್ಟೆಗಳೆಲ್ಲವೂ ಪುಡಿಪುಡಿಯಾದವು. ಪೂರ್ವಜನ್ಮದ ಪುಣ್ಯವಿಶೇಷದಿಂದ ದಂಪತಿಗಳಿಗೆ ಏನೂ ತೊಂದರೆಯಾಗಲಿಲ್ಲ. ಹೆಣ್ಣು ಗುಬ್ಬಿ ತನ್ನ ಮೊಟ್ಟೆಗಳನ್ನು ಕಳೆದುಕೊಂಡು ಆಕ್ರಂದನಕ್ಕೆ ತೊಡಗಿತು. ಅದರ ಸಂಕಟವನ್ನು ನೋಡಲಾರದೆ, ಅದರ ಮಿತ್ರನಾದ ಮರಕುಟಿಕ ಪಕ್ಷಿಯು ಅದಕ್ಕೆ ಸಾಂತ್ವನ ಹೇಳಿತು. "ಮಾನ್ಯಳೇ ಸುಮ್ಮನೆ ಅಳಬೇಡ ಅದರಿಂದ ಪ್ರಯೋಜನವಿಲ್ಲ. ನಷ್ಟವಾದುದಕ್ಕೆ, ಸತ್ತುಹೋದದ್ದಕ್ಕೆ ಮತ್ತು ಕಳೆದುಹೋದದ್ದಕ್ಕೆ ಬುದ್ಧಿವಂತರು ಚಿಂತಿಸುವುದಿಲ್ಲ. ಚಿಂತಿಸಬಾರದ್ದಕ್ಕಾಗಿ ಚಿಂತಿಸುವುದು ಹಾಗೂ ಅದರಿಂದಾಗುವ ದುಃಖ –ಈ ಎರಡೂ ಅನರ್ಥಗಳು

श्लेष्माश्रु बान्धवैर्मुक्तं प्रेतो भुङ्क्ते यतरोऽवशः ।

तस्मान्न रोदितव्यं हि क्रियाः कार्याश्च शक्तितः ।।[68]

ಅಂದರೆ ಸತ್ತ ಪ್ರೇತಶರೀರವು ಕಫದಿಂದ ಕೂಡಿದ ಬಂಧುಗಳ ಕಣ್ಣೀರನ್ನು ಕುಡಿಯುತ್ತದೆ. ಆದ್ದರಿಂದ ಸತ್ತಾಗ ಅಳದೆ ಯಥಾಶಕ್ತಿ ಉತ್ತರಕ್ರಿಯೆಗಳನ್ನು ಮಾಡಬೇಕು. ಸಂತತಿಯನ್ನು ನಾಶಮಾಡಿದ ದುಷ್ಟಗಜವನ್ನು, ನೀನು ಬಂಧುವೇ ಆಗಿದ್ದಲ್ಲಿ ಕೊಲ್ಲುವ ಉಪಾಯವನ್ನು ಯೋಚಿಸು ಎಂದು ಗುಬ್ಬಿಯು ಯಾಚಿಸಿತು. ಅದಕ್ಕೆ ಮರಕುಟಗನು ಹೇಳಿತು– "ಯಾರು, ಯಾರ ಕಷ್ಟದಲ್ಲಿ ನೆರವಾಗುತ್ತಾರೋ ಅವರು ಜಾತಿಯನ್ನು ಮೀರಿ ಬಂಧುವಾಗುತ್ತಾರೆ. ಕಷ್ಟದಲ್ಲಾಗುವವನೇ ಮಿತ್ರ, ಹಿತಕಾರಿಯಾದವನೇ ಪುತ್ರ. ಆದ್ದರಿಂದ

---

67. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–362,ಪು–233,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
68. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–365, ಪು–235,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ನನ್ನ ಬುದ್ಧಿ ಪ್ರಭಾವವನ್ನು ನೋಡು. ವೀಣಾರವಾ ಎಂಬ ನೊಣವು ನನ್ನ ಸ್ನೇಹಿತೆ. ಅವಳನ್ನು ಕರೆದುಕೊಂಡು ಬರುವೆನು. ಬಳಿಕ ಮರಕುಟಿಕವು ಗುಬ್ಬಿಯೊಡನೆ. ನೊಣದ ಹತ್ತಿರ ಬಂದು ವಿಚಾರ ವಿನಿಮಯ ಮಾಡಿಕೊಂಡವು. ನೊಣ ಹೇಳಿತು– "ಈ ವಿಷಯದಲ್ಲಿ ಹೇಳುವುದೇನಿಲ್ಲ. ಪ್ರತ್ಯುಪಕಾರವನ್ನು ಪಡೆಯುವುದಕ್ಕಾಗಿಯೇ ಮಿತ್ರನಿಗೆ ಅಥವಾ ಮಿತ್ರನಮಿತ್ರನಿಗೆ ಪ್ರಿಯವಾದ ಕಾರ್ಯವನ್ನು ಮಾಡಿದರೆ ಮಿತ್ರನಾಗಿ ಏನು ಮಾಡಿದಂತಾಯಿತು? ಇದು ಸತ್ಯವಾದ ಮಾತು. ಮೇಘನಾದನೆಂಬ ಕಪ್ಪೆಯು ನನ್ನ ಸ್ನೇಹಿತ. ಅವನನ್ನು ಕರೆದು ಸೂಕ್ತವಾದುದನ್ನು ಮಾಡೋಣ. ಅನಂತರ ಮೂವರೂ ಹೋಗಿ ಮೇಘನಾದನಲ್ಲಿ ಎಲ್ಲವನ್ನೂ ಹೇಳಿಕೊಂಡರು. ಆಗ ಮೇಘನಾದವು ಹೇಳಿತು– "ಕುಪಿತರಾದ ಮಹಾಜನರ ಮುಂದೆ ಆ ಆನೆಯು ಎಷ್ಟು ಮಾತ್ರದ್ದು? ನಾವು ವಿಚಾರ ಮಾಡೋಣ. ನೊಣವೇ, ನೀನು ಮಧ್ಯಾಹ್ನದ ವೇಳೆ ಆ ಮತ್ತಗಜದ ಕಿವಿಯಲ್ಲಿ ವೀಣಾರವದಂತಹ ಶಬ್ದವನ್ನು ಮಾಡು. ಅದನ್ನು ಕೇಳುವ ಸುಖದಿಂದ ಆನೆಗೆ ಗಾಢವಾದ ನಿದ್ದೆಬರುತ್ತದೆ. ಆಗ ಮರಕುಟಿಕದ ಕೊಕ್ಕಿನಿಂದ ಕಣ್ಣುಗಳಿಗೆ ಚುಚ್ಚಲ್ಪಟ್ಟು, ದೃಷ್ಟಿ ಕಳೆದುಕೊಂಡು ಬಾಯಾರಿಕೆಯಿಂದ ನೀರನ್ನು ಹುಡುಕುತ್ತಾ ಕಂದಕದಲ್ಲಿ ನಿಂತು ವಟಗುಟ್ಟುತ್ತಿರುವ ಕಪ್ಪೆಯ ಪರಿವಾರದವರ ಶಬ್ದವನ್ನು ಕೇಳಿ ಸರೋವರವಿದೆಯೆಂದು ತಿಳಿದು ಆನೆಯು ಕಂದಕಕ್ಕೆ ಬೀಳುತ್ತದೆ ಮತ್ತು ಸಾವನ್ನಪ್ಪುತ್ತದೆ ಹೀಗೆ ಮಾಡಿದಲ್ಲಿ ವೈರಸಾಧನೆ ಮಾಡಿದಂತಾಗುತ್ತದೆ.[69] ಎಂತಹ ಇಂಜಿನಿಯರಿಂಗ್ ಪ್ಲಾನ್!

ಇದು ಒಂದು ರೀತಿ ಶೈಕ್ಷಣಿಕ ಮನೋವಿಜ್ಞಾನದಲ್ಲಿ ಸಮಸ್ಯೆ ಬಗೆಹರಿಸುವಿಕೆ. **(problem solving)** ಅಂತೂ ಯೋಜನೆಯಂತೆ ಎಲ್ಲವೂ ನಡೆದು ಆನೆ ದೊಡ್ಡ ಕಂದಕಕ್ಕೆ ಬಿದ್ದು ಸತ್ತು ಹೋಯಿತು. ಇದರ ನೀತಿಪಾಠ ಒಗ್ಗಟ್ಟಿದ್ದರೆ ಏನನ್ನೂ ಸಾಧಿಸಬಹುದು, ಒಗ್ಗಟ್ಟಿನಲ್ಲಿ ಬಲವಿದೆ. ಹಿತವಾದ ಮಿತ್ರರ ಮಾತುಗಳನ್ನು ಕೇಳಿದರೆ ಎಂಥಹ ಸಮಸ್ಯೆಯನ್ನೂ ಯೋಜಿತವಾಗಿ ಎದುರಿಸಬಹುದು. ಹೀಗೆ ಗುಬ್ಬಚ್ಚಿ ದಂಪತಿ ಕಥೆ ಮುಕ್ತಾಯವಾಗುತ್ತದೆ.

ಪುನಃ ಟಿಟ್ಟಿಭ ಈ ಕಥೆಯನ್ನು ಕೇಳಿ ತಾನೂ ಸ್ನೇಹಿತರೊಂದಿಗೆ ಸೇರಿ ಸಮುದ್ರವನ್ನು ಒಣಗಿಸುವೆನೆಂದು ನಿರ್ಧರಿಸಿ, ಬಕ, ಹಂಸ, ಮಯೂರ ಮೊದಲಾದ ಪಕ್ಷಿಗಳನ್ನು ಸೇರಿಸಿ ಸಮಾಲೋಚನೆ ನಡೆಸಿತು. ಅವುಗಳೆಲ್ಲಾ ಮಂತ್ರಾಲೋಚನೆ ಮಾಡಿ ಹೀಗೆ ಹೇಳಿದವು– "ಸಮುದ್ರವನ್ನು ಒಣಗಿಸುವುದರಲ್ಲಿ ನಾವು ಶಕ್ತರಲ್ಲ. ವ್ಯರ್ಥ ಪ್ರಯಾಸ ಬೇಡ. ನಮ್ಮ ಸ್ವಾಮಿ ಗರುಡನಿದ್ದಾನೆ. ನಮ್ಮ ಈ ಸಮಸ್ಯೆಯನ್ನು ಅವನಲ್ಲಿ ನಿವೇದಿಸಿಕೊಳ್ಳೋಣ. ಅವನು ತನ್ನವರ ಅಪಮಾನದಿಂದ ಕೋಪಗೊಂಡು ಶತ್ರುವಿನಲ್ಲಿ ಪ್ರತೀಕಾರವನ್ನು ಮಾಡುವನು. ಅದರಂತೆ

69. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು – 85–87, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004.

ಅವುಗಳೆಲ್ಲಾ ದುಃಖದಿಂದ ಅಳುತ್ತಾ ಗರುಡನ ಬಳಿಗೆ ಹೋಗಿ ಕರುಣಾಸ್ವರದಿಂದ ಟಿಟ್ಟಿಭೆಯ ಮೊಟ್ಟೆಗಳು ಸಮುದ್ರದ ಅಲೆಯಲ್ಲಿ ಕೊಚ್ಚಿಕೊಂಡು ಹೊದ ಬಗ್ಗೆ, ಪಕ್ಷಿಕುಲ ನಾಶವಾಗಿಹೋಯಿತೆಂಬ ಬಗ್ಗೆ ಹಾಗೂ ತಮ್ಮ ಎಲ್ಲ ಸಂಕಷ್ಟಗಳನ್ನು ನಿವೇದಿಸಿಕೊಂಡವು. ಗರುಡನು ಸತ್ಯಾಸತ್ಯತೆ ಪರೀಕ್ಷಿಸಿ ಪಕ್ಷಿಗಳು ಸತ್ಯವನ್ನೇ ಹೇಳುತ್ತಿವೆ ಎಂಬುದನ್ನು ಅರಿತು ಅಂದೇ ಹೋಗಿ ಸಮುದ್ರವನ್ನು ಒಣಗಿಸಿಬಿಡಬೇಕು ಎಂದು ಯೋಚಿಸಿದನು. ಅಷ್ಟರಲ್ಲಿ ವಿಷ್ಣುದೂತನೊಬ್ಬನು ಬಂದು ಭಗವನ್ನಾರಾಯಣನು ಕರೆ ಕಳುಹಿಸಿರುವುದಾಗಿ ಸಂದೇಶ ಕೊಟ್ಟನು. ಅದನ್ನು ಕೇಳಿದ ಗರುಡನು ಸ್ವಾಭಿಮಾನದಿಂದ ಹೇಳಿದನು– "ಎಲೈ ದೂತನೇ, ನನ್ನಂತಹ ಸಾಮಾನ್ಯ ಸೇವಕನಿಂದ ಭಗವಂತನಿಗೇನು ಪ್ರಯೋಜನ? ನನ್ನ ಸ್ಥಾನದಲ್ಲಿ ಬೇರೆ ಯಾರನ್ನಾದರೂ ವಾಹನವನ್ನಾಗಿ ಮಾಡಿಕೊಳ್ಳಲಿ. ಭಗವಂತನಿಗೆ ನನ್ನ ನಮಸ್ಕಾರಗಳನ್ನು ತಿಳಿಸು. ಕೃಷಿಗೆ ಯೋಗ್ಯವಲ್ಲದ ಭೂಮಿಯಲ್ಲಿ ಉಳುವುದು ಹೇಗೆ ವ್ಯರ್ಥವೋ ಹಾಗೆ ಒಬ್ಬನ ಗುಣಗಳನ್ನು ಅರಿಯಲಾರದವನನ್ನು ಪಂಡಿತನು ಆಶ್ರಯಿಸುವುದಿಲ್ಲ"

ದೂತನಿಗೆ ಇವನ ವಿಚಾರ ಅರ್ಥವಾಗಿ ನಿನಗೇನು ಅಪಮಾನವಾಗಿದೆ ನಿಜ ಹೇಳು ಎಂದು ಕೇಳಿದನು. ಆಗ ಗರುಡನು ಹೀಗೆಂದನು– " ಭಗವಂತನ ಆಶ್ರಯಸ್ಥಾನವಾಗಿರುವ ಸಮುದ್ರವು ನಮ್ಮ ಈ ಟಿಟ್ಟಿಭ ಪಕ್ಷಿಗಳ ಮೊಟ್ಟೆಗಳನ್ನು ಅಪಹರಿಸಿದೆ. ಆದ್ದರಿಂದ, ಸಮುದ್ರವನ್ನು ದಂಡಿಸದಿದ್ದರೆ ನಾನು ಭಗವಂತನ ಸೇವಕನಾಗಿರುವುದಿಲ್ಲ. ಈ ನನ್ನ ನಿಶ್ಚಯವನ್ನು ಬೇಗನೆ ಹೋಗಿ ಭಗವಂತನಿಗೆ ತಿಳಿಸು."

ದೂತನ ಮೂಲಕ ಗರುಡನು ಪ್ರಣಯಕುಪಿತನಾಗಿದ್ದಾನೆಂದು ತಿಳಿದ ಭಗವಂತನು ಬಹಳವಾಗಿ ಯೋಚಿಸಿ ಗರುಡ ಹೇಳಿದ್ದು ಸರಿಯಾಗಿಯೇ ಇದೆ ಎಂದುಕೊಂಡು, ಭಕ್ತಿಶ್ರದ್ಧೆಯಿಂದಿರುವ ಸೇವಕನನ್ನು ಅಪಮಾನಿಸಬಾರದು ಎಂದು ರುಕ್ಮಪುರದಲ್ಲಿರುವ ಗರುಡನ ಮನೆಗೆ ಹೋದನು. ಗರುಡನು ಸ್ವತಃ ಸ್ವಾಮಿಯೇ ಮನೆಗೆ ಬಂದದ್ದನ್ನು ನೋಡಿ ನಾಚಿಕೆಯಿಂದ ತಲೆತಗ್ಗಿಸಿ, ನಮಸ್ಕರಿಸಿ ಇದ್ದ ವಿಚಾರವನ್ನು ಭಗವಂತನ ಮುಂದೆ ನಿವೇದಿಸಿಕೊಂಡನು. ಅದನ್ನು ಕೇಳಿ ಭಗವಂತನು ಗರುಡನನ್ನು ಸಮಾಧಾನಪಡಿಸಿ, ಸಮುದ್ರವನ್ನು ಗದರಿಸಿ ಆಗ್ನೇಯಾಸ್ತ್ರವನ್ನು ಹೂಡಿ ಸಮುದ್ರಕ್ಕೆ ಹೇಳಿದನು– "ಎಲೈ ದುರಾತ್ಮನೇ, ಟಿಟ್ಟಿಭದ ಮೊಟ್ಟೆಗಳನ್ನು ಕೊಡು. ಇಲ್ಲದಿದ್ದರೆ ನಿನ್ನನ್ನು ನಿರ್ಜಲ ಪ್ರದೇಶವನ್ನಾಗಿ ಮಾಡಿಬಿಡುವೆನು." ಆಗ ಸಮುದ್ರವು ಭಯದಿಂದ ಟಿಟ್ಟಿಭದ ಮೊಟ್ಟೆಗಳನ್ನು ಹಿಂದಿರುಗಿಸಿತು.[70] ಟಿಟ್ಟಿಭವು ಅವುಗಳನ್ನು ಟಿಟ್ಟಿಭೆಗೆ ಕೊಟ್ಟಿತು. ಇಲ್ಲಿಗೆ ಟಿಟ್ಟಿಭ–ಸಮುದ್ರ ಕಥೆ ಮುಕ್ತಾಯ. ಕಥೆಯನ್ನು ಮುಗಿಸಿದ ದಮನಕನು ಮಿತ್ರಭೇದೋಪಾಯವನ್ನು ರಚಿಸಿದ ಅನಂತರ ಕರಟಕನೊಡನೆ ಸಂವಾದ ನಡೆಸಿ, ಕೊನೆಯಲ್ಲಿ ಒಂದು ಉಕ್ತಿಯನ್ನು ಹೇಳುತ್ತಾನೆ–

---

70. **ಭರತ.ಬಿ.ರಾವ್,** ಪಂಚತಂತ್ರ,–ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ, ಪು –89–92, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560004

परस्य पीडनं कुर्वन् स्वार्थसिद्धिं च पण्डितः ।

मूढबुद्धिर्न भक्षेच्च वने चतुरको यथा ॥[71]

ಕಾಡಿನಲ್ಲಿದ್ದ ಚತುರಕನೆಂಬ ನರಿಯಂತೆ ಬುದ್ಧಿವಂತನು ಬೇರೆಯವರನ್ನು ಪೀಡಿಸುತ್ತಾ ತನ್ನ ಸ್ವಾರ್ಥ ಸಾಧಿಸಿಕೊಳ್ಳುತ್ತಾನೆ ಹಾಗೂ ಅವನ ರಹಸ್ಯ ವ್ಯವಹಾರವು ಯಾರಿಗೂ ತಿಳಿಯದಂತೆ ನೋಡಿಕೊಳ್ಳುತ್ತಾನೆ. ಅದು ಹೇಗೆಂದು ಕರಟಕ ಕೇಳಿದನು. ದಮನಕನು **ಸಿಂಹ ಮತ್ತು ನರಿಯ ಕಥೆ** ಹೇಳಿದನು.

ಮಿತ್ರಭೇದ ತಂತ್ರದಲ್ಲಿ ಕಂಡುಬರುವ ಮತ್ತೊಂದು ಉಪಕಥೆ – ಸಿಂಹ ಮತ್ತು ನರಿಯ ಕಥೆಯಲ್ಲಿ ಸ್ವಾರ್ಥ ಸಾಧಕನಾದ ಚತುರಕನು ಪರಪೀಡೆಯಿಂದ ಸ್ವಾರ್ಥವನ್ನು ಸಾಧಿಸುತ್ತಾನೆ. ಮೂಢ ಜನರು ಮಾತ್ರ ಮಾಂಸ ಸಿಕ್ಕರೂ ತಿನ್ನದ ಸಿಂಹತೋಳಗಳ ಹಾಗೆ ಸುಮ್ಮನಿರುತ್ತಾರೆ. ಚತುರಕ ನರಿ ಮತ್ತು ಸಿಂಹಕ್ಕೆ ಆಹಾರವಾದ ಮರಿ ಒಂಟೆಯನ್ನು ಲಪಟಾಯಿಸಿ ಅದರ ಮಾಂಸವನ್ನು ಹಲವು ದಿನಗಳ ಕಾಲ ತಿಂದಿತು. ಇದ-ರಿಂದ ಪಾಠವೆಂದರೆ, ಕಾಡಿನಲ್ಲಿದ್ದ ಚತುರಕನೆಂಬ ನರಿಯಂತೆ ಬುದ್ಧಿವಂತನು ಬೇರೆಯವರನ್ನು ಪೀಡಿಸುತ್ತಾ ತನ್ನ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾನೆ. ಹಾಗೂ ಅವನ ರಹಸ್ಯ ವ್ಯವಹಾರವು ಯಾರಿಗೂ ತಿಳಿಯದಂತೆ ನೋಡಿಕೊಳ್ಳುತ್ತಾನೆ. ಸ್ವಾರ್ಥಸಾಧಕನು ಎಂತಹ ಹೇಯ ಕೃತ್ಯಕ್ಕೂ ಹಿಂಜರಿಯಲಾರ.[72]

ದಮನಕನು ಕಥೆಯನ್ನು ಮುಗಿಸಿದ ನಂತರ ಸಂಜೀವಕ ಹಾಗೂ ಪಿಂಗಲಕನ ಮುಖಾಮುಖಿಯಾಗುತ್ತದೆ.

ಸಂಜೀವಕನು ಎಡವುತ್ತಾ, ಮೆಲ್ಲನೆ ನಡೆಯುತ್ತಾ ಸಿಂಹವಿರುವ ಜಾಗವನ್ನು ತಲುಪಿದನು. ದಮನಕನು ಮೊದಲೇ ತಿಳಿಸಿದ್ದ ಹಾಗೆ ಕೆಂಪಾದ ಕಣ್ಣುಗಳುಳ್ಳ ಪಿಂಗಲಕನನ್ನು ನೋಡಿ ಭಯಗೊಂಡು, ಶರೀರವನ್ನು ಮುದುಡಿಕೊಂಡು ಸ್ವಲ್ಪ ದೂರದಲ್ಲೇ ಕುಳಿತುಕೊಂಡನು. ಪಿಂಗಲಕನು ಆ ರೀತಿ ಬಂದು ಅವನು ಕುಳಿತದ್ದು ನೋಡಿ ದಮನಕನು ಹೇಳಿದ್ದೆಲ್ಲಾ ಸರಿಯಾಗಿಯೇ ಇದೆ ಎಂದು ಯೋಚಿಸಿ, ಕೋಪದಿಂದ ಅವನ ಮೇಲೆ ಎರಗಿದನು. ಸಂಜೀವಕನು ತನಗೆ ಸಿಂಹದ ಉಗುರಿನಿಂದ ಗಾಯವಾದರೂ ತನ್ನ ಕೊಂಬುಗಳಿಂದ ಸಿಂಹದ ಹೊಟ್ಟೆಗೆ ತಿವಿದು ಹೇಗೋ ಪಿಂಗಲಕನಿಂದ ಬಿಡಿಸಿಕೊಂಡು ಕೊಂಬುಗಳಿಂದ ಆತನನ್ನು ಕೊಲ್ಲುವ ಉದ್ದೇಶದಿಂದ ಯುದ್ಧ ಮಾಡಲು ಸಜ್ಜಾಗಿ ನಿಂತನು. ಹೀಗೆ ಇವರಿಬ್ಬರೂ ಒಬ್ಬರನ್ನೊಬ್ಬರು ಕೊಲ್ಲಲು

71. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-399ಪು-254,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001
72. **ಭರತ.ಬಿ.ರಾವ್,** ಪಂಚತಂತ್ರ,-ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ-1-12, ಪು - 92-95.,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560004.

ಹವಣಿಸುತ್ತಿರುವ ಅವರನ್ನು ನೋಡಿ ಕರಟಕನು ದಮನಕನಿಗೆ ಹೇಳಿದನು–" ಎಲೈ ಮೂರ್ಖನೇ, ಇವರಿಬ್ಬರ ನಡುವೆ ವಿರೋಧವನ್ನು ತಂದಿಟ್ಟು ನೀನು ಸರಿಯಾದ ಕೆಲಸ ಮಾಡಲಿಲ್ಲ. ನಿನಗೆ ನೀತಿತತ್ವವೇ ತಿಳಿದಿಲ್ಲ." ಎಂದು ರಾಜನೀತಿ, ಯುದ್ಧನೀತಿ, ಮಂತ್ರಾಲೋಚನೆಯ ಕ್ರಮಗಳನ್ನು, ಮಂತ್ರಿಯ ಕರ್ತವ್ಯವನ್ನು ವಿವರಣಾತ್ಮಕವಾಗಿ ತಿಳಿಹೇಳಿದನು. ಕೊನೆಯಲ್ಲಿ ಮೂರ್ಖನಿಗೆ ಉಪದೇಶ ಮಾಡಿ ಏನು ಉಪಯೋಗ ಎಂದು ಹೇಳುತ್ತಾ, ಒಂದು ಉಕ್ತಿಯಿದೆ–

नानाम्यं नमते दारु नाश्मनि स्यात्क्षुरक्रिया ।

सूचीमुखं विजानीहि नाशिष्यायोपदिश्यते ॥[73]

ಅಂದರೆ ನಮಸ್ಕರಿಸಲು ಯೋಗ್ಯವಲ್ಲದ ಮರದ ದಿಮ್ಮಿಗೆ ಯಾರೂ ನಮಿಸುವುದಿಲ್ಲ. ಕಲ್ಲಿಗೆ ಕ್ಷೌರಕರ್ಮವನ್ನು ಮಾಡುವುದಿಲ್ಲ, ಅಯೋಗ್ಯ ಶಿಷ್ಯನಿಗೆ ಯಾರೂ ಉಪದೇಶಿಸುವುದಿಲ್ಲ. ಇದನ್ನು ಸೂಚೀಮುಖನನ್ನು ನೋಡಿ ತಿಳಿಯಬೇಕು. ಅದೇನೆಂದು ದಮನಕನು ಕೇಳಲು ಕರಟಕನು **ಸೂಚೀಮುಖ–ವಾನರ ಕಥೆ**ಯನ್ನು ಹೇಳಿದನು.

ವಿಷ್ಣುಶರ್ಮರು ಪಂಚತಂತ್ರ – ಮಿತ್ರಭೇದ ತಂತ್ರದ ಉಪಕಥೆ "ಸೂಚೀಮುಖ – ವಾನರ ಕಥೆಯನ್ನು ಹೇಳುತ್ತಾ ಒಂದು ಒಳ್ಳೆಯ ಬದುಕಿನ ನೀತಿ ಸನ್ನಿವೇಶವನ್ನು ಒದಗಿಸಿ – ಕಂಡಕಂಡವರಿಗೆಲ್ಲ ಉಪದೇಶ ಮಾಡಬಾರದು ಎಂಬುದನ್ನು ಬಹಳ ಸ್ವಾರಸ್ಯಕರವಾಗಿ ನಿರೂಪಿಸಿದ್ದಾರೆ. ಹಾಗೆಯೇ ರಾಜನೀತಿಯ ಬಗ್ಗೆಯೂ ಆಲೋಚನೆ ಬೆಳೆಸಿದ್ದಾರೆ. ಯಾವ ರಾಜರು ಭೃತ್ಯರೊಡನೆ ವಿಧವಿಧವಾದ ಸ್ವಾರಸ್ಯಕರವಾದ ಕಥಾಗೋಷ್ಠಿಗಳೊಂದಿಗೆ ಕಳೆಯುವರೋ ಹಾಗೂ ಬಿಲ್ಲುಬಾಣಗಳನ್ನು ಬಳಸುವ ಶ್ರಮವನ್ನು ಮಾಡುವುದಿಲ್ಲವೋ, ಅವರ ಸಂಪತ್ತನ್ನು ಶತ್ರುಗಳು ಅನುಭವಿಸುತ್ತಾರೆ. ಆದ್ದರಿಂದ ಮೂರ್ಖನಿಗೆ ಉಪದೇಶ ಮಾಡಿ ಏನು ಪ್ರಯೋಜನ? ಅದರಿಂದ ದೋಷವೇ ಹೊರತು ಒಳ್ಳೆಯದಾಗುವುದಿಲ್ಲ. ನಮಸ್ಕರಿಸಲು ಯೋಗ್ಯವಲ್ಲದ ಮರದ ದಿಮ್ಮಿಗೆ ಯಾರೂ ನಮಿಸುವುದಿಲ್ಲ. ಕಲ್ಲಿಗೆ ಕ್ಷೌರವನ್ನು ಮಾಡುವುದಿಲ್ಲ. ಅಯೋಗ್ಯ ಶಿಷ್ಯನಿಗೆ ಯಾರೂ ಉಪದೇಶಿಸುವುದಿಲ್ಲ. ಇದನ್ನು ಸೂಚಿಮುಖನನ್ನು ನೋಡಿ ತಿಳಿಯಬೇಕು. ನಿರಂತರ ಸೋಲಿನಿಂದ ಕಂಗೆಟ್ಟವನನ್ನೂ, ಜೂಜಾಟದಲ್ಲಿ ತೊಡಗಿದ್ದವನನ್ನೂ, ದುವ್ಯಸನಿಯನ್ನೂ, ಮೂರ್ಖನನ್ನೂ ನುಡಿಸಿಯೂ ಫಲವಿಲ್ಲವಂತೆ. ಮೂರ್ಖರಾಗಿಯೇ ಉಳಿದರೆ, ಅಂತಹವರಿಗೆ ಯಾರೂ ಬುದ್ಧಿ ಹೇಳುವುದಿಲ್ಲ,

73. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–417,ಪು–270,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಹೇಳಿದರೂ ಪ್ರಯೋಜನವಿಲ್ಲ.[74] ಸರ್ವಜ್ಞ ಎಷ್ಟು ಸೊಗಸಾಗಿ ಹೀಗೆ ಹೇಳಿರುವುದನ್ನು ಸ್ಮರಿಸಿಕೊಳ್ಳಬಹುದು. "ಮೂರ್ಖಂಗೆ ನೂರ್ಕಾಲ ಬುದ್ಧಿ ಹೇಳಿದರೂ ಗೋರ್ಕಲ್ಲ ಮೇಲೆ ಮಳೆ ಸುರಿದಂತೆ ಸರ್ವಜ್ಞ" ಇದು ರಾಜಕುಮಾರಿಗೆ ಇದು ಒಂದು ತಿಳುವಳಿಕೆ. ಮೂರ್ಖರಾಗೇ ಉಳಿದರೆ ಎಲ್ಲೆಲ್ಲೂ ಬೆಲೆಯಿಲ್ಲ. ಎಲ್ಲರಿಂದಲೂ ನಿಕೃಷ್ಟ ವಾಗಿ ಕಾಣಲ್ಪಡುತ್ತಾರೆ. ಇದು ಅವರಿಗೆ ಒಂದು ಎಚ್ಚರಿಕೆಯೂ ಹೌದು. ಹೀಗೊಂದು ಉಕ್ತಿಯಿದೆ ಎಂದು ಕರಟಕನು ಹೇಳುತ್ತಾನೆ:-

उपदेशो न दातव्यो यादृशे तादृशे जने ।

पश्य वानरमूर्खेण सुगृही निर्गृहीकृतः ॥[75]

ಎಂಥೆಂಥವರಿಗೆಲ್ಲ ಉಪದೇಶ ಮಾಡಬಾರದು, ನೋಡು ಮೂರ್ಖ ಕೋತಿಯೊಂದು ಗುಬ್ಬಚ್ಚಿಗೆ ಮನೆಯಿಲ್ಲದಂತೆ ಮಾಡಿತು. ದಮನಕನು ಅದೇನೆಂದು ಕೇಳಲು ಕರಟಕನು **ವಾನರ ಹಾಗೂ ಗುಬ್ಬಚ್ಚಿ ದಂಪತಿ ಕಥೆ** ಹೇಳುತ್ತಾನೆ.

ಮತ್ತೆ ಮುಂದಿನ ಕಥೆ- ವಾನರ ಹಾಗೂ ಗುಬ್ಬಚ್ಚಿ ದಂಪತಿ ಕಥೆಯಲ್ಲಿ ಎಂಥೆಂಥವರಿಗೆಲ್ಲ ಉಪದೇಶ ಮಾಡಬಾರದು. ಮಾಡಿದರೆ, ಕಪಿಗೆ ಬುದ್ಧಿ ಹೇಳಹೋಗಿ ತನ್ನ ಗೂಡನ್ನೇ ಕಳೆದುಕೊಂಡ ಗುಬ್ಬಿಯ ಕಥೆಯ ಹಾಗೆ ಆದೀತು ಎಂದು ಹೇಳುತ್ತಾ, ಮುಂದುವರೆಸಿ, ಕಂಡಕಂಡವರಿಗೆ, ಕೇಳದೇ ಇರುವಾಗ ಉಪದೇಶ ಮಾಡಲು ಹೋದರೆ ಅನರ್ಥವಾದೀತು. ಹೋಗುತ್ತಿದ್ದ ಮಾರಿಯನ್ನು ಸುಮ್ಮನೆ ಮೈಮೇಲೆ ಎಳೆದುಕೊಳ್ಳಬಾರದು. ಉಪದೇಶ ಮಾಡಬೇಕೆಂದರೆ ಸಜ್ಜನರಿಗೆ ಹೇಳಬೇಕು. ಪಾಂಡಿತ್ಯ ಪೂರ್ಣವಾದ ಬೋಧನೆಯನ್ನು ಅಜ್ಞಾನಿಗಳಾದವರಿಗೆ ಮಾಡಿದರೆ ಏನೂ ಫಲವಿಲ್ಲ. ಅದು ದೀಪವನ್ನುರಿಸಿ ಮಡಕೆಯನ್ನು ಅದರ ಮೇಲೆ ಕವುಚಿ ಇಟ್ಟಂತೆ. ಅದರಿಂದ ಕೊಡದೊಳಕ್ಕೂ ಬೆಳಕಿಲ್ಲ, ಹೊರಕ್ಕೂ ಬೆಳಕಿಲ್ಲ. ಹಾಗೆಯೇ ವ್ಯರ್ಥ. ಇಲ್ಲಿ ರಾಜಕುಮಾರರಿಗೆ ಒಂದು ಜಾಗೃತಿ ಮೂಡಿಸಿ, ಅವರುಗಳು ಆಸಕ್ತಿಯನ್ನುಳಿಸಿಕೊಂಡು, ವಿಚಾರಗಳನ್ನು ಸರಿಯಾಗಿ ಮನದಟ್ಟುಮಾಡಿಕೊಂಡು ಅರ್ಥಪೂರ್ಣವಾಗಿ ಕಲಿಯಲೆಂದು ಪ್ರೇರೇಪಿಸುತ್ತಾ, ಮುಂದಿನ ಅಪೇಕ್ಷಿತ ಗುರಿಯನ್ನು ಸಾಧಿಸಲು ಪ್ರೋತ್ಸಾಹಿಸಿದ್ದಾರೆ. ಇದೇ ಸನ್ನಿವೇಶದಲ್ಲಿ ವಿಷ್ಣುಶರ್ಮರು ರಾಜಕುಮಾರರಿಗೆ ರಾಜನೀತಿ ಶಿಕ್ಷಣವನ್ನು ಕರಟಕನ ಮೂಲಕ ಅಭಿವ್ಯಕ್ತಿಗೊಳಿಸಿದ್ದಾರೆ. ಚತುರೋಪಾಯಗಳಲ್ಲಿ ಸಾಮವನ್ನು

---

74. **ಭರತ.ಬಿ.ರಾವ್,** ಪಂಚತಂತ್ರ,-ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ-1-13. ಪು-98.,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560004.
75. **ಸುಧಾಕರ್ ಮಾಲವೀಯ,** ಶ್ರೀವಿಷ್ಣುಶರ್ಮವಿರಚಿತ ಪಂಚತಂತ್ರಂ, ಮಿತ್ರಭೇದಃ-ಶ್ಲೋ-421,ಪು-273.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಬಳಸಿ ಗೆಲ್ಲುವವನು ಸರ್ವತ್ರ ಪೂಜ್ಯ ನಾಗುತ್ತಾನೆ. ಅದರ ಬದಲಿಗೆ ಪಾಪಕರವಾದ ದಂಡವನ್ನೇ ಮುಂದೆ ಮಾಡಿದರೆ ಮಂತ್ರಿಸ್ಥಾನಕ್ಕೆ ಅವನು ಅರ್ಹನಾಗುವುದಿಲ್ಲ. ಕತ್ತಲೆಯನ್ನು ಬೆಳಕಿನಿಂದ ಕಳೆಯಬಹುದೇ ಹೊರತು ಬಲಾತ್ಕಾರದಿಂದಲ್ಲ. ಅಸಾಧ್ಯ ಸಾಹಸದಿಂದ ಸಾಧಿಸಬಹುದಾದ ಕಾರ್ಯವನ್ನು ಸಾಮೋಪಾಯದಿಂದ ಸಾಧಿಸಿದ ಮಂತ್ರಿಗಳು ನೃಪನಿಗೆ ಪ್ರಿಯರಾಗುತ್ತಾರೆ. ಕ್ರಮ ತಪ್ಪಿ ಫಲಕೊಡುವ ಕಾರ್ಯವನ್ನು ಯಾರು ಮಾಡುತ್ತಾರೋ ಅವರು ದಂಡಾಧಮರು ಎನಿಸಿಕೊಳ್ಳುತ್ತಾರೆ. ನೀತಿಶಾಸ್ತ್ರ ನಿಪುಣನಲ್ಲದ, ರಾಜಭಕ್ತಿ, ಧೈರ್ಯ, ಇಂದ್ರಿಯನಿಗ್ರಹ, ನಿಸ್ವಾರ್ಥ ಗುಣಹೀನನಾದವನ ಮಾತನ್ನು ವಂಶಪರಂಪರೆಯಿಂದ ಬಂದ ಸಚಿವನೆಂಬ ಏಕೈಕ ಕಾರಣದಿಂದ ಪಾಲಿಸಿದ ರಾಜನಿಗೆ ಎಂತಹ ವಿಷಮ ಸ್ಥಿತಿಗೆ ತಲುಪುವ ಅವಸ್ಥೆ ಒದಗಿತು. ಇದರಿಂದ ವಂಶಕ್ಕೆ ಅಪಕೀರ್ತಿಬಂದಂತಾಗುತ್ತಿತ್ತು. ನಿನ್ನದು ಧರ್ಮಬುದ್ಧಿಯನ್ನು ವಂಚಿಸಿದ ದುಷ್ಟಬುದ್ಧಿಯ ಕಥೆಯಂತಾಯ್ತು ಎಂದು ಕರಟಕನು ದಮನಕನಿಗೆ ಹೇಳಿದನು.[76]

ಈ ಸಂದರ್ಭಗಳಿಂದ ರಾಜಕುಮಾರರು ತಮ್ಮ ವರ್ತನೆಗಳಲ್ಲಿರುವ ದೋಷಗಳನ್ನು ಅರ್ಥ ಮಾಡಿಕೊಂಡು, ಒಳ್ಳೆಯ ಆಲೋಚನೆ ಹಾಗೂ ಉತ್ತಮ ವಿವೇಚನೆಯಿಂದ ಅಪೇಕ್ಷಿತ ಮಾರ್ಗದಲ್ಲಿ ಪರಿವರ್ತನೆ ಹೊಂದಲು ಹಾಗೂ ಒಳ್ಳೆಯ ಗುಣಶೀಲಗಳನ್ನು ಬೆಳೆಸಿಕೊಳ್ಳುವ ಬಗ್ಗೆ ಪ್ರೇರಿತರಾದರು. ಹೀಗೆ ಪಂಚತಂತ್ರ ನೀತಿಕಥೆಗಳು ಬಹಳ ಒಳ್ಳೆಯ ದೃಷ್ಟಾಂತಗಳನ್ನು ಒದಗಿಸಿ, ಮುಂದೆ ರಾಜ್ಯಾಡಳಿತವನ್ನು ವಹಿಸಿಕೊಳ್ಳಬೇಕಾಗಿರುವ ರಾಜಕುಮಾರರು ಹೇಗೆ ಉತ್ತಮ ವ್ಯಕ್ತಿತ್ವ ನಿರ್ಮಾಣ ಮಾಡಿಕೊಂಡು ಬದುಕಿನ ಸಾರ್ಥಕತೆಗೆ ಪ್ರಯತ್ನ ಶೀಲರಾಗಬಹುದು ಎಂಬ ಬಗ್ಗೆ ಒಳ್ಳೆಯ ಮಾರ್ಗದರ್ಶನ ಮಾಡಿವೆ. ಇಂತಹ ಅನುಭವಗಳು ಬೇರೆಡೆಯಲ್ಲಿ ಸಿಗುವುದು ಬಹಳ ದುರ್ಲಭ. ಅದಕ್ಕೇ ಹೇಳುವುದು ಸಮರ್ಥ ಗುರುಗಳನ್ನು ಪಡೆಯುವುದು ಒಂದು ಅದೃಷ್ಟವೇ. ಮುಂದುವರಿದು ದಮನಕನು ವಾನರ ಹಾಗೂ ಗುಬ್ಬಚ್ಚಿ ದಂಪತಿ ಕಥೆಯನ್ನು ಮುಗಿಸುತ್ತಾ ಒಂದು ಉಕ್ತಿಯನ್ನು ಹೇಳುತ್ತಾನೆ.

धर्मबुद्धिः कुबुद्धिश्च द्वावेतौ विदितौ मम ।

पुत्रेण व्यर्थपाण्डित्यात्पिता धूमेन घातितः ॥[77]

ಅಂದರೆ " ನನಗೆ ಧರ್ಮ ಬುದ್ಧಿ ಮತ್ತು ಪಾಪ ಬುದ್ಧಿಯೆಂಬ ಇಬ್ಬರ ಬಗ್ಗೆ ಗೊತ್ತು. ಪಾಪಬುದ್ಧಿಯು ವ್ಯರ್ಥ ಪಾಂಡಿತ್ಯದಿಂದ ತನ್ನ ತಂದೆಯನ್ನೇ ಹೊಗೆಯಲ್ಲಿ ಸಿಲುಕಿಸಿ ಕೊಂದನು ದಮನಕ ಅದೇನೆಂದು ಕೇಳಲು ಕರಟಕನು **ಧರ್ಮಬುದ್ಧಿ ಮತ್ತು ಪಾಪಬುದ್ಧಿ ಕಥೆ**ಯನ್ನು ಹೇಳಿದನು.

---

76. **ಭರತ.ಬಿ.ರಾವ್,** ಪಂಚತಂತ್ರ,-ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ-1-14, ಪು-99.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560004.
77. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-429,ಪು-277,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಒಂದಾನೊಂದು ಸ್ಥಳದಲ್ಲಿ ಧರ್ಮ ಬುದ್ಧಿ ಮತ್ತು ಪಾಪಬುದ್ಧಿ ಎಂಬ ಇಬ್ಬರು ಮಿತ್ರರು ವಾಸಿಸುತ್ತಿದ್ದರು. ಇಬ್ಬರೂ ಪರಸ್ಪರ ಮಾತನಾಡಿಕೊಂಡು ದೇಶಾಂತರ ಹೋಗಿ ಅಪಾರ ಹಣ ಸಂಪಾದನೆ ಮಾಡಿಕೊಂಡು ಬರುವ ಯೋಜನೆ ಹಾಕಿಕೊಂಡು ಹೊರಟೇಬಿಟ್ಟರು. ಆನಂತರ ಅಂದುಕೊಂಡಂತೆಯೇ ಅವರಿಬ್ಬರೂ ಬೇಕಾದಷ್ಟು ಹಣವನ್ನು ಗಳಿಸಿ ಸಂತೋಷಗೊಂಡು ಮನೆಯ ಕಡೆಗೆ ಹೊರಟರು. ಒಂದು ಉಕ್ತಿಯಿದೆ

प्राप्तविद्यार्थशिल्पानां देशान्तरनिवासिनाम् ।

क्रोशमात्रोऽपि भूभागः शतयोजनवद्भवेत् ॥[78]

ವಿದೇಶದಲ್ಲಿದ್ದುಕೊಂಡು ವಿದ್ಯೆ, ಹಣ ಮತ್ತು ಕಲೆಯನ್ನು ಸಂಪಾದಿಸಿಕೊಂಡು ಸ್ವದೇಶಕ್ಕೆ ಮರಳುವಾಗ ಕಾಲುಯೋಜನ ದಾರಿಯು ಶತಯೋಜನದಂತೆ ಭಾಸವಾಗುತ್ತದೆ. ಇನ್ನೇನು ದೇಶದ ಹತ್ತಿರ ಬರುತ್ತಿರುವಾಗ ಪಾಪಬುದ್ಧಿಯು ಧರ್ಮಬುದ್ಧಿಗೆ ಒಂದು ಸಲಹೆ ಮಾಡಿದನು. ಅದೇನೆಂದರೆ, ಎಲ್ಲಾ ಹಣವನ್ನೂ ಮನೆಗೆ ಒಯ್ಯುವುದು ತರವಲ್ಲ. ಇಲ್ಲೇ ಸ್ವಲ್ಪ ಕಾಡಿನಲ್ಲಿ ನೆಲದಲ್ಲಿ ಹೂತಿಟ್ಟು ಉಳಿದದ್ದನ್ನು ತೆಗೆದುಕೊಂಡು ಹೋಗೋಣ. ಅವಶ್ಯಕವಾಗಿ ಬೇಕಾದಾಗ ಬಂದು ತೆಗೆದುಕೊಂಡು ಹೋಗೋಣ. ಅದೂ ಅಲ್ಲದೆ ಹಣವಿದೆಯೆಂದರೆ ಎಲ್ಲೆಡೆಯೂ ಪೀಡಿಸುತ್ತಾರೆ. ಪಾಪಬುದ್ಧಿಯು ಅನ್ವರ್ಥನಾಮದಂತೆ ಕೆಟ್ಟ ಯೋಚನೆಯವನೇ ಹೌದು. ಪಾಪ ಧರ್ಮಬುದ್ಧಿ ಒಪ್ಪಿಕೊಂಡು ಹಾಗೆಯೇ ಮಾಡಿದರು. ಮತ್ತೊಂದು ದಿನ ಪಾಪಬುದ್ಧಿ ಕಾಡಿಗೆ ತೆರಳಿ ಆ ಎಲ್ಲಾ ಹಣವನ್ನೂ ತೆಗೆದುಕೊಂಡು ಗುಂಡಿಯನ್ನು ಮುಚ್ಚಿ ತನ್ನ ಮನೆಗೆ ಬಂದು ಏನೂ ಗೊತ್ತಿಲ್ಲದವನಂತಿದ್ದುಬಿಟ್ಟನು. ಹೀಗೆ ಕಾಲ ಕಳೆಯಿತು. ಒಮ್ಮೆ ದುಡ್ಡಿನ ಅಭಾವವುಂಟಾಗಿ ಅಡಗಿಸಿಟ್ಟಿದ್ದ ಸ್ಥಳಕ್ಕೆ ಹೋಗಿ ಸ್ವಲ್ಪ ಹಣ ತೆಗೆದುಕೊಂಡು ಬರುವಂತೆ ಯೋಚಿಸಲಾಯಿತು. ಹಾಗೇ ಆಗಲೆಂದು ಹೋಗಿ ನೋಡಿದರೆ ಅಲ್ಲೇನಿದೆ? ಖಾಲಿ ಪಾತ್ರೆ!! ಧರ್ಮಬುದ್ಧಿಗಿಂತ ಮೊದಲೇ ಪಾಪಬುದ್ಧಿಯು ತಲೆ ಚಚ್ಚಿಕೊಳ್ಳುತ್ತಾ, ಧರ್ಮಬುದ್ಧಿಯೇ ಹಣವನ್ನು ಕದ್ದಿದ್ದಾನೆಂದು ವಾದಮಾಡಿದನು. ಏಕೆಂದರೆ "ಅದು ಅವನಿಗೆ ಮಾತ್ರ ಗೊತ್ತಿರುವುದು" ಎಂದು. ಅಂತಿಮವಾಗಿ ಧರ್ಮಾಧಿಕಾರಿಗಳಿಗೆ ದೂರನ್ನೂ ಸಲ್ಲಿಸಲಾಯಿತು. ಅವರು ಇದರ ನ್ಯಾಯ ತೀರ್ಮಾನಕ್ಕೆ ಶಪಥಮಾರ್ಗವನ್ನು ಸೂಚಿಸಿದರು. ಪಾಪಬುದ್ಧಿಯು ಇದನ್ನೊಪ್ಪಲಿಲ್ಲ. ಈ ವಿಷಯದಲ್ಲಿ ವೃಕ್ಷದೇವತೆಗಳು ಸಾಕ್ಷಿಯಾಗಿ ನಿಲ್ಲುವರು ಎಂದು ಹೇಳಿದನು. ಧರ್ಮಾಧಿಕಾರಿಗಳಿಗೆ ಇದು ಸರಿಯೆನ್ನಿಸಿ, ದೇವತೆಗಳೇ ಸಾಕ್ಷಿ ಹೇಳುವಾಗ ಬೇರೆ ಏನು ಹೇಳುವುದಿದೆ? ಎಂದರು.

---

78. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–432,ಪು–279,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಈ ಮಧ್ಯದಲ್ಲಿ ಪಾಪಬುದ್ಧಿಯು ಮನೆಗೆ ಹೋಗಿ ತನ್ನ ತಂದೆಗೆ ಇಷ್ಟವಿಲ್ಲದಿದ್ದರೂ, ಬಹಳ ಇಕ್ಕಟ್ಟಿಗೆ ಸಿಕ್ಕಿಸಿ, ಅಲ್ಲೇ ಹತ್ತಿರದಲ್ಲಿರುವ ಶಮೀವೃಕ್ಷದಲ್ಲಿರುವ ದೊಡ್ಡ ಪೊಟರೆಯಲ್ಲಿ ಕುಳಿತುಕೊಂಡು ಧರ್ಮಬುದ್ಧಿಯೇ ಈ ಹಣವನ್ನು ಕದ್ದಿರುವುದು ಎಂದು ಹೇಳುವಂತೆ ಸಿದ್ಧಮಾಡಿಬಿಟ್ಟನು. ಅದರಂತೆಯೇ ಎಲ್ಲವೂ ನಡೆದೇ ಹೋಯಿತು. ಧರ್ಮಬುದ್ಧಿಯ ತಪ್ಪಿಗೆ ಶಾಸ್ತ್ರೋಕ್ತವಾಗಿ ಶಿಕ್ಷೆಯ ಬಗ್ಗೆ ವಿಚಾರ ಪ್ರಾರಂಭವಾಯಿತು. ಧರ್ಮಬುದ್ಧಿಯು ಆ ಮರದ ಪೊಟರೆಗೆ ಒಣಗಿದ ಎಲೆ ಮುಂತಾದವುಗಳನ್ನು ಹಾಕಿ ಬೆಂಕಿಯನ್ನು ಹೊತ್ತಿಸಿದನು ಪೊಟರೆಯಲ್ಲಿ ಬೆಂಕಿ ಉರಿಯುತ್ತಿರಲು, ಅದರೊಳಗಿಂದ ಅರೆಬೆಂದ ದೇಹವುಳ್ಳ, ಕಣ್ಣುಗಳು ಸಿಡಿದುಹೋಗಿ ಕರುಣಾಜನಕವಾಗಿ ರೋಧಿಸುತ್ತಾ ಪಾಪಬುದ್ಧಿಯ ತಂದೆಯು ಹೊರಗೆ ಬಂದನು. ಜನರೆಲ್ಲಾ ವಿಚಾರಿಸಲು "ಇದೆಲ್ಲವೂ ಪಾಪಬುದ್ಧಿಯು ಕೆಲಸ" ಎಂದು ಹೇಳಿ ಸತ್ತುಹೋದನು. ರಾಜಪುರುಷರು ಕೂಡಲೇ ಪಾಪಬುದ್ಧಿಯನ್ನು ಅದೇ ಶಮೀವೃಕ್ಷದ ಕೊಂಬೆಗೆ ಕಟ್ಟಿಹಾಕಿ, ಧರ್ಮಬುದ್ಧಿಯನ್ನು ಹೊಗಳುತ್ತಾ –

उपायं चिन्तयेत् प्राज्ञस्तथाऽपायं च चिन्तयेत् ।

पश्यतो बकमूर्खस्य नकुलेन हता बकाः ॥[79]

ಬುದ್ಧಿವಂತನು ಉಪಾಯವನ್ನು ಮತ್ತು ಅಪಾಯದ ಬಗ್ಗೆಯೂ ಚಿಂತಿಸಬೇಕು. ಇಲ್ಲದಿದ್ದರೆ ಮೂರ್ಖ ಬಕವು ನೋಡುತ್ತಿದ್ದ ಹಾಗೆ ಮುಂಗುಸಿಯು ಎಲ್ಲಾ ಬಕಗಳನ್ನು ತಿಂದಹಾಗೆ ಆಗುತ್ತದೆ. ಧರ್ಮಬುದ್ಧಿಯು ಅದೇನೆಂದು ಕೇಳಲು, ರಾಜಪುರುಷರು **ಮೂರ್ಖಬಕ ಹಾಗೂ ಮುಂಗುಸಿಯ ಕಥೆ**ಯನ್ನು ಹೇಳಿದರು.

ಈ ಕಥೆಯಲ್ಲಿ ಬಕವೇನೋ ಸರ್ಪದ ಸಾವಿಗೆ ಉಪಾಯವನ್ನು ನಿರೀಕ್ಷಿಸಿದ್ದು ಸರಿ. ತನ್ನಿಂದಾಗದಿದ್ದರೆ ಇನ್ನೊಬ್ಬರಿಂದ ಮಾಡಿಸಿಕೊಳ್ಳಬಹುದು. ಆ ಇನ್ನೊಬ್ಬ ಯಾರಾಗಬೇಕು ಎಂಬುದು ಮುಖ್ಯ. ಬಕವು ತನ್ನ ಆಹಾರದಲ್ಲಿ ಒಂದಾದ ಏಡಿಯಲ್ಲಿ ಉಪಾಯವನ್ನು ಕೇಳಿದರೆ ಅದು ಸರಿಯಾದ ದಾರಿ ತೋರಿಸೀತೇ? ಖಂಡಿತವಾಗಿಯೂ ಇಲ್ಲಿ ಉಪಾಯಕ್ಕೆ ಬದಲಾಗಿ ಅಪಾಯವಾಗುವ ಸಲಹೆಯನ್ನು ಕೊಟ್ಟೀತು ಅಲ್ಲ, ಕೊಟ್ಟೇಬಿಟ್ಟಿತು. ಅದರಿಂದ ಅದರ ವೈರಿಕುಲವೇ ನಾಶಹೊಂದಿತು. ಶತ್ರುಕುಲ ನಾಶದ ಯೋಚನೆಯ ಹೊತ್ತಲ್ಲಿ ಹೃದಯವನ್ನು ಕಲ್ಲು ಮಾಡಿಕೊಳ್ಳಬೇಕು. ಆಮೇಲೆ ಶತ್ರುಶೇಷವೂ ಉಳಿಯದಂತಹ ಸಲಹೆ ನೀಡಬೇಕು ಎಂದುಕೊಳ್ಳುತ್ತಾ ಸಲಹೆ ಕೊಟ್ಟಿತ್ತು. ಈ ಸಂದರ್ಭದಲ್ಲಿ ಸಹವಾಸ ಮಾಡಲು ಅರ್ಹರು ಯಾರು ಎಂಬುದರ

79. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–439, ಪು–285,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಬಗ್ಗೆ ಒಳ್ಳೆಯ ಆಲೋಚನೆ ಹಾಗೂ ಉಪಾಯವನ್ನು ಚಿಂತಿಸುವ ಸಮಯದಲ್ಲಿ ಅಪಾಯವನ್ನೂ ಯೋಚಿಸಿ ಕಾರ್ಯಸಾಧನೆ ಮಾಡಿಕೊಳ್ಳಬೇಕು ಎಂಬ ಬಗ್ಗೆ ರಾಜಕುಮಾರರಿಗೆ ಅರಿವು ಮೂಡಿಸಲಾಗಿದೆ.

ಸಹವಾಸ ಮಾಡಲು ಯಾರು ಅರ್ಹರು ಎಂಬ ವಿಚಾರವನ್ನು ಧರ್ಮಬುದ್ಧಿ ಮತ್ತು ಪಾಪಬುದ್ಧಿ ಕಥೆಯನ್ನು ಮುಗಿಸಿದ ಕರಟಕನು ದಮನಕನಿಗೆ ಎಚ್ಚರಿಸುತ್ತಾನೆ "ಮೂಢನೇ ನೀನೂ ಕೂಡ ಉಪಾಯವನ್ನು ಚಿಂತಿಸಿದೆಯೇ ಹೊರತು ಅಪಾಯವನ್ನು ಯೋಚಿಸಲೇ ಇಲ್ಲ. ನೀನು ಪಾಪಿಷ್ಠನೇ ಹೊರತು ಸಜ್ಜನನಲ್ಲ. ಪ್ರಭುವಿಗೆ ಪ್ರಾಣಸಂಕಟ ತಂದಿಟ್ಟ ನಿನ್ನನ್ನು ನಾನು ಸರಿಯಾಗಿ ಅರ್ಥೈಸಿಕೊಂಡೆ. ಸ್ವಯಂ ನೀನೇ ನಿನ್ನ ದುಷ್ಟತನ ಹಾಗೂ ಕುಟಿಲತೆಯನ್ನು ಪ್ರದರ್ಶಿಸಿಬಿಟ್ಟೆ. ನೀನು ಪ್ರಭುವನ್ನೇ ಈ ಪರಿಸ್ಥಿತಿಗೆ ದೂಡುವೆಯಾದಲ್ಲಿ ಇನ್ನು ನಮ್ಮಂತಹವರ ಪಾಡೇನು? ಆದ್ದರಿಂದ ನೀನು ನನ್ನ ಬಳಿಯಿಂದ ತೊಲಗು. ನಿನ್ನ ಸಹವಾಸ ಬೇಡ. ಇಂತಹ ಹೊಲಸು ಕಾರ್ಯವನ್ನು ಮಾಡಿದ ನಿನ್ನನ್ನು ಕ್ಷಮಿಸಿದ ಲೋಕಕ್ಕೆ ತಪ್ಪು ಸಂದೇಶ ಕೊಟ್ಟಂತಾಗುವುದು. ಹೀಗೊಂದು ನುಡಿಯಿದೆ.

तुलां लोहसहस्त्रस्य यत्र खादन्ति मूषकाः ।

राजन् तत्र हरेच्छयेनो बालकं नात्र संशयः ॥[80]

ಎಲ್ಲಿ ಲೋಹಸಹಸ್ರದಿಂದ ಮಾಡಲ್ಪಟ್ಟ ತಕ್ಕಡಿಯನ್ನು ಇಲಿಗಳು ತಿನ್ನುತ್ತವೆಯೋ, ಅಲ್ಲಿ ಬಾಲಕನೊಬ್ಬನನ್ನು ಗಿಡುಗವು ಹಿಡಿದುಕೊಂಡು ಹೋಗುವುದರಲ್ಲಿ ಸಂಶಯವೇ ಇಲ್ಲ. ಹಿಂದೊಮ್ಮೆ ಮುಂಗುಸಿಯೊಂದು ಬಕಸಂತಾನವನ್ನೇ ತಿಂದ ಕಥೆ ನೆನಪಾಗುತ್ತದೆ. ಏಡಿಯ ಸಹವಾಸ ಮಾಡಿ ಬಕಗಳೆಲ್ಲವನ್ನೂ ಬಲಿಕೊಟ್ಟ ಮೂರ್ಖ ಬಕದಂತಾಯಿತು.[81] ದಮನಕನು ಅದೇನೆಂದು ಕೇಳಲು ಕರಟಕನು **ಲೋಹತಕ್ಕಡಿ ಹಾಗೂ ವ್ಯಾಪಾರಿಯ ಮಗನ ಕಥೆ**ಯನ್ನುಹೇಳಿದನು.

ನಗರವೊಂದರಲ್ಲಿ  ಜೀರ್ಣಧನ ಎಂಬ ಹೆಸರಿನ ವ್ಯಾಪಾರಿಯ ಮಗನೊಬ್ಬನಿದ್ದನು. ವ್ಯಾಪಾರದಲ್ಲಿ ಬಹಳ ನಷ್ಟವುಂಟಾಗಿ, ದೇಶಾಂತರ ಹೋಗುವ ಮನಸ್ಸು ಮಾಡಿದನು. ವ್ಯಾಪಾರಿಯ ಮನೆಯಲ್ಲಿ ಅವನ ಪೂರ್ವಜರು ಸಂಪಾದಿಸಿದ ಭಾರವಾದ ಲೋಹದ ತಕ್ಕಡಿಯೊಂದಿತ್ತು. ಅದನ್ನು ಒಬ್ಬ ಶ್ರೇಷ್ಠಿಯ ಬಳಿ ಅಡವಿಟ್ಟು

---

೮೦. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-442,ಪು-288,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

೮೧. **ಭರತ.ಬಿ.ರಾವ್,** ಪಂಚತಂತ್ರ,-ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ-ಪು-100-103.,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560004.

ದೇಶಾಂತರ ಹೋದನು. ಬಹುಕಾಲ ಕಳೆದು ಪುನಃ ಊರಿಗೆ ಬಂದಾಗ ಆ ಶ್ರೇಷ್ಠಿಯನ್ನು ಭೇಟಿಮಾಡಿ ಅಡವಿಟ್ಟ ತಕ್ಕಡಿಯನ್ನು ವಾಪಸ್ ಕೊಡಲು ಕೇಳಿದನು. ಶ್ರೇಷ್ಠಿಯು ತಕ್ಕಡಿ ಇಲ್ಲವೆಂದು, ಇಲಿಯು ತಿಂದುಬಿಟ್ಟಿತು ಎಂದು ಹೇಳಿದನು.

ಜೀರ್ಣಧನ ಹೇಳಿದನು– "ಇಲಿ ತಿಂದರೆ ನಿನ್ನ ದೋಷವೇನೂ ಇಲ್ಲ. ಸಂಸಾರವೆಂದರೆ ಹೀಗೆಯೇ. ಯಾವುದೂ ಶಾಶ್ವತವಲ್ಲ. ನಾನು ಈಗ ನದಿಗೆ ಸ್ನಾನಕ್ಕೆ ಹೋಗುತ್ತಿದ್ದೇನೆ ನಿನ್ನ ಮಗನಾದ ಧನದೇವನನ್ನು ನನ್ನ ಸ್ನಾನದ ಪರಿಕರಗಳನ್ನು ಹಿಡಿದುಕೊಳ್ಳಲು ಜೊತೆಗೆ ಕಳುಹಿಸಿಕೊಡು" ಎಂದನು. ಶ್ರೇಷ್ಠಿ ಕಳ್ಳತನ ಮಾಡಿದ್ದರಿಂದ ಹೆದರಿ ತನ್ನ ಮಗನನ್ನು ಕಳುಹಿಸಿಕೊಟ್ಟನು. ಸುಮ್ಮನೆ ಯಾರೂ ಇನ್ನೊಬ್ಬರ ಕೆಲಸ ಮಾಡುವುದಿಲ್ಲ. ಭಯ, ಲೋಭ ಅಥವಾ ಪ್ರಯೋಜನ ದೃಷ್ಟಿಯಿಂದ ಮಾತ್ರ ಮಾಡುತ್ತಾರೆ. ಪ್ರಯೋಜನವಿಲ್ಲದೆ ಎಲ್ಲಿ ಅತಿಯಾದ ಆದರ ಸಿಗುತ್ತದೋ ಅಲ್ಲಿ ಸಂದೇಹಪಡಬೇಕು. **"ಅತಿ ವಿನಯಂ ದೂರ್ತ ಲಕ್ಷಣಂ."** ಅನಂತರ ಜೀರ್ಣಧನನು ಸ್ನಾನ ಮುಗಿಸಿ, ಆ ಹುಡುಗನನ್ನು ಒಂದು ಬೆಟ್ಟದ ಗುಹೆಯಲ್ಲಿರಿಸಿ, ಗುಹೆಯನ್ನು ದೊಡ್ಡ ಬಂಡೆಯಿಂದ ಮುಚ್ಚಿ ಹಿಂದಿರುಗಿದನು. ಇವನು ಒಬ್ಬನೇ ಬಂದದ್ದನ್ನು ನೋಡಿ ಶ್ರೇಷ್ಠಿ ಮಗನೆಲ್ಲಿ? ಎಂದು ಜೀರ್ಣಧನನನ್ನು ಕೇಳಿದನು.

ಆಗ ಜೀರ್ಣಧನನು "ಸ್ನಾನಮಾಡಿ ಬರುವುದರೊಳಗೆ ನದಿ ದಡದಲ್ಲಿದ್ದ ಅವನನ್ನು ಒಂದು ಗಿಡುಗವು ಎತ್ತಿಕೊಂಡು ಹೋಯಿತು." ಎಂದನು. ಶ್ರೇಷ್ಠಿಯು ಕೋಪಗೊಂಡು, "ಸುಳ್ಳುಗಾರ, ಏನು ಗಿಡುಗವು ಬಾಲಕನನ್ನು ಅಪಹರಿಸಲಾಗುತ್ತದೆಯೇ? ನನ್ನ ಮಗನನ್ನು ಕೊಟ್ಟುಬಿಡು. ಇಲ್ಲದಿದ್ದರೆ ರಾಜನಲ್ಲಿ ದೂರು ಕೊಡುವೆ." ಎಂದನು. ಆಗ ಜೀರ್ಣಧನ – "ಸತ್ಯವಂತನೇ ಗಿಡಗವು ಬಾಲಕನನ್ನು ಅಪಹರಿಸಲು ಅಸಾಧ್ಯವಾದಂತೆ ಇಲಿಯು ಭಾರವಾದ ಲೋಹದ ತಕ್ಕಡಿಯನ್ನು ತಿನ್ನುವುದೂ ಕೂಡ ಅಸಾಧ್ಯವೇ. ಆದ್ದರಿಂದ ನೀನೇ ಸುಳ್ಳು ಹೇಳದೆ, ಮಗನು ಬೇಕೆಂದರೆ ತಕ್ಕಡಿಯನ್ನು ಕೊಡು ಎಂದನು. ಹೀಗೆ ಜಗಳ ಮುಂದುವರೆದು ಧರ್ಮಾಧಿಕಾರಿಗಳವರೆಗೂ ಹೋಯಿತು. ಶ್ರೇಷ್ಠಿಯು ದೊಡ್ಡ ಧ್ವನಿಯಿಂದ ಕಳ್ಳ, ನನ್ನ ಶಿಶುವನ್ನು ಅಪಹರಿಸಿದ್ದಾನೆ, ಅನ್ಯಾಯವಾಗಿದೆ ಎಂದು ಕೂಗಾಡಿದನು. ಧರ್ಮಾಧಿಕಾರಿಗಳು ಜೀರ್ಣಧನನಿಗೆ ಶ್ರೇಷ್ಠಿಯ ಮಗನನ್ನು ವಾಪಸ್ಸು ಮಾಡಲು ಹೇಳಿದರು. ಅದಕ್ಕೆ ಜೀರ್ಣಧನನು "ಏನು ಮಾಡಲಿ? ನಾನು ನೋಡನೋಡುತ್ತಿದ್ದಂತೆಯೇ ಗಿಡಗವೊಂದು ಬಾಲಕನನ್ನು ಹೊತ್ತುಕೊಂಡು ಹಾರಿತು.

"ಎಲ್ಲಾದರೂ ಗಿಡಗವು ಬಾಲಕನನ್ನು ಹೊತ್ತುಕೊಂಡು ಹೋಗಲು ಸಮರ್ಥವೇ, ಸಾಧ್ಯವೇ? ನೀನು ಹೇಳುತ್ತಿರುವುದು ಸುಳ್ಳು." ಎಂದು ಧರ್ಮಾಧಿಕಾರಿಗಳು ಹೇಳಿದರು. ಅದಕ್ಕೆ ಜೀರ್ಣಧನನು ಸ್ಪಷ್ಟವಾಗಿ

ಹೇಳುತ್ತಾನೆ – “ನನ್ನ ಮಾತನ್ನು ಕೇಳಿರಿ. ಭಾರವಾದ ಲೋಹದ ತಕ್ಕಡಿಯನ್ನು ಎಲ್ಲಿ ಇಲಿಯು ತಿನ್ನಬಲ್ಲದೋ ಅಲ್ಲಿ ಗಿಡುಗವು ಬಾಲಕನನ್ನು ಖಂಡಿತಾ ಅಪಹರಿಸಬಲ್ಲದು.” ಧರ್ಮಾಧಿಕಾರಿಗಳು ನಡೆದ ವೃತ್ತಾಂತವನ್ನೆಲ್ಲ ತಿಳಿದು, ನಕ್ಕು ಇಬ್ಬರಿಗೂ ಬುದ್ಧಿ ಹೇಳಿ ಬಾಲಕ ಹಾಗೂ ತಕ್ಕಡಿಯನ್ನು ಒಬ್ಬರಿಗೊಬ್ಬರು ವಾಪಸ್ಸು ಕೊಡುವಂತೆ ಮಾಡಿದರು.[82]

ಕರಟಕನು ಮುಂದುವರೆಸುತ್ತಾ, ದಮನಕನನ್ನು ಕುರಿತು ಮೂರ್ಖನೇ, ಪಿಂಗಳಕನು ಸಂಜೀವಕನಲ್ಲಿ ಪ್ರಸನ್ನನಾಗಿರುವುದನ್ನು ಸಹಿಸದೆ ನೀನು ಈ ಅಭಾಸ ಮಾಡಿದೆ. ಪ್ರಾಯಶಃ ಸತ್ಕುಲಜಾತರನ್ನು ದುಷ್ಕುಲದಲ್ಲಿ ಹುಟ್ಟಿದವರು, ಐಶ್ವರ್ಯವಂತರನ್ನು ದುರ್ಭಾಗ್ಯವಂತರು; ದಾನಿಗಳನ್ನು ಜಿಪುಣರು; ಸರಳ ಜನರನ್ನು ದುಷ್ಟರು; ಸುಂದರ ಶರೀರವುಳ್ಳವರನ್ನು ಕುರೂಪಿಗಳು; ಸಂತೋಷದಲ್ಲಿರುವವರನ್ನು ದುಃಖದಲ್ಲಿರುವವರು; ನಾನಾ ಶಾಸ್ತ್ರ ಪರಿಣಿತರನ್ನು ಮೂರ್ಖರು ನಿಂದಿಸುವುದು ಸಹಜವೇ. ಹಾಗೆಯೇ ಪಂಡಿತರು ಮೂರ್ಖರಿಂದ; ಶ್ರೀಮಂತರು ಬಡವರಿಂದ; ವ್ರತನಿರತರು ಪಾಪಿಗಳಿಂದ; ಕುಲಸ್ತ್ರೀಯರು ವ್ಯಭಿಚಾರಿಣಿಗಳಿಂದ ದ್ವೇಷಿಸಲ್ಪಡುತ್ತಾರೆ. ಆದ್ದರಿಂದ ಮೂರ್ಖನೇ ನೀನು ಹಿತವೆಂದೆಣಿಸಿ ಅಹಿತವನ್ನೇ ಮಾಡಿದೆ. ಹೀಗೊಂದು ಉಕ್ತಿಯಿದೆ:

पण्डितोऽपि वरं शत्रुर्न मूर्खो हितकारकः ।

वानरेण हतो राजा विप्राश्चोरेण रक्षिताः ॥[83]

ಹಿತವನ್ನು ಮಾಡುವ ಮೂರ್ಖನಿಗಿಂತ ಪಂಡಿತನಾದ ಶತ್ರುವೇ ಮೇಲು. ಒಂದು ಕಥೆಯಲ್ಲಿ ಮೂರ್ಖ ಮಂಗನಿಂದ ರಾಜನು ಕೊಲ್ಲಲ್ಪಟ್ಟನು ಮತ್ತು ಬ್ರಾಹ್ಮಣರು ರಕ್ಷಿಸಲ್ಪಟ್ಟರು ಎಂದು ಹೇಳುತ್ತಾ **ನೃಪಸೇವಕ, ವಾನರ, ಕಳ್ಳ ಹಾಗೂ ಬ್ರಾಹ್ಮಣರ ಕಥೆ**ಯನ್ನು ಪ್ರಾರಂಭ ಮಾಡಿದನು.

ನೃಪಸೇವಕನಾಗಿದ್ದ ವಾನರವೊಂದು ನಿತ್ಯವೂ ಅತಿಶ್ರದ್ಧಾಭಕ್ತಿಯಿಂದ ರಾಜನ ಸೇವೆಯನ್ನು ಮಾಡುತ್ತಾ, ಅವನವಿಶ್ವಾಸವನ್ನು ಗಳಿಸಿ ಸ್ವತಂತ್ರವಾಗಿ ಅಂತಃಪುರದಲ್ಲೆಲ್ಲಾ ಸ್ವತಂತ್ರವಾಗಿ ಓಡಾಡಿ-ಕೊಂಡಿತ್ತು. ಒಮ್ಮೆ ರಾಜನು ನಿದ್ದೆ ಮಾಡುತ್ತಿದ್ದಾಗ ಈ ವಾನರನು ಬೀಸಣಿಕೆಯಿಂದ ಬೀಸುತ್ತಿತ್ತು. ಆಗ ಒಂದು ನೊಣ ಬಂದು ರಾಜನ ಎದೆಯ ಮೇಲೆ ಕೂತು ಹಿಂಸೆ ಮಾಡುತ್ತಿತ್ತು. ಮೊದಲೇ ಸ್ವಭಾವದಿಂದ ಚಂಚಲವಾದ ಮಂಗ ತೋಪದಿಂದ ಹರಿತವಾದ ಕತ್ತಿಯನ್ನು ತೆಗೆದುಕೊಂಡು ನೊಣದ ಮೇಲೆ ಬೀಸಿತು.

82. **ಭರತ.ಬಿ.ರಾವ್,** ಪಂಚತಂತ್ರ,-ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ಪ್ರ.ತಂ-ಪು- 104-106,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560004.

83. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ-ಮಿತ್ರಭೇದ, ಶ್ಲೋ-450,ಪು-294,(1993) ಚೌಕಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಮೊದಲೇ ಸ್ವಭಾವದಿಂದ ಚುರುಕು, ನೊಣ ಹಾರಿ ಏಟನ್ನು ತಪ್ಪಿಸಿಕೊಂಡಿತು. ಅದೇ ಏಟು ರಾಜನ ಎದೆಗೆ ತಾಕಿ, ಅವನು ಸತ್ತುಹೋದನು. ಅದಕ್ಕೇ ಹೇಳುವುದು "ಚಿರಕಾಲ ಬದುಕಲಿಚ್ಛಿಸುವ ರಾಜನು ಮೂರ್ಖ ಮಂಗನನ್ನು ಸೇವಕನನ್ನಾಗಿ ಇಟ್ಟುಕೊಳ್ಳಬಾರದು. ಮತ್ತೊಂದು ಪುಟ್ಟ ಕಥೆ – ಕಳ್ಳ ಹಾಗೂ ಬ್ರಾಹ್ಮಣರು –ಒಬ್ಬ ಮಹಾ ವಿದ್ವಾಂಸನಾದ ಬ್ರಾಹ್ಮಣನು ಪೂರ್ವಜನ್ಮದ ಯೋಗದಿಂದ ಕಳ್ಳನಾಗಿದ್ದನು. ಅವನು ವಾಸಿಸುತ್ತಿದ್ದ ನಗರಕ್ಕೆ ನಾಲ್ಕು ಬ್ರಾಹ್ಮಣರು ಬೇರೆ ದೇಶದಿಂದ ಬಂದ ಹಲವು ವಸ್ತುಗಳ ವ್ಯಾಪಾರ ಮಾಡಿಕೊಂಡು ಚೆನ್ನಾಗಿ ಕಾಲಕಳೆಯುತ್ತಿರಲು, ಇವನು ಅವರನ್ನು ನೋಡಿ, ಅವರ ಸ್ನೇಹವನ್ನು ತನ್ನ ಮಧುರ ಹಿತವಚನಗಳ ಮೂಲಕ ಗಳಿಸಿಕೊಂಡನು. ಅವರ ಮನಸ್ಸಿನಲ್ಲಿ ವಿಶ್ವಾಸ ಮೂಡಿಸಿ ಅವರ ಸೇವೆ ಮಾಡಲಾರಂಭಿಸಿದನು. ಆದರೆ "ಯಾವ ಉಪಾಯದಿಂದ ಇವರ ಧನವನ್ನು ಕದಿಯಲಿ" ಎಂಬುದು ಇವನ ಯೋಚನೆ. ಇಲ್ಲೊಂದು ಉಕ್ತಿಯಿದೆ:–

असती भवति सलज्जा क्षारं नीरं च शीतलं भवति ।

दम्भी भवति विवेकी प्रियवक्ता भवति धूर्तजनः ॥[84]

"ವ್ಯಭಿಚಾರಿಣಿಯು ಲಜ್ಜಾವಂತಳಾಗಿರುತ್ತಾಳೆ, ಉಪ್ಪುನೀರು ತಣ್ಣಗಿರುತ್ತದೆ., ಕಪಟವ್ಯಕ್ತಿಯು ವಿವೇಕಿಯಾಗಿರುತ್ತಾನೆ. ಮತ್ತು ದೂರ್ತಜನರು ಪ್ರಿಯವಚನಗಳನ್ನು ನುಡಿಯುತ್ತಾರೆ." ಆ ಬ್ರಾಹ್ಮಣರು ಎಲ್ಲಾ ವಸ್ತುಗಳನ್ನು ಮಾರಿ ಬಹುಮೂಲ್ಯವಾದ ರತ್ನಗಳನ್ನು ಖರೀದಿಸಿದರು. ಸ್ವದೇಶಕ್ಕೆ ತೆರಳಲು ಅನುವಾದರು. ದೂರ್ತ ಬ್ರಾಹ್ಮಣನು ಚಿಂತೆಯಿಂದ ದುಃಖಗೊಂಡನು. ಇವನ ಮಾತಿನ ಚಮತ್ಕಾರದಿಂದ ಅವರ ಜೊತೆಯಲ್ಲಿ ಹೊರಡಲು ಒಪ್ಪಿಗೆ ಪಡೆದು ಸಿದ್ಧನಾದನು. ಇವನ ಯೋಜನೆಯೇನೆಂದರೆ, ದಾರಿಯಲ್ಲಿ ಬ್ರಾಹ್ಮಣರಿಗೆ ವಿಷವುಣಿಸಿ ಕೊಂದು ರತ್ನಗಳನ್ನು ಪಡೆದುಕೊಳ್ಳುವುದು.

ಆ ಐವರು ಹಳ್ಳಿ ನಗರಗಳನ್ನು ದಾಟಿಕೊಂಡು ಹೋಗುತ್ತಿರುವಾಗ, ಒಂದೆಡೆ ಕಾಗೆಯೊಂದು ಭವಿಷ್ಯ ನುಡಿಯಲು ಆರಂಭಿಸಿತು.– "ಏ ಏ ಬೇಡರೇ! ಓಡಿ ! ಓಡಿ ! ಕಾಲುಲಕ್ಷ ಹಣವಿರುವ ಧನಿಕರು ಹೋಗುತ್ತಿದ್ದಾರೆ. ಅವರನ್ನು ಕೊಂದು ಹಣವನ್ನು ಪಡೆದುಕೊಳ್ಳಿ!" ಬೇಡರು ಕಾಗೆಯ ನುಡಿಯನ್ನು ಕೇಳಿದೊಡನೆ ಹೋಗಿ ಆ ಬ್ರಾಹ್ಮಣರಿಗೆ ಹೊಡೆದು ವಸ್ತ್ರಗಳನ್ನು ಕಳಚಿ ನೋಡಿದಾಗ ಹಣವು ಸಿಗಲಿಲ್ಲ. ಕಾಗೆಯು ಎಂದೂ ಸುಳ್ಳು ಹೇಳಿದ್ದಿಲ್ಲ. ಆದ್ದರಿಂದ ನಿಮ್ಮಲ್ಲಿ ಹಣವಿದ್ದರೆ ಕೊಟ್ಟು ಬಿಡಿ. ಇಲ್ಲದಿದ್ದರೆ ನಿಮ್ಮೆಲ್ಲರನ್ನೂ

84. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಶ್ಲೋ–451, ಪು–296,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಕೊಂದು ಚರ್ಮ ಸುಲಿದು, ಅಂಗಾಂಗಗಳನ್ನು ಹುಡುಕಿ ಹಣವನ್ನು ತೆಗೆದುಕೊಳ್ಳುತ್ತೇವೆ. ಎಂದು ಬೇಡರು ಬ್ರಾಹ್ಮಣರಿಗೆ ಎಚ್ಚರಿಕೆ ನೀಡಿದರು. ಇದನ್ನು ಕೇಳಿದ ಕಳ್ಳ ಬ್ರಾಹ್ಮಣನು ತನ್ನಲ್ಲೇ ಯೋಚಿಸಿ," ಈ ಬ್ರಾಹ್ಮಣರನ್ನು ಕೊಂದರೆ ಅವರ ಅಂಗಾಂಗಗಳನ್ನು ಹುಡುಕಿದರೆ ನನಗೂ ಹಾಗೇ ಮಾಡುತ್ತಾರೆ. ಆದ್ದರಿಂದ ರತ್ನಗಳಿಲ್ಲದ ನಾನೇ ಮೊದಲು ಇವರಿಗೆ ಶರೀರವನ್ನು ಸಮರ್ಪಿಸಿಕೊಳ್ಳುತ್ತೇನೆ. ನನ್ನಲ್ಲಿ ರತ್ನಗಳಿಲ್ಲದಕಾರಣ, ಅವರಲ್ಲೂ ಏನೂ ಇಲ್ಲವೆಂದು ಅವರನ್ನೆಲ್ಲಾ ಬಿಟ್ಟುಬಿಡುವರು. ಮೃತ್ಯುವಿಗೆ ಅಂಜಬಾರದು. ಎಂದಿದ್ದರೂ ಸಾತಲೇಬೇಕು."ಯಾರು ಗೋವಿಗಾಗಿ ಅಥವಾ ಬ್ರಾಹ್ಮಣನಿಗಾಗಿ ಪ್ರಾಣತ್ಯಾಗ ಮಾಡುವನೋ ಅವನು ಸೂರ್ಯಮಂಡಲವನ್ನು ದಾಟಿ ಸದ್ಗತಿಯನ್ನು ಪಡೆಯುವನು." ಹೀಗೆ ನಿಶ್ಚಯಿಸಿ ಸಿದ್ಧನಾದನು. ಬೇಡರು ಹಾಗೇ ಮಾಡಿ ಆತನಲ್ಲಿ ಹಣವನ್ನು ಕಾಣದಿದ್ದಾಗ ಇತರ ನಾಲ್ಕು ಬ್ರಾಹ್ಮಣರನ್ನು ಬಿಟ್ಟು ಬಿಟ್ಟರು.[೮೫]

ಕಥೆಯನ್ನು ಮುಗಿಸಿದ ಕರಟಕ – ದಮನಕರು ಸಂವಾದ ನಡೆಸುತ್ತಿದ್ದರು. ಸಂಜೀವಕನು ಪಿಂಗಲಕನೊಡನೆ ಸ್ವಲ್ಪ ಕಾಲ ಯುದ್ಧ ಮಾಡಿದ ನಂತರ ಪಿಂಗಲಕನ ತೀಕ್ಷ್ಣವಾದ ಉಗುರುಗಳ ಘಾತದಿಂದ ಸತ್ತು ನೆಲಕ್ಕುರುಳಿದನು. ಅವನು ಸತ್ತದ್ದನ್ನು ಕಂಡು ಪಿಂಗಲಕನು ಅವನ ಗುಣಗಳನ್ನು ನೆನೆಸಿಕೊಂಡು ಹೃದಯ ತುಂಬಿಬಂದವನಾಗಿ ಹೀಗೆ ನುಡಿದನು– "ಅಯ್ಯೋ, ಸಂಜೀವಕನನ್ನು ಕೊಂದು ನಾನು ಪಾಪಯುಕ್ತವಾದ ಕೆಲಸವನ್ನು ಮಾಡಿಬಿಟ್ಟೆ. ಏಕೆಂದರೆ ವಿಶ್ವಾಸಘಾತಕ್ಕಿಂತ ನೀಚ ಕೆಲಸ ಮತ್ತೊಂದಿಲ್ಲ. ಮಿತ್ರದ್ರೋಹಿ, ಕೃತಘ್ನ ಹಾಗೂ ವಿಶ್ವಾಸಘಾತಕರಾದ ಮನುಷ್ಯರು ಸೂರ್ಯಚಂದ್ರರಿರುವವರೆಗೆ ನರಕವಾಸವನ್ನನುಭವಿಸುವರು ಹೀಗೆ ಹಲವು ವಿಧದಲ್ಲಿ ಪ್ರಲಾಪಿಸುತ್ತಿರುವ ಪಿಂಗಲಕನ ಬಳಿಗೆ ಹೋಗಿ ದಮನಕನು ಹರ್ಷದಿಂದ ಹೇಳಿದನು–

"ದ್ರೋಹಿ ಹಾಗೂ ಹುಲ್ಲು ತಿನ್ನುವ ಸಂಜೀವಕನನ್ನು ಕೊಂದು ತಾವು ಈ ರೀತಿ ದುಃಖ ಪಡುವುದು ಹೇಡಿಗಳು ಅನುಸರಿಸುವ ಮಾರ್ಗದಂತಿದೆ. ಭೂಪಾಲರಿಗೆ ಇದು ಯೋಗ್ಯವಲ್ಲ. ತನ್ನ ಪ್ರಾಣಕ್ಕೇ ಅಪಾಯವನ್ನುಂಟು ಮಾಡುವವರು ಯಾರಾದರೇನು? ಅವರನ್ನು ಕೊಲ್ಲಬೇಕು." ಹೀಗೆ ದಮನಕನು ಅನೇಕ ಬುದ್ಧಿಮಾತುಗಳನ್ನು ಹೇಳಿದನು. ಅದನ್ನು ಕೇಳಿದ ಪಿಂಗಲಕನು ಸಂಜೀವಕನ ಶೋಕವನ್ನು ಬಿಟ್ಟು, ದಮನಕನನ್ನು ಮಂತ್ರಿತನ್ನಾಗಿಸಿಕೊಂಡು ರಾಜ್ಯವನ್ನಾಳಿದನು.

ಹೀಗೆ ಮಿತ್ರಭೇದದಲ್ಲಿ ಬರುವ ಈ ಕಥೆಯಲ್ಲಿ ಒಳ್ಳೆಯ ವ್ಯಕ್ತಿತ್ವ ನಿರ್ಮಾಣದಿಂದ ಮನುಷ್ಯನು ಉತ್ತಮನೆನಿಸಿಕೊಳ್ಳುವುದಕ್ಕೆ ಬೇಕಾದ ಗುಣಗಳಲ್ಲಿ ವಿಶ್ವಾಸಕ್ಕೆ ಯೋಗ್ಯನಾಗುವುದೂ ಒಂದು. ಇತರರಲ್ಲಿ

---

೮೫. **ಸುಧಾಕರ ಮಾಲವೀಯ,** ಸಂಪಾದಕರು ಮತ್ತು ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತಂ–ಮಿತ್ರಭೇದ, ಪು–294–297,,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ವಿಶ್ವಾಸವಿಟ್ಟು ಅವರ ಮನಸ್ಸನ್ನು ಗೆಲ್ಲುವುದು ಅಷ್ಟೇ ಮುಖ್ಯ. ಈ ಗುಣವು ಒಳ್ಳೆಯ ಸಂಸ್ಕಾರದಿಂದ ಬರುತ್ತದೆ. ಬಲದಿಂದ ಸಾಧ್ಯವಾಗದ ಕೆಲಸವನ್ನು ವಿಶ್ವಾಸವೆಂಬ ಮಾನವೀಯ ಗುಣದಿಂದ ಸಾಧಿಸಬಹುದು. ಆಗ ರಾಜನು ಸರ್ವತ್ರ ಮಾನ್ಯನಾಗುತ್ತಾನೆ. ಹಾಗೆಂದು ಕಂಡಕಂಡವರಲ್ಲೆಲ್ಲಾ ವಿಶ್ವಾಸವಿಡುವುದು ಹಾಗೂ ವಿಶ್ವಾಸ ದ್ರೋಹ ಮಾಡಿದವರನ್ನು ಪುನಃ ನಂಬುವುದು ಇದೆಲ್ಲ ತಪ್ಪು. ಇದು ಹೇಗಾಗುವುದೆಂದರೆ ಇರುಳು ಕಂಡ ಬಾವಿಯಲ್ಲಿ ಹಗಲು ಬಿದ್ದಂತಾಗುವುದು. ಈ ರೀತಿಯ ಬದುಕಿನ ನೀತಿಪಾಠವನ್ನು, ಗುಣಶೀಲ ವರ್ತನೆಗಳನ್ನು ವಿಷ್ಣುಶರ್ಮರು ರಾಜಕುಮಾರರಿಗೆ ಬೋಧಿಸಿದ್ದಾರೆ. ಹಿತೋಪದೇಶದಲ್ಲಿಒಂದು ಒಳ್ಳೆಯ ಉಪದೇಶವಿದೆ:-

दानं प्रियवाक्सहितं ज्ञानमगर्वं क्षमान्वितं शौर्यम् ।

वित्तं त्यागनियुक्तं दुर्लभमेतत् चतुष्टयं लोके ॥[86]

ಅಂದರೆ, "ಪ್ರೀತಿಯಿಂದ ಮಾತಿನಿಂದ ಕೂಡಿದ ದಾನ, ಗರ್ವವಿಲ್ಲದ ಜ್ಞಾನ, ಕ್ಷಮೆಯಿಂದ ಕೂಡಿದ ಶೌರ್ಯ, ತ್ಯಾಗ ಮನೋಭಾವದಿಂದ ಕೂಡಿದ ಸಂಪತ್ತು- ಈ ನಾಲ್ಕು ಒಳ್ಳೆಯದು, ಶ್ಲಾಘನೀಯ ಗುಣಗಳು. ಆದರೆ ಇದನ್ನು ಕಾಣುವುದು ಕಷ್ಟ.

ಮತ್ತೊಂದು ಉಪಕಥೆಯಲ್ಲಿ ಶುಭಾಶುಭಗಳನ್ನು ಉಲಿಯುವ ಎರಡು ಗಿಳಿ ಸಹೋದರಿಯರು ಸಹವಾಸ ಕಾರಣದಿಂದ ಬದಲಾಗಿದ್ದರೆಂಬ ಬಗ್ಗೆನಿರೂಪಿಸಲಾಗುತ್ತದೆ. ಆದ್ದರಿಂದಲೇ ತಿಳುವಳಿಕೆ ಇಲ್ಲದವನು ಎಂತಹ ಬುದ್ಧಿವಂತ ನಾಗಿದ್ದರೂ ಸಹವಾಸ ಕಾರಣದಿಂದ ಬದಲಾಗುತ್ತಾನೆ. ಇದರರ್ಥ ರಾಜಕುಮಾರರಿಗೆ ಅವರ ತಪ್ಪುಅರಿವಾಗುವಂತೆ ಆಲೋಚಿಸುವ ಪ್ರೇರಕವಾಗಿರುತ್ತದೆ. ವಿಷ್ಣುಶರ್ಮರು ಕಥೆಹೇಳುವುದನ್ನು ನಿಲ್ಲಿಸಿ, ರಾಜಕುಮಾರರ ಮುಖಗಳನ್ನು ಗಮನಿಸಿ ಕೇಳಿದರು." ರಾಜಕುಮಾರರೇ ದಮನಕನು ಹೇಳಿದ ಅಜ್ಞಾತನಾದವನನ್ನು ಹೆಚ್ಚು ನಂಬಬಾರದು, ವಿಶ್ವಾಸಕ್ಕೆ ತೆಗೆದುಕೊಳ್ಳಬಾರದು, ದೂರದಲ್ಲೇ ಇರಿಸಿಕೊಳ್ಳಬೇಕು ಎಂಬುದರ ಬಗ್ಗೆ ನೀವೇನು ಹೇಳುತ್ತೀರಿ? ಉತ್ತರವನ್ನು ಯೋಚಿಸಿ ನಾಳೆ ಬಂದು ಹೇಳಿ, ಆಗದೇ? ಎಂದರು. ಇದಕ್ಕೆ ರಾಜಕುಮಾರರು ಒಪ್ಪಿದರು. ಮರುದಿನ ರಾಜಕುಮಾರರು ಬಂದವರೇ ಕಾತುರದಿಂದ ಹೇಳಿದರು- "ಗುರುಗಳೇ ದಮನಕನ ಮಾತು ಸತ್ಯ. ಏಕೆಂದರೆ, ಅಪರಿಚಿತ ವ್ಯಕ್ತಿಗಳು ತಮ್ಮಮಾತಿನಲ್ಲಿ ಮರ್ಯಾದಸ್ಥರಂತೆ ಕಾಣಿಸಿದರೂ ಅವರ ಗುಣ - ಸ್ವಭಾವ - ವ್ಯಕ್ತಿತ್ವ ಎಂತಹುದೋ ಯಾರಿಗೆ ಗೊತ್ತು? ಹೀಗಾಗಿ ಬಹಳ ಕಾಲದ ಅನುಭವದಿಂದ ಬಂದ ಹೊಸಬನನ್ನು ಆಳವಾಗಿ ಪರೀಕ್ಷಿಸಿ ನೋಡಿದ ಅನಂತರವೇ

---

೮೬. नारायणपण्डितस्य हितोपदेश, मित्रलाभ - **122**

ಅವನಿಗೆ ನೀಡಬೇಕಾದ ಸ್ಥಾನವನ್ನು ನೀಡುವುದು ಸರಿ ಅಲ್ಲವೇ ಗುರುಗಳೇ? ಎಂದರು. ಆಗ ಗುರುಗಳು ಭೇಷ್ ಎಂದು ರಾಜಕುಮಾರರನ್ನು ಮೆಚ್ಚಿ ಹೇಳಿದರು" ನೀವೀಗ ನಿಜವಾಗಿ ರಾಜಕುಮಾರರೆ. ದಮನಕನು ಅದಕ್ಕಾಗಿ ಹೇಳಿದ ಕಥೆ ಯಾವುದು ಗೊತ್ತೇ? ಅದೇ **ಗೂಬೆಯ ಸಹವಾಸ ಮಾಡಿದ ರಾಜಹಂಸನ ಕಥೆ** ಎಂದು ಮುಂದಿನ ಕಥೆಗೆ ಆಸಕ್ತಿ ಮೂಡಿಸಿದರು. ರಾಜಕುಮಾರರ ಕಲಿಕೆ, ಆಸಕ್ತಿ ಹಾಗೂ ಆಲೋಚನೆ ಎಷ್ಟರಮಟ್ಟಿಗೆ ಬೆಳೆದಿತ್ತೆಂದರೆ "ಈಗ ನೀವು ಹೇಳಬೇಕೆಂದಿರುವ ಕಥೆ ಸ್ವಾರಸ್ಯಕರವೂ, ನೀತಿಬೋಧಕವೂ ಆಗಿದ್ದಿರಬೇಕು, ಹೇಳಿ ಆಚಾರ್ಯರೇ ಎಂದು ಕುತೂಹಲದಿಂದ ಕೇಳುವಷ್ಟು.[87] ಹೀಗೆ ರಾಜಕುಮಾರರ ಕುತೂಹಲ ಇನ್ನಷ್ಟು ಹೆಚ್ಚುವಂತೆ ಪ್ರೇರೇಪಿಸಿ ಕಥೆ ಹೇಳಲು ತೊಡಗುತ್ತಾರೆ. ಒಂದು ಕಥೆಯ ಅಂತ್ಯದಲ್ಲಿ ಒಂದು ಅಮೂಲ್ಯ ನೀತಿಬೋಧೆ, ಪುನಃ ಆ ಕೊಂಡಿ ಕಳಚದಂತೆ, ಮುಂದಿನ ಮತ್ತೊಂದು ಸ್ವಾರಸ್ಯಕರ ನೀತಿಕಥೆ. ಜೊತೆಜೊತೆಯಲ್ಲಿ ರಾಜನೀತಿ ಶಿಕ್ಷಣವೂ, ಬದುಕಿನ ನೀತಿಶಿಕ್ಷಣವೂ ದೊರಕುವಂತೆ ವಿಚಾರಗಳನ್ನು ಸಂಯೋಜಿಸಿರುವುದು ಪಂಚತಂತ್ರದ ವಿಶಿಷ್ಟತೆಗೆ ದ್ಯೋತಕವಾಗಿದೆ.



87. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಪ್ರ.ತಂ -1-12,ಪು - 64-67.(2015)ವರ್ನಿಲ, 39/2-11,ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು-560050.

# ಅಧ್ಯಾಯ–5

## ಜ್ಞಾನಾತ್ಮಕ ಬೆಳವಣಿಗೆ ಮತ್ತು ಸಂವೇಗಾತ್ಮಕ ಬುದ್ಧಿಶಕ್ತಿಯ ವಿಕಾಸ –

ಅಧ್ಯಾಯ 5 – 1. ಸೃಜನಶೀಲತೆ–ಅರ್ಥ ಮತ್ತು ವ್ಯಾಪ್ತಿ

ಅಧ್ಯಾಯ 5 – 2. ವ್ಯಕ್ತಿತ್ವ–ಮತ್ತು–ವ್ಯಕ್ತಿತ್ವ ವಿಕಾಸ

ಅಧ್ಯಾಯ 5 – 3. ವ್ಯಕ್ತಿತ್ವ–ನಿರ್ಮಾಣ–ಹೊಂದಾಣಿಕೆ–ಸಹಬಾಳ್ವೆ – ಒಗ್ಗಟ್ಟಿನಲ್ಲಿ ಸಾಧನೆ

ಅಧ್ಯಾಯ 5 – 4. ಉತ್ತಮ ಅಭ್ಯಾಸಗಳ ಬೆಳವಣಿಗೆ

ನಾಯಕತ್ವ– ಉತ್ತಮ ನಾಯಕನ ಗುಣಗಳು.

ಅಧ್ಯಾಯ 5 – 5 पञ्चतन्त्रस्य– द्वितीयं तन्त्रम् – मित्रसम्प्राप्तिः–

: ಕಥೆಗಳ ವಿಶ್ಲೇಷಣೆ :

## ಅಧ್ಯಾಯ–5–1. ಸೃಜನಶೀಲತೆ–ಅರ್ಥ ಮತ್ತು ವ್ಯಾಪ್ತಿ

ಬೆಳವಣಿಗೆ ಹಾಗೂ ವಿಕಾಸ ಪರಸ್ಪರ ಪೂರಕ ಪದಗಳು. ಬೆಳವಣಿಗೆ ಎಂಬ ಪದ ಪರಿಮಾಣಾತ್ಮಕ ಬದಲಾವಣೆಗಳನ್ನು ಸೂಚಿಸುತ್ತದೆ. ಉದಾಹರಣೆಗೆ: ವ್ಯಕ್ತಿ ಬೆಳೆದಿದ್ದಾನೆ. ತೂಕ ಹೆಚ್ಚಿದೆ. ಎತ್ತರವಾಗಿದ್ದಾನೆ. ಈ ಬದಲಾವಣೆ ಸ್ಪಷ್ಟ ಹಾಗೂ ಗೋಚರ. ವಿಕಾಸ ಎಂಬ ಪದವು ಗುಣಾತ್ಮಕ ಬದಲಾವಣೆಗಳನ್ನು ಸೂಚಿಸುತ್ತದೆ. ಉದಾಹರಣೆಗೆ: ವ್ಯಕ್ತಿ ಮಾತನಾಡುವ, ಸುಶ್ರಾವ್ಯವಾಗಿ ಹಾಡುವ ಸಾಮರ್ಥ್ಯ ಹೊಂದಿದ್ದಾನೆ. ವಿಕಾಸವಿಲ್ಲದೆ ಒಬ್ಬ ವ್ಯಕ್ತಿ ಬೆಳೆಯಲಾರ. ಬೆಳವಣಿಗೆಯಲ್ಲಿ ಸೂಕ್ತ ಬದಲಾವಣೆಗಳಾಗದೆ ವಿಕಾಸವಿಲ್ಲ. ವಿಕಾಸ ಎಂಬ ಪದದ ವ್ಯಾಪ್ತಿ ಮಹತ್ತರವಾಗಿದೆ ಹಾಗೂ ಇದು ನಿತ್ಯ ನಿರಂತರ ಪ್ರಕ್ರಿಯೆಯಾಗಿದೆ. ಒಂದು ಸಂಸ್ಕೃತ ಶ್ಲೋಕವು ಎಷ್ಟು ಸೊಗಸಾಗಿ ಮನುಷ್ಯ ಬುದ್ಧಿಯ ವಿಕಾಸವನ್ನು ಕುರಿತು ಹೀಗೆ ಸ್ಪಷ್ಟಪಡಿಸುತ್ತದೆ:–

यः पठति लिखति पष्यति परिपृच्छति पंडितानुपाश्रयति ।

तस्य दिवाकर किरणैः नलिनीदलमिव विकास्यते बुध्दिः ॥[1]

ಅಂದರೆ, ಯಾವನು ಓದಿ, ಬರೆದು, ನೋಡಿ, ಬಗೆಬಗೆಯಾಗಿ ಪ್ರಶ್ನೆ ಮಾಡಿ, ಪಂಡಿತರನ್ನು ಆಶ್ರಯಿಸುವನೋ ಅವನ ಬುದ್ಧಿಯು ಸೂರ್ಯ ಕಿರಣಗಳಿಂದ ತಾವರೆಯ ದಳ ಅರಳುವಂತೆ ವಿಕಾಸಗೊಳ್ಳುವುದು.

ಒಬ್ಬ ವ್ಯಕ್ತಿ ಒಂದು ನಿರ್ದಿಷ್ಟ ವಯೋಮಾನ ಮತ್ತು ಹಂತವನ್ನು ತಲುಪಿದಾಗ ಬೆಳವಣಿಗೆ ಕೊನೆಗೊಳ್ಳುತ್ತದೆ. ಆದರೆ ವಿಕಾಸ ಜೀವನಪರ್ಯಂತ ಮುಂದುವರೆಯುತ್ತದೆ.[2] ಅನುವಂಶೀಯವಾಗಿ ವ್ಯಕ್ತಿಗಳು ಪಡೆದುಕೊಂಡು ಬಂದಿರುವ ಗುಣಗಳು ಮತ್ತು ಅವರ ಬುದ್ಧಿಶಕ್ತಿ ಸೃಜನಶೀಲತೆಯ ಬೆಳವಣಿಗೆ ಮೇಲೆ ಪ್ರಭಾವ ಬೀರುತ್ತವೆ. ಉದಾಹರಣೆಗೆ: ಒಬ್ಬ ದೊಡ್ಡ ಕಲಾವಿದನ ಮಗ ಒಳ್ಳೆಯ ಕಲಾವಿದನಾಗಿರುವುದು; ಸಂಗೀತ ವಿದ್ವಾಂಸನ ಮಗ ಒಳ್ಳೆಯ ಸಂಗೀತಗಾರನಾಗಿರುವುದು; ಒಬ್ಬ ವಿಜ್ಞಾನಿಯ ಮಗ ಮಹಾನ್ ವಿಜ್ಞಾನಿಯಾಗಿರುವುದು. ಹೀಗೆ ಸೃಜನಶೀಲ ಗುಣಗಳು ಒಂದು ಪೀಳಗೆಯಿಂದ ಇನ್ನೊಂದು ಪೀಳಗೆಗೆ ಹರಿದು ಬಂದಿರುವುದನ್ನು ಕಾಣಬಹುದು. ಸೃಜನಶೀಲ ಗುಣಗಳು ಕೆಲವೊಮ್ಮೆ ಅಸಾಧಾರಣ ಪ್ರತಿಭೆಯೆಡೆಗೆ ತಲುಪಿ

1. **ಸುಭಾಷಿತಮಂಜರೀ**–ಸಾಮಾನ್ಯ ನೀತಿ–ಶ್ಲೋ–559, ಪು–503, ಸುಭಾಷಿತ ಭಾಂಡಾಗಾರಂ.(2001) ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18
2. **ವಾಮದೇವಪ್ಪ. ಎಚ್. ವಿ,** ಶೈಕ್ಷಣಿಕ ಮನೋವಿಜ್ಞಾನ, ಅ–2,ಪು– 44–45,(2005), ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಸೃಜನಾತ್ಮಕ ಶಕ್ತಿಗಳು ಪರಿಣಾಮಕಾರಿಯಾಗಿ ಹೊರಹೊಮ್ಮಿ ಪರಾಕಾಷ್ಠತೆಯನ್ನು ಪ್ರಾಪ್ತಿಗೊಳಿಸಿಕೊಳ್ಳುತ್ತವೆ.[3] ಇದನ್ನು ಉತ್ತಮ ಬೆಳವಣಿಗೆ ಮತ್ತು ವಿಕಾಸದ ಸಮನ್ವಯ ಸಂಕೀರ್ಣ ಪ್ರಕ್ರಿಯೆ ಎನ್ನಬಹುದು. ಪರಿಪಕ್ವನ ಮತ್ತು ಅನುಭವಗಳ ಪರಿಣಾಮವಾಗಿ ಉಂಟಾಗುವ ಪ್ರಗತಿಪರ ಸರಣೀಕೃತ ಬದಲಾವಣೆಗಳನ್ನು ವಿಕಾಸ ಎನ್ನುವರು.

## ಸೃಜನಶೀಲತೆ : CREATIVITY

"ಸೃಜನಶೀಲತೆ" ಎಂದರೆ ಸಾಮಾನ್ಯವಾಗಿ ವಸ್ತುಗಳು ಅಥವಾ ವಿಚಾರಗಳ ನಡುವೆ ಹೊಸ ಸಂಬಂಧವನ್ನು ಕಾಣುವುದು ಇಲ್ಲ ವ್ಯಕ್ತಪಡಿಸುವುದು ಎಂದರ್ಥ. ಇದು ಮೌಲ್ಯಯುತವಾದ ಮಾನವ ಗುಣಗಳಲ್ಲೊಂದು. ಸೃಜನಶೀಲ ಚಟುವಟಿಕೆಗಳು ವೈಜ್ಞಾನಿಕ ಪ್ರಗತಿಯನ್ನು ನಿರ್ಧರಿಸುತ್ತವೆ. ಯಾವ ರಾಷ್ಟ್ರಗಳು ತನ್ನ ವ್ಯಕ್ತಿಗಳಲ್ಲಿ ಸೃಜನಶೀಲತೆಯನ್ನು ಗುರ್ತಿಸಿ, ಬೆಳೆಸಿ, ಪ್ರೋತ್ಸಾಹಿಸುತ್ತವೆಯೋ ಅಂತಹ ರಾಷ್ಟ್ರಗಳು ಪ್ರಗತಿಪಥದಲ್ಲಿರುವುದನ್ನು ನಾವು ಕಾಣಬಹುದು. ಪ್ರತಿಯೊಬ್ಬ ವ್ಯಕ್ತಿಯೂ ಸೃಜನಶೀಲನಾಗಿರುತ್ತಾನೆ. ಆದರೆ ಸೃಜನಶೀಲತೆಯ ಪ್ರಮಾಣ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಸೃಜನಶೀಲ ಮಕ್ಕಳು ಸಮಾಜದ, ದೇಶದ ದೊಡ್ಡ ಆಸ್ತಿಯಿದ್ದಂತೆ. ಆದ್ದರಿಂದಲೇ ಸೃಜನಶೀಲರನ್ನು ರಾಷ್ಟ್ರದ ಮಾನವ ಸಂಪನ್ಮೂಲ ಎಂದು ಗುರುತಿಸಲಾಗಿದೆ.[4]

ಪ್ರತಿಯೊಬ್ಬ ಶಿಕ್ಷಕರು ಹಾಗೂ ಪೋಷಕರು ತಮ್ಮ ಮಕ್ಕಳ ಜ್ಞಾನಾತ್ಮಕ ಬೆಳವಣಿಗೆಗಷ್ಟೇ ಒತ್ತು ಕೊಡದೆ, ಜೀವನವನ್ನು ಯಶಸ್ವಿಯಾಗಿ ನಿರ್ವಹಿಸಲು ಅವಶ್ಯಕವಾಗಿರುವಂತಹ ಸಂವೇಗಾತ್ಮಕ ಬುದ್ಧಿಶಕ್ತಿಯನ್ನು ಬೆಳೆಸಲು ಕ್ರಮ ಕೈಗೊಳ್ಳಬೇಕಾಗಿದೆ. ಆಗ ಮಾತ್ರ ನಾವು ಸದೃಢ ಹಾಗೂ ಸೃಜನಾತ್ಮಕ ವ್ಯಕ್ತಿ ಮತ್ತು ಸಮಾಜವನ್ನು ನಿರ್ಮಾಣ ಮಾಡಲು ಸಾಧ್ಯ. ಇದನ್ನೇ ವಿಷ್ಣುಶರ್ಮರು ಪಂಚತಂತ್ರದಲ್ಲಿ ರಾಜಕುಮಾರರನ್ನು ಕೇವಲ ಸುಶಿಕ್ಷಿತರನ್ನಾಗಿ ಮಾಡದೆ, ಜೊತೆಯಲ್ಲಿ ಸಾರ್ಥಕ ಬದುಕಿನ ಕ್ರಮವನ್ನು, ರಾಜನೀತಿ ಶಿಕ್ಷಣವನ್ನು, ನೀತಿಶಿಕ್ಷಣವನ್ನು ಪರಿಣಾಮಕಾರಿಯಾಗಿ ಬೋಧಿಸಿ ಒಳ್ಳೆಯ ವ್ಯಕ್ತಿತ್ವ ನಿರ್ಮಾಣಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಮೊದಲು ವಿದ್ಯಾಬುದ್ಧಿಯ ಕಡೆಗೆ ಗಮನಕೊಟ್ಟು ಕಲಿಕೆಯ ಬಗ್ಗೆ ಒಲವನ್ನು ಮೂಡಿಸಿದ್ದಾರೆ. ಒಂದು ಸುಭಾಷಿತ ವಿದ್ಯೆ ಎಂಥಹ ಸಂಪತ್ತೆಂಬುದನ್ನು ಹೀಗೆ

---

3. **ವೀರಪ್ಪ. ಎನ್. ಎಸ್.,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ –4, ಪು–56–57.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
4. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 3, ಪು–138.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ವರ್ಣಿಸುತ್ತದೆ:–

न चोरहार्यं न च राजहार्यं न भ्रातृभाज्यं न च भारकारी ।

व्ययेकृते वर्धते एव नित्यं विद्याधनं सर्वधनप्रधानम् ॥[5]

ಅಂದರೆ, ಯಾವುದೇ ಕಳ್ಳನಿಂದ ಕದಿಯಲಾಗದ, ರಾಜನಿಂದಲೂ ಕಸಿದುಕೊಳ್ಳಲು ಸಾಧ್ಯವಾಗದ, ಅಣ್ಣತಮ್ಮಂದಿರ ನಡುವೆ ಭಾಗ ಮಾಡಿ ಹಂಚಿಕೊಳ್ಳಲು ಸಾಧ್ಯವಾಗಧ ವ್ಯಯಿಸಿದಷ್ಟೂ ಹೆಚ್ಚಾಗುತ್ತಲೇ ಹೋಗುವ ವಿದ್ಯೆಯೆಂಬ ಧನವೇ ಎಲ್ಲಾ ಧನಗಳಲ್ಲಿ ಪರಮಶ್ರೇಷ್ಠವಾದುದು. ಇದನ್ನು ಗಳಿಸಿ ಬೆಳೆಸಿಕೊಂಡ ವ್ಯಕ್ತಿಯಲ್ಲಿ ಬೌದ್ಧಿಕ ವಿಕಾಸವಾಗುವುದರ ಜೊತೆಯಲ್ಲಿ ಹೊಸಹೊಸ ಆಲೋಚನೆಗಳು ಮತ್ತು ಕ್ರಿಯಾಶೀಲತೆ ಪ್ರಕಾಶಗೊಂಡು ಸೃಜನಶೀಲ ವ್ಯಕ್ತಿತ್ವ ನಿರ್ಮಾಣವಾಗುತ್ತದೆ.

द्वे वर्त्मनी गिरो देव्याः शास्त्रं च कविकर्म च ।

प्रज्ञोपज्ञं तयोराद्यं प्रतिभोद्भवमन्तिमम् ॥[6]

ವಾಗ್ದೇವಿಯ ಮಾರ್ಗಗಳು ಎರಡು. ಒಂದು ಶಾಸ್ತ್ರ; ಇನ್ನೊಂದು ಕಾವ್ಯ. ಮೊದಲನೆಯದು ಬುದ್ಧಿಸಾಮರ್ಥ್ಯದಿಂದ ಹುಟ್ಟುತ್ತದೆ. ಎರಡನೆಯದು ಸೃಜನಶೀಲತೆ ಅಥವಾ ಪ್ರತಿಭೆಯಿಂದಾಗುತ್ತದೆ.

ನಮ್ಮ ಶಾಲೆಗಳು ಮಕ್ಕಳಲ್ಲಿ ಸೃಜನಶೀಲತೆಯನ್ನು ಅಭಿವೃದ್ಧಿಪಡಿಸುವುದರ ಮೂಲಕ ರಾಷ್ಟ್ರದ ವಿವಿಧ ಕ್ಷೇತ್ರಗಳಿಗೆ ಅಗತ್ಯವಾದ ನಾಯಕರನ್ನು ರೂಪಿಸಬೇಕು. ಸೃಜನಶೀಲತೆಯೆಂಬುದು ಒಂದೇ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ. ವಿಜ್ಞಾನ, ಸಾಹಿತ್ಯ, ಸಂಗೀತ, ನೃತ್ಯ, ಕಲೆ, ರಾಜ್ಯಾಡಳಿತ, ವ್ಯವಸಾಯ ಮೊದಲಾದ ಎಲ್ಲ ಕ್ಷೇತ್ರಗಳಲ್ಲೂ ಕಂಡುಬರುತ್ತದೆ. ಆದರೆ ಇದರ ಪ್ರಭಾವ ಒಂದು ಕ್ಷೇತ್ರದಿಂದ ಮತ್ತೊಂದಕ್ಕೆ, ಒಬ್ಬನಿಂದ ಮತ್ತೋರ್ವನಿಗೆ ವ್ಯತ್ಯಾಸ ಕಂಡುಬರುತ್ತದೆ. **"ಸೃಜನಶೀಲತೆ"** ಎಂಬ ಪದವು ಒಂದು ನಿರ್ದಿಷ್ಟ ವ್ಯಕ್ತಿಯ ಚಟುವಟಿಕೆಯನ್ನು ಮತ್ತು ಅದರ ಮೂಲಕ ರಚಿಸಲಾದ ಮೌಲ್ಯಗಳನ್ನು ಸೂಚಿಸುತ್ತದೆ, ಅಂತೆಯೇ ಇದು ನಂತರದಲ್ಲಿ ಸಂಸ್ಕೃತಿಯ ಅಂಶಗಳಾಗಿ ಪರಿಣಮಿಸುತ್ತದೆ. ಸೃಜನಶೀಲತೆಯ ಮನೋವಿಜ್ಞಾನದ ಸಮಸ್ಯಾತ್ಮಕ ಕ್ಷೇತ್ರವು ಕಲ್ಪನೆಯ, ಒಳನೋಟ, ಚಿಂತನೆ ಮತ್ತು ಮನುಷ್ಯನ ಸೃಜನಶೀಲ ಚಟುವಟಿಕೆಯನ್ನು ಉತ್ತೇಜಿಸುವ ಇತರ ಅಂಶಗಳ ಪಾತ್ರವನ್ನು ಒಳಗೊಂಡಿದೆ.

---

5. **ಸುಭಾಷಿತಭಾಂಡಾಗಾರಂ.** **Universal Sanskrit Slokas & Subhashit-36**
6. **ಸುಭಾಷಿತಮಂಜರೀ,** ಕವಿಕಾವ್ಯ ಪ್ರಶಂಸೆ– ಶ್ಲೋ–21, ಪು–8, ಕವಿಕಂಠಾಭರಣದಿಂದ.(2001) ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18 2. ಭಟ್ಟತೌತನ ಕಾವ್ಯಕೌತುಕ.

ಸೃಜನಶೀಲತೆಗೆ ಹಲವಾರು ವ್ಯಾಖ್ಯೆಗಳನ್ನು ನೀಡಲಾಗಿದೆ. ಆದರೆ ಚೈಲ್ಡ್‌ರವರು ಹೇಳಿರುವಂತೆ ಸೃಜನಶೀಲತೆಗೆ ಯಾವುದೇ ಒಂದು ಅರ್ಥಪೂರ್ಣವಾದ, ಅಸ್ಪಷ್ಟವಲ್ಲದ ಮತ್ತು ಎಲ್ಲರೂ ಒಪ್ಪಿಕೊಂಡಂತಹ ವ್ಯಾಖ್ಯೆ ಇರುವುದಿಲ್ಲ.ಆದರೂ ಸಹ ಕೆಲವು ಸಂಶೋಧಕರು, ಮನೋವಿಜ್ಞಾನಿಗಳು ಸೂಕ್ತವಾದ ವ್ಯಾಖ್ಯೆ ನೀಡಲು ಪ್ರಯತ್ನಿಸಿದ್ದಾರೆ.

ಶಿಕ್ಷಣ ವಿಜ್ಞಾನಕೋಶದ ಪ್ರಕಾರ "ಸೃಜನಶೀಲತೆ ಎಲ್ಲಾ ಆರೋಗ್ಯವಂತ ವ್ಯಕ್ತಿಗಳು ವಿವಿಧ ಮಟ್ಟಗಳಲ್ಲಿ ಹೊಂದಿರುವ ಸಾಮರ್ಥ್ಯವಾಗಿದೆ." ಎಲ್ಲಾ ವ್ಯಕ್ತಿಗಳು ವಿವಿಧ ಮಟ್ಟದ ಸೃಜನಾತ್ಮಕ ಚಿಂತನೆ ಹೊಂದಿರುತ್ತಾರೆ. ಸೃಜನಾತ್ಮಕ ಚಿಂತನೆಯೆಂದರೆ" ಒಂದು ಸನ್ನಿವೇಶದಲ್ಲಿ ವ್ಯಕ್ತಿಯ ಊಹೆಗಳು ಮತ್ತು ತೀರ್ಮಾನಗಳು ಹೊಸದಾಗಿರುತ್ತವೆ, ಮೌಲಿಕವಾಗಿರುತ್ತವೆ, ಯುಕ್ತವಾಗಿರುತ್ತವೆ ಮತ್ತು ಅಸಾಮಾನ್ಯವಾಗಿರುತ್ತವೆ". ಸೃಜನಶೀಲ ಚಿಂತಕನೆಂದರೆ ಹೊಸ ಕ್ಷೇತ್ರಗಳನ್ನು ಅನ್ವೇಷಿಸುವವನು, ಹೊಸ ವೀಕ್ಷಣೆ ಮಾಡುವವನು, ಹೊಸ ಊಹೆಗಳನ್ನು ಮಾಡುವವನು ಮತ್ತು ಹೊಸ ತೀರ್ಮಾನಗಳನ್ನು ಕೈಗೊಳ್ಳುವಂತಹ ವ್ಯಕ್ತಿಯಾಗಿದ್ದಾನೆ." ಹೀಗೆಂದು ಸುಪ್ರಸಿದ್ಧ ಮನೋವಿಜ್ಞಾನಿ **CHARLES E.SKINNER** ಹೇಳಿದ್ದಾರೆ. ಸೃಜನಶೀಲತೆಯ ಲಕ್ಷಣಗಳನ್ನು **RALF J. HALLMAN-(Psychologist, Associate Professor of Philosophy, California) & P.W..JACKSON- (Education Scholar, Psychologist)**ರವರು ಗುರುತಿಸಿದ್ದಾರೆ. ಹಾಲ್ಮನ್ ರವರು ಸೃಜನಶೀಲತೆಯು ಒಂದು ಸಂಬಂಧ, ಸ್ವಂತಿಕೆ, ಅತಾರ್ಕಿಕ, ಆತ್ಮಸಿದ್ಧಿ ಮತ್ತು ವಿಶಾಲ ಮನೋಭಾವಗಳೆಂಬ ಐದು ಗುಣಲಕ್ಷಣಗಳನ್ನು ಗುರುತಿಸಿದ್ದಾರೆ. ಜಾಕ್ಸನ್ ರವರು ನಾಲ್ಕು ಸೃಜನಾತ್ಮಕತೆಯ ಗುಣಲಕ್ಷಣಗಳನ್ನು ಗುರುತಿಸಿದ್ದಾರೆ. ಅವುಗಳು: ಸೃಜನಶೀಲತೆಯು ಒಂದು ಅಸಾಮಾನ್ಯತೆ, ಸೂಕ್ತತೆ, ರೂಪಾಂತರ ಮತ್ತು ಸಂಕ್ಷೇಪಿಸುವಿಕೆ.[7]

**In the article "Art, Creativity and Quality of Education"- HENRY MURRAY, American Psychologist and Educator, has beautifully portrayed thus "Creativity requires intuitive sensing, imaginative positing, playful manipulation, waiting, watching, being open to the unexpected allowing and taking advantage of happy accidents, coping with risk, confusion and anxiety, being able to relinquish old patterns to synthesize the new, the better the more meaningful-better gestalt."**

---

7. Chauhan S.S., "**Advanced Educational Psychology**"-Vikas publishing House, Newdelhi, (1983).

ಸೃಜನಶೀಲ ಕಿಶೋರರಲ್ಲಿ **EMANUEL HAMMER-(Psychologist, West Chicago.)** ಕಂಡ ಗುಣಗಳೆಂದರೆ: ಆಳವಾದ ಭಾವನೆಗಳು, ಸ್ವಂತಿಕೆ, ನಿರ್ಧಾರ ಮತ್ತು ಹೆಬ್ಬಯಕೆ, ಅವಲೋಕಿಸುವ ಪಾತ್ರದ ಆಯ್ಕೆ, ಪುರುಷ ಮತ್ತು ಸ್ತ್ರೀ ಪತ್ರಾಂಶಗಳು, ಸಮನ್ವಯೀಕರಣ ಹೆಚ್ಚಿನ ಸ್ವಾಯತ್ತತೆ, ಬಂಡಾಯ ಪ್ರವೃತ್ತಿ, ಸ್ವಯಂ ಪ್ರಜ್ಞೆ, ಸ್ವಯಂ ಅಭಿವ್ಯಕ್ತೀಕರಣ, ಹೆಚ್ಚಿನ ತಾಳ್ಮೆ, ಭಾವನಾತ್ಮಕ ಅಭಿವ್ಯಕ್ತಿ.[8]

**Despite common curriculum examination and teaching students blossom out in myriad forms. Individuality must be respected and fostered. One of the powerful needs according to Maslow, "is the need for self actualisation". Creativity enables one to reach the summit or peak of self actualisation off and on.**

**Wallas identifies the four steps in creative thinking: preparation, incubation, illumination, revision.[9]**

**ಸೃಜನಾತ್ಮಕ ಆಲೋಚನೆಯಲ್ಲಿ ನಾಲ್ಕು ಹಂತಗಳಿವೆ. ಅವುಗಳೆಂದರೆ:**

**1. ಸಿದ್ಧತೆಯ ಹಂತ.**

ಈ ಹಂತದಲ್ಲಿ ಸಮಸ್ಯಾ ಪರಿಹಾರಕ್ಕೆ ಅವಶ್ಯಕವಾದ ಮಾಹಿತಿ ಸಂಗ್ರಹಣೆ ನಡೆಯುತ್ತದೆ. ಸಮಸ್ಯಾ ಪರಿಹಾರಕ್ಕೆ ಬೇಕಾದ ತಥ್ಯಾಂಶಗಳು, ತತ್ವಗಳು ಮತ್ತು ಸಾಮಾನ್ಯೀಕರಣಗಳನ್ನು ಕಲಿಯಲಾಗುತ್ತದೆ. ಸಂಗ್ರಹಿತ ಸಾಮಗ್ರಿಯನ್ನು ವಿಶ್ಲೇಷಿಸಿ, ವ್ಯವಸ್ಥೆಗೊಳಿಸುವ ತರಬೇತಿ ಪಡೆಯಲಾಗುತ್ತದೆ. ಸಮಸ್ಯಾ ಪರಿಹಾರದ ವಿಧಾನಗಳನ್ನು, ತಂತ್ರಗಳನ್ನು ಕಲಿಯಲಾಗುತ್ತದೆ. ನಾವು ಪಡೆಯುವ ದೀರ್ಘಕಾಲದ ಶಿಕ್ಷಣ, ವಿಶೇಷವಾದ ತರಬೇತಿಯನ್ನು ಪಡೆಯುವುದು ಸೃಜನಾತ್ಮಕ ರೀತಿಯಲ್ಲಿ ಸಮಸ್ಯಾ ಪರಿಹಾರವನ್ನು ಮಾಡುವ ಕಲಿಕೆಯ ಪೂರ್ವ ಸಿದ್ಧತೆಯೇ ಆಗಿದೆ.

**2. ಸುಪ್ತ ಚಿಂತನೆ.**

ಈ ಹಂತದಲ್ಲಿ ಪ್ರಸ್ತುತ ಸಮಸ್ಯೆಗೆ ಸಂಬಂಧಪಟ್ಟಂತೆ ಯೋಚಿಸುವುದನ್ನು ನಿಲ್ಲಿಸಿಬಿಡಬಹುದು ಅಥವಾ ಬೇರೆ ಯಾವುದೇ ಸಂಬಂಧ ಪಡೆದ ಚಟುವಟಿಕೆಯಲ್ಲಿ ಭಾಗವಹಿಸಬಹುದು. ಹೊರನೋಟಕ್ಕೆ ಹೀಗಿದ್ದರೂ ವಾಸ್ತವದಲ್ಲಿ ಈ ಹಂತದಲ್ಲಿ ಸಮಸ್ಯಾ ಪರಿಹಾರದ ದಿಸೆಯಲ್ಲಿ ಸಾಕಷ್ಟು ಪ್ರಗತಿ ಉಂಟಾಗುತ್ತದೆ. ವಿಚಾರಗಳು

---

8. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 3, ಪು–139–142..(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
9. Getzel and Jackson, "Creativity and intelligence", Newyork, Wiley(1962).

ಅವಚೇತನ ಮಟ್ಟದಲ್ಲಿ ತಮಗೆ ತಾವೇ ವ್ಯವಸ್ಥಿತಗೊಂಡು ಸಮಸ್ಯೆಯ ಪರಿಹಾರವು ಉದ್ಭವಿಸುವುದಕ್ಕೆ ಸಿದ್ಧವಾಗುತ್ತದೆ.

**3. ವಿಚಾರ ಸರಣಿ /ಜ್ಞಾನೋದಯ.**

ಈ ಹಂತದಲ್ಲಿ ಪರಿಹಾರವು ಆರ್ಕಿಮಿಡಿಸನಿಗೆ ಹೊಳೆದಂತೆ ಇದ್ದಕ್ಕಿದ್ದಂತೆ ಹೊಳೆಯಬಹುದು. ಆಲೋಚಕ ತನ್ನ ಸಮಸ್ಯೆಯ ಬಗ್ಗೆ ಒಳನೋಟವನ್ನು ಪಡೆಯಬಹುದು.

**4. ಸಮರ್ಥನೀಯ ಮತ್ತು ಪರಿಷ್ಕರಣದ ಹಂತ.**

ಈ ಹಂತದಲ್ಲಿ ಸಮಸ್ಯೆಯ ಪರಿಹಾರವನ್ನು ತಾಳೆ ನೋಡಲಾಗುವುದು. ಅದರಲ್ಲಿ ಲೋಪದೋಷಗಳು ಕಂಡುಬಂದರೆ ಅವುಗಳನ್ನು ನಿವಾರಿಸಿ, ಪರಿಷ್ಕರಿಸಿ, ಅದಕ್ಕೊಂದು ಸರಿಯಾದ ರೂಪ ಬರುವಂತೆ ಪ್ರಕಟಿಸಲಾಗುವುದು.

ಸೃಜನಾತ್ಮಕ ಸಾಮರ್ಥ್ಯಗಳ ಬೆಳವಣಿಗೆಯಲ್ಲಿ ಶಿಕ್ಷಣ ಪ್ರಮುಖ ಪಾತ್ರ ವಹಿಸುತ್ತದೆ. ಸೃಜನಾತ್ಮಕ ಶಕ್ತಿಗಳು ಪರಿಣಾಮಕಾರಿಯಾಗಿ ಹೊರಹೊಮ್ಮಬೇಕಾದರೆ ಅದಕ್ಕಿರುವ ಅಡ್ಡಿ ಆತಂಕಗಳನ್ನು ಶಿಕ್ಷಣದ ಮೂಲಕ ತೊಡೆದು ಹಾಕಬೇಕು. ಮಕ್ಕಳಲ್ಲಿ ಸೃಜನಶೀಲತೆಯನ್ನು ಬೆಳೆಸಬೇಕಾದರೆ ಶಿಕ್ಷಣ ಸ್ವತಂತ್ರ ಆಧಾರಿತವಾಗಬೇಕು ಅಥವಾ ಮುಕ್ತವಾಗಿರಬೇಕು. ಮಾರ್ಗದರ್ಶನ, ಕಲಿಕಾ ಪ್ರಕ್ರಿಯೆಗಳ ಮೂಲಕ ಸೃಜನಶೀಲತೆಯನ್ನು ಬೆಳೆಸಬಹುದು ಮತ್ತು ಪ್ರೋತ್ಸಾಹಿಸಬಹುದು ಎಂಬ ವಿಚಾರ ಶಿಕ್ಷಣ ತಜ್ಞರಿಗೆ ಮತ್ತು ಶಿಕ್ಷಕರಿಗೆ ತಿಳಿದಿರಬೇಕು. ಸೃಜನಾತ್ಮಕ ಪ್ರತಿಭೆಯನ್ನು ಅಭಿವೃದ್ಧಿಗೊಳಿಸಲು ತರಗತಿಯಲ್ಲಿ ಏನೆಲ್ಲಾ ಕ್ರಮಗಳನ್ನು ಕೈಗೊಳ್ಳಬಹುದು ಎಂಬ ಬಗ್ಗೆ ಕೆಲವು ಮುಖ್ಯ ವಿಚಾರಗಳನ್ನು ಪಟ್ಟಿ ಮಾಡಬಹುದು.[10]

**1. ತರಗತಿಯಲ್ಲಿ ಉತ್ತಮ ವಾತಾವರಣವನ್ನುಂಟುಮಾಡುವುದು.**

**2. ಮಕ್ಕಳು ತೋರಿಸುವ ಸಾಧನೆಗಳನ್ನು ಮುಕ್ತಕಂಠದಿಂದ ಪ್ರಶಂಸೆ ಮಾಡುವುದು.**

**3. ತನ್ನ ಸೃಜನಾತ್ಮಕ ಸಾಮರ್ಥ್ಯಗಳನ್ನು ಅಭಿವ್ಯಕ್ತಗೊಳಿಸಲು ಸರಿಯಾದ ಮಾಧ್ಯಮವನ್ನು ಆಯ್ಕೆ.**

**ಮಾಡಿಕೊಳ್ಳಲು ಮಗುವಿಗೆ ಸಹಾಯ ಮಾಡುವುದು.**

---

10. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 3, ಪು–143. ಮ(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

**4. ಸೂಕ್ತವಾದ ಅಭಿವ್ಯಕ್ತಿಯ ಮಾಧ್ಯಮವನ್ನು ಆಯ್ಕೆ ಮಾಡುವಾಗ ಆಯಾ ಮಗುವಿನ ಅಭಿರುಚಿಯನ್ನು ಗಮನಕ್ಕೆ ತಂದುಕೊಳ್ಳುವುದು.**

**5. ಸೃಜನಶೀಲ ಮಕ್ಕಳನ್ನು ಸರಿಯಾದ ರೀತಿಯಲ್ಲಿ ಮಾರ್ಗದರ್ಶನಮಾಡುವುದು ಅವಶ್ಯಕ.**

**6. ಅವರ ಚಟುವಟಿಕೆಗಳಿಗಾಗಿ ವೇಳಾಪಟ್ಟಿಯಲ್ಲಿ ಸ್ವಲ್ಪ ವೇಳೆಯನ್ನು ನಿಗದಿಪಡಿಸುವುದು ಉತ್ತಮ.**

**7. ಮಕ್ಕಳು ಅನುಭವಿಸಬಹುದಾದ ಅನುಭವಗಳಿಗೆ ಯಾವುದೇ ವಿಧವಾದ ಧಕ್ಕೆ ಉಂಟುಮಾಡದಿರುವುದು.**

**8. ಕಲಿತ ನಿಯಮಗಳನ್ನು ಅಪೂರ್ವ ಪರಿಸ್ಥಿತಿಗಳಲ್ಲಿ ಅನ್ವಯಿಸುವಂತೆ ಪ್ರೋತ್ಸಾಹಿಸುವುದು.**

**9. ಸ್ವಪ್ರೇರಿತ ಕಲಿಕೆಗೆ ಅವಕಾಶಗಳನ್ನು ಕಲ್ಪಿಸುವುದು.**

**10. ಅಧ್ಯಾಪಕರು ಬೋಧಿಸುವ ವಿಷಯವನ್ನು ಸೃಜನಾತ್ಮಕ ರೀತಿಯಲ್ಲಿ ಬೋಧಿಸುವುದು.**

**11. ಬೇರೆ ಬೇರೆ ದಿಕ್ಕುಗಳಲ್ಲಿ ಯೋಚಿಸುವಂತೆ ಮಕ್ಕಳನ್ನು ಪ್ರೋತ್ಸಾಹಿಸುವುದು.**

ಮೇಲಿನ ಮುಖ್ಯಾಂಶಗಳನ್ನು ಪಂಚತಂತ್ರ ನೀತಿಕಥೆಗಳಿಗೆ ಒರೆಹಚ್ಚಿ ಪರಿಶೀಲಿಸಿದರೆ, ಅತ್ಯಂತ ವ್ಯವಸ್ಥಿತವಾಗಿ ವಿಷ್ಣುಶರ್ಮರು ರಾಜಕುಮಾರರಿಗೆ ತಮ್ಮ ಆಶ್ರಮದಲ್ಲಿ ಉತ್ತಮ ವಾತಾವರಣವನ್ನು ಒದಗಿಸಿ, ಕಥಾನಿರೂಪಣೆ ಮಾಡುತ್ತಾ, ಮಧ್ಯೆಮಧ್ಯೆ ಕೆಲವು ಅಭಿಪ್ರಾಯ ಪ್ರಚೋದಕ ಪ್ರಶ್ನೆಗಳನ್ನು ಕೇಳುತ್ತಾ, ವಿಚಾರಗಳನ್ನು ಆಲೋಚಿಸಲು ಅವಕಾಶ ಕಲ್ಪಿಸಿ, ಸಂಪೂರ್ಣ ಸ್ವಾತಂತ್ರ್ಯ ಕೊಟ್ಟು, ರಾಜಕುಮಾರರು ಯೋಚಿಸಿ ಉತ್ತರಿಸಿದ್ದನ್ನು ಪ್ರಶಂಸಿಸುತ್ತಾ, ಒಂದು ವೇಳೆ ತಪ್ಪಾದರೆ ಬಹಳ ಬುದ್ಧಿವಂತಿಕೆಯಿಂದ ಅವರ ಅಭಿಪ್ರಾಯಗಳನ್ನು ಸರಿಪಡಿಸುತ್ತಿದ್ದರು. ಅವರ ಸೃಜನಾತ್ಮಕ ಸಾಮರ್ಥ್ಯಗಳ ಬೆಳವಣಿಗೆಗೆ ಪ್ರೋತ್ಸಾಹಿಸಿ, ಸ್ವಯಂ ಇಚ್ಛಾಶಕ್ತಿಯಿಂದ ಹೊಸ ಹೊಸ ಆಲೋಚನೆಗಳನ್ನು ಮಾಡಲು ಪ್ರೇರೇಪಿಸುತ್ತಿದ್ದರು. ಒಂದು ಸುಭಾಷಿತ ಸೂಚಿಸುವಂತೆ:–

शनैःशनैर्विनीयन्ते तर्जनै स्तोषणैरपि ।

नवा इवाश्वाः कुशलैर्बालाश्चपलचेतसः ॥[11]

ಹೊಸ ಕುದುರೆಗಳನ್ನು ಪಳಗಿಸುವಂತೆ, ಚಪಲರಾದ ಬಾಲಕರನ್ನು ಕೆಲವು ವೇಳೆ ಮುದ್ದಿಸುವುದು, ಕೆಲವು ವೇಳೆ ಸಂತೋಷಗೊಳಿಸುವುದು – ಈ ಕ್ರಮದಿಂದ ಬುದ್ಧಿಶಾಲಿಗಳು ಪಳಗಿಸಬೇಕು. ಇದನ್ನೇ

11. श्रीहरिहरविरचितं हरिहरसुभाषितम् ೨–೪೦

ವಿಷ್ಣುಶರ್ಮರು ರಾಜನಂದನರಿಗೆ ಶಿಕ್ಷಣ ನೀಡಿ ರಾಜನೀತಿ ನಿಪುಣರನ್ನಾಗಿ ಪಳಗಿಸಿದ ಕ್ರಮವಾಗಿದೆ. ಶೈಕ್ಷಣಿಕ ಮನೋವಿಜ್ಞಾನದ ಕ್ರಮವೂ ಇದನ್ನೇ ಸೂಚಿಸುತ್ತದೆ. ಅಂದರೆ ಮಕ್ಕಳಿಗೆ ಕಲಿಸುವಾಗ ಪ್ರೀತಿಯಿಂದ, ಒಳ್ಳೆಯ ವಿಚಾರಗಳನ್ನು ಪ್ರಶಂಸಿಸುತ್ತಾ, ಹಾಗೆಯೇ ದೋಷಗಳನ್ನು ತಿದ್ದಿ ಬುದ್ಧಿಹೇಳುತ್ತಾ ಪ್ರೋತ್ಸಾಹಿಸಬೇಕು. ಕೆಲವೊಮ್ಮೆ ಆರೋಗ್ಯಕರ ಶಿಕ್ಷೆಯೂ ಇರಬೇಕು.

ಸೃಜನಾತ್ಮಕತೆಯ ಬೆಳವಣಿಗೆ ಹಾಗೂ ಪೋಷಣೆಯನ್ನು ಕುರಿತು ಅಮೆರಿಕದ ಪ್ರಖ್ಯಾತ ಮನೋವಿಜ್ಞಾನಿ – **J.P. GUILFORD** ರವರು ಹೇಳಿರುವ ಪ್ರಕಾರ ಸೃಜನಾತ್ಮಕ ಪೋಷಣೆ ಎಂದರೆ " ಒಬ್ಬ ವ್ಯಕ್ತಿಯಲ್ಲಿ ಹುದುಗಿರುವ ಸೃಜನಾತ್ಮಕ ಸಾಮರ್ಥ್ಯವನ್ನು ಪೋಷಿಸಿ ಅದನ್ನು ಅಭಿವೃದ್ಧಿಗೊಳಿಸುವುದಾಗಿದೆ."

ಅವರ ಪ್ರಕಾರ ನಮಗೆ ಚಿಂತನೆಯ ಸ್ವರೂಪದ ವ್ಯಾಪಕವಾದ ಪರಿಜ್ಞಾನದ ಅವಶ್ಯಕತೆ ಇದೆ. ಈ ಪರಿಜ್ಞಾನದ ಮೂಲಕ ನಮಗೆ ವಿದ್ಯಾರ್ಥಿಗಳನ್ನು ಚಿಂತನಶೀಲರನ್ನಾಗಿಸಲು ಹಾಗೂ ಚಿಂತನೆಯ ಮಾರ್ಗಗಳನ್ನು ಅವರಿಗೆ ವಿವರಿಸಲು ಬೋಧನೆಯಲ್ಲಿ ಕೈಗೊಳ್ಳಬೇಕಾದ ವಿಶಿಷ್ಟ ಕ್ರಮಗಳ ಜ್ಞಾನ ಉಂಟಾಗುತ್ತದೆ."

**CARL ROGERS** ಎಂಬ ಅಮೆರಿಕದ ಮನೋವಿಜ್ಞಾನಿ – **and among the founders of the humanistic approach in psychology-** ರಚನಾತ್ಮಕ ಸೃಜನಾತ್ಮಕತೆಗೆ ಕಾರಣೀಭೂತವೆನಿಸಿದ ಎರಡು ಮೂಲ ಕಾರಕಾಂಶಗಳನ್ನು ಗುರತಿಸಿದ್ದಾರೆ. ಅವುಗಳು:[12]

1. **ಮನೋವೈಜ್ಞಾನಿಕ ಸುರಕ್ಷತೆ**.

ಮಗುವಿನ ವ್ಯಕ್ತಿತ್ವವು ಶ್ರೇಷ್ಠವಾದ ನೈಜ ಮೌಲ್ಯಗಳಿಂದ ಕೂಡಿದೆ ಎಂಬುದನ್ನು ಮನಗಂಡು ಆತನನ್ನು ಗೌರವಪೂರ್ವಕವಾಗಿ ಸ್ವೀಕರಿಸಿ ಮಾನ್ಯತೆ ನೀಡಬೇಕು. ವಿದ್ಯಾರ್ಥಿ ಕೆಲವು ನೈಜ, ವಾಸ್ತವಿಕವಾದ ಮೌಲ್ಯಗಳನ್ನು ಹುದುಗಿಸಿಕೊಂಡಿದ್ದಾನೆಂಬ ತಿಳುವಳಿಕೆಯನ್ನು ಶಿಕ್ಷಕನಾದವನು ಹೊಂದಿದ್ದು, ಆ ಮೌಲ್ಯಗಳ ಬಗ್ಗೆ ಗೌರವ ಭಾವನೆ ಹೊಂದಿರಬೇಕು. ಆತನ ವೈವಿಧ್ಯಮಯ ಚಿಂತನೆಗೆ ಅವಕಾಶ ಕೊಡಬೇಕು. ಒಟ್ಟಿನಲ್ಲಿ ವಿದ್ಯಾರ್ಥಿಗಳ ಭಾವನೆಗಳು, ಅನಿಸಿಕೆಗಳು, ಸ್ಮೃತಿ ಇತ್ಯಾದಿಗಳಿಗೆ ರಕ್ಷಣೆಯನ್ನು ಒದಗಿಸಬೇಕಾದುದು ಶಿಕ್ಷಕರ ಕರ್ತವ್ಯವಾಗಿದೆ.

---

12. **ಶೈಕ್ಷಣಿಕ ಮನೋವಿಜ್ಞಾನ**, ಸಂಗ್ರಹಿಸಿದ ಮ್ಯಾಗಜಿನ್ ಹಾಳೆಗಳು, ಸೃಜನಾತ್ಮಕತೆ, ಪು–168–173,

ಮುಕ್ತವಾದ ವಿವರಣೆ ಮೂಲಭೂತ ಸಾಮರ್ಥ್ಯಗಳ ಬೆಳವಣಿಗೆಗೆ ಕಾರಣೀಭೂತವಾದ ಅಂಶವೆನಿಸಿದೆ. ಇಲ್ಲಿ ಬಾಹ್ಯ ಮೌಲ್ಯಮಾಪನಕ್ಕೆ ಮಾರ್ಗದರ್ಶನ ರೂಪವಿರಬೇಕು. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಶಿಕ್ಷಕರು ಕೇವಲ ಬೋಧಿಸುವುದು ಮಾತ್ರ ತಮ್ಮ ಕರ್ತವ್ಯವೆಂದು ತಿಳಿದುಕೊಂಡಿದ್ದಾರೆ. ಇದರೊಂದಿಗೆ ವಿದ್ಯಾರ್ಥಿಗಳನ್ನು ಚೇತನಗೊಳಿಸುವುದು ಮತ್ತು ಪ್ರೋತ್ಸಾಹಿಸುವುದನ್ನೇ ಮರೆತಿದ್ದಾರೆ. ವಿದ್ಯಾರ್ಥಿಗಳ ಭಾವನೆ ಮತ್ತು ವರ್ತನೆಗಳನ್ನು ಆತನ ದೃಷ್ಟಿಕೋನದಿಂದಲೇ ಅರ್ಥೈಸಿಕೊಳ್ಳಬೇಕು. ಹಾಗೂ ಆತನ ಆಂತರಿಕ ಜಗತ್ತನ್ನು ಪ್ರವೇಶಿಸಿ ಅವನಿಗೆ ಗೋಚರವಾಗುವಂತಹ ಅಂಶಗಳನ್ನು ತಾವೂ ಸಹ ವೀಕ್ಷಣೆ ಮಾಡಬೇಕು. ಅಂದರೆ ಅವನು ಇದ್ದಂತೆಯೇ ಅವನನ್ನು ಅರ್ಥೈಸಿಕೊಳ್ಳಬೇಕು.

**2. ಮನೋವೈಜ್ಞಾನಿಕ ಸ್ವಾತಂತ್ರ್ಯ.**

ಅರ್ಥಪೂರ್ಣವಾಗಿ, ಸ್ಪಷ್ಟವಾಗಿ ಅಭಿವ್ಯಕ್ತಿಗೊಳಿಸುವ ಸ್ವಾತಂತ್ರ್ಯವನ್ನು ವಿದ್ಯಾರ್ಥಿಗಳಿಗೆ ಒದಗಿಸಿಕೊಡಬೇಕು. ವ್ಯಕ್ತಿಗೆ ಆಲೋಚಿಸಲು, ಭಾವನೆಗಳನ್ನು ಬೆಳೆಸಿಕೊಳ್ಳಲು ತನ್ನ ತನವನ್ನು ಕಾಪಾಡಿಕೊಳ್ಳಲು ಸಂಪೂರ್ಣ ಸ್ವಾತಂತ್ರ್ಯ ಒದಗಿಸಬೇಕು. ಇದು ಮುಕ್ತತೆಗೆ ಎಡೆಮಾಡಿಕೊಡುತ್ತದೆ. ಅಲ್ಲದೆ ಗ್ರಹಿಕೆಗಳು, ಪರಿಕಲ್ಪನೆಗಳು ಸ್ವಾಭಾವಿಕ ಬೆಳವಣಿಗೆಗೆ ಕಾರಣವಾಗುತ್ತವೆ ಹಾಗೂ ಅರ್ಥಗ್ರಹಣದ ಶಕ್ತಿಯನ್ನು ವೃದ್ಧಿಸುತ್ತವೆ. ಅವನ ಸಾಧನೆಯ ಫಲಕವನ್ನು ಹಾಗೂ ಆತನ ತಪ್ಪುಗಳಿಂದ ಉದ್ಭವಿಸುವ ಪರಿಣಾಮಗಳನ್ನು ಸಹಿಸಲು ಸಿದ್ಧರಾಗಬೇಕು. ಮೌಲ್ಯಮಾಪನ ಕಾರ್ಯವು ಮಗುವಿನಲ್ಲಿಯೇ ಕೇಂದ್ರೀಕೃತವಾಗಿರಬೇಕು. ಮೌಲ್ಯಮಾಪನ ಮಟ್ಟಕ್ಕೆ ಸಂಬಂಧಿಸಿದಂತೆ ಮಗು ಹೊಣೆಗಾರನಾಗಿರಬೇಕು.

ಜೆ.ಜಿ. ಮೌಲಿಯವರು ಹೇಳುವಂತೆ ಸೃಜನಾತ್ಮಕತೆಯನ್ನು ವರ್ಧಿಸುವ ಪ್ರಮುಖವಾದ ಒಂದೇ ಕಾರಕವೆಂದರೆ ಮಾನಸಿಕ ಸ್ವಾತಂತ್ರ್ಯವನ್ನು ಒದಗಿಸುವ ವಾತಾವರಣವನ್ನು ಕಲ್ಪಿಸುವುದು. ಇದಕ್ಕನುಸಾರವಾಗಿ ಮಾನವೀಯ ಘನತೆ, ಒತ್ತಡದಿಂದ ಸ್ವಾತಂತ್ರ್ಯ ಹಾಗೂ ಸ್ವಯಂ ಪ್ರೇರಿತ ಚಟುವಟಿಕೆಗಳಿಗೆ ಪ್ರೋತ್ಸಾಹ ಹಾಗೂ ಅವಕಾಶಗಳಿಗೆ ಅನುಕೂಲಕರವಾದ ವಾತಾವರಣವನ್ನು ಕಲ್ಪಿಸಬೇಕು.

**HENRY MURRAY-(American Psychologist)** ಪ್ರಕಾರ ಮಕ್ಕಳ ಆಗತ್ಯತೆಯತ್ತ ಹೆಚ್ಚಿನ ಅವಧಾನ ಕೇಂದ್ರೀಕರಿಸುವುದು ಹಾಗೂ ಶಿಕ್ಷಕ-ವಿದ್ಯಾರ್ಥಿಗಳ ನಡುವಿನ ಮಾನಸಿಕ ದೂರವನ್ನು ಪ್ರೋತ್ಸಾಹಿಸಿ ಪೋಷಿಸುವುದರಿಂದ ಸೃಜನಾತ್ಮಕ ಅಭಿವೃದ್ಧಿಗೆ ಅವಶ್ಯಕವಾದಂತಹ ಸೂಕ್ತ ಆದರ್ಶ ಸನ್ನಿವೇಶವನ್ನು ಕಲ್ಪಿಸಬಹುದಾಗಿದೆ.

ಯಾವುದೇ ನಿರ್ದಿಷ್ಟ ನಿಯಮಗಳಾಗಲೀ ಅಥವಾ ವಿಧಾನಗಳಾಗಲೀ ಸೃಜನಶೀಲತೆಯನ್ನು ಅಭಿವೃದ್ಧಿ ಗೊಳಿಸುವಂತೆ ಕಂಡುಬರುವುದಿಲ್ಲ. ಅದೇನಿದ್ದರೂ ಕಲಿಯುವ ವ್ಯಕ್ತಿಯ ಸ್ವರೂಪ, ಅವನ ಪರಿಪಕ್ವತೆಯ ಮಟ್ಟ, ಬೋಧನೆ ಮತ್ತು ಮಾರ್ಗದರ್ಶನಕ್ಕೆ ಸಿಗುವ ಸಮಯ, ಅವಕಾಶ ಮತ್ತು ಶಿಕ್ಷಕರ ಸಾಮರ್ಥ್ಯದ ಮೇಲೆ ಅವಲಂಬಿಸಿದೆ.ಸೃಜನಶೀಲ ಸಾಮರ್ಥ್ಯ ಮತ್ತು ಚಿಂತನೆಗಳನ್ನು ಅಭಿವೃದ್ಧಿಪಡಿಸಲು ಬಳಸಬಹುದಾದ ಕ್ರಮಗಳನ್ನು ವಿವೇಚನೆಯಿಂದ ನಿರ್ದಿಷ್ಟ ಗುರಿ ಮತ್ತು ಉದ್ದೇಶಗಳಗನುಗುಣವಾಗಿ ಶಿಕ್ಷಕನು ತನ್ನ ವಿದ್ಯಾರ್ಥಿಗಳಲ್ಲಿ ರಚನಾತ್ಮಕ ವಿಮರ್ಶಾ ಕೌಶಲವನ್ನು ಬೆಳೆಸಬೇಕು. ಅವರಲ್ಲಿ ಗುರ್ತಿಸಬಹುದಾದ ಸೃಜನಶೀಲ ಸಾಮರ್ಥ್ಯಗಳ ಬಗ್ಗೆ ಮಕ್ಕಳೊಡನೆ ಚರ್ಚಿಸಿ ಪ್ರೋತ್ಸಾಹಿಸಬೇಕು. ಈ ಕಾರ್ಯವನ್ನು ಪಂಚತಂತ್ರ ಕಥೆಗಳಲ್ಲಿ ಬಹಳ ಅಚ್ಚುಕಟ್ಟಾಗಿ ಇದೆಲ್ಲ ವಿಚಾರಗಳ ಬಗ್ಗೆ ಗಮನಹರಿಸಿ ಉತ್ತಮ ಪ್ರೋತ್ಸಾಹ ನೀಡಿದ್ದಾರೆ. ರಾಜಕುಮಾರರನ್ನು ಅವರ ಸ್ವಂತ ಅನುಭವದ ಹೊರಗೆ ದೃಷ್ಟಿ ಹರಿಸುವಂತೆ ಹಾಗೂ ಸಹಜ ಅಥವಾ ಆದರ್ಶಕ್ಕಿಂತ ಭಿನ್ನವಾದ ದೃಷ್ಟಿಕೋನದಿಂದ ವಿಷಯಗಳನ್ನು ನೋಡಲು ಪ್ರೋತ್ಸಾಹಿಸಿದ್ದಾರೆ. ರಾಜಕುಮಾರರು ಸೃಜನಾತ್ಮಕ ದೃಷ್ಟಿಯಿಂದ ಭವಿಷ್ಯದ ಸಮಸ್ಯೆಗಳನ್ನು ಊಹಿಸುವ ಹಾಗೂ ಸಮಸ್ಯೆಗಳನ್ನು ಎದುರಿಸುವ ಸಾಮರ್ಥ್ಯವನ್ನು ಉತ್ತೇಜಿಸಿ, ವೈಜ್ಞಾನಿಕ ವಿಚಾರಶೀಲತೆಯನ್ನು ಬೆಳೆಸಿ ಹೊಸ ವಿಚಾರಗಳೊಡನೆ ಪ್ರಯೋಗ ಕೈಗೊಳ್ಳಲು ಪೂರ್ಣ ಸ್ವಾತಂತ್ರ್ಯವನ್ನು ಒದಗಿಸಿದ್ದಾರೆ.



## 5 – 2. ವ್ಯಕ್ತಿತ್ವ – ವ್ಯಕ್ತಿತ್ವ ವಿಕಾಸ

## ಅರ್ಥ ಮತ್ತು ವ್ಯಾಖ್ಯೆ

**"ವ್ಯಕ್ತಿತ್ವ"** ಎಂಬುದು ಅನೇಕ ಶಕ್ತಿಗಳ ಸಂಗಮ. ಆದರ್ಶ, ಸದಾಚಾರ, ಶ್ರದ್ಧೆ, ನಿಷ್ಠೆ, ದಕ್ಷತೆ ಎಚ್ಚರ, ಸನ್ನಿವೇಶಗಳೊಡನೆ ಹೊಂದಿಕೊಳ್ಳುವ ಸಾಮರ್ಥ್ಯ, ವೃತ್ತಿಪ್ರಿಯತೆ, ಪರೋಪಕಾರ ಬುದ್ಧಿ, ಪ್ರಾಮಾಣಿಕತೆ ಮುಂತಾದ ಗುಣಗಳು ವ್ಯಕ್ತಿತ್ವ ನಿರ್ಮಿಸುವ ಶಕ್ತಿಗಳು.

ಮೂಲತಃ ಆಂಗ್ಲಭಾಷೆಯ **"ಪರ್ಸನಾಲಿಟಿ"** ಎಂಬ ಪದ ಲ್ಯಾಟಿನ್ ಭಾಷೆಯ **'ಪರ್ಸೋನಾ'** ಎಂಬ ಪದದಿಂದ ಬಂದಿದೆ. ಇದರ ಅರ್ಥ ಮುಖವಾಡ. ಗ್ರೀಕ್ ಥಿಯೇಟರ್‌ಗಳಲ್ಲಿ ನಾಟಕದಲ್ಲಿ ಅಭಿನಯಿಸುವ ಪಾತ್ರಧಾರಿಗಳು ಮುಖವಾಡ ಧರಿಸುತ್ತಿದ್ದರು. ಇದರ ಮೂಲಕ ಪಾತ್ರಧಾರಿಗಳು ಜನಗಳ ಮೇಲೆ ಬೀರುತ್ತಿದ್ದ ಪ್ರಭಾವವನ್ನು ವ್ಯಕ್ತಿತ್ವ ಎಂದು ಕರೆಯುತ್ತಿದ್ದರು.[13] ಮನುಷ್ಯನು ಸಮಾಜದಲ್ಲಿ ಗೌರವದಿಂದ ಬಾಳಲು ಉತ್ತಮ ವ್ಯಕ್ತಿತ್ವ ಹೊಂದಿರಬೇಕು. ಒಂದು ಪ್ರಸಿದ್ಧ ಸುಭಾಷಿತ ಹೇಳುವಂತೆ ಗೌರವ ಸೂಚಿ **"ವಕಾರ ಪಂಚಕಗಳು"**:–

वस्त्रेण वपुषा वाचा विद्यया विनयेन च ।

वकारैः पञ्चभिर्हिनो नरो नायाति गौरवम् ॥[14]

ಅಂದರೆ, **"ವಸ್ತ್ರ, ವಪು(ಶರೀರ), ವಾಕ್, ವಿದ್ಯೆ, ವಿನಯ ಈ ಐದು ವಕಾರಗಳಿಲ್ಲದ ಮನುಷ್ಯನು ಗೌರವಕ್ಕೆ ಅರ್ಹನಾಗಲಾರನು."** ಈ ಪಂಚಸೂತ್ರಗಳನ್ನು ಪಾಲಿಸಿದ ವ್ಯಕ್ತಿ ಸಮಾಜದಲ್ಲಿ ಗೌರವಾನ್ವಿತನಾಗಿ ಬಾಳಬಲ್ಲ.

ಜನಸಾಮಾನ್ಯದಲ್ಲಿ ವ್ಯಕ್ತಿತ್ವದ ಅರ್ಥ ಹೇಳುವುದಾದರೆ, ವ್ಯಕ್ತಿತ್ವ ಎಂಬ ಪದ ಬಹಳ ಕಾಲದಿಂದಲೂ ಬಳಕೆಯಲ್ಲಿದ್ದರೂ ಒಬ್ಬೊಬ್ಬರೂ ಒಂದೊಂದು ಅರ್ಥ ಕಲ್ಪಿಸುವರು. ಒಬ್ಬರು ಅಂಗರಚನೆಯೇ ಮೊದಲಾದ ದೈಹಿಕ ಸ್ವರೂಪಕ್ಕೆ ಆ ಪದವನ್ನು ಬಳಸಿದರೆ ಮತ್ತೊಬ್ಬರು ಬಟ್ಟೆಬರೆ, ಉಡಿಗೆತೊಡಿಗೆಗಳಿಗೆ ಅದನ್ನು ಬಳಸುವರು. ಕೆಲವರು ಅವರ ಗುಣಶೀಲಗಳಿಗೆ ಆ ಪದವನ್ನು ಬಳಸಿದರೆ ಮತ್ತೆ ಕೆಲವರು ಅವರ ಪ್ರತಿಭಾಶಕ್ತಿಗೆ ಬಳಸುವರು. ಕೆಲವರು ಅವರ ಸಮಗ್ರ ಪ್ರಭಾವಕ್ಕೆ ಬಳಸಿದರೆ ಇನ್ನು ಕೆಲವರು ಯಾವುದೋ ಒಂದು ವಿಶಿಷ್ಟಾಂಶಕ್ಕೆ ಅದನ್ನು ಬಳಸುವರು. ಆದರೂ, ಶಾಸ್ತ್ರೀಯವಾಗಿ ಅರ್ಥ ಹೇಳುವಾಗ ಅವೆಲ್ಲವನ್ನೂ ಪರಿಗಣಿಸಬೇಕಾಗುತ್ತದೆ."

---

13. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 8, ಪು–303.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
14. **ಭಟ್.ವಿ ಎನ್,** ಜ್ಞಾನದೀಪ, ಅ–91, ಪು–178, ಸುಭಾಷಿತ, ವಿಶ್ವನಾಥ ಪ್ರಕಾಶನ,(1997) ಜ್ಞಾನದೀಪ,ಸಹ್ಯಾದ್ರಿನಗರ, ಶಿವಮೊಗ್ಗ –577201.

ವ್ಯಕ್ತಿಯ ಸ್ವಭಾವಾದಿ ಸಮಗ್ರ ಗುಣಸ್ವರೂಪಕ್ಕೆ ಆ ಪದವನ್ನು ಬಳಸಬೇಕಾಗುತ್ತದೆ.[15]

ಈಗ ಇದರ ಅರ್ಥದ ವ್ಯಾಪ್ತಿ ವಿಶಾಲವಾಗಿದ್ದು, ವ್ಯಕ್ತಿತ್ವ ಮನೋವಿಜ್ಞಾನವು **FRAACIS GALTON-(An English Polymath: Sociologist, Psychologist, Anthropologist)** ಮತ್ತು **SIGMUND FREUD- (Austrian Neurologist, Founder of Psychoanalysis)**ರವರ ಕಾಲದ ನಂತರ ವ್ಯವಸ್ಥಿತ ರೂಪ ಪಡೆಯಿತು. ಈಗ ಇದರ ಅರ್ಥ ನಿಜಸ್ವರೂಪವನ್ನು ಮರೆಮಾಚಿದ ಬಾಹ್ಯ ಆಕಾರಕ್ಕೆ ಮಾತ್ರ ಸೀಮಿತವಾಗಿಲ್ಲ. ವ್ಯಕ್ತಿ ತನ್ನ ನಡೆನುಡಿ ಹಾಗೂ ಕ್ರಿಯೆಗಳ ಮೂಲಕ ವ್ಯಕ್ತಪಡಿಸುವ ಸಂಪೂರ್ಣ ವರ್ತನೆಯ ಮೊತ್ತವನ್ನು ವ್ಯಕ್ತಿತ್ವ ಎನ್ನಲಾಗಿದೆ.

ವ್ಯಕ್ತಿತ್ವದ ಬಗ್ಗೆ ಹಲವಾರು ಮನೋವಿಜ್ಞಾನಿಗಳು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯೆಗಳನ್ನುನೀಡಿರುತ್ತಾರೆ.

**"ವ್ಯಕ್ತಿಯ ವ್ಯಕ್ತಿತ್ವವೆಂದರೆ ಅವನಲ್ಲಿರುವ ವಿಶೇಷ ಸ್ಥಿರಗುಣಗಳ ಸ್ವರೂಪ, ಸ್ಥಿರಗುಣವೆಂದರೆ ಅದು ಆ ವ್ಯಕ್ತಿಯನ್ನು ಇನ್ನೊಬ್ಬ ವ್ಯಕ್ತಿಯಿಂದ ಬೇರ್ಪಡಿಸುವಂತಹ ಮತ್ತು ಅವನಲ್ಲಿ ಬಹಳ ಕಾಲ ನೆಲಸಿರುವಂತಹ ಗುಣ."** ಎಂದು **J.P.GUILFORD-(American Psychologist)**ರವರು ವ್ಯಾಖ್ಯಾನಿಸಿರುತ್ತಾರೆ.

ಒಬ್ಬ ವ್ಯಕ್ತಿಯಲ್ಲಿ ಇತರರಿಗಿಂತ ಭಿನ್ನವಾಗಿ ಸಮನ್ವಯಗೊಂಡು ವ್ಯವಸ್ಥಿತವಾಗಿರುವ **"ಜ್ಞಾನಾತ್ಮಕ, ಸಂವೇಗಾತ್ಮಕ, ಚಲನಾತ್ಮಕ ಹಾಗೂ ದೈಹಿಕ ಗುಣಲಕ್ಷಣಗಳೇ ವ್ಯಕ್ತಿತ್ವ"** ಹೀಗೆಂದು **"WARENCE"** ಶಬ್ದ ಕೋಶದಲ್ಲಿ ಹೀಗೆ ಹೇಳದೆ. **"ವ್ಯಕ್ತಿ ಪರಿಸರದೊಂದಿಗೆ ತನ್ನದೇ ಆದ ವಿಶಿಷ್ಟ ಹೊಂದಾಣಿಕೆ ಮಾಡಿಕೊಳ್ಳಲು ಅಗತ್ಯವಾದ ಮನೋ – ದೈಹಿಕ ಅಂಶಗಳ ವಿಶಿಷ್ಟ ಸಂಘಟನೆಯೇ ವ್ಯಕ್ತಿತ್ವ."** ಎಂದು **ALL PORT** ವ್ಯಾಖ್ಯಾನಿಸಿದ್ದಾರೆ.

**HANS EYSENCK-(German born British Psychologist)**ರವರು ಹೀಗೆ ಹೇಳದ್ದಾರೆ– "ವ್ಯಕ್ತಿಯು ತನ್ನ ಪರಿಸರದೊಂದಿಗೆ ಸಾಧಿಸುವ ವಿಶಿಷ್ಟ ರೀತಿಯ ಹೊಂದಾಣಿಕೆಯಲ್ಲಿ ನಿರ್ಧರಿಸುವಂತಹ ಆತನ ನಡತೆ, ಸ್ವಭಾವ, ಬುದ್ಧಿಶಕ್ತಿ ಮತ್ತು ದೇಹದಾರ್ಢ್ಯ ಮೊದಲಾದ ಗುಣಗಳ ಸಾಪೇಕ್ಷ ಹಾಗೂ ಹೆಚ್ಚು ಕಡಿಮೆ ಸ್ಥಿರವಾದ ಸಂಘಟನೆಯೇ ವ್ಯಕ್ತಿತ್ವ."[16]

---

15. **ವೀರಪ್ಪ. ಎನ್.ಎಸ್**. ಶೈಕ್ಷಣಿಕ ಮನೋವಿಜ್ಞಾನ, ಅ–17, ಪು–458.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ ಮೈಸೂರು–4
16. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 8, ಪು–303.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.

ಮೇಲ್ಕಂಡ ಕೆಲವು ಮುಖ್ಯ ವ್ಯಾಖ್ಯೆಗಳನ್ನು ಪರಿಶೀಲಿಸಿದಾಗ ಹಲವು ಲಕ್ಷಣಗಳನ್ನು ವ್ಯಕ್ತಿತ್ವ ಸ್ವರೂಪದಲ್ಲಿ ಕಾಣಬಹುದು. ವ್ಯಕ್ತಿತ್ವವು ಸ್ಥಿರವಾದುದಲ್ಲ. ಅದು ಗತಿಶೀಲ ಪ್ರಕ್ರಿಯೆಯಾಗಿದೆ. ವ್ಯಕ್ತಿಯ ವ್ಯಕ್ತಿತ್ವವು ಅನುವಂಶೀಯತೆ ಮತ್ತು ಪರಿಸರಗಳ ಫಲವಾಗಿದೆ ವ್ಯಕ್ತಿತ್ವವು ಅದ್ವಿತೀಯ ಮತ್ತು ವಿಶಿಷ್ಟವಾದುದು. ವ್ಯಕ್ತಿತ್ವವು ವ್ಯಕ್ತಿ ಹೊಂದಿರುವ ಜೀವನದ ಗುರಿಗಳ ಮೇಲೆ ಅವಲಂಬಿಸಿರುತ್ತದೆ. ವ್ಯಕ್ತಿತ್ವ ಕೇವಲ ಗುಣಲಕ್ಷಣಗಳ ಮೊತ್ತವಲ್ಲ. ಅದು ವರ್ತನೆಯ ಸ್ವರೂಪಗಳ ಒಂದು ವಿಶಿಷ್ಟ ಸಂಘಟನೆಯಾಗಿದೆ. ವ್ಯಕ್ತಿತ್ವದ ಬೆಳವಣಿಗೆ ಮತ್ತು ವಿಕಾಸದ ಮೇಲೆ ಕಲಿಕೆ ಮತ್ತು ಅನುಭವಗಳು ಪ್ರಭಾವ ಬೀರುತ್ತವೆ. ವ್ಯಕ್ತಿತ್ವವು ತನ್ನದೇ ಆದ ರಚನೆ ಹೊಂದಿದ್ದು ದೈಹಿಕ, ಜ್ಞಾನಾತ್ಮಕ, ಸಂವೇಗಾತ್ಮಕ ಹಾಗೂ ಚಲನಾತ್ಮಕ ಗುಣಗಳನ್ನು ಹೊಂದಿದೆ.

**ವ್ಯಕ್ತಿತ್ವ ವಿಕಾಸವನ್ನು ನಿರ್ಧರಿಸುವ ಅಂಶಗಳು:–**

**ಅನುವಂಶೀಯತೆ ಮತ್ತು ಪರಿಸರದ ಪಾತ್ರ:** THE ROLE OF HEREDITY AND ENVIRONMENT

ವ್ಯಕ್ತಿಯ ವ್ಯಕ್ತಿತ್ವದ ವಿಕಾಸದ ಮೇಲೆ ಅನುವಂಶೀಯತೆ ಮತ್ತು ಪರಿಸರಗಳ ನಡುವಿನ ಅಂತರ್ ಕ್ರಿಯೆಯ ಪ್ರಭಾವವನ್ನು ಕಾಣುತ್ತೇವೆ. ವ್ಯಕ್ತಿತ್ವ ವಿಕಾಸವು ಗತಿಶೀಲ ಹಾಗೂ ನಿರಂತರ ಪ್ರಕ್ರಿಯೆಯಾಗಿದೆ. ವ್ಯಕ್ತಿತ್ವದ ವಿಕಾಸವನ್ನು ನಿರ್ಧರಿಸುವ ಪ್ರಮುಖ ಅಂಶಗಳೆಂದರೆ ಜೈವಿಕ ಅಂಶಗಳು ಮತ್ತು ಸಾಮಾಜಿಕ ಅಂಶಗಳು. ಜೈವಿಕ ಅಂಶಗಳಲ್ಲಿ ಪ್ರಭಾವ ಬೀರುವ ಅಂಶಗಳೆಂದರೆ, ಅನುವಂಶೀಯತೆ, ದೈಹಿಕ ರಚನೆ ಹಾಗೂ ನಿರ್ನಾಳ ಗ್ರಂಥಿಗಳು.ಹಾಗೆಯೇ ಸಾಮಾಜಿಕ ಅಂಶಗಳಲ್ಲಿ ಪ್ರಭಾವ ಬೀರುವ ಅಂಶಗಳೆಂದರೆ ಕುಟುಂಬ, ಶಾಲೆ, ಸಮಾಜ ಹಾಗೂ ಸಂಸ್ಕೃತಿ.[17]

ಅನುವಂಶೀಯತೆಯ ಪಾತ್ರ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಮಹತ್ವಪೂರ್ಣವಾದುದು. ಅಂಕುರಾಣುಗಳು ಮತ್ತು ಅವುಗಳಲ್ಲಿರುವ ವರ್ಣತಂತುಗಳು ಹಾಗೂ ವಂಶವಾಹಿಗಳ ಮೂಲಕ ವಂಶಪರಂಪರೆಯಾಗಿ ವ್ಯಕ್ತಿಗಳು ತಮ್ಮ ಗುಣಲಕ್ಷಣಗಳನ್ನು ಪಡೆದುಕೊಳ್ಳುತ್ತಾರೆ. ಅನುವಂಶೀಯತೆಯು ವ್ಯಕ್ತಿಯ ದೈಹಿಕ ಗುಣಲಕ್ಷಣಗಳು ಹಾಗೂ ಲಿಂಗವನ್ನು ನಿರ್ಧರಿಸುವುದಾಗಿದೆ. ವ್ಯಕ್ತಿಯಲ್ಲಿ ಕಂಡು ಬರುವ ಇತರ ಸಾಮರ್ಥ್ಯಗಳು ಹಾಗೂ ಲಕ್ಷಣಗಳ ಮೇಲೆ ಇತರ ಹಲವಾರು ಅಂಶಗಳು ಪ್ರಭಾವ ಬೀರುತ್ತವೆ.

ಮಾನವಶರೀರವು ನಿರ್ಮಾಣವಾಗಿರುವುದೇ ಅನುವಂಶೀಯತೆಯಿಂದ. ಅದರಲ್ಲೂ ವಿಶಿಷ್ಟ ಶಾರೀರಿಕ ಸ್ವರೂಪಕ್ಕೆ ಅನುವಂಶೀಯತೆಯೇ ಕಾರಣವಾಗಿದೆ.[18]

---

17. **ವೀರಪ್ಪ. ಎನ್. ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 17, ಪು–460–462. (1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
18. **ವಾಮದೇವಪ್ಪ. ಎಚ್. ವಿ**. ಶೈಕ್ಷಣಿಕ ಮನೋವಿಜ್ಞಾನ, ಅ –8, ಪು–311.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

ವ್ಯಕ್ತಿಗಳ ದೈಹಿಕ ರಚನೆ –ಅವರ ಸ್ವಭಾವದ ಮೇಲೆ ಪ್ರಭಾವ ಬೀರುತ್ತದೆ. ಉತ್ತಮ ಶಾರೀರಿಕ ಬೆಳವಣಿಗೆ ಹೊಂದಿರುವ ಮಗು ದೈಹಿಕವಾಗಿ ಬಲಶಾಲಿಯೂ, ಕ್ರಿಯಾಶೀಲನೂ ಹಾಗೂ ಆರೋಗ್ಯವಂತನೂ ಆಗಿದ್ದು ಪರಿಸರದೊಂದಿಗೆ ಉತ್ತಮ ಹೊಂದಾಣಿಕೆ ಮಾಡಿಕೊಳ್ಳಬಲ್ಲನು. ಇಂಥವನು ಉತ್ತಮ ಸ್ವಯಂಪ್ರಜ್ಞೆ ಹೊಂದಿದ್ದು, ಉತ್ತಮ ಸಾಮಾಜಿಕ ಮನ್ನಣೆಗೆ ಪಾತ್ರನಾಗುತ್ತಾನೆ. ಅದೇ ಕುಂಠಿತ ಬೆಳವಣಿಗೆ ಅಥವಾ ವಕ್ರತೆ, ವಿಕಾರಗಳಿಂದ ಕೂಡಿದ್ದರೆ ಅವನಿಗೆ ಸಮಾಜದ ಹೊಂದಾಣಿಕೆಯಲ್ಲಿ ಸಮಸ್ಯೆ ಎದುರಾಗುತ್ತದೆ.

असहायः समर्थोऽपि तेजस्वी किं करिष्यति ।

निर्वाते ज्वलितो वह्निः स्वयमेव प्रशाम्यति ॥[19]

ಸಮರ್ಥನಾಗಿದ್ದರೂ ಒಬ್ಬ ತೇಜಸ್ವಿಯು ಸಹಾಯವಿಲ್ಲದಿದ್ದರೆ ಏನನ್ನು ತಾನೆ ಮಾಡಬಲ್ಲ? ಉರಿಯುವ ಬೆಂಕಿ ಗಾಳಿಯ ಸಹಾಯವಿಲ್ಲದಿದ್ದರೆ ತಾನಾಗಿಯೇ ಆರಿ ಹೋಗುತ್ತದೆ. ಅಂದರೆ ಅನುವಂಶೀಯವಾಗಿ ತೇಜಸ್ವಿ ಹಾಗೂ ಸಮರ್ಥನೇ ಆಗಿದ್ದರೂ ಅವನಿಗೆ ಸೂಕ್ತ ಪರಿಸರದ ಸಹಕಾರವಿಲ್ಲದಿದ್ದರೆ ಅವನು ಏನು ತಾನೆ ಮಾಡಿಯಾನು? ಅಮರಶಕ್ತಿ ರಾಜನ ಪುತ್ರರು ಅನುವಂಶೀಯವಾಗಿ ಏನೇ ತೇಜಸ್ವಿಗಳೂ, ರಾಜಮನೆತನದವರೂ ಆಗಿದ್ದರೂ ಸರಿಯಾದ ಪರಿಸರವಿಲ್ಲದೆ ಸ್ವೇಚ್ಛಾಚಾರಿಗಳಾಗಿ ಮಾತಾಪಿತೃಗಳಿಗೆ ಬಹಳ ವೇದನೆಯನ್ನು ತಂದೊಡ್ಡಿದ್ದರು. ಆದರೆ, ಅದೃಷ್ಟವಶಾತ್ ವಿಷ್ಣುಶರ್ಮರು, ಮೇಧಾವಿ ಶಿಕ್ಷಕರು ದೊರಕಲಾಗಿ ಪರಿವರ್ತನೆ ಹೊಂದಿದರು. ಅಂದರೆ ಗುರುಗಳು ಅಂತಹ ಆದರ್ಶ ಪರಿಸರ ಅಥವಾ ಸನ್ನಿವೇಶಗಳನ್ನು ಪಂಚತಂತ್ರಗಳಲ್ಲಿ ಅಳವಡಿಸಿ ಪ್ರೋತ್ಸಾಹಿಸಿದರು.

ಹಲವಾರು ಹಾರ್ಮೋನ್ಗಳನ್ನು ನೇರವಾಗಿ ನಮ್ಮ ರಕ್ತದೊಳಕ್ಕೆ ಸ್ರವಿಸುವುದಕ್ಕೆ ನಿರ್ನಾಳ ಗ್ರಂಥಿಗಳು ಕಾರಣಗಳಾಗಿವೆ. ಪಿಟ್ಯುಟರಿ, ಥೈರಾಯ್ಡ್, ಅಡ್ರಿನಲ್ ಮತ್ತು ಗೋನ್ಯಾಡ್ಸ್ ಮುಂತಾದ ನಿರ್ನಾಳ ಗ್ರಂಥಿಗಳು ವ್ಯಕ್ತಿಯ ದೈಹಿಕ ಬೆಳವಣಿಗೆ, ರಾಸಾಯನಿಕ ಕ್ರಿಯೆಗಳು ಮತ್ತು ಸಂವೇದನೆಗಳ ಮಟ್ಟವನ್ನು ನಿರ್ಧರಿಸುತ್ತವೆ. ಇವುಗಳು ಸ್ರವಿಸುವುದರಲ್ಲಿ ವ್ಯತ್ಯಾಸ ಉಂಟಾದಲ್ಲಿ ವ್ಯಕ್ತಿತ್ವದ ವಿಕಾಸದಲ್ಲೂ ವೈಪರೀತ್ಯ ಉಂಟಾಗುತ್ತದೆ.

ಪಿಟ್ಯುಟರಿ ಗ್ರಂಥಿಯು ಬಿಡುಗಡೆ ಮಾಡುವ ಹಾರ್ಮೋನುಗಳು ದೇಹದಲ್ಲಿರುವ ಇತರೆ ಗ್ರಂಥಿಗಳ ಚಟುವಟಿಕೆಗಳನ್ನು ನಿಯಂತ್ರಿಸುತ್ತದೆ. ಇದನ್ನು "ನಾಯಕ ಗ್ರಂಥಿ" ಎಂದು ಕರೆಯುತ್ತಾರೆ. ಥೈರಾಯ್ಡ್ ಗ್ರಂಥಿಯು ವ್ಯಕ್ತಿಯ ಜೀವರಾಸಾಯನಿಕ ಕ್ರಿಯೆ ಹಾಗೂ ಚಯಾಪಚಯ ಕ್ರಿಯೆ ದೈಹಿಕ ಹಾಗೂ ಮಾನಸಿಕ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಅಡ್ರಿನಲ್ ಗ್ರಂಥಿ, ಲೈಂಗಿಕ ಗ್ರಂಥಿಗಳು, ಮೇದೋಜೀರಕ

19. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಂ, ಕಾಕೋಲೂಕೀಯ, ಶ್ಲೋ–56, ಪು–459,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಗ್ರಂಥಿ, ಪ್ಯಾರಾಥೈರಾಯ್ಡ್ ಗ್ರಂಥಿ ಥೈಮಸ್ ಗ್ರಂಥಿ, ಪೀನಲ್ ಗ್ರಂಥಿ ಮುಂತಾದವುಗಳಿಂದ ಬಿಡುಗಡೆಯಾಗುವ ಹಾರ್ಮೋನುಗಳೂ ಸಹ ವ್ಯಕ್ತಿಯ ವ್ಯಕ್ತಿತ್ವದ ವಿಕಾಸದ ಮೇಲೆ ಪ್ರಭಾವ ಬೀರುತ್ತವೆ.

ಮಾನವನ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಪರಿಸರದ ಅಂಶಗಳಾದ ಭೌತಿಕ ಹಾಗೂ ಭೌಗೋಳಿಕ ಸನ್ನಿವೇಶಗಳು ಮುಖ್ಯ ಪಾತ್ರ ವಹಿಸುತ್ತವೆ. ವ್ಯಕ್ತಿತ್ವದ ಬೆಳವಣಿಗೆಯ ಮೇಲೆ ಕುಟುಂಬದ, ಸಾಮಾಜಿಕ ವಾತಾವರಣವೂ ಪ್ರಭಾವ ಬೀರುತ್ತದೆ. ಕುಟುಂಬದಲ್ಲಿ ಪೋಷಕರ ಸ್ವಭಾವ, ಮಗುವಿನ ಜನನ ಅನುಕ್ರಮ ಸ್ಥಾನ, ಸಾಮಾಜಿಕ, ಆರ್ಥಿಕ ಸ್ಥಿತಿಗತಿ, ಕೌಟುಂಬಿಕ ಸಂಬಂಧಗಳು, ಕುಟುಂಬದ ನೈತಿಕತೆ ಮುಂತಾದ ಅಂಶಗಳು ಮಗುವಿನ ವ್ಯಕ್ತಿತ್ವ ರೂಪಿಸುವಲ್ಲಿ ಮುಖ್ಯ ಪಾತ್ರ ವಹಿಸುತ್ತವೆ. ಉತ್ತಮ ಹೊಂದಾಣಿಕೆಯಿಂದ ಸಂತೋಷವಾಗಿ ಕೂಡಿ ಬಾಳುವ ಕುಟುಂಬಗಳಲ್ಲಿ ಪೋಷಕರು ಪ್ರಜಾಸತ್ತಾತ್ಮಕ ಮನೋಭಾವವುಳ್ಳವರೂ, ವಾತ್ಸಲ್ಯದಿಂದ ಕೂಡಿದವರೂ, ಕಾಳಜಿವುಳ್ಳವರೂ ಆಗಿದ್ದಲ್ಲಿ ಉತ್ತಮ ಹೊಂದಾಣಿಕೆ ಉಳ್ಳ, ಸಂತೋಷದಿಂದ ಕೂಡಿದ ಸಮತೋಲನವಾದ ವ್ಯಕ್ತಿತ್ವ ವಿಕಾಸವಾಗುವಂತೆ ಪ್ರೇರಕವಾಗುತ್ತದೆ.[20]

## ವ್ಯಕ್ತಿತ್ವ ರೂಪಿಸುವಲ್ಲಿ ಶಾಲೆ ಮತ್ತು ಶಿಕ್ಷಕರ ಪಾತ್ರ.

ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವಲ್ಲಿ, ಶಾಲೆಯಲ್ಲಿ ಶಿಕ್ಷಕರು ಹಾಗೂ ಅವರ ಸಹಪಾಠಿಗಳು ಮುಖ್ಯ ಪಾತ್ರ ವಹಿಸುತ್ತಾರೆ. ಶಿಕ್ಷಕನ ವ್ಯಕ್ತಿತ್ವ ಹಾಗೂ ಅವನ ವರ್ತನೆ, ನಡತೆ ಹಾಗೂ ಇನ್ನಿತರ ಆದರ್ಶ ಗುಣಗಳನ್ನು ಮಕ್ಕಳು ಅನುಕರಿಸಲು ಯತ್ನಿಸುತ್ತಾರೆ ಅದಕ್ಕೇ ಹೇಳುವುದು "ಶಿಕ್ಷಕನಿದ್ದಂತೆ ಶಿಷ್ಯನೂ" **(As is the teacher,so is the student.)** ಗುರುವಿನ ಮಹತ್ವವನ್ನು ಬಹಳ ಅಚ್ಚುಕಟ್ಟಾಗಿ ಒಂದು ಸೂಕ್ತಿ ಹೀಗೆ ಹೇಳುತ್ತದೆ.

पिता माता भ्राता प्रियसहचरी सूनुनिवहः सुहृत्स्वामी माद्यत्करिभटरथाश्वः परिकरः।

निमज्जन्तं जन्तुं नरककुहरे रक्षितुमलं गुरोर्धर्माऽधर्मप्रकटनपरात् कोऽपि न परः ।।[21]

ಧರ್ಮಾಧರ್ಮಗಳ ಸ್ವರೂಪವನ್ನು ವಿವರಿಸಿ ಹೇಳುವ ಗುರು ಒಬ್ಬನೇ ನರಕದಲ್ಲಿ ಮುಳುಗುವ ಮನುಷ್ಯನನ್ನು ರಕ್ಷಿಸಲು ಸಮರ್ಥನು. ಮತ್ಯಾರೂ ಇಲ್ಲ. ತಂದೆ, ತಾಯಿ, ಪ್ರಿಯೆ, ಮಕ್ಕಳು, ಮಿತ್ರ, ಒಡೆಯ, ಆನೆ, ಸೈನಿಕ, ರಥ, ಕುದುರೆ, ಪರಿವಾರಗಳು ಅವನನ್ನು ರಕ್ಷಿಸಲಾರವು.

---

20. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ – 8, ಪು–312–314.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.
21. **ಸುಭಾಷಿತಮಂಜರೀ,** ಧರ್ಮ–ಶ್ಲೋ–102, ಪು–248, ಸೋಮಪ್ರಭಾಚಾರ್ಯನ ಸೂಕ್ತಿಮುಕ್ತಾವಲಿ–15.(2001) ಕ.ಸಾ.ಪ, ಚಾಮರಾಜಪೇಟೆ, ಬೆಂಗಳೂರು–18

ವ್ಯಕ್ತಿಯು ಸಮಾಜದಲ್ಲಿ ಪ್ರಚಲಿತವಾಗಿರುವ ವರ್ತನೆಗಳನ್ನು ರೂಢಿಸಿಕೊಳ್ಳುತ್ತಾನೆ. ಸಮಾಜೀಕರಣ ಪ್ರಕ್ರಿಯೆಯ ಫಲವೇ ವ್ಯಕ್ತಿಯ ವ್ಯಕ್ತಿತ್ವಕ್ಕೆ ಕಾರಣವಾಗಿದೆ. ಸಮಾಜವು ಸಾಮಾಜಿಕ ಸಂಬಂಧಗಳ ಸಂಗಮವೇ ಆಗಿದೆ. ಇದು ವಿವಿಧ ವ್ಯಕ್ತಿಗಳಲ್ಲಿ ಸಂಪರ್ಕ ಕಲ್ಪಿಸಿ, ಈ ಅಂತರ್ ವ್ಯಕ್ತಿ ಸಂಬಂಧಗಳು ವ್ಯಕ್ತಿಯ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರುತ್ತವೆ. ವ್ಯಕ್ತಿಯು ಸಮಾಜದಲ್ಲಿ ಸ್ವೇಚ್ಛೆಯಿಂದ ವರ್ತಿಸಲು ಸಾಧ್ಯವಿಲ್ಲ. ಸಮಾಜ ತನ್ನ ನೀತಿ ಸಂಹಿತೆಯನ್ನು ಪಾಲಿಸದವರನ್ನು ದಂಡಿಸುತ್ತದೆ. ಯಾವುದಕ್ಕೆ ಹೆದರದಿದ್ದರೂ, ವ್ಯಕ್ತಿಯು ಸಮಾಜಕ್ಕೆ ಹೆದರಬೇಕಾಗುತ್ತದೆ. ಸಮಾಜದ ನೀತಿನಿಯಮಗಳನ್ನು ಪಾಲಿಸಲೇ ಬೇಕಾಗುತ್ತದೆ. ಇವುಗಳು ವ್ಯಕ್ತಿಗಳ ವರ್ತನೆಗಳು ಹಾಗೂ ಮನೋಧೋರಣೆಗಳ ಮೇಲೆ ಪ್ರಭಾವ ಬೀರುತ್ತವೆ[22] ವ್ಯಕ್ತಿತ್ವವನ್ನು ರೂಪಿಸತಕ್ಕ ಅಂಶಗಳೆಲ್ಲ ಮೂಲತಃ ವಂಶಗತವಾಗಿ ಬಂದಿರುವಂತಹವೇ ಆದರೂ, ಅವುಗಳನ್ನು ಕ್ರಮವಾಗಿ ವ್ಯವಸ್ಥೆಗೊಳಿಸುವುದು ಬಹಳ ಮುಖ್ಯ. ಅಷ್ಟಾಗಿ ಜನ್ಮತಃ ಉತ್ತಮ ಅನುವಂಶೀಯ ವ್ಯಕ್ತಿ ರೇಖೆಗಳಲ್ಲದಿದ್ದರೂ, ಇರುವಷ್ಟನ್ನೇ ಆದಷ್ಟು ಉಪಯುಕ್ತ ರೀತಿಯಲ್ಲಿ ಪೋಷಿಸಿ ವ್ಯವಸ್ಥೆಗೊಳಿಸಿಕೊಂಡರೆ ನಿಸರ್ಗದತ್ತವಾಗಿ ಬಂದದ್ದನ್ನು ಬಂಗಾರ ಮಾಡಿಕೊಂಡಂತಾಗುತ್ತದೆ. ಇಲ್ಲಿ ಮತ್ತೊಂದು ಮುಖ್ಯವಾಗಿ ಕಂಡುಬರುವ ಅಂಶವೆಂದರೆ ಪ್ರಯತ್ನಶೀಲತೆ. ವಂಶಪಾರಂಪರ್ಯವಾಗಿ ಬಂದುಬಿಟ್ಟಿದೆ ಎಂದು ಬೀಗುತ್ತಾ, ಲಭ್ಯವಾಗಿರುವ ಸಾಮರ್ಥ್ಯ ಸದುಪಯೋಗಪಡಿಸಿಕೊಳ್ಳಲು ಪ್ರಯತ್ನಶೀಲರಾಗಬೇಕು.

उद्यमेन हि सिद्धयन्ति कार्याणि न मनोरथैः ।

न हि सिंहस्य सुप्तस्य प्रविशन्ति मुखे मृगाः ॥[23]

ಅಂದರೆ, ಪ್ರಯತ್ನಗಳಿಂದ ಕಾರ್ಯಗಳು ಸಿದ್ಧಿಸುತ್ತವೆಯೇ ಹೊರತು ಬರಿಯ ಬಯಕೆಗಳಿಂದಲ್ಲ. ನಿದ್ರಿಸುತ್ತಿರುವ ಸಿಂಹದ ಬಾಯಲ್ಲಿ ಮೃಗಗಳು ತಾವಾಗಿಯೇ ಬಂದು ಪ್ರವೇಶಿಸುವುದಿಲ್ಲ.

ವ್ಯಕ್ತಿಯಲ್ಲಿ ರೂಢಿಸಿರುವ ಅಭ್ಯಾಸಗಳು – ಭಾವನೆಗಳು – ಮನೋಧೋರಣೆಗಳು – ದೃಷ್ಟಿಧ್ಯೇಯಗಳು ಇವೆಲ್ಲ ವ್ಯವಸ್ಥೆಗೊಳ್ಳುವುದು ಸಮಾಜದ ಅಗತ್ಯಕ್ಕೆ ತಕ್ಕಂತೆ. ಆಗ ಮಾತ್ರ ಪ್ರತಿ ವ್ಯಕ್ತಿಯಲ್ಲೂ ಒಂದು ಅಧಿಪತಿ ಭಾವನೆ ರೂಪುಗೊಳ್ಳುತ್ತದೆ. (ಮೆಕ್ಡೂಗಲ್ ರವರು ಸೂಚಿಸಿರುವಂತೆ) ಮನಸ್ಸಿನೆಲ್ಲ ವ್ಯಾಪಾರಗಳೂ ಅದರ ಸುತ್ತ ನಡೆಯುತ್ತವೆ. ಅದರ ನಿರ್ದೇಶನದಂತೆ ಅವುಗಳೆಲ್ಲ ಕಾರ್ಯ ನಡೆಸುವಂತೆ ವ್ಯವಸ್ಥೆಗೊಳ್ಳುತ್ತವೆ. ಇದೇ ಐಕ್ಯತೆಯ ವ್ಯವಸ್ಥೆಯೆನ್ನುವರು. ನಮ್ಮ ಸಮಾಜ ಮತ್ತು ಸಾಂಸ್ಕೃತಿ, ನಾಗರಿಕತೆಗಳ ಅಂಗವಾಗಿ

---

22. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 17, ಪು–461, ಅ – 20, ಪು–525–527.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
23. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಸಂಪ್ರಾಪ್ತಿ– ಶ್ಲೋ–136, ಪು–393, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.

ಬೆಳೆದುಬಂದಿರುವ ನೈತಿಕ ವ್ಯಕ್ತಿತ್ವ ವ್ಯವಸ್ಥೆಗೊಳ್ಳುತ್ತದೆ. ವ್ಯಕ್ತಿ ತನ್ನ ಭಾವನೆ, ಮನೋಧೋರಣೆಗಳು, ದೃಷ್ಟಧ್ಯೇಯಗಳು, ಆದರ್ಶಗಳು ಇವನ್ನೆಲ್ಲ ತಾನು ಬಾಳುವ ಸಾಮಾಜಿಕ, ನೈತಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳಿಗೊಪ್ಪುವಂತೆ ರೂಪಿಸಿಕೊಳ್ಳುತ್ತಾನೆ. ವ್ಯಕ್ತಿತ್ವದ ಅಂತಿಮ ಗುರಿಯೆಂದರೆ ಎಲ್ಲ ಕಾಲಕ್ಕೂ, ಎಲ್ಲ ದೇಶಕ್ಕೂ, ಎಲ್ಲ ಸಮಾಜ, ಸಂಸ್ಕೃತಿಗಳಿಗೂ ಒಪ್ಪುವ ಮೌಲ್ಯಗಳನ್ನು, ಆದರ್ಶಗಳನ್ನು ಸಾಧಿಸುವುದೇ ಆಗಿರುತ್ತದೆ ಇದನ್ನೇ **"ಸತ್ಯಂ ಶಿವಂ. ಸುಂದರಂ"** ಎಂಬ ಮಾತಿನಲ್ಲಿ ಶ್ರೇಷ್ಠ ಆದರ್ಶವನ್ನಾಗಿ ರೂಪಿಸಿಕೊಳ್ಳುವುದು.[24]

ಶಿಕ್ಷಣದ ಗುರಿ "ಪರಿಪೂರ್ಣ ವ್ಯಕ್ತಿತ್ವದ ಬೆಳವಣಿಗೆಯ ಕಡೆಗೆ" ಎಂಬ ವಿಚಾರ ಸರ್ವವೇದ್ಯವಾದುದು.[25] ಕೇವಲ ವಿಷಯ ಜ್ಞಾನ ಬೆಳೆಸುವುದೊಂದೇ ಎಂದು ಶಿಕ್ಷಕರು ತಿಳಿಯಬಾರದು. ಇಡೀ ವ್ಯಕ್ತಿತ್ವದ ಬೆಳವಣಿಗೆಗೆ ನೆರವಾಗುವ ಎಲ್ಲ ಅಂಶಗಳನ್ನೂ ಪರಿಗಣಿಸಿ ಉತ್ತಮ ಮಾರ್ಗದರ್ಶನವನ್ನು ನೀಡಬೇಕು. ಶಾಲೆಯಲ್ಲಿ ಮಗುವಿನ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರುವ ಮುಖ್ಯ ಅಂಶಗಳೆಂದರೆ– ಪಠ್ಯಕ್ರಮ, ಶಿಕ್ಷಕರು ಮತ್ತು ಸಹಪಾಠಿಗಳು. ಪಠ್ಯಕ್ರಮದ ರಚನೆ ಹೇಗಿರಬೇಕೆಂದರೆ ವಿದ್ಯಾರ್ಥಿಗಳ ವ್ಯಕ್ತಿತ್ವದ ಸಮಗ್ರ ವಿಕಾಸಕ್ಕೆ ಅನುಗುಣವಾಗಿರಬೇಕು. ಅವರ ಅವಶ್ಯಕತೆಗಳು ಮತ್ತು ಸಾಮರ್ಥ್ಯಗಳನ್ನು ಗಮನಿಸಿ, ಅದಕ್ಕೆ ಒಪ್ಪುವ ರೀತಿಯಲ್ಲಿರಬೇಕು.

ಪಠ್ಯಕ್ರಮವನ್ನು ಎಷ್ಟೇ ಸೂಕ್ಷ್ಮವಾಗಿ ಗಮನಿಸಿ, ಅತ್ಯುತ್ತಮವಾಗಿ ತಯಾರಿಸಿದ್ದರೂ, ಅದನ್ನು ಸಮರ್ಪಕವಾಗಿ ಕಾರ್ಯಗೊಳಿಸಲಾಗದಿದ್ದರೆ, ಮಕ್ಕಳಿಗೆ ಅದರಿಂದ ಏನೂ ಪ್ರಯೋಜನವಾಗಲಾರದು. ಆದ್ದರಿಂದ ನಿಗದಿತ ಪಠ್ಯಕ್ರಮವನ್ನು ಪರಿಣಾಮಕಾರಿಯಾಗಿ ಶಿಕ್ಷಕರು ನಿರ್ವಹಣೆ ಮಾಡಿದಾಗ ಮಾತ್ರ ಮಗುವಿನ ವಿಕಾಸ ಪರಿಪೂರ್ಣವೂ, ಆರೋಗ್ಯಕರವೂ ಆಗಿರುತ್ತದೆ. ಇದರ ಜೊತೆಗೆ ಶಿಕ್ಷಕರ ವ್ಯಕ್ತಿತ್ವ, ವಿದ್ಯಾರ್ಥಿಗಳೊಡನೆ ಅವರ ಸಂವಹನ, ಜ್ಞಾನ, ಬೋಧನಾ ಕೌಶಲ್ಯ, ಶಿಸ್ತು, ಸಂಯಮ, ಪರಾನುಭೂತಿ, ಸಮಯಪ್ರಜ್ಞೆ, ತತ್ವನಿಷ್ಠೆ ಇತ್ಯಾದಿಗಳು ಮಕ್ಕಳ ಮೇಲೆ ಅಪಾರ ಪ್ರಭಾವ ಬೀರುತ್ತವೆ. ಶಿಕ್ಷಕನು ಪ್ರತಿಯೊಂದು ಮಗುವನ್ನೂ ವೈಶಿಷ್ಟ್ಯಪೂರ್ಣ ವ್ಯಕ್ತಿಯಂತೆ ಪರಿಗಣಿಸಿ, ಅವನಲ್ಲಿರುವ ವೈಯಕ್ತಿಕತೆಯೇ ಅವನ ಅಮೂಲ್ಯ ಆಸ್ತಿ ಎಂಬುದನ್ನು ಗುರುತಿಸಬೇಕು. ಅವನಲ್ಲಿರುವ ಸುಪ್ತ ಪ್ರತಿಭೆಯನ್ನು ಪತ್ತೆ ಮಾಡಿ ಅದರ ಸಹಾಯದಿಂದ ತನ್ನ ಸಮೂಹ ಅಥವಾ ಸಮಾಜಕ್ಕೆ ಏನಾದರೂ ಕೊಡುಗೆ ನೀಡುವಂತೆ ಪ್ರೇರೇಪಿಸಿ ಪ್ರೋತ್ಸಾಹಿಸಬೇಕು. ಹೀಗೆ ಶಿಕ್ಷಕರು ವಿದ್ಯಾರ್ಥಿಗಳಿಗೆ ಸಮರ್ಪಕವಾಗಿ ಒಳ್ಳೆಯ ಶಿಕ್ಷಣ ಸನ್ನಿವೇಶಗಳನ್ನು ಒದಗಿಸಿ, ಉತ್ತಮ ವ್ಯಕ್ತಿತ್ವ ರೂಪಿಸಬೇಕು. ಗೀತಾಚಾರ್ಯನು ಮನಬಂದಂತೆ ನಡೆಯುವವರಿಗೆ ಒಂದು ಸೂಚನೆ ಕೊಟ್ಟಿರುತ್ತಾನೆ:–

---

24. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–17, ಪು–479–480.(1962)
ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

25. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ–26, ಪು–644..(1962)
ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

यः शास्त्रविधिमुत्सृज्य वर्तते कामकारतः ।

न स सिद्धिमवाप्नोति न सुखं न परां गतिम् ॥[26]

ಅಂದರೆ, ಯಾವನು ಶಾಸ್ತ್ರ ವಿಧಾನವನ್ನು ಬದಿಗೊತ್ತಿ ಮನಸ್ಸಿಗೆ ಬಂದಂತೆ ನಡೆಯುವನೋ ಅವನು ಸಿದ್ಧಿಯನ್ನು ಪಡೆಯುವುದಿಲ್ಲ. ಅವನಿಗೆ ಸುಖವೂ ಇಲ್ಲ. ಉತ್ತಮ ಗತಿಯೂ ಇಲ್ಲ. ಇದೇ ಪರಿಸ್ಥಿತಿಯಲ್ಲಿದ್ದವರು ರಾಜಕುಮಾರರು. ಇವರನ್ನು ಪರಿವರ್ತನೆ ಮಾಡುವುದು ನಿಜಕ್ಕೂ ಒಂದು ಸವಾಲೇ ಸರಿ.

ಇದೇ ಕಾರ್ಯವನ್ನು ವಿಷ್ಣುಶರ್ಮರು ಅತ್ಯಂತ ಸರಳ ಸುಂದರ ವಾತಾವರಣ ನಿರ್ಮಾಣ ಮಾಡಿ, ಆಕರ್ಷಕ ಕಥಾ ನಿರೂಪಣೆಯ ಮೂಲಕ, ಬದುಕಿನ ನೀತಿಬೋಧೆ ಮಾಡುತ್ತಾ, ಕಥೆಗಳಲ್ಲೇ ಜೀವನದ ಎಲ್ಲ ಅನುಭವಗಳೂ ಸಿಗುವಂತೆ ದೃಷ್ಟಾಂತಗಳನ್ನು ಒದಗಿಸಿ ರಾಜನಂದನರನ್ನು ಸುಶಿಕ್ಷಿತ ರಾಜಕುಮಾರರನ್ನಾಗಿ ಪರಿವರ್ತಿಸಿ ಯಶಸ್ವಿಯಾಗಿದ್ದಾರೆ. ನೀತಿಬೋಧನಾ ಕ್ಷೇತ್ರದಲ್ಲಿ ಹಾಗೂ ಸುಂದರ ವ್ಯಕ್ತಿತ್ವ ನಿರ್ಮಾಣಕಲೆಯಲ್ಲಿ ಮಾದರಿಯಾಗಿದ್ದಾರೆ. ಹಿಂದಿನಿಂದಲೂ ಗುರುವಿನ ಮೇಲೆ ಗುರುತರವಾದ ಹೊಣೆಗಾರಿಕೆಯಿದೆ. ಗುರುವೃಂದವು ಈ ವಿಷಯವನ್ನು ಗಂಭೀರವಾಗಿ ವಿಚಾರಮಾಡಿ, ಚರ್ಚಿಸಿ ಯಾವುದೇ ಒಂದು ನಿರ್ಣಯವನ್ನು ಕೈಗೊಳ್ಳಬೇಕು. ವಿಷ್ಣುಶರ್ಮರು ಬಹಳ ಗಂಭೀರ ಚಿಂತನೆ ನಡೆಸಿ, ಅಮರಶಕ್ತಿ ರಾಜನ ಕೋರಿಕೆಗೆ ಸ್ಪಂದಿಸಿ, ರಾಜಕುವರರ ಪರಿಸ್ಥಿತಿ, ಪರಿಸರ, ಮೂಲಸ್ವಭಾವ, ವರ್ತನೆಗಳು ಇತ್ಯಾದಿಗಳನ್ನು ಪರಿಶೀಲಿಸಿ ಒಂದು ಉತ್ತಮ ನಿರ್ಣಯವನ್ನು ಕೈಗೊಂಡು, ಕಥಾ ಮಾಧ್ಯಮದಲ್ಲಿ ಬೋಧಿಸುವುದೇ ಸೂಕ್ತ ಎಂದು ತೀರ್ಮಾನಿಸಿದರು. ವ್ಯಕ್ತಿತ್ವ ವಿಕಾಸವೇ ಎಲ್ಲ ಶಿಕ್ಷಣದ ಗುರಿಯಾಗಿದೆ. ವಿವಿಧ ಸಾಮಾಜಿಕ ಹಂತಗಳಲ್ಲಿಯ ವಿದ್ಯಾರ್ಥಿಗಳ ವ್ಯಕ್ತಿತ್ವದ ವಿಕಾಸಗೊಳಿಸುವ ಕಾರ್ಯವು ಅಷ್ಟೇನೂ ಸುಲಭವಾದುದಲ್ಲ. ಶಿಕ್ಷಕನೂ ಕೂಡ ಪರಿಪೂರ್ಣ ವ್ಯಕ್ತಿತ್ವ ಹೊಂದಿದವನಾಗಿರಬೇಕು. ಹಿಂದೊಮ್ಮೆ ಮಾನವ ಸಮಾಜವು ಇಂದಿನಂತೆ ತೊಡಕಿನದಾಗಿರಲಿಲ್ಲ. ಆಗ ಜನರ ಮಾನಸಿಕ, ನೈತಿಕ ಮಟ್ಟವು ಅಪೇಕ್ಷಿತ ಮಟ್ಟದಲ್ಲಿದ್ದಿತು. ಸಮಾಜದಲ್ಲಿ ಸ್ಥಿರತೆ ಇತ್ತು. ಸಹಕಾರವಿತ್ತು. ಸೌಹಾರ್ದತೆ ನೆಲೆಸಿತ್ತು. ಆದರೆ ಇಂದಿನ ಸಮಾಜವು ಅನೇಕ ಕಾರಣಗಳ ಮೂಲಕ ಛಿದ್ರ ವಿಚ್ಛಿದ್ರವಾಗಿದೆ.

ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಿದ ಕೆಲವು ಪ್ರತಿಷ್ಠಿತ ಶಿಕ್ಷಣತಜ್ಞರು ಒಬ್ಬ ಪ್ರಸಿದ್ಧ ಶಿಕ್ಷಕ ಅಥವಾ ಉಪಾಧ್ಯಾಯನ ಲಕ್ಷಣಗಳನ್ನು ಪಂಚಶೀಲೋಪಾದಿಯಲ್ಲಿ ಹೇಳಿದ್ದಾರೆ:

---

**26. ಭಗವದ್ಗೀತಾ,** ಅ-16, ಶ್ಲೋ-23.

**1.The ability to develop relationships with their students.**

ವಿದ್ಯಾರ್ಥಿಗಳೊಂದಿಗೆ ಸೌಹಾರ್ದ ಸಂಬಂಧ ಬೆಳೆಸಿಕೊಳ್ಳುವ ಸಾಮರ್ಥ್ಯ.

**2.Patient,caring and kind personality** ತಾಳ್ಮೆ, ಮಕ್ಕಳ ಬಗ್ಗೆ ಕಾಳಜಿ ಮತ್ತು ಕರುಣಾರ್ದ್ರ ವ್ಯಕ್ತಿತ್ವ.

**3.Knowledge of learners.** ಕಲಿಯುವವರ ಬಗ್ಗೆ ಜ್ಞಾನ ವಿರಬೇಕು.

**4.Dedication to teaching.** ಬೋಧನಾ ಶ್ರದ್ಧೆ.

**5.Engaging students in leaning.** ವಿದ್ಯಾರ್ಥಿಗಳನ್ನು ಕಲಿಕೆಯಲ್ಲಿ ತೊಡಗಿಸಿಕೊಳ್ಳುವುದು.



# ೫ – ೩. ವ್ಯಕ್ತಿತ್ವ ನಿರ್ಮಾಣ–ಹೊಂದಾಣಿಕೆ–ಸಹಬಾಳ್ವೆ

# ಒಗ್ಗಟ್ಟಿನಲ್ಲಿ ಸಾಧನೆ

ವಿದ್ಯಾರ್ಥಿಗಳಿಗೆ ಅವರ ಸಹಪಾಠಿಗಳೂ ಸಹ ಅನೇಕ ವಿಷಯಗಳಲ್ಲಿ ಪ್ರಭಾವ ಬೀರುತ್ತಾರೆ. ಅಪೇಕ್ಷಿತ ಧನಾತ್ಮಕ ಪ್ರಭಾವವನ್ನುಂಟುಮಾಡುವ ಸಹಪಾಠಿಗಳಿದ್ದರೆ ಉತ್ತಮ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಅಪೇಕ್ಷಣೀಯವಲ್ಲದ ಋಣಾತ್ಮಕ ಪ್ರಭಾವವನ್ನುಂಟುಮಾಡುವ ಸಹಪಾಠಿಗಳು ಇದ್ದಲ್ಲಿ ಮಗುವಿನ ವ್ಯಕ್ತಿತ್ವ ಹಾಳಾಗುತ್ತದೆ. ಇಂಥಾ ಸಂದರ್ಭಗಳಲ್ಲಿ ಶಿಕ್ಷಕರು ಹೆಚ್ಚಿನ ಜವಾಬ್ದಾರಿಯಿಂದ ಬಹುಮುಖ ಪಾತ್ರನಿರ್ವಹಣೆಯ ಮೂಲಕ ವಿದ್ಯಾರ್ಥಿಗಳನ್ನು ಸರಿಯಾದ ಮಾರ್ಗದಲ್ಲಿ ಮುನ್ನಡೆಸಿ, ಅವರಲ್ಲಿ ಸಮಗ್ರ ವ್ಯಕ್ತಿತ್ವ ವಿಕಾಸಗೊಳ್ಳುವಂತೆ ಪ್ರೋತ್ಸಾಹಿಸಬೇಕು. ಸೂಕ್ತ ಪ್ರಕ್ತಿತ್ವದ ನಿರೂಪಣೆಯಿಂದ ವೈಯಕ್ತಿಕ ಜೀವನದ ಕಷ್ಟಗಳು ಕಳೆಯುವುದರ ಜೊತೆಗೆ ಸಮಾಜದ ಸುಖ, ಶಾಂತಿ ಮತ್ತು ನೆಮ್ಮದಿಗೂ ಅವಕಾಶವಾಗುವುದು. ಅಂದರೆ ವ್ಯಕ್ತಿತ್ವ ತಮ್ಮಿಷ್ಟಕ್ಕೂ, ಸಮಾಜದ ಹಿತಕ್ಕೂ ವಿಹಿತವಾಗಿರಬೇಕು. ವೈಯಕ್ತಿಕ ಹಾಗೂ ಸಾಮಾಜಿಕ ಜೀವನದಲ್ಲಿ ಸಾಮರಸ್ಯ, ಅಂದರೆ ಸಹಬಾಳ್ವೆ, ಹೊಂದಾಣಿಕೆ ಗುಣಗಳು ಮಕ್ಕಳಲ್ಲಿ ಬೆಳೆಯುವುದು.[27] ಶಾಲೆಯಲ್ಲಿ ಅಲ್ಲಿನ ಪಾಠಪ್ರವಚನಗಳಿಂದ, ಸಾಂಸ್ಕೃತಿಕ ಚಟುವಟಿಕೆಗಳಿಂದ, ಇನ್ನಿತರ ಸಂಘಜೀವನದಿಂದ ಒಬ್ಬೊಬ್ಬರಲ್ಲೂ, ಅವರವರಿಗೊಪ್ಪುವಂತೆ, ಅವರವರ ಅಭಿರುಚಿಯನ್ನು ಬೆಳೆಸಬೇಕು.

ಮಕ್ಕಳು ಗುಂಪಾಗಿ ಸಮಸ್ಯೆಯನ್ನು ಬಿಡಿಸುವಾಗ, ವಿಷಯವನ್ನು ಚರ್ಚಿಸುವಾಗ, ಉದ್ಯಮವನ್ನು ಆಚರಿಸುವಾಗ ಹಾಗೂ ಇನ್ನಿತರ ಸನ್ನಿವೇಶಗಳಲ್ಲಿ ತೊಡಗಿರುವಾಗ ಮಾನವ ಪ್ರೇಮ, ಸೋದರ ಭಾವನೆ, ಸಹಕಾರಗುಣ, ಹೊಣೆಗಾರಿಕೆಯನ್ನು ಹಂಚಿಕೊಂಡು ನಿರ್ವಹಿಸುವ ಅಭ್ಯಾಸ ಮುಂತಾದವುಗಳು ಸ್ವಾಭಾವಿಕವಾಗಿ ಕಾರ್ಯೋನ್ಮುಖ ಆಗುತ್ತವೆ. ಪಳಗಿ ವ್ಯಕ್ತವಾಗುತ್ತವೆ. ಇಂತಹ ಅವಕಾಶ ದೊರೆತು, ಆ ವಾತಾವರಣದಲ್ಲಿ ಬೆಳೆದ ಮಕ್ಕಳ ವ್ಯಕ್ತಿತ್ವ ನಿರ್ದಿಷ್ಟವಾಗಿ ಪರಿವರ್ತನೆಗೊಂಡು ಇತರರಿಗಿಂತ ಉತ್ತಮವೆನಿಸುತ್ತದೆ.

ವಿಷ್ಣುಶರ್ಮರು ಪಂಚತಂತ್ರದಲ್ಲಿ ಬಹಳ ಉತ್ತಮ ಸೂಕ್ತಿಗಳ ಮೂಲಕ ಕಥೆಯ ಮಧ್ಯೆ ಮಧ್ಯೆ ಅರಸುಕುಮಾರರಿಗೆ ಸೂಕ್ತ ತಿಳುವಳಿಕೆಯನ್ನು ನೀಡುತ್ತಾ, ಜಾಗ್ರತೆಯನ್ನು ಮೂಡಿಸಿದ್ದಾರೆ. ಉದಾಹರಣೆಗೆ:–

---

27. **ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 19, ಪು–506–507.(1962)
ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

बहवो न विरोद्धव्या दुर्जया हि महाजनाः ।

स्फुरन्तमपि नागेन्द्रं भक्षयन्ति पिपीलिकाः ॥[28]

ಇಲ್ಲಿ ಮಹಾಜನರಲ್ಲಿ ಹೇಗಿರಬೇಕು, ಒಗ್ಗಟ್ಟಿನಿಂದ ಏನನ್ನೂ ಸಾಧಿಸಬಹುದು ಎಂಬ ತಿಳುವಳಿಕೆಯನ್ನು ಸೂಚಿಸಿದ್ದಾರೆ. ಅಂದರೆ, ಅನೇಕರೊಡನೆ ವಿರೋಧ ಸಲ್ಲದು. ಮಹಾಜನರನ್ನು ಗೆಲ್ಲುವುದು ಕಷ್ಟ. ಕೆರಳಿ ಏಳುವ ಸರ್ಪವನ್ನೂ ಒಟ್ಟಾದ ಇರುವೆಗಳು ತಿಂದುಹಾಕುತ್ತವೆ.

ಮಕ್ಕಳಿಗೆ ಮಾತ್ರ ಸಾಮಾಜಿಕ ಸನ್ನಿವೇಶಗಳ ಹಿನ್ನೆಲೆ ಇರಬೇಕೆಂದು ಭಾವಿಸಬಾರದು. ಉಪಾಧ್ಯಾಯ ವೃತ್ತಿ, ಶಿಕ್ಷಣ ಸಂಸ್ಥೆಗಳಿಗೂ ಇದು ಅನ್ವಯಿಸುತ್ತದೆ. ಉಪಾಧ್ಯಾಯರಿಗೆ ಆಗಾಗ್ಗೆ ಏರ್ಪಡಿಸುವ ವಿವಿಧ ರೀತಿಯ ಶಿಕ್ಷಣ ಶಿಬಿರದಲ್ಲಿ ಅಂತಹ ಸಾಮಾಜಿಕ ಜೀವನ ಲಭ್ಯವಾಗುತ್ತದೆ. ಇಲ್ಲಿ ಸಹಬಾಳ್ವೆ, ಹೊಂದಾಣಿಕೆ ಅನುಭವಕ್ಕೆ ಬರುತ್ತದೆ. ಈಚೆಗೆ ನಮ್ಮ ದೇಶದಲ್ಲಿ ಏರ್ಪಡಿಸುತ್ತಿರುವ ವಿವಿಧ ವಿಷಯಗಳನ್ನು ಕುರಿತ ವರ್ಕ್ ಶಾಪ್, ಸೆಮಿನಾರ್, ರಿಫ್ರೆಷರ್ ಕೋರ್ಸ್, ಪುನಶ್ಚೇತನ ಶಿಬಿರಗಳು, ವ್ಯಕ್ತಿತ್ವ ವಿಕಸನ ತರಬೇತಿ ಶಿಬಿರ ಮುಂತಾದವುಗಳು ಹೇಳುವುದಾದರೆ ವಿದೇಶಗಳಿಂದ, ಅದರಲ್ಲೂ ಅಮೆರಿಕಾದಿಂದ ಆಮದಾದ ಸಂಪ್ರದಾಯಗಳು. ಇವುಗಳಲ್ಲಿ ಭಾಗವಹಿಸತಕ್ಕ ಉಪಾಧ್ಯಾಯರಿಗೂ, ಇತರರಿಗೂ ತಕ್ಕಷ್ಟು ಸ್ವಾತಂತ್ರ್ಯವಿರುತ್ತದೆ. ವಿಷಯವನ್ನು ಪರಿಶೀಲಿಸುವಾಗ, ಚರ್ಚಿಸಿ ತೀರ್ಮಾನ ಕೈಗೊಳ್ಳುವಾಗ, ಮೌಲ್ಯ ನಿಷ್ಕರ್ಷಿಸುವಾಗ, ವರದಿಯನ್ನು ಸಿದ್ಧಪಡಿಸುವಾಗ, ಗುಂಪು ಗುಂಪುಗಳಾಗಿ ಸೇರುವ ವಿಚಾರ ಸರ್ವವೇದ್ಯವಾದುದು. ಈ ರೀತಿಯ ಅಧ್ಯಯನದಿಂದ ಖಂಡಿತವಾಗಿಯೂ ಹೆಚ್ಚಿನ ಪ್ರಯೋಜನವಾಗುವುದಲ್ಲದೆ, ಉಪಾಧ್ಯಾಯ ವೃತ್ತಿಗೆ ಅಗತ್ಯವಾದ ಮನೋಭಾವಗಳೂ, ಗುಣಧರ್ಮಗಳೂ ವೃದ್ಧಿಯಾಗುವುವೆಂದು ಸಂಶೋಧನೆಗಳು ಮನದಟ್ಟುಮಾಡಿವೆ. ಇಲ್ಲಿ ನಾವು ಒಗ್ಗಟ್ಟಿನಲ್ಲಿ, ಹೊಂದಾಣಿಕೆಯಿಂದ ವಿಷಯಗಳ ವಿಮರ್ಶೆ, ಕಾರ್ಯಯೋಜನೆ, ಕಾರ್ಯಸಾಧನೆ, ಯಶಸ್ವಿಯಾಗಿ ಕಂಡುಕೊಳ್ಳಬಹುದು.

बलीयसा हीनबलो विरोधं न भूतिकामो मनसाऽपि वाञ्छेत् ।

न बध्यतेऽत्यन्तबलो हि यस्मात् व्यक्तं प्रणाशोऽस्ति पतङ्गवृत्तेः ॥[29]

ಏಳಿಗೆಯನ್ನು ಬಯಸುವ. ದುರ್ಬಲನೊಬ್ಬನು ಬಲಿಷ್ಠರೊಡನೆ ಮನಸ್ಸಿನಲ್ಲಿಯೂ ವಿರೋಧವನ್ನು ಕಟ್ಟಿಕೊಳ್ಳಕೂಡದು. ಏಕೆಂದರೆ, ಅತ್ಯಂತ ಬಲಶಾಲಿ ನಾಶಕ್ಕೊಳಗಾಗುವುದಿಲ್ಲ. ಚಿಟ್ಟೆಯ ನಡತೆಯನ್ನು

28. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಾಕೋಲೂಕೀಯ-ಶ್ಲೋ-121, ಪು-505,(1993), ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.
29. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಾಕೋಲೂಕೀಯ-ಶ್ಲೋ-128, ಪು-512,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ನಡೆಯುವವನಿಗೇ ವಿನಾಶವು ಸ್ಪಷ್ಟವಾಗಿರುತ್ತದೆ. ಒಂದು ವಿಶೇಷ ಜಾಗೃತಿಯನ್ನು ವಿಷ್ಣುಶರ್ಮರು ಸೂಚಿಸಿದ್ದಾರೆ.

ಪಂಡಿತ ವಿಷ್ಣುಶರ್ಮರು ಪಂಚತಂತ್ರದ ಎರಡನೇ ತಂತ್ರ ಮಿತ್ರಸಂಪ್ರಾಪ್ತಿಯಲ್ಲಿ ಗೆಳೆಯರನ್ನು ಸಂಪಾದಿಸುವುದರ ಬಗ್ಗೆ ತಿಳಸುತ್ತಾ, ಗೆಳೆತನವನ್ನು ಹೊಂದಿದವರು ಅದನ್ನು ಎಂಥಾ ವಿಷಮಾವಸ್ಥೆಯ ಕಾಲದಲ್ಲೂ ಮೀರದೆ ಪರಸ್ಪರ ಸಹಕಾರ ಮನೋಭಾವವನ್ನು ಹೊಂದಿರಬೇಕು ಎಂಬ ಆದರ್ಶವನ್ನು ಉತ್ತಮ ನಿದರ್ಶನಗಳಂದ ಸ್ಪಷ್ಟಪಡಿಸಿದ್ದಾರೆ. ಸ್ನೇಹ ಬಹಳ ಮುಖ್ಯ, ಅದರಿಂದ ಒಗ್ಗಟ್ಟು, ಒಗ್ಗಟ್ಟಿನಲ್ಲಿ ಯಾವುದೇ ಕಾರ್ಯದಲ್ಲಿ ಯಶಸ್ಸು ಮತ್ತು ಅದರ ಪರಿಣಾಮಗಳನ್ನು ಅತ್ಯಂತ ಪ್ರಭಾವಯುತವಾಗಿ ಉತ್ತಮ ಸನ್ನಿವೇಶಗಳನ್ನು ಒದಗಿಸಿ ಚಿತ್ರಿಸಿದ್ದಾರೆ. ಸಮಾನ ಮನಸ್ಕರು ಸ್ನೇಹಿತರಾಗುವುದು ಸಹಜ. ಆದರೆ ಹಗೆಗಳು ಒಂದಾಗುವುದು ಬಹಳ ಮುಖ್ಯ. ಹಾಗೆ ಗೆಳೆತನವನ್ನು ಹೊಂದಿದವರು ಅದನ್ನು ಎಷ್ಟರಮಟ್ಟಿಗೆ ಪರಿಣಾಮಕಾರಿಯಾಗಿ ಬಳಸಿಕೊಂಡರು ಎಂಬ ಆದರ್ಶವನ್ನು ಸೊಗಸಾಗಿ ತಿಳಸಿದ್ದಾರೆ. ಚೆನ್ನಾಗಿ ಅರಿತ ವಿವೇಕಿಗಳು ಮಿತ್ರರನ್ನು ಸಂಪಾದಿಸಬೇಕು. ಮಿತ್ರರೊಂದಿಗೆ ಕಪಟದ ವ್ಯವಹಾರವನ್ನು ಮಾಡಬಾರದು. ಏಕೆಂದರೆ ಯಾರು ಮಿತ್ರರನ್ನು ಗಳಸಿಕೊಂಡು ಅವರೊಂದಿಗೆ ಕಪಟತನದಿಂದ ವರ್ತಿಸುವುದಿಲ್ಲವೋ ಅವರು ಎಂದಿಗೂ ಪರಾಭವವನ್ನು ಹೊಂದಲಾರರು.

अदेशकालज्ञमनायतिक्षमं यदप्रियं लाघवकारि चात्मनः ।

योऽत्राब्रवीत्कारणवर्जितं वचो न तद्वचः स्यात् विषमेव तद्वचः ॥[30]

ಆಯಾ ದೇಶ ಹಾಗೂ ಕಾಲದ ಸ್ಥಿತಿಯನ್ನರಿಯದೆ, ಮುಂದಾಗುವುದನ್ನು ಗಮನಿಸದೆ, ತನ್ನನ್ನು ಹಗುರಗೊಳಸತಕ್ಕ, ಪ್ರಿಯವಲ್ಲದ, ಸಕಾರಣವಲ್ಲದ ಮಾತನ್ನು ಯಾರಾದರೂ ಇಲ್ಲಿ ಹೇಳದರೆ, ಅದು ಮಾತಲ್ಲ. ಅದು ವಿಷವೇ ಸರಿ. ಅಂದರೆ ಸರಿಯಾಗಿ ಪೂರ್ವಾಪರ ವಿಚಾರಮಾಡಿಕೊಂಡು ನಂತರ ಪ್ರತ್ಯಕ್ಷವಾದರೂ ಪ್ರಮಾಣಿಸಿನೋಡು ಎಂಬಂತೆ ಅರ್ಥೈಸಿಕೊಂಡು ಮಿತ್ರರನ್ನು ಸಂಪಾದಿಸಬೇಕು.ಬಹಳ ಒಳ್ಳೆಯ ಜಾಗ್ರತೆಯನ್ನು ಸೂಚಿಸಿದ್ದಾರೆ.

---

೩೦. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಾಕೋಲೂಕೀಯ-ಶ್ಲೋ-112, ಪು-498, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

## 5 – 4. ಉತ್ತಮ ಅಭ್ಯಾಸಗಳ ಬೆಳವಣಿಗೆ – ನಾಯಕತ್ವ –

## ಉತ್ತಮ ನಾಯಕನಿಗಿರಬೇಕಾದ ಗುಣಗಳು.

ನಾವು ಈಗಾಗಲೇ ವ್ಯಕ್ತಿತ್ವದ ಅರ್ಥ, ವ್ಯಾಖ್ಯೆ, ವ್ಯಾಪ್ತಿ ಇವುಗಳನ್ನು ವಿಚಾರ ಮಾಡುವಾಗ ವ್ಯಕ್ತಿತ್ವ ಮತ್ತು ಸಮಾಜದಲ್ಲಿ ಹೊಂದಾಣಿಕೆ, ಸಹಬಾಳ್ವೆ, ಉತ್ತಮ ಅಭ್ಯಾಸಗಳ ಬೆಳವಣಿಗೆ ಮುಂತಾದವುಗಳು ವ್ಯಕ್ತಿತ್ವ ವಿಕಾಸ ಕಾರ್ಯದಲ್ಲಿ ಎಷ್ಟರಮಟ್ಟಿಗೆ ಪ್ರಭಾವವನ್ನು ಬೀರುತ್ತವೆ ಎಂಬ ಬಗ್ಗೆ ವಿಚಾರ ಮಾಡಿದೆವು. ವಿದ್ಯಾರ್ಥಿಗಳ ಸರ್ವತೋಮುಖ ಬೆಳವಣಿಗೆ ಕಾರ್ಯದಲ್ಲಿ ಪರಿಸರ, ಶಾಲೆ, ಶಿಕ್ಷಕರು, ಪೋಷಕರು ಮಹತ್ವಪೂರ್ಣ ಜವಾಬ್ದಾರಿ ಹೊಂದಿರುತ್ತಾರೆ.

ಮಾನವ ಸಂಘಜೀವಿಯಾಗಿರುವುದರಿಂದ ಬಹಳ ಹಿಂದಿನಿಂದಲೂ, ಹಲವಾರು ರೀತಿಯ ಸಮೂಹಗಳನ್ನು ಸ್ಥಾಪಿಸಿಕೊಂಡಿದ್ದಾನೆ. ಯಾವುದೇ ಒಂದು ಸಮೂಹವು ಒಬ್ಬ ವ್ಯಕ್ತಿ ತನ್ನ ಪ್ರಾಥಮಿಕ ಹಾಗೂ ಮನೋವೈಜ್ಞಾನಿಕ ಅವಶ್ಯಕತೆಗಳೆಲ್ಲವನ್ನೂ ಪೂರೈಸಲು ಸಹಾಯ ಮಾಡುತ್ತದೆ. ಸಮೂಹದಲ್ಲಿ ಅನೇಕ ವಿಧಗಳುಂಟು :–[31]

**ಪ್ರಾಥಮಿಕ ಸಮೂಹ**–ಉದಾಹರಣೆಗೆ:–ಕುಟುಂಬ, ಗ್ರಾಮ ಸಮುದಾಯ, ಆಟದ ಗುಂಪುಗಳು ಇತ್ಯಾದಿ.

**ಅನುಷಂಗಿಕ ಸಮುದಾಯ**:–ಉದಾಹರಣೆಗೆ:– ಸಾಂಸ್ಕೃತಿಕ ಸಂಘಸಂಸ್ಥೆಗಳು. ಸಾಮಾಜಿಕ ಸೇವಾ ಸಂಸ್ಥೆಗಳು ಇತ್ಯಾದಿ.

**ಔಪಚಾರಿಕ ಸಮೂಹ**:– ಉದಾಹರಣೆಗೆ:– ಶಾಲೆ, ಕಛೇರಿ.

**ಅನೌಪಚಾರಿಕ ಸಮೂಹ**:–ಉದಾಹರಣೆಗೆ:– ದೇವಸ್ಥಾನ, ಚರ್ಚ್, ಮಸೀದಿ ಇತ್ಯಾದಿ.

ಇಲ್ಲಿ ನಾವು ಮುಖ್ಯವಾಗಿ ಗಮನಹರಿಸಬೇಕಾಗಿರುವುದು ಶಾಲೆ–ತರಗತಿ ಒಂದು ಸಮೂಹದಂತೆ ಕಾರ್ಯ ನಿರ್ವಹಿಸುತ್ತದೆ. ತರಗತಿಯು ಒಂದು ನಿರ್ದಿಷ್ಟವಾದ ಸಂರಚನೆಯನ್ನು ಹೊಂದಿದೆ. ತರಗತಿಯು ಕಲಿಕೆಗೆ ಮತ್ತು ವ್ಯಕ್ತಿತ್ವ ವಿಕಾಸಕ್ಕಾಗಿ ಒಂದೆಡೆ ಸೇರಿರುವ, ಸಮಾನ ಲಕ್ಷಣ ಹಾಗೂ ಉದ್ದೇಶಗಳನ್ನು ಹೊಂದಿರುವ ಮಕ್ಕಳ ಸಮೂಹವಾಗಿದೆ. ಇದು ತನ್ನದೇ ಆದ ನಾಯಕನನ್ನು ಹೊಂದಿದೆ. ಶಿಕ್ಷಕರೇ ತರಗತಿಯ ನಾಯಕರಾಗಿರುತ್ತಾರೆ. ಸಮುದಾಯದ ಸಾಂಸ್ಕೃತಿಕ ಹಾಗೂ ಸಾಮಾಜಿಕ ಪದ್ಧತಿಗಳು

---

31. **ವಾಮದೇವಪ್ಪ. ಎಚ್. ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–7, ಪು–287.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

ತರಗತಿಯ ನಾಯಕತ್ವದ ಮೇಲೆ ವಿಶಿಷ್ಟ ಪ್ರಭಾವ ಬೀರುತ್ತವೆ. ಹೀಗೆಯೇ ಪ್ರತಿಯೊಂದು ಸಂಘ ಸಂಸ್ಥೆಗಳು ತನ್ನದೇ ಆದ ನಾಯಕನನ್ನು ಹೊಂದಿರುತ್ತದೆ.

ಸಮೂಹದ ನೀತಿಸಂಹಿತೆ ಹೆಚ್ಚಾಗಿ ನಾಯಕನ ಮೇಲೆ ಅವಲಂಬಿಸಿರುತ್ತದೆ. ಸದಸ್ಯರ ಆಲೋಚನೆಗಳು, ಮನೋಧೋರಣೆಗಳು ಹಾಗೂ ವರ್ತನೆಗಳ ಮೇಲೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಶಿಕ್ಷಕನು ಪ್ರಭಾವ ಬೀರುತ್ತಾನೆ. ನಾಯಕನು ಸಮೂಹದ ಸದಸ್ಯರ ಮೇಲೆ ಯಾವ ರೀತಿಯ ನಿಯಂತ್ರಣ ಹೊಂದಿರುತ್ತಾನೆ ಎಂಬುದರ ಆಧಾರದ ಮೇಲೆ ಮೂರು ರೀತಿಯ ನಾಯಕತ್ವದ ನಮೂನೆಗಳನ್ನು ವಿಂಗಡಿಸಬಹುದು. ಅವುಯಾವುವೆಂದರೆ,

**ಅ**. –ನಿರಂಕುಶ ಪ್ರಭುತ್ವ **ಬ**.– ಪ್ರಜಾಸತ್ತಾತ್ಮಕ ಮಾದರಿ ಮತ್ತು **ಕ**.– ನಿರ್ಬಂಧರಹಿತ ಪ್ರಭುತ್ವ ಮಾದರಿ.[32] ಇವುಗಳಲ್ಲಿ ಪ್ರಜಾಸತ್ತಾತ್ಮಕ ಮಾದರಿ ನಾಯಕತ್ವ ಅತ್ಯುತ್ತಮವಾದುದು. ಈ ರೀತಿಯ ಶಿಕ್ಷಕ ನಾಯಕರು ತರಗತಿ ಕಲಿಕೆಯ ಪ್ರಕ್ರಿಯೆಗಳನ್ನು ಯಶಸ್ವಿಯಾಗಿ ಮುನ್ನಡೆಸಬಲ್ಲರು. ಇವರು ಮಕ್ಕಳಲ್ಲಿ ನಾಯಕತ್ವದ ಗುಣಗಳನ್ನು ಗುರುತಿಸಿ, ಅವರನ್ನು ಉತ್ತಮ ನಾಯಕರನ್ನಾಗಿ ರೂಪಿಸಬಲ್ಲರು.

ಇತಿಹಾಸದಲ್ಲಿ ಕಾಣುವ ಒಂದೊಂದು ಸಾಧನೆಯಲ್ಲೂ ಒಬ್ಬೊಬ್ಬ ನಾಯಕನ ಪಾತ್ರವನ್ನು ಗುರುತಿಸಬಹುದು. ಆದರೆ ನಾಯಕನೊಬ್ಬನೇ ಯಾವ ಕಾರ್ಯವನ್ನೂ ಸಾಧಿಸಲಾರ. ಅವನನ್ನು ಒಪ್ಪಿ, ಗೌರವಿಸಿ ಹಿಂಬಾಲಿಸುವ ಪಂಗಡ ಅಗತ್ಯವಾದುದು. ತರಗತಿಯ ವಿಚಾರದಲ್ಲೂ ಅಷ್ಟೆ. ಶಿಕ್ಷಕರನ್ನು ಒಪ್ಪಿ, ಅವರ ವ್ಯಕ್ತಿತ್ವವನ್ನು ಗೌರವಿಸಿ, ಅವರ ನಾಯಕತ್ವವನ್ನು ಮೆಚ್ಚಿ ಸ್ವೀಕರಿಸಿದಾಗಲೇ ಮಕ್ಕಳು ಅವರ ಮಾರ್ಗದರ್ಶನವನ್ನು ಆಪ್ಯಾಯಮಾನವಾಗಿ ಬಳಸಿಕೊಳ್ಳುವರು. ಈ ರೀತಿಯ ಸನ್ನಿವೇಶವನ್ನು ನಿರ್ಮಿಸಿ, ಮಕ್ಕಳ ಮನಸ್ಸನ್ನು ಗೆಲ್ಲುವ ವಿಚಾರದಲ್ಲಿ ಶಿಕ್ಷಕರ ಮನೋವಿಜ್ಞಾನವೂ ಬಹಳ ಮುಖ್ಯ.

ಮೈಕೇಲ್ ಮುಂತಾದವರು ಅನೇಕ ಸಂಶೋಧನೆಗಳನ್ನು ನಡೆಸಿ, ಉಪಾಧ್ಯಾಯರು ಒಬ್ಬ ನಾಯಕನಾಗಿ ಯಾವ ರೀತಿ ವರ್ತಿಸುವುದರಿಂದ ಮಕ್ಕಳಿಗೆ ಉತ್ತಮ ಕಲಿಕಾ ಸನ್ನಿವೇಶವನ್ನು ರೂಪಿಸಿಕೊಡಬಹುದೆಂಬ ಅಂಶವನ್ನು ಬೆಳಕಿಗೆ ತಂದಿರುತ್ತಾರೆ[33] ಅವುಗಳಲ್ಲಿ ಮುಖ್ಯವಾದವುಗಳೆಂದರೆ:–

---

32. **ವಾಮದೇವಪ್ಪ**. **ಎಚ್**. **ವಿ**. ಶೈಕ್ಷಣಿಕ ಮನೋವಿಜ್ಞಾನ, ಅ–7, ಪು–296.(2005)ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005
33. **ವಾಮದೇವಪ್ಪ**. **ಎಚ್**. **ವಿ**. ಶೈಕ್ಷಣಿಕ ಮನೋವಿಜ್ಞಾನ, ಅ–12, ಪು–298.(2005)ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

**1. ಸಹಕಾರ–ಸ್ವಾತಂತ್ರ್ಯಗಳ ಮನೋಭಾವ.**

**2. ದಯೆ ಮತ್ತು ಕ್ಷಮಾಗುಣ**

**3. ಸಹನೆ.**

**4. ವಿಶಾಲ ಆಸಕ್ತಿ.**

**5. ದೈಹಿಕ ಸ್ವರೂಪ ಮತ್ತು ಹಿತಕರವೆನಿಸುವ ವರ್ತನೆ.**

**6. ನ್ಯಾಯಪರತೆ ಮತ್ತು ಪಕ್ಷವಿರಹಿತ ಗುಣ.**

**7. ಸರಸ ಮತ್ತು ಹಾಸ್ಯ.**

**8. ಒಳ್ಳೆಯ ಭಾವನೆ ಮತ್ತು ಒಂದೇ ರೀತಿಯ ಮನೋಭಾವ.**

**9. ಅನುಸರಣೆ, ಅಗತ್ಯಕ್ಕೆ ತಕ್ಕ ಅವಕಾಶ, ಸೂಕ್ತ ರೀತಿಯ ಪ್ರಶಂಸೆ.**

**10. ಬೋಧನೆಯ ವಿಷಯದಲ್ಲಿ ಪಾಂಡಿತ್ಯ.**

ಶಿಕ್ಷಕರು ಪಡೆದಿರುವ ವ್ಯಕ್ತಿತ್ವದಲ್ಲಿ ವೈವಿಧ್ಯತೆಗಳಿರುತ್ತವೆ. ಹಾಗೆಯೇ ಅವರು ವಹಿಸುವ ತರಗತಿ ನಾಯಕತ್ವದ ಸ್ವರೂಪದಲ್ಲೂ ವೈವಿದ್ಯತೆಗಳಿರುತ್ತವೆ. ಬ್ರಾಡ್ ಫೀಲ್ ಮತ್ತು ಆಪಿಟ್ ಎಂಬುವವರು ನಡೆಸಿದ ಸಂಶೋಧನೆಯಲ್ಲಿಯೂ ಪ್ರಜಾಸತ್ತಾತ್ಮಕ ಮಾದರಿ ತತ್ವವನ್ನನುಸರಿಸಿ ನಾಯಕತ್ವವನ್ನು ವಹಿಸುವ ಶಿಕ್ಷಕರು–ವಿದ್ಯಾರ್ಥಿಗಳಲ್ಲಿ ಉತ್ತಮ ವ್ಯಕ್ತಿತ್ವ ನಿರ್ಮಾಣ ಮಾಡಬಲ್ಲರೆಂದು ಸ್ಥಿರಪಟ್ಟಿದೆ. ಇಂಥ ಉಪಾಧ್ಯಾಯರ ಬಗ್ಗೆ ಮಕ್ಕಳಲ್ಲಿ ಅಭಿಮಾನ, ಆಸಕ್ತಿ, ಗೌರವಗಳು ತಾನಾಗಿಯೇ ಮೂಡುತ್ತವೆ. ಅವರ ನಾಯಕತ್ವವನ್ನು ಒಪ್ಪಿ ಸಮಾಜಕ್ಕೆ ಸಹಕಾರಿಯಾಗುವ ಸನ್ನಿವೇಶಗಳಲ್ಲಿ ಪರಿಣಾಮಕಾರಿಯಾಗಿ ಕಲಿವನ್ನು ನಡೆಸುವರು.[34]

## ಉತ್ತಮ ನಾಯಕತ್ವದ ಲಕ್ಷಣಗಳು

ತರಗತಿಯಲ್ಲಿ ಯಶಸ್ವೀ ನಾಯಕತ್ವ ವಹಿಸಬಲ್ಲ ಉಪಾಧ್ಯಾಯರ ಲಕ್ಷಣಗಳನ್ನು ಸಂಶೋಧಕರು ನಿಷ್ಕರ್ಷೆ ಮಾಡಿ ಈ ರೀತಿ ಉಲ್ಲೇಖಿಸಿದ್ದಾರೆ.

1. ತರಗತಿಯಲ್ಲಿ ಮಕ್ಕಳು ತಮ್ಮ ಪಾಠ ಪ್ರವಚನ, ಉದ್ಯಮಗಳ ಗುರಿಯನ್ನು ತಾವೇ ಕಲೆತು ನಿರ್ಣಯಿಸಿ ಕೊಳ್ಳಲು ಅವಕಾಶ ಮಾಡಿ ಕೊಡುವರು. ಆಚರಣೆಯ ಕ್ರಮವನ್ನು ಅರಿಯಲು ಮಕ್ಕಳಿಗೆ ಸಹಾಯ ಮಾಡುವರು.

---

**34. ವೀರಪ್ಪ. ಎನ್. ಎಸ್.** ಶಿಕ್ಷಣದಲ್ಲಿ ಮನೋವಿಜ್ಞಾನ, ಅ – 12.ಪು–299–300.(1962) ‘
ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

2. ಮಕ್ಕಳು ಆಯಾ ವಯಸ್ಸಿನಲ್ಲಿ ಪ್ರಕಾಶಕ್ಕೆ ಹಾತೊರೆಯುತ್ತಿರುತ್ತಾರೆ. ಅವರ ಸಾಮಾಜಿಕ ಆಕಾಂಕ್ಷೆಗಳು ತೃಪ್ತಿಗೊಳ್ಳಲು ಅವಕಾಶ ಕಲ್ಪಿಸುವರು.

3. ಉತ್ತಮ ಕಾರ್ಯ ಮಾಡಿದ ಮಕ್ಕಳನ್ನು ಪ್ರಶಂಸಿಸಿ, ಇಲ್ಲದವರನ್ನು ಎಚ್ಚರಿಸಿ, ಸೂಕ್ತವೂ, ಪಕ್ಷಪಾತವಿಲ್ಲದ್ದೂ ಆದ ಮಾರ್ಗದರ್ಶನ ನೀಡುವರು.

4. ತಮ್ಮ ವೈಯಕ್ತಿಕ ಆಶೋತ್ತರಗಳನ್ನೂ, ಮನೋಧರ್ಮವನ್ನೂ ಬದಿಗಿರಿಸಿ, ಮಕ್ಕಳ ಬೆಳವಣಿಗೆಗೆ ಸೂಕ್ತವೆನಿಸುವಂತೆ ವರ್ತಿಸುವರು.

5. ಮಕ್ಕಳು ಸಾಧಿಸಿದ ಅಭಿವೃದ್ಧಿಯ ಮೌಲ್ಯ ನಿರ್ಧಾರ ಕಾರ್ಯದಲ್ಲಿ ಮಕ್ಕಳೂ ಪಾತ್ರ ವಹಿಸುವ ಅವಕಾಶವನ್ನು ಕಲ್ಪಿಸಿ, ಅವರ ತಪ್ಪುನೆಪ್ಪುಗಳನ್ನು ಅವರೇ ಅರಿತುಕೊಳ್ಳಲು ಸಹಾಯ ಮಾಡುವರು.

ನಾಯಕ ಅಥವಾ ಗುಂಪಿನ ನೇತಾರನಾಗಬಯಸುವವನು ಮೈಯೆಲ್ಲಾ ಎಚ್ಚರವಾಗಿರಬೇಕು. ಯಾವುದೇ ಅಪಸ್ವರ ಬರದಂತೆ ಸ್ವಚ್ಛ ಮನಸ್ಸಿನಿಂದ ಶುದ್ಧಹಸ್ತನಾಗಿ ಕೆಲಸ ಮಾಡಬೇಕು. ಗುಂಪಿಗೆ ನಾಯಕನಾದ ಬಳಿಕ ಹೊಗಳಿಕೆ- ತೆಗಳಿಕೆಗಳು ಬಂದರೆ ಧೃತಿಗೆಡದೆ ಸಮಚಿತ್ತದಿಂದ ಎದುರಿಸಬೇಕು. ಸ್ತುತಿಯೊಂದಿಗೆ ನಿಂದೆಯನ್ನೂ ಸ್ವೀಕರಿಸಲು ಸಿದ್ಧನಾಗಿ दुःखेष्वनुद्विग्नमनाः सुखेषु विगतस्पृहः।[35] ಎಂಬ ಗೀತಾವಾಕ್ಯದಂತೆ ಸುಖ-ದುಃಖಗಳನ್ನು ಸಮನಾಗಿ ಸ್ವೀಕರಿಸಬಲ್ಲ ಸ್ಥಿತಪ್ರಜ್ಞನಂತಿರಬೇಕು. ಹೀಗಿದ್ದ ನಾಯಕನು ಮಾತ್ರ ಮನೋವಿಕಲತೆಗೊಳಗಾಗದೆ ಸಮರ್ಥ ರೀತಿಯಲ್ಲಿ ನೇತಾರನಾಗಿ ಸ್ಥಾನ ನಿಭಾಯಿಸಿಕೊಂಡು ಹೋಗಬಲ್ಲನು. ಇದು ಪ್ರಜಾನಾಯಕನಾದ ಒಬ್ಬ ರಾಜನಿಗೂ ಅನ್ವಯವಾಗುತ್ತದೆ.

न गणस्याग्रतो गच्छेत्सिद्धे कार्ये समं फलम् ।

यदि कार्यविपत्तिः स्यात् मुखरस्तत्र हन्यते ॥[36]

ಅಂದರೆ "ಗುಂಪಿನ ಮುಂದಾಳಾಗಿ ಹೋಗುವವರಿಗೆ ಎಚ್ಚರಿಕೆಯ ಘಂಟೆಯಾಗಿದೆ. ಗುಂಪಿನ ಮುಂದಾಳಾಗಿ ಹೋಗಬಾರದು. ಕಾರ್ಯ ಯಶಸ್ವಿಯಾದರೆ ಫಲವನ್ನು (ಗುಂಪಿನಲ್ಲಿ ಎಲ್ಲರೂ)ಸಮನಾಗಿ ಹಂಚಿಕೊಳ್ಳುತ್ತಾರೆ. ಒಂದು ವೇಳೆ ಕಾರ್ಯ ವಿಫಲವಾದರೆ ಆಗ ಮುಂದಾಳಾಗಿ ಹೋದವನನ್ನು ಎಲ್ಲರೂ ತೆಗಳುತ್ತಾರೆ.

---

35. **ಭಗವದ್ಗೀತೆ**ಯ ದ್ವಿತೀಯ ಅಧ್ಯಾಯ, ಶ್ಲೋ - 56.
36. **ಭಟ್. ವಿ.ಎನ್,** ಜ್ಞಾನದೀಪ, ಅ-54 (ಶಾರ್ಙ್ಗಧರ ಪದ್ಧತಿ) ಪು-103.(1993) ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ-577201

ಈ ರೀತಿಯ ಗುಣಗಳನ್ನು ಹೊಂದಿರುವ ಉಪಾಧ್ಯಾಯರೆಲ್ಲರೂ ನಿಜವಾಗಿಯೂ ಮಕ್ಕಳಿಗೆ ಒಳ್ಳೆಯ ನಾಯಕರಾಗಿ ವರ್ತಿಸಿ, ಅವರ ಕಲಿಕೆಯನ್ನು ಪರಿಣಾಮಕಾರಿಯಾಗಿಯೂ, ಫಲದಾಯಕವಾಗಿಯೂ ಮಾಡುವರು. ಇದೇ ಮಾದರಿ ಲಕ್ಷಣಗಳನ್ನು ಪ್ರತಿಭಾವಂತ ಶಿಕ್ಷಕ ವಿಷ್ಣುಶರ್ಮರು ಹೊಂದಿದ್ದು ಅತ್ಯಂತ ಯಶಸ್ವಿಯಾಗಿ ರಾಜನಂದನರನ್ನು ಬಹಳ ಚಾಕಚಕ್ಯತೆಯಿಂದ ಅದರಲ್ಲೂ ಅಂಥಹ ಮಂದಮತಿಗಳಿಗೆ ಉತ್ತಮ ಶಿಕ್ಷಣವನ್ನು ಕೊಟ್ಟು, ರಾಜನೀತಿ ನಿಪುಣರನ್ನೂ, ಬದುಕಿನ ರೀತಿನೀತಿಗಳನ್ನು ಅರಿತವರನ್ನಾಗಿಯೂ ಮಾಡಿದ್ದಾರೆ. ಇದು ಅವರ ಶಿಕ್ಷಕ ನಾಯಕತ್ವಕ್ಕೆ ದ್ಯೋತಕವಾಗಿದೆ.



## 5 - 5. पञ्चतन्त्रस्य –द्वितीयं तन्त्रम्– "मित्रसम्प्राप्तिः –

### ಕಥೆಗಳ ವಿಶ್ಲೇಷಣೆ

ಮಿತ್ರಲಾಭ ಅಥವಾ ಮಿತ್ರಸಂಪ್ರಾಪ್ತಿಯಲ್ಲಿ ಕಂಡುಬರುವ ಪ್ರಧಾನ ಪಾತ್ರವರ್ಗವೆಂದರೆ– ಚಿತ್ರಗ್ರೀವ ಎಂಬ ಹೆಸರಿನ ಪಾರಿವಾಳ, ಲಘುಪತನಕ ಎಂಬ ಹೆಸರಿನ ಕಾಗೆ, ಹಿರಣ್ಯಕ ಎಂಬ ಹೆಸರಿನ ಇಲಿ, ಮಂಥರಕನೆಂಬ ಆಮೆ, ಚಿತ್ರಾಂಗನೆಂಬ ಜಿಂಕೆ. ಗೆಳೆತನದ ಮಹತ್ವವನ್ನು ಒಗ್ಗಟ್ಟಿನ ಬಲವನ್ನು ಸಂಘಟನೆಯ ಶಕ್ತಿಯನ್ನು ಎತ್ತಿಹಿಡಿಯಲು ಪ್ರಾರಂಭದಲ್ಲಿ ಬರುವ ಕಾಗೆ ಮತ್ತು ಇಲಿಯ ಸ್ನೇಹತ್ವ, ಆಮೆ ಜಿಂಕೆಗಳ ಮಿತ್ರತ್ವ ಬಹಳ ಸೊಗಸಾಗಿ ಚಿತ್ರಿಸಲ್ಪಟ್ಟಿದೆ. ಆಪತ್ಕಾಲದಲ್ಲಿ ಒಂದಕ್ಕೊಂದು ಸ್ಪಂದಿಸಿ, ಸಹಕರಿಸುತ್ತಾ, ಮಾನವರೂ ಸಹ ಈ ತತ್ವವನ್ನು ತಿಳಿದುಕೊಳ್ಳಲು ಉತ್ತಮ ಪ್ರದರ್ಶನವನ್ನು ಕೊಟ್ಟು ಉಪದೇಶಿಸುತ್ತವೆ. ಈ ತಂತ್ರದಲ್ಲಿ ಆರು ಉಪಕಥೆಗಳಿದ್ದು ಕೌಶಲ್ಯ ಹಾಗೂ ಚಾಣಾಕ್ಷತನದಿಂದ ದುರ್ಬಲ ಪ್ರಾಣಿಗಳೂ ಸಹ ಕಾರ್ಯವನ್ನು ಹೇಗೆ ಸಾಧಿಸಬಹುದು ಎಂಬುದಕ್ಕೆ ನಿದರ್ಶನಗಳಾಗಿವೆ. ಬೇರೆ ಬೇರೆ ಆಹಾರಗಳನ್ನು ತಿಂದು ವಿಭಿನ್ನ ಪರಿಸರದಲ್ಲಿ ಬದುಕುವ ಪ್ರಾಣಿಗಳು ಒಳ್ಳೆಯ ಮಿತ್ರತ್ವದಿಂದ ವಿಭಿನ್ನ ಸಾಹಸಗಳಲ್ಲಿ ತೊಡಗುತ್ತವೆ. ವಿಷ್ಣುಶರ್ಮರು ಬದುಕಿನ ನಿತ್ಯವ್ಯವಹಾರಗಳ ಅನುಭವಗಳನ್ನೇ ಒದಗಿಸಿ ಬಹಳ ಸರಳವಾಗಿ ತಿಳಿಹೇಳುತ್ತಾರೆ:–

एह्यागच्छ समाश्रयासनमिदं कस्माच्चिराद् दृश्यसे
का वार्ता अतिदुर्बलोऽसि कुशलं प्रीतोऽस्मि ते दर्शनात् ।

एवं ये समुपागतान्प्रणयिनः प्रह्लादयन्त्यादरात् तेषां
युक्तमशङ्कितेन मनसा हर्म्याणि गन्तुं सदा ॥[37]

ಅಂದರೆ, "ಬನ್ನಿ ಬನ್ನಿ, ಈ ಆಸನದಲ್ಲಿ ಕುಳಿತಿರಿ, ಬಹಳ ಕಾಲದಿಂದ ಏಕೆ ಕಾಣಲಿಲ್ಲ? ಸಮಾಚಾರವೇನು? ಬಹಳ ದುರ್ಬಲರಾಗಿದ್ದೀರಲ್ಲಾ, ಕುಶಲವೇ? ನಿಮ್ಮನ್ನು ಕಂಡು ಬಹಳ ಸಂತಸವಾಯಿತು "ಈ ರೀತಿಯಲ್ಲಿ ಯಾರು ಬಂದ ಮಿತ್ರರನ್ನು ಸೌಹಾರ್ದದಿಂದ ಸಂತೋಷಪಡಿಸುವರೋ ಅಂಥವರ ಮನೆಗೆ ಯಾವ ಅನುಮಾನವೂ ಇಲ್ಲದ ಮನಸ್ಸಿನಿಂದ ಯಾವಾಗಲೂ ಹೋಗುವುದು ಸರಿಯಾದುದು.

ಈ ಅಧ್ಯಾಯದಲ್ಲಿ ವಿಶ್ಲೇಷಣೆ ನಡೆಸಿರುವ– ಶೈಕ್ಷಣಿಕ ಅಂಶಗಳ ಪ್ರಾಮುಖ್ಯತೆ, ವ್ಯಕ್ತಿಯಲ್ಲಿನ ಸೃಜನಶೀಲತೆ, ವ್ಯಕ್ತಿತ್ವ–ಅದರ ವಿಕಾಸದಲ್ಲಿ ಶಾಲೆ ಮತ್ತು ಶಿಕ್ಷಕರ ಪಾತ್ರ, ವ್ಯಕ್ತಿತ್ವ ಮತ್ತು ಹೊಂದಾಣಿಕೆ,

---

37. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಸಂಪ್ರಾಪ್ತಿ– ಶ್ಲೋ–66, ಪು–345,346,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಸಹಬಾಳ್ವೆ ಹಾಗೂ ನಾಯಕತ್ವದ ಲಕ್ಷಣಗಳು ಇತ್ಯಾದಿಗಳನ್ನು ಕುರಿತು ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ಚಿಂತನೆ ನಡೆಸಲಾಗಿದೆ.

ಪ್ರಸ್ತುತ ವಿಷ್ಣುಶರ್ಮ ವಿರಚಿತ ಪಂಚತಂತ್ರದಲ್ಲಿ ಅಳವಡಿಸಿರುವ ವ್ಯವಸ್ಥಿತ ಶಿಕ್ಷಣ ಯೋಜನೆ, ವ್ಯಕ್ತಿತ್ವ ನಿರ್ಮಾಣಕ್ಕೆ ಅವಶ್ಯಕವಾಗಿರುವ ಬೋಧನಾ ಕ್ರಮ, ಸನ್ನಿವೇಶ, ನೀತಿನಿಯಮಗಳು ಎಷ್ಟರಮಟ್ಟಿಗೆ ಪರಿಣಾಮ ಕಾರಿಯಾಗಿದೆ ಎಂಬುದನ್ನು ಪರಿಶೀಲಿಸೋಣ. ರಾಜಕುಮಾರರಲ್ಲಿದ್ದ ಮೂಲ ಮನೋಧೋರಣೆಗಳು, ವರ್ತನೆಗಳು, ಸಹವಾಸ ದೋಷ, ಸ್ವೇಚ್ಛಾಪ್ರವೃತ್ತಿ ಇತ್ಯಾದಿಗಳ ಬಗ್ಗೆ ಸೂಕ್ಷ್ಮವಾಗಿ ಗಮನಿಸಿ, ಅವರುಗಳ ಋಣಾತ್ಮಕ ವರ್ತನೆಗಳನ್ನು, ಧನಾತ್ಮಕವಾಗಿ ಪರಿವರ್ತಿಸಲು ವಿಷ್ಣುಶರ್ಮರು ಅಂಥಹ ಹಿರಿಯ ವಯಸ್ಸಿನಲ್ಲಿ ಆದರ್ಶ ಪರಿಶ್ರಮದಿಂದ ತಮ್ಮನ್ನು ತಾವು ಎಷ್ಟರಮಟ್ಟಿಗೆ ತೊಡಗಿಸಿದ್ದಾರೆಂಬುದರ ಕುರಿತು ಪಂಚತಂತ್ರದ ದ್ವಿತೀಯ ತಂತ್ರವಾದ ಮಿತ್ರಸಂಪ್ರಾಪ್ತಿ–ಮಿತ್ರಲಾಭದಲ್ಲಿ ಕಂಡು ಬರುವ ಕಥೆಗಳ ಬಗ್ಗೆ ವಿಚಾರ ಮಾಡೋಣ.

ದಿನವೂ ಸೂಕ್ತ ಸಮಯದಲ್ಲಿ ಕಥೆಗಳನ್ನು ಕೇಳುತ್ತ, ಕೇಳುತ್ತಾ ಕಥೆಗಿಂತಲೂ ಕಥೆಯ ಹಿಂದಿರುವ ವಿಚಾರಗಳನ್ನು ಕಥೆಯ ನಡುನಡುವೆ ಕೆಲವು ಒಳ್ಳೆಯ ಪ್ರಶ್ನೆಗಳು ಉದ್ಭವಿಸಿದ್ದನ್ನು, ಧೈರ್ಯದಿಂದ ಸ್ವತಂತ್ರವಾಗಿ ಕೇಳಿ, ಅರ್ಥೈಸಿಕೊಳ್ಳುವಷ್ಟರಮಟ್ಟಿಗೆ ಕೆಲವೇ ದಿನಗಳಲ್ಲಿ ಪರಿವರ್ತನೆಗೊಂಡಿದ್ದ ರಾಜಕುಮಾರರನ್ನು ಕಂಡು ವಿಷ್ಣುಶರ್ಮರಿಗೆ ಬಹಳ ಸಂತೋಷವಾಯಿತು ಹಾಗೂ ಸಮಾಧಾನವಾಯಿತು. ಏಕೆಂದರೆ ಅವರ ಬೋಧನಾ ಮಾಧ್ಯಮ–ಕಥಾನಿರೂಪಣಾ ವಿಧಾನದ ಆಯ್ಕೆ ಪರಿಣಾಮಕಾರಿಯಾಗಿದೆ ಎಂಬುದಕ್ಕೆ. ಇಂಥಹ ವಿದ್ಯಾರ್ಜನೆಯ ಪ್ರಗತಿ ಕಂಡುಬರುವ ಸಂದರ್ಭದಲ್ಲಿ ಒಬ್ಬ ಉತ್ತಮ ಶಿಕ್ಷಕನಿಗೆ ಬಹಳ ಸಂತೋಷ ಹಾಗೂ ತನ್ನ ವೃತ್ತಿಯಲ್ಲಿ ಸಾರ್ಥಕತೆ ಬಗ್ಗೆ ಹೆಮ್ಮೆಯೆನಿಸುತ್ತದೆ. ಇವರಿಗೆ ನ್ಯಾಯ, ರಾಜನೀತಿಧರ್ಮ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರಗಳನ್ನು ಕ್ರಮವಾಗಿ ಬೋಧಿಸುವ ಕಾಲ ಸನಿಹವಾಗುತ್ತಿದೆ ಎಂದೆನಿಸಿತು. ಆದ್ದರಿಂದ ಪಂಚತಂತ್ರಗಳಲ್ಲಿ ಮುಖ್ಯವಾದ ಮಿತ್ರಸಂಪಾದನೆಯನ್ನು ಕಥೆಗಳ ಮೂಲಕ ಸೂಚ್ಯವಾಗಿ ತಿಳಿಸಿಕೊಡಬೇಕೆಂದು ಸಿದ್ಧರಾದರು.[38]

ಇಲ್ಲಿ ದ್ವಿತೀಯ ಸೂತ್ರ ಮಿತ್ರಸಂಪ್ರಾಪ್ತಿ ಅಥವಾ ಮಿತ್ರಲಾಭ ಅಥವಾ ಸುಹೃಲ್ಲಾಭದ ವ್ಯವಸ್ಥಿತ ನೀತಿ ಕಥಾಗುಚ್ಛ ನಿರೂಪಣಾ ಪ್ರಾರಂಭದಲ್ಲಿ ಶೈಕ್ಷಣಿಕ ಮನೋವಿಜ್ಞಾನದ ನಿಯಮದಂತೆ ಅರಸುಕುಮಾರರಿಗೆ ಉತ್ತಮ ಪ್ರೇರಣೆಯನ್ನುಂಟುಮಾಡುತ್ತದೆ.

---

38. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ–2, ಪು–107. ವರ್ಣಿಲ, 39/2–11, ಕಲ್ಯಾಣಿಗಾರ್ಡನ್, BSK 1st stage, ಬೆಂಗಳೂರು–560050.(2015)

असाधना अपि प्राज्ञा बुद्धिमन्तो बहुश्रुताः ।

साधयन्त्याशु कार्याणि काकाखुमृगकूर्मवत् ॥[39]

ಅಂದರೆ, ಬುದ್ಧಿವಂತರಾದವರು ಸಾಧನಗಳೂ, ಧನವೂ ಇಲ್ಲದೆ ಒಬ್ಬರೊಂದಿಗೊಬ್ಬರು ಸ್ನೇಹ ಬೆಳೆಸಿಕೊಂಡು ತಮಗೆ ಬೇಕಾದ ಕಾರ್ಯಗಳನ್ನು ಕಾಕಕೂರ್ಮಮೃಗಮೂಷಿಕಗಳ ಹಾಗೆ ಚೆನ್ನಾಗಿ ನೆರವೇರಿಸಿಕೊಳ್ಳುವರು ಎಂದು ವಿಷ್ಣುಶರ್ಮರು ಪ್ರಾರಂಭಿಸುವುದೇ ತಡ, ರಾಜಕುಮಾರರು ಬಹಳ ಕುತೂಹಲದಿಂದ ಕೇಳುತ್ತಾರೆ. ಗುರುಗಳೇ ಕಾಕಕೂರ್ಮಮೃಗಮೂಷಿಕಗಳಿಗೆ ಹೇಗೆ ಸ್ನೇಹವಾಯಿತು? ಅವು ಯಾವ ಕಾರ್ಯಗಳನ್ನು ನೆರವೇರಿಸಿಕೊಂಡವು? ನಮಗೆ ವಿವರವಾಗಿ ತಿಳಿಸಬೇಕು ಎಂದು ಹೇಳುತ್ತಾರೆ.

ವಿದ್ಯಾರ್ಥಿಗಳಲ್ಲಿ ಕಥೆ ಕೇಳುವ ಬಗ್ಗೆ ಅಪಾರವಾದ ಪ್ರೀತಿ, ಶ್ರದ್ಧೆ ಹಾಗೂ ಕುತೂಹಲವನ್ನು ವಿಷ್ಣುಶರ್ಮರು ಬೆಳೆಸಿದ್ದರು. ಈ ಲಕ್ಷಣ ಒಬ್ಬ ಪ್ರತಿಭಾನ್ವಿತ ಶಿಕ್ಷಕನ ಗುಣ. ಗಲ್ಲಕ್ಕೆ ಕೈಕೊಟ್ಟು ಗುರುಗಳು ಹೇಳುವುದನ್ನು ಕೇಳಲು ಕಾತರರಾಗಿ ಕುಳಿತಿದ್ದ ರಾಜಕುಮಾರರನ್ನು ಉದ್ದೇಶಿಸಿ ವಿಷ್ಣುಶರ್ಮರು ನಗುನಗುತ್ತಾ ಹೇಳುತ್ತಾರೆ– "ರಾಜ್ಯಕ್ಷೇಮ, ರಾಜ್ಯವಿಸ್ತಾರ, ಸಂಪತ್ತಿನ ಗಳಿಕೆ, ಶಾಂತಿ ಸಮಾಧಾನದ ಪ್ರಜೆಗಳು ಇವೆಲ್ಲದಕ್ಕೂ ರಾಜನ ಪುಣ್ಯ ಹೇಗೆ ಕಾರಣವೋ ಹಾಗೆ ಅವನ ರಾಜನೀತಿಯೂ ಮುಖ್ಯವಾಗಿರುತ್ತದೆ. ವೈರಿಗಳನ್ನು ಮಿತ್ರರನ್ನಾಗಿಸುವ ಚಾಕಚಕ್ಯತೆ ಅವನಿಗಿರಬೇಕಾಗುತ್ತದೆ. ಮಿತ್ರರ ಸಂಪಾದನೆಗಾಗಿ ಉಪಾಯಗಳನ್ನು ಹುಡುಕಬೇಕಾಗುತ್ತದೆ. ಹಾಗೆ ಮಾಡಿಕೊಂಡ ಮಿತ್ರರು ಚಿಕ್ಕವರಾಗಿರಲಿ – ದೊಡ್ಡವರಾಗಿರಲಿ, ದುರ್ಬಲರಾಗಿರಲಿ – ಸಬಲರಾಗಿರಲಿ, ಅವರಿಂದ ಉಪಕಾರವು ಸಂದಿಗ್ಧ ಸಂದರ್ಭದಲ್ಲಿ ಆಗಿಯೇ ಆಗುತ್ತದೆ.

ಮಿತ್ರಸಂಪ್ರಾಪ್ತಿಯ ಮೊದಲ ಉದಾಹರಣೆಯಾಗಿ ಪಾರಿವಾಳ ಮತ್ತು ಇಲಿಯ ಮಿತ್ರತ್ವದ ಪ್ರಸಂಗವನ್ನು ಚಿತ್ರಗ್ರೀವ ಕಪೋತರಾಜ, ಹಿರಣ್ಯಕ ಇಲಿ ಮತ್ತು ಲಘುಪತನಕ ಕಾಗೆ ಕಥೆಯ ಮೂಲಕ ಸ್ವಾರಸ್ಯವಾದ ಶ್ರುತಿಯಲ್ಲಿ ಹೇಳುತ್ತಾರೆ "ಒಗ್ಗಟ್ಟಿನಲ್ಲಿ ಬಲವಿದೆ" ಎಂಬ ಅಂಶವನ್ನು ರಾಜಕುಮಾರರಿಗೆ ತಿಳಿಹೇಳುತ್ತಾರೆ. ಬೇಡನ ಬಲೆಯಿಂದ ಬಂಧಿತರಾಗಿದ್ದ ನೂರಾರು ಸಂಖ್ಯೆಯ ಪಾರಿವಾಳಗಳು, ಬುದ್ಧಿವಂತನಾಗಿದ್ದ ಮುದಿ ಪಾರಿವಾಳದ ಸಲಹೆಯನ್ನು ಪಡೆದು ಎಲ್ಲರೂ ಒಟ್ಟಿಗೆ ಹಾರಿ ಒಂದು ವಿಪತ್ತಿನಿಂದ ಪಾರಾದವು. ಆದರೆ ಬಲೆಯಿಂದ ಬಂಧಮುಕ್ತರಾಗಬೇಕಲ್ಲಾ ಎಂದು ಯೋಚಿಸಿ, ತಮ್ಮೊಡೆಯನಾದ ಚಿತ್ರಗ್ರೀವನ ಸಲಹೆಯನ್ನು ಬಯಸಿದವು. ಚಿತ್ರಗ್ರೀವನು ಹಿರಣ್ಯರೋಮನ ಹತ್ತಿರ ಕರೆದುಕೊಂಡು ಹೋಗಿ ಪಕ್ಷಿಗಳ ಅವಸ್ಥೆಯನ್ನು ತಿಳಿಸಿ, ಸಹಾಯ ಕೋರಿದನು. ಎಂಥಹವರಿಗೂ ಕೆಲವೊಮ್ಮೆ ಕಷ್ಟದ ಪರಿಸ್ಥಿತಿ

39. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರ, ಮಿತ್ರಸಂಪ್ರಾಪ್ತಿ–ಶ್ಲೋ–1 ಪು–305, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಎದುರಾಗುವುದು ಎನ್ನುವುದಕ್ಕೆ ಚಿತ್ರಗ್ರೀವನು ಬಹಳ ಸೊಗಸಾಗಿ ಹೇಳುತ್ತಾನೆ. ಸೂರ್ಯಚಂದ್ರರಿಗೂ ಗ್ರಹಣವುಂಟು. ಚಂದ್ರನಿಗೂ ವೃದ್ಧಿ ಕ್ಷಯವುಂಟು. ಸಮುದ್ರಕ್ಕೂ ಉಬ್ಬರ ಇಳಿತ ಉಂಟು. ಚಂದ್ರನ ಅರೆಯಂತೆ ಭಾಗ್ಯ – ಕಪ್ಪುಗಳು ಮೇಲೆ ಕೆಳಗೆ ಹೋಗಿ ಬರುತ್ತಿರುತ್ತದೆ. ಆದ್ದರಿಂದ ವಿಧಿಯೇ ಬಲವತ್ತರವಾದದ್ದು. ಈ ಮಾತುಗಳನ್ನು ಮೆಚ್ಚಿ, ಚಿತ್ರಗ್ರೀವನನ್ನು ಬಲೆಯಿಂದ ಬಿಡಿಸಲು ಇಲಿಯು ಮುಂದಾಯಿತು. ಆಗ ಚಿತ್ರಗ್ರೀವನು "ಗೆಳೆಯ ಮೊದಲು ನನ್ನನ್ನು ನಂಬಿ ಬಂದ ಪರಿವಾರವನ್ನು ಬಿಡಿಸು, ನಂತರ ನನ್ನನ್ನು" ಎಂದು ಹೇಳಿದಾಗ ಇಲಿಯು ಚಿತ್ರಗ್ರೀವನ ರಾಜನೀತಿಯನ್ನು ಮೆಚ್ಚಿ, ಒಂದು ನೆನಪಿನಲ್ಲಿಡಬೇಕಾದ ವಿಷಯವನ್ನು ತಿಳಿಸಿದನು. "ಆಪತ್ಕಾಲಕ್ಕೆಂದು ಸಂಪತ್ತನ್ನು ರಕ್ಷಿಸಿಡಬೇಕು. ಸಂಪತ್ತು ಪರಿವಾರ ಎರಡನ್ನೂ ರಕ್ಷಿಸಬೇಕಾದ ಸಂದರ್ಭ ಬಂದಾಗ ಮೊದಲು ಪರಿವಾರವನ್ನು ರಕ್ಷಿಸಬೇಕು. ಏಕೆ ಗೊತ್ತೇ? ರಾಜನಿದ್ದರೆ ಪರಿವಾರ ಉಂಟು–ಸಂಪತ್ತೂ ಇರುತ್ತದೆ.

ಹಿರಣ್ಯಕನು ಮುಂದುವರಿಸಿ, "ಆದರೂ ಆಶ್ರಿತರನ್ನು ರಕ್ಷಿಸಬೇಕಾದದ್ದು ನೃಪಧರ್ಮ. ಧನಕನಕ, ವೈಭವ, ತ್ಯಾಗ, ಸ್ವಾತಂತ್ರ್ಯದ ಗುಣಗಳೊಂದಿಗೆ ಕೃತಜ್ಞತೆಯೂ ರಾಜನಿಗಿರಬೇಕಾದ ಗುಣ. ಅದಿಲ್ಲದವನು ಅರಸನಾಗಿ ಆಳುವುದು ಹೇಗೆ? ರಾಜನೆಂದರೆ ಹೇಗಿರಬೇಕೆಂಬುದನ್ನು ನಿನಗೆ ಹೇಳಬೇಕಾಗಿಲ್ಲ. ನೀನು ಮಾಡುತ್ತಿರುವಂತೆಯೇ ಪರಿಜನರಿಗೆ ತೊಂದರೆ ಬಂದರೆ ಅದನ್ನು ಮೊದಲು ನಿವಾರಿಸಬೇಕು. ತಾನು ಸ್ವಾರ್ಥಿಯಾಗದೆ ಇದ್ದುದನ್ನು ಎಲ್ಲರಿಗೂ ಹಂಚಬೇಕು. ತನ್ನವರು ವೈರಿಗಳಿಂದ ಬಂಧಿತರಾದರೆ ಬಿಡಿಸಬೇಕು. ಅವರು ಶತ್ರುಗಳಿಂದ ಸಾಯದಂತೆ ರಕ್ಷಿಸಬೇಕು. ಅಂತಹ ಗುಣಗಳಿಂದ ರಾಜನು ಸರ್ವತ್ರ ಆದರಣೀಯನಾಗುತ್ತಾನೆ. ಇದನ್ನೆಲ್ಲಾ ಕೇಳಿ ಹಿರಣ್ಯಕನಿಗೆ ಗೆಳೆಯನ ಬಗ್ಗೆ ಅಭಿಮಾನವೆನಿಸಿತು. ನಂತರ ಬಿಲಬಿಲದಲ್ಲಿ ಅಡಗಿದ್ದ ತನ್ನ ಪರಿವಾರದವರನ್ನೆಲ್ಲ ಬರಿಸಿ ಏಕ ಕಾಲದಲ್ಲಿ ಎಲ್ಲ ಪಕ್ಷಿಗಳ ಕಾಲಲ್ಲಿ ತೊಡಕಿ–ಕೊಂಡಿದ್ದ ಬಲೆಗಳನ್ನು ತುಂಡರಿಸಿದ. ಇದೆಲ್ಲವನ್ನೂ ನೋಡುತ್ತಿದ್ದ ಲಘುಪತನಕನಿಗೆ ಆಶ್ಚರ್ಯವಾಯಿತು ಹಾಗೂ ಅವರ ಸ್ನೇಹದ ಬಗ್ಗೆ ಅಭಿಮಾನವುಂಟಾಯಿತು. ಜೀವವೆಂಬುದು ಅನರ್ಘ್ಯ ರತ್ನವೇ ಅಲ್ಲ. ಸುವರ್ಣದ ಆಭರಣಗಳು ಅರ್ಧ ಧನ, ಆಹಾರ ಮಹಾ ಧನ. ಆದರೆ ಸು–ವಿದ್ಯೆ, ಸು–ಶೀಲ, ತಪಸ್ಸು, ಸ್ನೇಹ ಇವುಗಳು ಎಲ್ಲ ಧನಕ್ಕಿಂತ ಮಿಗಿಲಾದುದು ಎಂದು ತಾನೂ ಗುಣವಂತನಾದ ಹಿರಣ್ಯಕನೊಡನೆ ಸ್ನೇಹ ಬಯಸಿದನು. ಅದಕ್ಕೆ ಮೂಷಿಕ ಹೇಳಿತು. "ಸಮಾನ ಗುಣದವರಲ್ಲಿ ಸ್ನೇಹವು ಸಾಧು ಸಾಧ್ಯ. ನೀನು ಮಾಂಸಾಹಾರಿ, ಮಿತಿಮೀರಿದ ಆಶಾಬುರುಕ, ಮೇಲಾಗಿ ಚಪಲಚಿತ್ತನು ಹೀಗಾಗಿ ನೀನು ಸ್ನೇಹಕ್ಕೆ ಅರ್ಹನಲ್ಲ" ಎಂದು ಹೇಳಿ ತನಗೆ ಗೊತ್ತಿರುವ ಮಿತ್ರನಾಗಲು ಅರ್ಹನಾದವನ ಗುಣಗಳನ್ನು ಹೀಗೆ ಹೇಳುತ್ತಾನೆ. "ಮಿತ್ರನಾದವನು ಮಾತು, ಮನಸ್ಸು, ಕಾರ್ಯಗಳಿಂದ ಸ್ವಚ್ಛನಾಗಿರಬೇಕು. ತ್ಯಾಗ, ಶೌರ್ಯ, ಸಮಾನವಾದ ಸುಖದುಃಖ,

ದಾಕ್ಷಿಣ್ಯ, ಸತ್ಯ, ಶುಚಿಗಳು ಸ್ನೇಹಕ್ಕೆ ಮುಖ್ಯ. ಆದ್ದರಿಂದಲೇ ಹಿರಿಯರು ಹೇಳುತ್ತಾರೆ–ಸ್ನೇಹ ಬೆಳೆಸುವವರು ಕುಲೀನರಾಗಬೇಕು, ಮಾತಿಗೆ ತಪ್ಪದವನಾಗಿರಬೇಕು, ಸದ್ಗುಣಿಯೂ, ನಿರ್ಮಲ ನಡತೆಯುಳ್ಳವನೂ, ವಿಚಾರಶೀಲನೂ, ಭೇದಭಾವ ಇಲ್ಲದವನೂ ಆಗಿರಬೇಕು.[40] ಇಲ್ಲಿ ಒಂದು ಉಕ್ತಿ ಬಹಳ ಯುಕ್ತವಾಗಿರುತ್ತದೆ.

ययोरेव समं वित्तं च ययोरेव समं कुलम् ।

तयोर्मैत्री विवाहश्च न तु पुष्टविपुष्टयोः [41]

ಯಾರು ನಮಗೆ ಸಮನಾದ ಐಶ್ವರ್ಯವುಳ್ಳವರೋ, ಯಾರು ನಮಗೆ ಸಮಾನ ಕುಲದವರೋ, ಅಂತಹವರೊಂದಿಗೆ ಮಾತ್ರ ಗೆಳೆತನವನ್ನೂ, ವಿವಾಹವನ್ನೂ ಮಾಡಬೇಕು ಹೊರತು ನಮಗಿಂತ ಹೆಚ್ಚುಕಡಿಮೆ ಉಳ್ಳವರೊಂದಿಗೆ ಇವೆರಡನ್ನೂ ಮಾಡಕೂಡದು. ನಮ್ಮ ಹಿರಿಯರು ಸಾಕಷ್ಟು ಬುದ್ಧಿವಂತರು. ಅವರು ಪ್ರತಿಯೊಂದನ್ನೂ ಯಾವರೀತಿಯಲ್ಲಿ ಎಂಥಹವರೊಂದಿಗೆ ಮಾಡಬೇಕೆಂದು ಕರಾರುವಾಕ್ಕಾಗಿ ತಿಳಿಸಿದ್ದಾರೆ. ವಿವಾಹ ಹಾಗೂ ಗೆಳೆತನಗಳು ನಮ್ಮ ಜೀವನದಲ್ಲಿ ಚಿರಸ್ಥಾಯಿಯಾಗಿ ನಿಲ್ಲತಕ್ಕವುಗಳು. ಆದ್ದರಿಂದ ಮೈತ್ರಿ ಹಾಗೂ ವಿವಾಹ ಸಮಾನರೊಂದಿಗೆ ಮಾತ್ರ ಬೆಳೆಸಬೇಕೆಂದು ಅವರ ಇಂಗಿತ.

ಇಲ್ಲಿ ಪ್ರಾಣಿಪಶುಪಕ್ಷಿಗಳೂ ಮನುಷ್ಯರಂತೆ ಮಾತನಾಡಿ, ವರ್ತನೆಮಾಡಿ ಮನೋಭಾವನೆಗಳನ್ನು, ಬದುಕಿನ ಅನುಭವಗಳನ್ನು, ನೈಜವಾಗಿ ಮನುಷ್ಯರೇ ಅನುಭವಿಸುತ್ತಾ ಇರುವಷ್ಟರಮಟ್ಟಿಗೆ ಪಾತ್ರಗಳನ್ನು ನಿರ್ವಹಿಸಿರುವುದು ಪಂಚತಂತ್ರ ಕಥೆಗಳ ವೈಶಿಷ್ಟ್ಯತೆಯಾಗಿದೆ. ವ್ಯಕ್ತಿತ್ವ ವಿಕಸನ ಕಾರ್ಯದಲ್ಲಿ ಶಿಕ್ಷಕರಾಗಿ ವಿಷ್ಣುಶರ್ಮರು ಪಂಚತಂತ್ರದಲ್ಲಿ ನಡೆಸಿರುವ ಸಮರ್ಥ ಪ್ರಯತ್ನ ಮತ್ತು ಪರಿಶ್ರಮ ಆದರ್ಶವಾಗಿದ್ದು ಇತರ ಶಿಕ್ಷಕರಿಗೆ ನಿಜಕ್ಕೂ ಮಾರ್ಗದರ್ಶಕವೇ ಆಗಿರುತ್ತದೆ. ಕಲಿವಿನಲ್ಲಿ ಒಲವು, ಸೃಜನಶೀಲತೆ, ಸಹಬಾಳ್ವೆ, ಹೊಂದಾಣಿಕೆ ಹಾಗೂ ಬದುಕಿನ ಸಾರ್ಥಕತೆಗೆ ಬೇಕಾದ ತಿಳುವಳಿಕೆಯನ್ನು ಒಬ್ಬ ಪ್ರತಿಭಾನ್ವಿತ ಶಿಕ್ಷಕ ಹೇಗೆ ಬೆಳೆಸಲು ಸಾಧ್ಯವಿದೆ ಎಂಬುದನ್ನು ಪಂಚತಂತ್ರ ನೀತಿಕಥೆಗಳು ಬಹಳ ಸ್ಪಷ್ಟವಾಗಿ ನಿರೂಪಿಸುತ್ತವೆ.[42]

**ಎಳ್ಳುಮಾರುವ ಶಾಂಡಿಲಿನಿಯ ಕಥೆ**ಯಲ್ಲಿ[43] ಉಳ್ಳವರು ತಮ್ಮ ಯೋಗ್ಯತೆಗೆ ತಕ್ಕಂತೆ ದಾನ ಮಾಡಿ ಪ್ರತಿಫಲವನ್ನು ಪಡೆಯುತ್ತಾರೆ. ಬಡವನು ತುತ್ತು ಕಾಳನ್ನು ತೆತ್ತು ಪುಣ್ಯಗಳಿಸುತ್ತಾನೆ. ಧನಿಕರು ಅಧಿಕವಾದ ದಾನದಿಂದ ಏನು ಫಲಪಡೆಯುತ್ತಾರೋ, ದರಿದ್ರರು ಕವಡೆ ಕಾಸಿನ ದಾನ ಮಾಡುವುದರಿಂದ ಅದೇ

40. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನಮಂತ್ರ ಪಂಚತಂತ್ರ, ತಂತ್ರ–2, ಪು–108–111. ವರ್ನಿಲ,39/2–11, ಕಲ್ಯಾಣಿಗಾರ್ಡನ್ BSK 1st stage,ಬೆಂಗಳೂರು–560050.(2015)
41. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ದ್ವಿ.ತಂ–ಶ್ಲೋ–29, ಪು–323.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001.
42. **Chandra Rajan,**VISNU SARMA The Panchatantra (English Translation) Introduction, PP 38-40. PenguinRandom House India Pvt.ltd, Gurgaon-122002, Haryana, India.(1993)
43. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ–2, ಪು–115–117. ವರ್ನಿಲ, 39/2–11, ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು–560050.(2015)

ಫಲವನ್ನು ಪಡೆಯುತ್ತಾರೆ. ಧನವಂತನಲ್ಲದಿದ್ದರೂ ದಾನಿಯು ಲೋಕದ ಗೌರವ ಪಡೆಯುತ್ತಾನೆ. ಜಿಪುಣನು ಧನಿಕನಾದರೂ ಮಾನ್ಯತೆ ಪಡೆಯುವುದಿಲ್ಲ. ಬಾವಿಯ ಸಿಹಿ ನೀರನ್ನು ಜನರು ಬಯಸುತ್ತಾರೆಯೇ ಹೊರತು ಸಮುದ್ರದ ನೀರನ್ನಲ್ಲ. ತ್ಯಾಗದ ಮಹತ್ವವಿಲ್ಲದೆ ಸುಮ್ಮನೆ ಹೆಸರಿಗೆ ರಾಜ ರಾಜ ಎಂದೆನಿಸಿಕೊಂಡರೆ ಏನು ಫಲ? ತ್ಯಾಗಶಾಲಿಯಾದ ಶಿವನನ್ನು ಬಲ್ಲವರು ಮಹೇಶ್ವರನೆಂದು ಕರೆಯುತ್ತಾರೆಯೇ ಹೊರತು ನಿಧಿಯ ರಕ್ಷಕನಾದ ಕುಬೇರನನ್ನಲ್ಲ. ದಾನದಿಂದ ಬಡವನಾಗುತ್ತಿರುವವನು ಮದಜಲದ ಸ್ರಾವದಿಂದ ಕ್ಷೀಣಿಸುತ್ತಿರುವ ಆನೆಯಂತೆ ಶ್ಲಾಘ್ಯನು. ದಾನವಿಲ್ಲದೆ ಸ್ಥೂಲಗಾತ್ರನಾಗುತ್ತಿರುವ ಜಿಪುಣನು ಮದಜಲವನ್ನು ಸ್ರವಿಸದೆ ದಪ್ಪಗಾಗುತ್ತಿರುವ ಕತ್ತೆಯಂತೆ ನಿಂದ್ಯನು. ಹೀಗೆ ಶೀಲವಂತ ಮತ್ತು ಆಚಾರವಂತರಾದರೂ ದಾನವನ್ನು ಮಾಡದಿರುವವನು ಅಧೋಗತಿಯನ್ನು ತಲುಪುತ್ತಾನೆ. ವಕ್ರ ಮತ್ತು ವಿಕೃತವಾಗದಿದ್ದರೂ ಸೌತೆಕಾಯಿ ಆಯಾಸವನ್ನು ಪರಿಹರಿಸುವುದರಿಂದ ಪ್ರಶಂಸನೀಯ ಸ್ಥಾನವನ್ನು ಹೇಗೆ ಪಡೆಯುತ್ತದೋ ಹಾಗೆ ಕುರೂಪಿ ಮತ್ತು ದುರ್ವಿಚಾರಿ ಆಗಿದ್ದರೂ ಮನುಷ್ಯನು ದಾನವನ್ನು ಮಾಡುವುದರಿಂದ ಉತ್ತಮ ಗತಿಯನ್ನು ಪಡೆಯುತ್ತಾನೆ. ದೇಶ ಮತ್ತು ಕಾಲಕ್ಕೆ ಅನುಗುಣವಾಗಿ ಶ್ರದ್ಧೆಯಿಂದ ಸತ್ಪಾತ್ರನಿಗೆ ಮಾಡಿದ ದಾನವು ಅಕ್ಷಯ ಫಲವನ್ನು ಕೊಡುತ್ತದೆ ಎಂದು ವಿವೇಕಿಗಳ ಅಭಿಪ್ರಾಯ. ಅತಿ ಆಸೆ ಮಾಡಬಾರದು, ಆದರೆ ಆಸೆಯನ್ನು ಬಿಡಲೂ ಬಾರದು. ಅತಿಯಾಸೆ ಮಾಡಿದವನ ಜುಟ್ಟು ತಲೆಯ ಮೇಲೆ ನಿಂತಿರುತ್ತದೆ.

आयुः कर्म च वित्तञ्च विद्या निधनमेव च ।

पञ्चैतानि हि सृज्यन्ते गर्भस्थस्यैव देहिनः ॥[44]

ಆಯಸ್ಸು, ಕರ್ಮ, ಭಾಗ್ಯ, ವಿದ್ಯೆ ಹಾಗೂ ಸಾವು ಈ ಐದು ವಿಷಯಗಳು ಜೀವಿಗಳ ಗರ್ಭದಲ್ಲಿರುವಾಗಲೇ ನಿರ್ಧಾರವಾಗುತ್ತದೆ. ಹೀಗೆ ಬ್ರಾಹ್ಮಣನು ತನ್ನ ಪತ್ನಿಗೆ ಬುದ್ಧಿವಾದವನ್ನು ಹೇಳುವ ದೃಷ್ಟಾಂತವನ್ನು ಬಹಳ ಅಚ್ಚುಕಟ್ಟಾಗಿ, ಕುತೂಹಲಕಾರಿಯಾಗಿ ಸನ್ನಿವೇಶಗಳನ್ನು ಯೋಜಿಸಿ ಬದುಕಿನ ನೀತಿಯನ್ನು, ಜೊತೆಯಲ್ಲಿ ರಾಜನೀತಿ ಶಿಕ್ಷಣವನ್ನೂ ರಾಜಕುಮಾರರಿಗೆ ಬೋಧಿಸಿ, ಅವರಲ್ಲಿ ಅಪೇಕ್ಷಿತ ವರ್ತನೆಗಳ ಕಡೆಗೆ ಪರಿವರ್ತನೆ ಹೊಂದಿ ಉತ್ತಮ ವ್ಯಕ್ತಿತ್ವ ನಿರ್ಮಾಣಗೊಳ್ಳಲು ವಿಷ್ಣುಶರ್ಮರು ಪ್ರೇರೇಪಿಸಿ ಸೂಕ್ತ ಮಾರ್ಗದರ್ಶನ ನೀಡಿದ್ದಾರೆ.

ಮುಂದೆ ಬ್ರಾಹ್ಮಣ ಪತ್ನಿಯು ಮನೆಯಲ್ಲಿರುವ ಸ್ವಲ್ಪ ಎಳ್ಳನ್ನು ಬಿಡಿಸಿ ಅದರ ಚೂರ್ಣದಿಂದ ಅತಿಥಿ ಬ್ರಾಹ್ಮಣನಿಗೆ ಭೋಜನ ಮಾಡಿಸಲು ಸಿದ್ಧಳಾದಳು. ಆಕೆ ಆ ಎಳ್ಳನ್ನು ಸಿಪ್ಪೆ ತೆಗೆದು ಬಿಸಿನೀರಿನಲ್ಲಿ ತೊಳೆದು ಬಿಸಿಲಿನಲ್ಲಿ ಒಣಗಲು ಹಾಕಿದಳು. ಆ ಎಳ್ಳಿನ ಮೇಲೆ ನಾಯಿಯೊಂದು ಮೂತ್ರ ಮಾಡಿಬಿಟ್ಟಿತು. ವಿಧಿಯ

44. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ದ್ವಿ.ತಂ-ಶ್ಲೋ-84, ಪು-357,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಚತುರತೆಯಿಂದ ಇದನ್ನು ತಿನ್ನದಂತೆ ಮಾಡಿತಲ್ಲಾ! ಎಂದು ಯೋಚಿಸಿದಳು. ನಂತರ ಅದನ್ನು ಬುಟ್ಟಿಯಲ್ಲಿ ತುಂಬಿಸಿಕೊಂಡು ಮನೆಯಿಂದ ಮನೆಗೆ ಹೋಗುತ್ತಾ ಬಿಡಿಸಿದ ಎಳ್ಳಿನ ಬದಲಿಗೆ ಬಿಡಿಸದ ಎಳ್ಳನ್ನು ಕೊಡಿ ಎಂದು ಕೇಳಿದಳು. ಒಬ್ಬಳು ಗೃಹಿಣಿಯು ಸಂತೋಷದಿಂದ ಎಳ್ಳನ್ನು ಬದಲಿಸಿಕೊಳ್ಳಲು ಮುಂದೆ ಬಂದಳು. ಇದನ್ನು ಗಮನಿಸುತ್ತಿದ್ದ ಅವಳ ಮಗ ನೀತಿಶಾಸ್ತ್ರವನ್ನು ನೋಡಿ ಹೀಗೆ ಹೇಳುತ್ತಾನೆ. "ಅಮ್ಮ, ಆ ಎಳ್ಳನ್ನು ತೆಗೆದುಕೊಳ್ಳಬೇಡ. ಬಿಡಿಸದ ಎಳ್ಳನ್ನು ಬಿಡಿಸಿದ ಎಳ್ಳಿನೊಂದಿಗೆ ಬದಲಿಸಿಕೊಳ್ಳಬೇಡ. ಇವಳು ಹೀಗೆ ಬದಲಿಸಿಕೊಳ್ಳುವುದರಲ್ಲಿ ಯಾವುದೋ ಕಾರಣವಿರುತ್ತದೆ.[45] ಅಂದರೆ ಕಾರಣವಿಲ್ಲದೆ ಕಾರ್ಯವಿಲ್ಲ" ಇಲ್ಲಿ ಎಂತಹ ನೀತಿ ಅಡಗಿದೆ! ಸರಿಯಾಗಿ ಯೋಚಿಸದೆ ಕೆಲಸ ಮಾಡಬಾರದು. ಸ್ವಂತ ಬುದ್ಧಿ ಇರಬೇಕು. ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು, ಅತಿ ಆಸೆ ಗತಿ ಕೆಡಿಸುತ್ತದೆ. ಇಂಥದ್ದೆಲ್ಲಾ ಒಳ್ಳೆಯ ಆಲೋಚನೆಗಳು ಹಾಗೂ ಒಂದು ರೀತಿಯ ಜಾಗೃತ ಮನಸ್ಸು ಬೆಳೆಯುವಂತೆ ವಿಷ್ಣುಶರ್ಮರು ರಾಜಕುಮಾರರಿಗೆ ಆಕರ್ಷಕ ಕಥೆಗಳ ಮೂಲಕ ಉತ್ತಮ ದೃಷ್ಟಾಂತಗಳನ್ನು ಒದಗಿಸಿಕೊಟ್ಟು ತಿಳುವಳಿಕೆ ನೀಡಿದ್ದಾರೆ. ಹೀಗಾಗಿ ಪಂಚತಂತ್ರ ಕಥೆಗಳು ಬದುಕಿನ ನೀತಿ ನಿಯಮಗಳನ್ನು ಕಲಿಸಿಕೊಡುತ್ತವೆ. ಇದು ಮಕ್ಕಳಲ್ಲಿ ಒಳ್ಳೆಯ ಅಭಿಕ್ಷಮತೆ, ಮನೋಧೋರಣೆಗಳು, ಆಸಕ್ತಿ ಮತ್ತು ಮೌಲ್ಯಗಳನ್ನು ಬೆಳೆಸುತ್ತದೆ.

ಮಿತ್ರಸಂಪ್ರಾಪ್ತಿ ತಂತ್ರದಲ್ಲಿ ಬರುವ ಮತ್ತೊಂದು ಕಥೆ **"ವ್ಯಾಪಾರಿ ಪುತ್ರನ ಕಥೆ"** ಯಲ್ಲಿ :-

प्राप्तव्यमर्थं लभते मनुष्यो देवोऽपि तं लङ्घयितुं न शक्तः ।

तस्मान्न शोचामि न विस्मयो मे यदस्मदीयं न हि तत्परेषाम् ॥[46]

ಮನುಷ್ಯನು ತನಗೆ ಪ್ರಾಪ್ತವಿದ್ದಷ್ಟು ಹಣವನ್ನು ಮಾತ್ರ ಪಡೆಯುತ್ತಾನೆ. ದೇವರಿಗೂ ಕೂಡ ಅದನ್ನು ಕಸಿದುಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ನಾನು ದುಃಖಿಸುವುದಿಲ್ಲ ಅಥವಾ ಆಶ್ಚರ್ಯವನ್ನೂ ಪಡುವುದಿಲ್ಲ. ನನ್ನದಾವುದಿದೆಯೋ ಅದೆಂದಿಗೂ ಪರರದಾಗುವುದಿಲ್ಲ.

ಸಾಗರದತ್ತ ಎಂಬ ವ್ಯಾಪಾರಿಯ ಪುತ್ರನು ಒಮ್ಮೆ ನೂರು ರೂಪಾಯಿಗಳನ್ನು ಕೊಟ್ಟು ಪುಸ್ತಕವೊಂದನ್ನು ಖರೀದಿಸಿದ್ದನು. ಅದರಲ್ಲಿ ಈ ಮೇಲಿನ ಶ್ಲೋಕವು ಬರೆಯಲ್ಪಟ್ಟಿತ್ತು. ಇದನ್ನು ನೋಡಿದ ಸಾಗರದತ್ತನು ಕೋಪಿಷ್ಠನಾಗಿ ಹೀಗೆ ನುಡಿದನು "ಮೂರ್ಖನೇ ಅನವಶ್ಯಕವಾಗಿ ಹಣವನ್ನು ಹೀಗೆ

45. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ದ್ವಿ.ತಂ. ಪು-127-130. (2018) ಜ್ವಾಲಾಮುಖಿಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು-560004.

46. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ದ್ವಿ.ತಂ -ಶ್ಲೋ- 111, ಪು-372.(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ದುಂದುವೆಚ್ಚ ಮಾಡಿದರೆ ಧನಾರ್ಜನೆಯಾಗುವುದಾದರೂ ಹೇಗೆ? ಈ ಪದ್ಯಕ್ಕೆ ಅರ್ಥವಿಲ್ಲ. ನಿನಗೆ ಸ್ವಾರ್ಥವಿಲ್ಲ, ಬುದ್ಧಿಯೂ ಇಲ್ಲ. ಇಂದಿನಿಂದ ನೀನು ನನ್ನ ಮನೆಯಲ್ಲಿ ಇರಬೇಡ ಎಂದು ಗದರಿಸಿ ಮನೆಯಿಂದ ಹೊರಗೆ ಕಳುಹಿಸಿದನು. ಮಗನು ದುಃಖಗೊಂಡು ದೂರದ ಒಂದು ದೇಶಕ್ಕೆ ಹೋಗಿ ಯಾವುದೋ ಒಂದು ನಗರದಲ್ಲಿ ವಾಸಮಾಡತೊಡಗಿದನು.

ಆ ನಗರದ ನಿವಾಸಿಗಳು ಇವನನ್ನು ಎಲ್ಲಿಂದ ಬಂದಿರುವಿರಿ? ನಿಮ್ಮ ಹೆಸರೇನು? ಎಂದು ಕುತೂಹಲದಿಂದ ಒಬ್ಬರಾದಮೇಲೊಬ್ಬರು ವಿಚಾರಿಸಿದರು. ಇವನು ಎಲ್ಲರಿಗೂ प्राप्तव्यमर्थं लभते मनुष्यः ಎಂದು ಉತ್ತರ ನೀಡಿದನು. ಅಂದರೆ ಮನುಷ್ಯನು ಪ್ರಾಪ್ತವಿದ್ದಷ್ಟು ಹಣವನ್ನು ಮಾತ್ರ ಪಡೆಯುತ್ತಾನೆ ಎಂದು. ಅವನು ಆ ನಗರದಲ್ಲಿ ಪ್ರಾಪ್ತವ್ಯಮರ್ಥ ಎಂಬ ಹೆಸರಿನಿಂದಲೇ ಪ್ರಸಿದ್ಧನಾದನು. ಹೀಗೇ ಅವನು ಒಂದಲ್ಲೊಂದು ರೀತಿಯಲ್ಲಿ ಯಾವುದೋ ಅದೃಷ್ಟದಿಂದ ಒಬ್ಬಳು ಮಧುಮಗಳನ್ನು ಕೆರಳಿದ ಆನೆಯಿಂದ ರಕ್ಷಿಸಿದನು ಹಾಗೂ ಅವಳ ಬಲಕೈ ಹಿಡಿದು ಮಹಾಸಾಹಸದಿಂದ ಕಠೋರವಾದ ನುಡಿಗಳಿಂದ ಆ ಆನೆಯನ್ನು ಬೆದರಿಸಿದನು. ಪರಿಸ್ಥಿತಿ ಹೇಗೆ ತಿರುಗಿತೆಂದರೆ, ವರಕೀರ್ತಿಯೆಂಬ ಹೆಸರಿನ ಮಧುಮಗನನ್ನು ವಿವಾಹವಾಗಲು ನಿಶ್ಚಯಿಸಿದ್ದ ಮಧುಮಗಳು ಅವಳ ಜೀವರಕ್ಷಣೆ ಮಾಡಿದ, ಇವನಲ್ಲದೆ ಅಂದರೆ ಪ್ರಾಪ್ತವ್ಯಮರ್ಥನನ್ನು ಬಿಟ್ಟು ಬೇರಾವ ಜೀವವಿರುವವನೂ ನನ್ನ ಕೈ ಹಿಡಿಯಕೂಡದೆಂದು ನಿರ್ಧಾರಕ್ಕೆ ಬಂದುಬಿಟ್ಟಳು. ಅಷ್ಟರಲ್ಲಿ ದೊಡ್ಡ ಗುಂಪು ಸೇರಿದ್ದಲ್ಲಿಗೆ ಸುದ್ದಿಯನ್ನು ತಿಳಿದ ರಾಜಕುಮಾರಿ ಹಾಗೂ ರಾಜ ಇಬ್ಬರೂ ಬಂದರು. ಸುದ್ದಿಕೇಳಿದ ಆರಕ್ಷಕನ ಮಗಳೂ ಬಂದಳು. ರಾಜನು ನಡೆದವೃತ್ತಾಂತವನ್ನೆಲ್ಲ ನಿರ್ಭಯದಿಂದ ಹೇಳುವಂತೆ ಪ್ರಾಪ್ತವ್ಯಮರ್ಥನನ್ನು ಕೇಳಿದನು. ಆಗಲೂ ಪ್ರಾಪ್ತವ್ಯಮರ್ಥನು "प्राप्तव्यमर्थं लभते मनुष्यः"ಎಂದು ಹೇಳಿದನು. ರಾಜಕುಮಾರಿಯು ನಕ್ಕು "देवोऽपि तं लङ्घयितुं न शक्तः" ಎಂದಳು. ಆಗ ಆರಕ್ಷಕನ ಮಗಳು "तस्मान्न शोचामि न विस्मयो मे" ಎಂದಳು. ಪೂರ್ಣ ವೃತ್ತಾಂತವನ್ನು ಕೇಳಿದ ರಾಜನು ಸರಿಯಾಗಿ ತಿಳಿದುಕೊಂಡು ಪ್ರಾಪ್ತವ್ಯಮರ್ಥನಿಗೆ ಸರ್ವಾಲಂಕಾರದಿಂದ ಕೂಡಿದ ಸೇವಕಜನ ಸಮೇತಳಾದ ತನ್ನ ಮಗಳನ್ನು ಹಾಗೂ ಬಹುಮಾನವಾಗಿ ಸಾವಿರ ಗ್ರಾಮಗಳನ್ನು ಕೊಟ್ಟು ನೀನು ನನ್ನ ಮಗನಾದೆ ಎಂದು ಘೋಷಿಸಿ ಯುವರಾಜನನ್ನಾಗಿ ಮಾಡಿದನು. ಆರಕ್ಷಕನೂ ಕೂಡ ತನ್ನ ಶಕ್ತಿಗನುಸಾರವಾಗಿ ವಸ್ತ್ರಾದಿಗಳಿಂದ ಸನ್ಮಾನಮಾಡಿ ಪ್ರಾಪ್ತವ್ಯಮರ್ಥನಿಗೆ ತನ್ನ ಮಗಳನ್ನು ಕೊಟ್ಟನು.[47]

---

47. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ದ್ವಿ.ತಂ.ಪು-135-139, (2018) ಜ್ವಾಲಾಮುಖಿಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು-560004.

ಪ್ರಾಪ್ತವ್ಯಮರ್ಥನು ಒದಗಿಬಂದ, ಅದೃಷ್ಟವನ್ನು ಕಾಣುತ್ತಿರುವ ಸಂಭ್ರಮದಲ್ಲಿ ತನ್ನ ತಂದೆ ತಾಯಿಗಳನ್ನು ಮರೆಯದೆ ತನ್ನ ಜೊತೆಗೆ ಬರಮಾಡಿಕೊಂಡು ಸುಖವಾಗಿ ಕಾಲ ಕಳೆದನು. ಹೀಗೆ ಕಥೆಯನ್ನು ಹೇಳುತ್ತಾ, ವಿಷ್ಣುಶರ್ಮರು ರಾಜಕುಮಾರರ ಪ್ರತಿಕ್ರಿಯೆಯನ್ನು ನಿರೀಕ್ಷಿಸುತ್ತಾ **"ರಾಜಕುಮಾರರೇ, ಇಂತಹದು ನಿಜಜೀವನದಲ್ಲೂ ಅಲ್ಲಲ್ಲಿ ನಡೆಯುವಂತಾದ್ದೇ. ಇದು ಬರಿದೇ ಕಥೆಯಲ್ಲಿ ಬರುವ ಸಂಗತಿಗಳಲ್ಲ. ಅದೃಷ್ಟದಿಂದ ಸಂಪತ್ತು ಕೈಸೇರಬಹುದು. ಕರ್ಮಪಾತದಿಂದ ನಷ್ಟವೂ ಆಗುತ್ತದೆ. ನಮಗೆ ಕೈಗೆಟಕುವಂತಿದ್ದ ವಸ್ತುವನ್ನು ವಿಧಿಯು ಅಪಹರಿಸುತ್ತದೆ. ಇದು ನನ್ನ ಅಭಿಪ್ರಾಯ, ನೀವೇನು ಹೇಳುವಿರಿ?"** ಎಂದು ಒಂದು ಆಲೋಚನ ಪ್ರಚೋದನಕಾರಿ ಪ್ರಶ್ನೆ ಕೇಳಿದರು.

ಬಹುಶಕ್ತಿ ಆಲೋಚನೆಮಾಡಿ **"ಸಂಪತ್ತೇ ಸರ್ವಕ್ಕೂ ಆಧಾರವೆಂದು ಅದನ್ನೇ ಬಯಸುವುದು ತಪ್ಪು"** ಎಂದನು. ಹಣದಂತೆಯೇ ರಾಜ್ಯ ವಿಸ್ತರಣೆಯೂ ನಮ್ಮ ಭ್ರಮೆಗೆ ಒಳಗಾಗುವಂತೆ ಮಾಡುತ್ತದೆ. **"ಕೊನೆಯವನಾದ ಅನಂತಶಕ್ತಿಯು"** ಗುರುಗಳೇ, ಹಣವಿದ್ದೂ ಅದನ್ನು ಉಪಯೋಗಿಸುವುದಕ್ಕಾಗದಿದ್ದರೆ ಇನ್ನಷ್ಟು ಚಿಂತೆ ಎಂದು ಹೇಳಿದನು. ಗುರುಗಳು-ಚೆನ್ನಾಗಿ ಹೇಳಿದಿರಿ. ಅನಂತಶಕ್ತಿಯ ಅನಿಸಿಕೆಯು ಒಳ್ಳೆಯ ಪ್ರತಿಕ್ರಿಯೆಯಾಗಿದೆ. ಈಗ ವಿಶ್ರಾಂತಿ ಪಡೆಯುವ ಹೊತ್ತು. ನದಿಯಲ್ಲಿ ಜಲಕ್ರೀಡೆಯಾಡಿ ಪ್ರಫುಲ್ಲಚಿತ್ತರಾಗಿ ಬನ್ನಿ ಎಂದು ವಿಷ್ಣುಶರ್ಮರು ಎದ್ದರು.[48]

ಹೀಗೆ ವಿಷ್ಣುಶರ್ಮರು ರಾಜಕುಮಾರರ ಬಗ್ಗೆ ವೈಯಕ್ತಿಕ ಗಮನಹರಿಸಿ ನೋಡುತ್ತಾ, ಅವರ ಮೂಲ ಮನೋಧೋರಣೆಗಳನ್ನು ಪರಿಶೀಲಿಸಿ, ಪರಿವರ್ತನೆ ಮಾಡುವಲ್ಲಿ, ಅವುಗಳನ್ನು ಪರಿವರ್ತಿಸಿ, ಕಲಿಕೆಯನ್ನು ಪ್ರೇರೇಪಿಸಿ, ಸೃಜನಶೀಲ ಆಲೋಚನೆಗಳೆಡೆಗೆ ಸೂಕ್ತ ಸನ್ನಿವೇಶಗಳನ್ನೊದಗಿಸಿ, ವ್ಯವಸ್ಥಿತವಾಗಿ ವ್ಯಕ್ತಿತ್ವ ನಿರ್ಮಾಣ ಮಾಡುವಲ್ಲಿ ಒಳ್ಳೆಯ ಸಾಧನೆಗೈದಿದ್ದಾರೆ. ಬದುಕಿನ ನೀತಿನಿಯಮಗಳನ್ನು ಪ್ರೀತಿಯಿಂದ ಪಾಲಿಸುವಂತೆ ಪಂಚತಂತ್ರ ಪಠ್ಯಕ್ರಮದಲ್ಲಿ ಒಂದಕ್ಕಿಂತ ಮತ್ತೊಂದು ಸ್ವಾರಸ್ಯಕರ ಪ್ರಸಂಗಗಳನ್ನು ಒಳಗೊಂಡಿರುವ ಕಥಾನಿರೂಪಣಾ ಬೋಧನಾ ಕ್ರಮದಲ್ಲಿ ಶಿಕ್ಷಣ ನೀಡಿದ್ದಾರೆ. ಆಗಿನ ಕಾಲದಲ್ಲೇ ಇಂಥಾ ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಉತ್ತಮ ಮಾರ್ಗದರ್ಶನ, ಸಲಹೆ, ಶಿಕ್ಷಣ ನೀಡಿರುವುದು ಈ ಅಮೂಲ್ಯ ಕೃತಿರತ್ನ ಪಂಚತಂತ್ರದ ವೈಶಿಷ್ಟ್ಯತೆಯಾಗಿದೆ.

ಶೈಕ್ಷಣಿಕ ಮನೋವಿಜ್ಞಾನದ ಅಂಶಗಳೆಲ್ಲ ಅದೆಷ್ಟು ಚೆನ್ನಾಗಿ ಅಡಕವಾಗಿದೆ! ಒಂದು ಕಥೆ ಮತ್ತೊಂದಕ್ಕೆ ಉತ್ತಮ ಸ್ಪಂದನೆಯೊಂದಿಗೆ ವಿಚಾರಗಳು ಸ್ಪಷ್ಟವಾಗಿ, ಅರ್ಥಪೂರ್ಣವಾಗಿ ಮುಂದಿನದೇನಿರಬಹುದೆಂದು

---

48. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ-2, ಪು-122-124.ವರ್ನಿಲ, 39/2-11, ಕಲ್ಯಾಣಿ ಗಾರ್ಡನ್,BSK 1st stage, ಬೆಂಗಳೂರು-560050.(2015)

ಬಹಳ ಕುತೂಹಲದಿಂದ ಕಾಯುತ್ತಿರುವಂತೆ ಪಂಚತಂತ್ರದ ಯೋಜನೆ ಅದ್ಭುತವಾಗಿದೆ.

ಕಲಿಕಾ ದೃಷ್ಟಿಯಿಂದ ನಿರಂತರ ಹಾಗೂ ವ್ಯಾಪಕ ಮೌಲ್ಯಮಾಪನದೊಂದಿಗೆ ವಿಶೇಷ ಜಾಗೃತಿ ಮೂಡಿಸುವ ಯಶಸ್ವೀ ಪ್ರಯತ್ನ ಪಂಚತಂತ್ರದಲ್ಲಿ ನಡೆದಿದೆ. ಶೈಕ್ಷಣಿಕ ಮನೋ ವಿಜ್ಞಾನದಲ್ಲಿ ಸೂಚಿಸಿರುವಂತೆ, ಕಲಿಕೆಯ ಮೇಲೆ ಪ್ರಭಾವ ಬೀರುವ ಅಂಶಗಳಾದ ಅಭಿಪ್ರೇರಣೆ, ಅವಧಾನ, ಸ್ಮೃತಿ ವಿಸ್ಮೃತಿ ಇವುಗಳಿಗೆ ಸಂಬಂಧಿಸಿದಂತೆ ಒಳ್ಳೆಯ ಕಲಿಕಾ ಸನ್ನಿವೇಶಗಳು ಆಕರ್ಷಕ ಕಥೆಗಳು, ನೀತಿಬೋಧೆಗಳು, ಸುಭಾಷಿತಗಳು, ಜಾಣ್ನುಡಿಗಳು, ನಾಣ್ಣುಡಿಗಳು, ನೀತಿ ಶ್ಲೋಕಗಳು ಇವುಗಳೆಲ್ಲವನ್ನೂ ಸಮಯೋಚಿತವಾಗಿ ಸಂಯೋಜಿಸಿದ್ದು, ವಿಷಯ ಪ್ರತಿಪಾದನೆಯಲ್ಲಿ ಹಾಗೂ ಶೈಕ್ಷಣಿಕ ಮಾರ್ಗದರ್ಶನವನ್ನು ಒದಗಿಸುವ ವಿಚಾರದಲ್ಲಿ ಪಂಚತಂತ್ರವು ಒಂದು ಸಾರ್ಥಕ ಬದುಕಿನ ರೀತಿನೀತಿಗಳನ್ನು ಬೋಧಿಸುವ ಸಂಹಿತೆಯಾಗಿದೆ.

ಮರದ ಕೆಳಗೆ ವಿಶ್ರಾಂತಿ ಪಡೆದುಕೊಳ್ಳುತ್ತಿದ್ದ ರಾಜಕುಮಾರರ ಬಳಿಗೆ ವಿಷ್ಣುಶರ್ಮರು ಬಂದು ರಾಜಕುಮಾರರೇ, ಅನಂತಶಕ್ತಿಯು ಹೇಳಿದ ವಿಚಾರವು ಅರ್ಥಪೂರ್ಣವಾದುದೇ ಆಗಿದೆ. ಅದಕ್ಕೆ ಸಂಬಂಧಿಸಿದಂತೆ ಆಮೆಯು ಇಲಿಗೆ ಹೇಳಿದ ಕಥೆಯೂ ಅದೇ ಆಗಿದೆ. ಚೆನ್ನಾಗಿ ಕೇಳಿಸಿಕೊಳ್ಳಿರಿ. ಅದನ್ನು ಮಂಥರಕ ಹೇಳಿದಂತೆಯೇ ಹೇಳುತ್ತೇನೆ. ಇದೇ **ಮಂದಭಾಗ್ಯ ಸೌಮಿಲಕನ ಕಥೆ**.[49] ಈ ಕಥೆಯ ನೀತಿ ಬಹಳ ಸೊಗಸಾಗಿದೆ.

उत्पतन्ति यदाकाशे निपतन्ति महीतले ।

पक्षिणां तदपि प्राप्त्या नादत्तमुपतिष्ठति ॥[50]

ಆಕಾಶದ ಉದ್ದಗಲದಲ್ಲಿ ಪಕ್ಷಿಗಳು ಹಾರಿದರೂ ಅವುಗಳಿಗೆ ಪ್ರಾಪ್ತಿ ಇದ್ದಷ್ಟೇ ಸಿಗುತ್ತದೆ. ಅದೃಷ್ಟಕ್ಕೆ ಪುರುಷ ಪ್ರಯತ್ನವೂ ಜೊತೆಗೂಡಬೇಕು. ಎರಡು ಕೈ ಸೇರಿದರೇ ಚಪ್ಪಾಳೆಯಾಗುವುದು. ಕರ್ಮವಶದಿಂದ ಊಟ ಸಿಕ್ಕರೂ ಅದು ಬಾಯಿಗೆ ಹೋಗಲು ಕೈ ಬೇಕು. ಸತತ ಉದ್ಯೋಗಿಯಾದ ಪುರುಷಸಿಂಹನನ್ನು ಲಕ್ಷ್ಮಿಯು ಹೊಂದುತ್ತಾಳೆ. ಕುಜನರು ಎಲ್ಲಕ್ಕೂ ದೈವವನ್ನೇ ಗರಿಯಾಗಿಸಿಕೊಳ್ಳುತ್ತಾರೆ. ಆದ್ದರಿಂದ ಉದ್ಯೋಗ ಶೀಲನಾಗುವುದು ಒಳ್ಳೆಯದು. ಈ ತೀರ್ಮಾನದಿಂದ ಸೋಮಿಲಕನು ವರ್ಧಮಾನಪುರಕ್ಕೆ ಹೋಗಿ ಮೂರು ಮೂರು ವರ್ಷಗಳಲ್ಲಿ ಹೆಂಡತಿಗೆ ತೋರಿಸಿ ಅವಳನ್ನು ಸಂತೋಷಪಡಿಸಬೇಕೆಂದು ನಿರ್ಧರಿಸಿ ಊರಿಗೆ ಹೊರಟನು. ಕಾಡುದಾರಿ ಕತ್ತಲೆಯಾಯಿತು. ದಾರಿತೋರದಾಗಿ ಎದುರಿಗಿದ್ದ ಆಲದಮರವೇರಿ

49. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ-2, ಪು-124-126. ವರ್ಣಿಲ, 39/2-11, ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು-560050.(2015)

50. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ದ್ವಿ.ತಂ-ಶ್ಲೋ-128, ಪು-390.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಕೊಂಬೆಗಳೆರಡರ ನಡುವೆ ಮಲಗಿದನು. ಇವನು ನಿದ್ರಿಸುತ್ತಿರುವಾಗ ಕನಸಿನಲ್ಲಿ ಯಾರೋ ಇಬ್ಬರು ರೌದ್ರಾಕಾರವುಳ್ಳ ಪುರುಷರು ಪರಸ್ಪರ ಮಾತನಾಡುತ್ತಿದ್ದುದನ್ನು ಕೇಳಿಸಿಕೊಂಡನು. ಒಬ್ಬನು ಹೀಗೆ ಹೇಳಿದನು" ಎಲೈ ಕರ್ತನೇ ಈ ಸೋಮಿಲಕನಿಗೆ ಹೊಟ್ಟೆ ಬಟ್ಟೆಗಿಂತ ಹೆಚ್ಚಿನ ಸಂಪಾದನೆಯು ಹಣೆಯಲ್ಲಿ ಬರೆದಿಲ್ಲ ಎಂದು ನಿನಗೆ ತಿಳಿದಿಲ್ಲವೇ? ಏಕೆ ಇವನಿಗೆ ಮುನ್ನೂರು ಸುವರ್ಣ ನಾಣ್ಯಗಳನ್ನು ಕೊಟ್ಟಿರುವೆ? ಮತ್ತೊಬ್ಬನು "ಎಲೈ ಕರ್ಮನೇ, ಪ್ರಯತ್ನಶೀಲರಿಗೆ ನಾನು ಅವಶ್ಯವಾಗಿ ಕೊಡತಕ್ಕದ್ದು. ಆದರೆ ಆದರ ಪರಿಣಾಮವು ನಿನ್ನ ಅಧೀನದಲ್ಲಿದೆ. ಅನಂತರ ನೇಕಾರನು ಎದ್ದು ನೋಡಿದಾಗ ಚಿನ್ನದ ನಾಣ್ಯಗಳಿದ್ದ ಚೀಲ ಖಾಲಿಯಾಗಿತ್ತು. ಬಹಳವಾಗಿ ಚಿಂತಿಸಿದನು. ಪತ್ನಿ ಹಾಗೂ ಮಿತ್ರರಿಗೆ ಬರಿಗೈಲಿ ಹೇಗೆ ಮುಖ ತೋರಿಸಲಿ ಎಂದುಕೊಂಡು ಮತ್ತೆ ವರ್ಧಮಾನಪುರಕ್ಕೆ ಹೋದನು. ಪುನಃ ಒಂದು ವರ್ಷದಲ್ಲಿ ಮತ್ತೆ ನೂರು ಚಿನ್ನದ ನಾಣ್ಯಗಳನ್ನು ಸಂಪಾದಿಸಿ ತನ್ನ ಊರಿಗೆ ವಾಪಸಾಗುತ್ತಿದ್ದನು. ಪುನಃ ಹಿಂದಿನ ಅನುಭವವೇ ಮರುಕಳಿಸಿತು. ನಾಣ್ಯಗಳು ಮತ್ತೆ ಕಾಣದಾಯಿತು. ಕೊನೆಗೆ ಸೋಮಿಲಕನು ಹಣವಿಲ್ಲದ ನನ್ನ ಜೀವನದಿಂದ ಏನು ಪ್ರಯೋಜನ ಎಂದು ಯೋಚಿಸಿ, ಬಹಳ ಬೇಸರದಿಂದ ಜಿಗುಪ್ಸೆಗೊಂಡು ಬದುಕಬಾರದೆಂದ ನಿಶ್ಚಯಿಸಿ, ದರ್ಭೆಯಿಂದ ಮಾಡಿದ ಹಗ್ಗವನ್ನು ತನ್ನ ಕತ್ತಿಗೆ ಹಾಕಿಕೊಂಡು ನೇಣು ಬಿಗಿದುಕೊಳ್ಳಲು ಮುಂದಾದನು. ಅಷ್ಟರಲ್ಲಿ ಆಕಾಶದಲ್ಲಿಂದ ಮನುಷ್ಯನೊಬ್ಬನು ಹೀಗೆ ನುಡಿದನು." ಎಲೈ ಸೋಮಿಲಕನೇ ಈ ಸಾಹಸವನ್ನು ಮಾಡದಿರು. ನಿನ್ನ ಹಣ ಕದ್ದವನು ನಾನೇ. ಹೊಟ್ಟೆಬಟ್ಟೆಗಿಂತ ಹೆಚ್ಚಿಗೆ ಒಂದು ನಾಣ್ಯವೂ ನಿನ್ನಲ್ಲಿರುವುದನ್ನು ನಾನು ಸಹಿಸಲಾರೆನು."

ಸೋಮಿಲಕನು ದುಡಿಯುತ್ತ ಎಲ್ಲರ ಕಷ್ಟಸುಖಗಳನ್ನು ಕಂಡವ. ಅದೃಷ್ಟವನ್ನು ಅದೃಶ್ಯ ವ್ಯಕ್ತಿಯಿಂದ ಕೇಳಿ ತಿಳಿದವ. ಹೀಗಾಗಿ ತನ್ನದಲ್ಲದ್ದನ್ನು ತನಗೆ ಬೇಡವೆಂದು ಬೇರೇನೂ ಕೇಳೆನು. ನಾನು ಗಳಿಸಿದ ಸುವರ್ಣ ನಾಣ್ಯಗಳನ್ನು ನನಗೆ ಕೊಡು ಅಷ್ಟೇ ಸಾಕು ಎಂದು ಆ ಮನುಷ್ಯನನ್ನು ಕೇಳಿಕೊಳ್ಳುತ್ತಾನೆ. ಸೋಮಿಲಕನು ಸ್ವಾಭಿಮಾನಿ ಹಾಗೂ ಛಲವಾದಿ. ಬಳಿಕ ಆ ಅಶರೀರವಾಣಿ ಹೇಳುತ್ತದೆ– "ಅನುಭವಿಸದ ಹಣದಿಂದ ಏನುಮಾಡುವೆ? ಊಟಬಟ್ಟೆಗಿಂತ ಅಧಿಕ ಧನ ಪ್ರಾಪ್ತಿಯು ನಿನಗಿಲ್ಲ.[51]

ಹೀಗೆ ಕಥೆ ಹೇಳುತ್ತಿದ್ದ ವಿಷ್ಣುಶರ್ಮರು ಕಥೆ ನಿಲ್ಲಿಸಿ ರಾಜಕುಮಾರರನ್ನು ಕೇಳಿದರು–"ಖರ್ಚು ಮಾಡದೇ ಇದ್ದರೂ ಧನಿಕನನ್ನು ಜನರು ಗೌರವಿಸುವುದು ನಿಜವೇನು?

ಇಲ್ಲಿ ಗುರುಗಳು ಶಿಷ್ಯರಿಗೆ ಒಳ್ಳೆಯ ಆಲೋಚನೆ ನಡೆಸಲು ಉತ್ತಮ ಸನ್ನಿವೇಶವನ್ನು ಒದಗಿಸಿ ಪ್ರೇರೇಪಿಸಿದ್ದಾರೆ. ಹಾಗೂ ಅವರು ಎಷ್ಟರಮಟ್ಟಿಗೆ ವಿಚಾರಗಳನ್ನು ಗ್ರಹಿಸಿ, ವಿಮರ್ಶೆ ಮಾಡಬಲ್ಲರು ಎಂಬುದನ್ನು

---

51. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ–2, ಪು–125.ವರ್ನಿಲ, 39/2–11, ಕಲ್ಯಾಣಿಗಾರ್ಡನ್, BSK 1st stage, ಬೆಂಗಳೂರು–560050.(2015)

ಪರೀಕ್ಷಿಸಿದ್ದಾರೆ. ರಾಜಕುಮಾರರು ತುಸು ಹೊತ್ತು ಚೆನ್ನಾಗಿ ಯೋಚಿಸಿ ತಮ್ಮತಮ್ಮಲ್ಲೇ ಮಾತನಾಡಿಕೊಂಡರು ಮತ್ತು ಚರ್ಚೆ ನಡೆಸಿದರು. ಇದು ಒಂದು ಸಣ್ಣ ವಿಚಾರಗೋಷ್ಠಿಯಂತೆ ನಡೆಯಿತು. ಇಲ್ಲಿ ಕೆಲವೊಮ್ಮೆ ಸಹಪಾಠಿಗಳೂ ಸಹ ವ್ಯಕ್ತಿತ್ವ ರೂಪಿಸುವಲ್ಲಿ ಮುಖ್ಯ ಪಾತ್ರ ವಹಿಸುತ್ತಾರೆಂಬ ಅಂಶ ಸ್ಪಷ್ಟವಾಯಿತು. ಮಕ್ಕಳು ಗುಂಪುಗುಂಪಾಗಿ ಸಮಸ್ಯೆಯನ್ನು ಬಿಡಿಸಲು ವಿಷಯದ ಬಗ್ಗೆ ಚರ್ಚಿಸಿ ಉತ್ತಮ ತೀರ್ಮಾನಕ್ಕೆಬರುತ್ತಾರೆ.

ಕೊನೆಯಲ್ಲಿ ಬಹುಶಕ್ತಿಯೇ ಹೇಳಿದನು- "ಪೂಜ್ಯರೇ, ಹಣವಂತನನ್ನು ಜನರು ಗೌರವಿಸುತ್ತಾರಾದರೂ, ಆ ಗೌರವದ ಹಿಂದೆ ಆ ವ್ಯಕ್ತಿಯ ದಾನ ಮಾಡುವ ಗುಣವಿದೆ. ಅಗತ್ಯವಿದ್ದವರಿಗೆ ತಮ್ಮಲ್ಲಿದ್ದ ಹಣದ ಒಂದು ಭಾಗವನ್ನು ಹಂಚಿದರೆ ಮಾತ್ರ ಜನರು ಧನಿಕನ ಬಗ್ಗೆ ಸದಭಿಪ್ರಾಯ ಹೊಂದುತ್ತಾರೆ." ಇದನ್ನು ಕೇಳಿದ ಗುರುಗಳಿಗೆ ಆನಂದವಾಯಿತು. ಇದು ಒಬ್ಬ ಪ್ರತಿಭಾವಂತ ಶಿಕ್ಷಕರ ಪ್ರತಿಕ್ರಿಯೆಯಾಗಿದೆ. ಒಂದು ಸುಭಾಷಿತದ ಉಕ್ತಿ ಹೀಗೆ ಹೇಳುತ್ತದೆ.

दानाय लक्ष्मीस्सुकृताय विद्या चिन्ता परब्रह्मविनिश्चयाच ।

परोपकाराय वचांसि यस्य वन्द्यस्त्रिलोकीतिलकः स एव ॥[52]

ಅಂದರೆ,"ಯಾವನಸಂಪತ್ತು - ದಾನಕ್ಕಾಗಿಯೂ, ವಿದ್ಯೆ ಪುಣ್ಯಕ್ಕಾಗಿಯೂ, ಚಿಂತೆ ಪರಬ್ರಹ್ಮನ ಅರಿವಿಗಾಗಿಯೂ, ಮಾತು - ಪರೋಪಕಾರಕ್ಕಾಗಿರುವುದೋ, ಅವನು ಮೂರು ಲೋಕಕ್ಕೂ ತಿಲಕಪ್ರಾಯನಾಗಿದ್ದು, ವಂದಿಸಲು ಯೋಗ್ಯನು." ಇಂಥಹವರೇ ಪೂಜ್ಯರು ಪ್ರಾತಃಸ್ಮರಣೀಯರು. ವಿಷ್ಣುಶರ್ಮರು ಇದೇ ಗೌರವಕ್ಕೆ ಪಾತ್ರರಾಗಿದ್ದಾರೆ ಎಂಬುದನ್ನು ಪಂಚತಂತ್ರದ ಅಧ್ಯಯನ ಮಾಡಿದಾಗ ತಿಳಿದುಬರುತ್ತದೆ. ಅಂದರೆ ಸಂಭಾವಿತನಾರು? ಸಾರ್ಥಕ ವ್ಯಕ್ತಿತ್ವ ಯಾವುದು ಎಂಬುದು.

ಮುಂದುವರೆಸುತ್ತಾ, ಸೋಮಿಲಕನು ಕಥೆಯೊಂದರಿಂದ "ಭದ್ರೆ, ಸಡಿಲಾಗಿರುವ ಮತ್ತು ದಪ್ಪವಾಗಿರುವ ವೃಷಣಗಳು ಬೀಳುತ್ತವೆಯೋ, ಇಲ್ಲವೋ ಎಂದು ಹದಿನೈದು ವರ್ಷಗಳು ಕಾದೆನು" ಎಂಬ ನುಡಿಯನ್ನು ಉದಾಹರಿಸಿದಾಗ ಆ ಪುರುಷನು ಅದೇನೆಂದು ಕೇಳಲು ಸೋಮಿಲಕನು **ಎತ್ತಿನ ವೃಷಣಗಳನ್ನು ಅನುಸರಿಸಿದ ನರಿಯ ಕಥೆ**ಯನ್ನು ಹೇಳಿದನು.

ಒಂದು ಪ್ರದೇಶದಲ್ಲಿ ತೀಕ್ಷ್ಣ ವಿಷಾಣ ಎಂಬ ದೊಡ್ಡ ಎತ್ತೊಂದು ವಾಸಿಸುತ್ತಿತ್ತು. ಒಮ್ಮೆ ಮದವೇರಿದ ಆ ಎತ್ತು, ಗುಂಪಿನಿಂದ ಹೊರಬಂದು ನದೀತೀರವನ್ನು ಕೊಂಬಿನಿಂದ ಮೀಟಿ ಕೆಡವುತ್ತಾ ಹಸಿರು ಹುಲ್ಲನ್ನು ಸ್ವೇಚ್ಛೆಯಿಂದ ಮೇಯುತ್ತಾ ಅರಣ್ಯವನ್ನು ತಲುಪಿತು. ಪ್ರಲೋಭಕನೆಂಬ ನರಿಯೊಂದು ಅದೇಪ್ರದೇಶದಲ್ಲಿ

52. **ಭಟ್. ವಿ.ಎನ್**, ಜ್ಞಾನದೀಪ, ಅ-44, ಸುಭಾಷಿತ ಸುರದ್ರುಮ, ಪು-84.(1993) ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ-577201

ವಾಸಿಸುತ್ತಿತ್ತು. ಒಮ್ಮೆ ಹೆಂಡತಿಯೊಂದಿಗೆ ನದೀತೀರದಲ್ಲಿ ಆರಾಮವಾಗಿ ಕುಳಿತಿತ್ತು. ಅದೇ ಸಮಯದಲ್ಲಿ ತೀಕ್ಷ್ಣ ವಿಷಾಣ ನೀರು ಕುಡಿಯಲು ಬಂದಿತು. ಆಗ ಅದರ ತೂಗಾಡುತ್ತಿರುವ ವೃಷಣಗಳನ್ನು ನೋಡಿದ ಹೆಣ್ಣು ನರಿ ತನ್ನ ಪ್ರಿಯತಮನಿಗೆ ಹೇಳಿತು. "ಸ್ವಾಮಿ, ತೂಗಾಡುತ್ತಿರುವ ಎತ್ತಿನ ಮಾಂಸ ಪಿಂಡಗಳನ್ನು ನೋಡು. ಈ ಕ್ಷಣವೇ ಒಂದು ಪೆಟ್ಟಿನಿಂದ ಬಿದ್ದುಬಿಡುವಂತೆ ನಿಂತಿವೆ. ಆದ್ದರಿಂದ ನೀನು ಇದನ್ನು ಹಿಂಬಾಲಿಸಲು ಆರಂಭಿಸು." ಆಗ ಗಂಡು ನರಿಯು ಹೇಳಿತು–" ಪ್ರಿಯೆ, ಇವುಗಳು ಬೀಳುತ್ತವೆಯೋ ಇಲ್ಲವೋ ಎಂದು ಹೇಳಲು ಬರುವುದಿಲ್ಲ. ಆದ್ದರಿಂದ ವ್ಯರ್ಥ ಪ್ರಯತ್ನಕ್ಕೆ ಏಕೆ ನನ್ನನ್ನು ದೂಡುತ್ತಿರುವೆ? ಇದು ಇಲಿಗಳು ಓಡಾಡುವ ಮಾರ್ಗ. ನಿನ್ನೊಂದಿಗಿದ್ದು ನೀರಿಗಾಗಿ ಬಂದ ಇಲಿಗಳನ್ನು ತಿನ್ನುತ್ತೇನೆ. ನಿನ್ನನ್ನು ಬಿಟ್ಟು ಎತ್ತಿನ ಹಿಂದೆ ಹೋದರೆ ಬೇರೆ ಯಾರಾದರೂ ಈ ಸ್ಥಳವನ್ನು ಆಶ್ರಯಿಸಿಬಿಡುತ್ತಾರೆ. ಯಾರು ಸ್ಥಿರವಾದುದನ್ನು ಬಿಟ್ಟು ಅಸ್ಥಿರವಾದುದರ ಹಿಂದೆ ಹೋಗುತ್ತಾರೋ ಅವರು ಎರಡನ್ನೂ ಕಳೆದುಕೊಂಡು ಮೂರ್ಖರಾಗುತ್ತಾರೆ."[53]

ಹೆಣ್ಣು ನರಿ ಇದನ್ನು ಒಪ್ಪದೆ ಪ್ರಿಯತಮನನ್ನು ಒಬ್ಬ ಹೇಡಿಯೆಂದು ಮೂದಲಿಸಿ ಪುರುಷನಾದವನು ಉತ್ಸಾಹಿಯಾಗಿರಬೇಕು ಎಂದು ತತ್ವ ಬೋಧನೆ ಮಾಡಿತು. ಅದನ್ನು ಕೇಳಿದ ಗಂಡು ನರಿ ಇಲಿಗಳು ದೊರೆಯುವ ಸ್ಥಾನವನ್ನು ಬಿಟ್ಟು ತೀಕ್ಷ್ಣ ವಿಶಾಣಿ ಎತ್ತನ್ನು ಅನುಸರಿಸಲು ತೊಡಗಿತು. ಸ್ತ್ರೀ ವಾಕ್ಯದಿಂದ ಪ್ರೇರಿತನಾದ ಮನುಷ್ಯನು ಮಾಡಬಾರದ ಕೆಲಸವನ್ನು ಯೋಗ್ಯವೆಂದು ತಿಳಿಯುತ್ತಾನೆ, ಹೋಗಬಾರದ ಸ್ಥಳವನ್ನು ಪ್ರಶಸ್ತವೆಂದು ಕಾಣುತ್ತಾನೆ ಹಾಗೂ ತಿನ್ನಬಾರದ್ದನ್ನು ತಿನ್ನಲು ಯೋಗ್ಯವೆಂದು ತಿಳಿಯುತ್ತಾನೆ. ಹೀಗೆ ಆ ನರಿಯು ತನ್ನ ಹೆಂಡತಿಯೊಂದಿಗೆ ಎತ್ತಿನ ಹಿಂದೆ ಅಲೆಯುತ್ತಾ ಹದಿನೈದು ವರ್ಷಗಳು ಕಳೆಯಿತು. ಎತ್ತಿನ ವೃಷಣಗಳು ಬೀಳಲೇ ಇಲ್ಲ. ಕೊನೆಗೆ ಸ್ವಸ್ಥಾನಕ್ಕೆ ಹೋಗಲು ತೀರ್ಮಾನ ಮಾಡಿದವು.

ಅದೇ ಉತ್ಸಾಹದಿಂದ ಕಥೆಯನ್ನು ಮುಂದುವರಿಸಿದರು. ಮುಂದೆ **ಬೇಡ, ಕಾಗೆ, ಆಮೆ, ಜಿಂಕೆ ಮತ್ತು ಇಲಿ ಕಥೆ**ಯಲ್ಲಿ, ಆಪತ್ತನ್ನು ಕಳೆದುಕೊಳ್ಳಲು ಬುದ್ಧಿವಂತರು ದೋಷವಿಲ್ಲದ ಮಿತ್ರರನ್ನು ಮಾಡಿಕೊಳ್ಳಬೇಕು. ಅನೇಕ ನೀತಿಬೋಧನೆಗಳಿವೆ. ಉದಾಹರಣೆಗೆ:– ಆಪತ್ತಿನಲ್ಲಿ ತನಗೆ ತಾನೇ ಹೊರತು ಹೆಂಡತಿ ಮಕ್ಕಳೂ ಅಲ್ಲ; ವಿದ್ವಾಂಸನಾದವನು ಎಲ್ಲರಿಂದಲೂ ಗೌರವಿಸಲ್ಪಡುತ್ತಾನೆ; ಕಷ್ಟ ಕಾಲದಲ್ಲಿ ಸಹಾನುಭೂತಿಯ ಮಾತುಗಳು ಸಾಂತ್ವನವನ್ನು ನೀಡುತ್ತವೆಯಂತೆ; ಜನ್ಮದಾತನು, ಉಪನಯನಗೈದವನು, ವಿದ್ಯಾಗುರು, ಅನ್ನದಾತ ಮತ್ತು ಭಯವನ್ನು ಹೋಗಲಾಡಿಸಿದವನು ತಂದೆಗೆ ಸಮಾನನಂತೆ; ಮರಣ ಕಾಲದಲ್ಲಿ ಆಪ್ತರ ದರ್ಶನವು ಉಭಯರಿಗೂ ಸೌಖ್ಯದಾಯಕವಂತೆ; ಈ ಲೋಕದ ಜೀವಿಗಳ ಕಷ್ಟವೇ ಹೀಗೆ, ಆದ ಗಾಯದ ಮೇಲೆಯೇ

---

53. **ಭರತ ಬಿ.ರಾವ್**, ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ದ್ವಿ.ತಂ. ಪು–145–146, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–560004.

ಪೆಟ್ಟು ಬೀಳುತ್ತದೆ; ತಿನ್ನಲಿಲ್ಲದಿರುವಾಗ ಹಸಿವು ಹೆಚ್ಚು; ಕಷ್ಟದ ಮೇಲೆ ಇನ್ನಷ್ಟು ಕಷ್ಟ; "ಬದುಕಿನಲ್ಲಿ ಗೆಳೆಯರು ಬೇಕು, ಪ್ರತಿಫಲ ಅಪೇಕ್ಷೆ ಇಲ್ಲದೆ ಪರಸ್ಪರರು ನೆರವಾಗಬೇಕು, ಒಗ್ಗಟ್ಟಿದ್ದರೆ ಶತ್ರುವು ಎಂತಹ ಬಲಿಷ್ಠನೇ ಆಗಿರಲಿ ಅವನನ್ನು ಸೋಲಿಸಬಹುದು, ಈ ವಿಷಯವನ್ನು ಮನನಮಾಡಿ ಬದುಕಿನಲ್ಲಿ ಅಳವಡಿಸಿಕೊಳ್ಳಿ."[54]

मित्रवान् साधयत्यर्थान् दुःसाध्यानपि वै यतः।

तस्मान्मित्राणि कुर्वीत समानान्येव चात्मनः ॥[55]

ಅಂದರೆ, ಸಾಧಿಸಲಸಾಧ್ಯವಾದ ಕೆಲಸಗಳನ್ನು ಸಹ ಸ್ನೇಹಿತನನ್ನು ಹೊಂದಿರುವವನು ಸಾಧಿಸುತ್ತಾನೆ. ಆದುದರಿಂದ ತನಗೆ ಸಮಾನರಾಗಿರುವವರನ್ನೇ ಸ್ನೇಹಿತರನ್ನಾಗಿ ಮಾಡಿಕೊಳ್ಳಬೇಕು.

ಮಿತ್ರರಿಲ್ಲದವನು ಎಂದಿಗೂ ಆಪತ್ತಿನಿಂದ ಹೊರಬರಲಾರರು. ಹೀಗೆ ಅರಿತುಕೊಂಡು ವಿವೇಕಿಗಳು ಮಿತ್ರರನ್ನು ಸಂಪಾದಿಸಬೇಕು. ಮಿತ್ರರೊಂದಿಗೆ ಕಪಟದ ವ್ಯವಹಾರವನ್ನು ಮಾಡಬಾರದು. ಏಕೆಂದರೆ ಯಾರು ಮಿತ್ರರನ್ನು ಗಳಿಸಿಕೊಂಡು ಅವರೊಂದಿಗೆ ಕಪಟದಲ್ಲಿ ವರ್ತಿಸುವುದಿಲ್ಲವೋ ಅವರು ಎಂದಿಗೂ ಪರಾಭವ ಹೊಂದುವುದಿಲ್ಲ.[56] ಕಥಾ ನಿರೂಪಣೆಯನ್ನು ಮುಗಿಸುತ್ತಾ ವಿಷ್ಣುಶರ್ಮರು ಮತ್ತೊಂದು ಉತ್ತೇಜಕ ಪ್ರಶ್ನೆ ಕೇಳಿದರು. "ಈ ಕಥೆ ನಮಗೇನು ಬೋಧಿಸುತ್ತದೆ?" ಕೂಡಲೇ ಬಹುಶಕ್ತಿ ಹೇಳಿದನು– "ನಿಷ್ಕಪಟ ಮಿತ್ರತ್ವದ ಈ ಕಥೆಯು ಒಳ್ಳೆಯ ಗೆಳೆಯನನ್ನು ಹೊಂದಬೇಕು ಎಂದು ತಿಳಿಸುತ್ತದೆ." ಅನಂತಶಕ್ತಿ ಹೇಳಿದನು – "ಎಲ್ಲರೂ ಪರಸ್ಪರ ಪ್ರಾಮಾಣಿಕತೆಯನ್ನು ಹೊಂದಬೇಕು." ನಂತರ ಉಗ್ರಶಕ್ತಿ ಹೇಳಿದನು – "ಮಿತ್ರ ಯಾರೇ ಆಗಲಿ, ಅವರಲ್ಲಿ ಭೇದಭಾವವನ್ನು ಎಣಿಸಬಾರದು". ಹೀಗೆ ಮಕ್ಕಳಿಂದಲೇ ಒಳ್ಳೆಯ ಅಭಿಪ್ರಾಯಗಳು ಹೊರಸೂಸುವಂತೆ ಪ್ರೇರೇಪಿಸುತ್ತಿದ್ದರು. ಇದು ಪ್ರತಿಭಾವಂತ ಶಿಕ್ಷಕರ ಲಕ್ಷಣ.

ಉತ್ತಮ ಶಿಕ್ಷಕರಾದವರು ತಮ್ಮಬೋಧನೆಯಲ್ಲಿ ಇಂಥಹ ಒಂದು ಮಾದರಿ ಅಂದರೆ ಮಕ್ಕಳೇ ಆಲೋಚಿಸುವಂತೆ ಮಾಡಿ ಮಕ್ಕಳಿಂದಲೇ ವಿಚಾರಗಳನ್ನು ಹೊರಸೆಳೆಯಬೇಕು. ಶಿಕ್ಷಕರೇ ಪ್ರಾರಂಭದಿಂದ ಕೊನೆಯವರೆಗೂ ಒಂದೇ ಸಮನೆ ಸೋನೆ ಮಳೆ ಸುರಿದಂತೆ ಗೊತ್ತಿರುವುದನ್ನೆಲ್ಲಾ ಏಕಮುಖವಾಗಿ ಹೇಳಿಕೊಂಡು ಹೋಗುತ್ತಿದ್ದರೆ ಅದು ಸಂಪೂರ್ಣ ವ್ಯರ್ಥ. ವಿದ್ಯಾರ್ಥಿಗಳ ಸರ್ವತೋಮುಖ ಬೆಳವಣಿಗೆಗೆ ಅವರದೇ ಸಾಮರ್ಥ್ಯಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡು, ರಚನಾತ್ಮಕ ಪ್ರೋತ್ಸಾಹ ನೀಡಿ ಉತ್ತಮ ಫಲವನ್ನು ಪಡೆಯುವಂತೆ ಬೋಧನೆ ಮಾಡಬೇಕು. ಆಧುನಿಕ ಶಿಕ್ಷಣ ಪದ್ಧತಿಯಲ್ಲಿ ಶಿಕ್ಷಕರು, ಬೋಧಕರು,

---

54. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತಂತ್ರ–2, ಪು–130–133. ವರ್ಣಿಲ, 39/2–11, ಕಲ್ಯಾಣಿ ಗಾರ್ಡನ್, BSK 1st stage, ಬೆಂಗಳೂರು–560050.(2015)
55. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಸಂಪ್ರಾಪ್ತಿ– ಶ್ಲೋ–27, ಪು–321, (1993)ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
56. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ದ್ವಿ.ತಂ.ಪು–156. (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–560004.

ಉಪಾಧ್ಯಾಯರು ಅನ್ನುವುದಕ್ಕಿಂತ **FACILITATORS** ಅಥವಾ ಸುಗಮಗಾರರು ಎಂದು ಕರೆಯುತ್ತಾರೆ. ಇದನ್ನು "ವಿದ್ಯಾರ್ಥಿಗಳನ್ನು ಉತ್ತಮ ನಾಗರಿಕರನ್ನಾಗಿ ರೂಪಿಸುವುದಕ್ಕೆ ಮತ್ತು ವ್ಯಕ್ತಿತ್ವ ವಿಸನಗೊಳಿಸಲು ಅವರ ಭವಿಷ್ಯದ ಹಿತಕ್ಕೆ ಸುಗಮ ಮಾರ್ಗವನ್ನು ಸೂಚಿಸುವ ಸಹಾಯಕರೆಂದೂ ಹೇಳಬಹುದು. ವಿಷ್ಣುಶರ್ಮರು ಆಕಾಲದಲ್ಲಿಯೇ ರಾಜಕುಮಾರರ ಶೈಕ್ಷಣಿಕ ಮಾರ್ಗದರ್ಶನದ ವಿಚಾರದಲ್ಲಿ ಒಬ್ಬ ಒಳ್ಳೆಯ ಫೆಸಿಲಿಟೇಟರ್ ಆಗಿ ಕಾರ್ಯ ನಿರ್ವಹಿಸಿದ್ದರು. ಆದ್ದರಿಂದಲೇ ಇಂದಿಗೂ ಶಿಕ್ಷಣ ಸೇವೆ, ಬೋಧನಾ ಸೇವೆ, ಪರಿಹಾರಾತ್ಮಕ ಸೇವೆ, ರಕ್ಷಣಾ ಸೇವೆ, ಆರೋಗ್ಯ ಸೇವೆ ಇತ್ಯಾದಿ ಹೆಸರುಗಳು ಬಂದಿರುವುದಾಗಿದೆ. ಒಂದು ವಿಶೇಷ ಲಕ್ಷಣವೆಂದರೆ, ಆ ಕಾಲದಲ್ಲೇ ಇಂತಹ ಒಂದು ಮುಂದುವರಿದ ಶೈಕ್ಷಣಿಕ ಸೇವಾ ಮನೋಭಾವನೆಯನ್ನು ಪಂಚತಂತ್ರ ಯೋಜಿಸಿತ್ತು ಎಂಬುದು.

ರಾಜಕುಮಾರರು ಹೇಳಿದ ವಿಚಾರಗಳನ್ನು ಕೇಳಿದ ಗುರುಗಳಿಗೆ ಸಂತೋಷವಾಯಿತು. ಶಿಷ್ಯರಾಡಿದ ಮಾತುಗಳನ್ನೇ ಆಧಾರವಾಗಿಟ್ಟುಕೊಂಡು, ಬದುಕಿನಲ್ಲಿ ಗೆಳೆಯರು ಬೇಕು. ಪ್ರತಿಫಲಾಪೇಕ್ಷೆಯಿಲ್ಲದೆ ಪರಸ್ಪರರು ನೆರವಾಗಬೇಕು. ಒಗ್ಗಟ್ಟಿದ್ದರೆ ಶತ್ರುವು ಎಂಥಹ ಬಲಿಷ್ಠನೇ ಆಗಿರಲಿ, ಅವನನ್ನು ಪರಾಜಯಗೊಳಿಸಬಹುದು. ಈ ವಿಷಯವನ್ನು ಮನನ ಮಾಡಿಕೊಂಡು ನೀವೂ ನಿಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳಿ ಎಂದು ತಿಳುವಳಿಕೆಯನ್ನು ನೀಡಿದರು. ಅಮೃತಸದೃಶವಾದ "ಮಿತ್ರ" ಎಂಬ ಎರಡಕ್ಷರ ಮೊಟ್ಟಮೊದಲು ಯಾರಿಂದ ಸೃಷ್ಟಿಸಲ್ಪಟ್ಟಿತು ಎಂಬುದು ನಿಗೂಢ. ಆದರೆ ನಿಜವಾದ ಮಿತ್ರ ಯಾರು? ಅವನ ಲಕ್ಷಣಗಳೇನು? ಎಂಬುದನ್ನು ಭರ್ತೃಹರಿಯ ನೀತಿಶತಕದಲ್ಲಿ ಸೊಗಸಾಗಿ ಹೇಳಿರುವುದನ್ನು ಸ್ಮರಿಸಬಹುದು

पापान्निवारयति योजयते हिताय गुह्यं निगूहति गुणान् प्रकटीकरोति ।

आपद्गतं च न जहाति ददाति काले सन्मित्रलक्षणमिदं निगदन्ति सन्तः ॥[57]

ಮಿತ್ರನಾದವನು ಗೆಳೆಯನನ್ನು ಪಾಪಾಚರಣೆಯಿಂದ ತಡೆಯುತ್ತಾನೆ; ಹಿತಕರವಾದ ಕಾರ್ಯಗಳಲ್ಲಿ ತೊಡಗಿಸುತ್ತಾನೆ; ರಹಸ್ಯವನ್ನು ಬಚ್ಚಿಡುತ್ತಾನೆ; ಗುಣಗಳನ್ನು ಬಹಿರಂಗಗೊಳಿಸುತ್ತಾನೆ; ಆಪತ್ಕಾಲದಲ್ಲಿ ಕೈಬಿಡುವುದಿಲ್ಲ; ಕಷ್ಟಕಾಲದಲ್ಲಿ ಸಹಾಯ ಮಾಡುತ್ತಾನೆ; ಇವು ಒಳ್ಳೆಯ ಗೆಳೆಯನ ಲಕ್ಷಣಗಳೆಂದು ಸಜ್ಜನರು ಹೇಳುತ್ತಾರೆ. ಇಂತಹ ತಿಳುವಳಿಕೆಯನ್ನು ವಿಷ್ಣುಶರ್ಮರು ತಮ್ಮಶಿಷ್ಯರಿಗೆ ಹೇಳುತ್ತಾ, ಅವರಲ್ಲಿಯೂ ಆ ಬಗ್ಗೆ ಉತ್ತಮ ಆಲೋಚನೆಗಳು ಬೆಳೆಯುವಂತೆ ಪ್ರೋತ್ಸಾಹಿಸುತ್ತಿದ್ದರು. ಹೀಗೆ ಎರಡನೆಯ ತಂತ್ರ ಮಿತ್ರಸಂಪ್ರಾಪ್ತಿ ಭಾಗದಲ್ಲಿ ಅದ್ಭುತವಾದ ಆರು ಉಪಕಥೆಗಳಿದ್ದು, ಉತ್ತಮ ಮಿತ್ರನ ಲಕ್ಷಣಗಳನ್ನು ವಿವರಿಸಲಾಗಿದೆ. ಒಳ್ಳೆಯ ಸಹವಾಸ ಮಾಡಿದರೆ ನಮ್ಮಲ್ಲೂ ಉತ್ತಮ ಗುಣಗಳು ಬೆಳೆಯುತ್ತವೆ ಎಂಬ ಅಂಶದ ಅರಿವು ರಾಜಕುಮಾರರಿಗೆ

**57. ಭರ್ತೃಹರಿ, ನೀತಿಶತಕ,** ಪರೋಪಕಾರ ಪದ್ಧತಿ–ಶ್ಲೋ–72.

ಉಂಟಾಗಲಿ, ಮುಂದೆ ಪ್ರಜಾಪಾಲನಾ ಜವಾಬ್ದಾರಿಯನ್ನು ನಿರ್ವಹಿಸುವ ಸಂದರ್ಭದಲ್ಲೂ ನೆರವಾಗಲಿ ಎಂಬ ಸದುದ್ದೇಶದಿಂದ ಕಥಾನಿರೂಪಣೆ ಮೂಲಕ ಪರಿಣಾಮಕಾರಿ ಶಿಕ್ಷಣವನ್ನು ವಿಷ್ಣುಶರ್ಮರು ಒದಗಿಸಿದ್ದಾರೆ.

ಶೈಕ್ಷಣಿಕ ಮನೋವಿಜ್ಞಾನ ಸೂಚಿಸುವುದೇನೆಂದರೆ, ಪಾಠ ಬೋಧಿಸುತ್ತಿರುವಾಗ ಮಾನಸಿಕವಾಗಿ ಮಕ್ಕಳು ಚಟುವಟಿಕೆಯಿಂದಿರಬೇಕು. ಅವರ ಆಲೋಚನೆ, ವಿವೇಚನೆ, ತೀರ್ಮಾನ, ವಿಮರ್ಶೆ ಮುಂತಾದ ಮನಶ್ಶಕ್ತಿಗಳು ಕೆಲಸಮಾಡಲು ನೆರವಾಗುವಂತೆ ಪ್ರಶ್ನೆಗಳನ್ನು ಕೇಳಿ ಉತ್ತರ ಹೇಳಿಸುತ್ತಾ ಪಾಠವನ್ನು ಮುಂದುವರಿಸುವುದು ಮುಖ್ಯ. ಆ ಕ್ರಮದ ಮೂಲಕ ಮಕ್ಕಳು ಬೋಧಿಸಿದ್ದನ್ನು ಕಲಿಯುವುದರ ಜೊತೆಗೆ ಆಲೋಚನೆ, ವಿವೇಚನೆಯೊಂದಿಗೆ ಚಟುವಟಿಕೆಯಿಂದ ಇರುವುದನ್ನು ಕಲಿಯುತ್ತಾರೆ. ಅವರ ಮನಸ್ಸಿನ ಆ ಶಕ್ತಿಗಳೂ ಸಂಸ್ಕರಣಗೊಳ್ಳುತ್ತವೆ. ಒಂದೊಂದು ಕಥೆಯನ್ನು ಕೇಳಿದಾಗಲೂ ಮಕ್ಕಳಿಗೆ ತೃಪ್ತಿ ಸಂತೋಷಗಳು ದೊರಕುವಂತಹ ಸನ್ನಿವೇಶಗಳನ್ನು ಪಂಚತಂತ್ರ ಕಥಾಗುಚ್ಛದಲ್ಲಿ ಅಳವಡಿಸಲಾಗಿದೆ. ಹಾಗೆಯೇ ಪ್ರೋತ್ಸಾಹದ ಪ್ರಶಂಸೆಯನ್ನು ಕಾಣಬಹುದು. ಬೋಧನೆಯ ಸಾಫಲ್ಯಕ್ಕೆ ಕಲಿವೇ ಗುರುತು. ಆದ್ದರಿಂದ ಕಲಿವು ಖಚಿತವಾಗಿ ಸಿದ್ಧಿಸುವಂತೆ ಬೋಧನ ಕ್ರಮ ರೂಪುಗೊಳ್ಳಬೇಕು. ಸೂಕ್ತ ಬೋಧನ ಕ್ರಮಗಳನ್ನು ಕಂಡು ಕೊಳ್ಳಲು ಪ್ರಖ್ಯಾತ ಅಮೆರಿಕನ್ ಮನೋವಿಜ್ಞಾನಿ **THORNDIKE** ರವರು ಕಲಿವಿನ ಕೆಲವು ನಿಯಮಗಳನ್ನು ರೂಪಿಸಿದ್ದಾರೆ." ಮಕ್ಕಳು ಸ್ವತಃ ಯಾವುದಾದರೂ ಅಂಶವನ್ನು ಅರಿಯಲು ಕಾತರ ತೋರಿಸಿದಾಗ ಬೋಧಿಸಿದ ಪಾಠ ಅರ್ಥವಾಗುತ್ತದೆ. ಆಗ ಬೋಧನೆ ಯಶಸ್ವಿಯಾಗುತ್ತದೆ." ಇದನ್ನು ಪಂಚತಂತ್ರದ ಒಂದೊಂದು ತಂತ್ರವೂ, ತಂತ್ರಗಳಲ್ಲಿ ಯೋಜಿಸಿರುವ ಕಥಾಗುಚ್ಛಗಳಲ್ಲಿನ ಒಂದೊಂದು ಕಥೆಯೂ ಮುಂದಿನ ಕಥೆಗೆ ಕಾತರದಿಂದ ಕಾಯುವಂತಹ ಸನ್ನಿವೇಶಗಳನ್ನು ಅಚ್ಚುಕಟ್ಟಾಗಿ ವ್ಯವಸ್ಥೆಗೊಳಿಸಿದೆ. ಇಷ್ಟಲ್ಲದೆ ಪೂರ್ವಾನುಭವವನ್ನು ಸ್ಮರಣೆಗೆ ತಂದು ಮುಂದಿನ ಪಾಠಕ್ಕೆ ಸಜ್ಜುಗೊಳಿಸಲಾಗಿದೆ. ಹಾಗೆ ಸಜ್ಜಾಗಿರುವ ಮನಸ್ಸು ಪಾಠದ ಮೇಲೆ ಅವಧಾನವನ್ನು ಕೇಂದ್ರೀಕರಿಸುತ್ತದೆ. ಆಗ ಕಲಿವು ಸಿದ್ಧಿಸುತ್ತದೆ. ಮಕ್ಕಳಿಗೆ ನಿಷ್ಠೆಯಿಂದ, ಕಲಿಯಲು ಪರಿತಪಿಸುವಂತೆ ಮಕ್ಕಳನ್ನು ಪ್ರೇರೇಪಿಸುವುದು ಉತ್ತಮ ಬೋಧಕನ ಕರ್ತವ್ಯವಾಗಿದೆ ಎಂದು ಶೈಕ್ಷಣಿಕ ಮನೋವಿಜ್ಞಾನ ಹೇಳುತ್ತದೆ. ಪಂಚತಂತ್ರದಲ್ಲಿ ವಿಷ್ಣುಶರ್ಮರು ಇದನ್ನು ಬಹಳ ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಬೋಧಕ ವೃತ್ತಿಕೌಶಲ್ಯವನ್ನು ಮೆರೆಸಿದ್ದಾರೆ. ಒಂದು ಸಂಸ್ಕೃತ ಸುಭಾಷಿತ ಹೀಗೆ ಹೇಳುವುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು:–

यथा खनन्खनित्रेण नरो वार्यधिगच्छति ।

तथा गुरुतरां विद्यां शुश्रूषुरधिगच्छति ॥[58]

ಅಂದರೆ, ಹೇಗೆ ಗುದ್ದಲಿಯಿಂದ ನಿರಂತರ ಒಂದೇ ಕಡೆ ಗುಡ್ಡ ತೋಡುತ್ತಾ ಹೋದರೆ ಮನುಷ್ಯನಿಗೆ ಭೂಮಿಯೋಳಗಿನ ನೀರು ಸಿಗುತ್ತದೆಯೋ, ಅದೇ ರೀತಿ ಗುರುಗಳ ಸೇವೆಯನ್ನು ನಿಷ್ಠೆಯಿಂದ ಮಾಡುವ ಮತ್ತು ಅವರಿಂದ ವಿದ್ಯೆಯನ್ನು ಕಲಿಯಲು ಪರಿತಪಿಸುವ ವಿದ್ಯಾರ್ಥಿಗಳಿಗೆ ಗುರುಗಳಿಂದ ವಿದ್ಯೆಯು ಖಂಡಿತ ಲಭಿಸುತ್ತದೆ. ಆ ರೀತಿಯಲ್ಲಿ ಶಿಷ್ಯರನ್ನು ಪ್ರೇರೇಪಿಸಿ ಪ್ರೋತ್ಸಾಹಿಸಿ, ಕಲಿಕೆಯಲ್ಲಿ ಶ್ರದ್ಧಾಭಕ್ತಿಯನ್ನುಂಟು ಮಾಡುವವರೂ ಗುರುಗಳೇ. ಪಂಚತಂತ್ರದಲ್ಲಿ ಬರುವ ಸೂಕ್ತಿಯೊಂದು ಕಲಿಯುವವನ ಲಕ್ಷಣಗಳನ್ನು ಸೂಚಿಸುತ್ತದೆ.

यः सततं परिपृच्छति श्रुणोति सन्धारयत्यनिशम् ।

तस्य दिवाकरकिरणैर्नलिनीव विवर्ध्दते बुध्दिः ॥[59]

ಅಂದರೆ, ಯಾವನು ಯಾವಾಗಲೂ ಪ್ರಶ್ನೆ ಮಾಡುತ್ತಾನೋ, ಕಿವಿಗೊಟ್ಟು ಕೇಳುತ್ತಾನೋ ಮತ್ತು ಯಾವಾಗಲೂ ಚೆನ್ನಾಗಿ ಮನದಟ್ಟುಮಾಡಿಟ್ಟುಕೊಳ್ಳುತ್ತಾನೆಯೋ ಅವನ ಬುಧ್ಧಿಯು ಸೂರ್ಯಕಿರಣಗಳಿಂದ ತಾವರೆಯು ಹೇಗೋ ಹಾಗೆ ಬೆಳೆಯುತ್ತದೆ. ಈ ಎಲ್ಲ ಲಕ್ಷಣಗಳನ್ನೂ ಪ್ರತಿಭಾನ್ವಿತ ಗುರುಗಳಾದ ವಿಷ್ಣುಶರ್ಮರು ರಾಜನಂದನಲ್ಲಿ ಮೂಡಿಸಿದ್ದಾರೆ. ಶೈಕ್ಷಣಿಕ ಮನೋವಿಜ್ಞಾನದ ನಿಯಮಗಳು, ಕ್ರಮಗಳು ಶಿಕ್ಷಕರಿಗೆ ಇದನ್ನೇ ಸೂಚಿಸುತ್ತವೆ.



**58. ಮನುಸ್ಮೃತಿ,** 2–218.

**59. ಸುಧಾಕರ್ ಮಾಲವೀಯ,** ಸಂಪಾ–ಅನು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ,–ಶ್ಲೋ–87 ಪು–787 (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

# ಅಧ್ಯಾಯ-6

## ಅರಿವು-ಅರಿವೇ ಗುರು-ಮನಶ್ಶಕ್ತಿ

## 6.1. ಅರಿವು :– ಅರ್ಥ–ವ್ಯಾಪ್ತಿ.

यदा किञ्चिज्ज्ञोऽहं गज इव मदान्धः समभवम्

तदा सर्वज्ञोऽस्मीत्यभवदवलिप्तं मम मनः ।

यदा किञ्चित्किञ्चिद्बुधजनसकाशादवगतम्

तदा मूर्खोऽस्मीति ज्वर इव मदो मे व्यपगतः ॥[1]

ಇದರರ್ಥವೇನೆಂದರೆ, ನನಗೆ ಅಲ್ಪಜ್ಞಾನ ಲಭಿಸಿದಾಗ ಕಾಡಾನೆಯ ದರ್ಪದಂತೆ ಕುರುಡನಾಗಿ ನಾನೇ ಸರ್ವಜ್ಞನೆಂದು ಭಾವಿಸಿದ್ದೆ. ಯಾವಾಗ ಬುದ್ಧಿವಂತರ ಸಹವಾಸ ಸ್ವಲ್ಪ ಸ್ವಲ್ಪವಾಗಿ ಲಭಿಸಿತೋ, ಆಗ ನಾನು ದಡ್ಡನೆಂಬುದರ ಅರಿವಾಗಿ ಜ್ವರದಂತೆ ನನ್ನ ಗರ್ವವು ಪೂರ್ಣವಾಗಿ ಇಳಿಯಿತು. ಕವಿ ಭರ್ತೃಹರಿಯು ಜನಪ್ರಿಯ ನೀತಿಶತಕದಲ್ಲಿ ಹೀಗೆ ಅರಿವಿನ ಬಗ್ಗೆ ಬಹಳ ಸೊಗಸಾಗಿ ಹೇಳಿದ್ದಾನೆ.

ಅರಿವು ಎಂದರೆ 'ತಿಳಿವು', 'ಜ್ಞಾನ' ಎಂದು ಸಾಧಾರಣ ಭಾಷೆಯಲ್ಲಿ ಅರ್ಥೈಸಲಾಗುತ್ತದೆ. "ಅರಿವು" ಮನಶ್ಶಾಸ್ತ್ರ ಮತ್ತು ತತ್ವ ಶಾಸ್ತ್ರಗಳಲ್ಲಿ ಮನಸ್ಸಿನ ಒಂದು ಗುಣ ಅಥವಾ ಸ್ಥಿತಿ ಎಂದು ಪರಿಗಣಿಸಲಾಗುತ್ತದೆ. ಮನಶ್ಶಾಸ್ತ್ರದ ಪ್ರಕಾರ ಅರಿವು–**(Cognition)** ಸಂವೇದನೆ, ಭಾವನೆ, ಅನುಭೂತಿ**(Feeling )** ಮತ್ತು ಸಂಕಲ್ಪ ಇಚ್ಛಾಶಕ್ತಿ, ಪ್ರೇರಣೆ**(Conation)** – ಇವು ಮೂರು ಅಂತಿಮ ಕ್ರಿಯೆಗಳು. ಜೀವನದಲ್ಲಿ ಇವುಗಳನ್ನು ಪ್ರತ್ಯೇಕಿಸುವುದು ಕಷ್ಟ. ಅಂದರೆ ಈ ಮೂರೂ ಎಲ್ಲ ಕಡೆಯೂ ಒಟ್ಟಿಗೆ ಕೆಲಸ ಮಾಡುತ್ತವೆ. ಒಂದೊಂದು ಕಡೆ ಒಂದೊಂದರ ಪ್ರಭಾವ ಹೆಚ್ಚು ಇರುವುದರಿಂದ ಅವನ್ನು ಗುರುತಿಸಲು ಸಾಧ್ಯ. ಅನುಭೂತಿ ಮತ್ತು ಇಚ್ಛಾ – ಶಕ್ತಿಗಳಲ್ಲದೆ ಉಂಟಾಗುವ ಪ್ರಜ್ಞೆಯನ್ನು ಅರಿವು ಎನ್ನಬಹುದು. ಪ್ರಾಣಿಗಳೆಲ್ಲದರ ಮೂಲ ಪ್ರವೃತ್ತಿ ಹೊರಗಿನ ಜಗತ್ತನ್ನು ಅರಿಯುವುದಾಗಿದೆ. ಜೀವಿಗಳು ಮತ್ತು ಪರಿಸರದ ನಡುವೆ ಇರುವ ಅನಿವಾರ್ಯ ಸಂಬಂಧದ ಒಂದು ಸಾಧನವಾಗಿ ಅರಿವು ಅಥವಾ ಬೋಧೆ ಜೀವಿಯ ಪ್ರಗತಿಪಥದಲ್ಲಿ ಕಾಣಿಸಿಕೊಳ್ಳುತ್ತದೆ. ಇಂದ್ರಿಯಗಳು ಈ ಅರಿವಿನ ಸಾಧನೆಯಲ್ಲಿ ಒಂದು ವಿಧಾನವಾಗಿದೆ. ''ಅರಿವಿನ ದಾರಿಯಲ್ಲಿ ಮೊದಲ ಹೆಜ್ಜೆ ಈ ಇಂದ್ರಿಯಾನುಭವ. **(sensation)** ಆದ್ದರಿಂದ ಇಂದ್ರಿಯಗಳನ್ನು ಜ್ಞಾನ ದ್ವಾರಗಳು ಎಂದು ಕರೆಯುತ್ತಾರೆ".

ಹೀಗೆಂದು**WILLIAM JAMES** ರವರು ಹೇಳಿದ್ದಾರೆ. **EDWARD B.TITCHENER** ಬಣ್ಣಿಸಿದ್ದಾರೆ – "ಇಂದ್ರಿಯಾನುಭವಗಳು ಮೂಲಭೂತವಾದ ಮಾನಸಿಕ ಪ್ರಕಾರಗಳು" ಎಂದು. ಇಂದ್ರಿಯಾನುಭವಗಳ ಮೂಲಕ ಅರಿವಿನ ರಚನೆಯಾಗುತ್ತದೆಂದು ಇವನ ವಾದವಾಗಿದೆ. ಇಂದ್ರಿಯ ದ್ವಾರಗಳು ಮಾನವನಲ್ಲಿ

---

1. **ಭರ್ತೃಹರಿ, ನೀತಿಶತಕ,** ಮೂರ್ಖಪದ್ಧತಿ –ಶ್ಲೋ–೮.

ಹೆಚ್ಚಾಗಿದ್ದು ಅವುಗಳ ಸಾಮರ್ಥ್ಯವೂ ಅಧಿಕವಾಗಿದೆ. ಸಂವೇದನೆಗಳ ಇಂಗಿತವನ್ನು ಪರಿಷ್ಕಾರವಾಗಿ ಅರಿಯುವ ವ್ಯವಧಾನ ಮನುಷ್ಯನ ವೈಶಿಷ್ಟ್ಯವಾಗಿದೆ. ಈ ಕಾರಣದಿಂದಲೇ ಮನುಷ್ಯ ಪ್ರಕೃತಿ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಲು ಶಕ್ತನಾಗಿರುತ್ತಾನೆ. ಇಂದ್ರಿಯಗಳೊಂದೊಂದೂ ಒಂದೊಂದು ಬಗೆಯ ಪ್ರಚೋದನೆಯನ್ನು ಗ್ರಹಣಮಾಡಲು ಸಮರ್ಥವಾಗಿರುತ್ತದೆ – ಕಣ್ಣು – ಬೆಳಕನ್ನು, ಕಿವಿ – ಶಬ್ದಗಳನ್ನು, ಚರ್ಮ – ಸ್ಪರ್ಷವನ್ನು, ಮೂಗು – ವಾಸನೆಯನ್ನು ಗ್ರಹಿಸುತ್ತವೆ. ಹೀಗೆ ಇಂದ್ರಿಯಗಳಿಗೆ ಒಂದು ನಿಯತ ವ್ಯಾಪಾರವಿದೆ. ಪ್ರತ್ಯಭಿಜ್ಞೆ **(recognition)**ಯಲ್ಲಂತೂ ನಾನಾ ಇಂದ್ರಿಯಾರ್ಥಗಳ ಸಮಷ್ಟಿ ವ್ಯಾಪಾರ ಇರುತ್ತದೆ. ಇಂದ್ರಿಯಗಳು ಮಾತ್ರ ಕೆಲಸ ಮಾಡಿದರೆ ಅರಿವು ಮೂಡುವುದಿಲ್ಲ.[2] ಶ್ರೀಮದ್ಭಗವದ್ಗೀತಾಮೃತ– ಕರ್ಮಯೋಗದಲ್ಲಿ ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಬೋಧಿಸುವಾಗ ಹೀಗೆ ಉಪದೇಶಮಾಡಿದ್ದಾನೆ.

इन्द्रियाणि पराण्याहुः इन्द्रियेभ्यः परं मनः ।

मनसस्तु परा बुद्धिर्यो बुद्धेः परतस्तु सः ॥[3]

ಅಂದರೆ, ವಿಷಯಗಳಿಗಿಂತ ಇಂದ್ರಿಯಗಳು ಉತ್ತಮ. ಇಂದ್ರಿಯಗಳಿಗಿಂತ ಮನಸ್ಸು ಉತ್ತಮ. ಮನಸ್ಸಿಗಿಂತ ಬುದ್ಧಿ ಮೇಲು. ಬುದ್ಧಿಗಿಂತ ಆತ್ಮವು ಶ್ರೇಷ್ಠವೆಂದು ಹೇಳುತ್ತಾರೆ. ಇದೇ ಅಂತಿಮ 'ಮುಕ್ತಿ'' ಅರಿವು'. **(Salvation)** ಇಂದ್ರಿಯಗಳಿಂದ ಸಿದ್ಧವಾದ ಅನುಭವಗಳಿಗೆ ಅರ್ಥವನ್ನು ಸೇರಿಸಿ ಪ್ರತ್ಯಕ್ಷಾನುಭವ **(perception)** ಉಂಟಾದಾಗಲೇ ಅರಿವು ಪೂರ್ಣವಾಗುವುದು. ಆದರೆ ಇಂದ್ರಿಯಾನುಭವ ಎಲ್ಲಿ? ಯಾವಾಗ? ಬೋಧನೆಯ ಸ್ಥಿತಿಯನ್ನು ಮುಟ್ಟುತ್ತದೆ ಎಂಬುದು ಶಾಸ್ತ್ರಕ್ಕೂ, ಮನಶ್ಶಾಸ್ತ್ರಕ್ಕೂ ಸಮನಾದ ಸಮಸ್ಯೆ. ಅರಿವಿನ ಸಮಸ್ಯೆ ತತ್ವಶಾಸ್ತ್ರದಿಂದಲೇ ಮನಶ್ಶಾಸ್ತ್ರಕ್ಕೆ ಬಂದ ದತ್ತಿ. 'ಕಾಗ್ನಿಷನ್'ಎಂಬ ಆಂಗ್ಲ ಭಾಷೆಯ ಪದ 'ಗ್ಲಾಸಿಸ್' ಎಂಬ ಧಾತುವಿನಿಂದ ಬಂದದ್ದು. ಇದಕ್ಕೆ ಸಂಸ್ಕೃತದ 'ಜ್ಞಾ'ಧಾತು ಸಮಾನವಾದದ್ದು. 'ಜ್ಞಾ' ಎಂದರೆ ತಿಳಿಯುವುದು ಎಂದರ್ಥ. ಆದರೆ ಆಂಗ್ಲದ 'ಕಾಗ್ನಿಷನ್' ಪದದ ಸಹಕಾರದಿಂದ, ಒಡನೆ ಎಂಬರ್ಥದ 'ಕೊ' ಎಂಬ ಉಪಸರ್ಗಕ್ಕೂ ಪ್ರಾಧಾನ್ಯವಿದೆ. ಒಟ್ಟಾರೆ ವಸ್ತುವಿನ ಸಹಾಯದಿಂದ ತಿಳಿಯುವುದು 'ಬೋಧೆ'. ಯಾವುದಾದರೊಂದು ವಸ್ತು ಇಂದ್ರಿಯಗೋಚರವಾಗಿ ಎದುರಿಗೆ ಇದ್ದರೇನೇ ಬೋಧೆಯಾಗುವುದು. ಪ್ರತ್ಯಕ್ಷ, ಕಲ್ಪನೆ, ಪ್ರತ್ಯಯ **(concept)** ಸ್ಮೃತಿ, ನಿರೀಕ್ಷೆ, ಪ್ರತ್ಯಭಿಜ್ಞೆ ಮುಂತಾದ ಕ್ರಿಯೆಗಳೆಲ್ಲವನ್ನೂ ಬೋಧೆಯಲ್ಲಿ ಸೇರಿಸಿರುತ್ತಾರೆ.

---

2. **ಅರಿವು** – ವಿಕಿಪೀಡಿಯ, HTTPS://on.m.wikipedia.org
3. **ಶ್ರೀಮದ್ಭಗವದ್ಗೀತಾ,** ಕರ್ಮಯೋಗ – ಶ್ಲೋ–42, ಗೀತಾಪ್ರೆಸ್, ಗೋರಕ್ ಪುರ –273005.

ವಸ್ತುವು ಕಣ್ಣೆದುರಿಗಿದ್ದು ಅದು ಇಂದ್ರಿಯ ವಿವರಗಳನ್ನು ಹೊಕ್ಕು ಆ ವಸ್ತುವಿನ ಅರಿವುಂಟಾದರೆ ಅದು 'ಪ್ರತ್ಯಕ್ಷ'; ವಸ್ತು ದೂರವಿದ್ದು, ಇಂದ್ರಿಯಗಳಿಗೆ ನೇರ ಸಂಬಂಧವಿಲ್ಲದಿದ್ದರೂ ಅದರ ಅರಿವುಂಟಾದರೆ ಅದು 'ಕಲ್ಪನೆ'; ಪ್ರತ್ಯಕ್ಷದಿಂದ ಉಂಟಾದ ಚಿತ್ತದೊಳಗಿನ ಚಿತ್ತವೇ 'ಪ್ರತ್ಯಯ'; ದೂರದ ವಸ್ತು ಕಾಲದ ದೃಷ್ಟಿಯಿಂದ ಭೂತವಾಗಿದ್ದಲ್ಲಿ 'ಸ್ಮೃತಿ'; ಭವಿಷ್ಯತ್ತಾದರೆ'ನಿರೀಕ್ಷೆ'. ವಸ್ತುವಿನ ಸಾಕ್ಷಾತ್ ಅಥವಾ ಪರೋಕ್ಷ ಸಂಪರ್ಕ ಇದ್ದಾಗ ನಮ್ಮ ಚಿತ್ತವೃತ್ತಿಗಳೂ ಉದ್ಭೂತವಾಗಿ ವಸ್ತುವಿನ ವಿವರಗಳನ್ನು ಗ್ರಹಿಸುವುದು ನೈಜವಾದ ವ್ಯವಹಾರ ಎಂದು ಹೇಳಲಾಗುತ್ತದೆ. ಭಗವದ್ಗೀತೆಯಲ್ಲಿ ಜ್ಞಾನಿಯು ಎಷ್ಟು ಶ್ರೇಷ್ಠ ಅವನು ಹೇಗೆ ಭಗವಂತನಿಗೆ ಪ್ರಿಯನಾಗುತ್ತಾನೆ ಹಾಗೂ ಅವನ ಅರಿವಿನಿಂದ ಕಲ್ಪನೆ ಮತ್ತು ಪ್ರತ್ಯಕ್ಷ ಕಾಣುತ್ತಾನೆ ಎಂಬುದನ್ನು ಈ ಶ್ಲೋಕವು ತಿಳಿಸುತ್ತದೆ.

तेषां ज्ञानी नित्ययुक्त एकभक्तिर्विशिष्यते ।

प्रियो हि ज्ञानिनोऽत्यर्थमहं स च मम प्रियः ॥[4]

ಅಂದರೆ, ಅವರಲ್ಲಿ ತಿಳಿದವನು ಮಿಗಿಲಾದವನು; ನನ್ನಲ್ಲೇ ಭಕ್ತಿಯನ್ನಿಟ್ಟು, ಸದಾ ನನ್ನನ್ನು ನೆನೆಯುವವನು. ತಿಳಿದ ನಿನಗೆ ನಾನೆಂದರೆ ತುಂಬಾ ಇಷ್ಟ, ಅವನೆಂದರೆ ನನಗೂ ತುಂಬಾ ಇಷ್ಟ. ಮೇಲೆ ಹೇಳಿದ ನಾಲ್ಕು ರೀತಿಯ ಭಕ್ತರಲ್ಲಿ ಜ್ಞಾನಿ ಎಲ್ಲರಿಗಿಂತ ಶ್ರೇಷ್ಠ. ಆತ ಜ್ಞಾನಪೂರ್ವಕವಾಗಿ ಯಾವುದೇ ಫಲಾಪೇಕ್ಷೆಯಿಲ್ಲದೆ ಭಗವಂತನನ್ನು ತಿಳಿದು ಸಹಜವಾಗಿ ಪ್ರೀತಿಸುತ್ತಾನೆ. ಜ್ಞಾನಪೂರ್ವಕವಾದ ಫಲಾಪೇಕ್ಷೆಯಿಲ್ಲದ ಏಕಭಕ್ತಿಯುಳ್ಳ ಜ್ಞಾನಿ ಭಗವಂತನಿಗೆ ಹತ್ತಿರದಲ್ಲಿರುತ್ತಾನೆ.

ಇಲ್ಲಿ ಸ್ವಲ್ಪ ಮನೋವೈಜ್ಞಾನಿಕವಾಗಿ ಆಲೋಚಿಸುವ ಪ್ರಯತ್ನ ಮಾಡಿದರೆ, ಸುಪ್ರಸಿದ್ಧ ಇಂಗ್ಲಿಷ್ ಮನೋವಿಜ್ಞಾನಿ **CHARLES SPEARMAN** ಅರಿವಿನ ವಿಚಾರದಲ್ಲಿ ಒಳ್ಳೆಯ ಅಧ್ಯಯನ ನಡೆಸಿ ಅರಿವಿನ ನಿಯಮಗಳನ್ನು ಮಂಡಿಸಿ, ಅವಿಶ್ರಾಂತವಾಗಿ ಪ್ರಯೋಗಗಳನ್ನು ನಡೆಸಿದ್ದಾರೆ. ಅವರು ನಿರೂಪಿಸಿದ ಮೂರು ನಿಯಮಗಳು ಹೀಗಿವೆ:–

1. ನಾವು ಹೊರಜಗತ್ತನ್ನು ತಿಳಿಯುವುದು ಮಾತ್ರವಲ್ಲ, ಇಂದ್ರಿಯಾನುಭವವನ್ನು ಪಡೆಯುವುದು ಮಾತ್ರವಲ್ಲ, ಪ್ರಯತ್ನ ಪಡುವುದು ಮಾತ್ರವಲ್ಲ, ಉದ್ವಿಗ್ನರಾಗುವುದು ಮಾತ್ರವಲ್ಲ. ಈ ತಿಳುವಳಿಕೆಯೇ ಇಂದ್ರಿಯಾನುಭವ. ಪ್ರಯತ್ನ, ಉದ್ವೇಗ ಇವು ನಮ್ಮಲ್ಲುಂಟಾಗುವುದನ್ನು ಅರಿಯುವುದು ಸಾಧ್ಯ.

2. ಕಲ್ಪನೆಗಳ ನಡುವೆ ಸಂಬಂಧದ ಪ್ರಸಾರಗಳನ್ನು ಸ್ಪಷ್ಟಪಡಿಸುವುದು.

4. **ಶ್ರೀಮದ್ಭಗವದ್ಗೀತೆ,** ಅ–07, ಶ್ಲೋ–17

೩. ಎಳೆಯುವುದು ಸಹಜವಾದ ಪ್ರವೃತ್ತಿ.

ಹೀಗೆ ಈ ಮೂರೂ ನಿಯಮಗಳು ಪ್ರತೀತ್ವಸಂಬೋಧಿ**(Neogenesis)** ಎನಿಸಿಕೊಳ್ಳುತ್ತದೆ. **SPEARMAN** ರವರು ತಮ್ಮ ಪ್ರಯೋಗಗಳಿಂದ ಬುದ್ಧಿಶಕ್ತಿ, ಸ್ಮೃತಿ ಶಕ್ತಿ, ಕಲಿಕೆ ಮುಂತಾದ ಮಾನಸಿಕ ಪ್ರವೃತ್ತಿಗಳಲ್ಲಿ ಅರಿವಿನ ಪಾತ್ರವನ್ನು ವಿಶದೀಕರಿಸಿದ್ದಾರೆ. ವಿಶ್ವದಲ್ಲೇ ಮನಶ್ಶಾಸ್ತ್ರದಲ್ಲಿ ಅರಿವಿಗೆ ಪ್ರಯೋಗ ಸಿದ್ಧವಾದ ಸ್ಥಾನವನ್ನು ಒದಗಿಸಿ ಕೊಟ್ಟವರೇ ಈ **SPEARMAN** ರವರು.[5]

ಮುಂದೆ ಸಮಷ್ಟಿ ಮನಶ್ಶಾಸ್ತ್ರದ ಬೆಳವಣಿಗೆಗೆ ಅರಿವಿನ ಸ್ಥಾನವನ್ನು ಮತ್ತೆ ಸ್ಥಾಪಿಸಿದ ಮನಶ್ಶಾಸ್ತ್ರಜ್ಞರೇ ಗೆಸ್ಟಾಲ್ಟ್ ಪಂಥದವರು. ಇವರು ಪ್ರತ್ಯಕ್ಷಾನುಭವದ ವಿಚಾರವಾಗಿ ನಡೆಸಿದ ಅಧ್ಯಯನ ಅರಿವಿನ ಪ್ರಕಾರಗಳನ್ನು ಸ್ಫುಟಪಡಿಸಿತು.

ಕರ್ಟ್ ಲೆವಿನ್ ಎಂಬ ಪ್ರಖ್ಯಾತ ಮನಶ್ಶಾಸ್ತ್ರಜ್ಞ ನಿರೂಪಿಸಿದ ಚಿತ್ತಕ್ಷೇತ್ರವಾದ ಅರಿವಿನ ನೆಲೆಯನ್ನು ಚಿತ್ತವೃತ್ತಿಗಳ ವ್ಯವಹಾರದ ಹಿನ್ನೆಲೆಯಲ್ಲಿ ನಿರ್ದೇಶಿಸಿತು. ಪ್ರಸಂಗವಾದದ**(phenomenology)** ದೃಷ್ಟಿಯಿಂದ ಮನುಷ್ಯನ ಇಡೀ ವ್ಯಕ್ತಿತ್ವವನ್ನು ವ್ಯವಹಾರ ಕ್ಷೇತ್ರವೆಂದು ಪರಿಗಣಿಸಿದರೆ ಯಾವೊಂದು ವರ್ತನೆಯೂ ಈ ಕ್ಷೇತ್ರದ ವಿವರಗಳಿಂದ ನಿರ್ದಿಷ್ಟವಾಗುವುದು. ಈ ಕ್ಷೇತ್ರ ಸಂದರ್ಭ ಶುದ್ಧವಾಗಿ ವ್ಯವಸ್ಥೆಗೊಳ್ಳಲು ಅರಿವು ಮುಖ್ಯವಾದ ಸಾಧನೆ. ಅರಿವು ಕೂಡ ಒಂದು ಕ್ರಿಯೆಯೆನ್ನುವ ವಾದ ಮನಶ್ಶಾಸ್ತ್ರ ಇತಿಹಾಸದ ಮಧ್ಯಯುಗದಲ್ಲಿ ಪ್ರಚಲಿತವಾಗಿತ್ತು.

ಸಂಕೇತಸಮಷ್ಟಿ ನಿರೀಕ್ಷೆಯ**(Sign Gestalt Expectancy)** ವಾದವನ್ನು **EDWARD C.TOLMAN-** ಎಂಬ ಮತ್ತೊಬ್ಬ ಪ್ರಸಿದ್ಧ – **American Psychologist** ರವರು ಮಂಡಿಸಿದರು. ಇವರು ಅರಿವಿನ ಸಮಸ್ಯೆಯನ್ನು ಮತ್ತೊಂದು ದೃಷ್ಟಿಯಿಂದ ಅಧ್ಯಯನ ನಡೆಸಿ, ಜೀವಿ ನಿರ್ದಿಷ್ಟ ಗುರಿ ಮುಟ್ಟಲು ವ್ಯವಸ್ಥಿತವಾದ ಸಾಧನೆ ಮತ್ತು ಸಂಕೇತಗಳನ್ನು ಬಳಸಿಕೊಳ್ಳುವಾಗ ಅರಿವು ಮುಖ್ಯ. ಇಲ್ಲಿ ಅರಿವು ಎಂದರೆ ಸಾಧನ – ಸಾಧ್ಯಗಳ ನಡುವೆ ಇರುವ ಸಂಬಂಧ; ವಸ್ತುವನ್ನು ಪ್ರತ್ಯಕ್ಷದಿಂದ ಗ್ರಹಿಸುವುದು, ಅರಿಯುವುದು ಅಂದರೆ, ಅದರ ಆಕಾರ, ಸ್ವಭಾವ, ಮೌಲ್ಯ, ಪ್ರಯೋಜನ, ಇಂಗಿತಗಳನ್ನು ಗ್ರಹಿಸುವುದು, ಸ್ಮೃತಿಯಲ್ಲಿ ಧರಿಸಿಕೊಳ್ಳುವುದು – ಈ ಮೂರೂ ಅರಿವಿನ ಅಂಗಗಳು. ಖಿಔಐಒಂಓ ರವರು ಅರಿವನ್ನು ಮೂರು ಬಗೆಯಾಗಿ ವಿಂಗಡಿಸಿದ್ದಾರೆ.[6]

---

೫. **ಮೈಸೂರು ವಿ.ವಿ, ವಿಶ್ವಕೋಶ**/ಅರಿವು1, HTTPS://in.m.wikisource.org
6. **ಮೈಸೂರು ವಿ.ವಿ, ವಿಶ್ವಕೋಶ**/ಅರಿವು1, HTTPS://in.m.wikisource.org

1. ಮೂಲಭೂತ ಗುರಿಗಳಗೆ ಸಂಬಂಧಿಸಿದಂತೆ ತೃಪ್ತಿ ಹೊಂದಲು ಸಿದ್ಧವಾದ ಅರಿವು.**(Cathexis)**

2. ಮೂಲಭೂತ ಗುರಿಗಳಗೂ ಸನ್ನಿವೇಶದ ವಸ್ತುಗಳಗೂ ಸಂಬಂಧವನ್ನು ಕಲ್ಪಿಸಿ ಉಪಗುರಿಗಳನ್ನು ಏರ್ಪಡಿಸುವ ಅರಿವು**(Equivalent Beliefs)**

3. ಹೊರಗಿನ ಸನ್ನಿವೇಶದ ಪ್ರಸಂಗಗಳಲ್ಲಿ ಅನುಕ್ರಮವನ್ನುಂಟುಮಾಡಿ ಅದರ ಮೂಲಕ ಮುಂದೆ ಬರಬಹುದಾದ ಫಲರೂಪಿ ವಸ್ತುಗಳನ್ನು ನಿರೀಕ್ಷಿಸುವ ಅರಿವು**(Field Expectancies)** ಆಧುನಿಕ ಮನಶ್ಶಾಸ್ತ್ರವು ಮೂಲಭೂತ ಪ್ರವೃತ್ತಿಗಳಗೂ ಮೋಟಿವೇಷನ್ ಅರಿವಿಗೂ ಇರುವ ಸಂಬಂಧವನ್ನು ಸ್ಪಷ್ಟ ಪಡಿಸಿದೆ. ಪ್ರವೃತ್ತಿಗಳಂದ ವ್ಯಕ್ತಿಯಲ್ಲಿ ಒತ್ತಡಗಳು ಉಂಟಾಗುತ್ತವೆ. ಆ ಸಂದರ್ಭದಲ್ಲಿ ಒತ್ತಡಗಳನ್ನು ಕಡಿಮೆ ಮಾಡಲು ಅರಿವು ಬಲವಾಗುತ್ತದೆ. ಇದರಿಂದ ಗೌಣವಾದ ಪ್ರವೃತ್ತಿಗಳು ಅರಿವಿನ ಫಲವಾಗಿ ಗೋಚರಿಸುತ್ತವೆ. ಅರಿವು ಫಲಕಾರಿಯಾಗಬೇಕಾದರೆ ಪೂರ್ವಾನುಭವ ಅಥವಾ ಕಲಿತಕೌಶಲ ಬಹಳ ಮುಖ್ಯ. ಹೊರಗಿನ ಸನ್ನಿವೇಶವನ್ನು ಯಥಾರ್ಥವಾಗಿ ಗ್ರಹಿಸಬೇಕಾದರೆ ಮೌಲಿಕ ವೈವಿಧ್ಯವನ್ನು ಆಶ್ರಯಿಸಬೇಕಾಗುತ್ತದೆ. ವಿಭಿನ್ನಕ್ರಿಯೆಗಳನ್ನು ವ್ಯವಸ್ಥೆಗೊಳಸಲೂ ಸಹ ಅರಿವಿನ ನೆರವು ಅತ್ಯಾವಶ್ಯಕ.

ವಿಷ್ಣುಶರ್ಮರು ಬಹಳ ವ್ಯವಸ್ಥಿತವಾಗಿ ನೀತಿಬೋಧೆ ಮಾಡುತ್ತಲೇ, ರಾಜಕುಮಾರರಲ್ಲಿ ಸಾರ್ಥಕ ಬದುಕಿನ ಅರಿವನ್ನು ಮೂಡಿಸುವ ಉತ್ತಮ ಸನ್ನಿವೇಶಗಳನ್ನು ಒದಗಿಸಿ, ವಿಚಾರಗಳನ್ನು ಅರ್ಥೈಸಿಕೊಳ್ಳುವಂತೆ ಪ್ರೇರೇಪಿಸಿ, ಅವರ ಮೂಲ ಪ್ರವೃತ್ತಿಗಳನ್ನು ಅಪೇಕ್ಷಿತ ಮಾರ್ಗಕ್ಕೆ ಕೊಂಡೊಯ್ಯಲು ಉತ್ತಮ ಪ್ರಯತ್ನ ಮಾಡಿದ್ದಾರೆ. ಭವಿಷ್ಯದ ಬಗ್ಗೆ ಅರಿವು ಮೂಡಿಸಿದ್ದರಿಂದಲೇ, ರಾಜಕುಮಮಾರರು ಗುರುಗಳನ್ನು ನೇರವಾಗಿ ನಮಗೆ ಶಾಸ್ತ್ರಗಳನ್ನು ತಿಳಸುವಂತೆ ಕೋರಿಕೆ ಮಾಡಿಕೊಂಡರು. ಅವರು ತಂದೆಯ ಉತ್ತರಾಧಿಕಾರಿಯಾಗಿ ಕಾರ್ಯ ನಿರ್ವಹಿಸುವ, ಹಾಗೂ ಸಮರ್ಥ ರಾಜನಾಗಿ ಪ್ರಜಾಹಿತಧರ್ಮ ಪಾಲಿಸಿದ ತಂದೆಯ ಗೌರವ ಘನತೆಯನ್ನು ಕಾಪಾಡಿಕೊಳ್ಳಬೇಕಾದರೆ, ಅವರೂ ಅದೇ ಧರ್ಮವನ್ನು ಪಾಲಿಸಬೇಕೆಂಬ ಅರಿವು ಮೂಡಿದ್ದರಿಂದಲೇ, ಬಹಳ ಆಸಕ್ತಿಯಿಂದ ಜಾಗೃತರಾದರು. ಗುರುಗಳು ಇವರಲ್ಲಿ ಅರಿವು ಮೂಡಿಸಿದರು ಅರ್ಥಾತ್ "ಅರಿವೇ ಗುರುವಾಯಿತು" ರಾಜಕುಮಾರರ ಅದೃಷ್ಟವೇ ಸರಿ ಇಂಥಹ ಪ್ರತಿಭಾನ್ವಿತ ಹಿರಿಯ ಗುರುಗಳು ಲಭ್ಯವಾದದ್ದು. ಅವಿವೇಕ, ಅಜ್ಞಾನದ ಅಂಧಕಾರದಲ್ಲಿ ಮುಳುಗಿದ್ದ ಇವರನ್ನು ವಿಷ್ಣುಶರ್ಮರು ಸುಜ್ಞಾನದ ಪ್ರಕಾಶದೆಡೆಗೆ ಇವರನ್ನು ತಲುಪಿಸಿದರು."गुकारोऽन्धकारत्वात् रुकारो तन्निवारकः" 'ಗು' ಎಂದರೆ ಅಂಧಕಾರವೆಂಬರ್ಥವಿದೆ 'ರು'ಎಂದರೆ 'ನಾಶಪಡಿಸುವವನು' ಅಂದರೆ, ಅಂಧಕಾರವನ್ನು ನಾಶಪಡಿಸುವವನು ಎಂದಾಗುತ್ತದೆ.

## 6-2. ಮಾನವನ ಮಹೋನ್ನತಿ ಮನಶ್ಶಕ್ತಿಯಲ್ಲಿ

यज्जाग्रतो दूरमुदैति दैवं तदु सुप्तस्य तथैवेति

दूरान्गामं ज्योतिषं ज्योतिरेकं तन्मे मनः शिवसंकल्पमस्तु [7]

ಇದರ ಅರ್ಥ ಎಚ್ಚರ ಸ್ಥಿತಿಯಲ್ಲಿರುವ ಆ ಮನಸ್ಸು ಇಂದ್ರಿಯಗಳ ಮೂಲಕ ಈ ಪ್ರಪಂಚದೊಳಗೆ ಸಂಚರಿಸುತ್ತದೆ. ಅದು ಸ್ವಪ್ನಾವಸ್ಥೆಯಲ್ಲಿ ಅನೇಕ ಪ್ರಪಂಚಗಳಲ್ಲಿ ಸಂಚರಿಸುವುದು ಹಾಗೂ ದೀರ್ಘ ನಿದ್ರಾವಸ್ಥೆಯಲ್ಲಿ ಅದು ತನ್ನ ಸ್ವಸ್ಥಾನಕ್ಕೆ ಮರಳುವುದು. ಅಲ್ಲಿಯವರೆಗೂ ಸಂಚರಿಸುವ ಜ್ಞಾನ ಜ್ಯೋತಿಯು ನನ್ನ ಮನಸ್ಸೇ, ನಿನಗೆ ಸದಾ ಒಳ್ಳೆಯ ಉದ್ದೇಶವಿರಲಿ. ಹೀಗೆ ಮನಸ್ಸು ಒಂದು ರೀತಿಯ ಬೆಳಕು ಹಾಗೂ ಅದು ಅಜ್ಞಾನದ ಕತ್ತಲನ್ನು ಜ್ಞಾನದ ಮೂಲಕ ಪ್ರಕಾಶಿಸುತ್ತದೆ. ಶಿವಸಂಕಲ್ಪ ಸೂಕ್ತದಲ್ಲಿ ಮನಸ್ಸಿನ ದಿವ್ಯ ಶಕ್ತಿಯನ್ನು ಕುರಿತು ಎಂತಹ ಮನೋವೈಜ್ಞಾನಿಕ ವಿಚಾರದ ವರ್ಣನೆ! ಎಷ್ಟು ಸೊಗಸಾಗಿದೆ!

ಮಾನವನು ತನ್ನ ಪೂರ್ವಾಶ್ರಮ ಮಂಗಪೂರ್ವಜರ ಸುಳಿಯಿಂದ ವಿಕಸನ ಹೊಂದಿ ಮಹೋನ್ನತ ಪ್ರಾಣಿಯಾಗಿ ಹೊರಹೊಮ್ಮಿರುವುದು ಅವನ ಮನಶ್ಶಕ್ತಿಯ ಬೆಳವಣಿಗೆಯಿಂದ. ಕ್ರೂರ ದೃಷ್ಟ ಮೃಗಗಳಿಂದ ರಕ್ಷಿಸಿಕೊಂಡು ತನ್ನ ಶ್ರೇಷ್ಠಜನ್ಮವನ್ನು ಪ್ರಕಾಶಗೊಳಿಸಿದ್ದು ಈ ಮನಶ್ಶಕ್ತಿಯಿಂದಲೇ. ಸಂಸ್ಕೃತಿ, ನಾಗರಿಕತೆ ತೊಟ್ಟಿಲುಗಳನ್ನು ಕಟ್ಟಿ, ಭುವನ, ಸೃಷ್ಟಿ, ಮಾನವ ಇವುಗಳ ತ್ರಿವೇಣಿ ಸಂಗಮವನ್ನು ಕಲ್ಪಿಸಿ ಸೃಷ್ಟಿಯ ಶಿಖರದಂತೆ ರಾರಾಜಿಸಿದ್ದೂ ಈ ಮೂಲಕವೇ. ಮಾನವವರ್ಗ ತನಗೆ ಸಿದ್ಧಿಸಿರುವ **"ಮನಶ್ಶಕ್ತಿಯಿಂದ"** ಮಹೋನ್ನತ ಸ್ಥಾನವನ್ನು ಏರಿರುವುದು ಎಷ್ಟೋ ಜನ್ಮದ ಪುಣ್ಯಫಲ. ಕುಟುಂಬ ಜೀವನವನ್ನು ರೂಪಿಸಿಕೊಂಡು ಸಮಾಜ ಜೀವನದಲ್ಲಿ ಬೆಳಕು ಕಂಡಿರುವುದು ಇದರ ಸಹಾಯದಿಂದಲೇ. ಭೂಗ್ರಹದಲ್ಲಿ ತನ್ನ ಅಜೇಯತನವನ್ನು ಸ್ಥಾಪಿಸಿರುವುದು, ನಿಸರ್ಗದ ಮಾರಕ ಸನ್ನಿವೇಶಗಳನ್ನು ಮೆಟ್ಟಿ ನಿಂತು, ಅವುಗಳೊಡನೆ ಹೊಂದಿಕೊಂಡು, ಅವಕಾಶ ದೊರೆತಾಗ ಅವುಗಳನ್ನು ತನ್ನ ನಿಯಂತ್ರಣಕ್ಕೆ ಒಳಪಡಿಸಿ ಕೊಂಡಿರುವುದೂ ಆ ಪ್ರತಿಭೆಯಿಂದಲೇ. ಭಾವನೆಯಲ್ಲಿ, ಕೃತಿಯಲ್ಲಿ, ಸೊಗಸನ್ನು, ಸೌಂದರ್ಯವನ್ನು, ಕೌಶಲ್ಯವನ್ನು, ವೈಚಿತ್ರ್ಯವನ್ನು, ವೈಭವವನ್ನು, ಪಾವಿತ್ರ್ಯವನ್ನು ಪರಿಪುಷ್ಟಿಗೊಳಿಸಿ, ಮುಂದಿನ ಸಂತತಿಗೆ ಸುರಕ್ಷಿತವಾಗಿ ಸಂಗ್ರಹಿಸಿಟ್ಟಿದ್ದೂ ಆ ಪ್ರತಿಭೆಯಿಂದಲೇ. ಒಳ್ಳೆಯದು ಕೆಟ್ಟದ್ದು ಎಂಬುದನ್ನು ವಿಶ್ಲೇಷಿಸಿ ಅರಿತುಕೊಂಡದ್ದೂ ಇದರಿಂದಲೇ.[8] ಇಷ್ಟೆಲ್ಲಾ ಆದರೂ ಅದ್ಯಾವ ಪ್ರತಿಭೆ ಅಥವಾ ಅರಿವು ಎಂಬುದನ್ನು ಅರಿತುಕೊಳ್ಳಲು ಅವನಿಗಿನ್ನೂ ಅವಕಾಶವಾಗದಿರುವುದು ಒಂದು

---

7. **ಶಿವಸಂಕಲ್ಪ ಸೂಕ್ತ**(ಶುಕ್ಲ ಯಜುರ್ವೇದ, ವಾಜಸನೇಯ ಸಂಹಿತಾ) ಶ್ಲೋ-1.
8. **ವೀರಪ್ಪ. ಎನ್. ಎಸ್**, ಶಿಕ್ಷಣದಲ್ಲಿ ಮನೋವಿಜ್ಞಾನ, ಅ-13, ಪು-323-324.(1962)
ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

ಆಶ್ಚರ್ಯಕರ ಸಂಗತಿಯಾಗಿದೆ. ಬಹುಶಃ ಪ್ರತಿಭೆ ಎಂಬುದನ್ನು ಅರಿಯುವಷ್ಟು ಅವನ ಪ್ರತಿಭೆ ಇನ್ನೂ ಪ್ರಬುದ್ಧತೆ ಪಡೆದಿಲ್ಲವೇನೋ! ಅದೇನೇ ಇದ್ದರೂ ತತ್ವಚಿಂತಕರು ಬುದ್ಧಿಶಕ್ತಿಯನ್ನು ವಿವರಿಸಿಯೇ ಇದ್ದಾರೆ. ಸೂತ್ರದ ಅಚ್ಚುಕಟ್ಟಿನಲ್ಲಿ ಸೆರೆಹಿಡಿದುಕೊಂಡಿದ್ದಾರೆ. "ಪ್ರತಿಭೆ" ಆಳವಾದ ಸಂಬಂಧಗಳನ್ನು ಅರಿಯುವ ಶಕ್ತಿ ಎಂದು ಕಾರ್ಲ್ ಪಿಯರ್ಸನ್ ಅಭಿಪ್ರಾಯಿಸಿದ್ದಾರೆ. ಆದ್ದರಿಂದಲೇ ಮನಶ್ಶಕ್ತಿಯ ಮಹತ್ವ ಕುರಿತು ಹೀಗೆ ಹೇಳಿರುವುದು –"ಮಾನವನ ಮಹೋನ್ನತಿ ಮನಶ್ಶಕ್ತಿಯಲ್ಲಿ"[9]

ಈ ಮನಶ್ಶಕ್ತಿ ಬೆಳೆದುಬಂದ ಇತಿಹಾಸವು ಮನೋವಿಜ್ಞಾನಿಗಳು ಹಾಗೂ ತತ್ವಶಾಸ್ತ್ರಜ್ಞರಲ್ಲಿ ಕುತೂಹಲ ಹುಟ್ಟಿಸಿದೆ. ಸಾಮಾನ್ಯವಾಗಿ ಒಬ್ಬನ ಮನಶ್ಶಕ್ತಿಯನ್ನು ಪತ್ತೆಹಚ್ಚುವುದು ಅವನ ಜ್ಞಾಪಕಶಕ್ತಿಯಿಂದ, ಕಲ್ಪನೆಯಿಂದ, ಆಲೋಚನೆ ಮತ್ತು ವಿವೇಚನೆಗಳಿಂದ. ವ್ಯಕ್ತಿ ಶಿಕ್ಷಣ ಕೇವಲ ಮನಶ್ಶಕ್ತಿಯ ಬೆಳವಣಿಗೆಗೆ ಮಾತ್ರವಲ್ಲ. ಆದರೂ ಅವನ ಸಾಮಾಜಿಕ, ನೈತಿಕ ಮತ್ತು ಸಂವೇದನಾ ಜೀವನದ ಮೇಲೆ ಆ ಮನಶ್ಶಕ್ತಿ ಬಹು ಮುಖ್ಯ ಪ್ರಭಾವವನ್ನು ಬೀರುತ್ತದೆ. ಬೃಹದಾರಣ್ಯಕೋಪನಿಷತ್ತಿನ ಒಂದು ಶ್ಲೋಕದಲ್ಲಿ ಹೀಗೆ ಮನಸ್ಸನ್ನು ವಿವರಿಸಲಾಗಿದೆ.

मनसैवानुद्रष्टव्यं, नेह नानास्ति किञ्चन ।

मृत्योः स मृत्युमाप्नोति य इह नामेव पश्यति ॥[10]

ಅಂದರೆ, ಮನುಷ್ಯನಲ್ಲಿರುವ ದೈವತ್ವವೇ ಆತ್ಮದ ಅರಿವು. ಇದರಲ್ಲಿ ಮನಸ್ಸು ನೆಲಸಿರುವುದು ಮತ್ತು ಈ ಮಾಧ್ಯಮದ ಮೂಲಕ ಆತ್ಮದ ಅರಿವನ್ನು ಗ್ರಹಿಸುವುದು; ಹಾಗಾಗಿ ಇದು ಪ್ರಕಾಶಿಸುವ ದೇವದೂತ, ದೈವೀ ಮನಸ್ಸು. ಮನಸ್ಸಿನ ಮೂಲಕ ಮಾತ್ರ ಇದನ್ನು ಅರಿಯಬೇಕು, ಇದರಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲ. ಇದರಲ್ಲಿರುವ ವ್ಯತ್ಯಾಸವನ್ನು ಮೃತ್ಯುವಿನಿಂದ ಮೃತ್ಯುವೆಡೆಗೆ ಪಯಣಿಸಿದಾಗ ಅರಿಯುವುದು. ಆತ್ಮವು ಮನಸ್ಸಿನೊಂದಿಗೆ ಸೇರುತ್ತದೆ; ಮನಸ್ಸು ಇಂದ್ರಿಯಗಳೊಂದಿಗೆ, ಇಂದ್ರಿಯಗಳು ಅವುಗಳ ವಸ್ತುಗಳೊಂದಿಗೆ ಸೇರುವುದು. ಹೀಗೆ ನ್ಯಾಯಶಾಸ್ತ್ರವು ವಿವರಿಸುವುದು. ಮನಸ್ಸಿನೊಡನೆ ಸಂಪರ್ಕವಿಲ್ಲದೆ ಅವುಗಳು ಕಾರ್ಯ ನಿರ್ವಹಿಸುವುದಿಲ್ಲ.

ಜ್ಞಾನವು ಅಂತರಂಗದಿಂದ ಉದಯಿಸುವುದು ಮನಸ್ಸಿನ ಸ್ವಾಸ್ಥ್ಯದ ಸ್ಥಿತಿ ಮತ್ತು ಸ್ವಸ್ಥಿರತೆಯ ಮೇಲೆ ಮಾತ್ರ. ಆತಂಕ ಮತ್ತು ಗೊಂದಲದಿಂದ ಕೂಡಿದ ಮನಸ್ಸಿನಲ್ಲಿ ಜ್ಞಾನವು ಇರುವುದಿಲ್ಲ. ಸದ್ವರ್ತನೆಯ ವಿಧಾನಗಳ ವಿವೇಕವು ಸೇರಿಕೊಂಡು ಜ್ಞಾನಗಳ ವೈಜ್ಞಾನಿಕ ಅಡಿಪಾಯಗಳಿಗೆ ಕಾರಣವು.

---

9. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–13, ಪು–323–324.(1962)
ಡಿ.ವಿ.ಕೆ. ಮೂರ್ತಿ,ಕೃಷ್ಣಮೂರ್ತಿಪುರಂ, ಮೈಸೂರು–4

10. **ಬೃಹದಾರಣ್ಯಕೋಪನಿಷತ್** 4.4.19

सुसारथिरश्वानिव यन्मनुष्यणान् नैनीयतेभीशुभिर्वाजिन इव ।

हृत्प्रतिष्ठितं यदजिरं जविष्ठं तन्मे मनः शिवसंकल्पमस्तु ॥[11]

ಹೇಗೆ ನುರಿತ ಸಾರಥಿಯು ಅಶ್ವಗಳನ್ನು ತನ್ನ ಆದೇಶದಂತೆ ಓಡಿಸಿ ಅವುಗಳು ತಾನೆಲ್ಲಿಗೆ ಹೋಗಬೇಕೋ ಅಲ್ಲಿಗೇ ಅವುಗಳನ್ನು ಕೊಂಡೊಯ್ಯುವಂತೆ ಮನಸ್ಸೂ ಕೂಡ ಮನುಷ್ಯನನ್ನು ಅವನ ಆಸೆಗಳೆಡೆಗೆ ಮತ್ತು ಪಶುಪ್ರವೃತ್ತಿಗಳನ್ನು ನಿರ್ಬಂಧಿಸುವುದರೆಡೆಗೆ ಮಾರ್ಗದರ್ಶನ ಮಾಡಿ ಅದು ಹೃದಯದಲ್ಲಿ ನೆಲೆಸಿ ಅವನ ಅಮರತ್ವ ಮತ್ತು ಪ್ರಕ್ಷುಬ್ಧತೆಗಳಿಂದ ಬಿಡುಗಡೆ ಹೊಂದಿದಂಥಹ ನನ್ನ ಮನಸ್ಸು ಸದಾ ಒಳ್ಳೆಯ ಭಾವನೆಗಳನ್ನೇ ಹೊಂದಿರಲಿ ಎಂದು ಈ ಶ್ಲೋಕವು ಭಗವಂತನಲ್ಲಿ ಪ್ರಾರ್ಥನೆ ಸಲ್ಲಿಸುತ್ತಿದೆ. ಇಲ್ಲಿನ ಅರ್ಥ ಎಷ್ಟು ಹೃದಯಂಗಮವಾಗಿರುತ್ತದೆ ಎಂಬುದು ಸ್ವಲ್ಪ ವ್ಯಾಖ್ಯಾನ ವೃದ್ಧಿಸಿದರೆ ತಿಳಿಯುತ್ತದೆ. ಇಲ್ಲಿ ಎರಡು ಉದಾಹರಣೆಗಳಿವೆ. ಮೊದಲನೆಯದರಲ್ಲಿ "ನಡೆಸುವುದು" ಮತ್ತು "ಎರಡನೆಯದರಲ್ಲಿ" "ಹತೋಟಿಯಲ್ಲಿ ಇಟ್ಟುಕೊಳ್ಳುವುದು". ಹೇಗೆ ಸಾರಥಿಯು ಅಶ್ವಗಳನ್ನು ಹತೋಟಿಯಲ್ಲಿಟ್ಟುಕೊಂಡು ನಡೆಸುವನೋ? ಅದೇರೀತಿ ಮನಸ್ಸು ಕೂಡಾ ಜೀವಿಯನ್ನು ಹತೋಟಿಯಲ್ಲಿಟ್ಟುಕೊಂಡು ನಡೆಸುವುದು. ಈ ವಿಧದಲ್ಲಿ ವಾಸಿಸುವ ಮನಸ್ಸು ಹೃದಯದಲ್ಲಿ ಸ್ಥಾಪಿಸಿದೆ. ಏಕೆಂದರೆ ಇದು ಹೃದಯದಲ್ಲಿ ಮಾತ್ರ ಕಂಡುಬರುವುದು ಮತ್ತು ಅರಿವಾಗುವುದು. ಈ ಮನಸ್ಸು ಬಾಲ್ಯ, ಯೌವನ ಮತ್ತು ವಾರ್ಧಕ್ಯದ ಸ್ಥಿತಿಗಳಲ್ಲಿಯೂ ಸಹ ಮಾರ್ಪಾಡಾಗದೇ ಇರುವುದರಿಂದ ಅದು ಮುಪ್ಪಾಗದು. ಅದು ಅತ್ಯಂತ ವೇಗದ ಶಕ್ತಿ. "ಗಾಳಿಗಿಂತ ತ್ವರಿತವಾದದ್ದು ಬೇರೊಂದಿಲ್ಲ; ಮನಸ್ಸಿಗಿಂತ ವೇಗವಾದದ್ದು ಮತ್ತೊಂದಿಲ್ಲ. ಆ ವಿಧದ ಸುಂದರವಾದ ಮತ್ತು ದೈವೀ ನಿರ್ಣಯದ ಮನಸ್ಸು ಸದಾ ಶಿವನ ವಿಚಾರಗಳಿಂದ ತುಂಬಿರಲಿ, ಎಂದು ಶಿವಸಂಕಲ್ಪ ಸೂಕ್ತ ಸೊಗಸಾಗಿ ಮನಸ್ಸನ್ನು ಹೇಗೆ ಹತೋಟಿಯಲ್ಲಿಟ್ಟುಕೊಳ್ಳಬೇಕು ಎಂಬ ಜಾಗೃತಿಯನ್ನು ಹಾಗೂ ಮನಸ್ಸಿನ ಮಹತ್ವವನ್ನು ವರ್ಣಿಸುತ್ತದೆ. ಮನಸ್ಸಿನ ಬಗ್ಗೆ ಮತ್ತೊಂದು ವಿಚಾರವಿದೆ.

अणुमात्रं मनस्तस्मादाशा नाम लतोद्गता ।

तस्या नालमुपघ्नाय भुवनानि चतुर्दश ॥[12]

ಮನಸ್ಸು ಒಂದು ಅಣು. ಅದರಿಂದ ಆಸೆಯೆಂಬ ಬಳ್ಳಿ ಹುಟ್ಟಿದೆ. ಅದು ಹಬ್ಬುವುದಕ್ಕೆ ಹದಿನಾಲ್ಕು ಲೋಕಗಳೂ ಸಾಲವು. ಇದರ ವ್ಯಾಪ್ತಿ ಅಪರಿಮಿತ. ಇದನ್ನು ನಿಯಂತ್ರಣ ಮಾಡಿಕೊಂಡು ವ್ಯವಸ್ಥಿತವಾಗಿ

---

11. **ಶಿವಸಂಕಲ್ಪ ಸೂಕ್ತ,** ಶ್ಲೋ-06.

12. **ಸುಭಾಷಿತಮಂಜರೀ,** ಸದ್ಗುಣ ದುರ್ಗುಣ-, ಶ್ಲೋ-12, ಪು-129, ಆಶ್ಚರ್ಯಚೂಡಾಮಣಿ ವ್ಯಾಖ್ಯಾ.(2001) ಕ.ಸಾ.ಪ. ಬೆಂಗಳೂರು-18

ಸದ್ಬಳಕೆ ಮಾಡಿಕೊಳ್ಳುವುದು ನಮ್ಮ ಕೈಯಲ್ಲಿರುತ್ತದೆ. ಹೀಗೆ ಮನಸ್ಸನ್ನು ನಿಯಂತ್ರಣ ಮಾಡಿಕೊಂಡು ಒಳ್ಳೆಯ ವಿಚಾರಗಳೆಡೆ ಯೋಚಿಸುವ ಮನಸ್ಸನ್ನು ಹಾಗೂ ಅದರ ಸದ್ಬಳಕೆಯ ಆಲೋಚನೆಯನ್ನು ಬೆಳೆಸಿಕೊಳ್ಳುವಂತೆ ವಿಷ್ಣುಶರ್ಮರು ಆಕರ್ಷಕ ನೀತಿಕಥೆಗಳ ಮೂಲಕ ರಾಜನಂದನರನ್ನು ಪ್ರೇರೇಪಿಸಿ, ಆಸಕ್ತಿಯನ್ನು ಮೂಡಿಸಿದರು.



## 6-3 ಬಿಂಬ ಮತ್ತು ಬಿಂಬ ಕಲ್ಪನೆ. (IMAGERY AND IMAGINATION)

ಈ ಹಿಂದೆ ಪ್ರಾರಂಭದಲ್ಲೇ ಉಲ್ಲೇಖಿಸಿದ ಪ್ರತ್ಯಕ್ಷಾನುಭವದ ಫಲವಾಗಿ ಮನಸ್ಸಿನಲ್ಲಿ ಉಳಿದಿರುವ ಆ ವಸ್ತುವಿನ ಸ್ವರೂಪವೇ ಬಿಂಬ. ವಸ್ತುವಿನ ಸಹಾಯದಿಂದ ತಿಳಿಯುವುದೇ ಬೋಧೆ. ಹಾಗೆಯೇ ಶಬ್ದವೊಂದನ್ನು ಕೇಳಿ ಪಡೆದ ಪ್ರತ್ಯಕ್ಷಾನುಭವ ರೂಪಿಸುವ ಬಿಂಬ "ಶ್ರವಣ-ಬಿಂಬ"**(Auditory-hearing).** ರುಚಿಯ ಪ್ರತ್ಯಕ್ಷಾನುಭವದಿಂದ ದೊರಕತಕ್ಕದ್ದು "ರಸನ-ಬಿಂಬ"**(Gustatory-taste),** ಸ್ಪರ್ಶನದಿಂದ ರೂಪುಗೊಳ್ಳತಕ್ಕದ್ದು "ಸ್ಪರ್ಶನ-ಬಿಂಬ"**(Tectile-touch)**, ವಾಸನೆಯ ಪ್ರತ್ಯಕ್ಷಾನುಭವ ರೂಪಿಸತಕ್ಕದ್ದು "ಘ್ರಾಣ-ಬಿಂಬ" (ಎಂದು ಹೇಳಬಹುದು. ಇದೇ ರೀತಿಯಲ್ಲಿ ಗುರುತ್ವವೂ, ವೇದನೆಗಳೂ ತಮ್ಮ ತಮ್ಮ ಬಿಂಬಗಳನ್ನು ರೂಪಿಸುತ್ತವೆ. ಪದಾರ್ಥ, ಸನ್ನಿವೇಶ, ಶಬ್ದ, ರುಚಿ, ವಾಸನೆ ಮುಂತಾದ ವಸ್ತು, ಸನ್ನಿವೇಶಾದಿಗಳಿಂದ ನಮ್ಮ ಮನಸ್ಸಿಗೆ ಬಿಂಬ ದೊರಕುವಂತೆ ಪದಗಳಿಂದಲೂ ದೊರಕುತ್ತದೆ. ಸಕಲಶಾಸ್ತ್ರಸಂಪನ್ನ ಎಂದು ಓದಿದಾಗ, ಕೇಳಿದಾಗ ಅವರ ಸ್ವರೂಪ ನಮ್ಮ ಮನಸ್ಸಿನಲ್ಲಿ ಪ್ರತ್ಯಕ್ಷಾನುಭವ ಮೂಡಿಸಿ ಬಿಂಬವನ್ನು ರೂಪಿಸುವುದು. ಮರಳಿ ಆ ಪದವನ್ನು ಕೇಳದಿದ್ದರೂ ಆ ಚಿತ್ರವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಬಹುದು. ಇದು ಪದಗಳಿಂದ ದೊರೆತ ಸಾರಸ್ವತ ಬಿಂಬ. ರಂಗನಟನೊಬ್ಬನ ಭಾವ ವಿನ್ಯಾಸವನ್ನು ನಾಟಕದಲ್ಲಿ ನೋಡಿದಾಗ ಅವನ ಭಾವ ನಮ್ಮ ಮನಸ್ಸಿನಲ್ಲಿ ಪ್ರತ್ಯಕ್ಷಾನುಭವವನ್ನು ಮೂಡಿಸಿ ಬಿಂಬವನ್ನು ರೂಪಿಸುತ್ತದೆ. ಆನಂತರ ಅವನ ಭಾವವನ್ನು ಪುನಃ ಕಲ್ಪಿಸಿಕೊಳ್ಳಬಹುದು. ಇದೇ ಭಾವನ ಬಿಂಬವಾಗುವುದು. ಬಿಂಬ ಹೇಗೇ ದೊರತಿರಲಿ ಅದಕ್ಕೆ ಆಧಾರ ಪ್ರತ್ಯಕ್ಷಾನುಭವ. ಪ್ರತ್ಯಕ್ಷಾನುಭವಕ್ಕೆ ಆಧಾರ ನಿಜವಾದ ವಸ್ತು. ಇದೇ ವಿಚಾರವನ್ನು ಈ ಸೂತ್ರದಲ್ಲೂ ಸೂಚಿಸಬಹುದು.[13] ವಸ್ತು-------> ಪ್ರತ್ಯಕ್ಷಾನುಭವ-------> ಬಿಂಬ.

ನಾರದಸ್ಮೃತಿಯಲ್ಲಿ ಒಂದು ಶ್ಲೋಕ ಹೀಗೆ ಹೇಳುತ್ತದೆ. ಅನೇಕ ವ್ಯತಿರಿಕ್ತ ಬಿಂಬಗಳನ್ನು ಕಲ್ಪಿಸಿ ಸರಿಯಾದ ಮಾತಿನ ಅರ್ಥವನ್ನು ಸುಳ್ಳಾದ ಅರ್ಥವನ್ನಾಗಿ ಮಾಡುವುದು.

अर्था वै वाचि नियताः वाङ्मूलाः वाचि मिश्रिताः ।

यो वै तां स्तेययेद्वाचं स सर्वस्तेयकृन्नरः ॥[14]

---

13. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-13, ಪು-326-327.(1962)
ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4
14. **ಸುಭಾಷಿತಮಂಜರೀ,** ಸದ್ಗುಣ-ದುರ್ಗುಣ, ಶ್ಲೋ-20, ಪು-131, ನಾರದಸ್ಮೃತಿಯಲ್ಲಿ, 2-205.(2001)
ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18

ಅರ್ಥವು ಮಾತಿನಲ್ಲಿದೆ. ಅರ್ಥಕ್ಕೆ ಮಾತು ಮೂಲ. ಅರ್ಥವು ಮಾತಿನೊಡನೆ ಬೆರೆತಿದೆ. ಯಾರು ಈ ಮಾತನ್ನು ಸುಳ್ಳಾದ ಅರ್ಥವನ್ನು ಕೊಡುವಂತೆ ಆಡುತ್ತಾನೆಯೋ ಅವನು ಎಲ್ಲಾ ರೀತಿಯ ಕಳ್ಳತನವನ್ನೂ ಮಾಡಿದ ಹಾಗೆ ಆಗುತ್ತದೆ.

ಮಕ್ಕಳ ಬಿಂಬಗಳಿಗೂ ದೊಡ್ಡವರ ಬಿಂಬಗಳಿಗೂ ವ್ಯತ್ಯಾಸವಿರುತ್ತದೆ. ಅವರಿಗೆ ಶಬ್ದ ನೋಟಗಳ ಬಿಂಬಗಳೇ ಹೆಚ್ಚು. ಕೆಲವೊಮ್ಮೆ ನಿಜವಸ್ತುವಿಗೂ ಬಿಂಬಕ್ಕೂ ಮಕ್ಕಳಿಗೆ ವ್ಯತ್ಯಾಸ ತಿಳಿಯುವುದಿಲ್ಲ. ಹುಲಿಯ ಬಿಂಬವನ್ನು ಹುಲಿಯೆಂದೇ ಭಾವಿಸಿ ಹೆದರಿ ಚೀರಿಬಿಡುವರು. ಮಕ್ಕಳ ಬಿಂಬಗಳಲ್ಲಿ ಸ್ಪಷ್ಟತೆ ಇಲ್ಲದೆ ಮಬ್ಬು ಮಬ್ಬಾಗಿರುತ್ತದೆ. ಮೆದುಳು ಇಂದ್ರಿಯಗಳು ನರಗಳು ಬಲಿತಂತೆ ಬಿಂಬಗಳೂ ಸ್ಪಷ್ಟತೆಯ ಕಡೆಗೆ ತಲುಪುತ್ತವೆ.

ಬಿಂಬಗಳಲ್ಲಿ ವೈಯಕ್ತಿಕ ಭಿನ್ನತೆಯೂ ಇರುತ್ತದೆ. ಕೆಲವರಿಗೆ ಶ್ರವಣ ಬಿಂಬ ಚೆನ್ನಾಗಿದ್ದರೆ, ಇನ್ನು ಕೆಲವರಿಗೆ ದರ್ಶನ ಬಿಂಬ ಚೆನ್ನಾಗಿರುತ್ತದೆ. ಇದಕ್ಕೆ ಮನಸ್ಸಿನ ಸ್ವರೂಪದಂತೆ ಇಂದ್ರಿಯಗಳ ಗ್ರಹಣ ಶಕ್ತಿಯೂ ಕಾರಣವಾಗುತ್ತದೆ. ಮಕ್ಕಳ ಬಿಂಬಗಳ ಈ ಭಿನ್ನ ಸ್ವರೂಪಗಳನ್ನು ಅರಿತುಕೊಂಡು ಅವರವರಿಗೊಪ್ಪುವ ಬಿಂಬಗಳನ್ನು ದೊರಕಿಸುವಂತೆ ಬೋಧಿಸುತ್ತ, ವೈಯಕ್ತಿಕ ಗಮನ ಹರಿಸುವುದು ಶಿಕ್ಷಕನ ಅಗತ್ಯ ಹಾಗೂ ಕರ್ತವ್ಯ. ಯಾವುದನ್ನೇ ಬೋಧಿಸುತ್ತಿರಲಿ, ಅವರಿಂದ ಬಹುಮುಖ ಬಿಂಬಗಳು ದೊರಕುವಂತೆ ಯತ್ನಿಸಬೇಕು. ಆಗ ಮಾತ್ರ ಕಲಿವು ಪರಿಣಾಮಕಾರಿಯಾಗುವುದು.

ಹಿತೋಪದೇಶದಲ್ಲಿ ಒಂದು ತಿಳುವಳಿಕೆ ಇದೆ.

अरावप्युचितं कार्यमातिथ्यं गृहमागते ।

छेत्तुः पार्श्वगतां छायां नोपसंहरति द्रुमः ॥[15]

ಮನೆಗೆ ಬಂದ ಶತ್ರುವಿಗೂ ಸಹ ಆತಿಥ್ಯ ಮಾಡುವುದು ಒಳ್ಳೆಯ ಕೆಲಸ. ತನ್ನ ಪಕ್ಕದಲ್ಲಿ ನಿಂತಿರುವ ಮರಕಡಿಯುವವನಿಗೂ ಮರ ನೆರಳನ್ನು ಕೊಡದೇ ಇರುವುದಿಲ್ಲ. ಇಲ್ಲಿ ಭೂತಕಾಲದ ಅನುಭವದಲ್ಲಿ ಪಡೆದ ಅನುಭವ ಬೇಡ ಎಂದು ಹೇಳುತ್ತಿದ್ದರೂ, ಆ ಬಿಂಬದ ಪರಿವರ್ತನೆ ಆಗಿ ಮಾರ್ಪಾಟಾಗುತ್ತದೆ.

ಭೂತಕಾಲದಲ್ಲಿ ಹೊಂದಿದ ಪ್ರತ್ಯಕ್ಷಾನುಭವ ಮೂಡಿಸಿದ ಬಿಂಬಗಳ ಸಹಾಯದಿಂದ ಮರಳಿ ಮನಸ್ಸಿನಲ್ಲಿ ಆ ಅನುಭವಗಳನ್ನು ಸೃಷ್ಟಿಸಿಕೊಳ್ಳುವುದಕ್ಕೆ ಬಿಂಬಕಲ್ಪನೆ ಎನ್ನುತ್ತಾರೆ. ಹೀಗೆ ಕಲ್ಪಿಸಿಕೊಂಡ ಬಿಂಬ ಪ್ರತ್ಯಕ್ಷಾನುಭವದ ತದ್ರೂಪವೇ ಆಗಿದ್ದರೆ ಅದನ್ನು ನೈಜ ಬಿಂಬಕಲ್ಪನೆ ಎನ್ನುವುದು. ಇದು ಒಂದು ರೀತಿಯಲ್ಲಿ ಸ್ಮರಣೆಯೇ ಆಗುತ್ತದೆ. ಚಾರ್ಮಾಡಿ ಘಾಟ್ ತಿರುವುಗಳನ್ನು ನೋಡಿರುವವರು ಶಿರಾಡಿಘಾಟ್

15. ಹಿತೋಪದೇಶ–ಮಿತ್ರಲಾಭ–44.

ತಿರುವುಗಳನ್ನೂ ನೋಡಿದ್ದಾರೆಂದು ಭಾವಿಸೋಣ. ಅವರು ಎರಡೂ ತಿರುವುಗಳ ಬಿಂಬಗಳನ್ನು ಮನಸ್ಸಿನಲ್ಲಿ ಧರಿಸಿರುತ್ತಾರೆ. ಅವುಗಳಲ್ಲಿ ಮೊದಲ ಘಾಟ್ ತಿರುವುಗಳ ಕೆಲವು ದೃಶ್ಯಗಳೊಡನೆ, ಎರಡನೇ ಘಾಟ್‌ನ ಕೆಲವು ದೃಶ್ಯಗಳನ್ನು ಸೇರಿಸಿಕೊಂಡು, ಅವೆರಡನ್ನೂ ಹೋಲದ ಹೊಸ ದೃಶ್ಯವೊಂದರ ಸ್ವರೂಪವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಬಹುದು. ಆಗ ಅದು ಬರೀ ಸ್ಮರಣೆಯಲ್ಲ. ಆ ಚಿತ್ರ ಯಾವ ದೃಶ್ಯದ ಸಹಜ ಬಿಂಬವೂ ಅಲ್ಲ. ಅದು ಮನಸ್ಸು ರಚಿಸಿದ ಒಂದು ಹೊಸ ದೃಶ್ಯ. ಈ ಮನೋವ್ಯಾಪಾರವನ್ನು ರಚನಾತ್ಮಕ ಬಿಂಬಕಲ್ಪನೆಯೆನ್ನುವರು. ಇದು ಒಂದು ಹೊಸ ಸೃಷ್ಟಿಯಾಗುತ್ತದೆ. ಕವಿಗಳು ಹೀಗೆಯೇ ಮಾಡುವುದು. ವ್ಯಕ್ತಿಯೊಬ್ಬನನ್ನು ಅವನ ಜೀವನವನ್ನು ಪರಿಚಯ ಮಾಡಿಕೊಂಡಿರುತ್ತಾರೆ. ಹಾಗೆಯೇ ಇನ್ನೂ ಕೆಲವು ವ್ಯಕ್ತಿಗಳನ್ನೂ ಅವರ ಜೀವನವನ್ನೂ ನೋಡಿ ತಿಳಿದಿರುತ್ತಾರೆ. ಆನಂತರದಲ್ಲಿ ಅವರೆಲ್ಲರ ವ್ಯಕ್ತಿತ್ವದಿಂದಲೂ, ಜೀವನದಿಂದಲೂ ಹಲಕೆಲವು ಅಂಶಗಳನ್ನು ಆಯ್ಕೆ ಮಾಡಿಕೊಂಡು ಒಬ್ಬ ಹೊಸ ವ್ಯಕ್ತಿಯನ್ನು,ಅವನ ಜೀವನವನ್ನು ಸೃಷ್ಟಿಸಿಬಿಡುತ್ತಾರೆ. ಈ ಕಲ್ಪನಾ ವ್ಯಕ್ತಿ ಕವಿ ನೋಡಿದ್ದ ಯಾವನೂ ಅಲ್ಲ. ಆದರೆ ಅವನಲ್ಲಿ ಕಂಡುಬರುವ ಅಂಶಗಳು ಮಾತ್ರ ಕವಿ ಹಿಂದೆ ನೋಡಿದ್ದ ವ್ಯಕ್ತಿಗಳಿಂದಲೇ ಅರಿಸಿದ್ದು. ಇದೆ ಕಲ್ಪನೆಯ ಕಾರ್ಯ. ಇದರ ಸೂತ್ರಹೀಗಿದೆ-[16]

ಅನುಭವ---> ಸಾಧನೆ--->ಅನುಭವಾಂಶಗಳ ಆಯ್ಕೆ---------->ನೂತನ ಕಲ್ಪನೆ.

ರಚನಾತ್ಮಕ ಬಿಂಬ ಕಲ್ಪನೆಯಲ್ಲಿ ಮೂರು ಮಜಲುಗಳಿವೆ. ಮೊದಲನೆಯದಾಗಿ ಪ್ರತ್ಯಕ್ಷಾನುಭವಗಳನ್ನು ಪಡೆಯುವುದು. ಎರಡನೆಯದಾಗಿ ಮನಸ್ಸಿನಲ್ಲಿ ರೂಪುಗೊಂಡಿರುವ ಆ ಬಿಂಬಗಳಿಂದ ಹಲಕೆಲವು ಅಂಶಗಳನ್ನು ಆರಿಸಿಕೊಳ್ಳುವುದು. ಕೊನೆಯದಾಗಿ ಹಾಗೆ ಆರಿಸಿಕೊಂಡ ಅಂಶಗಳನ್ನು ಆರಿಸಿಕೊಳ್ಳುವುದು. ಕೊನೆಯದಾಗಿ ಹಾಗೆ ಆರಿಸಿಕೊಂಡ ಅಂಶಗಳನ್ನು ಸಮನ್ವಯವಾಗಿ ಜೋಡಿಸಿ ಹೊಸಚಿತ್ರವನ್ನು ಸೃಷ್ಟಿಸುವುದು. ಈ ರೀತಿಯ ಕಲ್ಪನೆ ಕಲಾವಿದರ ಮನಸ್ಸಿನಲ್ಲಿ ಕೃತಿರಚನೆಗೆ ಮುನ್ನ ರೂಪುಗೊಂಡ ಸಾಹಿತ್ಯ ಚಿತ್ರಶಿಲ್ಪ, ಕೆತ್ತನೆ ಇತ್ಯಾದಿಗಳು ಕಲ್ಪನಾ ಕೃತಿಗಳು. ಕಲೆಗೆ ನೆರವಾಗುವಂತೆ ಈ ರಚನಾ ಬಿಂಬಕಲ್ಪನೆಯು ವಿಜ್ಞಾನ ಸಂಶೋಧನೆಯಲ್ಲೂ ನೆರವಾಗುತ್ತದೆ.

ಸ್ವಾರಸ್ಯಕರ ಕಥೆಯೊಂದನ್ನು ಓದಿ, ಶಿಲ್ಪ ಕಲೆಯನ್ನು ವೀಕ್ಷಿಸಿ ಚಿತ್ರವೊಂದನ್ನು ಬರೆದರೆ, ಅದನ್ನು ಮೊದಲು ಕಲ್ಪಿಸಿದ ಕವಿಯ ಅಥವಾ ಶಿಲ್ಪಿಯ ಕಲ್ಪನೆಯನ್ನು ನಾವು ಚಿತ್ರದ ಮೂಲಕ ಅನುಕರಣೆ

---

**16. ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-13, ಪು- 329-332,(1962), ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

ಮಾಡಿದಂತಾಗುತ್ತದೆ. ಇದನ್ನೇ ಅನುಕರಣ ಬಿಂಬ ಕಲ್ಪನೆ ಎನ್ನುವುದು. ಪಾಠ ಬೋಧಿಸಿದಾಗ ಪದಗಳ ಮೂಲಕ ಮಕ್ಕಳು ಪಡೆಯುವ ಚಿತ್ರವೂ ಸಹ ಇದೇ ಮಾದರಿಯ ಕಲ್ಪನೆ. ಮಕ್ಕಳಿಗೆ ಪಾಠ ಮನದಟ್ಟಾಗಬೇಕಾದರೆ ಈ ರೀತಿಯ ಕಲ್ಪನೆ ಅಗತ್ಯ. ಸಾಹಿತ್ಯ, ಕಲೆ ಹಾಗೂ ಬದುಕಿನ ನೀತಿಪಾಠಗಳನ್ನು ಕಲಿಯುವಾಗ ಈ ರೀತಿಯ ಕಲ್ಪನಾಶಕ್ತಿ ಕವಿಯ, ಶಿಲ್ಪಿಯ ಅಥವಾ ನೀತಿಶಾಸ್ತ್ರಜ್ಞನ ಮನೋಭಾವವನ್ನು ಅರಿಯಲು ಬಹಳ ಅನುಕೂಲಕರ.[17]

ಹಿಂದೆ ನಾವು ಪಡೆದ ಅನುಭವಗಳಿಂದ ಅಗತ್ಯವಾದ ಸಾಮಗ್ರಿಗಳನ್ನು ಒದಗಿಸಿಕೊಂಡು ಸಮನ್ವಯವಾಗಿ ಜೋಡಿಸಿ ನೂತನ ರಚನೆಯನ್ನು ರೂಪಿಸಬೇಕಾಗುತ್ತದೆ. ಇದನ್ನು ಸೃಷ್ಟಾತ್ಮಕ ಕಲ್ಪನೆ ಎನ್ನುವರು. ಸ್ವತಂತ್ರ ಕೃತಿ ರಚನೆಗೆ ಸೃಷ್ಟಾತ್ಮಕ ಕಲ್ಪನೆ ಅಗತ್ಯ. ಕಲ್ಪನೆಗೆ ವಾಸ್ತವಿಕತೆ ನೀಡುವಂತೆ ತತ್ವಗಳ ನಿಯಮ ಪಾಲಿಸಬೇಕು. ಕಾರ್ಯಕಾರಣ ಜ್ಞಾನ ಹಾಗೂ ಸಮನ್ವಯ ದೃಷ್ಟಿ ಇದ್ದು, ಔಚಿತ್ಯಪೂರ್ಣವಾಗಿ ಇವೆಲ್ಲದರ ಅಚ್ಚುಕಟ್ಟು ಇದ್ದರೆ, ಆಗ ಉತ್ತಮ ಕಲಾಕೃತಿಯಾಗಬಲ್ಲದು. ರಚನಾತ್ಮಕ ಬಿಂಬ ಕಲ್ಪನೆಗೂ, ಸೃಷ್ಟಾತ್ಮಕ ಬಿಂಬ ಕಲ್ಪನೆಗೂ ಅಂತಹ ಹೆಚ್ಚಿನ ವ್ಯತ್ಯಾಸ ಕಂಡುಬರುವುದಿಲ್ಲ. ಹೆಚ್ಚುಕಡಿಮೆ ಎರಡೂ ಒಂದೇ ಅನ್ನುವಂತಿವೆ.

सुहृद्भिराप्तैरसकृद्विचारितं स्वयञ्च बुद्ध्या प्रविचारिताश्रयम् ।

करोति कार्यं खलु यः स बुद्धिमान् स एव लक्ष्म्या यशसाञ्च भाजनम् ॥[18]

ಅಂದರೆ, ತನ್ನ ಆಪ್ತ ಮಿತ್ರರು ಅನೇಕ ಸಲ ವಿಚಾರಮಾಡಿರುವಂಥಹದೂ, ತಾನೂ ಸಹ ತನ್ನ ಸ್ವಂತ ಬುದ್ಧಿಯಿಂದ ಚೆನ್ನಾಗಿ ಯೋಚಿಸಿರುವಂಥಾದ್ದೂ ಆದ ಕೆಲಸವನ್ನು ಬುದ್ಧಿವಂತನಾದ ಯಾವನು ಮಾಡುವನೋ ಅವನು ಸಂಪತ್ತಿಗೂ, ಯಶಸ್ಸಿಗೂ ಪಾತ್ರನಾಗುತ್ತಾನೆ. ಈ ಒಂದು ಸೂಕ್ತಿಯಲ್ಲಿ ವಿಷ್ಣುಶರ್ಮರು ಅರಸುಕುಮಾರರಿಗೆ ಹೇಗೆ ಕಾರ್ಯ ಸಾಧನೆ ಮಾಡಿಕೊಳ್ಳಬೇಕು ಎಂಬ ಬಗ್ಗೆ ಚೆನ್ನಾಗಿ ತಿಳಿಸಿದ್ದಾರೆ. ಇಲ್ಲಿ ಅನುಭವ, ಸಾಧನೆ, ಅನುಭವಾಂಶಗಳ ಬಿಂಬ, ಕಲ್ಪನೆ – ಈ ಎಲ್ಲವನ್ನೂ ಮನಸ್ಸಿಗೆ ತಂದುಕೊಂಡು ಕೂಲಂಕಶವಾಗಿ ವಿಚಾರಮಾಡಿ ಕಾರ್ಯವನ್ನು ಕೈಗೊಂಡಾಗ, ಯಶಸ್ಸಿಗೆ ಪಾತ್ರರಾಗುತ್ತಾರೆ. ಆ ಯಶಸ್ಸು ಸಂಪತ್ತನ್ನೂ ದೊರಕಿಸುತ್ತದೆ.

ಮಕ್ಕಳಲ್ಲಿ ಅದ್ಭುತವಾದ ಕಲ್ಪನಾಶಕ್ತಿ ಇರುತ್ತದೆ. ಆದರೆ ಇರುವ ಶಕ್ತಿಯನ್ನು ಸೂಕ್ತ ರೀತಿಯಲ್ಲಿ ಬಳಕೆ ಮಾಡಿಕೊಳ್ಳುವಲ್ಲಿ ಅವರು ಹಿಂದೆ ಬೀಳುತ್ತಾರೆ. ಸೋಮಾರಿತನವೋ ಅಥವಾ ಆಲೋಚನಾದೌರ್ಬಲ್ಯವೋ

---

17. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–13, ಪು–329–335..(1962)
ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
18. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಂ, ಕಾಕೋಲೂಕೀಯಂ–ಶ್ಲೋ–115, ಪು–499,(1962) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಅದೇನು ಕಾರಣವೋ ಗೊತ್ತಿಲ್ಲ. ಅವರಲ್ಲಿ ಅಡಗಿರುವ ಆ ಶಕ್ತಿಯು ಸೂಕ್ತ ರೀತಿಯಲ್ಲಿ ಕಾರ್ಯರೂಪಕ್ಕೆ ಬರುವಂತೆ, ಬೇಕಾದ ಅನುಭವಗಳನ್ನು ರೂಢಿಸಿಕೊಡುವುದು ಬಹಳ ಮುಖ್ಯ. ಭಿನ್ನರೀತಿಯ ವ್ಯಕ್ತಿಗಳು, ವಸ್ತುಗಳು, ಸನ್ನಿವೇಶಗಳು, ಘಟನೆಗಳು, ಭಾವನೆಗಳು ಹಾಗೂ ಇವುಗಳ ಬಿಂಬಗಳು ಮಕ್ಕಳಿಗೆ ಒದಗಿಸುವ ಕಾರ್ಯ ಶಿಕ್ಷಕರು ಮತ್ತು ಪೋಷಕರದ್ದಾಗಿದೆ. ಉದಾಹರಣೆಗೆ ಒಂದು ಆಕರ್ಷಕ ಕಥೆಯನ್ನು ಹೇಳಿ, ನಂತರದಲ್ಲಿ ಅವರಿಂದಲೇ ಅಂಥಹದೇ ಒಂದು ಸಂದರ್ಭದ ಕಥೆಕಟ್ಟಿಸಿ ಹೇಳಿಸಬಹುದು. ಹಲವಾರು ಕಥೆಗಳನ್ನು ಕೇಳಿ ಅನೇಕ ವ್ಯಕ್ತಿಗಳ ವಿಚಾರ, ವರ್ತನೆಗಳು, ಭಾವನೆಗಳನ್ನು ಪರಿಚಯಿಸಿಕೊಂಡನಂತರ ಮತ್ತೊಬ್ಬ ಉತ್ತಮ ವ್ಯಕ್ತಿಯ ವರ್ಣನೆ ಮಾಡುವಂತೆ ಪ್ರೇರೇಪಿಸಬಹುದು. ಮಕ್ಕಳ ಕಲ್ಪನಾಶಕ್ತಿಯನ್ನು ಹೆಚ್ಚಿಸಲು ಪ್ರೋತ್ಸಾಹಿಸುವ ಸಂದರ್ಭದಲ್ಲಿ ಸಾಮರಸ್ಯ, ವಾಸ್ತವಿಕತೆ, ವಿಚಾರದಲ್ಲಿ ಆದರ್ಶ ಮತ್ತು ನಿಖರತೆ ಇತ್ಯಾದಿಗಳಿಂದ ಕೂಡಿರುವಂತೆ ಗಮನಹರಿಸಬೇಕು. ಆಗ ಮಾತ್ರ ಕಲ್ಪನೆಯ ಚಿತ್ರಗಳು ಪರಿಚಯವಾಗಿ ಮಕ್ಕಳಲ್ಲಿ ವಿಶೇಷ ಅರಿವು ಮೂಡುತ್ತದೆ. ಈ ಕಾರ್ಯಕ್ಕೆ ಹಿಂದಿನಿಂದಲೂ ಪೌರಾಣಿಕ ಕಥೆಗಳನ್ನು ಬಳಸುತ್ತಿರುವುದು ಸರ್ವವೇದ್ಯವಾಗಿದೆ. ಮಹಾದ್ಭುತ ಪೌರಾಣಿಕ ಕಥೆಗಳಲ್ಲಿ ಕಲ್ಪನೆಯ ರಾಶಿಗಳೇ ಇರುತ್ತದೆ. ನೈಜಸ್ವರೂಪಕ್ಕೆ ಅಷ್ಟೊಂದು ಹತ್ತಿರವಲ್ಲದಿದ್ದರೂ ಅದರಲ್ಲಿ ಕಲ್ಪನೆಯ (ಕಾವ್ಯ) ಸತ್ಯತೆ ಸೊಗಸಾಗಿರುತ್ತದೆ. ಅದರಲ್ಲಿ ಬರುವ ಬೇರೆ ಬೇರೆ ಅಂಶಗಳು ಜೀವನದಿಂದ ಆರಿಸಿದ ನೈಜರೂಪದ ಅನುಭವಗಳೇ ಆಗಿರುತ್ತವೆ. ಅವುಗಳನ್ನು ಕೇಳುವುದರಲ್ಲೂ, ಹೇಳುವುದರಲ್ಲೂ ಬಹಳ ಆಸಕ್ತಿ ಉಂಟಾಗುತ್ತದೆ. ಪೌರಾಣಿಕ ಕಥೆಗಳ ಘಟನೆಗಳನ್ನು ನಿಜವೆಂದೇ ಭಾವಿಸಿ, ಅರಿತು ಆನಂದಿಸುತ್ತಾರೆ. ಕ್ರಮೇಣ, ಅವರಲ್ಲಿ ಪ್ರೌಢಚಿಂತನೆ ಮೂಡಿದಾಗ ವಾಸ್ತವಿಕತೆಯಲ್ಲಿ ಆಸಕ್ತಿ ಹೆಚ್ಚುತ್ತದೆ[19] ಹೀಗೆ ಮನಸ್ಸಿನ ಬಿಂಬಗಳು ಹಾಗೂ ಬಿಂಬಕಲ್ಪನೆಗಳು, ಮುಂದೊದಗಬಹುದಾದ ಬಾಹ್ಯ ಪ್ರಪಂಚದ ಸ್ಥಿತಿ ಗತಿಗಳನ್ನು ಕಲ್ಪಿಸಿಕೊಂಡು ಜೀವನದ ವಿವಿಧ ಸನ್ನಿವೇಶಗಳಿಗೆ ಹೊಂದಿಕೊಂಡು, ಅಗತ್ಯಕ್ಕನುಗುಣವಾಗಿ ಸಿದ್ಧತೆಗಳನ್ನು ಮಾಡಿಕೊಳ್ಳಲು ಸಹಾಯಕವಾಗುತ್ತವೆ.

हस्ती स्थूलतरः स चाङ्कुशवशः किं हस्तिमात्रोऽङ्कुशः

दीपे प्रज्वलिते प्रणश्यति तमःकिं दीपमात्रं तमः ।

वज्रेणापि हताः पतन्ति गिरयः किं वज्रमात्रो गिरिः

तेजो यस्य विराजते स बलवान्स्थलेषु कः प्रत्ययः ॥[20]

---

19. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–13, ಪು–332–333.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

20. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತ ಪಂಚತಂತ್ರಂ, ಮಿತ್ರಭೇದಃ,– ಶ್ಲೋ–358, ಪು–230–231,(1962) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಪಂಚತಂತ್ರದಲ್ಲಿ ವಿಷ್ಣುಶರ್ಮರು ಕೆಲವು ಸೂಕ್ತಿಗಳ ಮುಖಾಂತರ ಒಳ್ಳೆಯ ನಿದರ್ಶನಗಳ ಸಮೇತ ವಿಚಾರಗಳನ್ನು ಮನದಟ್ಟುಮಾಡಿರುತ್ತಾರೆ. ಈ ಒಂದು ಶ್ಲೋಕದಲ್ಲಿ ಬಿಂಬಕಲ್ಪನೆಯನ್ನು ಮೂಡಿಸಿರುವುದನ್ನು ಗಮನಿಸಬಹುದು. "ಆನೆಯು ಬಹಳ ದೊಡ್ಡದು, ಅದು ಅಂಕುಶಕ್ಕೆ ವಶವಾಗುವುದು. ಆದರೆ ಈ ಅಂಕುಶ ಆನೆಯಷ್ಟು ದೊಡ್ಡ ಪ್ರಮಾಣದಲ್ಲಿದೆಯೇ? ದೀಪವು ಪ್ರಜ್ವಲಿಸಿದಾಗ ಕತ್ತಲೆ ಅಳಿಯುವುದು ಕತ್ತಲೆ ದೀಪದಷ್ಟೇ ಇದೆಯೇ? ವಜ್ರಾಯುಧದ ಪೆಟ್ಟಿಗೆ ಬೆಟ್ಟಗಳು ಒಡೆದು ಬೀಳುತ್ತವೆ. ಬೆಟ್ಟ ವಜ್ರಾಯುಧದಷ್ಟೇ ಇದೆಯೇ? ಯಾವನು ತೇಜಸ್ಸಿನಿಂದ ಬೆಳಗುವನೋ ಅವನು ಬಲಯುತನು. ಸ್ಥೂಲವಾಗಿರುವುದರಲ್ಲಿ ಯಾವ ನೆಚ್ಚಿಕೆ?

ಒಂದು ವೇಳೆ ಬರುವ ಸನ್ನಿವೇಶಕ್ಕೆ ಹೊಂದಿಕೊಳ್ಳುವ ಉದ್ದೇಶದಿಂದ ಒಮ್ಮೆ ನಡೆಸಿದ ಸಿದ್ಧತೆಯು ಸರಿಯಾಗದಿದ್ದರೆ, ತಕ್ಷಣ ಅದನ್ನರಿತು ಉತ್ತಮಗೊಳಿಸುವ ಕಲ್ಪನಾ ಆಕಾಂಕ್ಷೆಯನ್ನು ಬೆಳೆಸಲು ಪ್ರಯತ್ನಿಸಬೇಕು. ಕ್ಷಣಕ್ಷಣಕ್ಕೂ ಬದಲಾಗುತ್ತಿರುವ ಸಮಾಜ ಜೀವನದಲ್ಲಿ ಯಶಸ್ವಿಯಾಗಿ ಕಾಲಕಳೆದು ಕೊಂಡು ಹೋಗುವ ಅನ್ವಯಶಕ್ತಿ ದೊರಕುವುದು. ಮಕ್ಕಳ ಕಲ್ಪನಾಶಕ್ತಿ ವಿವಿಧ ರೂಪದಲ್ಲಿ ಕಾರ್ಯಮುಖ ವಾಗುತ್ತದೆ. ಪಾಠಗಳನ್ನು ಬೋಧಿಸುತ್ತಿರುವ ಸಂದರ್ಭದಲ್ಲಿ ಶಿಕ್ಷಕರು, ಅದರಲ್ಲೂ ಕವನ, ನೀತಿಕಥೆ, ಕಾದಂಬರಿ ಮುಂತಾದ ಸಾಹಿತ್ಯ ಪಾಠಗಳನ್ನು ಮಾಡುವಾಗ ಮಕ್ಕಳು ಕವಿಯ ಕಲ್ಪನೆಯನ್ನು, ಅದರಲ್ಲಿನ ವಾಸ್ತವಿಕತೆಯನ್ನು ಕಾಣುವ ಭಾಗವನ್ನು ಅರಿತು ಆನಂದಿಸುವಂತೆ ಪ್ರೋತ್ಸಾಹಿಸಬೇಕು. ಈ ವಿಚಾರದಲ್ಲಿ ಪಂಚತಂತ್ರ ನೀತಿಕಥೆಗಳಲ್ಲಿ ಅದ್ಭುತವಾದ ಜೀವನ ಸನ್ನಿವೇಶವೇಶಗಳನ್ನು ಒದಗಿಸಿಕೊಟ್ಟು ಉತ್ತಮ ಕಲ್ಪನೆಗಳು, ಆಲೋಚನಾ ಗುಣಗಳನ್ನು ಬೆಳೆಸುತ್ತಾ ಮುಂದೆ ರಾಜಕುಮಾರರು ಹೇಗೆ ಮುಂದಿನ ದಿನಗಳಲ್ಲಿ ಸಾರ್ಥಕ ಬದುಕನ್ನು ಸಾಗಿಸಬೇಕು, ಪ್ರಜಾ ಪರಿಪಾಲನಾ ಜವಾಬ್ದಾರಿಯನ್ನು ನಿರ್ವಹಿಸಬೇಕು ಎಂಬೆಲ್ಲ ವಿಚಾರಗಳನ್ನು ಚೆನ್ನಾಗಿ ಆಲೋಚಿಸುವಂತೆ ಗುರುಗಳಾದ ವಿಷ್ಣಶರ್ಮರು ಪ್ರೋತ್ಸಾಹಿಸಿದ್ದಾರೆ. ಹಾಗೂ ಉತ್ತಮ ಕಲ್ಪನೆಗಳನ್ನು ಹೊಂದುವಂತೆ ಪಂಚಸೂತ್ರಗಳಲ್ಲಿ ವ್ಯವಸ್ಥಿತವಾಗಿ ಸಂಯೋಜಿಸಿದ ನೀತಿ ಕಥಾಗುಚ್ಛಗಳಲ್ಲಿ ಆನೇಕತೆಯಲ್ಲಿ ಏಕತೆಯಿಂದ ಕೂಡಿರುವ ಪಠ್ಯಕ್ರಮದಲ್ಲಿ ಬಹಳ ಪರಿಣಾಮಕಾರಿಯಾಗಿ ಬೋಧಿಸಿದ್ದಾರೆ.



## 6-4. ಜೀವನ ಮೌಲ್ಯಗಳನ್ನು ಬೆಳೆಸುವಿಕೆ

## ಚಿಂತನ-ಮಂಥನ- ಮಾನವನಿಗೆ ಒಂದು ಅಗತ್ಯ ಗುಣ

ಮಾನವನು ಸಂಘ ಜೀವಿ. ಸಮಾಜದಲ್ಲಿ ಬರೀ ಬದುಕಿದ್ದರೆ ಸಾಲದು. ಬಾಳಲೂ ಬೇಕು. ಮತ್ತೆ ಬರೀ ಬದುಕಿ ಬಾಳಿದರೂ ಸಾಲದು. ಬದುಕು ಹಸನಾಗಿರಬೇಕು. ಒಂದು ವ್ಯವಸ್ಥಿತ ಸ್ವರೂಪದಲ್ಲಿ ಹಲವಾರು ಮೌಲ್ಯಗಳನ್ನು ಹಾಗೂ ಆದರ್ಶಗಳನ್ನು ರೂಢಿಸಿಕೊಂಡು ಜೀವನ ನಡೆಸಬೇಕು. ಒಂದೊಂದು ಕ್ಷೇತ್ರದಲ್ಲೂ ಈ ಆದರ್ಶಗಳು ತಾತ್ವಿಕ ದೃಷ್ಟಿಗೆ ಆಧಾರವಾಗಿರುತ್ತವೆ. ಯಾವ ಆದರ್ಶವೇ ಆಗಲಿ, ತಜ್ಞರ ಹಾಗೂ ಅನುಭವೀ ಮುಂದಾಳುಗಳ ಪ್ರಭಾವದಿಂದ ಜನಜೀವನದಲ್ಲಿ ಬಳಕೆಗೆ ಬರುತ್ತವೆ. ಈ ಆದರ್ಶಗಳ ಪ್ರತಿಫಲನದಿಂದಲೇ ಜೀವನದ ವಿವಿಧ ಕ್ಷೇತ್ರಗಳಲ್ಲಿ ಸಂಪ್ರದಾಯಗಳು ರೂಪುಗೊಳ್ಳುತ್ತವೆ. ನೀತಿನಿಷ್ಠೆಗಳು ಪ್ರಚಾರಕ್ಕೆ ಬರುತ್ತವೆ. ಇವುಗಳೆಲ್ಲ ಆದರ್ಶಗಳ ಬುನಾದಿಯ ಮೇಲೆ ರೂಪತಾಳಿದ್ದರೂ ಇವುಗಳ ಶ್ರೇಷ್ಠತೆ, ಉಪಯುಕ್ತತೆ ಹಾಗೂ ಸಾಧುತ್ವ ಅಲ್ಲಿನ ವಾಸ್ತವಿಕ ಪ್ರಭಾವವನ್ನು ಅವಲಂಭಿಸಿರುತ್ತವೆ. ಅಂದರೆ ಆದರ್ಶಗಳ ಪ್ರಭಾವ ಮತ್ತು ಸ್ಥಾನಮಾನ, ಇವುಗಳ ಮೌಲ್ಯ ಅಥವಾ ಬೆಲೆಯನ್ನು ಅವಲಂಭಿಸಿರುತ್ತದೆ ಎಂದರ್ಥ.[21]

ಸಾಮಾನ್ಯವಾಗಿ ನಾವು ಮೌಲ್ಯಗಳನ್ನು ಕುರಿತು ಯೋಚಿಸಿದಾಗ, ನಮ್ಮ ಜೀವನ, ಸಮಾಜ, ಅರ್ಥವ್ಯವಸ್ಥೆ, ರಾಜಕಾರಣ ಇತ್ಯಾದಿಗಳನ್ನು ಮೌಲ್ಯಾಧಾರಿತವಾಗಿರಬೇಕೆಂದು ಬಯಸುತ್ತೇವೆ. ಮೌಲ್ಯಗಳು ಮನುಷ್ಯನ ಬದುಕಿಗೆ, ಬದುಕಿನ ಚಟುವಟಿಕೆಗಳಿಗೆ ಇರುವ ವ್ಯವಸ್ಥೆಗೆ ಮೆರಗನ್ನುಂಟುಮಾಡುತ್ತದೆ. ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡರೆ ಮನುಷ್ಯನ ವ್ಯಕ್ತಿತ್ವವು ಸಂಪೂರ್ಣವಾಗಿ ವಿಕಾಸಗೊಳ್ಳುತ್ತದೆ. ಮಾನವೀಯ ಮೌಲ್ಯಗಳ ಮಹತ್ವವನ್ನು ಸಾರುವ ನಿಟ್ಟಿನಲ್ಲಿ ಬೆಲೆಕಟ್ಟಲಾಗದಂತಹ ಮೌಲ್ಯ ಭಗವದ್ಗೀತೆಗೆ ಇರುತ್ತದೆ. ಗೀತೆಯು ಸರ್ವಜನಾಂಗದ ಶಾಂತಿಯ ತೋಟವಾಗಿರುತ್ತದೆ. ಇಡೀ ಮನುಕುಲಕ್ಕೆ ಅತ್ಯಂತ ಅವಶ್ಯಕ ನೀತಿಗ್ರಂಥವಾಗಿದೆ. ತತ್ವಶಾಸ್ತ್ರದ ಅಧಿಪತಿಯಾಗಿದೆ. ಇಡೀ ಮನುಕುಲಕ್ಕೆ ಸನಾತನವಾದ ತಳಹದಿ. ಸುಖ, ಶಾಂತಿ, ಸಂತೃಪ್ತಿ, ಸತ್ಯ, ಅಹಿಂಸೆ ಸರ್ವಧರ್ಮ ಸಹಿಷ್ಣುತೆ ಗೀತೆಯ ಉದ್ದೇಶವಾಗಿದೆ. ಈ ಬಗ್ಗೆ ಒಂದು ಶ್ಲೋಕವನ್ನು ಉಲ್ಲೇಖಿಸುವುದಾದರೆ:-

अद्वेष्टा सर्वभूतानां मैत्रः करुण एव च ।

निर्ममो निरहङ्कारः समदुःखसुखः क्षमी ॥[22]

---

21. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿಮನೋವಿಜ್ಞಾನ, ಅ-25,ಪು-626-627.(1962)
ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

22. भगवद्गीता, 12-13.

ಅರ್ಥಾತ್ ಯಾರಿಗೆ ಅಸೂಯೆ ಇಲ್ಲವೋ, ಎಲ್ಲಾ ಜೀವಿಗಳಿಗೆ ಯಾರು ಸ್ನೇಹಿತರೋ, ಯಾರು ನಿರಹಂಕಾರರೋ, ಸುಖದುಃಖಗಳಲ್ಲಿ – ಸಮಚಿತ್ತರೋ, ಅವರು ನನಗೆ ಬಹುಪ್ರಿಯವಾದವರು. ಚಾರಿತ್ರಾರ್ಥಕ ನಿಟ್ಟಿನಲ್ಲಲ್ಲದೇ ಮನಃಶಾಸ್ತ್ರೀಯವಾಗಿ, ತತ್ವಶಾಸ್ತ್ರವಾಗಿ ಗೀತೆಯು ಮಹಾಭಾರತದ ಸಾರವನ್ನು ತನ್ನಲ್ಲಿ ತುಂಬಿಕೊಂಡಿದೆ.

ಸತ್ಯ, ಅಹಿಂಸೆ, ಅಸ್ತೇಯ, ಅಪರಿಗ್ರಹ, ಬ್ರಹ್ಮಚರ್ಯ ಮುಂತಾದ ಆದರ್ಶಗಳನ್ನು ಮಾನವೀಯ ಮೌಲ್ಯಗಳೆಂದು ಕರೆಯುತ್ತಾರೆ. ಪ್ರಾಮಾಣಿಕತೆ, ಕರ್ತವ್ಯನಿಷ್ಠೆಗಳಿಂದ ಕೂಡಿದ ಈ ಮೌಲ್ಯಗಳಿಂದಾಗಿ ಬದುಕು ಸುಂದರ ಎನಿಸಿಕೊಳ್ಳುತ್ತದೆ. ಮೌಲ್ಯಗಳಲ್ಲಿ ಶಾರೀರಿಕ, ಆರ್ಥಿಕ, ಧಾರ್ಮಿಕ, ಚಾರಿತ್ರಿಕ, ಬೌದ್ಧಿಕ, ಆಧ್ಯಾತ್ಮಿಕ ಮತ್ತು ನೈತಿಕ ಮೌಲ್ಯಗಳು ಸರ್ವಶ್ರೇಷ್ಠವೆನಿಸಿಕೊಳ್ಳುತ್ತವೆ.

ಕಾಲ–ದೇಶಗಳಿಗನುಗುಣವಾಗಿ ಆದರ್ಶಗಳು ಭಿನ್ನತೆಯನ್ನು ವ್ಯಕ್ತಪಡಿಸುತ್ತವೆ. ಅವುಗಳ ಮೌಲ್ಯದಲ್ಲೂ ಅಷ್ಟೇ ವ್ಯತ್ಯಾಸ ಕಂಡುಬರುತ್ತದೆ. ಭಾಸನ ಕಾಲದಲ್ಲಿ ಯಾವುದು ಆದರ್ಶವೆನಿಸಿತ್ತೋ ಅದು ಈಗ ಆದರ್ಶ ಎನಿಸದಿರಬಹುದು. ಹಾಗೆಯೇ ದೇಶದೇಶಗಳಲ್ಲೂ ಆದರ್ಶಗಳು ಹಾಗೂ ಮೌಲ್ಯಗಳು ಭಿನ್ನವಾಗಿರಬಹುದು. ನಮ್ಮ ಜೀವನದ ವ್ಯವಸ್ಥಿತ ಸ್ವರೂಪವು ಆದರ್ಶ ಮತ್ತು ಮೌಲ್ಯಗಳ ಸಿದ್ಧಾಂತವನ್ನೇ ಅವಲಂಭಿಸಿರುತ್ತದೆ. ಜೀವನದ ಪ್ರಗತಿ ಎಷ್ಟೆಷ್ಟು ಸಾಧನೆಯಾಗುತ್ತಿರುತ್ತದೋ ಅಥವಾ ಪರಿವರ್ತನೆಯಾಗುತ್ತಿರುತ್ತದೋ ಹಾಗೆಯೇ ಆದರ್ಶಗಳು ಮತ್ತು ಮೌಲ್ಯವೂ ಪರಿವರ್ತನೆ ಹೊಂದುತ್ತಿರುತ್ತದೆ.

ವ್ಯಕ್ತಿತ್ವದ ಬೆಳವಣಿಗೆ ಉತ್ತಮ ಶಿಕ್ಷಣದಿಂದಾಗುತ್ತದೆ. ಸಾಮೂಹಿಕ ಜೀವನಕ್ಕಾಗಿ ವ್ಯಕ್ತಿತ್ವದ ಬೆಳವಣಿಗೆ ಮುಖ್ಯ. ಇಂಥ ಜೀವನಕ್ಕೆ ವ್ಯಕ್ತಿತ್ವ ಒಪ್ಪುವಂತಿರಬೇಕು. ಇದಕ್ಕೆ ಆ ಜೀವನದ ಆಶೋತ್ತರಗಳಿಗೆ, ಸಂಸ್ಕೃತಿ ಸಂಪ್ರದಾಯಗಳಿಗೆ, ಧರ್ಮನೀತಿ ಮುಂತಾದವುಗಳಿಗೆ ಸಮ್ಮತಿಸುವಂತಿರಬೇಕು. ಹೀಗಿರುವಲ್ಲಿ ವ್ಯಕ್ತಿತ್ವದ ಬೆಳವಣಿಗೆ ಸಾಮೂಹಿಕ ಜೀವನಕ್ಕೆ. ಕೇವಲ ವ್ಯಕ್ತಿಗಾಗಲ್ಲ. ಆ ಬೆಳವಣಿಗೆ ರೂಪುಗೊಳ್ಳಬೇಕು ಎಂಬುದು ವ್ಯಕ್ತಿಯ ಹಿತದಲ್ಲಿ ನಿಜವಾದರೂ, ಆ ಹಿತ ಅಡಗಿರುವುದು ಸಾಮಾಜಿಕ ಜೀವನದ ವ್ಯವಸ್ಥೆಯಲ್ಲಿ. ಯಾವ ಶಿಕ್ಷಣದ ಕ್ಷೇತ್ರವೇ ಆಗಲಿ ತಾನು ನೀಡುವ ಶಿಕ್ಷಣ ಅಂದಿನ ಸಮಾಜಕ್ಕೊಪ್ಪುವಂತಿದೆಯೇ ಎಂದು ಅರ್ಥ ಮಾಡಿಕೊಳ್ಳಬೇಕು. ಹಾಗೆ ಪರೀಕ್ಷಿಸಲು ಒಂದು ಮಾಪನ ವ್ಯವಸ್ಥೆ ಇದ್ದು, ಆದರ್ಶಗಳನ್ನೂ ಅವುಗಳ ಮಟ್ಟವನ್ನೂ ತಿಳಿಸಬಲ್ಲ ಒಂದು ಮೂಲಮಾನ ಬೇಕು. ಅದರಂತೆಯೇ ಮೌಲ್ಯನಿಷ್ಕರ್ಷೆಗೂ ಒಂದು ಅಳತೆಯ ಸಾಧನ ಬೇಕು. ಇದು ನಿರ್ಧಿಷ್ಟವೂ, ನಿಖರವೂ ಆಗಿರಬೇಕು.

ಶಿಕ್ಷಕರು ಮತ್ತು ಪೋಷಕರು ಬಾಲ್ಯದಿಂದಲೇ ಮಕ್ಕಳಲ್ಲಿ ಉತ್ತಮ ಮೌಲ್ಯಗಳನ್ನು ರೂಢಿಸಲು ಪ್ರಯತ್ನಿಸಬೇಕು. ಶಿಕ್ಷಣ ತಜ್ಞ ರೈಟ್‌ರವರು ತರಗತಿಗಳಲ್ಲಿ ಮೌಲ್ಯಗಳನ್ನು ಬೆಳೆಸಲು ಪಾಲಿಸಬಹುದಾದ ಕೆಲವು ಉಪಾಯಗಳನ್ನು ಸೂಚಿಸಿದ್ದಾರೆ.[23]

ಶಾಲೆಗಳಲ್ಲಿ ಮಕ್ಕಳ ಆಸಕ್ತಿಗಳು, ಅನುಭವಗಳು ಮತ್ತು ಅಗತ್ಯತೆಗಳಿಗೆ ಸಂಬಂಧಿಸಿದ ಮೌಲ್ಯಗಳನ್ನು ಚರ್ಚಿಸಬೇಕು. ನೈಜ ಸನ್ನಿವೇಶಗಳಲ್ಲಿ ಮೌಲ್ಯಗಳ ಕಲಿಕೆಯನ್ನುಂಟುಮಾಡುತ್ತಾ, ಅದು ಅವರ ಮುಂದಿನ ಅಗತ್ಯಗಳಿಗೆ ಒಪ್ಪುವುದೇ ಎಂದು ಗಮನಿಸಬೇಕು. ಶಾಲಾ ಅನುಭವಗಳು ಮಕ್ಕಳಲ್ಲಿ ಉತ್ತಮ ಗುಣಗಳನ್ನು ಬೆಳೆಸುತ್ತದೆ. ಅವುಗಳೆಂದರೆ ಮಕ್ಕಳಲ್ಲಿ ಜವಾಬ್ದಾರಿ ಪ್ರಾಮಾಣಿಕತೆ, ಕರ್ತವ್ಯ, ನಿಷ್ಠೆ, ಮಿತ್ರತ್ವ, ವಿಧೇಯತೆ ಇತ್ಯಾದಿ.

ಕ್ವಿಲೆನ್‌ರವರು ಸಾಮಾಜಿಕ ಮಹತ್ವದಿಂದ ಕೂಡಿರುವ ಹಾಗೂ ಶೈಕ್ಷಣಿಕ ಕಾರ್ಯಕ್ರಮಕ್ಕೆ ಸಂಬಂಧಿಸಿದ ಮೂಲ ಸಾಮಾಜಿಕ ಪರಿಕಲ್ಪನೆಗಳನ್ನು ಎಲ್ಲಾ ವಯೋಮಾನದ ಮಕ್ಕಳಲ್ಲಿ ಬೆಳೆಸಬಹುದಾದ ಅಗತ್ಯತೆಯನ್ನು ಚರ್ಚಿಸಿ ಕೆಲವು ಸಾಮಾಜಿಕ ಪರಿಕಲ್ಪನೆಗಳನ್ನು ಸಲಹೆ ಮಾಡಿದ್ದಾರೆ.

**1. ಮಾನವೀಯ ಮೌಲ್ಯ:**

ಸಮಾನತೆ, ಸಹನೆ, ಪರಸ್ಪರ ಗೌರವ, ಕರುಣೆ, ಅನುಭೂತಿ, ಗುಣಗಳನ್ನು ಬೆಳೆಸುವ ಮೂಲಕ ಮಾನವತ್ವವನ್ನು ರೂಢಿಸಲು ಪ್ರಯತ್ನಿಸಬೇಕು.

**2. ಸಂಸ್ಕೃತಿಯ ಸ್ವರೂಪ:**

ನಮ್ಮ ಭಾರತೀಯ ಸಂಸ್ಕೃತಿಯ ಸ್ವರೂಪ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಮಕ್ಕಳು ಅರ್ಥ ಮಾಡಿಕೊಳ್ಳಲು ಹಾಗೂ ಇತರರ ವರ್ತನೆಯನ್ನೂ ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತದೆ. ಸಾಂಸ್ಕೃತಿಕಮೌಲ್ಯಗಳು, ಆಧ್ಯಾತ್ಮಿಕಮೌಲ್ಯಗಳು ಮತ್ತು ನೈತಿಕ ಮೌಲ್ಯಗಳನ್ನು ಬೆಳೆಸಲು ಪ್ರಯತ್ನಿಸಬೇಕು. ಯೋಗ, ಧ್ಯಾನದಂತಹ ಕಾರ್ಯಕ್ರಮಗಳ ಮೂಲಕ ಆಧ್ಯಾತ್ಮಿಕ ಮೌಲ್ಯ ರೂಢಿಸಬೇಕು.

**3. ಸಾಂಸ್ಕೃತಿಕ ಬದಲಾವಣೆ:**

ನಮ್ಮ ಸಂಪ್ರದಾಯದಲ್ಲಿ, ಆಚಾರ ವಿಚಾರಗಳಲ್ಲಿ, ಉಡುಪು ಸಾಮಾಜಿಕ ಚಟುವಟಿಕೆಗಳಲ್ಲಿ ಆಗಿರುವ ಬದಲಾವಣೆಗಳನ್ನು ಎಲ್ಲರೂ ತಿಳಿದುಕೊಳ್ಳಬೇಕು. ಸಾಂಸ್ಕೃತಿಕ ಬದಲಾವಣೆ ಪ್ರಕ್ರಿಯೆಯ ಜ್ಞಾನ, ಪ್ರಸಕ್ತ

---

23. **ವಾಮದೇವಪ್ಪ. ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-3, ಪು-159-160.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005

ಸಂಸ್ಕೃತಿಯಲ್ಲಿ ಕಂಡು ಬರುವ ಬದಲಾವಣೆಗಳನ್ನು ಅರಿತುಕೊಳ್ಳಲು ಸಹಾಯಕವಾಗುತ್ತದೆ. ಹೆಚ್ಚುತ್ತಿರುವ ಸಾಂಸ್ಕೃತಿಕ ಪ್ರಭಾವಗಳಿಂದ ಸಂಸ್ಕೃತಿ ಸಂಸ್ಕೃತಿಯ ಮಧ್ಯೆ ಆಂತರ್ಸಂಬಂಧವನ್ನು ಕಾಣಬಹುದಾಗಿದೆ ಇದರಿಂದ ಮಕ್ಕಳು ಸಹಕಾರ ಮನೋಭಾವವನ್ನು, ಅದರ ಅಗತ್ಯತೆಯನ್ನೂ ಮನಗಾಣಬಹುದಾಗಿದೆ.

**4. ಪ್ರಜಾಸತ್ತಾತ್ಮಕ ಮೌಲ್ಯಗಳು:**

ಭಾರತೀಯ ಸಮಾಜದಲ್ಲಿ ಬೆಳೆಯುವಂತಹ ಪ್ರತಿ ಮಕ್ಕಳೂ ಸಹ ಪ್ರಜಾಸತ್ತಾತ್ಮಕ ಮೌಲ್ಯಗಳಾದ ಸ್ವಾತಂತ್ರ್ಯ, ಸಮಾನತೆ, ಭ್ರಾತೃಭಾವನೆ ಹಾಗೂ ಜಾತ್ಯಾತೀತತೆಯನ್ನು ರೂಢಿಸಿಕೊಳ್ಳಬೇಕು.

**೫. ಪ್ರಗತಿಯ ಪರಿಕಲ್ಪನೆ:**

ಮಕ್ಕಳು ಸಂತೋಷದಿಂದ ಉತ್ತಮ ಜೀವನ ಸಾಗಿಸಲು ಪ್ರಗತಿಯ ಪರಿಕಲ್ಪನೆ ಹೊಂದಿರಬೇಕು. ಪ್ರಜಾಸತ್ತೆ ಹಾಗೂ ತಾಂತ್ರಿಕತೆ-ಈ ಪರಿಕಲ್ಪನೆಯು ಬೆಳೆಯಲು ಸಹಕಾರಿಯಾಗುತ್ತದೆ.

ಮಕ್ಕಳಲ್ಲಿ ಚಿಕ್ಕ ವಯಸ್ಸಿನಿಂದಲೇ ಮೂಲಮೌಲ್ಯಗಳಾದ ಪ್ರಾಮಾಣಿಕತೆ, ದಯೆ, ಸಹಕಾರ, ಸಭ್ಯತೆ, ಮಿತ್ರತ್ವ ಸ್ವಚ್ಛತೆ. ಉದಾರತೆ, ಸಾಮಾಜಿಕ ಕೌಶಲಗಳಲ್ಲಿ ನಿಪುಣತೆ ಮೊದಲಾದವುಗಳು ಬೆಳೆಯಲು ಶಕ್ಯವಿರುತ್ತದೆ. ಈ ಸಮಯದಲ್ಲಿ ಶಿಕ್ಷಕರು, ಪಾಲಕರು ಮಹತ್ವದ ಪಾತ್ರವಹಿಸುತ್ತಾರೆ. ಸುಸಂಸ್ಕೃತ ಸಂಸಾರದವರಿಗೆ  ಶಿಕ್ಷಣವೇ ಮೋಕ್ಷ. "ಮಕ್ಕಳಿಗೆ ತಂದೆ ಬಾಲ್ಯದೊಳ್ ಅಕ್ಕರ ವಿದ್ಯೆಯಂ ಕಲಿಸದಿರ್ದೆಡೆ ಕೊಂದಂ" ಎಂಬ ಗೃಹಸ್ಥಾಶ್ರಮ ಧರ್ಮಕ್ಕೆ ಅನುಗುಣವಾದ ನೀತಿಯನ್ನನುಸರಿಸಿ ತಮ್ಮಮಕ್ಕಳ ವಿದ್ಯಾಭ್ಯಾಸಕ್ಕೆ ಗಮನಕೊಟ್ಟು ಶಾಲೆಗೆ ಕಳುಹಿಸುತ್ತಾರೆ. ಶಿಕ್ಷಣದ ಮಹತ್ವವನ್ನು ಅರಿಯದಿದ್ದವರು ತಮ್ಮಮಕ್ಕಳನ್ನು ಶಾಲೆಗೆ ಕಳುಹಿಸಿ ಅವರ ಪ್ರಗತಿಗೆ ನೆರವಾಗದಿರುವುದು ಆಧುನಿಕ ಶಿಕ್ಷಣವ್ಯವಸ್ಥೆಯಲ್ಲಿ ಒಂದು ದೊಡ್ಡ ಸಮಸ್ಯೆಯೇ ಆಗಿಬಿಟ್ಟಿದೆ.[24]

ಸಮಾಜದ ಮುಖ್ಯ ಕೇಂದ್ರವಾದ ಶಾಲೆ ಅಥವಾ ಶಿಕ್ಷಣ ಕೇಂದ್ರಗಳು ಸಮಾಜದಲ್ಲಿ ಹಿತವಾದ, ಆರೋಗ್ಯಕರ ವಾತಾವರಣವನ್ನು ಸಂರಕ್ಷಿಸುವ ಉದ್ದೇಶವನ್ನು ಹೊಂದಿರಬೇಕಾಗುತ್ತದೆ. ಹಾಗಾದರೆ ಶಿಕ್ಷಣದ ಗುರಿಗಳು ಹೇಗಿರಬೇಕು ಎನ್ನುವುದಕ್ಕೆ ಮಹಾತ್ಮಾಗಾಂಧೀಜಿಯವರು ಹೀಗೆ ಹೇಳಿದ್ದಾರೆ " ಶೀಲಸಂವರ್ಧನೆ, ವ್ಯಕ್ತಿಯಲ್ಲಿ ಸಚ್ಚಾರಿತ್ರ್ಯವನ್ನು ಬೆಳೆಸುವಲ್ಲಿ ಶಿಕ್ಷಣಕೇಂದ್ರಗಳು ಯಶಸ್ವಿಯಾದರೆ ಸಮಾಜವು ತನ್ನಿಂದತಾನೇ ಸುಧಾರಿಸುತ್ತದೆ ಎಂದು ಭಾವಿಸುತ್ತೇನೆ." ಎಂದು ಹೇಳಿ ಉತ್ತಮ ವ್ಯಕ್ತಿತ್ವ ನಿರ್ಮಾಣ ಕಾರ್ಯದಲ್ಲಿ ಶೈಕ್ಷಣಿಕ

24. **ವಾಮದೇವಪ್ಪ. ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-3, ಪು--160,.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005

ಮಹತ್ವವನ್ನು ಸಾರಿದ್ದಾರೆ. ಶಿಕ್ಷಣ ನೀಡಿಕೆ ಒಂದು ಪವಿತ್ರ ಕಾರ್ಯ. ಇದು ಎಲ್ಲರಿಗೂ ಸುಲಭವಾಗಿ ಲಭ್ಯವಾಗುವಂತಹುದಲ್ಲ. ನಿಸ್ವಾರ್ಥತೆಯಿಂದ ಶಿಕ್ಷಣ ನೀಡಿದಷ್ಟು ಉತ್ತಮ ಫಲ ದೊರೆಯುತ್ತದೆ. ಶಿಕ್ಷಣ, ನೈತಿಕ ಪ್ರಜ್ಞೆ ಇಲ್ಲದಿದ್ದರೆ ವ್ಯಕ್ತಿಯ ವ್ಯಕ್ತಿತ್ವಕ್ಕೆ ಏನೂ ಬೆಲೆಯಿಲ್ಲ. ವ್ಯಕ್ತಿತ್ವವಿಲ್ಲದೆ ಸಮಾಜದಲ್ಲಿ ಮನ್ನಣೆಯಿಲ್ಲ. ಮನ್ನಣೆಗಾಗಿಯಾದರೂ ನೈತಿಕ ಮೌಲ್ಯಗಳ ಜ್ಞಾನಾರ್ಜನೆ ಅತ್ಯಗತ್ಯ. ಮಕ್ಕಳ ಅಥವಾ ವಿದ್ಯಾರ್ಥಿಗಳ ಮನೋಬಲ ಮತ್ತು ಬೌದ್ಧಿಕ ವಿಕಾಸಕ್ಕೆ ಕಲಿಕೆ ಒಂದು ವರವಾಗಿ ಪರಿಣಮಿಸಬೇಕು. ಈ ನಿಟ್ಟಿನಲ್ಲಿ ಶಿಕ್ಷಣ ಕೇಂದ್ರಗಳು ಮೌಲ್ಯಯುತ ಶಿಕ್ಷಣ ನಿಡುವುದರೆಡೆಗೆ ಹೆಜ್ಜೆ ಹಾಕಬೇಕು.

ಮೌಲ್ಯಗಳ ಬೆಳವಣಿಗೆ ವ್ಯಕ್ತಿಯ ಬೆಳವಣಿಗೆಗೆ ಅನುಗುಣವಾಗಿ ಬೆಳೆಯುತ್ತಾ ಹೋಗುವುದು. ವ್ಯಕ್ತಿಯು ಉತ್ತಮಗುಣ ಹಾಗೂ ಮೌಲ್ಯಗಳನ್ನು ಅಳವಡಿಸಿಕೊಳ್ಳುತ್ತಾ, ಸಮಾಜೀಕರಣದ ತನ್ನ ಪ್ರಯತ್ನ ಮತ್ತು ಪರಿಶ್ರಮದಲ್ಲಿ ಅಭಿವೃದ್ಧಿಪಡಿಸಿಕೊಳ್ಳುತ್ತಾ ಮುಂದೆ ಮುಂದೆ ಸಾಗುತ್ತಾನೆ.ಇದರ ಜೊತೆಗೆ ಶೈಕ್ಷಣಿಕ ಪ್ರಕ್ರಿಯೆಯಲ್ಲಿ, ಸಾಮಾಜಿಕ ಪರಿಕಲ್ಪನೆಗಳಾಗಿ ಮೌಲ್ಯಗಳು ಕಂಡುಬರುತ್ತವೆ. ಉದಾಹರಣೆಗೆ:- ಸಾಹಿತ್ಯ ಮತ್ತು ಸಂಗೀತ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವುದು, ಕಥೆಕವನಗಳನ್ನು ಕೇಳುವುದು ಬರೆಯುವುದರಲ್ಲಿ ಆಸಕ್ತನಾಗಿರುವುದು. ಇದರ ಫಲವಾಗಿ ಅವುಗಳ ಸೌಂದರ್ಯವನ್ನು ಆಸ್ವಾದಿಸಿ, ಆನಂದಪಡುವುದು. ಇದನ್ನೇ ಸೌಂದರ್ಯ ಪ್ರಜ್ಞೆ ಅಥವಾ ಸೌಂಧರ್ಯಾತ್ಮಕ ಮೌಲ್ಯದ ಬೆಳವಣಿಗೆ ಎನ್ನಬಹುದು.[25]

ಸಂಸ್ಕೃತ ಭಾಷೆಯು ಹಲವು ಭಾಷೆಗಳ ಜನನಿಯಾಗಿದೆ. ಭಾರತದ ವೈದಿಕ ಸಾಹಿತ್ಯದ ಅನೇಕ ಗ್ರಂಥಗಳು ಸಂಸ್ಕೃತಭಾಷೆಯಲ್ಲಿದ್ದು ಉತ್ತಮ ಮೌಲ್ಯವರ್ಧಕಗಳಾಗಿವೆ. ವಿದ್ಯಾರ್ಥಿಗಳ ಸುಸಂಸ್ಕೃತ ವ್ಯಕ್ತಿತ್ವ ನಿರ್ಮಾಣ ಕಾರ್ಯದಲ್ಲಿ ಈ ಮೌಲ್ಯಗಳು ಬಹಳ ಮುಖ್ಯವಾಗಿದ್ದು, ಇತರ ಭಾಷೆಗಳಂತೆಯೇ ಸಂಸ್ಕೃತವನ್ನು ಪ್ರಾಥಮಿಕ ಹಂತದಲ್ಲೇ ಸ್ವ ಇಚ್ಛೆಯಿಂದ ವಿದ್ಯಾರ್ಥಿಗಳು ಕಲಿತರೆ ಬಹಳ ಒಳ್ಳೆಯದು. ವ್ಯಕ್ತಿತ್ವ ವಿಕಸನದಲ್ಲಿ ಸಾಂಪ್ರದಾಯಿಕ ಶಿಕ್ಷಣದ ಜೊತೆಗೆ ನೀತಿ ಬೋಧನೆ ಅವಶ್ಯಕ. "ನೀತಿಯಿಲ್ಲದ ಶಿಕ್ಷಣ ರಾಮನಿಲ್ಲದ ಅಯೋಧ್ಯೆಯಂತೆ" ಎಂಬ ಗಾದೆ ಮಾತಿದೆ. ಬಹುಶಃ ಬಹಳಷ್ಟು ಪಾಶ್ಚಿಮಾತ್ಯ ರಾಷ್ಟ್ರಗಳು ಇದರ ಮಹತ್ವವನ್ನು ಗುರುತಿಸಿ ಸಂಸ್ಕೃತ ಭಾಷೆಯನ್ನು ಅವರು ಕಲಿಯುವ ಭಾಷೆಗಳ ಜೊತೆಯಲ್ಲಿ ಕಡ್ಡಾಯವಾಗಿ ಆಯ್ಕೆ ಮಾಡಿಕೊಂಡಿರುತ್ತವೆ.

ಮೌಲ್ಯಗಳು ಜೀವನದ ಗುರಿಯ ಆಯ್ಕೆಯ ಮೇಲೆ ಪ್ರಭಾವ ಬೀರುತ್ತವೆ. ಹಾರ್ವರ್ಡ್ ವಿಶ್ವವಿದ್ಯಾನಿಲಯದ ಮನೋವಿಜ್ಞಾನಿ **LAWRENCE KOHLBERG** ರವರ ಪ್ರಕಾರ ಜ್ಞಾನಾತ್ಮಕ ಪ್ರಕ್ರಿಯೆಗಳಾದ ಆಲೋಚನೆ ಮತ್ತು ತಾರ್ಕಿಕತೆ ಮಗುವಿನ ನೈತಿಕ ವಿಕಾಸದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ.

25. **ವಾಮದೇವಪ್ಪ. ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಅ-3, ಪು-159-160.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಮಠಬಡಾವಣೆ, ದಾವಣಗೆರೆ-577005

ಮಕ್ಕಳಿಗೆ ದೊರೆತ ಕಲಿಕಾ ಅನುಭವ ಮತ್ತು ಅವರನ್ನು ಬೆಳೆಸಿರುವಿಕೆಯ ಮೇಲೆ ಅವಲಂಬಿಸಿರುವುದೇ ಅವರ ನೈತಿಕ ತೀರ್ಮಾನಗಳು ಹಾಗೂ ಅವರ ಬೌದ್ಧಿಕ ಮಟ್ಟ. ಮಾನವರಲ್ಲಿ ನೈತಿಕ ವಿಕಾಸದ ಪ್ರಕ್ರಿಯೆಯನ್ನು ಅಧ್ಯಯನ ಮಾಡುವ ಸಲುವಾಗಿ ಕೋಹ್ಲ್ಬರ್ಗ್‌ರವರು ನೈತಿಕ ವಿಕಾಸವನ್ನು ವ್ಯಕ್ತಿಯ ನ್ಯಾಯ ನಿರ್ಣಯ ಶಕ್ತಿಯ ವಿಕಾಸ ಎಂದು ವ್ಯಾಖ್ಯಾನಿಸುತ್ತಾರೆ. ಇದರಿಂದ ಮಕ್ಕಳ ಗುಣಧರ್ಮಗಳು ಮೌಲ್ಯಯುತವಾಗುತ್ತವೆ. ಪಿಯಾಜೆಯ ಜ್ಞಾನಾತ್ಮಕ ವಿಕಾಸದ ಹಂತಗಳಂತೆ ಕೋಹ್ಲ್ಬರ್ಗ್‌ರವರೂ ಸಹ ನೈತಿಕ ವಿಕಾಸದ ಮೂರು ಪ್ರಮುಖ ಮಟ್ಟಗಳನ್ನು ಸೂಚಿಸಿರುತ್ತಾರೆ. ಅವುಗಳೆಂದರೆ– [26]

1. ಸಾಂಪ್ರದಾಯಿಕ ಪೂರ್ವ ನೈತಿಕತೆಯ ಹಂತ ~ 4 ರಿಂದ 10 ವರ್ಷಗಳು.

2. ಸಾಂಪ್ರದಾಯಿಕ ನೈತಿಕತೆಯ ಹಂತ ~ 10 ರಿಂದ 13 ವರ್ಷಗಳು.

3. ಸ್ವಯಂ ಸ್ವೀಕೃತ ನೈತಿಕ ತತ್ವಗಳ ಹಂತ ~ 13 ವರ್ಷಗಳ ಮೇಲ್ಪಟ್ಟು.

ಇವರ ಪ್ರಕಾರ ಒಂದು ನೈತಿಕ ವಿಕಾಸ ಹಂತದಿಂದ ಇನ್ನೊಂದು ನೈತಿಕ ವಿಕಾಸ ಹಂತಕ್ಕೆ ಸಾಗುವುದು ವ್ಯಕ್ತಿಯ ಜ್ಞಾನಾತ್ಮಕ ಸಾಮರ್ಥ್ಯಗಳ ಮೇಲೆ ಅವಲಂಬಿಸಿರುತ್ತದೆಯೇ ಹೊರತು ಕೇವಲ ಪೋಷಕರ ಹಿರಿಯರ ಅಥವಾ ಸ್ನೇಹಿತರ ನೈತಿಕ ಮೌಲ್ಯಗಳಿಂದಲ್ಲ. ವಿವಿಧ ವಯೋಮಾನಗಳಲ್ಲಿ ವ್ಯಕ್ತಿಗೆ ತನ್ನಿಂದ ಸಮಾಜವು ಯಾವ ನಡವಳಿಕೆಯನ್ನು ನಿರೀಕ್ಷಿಸುತ್ತದೆ ಎಂಬುದನ್ನು ಅರಿತುಕೊಳ್ಳಲು ವಿಕಾಸಾತ್ಮಕ ಕಾರ್ಯಗಳು ಮಾರ್ಗದರ್ಶನ ನೀಡುತ್ತವೆ. ಪೋಷಕರು ತಮ್ಮ ಮಕ್ಕಳಿಂದ ಸಮಾಜ ಯಾವ ಕೌಶಲವನ್ನು ನಿರೀಕ್ಷಿಸುತ್ತದೆ ಎಂಬುದನ್ನು ತಿಳಿದು ಮಕ್ಕಳಿಗೆ ಸೂಕ್ತ ಕೌಶಲಗಳನ್ನು ಕಲಿಸಲು ಹಾಗೂ ತನ್ಮೂಲಕ ಸೂಕ್ತ ಹೊಂದಾಣಿಕೆ ಮಾಡಿಕೊಳ್ಳಲು ಇವು ನೆರವಾಗುತ್ತವೆ. ವ್ಯಕ್ತಿಗೆ ತನ್ನ ಜೀವನದ ಮುಂದಿನ ಹಂತದಲ್ಲಿ ಏನಿದೆ?ತಾನು ಏನು ಮಾಡಬೇಕಾಗಿದೆ? ಯಾವ ಜವಾಬ್ದಾರಿ ನಿರ್ವಹಿಸಲು ಸಿದ್ಧನಾಗಬೇಕು? ಎಂಬುದನ್ನು ಅರಿತು ಕಾರ್ಯನಿರತನಾಗಲು ವಿಕಾಸಾತ್ಮಕ ಕಾರ್ಯಗಳ ಅರಿವು ಮಹತ್ವಪೂರ್ಣವಾಗಿ ಸಹಕಾರಿಯಾಗುತ್ತವೆ.

ತತ್ಪರಿಣಾಮವಾಗಿ ವ್ಯಕ್ತಿಯಲ್ಲಿ ಉತ್ತಮ ಗುಣಗಳು ಬೆಳೆದು ಮೌಲ್ಯಯುತ ಬದುಕು – ಸಾರ್ಥಕ ಜೀವನದೆಡೆಗೆ ಪ್ರೇರೇಪಿತನಾಗುತ್ತಾನೆ. ಇಂಥಹ ಚಿಂತನ– ಮಂಥನ ರಾಜಕುಮಾರರ ಮನಸ್ಸಿಗೆ ಬರುವಂತೆ ಪಂಚತಂತ್ರಕಥೆಗಳ ಮೂಲಕ ಅತ್ಯಂತ ಸಮಯೋಚಿತವಾಗಿ ಸೂಕ್ತವಾದ ಸನ್ನಿವೇಶಗಳನ್ನು ಒದಗಿಸಿ, ಅವರ ಮುಂದಿನ ಹಂತದ ದಿನಗಳಲ್ಲಿ ಏನಿದೆ ಹಾಗೂ ಏನು ಮಾಡಬೇಕಾಗಿದೆ ಹಾಗೂ ಯಾವ ಜವಾಬ್ದಾರಿ ನಿರ್ವಹಿಸಬೇಕಾಗಿದೆ? ಅದಕ್ಕೆ ಹೇಗೆ ಸಿದ್ಧತೆ ನಡೆಸಬೇಕು? ಎಂಬುದನ್ನು ಗುರುಗಳಾದ ವಿಷ್ಣುಶರ್ಮರು ಬಹಳ

---

**26. ವಾಮದೇವಪ್ಪ. ಎಚ್.ವಿ.** ಶೈಕ್ಷಣಿಕ ಮನೋವಿಜ್ಞಾನ, ಅ–2, ಪು–96–97.(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

ಯೋಜಿತವಾಗಿ ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ನೀತಿಶಿಕ್ಷಣವನ್ನು ಬೋಧಿಸಿದ್ದಾರೆ.

कारणान्मित्रतां याति कारणादेति शत्रुताम् ।

तस्मान्मित्रत्वमेवात्र योज्यं वैरं न धीमता ॥[27]

ಯಾವುದೋ ಕಾರಣದಿಂದಲೇ ಸ್ನೇಹವುಂಟಾಗುತ್ತದೆ. ಅಂಥ ಯಾವುದೋ ಕಾರಣದಿಂದಲೇ ಶತ್ರುತ್ವವುಂಟಾಗುತ್ತದೆ. ಆದುದರಿಂದ, ಬುದ್ಧಿವಂತನಾದವನು ಸ್ನೇಹವನ್ನೇ ಇಲ್ಲಿ ಸಾಧಿಸಬೇಕು; ದ್ವೇಷವನ್ನಲ್ಲ. ಹೀಗೆ ವಿಷ್ಣುಶರ್ಮರು ಬಹಳ ಮುಖ್ಯವಾದ ನೀತಿ ವಿಚಾರಗಳನ್ನು ಅತ್ಯಂತ ಸರಳವಾಗಿ ಮನದಟ್ಟು ಮಾಡುತ್ತಾ, ಅದಕ್ಕೊಂದು ಕಥೆಯನ್ನು ಹೆಣೆದು, ಮಧ್ಯೆ ಮಧ್ಯೆ ಒಂದೊಂದು ಸೂಕ್ತಿಗಳನ್ನು ಸೇರಿಸುತ್ತಾ ಸುಲಭವಾಗಿ ರಾಜಕುಮಾರರ ಮನಪರಿವರ್ತನೆ ಮಾಡಿದ್ದಾರೆ.



27. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಸಂಪ್ರಾಪ್ತಿ, ಶ್ಲೋ-33, ಪು-326 (1962) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

## 6-5. पञ्चतन्त्रस्य–तृतीयं तन्त्रम् – "काकोलूकीयम् "

### ಕಥೆಗಳ ವಿಶ್ಲೇಷಣೆ

ಈ ಅಧ್ಯಾಯದಲ್ಲಿ ಈವರೆಗೆ ಸಂಕ್ಷಿಪ್ತವಾಗಿ ವಿಚಾರ ಮಾಡಿದ ಕೆಲವು ಮನೋವೈಜ್ಞಾನಿಕ ಹಾಗೂ ಶೈಕ್ಷಣಿಕ ಅಂಶಗಳಾದ ಅರಿವು-ಬಿಂಬ ಮತ್ತು ಬಿಂಬ ಕಲ್ಪನೆ-ಮೌಲ್ಯಗಳನ್ನು ಮಕ್ಕಳಲ್ಲಿ ರೂಢಿಸುವುದು- ಇದರಲ್ಲಿ ಪೋಷಕರು ಮತ್ತು ಶಿಕ್ಷಕರ ಪಾತ್ರಗಳು ಮುಂತಾದವುಗಳು ವ್ಯಕ್ತಿವಿಕಸನ ಕಾರ್ಯದಲ್ಲಿ ಎಷ್ಟರಮಟ್ಟಿಗೆ ಪ್ರಭಾವವನ್ನು ಬೀರುತ್ತವೆ ಎಂಬುದನ್ನು ತಿಳಿದದ್ದಾಯಿತು. ಈ ಎಲ್ಲ ಅಂಶಗಳನ್ನು ವಿಷ್ಣುಶರ್ಮರು ತಮ್ಮ ಪಂಚತಂತ್ರದಲ್ಲಿ ಹೇಗೆ ಅಳವಡಿಸಿದ್ದಾರೆಂಬುದನ್ನು ಮೂರನೆಯ ತಂತ್ರವಾದ "ಕಾಕೋಲೂಕೀಯ"ದಲ್ಲಿ ಬರುವ ಕಥೆಗಳನ್ನು ವಿಶ್ಲೇಷಿಸಿ ತಿಳಿಯೋಣ.

ಪ್ರಾರಂಭದಲ್ಲಿ, ಪಂಚತಂತ್ರದ ಮೂರನೆಯ ತಂತ್ರ ಕಾಕೋಲೂಕೀಯಮ್ ಸೂತ್ರ ಕಥೆಯ ಸೂಕ್ಷ್ಮ ಪರಿಚಯ ಮಾಡಿಕೊಳ್ಳುವುದಾದರೆ, ಮೇಘವರ್ಣನೆಂಬ ಕಾಗೆಗಳ ರಾಜ ಮತ್ತು ಅರಿಮರ್ಧನನೆಂಬ ಗೂಬೆ ಪ್ರಧಾನ ಪಾತ್ರದಲ್ಲಿ ಕಂಡುಬರುತ್ತವೆ. ಸಹಜ ವೈರಿಗಳೆನಿಸಿದ ಕಾಗೆಗಳು ಮತ್ತು ಗೂಬೆಗಳಿಗೆ ಸಂಬಂಧಿಸಿದಂತೆ ಕಥೆಗಳ ಮೂಲಕ ಯುದ್ಧನೈಪುಣ್ಯ ಹಾಗೂ ಶಾಂತಿಯ ಮಹತ್ವವನ್ನು ವಿವರಿಸಲಾಗಿದೆ. ಕಾಗೆಗಳು ದುರ್ಬಲವಾದವು, ಆದರೆ ಉತ್ತಮ ನಡತೆಯುಳ್ಳವು. ಚಿಕ್ಕ ಗುಂಪಿಗೆ ಸೇರಲ್ಪಟ್ಟ ಪಕ್ಷಿಗಳಾಗಿವೆ. ಗೂಬೆಗಳು ದೊಡ್ಡ ಗುಂಪಾಗಿದ್ದು ದುರ್ನಡತೆಯನ್ನು ಮೈಗೂಡಿಸಿಕೊಂಡಿರುವಂತಹವು. ಇಲ್ಲಿ ಬಡಪಾಯಿ ಕಾಗೆಗಳೇ ಬಲಶಾಲಿಗಳಾದ ಗೂಬೆಗಳ ರಹಸ್ಯಗಳನ್ನು, ಇತಿಮಿತಿಯನ್ನು ಚೆನ್ನಾಗಿ ಅರಿತುಕೊಂಡು ಜಾಣ್ಮೆಯಿಂದ ಜಯಗಳಿಸುತ್ತವೆ. ಒಮ್ಮೆ ಶತ್ರುವಾಗಿದ್ದವನು ನಂತರದ ಸಂದರ್ಭದಲ್ಲಿ ಪ್ರಿಯಮಿತ್ರನಾಗಿ ಮಾರ್ಪಟ್ಟಿದ್ದರೂ ಅವನಲ್ಲಿ ಸ್ನೇಹ ಬೆಳೆಸಲು ಬಹಳ ಯೋಚಿಸಬೇಕಾಗುವುದು. ಮೊದಲೆರಡು ತಂತ್ರಗಳಾದ ಮಿತ್ರಭೇದ, ಮಿತ್ರಸಂಪ್ರಾಪ್ತಿಗಳಲ್ಲಿ ಕಂಡು ಬರುವ ಆಕರ್ಷಕ ಉಪಕಥೆಗಳಲ್ಲಿ ಅಸಹಜ ಮೈತ್ರಿಯಿಂದುಂಟಾಗುವ ತೊಂದರೆಗಳು ಮತ್ತು ಒಳ್ಳೆಯ ಮಿತ್ರರನ್ನುಗಳಿಸುವುದರಿಂದುಂಟಾಗುವ ಅಪರಿಮಿತ ಲಾಭಗಳನ್ನು ಕಾಗೆ, ಇಲಿ, ಆಮೆ ಮತ್ತು ಜಿಂಕೆಯ ಸೂತ್ರ ಕಥೆಯ ಮೂಲಕ ಉತ್ತಮ ಮಿತ್ರನ ಲಕ್ಷಣಗಳನ್ನು ವಿವರಿಸಲಾಗಿದೆ. ಮುಂದೆ ಮೂರನೆಯ ತಂತ್ರವಾದ ಕಾಕೋಲೂಕೀಯದಲ್ಲಿ ಮೊದಲ ನುಡಿಯಲ್ಲಿ

न विश्वसेत्पूर्वविरोदितस्य शत्रोश्च मित्रत्वमुपागतस्य ।

दग्धां ग्रहां पश्य उलूकपूर्णा काकप्रणीतेन हुताशनेन ॥[28]

---

28. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ., ಶ್ಲೋ-1, ಪು-435 (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಅರ್ಥಾತ್ "ಹಿಂದೆ ವಿರೋಧವನ್ನು ಮಾಡಿದ್ದ ಶತ್ರು ಈಗ ಮಿತ್ರನಾದರೂ ಕೂಡ ಅವನನ್ನು ಸಂಪೂರ್ಣವಾಗಿ ನಂಬಬಾರದು. ಕಾಗೆಯು ಹಾಕಿದ ಅಗ್ನಿಯಿಂದ ಗೂಬೆಗಳಿದ್ದ ಗುಡಿಸಲು ಸುಟ್ಟು ಹೋಯಿತು." ಎಂದು ಇದರ ಸಾರಾಂಶ. ಕಾಗೆ-ಗೂಬೆಗಳ ವೈರತ್ವದ ಕಥೆಯಲ್ಲಿ ಕಾಗೆ ಗೂಬೆಗಳು ಬದ್ಧ ವೈರಿಗಳು. ಅವುಗಳ ವೈರ ಸಾಧನೆ ಹೇಗೆಂದರೆ ಗೂಬೆ ಕುಲದ ಸಂಹಾರಕ್ಕೆ ಕಾಗೆಗಳ ರಾಜ ಮೇಘವರ್ಣ ತನ್ನ ಎಲ್ಲಾ ಸಚಿವರನ್ನು ಕರೆದು, ಶತ್ರು ಅರಿಮರ್ಧನನ ಉಪಟಳ, ಅವನ ಪ್ರಾಭಲ್ಯ ನಿತ್ಯವೂ ರಾತ್ರಿ ಬಂದು ಮೇಘವರ್ಣನ ಪಕ್ಷದವರನ್ನೆಲ್ಲಾ ಸಂಹಾರಮಾಡುತ್ತಾ ಬರುತ್ತಿದ್ದಾನೆ. ಇದಕ್ಕೆ ಹೇಗೆ ಪ್ರತೀಕಾರ ಮಾಡುವುದು. ರಾತ್ರಿಯಲ್ಲಿ ನಾವು ಅವನನ್ನು ನೋಡಲಾರೆವು ಮತ್ತು ಆತನು ಬೆಳಗ್ಗೆ ವಾಸಿಸುವ ದುರ್ಗದ ಸ್ಥಳವು ನಮಗೆ ತಿಳಿದಿಲ್ಲ. ಹೀಗಿರುವಲ್ಲಿ ನೀವೆಲ್ಲರೂ ಈ ವಿಷಯದಲ್ಲಿ ಸರಿಯಾಗಿ ಆಲೋಚಿಸಿ ಸಂಧಿ, ವಿಗ್ರಹ, ಯಾನ, ಆಸನ, ಸಂಶ್ರಯ ಮತ್ತು ದ್ವೈಧೀಭಾವ ಮುಂತಾದ ವಿಧಾನಗಳಲ್ಲಿ ಯಾವುದನ್ನು ಬಳಸಬೇಕೆಂದು ವಿಚಾರ ಮಾಡಿ ಬೇಗ ನನಗೆ ಸಲಹೆ ಮಾಡಿ ಎಂದು ವಿಷಯ ಮಂಡಿಸುತ್ತಾನೆ. ಆಗ ಆ ಸಚಿವರುಗಳು ಹೇಳಿದರು-" ನೀವು ಸರಿಯಾದುದನ್ನೇ ಕೇಳಿದ್ದೀರಿ. ಮತ್ತೆ ಸಲಹೆಯನ್ನು ಕೇಳಿದಾಗಲಂತೂ ಕಿರಾತಾರ್ಜುನೀಯಂ ಮಹಾಕಾವ್ಯದಲ್ಲಿ ಬ್ರಹ್ಮಚಾರಿ ವೇಷದಲ್ಲಿದ್ದ ಕಿರಾತನು ರಾಜನಾದ ಯುಧಿಷ್ಠಿರನಿಗೆ ದುರ್ಯೋಧನನ ವಿಷಯವನ್ನು. ಹೇಳುವಾಗ ಹೀಗೆ ಹೇಳುತ್ತಾನೆ :-

क्रियासु युक्तैनृप ! चारचक्षुषो न वञ्चनीयाः प्रभवोऽनुजीविभिः ।

अतोऽर्हसि क्षन्तुमसाधु साधु वा हितं मनोहारि च दुर्लभं वचः ॥[29]

ಅಂದರೆ " ಹೇ ರಾಜನೇ ಕರ್ತವ್ಯಗಳಲ್ಲಿ ನಿಯೋಗಿಸಲ್ಪಟ್ಟ ಸೇವಕರಿಂದ ಗೂಢಚಾರರೇ ಕಣ್ಣಾಗುಳ್ಳ ಶಿಕ್ಷಾಸಮರ್ಥರಾದ ರಾಜರು ಮೋಸಗೊಳಿಸಲ್ಪಡಬಾರದು. ವಂಚನೆ ಮಾಡಬಾರದೆಂಬ ಕಾರಣಕ್ಕಾಗಿ ಅಪ್ರಿಯವಾಗಲೀ, ಪ್ರಿಯವಾಗಲೀ ಕ್ಷಮಿಸಲು ಸಮರ್ಥನಾಗಿರುವೆ. ಏಕೆಂದರೆ, ಪಥ್ಯವಾದ, ಪ್ರಿಯವಾಗಿಯೂ ಇರುವ ಮಾತು ಹೊಂದಲಸಾಧ್ಯವಾಗಿದೆ." ಇದೇ ರೀತಿಯಲ್ಲಿ ಸಚಿವರುಗಳು ಹೇಳುತ್ತಾರೆ-" ಪ್ರಿಯವಾಗಿರಲಿ ಅಥವಾ ಅಪ್ರಿಯವಾಗಿರಲಿ ಸತ್ಯವಾದ ಮತ್ತು ಹಿತವಾದ ಮಾತನ್ನು ಹೇಳುತ್ತಾ ಏಕಾಂತವಾದ ಪ್ರದೇಶವನ್ನು ತಲುಪಿ ಮಂತ್ರಾಲೋಚನೆಯನ್ನು ಮಾಡಿ ಶತ್ರುತ್ವದ ಕಾರಣ ಹಾಗೂ ಅದರ ನಿಗ್ರಹವನ್ನು ಯೋಚಿಸಬಹುದು ಎಂದರು.[30]

---

29. **ಭಾರವಿ ವಿರಚಿತ ಕಿರಾತಾರ್ಜುನೀಯಂ,** ಒಂದನೇ ಸರ್ಗ ಶ್ಲೋಕ-4.

30. **ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತೃ.ತಂ. ಪು-157-158. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು-560004

ನಂತರ ಮೇಘವರ್ಣನು ಕಾಲಕ್ರಮಕ್ಕನುಗುಣವಾಗಿ ಉಜ್ಜೀವಿ, ಸಂಜೀವಿ, ಅನುಜೀವಿ, ಪ್ರಜೀವಿ ಮತ್ತು ಚಿರಂಜೀವಿ ಎಂಬ ಪಂಚ ಸಚಿವರುಗಳನ್ನು ಪ್ರತ್ಯೇಕವಾಗಿ ಪ್ರಶ್ನಿಸುತ್ತಾ, ಅದಕ್ಕೆ ಸಂಬಂಧಪಟ್ಟ ಕೆಲವು ಕಥೆಗಳು ರಾಜಕೀಯದ ನಡೆಗಳಾಗಿ ಒಳ್ಳೆಯ ತಿಳುವಳಿಕೆಯನ್ನೂ, ರಾಜನೀತಿ ಕುಶಲತೆಯನ್ನೂ ವ್ಯಕ್ತಪಡಿಸುತ್ತವೆ ಎಂಬುದನ್ನು ತಿಳಿಯುತ್ತಾನೆ. ಕೇಳಿದ ಮಾತು, ನೋಡಿದ ಘಟನೆಗಳ ಬಗ್ಗೆ ಕೂಲಂಕಶವಾದ ಚಿಂತನ–ಮಂಥನಗಳು ಮಾನವನಿಗೆ ಅಗತ್ಯವಾದ ಗುಣ ಎಂಬುದನ್ನು ತಿಳಿಸಿಕೊಡುತ್ತವೆ. ಉಜ್ಜೀವಿನಿಯಿಂದ ಸಂಧಿಯ ಸಲಹೆ, ಸಂಜೀವಿನಿಯಿಂದ ಯುದ್ಧದ ಸಲಹೆ, ಅನುಜೀವಿಯಿಂದ ಯಾನದ ಸಲಹೆ, ಪ್ರಜೀವಿಯಿಂದ ಆಸನದ ಸಲಹೆ, ಚಿರಂಜೀವಿಯಿಂದ ಸಂಶ್ರಯದ ಸಲಹೆ. ಹೀಗೆ ಎಲ್ಲರಿಂದ ಸಲಹೆಗಳನ್ನು ಪಡೆದ ಮೇಘವರ್ಣನು ಕಾಲಕ್ರಮದಲ್ಲಿ ಬಂದ ದೂರದರ್ಶಿಯಾದ, ಸಕಲ ನೀತಿಶಾಸ್ತ್ರದಲ್ಲಿ ಪಾರಂಗತನಾದ ಸ್ಥಿರಜೀವಿ ಎಂಬ ತನ್ನ ತಂದೆಯ ವೃದ್ಧ ಸಚಿವನಿಗೆ ನಮಿಸಿ, ಅವುಗಳಲ್ಲಿ ಯಾವುದು ಯೋಗ್ಯವೋ ಅದನ್ನು ಆದೇಶಿಸುವಂತೆ ಜಾಗ್ರತನಾಗಿ ಕೇಳಿದನು. ಆಗ ಸ್ಥಿರಜೀವಿಯಿಂದ ದ್ವೈಧೀಭಾವದ ಸಲಹೆ ನೀಡಿ ಕಾಗೆ ಗೂಬೆಗಳ ವೈರತ್ವದ ಕಥೆ ಹೇಳಿಸಲಾಗಿದೆ. ಇಲ್ಲಿ ಬಹಳ ಸೊಗಸಾಗಿ ರಾಜನಾದವನ ಲಕ್ಷಣಗಳನ್ನು ವಿವರಿಸಲಾಗಿದೆ.

ಈ ಕಥೆಗಳಿಂದ ವಿಷ್ಣುಶರ್ಮರು ರಾಜಕುಮಾರರಲ್ಲಿ ಮುಂದಿನ ದಿನಗಳಲ್ಲಿ ಉತ್ತರಾಧಿಕಾರಿಗಳಾಗುವ ಸಂದರ್ಭಕ್ಕೆ ಸರಿಯಾಗಿ ಸುಶಿಕ್ಷಿತರಾಗಿ ರಾಜನೀತಿ ಜ್ಞಾನವನ್ನು ಪಡೆದು, ಯಾವ ರೀತಿಯಲ್ಲಿ ಪ್ರಭುಶಕ್ತಿ, ವಿವಿಧ ಶಾಸ್ತ್ರದ ಜ್ಞಾನಶಕ್ತಿ ಮತ್ತು ಉತ್ಸಾಹಶಕ್ತಿ ಸಂಪನ್ನರಾಗಬೇಕು ಎಂಬುದರ ಬಗ್ಗೆ ಬಿಂಬ – ಬಿಂಬಕಲ್ಪನೆಗಳನ್ನು ಬೆಳೆಸುವ ಸದುದ್ದೇಶದಿಂದ ಬಹಳ ಸೂಕ್ತ ನೀತಿ ನಿಯಮಗಳನ್ನು ಸುಂದರ ಕಥೆಗಳ ಮೂಲಕ ವ್ಯವಸ್ಥಿತವಾಗಿ ಬೋಧಿಸಿದ್ದಾರೆ. ರಾಜಕುಮಾರರು ಒಂದು ಸಮಗ್ರ ಪರಿವರ್ತನೆ ಹೊಂದಿ ರಾಜನೀತಿ ನಿಪುಣತ್ವಕ್ಕೆ ನೆರವಾಗುವಂತೆ ಉತ್ತಮ ಕಥೆಗಳ ಮೂಲಕ ಎಲ್ಲಾ ಅನುಭವಗಳನ್ನು ಒದಗಿಸಿಕೊಟ್ಟಿದ್ದಾರೆ. ಇದು ಪಂಚತಂತ್ರ ಕಥೆಗಳ ವೈಶಿಷ್ಟ್ಯತೆಯಾಗಿರುತ್ತದೆ.

ಮುಂದೆ **ಮೊಲ ಮತ್ತು ಗಜೇಂದ್ರನ ಕಥೆ**ಯನ್ನು ಹೇಳುತ್ತಾ, ಅಂದರೆ ಕಾಗೆಯಿಂದ ಹೇಳಿಸುತ್ತಾ, ಎಂಥಹವರನ್ನು ರಾಜನನ್ನಾಗಿ ಮಾಡಬೇಕು ಎಂದು ತಿಳಿಸುತ್ತಾ, ರಾಜಕುಮಾರರ ಆಗಿನ ಪರಿಸ್ಥಿತಿಯಲ್ಲಿ ತಮ್ಮ ವರ್ತನೆಗಳನ್ನು ತಾವೇ ಅಂದರೆ ಸ್ವಯಂಮೌಲ್ಯಮಾಪನ ಮಾಡಿಕೊಳ್ಳುವಂತೆ ಪ್ರೇರೇಪಿಸಿದ್ದಾರೆ. ಕಥೆಯ ಮೂಲಕ ಉತ್ತಮ ಆಲೋಚನೆ, ವಿವೇಚನೆ ಮತ್ತು ವ್ಯಕ್ತಿತ್ವ ವಿಕಸನಕ್ಕೆ ಪುಷ್ಠಿಗೊಳಿಸುವಂತಹ ಮನೋಜ್ಞವಾದ ದೃಷ್ಟಾಂತಗಳನ್ನು ಒದಗಿಸಿ, ಉತ್ತಮ ಮೌಲ್ಯಗಳ ಪ್ರಾಮುಖ್ಯತೆಯನ್ನು ಸ್ಪಷ್ಟಪಡಿಸಿದ್ದಾರೆ. ಮೊಲ ಮತ್ತು ಗಜೇಂದ್ರನ ಕಥೆಯಲ್ಲಿ ಕಾಗೆಯು ಕೊನೆಯಲ್ಲಿ ಹೇಳುವ ವಿಚಾರದಲ್ಲಿ" ತನ್ನ ಜೀವನದ ಮೇಲೆ

ಆಸೆ ಇರುವವರು ನೀಚನನ್ನು, ಆಲಸಿಯನ್ನು, ಹೇಡಿಯನ್ನು, ವ್ಯಸನಕ್ಕೊಳಗಾದವನನ್ನು, ಕೃತಘ್ನನನ್ನು, ಬೆನ್ನಹಿಂದೆ ನುಡಿಯುವವನನ್ನು, ಎಂದಿಗೂ ರಾಜನನ್ನಾಗಿ ನಿಯೋಜಿಸಬಾರದು. ಹಿಂದೆ ಒಮ್ಮೆ ಮೊಲ ಮತ್ತು ಕಪಿಂಜಲನೆಂಬ ಗುಬ್ಬಿಯು ನ್ಯಾಯಕ್ಕಾಗಿ ನೀಚ ರಾಜನನ್ನಾಶ್ರಯಿಸಿ ಇಬ್ಬರೂ ನಾಶವಾಗಿಹೋದರು. ಈ ಕಥೆಯಲ್ಲಿ ಮೊಲಗಳು ಒಂದು ಸರಳ ಉದಾಹರಣೆಯೊಂದಿಗೆ ಹೀಗೆ ಜಾಗೃತಿ ಮೂಡಿಸಿವೆ–

निर्विषेणापि सर्पेण कर्तव्या महती फटा ।

विषं भवतु मा वाऽस्तु फटाऽऽटोपो भयङ्करः ।।[31]

ಏನೆಂದರೆ, ನಮ್ಮ ಪೂರ್ವಜರ ಸ್ಥಾನವನ್ನು ಅಷ್ಟು ಸುಲಭವಾಗಿ ಬಿಡಲು ಸಾಧ್ಯವಿಲ್ಲ. ಆದ್ದರಿಂದ ಆನೆಗಳಿಗೆ ಭಯವನ್ನುಂಟುಮಾಡಬೇಕು. ಆಗ ಅವುಗಳು ಹೆದರಿ ಬರದೇ ಇರಬಹುದು. ವಿಷವಲ್ಲದ ಹಾವಾದರೂ ಕೂಡ ಹೆಡೆಯನ್ನು ದೊಡ್ಡದಾಗಿ ಬಿಚ್ಚಿಬಿಡಬೇಕು. ವಿಷವಿರಲಿ, ಇಲ್ಲದಿರಲಿ, ಹೆಡೆಯು ಭಯವನ್ನುಂಟುಮಾಡುತ್ತದೆ. **ಮೊಲ–ಕಪಿಂಜಲ ಕಥೆ**ಯಲ್ಲಿ ಒಂದು ನೀತಪಾಠವಿದೆ–

न तादृक् जायते सौख्यमपि स्वर्गे शरीरिणाम् ।

दारिद्र्येऽपि हि यादृक् स्यात् स्वदेशे स्वपुरे गृहे ।।[32]

ಜೀವಿಗಳಿಗೆ ಬಡತನವಿದ್ದರೂ ತನ್ನ ದೇಶದಲ್ಲಿ, ತನ್ನ ಸ್ವಂತ ಊರಿನಲ್ಲಿ ಹಾಗೂ ತನ್ನದೇ ಮನೆಯಲ್ಲಿ ಎಂಥಹ ಸುಖ ಸಮಾಧಾನ ಸಿಗುವುದೋ ಅಂಥಹ ಸೌಖ್ಯ ಸ್ವರ್ಗದಲ್ಲೂ ಸಿಗುವುದಿಲ್ಲ. ನೀಚನ ಸಹವಾಸ ಮಾಡಿದವನಿಗೆ ಒಳ್ಳೆಯದು ಎಂದೂ ಆಗುವುದಿಲ್ಲ. ಅವನನ್ನು ಜನರು ನಂಬುವುದೂ ಇಲ್ಲ. ಮೊಲ ಮತ್ತು ಕಪಿಂಜಲನ ಸಂಭಾಷಣೆಯನ್ನು ಕೇಳಿಸಿಕೊಂಡ ಬೆಕ್ಕು ಇವರನ್ನು ನಂಬಿಸಲು ಒಂಟಿಕಾಲಲ್ಲಿ ನಿಂತಿತು. ಸೂರ್ಯನನ್ನೇ ಕಾಣುವಂತೆ ಮುಖಮಾಡಿ ಧ್ಯಾನಸ್ಥನಂತೆ ನಟಿಸಿತು. ಇದನ್ನು ಕಂಡು ಮೊಲವು ಮೋಸಹೋಯಿತು. ಆದರೆ ಗುಬ್ಬಚ್ಚಿ ಮಾತ್ರ ಬೆಕ್ಕಿಗೆ ಅಸಹಜವಾದ, ಅತಿಯಾದ ತಾಪಸಾಚಾರ ನಂಬಲರ್ಹವಲ್ಲ ಎಂದು ಗೆಳೆಯ ಮೊಲಕ್ಕೆ ಎಚ್ಚರಿಸಿತು. ತೀರ ಅತಿಯಾದ ಆಚಾರ, ಅನಾಚಾರ, ನಿಂದೆ, ಸ್ತುತಿ, ಶುಚಿ, ಅಶುಚಿ ಈ ಆರೂ ಗುಣಗಳು ದೂರ್ತ ಲಕ್ಷಣಗಳು ಎಂದಿತು. ಆದರೆ ಮೊಲ ಬೆಕ್ಕಿನ ನಟನೆಗೆ ಬೆರಗಾಗಿ ನಂಬಿಬಿಟ್ಟು ಮೋಸಹೋಯಿತು. ಆ ನೀಚನಲ್ಲಿ ವಿಶ್ವಾಸವಿಟ್ಟು ಅವರಿಬ್ಬರೂ ಬೆಕ್ಕಿನ ಬಳಿಗೆ ಹೋದರು. ಆಗ ಅದು ಒಮ್ಮೆಗೇ ಒಂದನ್ನು ಕಾಲಿನಿಂದ ಹಿಡಿದು ಮತ್ತೊಂದನ್ನು ಗರಗಸದಂತಿರುವ ಹಲ್ಲುಗಳಿಂದ ಕಚ್ಚಿ ಹಿಡಿಯಿತು.

---

31. **ಸುಧಾಕರ ಮಾಲವೀಯ,** ವಿಷ್ಣುಶರ್ಮವಿರಚಿತ ಪಂಚತಂತ್ರ, ತೃ.ತಂ–ಶ್ಲೋ–86, ಪು.ಸಂ–479.(1993) ಚೌಕಾಂಬ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ.
32. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ –92, ಪು–486,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಅವೆರಡೂ ಪ್ರಾಣ ಕಳೆದುಕೊಂಡು ಬೆಕ್ಕಿನಿಂದ ಭಕ್ಷಿಸಲ್ಪಟ್ಟವು.[33]

ಗೆಳೆಯರನ್ನು ಆಯ್ಕೆ ಮಾಡಿಕೊಳ್ಳುವಾಗಲೂ, ಪ್ರಭುಗಳನ್ನು ಆರಿಸುವಾಗಲೂ ಎಷ್ಟು ಬಗೆಯಿಂದ ಯೋಚಿಸಿದರೂ ಸಾಲದು. ಯಾರು ಯಾರೋ ಹೇಳಿದ್ದನ್ನು ಕೇಳುವುದೂ ತರವಲ್ಲ. ಸ್ವಾರ್ಥಕ್ಕಾಗಿ ಸುಳ್ಳನ್ನೇ ಹೇಳುವವರು ಹಲವರು. ಅಂಥವರಿಂದಾಗಿ ಬ್ರಾಹ್ಮಣನೊಬ್ಬನು ಮೋಸಹೋಗಿದ್ದ. ಹಾಗೆಯೇ ರಾಜರನ್ನು ಆರಿಸುವ ವಿಷಯದಲ್ಲಿ ಮೋಸಹೋಗಬಾರದು. ನಿಮ್ಮ ನಂಬಿಕೆಗಾಗಿ ಆ ಕಥೆಯನ್ನು ಕೇಳಿ ಎಂದಿತು ಕಾಗೆ ಬೇರೆ ಪಕ್ಷಿಗಳ ಮುಂದೆ. ನಂತರ **ಮೂವರು ಧೂರ್ತರು, ಬ್ರಾಹ್ಮಣ ಮತ್ತು ಆಡಿನ ಕಥೆ**.

ಯಾಗವೊಂದರ ಬಲಿಗಾಗಿ, ಆಡೊಂದನ್ನು ಕ್ರಯಕ್ಕೆ ಕೊಂಡು ಹೆಗಲಮೇಲಿರಿಸಿಕೊಂಡು ಶ್ರೋತ್ರೀಯನಾದ ವಿಪ್ರನೊಬ್ಬ ಹೋಗುತ್ತಿದ್ದುದನ್ನು ನಾಲ್ಕು ಜನ ಧೂರ್ತರು ನೋಡಿದರು. ಇವನನ್ನು ಮೋಸಗೊಳಿಸಿ ಆಡನ್ನು ಅಪಹರಿಸುವ ಎಂದು ಆಲೋಚಿಸಿ ಅವರು ಚದುರಿದರು. ಆಡಿಗಾಗಿ ಮಾತಿನ ಚಮತ್ಕಾರದಿಂದ ಆಡನ್ನು ನಾಯಿಯೆಂದು ನಂಬಿಸಿ, ಬ್ರಾಹ್ಮಣನನ್ನು ವಂಚಿಸಿದ ನಾಲ್ವರು ಬುದ್ಧಿಯ ಚಮತ್ಕಾರದಿಂದ ಆಡನ್ನು ಪಡೆದೇ ಬಿಟ್ಟರು. ಕಥೆಯನ್ನು ಮುಗಿಸಿದ ಸ್ಥಿರಜೀವಿಯು ಬಹಳ ಒಳ್ಳೆಯ ತಿಳುವಳಿಕೆ ಮಾತನ್ನು ಹೀಗೆ ಹೇಳುತ್ತಾನೆ–

बहवो न विरोद्धव्या दुर्जया हि महाजनाः ।

स्फुरन्तमपि नागेन्द्रं भक्षयन्ति पिपीलिकाः ॥[34]

"ಹೊಸದಾಗಿ ನಿಯುಕ್ತಿಯಾದ ಸೇವಕನ ವಿನಯವಾದ ಮಾತುಗಳಿಂದ, ಅತಿಥಿಗಳ ಆಕರ್ಷಕ ಮಾತುಕಥೆಯಿಂದ, ಕಾಮಿನಿಯರ ಅಳುವಿನಿಂದ ಮತ್ತು ಧೂರ್ತರ ಮಾತುಗಳಿಂದ ವಂಚನೆಗೆ ಒಳಗಾಗದವರು ಯಾರೂ ಇಲ್ಲ. ಅಲ್ಲದೆ ಅನೇಕ ದುರ್ಬಲರೊಂದಿಗೆ ವಿರೋಧವನ್ನು ಕಟ್ಟಿಕೊಳ್ಳಬಾರದು. ಅವರನ್ನು ಸೋಲಿಸುವುದು ಕಷ್ಟ. ಇರುವೆಗಳು ಬುಸುಗುಟ್ಟುತ್ತಿರುವ ಮಹಾಸರ್ಪವನ್ನು ತಿನ್ನಬಲ್ಲವು " ಎಂದು ಹೇಳುತ್ತಾ **ಇರುವೆ ಹಾಗೂ ಸರ್ಪದ ಕಥೆ**ಯನ್ನು ಹೇಳಿದನು.[35]

ನಂತರದಲ್ಲಿ ಅನೇಕ ವಿಚಾರಗಳನ್ನು ತಿಳಿಸುತ್ತಾ, ಬದುಕಿನ ನೀತಿಪಾಠವನ್ನು ಬೋಧಿಸುವುದರ ಜೊತೆಗೆ ರಾಜನೀತಿ ಶಿಕ್ಷಣವನ್ನೂ ರಾಜಕುಮಾರರಿಗೆ ವಿಷ್ಣುಶರ್ಮರು ಬಹಳ ಕ್ರಮಬದ್ಧವಾಗಿ ನೀಡುತ್ತಾ

---

೩೩. **ಭರತ ಬಿ. ರಾವ್,** ಪಂಚತಂತ್ರ, ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, (೨೦೧೮) ತೃ.ತಂ. ಪು.–೧೭೨–೧೭೫. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.,೪೪/೧, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–೫೬೦೦೦೪

೩೪. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ –೧೨೧, ಪು–೫೦೫,(೧೯೯೩) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–೨೨೧೦೦೧

೩೫. **ಭರತ ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ,(೨೦೧೮) ತೃ.ತಂ. ಪು.–೧೭೭–೧೭೯. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., ೪೪/೧, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–೫೬೦೦೦೪

ಬಂದಿದ್ದಾರೆ. ಯಾವ ಕೆಲಸಕ್ಕೆ ಯಾರು ತಕ್ಕವರೋ ಅವರೇ ಹೋಗಬೇಕು. ಅವರೇ ಮಾಡಬೇಕು. ಆಳು ಮಾಡುವ ಕೆಲಸ ಹಾಳು ಎಂದಂತೆ. ಯಾವುದೇ ಕಾರ್ಯವನ್ನು ದುಡುಕಿನಿಂದ ಕೈಗೊಳ್ಳದಿರುವುದೇ ಬುದ್ಧಿವಂತನ ಮೊದಲ ಲಕ್ಷಣ. ಆ ಕಾರ್ಯವನ್ನು ಕೈಗೆತ್ತಿಕೊಂಡ ಬಳಿಕ ಅದನ್ನು ಕೊನೆ ಮುಟ್ಟಿಸುವುದು ಅವನ ಚಾತುರ್ಯದ ವಿಶೇಷ ಲಕ್ಷಣ ಎಂಬ ನೀತಿಯ ಅರಿವಿರಬೇಕು. ಬಲ್ಲಿದನೊಡನೆ ಬಡವನ ಸ್ಪರ್ಧೆ ಕೂಡದು. ಬಂಡೆಗೆ ನಮ್ಮ ತಲೆ ಬಡಿದರೂ, ಬಂಡೆಯೇ ಬಂದು ತಲೆಗೆ ಬಡಿದರೂ ಹಾನಿ ನಮ್ಮ ತಲೆಗೇ. ಆದ್ದರಿಂದ ಅವರೊಂದಿಗೆ ಕೂಡಿ ಬಾಳುವುದೇ ನೀತಿ. ಅವಿಧೇಯನೂ, ವಿನೀತನಲ್ಲದವನೂ, ತನಗೆ ಹಿತ ಯಾವುದೆಂದು ತಿಳಿಯಲಾಗದವನೂ, ಶೀಘ್ರಕೋಪಿಯೂ, ಅಸ್ಥಿರನೂ, ಕೆಟ್ಟಪರಿವಾರದವನೂ ಆಗಿರುವಂತಹ ರಾಜನಿಗೆ ಉಪದೇಶ ಮಾಡಿದರೆ ಕೇಡಾಗುತ್ತದೆ. ಕಥೆಯಲ್ಲಿ ಅರಿಮರ್ಧನನು ಕ್ರೂರಾಕ್ಷನಿಗೆ ಹೇಳುತ್ತಾ ಅವನ ಅಭಿಪ್ರಾಯವನ್ನು ಕೇಳಿದನು. ಇದಕ್ಕೆ ಕ್ರೂರಾಕ್ಷನು ಸಲಹೆ ನೀಡುವುದೇನೆಂದರೆ, ರಕ್ತಾಕ್ಷನು ನಿರ್ದಯವಾದುದನ್ನು ಹೇಳಿರುವನು. ಹೀಗೆ ಕಥೆಯೊಂದರಲ್ಲಿ ಕೇಳಿಬರುತ್ತದೆ–

चितिकां दीपितां पश्य फटां भग्नां ममैव च ।

भिन्नश्लिष्टा तु या प्रीतिर्न सा स्नेहेन वर्द्धते ॥[36]

ಅಂದರೆ ಬೆಳಗುತ್ತಿರುವ ಚಿತೆಯನ್ನು ನೋಡು ಮತ್ತು ಗಾಯಗೊಂಡ ನನ್ನ ಹೆಡೆಯನ್ನು ನೋಡು ಒಮ್ಮೆ ಮುರಿದು ಮತ್ತೆ ತೇಪೆಹಾಕಿದ ಪ್ರೀತಿಯು ಸ್ನೇಹದಿಂದ ವರ್ಧಿಸುವುದಿಲ್ಲ. ಇದನ್ನು ಕೇಳಿದ ಅರಿಮರ್ದನನು ಅದನ್ನು ಸರಿಯಾಗಿ ತಿಳಿಸೆಂದು ಕೇಳಲು ರಕ್ತಾಕ್ಷನು **ಬ್ರಾಹ್ಮಣ ಹಾಗೂ ಸರ್ಪದ ಕಥೆ**ಯನ್ನು ಹೇಳಿದನು.

ಹರಿದತ್ತನೆಂಬ ಬ್ರಾಹ್ಮಣನು ಕೃಷಿಯನ್ನವಲಂಬಿಸಿ ಜೀವನ ನಡೆಸುತ್ತಿದ್ದನು. ಆದರೆ ಅದರಿಂದ ಅವನಿಗೆ ಏನೂ ಲಾಭವಾಗುತ್ತಿರಲಿಲ್ಲ. ಒಮ್ಮೆ ಅವನ ಜಮೀನಿನಲ್ಲಿ ಒಂದು ಮರದ ನೆರಳಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾಗ ಒಂದು ಹೆಡೆಯೆತ್ತಿದ ಸರ್ಪವನ್ನು ಕಂಡನು. ಭಕ್ತಿಯಿಂದ ಅದನ್ನು ಕ್ಷೇತ್ರಪಾಲನೆಂದು ತಿಳಿದು ಹಾಲನ್ನೆರೆದು ಪೂಜಿಸಿದನು. ನನಗೆ ನನ್ನ ಕೃಷಿಯಲ್ಲಿ ಲಾಭಬರುವಂತೆ ಅನುಗ್ರಹಿಸೆಂದು ನಾಗರಾಜನಲ್ಲಿ ಬೇಡಿಕೊಂಡು ಹಾಲಿನ ಪಾತ್ರೆಯನ್ನು ಅದರ ಮುಂದಿಟ್ಟು ಮನೆಗೆ ಹೋದನು. ಮಾರನೆಯ ದಿನ ಬಂದು ನೋಡಲು ಆ ಪಾತ್ರೆಯಲ್ಲಿ ಒಂದು ನಾಣ್ಯವಿತ್ತು. ಪ್ರತಿದಿನವೂ ಹೀಗೇ ನಡೆಯುತ್ತಿತ್ತು. ಒಂದು ದಿನ ಈ ಜವಾಬ್ದಾರಿಯನ್ನು ತನ್ನ ಮಗನಿಗೆ ಒಪ್ಪಿಸಿ ತುರ್ತು ಕಾರ್ಯ ನಿಮಿತ್ತ ಬೇರೆ ಗ್ರಾಮಕ್ಕೆ ತೆರಳಿದ್ದನು. ಮಗನು ಅದೇ ರೀತಿ ಹಾಲನ್ನಿಟ್ಟು ಬಂದನು. ಮಾರನೇ ದಿನ ನಾಣ್ಯ ಸಿಕ್ಕಿತು. ಅದನ್ನು ತೆಗೆದುಕೊಂಡು ಚಿಂತಿಸಿದನು." ಖಂಡಿತವಾಗಿಯೂ

36. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ –132, ಪು–515,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಈ ಹುತ್ತದಲ್ಲಿ ಬಹಳ ಸುವರ್ಣ ನಾಣ್ಯಗಳಿವೆ. ಈ ಸರ್ಪವನ್ನು ಕೊಂದು ಎಲ್ಲಾ ನಾಣ್ಯವನ್ನೂ ಒಮ್ಮೆಲೇ ಪಡೆಯುವೆನು" ಎಂದು ದುರಾಸೆಪಟ್ಟು, ಮತ್ತೊಂದು ದಿನ ಹಾಲನ್ನು ಕೊಡುವಾಗ ಆ ಸರ್ಪದ ತಲೆಗೆ ಕೋಲಿನಿಂದ ಹೊಡೆದುಬಿಟ್ಟನು. ಅದೃಷ್ಟವಶಾತ್ ಪ್ರಾಣವನ್ನು ಕಳೆದುಕೊಳ್ಳದ ಸರ್ಪವು ರೋಷಾವೇಶದಿಂದ ತೀವ್ರ ವಿಷವುಳ್ಳ ಹಲ್ಲುಗಳಿಂದ ಕಚ್ಚಿ ಅವನನ್ನು ಸಾಯಿಸಿತು. ಅವನ ಬಂಧುಗಳು ಬಂದು ನೋಡಿ ಅದೇ ಹೊಲದಲ್ಲಿ ಒಂದು ಚಿತೆಯನ್ನು ಸಿದ್ಧಪಡಿಸಿ ಆತನ ಸಂಸ್ಕಾರವನ್ನೂ ಮಾಡಿಬಿಟ್ಟರು. ಮರಳಿ ಊರಿಗೆ ಹಿಂದಿರುಗಿದಾಗ ಬ್ರಾಹ್ಮಣನು ಎಲ್ಲರಿಂದ ಮಗನು ಸತ್ತ ವಿಚಾರವನ್ನು ವಿವರವಾಗಿ ತಿಳಿದು ಹಾವು ಮಾಡಿದ್ದ ಕಾರ್ಯವನ್ನು ಸಮರ್ಥಿಸಿಕೊಂಡು ಹೀಗೆ ಹೇಳಿದನು.

भूतान् यो नानुगृह्णाति ह्यात्मनः शरणागतान् ।

भूतार्थास्तस्य नश्यन्ति हंसाः पद्मवने यथा ॥[37]

"ತನಗೆ ಶರಣಾಗಿ ಬಂದ ಪ್ರಾಣಿಗಳನ್ನು ಯಾರು ಅನುಗ್ರಹಿಸುವುದಿಲ್ಲವೋ, ಪದ್ಮವನದಲ್ಲಿರುವ ಹಂಸಗಳಂತೆ ಅವನ ಎಲ್ಲಾ ಸೌಕರ್ಯಗಳೂ ನಾಶವಾಗುತ್ತವೆ." ಜನರು ಅದು ಹೇಗೆಂದು ಕೇಳಲು ಬ್ರಾಹ್ಮಣನು **ಸ್ವರ್ಣಹಂಸ, ಸ್ವರ್ಣಪಕ್ಷಿ ಹಾಗೂ ರಾಜನ ಕಥೆ**ಯನ್ನು ಹೇಳಿದನು.

ಚಿತ್ರರಥನೆಂಬ ರಾಜನ ಬಳಿ ಯೋಧರಿಂದ ಸಂರಕ್ಷಿಸಲ್ಪಟ್ಟ ಒಂದು ಪದ್ಮಸರೋವರವಿತ್ತು. ಅದರಲ್ಲಿ ಸುವರ್ಣಮಯ ಹಂಸಗಳಿದ್ದವು. ಅವು ಆರು ತಿಂಗಳಿಗೊಮ್ಮೆ ಒಂದೊಂದು ಗರಿಯನ್ನು ಉದುರಿಸುತ್ತಿದ್ದವು. ಆ ಗರಿಗಳನ್ನು ರಾಜನಿಗೆ ಕೊಟ್ಟು ಸರೋವರವನ್ನು ಹಂಸಗಳು ತಮ್ಮದಾಗಿಸಿಕೊಂಡಿದ್ದವು. ಒಮ್ಮೆ ಆ ಸರೋವರಕ್ಕೆ ಒಂದು ಸ್ವರ್ಣಮಯವಾದ ದೊಡ್ಡ ಪಕ್ಷಿಯೊಂದು ಬಂದಿತು. ಅದು ತಾನೂ ಅದೇ ಸರೋವರದಲ್ಲಿರುವುದಾಗಿ ಸಾಕಷ್ಟು ವಾದಮಾಡಿ ಹಠಹಿಡಿದು ಉದ್ಧಟತನದ ಮಾತುಗಳನ್ನಾಡಿತು. ಕೊನೆಗೆ ಸ್ವರ್ಣಪಕ್ಷಿಯು ರಾಜನ ಬಳಿಗೆ ಹೋಗಿ ಹಂಸಗಳ ವಿರುದ್ಧ ದೂರನ್ನು ಹೇಳಿತು. ರಾಜನು ಆ ಪಕ್ಷಿಯ ಮಾತಿನ ಮೋಡಿಗೆ ಬಲಿಯಾಗಿ ಹಿಂದೆ ಮುಂದೆ ವಿಚಾರಮಾಡದೆ ಸೇವಕರನ್ನು ಕರೆದು ಎಲ್ಲಾ ಪಕ್ಷಿಗಳನ್ನೂ ಕೊಂದು ತನ್ನಿ ಎಂದು ಆಜ್ಞೆ ಮಾಡಿಬಿಟ್ಟನು. ರಾಜನ ಆಜ್ಞೆಯಂತೆ ರಾಜಪುರುಷರು ಬಂದೇ ಬಿಟ್ಟರು. ಆಗ ಹಿರಿಯ ಅನುಭವಿ ಹಂಸವೊಂದು ತನ್ನ ಬಾಂಧವರಿಗೆ ಎಚ್ಚರಿಸಿ ಕೂಡಲೇ ಒಂದಾಗಿ ಹಾರಿಹೋಗೋಣವೆಂದು ತೀರ್ಮಾನಿಸಿ ಎಲ್ಲವೂ ಹಾರಿ ಹೋಗಿ ಅಪಾಯವನ್ನು ಉಪಾಯದಿಂದ ತಪ್ಪಿಸಿಕೊಂಡವು. ಹೀಗೆ ಕಥೆಯನ್ನು ಮುಗಿಸಿದ ಬ್ರಾಹ್ಮಣನು ಮತ್ತೆ ಹಾಲನ್ನು ತೆಗೆದುಕೊಂಡು ಹೋಗಿ ಹುತ್ತದ ಬಳಿ ಸರ್ಪದ ಸ್ತುತಿಯನ್ನು

---

37. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ-ಶ್ಲೋ -133 ಪು.-517,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಮಾಡಿ ತಪ್ಪನ್ನು ಮನ್ನಿಸಲು ಬೇಡಿಕೊಂಡನು. ಆದರೆ ಸರ್ಪವು ಹುತ್ತದ ಬಿಲದ ದ್ವಾರದಲ್ಲೇ ಇದ್ದುಕೊಂಡು ಬ್ರಾಹ್ಮಣನಿಗೆ ಬುದ್ಧಿವಾದ ಹೇಳಿ ಬೆಲೆಬಾಳುವ ವಜ್ರದ ಮಣಿಯೊಂದನ್ನು ಕೊಟ್ಟು ಇನ್ನು ಮುಂದೆ ಬರಕೂಡ ದೆಂದು ಹೇಳಿ ಹುತ್ತದೊಳಕ್ಕೆ ಹೋಗಿಬಿಟ್ಟಿತು.

श्रूयते हि कपोतेन शत्रुः शरणमागतः ।

पूजितश्च यथान्यायं स्वैश्च मांसैर्निमन्त्रितः ॥[38]

ನಂತರ ಕ್ರೂರಾಕ್ಷನ ಸಲಹೆಯೇನೆಂದರೆ, ರಕ್ತಾಕ್ಷನು ನಿರ್ದಯವಾದುದನ್ನು ಹೇಳಿರುವನು ಏಕೆಂದರೆ ಶರಣಾಗತರನ್ನು ಕೊಲ್ಲುವುದಿಲ್ಲ. ಕಥೆಯಲ್ಲಿ ಕೇಳಿಬರುವ ಇದೊಂದು ಮಾತು ಸರಿಯಾಗಿಯೇ ಇದೆ. "ರಕ್ಷಣೆಯನ್ನು ಬೇಡಿಬಂದ ಶತ್ರುವನ್ನು ಪಾರಿವಾಳವು ಯಥೋಚಿತವಾಗಿ ಸನ್ಮಾನಿಸಿ ತನ್ನ ಮಾಂಸದಿಂದಲೇ ತೃಪ್ತಿಪಡಿಸಿತು" ಎಂದು.

ಅರಿಮರ್ಧನನು ಅದೇನೆಂದು ಕೇಳಲು, ಕ್ರೂರಾಕ್ಷನು **ಪಾರಿವಾಳ ಮತ್ತು ಬೇಟೆಗಾರನ ಕಥೆ**ಯನ್ನು ಹೇಳಿದನು. ಹೀಗೆ ಕಥೆಯಿಂದ ಕಥೆಗೆ ವಿಚಾರದಿಂದ ಮತ್ತೊಂದು ವಿಚಾರಕ್ಕೆ, ಒಂದು ನೀತಿಯಿಂದ ಮತ್ತೊಂದರೆಡೆಗೆ ಬಹಳ ವ್ಯವಸ್ಥಿತವಾಗಿ ವ್ಯಕ್ತಿ ವಿಕಸನ ಮಾರ್ಗದರ್ಶನ ಪಂಚತಂತ್ರದಲ್ಲಿ ಅಡಕವಾಗಿರುತ್ತದೆ. ಮಧ್ಯೆ ಮಧ್ಯೆ ನಾಯಕತ್ವದ ಲಕ್ಷಣಗಳು, ಬುದ್ಧಿಶಕ್ತಿಯ ಸಮಯೋಚಿತ ಬಳಕೆ, ಬದುಕಿಗೆ ಅವಶ್ಯಕವಾದ ನೀತಿಬೋಧೆಗಳು, ಮಾನವೀಯ ಮೌಲ್ಯಗಳು, ದುಡುಕು ತಂದೊಡ್ಡುವ ಸಮಸ್ಯೆಗಳು, ಮುಂಜಾಗ್ರತೆಯಿಂದ ಕಾರ್ಯ ನಿರ್ವಹಿಸುವುದು, ಸ್ವಯಂ ಶಿಸ್ತು, ಭವಿಷ್ಯದ ಆಗುಹೋಗುಗಳ ಬಗ್ಗೆ ಚಿಂತನೆ, ವ್ಯಕ್ತಿತ್ವನಿರ್ಮಾಣಕ್ಕೆ ಬೇಕಾದ ಅತ್ಯಮೂಲ್ಯ ಸಲಹೆ ಹಾಗೂ ಮಾರ್ಗೋಪಾಯಗಳನ್ನು ಕಾಣಬಹುದು. ಕೇವಲ ಪಠ್ಯದ ವಿಚಾರಗಳನ್ನು ಮಾತ್ರ ಬೋಧಿಸುವುದಷ್ಟೆ ಶಿಕ್ಷಕನ ಕರ್ತವ್ಯವಲ್ಲ. ವಿದ್ಯಾರ್ಥಿಗಳ ಸರ್ವತೋಮುಖ ಬೆಳವಣಿಗೆಗೆ ಸೂಕ್ತ ಸನ್ನಿವೇಶಗಳನ್ನೊದಗಿಸಿ ಸುಂದರ ವ್ಯಕ್ತಿತ್ವ ನಿರ್ಮಾಣ ಮಾಡುವಲ್ಲಿ ಶಿಕ್ಷಕರ ಜವಾಬ್ದಾರಿ ಮಹತ್ವದ್ದಾಗಿದೆ. ಈ ಒಂದು ಅಂಶವನ್ನು ಪಂಚತಂತ್ರ ಕಥೆಗಳು ಪ್ರತಿಯೊಬ್ಬ ಶಿಕ್ಷಕನಿಗೂ ಮಾದರಿಯಾಗಿವೆ. ಇದು ಒಂದು ಮನರಂಜನಾ ಕಥೆಗಳ ಗೊಂಚಲು ಎಂಬ ಅಭಿಪ್ರಾಯ ಸಾಮಾನ್ಯವಾಗಿ ಬಂದುಬಿಟ್ಟಿದೆ. ಆದರೆ ಇದನ್ನು ಸೂಕ್ಷ್ಮವಾಗಿ ಗಮನಿಸಿ ಅಧ್ಯಯನ ನಡೆಸಿದಾಗ ಮಾತ್ರ ಇದರಲ್ಲಿ ಅಡಕವಾಗಿರುವ ವ್ಯಕ್ತಿತ್ವ ನಿರ್ಮಾಣ ಕಲೆ ಮತ್ತು ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆ ಅರ್ಥವಾಗುತ್ತದೆ. ಬಹುಶಃ ಬೇಕಾದಷ್ಟು ಪಠ್ಯಕ್ರಮ ಇರಬಹುದು. ಆದರೆ ಬದುಕಿನ ನೀತಿಪಾಠ, ಸುಂದರ ವ್ಯಕ್ತಿತ್ವ ನಿರ್ಮಾಣಕ್ಕೆಬೇಕಾದ ತಿಳುವಳಿಕೆ ಮತ್ತು ಮಾರ್ಗದರ್ಶನ ನೀಡುವ ಇಂಥಹ ಸರಳ ಸುಂದರ ನೀತಿಕಾವ್ಯ ಏಕಮೇವಾದ್ವಿತೀಯ ಅನ್ನಿಸುತ್ತದೆ.

೩೮. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ-ಶ್ಲೋ -134 ಪು.-520,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಪಾರಿವಾಳ ಮತ್ತು ಬೇಟೆಗಾರನ ಕಥೆಯನ್ನು ಹೇಳಿಮುಗಿಸಿದ್ದ ಕ್ರೂರಾಕ್ಷನು ಶರಣಾರ್ಥಿಗೆ ತನ್ನನ್ನೇ ಬಲಿಯಾಗಿತ್ತ ಪಾರಿವಾಳ ದಂಪತಿಯ ಮಹಾತ್ಯಾಗವನ್ನು ತಿಳಿಸಿದನು. ಇದನ್ನು ಕೇಳಿದ ಅರಿಮರ್ಧನನು ದೀಪ್ತಾಕ್ಷನನ್ನು ಕೇಳಿದನು ಹಾಗೂ ಆ ಪರಿಸ್ಥಿತಿಯನ್ನು ಕುರಿತು ಅವನ ಅಭಿಪ್ರಾಯವನ್ನು ಮತ್ತು ಸಲಹೆಯನ್ನು ಅಪೇಕ್ಷಿಸಿದನು. ದೀಪ್ತಾಕ್ಷ ಹೇಳುತ್ತಾನೆ. "ದೇವ, ಇವನನ್ನು (ಅಂದರೆ ಸ್ಥಿರಜೀವಿ ಕಾಗೆಯನ್ನು) ಕೊಲ್ಲಬಾರದು ಏಕೆಂದರೆ ಕಥೆಯೊಂದರಲ್ಲಿ ಈ ಮಾತು ಬರುತ್ತದೆ. ಯಾರು ನನ್ನನ್ನು ಯಾವಾಗಲೂ ಉದ್ವಿಗ್ನಗೊಳಿಸುತ್ತಾಳೋ ಅವಳು ಇಂದು ನನ್ನನ್ನು ಆಲಂಗಿಸಿಕೊಳ್ಳುತ್ತಿದ್ದಾಳೆ. ಎಲೈ ಮಂಗಳಕರನೇ ನನ್ನಲ್ಲಿರುವುದನ್ನೆಲ್ಲಾ ಅಪಹರಿಸು."

हर्त्तव्यं ते न पश्यामि हर्त्तव्यं चेद्भविष्यति ।

पुनरप्यागमिष्यामि यदीयं नावगूहते ॥[39]

ಅದನ್ನು ಕೇಳಿದ ಕಳ್ಳನು ನಿನ್ನ ಮನೆಯಲ್ಲಿ ಕದಿಯುವುದಕ್ಕೆ ಏನೂ ಇಲ್ಲ, ಇದ್ದಾಗ ಬರುವೆನು ಮತ್ತು ಅವಳು ನಿನ್ನನ್ನು ಆಲಂಗಿಸಿಕೊಳ್ಳದಿದ್ದರೆ ಬರುವೆನು. ಅರಿಮರ್ಧನನು 'ಅವಳು ಯಾರನ್ನು ಆಲಂಗಿಸಿಕೊಳ್ಳುವುದಿಲ್ಲ? ಯಾರವನು ಕಳ್ಳ? ಇದನ್ನು ವಿಸ್ತಾರವಾಗಿ ಕೇಳಬಯಸುವೆನು ಹೇಳು ಎಂದು ಕೇಳಲು ದೀಪ್ತಾಕ್ಷನು **ಕಳ್ಳ ಹಾಗೂ ವೃದ್ಧ ವ್ಯಾಪಾರಿಯ ವಧುವಿನ ಕಥೆ**ಯನ್ನು ಹೇಳುತ್ತಾನೆ.[40]

ಈ ಕಥೆಯಲ್ಲಿನ ಸಾರಾಂಶವು ವಯಸ್ಸಿಗೆ ಮೀರಿದ ಚಪಲ ಇರಬಾರದು. ತಲೆಯಲ್ಲಿ ಬಿಳಿಕೂದಲಿನ ಸ್ಥಾನವು ಮನುಷ್ಯನಿಗೆ ಅಪಮಾನದ ಸ್ಥಾನವಿದ್ದಂತೆ. ಎಲುಬಿನ ತುಂಡನ್ನು ಏರಿಸಿಟ್ಟಿರುವುದರಿಂದ ಅದು ಚಂಡಾಲನ ಬಾವಿಯೆಂದು ಹೇಗೆ ಜನರು ಅದನ್ನು ತ್ಯಜಿಸುವರೋ ಹಾಗೆ ಬಿಳಿಕೂದಲಿರುವವರನ್ನು ತರುಣಿಯರು ದೂರದಿಂದಲೇ ತ್ಯಜಿಸಿಬಿಡುವರು. ದೀಪ್ತಾಕ್ಷನು ಕಥೆಯನ್ನು ಮುಂದುವರಿಸುತ್ತಾ "ಉಪಕಾರವನ್ನು ಮಾಡುವವರು ಕಳ್ಳರಿಗೂ ಕೂಡ ಒಳಿತನ್ನು ನಿರೀಕ್ಷಿಸುತ್ತಾರೆ. ಇನ್ನು ಶರಣಾಗದವರ ಬಗ್ಗೆ ಹೇಳುವುದೇನು? ಅಲ್ಲದೆ ಕಾಗೆಗಳಿಂದ ಅವಮಾನಿತನಾದ ಇವನು(ಸ್ಥಿರಜೀವಿ) ನಮ್ಮ ಲಾಭಕ್ಕಾಗಿ ಒದಗುವವನು. ಕಾಗೆಗಳ ಬಲಹೀನತೆಯ ಬಗ್ಗೆ ಆತನಿಂದ ತಿಳಿಯುವುದಕ್ಕೆ ಹಾಗೂ ಇನ್ನಿತರ ಕಾರಣಗಳಿಂದ ಆತನನ್ನು ಕೊಲ್ಲಬಾರದು. ಇದನ್ನು ಕೇಳಿದ ಅರಿಮರ್ಧನನು ಸಚಿವನಾದ ವಕ್ರನಾಸನ ಸಲಹೆಯನ್ನು ಕೇಳಿದನು. ಇದಕ್ಕೆ ಅವನು ದೇವ, ಇವನನ್ನು ಕೊಲ್ಲಬಾರದು, ಏಕೆಂದರೆ, ಪರಸ್ಪರ ಕಚ್ಚಾಡುತ್ತಿರುವ

---

39. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ-ಶ್ಲೋ-187 ಪು-537,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001
40. **ಭರತ ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತೃ.ತಂ. ಪು.-188,189. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು-560004(2018)

ಶತ್ರುಗಳಿಂದ ನಮಗೆ ಲಾಭವೇ. ಕಳ್ಳನು ಪ್ರಾಣ ಕೊಟ್ಟನು ಮತ್ತು ರಾಕ್ಷಸನು ಜೋಡಿ ಹಸುವನ್ನು ಕೊಟ್ಟನು.

शात्रवोऽपि हितायैव विवदन्तः परस्परम् ।

चौरेण जीवितं दत्तं राक्षसेन तु गोयुगम् ॥[41]

ಇದನ್ನು ಕೇಳಿದ ಅರಿಮರ್ಧನನು ಅದು ಹೇಗೆಂದು ಕೇಳಲು ವಕ್ರನಾಸನು **ಬ್ರಾಹ್ಮಣ, ಕಳ್ಳ ಹಾಗೂ ಬ್ರಹ್ಮರಾಕ್ಷಸನ ಕಥೆ**ಯನ್ನು ಹೇಳಿದನು. ಈ ಕಥೆಯಲ್ಲಿ ಇಬ್ಬರಲ್ಲಿ ನಾ ಮೊದಲು ತಾ ಮೊದಲು ಎಂಬ ಕಲಹವುಂಟಾಗುತ್ತದೆ. ಆ ಶಬ್ದದಿಂದ ಬ್ರಾಹ್ಮಣನು ಎದ್ದನು. ಆಗ ಅವನಿಗೆ ಕಳ್ಳನು ಹೇಳಿದನು "ಬ್ರಾಹ್ಮಣನೇ ಈ ರಾಕ್ಷಸನು ನಿನ್ನನ್ನು ತಿನ್ನಲು ಬಯಸುತ್ತಿರುವನು" ರಾಕ್ಷಸನು "ಬ್ರಾಹ್ಮಣನೇ ಈ ಕಳ್ಳನು ಹಸುಗಳನ್ನು ಕದಿಯಲು ಬಂದಿರುವನು. ಇದನ್ನು ಕೇಳಿದ ಬ್ರಾಹ್ಮಣನು ಸಾವಧಾನವಾಗಿ ಇಷ್ಟದೇವತಾ ಮಂತ್ರಧ್ಯಾನದಿಂದ ತನ್ನನ್ನು ರಾಕ್ಷಸನಿಂದ ರಕ್ಷಿಸಿಕೊಂಡು, ಕೋಲಿನಿಂದ ಕಳ್ಳನನ್ನು ಹೊಡೆಯುವುದರ ಮೂಲಕ ಗೋವುಗಳನ್ನು ರಕ್ಷಿಸಿಕೊಂಡನು. ಕಥೆಯನ್ನು ಮುಗಿಸಿದ ವಕ್ರಸೇನನು ತನ್ನ ಮಾತನ್ನು ಸಮರ್ಥಿಸಿಕೊಂಡನು. ಅರಿಮರ್ಧನನು ಮತ್ತೆ ಪ್ರಾಕಾರಕರ್ಣನ ಅಭಿಪ್ರಾಯ ಕೇಳಿದನು "ಪ್ರಾಕಾರಕರ್ಣನು ಹೀಗೆ ಸಲಹೆ ಮಾಡುತ್ತಾನೆ–

परस्पर मर्माणि ये न रक्षन्ति जन्तवः ।

त एव निधनं यान्ति वाल्मीकोदरसर्पवत् ॥[42]

"ಇವನನ್ನು ಕೊಲ್ಲಬಾರದು, ಏಕೆಂದರೆ ರಕ್ಷಿಸಲ್ಪಟ್ಟ ಇವನೊಂದಿಗೆ ಪರಸ್ಪರ ಪ್ರೀತಿಯಿಂದ ಸುಖವಾಗಿ ಕಾಲವು ಕಳೆಯುತ್ತದೆ. ಪರಸ್ಪರ ರಹಸ್ಯಗಳನ್ನು ರಕ್ಷಿಸಿಕೊಳ್ಳದ ಜೀವಿಗಳು ಹುತ್ತದ ಬಿಲದಲ್ಲಿದ್ದ ಹಾವಿನಂತೆ ನಾಶವಾಗಿ ಹೋಗುವರು."

ಈ ರೀತಿಯಾಗಿ ಒಂದು ಪ್ರಸಂಗದೊಡನೆ, ಮತ್ತೊಂದಕ್ಕೆ ಉತ್ತಮ ಸಂಬಂಧ ಕಲ್ಪಿಸಿ, ಗುರುಗಳು ರಾಜಕುಮಾರರ ಆಸಕ್ತಿಯನ್ನು ಪ್ರೇರೇಪಿಸಿ, ಕುತೂಹಲದಿಂದ ಮುಂದಿನ ಪ್ರಸಂಗಕ್ಕೆ ಸಾಗುವಂತೆ ಕಥೆಗಳನ್ನು ಹೆಣೆದಿರುವುದೇ ಪಂಚತಂತ್ರದ ವಿಶಿಷ್ಟ ಲಕ್ಷಣವಾಗಿದೆ. ಅಲ್ಲಲ್ಲೇ ನೀತಿವಾಕ್ಯಗಳು, ಸುಭಾಷಿತಗಳು ನಾಣ್ಣುಡಿಗಳು, ತಿಳುವಳಿಕೆ ಹಾಗೂ ಜ್ಞಾನಾರ್ಜನೆಯ ಜೀವಸತ್ವಗಳನ್ನು ಸಂದರ್ಭೋಚಿತವಾಗಿ ಸಂಯೋಜನೆ ಮಾಡಿದ್ದಾರೆ. ಬದುಕಿನ ರೀತಿನೀತಿಗಳು, ಆಚಾರ ವಿಚಾರಗಳು ಇವನ್ನೆಲ್ಲಾ ಅನುಸರಿಸಿ, ಪುಣ್ಯವಿಶೇಷದಿಂದ ಅಪರೂಪವಾಗಿ ದೊರಕಿರುವ ಮಾನವ ಜನ್ಮವನ್ನು ಹೇಗೆ ಪಾವನಗೊಳಿಸಿಕೊಂಡು ಸಾರ್ಥಕ ಪಡಿಸಿಕೊಳ್ಳಬಹುದು

---

41. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ –190 ಪು.–541,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
42. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ –191, ಪು–545,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಎಂಬ ಜಾಗೃತಿಯನ್ನು ಮೂಡಿಸಿ, ಪಂಚತಂತ್ರವು ಉತ್ತಮ ಶಿಕ್ಷಣವನ್ನು ಅವ್ಯಾಹತವಾಗಿ ಅಂದಿನಿಂದ ಇಂದಿನವರೆಗೂ ಒದಗಿಸುತ್ತಾ ಬಂದಿದೆ. ಎಳೆಯರಿಂದ ಹಿಡಿದು ಹಿರಿಯರವರೆಗೂ ಕೇಳುಗರಾಗಿ, ಓದುಗರಾಗಿ ಎಷ್ಟೆಷ್ಟು ಸೂಕ್ಷ್ಮವಾಗಿ ಗಮನಿಸಿ, ಆತ್ಮೀಯವಾಗಿ ಅಧ್ಯಯನ ನಡೆಸುವರೋ, ಅದಕ್ಕೆ ತಕ್ಕಂತೆ ಜ್ಞಾನವನ್ನೂ ಹಾಗೂ ಮಾರ್ಗದರ್ಶನವನ್ನೂ ಪಡೆಯುವರು.

ಪಂಚತಂತ್ರದ ಮೂರನೆಯ ತಂತ್ರದಲ್ಲಿ ಬರುವ "**ಹುತ್ತದಲ್ಲಿದ್ದ ಸರ್ಪದ ಕಥೆ**ಯನ್ನು ಹೇಳುತ್ತಾ, ಪ್ರಾಕಾರಕರ್ಣನು ಅನೇಕ ಸಲಹೆಗಳನ್ನು ನೀಡುತ್ತಾ ರಾಜನೈತಿಕ ತಿಳುವಳಿಕೆಯನ್ನು ರಾಜಕುಮಾರರಿಗೆ ತಿಳಿಸಿ ಅವರನ್ನು ಜಾಗೃತಗೊಳಿಸುತ್ತಾನೆ. ಗುಟ್ಟು ರಟ್ಟಾದರೆ ಲಾಭ ಯಾರಿಗೆ? ಪೂಜ್ಯನಾದವನನ್ನು ಪುರಸ್ಕರಿಸುವ ಬದಲಿಗೆ, ಅಪೂಜ್ಯನಾದವನನ್ನು ಹೊತ್ತು ತಿರುಗಿದರೆ ದುರ್ಭಿಕ್ಷ, ಮರಣ, ಭಯ ಈ ಮೂರು ಒದಗುವುದು. ಕಣ್ಣ ಮುಂದೆ ಅಪರಾಧ ನಡೆದರೂ ಮೂಢರು ಅದರಿಂದ ಕಲಿಯುವುದಿಲ್ಲ.

प्रत्यक्षोऽपि कृतो पापे मूर्खः साम्ना प्रशाम्यति ।

रथकारः स्वकां भार्या सजारां शिरसाऽवहत् ।।[43]

ಬಡಗಿಯು ಕುಲಟೆಯಾದ ತನ್ನ ಹೆಂಡತಿಯನ್ನು ತಲೆಯ ಮೇಲೆ ಹೊತ್ತಂತೆ. ಪ್ರತ್ಯಕ್ಷವಾಗಿ ಪಾಪವನ್ನು ಮಾಡಿದರೂ ಮೂರ್ಖನು ಸವಿನುಡಿಗಳಿಂದ ಶಾಂತನಾಗುತ್ತಾನೆ ಎಂದು ಮಂತ್ರಿಗಳಿಗೆ ಹೇಳಿ ರಕ್ತಾಕ್ಷನು **ಬಡಗಿಯ ಹೆಂಡತಿಯ ಕಥೆ** ಹೇಳುತ್ತಾನೆ. ಈ ಕಥೆಯಲ್ಲಿನ ನೀತಿ ಸುಲಭದಲ್ಲಿ ಮೋಸಹೋಗುವುದು–

सूर्य भर्त्तारमुत्सृज्य पर्जन्यं मारुतं गिरिम् ।

स्वजाति मूषिका प्राप्ता स्वजातिरर्दुरतिक्रमा ।।[44]

ಒಂದು ರೀತಿಯಲ್ಲಿ ಕವಿದ ಮೌಢ್ಯ. ಸೂರ್ಯ, ಮೇಘ, ವಾಯು, ಪರ್ವತ ಮುಂತಾದವುಗಳನ್ನು ಗಂಡನಾಗಿ ಪಡೆಯುವ ಅವಕಾಶವಿದ್ದರೂ, ಅವರನ್ನೆಲ್ಲ ತ್ಯಜಿಸಿ ಕೊನೆಗೆ ಇಲಿಯು ತನ್ನ ಸ್ವಜಾತಿಯವನನ್ನೇ ಗಂಡನನ್ನಾಗಿ ಪಡೆಯಿತು. ಸ್ವಜಾತಿಯನ್ನು ಬಿಡುವುದು ಸುಲಭವಲ್ಲ. ಮಂತ್ರಿಗಳು ಅದು ಹೇಗೆಂದು ಕೇಳಲು ರಕ್ತಾಕ್ಷನು **ಇಲಿಯ ಮದುವೆಯ ಕಥೆ**ಯನ್ನು ಹೇಳುವನು. ಈ ಕಥೆಯ ನೀತಿಯೆಂದರೆ, "ಹುಟ್ಟುಗುಣ ಘಟ್ಟ ಹತ್ತಿದರೂ ಹೋಗದು."ಗೋತ್ರ ಬದಲಾದ ಮಾತ್ರಕ್ಕೆ ಆಕಾರವಾಗಲೀ, ಗುಣವಾಗಲೀ ಬದಲಾಗಬೇಕೆಂದಿಲ್ಲ. ಹುಲಿಯನ್ನು ಹಸುವೆಂದು ಕರೆದಾಕ್ಷಣ ಅದು ಹಸುವಾಗದು.[45]

---

43. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ –193, ಪು–549,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
44. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ –199, ಪು–557,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
45. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತೃ.ತಂ. ಪು–165–168.(2015) ವರ್ಣಿಲ, 392/2–11, ಕಲ್ಯಾಣಿ ಗಾರ್ಡನ್, BSK 1st Stage, ಬೆಂಗಳೂರು–560050

ಕಥೆಯನ್ನು ಮುಗಿಸಿದ ರಕ್ತಾಕ್ಷನು ಮಂತ್ರಿಗಳಿಗೆ ಹಾಗೂ ರಾಜನಿಗೆ ಹೇಳಿದನು–" ಅಯ್ಯೋ, ನಿನ್ನ ಮಂತ್ರಿ ಜನರು ಮೂರ್ಖರು. ನೀನೂ ಕೂಡ ಹಾಗೆಯೇ ಎಂದು ತಿಳಿಯುತ್ತೇನೆ. ಒಂದು ಉಕ್ತಿ ಇದೆ–

पूर्वं तावदहं मूर्खो द्वितीयः पाशबन्धकः।

ततो राजा च मन्त्री च सर्वं वै मूर्खमण्डलम् ॥[46]

ಮೊದಲು ನಾನು ಮೂರ್ಖ, ಎರಡನೆಯದಾಗಿ ಬೇಡನು ಮೂರ್ಖನು, ಬಳಿಕ ರಾಜ ಮತ್ತು ಮಂತ್ರಿ ಮೂರ್ಖರು, ನಾವೆಲ್ಲರೂ ಮೂರ್ಖರ ಗುಂಪಿದ್ದಂತೆ." ಆಗ ಅವರೆಲ್ಲರೂ ಅದೇನೆಂದು ಕೇಳಲು ರಕ್ತಾಕ್ಷನು **'ಚಿನ್ನದ ಹಿಕ್ಕೆಯನ್ನು ಹಾಕುವ ಪಕ್ಷಿ, ರಾಜ ಮತ್ತು ಮಂತ್ರಿಯ ಕಥೆ'**ಯನ್ನು ಹೇಳಿದನು. ಈ ಕಥೆಯ ಅಂತ್ಯದಲ್ಲಿ ಒಂದು ಉಕ್ತಿ ಹೀಗಿದೆ:

अनागतं यः कुरुते स शोभते स शोच्यते यो न करोत्यनागतम् ।

वनेऽत्र संस्थस्य समागता जरा बिलस्य वाणी न कदाऽपि मे श्रुता ॥[47]

'ಆಪತ್ತು ಬರುವ ಮೊದಲೇ ಅದನ್ನು ಯೋಚಿಸಿ ಕಾರ್ಯ ಕೈಗೊಳ್ಳುವವನು ಪ್ರಶಂಸೆಗೆ ಒಳಗಾಗುತ್ತಾನೆ. ಹಾಗೆ ಮಾಡದವನ ಪರಿಸ್ಥಿತಿ ಶೋಚನೀಯವಾಗುತ್ತದೆ. ನನಗೆ ಈ ಕಾಡಿನಲ್ಲಿದ್ದು ಮುಪ್ಪು ಬಂತು ಆದರೆ ಬಿಲವು ಮಾತನಾಡುವುದನ್ನು ಎಂದೂ ಕೇಳಿಲ್ಲ. ಅನುಯಾಯಿಗಳು ಅದೇನೆಂದು ಕೇಳಲು ರಕ್ತಾಕ್ಷನು ಸಿಂಹ, ನರಿ ಮತ್ತು ಗುಹೆಯಕಥೆಯನ್ನು ಹೇಳಿದನು. ಇದನ್ನು ತಿಳಿದುಕೊಂಡು ನೀವೆಲ್ಲರೂ ನನ್ನೊಂದಿಗೆ ಬನ್ನಿ ಎಂದು ಹೇಳಿ ತನ್ನ ಅನುಯಾಯಿ ಪರಿಜನರೊಂದಿಗೆ ರಕ್ತಾಕ್ಷನು ದೂರ ದೇಶಕ್ಕೆ ಹೋದನು. ಇವನು ಹೊರಟ ನಂತರ ಸ್ಥಿರಜೀವಿಯು ಸಂತೋಷಭರಿತನಾಗಿ ಚಿಂತಿಸಿದನು. ರಕ್ತಾಕ್ಷನು ಹೋಗಿದ್ದು ಬಹಳ ಒಳ್ಳೆಯದಾಯಿತು. ಅವನಾದರೋ ದೂರದರ್ಶಿ, ಇವರೆಲ್ಲರೂ ಮೂಢರು. ಇನ್ನು ಇವರನ್ನು ಸುಲಭವಾಗಿ ಕೊಲ್ಲಬಹುದು. ಏಕೆಂದರೆ ಕುರಕ್ರಮದಲ್ಲಿ ಬಂದ ದೂರದರ್ಶಿಗಳಾದ ಮಂತ್ರಿಗಳನ್ನುಳ್ಳ ರಾಜನು ನಿಶ್ಚಯವಾಗಿ ಬೇಗನೆ ವಿನಾಶ ಹೊಂದುವುದಿಲ್ಲ. ಒಳ್ಳೆಯ ನೀತಿಯನ್ನು ಬಿಟ್ಟು ಪ್ರತಿಕೂಲವಾದ ನೀತಿಯನ್ನು ಉಪದೇಶಿಸುವ ಮಂತ್ರಿಗಳು ನಿಜವಾಗಿಯೂ ರಾಜನ ಶತ್ರುಗಳಿದ್ದಂತೆ.

---

46. **ಸುಧಾಕರ್ ಮಾಲವೀಯ,** ಸಂಪಾದಕರು, ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ –212, ಪು–574,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
47. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ – 213, ಪು–577.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಅಪಥ್ಯ ಭೋಜನ ಮಾಡುವ ಯಾರನ್ನು ತಾನೆ ರೋಗಗಳು ಕಾಡದಿರುತ್ತವೆ? ಯಾವ ದುರ್ಮಂತ್ರಿಗಳಿಗೆ ತಾನೆ ದುರ್ನೀತಿಯಿಂದುಂಟಾದ ದೋಷವು ತಟ್ಟುವುದಿಲ್ಲ? ಸಂಪತ್ತು ಯಾರಲ್ಲಿತಾನೆ ದರ್ಪವನ್ನು ಉಂಟುಮಾಡುವುದಿಲ್ಲ? ಮೃತ್ಯುವು ಯಾರಿಗೆ ತಾನೇ ಬಾರದಿರುವುದಿಲ್ಲ? ಸ್ತ್ರೀಸಂಬಂಧವಾದ ವಿಷಯಗಳು ಯಾರನ್ನು ತಾನೆ ಪೀಡಿಸುವುದಿಲ್ಲ? ಲೋಭಿಯ ಯಶಸ್ಸು ನಾಶವಾಗುತ್ತದೆ. ಹಾಗೆಯೇ ಕಪಟಿಯ ಮೈತ್ರಿ, ಕ್ರಿಯಾಹೀನನ ಕುಲ, ಧನವನ್ನೇ ಬಯಸುವವನ ಧರ್ಮ, ದುರ್ವ್ಯಸನಿಗಳ ವಿದ್ಯೆ, ಜಿಪುಣನ ಸುಖ ಮತ್ತು ದುಷ್ಟಮೈತ್ರಿಯುಳ್ಳ ರಾಜನ ರಾಜ್ಯವು ನಾಶವಾಗುತ್ತದೆ. ಹೀಗಿರುವುದರಿಂದ ಎಲೈ ರಾಜನೇ, ನಾನು ಕತ್ತಿಯ ಅಲಗಿನ ಮೇಲೆ ನಡೆದಂಥ ಕಾರ್ಯವನ್ನು ಮಾಡಿದೆ ಎಂದು ನೀನು ಹೇಳಿದ್ದು ಯತಾರ್ಥವಾದುದೇ.

अपमानं पुरस्कृत्य मानं कृत्वा तु पृष्ठतः ।

स्वार्थमभ्युद्धरेत् प्राज्ञः स्वार्थ भ्रंशो हि मूर्खता ॥

स्कन्धेनापि वहेच्छत्रुं कालमासाध्य बुद्धिमान् ।

महता कृष्णसर्पेण मण्डूका बहवो हताः ॥[48]

ಬುದ್ಧಿವಂತನು ಅಪಮಾನವನ್ನು ಪುರಸ್ಕರಿಸಿ, ತನ್ನ ಗೌರವ ಪ್ರತಿಷ್ಠೆಗಳನ್ನು ಕಡೆಗಣಿಸಿ ಸ್ವಾರ್ಥವನ್ನು ಸಾಧಿಸಿಕೊಳ್ಳಬೇಕು. ಸ್ವಾರ್ಥವನ್ನು ಬಿಡುವುದು ಮೂರ್ಖತನವೇ ಸರಿ.ಸಮಯ ಬಂದಾಗ ಬುದ್ಧಿವಂತನು ಶತ್ರುವನ್ನು ಹೆಗಲಮೇಲಾದರೂ ಹೊರಬೇಕು. **"ಕಾರ್ಯವಾಸಿ ಕತ್ತೆ ಕಾಲುಕಟ್ಟು"** ಎಂಬ ನಾಣ್ನುಡಿಯಂತೆ. ಹಾಗೆಯೇ ಕೃಷ್ಣಸರ್ಪವೊಂದು ಕಪ್ಪೆಗಳನ್ನು ಹೊತ್ತು ಅವುಗಳನ್ನು ನಾಶಮಾಡಿತು ಎಂದು ಹೇಳಿ **"ಕಪ್ಪೆ ಮತ್ತು ಕೃಷ್ಣಸರ್ಪ"**ದ ಕಥೆಯನ್ನು ಹೇಳಿದನು.[49]

ಇದರ ನೀತಿಯೆಂದರೆ, ವಿಶ್ವಾಸ ಮೂಡಿಸಿ ಶತ್ರುವನ್ನು ನಾಶಪಡಿಸುವುದು. ಪ್ರಕೃತಿ ಧರ್ಮದಂತೆ ಸರ್ಪವೊಂದು ಮುದಿಯಾಗಿತ್ತು. ನಿಶ್ಶಕ್ತಿಯಾದುದರಿಂದ ಮೊದಲಿನಂತೆ ಆಹಾರ ಗಳಿಸಲಾರದೆ ಚಿಂತೆಯಿಂದ ಕೂಡಿತ್ತು. ಹೊಟ್ಟೆ ತುಂಬಿಸುವುದಕ್ಕಾಗಿಯೇ ಅಭಿಮಾನ, ನಾಚಿಕೆ, ಸದ್ಗುಣಗಳು – ಕೊನೆಗೆ ಎಲ್ಲವನ್ನೂ ತ್ಯಜಿಸಬೇಕಾಗುತ್ತದೆ. ಹೊಟ್ಟೆಯಿಂದಾಗಿಯೇ ಕೆಟ್ಟೆನೆಂದು ಮಾನಮರ್ಯಾದೆಗಳ ಬಿಡಲಾರೆನೆಂದಿದ್ದರೆ ಹಸಿವಿನಿಂದ ಪ್ರಾಣಬಿಡಬೇಕಾಗುವುದು. ಯಾರಿಗೂ ತಲೆಬಾಗೆನೆಂದರೆ ಹೊಟ್ಟೆ ಕೇಳದು. ಆದ್ದರಿಂದ

---

48. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ–ಶ್ಲೋ–234,ಪು–594.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
49. **ಭರತ ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತೃ.ತಂ. ಪು.– 208–210. ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ, 44/1, ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು–560004

ಉದರಂಭರಣಕ್ಕಾಗಿ ಮಾರ್ಗೋಪಾಯಗಳನ್ನು ಯೋಚಿಸಿತು. ಮಂದ ವಿಷಸರ್ಪವು ಕಪ್ಪೆಗಳನ್ನೆಲ್ಲಾ ಸಂತೋಷಗೊಳಿಸಲು ಅನೇಕ ರೀತಿಯ ನಡೆಗಳನ್ನು ಪ್ರದರ್ಶಿಸಿತು. ಸರ್ಪದ ಅಂಗಸ್ಪರ್ಶದ ಸುಖವನ್ನು ಕಪ್ಪೆಗಳ ರಾಜ ಜಾಲಪಾದನಿಗೆ ಪರಿಚಯಿಸಿತು. ಆಗ ಜಾಲಪಾದ ಹೇಳಿತು-"ಮಂದವಿಷ ಸರ್ಪದ ಮೇಲೆ ಕುಳಿತು ಹೋಗುವ ಸುಖವು ಆನೆ, ಕುದುರೆ, ರಥ, ಪಲ್ಲಕ್ಕಿ ಅಥವಾ ನೌಕೆಯಲ್ಲಿ ಕುಳಿತು ಹೋಗುವ ಸುಖಕ್ಕಿಂತ ಹೆಚ್ಚು" ಹೀಗೆ ಉಪಾಯದಿಂದ ಒಳ್ಳೆಯ ವಿಶ್ವಾಸ ಹಾಗೂ ನಂಬಿಕೆಯನ್ನು ಮೂಡಿಸಿ ಮುಂದಿನ ಕೆಲಸ ಆರಂಭಿಸಿತು. ಮೊದಲು ಚಿಕ್ಕಪುಟ್ಟ ಕಪ್ಪೆಗಳನ್ನು ತಿಂದು ಮುಗಿಸಿತು. ನಂತರದಲ್ಲಿ ಒಂದಷ್ಟು ಶಕ್ತಿ ಬಂದು ನಿಶ್ಶಕ್ತಿ ಕಡಿಮೆಯಾಯಿತು. ಹಾರಿ ಹಾರಿ ಓಡಿ ತಪ್ಪಿಸಿಕೊಳ್ಳುವ ದೊಡ್ಡ ದೊಡ್ಡ ಕಪ್ಪೆಗಳನ್ನು ಹಿಡಿದು ನುಂಗುವುದಕ್ಕೆ ಪ್ರಾರಂಭ ಮಾಡಿತು. ಕಾಣಕಾಣುತ್ತಿದ್ದಂತೆ ಸರೋವರದ ಕಪ್ಪೆಗಳೆಲ್ಲಾ ಬರಿದಾಗುತ್ತಾ ಬಂದಿತು. ಒಮ್ಮೆ ಬೇರೊಂದು ದೊಡ್ಡ ಕೃಷ್ಣ ಸರ್ಪವು ಆ ಪ್ರದೇಶಕ್ಕೆ ಬಂದಿತು. ಕಪ್ಪೆಗಳನ್ನು ಹೊತ್ತು ತಿರುಗುವ ಮಂದವಿಷವನ್ನು ನೋಡಿ ಆಶ್ಚರ್ಯಗೊಂಡು ಹೇಳಿತು- "ಮಿತ್ರ, ನಮ್ಮ ಆಹಾರವಾದ ಕಪ್ಪೆಗಳನ್ನು ಏಕೆ ಹೊರುತ್ತಿರುವೆ? ಇದು ಸರಿಯಲ್ಲ." ಆಗ ಮಂದವಿಷ ಹೀಗೆ ಉತ್ತರಿಸಿತು."

सर्वमेतद्विजानामि यथा वाह्योऽस्मि दर्दुरैः।

किञ्चित् कालं प्रतीक्ष्योऽहं घृतान्धो ब्राह्मणो यथा ॥[50]

ಕಪ್ಪೆಗಳಂದ  ವಾಹನವನ್ನಾಗಿ ಮಾಡಲ್ಪಟ್ಟಿದ್ದೇನೆಂದು ನಾನು ಚೆನ್ನಾಗಿ ಬಲ್ಲೆ. ಆದರೆ **ತುಪ್ಪದಿಂದ ಕುರುಡನಾದ ಬ್ರಾಹ್ಮಣನ ಕಥೆ**ಯನ್ನು ಕೃಷ್ಣಸರ್ಪವು ಹೇಳಿತು. ನಂತರ ಹಾವು ಇನ್ನೊಂದು ಕೊಳವನ್ನರಸಿ ಹೊರಟಿತು. ಹೀಗೆ ರಾಜನೇ, ಈ ಕಥೆಯು ನನಗೆ ಗೊತ್ತಿದ್ದುದರಿಂದ, ಇದರಂತೆ ಶತ್ರುಗಳನ್ನು. ನಾಶಪಡಿಸುವ ಏಕೈಕ ಗುರಿಯನ್ನಿರಿಸಿಕೊಂಡು ಅವರು ಹೇಳದಂತೆ ಕೇಳಿ ಅವರಿಗೆ ವಿಶ್ವಾಸ ಹುಟ್ಟುವಂತೆ ಮಾಡಿದೆ. ಬಿಲ್ಗಾರ ಬಿಟ್ಟ ಬಾಣವು ಗುರಿ ಸೇರುತ್ತದೋ ಇಲ್ಲವೋ ಗೊತ್ತಿಲ್ಲ ಆದರೆ ಬುದ್ಧಿವಂತರ ಜಾಣತನವು ಸಂದರ್ಭ ಒದಗಿದಾಗ ಅರಸು ಸಮೇತ ಇಡೀ ರಾಜ್ಯವನ್ನೇ ನಾಶಗೊಳಿಸುತ್ತದೆ ಎಂಬುದಕ್ಕೆ ಸಾಕ್ಷಿ ಘೂಕಕುಲ ಸಂಹಾರ ಎಂದು ಹೇಳಿತು ಸ್ಥಿರಜೀವಿ.[51]

ಮುಂದೆ ಸ್ಥಿರಜೀವಿಯು ಮೇಘವರ್ಣನಿಗೆ ರಾಜನೀತಿಯ ಉಪದೇಶಮಾಡುತ್ತಾನೆ. "ದೇವ, ಆರಂಭಿಸಿದ

---

೫೦. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ-ಶ್ಲೋ- 237, ಪು-598.(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

51. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ತೃ.ತಂ. ಪು.-169-170.(2015) ವರ್ನಿಲ, 392/2-11, ಕಲ್ಯಾಣಿ ಗಾರ್ಡನ್, BSK 1st Stage, ಬೆಂಗಳೂರು-560050

ನಿನ್ನ ಎಲ್ಲಾ ಕೆಲಸಗಳೂ ಸಿದ್ಧಿಸಿರುವುದರಿಂದ ನೀನೇ ಭಾಗ್ಯವಂತ. ಕೇವಲ ಶೌರ್ಯದಿಂದ ಮಾತ್ರ ಕೆಲಸವು ಸಿದ್ಧಿಸುವುದಿಲ್ಲ. ಬದಲಾಗಿ ಬುದ್ಧಿಯಿಂದ ಕೈಗೊಂಡ ಕೆಲಸವು ಫಲಿಸುತ್ತದೆ. ನೀತಿ, ತ್ಯಾಗ ಹಾಗೂ ಶೌರ್ಯದಿಂದ ಕೂಡಿದ ಮನುಷ್ಯನಿಗೆ ರಾಜ್ಯವು ಲಭ್ಯವಾಗುತ್ತದೆ. ತ್ಯಾಗಿಗಳ, ವೀರರ ಹಾಗೂ ವಿದ್ವಾಂಸರ ಸಂಪರ್ಕದಲ್ಲಿ ಆಸಕ್ತಿಯಿರುವವರಿಗೆ ಗುಣವಂತಿಕೆ ಲಭಿಸುತ್ತದೆ. ಗುಣವಂತನಿಗೆ ಧನಲಾಭವಾಗುತ್ತದೆ. ಧನದಿಂದ ಸಂಪತ್ತು, ಸಂಪತ್ತಿನಿಂದ ಆಜ್ಞಾಪಿಸುವ ಪ್ರಬುದ್ಧತೆ ಮತ್ತು ಆಜ್ಞಾಗುಣದಿಂದ ರಾಜ್ಯವು ಪ್ರಾಪ್ತವಾಗುತ್ತದೆ. ಯಾವ ರಾಜನಿಗೆ ಗುಣಗಳಲ್ಲಿ ಅನುರಾಗವಿದೆಯೋ, ವ್ಯಸನಗಳಲ್ಲಿ ಅನಾದರವಿದೆಯೋ ಮತ್ತು ಒಳ್ಳೆಯ ಸೇವಕರಲ್ಲಿ ಪ್ರೀತಿ ಇದೆಯೋ, ಅವನು ಬೀಸುತ್ತಿರುವ ಚಾಮರವನ್ನೇ ವಸ್ತುವನ್ನಾಗುಳ್ಳ ಹಾಗೂ ಶ್ವೇತಛತ್ರವನ್ನೇ ಆಭರಣವಾಗುಳ್ಳ ರಾಜಶ್ರೀಯನ್ನು ಚಿರಕಾಲ ಅನುಭವಿಸುತ್ತಾನೆ. ರಾಜ್ಯವು ದಕ್ಕಿತೆಂದು ಐಶ್ವರ್ಯಮದದಿಂದ ನೀನು ವ್ಯವಹರಿಸಬಾರದು. ರಾಜನ ಸಂಪತ್ತು ಚಂಚಲವಾಗಿರುತ್ತದೆ. ರಾಜ್ಯಲಕ್ಷ್ಮಿಯನ್ನು ಪಡೆಯುವುದು ಬಿದಿರನ್ನು ಏರುವಂತೆ ಬಹಳ ಕಷ್ಟದ ಕೆಲಸ. ಬಿದಿರಿನಿಂದ ಜಾರುವಂತೆ ಯಾವಾಗ ಬೇಕಾದರೂ ಕಳೆದು ಹೋಗಬಹುದು. ರಾಜ್ಯಾಭಿಷೇಕವಾದ ಕೂಡಲೇ ಬುದ್ಧಿಯು ವಿಪತ್ತುಗಳ ಬಗ್ಗೆ ಚಿಂತಿಸಲಾರಂಭಿಸಬೇಕು. ರಾಜ್ಯಾಭಿಷೇಕದಲ್ಲಿ ಅಭಿಷೇಕ ಮಾಡುವ ಮಡಕೆಯು ಕೇವಲ ನೀರನ್ನು ಮಾತ್ರವಲ್ಲದೆ ಆಪತ್ತುಗಳನ್ನು ಕೂಡ ತಂದೊಡ್ಡುವುದು. ಆಪತ್ತುಗಳಿಗೆ ತಲುಪಲಾರದ ಜಾಗ ಎಂದು ಯಾವುದು ಕೂಡ ಇಲ್ಲ. ರಾಮನ ವನವಾಸ, ಬಲಿಯ ಬಂಧನ, ಪಾಂಡುಸುತರ ವನವಾಸ, ಯದುಗಳ ಪರಸ್ಪರ ಯುದ್ಧದಿಂದ ಮರಣ, ನಳರಾಜನ ರಾಜ್ಯ ನಿರ್ಗಮನ, ಬೃಹನ್ನಳೆಯಾದ ಅರ್ಜುನನ ನಾಟ್ಯಶಿಕ್ಷಣ, ಲಂಕೇಶ್ವರ ರಾವಣನ ಪತನ, ಇವೆಲ್ಲವನ್ನೂ ಯೋಚಿಸಿದರೆ ಎಲ್ಲವೂ ಕಾಲದ ಪ್ರಭಾವದಿಂದ ಉಂಟಾಗುತ್ತದೆ ಎಂದು ಸ್ಪಷ್ಟವಾಗುತ್ತದೆ. ಹೀಗಿರುವಾಗ ಯಾರು ಯಾರನ್ನು ತಾನೆ ರಕ್ಷಿಸಬಲ್ಲರು? ಇಂದ್ರನ ಸ್ನೇಹಿತನಾಗಿ ಸ್ವರ್ಗಕ್ಕೆ ಹೋದ ದಶರಥ ಇಂದು ಎಲ್ಲಿಗೆ ಹೋದ? ಸಾಗರದ ಸೀಮೆಯನ್ನು ನಿರ್ಧರಿಸಿದ ಸಗರ ಚಕ್ರವರ್ತಿ ಎಲ್ಲಿಗೆ ಹೋದ? ಅಂಗೈನಿಂದ ಹುಟ್ಟಿದ ವೈನ್ಯ(ಪೃಥು) ಎಲ್ಲಿಗೆ ಹೋದ? ಸೂರ್ಯನ ಮಗನಾದ ಮನು ಎಲ್ಲಿಗೆ ಹೋದ? ಇವರೆಲ್ಲರೂ ನಿಶ್ಚಯವಾಗಿ ಕಾಲಪುರುಷನ ಪ್ರಭಾವದಿಂದಲೇ ಉನ್ನತರಾಗಿ ಕಾಲದಿಂದಲೇ ಮೃತ್ಯುವಶವಾದರು. [52]

---

**52. ಭರತ.ಬಿ.ರಾವ್,** ಪಂಚತಂತ್ರ, ಪಂ.ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತೃ.ತಂ. ಪು.-214-217.ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ,44/1,ಕೆ.ಆರ್. ರಸ್ತೆ. ಬಸವನಗುಡಿ, ಬೆಂಗಳೂರು-560004(2018)

मान्धाता क्व गतस्त्रिलोकविजयी राजा क्व सत्यव्रतः

देवानां नृपतिर्गतः क्व नहुषः सच्छास्त्रवान् केशवः।

मन्यन्ते सरथाः सकुञ्जरवराः शक्रासनाध्यासिनः

कालेनैव महात्मना त्वनुकृता कालेन निर्वासिताः॥[53]

ತ್ರಿಲೋಕ ವಿಜಯಿಯಾದ ಮಾಂಧಾತನು ಎಲ್ಲಿ ಹೋದ? ಸತ್ಯವ್ರತನೆಲ್ಲಿ? ದೇವತೆಗಳ ರಾಜ ನಹುಷನೆಲ್ಲಿ? ಉತ್ತಮ ಶಾಸ್ತ್ರ ಕೋವಿದನಾದ ಕೇಶವನು ಎಲ್ಲಿಗೆ ಹೋದ? ಇವರೆಲ್ಲರನ್ನೂ ರಥ ಆನೆಗಳೊಂದಿಗೆ ಇಂದ್ರನ ಆಸನವನ್ನೇರುವ ಯೋಗ್ಯರನ್ನಾಗಿ ಮಾಡಿದ್ದು, ಮಹಾತ್ಮನಾದ ಕಾಲ ಹಾಗೂ ಕಾಲನೇ ಎಲ್ಲರನ್ನೂ ನಾಶಮಾಡಿದನು.- ಅಲ್ಲದೆ ಆ ರಾಜ, ಆ ಸಚಿವರು, ಆ ಸುಂದರ ಸ್ತ್ರೀಯರು, ಆ ವನಗಳು, ಉಪವನಗಳು ಎಲ್ಲಿ ಹೋಗಿಬಿಟ್ಟವು? ಅವೆಲ್ಲವನ್ನೂ ಕಾಲನೇ ಸೃಷ್ಟಿಸಿ, ಕಾಲನೇ ನಷ್ಟ ಮಾಡಿದನು. ಆದ್ದರಿಂದ ಮತ್ತಗಜದ ಕಿವಿಯಂತೆ ಚಂಚಲವಾದ ರಾಜ್ಯಲಕ್ಷ್ಮಿಯನ್ನು ನ್ಯಾಯನಿಷ್ಠೆಯಿಂದ ಕೂಡಿದವನಾಗಿ ಅನುಭವಿಸು, ಹೀಗೆ ಹೇಳುತ್ತಾ ಇಡೀ ರಾಜನೀತಿಯ ಸರ್ವಸ್ವವನ್ನೂ ಎಳೆ ಎಳೆಯಾಗಿ ಬಿಡಿಸಿ, ರಾಜನೀತಿ ಶಿಕ್ಷಣವನ್ನು ಸರಳವಾಗಿ ಆಸಕ್ತಿಯುತ ಕಥೆಗಳ ಮೂಲಕ ವಿಷ್ಣುಶರ್ಮರು ಬಹಳ ಅಚ್ಚುಕಟ್ಟಾಗಿ ರಾಜಕುಮಾರರಿಗೆ ಮನದಟ್ಟು ಮಾಡಿದ್ದಾರೆ.

असहायः समर्थोऽपि तेजस्वी किं करिष्यति ।

निर्वाते ज्वलितो वह्निः स्वयमेव प्रशाम्यति ॥[54]

ಸಮರ್ಥನಾಗಿದ್ದರೂ ಒಬ್ಬ ತೇಜಸ್ವಿಯು ಸಹಾಯವಿಲ್ಲದಿದ್ದರೆ ಏನನ್ನು ತಾನೆ ಮಾಡಬಲ್ಲ? ಉರಿಯುವ ಬೆಂಕಿ ಗಾಳಿಯ ಸಹಾಯವಿಲ್ಲದಿದ್ದಾಗ ತಾನಾಗಿಯೇ ಆರಿಹೋಗುತ್ತದೆ. ಒಬ್ಬ ರಾಜನಾದವನು ಇಂತಹ ವಿಚಾರಗಳನ್ನು ತಿಳಿದಿರಬೇಕು. ಹೀಗೆಯೆ ಮತ್ತೊಂದು ತಿಳುವಳಿಕೆ ಮಾತು ಹೀಗೆ ಹೇಳುತ್ತದೆ.

अपन्नाशाय विबुधैः कर्तव्या सुहृदोऽमलाः ।

न तरत्यापदं कश्चिद्योऽत्र मित्रविवर्जितः ॥[55]

---

53. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ತೃ.ತಂ-ಶ್ಲೋ - 255, ಪು-615..(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001
54. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ,ಕಾಕೋಲೂಕೀಯ- ಶ್ಲೋ-56, ಪು-459 (1963) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001
55. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಸಂಪ್ರಾಪ್ತಿ- ಶ್ಲೋ-178, ಪು-420, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ತಮ್ಮ ಕಷ್ಟಗಳ ಪರಿಹಾರಕ್ಕಾಗಿ ತಿಳಿದವರು ಒಳ್ಳೆಯ ಸ್ನೇಹಿತರನ್ನು ಮಾಡಿಕೊಳ್ಳಬೇಕು. ಯಾರಿಗೆ ಸ್ನೇಹಿತರೇ ಇಲ್ಲವೋ ಅಂಥವನು ಯಾರೂ ಕಷ್ಟದಿಂದ ಪಾರಾಗಲಾರನು.

ಒಳ್ಳೆಯ ತಿಳುವಳಿಕೆ, ಬುದ್ಧಿವಂತಿಕೆ, ಸಮಯೋಚಿತ ಪ್ರಜ್ಞೆ, ಮೂರ್ಖತನದ ಪರಮಾವಧಿ ಅದರ ಪರಿಣಾಮ ಸಹವಾಸ ದೋಷದಿಂದುಂಟಾಗುವ ಅನಾಹುತಗಳು, ಬುದ್ಧಿಯ ವಿಪತ್ತುಗಳು, ಐಶ್ವರ್ಯದ ಮದದಿಂದ ವ್ಯವಹರಿಸಿದುದರ ಪರಿಣಾಮ, ಕಾರ್ಯಸಾಧನೆಯಲ್ಲಿ ಸಮಯ ಕಾಯಬೇಕು ಇತ್ಯಾದಿ ಅನೇಕ ಜಾಗೃತ ಅಂಶಗಳನ್ನು ಬಹಳ ವ್ಯವಸ್ಥಿತವಾಗಿ, ಮನೋವೈಜ್ಞಾನಿಕ ಹಾಗೂ ಅರ್ಥಪೂರ್ಣವಾಗಿ ಪಂಚತಂತ್ರ ಕಥೆಗಳಲ್ಲಿ ಅಡಕಗೊಳಿಸಲಾಗಿದೆ. ಅಂದಿಗೂ, ಇಂದಿಗೂ, ಎಂದೆಂದಿಗೂ ಬಹಳ ಸೂಕ್ತವಾದ ನೀತಿಪಾಠ ಇದರಲ್ಲಿ ಅಡಗಿದೆ. ಮಧ್ಯೆ ಮಧ್ಯೆ ಅನೇಕ ಉತ್ತಮ ವಿಚಾರ ಪ್ರಚೋದಕ ಪ್ರಶ್ನೆಗಳನ್ನು ಕೇಳಿ, ಆಲೋಚನೆಗೆ ಅವಕಾಶ ಮಾಡಿಕೊಡುವ ಕ್ರಮ ಶೈಕ್ಷಣಿಕ ಮನೋವಿಜ್ಞಾನದಲ್ಲಿ ಕಂಡುಬರುವ ಕ್ರಮವಾಗಿದೆ. ಇದರಿಂದ ವ್ಯಕ್ತಿಯ ವೈಯುಕ್ತಿಕ ಮೌಲ್ಯಮಾಪನ, ದೋಷಗಳನ್ನು ಪತ್ತೆಹಚ್ಚುವಿಕೆ, ಅವುಗಳನ್ನು ಸರಿಪಡಿಸುವಿಕೆ , ಉತ್ತಮ ಅಭಿಪ್ರಾಯಗಳಿಗೆ ಉನ್ನತ ಆಲೋಚನೆಗೆ ಪುರಸ್ಕಾರ – ಇದು ನಿಜಕ್ಕೂ ಒಂದು ವಿಶಿಷ್ಟ ಮಾದರಿಯ ಸರಳ ಹಾಗೂ ಪರಿಣಾಮಕಾರಿ ಬೋಧನಾ ಕ್ರಮವಾಗಿದೆ. ಸೂಕ್ತ ಕಥಾಪ್ರಸಂಗಗಳಲ್ಲಿ ಅನೇಕತೆಗಳಲ್ಲಿ ಏಕತೆಯಿಂದ ಕೂಡಿರುವ ಬದುಕಿನ ಮಂತ್ರಗಳನ್ನು ಪಂಚತಂತ್ರ ಕೃತಿರತ್ನದ ಮೂಲಕ ನೀತಿ ಶಿಕ್ಷಣ ಮತ್ತು ವ್ಯಕ್ತಿತ್ವ ನಿರ್ಮಾಣ ಕುಶಲತೆಯನ್ನು ಸಮರ್ಥವಾಗಿ ಪ್ರತಿಬಿಂಬಿಸಲಾಗಿದೆ. ಬಡತನಕ್ಕೆ ಸ್ನೇಹಿತರು ಸಿಗುವುದೂ ದುರ್ಲಭ ಎಂದು ಒಂದು ಶ್ಲೋಕವು ಒಳ್ಳೆಯ ತಿಳುವಳಿಕೆಯನ್ನು ಸರಳ ಉದಾಹರಣೆ ಮೂಲಕ ಮೂಡಿಸುತ್ತದೆ.

वनानि दहतो वह्नेः सखी भवति मारुतः ।

स एव दीपनाशाय कृशे कस्यास्ति सौहृदम् ॥[56]

ಅಂದರೆ, ಕಾಡುಗಳನ್ನು ದಹಿಸುವ ಕಿಚ್ಚಿಗೆ ಗಾಳಿಯು ಸ್ನೇಹಿತನಾಗುತ್ತಾನೆ. ಆ ಗಾಳಿಯೇ ದೀಪವನ್ನಾರಿಸುತ್ತಾನೆ. ಬಡವರಲ್ಲಿ ಯಾರಿಗೆ ತಾನೇ ಸ್ನೇಹವಿರುತ್ತದೆ? ಬಡತನದ ಪರಿಣಾಮಗಳನ್ನು ಅನುಭವಿಸುವುದು ಬಹಳ ಕಷ್ಟ.



56. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಾಕೋಲೂಕೀಯ, ಶ್ಲೋ-58,ಪು-460, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

## ಅಧ್ಯಾಯ – 7–

# ಜೀವನ ಶಿಕ್ಷಣ

## 7–1– ಜೀವನ–ಶಿಕ್ಷಣ–ಉತ್ತಮ ಬದುಕಿಗೆ ಬೇಕಾದ ನೀತಿಬೋಧೆಗಳು

ಹಿಂದಿನ ಕಾಲದಲ್ಲಿ ಪ್ರಚಲಿತದಲ್ಲಿದ್ದ ಗುರುಕುಲ ಮಾದರಿಯ ಪಾಠಶಾಲೆಗಳು ಕೇವಲ ಬೌದ್ಧಿಕ ಜ್ಞಾನಾರ್ಜನೆ ಕೇಂದ್ರವಾಗಿರದೆ, ಸಂಸ್ಕಾರ, ಮೌಲ್ಯಾಧಾರಿತ ಕೌಶಲವನ್ನೊದಗಿಸುವ ಜೀವನ ಕೌಶಲವನ್ನು ಕಲಿಸಿ ಆರೋಗ್ಯಕರ ಜೀವನಕ್ಕೆ ಸನ್ನದ್ಧಗೊಳಿಸುವ ಕೇಂದ್ರವೂ ಆಗಿ ಕಾರ್ಯ ನಿರ್ವಹಿಸುತ್ತಿದ್ದವು. ಅಂತಹ ಶಿಕ್ಷಣ ಕ್ರಮದಲ್ಲಿ ವಿದ್ಯಾರ್ಥಿಯ ಮಾನಸಿಕ, ದೈಹಿಕ, ಸಾಮಾಜಿಕ, ಆರ್ಥಿಕ, ಪ್ರಾಪಂಚಿಕ ಮತ್ತು ಬೌದ್ಧಿಕ ಸಾಮರ್ಥ್ಯವನ್ನು ವಿಕಾಸಗೊಳಿಸುವ ಕಾಯಕವು ನಡೆಯುತ್ತಿತ್ತು. ಆದರೆ ಆಧುನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಜೀವನ ಕಲಿಕೆಗೆ ಸ್ಥಾನವೇ ಇಲ್ಲವಾಗಿದೆ. ಶಿಕ್ಷಣ ಕೇವಲ ವ್ಯಾವಹಾರಿಕವಾಗಿ ನಡೆಯುವ ಪ್ರಕ್ರಿಯೆಯಾಗಿ ಬದಲಾಗಿದೆ. ಗುಣಾತ್ಮಕ ಶಿಕ್ಷಣವನ್ನೊದಗಿಸುವುದು ಶಾಲೆಗಳ ಅಥವಾ ಶೈಕ್ಷಣಿಕ ಕೇಂದ್ರಗಳ ಮುಖ್ಯ ಉದ್ದೇಶವು ನಿಜವಾಗಿದ್ದರೂ, ಗುಣಾತ್ಮಕ ಶಿಕ್ಷಣವೆಂದರೆ ಕೇವಲ ಶಾಲಾ ಹೊರಾಂಗಣ ಮತ್ತು ಒಳಾಂಗಣ ಸೌಲಭ್ಯವಷ್ಟೇ ಆಗಿರದೆ, ಜೀವನ ಮೌಲ್ಯವನ್ನು ಬಳಸಿ ಮಗುವನ್ನು ಪರಿಪೂರ್ಣ ವ್ಯಕ್ತಿಯನ್ನಾಗಿ ಸಮಾಜಕ್ಕೆ ಪರಿಚಯಿಸುವ ಪರಿಕಲ್ಪನೆಯಾಗಿದೆ. ಇದರ ಪರಿಕಲ್ಪನೆಯನ್ನು ವಿಷ್ಣುಶರ್ಮರ ಪಂಚತಂತ್ರದ ಕಾಲದಲ್ಲೇ ಕಾಣುತ್ತೇವೆ. ಇತ್ತೀಚಿನ ದಿನಗಳಲ್ಲಿ ಇದರ ಮಹತ್ವ ತಿಳಿದು, 2020ರ ಹೊಸ ಶಿಕ್ಷಣ ನೀತಿಯಲ್ಲಿ, ಈ ಪರಿಕಲ್ಪನೆಗೆ ವಿಶೇಷ ಒತ್ತನ್ನು ನೀಡಿ, ನಮ್ಮ ಕೇಂದ್ರ ಸರ್ಕಾರ ಜಾರಿಗೆ ತಂದಿರುವುದು ತುಂಬಾ ಹೆಮ್ಮೆಯ ವಿಷಯವಾಗಿದೆ. ಕೇವಲ ವಿದ್ಯೆಯಷ್ಟೇ ನಮ್ಮನ್ನು ಯಶಸ್ಸಿನೆಡೆಗೆ ಕರೆದೊಯ್ಯುವುದೆಂಬುದು ಸರಿಯಲ್ಲ. ಜೀವನ ಕೌಶಲಗಳು, ಜೀವನ ಮೌಲ್ಯಗಳು ಪ್ರತಿಯೊಬ್ಬ ವ್ಯಕ್ತಿಯ ಬದುಕಿನ ಅಂಗವಾದರೆ ಮಾತ್ರ ಆತ ಆರೋಗ್ಯಕರ ವ್ಯಕ್ತಿತ್ವವನ್ನೊಳಗೊಂಡು ಆರೋಗ್ಯಕರ ಸಮಾಜದ ನಿರ್ಮಾಣಕ್ಕೆ ಕಾರಣನಾಗುತ್ತಾನೆ ಮತ್ತು ತನ್ನ ಜೀವನದಲ್ಲೂ ಯಶಸ್ಸನ್ನು ಪಡೆಯುತ್ತಾನೆ. ಬದುಕಿನ ವ್ಯವಹಾರ ಚಾತುರ್ಯ ಹೇಗಿರಬೇಕೆಂದು ಇಲ್ಲಿ ಕವಿ ತಿಳಿಸಿದ್ದಾನೆ :–

दाक्षिण्यं स्वजने दया परजने शाठ्यं सदा दुर्जने
प्रीतिः साधुजने नयो नृपजने विद्वज्जने चार्जवम् ।
शौर्यं शत्रुजने क्षमा गुरुजने कान्ताजने धूर्तता
ये चैवं पुरुषाः कलासु कुशलास्तेष्वेव लोकस्थितिः ॥[1]

ಅಂದರೆ, ತಮ್ಮವರಲ್ಲಿ ಔದಾರ್ಯ, ಸೇವಕರಲ್ಲಿ ಕರುಣೆ, ದುರ್ಜನರಲ್ಲಿ ಒರಟುತನ, ಸಜ್ಜನರಲ್ಲಿ ಪ್ರೀತಿ,

---

1. **ಭರ್ತೃಹರಿಯ ನೀತಿಶತಕ ವಿದ್ವತ್ ಪದ್ಧತಿ** –ಶ್ಲೋ–22

ಅರಸರಲ್ಲಿ ನಯದಿಂದ ಕೂಡಿದ ವ್ಯವಹಾರ, ವಿದ್ವಾಂಸರಲ್ಲಿ ಕಲಿಯುವ ಮನೋಭಾವ, ಶತ್ರುಗಳಲ್ಲಿ ಶೂರತನ, ಹಿರಿಯರಲ್ಲಿ ಕ್ಷಮೆ, ಸ್ತ್ರೀಯರಲ್ಲಿ ದಿಟ್ಟತನಗಳು ವ್ಯವಹಾರ ಚತುರರಾದ ಕುಶಲರಾದವರಲ್ಲಿ ಸಹಜವಾಗಿಯೇ ಇರುತ್ತದೆ. ಇಂತಹವರು ಜೀವನದಲ್ಲಿ ಯಶಸ್ಸನ್ನು ಕಾಣುತ್ತಾರೆ. ಇದೇ ರೀತಿಯ ವ್ಯವಹಾರ ಚಾತುರ್ಯವನ್ನು ವಿಷ್ಣುಶರ್ಮರು ಪಂಚತಂತ್ರಗಳ ಮೂಲಕ ರಾಜನೀತಿ ಶಿಕ್ಷಣವನ್ನು ಹಾಗೂ ಬದುಕಿನ ನೀತಿಶಿಕ್ಷಣವನ್ನು ಮಂದಮತಿಗಳಾದ ಅರಸುಕುಮಾರರಿಗೆ ಒದಗಿಸಿಕೊಟ್ಟಿರುತ್ತಾರೆ. ಕೇವಲ ಪುಸ್ತಕ ಜ್ಞಾನವಿದ್ದರೆ ಮಾತ್ರ ಸಾಲದು. ಮಕ್ಕಳಿಗೆ ಒಳ್ಳೆಯಸಂಸ್ಕಾರ, ಸಂಸ್ಕೃತಿ ಆಧಾರಿತ ಜೀವನ ಶಿಕ್ಷಣ ದೊರಕಬೇಕು. ಸ್ವಾಮಿ ವಿವೇಕಾನಂದರ ಮಾತಿನಂತೆ ನಮ್ಮಲ್ಲಿ ಸುಪ್ತವಾಗಿರುವ ಪ್ರತಿಭೆಯನ್ನು ಪ್ರಕಾಶಕ್ಕೆ ತರುವ, ಗುಣ – ನಡತೆಗಳ ವಿಕಾಸಕ್ಕೆ ನೆರವಾಗುವ ಶಿಕ್ಷಣವೇ ನಿಜವಾದ ಶಿಕ್ಷಣ. ಕಲಿತದ್ದು ಸುಮ್ಮನೆ ಮನಸ್ಸಿನಲ್ಲಿ ಸಂಗ್ರಹವಾದರೆ ಶಿಕ್ಷಣದ ಗುರಿ ಈಡೇರುವಂತಿಲ್ಲ. ಅದು ಜೀವನದ ಮೇಲೆ ಪ್ರಭಾವ ಬೀರಬೇಕು. ಆ ಕಾರ್ಯ ಬಹುಮಟ್ಟಿಗೆ ಬೋಧಿಸುವ, ಕಲಿಯುವ ಕ್ರಮಗಳನ್ನೇ ಅನುಸರಿಸಿರುತ್ತದೆ. ಬೋಧಕರು ಈ ಕ್ರಮವನ್ನು ಪಾಲಿಸುವುದರಿಂದ ಆ ಕಾರ್ಯ ಸ್ವಲ್ಪ ಮಟ್ಟಿಗೆ ಯಶಸ್ವಿಯಾಗುತ್ತದೆ. ಅದೇ ರೀತಿ ಮಕ್ಕಳೂ ಕಲಿಯುವಾಗ ಒಳ್ಳೆಯ ಅಧ್ಯಯನ ಕ್ರಮವನ್ನು ಅನುಸರಿಸಬೇಕು. ಯಾವುದನ್ನೇ ಕಲಿತರೂ ಮನಃಪೂರ್ವಕವಾಗಿ ಆ ಕಾರ್ಯ ಮಾಡಬೇಕು. ಅದರಿಂದ ಅವರ ಪ್ರೇರಕಶಕ್ತಿ ಆ ಕಡೆ ವಿನಿಯೋಗವಾಗುತ್ತದೆ. ನಿಯಮ, ಸೂತ್ರ, ಸನ್ನಿವೇಶ ಮುಂತಾದವುಗಳ ಅರ್ಥವನ್ನು ಮನದಟ್ಟು ಮಾಡಿಕೊಳ್ಳಬೇಕು. ಅರ್ಥವಿಲ್ಲದ ಸಂಕೇತಗಳಾದರೆ ತಮ್ಮದೇ ಆದ ಅರ್ಥ ಕಲ್ಪಿಸಿಕೊಳ್ಳಬಹುದು. ಕಲಿವು ಕಾರ್ಯಪ್ರದವೂ, ಜೀವನಕ್ಕೆ ಅನ್ವಯಿಸುವಂಥದೂ ಆದ ಸನ್ನಿವೇಶದಲ್ಲಿ ಸಾಗಬೇಕು. ಆಗ ಕಲಿತ ಜ್ಞಾನದ ಬಳಕೆಯನ್ನು ಪ್ರಾಯೋಗಿಕವಾಗಿ ಪರಿಶೀಲಿಸಬಹುದು. ಒಟ್ಟಿನಲ್ಲಿ ಉಪಾಧ್ಯಾಯರ ಬೋಧನೆ ಮತ್ತು ಶಿಷ್ಯರ ಕಲಿವು ಇವೆರಡೂ ಕಲಿತದ್ದು ಜೀವನದಲ್ಲಿ ಪರಿಣಾಮಕಾರಿಯಾಗುವಂಥ ಶಾಸ್ತ್ರೀಯ ರೀತಿಯಲ್ಲಿ ನಡೆಯುವುದು ಅಗತ್ಯ. ಆಗ ಮಾತ್ರ ಪಡೆದ ಶಿಕ್ಷಣ ಜೀವನದಲ್ಲಿ ನಿಜವಾದ ಪ್ರಭಾವವನ್ನು ಬೀರುತ್ತದೆ.[2]

यथा कूर्मः स्वतनयान् ध्यानमात्रेण पोषयेत् ।

वेधदीक्षोपदेशश्च मानसः स्यात् तथाविधः ।।[3]

ಅಂದರೆ ಗುರುಗಳ ಸಂಕಲ್ಪಮಾತ್ರದಿಂದಲೇ ಅನುಗ್ರಹ ಅಥವಾ ಕೃಪಾದೀಕ್ಷೆ ಶಿಷ್ಯನಿಗೆ ಪ್ರಾಪ್ತವಾಗುತ್ತದೆ. ಯಾವ ರೀತಿ ಆಮೆಯು ಕೇವಲ ಮನಸ್ಸಿನಿಂದ ಚಿಂತನೆ ಮಾಡಿ ಭೂಮಿಯ ಕೆಳಗಿಟ್ಟಿರುವ ಮೊಟ್ಟೆಗಳಿಗೆ ಕಾವು ಕೊಡುತ್ತದೆ, ಮರಿಗಳನ್ನು ಬೆಳೆಸುತ್ತದೆ ಮತ್ತು ಅವುಗಳ ಪೋಷಣೆ ಮಾಡುತ್ತದೆಯೋ

2. **ವೀರಪ್ಪ.ಎನ್ ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–12, ಪು –229.(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

3. **ಕುಲಾರ್ಣವ ತಂತ್ರ,** ಉಲ್ಲಾಸ–14, ಶ್ಲೋ–37.

ಹಾಗೆಯೇ ಗುರುಗಳು ಸಂಕಲ್ಪಮಾತ್ರದಿಂದ ಶಿಷ್ಯನ ಶಕ್ತಿಯನ್ನು ಜಾಗೃತಗೊಳಸುತ್ತಾರೆ ಮತ್ತು ಅವನಲ್ಲಿ ಶಕ್ತಿಯ ಸಂಚಾರ ಮಾಡುತ್ತಾರೆ. ಇದೇ ಸಂಕಲ್ಪವನ್ನು ಮಾಡಿದ ವಿಷ್ಣುಶರ್ಮರು ಸರಸ್ವತಿಯ ಸೇವೆಯೆಂದು, ಅರಸುಕುಮಾರರಿಗೆ ನೀತಿಶಿಕ್ಷಣವನ್ನು ಅನುಗ್ರಹಿಸಿದ್ದಾರೆ.

काकचेष्टा वकोध्यानं श्वाननिद्रा तथैवच।

अल्पाहारी गृहत्यागी विद्यार्थी पञ्चलक्षणम् ॥[4]

ಎನ್ನುತ್ತದೆ ಒಂದು ಸಂಸ್ಕೃತ ಶ್ಲೋಕ. ಅಂದರೆ, ಒಬ್ಬ ವಿದ್ಯಾರ್ಥಿಯು ಕಾಗೆಯಂತೆ ಚುರುಕಾಗಿ, ಬಕದಂತೆ ತನ್ಮಯನಾಗಿ, ನಾಯಿಯಂತೆ ನಿದ್ದೆ ಮಾಡಿ, ಕಡಿಮೆ ಉಂಡು, ಮನೆಯ ಎಲ್ಲಾ ಸುಖಗಳನ್ನೂ ತ್ಯಾಗಮಾಡಿ ಅಧ್ಯಯನದ ಸಾಧನೆಯನ್ನು ಮಾಡಬೇಕಾಗುತ್ತದೆ. ಯಾವ ಪ್ರಮಾದಗಳೊಳಗೆ ಸಿಲುಕದೆ, ಯಾರೊಂದಿಗೂ ಹೆಚ್ಚು ಮಾತನಾಡದೆ ಎಲ್ಲರ ಮಾತುಗಳಿಗೂ ಕಿವಿ ಕೊಟ್ಟು, ಎಲ್ಲ ಅನುಭವಗಳಿಗೂ ಮನಸ್ಸು ತೆರೆದಿಟ್ಟು ಜ್ಞಾನಾರ್ಜನೆಯನ್ನೇ ಬದುಕನ್ನಾಗಿಸಿಕೊಳ್ಳಬೇಕಾಗುತ್ತದೆ. ನಮ್ಮ ಬದುಕು ಎಂಬುದು ಆಕಸ್ಮಿಕಗಳ ಅಪೂರ್ವ ಕೊಡುಗೆ. ಯೌವನ ಎನ್ನುವುದು ಬಾಲ್ಯವೃದ್ಧಾಪ್ಯಗಳ ನಡುವೆ ಸಿಕ್ಕಿದ ಅತ್ಯಮೂಲ್ಯ ಕಾಲನಿಧಿ. ಹೀಗಿರುವುದರಿಂದ ಈ ಬದುಕಿನ ಪ್ರತಿಕ್ಷಣವನ್ನೂ ಸಾಧನೆಯ ಸಾಮರ್ಥ್ಯಕ್ಕಾಗಿ ಬಳಸಿಕೊಳ್ಳಬೇಕು.

ಚಿಕ್ಕಂದಿನಲ್ಲಿ ಉತ್ತಮ ಅಭ್ಯಾಸಗಳು, ದೃಷ್ಟಿಧ್ಯೇಯಗಳು ಮತ್ತು ಭಾವನೆಗಳು, ಆಲೋಚನೆಗಳು, ವರ್ತನೆಗಳು – ಇವೆಲ್ಲ ರೂಪುಗೊಳ್ಳಬೇಕು. ಆ ಸಮಯಕ್ಕೆ ಅದು ಉಚಿತವಾದದ್ದು. ಹಾಗಾದರೆ ಮಾತ್ರ ಮುಂದೆ ಅವುಗಳು ತಮ್ಮ ಪ್ರಭಾವವನ್ನು ಪೂರ್ಣವಾಗಿ ಜೀವನದ ಮೇಲೆ ಬೀರುತ್ತವೆ. ಒಳ್ಳೆಯ ಅಭ್ಯಾಸಗಳನ್ನು ಧೃಡಪಡಿಸಿಕೊಂಡ ಮೇಲೆ ಆಗಾಗ್ಗೆ ಅವನ್ನು ಪುನರಾವರ್ತನೆ ಮಾಡಿಕೊಳ್ಳುವ ಅಭ್ಯಾಸವನ್ನಿಟ್ಟುಕೊಳ್ಳಬೇಕು. ಕೆಟ್ಟ ಅಭ್ಯಾಸಗಳನ್ನು ಕಲಿತಿದ್ದರೆ ಅವುಗಳ ಪುನರಾವರ್ತನೆ ಆಗದಂತೆ ಎಚ್ಚರ ವಹಿಸಲು ಮಾರ್ಗದರ್ಶನ ನೀಡಬೇಕು.[5] ಇದೇ ಜೀವನ ಶಿಕ್ಷಣ ಇದು ಬಾಲ್ಯದಿಂದ ಅಂತ್ಯದವರೆಗೂ ನಿರಂತರವಾಗಿ ಸಾಗುವಂಥದ್ದು. ಇದು ಬೋಧಕರ ಜವಾಬ್ದಾರಿಯಾಗಿರುತ್ತದೆ.

ಈ ಜವಾಬ್ದಾರಿಯನ್ನು ವಿಷ್ಣುಶರ್ಮರು ಬಹಳ ಪರಿಣಾಮಕಾರಿಯಾಗಿ ನಿರ್ವಹಿಸಿದ್ದಾರೆ. ರಾಜನ ಪುತ್ರರೂ ಸಹ ಒಳ್ಳೆಯ ಅಧ್ಯಯನ ಕ್ರಮವನ್ನು ಅನುಸರಿಸಿದ್ದರಿಂದಲೇ ಕೇವಲ ಆರು ತಿಂಗಳಲ್ಲಿ ನೀತಿಶಾಸ್ತ್ರ ನಿಪುಣರೂ ಬದುಕಿನಲ್ಲಿ ಚತುರರೂ ಆದರು. ಗುರುಗಳಾದ ವಿಷ್ಣುಶರ್ಮರೂ ಬಹಳ ಚಾಣಾಕ್ಷತೆಯಿಂದ

---

**4. ಸಂಸ್ಕೃತದ ಒಂದು ಆರ್ಷ ಶ್ಲೋಕ.**

**5. ವೀರಪ್ಪ ಎನ್. ಎಸ್.,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–11, ಪು–197. (1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

ಅವರಿಗೊಪ್ಪುವ ಶಿಕ್ಷಣವನ್ನು, ಜೊತೆ ಜೊತೆಯಲ್ಲಿ ಜೀವನ ಶಿಕ್ಷಣವನ್ನು ಕ್ರಮಬದ್ಧವಾಗಿ ಒದಗಿಸಿ ಕೊಟ್ಟರು. ಹಾಗೂ ಕಲಿಯುವಿಕೆಯಲ್ಲಿ ರಾಜಕುವರರಿಗೆ ಒಳ್ಳೆಯ ಪ್ರೀತಿಯನ್ನುಟುಮಾಡಿ ಪ್ರೇರೇಪಿಸಿದರು.

ಯುವಕರ ಮನಸ್ಸಿನಲ್ಲಿ ಮುಂದಿನ ತಮ್ಮ ಜೀವನೋಪಾಯದ ದೃಷ್ಟಿಯೂ ಇರುತ್ತದೆ. ಅವರು ಸ್ವತಂತ್ರವಾಗಿ ಅತಿ ಬೇಗ ಜೀವನ ಆರಂಭಿಸಬೇಕಾಗಿರುವುದರಿಂದ ಅದಕ್ಕನುಕೂಲಿಸುವ ಶಿಕ್ಷಣವೂ ಈ ಕಾಲದಲ್ಲಿ ನಡೆಯಬೇಕು. ಅವರ ಆಸಕ್ತಿಗಳನ್ನರಿತು ಅವರಿಗೊಪ್ಪುವ ಶಿಕ್ಷಣವನ್ನು ಕೊಡುವುದು ಉತ್ತಮ.[6]

ಮನೋಭಾವಗಳು ಜೀವನದಂತೆ ಕಲಿವಿನ ಮೇಲೂ ಪರಿಣಾಮ ಬೀರುವುದರಿಂದ ವ್ಯಕ್ತಿಯ ಮತ್ತು ಸಮಾಜದ ಹಿತದೃಷ್ಟಿಯಿಂದ ಉಚಿತವೆನಿಸುವ ಮನೋಭಾವಗಳನ್ನು ಬಾಲ್ಯದಿಂದಲೂ ಮಕ್ಕಳಲ್ಲಿ ಆರಂಭಿಸಿ ಬೆಳೆಸಬೇಕು. ಅವು ಅವರ ಮುಂದಿನ ಜೀವನಕ್ಕೆ ಮಾರ್ಗದರ್ಶಿಯಾಗಿ ಕೆಲಸ ಮಾಡುವುದಲ್ಲದೆ, ಆ ಆದರ್ಶಗಳ ಮುಂದಿನಲ್ಲಿ ನಡೆಯುವುದು ಒಂದು ನಿರಂತನ ಉತ್ಸಾಹವೆನಿಸುತ್ತದೆ. ಅದು ಕಲಿವಿಗೂ ಒಂದು ಪ್ರಚೋದನ ರೀತಿಯ ಫಲಪರಿಣಾಮವಾಗಿ ಕೆಲಸ ಮಾಡುತ್ತದೆ. ಮಕ್ಕಳು ಸತ್ಪೌರರಾಗುವಂತೆ, ಸದ್ವ್ಯಕ್ತಿಗಳಾಗುವಂತೆ, ಸಜ್ಜನರಾಗುವಂತೆ ಮಾಡುವ ಕಾರ್ಯದಲ್ಲಿ ಅವರ ಗುಣಶೀಲಗಳ ನಿರೂಪಣೆ ಬಹು ಮುಖ್ಯವಾದದ್ದು.

वह्निस्तस्य जलायते जलनिधिः कुल्यायते तत्क्षणात्

मेरुः स्वल्पशिलायते मृगपतिः सद्यः कुरङ्गायते ।

व्यालो माल्यगुणायते विषरसः पीयूषवर्षायते

यस्याङ्गेऽखिललोकवल्लभतमं शीलं समुन्मीलति ॥[7]

ಅಂದರೆ, ಯಾವನ ಶರೀರದಲ್ಲಿ ಸಮಸ್ತಲೋಕಗಳಿಗೂ ಅತ್ಯಂತ ಪ್ರಿಯವಾದ ಶೀಲವು ಬೆಳಗುತ್ತದೋ, ಅವನಿಗೆ ಬೆಂಕಿಯು ನೀರಿನಂತೆ ತಣ್ಣಗಾಗುತ್ತದೆ, ಸಮುದ್ರವು ಒಂದೇ ಕ್ಷಣದಲ್ಲಿ ಸಣ್ಣ ತೊರೆಯಂತಾಗುತ್ತದೆ, ಮೇರುಪರ್ವತವು ಸುಣ್ಣಕಲ್ಲಿನಂತಾಗುತ್ತದೆ, ಸಿಂಹವು ಕೂಡಲೇ ಜಿಂಕೆಯಂತೆ ಸಾಧುವಾಗುತ್ತದೆ, ಹಾವೂ ಹೂಮಾಲೆಯಂತಾಗುತ್ತದೆ, ವಿಷವೂ ಅಮೃತಧಾರೆಯಂತಾಗುತ್ತದೆ. ಇಲ್ಲಿ ಗುಣಶೀಲಗಳ ಶಕ್ತಿಯನ್ನು ವರ್ಣಿಸಲಾಗಿದೆ. ಅದು ಜೀವನದಲ್ಲಿ ಸಿದ್ಧಿಸಬೇಕು. ಹಾಗೂ ಅವರ ಬಾಲ್ಯದ

---

6. **ವೀರಪ್ಪ. ಎನ್ ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-8, ಪು-150.(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4
7. **ಭರ್ತೃಹರಿಯ ನೀತಿಶತಕ,** ಶೇಷ ಭಾಗ-ಶ್ಲೋ-109.

ಶಾಲಾ ಜೀವನದಲ್ಲಿ ಅದಕ್ಕೆ ಶಾಸ್ತ್ರೀಯ ತಳಹದಿಯನ್ನು ಹಾಕಿಕೊಡಬೇಕು. ಇಲ್ಲಿ ಗುರುಗಳ ಪಾತ್ರ ಬಹಳ ಮಹತ್ವಪೂರ್ಣವಾಗಿರುತ್ತದೆ. ಭಾರತೀಯ ಪರಂಪರೆಯಲ್ಲಿ ಅನಾದಿಕಾಲದಿಂದಲೂ ಗುರುವಿನ ಮಹತ್ವವನ್ನು ಸಾರುತ್ತಾ, ಆದಿಶಂಕರರು ಹೀಗೆ ಹೇಳಿದ್ದಾರೆ:-

शरीरं सुरूपं तथा वा कलत्रं यशश्चारुचित्रं धनं मेरुतुल्यम् ।

मनश्चेन लग्नं गुरोरङ्घ्रिपद्मे ततः किं ततः किं ततः किं ततः किम् ॥[8]

ನಮಗೆ ಸುಂದರವಾದ ಶರೀರ, ಅಪಾರವಾದ ಅಂತಸ್ತು, ಕೀರ್ತಿ, ಸಂಸಾರ ಎಲ್ಲವೂ ಇದ್ದರೂ ಗುರುವಿನ ಚರಣಗಳಲ್ಲಿ ಭಕ್ತಿ ಶ್ರದ್ಧೆ ಇಲ್ಲದವನಿಗೆ ಮೋಕ್ಷವಿಲ್ಲ. ಅಂದರೆ, ಗುರುವಿಗಿಂತ ಮೀರಿದ ತತ್ವ, ತಪಸ್ಸು ಬೇರೆ ಯಾವುದೂ ಇಲ್ಲ. ಜ್ಞಾನದ ದಾರಿದೀಪವನ್ನು ತೋರುವವನಾದ ಶ್ರೀ ಗುರುವೇ ನಿನಗೆ ವಂದನೆಗಳು. ಗುರುವಿನ ಕರುಣೆಯಿಲ್ಲದೆ ಎಲ್ಲವೂ ವ್ಯರ್ಥ ಎಂದು ತಿಳಿಸುತ್ತಾ ಪ್ರತಿಯೊಂದು ಶ್ಲೋಕದ ಕೊನೆಗೂ मनश्चेन लग्नं गुरोरन्घ्रिपद्मे । ततःकिं ततःकिं ततःकिं ततःकिम् ॥ ಎಂಬ ಮಾತನ್ನು ಪದೇಪದೇ ಪುನಶ್ಚರಣ ಮಾಡುತ್ತಾ ಗುರುವಿನ ಪಾದಗಳಲ್ಲಿ ಮನಸ್ಸನ್ನು ನಿಲ್ಲಿಸದಿದ್ದರೆ ನಮ್ಮ ಸಾಧನೆ ಕಷ್ಟಸಾಧ್ಯ ಎನ್ನುತ್ತಾ ಗುರುವಿನ ಮಹತ್ವವನ್ನು ವಿವರಿಸುತ್ತಾರೆ.

ಈ ಭಾರವನ್ನು ಹೊತ್ತಿರುವವರು ಅವರಿಗೆ ದೊರೆತ ಗುರುಗಳು-ವಿವಿಧ ಮನೋಭಾವಗಳನ್ನೂ, ಅವು ವ್ಯಕ್ತಿಯ ಶಿಕ್ಷಣ ಮತ್ತು ಜೀವನಗಳಲ್ಲಿ ಬೀರುವ ಪರಿಣಾಮವನ್ನೂ ಚೆನ್ನಾಗಿ ಅರಿತಿರಬೇಕು.[9] ಇಲ್ಲಿ ಉಪಾಧ್ಯಾಯರ ಹೊಣೆಗಾರಿಕೆಯನ್ನು ಹೀಗೆ ಪಟ್ಟಿಮಾಡಬಹುದು:-

1. ಬೋಧಿಸುತ್ತಿರುವ ಪಾಠದಲ್ಲಿ ಬರುವ ನಿಯಮ, ವಿಧಿ, ವಾದ, ಸೂತ್ರ ಮುಂತಾದವುಗಳ ವ್ಯಾಪ್ತಿಯನ್ನು ವಿವರಿಸಿ, ಇತರ ಯಾವ ಯಾವ ಕ್ಷೇತ್ರಗಳಲ್ಲಿ ಅವನ್ನು ಬಳಸಬಹುದೆಂದು ಸೂಚಿಸಬೇಕು.

**2,** ಮಾಡುವ ಪಾಠದಲ್ಲಿ ಕಲಿಯುವ ಅಂಶಗಳನ್ನೇ ಅಲ್ಲದೆ ಕಲಿಯುವ ಉತ್ತಮ ಕ್ರಮವನ್ನೂ ಪ್ರಾಸಂಗಿಕವಾಗಿ ಕಲಿಯುವವರಲ್ಲಿ ಬೆಳೆಸಬೇಕು. ಅದರ ಪರಿಜ್ಞಾನವೂ ಅವರಲ್ಲಿ ಮೂಡಬೇಕು.

**3.** ಬೋಧಿಸುವ ಪಾಠದಲ್ಲಿರುವ ಹಲವಂಶಗಳು ಜೀವನದ ಇತರ ಕ್ಷೇತ್ರಗಳಿಗೆ ಹೇಗೆ ಸಂಬಂಧಿಸಿವೆ ಎಂಬ ಅಂಶವನ್ನು ವಿವರಿಸಿ, ಅಂಥ ಸಮಾನಾಂಶದ ಕ್ಷೇತ್ರಗಳಲ್ಲಿ ಅವು ಹೇಗೆ ಅಳವಟ್ಟಿವೆಯೆಂಬ ವಿಷಯವನ್ನು ವಿಶದಪಡಿಸಬೇಕು.

---

8. **ಆದಿಗುರು ಶ್ರೀ ಶಂಕರಾಚಾರ್ಯರು ರಚಿಸಿದ ಗುರ್ವಷ್ಟಕಮ್**-ಶ್ಲೋಕ-1.
9. **ವೀರಪ್ಪ ಎನ್.ಎಸ್.**, ಶಿಕ್ಷಣದಲ್ಲಿಮನೋವಿಜ್ಞಾನ, ಅ-12, ಪು-229-230.(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

4. ಬೋಧಿಸತಕ್ಕ ಸೂತ್ರ ನಿಯಮಗಳನ್ನು ಜೀವನದ ಸಮಸ್ಯೆಗಳ ಮೇಲೆ ಪ್ರಯೋಗಿಸಿ ತೋರಿಸಬೇಕು

5. ಪ್ರತಿಭಾವಂತ ವಿದ್ಯಾರ್ಥಿಗಳೇನೋ ಕಲಿತದ್ದನ್ನು ಇತರ ಕ್ಷೇತ್ರಗಳಲ್ಲಿ ಸಾಮಾನ್ಯವಾಗಿ ಪರಿಣಾಮಕಾರಿ ಆಗುವಂತೆ ಮಾಡಿಕೊಳ್ಳಬಲ್ಲರು. ಆದರೆ, ಸಾಮಾನ್ಯ ಮತ್ತು ದುರ್ಬಲ ಮನಶ್ಶಕ್ತಿಯ ಮಕ್ಕಳಿಗೆ ಅದು ಕಷ್ಟ. ಆದ್ದರಿಂದ ಕಲಿವಿನ ವ್ಯಾಪ್ತಿಯನ್ನೂ, ಪ್ರಭಾವವನ್ನೂ ಅರಿತುಕೊಳ್ಳಲು ಅವರಿಗೆ ಹೆಚ್ಚಿನ ರೀತಿಯ ಸಹಾಯವನ್ನು ನೀಡಬೇಕು.

6. ಯಾವುದನ್ನೇ ಕಲಿಯುತ್ತಿರಲಿ, ಕಲಿವು ಕೇವಲ ಅದೊಂದು ಕ್ಷೇತ್ರಕ್ಕಲ್ಲ- ಇಡೀ ಜೀವನಕ್ಕೆ ಎಂಬ ಭಾವನೆಯನ್ನು ಕಲಿಯುವವರಲ್ಲಿ ಬೆಳೆಸಬೇಕು. ಅಂದರೆ, ಬೋಧಿಸುವ ವಿಷಯದ ವೈಶಾಲ್ಯ-ವ್ಯಾಪ್ತಿಗಳನ್ನೂ, ಅರ್ಥ ವ್ಯಾಪ್ತಿಯನ್ನೂ ಸೂಚಿಸುವುದು ಮುಖ್ಯ. ಜೀವನದ ಅವಶ್ಯಕತೆಗಳ ಹಿನ್ನೆಲೆಯಲ್ಲಿ ಆ ವಿಷಯಗಳನ್ನು ಪರಿಶೀಲಿಸಬೇಕು. ಜ್ಞಾನವನ್ನು ಜೀವನದ ಬೆಳಕಿನಲ್ಲಿ ಬೋಧಿಸಬೇಕು.

ಈ ಎಲ್ಲ ಮನೋವೈಜ್ಞಾನಿಕ, ಶೈಕ್ಷಣಿಕ ಕ್ರಮಗಳನ್ನು ಪಂಡಿತ ವಿಷ್ಣುಶರ್ಮರು ಪಂಚತಂತ್ರದಲ್ಲಿ ಅಳವಡಿಸಿಕೊಂಡೇ, ರಾಜಕುಮಾರರಿಗೆ ಶಿಕ್ಷಣ ನೀಡಿದ್ದಾರೆ. ಉತ್ತಮ ಬದುಕಿನ ತಂತ್ರಗಳನ್ನು ಕಥೆಗಳ ಮಧ್ಯೆ ಮಧ್ಯೆ ತಿಳಿಸುತ್ತಾ, ಅವರ ಮುಂದಿನ ಜೀವನದ ಸಾರ್ಥಕತೆಗೆ ಅಪೇಕ್ಷಿತ ಸನ್ನಿವೇಶಗಳನ್ನು ವಿವಿಧ ದೃಷ್ಟಾಂತಗಳ ಮೂಲಕ ತಿಳಿಹಾಸ್ಯ, ವ್ಯಂಗ್ಯ, ಜಾಗೃತಿ ಹಾಗೂ ನೀತಿಬೋಧೆಯನ್ನು ಸೊಗಸಾಗಿ ಸಂಯೋಜಿಸಿ, ಒಂದು ರೀತಿಯಲ್ಲಿ ಬದುಕಿನ ಶಿಕ್ಷಣ ಅಥವಾ ಜೀವನ ಶಿಕ್ಷಣವನ್ನು ನೀಡಿದ್ದಾರೆ. ವಿದ್ಯೆಯನ್ನು ಶಿಷ್ಯರು ಹೇಗೆ ಕಲಿಯಬೇಕೆಂಬುದನ್ನು ಮಹಾಭಾರತದಲ್ಲಿ ಒಂದು ವಿಚಾರಾರ್ಹ ಶ್ಲೋಕವಿದೆ:-

आचार्यात् पादमादत्ते पादं शिष्यः स्वमेधया ।

पादं सब्रह्मचारिभ्यः पादं कालक्रमेण च ॥[10]

ಅಂದರೆ, ಶಿಷ್ಯನು ಆಚಾರ್ಯನಿಂದ ವಿದ್ಯೆಯ ಕಾಲು ಭಾಗವನ್ನು ಗ್ರಹಿಸುತ್ತಾನೆ. ಕಾಲುಭಾಗದಲ್ಲಿ ತನ್ನ ಬುದ್ಧಿಶಕ್ತಿಯಿಂದಲೂ, ಕಾಲು ಭಾಗವನ್ನು ಜೊತೆಯ ವಿದ್ಯಾರ್ಥಿಗಳಿಂದಲೂ, ಉಳಿದ ಕಾಲು ಭಾಗವನ್ನು ಕಾಲಕ್ರಮದಲ್ಲೂ ತಿಳಿದುಕೊಳ್ಳುವರು. ಎಂಬುದು ಈ ಶ್ಲೋಕದ ತಾತ್ಪರ್ಯವಾಗಿದೆ.

---

10. **ಸುಭಾಷಿತಮಂಜರೀ,** ವಿವೇಕ-ಶ್ಲೋ-18, ಪು-269(2001) ಮಹಾಭಾರತ - ಉದ್ಯೋಗ, ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18

ಶಿಕ್ಷಣ ಮಾನವನ ಪ್ರಗತಿಗೆ ಆಧಾರವಾಗಿದೆ. ಸಮಾಜ ಹಾಗೂ ವ್ಯಕ್ತಿಯ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಇದರ ಪಾತ್ರ ಮಹತ್ವದ್ದಾಗಿದೆ. ಮಾನವನ ಸಹಜ ಗುಣಗಳನ್ನು ಅಡೆತಡೆಯಿಲ್ಲದೆ ಅಭಿವೃದ್ಧಿ ಮೂಲಕ ಬೆಳೆಸುವಂತಹ ಅರ್ಥವೇ ಶಿಕ್ಷಣ. ಅಲ್ಲಿಗೆ ಶಿಕ್ಷಣವೆಂಬುದು ಮಾನವ ಸಹಜ ಸಾಮಾನ್ಯವರ್ತನೆಗಳಾದ ಕಲಿಕೆ, ಕಲೆ, ಕೌಶಲ್ಯ, ಅಭಿಪ್ರಾಯ, ನೀತಿಗಳಲ್ಲಿ ಬಯಸಿದ ಬದಲಾವಣೆಯನ್ನುತರುವ ಪ್ರಕ್ರಿಯೆಯಿಂದ ಕೂಡಿದುದಾಗಿದ್ದು, ಯುವಪೀಳಿಗೆಯು ಪ್ರಸ್ತುತ ಹಾಗೂ ಮುಂದಿನ ಜೀವನದಲ್ಲಿ ಅಪೇಕ್ಷಿತವಾದ ಸಾಧನೆಯನ್ನು ಸಾಧಿಸಲು ಸಹಾಯ ಮಾಡುವ ಒಂದು ಸುಸಜ್ಜಿತ, ಸುವ್ಯವಸ್ಥಿತ ಸಾಮಾಜಿಕ ಸಂಸ್ಥೆಯಾಗಿದೆ. ಶಿಕ್ಷಣ ಕಾರ್ಯ ಸಾಧನೆಯಲ್ಲಿ ಕೌಶಲ್ಯದ ಪಾತ್ರ ಬಹಳ ವಿಶೇಷವಾಗಿದ್ದು, ಇದು ಶಿಕ್ಷಣದ ಅವಿಭಾಜ್ಯ ಅಂಗವೇ ಆಗಿರುತ್ತದೆ. ಯಾವುದೇ ವ್ಯಕ್ತಿಯು ಸಾಧನೆಯ ಶಿಖರವನ್ನು ಏರುವುದಾದರೆ ಅದು ಕೌಶಲ್ಯಭರಿತ ಶಿಕ್ಷಣದಿಂದ ಮಾತ್ರ. ಜ್ಞಾನ, ಕೌಶಲ್ಯ, ಸೃಜನಶೀಲತೆ ಜೊತೆಗೂಡಿ ಕಾರ್ಯಪ್ರವೃತ್ತನಾದಾಗ ಮಾತ್ರ. ಕೌಶಲ್ಯದಲ್ಲಿರುವ, ಅದಮ್ಯ, ಅದ್ಭುತ ಶಕ್ತಿಯು ಎಲ್ಲರಿಗೂ ಒಲಿಯುವಂತೆ ಮಾಡುವ ಅಗೋಚರ ಬಲವಿರುವುದು ಶಿಕ್ಷಣದಲ್ಲಿಮಾತ್ರ.[11] ಇದನ್ನು ಈ ಸೂತ್ರದಲ್ಲಿಯೂ ಸೂಚಿಸಬಹುದು.[12] ಜ್ಞಾನ + ಕೌಶಲ್ಯ+ ಸೃಜನಶೀಲತೆ = ಸಾಧನೆ. ಇನ್ನು ಈ ಶಿಕ್ಷಣವನ್ನು ನೀಡುವ ಗುರುಗಳು ವ್ಯಕ್ತಿಯ ಸರ್ವತೋಮುಖ ವಿಕಾಸದಲ್ಲಿ ಬಹಳ ಮುಖ್ಯ ಪಾತ್ರ ವಹಿಸುತ್ತಾರೆ. ಅಂದರೆ:-

पात्रविशेषे न्यस्तं गुणान्तर व्रजतिं शिल्पमाधातुः ।

जलमिव समुद्रशुक्तौ मुक्ताफलतां पयोदस्य ॥ [13]

ಯೋಗ್ಯತೆಯನ್ನರಿತು ಗುರುವು ಕಲಿಸಿದ ವಿದ್ಯೆಯು ಬಹಳ ಉನ್ನತಮಟ್ಟವನ್ನೇರುತ್ತದೆ. ಮೋಡವು ಸುರಿದ ನೀರು ಕಡಲಿನ ಮುತ್ತಿನ ಚಿಪ್ಪಿನಲ್ಲಿ ಬಿದ್ದರೆ ಒಳ್ಳೆಯ ಮುತ್ತಾಗುತ್ತದೆ.

ಇತ್ತೀಚಿನ ದಿನಗಳಲ್ಲಿ ಮಕ್ಕಳಿಗೆ ಶಿಕ್ಷಣ ವ್ಯವಸ್ಥೆ ಹೇಗಿದೆಯೆಂದರೆ, ಪಠ್ಯಪುಸ್ತಕದಲ್ಲಿರುವುದನ್ನೇ ಹೇಳಿ ಹೇಳಿ ಗಿಳಿಪಾಠ ಮಾಡುವುದು. ಅಧ್ಯಯನಗಳ ಅಂಕಿ-ಸಂಖ್ಯೆಗಳ ಪ್ರಕಾರ ಸಾಕ್ಷರತೆ, ಶಾಲಾ ದಾಖಲಾತಿ ಗಣನೀಯವಾಗಿ ಹೆಚ್ಚುತ್ತಿದೆ. ಹಾಗೆಯೇ ಸ್ನಾತಕ ಸ್ನಾತಕೋತ್ತರ ಶಿಕ್ಷಣ ಪಡೆಯುವವರ ಸಂಖ್ಯೆಯೂ ಬೆಳೆಯುತ್ತಿದೆ. ವಿದೇಶಗಳಿಗೆ ಹೋಗಿ ಶಿಕ್ಷಣ ಪಡೆಯುವವರ ಸಂಖ್ಯೆಯಲ್ಲಿ ಏರುಮುಖ ಇದೆ. ಆದರೆ ಇದರ ಅರ್ಥ ನಾವು ಹೆಚ್ಚು ಆರೋಗ್ಯವಂತ ಸಮಾಜದಲ್ಲಿ ಬದುಕುತ್ತಿದ್ದೇವೆಯೇ!! ಜೀವನ

---

11. **ಶಿಕ್ಷಣ-ವಿಕಾಸ್ ಪೀಡಿಯಾ,** https://in.vikaspedia.in
12. **ಕೌಶಲ್ಯಭರಿತ ಶಿಕ್ಷಣದ ಅಗತ್ಯತೆ,** HTTPS://in.vikaspedia.in
13. **ಸುಭಾಷಿತಮಂಜರೀ,** ಸುಗುಣ – ದುರ್ಗುಣ – ಶ್ಲೋ-196, ಪು-171, ಮಾಳವಿಕಾಗ್ನಿಮಿತ್ರ, 1-6., ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18,(2001)

ನಡೆಸುತ್ತಿದ್ದೇವೆಯೇ!! ಎಂಬ ಕುತೂಹಲಕರ ಹಾಗೂ ಗಂಭೀರ ಪ್ರಶ್ನೆ ಹಾಕಿಕೊಂಡರೆ, ಸಕಾರಾತ್ಮಕ ಉತ್ತರ ಕೊಡಲು ಧೈರ್ಯ ಬಾರದಾಗಿದೆ. ಬದ್ಧತೆಯ ಪ್ರಶ್ನೆ ಯಾವುದೇ ಕ್ಷೇತ್ರದಲ್ಲೂ ನಗಣ್ಯವಾಗುತ್ತಿದೆ. ಪ್ರಾಮಾಣಿಕತೆ ಅಪರೂಪವಾಗುತ್ತಿದೆ. ಆದರೆ ಹಿಂದಿನ ಕಾಲದಲ್ಲಿ ಪಠ್ಯಪುಸ್ತಕದ ಜೊತೆಗೆ ಜೀವನ ಮೌಲ್ಯಗಳನ್ನು ಕಲಿಸುತ್ತಿದ್ದರು. ಹಿಂದೆ ಮನೆಯಲ್ಲಿ ಕಥೆ–ಪುರಾಣಗಳನ್ನು ಹೇಳುವ ಅಜ್ಜಿಯರಿರುತ್ತಿದ್ದರು. ಮಹಾಕಾವ್ಯಗಳನ್ನು ಓದುವ, ಓದಿಸುವ ಪರಿಪಾಠವಿತ್ತು. ಅಲ್ಲದೇ ಬಹುತೇಕ ಹಿರಿಯರು ಮಕ್ಕಳಿಗೆ ಮಾದರಿಯಾಗಿರುತ್ತಿದ್ದರು. ಮಕ್ಕಳ ಆಸಕ್ತಿಗನುಗುಣವಾಗಿ ವಿಷಯಗಳನ್ನು ಶಾಲೆಯಲ್ಲಿ, ಆಶ್ರಮ ಅಥವಾ ಗುರುಕುಲದಲ್ಲಿ ಕಲಿಸುತ್ತಿದ್ದರು. ನೈತಿಕ ಪಾಠ ಹೇಳುತ್ತಿದ್ದರು. ಮಹಾತ್ಮರ ಜೀವನ ಮತ್ತು ಆತ್ಮ ಚರಿತ್ರೆಯನ್ನು ಹೇಳುತ್ತಿದ್ದರು. ಅವುಗಳು ಮುಂದೆ ಆ ಮಕ್ಕಳು ತಮ್ಮ ಜೀವನದಲ್ಲಿ ಎಂಥಹ ಬದುಕನ್ನು ಸಾಗಿಸಬೇಕು ಎಂಬುದಕ್ಕೆ ಆದರ್ಶವಾಗಿರುತ್ತಿದ್ದವು ಹಾಗೂ ಮಕ್ಕಳ ಮನಸ್ಸಿನಲ್ಲಿ ಒಳ್ಳೆಯ ಆಲೋಚನೆಗಳು, ಕಲ್ಪನೆಗಳು ಮೂಡುತ್ತಿದ್ದವು. ಇದೇ ನಿಜವಾದ ಜೀವನ ಶಿಕ್ಷಣ.[14]

ಮಾನವನನ್ನು ಶಿಕ್ಷಣವು ಅರಿವಿನಿಂದ ಕೂಡಿದ ಸಹಜ ಬದುಕಿನ ಭಾಗವಾಗುವಂತೆ ಪ್ರೇರೇಪಿಸುವಂತೆ ಇರಬೇಕು. ಮಾನವನ ಜೀವನಶೈಲಿ ಅಸಹಜವಾಗಿದೆ ಎಂದುಕೊಳ್ಳೋಣ. ಈ ಮಾನವನನ್ನು ಸರಿಮಾರ್ಗಕ್ಕೆ ತರುವುದು, ಇದಕ್ಕಿರುವ ಮಾರ್ಗೋಪಾಯಗಳನ್ನು ಸೂಚಿಸುವುದು, ಮಾನವನ ಮೂಲಭೂತ ಆಕಾಂಕ್ಷೆಗಳನ್ನು ಗುರುತಿಸುವುದು, ಅವುಗಳನ್ನು ಅರಿವಿನೊಂದಿಗೆ ಪೂರೈಸಿಕೊಳ್ಳುತ್ತಿದ್ದಾನೆಯೇ ಎಂದು ಪರೀಕ್ಷಿಸುವುದು ಶಿಕ್ಷಣದ ಜವಾಬ್ದಾರಿಯಾಗಿರುತ್ತದೆ. ಈ ನಿಟ್ಟಿನಲ್ಲಿ ಶಿಕ್ಷಣದ ಮೂಲಭೂತ ದೃಷ್ಟಿಕೋನವನ್ನು ಶಿಕ್ಷಕನಾದವನು ಹೊಂದಿರುವುದು ಬಹಳ ಮುಖ್ಯ ಹಾಗೂ ಅತ್ಯಾವಶ್ಯಕ.[15] ಇಂಥಹ ದೃಷ್ಟಿಕೋನವನ್ನು ವಿಷ್ಣುಶರ್ಮರು ಹೊಂದಿದ್ದರು. ಆದ್ದರಿಂದಲೇ ಅವರು ರಚಿಸಿದ ಪಂಚತಂತ್ರ ಕಥಾ ಗುಚ್ಛದಲ್ಲಿ ಪ್ರತಿ ಕಥೆಯ ಅಂತ್ಯದಲ್ಲಿ ಒಂದು ಒಳ್ಳೆಯ ಬದುಕಿನ ನೀತಿಭೋಧೆಯನ್ನು ಸಂಯೋಜನೆ ಮಾಡಿದ್ದಾರೆ. ಅವರ ಐದು ತತ್ವಗಳು ರಾಜನ ಹಾಗೂ ಸಾಮಾನ್ಯ ವ್ಯಕ್ತಿಯ ದೈನಂದಿನ ಜೀವನಕ್ಕಾಗಿ ಮಾರ್ಗದರ್ಶಕ ತತ್ವಗಳಾಗಿವೆ.

ಒಂದು ಉತ್ಸಾಹದಿಂದ ಕೂಡಿದ ಪ್ರಯತ್ನ ನಡೆಯುವುದರ ಪರಿಣಾಮ ಏನೆಂದು ಬಹಳ ಸೊಗಸಾಗಿ ವಿಷ್ಣುಶರ್ಮರು ಪಂಚತಂತ್ರದಲ್ಲಿ ಅರಸುಕುಮಾರರಿಗೆ ತಿಳಿಹೇಳಿದ್ದಾರೆಂಬುದನ್ನು ಗಮನಿಸಬಹುದು:–

यत्रोत्साहसमारम्भो यत्रालस्यविहीनता ।

नयविक्रमसंयोगस्तत्र श्रीरचला ध्रुवम् ॥[16]

---

14. **ಶಿಕ್ಷಣದ ಸಾಮಾಜಿಕ ಜವಾಬ್ದಾರಿ,** From prajavani.net- HTTPS://www.prajavani.net
15. **ಮೌಲ್ಯವರ್ಧಿತ ಶಿಕ್ಷಣ** – ವಿಕಾಸ್ ಪಿಡಿಯ, HTTPS://in.vikaspedia.in
16. **ಸುಧಾಕರ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಂ, ದ್ವಿ.ತಂ. ಶ್ಲೋ–144– ಪು–400,(1993).ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಅಂದರೆ ಎಲ್ಲಿ ಉತ್ಸಾಹದ ಪ್ರಯತ್ನ ನಡೆಯುವುದೋ, ಎಲ್ಲಿ ಸೋಮಾರಿತನವಿರುವುದಿಲ್ಲವೋ, ಎಲ್ಲಿ ನೀತಿ – ಪರಾಕ್ರಮಗಳು ಜೊತೆಗೂಡಿರುತ್ತವೆಯೋ ಅಲ್ಲಿ ನಿಜವಾಗಿಯೂ ಸಂಪತ್ತು ಸ್ಥಿರವಾಗಿರುತ್ತದೆ. ಇಲ್ಲಿ ಎಂತಹ ಒಂದು ಬದುಕಿನ ನೀತಿ ಪಾಠವನ್ನು ಕಾಣಬಹುದು.

ಈ ಗ್ರಂಥದ ವಿಶೇಷತೆ ಏನೆಂದರೆ ಒಂದೆಡೆ ರಾಜನೀತಿ ಶಿಕ್ಷಣ ಮತ್ತೊಂದೆಡೆ ಜೀವನ ಶಿಕ್ಷಣ. ರಾಜನು ಹೇಗೆ ರಾಜ್ಯಾಡಳಿತ ನಡೆಸಬೇಕು; ಮಿತ್ರತ್ವ ಹೇಗೆ ಮತ್ತು ಯಾರ ಜೊತೆ ಬೆಳೆಸಬೇಕು; ಯಾರಲ್ಲಿ ಮೈತ್ರಿ ಬೆಳೆಸಬಾರದು; ಯೋಗ್ಯಮಂತ್ರಿಯನ್ನು ಆರಿಸುವ ಬಗೆ ಹೇಗೆ; ಮಂತ್ರಿಗಳು ವ್ಯತಿರಿಕ್ತವರ್ತನೆ ಮಾಡಿದಲ್ಲಿನ ಪರಿಣಾಮ; ಇದರ ಜೊತೆಜೊತೆಯಲ್ಲಿ ದೈನಂದಿನ ಜೀವನದಲ್ಲಿ ನಮ್ಮ ಆಚರಣೆ ಹೇಗಿರಬೇಕು; ಮುಂದಾಲೋಚನೆ, ಸಾಮಾನ್ಯ ಜ್ಞಾನ, ದುಡುಕು ಮತ್ತು ಅದರ ಪರಿಣಾಮ; ಉತ್ತಮ ಬದುಕಿಗೆ ಬೇಕಾದ ನೀತಿಬೋಧೆಗಳು; ಇದೆಲ್ಲದರ ಮಾರ್ಗದರ್ಶನವನ್ನು ಕಥೆಗಳ ಮೂಲಕ ಸರಳವಾಗಿ, ಪರಿಣಾಮಕಾರಿಯಾಗಿ ಪ್ರತಿಭಾನ್ವಿತ ಶಿಕ್ಷಕರಾದ ವಿಷ್ಣುಶರ್ಮರು ರಾಜಕುಮಾರರಿಗೆ ಬೋಧಿಸಿದ್ದಾರೆ. ಮಾನವನ ಜೀವನದಲ್ಲಿ ಉನ್ನತ ಮೌಲ್ಯಗಳನ್ನು ಪರಿಚಯಿಸಲು ಪಂಚತಂತ್ರ ಒಂದು ಉತ್ತಮ ವಿಧಾನವಾಗಿದೆ. ಇದರಲ್ಲಿನ ಸುವ್ಯವಸ್ಥಿತ ಕಥೆಗಳ ಮೂಲಕ ಮನೋವಿಜ್ಞಾನ, ವ್ಯಾವಹಾರಿಕ ಮತ್ತು ರಾಜನೀತಿಯ ಸಿದ್ಧಾಂತಗಳ ಪರಿಚಯವಾಗುತ್ತದೆ. ಸಂಸ್ಕೃತ ಕಥಾ ಸಾಹಿತ್ಯಲೋಕದ ಹೂವಿನ ತೋಟದಲ್ಲಿ ಪಂಚತಂತ್ರವು ಒಂದು ಗುಲಾಬಿ ಹೂವಿನಂತೆ ಅಲಂಕೃತವಾಗಿದ್ದು ತನ್ನ ನೀತಿ ಶಾಸ್ತ್ರದ ಕಂಪನ್ನು ಪಸರಿಸುತ್ತಿದೆ ಎಂದು ಹೇಳಬಹುದು.

निन्दन्तु नीतिनिपुणा यदि वा स्तुवन्तु

लक्ष्मीःसमाविशतु गच्छतु वा यथेष्टम् ।

अद्यैव वा मरणमस्तु युगान्तरे वा

न्याय्यात्पथः प्रविचलन्ति पदं न धीराः ॥[17]

ನೀತಿನಿಪುಣರು ನಿಂದಿಸಲಿ, ಹೊಗಳಲಿ; ಸಂಪತ್ತು ಬರಲಿ ಅಥವಾ ಹೊರಟು ಹೋಗಲಿ, ಸಾವು ಈಗಲೇ ಬರಲಿ ಅಥವಾ ಕಾಲಾಂತರದಲ್ಲಿ ಬರಲಿ ಧೀರರು ನ್ಯಾಯಮಾರ್ಗವನ್ನು ಬಿಟ್ಟು ಸ್ವಲ್ಪವೂ ಕದಲುವುದಿಲ್ಲ.

---

17. **ಭರ್ತೃಹರಿಯ ನೀತಿಶತಕ** –ಧೈರ್ಯ ಪದ್ಧತಿ– ಶ್ಲೋ–84.

ನೈತಿಕ ಎಂಬ ಪದ ವ್ಯಕ್ತಿಯ ಆಂತರಿಕ ಸ್ವರೂಪ ಮತ್ತು ಸಮಾಜ ಒಪ್ಪಿದ ಮೌಲ್ಯಗಳಗನುಗುಣವಾಗಿರುವ ವೈಯುಕ್ತಿಕ ಗುಣಗಳ ವ್ಯವಸ್ಥೆಯನ್ನು ಸೂಚಿಸುತ್ತದೆ. ಹಾರ್ವರ್ಡ್ ವಿಶ್ವವಿದ್ಯಾಲಯದ ಮನೋವಿಜ್ಞಾನಿ **LAWRENCE KOHLBERG** ರವರು ಹೇಳುವ ಪ್ರಕಾರ ಮಕ್ಕಳು ತಮ್ಮದೇ ಆದ ನೈತಿಕ ಮಾನಗಳನ್ನು ರೂಪಿಸಿಕೊಳ್ಳುತ್ತಾರೆ. ಅವುಗಳು ಸಾಮಾಜಿಕ ಪರಿಸರ ಮತ್ತು ಮಕ್ಕಳ ಜ್ಞಾನಾತ್ಮಕ ಸಂರಚನೆಯ ಅಂತರ್ ಕ್ರಿಯೆಯಿಂದ ಉದ್ಭವಿಸುತ್ತವೆ. ನೈತಿಕ ವಿಕಾಸವೆಂದರೆ ಸಾಮಾಜಿಕ ಹಾಗೂ ನೈತಿಕ ಮೌಲ್ಯಗಳನ್ನು ಕಲಿಯುವುದಾಗಿದೆ. ಇದು ಪ್ರಾಮಾಣಿಕತೆ, ದಯಾಳುತನ, ದಾನ, ಧರ್ಮ, ಸೇವೆ, ವಿಧೇಯತೆ ಇತ್ಯಾದಿ ವಿಷಯಗಳನ್ನು ಕಲಿಯುವುದಾಗಿದೆ. ಇದೆಲ್ಲ ಸುಂದರ ಬದುಕಿನ ಉತ್ತಮ ಲಕ್ಷಣಗಳು ಹಾಗೂ ಜೀವನ ಶಿಕ್ಷಣದ ಪರಿಣಾಮಗಳು. ಆದ್ದರಿಂದ ನೈತಿಕ ವಿಕಾಸವು ಪ್ರತಿಯೋರ್ವ ವ್ಯಕ್ತಿಗೂ ಸಾರ್ಥಕ ಜೀವನಕ್ಕೆ ಬೇಕಾದ ಬೆಳವಣಿಗೆಯಾಗಿದೆ. ನೈತಿಕ ವಿಕಾಸವೆಂದರೆ ಯಾವುದು ಸರಿ? ಯಾವುದು ತಪ್ಪು? ಯಾವುದು ಒಳ್ಳೆಯದು? ಯಾವುದು ಕೆಟ್ಟದ್ದು? ಎಂಬುದನ್ನು ಆಲೋಚಿಸಿ ತಿಳಿಯುವುದಾಗಿದೆ.[18] ಇಂತಹ ಪರಿಕಲ್ಪನೆಯನ್ನು ಹದಿಹರೆಯದವರು ತಮ್ಮ ಮನೋಭಾವಗಳು ಮತ್ತು ನಡತೆಯನ್ನು ಸಮಾಜದ ನಿರೀಕ್ಷಣೆಗನುಗುಣವಾಗಿ ರೂಪಿಸಿಕೊಳ್ಳಬೇಕಾದುದು ಅತ್ಯಾವಶ್ಯಕ. ನೈತಿಕ ಪರಿಕಲ್ಪನೆಗಳ ಸರಿತಪ್ಪುಗಳನ್ನು ಈ ಹಂತದಲ್ಲಿ ಸ್ವಯಂ ವಿವೇಚಿಸಿ, ನಂತರ ತಮ್ಮದೇ ಆದ ನೈತಿಕ ಸೂತ್ರಗಳನ್ನು ರೂಪಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ತರುಣತರುಣಿಯರು ತಮ್ಮ ನೈತಿಕ ನಂಬಿಕೆಗಳಿಗೆ ಅನುಗುಣವಾಗಿ ವರ್ತಿಸುತ್ತಾರೆ. ಈ ಹಂತದಲ್ಲಿ ಹದಿಹರೆಯದವರಲ್ಲಿ ಅಂತಃಪ್ರಜ್ಞೆಯು ಬೆಳವಣಿಗೆಯಾಗಿ ವ್ಯಕ್ತಿಯ ವರ್ತನೆಯನ್ನು ನಿಯಂತ್ರಿಸುತ್ತದೆ. ಅಂತಃಪ್ರಜ್ಞೆಯೆಂದರೆ ಆಂತರಿಕ ನಿರ್ಣಯ ಶಕ್ತಿ. ಸಾಮಾಜಿಕ ನಿರೀಕ್ಷೆ, ಮನ್ನಣೆ ಮತ್ತು ನಿರಾಕರಣೆಗಳು ಅದರ ಬೆಳವಣಿಗೆಗೆ ಬೇಕಾದ ಅಭಿಪ್ರೇರಣೆಯನ್ನು ಉಂಟುಮಾಡುತ್ತವೆ. ತನ್ನ ವರ್ತನೆ ಸಮಾಜದ ಅಪೇಕ್ಷೆಗೆ ವ್ಯತಿರಿಕ್ತವಾಗಿದೆಯೆನ್ನಿಸಿದರೆ ವ್ಯಕ್ತಿಯಲ್ಲಿ ದೋಷಪ್ರಜ್ಞೆ ಉಂಟಾಗುತ್ತದೆ. ಹಾಗೆಯೇ ತನ್ನ ವರ್ತನೆಯ ಬಗ್ಗೆ ಇತರರಲ್ಲಿ ಉಂಟಾಗುವ ಅಹಿತ ಭಾವನೆಯ ಪರಿವೆ ಬಂದಾಗ ಅವನಲ್ಲಿ ನಾಚಿಕೆ, ಸಂಕೋಚ ಭಾವ ಉಂಟಾಗುತ್ತದೆ. ಇದರ ಪರಿಣಾಮ ದೋಷಪ್ರಜ್ಞೆ ಹಾಗೂ ನಾಚಿಕೆಭಾವಗಳೆರಡೂ ಅಂತಃಪ್ರಜ್ಞೆಯಲ್ಲಿ ಅಂತರ್ಗತವಾಗಿ ವ್ಯಕ್ತಿಯ ವರ್ತನೆಯಲ್ಲಿ ಒಳ್ಳೆಯ ನಿಯಂತ್ರಣ ಉಂಟಾಗುತ್ತದೆ.

अधीत्य चतुरो वेदान् व्याकृत्याष्टादश स्मृतीः ।

अहो श्रमस्य वैफल्यं आत्मापि कलितो न चेत् ॥[19]

---

18. **ವಾಮದೇವಪ್ಪ ಎಚ್. ವಿ.,** ಶೈಕ್ಷಣಿಕ ಮನೋವಿಜ್ಞಾನ, ಅ–2, ಪು–57.ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005.(2005)
19. **ಸುಭಾಷಿತಮಂಜರೀ,** ವಿವೇಕ– ಶ್ಲೋ–6, ಪು– 266.(2001), ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18.

ಅಂದರೆ ಆತ್ಮಜ್ಞಾನ ಎಷ್ಟು ಮುಖ್ಯ ಎಂಬುದನ್ನು ಈ ಶ್ಲೋಕವು ತಿಳಿಸುತ್ತದೆ. ನಾಲ್ಕು ವೇದಗಳನ್ನೂ ಕಲಿತು ಹದಿನೆಂಟು ಸ್ಮೃತಿಗಳನ್ನು ವ್ಯಾಖ್ಯಾನ ಮಾಡಿಯೂ ಆತ್ಮಜ್ಞಾನ ಸಂಪಾದಿಸದೇ ಹೋದಮೇಲೆ ಅಷ್ಟು ಶ್ರಮವೂ ವ್ಯರ್ಥವೇ ಸರಿ.

ಇಲ್ಲಿ ವ್ಯಕ್ತಿಯ ವರ್ತನೆಗಳ ಪರಿವರ್ತನೆಯೇ ಶಿಕ್ಷಣ. ಶಿಕ್ಷಣದ ಮೂಲಭೂತ ಉದ್ದೇಶವೇ ಅದನ್ನು ಪಡೆಯುವವನಿಗೆ ಬೆಳಕನ್ನು ನೀಡುವುದು. ಆ ಬೆಳಕಿನಲ್ಲಿ ಅವನ ಜೀವನ ಪ್ರಯಾಣವನ್ನು ಚೆನ್ನಾಗಿಸಿಕೊಳ್ಳಲು ಅವಶ್ಯಕವಾದ ಸಂಸ್ಕಾರವನ್ನು ಒದಗಿಸುವುದು.[20]

यज्जीव्यते क्षणमपि प्रथितं मनुष्यैः

विज्ञानशौर्यविभवार्यगुणैः समेतम् ।

तन्नामजीवितमिह प्रवदन्ति तज्ज्ञाः

काकोऽपि जीवति चिरञ्च बलिं च भुङ्क्ते ॥[21]

ಜ್ಞಾನ, ಪರಾಕ್ರಮ, ವೈಭವ ಮೊದಲಾದ ಸದ್ಗುಣಗಳಿಂದ ಕೂಡಿ ಮನುಷ್ಯರು ಪ್ರಖ್ಯಾತರಾಗಿ ಒಂದು ಕ್ಷಣ ಬದುಕಿದರೂ ಅದು ನಿಜವಾದ ಜೀವನ ಎಂದು ಜ್ಞಾನಿಗಳು ಹೇಳುತ್ತಾರೆ. ಕಾಗೆಯೂ ಸಹ ಬಹಳ ಕಾಲ ಬದುಕಿರುತ್ತೆ ಇತರರ ಕೆಟ್ಟ ಅನ್ನವನ್ನು ತಿಂದುಕೊಂಡು. ಹೀಗೆ ಸದ್ಗುಣಗಳಿಂದ ಕೂಡಿದ ವ್ಯಕ್ತಿಗಳ ಜೀವನ ಎಷ್ಟು ಶ್ರೇಷ್ಠ ಹಾಗೂ ಅವರ ಬದುಕು ಎಷ್ಟು ಪ್ರಶಸ್ತ ಎಂಬ ತಿಳುವಳಿಕೆಯನ್ನು ಈ ಶ್ಲೋಕದಲ್ಲಿ ಸ್ಪಷ್ಟಪಡಿಸಲಾಗಿದೆ.

ಪಂಚತಂತ್ರದಲ್ಲೂ ರಾಜಕುಮಾರರ ಸಾರ್ಥಕ ವ್ಯಕ್ತಿತ್ವ ನಿರ್ಮಾಣ ಕಾರ್ಯದಲ್ಲಿ ವಿಷ್ಣುಶರ್ಮರೂ ಇದೇ ಹಿನ್ನೆಲೆಯಲ್ಲಿ ನೀತಿಬೋಧೆಗಳ ಮೂಲಕ ಆಕರ್ಷಕ ಕಥಾ ಮಾಧ್ಯಮದಲ್ಲಿ ಸೂಕ್ತ ಸಂದರ್ಭಗಳನ್ನು ನಿರ್ಮಿಸಿ ಸಮೂಹದ ನಿರೀಕ್ಷೆಯನ್ನು ಸ್ವತಃ ಅರ್ಥೈಸಿಕೊಂಡು ಅದಕ್ಕೆ ತಕ್ಕಂತೆ ತಮ್ಮ ವರ್ತನೆಗಳನ್ನು ರೂಪಿಸಿಕೊಂಡು ಭವಿಷ್ಯತ್ ಜೀವನವನ್ನು ಸೊಗಸಾಗಿ ಸಾಗಿಸಲೆಂದು ಪ್ರೇರಣೆ ಒದಗಿಸಿದ್ದಾರೆ. ಸಾರ್ವತ್ರಿಕ ನೈತಿಕ ತತ್ವಗಳನ್ನು ಆಧರಿಸಿ, ಸದ್ವರ್ತನೆಯ ಮಾರ್ಗದರ್ಶನ ನೀಡಬಲ್ಲ ನೀತಿಸಂಹಿತೆಯನ್ನು ನಿರ್ಮಾಣಮಾಡಿ, ಅದಕ್ಕನುಗುಣವಾಗಿ ತಮ್ಮ ವರ್ತನೆಯನ್ನು ತಾವೇ ನಿಯಂತ್ರಿಸಿಕೊಳ್ಳಲು ರಾಜಕುಮಾರರು

20. **ವಾಮದೇವಪ್ಪ. ಎಚ್. ಎಸ್.** ಶೈಕ್ಷಣಿಕ ಮನೋವಿಜ್ಞಾನ, ಅ-2, ಪು-68-69,78-79,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005

21. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಪ್ರ.ತಂ. ಶ್ಲೋ-24, ಪು -25,( 1993).ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ವಿವೇಚಿಸುವಂತೆ ವಿಷ್ಣುಶರ್ಮರು ಆತ್ಮೀಯವಾಗಿ ಪ್ರೋತ್ಸಾಹಿಸಿದ್ದಾರೆ. ಉತ್ತಮ ಕಲಿಕಾ ಸನ್ನಿವೇಶ ಮತ್ತು ವ್ಯಕ್ತಿತ್ವದ ಸರ್ವಾಂಗೀಣ ಬೆಳವಣಿಗೆಗೆ ಬೇಕಾದ ಪರಿಸರವನ್ನು ಒದಗಿಸಿಕೊಟ್ಟಿದ್ದಾರೆ.

ಈ ಅಧ್ಯಾಯದಲ್ಲಿ ವಿಚಾರ ಮಾಡಿರುವ ಅನೇಕ ಶೈಕ್ಷಣಿಕ ಅಂಶಗಳು ಎಷ್ಟರಮಟ್ಟಿಗೆ ಶೈಕ್ಷಣಿಕ ಮನೋವಿಜ್ಞಾನದ ಪರಿಕಲ್ಪನೆಯನ್ನು ಸ್ಪಷ್ಟಗೊಳಿಸುತ್ತವೆ ಎಂಬುದಕ್ಕೆ ಶಿಕ್ಷಣದ ಬಗ್ಗೆ ಕೆಲವು ಮಹಾನ್ ವ್ಯಕ್ತಿಗಳು ಹೀಗೆ ಹೇಳಿರುವುದನ್ನು ಪರಿಶೀಲಿಸಬಹುದು.[22]

1. "ನಿಜವಾದ ಶಿಕ್ಷಣವೆಂದರೆ ಮಾನವೀಯತೆಯ ವಿಕಾಸ." .....ಸ್ವಾಮಿ ವಿವೇಕಾನಂದರು.

2. "ವಿದ್ಯಾಭ್ಯಾಸ ಯಾವ ದಿಕ್ಕಿನಲ್ಲಿ ಮನುಷ್ಯನನ್ನು ನಡೆಸುವುದೋ ಅದೇ ಅವನ ಭವಿಷ್ಯವನ್ನು ನಿರ್ಧರಿಸುವುದು." **PLATO.**

3. "ಶಿಕ್ಷಣದ ಮುಖ್ಯ ಕೆಲಸ ನಮ್ಮ ಬದುಕನ್ನು ಅರ್ಥಪೂರ್ಣವಾಗುವಂತೆ ಸಹಕರಿಸುವುದು." **SPENSER**

4. "ಶಿಕ್ಷಣ ಪ್ರತಿವ್ಯಕ್ತಿಯಲ್ಲಿ ಪರಿಪೂರ್ಣತೆಯನ್ನು ತರಬೇಕು. ಜೀವನದಲ್ಲಿ ಮುನ್ನಡೆಸುವ ಸಾಮರ್ಥ್ಯವನ್ನು ನೀಡಬೇಕು." **JIDDU KRISHNAMURTHY**

5. "ಶಿಕ್ಷಣವೆಂದರೆ ಪುಸ್ತಕದ ಜ್ಞಾನವೇ ಮಾತ್ರವಲ್ಲ. ಸಂಸಾರ, ಮನುಷ್ಯ, ಮತ್ತು ಕಾರ್ಯಕಲಾಪಗಳ ಪರಸ್ಪರ ಸಂಯೋಜನೆ." **EDMUND BURKE**

6. "ಶಿಕ್ಷಣವು ಮನುಷ್ಯನನ್ನು ಶ್ರೇಷ್ಠ ನಾಗರಿಕನನ್ನಾಗಿ ಮಾಡುತ್ತದೆ." ಡಾ. ಎಸ್. ರಾಧಾಕೃಷ್ಣನ್.

7. "ಮನುಷ್ಯರಲ್ಲಿ ಪ್ರೇಮವನ್ನು ಮೂಡಿಸುವ, ಸರಳ ಜೀವನವನ್ನು ಕಲಿಸುವ ವಿದ್ಯೆಯೇ ಶ್ರೇಷ್ಠವಾದದ್ದು." **LEO TOLSTOY,**

8. "ಶಿಕ್ಷಣವೇ ಜೀವನದ ಬೆಳಕು." ಗೊರೂರು ರಾಮಸ್ವಾಮಿ ಅಯ್ಯಂಗಾರ್.

ಮೇಲಿನ ಎಲ್ಲ ವ್ಯಾಖ್ಯಾನಗಳನ್ನು ಸೂಕ್ಷ್ಮವಾಗಿ ಗಮನಿಸಿ ವಿಶ್ಲೇಷಿಸಿದರೆ ಒಟ್ಟಾರೆ ಸಾರಾಂಶವು ಶಿಕ್ಷಣದ ಮೂಲಭೂತ ಉದ್ದೇಶವನ್ನು ಸ್ಪಷ್ಟವಾಗಿ ಮೂಲಭೂತ ಉದ್ದೇಶವನ್ನು ಸ್ಪಷ್ಟಗೊಳಿಸುತ್ತದೆ.

---

22. **ಶಿಕ್ಷಣದ ಬಗೆಗಿನ ನುಡಿಮುತ್ತುಗಳು–ಪಿಸುಮಾತು,** https://pisumathu4u.blogspot.com

ಶಿಕ್ಷಣವು ಸುಂದರ ಸುಮಧುರ ಬದುಕಿಗಾಗಿ, ಸಾರ್ಥಕ ಜೀವನಕ್ಕಾಗಿ ಎಂಬುದು ಅರ್ಥವಾಗುತ್ತದೆ. ಮಹಾತ್ಮಾ ಗಾಂಧೀಜಿಯವರು ಒಂದು ಒಳ್ಳೆಯ ಉಕ್ತಿಯನ್ನು ಮಾನವನ ಜೀವನ ಕುರಿತು ಹೇಳಿದ್ದಾರೆ. ಅದು ಎಷ್ಟು ಸರಳ ಹಾಗೂ ಅರ್ಥಗರ್ಭಿತ ಎಂದರೆ "ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ, ಭಾವನಾತ್ಮಕವಾಗಿ, ನೈತಿಕವಾಗಿ ಸಮರ್ಥರನ್ನಾಗಿಸುವುದೇ ಶಿಕ್ಷಣ" ಎಂದಿದ್ದಾರೆ. ಈ ಎಲ್ಲ ಸಾಮರ್ಥ್ಯಗಳನ್ನು ಪ್ರಾಪ್ತಿಗೊಳಿಸಿ ವ್ಯಕ್ತಿಯನ್ನು ಒಂದು ಸಾಮಾಜಿಕ ಶಕ್ತಿಯಾಗಿ ಪರಿವರ್ತಿಸಿ, ಸಾರ್ಥಕ ಜೀವನ ನಡೆಸಲು ಪ್ರೋತ್ಸಾಹಿಸುವುದೇ ಜೀವನ ಶಿಕ್ಷಣ. "**Education is life and: life is education**[23] "ಜೀವನವೇ ಶಿಕ್ಷಣ, ಶಿಕ್ಷಣವೇ ಜೀವನ" **JOHN DEWEY. According to him- "Education is not preparation for life; Education is life itself." It is through education that you can change the face of the world.**

ಎಂದಿನಿಂದಲೂ ಸಮಾಜಕ್ಕೆ ಬೇಕಾಗಿರುವುದು ಜೀವನದೊಂದಿಗೆ ಸ್ನೇಹ ಬೆಳೆಸುವ ಶಿಕ್ಷಣ. ಜ್ಞಾನವನ್ನು ಹಿಗ್ಗಿಸುವ ಸಮೂಹ ಮಾಧ್ಯಮಗಳು ಶುದ್ಧ ರಾಜಕೀಯ ಅಡಿಪಾಯ, ಪ್ರೀತಿವಾತ್ಸಲ್ಯ ತುಂಬುವ ಸಾಮಾಜಿಕ ಧಾರ್ಮಿಕ ರೀತಿನೀತಿಗಳು ತಪ್ಪನ್ನು ತಿದ್ದಿ ಹೇಳುವ ಕೌಟುಂಬಿಕ ಹಿನ್ನೆಲೆಯಿರಬೇಕು. ಪ್ರಯತ್ನ ಶೀಲತೆಯಿರಬೇಕು. ಡಿ.ವಿ.ಜಿ ಯವರು ಮಾನವನ ಯತ್ನದ ಬಗ್ಗೆ ಹೀಗೆ ಹೇಳಿರುವುದನ್ನು ಸ್ಮರಿಸಿಕೊಳ್ಳಬಹುದು.

**ಯತನ ಕರ್ತವ್ಯವದು, ನಮಗೆ ವಿದ್ಯಾಭ್ಯಾಸ, ಹಿತಪರಿಜ್ಞಾನ ಯತ್ನಾನುಭವ ಫಲಿತ**

**ಸತತಯತ್ನ ದಿನಾತ್ಮಶಕ್ತಿ ಪರಿವರ್ಧಿಪುದು ಯತನ ಜೀವನ ಶಿಕ್ಷೆ-ಮಂಕುತಿಮ್ಮ** ||[24]

"ಪ್ರಯತ್ನಿಸುತ್ತಿರುವುದು" ನಮ್ಮ ಕರ್ತವ್ಯ. ಅದು ನಮಗೆ ಶಿಕ್ಷಣವನ್ನು ಕೊಡುತ್ತದೆ. ಸಕಲರಿಗೂ ಹಿತ ಯಾವುದು ಎನ್ನುವುದರ ತಿಳುವಳಿಕೆ ಈ ಪ್ರಯತ್ನಗಳಿಂದಾಗುತ್ತದೆ. ಸತತವಾಗಿ ಪ್ರಯತ್ನಿಸುವುದರಿಂದ ನಮ್ಮ ಆತ್ಮಶಕ್ತಿ ವರ್ಧಿಸುತ್ತದೆ. ಈ ತರಹದ ಪ್ರಯತ್ನಿಸುವಿಕೆಯೇ ನಮ್ಮ ಜೀವನಕ್ಕೆ ಶಿಕ್ಷಣ. ಜೀವನ ಎನ್ನುವುದು ಅಮೂಲ್ಯವಾದದ್ದು. ಅದನ್ನು ಸಂಬಾಳಿಸಿಕೊಂಡು ಸರಿಯಾದ ದಿಕ್ಕಿನಲ್ಲಿ ಸತತ ಸ್ವಪ್ರಯತ್ನದೊಂದಿಗೆ ಸಮಾಜಕ್ಕೆ ಸ್ನೇಹಮಯವಾದ ಬದುಕು ನೀಡಬೇಕಾದದ್ದು ನಮ್ಮ ಕರ್ತವ್ಯ.[25] "ಪ್ರಯತ್ನವೇ ಪರಮೇಶ್ವರ, ಪರಿಶ್ರಮವೇ ಪರಮಪೂಜೆ "ಎಂದು ಶ್ರದ್ಧಾಭಕ್ತಿಯಿಂದ ಕಾಯಕದಲ್ಲಿ ತೊಡಗಿಸಿಕೊಳ್ಳಬೇಕು.

ವ್ಯಕ್ತಿಯ ಜೀವನ, ಸಮಾಜ, ಅರ್ಥವ್ಯವಸ್ಥೆ, ರಾಜಕಾರಣಗಳೆಲ್ಲವೂ ಮೌಲ್ಯಾಧಾರಿತವಾಗಬೇಕು.

---

**23. Narayanamurthy D.R ,** A Short Hand Book On Philosophical And Sociological Foundation Of Education, P-7.. Institute of Education, Mysore(1972)

**24. ಶ್ರೀಕಾಂತ್,** ಡಿ.ವಿ.ಜಿ.ರವರ ಮಂಕುತಿಮ್ಮನ ಕಗ್ಗ- ತಾತ್ಪರ್ಯ, ಪದ್ಯ ಸಂ-867. ಪು-296,(2012) 226, 8ನೇ ಅಡ್ಡ ರಸ್ತೆ, 19ನೇ'ಡಿ'ಮುಖ್ಯ ರಸ್ತೆ, ರಾಜಾಜಿನಗರ, 1ನೇ ಬ್ಲಾಕ್, ಬೆಂಗಳೂರು-560010.

**25. ಶಿಕ್ಷಣ ಮತ್ತು ಜೀವನ, ಸಂಪದ,** https://sampada.net

ಮೌಲ್ಯಗಳ ಅಳವಡಿಕೆಯಿಂದ ವ್ಯಕ್ತಿಯ ಬದುಕಿಗೆ ಒಂದು ನೀತಿ, ವ್ಯಕ್ತಿ ಗೌರವ ಮತ್ತು ಘನತೆ ವೃದ್ಧಿಸಿ, ಚಿನ್ನದಂತೆ ಪರಿಶುದ್ಧಗೊಂಡು ಬದುಕು ಬಂಗಾರವಾಗುವುದು. ಹಾಗೆಯೇ ವ್ಯಕ್ತಿತ್ವ ಸಂಪೂರ್ಣವಾಗಿ ವಿಕಾಸಗೊಳ್ಳುವುದು. ಮೌಲ್ಯಗಳು ನಮ್ಮ ಬದುಕಿನಲ್ಲಿ ಆಸ್ತಿ ಇದ್ದಂತೆ. ಇನ್ನು ಸಂಸ್ಕಾರ–ಸಂಸ್ಕೃತಿಗಳು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕಾದ ಮಹತ್ವದ ಮೌಲ್ಯಗಳು. ಉತ್ತಮ ಜೀವನ ನಡೆಸಬೇಕಾದರೆ ಇವೆರಡೂ ಅತ್ಯಗತ್ಯವಾಗಿದೆ. ಮೌಲ್ಯವರ್ಧನೆ ಎಂದರೆ ವ್ಯಕ್ತಿಗಳಲ್ಲಿ ನೈತಿಕ ಸದ್ಗುಣಗಳಾದ ಶ್ರದ್ಧೆ, ನಿಷ್ಠೆ, ಪ್ರಾಮಾಣಿಕತೆ, ಸಹನೆ, ಅನುಕಂಪ, ಸತ್ಯ, ನ್ಯಾಯ, ಸಚ್ಚಾರಿತ್ರ್ಯ, ಅಹಿಂಸೆ, ಸಹಕಾರ, ಬ್ರಾತೃಭಾವನೆ, ಸಹಿಷ್ಣುತಾಭಾವ ಇವೇ ಮೋದಲಾದ ಗುಣಗಳನ್ನು ಬೆಳೆಸುವುದಾಗಿರುತ್ತದೆ. ಇವೆಲ್ಲವೂ ಉತ್ತಮ ನಿತಿಬೋಧೆಯಿಂದ ಮಾತ್ರ ಸಾಧ್ಯವಾಗುವುದು.



## 7–2. ವಿದ್ಯೆ–ಬುದ್ಧಿ – ಸಾಮಾನ್ಯ ಜ್ಞಾನ.

हर्तुर्याति न गोचरं किमपि शं पुष्णाति यत्सर्वदा

ऽप्यर्थिभ्यः प्रतिपाद्यमानमनिषं प्राप्नोति वृद्धिं पराम् ।

कल्पान्तेष्वपि न प्रयाति निधनं विद्याख्यमन्तर्धनं

येषां तान् प्रति मानमुज्झत नृपाः कस्तैः सह स्पर्धते ॥[26]

ವಿದ್ಯೆಯೆಂಬ ಗುಪ್ತಸಂಪತ್ತು ದೋಚುವವರ ಕಣ್ಣಿಗೆ ಬೀಳುವುದಿಲ್ಲ. ಅದು ಬಣ್ಣಿಸಲಸಾಧ್ಯವಾದ ಹಿತವನ್ನುಂಟುಮಾಡುತ್ತದೆ. ಬೇಡುವವರಿಗೆ ಅದು ಕೊಡುತ್ತಿದ್ದರೂ ಹೆಚ್ಚುತ್ತಾಹೋಗುತ್ತದೆ. ಪ್ರಳಯಕಾಲದಲ್ಲೂ ಸಹ ಅದು ನಾಶವನ್ನು ಹೊಂದುವುದಿಲ್ಲ. ಎಲೈ ಅರಸರೇ, ಯಾರಲ್ಲಿ ಇಂತಹ ವಿದ್ಯಾಸಂಪತ್ತು ಇದೆಯೋ ಅವರಲ್ಲಿ ದರ್ಪವನ್ನು ಬಿಡಿ. ಏಕೆಂದರೆ ಅವರೊಂದಿಗೆ ಯಾರು ಸ್ಪರ್ಧಿಸಬಲ್ಲರು? ಇಲ್ಲಿ ವಿದ್ಯೆಯೆಂಬುದು ಎಂಥಹ ಸಂಪತ್ತು ! ಇದರ ಘನತೆ, ಗೌರವ ಎಷ್ಟೆಂಬುದನ್ನು ಈ ಶ್ಲೋಕದಲ್ಲಿ ಬಹಳ ಸೊಗಸಾಗಿ ವರ್ಣಿಸಲಾಗಿದೆ.

ಸಂಸ್ಕೃತ, ಪಾಳಿ ಮತ್ತು ಸಿಂಹಳ ಭಾಷೆಯಂತಹ ಹಲವಾರು ದಕ್ಷಿಣ ಏಷ್ಯಾದ ಭಾಷೆಗಳಲ್ಲಿ ವಿದ್ಯೆ ಎಂದರೆ ಸರಿಯಾದ ಜ್ಞಾನ ಅಥವಾ ಸ್ಪಷ್ಟತೆ ಎಂದು ಅರ್ಥ. ಉಪನಿಷತ್ತಿನಲ್ಲಿ ಯಾವುದು ವಿದ್ಯೆ ಮತ್ತು ಅವಿದ್ಯೆ ಎಂದು ತಿಳಿಯಲ್ಪಟ್ಟಿರುವವೋ ಅವೆರಡರ ವಿರುದ್ಧದಿಕ್ಕಿನಲ್ಲಿ, ಭಿನ್ನವಾಗಿ ಭಿನ್ನಗತಿಯುಳ್ಳವು. ನಚಿಕೇತನನ್ನು ವಿದ್ಯಾಭಿಲಾಷೆ ಉಳ್ಳವನು ಎಂದು ಭಾವಿಸಲಾಗಿದೆ.

दूरमेते विपरीते विषूचि अविद्या या च विद्येति ज़ाता ।

विद्याभीप्सिनं नचिकेतसं मन्ये न त्वा कामा बहवोऽलोलुपन्त ॥[27]

ವಿದ್ಯೆಯೆಂದರೆ ಜ್ಞಾನ. ಇದು ವಸ್ತು ಹೇಗಿದೆಯೋ ಹಾಗೆ ನೋಡುವುದು. ನೋಡುವಾಗ ಯಾವ ಬಣ್ಣದ ಕನ್ನಡಕವನ್ನೂ ಅವನು ಹಾಕಿಕೊಳ್ಳುವುದಿಲ್ಲ. ಅವಿದ್ಯೆ ಎಂದರೆ ಅಜ್ಞಾತ ವಸ್ತು. ಈಗ ತತ್ಕಾಲಕ್ಕೆ ಹೇಗೆ ಕಾಣುತ್ತದೆಯೋ ಹಾಗೆಯೇ ಮುಂದೆಯೂ ಇರುತ್ತದೆ ಎಂದು ಭಾವಿಸುವನು. ವಸ್ತುವಿನ ನಿಜಸ್ಥಿತಿಯನ್ನು ನೋಡುವುದಕ್ಕೆ ಅವನಿಗೆ ಆಸೆ ಇಲ್ಲ. ಅವಿದ್ಯೆ ಬಾಹ್ಯದಲ್ಲಿ ಕಾಣುವುದೇ ನಿಜವೆಂದು ಭಾವಿಸುವುದು. ಅಲ್ಲಿಗೆ

26. **ಭರ್ತೃಹರಿಯ ನೀತಿಶತಕ,** ವಿದ್ವತ್ ಪದ್ಧತಿ– ಶ್ಲೋ–16.
27. **ಕಠೋಪನಿಷತ್ತು,** ಅ–1, ದ್ವಿ.ವ.– ಶ್ಲೋ–4–ವಿದ್ಯೆ–ಅವಿದ್ಯೆ.

ವಿದ್ಯೆ ಮತ್ತು ಅವಿದ್ಯೆ ನೋಡುವುದಕ್ಕೆ ಪರಸ್ಪರ ವಿರೋಧ. ಅವಿದ್ಯೆಯಿಂದ ವಿದ್ಯೆಗೆ ಬಹಳ ಅಂತರವಿದೆ. ಇವೆರಡರ ಗತಿಯೂ ಭಿನ್ನವಾಗಿದೆ. ಅವಿದ್ಯೆ ನಮ್ಮನ್ನು ಸಂಸಾರದ ಗೋಜಿನಲ್ಲಿ ಹೆಚ್ಚು ಹೆಚ್ಚು ಸಿಕ್ಕಿಸುತ್ತದೆ. ಆದರೆ ವಿದ್ಯೆ ನಮ್ಮನ್ನು ಜ್ಞಾನದ ಬೆಳದಿಂಗಳಿಗೆ ಕರೆದೊಯ್ಯುವುದು. ಅವಿದ್ಯೆಯ ಪ್ರಾರಂಭಿಕ ಹಾದಿ ಸುಗಮ. ಇದರಲ್ಲಿ ಇಂದ್ರಿಯ ಸುಖಗಳನ್ನು ಅನುಭವಿಸುವಾಗ ಆನಂದವಾಗುವುದು. ನಂತರದಲ್ಲಿ ಪರಿಣಾಮಗಳು ಎದುರಾದಾಗ, ಅಬ್ಬಾ ! ಎಂಥಹ ದುರಂತಗಳನ್ನು ಸ್ವಾಗತಿಸಿಬಿಟ್ಟೆನೆಂದು ಪಶ್ಚಾತ್ತಾಪ ಉಂಟಾಗುವುದು. ಆದರೆ ವಿದ್ಯೆಯ ಹಾದಿ ಮಾತ್ರ ಬಹಳ ಕಠಿಣ. ಮೊದಮೊದಲು ನೀರಸವಾಗುವುದು ಆದರೆ ಶ್ರದ್ಧಾಭಕ್ತಿಯಿಂದ ಪರಿಶ್ರಮದಿಂದ ಮುಂದೆ ಮುಂದೆ ಸಾಗಿದರೆ ಸ್ವಾರಸ್ಯ ಹುಟ್ಟುವುದು, ಜ್ಞಾನಾನಂದ ಉಂಟಾಗುವುದು. ಶಾಂತಿ ಸಮಾಧಾನ ದೊರಕುವುದು. ಶ್ರೇಯಸ್ಸಿಗೆ ವಿದ್ಯೆಯೂ ಪ್ರೇಯಸ್ಸಿಗೆ ಅವಿದ್ಯೆಯೂ ಸಾಧನಗಳಾಗಿವೆ. ಭಗವದ್ಗೀತೆಯಲ್ಲಿ ಕೃಷ್ಣ ಪರಮಾತ್ಮನು ವಿದ್ಯೆಯನ್ನು ಕುರಿತು ಹೀಗೆ ಉಪದೇಶಿಸಿದ್ದಾನೆ.

न हि ज्ञानेन सदृशं पवित्रमिह विद्यते ।

तत्स्वयं योगसंसिद्धः कालेनात्मनि विन्दति ॥[28]

ಈ ಜಗತ್ತಿನಲ್ಲಿ ಜ್ಞಾನಕ್ಕೆ ಸಮಾನವಾಗಿ ಪವಿತ್ರಗೊಳಿಸುವಂತಹದು ನಿಸ್ಸಂಶಯವಾಗಿ ಯಾವುದೂ ಇಲ್ಲ. ಆ ಜ್ಞಾನವನ್ನು ಎಷ್ಟೋ ಕಾಲದಿಂದ ಕರ್ಮಯೋಗದ ಮೂಲಕ ಶುದ್ಧಾಂತಃಕರಣವುಳ್ಳ ಮನುಷ್ಯನು, ತನ್ನಿಂದ ತಾನೇ ಆತ್ಮನಲ್ಲಿ ಪಡೆದುಕೊಳ್ಳುತ್ತಾನೆ. ಹಾಗೆಯೇ ಸಂಸ್ಕೃತ ಕವಿ ಭರ್ತೃಹರಿ ವಿದ್ಯೆಯಿಲ್ಲದವನ ಪರಿಸ್ಥಿತಿ ಏನಾಗುವುದೆಂದು ಈ ಶ್ಲೋಕದಲ್ಲಿ:-

येषां न विद्या न तपो न दानं ज्ञानं न शीलं न गुणो न धर्मः।

ते मर्त्यलोके भुवि भारभूता मनुष्यरूपेण मृगाश्चरन्ति॥[29]

ಯಾರಲ್ಲಿ ವಿದ್ಯೆ, ತಪಸ್ಸು, ದಾನಬುದ್ಧಿ, ತಿಳುವಳಿಕೆ, ಶೀಲ, ಸದ್ಗುಣ, ಧಾರ್ಮಿಕ ನಡತೆ ಇಲ್ಲವೋ ಅವರು ಮನುಷ್ಯ ಲೋಕದಲ್ಲಿ ಭೂಮಿಗೆ ಭಾರವಾಗಿ ಮನುಷ್ಯ ರೂಪ ತಳೆದ ಮೃಗಗಳಂತೆ ಸಂಚರಿಸುತ್ತಾರೆ. ಇದರಿಂದ ಅರ್ಥವಾಗುವುದೇನೆಂದರೆ, ಮನುಷ್ಯನಾದವನಿಗೆ ವಿದ್ಯೆ ಬಹಳ ಮುಖ್ಯ. ವಿದ್ಯೆಯೊಂದಿದ್ದರೆ ಉಳಿದೆಲ್ಲ ಗುಣಗಳೂ ತಾನಾಗಿಯೇ ಪ್ರಾಪ್ತವಾಗುವುವು.

---

**28. ಭಗವದ್ಗೀತೆ** ಅ-4, ಶ್ಲೋ-38.

**29. ಭರ್ತೃಹರಿ,** ನೀತಿಶತಕ-1-13.

ನಮ್ಮ ವೇದಗಳಿಗೆ ಶ್ರುತಿಯೆಂದು ಹೆಸರು. ಆ ಕಾಲದಲ್ಲಿ ಗುರುವಿನಿಂದ ಶಿಷ್ಯರು ಕೇಳಿ ಕಂಠಸ್ಥ ಮಾಡಿ ಉದಾತ್ತ ಅನುದಾತ್ತ ಸ್ವರ ಜಟೆಗಳು ಚಾಚೂ ತಪ್ಪದಂತೆ ಸಹಸ್ರ ಸಹಸ್ರ ವರ್ಷಗಳಿಂದ ಅದನ್ನು ರಕ್ಷಿಸಿಕೊಂಡು ಬಂದಿದ್ದಾರೆ. ಭಾರತೀಯ ಶಿಕ್ಷಣ ಪರಂಪರೆಯಲ್ಲಿ ವಿದ್ಯೆಯು ಮಸ್ತಕವಾಗಬೇಕೇ ಹೊರತು ಪುಸ್ತಕಸ್ಥವಾಗಿ ಇರಬಾರದು. ಒಂದು ವೇಳೆ ಯಾರಾದರೂ ಏನಾದರೊಂದು ವಿಷಯ ಕೇಳಿದಾಗ ತಕ್ಷಣ ಉತ್ತರಿಸದೆ ಮನೆಯಲ್ಲೋ, ಲೈಬ್ರರಿಯಲ್ಲೋ ಪುಸ್ತಕ ಪರಾಮರ್ಶಿಸಿ ತಿಳಿಸುತ್ತೇನೆ ಅಂದು ಬಿಟ್ಟರೆ, ಎಷ್ಟೇ ದೊಡ್ಡ ಪಂಡಿತನಾಗಿದ್ದರೂ ಕೇಳುಗರ ದೃಷ್ಟಿಯಲ್ಲಿ ಕುಬ್ಜನಾಗಿಬಿಡುತ್ತಾನೆ. ಕಲಿತ ವಿದ್ಯೆ ಕರಗತವಾಗಿದ್ದು ತಕ್ಷಣ ಸ್ಫುರಿಸುವಂತಿರಬೇಕು. ಒಂದು ಮಾತಿದೆ "अवसर पठिता वाणी गुणगणरहितापि शोभते पुंसाम् ।" ಅಂದರೆ ಸಕಾಲದಲ್ಲಿ ಹೊರಟ ಮಾತಿನಲ್ಲಿ ಅಲಂಕಾರಾದಿಗಳು ಇಲ್ಲದಿದ್ದರೂ, ಅದಕ್ಕೆ ಎಲ್ಲಿಲ್ಲದ ಶೋಭೆಯಿರುತ್ತದೆ. "ಹೊತ್ತಿಗೊದಗಿದ ಮಾತು ಸತ್ತವನು ಎದ್ದಂತೆ; ಹೊತ್ತಾಗಿ ನುಡಿದ ಮಾತು ಕೈಜಾರಿದ ಮುತ್ತಿನಂತಿಹುದು." ಎಂದು ಕನ್ನಡದ ಕವಿ ಸರ್ವಜ್ಞನೂ ಹೇಳಿದ್ದಾನೆ.[30]

ಇನ್ನು ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ವಿದ್ಯೆಯ ಬಗ್ಗೆ ಹೇಳುವುದಾದರೆ, ಪ್ರಾರಂಭದಲ್ಲಿ ವಿದ್ಯೆ ಎಂಬುದು ಜ್ಞಾನ ಸಂಪಾದನೆಗೆ ಮೀಸಲಾಗಿತ್ತು. ಕಾಲಕ್ರಮೇಣ ವಿದ್ಯೆಯ ಪರಿಭಾಷೆ ವಿಸ್ತಾರವಾಗುತ್ತಾ, ಪ್ರಸ್ತುತ ಸಂದರ್ಭದಲ್ಲಿ ವಿದ್ಯೆ–"ವಿದ್ಯಾರ್ಥಿಯ ಸರ್ವತೋಮುಖ ಅಭಿವೃದ್ಧಿ"ಎಂದು ವ್ಯಾಖ್ಯಾನಿಸಲ್ಪಡುತ್ತಿದೆ. "ವಿದ್" ಎಂದರೆ ಜ್ಞಾನ. ಇದರ ಅಭ್ಯಾಸವೇ " ವಿದ್ಯಾಭ್ಯಾಸ ." ಹೀಗೆ ವಿದ್ಯೆಯ ಪರಿಭಾಷೆ ವಿಸ್ತಾರಗೊಳ್ಳುತ್ತಾ, ಅದರ ಗುರಿಯೂ ಹಿಗ್ಗುತ್ತಾ ಇದೆ. ಅದೇನೇ ಆಗಿರಲಿ, ಜ್ಞಾನ ಎನ್ನುವುದು ಒಂದು ಶಕ್ತಿಯಾಗಿಯೇ ಉಳಿದಿದೆ. **(Knowledge is Power.)** ಪೌಷ್ಟಿಕ ಆಹಾರವು ಮನುಷ್ಯನ ದೇಹಕ್ಕೆ ಹೇಗೆ ಶಕ್ತಿಯನ್ನು ಹೆಚ್ಚಿಸುತ್ತದೋ ಹಾಗೆಯೇ ಪರಿಪಕ್ವ ಜ್ಞಾನವು ಮಾನಸಿಕ ಶಕ್ತಿಯನ್ನು ಹೆಚ್ಚಿಸುತ್ತದೆ. ಇವೆರಡರ ಸಮತೋಲನವೇ ವಿದ್ಯಾಭ್ಯಾಸದ ಗುರಿ. **(A Sound mind in a Sound body.)** ಇದರ ಸರಳ ವ್ಯಾಖ್ಯಾನ ಸರ್ವತೋಮುಖ ಅಭಿವೃದ್ಧಿ ಎಂದಾಗುವುದು.[31]

नास्ति विद्यासमं चक्षुर्नास्ति सत्यसमं तपः।

नास्ति रागसमं दुःखं नास्ति त्यागसमं सुखम् ॥[32]

ವಿದ್ಯೆಗೆ ಸಮನಾದ ಇನ್ನೊಂದು ಕಣ್ಣು ಇಲ್ಲ. ಸತ್ಯಕ್ಕೆ ಸಮನಾದ ತಪಸ್ಸಿಲ್ಲ. ಆಸಕ್ತಿಗೆ ಸಮವಾದ

---

30. **ಭಟ್.ವಿ.ಎನ್,** ಜ್ಞಾನ ದೀಪ, ಅ–61, ಪು–116.(1993) ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿ ನಗರ, ಶಿವಮೊಗ್ಗ–577201
31. **ವೀರಪ್ಪ. ಎನ್ ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–10, ಪು – 171–176,.(1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
32. **ಸುಭಾಷಿತಮಂಜರೀ,** ವಿವೇಕ–ಶ್ಲೋ–56, ಪು–277(2001), ಮಹಾಭಾರತ, ಶಾಂತಿ, 175–25, ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18.

ದುಃಖವಿಲ್ಲ. ತ್ಯಾಗಕ್ಕೆ ಸಮನಾದ ಸುಖವಿಲ್ಲ. ಹೀಗೆ ವಿದ್ಯೆ ಜ್ಞಾನಾಮೂಲ್ಯವಾದ ಕಣ್ಣು ಎಂಬುದಾಗಿ ಈ ಶ್ಲೋಕದಲ್ಲಿ ಕಂಡುಬರುತ್ತದೆ.

ಪ್ರಾಚೀನ ಭಾರತದಲ್ಲಿ ವಿದ್ಯೆಗೆ ಪ್ರಮುಖ ಸ್ಥಾನವನ್ನು ನೀಡಲಾಗಿತ್ತು. **(Knowledge oriented Education)** ಅಂದಿನ ಶಾಸ್ತ್ರೀಯ ಸಮಾಜಕ್ಕೆ ಜ್ಞಾನ ಗಂಗೆಯನ್ನು ಹರಿಸಿದ ಪ್ರತಿಷ್ಠಿತ ತಕ್ಷಶಿಲಾ, ನಳಂದ ವಿಶ್ವವಿದ್ಯಾಲಯಗಳು ಇಂದಿಗೂ ಚಿರಸ್ಮರಣೆಯಲ್ಲಿವೆ. ಆ ವಿಶ್ವವಿದ್ಯಾಲಯಗಳಲ್ಲಿ ವಿದ್ಯಾಭ್ಯಾಸ ನಡೆಸಿ ಹೊರಬಂದ ವಿದ್ಯಾರ್ಥಿಗಳು ಸಕಲವಿದ್ಯಾ ಪಾರಂಗತರಾಗಿರುತ್ತಿದ್ದರು. ಐತಿಹಾಸಿಕವಾಗಿ ಗಮನಿಸಿದರೆ ಕೆಲವು ಕಡೆ ಉಲ್ಲೇಖ ಮಾಡಿರುವಂತೆ ಹಿಂದಿನ ರಾಜಮನೆತನದವರು ಅರವತ್ತ ನಾಲ್ಕು ವಿದ್ಯೆಗಳಲ್ಲಿ ಪರಿಣಿತರಾಗಿರುತ್ತಿದ್ದರಂತೆ.

ಪಂಡಿತರಾಜ ಜಗನ್ನಾಥರು ತಮ್ಮ ರಸಗಂಗಾಧರದಲ್ಲಿ ಕಲಿತ ವಿದ್ಯೆಯು ಅರ್ಥಪೂರ್ಣವಾಗಿರಬೇಕು ಎಂಬುದನ್ನು ಎಷ್ಟು ಅಚ್ಚುಕಟ್ಟಾಗಿ ಹೇಳಿದ್ದಾರೆಂದರೆ:–

शीलभारवती कान्ता पुष्पभारवती लता ।

अर्थभारवती वाणी भजते कामपि श्रियम् ॥[33]

ಶೀಲಭಾರದಿಂದ ಕೂಡಿದ ಹೆಣ್ಣು, ಪುಷ್ಪಭಾರದಿಂದ ಕೂಡಿದ ಬಳ್ಳಿ, ಅರ್ಥಭಾರದಿಂದ ಕೂಡಿದ ವಿದ್ಯೆ ಅಲೌಕಿಕ ಕಾಂತಿಯನ್ನು ಪಡೆಯುತ್ತವೆ. ಅಂದರೆ ಕಲಿತ ವಿದ್ಯೆ ಅರ್ಥಪೂರ್ಣ ಕಲಿಕೆಯಾಗಿರಬೇಕು. ಆಗಲೇ ಅದಕ್ಕೆ ಗೌರವ. ಕಂಠಪಾಠ ಮಾಡಿದ್ದಾಗಿರಬಾರದು. ಅರ್ಥ ಅರಿಯದೆ ಕಂಠಸ್ತ ಮಾಡಿದ ವಿದ್ಯೆಯು–ಕತ್ತೆಯು ಮುತ್ತು ಹವಳಗಳನ್ನು ಹೊತ್ತಂತೆ, ಅದರ ಬೆಲೆ ಅದಕ್ಕೇನು ಗೊತ್ತು ಎನ್ನುತ್ತಾನೆ ಚೂಡಾರತ್ನ.

ಎಂದಿನಿಂದ ವಿದ್ಯೆಯನ್ನು ಉದ್ಯೋಗ ಪಡೆಯುವ ಕಾರಣಕ್ಕಾಗಿ ಕಲಿಯಲಾರಂಭಿಸಿದರೋ, ಅಂದಿನಿಂದ ಅದರ ಗುರಿ ಹಾಗೂ ಮೌಲ್ಯಗಳು ಕುಂಠಿತವಾಗುತ್ತಾ ಬಂದಿತು. ಹೀಗಾಗಿ ವಿದ್ಯೆಯ ಅವಶ್ಯಕತೆ ಹೆಚ್ಚುತ್ತಿದೆ. ಅದೇನೇ ಇದ್ದರೂ ಯಾವುದೇ ಕ್ಷೇತ್ರದಲ್ಲಿ ಗುರಿ ಸಾಧಿಸಲು ವಿದ್ಯೆ ಅನಿವಾರ್ಯವೆಂಬುದನ್ನು ಸರ್ವರೂ ಒಪ್ಪುತ್ತಾರೆ. ಇತ್ತೀಚಿನ ದಿನಗಳಲ್ಲಿ ಕೇವಲ ವಿದ್ಯೆಯನ್ನು ಗಳಿಸಿದರೆ ಸಾಲದು ಜೊತೆಗೆ ತರಬೇತಿಯೂ ಬೇಕು ಅನ್ನಿಸುತ್ತದೆ. ಕಾರಣ ವಿದ್ಯೆಯಿಂದ ಜ್ಞಾನ ಪ್ರಾಪ್ತಿಯಾದರೆ ತರಬೇತಿಯಿಂದ ಪರಿಣಿತಿ ಪ್ರಾಪ್ತವಾಗುತ್ತದೆ. ಇದರಿಂದ ಕುಶಲತೆ, ಯೋಗ್ಯತೆ, ಅಂತರ್‌ದೃಷ್ಟಿ ಮತ್ತು ವೈಜ್ಞಾನಿಕ ದೃಷ್ಟಿಕೋನವನ್ನು ಪಡೆಯಬಹುದು. ಹಾಗೆಯೇ ವಿದ್ಯೆಯಿಂದ ಸಾಹಿತ್ಯ ಜ್ಞಾನ ಮತ್ತು ಗುಣಗ್ರಾಹ್ಯತೆಯನ್ನು ಬೆಳೆಸಿಕೊಳ್ಳಬಹುದು. ಹಾಗೂ ಇದರ

೩೩. **ಸುಭಾಷಿತಮಂಜರೀ,** ಕವಿಕಾವ್ಯಪ್ರಶಂಸೆ– ಶ್ಲೋ–೩೬, ಪು–12, (ಜಗನ್ನಾಥನ ರಸಗಂಗಾಧರ), (2001) ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18

ಉಪಯುಕ್ತತೆಯೂ ಬಹಳ ಮುಖ್ಯವಾದುದು. ಗೀತಾ ಉಪದೇಶ ಹೀಗೆ ಹೇಳುತ್ತದೆ

श्रद्धावाँल्लभते ज्ञानं तत्परः संयतेन्द्रियः ।

ज्ञानं लब्ध्वा परां शान्तिमचिरेणाधिगच्छति ॥[34]

ಜಿತೇಂದ್ರಿಯನೂ, ಸಾಧನಪರಾಯಣನೂ ಮತ್ತು ಶ್ರದ್ಧಾವಂತನೂ ಆದ ಮನುಷ್ಯನು ಜ್ಞಾನವನ್ನು ಪಡೆಯುತ್ತಾನೆ. ಹಾಗೂ ಜ್ಞಾನವನ್ನು ಪಡೆದುಕೊಂಡು ಅವನು ವಿಳಂಬವಿಲ್ಲದೆ ಭಗವತ್ ಪ್ರಾಪ್ತಿರೂಪೀ ಪರಮ ಶಾಂತಿಯನ್ನು ಹೊಂದುತ್ತಾನೆ. ಅಂದರೆ ಶ್ರದ್ಧಾರಹಿತ ಮನುಷ್ಯನು ಆ ಜ್ಞಾನ ಪ್ರಾಪ್ತಿಗೆ ಪಾತ್ರನಾಗುವುದಿಲ್ಲ.

ಗುರುಗಳಿಂದ ಜ್ಞಾನವನ್ನು ಪಡೆದು ನಂತರ ಮನನ, ನಿದಿಧ್ಯಾಸನಗಳಿಂದ ಸಾಕ್ಷಾತ್ಕಾರದ ಮಟ್ಟವನ್ನು ನಾವು ಹೊಂದಬಹುದು. ಇದಕ್ಕಾಗಿ ಶ್ರದ್ಧೆ, ತತ್ವನಿಷ್ಠೆಗಳು ಅತ್ಯಾವಶ್ಯಕ. ಶ್ರದ್ಧೆ ಇರುವಲ್ಲಿ ಕರ್ತವ್ಯದಲ್ಲಿ ಯಾವ ಲೋಪದೋಷಗಳೂ ತಲೆಹಾಕಲಾರವು. ಶ್ರದ್ಧೆ ಎಂದರೆ ಕುರುಡು ನಂಬಿಕೆಯಲ್ಲ. ವಿವೇಚನೆಯಿಂದ ನಾವು ತತ್ವಜ್ಞಾನ ಪಡೆದ ಮೇಲೆ ನಾವು ಪಡೆದ ತತ್ವಜ್ಞಾನಕ್ಕೂ ನಮ್ಮ ಕೃತಿಗೂ ಹೊಂದಿಕೆ ಇದ್ದಲ್ಲಿ ನಾವು ಶ್ರದ್ಧಾವಂತರೆನಿಸುವೆವು.

ವಿದ್ಯಾರ್ಥಿಗಳು ವಿದ್ಯಾಭ್ಯಾಸವನ್ನು ಶ್ರದ್ಧಾಭಕ್ತಿಯಿಂದ ನಡೆಸಿ, ವಿದ್ಯೆಯನ್ನು ಕಲಿತರೆ ಸ್ವಾವಲಂಬಿಗಳಾಗಿ ಉತ್ತಮ ಜೀವನವನ್ನು ನಡೆಸುವ ಸಾಮರ್ಥ್ಯವನ್ನು ಹೊಂದುತ್ತಾರೆ. ವಿದ್ಯಾವಂತ ಮನುಷ್ಯರು ತಮ್ಮ ಜೀವನದಲ್ಲಿ ಎದುರಾಗುವ ಕಷ್ಟಕಾರ್ಪಣ್ಯಗಳನ್ನು ಅಥವಾ ಸವಾಲುಗಳನ್ನು ಸಮರ್ಥವಾಗಿ ಹಾಗೂ ಧೈರ್ಯದಿಂದ ಎದುರಿಸುವರು. ವಿದ್ಯಾವಂತನು ತಾನು ಹುಟ್ಟಿ ಬೆಳೆದ ಸಮಾಜ ಮತ್ತು ದೇಶಕ್ಕೆ ಅರ್ಥಪೂರ್ಣವಾದ ಕೊಡುಗೆಯನ್ನು ಕೊಡುವುದರಲ್ಲಿ ಅಸಮರ್ಥನಾದರೆ ಅಥವಾ ತಪ್ಪಿದರೆ ಅವನನ್ನು ನಿಷ್ಪ್ರಯೋಜಕ ವ್ಯಕ್ತಿ ಎಂದು ಕರೆಯಬೇಕಾಗುತ್ತದೆ. ಅವನು ಬದುಕು ಸಾರ್ಥಕವಿಲ್ಲದ್ದು. ಆದ್ದರಿಂದ ಸರಿಯಾದ ವಿದ್ಯೆಯನ್ನು ಕಲಿಯಬೇಕಾದುದು ಪ್ರತಿಯೊಬ್ಬನ ಕರ್ತವ್ಯವಾಗಿದೆ. ವಿದ್ಯೆಯನ್ನು ಕಲಿಯಲು ಮೊದಲು ಇಚ್ಛಾಶಕ್ತಿ ಇರಬೇಕು. ಉಪನಿಷತ್ತಿನ ಮತ್ತೊಂದು ಶ್ಲೋಕವು ಅವಿದ್ಯೆಯೆಂಬ ಕತ್ತಲಲ್ಲಿ ಸೋಮಾರಿಗಳಾಗಿ ನಿದ್ರಿಸುತ್ತಿರುವ ಯುವಕರಿಗೆ ಎಂಥಹ ಜಾಗೃತಿಯನ್ನು ಮೂಡಿಸಿದೆ!! ಇದು ಸಿಡಿಲ ಸಂತ ಸ್ವಾಮಿ ವಿವೇಕಾನಂದರ ಮೆಚ್ಚಿನ ಸಾಲುಗಳು.

---

34. **ಭಗವದ್ಗೀತೆ,** ಅ– 4, ಶ್ಲೋ– 39.

उत्तिष्ठत जाग्रत प्राप्य वरान्निबोधत ।

क्षुरस्य धारा निशिता दुरत्यया दुर्गं पथस्तत्कवयो वदन्ति ॥[35]

ಇದರ ಅರ್ಥ ಎದ್ದೇಳ, ಎಚ್ಚರಗೊಳ್ಳಿರಿ, ಉತ್ತಮ ಬೋಧಕನನ್ನು ಪಡೆದು ಅರಿಯಿರಿ. ಹರಿತವಾದ ಕತ್ತಿಯ ಅಲಗಿನಂತೆ ದುಸ್ತರವಾದ ಆ ಮಾರ್ಗವು ದುರ್ಗಮವೆಂದು ಕ್ರಾಂತದರ್ಶಿಗಳು ಹೇಳುತ್ತಾರೆ. ಅವಿದ್ಯೆಯೆಂಬ ನಿದ್ರೆಯಿಂದ ಎಚ್ಚರಗೊಳ್ಳಿರಿ; ಆತ್ಮದರ್ಶನಕ್ಕಾಗಿ ಎದ್ದೇಳ, ಹರಿತವಾದ ಖಡ್ಗದ ಅಲಗಿನ ಮೇಲೆ ನಡೆಯುವುದು ಕಷ್ಟಸಾಧ್ಯದಂತೆ, ಈ ಜ್ಞಾನ ಪಥವೂ ಸಹ ದುರ್ಗಮವಾದುದು ಎಂದು ಜ್ಞಾನಿಗಳು ಹೇಳುತ್ತಾರೆ. ಇದರಿಂದ ಅತ್ಯಂತ ಸೂಕ್ಷ್ಮವಾದ ಇದನ್ನು ತಿಳದು ಕೊಳ್ಳಲು, ಸೂಕ್ಷ್ಮಮತಿಯುಳ್ಳ ಸಮರ್ಥ ಆಚಾರ್ಯರನ್ನು ಹುಡುಕಿಕೊಳ್ಳಿ ಎಂದು ಆತ್ಮಜ್ಞಾನಕ್ಕಾಗಿ ಈ ಮಂತ್ರದಲ್ಲಿ ಜನತೆಯನ್ನು ಹುರಿದುಂಬಿಸಲಾಗಿದೆ. ಅಕ್ಷರಶಃ ಇದೇ ಸನ್ನಿವೇಶ ಪಂಚತಂತ್ರದಲ್ಲಿ ಮಂದಮತಿಗಳೂ, ಸೋಮಾರಿಗಳೂ ಆಗಿದ್ದ ರಾಜಕುಮಾರರಿಗೆ ಅಮರಶಕ್ತಿ ರಾಜನು ಸೂಕ್ಷ್ಮ ಮತಿಯುಳ್ಳ ಸಮರ್ಥ ಆಚಾರ್ಯರಾದ ವಿಷ್ಣುಶರ್ಮರನ್ನು ಹುಡುಕಿ, ಅವರ ಮೂಲಕ ರಾಜನಂದನರ ಆತ್ಮಜ್ಞಾನಕ್ಕಾಗಿ ಹುರಿದುಂಬಿಸಿರುವುದು ಕಂಡುಬರುತ್ತದೆ.

ವಿದ್ಯೆಯನ್ನು ಪಡೆಯುವ ಭಾಗ್ಯವು ಕಲಿಯುವವನಲ್ಲಿ ಇಚ್ಛಾಶಕ್ತಿ ಇದ್ದಾಗ ಮಾತ್ರ ಸಾಧ್ಯ. ಇದನ್ನು ಪ್ರೇರೆಪಿಸುವುದು ಪ್ರತಿಭಾವಂತ ಆಚಾರ್ಯರ ಆದ್ಯಕರ್ತವ್ಯ. ಒಮ್ಮೆ ಇಚ್ಛಾಶಕ್ತಿಯನ್ನು ಬೆಳೆಸಿಕೊಂಡ ಶಿಷ್ಯರು ಏನನ್ನು ಬೇಕಾದರೂ ಕಲಿತುಬಿಟ್ಟಾರು. ಈ ಒಂದು ವಿಚಾರದಲ್ಲಿ ವಿಷ್ಣುಶರ್ಮರು ರಾಜಕುಮಾರರಿಗೆ ಮೊದಲು ಮಾಡಿದ ಕೆಲಸವೆಂದರೆ, ಅವರಲ್ಲಿ ಆಸಕ್ತಿಯಿಂದ ಕಥೆ ಕೇಳುವ ಇಚ್ಛಾಶಕ್ತಿಯನ್ನು ಉದ್ದೀಪನಗೊಳಸಿದರು. ಈ ಶಕ್ತಿಯು ಅವರನ್ನು ರಾಜನೀತಿ ಶಿಕ್ಷಣ, ನೀತಿಶಾಸ್ತ್ರ, ಅರ್ಥಶಾಸ್ತ್ರ ಮುಂತಾದ ಶಾಸ್ತ್ರಗಳನ್ನು ಅರ್ಥಮಾಡಿಕೊಳ್ಳುವಷ್ಟು ಮುನ್ನಡೆಯನ್ನು ತಂದುಕೊಟ್ಟಿತು. ಮತ್ತೊಂದು ಇಂಥಹದೇ ಸಂದರ್ಭವನ್ನು ಗುಮಾನಿ ಕವಿಯ उपदेशशतकं ನಲ್ಲಿ ಕಾಣಬಹುದು:-

विद्यां कचो बुभुत्सुः शुक्रात्संजीवनीं विनीतात्मा ।

सुरपक्षगोऽपि लेभे विनयात्संसाधयेत्कार्यम् ॥[36]

ಅಂದರೆ ವಿದ್ಯೆಯನ್ನು ಕಲಿಯುವ ಇಚ್ಛೆಯುಳ್ಳವನಾಗಿದ್ದ, ವಿನಯವಂತನಾದ ಕಚನು ದೇವತೆಗಳ

35. **ಕಠೋಪನಿಷತ್ತು,** ವ-3, ಶ್ಲೋ-14

36. **ವೆಂಕಣ್ಣಯ್ಯ ತ.ಶಾ,** ಗುಮಾನಿ ಕವಿಯ ಉಪದೇಶಶತಕಮ್ (ಕನ್ನಡಾನುವಾದ) (1989). ಶ್ಲೋ-88, ಪು-81, ಶ್ರೀ ಶಾರದಾ ಟ್ರಸ್ಟ್, 4581, ಗೋಮತಿ, ನ.ರಾ.ಮೊ, ಮೈಸೂರು-570007

ಗುಂಪಿಗೆ ಸೇರಿದವನಾಗಿದ್ದೂ ಸಹ ಶುಕ್ರಾಚಾರ್ಯನಿಂದ ಸಂಜೀವಿನೀ ವಿದ್ಯೆಯನ್ನು ಕಲಿತನು. ಆದ್ದರಿಂದ ವಿನಯದಿಂದ ಕಾರ್ಯವನ್ನು ಸಾಧಿಸಿಕೊಳ್ಳಬೇಕು

## ~ ಬುದ್ಧಿ ಶಕ್ತಿ ~

ಮನೋವಿಜ್ಞಾನ ಕ್ಷೇತ್ರದಲ್ಲಿ, ಅದರಲ್ಲೂ ಇದರ ಅನ್ವಯಿಕ ವಿಜ್ಞಾನ–ಶೈಕ್ಷಣಿಕ ಮನೋವಿಜ್ಞಾನದಲ್ಲಿ ಬುದ್ಧಿಶಕ್ತಿ ಎಂಬ ಪದ ಬಹಳ ಬಳಕೆಯಲ್ಲಿರುವಂತಾದ್ದು. ಮಕ್ಕಳು ಶಾಲಾ ತರಗತಿಗಳಲ್ಲಿ ಉನ್ನತ ಶ್ರೇಣಿಯನ್ನು ಗಳಿಸಿದರೆ ಅಥವಾ ಸಮಸ್ಯೆಗಳನ್ನು ಸುಲಭವಾಗಿ ಬಿಡಿಸಿದರೆ, ಒಳ್ಳೆಯ ವಾಕ್ಚಾತುರ್ಯವನ್ನು ತೋರಿದರೆ ಅವನನ್ನು ಬುದ್ಧಿವಂತ ಅಥವಾ ಅವನ ಬುದ್ಧಿಶಕ್ತಿ ಬಹಳ ಚುರುಕಾಗಿದೆ ಎಂದೆಲ್ಲ ಸಾಮಾನ್ಯವಾಗಿ ಹೇಳುತ್ತಾರೆ. ವ್ಯಕ್ತಿಯ ಸಾಮರ್ಥ್ಯ ಹಾಗೂ ಸಾಧನೆಯನ್ನು ಸೂಚಿಸುವಂತಹ ಒಂದು ನಿರ್ಧಿಷ್ಟ ವರ್ತನೆಗೆ ಬುದ್ಧಿಶಕ್ತಿಯೇ ಕಾರಣ.[37] ಇದನ್ನು ಇನ್ನೂ ಸರಳವಾಗಿ ಹೇಳುವುದಾದರೆ ಬುದ್ಧಿಶಕ್ತಿಗೆ "ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವ ಮತ್ತು ಅವುಗಳನ್ನು ಸುಲಭವಾಗಿ ಪರಿಹರಿಸಿಕೊಳ್ಳುವ ಸಾಮರ್ಥ್ಯ" ಎಂಬ ಅರ್ಥ ನೀಡಬಹುದು

ಬುದ್ಧಿಶಕ್ತಿಯ ವ್ಯಾಪ್ತಿ ಎಷ್ಟು ವಿಶಾಲವಾಗಿದೆ ಎಂಬುದು ಪಂಚತಂತ್ರ ಕಥೆಗಳಲ್ಲಿ ಸಂಯೋಜಿಸಿರುವ ದೃಷ್ಟಾಂತಗಳನ್ನು ಗಮನಿಸಿದರೆ ಎಂಥಹವರಿಗೂ ಮನಮುಟ್ಟುವಂತೆ ಪ್ರಸ್ತುತಪಡಿಸಲಾಗಿದೆ. "ಪುರಾಣೇತಿಹಾಸಗಳಲ್ಲಿ ಬರುವ ಪ್ರಸಿದ್ಧ ವ್ಯಕ್ತಿಗಳಲ್ಲಿ ಅನೇಕರು ಪ್ರತಿಭಾವಂತರೆನಿಸಿರುವರು. ಅವರಲ್ಲಿ ಕೆಲವರು ಬುದ್ಧಿವಂತರು ಮಾತ್ರ. ಇನ್ನುಳಿದವರು ಬುದ್ಧಿಶಕ್ತಿಯ ಜೊತೆಗೆ ಸೂಕ್ಷ್ಮದರ್ಶನ, ಉಜ್ವಲ ರಸದೃಷ್ಟಿ, ಉನ್ನತ ಮನೋಭಾವಗಳು, ಕಾರ್ಯಯೋಜನೆ ಶಕ್ತಿ, ಅದನ್ನು ನಿರ್ವಹಿಸುವ ಕೌಶಲ್ಯ, ಕಲ್ಪನೆ, ಸಹೃದಯತೆ, ಉದಾತ್ತ ತತ್ವಚಿಂತನೆ, ಸಂಸ್ಕೃತಿ–ನಾಗರಿಕತೆಗಳನ್ನು ಪರಿಣಾಮಗೊಳಿಸುವ ವ್ಯಕ್ತಿತ್ವ ಇವೇ ಮುಂತಾದ ಗುಣಗಳನ್ನು ಬೆಳೆಸಿಕೊಂಡಿದ್ದರು. ಇದೆಲ್ಲವನ್ನೂ ಒಟ್ಟು ಸೇರಿಸಿ ಪ್ರತಿಭೆ ಎನ್ನಬಹುದು. ಈ ಪ್ರತಿಭೆಗೆ ಭದ್ರ ಬುನಾದಿಯೇ ಬುದ್ಧಿಶಕ್ತಿ.[38] ಬುದ್ಧಿಶಕ್ತಿಯನ್ನು ಜಾಗೃತಿಯಿಂದ ವ್ಯವಸ್ಥಿತವಾಗಿ, ಸಂದರ್ಭೋಚಿತವಾಗಿ ಸದುಪಯೋಗ ಮಾಡಿಕೊಂಡಾಗ ಪ್ರತಿಭೆಯಾಗುತ್ತದೆ. ಸರಳವಾಗಿ ಹೇಳುವುದಾದರೆ ಬುದ್ಧಿಶಕ್ತಿಯ ಪುಷ್ಪವಿಕಸನವೇ ಪ್ರತಿಭೆ.

न स्वल्पस्य कृते भूरि नाशयेन्मतिमान्नरः ।

एतदेवात्र पाण्डित्यं यत्स्वल्पाद् भूरिरक्षणम् ॥[39]

---

38. **ವಾಮದೇವಪ್ಪ. ಎಚ್. ವಿ,** ಶೈಕ್ಷಣಿಕ ಮನೋವಿಜ್ಞಾನ, ಅ–3, ಪು–118, (2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

38. **ವೀರಪ್ಪ. ಎನ್.ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–16, ಪು–389.(1962)ಡಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

39. **ಸುಧಾಕರ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಂ, ಪ್ರ..ತಂ.ಶ್ಲೋ–19– ಪು–19,(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಬುದ್ಧಿವಂತನಾದ ಮನುಷ್ಯ ಸ್ವಲ್ಪ ಪ್ರಯೋಜನಕ್ಕಾಗಿ ದೊಡ್ಡದನ್ನು ನಾಶಮಾಡಿಕೊಳ್ಳಬಾರದು. ಸ್ವಲ್ಪವನ್ನು ಬಿಟ್ಟುಕೊಟ್ಟು ಹೆಚ್ಚಾದುದನ್ನು ಕಾಪಾಡಿಕೊಳ್ಳುವುದೇ ಇಲ್ಲಿ ಪಾಂಡಿತ್ಯ ಅಥವಾ ಪ್ರತಿಭೆ.

प्रज्ञा नवनवोल्लेखशालिनी प्रतिभा मता ।

तदनुप्राणनाजीवद्वर्णनानिपुणः कविः ॥[40]

ಅಂದರೆ, ಹೊಸಹೊಸದಾಗಿ ಉಲ್ಲೇಖಿಸುವ ಸಾಮರ್ಥ್ಯವುಳ್ಳ ಪ್ರಜ್ಞಾಶಕ್ತಿಗೆ ಪ್ರತಿಭೆಯೆಂದು ಹೆಸರು. ಆ ಪ್ರತಿಭೆಯನ್ನು ಅವಲಂಭಿಸಿ ಜೀವಂತವಾದ ವರ್ಣನೆಯನ್ನು ಮಾಡುವುದರಲ್ಲಿ ನೈಪುಣ್ಯವಿರತಕ್ಕವನೇ ಕವಿ.

ಹೀಗೆ "ಬುದ್ಧಿಶಕ್ತಿ ಅಥವಾ ಪ್ರತಿಭೆ ನಮ್ಮ ನಿತ್ಯ ಜೀವನದಲ್ಲಿ ಹೆಜ್ಜೆಹೆಜ್ಜೆಗೂ ತನ್ನ ಮಹತ್ವವನ್ನು ತೋರುತ್ತದೆ. ಕುಳಿತಾಗ, ನಿಂತಾಗ, ನಡೆದಾಗ, ನುಡಿದಾಗ ಅದು ತನ್ನ ಪ್ರಭಾವವನ್ನು ಬೀರುತ್ತದೆ. ಸಮಾಜದಲ್ಲಿ ಭಾಗವಹಿಸಿ ಇತರರೊಡನೆ ವ್ಯವಹರಿಸುವಾಗ, ಸನ್ನಿವೇಶಗಳೊಡನೆ ವರ್ತಿಸುವಾಗ, ಕಾರ್ಯಗಳನ್ನು ನಿಯೋಜಿಸುವಾಗ, ಅವುಗಳನ್ನು ಅನುಷ್ಠಾನಕ್ಕೆ ತರುವಾಗ ಪ್ರತಿಭೆ ತನ್ನ ಕೈವಾಡವನ್ನು ತೋರಿಸುತ್ತದೆ."[41] ಇವೆಲ್ಲವೂ ಮನೋ ವಿಜ್ಞಾನದ ಲಕ್ಷಣಗಳು. ಪಂಚತಂತ್ರದ ಕಥಾಪ್ರಸಂಗಗಳಲ್ಲಿ ಈ ಎಲ್ಲವನ್ನೂ ಕಾಣಬಹುದು. ಇನ್ನೊಂದು ವಿಶೇಷವೆಂದರೆ, ಅಂದಿನ ಕಾಲದಲ್ಲಿಯೇ ಇಷ್ಟು ಮುಂದುವರಿದ ವಿಚಾರ ಜ್ಞಾನ ಇದ್ದಿತೆಂಬುದೇ, ಪಂಚತಂತ್ರವನ್ನು ಒಂದು ಸೂಕ್ಷ್ಮ ಅಧ್ಯಯನ ನಡೆಸಿದಾಗ ಕಂಡುಬರುವ ಶ್ರೇಷ್ಠ ಗುಣ.

**"ಬುದ್ಧಿ"** ಬಹಳ ಮುಖ್ಯವಾದುದು. ಭಗವಂತನು ಮಾನವನಿಗೆ ಕರುಣಿಸಿರುವ ಒಂದು ವಿಶಿಷ್ಟ ವರ. ಇದರಿಂದಲೇ ಮಾನವನ ಶ್ರೇಷ್ಠತೆ ಹಾಗೂ ಮಹೋನ್ನತಿ. ಇಂಥಹ ವರವನ್ನು ಸದುಪಯೋಗ ಮಾಡಿಕೊಂಡು, ದೊರಕಿರುವ ಪ್ರತಿಷ್ಠೆ ಹಾಗೂ ಗೌರವವನ್ನು ಉಳಿಸಿಕೊಂಡು ಜನ್ಮಸಾರ್ಥಕತೆ ಸಾಧಿಸುವುದು ಮಾನವನ ಕರ್ತವ್ಯವಾಗಿದೆ. ಶ್ರೀಮದ್ಭಗವದ್ಗೀತಾ ಸಂದೇಶ ಬುದ್ಧಿಯನ್ನು ಕುರಿತು ಹೀಗೆ ಹೇಳಿ ಎಚ್ಚರಿಸಿದೆ.

क्रोधाद्भवति सम्मोहः सम्मोहात् स्मृतिविभ्रमः।

स्मृतिभ्रंशाद्बुद्धिनाशो बुद्धिनाशात्प्रणश्यति ॥[42]

---

40. **ಸುಭಾಷಿತಮಂಜರೀ,** ಕವಿ, ಕವಿಕಾವ್ಯಪ್ರಶಂಸೆ–ಶ್ಲೋ–26, ಪು–10, ಭಟ್ಟತೌತ.(2001)ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18
41. **ವೀರಪ್ಪ. ಎನ್.ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–16, ಪು–389.(1962)ಡಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
42. **ಭಗವದ್ಗೀತೆ,** ಸಾಂಖ್ಯ ಯೋಗ, ಶ್ಲೋ–63.

ಇದರರ್ಥವು ಹೀಗಿದೆ– ಕೋಪದಿಂದ ಅವಿವೇಕವು ಆವೇಶವಾಗುತ್ತದೆ; ಅವಿವೇಕದಿಂದ ಮತಿಭ್ರಮೆ ಉಂಟಾಗುತ್ತದೆ; ಅದರಿಂದ ಬುದ್ಧಿ ನಾಶವಾಗುತ್ತದೆ; ಬುದ್ಧಿ ನಾಶವಾದರೆ ಸರ್ವನಾಶವಾದಂತೆಯೇ.

ಹಲವಾರು ಮನೋವಿಜ್ಞಾನಿಗಳು ವಿವಿಧ ಬಗೆಯ ವ್ಯಾಖ್ಯೆಗಳನ್ನು ನೀಡಿರುತ್ತಾರೆ. ಅವುಗಳಲ್ಲಿ ಕೆಲವನ್ನು ಪರಿಶೀಲಿಸೋಣ.[43]

1. "ಉತ್ತಮವಾಗಿ ಶಬ್ದಾರ್ಥ ಗ್ರಹಣ ಮಾಡಿಕೊಳ್ಳುವ, ಉತ್ತಮವಾಗಿ ನಿರ್ಣಯಗಳನ್ನು ಕೈಗೊಳ್ಳುವ, ಉತ್ತಮವಾಗಿ ತರ್ಕಿಸುವ ವ್ಯಕ್ತಿಯ ಸಾಮರ್ಥ್ಯವೇ ಬುದ್ಧಿಶಕ್ತಿಯಾಗಿದೆ."

**"It seems to us that in intelligence there is a fundamental faculty, the alteration or the lack of which,is of the utmost importance for practical life. This faculty is judgement, otherwise called good sense, practical sense, initiative, the faculty of adapting ones self to circumstances.". ALFRED BINET-French psychologist.**

2. "ವ್ಯಕ್ತಿಯ ಅಮೂರ್ತ ಆಲೋಚನಾಶಕ್ತಿಯೇ ಬುದ್ಧಿಶಕ್ತಿ. **"The ability to carry on abstract thinking" LEWIS TERMAN -American Psychologist-pioneer in Educational Psychology**

3. "ಬುದ್ಧಿಶಕ್ತಿಯೆಂದರೆ ಈ ಕೆಳಕಂಡ ಲಕ್ಷಣಗಳನ್ನೊಳಗೊಂಡ ಚಟುವಟಿಕೆಗಳನ್ನು ಕೈಗೊಳ್ಳಲು ಇರುವ ಸಾಮರ್ಥ್ಯ, ಕ್ಲಿಷ್ಟತೆ, ಸಂಕೀರ್ಣತೆ, ಅಮೂರ್ತತೆ, ಮಿತವ್ಯಯ, ಗುರಿಯೊಂದಕ್ಕೆ ಹೊಂದಿಕೊಳ್ಳುವುದು, ಸಾಮಾಜಿಕ ಮೌಲ್ಯ ಮತ್ತು ಮೌಲಿಕ ವಿಚಾರಗಳ ಉಗಮ ಮತ್ತು ಶಕ್ತಿಯನ್ನು ಕೇಂದ್ರೀಕರಿಸ ಬೇಕಾದ ಮತ್ತು ಸಂವೇಗಾತ್ಮಕ ಒತ್ತಡಗಳನ್ನು ಪ್ರತಿರೋಧಿಸಬೇಕಾದ ಸನ್ನಿವೇಶಗಳಲ್ಲಿಯೂ ಕೂಡ ಮುಂದುವರಿಯುವ ಸಾಮರ್ಥ್ಯ"

**".....The ability to undertake activities that are characterized by (1) difficulty,(2) complexity (3) abstractness (4) economy (5) adaptedness to goal,(6) social value, and (7) the emergence of originals,and to maintain such activities under conditions that demand a concentration of energy and a resistance to emotional forces.". by- GEORGE**

---

43. **ವಾಮದೇವಪ್ಪ. ಎಚ್. ವಿ,** ಶೈಕ್ಷಣಿಕ ಮನೋವಿಜ್ಞಾನ, ಅ-3, ಪು-118-119,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005

**D. STODDARD-was the president of University of Illinois and the University of the State of New York-Chancellor of New York University & Long Island University. Academic Administrator.**

4. "ವ್ಯಕ್ತಿಯು ಉದ್ದೇಶಪೂರ್ವಕವಾಗಿ ವರ್ತಿಸಲು, ತರ್ಕಬದ್ಧವಾಗಿ ಯೋಚಿಸಲು ಮತ್ತು ಪರಿಸರದೊಂದಿಗೆ ಸಮರ್ಪಕವಾದ ರೀತಿಯಲ್ಲಿ ಹೊಂದಿಕೊಳ್ಳಲು ಬೇಕಾದ ಒಟ್ಟು ಸಾಮರ್ಥ್ಯವನ್ನು ಅಥವಾ ಸಾಮರ್ಥ್ಯದ ಸಮಷ್ಟಿಯನ್ನು ಬುದ್ಧಿಶಕ್ತಿ ಎಂದು ಕರೆಯಬಹುದು. **" The global capacity of a person to act purposefully,to think rationally,and to deal effectively with his environment." by DAVID WECHSLER- a Romanian-American Psychologist-developped well known intelligence scales.**.

**5. "Intelligence is what is measured by intelligent tests.". EDWIN BORING.- American Experimental Psychologist, Professor of Psychology at Clark University and at Harvard University.**

ಮೇಲಿನ ಬುದ್ಧಿಶಕ್ತಿಯ ವ್ಯಾಖ್ಯೆಗಳನ್ನು ಗಮನಿಸಿದರೆ ಅವುಗಳಲ್ಲಿ ಕಂಡುಬರುವ ಮುಖ್ಯ ಲಕ್ಷಣಗಳೆಂದರೆ, ಅಮೂರ್ತ ಚಿಂತನೆ, ಹೊಸ ಸನ್ನಿವೇಶದೊಡನೆ ಹೊಂದಾಣಿಕೆ, ಉದ್ದೇಶಪೂರ್ವಕ ವರ್ತನೆ ಸಾಧನೆಗಳ ಮಿತವ್ಯಯ ಮತ್ತು ದಕ್ಷತೆ, ಹಿಂದಿನ ಜ್ಞಾನವನ್ನು ಉಳಿಸಿಕೊಳ್ಳುವ ಮತ್ತು ಪುನರ್ ಸ್ಮರಣೆಗೆ ತಂದುಕೊಳ್ಳುವ ಸಾಮರ್ಥ್ಯ ಎಂಬುದು ಸ್ಪಷ್ಟವಾಗುತ್ತದೆ. ಮನೋವಿಜ್ಞಾನಿಗಳು ಬುದ್ಧಿಶಕ್ತಿಯ ಸ್ವರೂಪದ ಬಗ್ಗೆ ಕೆಲವು ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದಾರೆ. ಪ್ರಾರಂಭದಲ್ಲಿ ತತ್ವಜ್ಞಾನಿಗಳು ಬುದ್ಧಿಶಕ್ತಿಯ ಏಕಕಾರಕ ಸಿದ್ಧಾಂತವನ್ನು ಅಭಿವೃದ್ಧಿಪಡಿಸಿದರು. ಇವರ ಅಭಿಪ್ರಾಯದಂತೆ ಬುದ್ಧಿಶಕ್ತಿ ಜೀವನದ ಎಲ್ಲಾ ಸನ್ನಿವೇಶಗಳಲ್ಲೂ ಸಮಾನವಾಗಿ ಕಾರ್ಯನಿರ್ವಹಿಸುವಂತಹ ಒಂದು ಲಕ್ಷಣದಿಂದ ಕೂಡಿದೆ.[44]

ಕೆಲವು ಮುಖ್ಯವಾದ ಬುದ್ಧಿಶಕ್ತಿಯ ಸಿದ್ಧಾಂತಗಳನ್ನು ಬಹಳ ಸಂಕ್ಷಿಪ್ತವಾಗಿ ಪರಾಮರ್ಶನ ದೃಷ್ಟಿಯಿಂದ ತಿಳಿಯುವುದಾದರೆ-

---

44. **ವಾಮದೇವಪ್ಪ. ಎಚ್. ವಿ,** ಶೈಕ್ಷಣಿಕ ಮನೋವಿಜ್ಞಾನ, ಅ-3, ಪು-119-120,(2005) ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005

1. **ಮಾನಸಿಕ ಶಿಸ್ತಿನ ಸಿದ್ಧಾಂತ** :– ಬುದ್ಧಿಶಕ್ತಿ ಸ್ವರೂಪವನ್ನು ಕುರಿತ ಹಳೆಯ ಸಿದ್ಧಾಂತವಿದು. ಇದು ಹೆಚ್ಚು ಪ್ರಚಲಿತವಾಗಿದ್ದ ಕಾಲ 18, 19ನೇ ಶತಮಾನ. ಮನಸ್ಸು ಎನ್ನುವುದು ತಾರ್ಕಿಕತೆ, ಸ್ಮೃತಿ, ವಿಭೇದಿಕರಣ ಮತ್ತು ಕಲ್ಪನಾಶಕ್ತಿಯಿಂದ ಕೂಡಿದೆ. ಪ್ರಾಯೋಗಿಕ ಮನೋವಿಜ್ಞಾನಿಗಳು ಈ ವಾದವನ್ನು ಅಲ್ಲಗಳೆದಿದ್ದಾರೆ.

2. **ದ್ವಿಕಾರಕ ಸಿದ್ಧಾಂತ**:– ಬ್ರಿಟಿಷ್ ಮನೋವಿಜ್ಞಾನಿ **CHARLES SPEARMAN** 1904ರಲ್ಲಿ ಈ ಸಿದ್ಧಾಂತವನ್ನು ಅಭಿವೃದ್ಧಿಪಡಿಸಿದನು. ಇವನ ಪ್ರಕಾರ ಬೌದ್ಧಿಕ ಸಾಮರ್ಥ್ಯಗಳು ಎರಡು:–. ಒಂದು 'ಉ'ಕಾರಕ – ಸಾಮಾನ್ಯ ಮಾನಸಿಕ ಸಾಮರ್ಥ್ಯ.

ಮತ್ತೊಂದು 'ಖ ಕಾರಕ– ನಿರ್ದಿಷ್ಟ ಸಾಮರ್ಥ್ಯ. 'ಉ'ಕಾರಕದ ಲಕ್ಷಣಗಳೆಂದರೆ–ಹುಟ್ಟಿನಿಂದ ಪಡೆದುಕೊಂಡು ಬಂದಿರುವ ಸಾಮರ್ಥ್ಯ, ಅನುವಂಶೀಯವಾದುದು. ಇದು ಸಾಮಾನ್ಯವಾಗಿ ಮಾನಸಿಕ ಶಕ್ತಿಯಾಗಿದೆ. **'S'** ಕಾರಕದ ಲಕ್ಷಣಗಳೆಂದರೆ – ಇದು ಕಲಿತಂತಹ ಮತ್ತು ಪರಿಸರದಿಂದ ರೂಢಿತವಾದಂತಹ ಗುಣ.

3. **ಬಹುಕಾರಕ ಸಿದ್ಧಾಂತ**:– ಅಮೆರಿಕಾದ ಮನೋವಿಜ್ಞಾನಿ **E.L.THORNDIKE** ರವರು ಪ್ರಸ್ತುತ ಪಡಿಸಿದ ಸಿದ್ಧಾಂತ. ಇವರ ಪ್ರಕಾರ ನಿರ್ದಿಷ್ಟ ಉದ್ದೀಪನಗಳಿಗೆ ನಿರ್ದಿಷ್ಟ ಅನುಕ್ರಿಯೆಗಳು ಕಂಡುಬರುತ್ತವೆ. ಸಾಮಾನ್ಯ ಬುದ್ಧಿಶಕ್ತಿ ಎಂಬುದಿಲ್ಲ. ಬುದ್ಧಿಶಕ್ತಿಯ ಮಟ್ಟ, ವ್ಯಾಪ್ತಿ, ಕ್ಷೇತ್ರ ಮತ್ತು ವೇಗ ಎಂಬ ನಾಲ್ಕು ಆಯಾಮಗಳನ್ನೊಳಗೊಂಡಿದೆ. ಈ ವಾದವನ್ನು ಆಧರಿಸಿ ಥಾರ್ನ್ಡೈಕರು ಬುದ್ಧಿಶಕ್ತಿ ಪರೀಕ್ಷೆಯನ್ನು ರೂಪಿಸಿರುತ್ತಾರೆ.

4. **ಬುದ್ಧಿಶಕ್ತಿಯ ಸಮೂಹಕಾರಕ ಸಿದ್ಧಾಂತ**:– **LOUIS LEON THURSTONE - American Psychologist** ಈ ಸಿದ್ಧಾಂತವನ್ನು ಪ್ರಸ್ತುತ ಪಡಿಸಿದವರು. ಇವರ ಪ್ರಕಾರ ಬುದ್ಧಿಶಕ್ತಿ ಕೇವಲ 'ಉ'ಎಂಬ ಸಾಮಾನ್ಯ ಮಾನಸಿಕ ಸಾಮರ್ಥ್ಯವನ್ನು ಹೊಂದಿರದೆ, ಅಷ್ಟೇ ಪ್ರಮುಖವಾದಂತಹ ಹಲವಾರು ಕಾರಕಗಳು ಅಥವಾ ಸಹಜ ಸಾಮರ್ಥ್ಯವನ್ನೊಳಗೊಂಡಿದೆ.

5. **ಬುದ್ಧಿಶಕ್ತಿಯ ಮೂರು ಆಯಾಮಗಳ ಸಿದ್ಧಾಂತ**:– **J.P.GUILFORD** ರವರು 1966ರಲ್ಲಿ ಹಲವಾರು ಬುದ್ಧಿಶಕ್ತಿ ಕಾರಕಗಳ ವಿಶ್ಲೇಷಣೆಯ ಆಧಾರದ ಮೇಲೆ ಅಭಿವೃದ್ಧಿ ಪಡಿಸಿರುತ್ತಾರೆ. ಇವರ ಪ್ರಕಾರ ಮನಸ್ಸು ಮೂರು ಆಯಾಮಗಳಿಂದ ರಚಿತವಾಗಿದೆ. ಈ ವಾದದ ಪ್ರಕಾರ ಅನೇಕ ನಿರ್ದಿಷ್ಟ ಬೌದ್ಧಿಕ ಸಾಮರ್ಥ್ಯಗಳ ವಿಶಿಷ್ಟ ಸಂಘಟನೆಯೇ ಬುದ್ಧಿಶಕ್ತಿ. ಈ ಮಾದರಿ ಬೌದ್ಧಿಕ ಸಾಮರ್ಥ್ಯಗಳ ಕ್ರಿಯೆಗಳು, ವಸ್ತು ಮತ್ತು ಉತ್ಪನ್ನ ಎಂಬ ಮೂರು ಆಯಾಮಗಳನ್ನೊಳಗೊಂಡಿದೆ.

## ಸಾಮಾನ್ಯ ಜ್ಞಾನ

ಪ್ರಪಂಚ ನಮಗೆ ಪ್ರತಿ ಕ್ಷಣವೂ ವಿದ್ಯೆಯನ್ನು ಕಲಿಸಲು ತವಕಿಸುತ್ತಲೇ ಇರುತ್ತದೆ. ಆದರೆ ನಾವು ಮಾತ್ರ ಅದನ್ನು ಗ್ರಹಿಸಲೂ, ಕಲಿಯಲೂ ವಿಫಲರಾಗುತ್ತಿದ್ದೇವೆ. ವಿಶ್ವಶಿಕ್ಷಣವನ್ನು ಪಡೆಯಬೇಕಾದರೆ ನಮ್ಮಲ್ಲಿ ಬುದ್ಧಿಶಕ್ತಿಯೂ ಇರಬೇಕಷ್ಟೆ. ಈ ಬುದ್ಧಿಶಕ್ತಿಯನ್ನೇ ನಾವು ಸಾಮಾನ್ಯ ಜ್ಞಾನ**(General Knowledge)** ಎಂದು ಹೇಳುತ್ತೇವೆ. ಇದು ಎಲ್ಲ ಜ್ಞಾನಕ್ಕಿಂತಲೂ ಅಮೂಲ್ಯವೂ, ಆದರೆ ಅತ್ಯಂತ ದುರ್ಲಭ ಎನಿಸಿಕೊಂಡಿದೆ. ಸಾಮಾನ್ಯ ಜ್ಞಾನದಿಂದಲೇ ನಾವು ಜ್ಞಾನಾರ್ಜನೆಯ ಶೇ.25ರಷ್ಟನ್ನು ಕಲಿಯುತ್ತೇವೆನ್ನುವುದು ಮಹಾಭಾರತದ ಮಾತು. ನಾವು ನಮ್ಮ ಅಕ್ಕಪಕ್ಕದವರೊಡನೆ ನಮ್ಮ ಅಭಿಪ್ರಾಯಗಳನ್ನು ಹಾಗೂ ಆಲೋಚನೆಗಳನ್ನು ಎಷ್ಟರಮಟ್ಟಿಗೆ ಹಂಚಿಕೊಳ್ಳುತ್ತೇವೆ; ಅವರೊಂದಿಗೆ ಆರೋಗ್ಯಪೂರ್ಣ ಚಿಂತನ-ಮಂಥನಗಳಲ್ಲಿ ಎಷ್ಟು ತೊಡಗಿಕೊಳ್ಳುತ್ತೇವೆ ಎನ್ನುವುದು ನಮ್ಮ ಜ್ಞಾನ ಭಂಡಾರದ ಅಭಿವೃದ್ಧಿಗೆ ಸಹಕಾರಿಯಾಗಿದೆ. ನಮ್ಮ ತಿಳುವಳಿಕೆಯನ್ನು ಇನ್ನೊಬ್ಬರಲ್ಲಿ ಹಂಚಿಕೊಳ್ಳುವುದರಿಂದ ನಮ್ಮ ಅರಿವು ಪರಿಷ್ಕಾರವಾಗುವುದು. ಇದರಿಂದ ನಮ್ಮ ಕಲಿಕೆಯ ಸಾಮರ್ಥ್ಯವೂ ಹೆಚ್ಚುವುದು. ಈ ಎಲ್ಲ ಕಾರಣಗಳಿಂದ ನಮ್ಮ ಸುತ್ತಲಿನ ಜಗತ್ತಿನೊಂದಿಗೆ ನಾವು ನಿರಂತರವಾಗಿ ಸಂವಾದವನ್ನು ನಡೆಸುತ್ತಿರುವುದು ಒಳ್ಳೆಯದು.

**"ಶಾಸ್ತ್ರಗಳಲ್ಲಿ ಕುಶಲರಾಗಿದ್ದರೂ ಲೋಕವ್ಯವಹಾರ ತಿಳಿಯದ ಮೂರ್ಖ ಪಂಡಿತರು ಅಪಹಾಸ್ಯಕ್ಕೆ ಗುರಿಯಾಗುತ್ತಾರೆ."** ಅಂದರೆ ಲೋಕವ್ಯವಹಾರ ಅಥವಾ ಸಾಮಾನ್ಯ ಜ್ಞಾನ ಇಲ್ಲದೆ ಶಾಸ್ತ್ರಗಳಲ್ಲಿ ಎಷ್ಟೇ ಪಾಂಡಿತ್ಯ ಪಡೆದಿದ್ದರೂ, ಎಷ್ಟೇ ವಿದ್ಯಾವಂತನಾಗಿದ್ದರೂ, ಕುಲೀನನಾಗಿದ್ದರೂ ಬುದ್ಧಿಯಿಲ್ಲದೆ ಮೂರ್ಖನಾಗಿ ಅಪಹಾಸ್ಯಕ್ಕೆ ಒಳಗಾಗುವ ಉತ್ತಮ ನಿದರ್ಶನಗಳನ್ನು, ವಿಷ್ಣುಶರ್ಮರು ತಮ್ಮ ಪಂಚತಂತ್ರದ ಕೊನೆಯ ತಂತ್ರದಲ್ಲಿ ಬರುವ **"ನಾಲ್ಕುಮೂರ್ಖ ಪಂಡಿತರ ಕಥೆ"** ಮೂಲಕ ಬಹಳ ಸ್ವಾರಸ್ಯಕರವಾಗಿ ನಿರೂಪಿಸಿದ್ದಾರೆ.

पठन्ति वेदशास्त्राणि बोधयन्ति परस्परम् ।

न जानन्ति परं तत्वं दर्वी पाकरसं यथा ॥[45]

ವೇದಗಳನ್ನೂ, ಶಾಸ್ತ್ರಗಳನ್ನೂ ಓದುತ್ತಾರೆ. ಒಬ್ಬರಿಗೊಬ್ಬರು ಕಲಿಸುತ್ತಾರೆ. ಆದರೆ ಪರತತ್ವವನ್ನು ಅರಿತಿಲ್ಲ. ಸೌಟಿಗೆ ಅಡಿಗೆ ರುಚಿ ಗೊತ್ತೇ! ಅಂದರೆ ಬರೀ ಪುಸ್ತಕದ ಜ್ಞಾನ ಇದ್ದರೆ ಸಾಲದು, ಸ್ವಲ್ಪ ಸಾಮಾನ್ಯ ಜ್ಞಾನ ಇರಬೇಕು. ವಿಚಾರಗಳನ್ನು ಸ್ಪಷ್ಟವಾಗಿ ಆಲಿಸಿ, ವಿಚಾರಗಳ ಪೂರ್ವಾಪರದ ಬಗ್ಗೆ ಸ್ಪಷ್ಟವಾಗಿ ಆಲೋಚಿಸಿ ಪ್ರತಿಕ್ರಿಯೆ ನೀಡಬೇಕು.

---

45. **ಸುಭಾಷಿತಮಂಜರೀ,** ಸದ್ಗುಣ-ದುರ್ಗುಣ-ಶ್ಲೋ-183, ಪು-168, ಗರುಡಪುರಾಣ, 16-78.(2001)ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18

ಇತ್ತೀಚಿನ ದಿನಗಳಲ್ಲಿ ಒಂದು ಹೇಳಿಕೆ ಬಹಳ ಹೆಚ್ಚು ಪ್ರಚಲಿತವಾಗಿದೆ. ಅದೇನೆಂದರೆ, ಹುಡುಗ ಶ್ರೇಷ್ಠ ದರ್ಜೆಯಲ್ಲಿ ಉತ್ತೀರ್ಣ; ಬದುಕಲು ಮಾತ್ರ ಅರಿಯ. ಹೀಗೆ ಬಹಳಷ್ಟು ಜನರಿರುತ್ತಾರೆ. ಅವರಿಗೆ ಸರಿಯಾದ ತರಬೇತಿ ಇಲ್ಲದಿರುವುದೇ ಅದಕ್ಕೆ ಕಾರಣ. ಇಲ್ಲಿಯೂ ಸಹ ಬುದ್ಧಿಶಕ್ತಿಯ ಸೂಕ್ತ ಬಳಕೆ ಹಾಗೂ ಆಲೋಚನೆ ವಿವೇಚನೆ ಸಾಮಾನ್ಯಜ್ಞಾನಕ್ಕೆ ಹೆಚ್ಚಾಗಿ ನೆರವಾಗುತ್ತದೆ. "ಕೆಲವಂ ಬಲ್ಲವರಿಂದ ಕಲ್ತು, ಕೆಲವಂ ಶಾಸ್ತ್ರಂಗಳಿಂ ಕೇಳುತಂ?. **"ಸರ್ವಜ್ಞನೆಂಬುವನು ಗರ್ವದಿಂದಾದವನೆ ಎಲ್ಲರೊಳಗೊಂದೊಂದು ನುಡಿಗಲಿತು ವಿದ್ಯೆಯ ಪರ್ವತವೆ ತಾನಾದ ಸರ್ವಜ್ಞ"** ಎಂಬುದೂ ಕೂಡ ಶಿಕ್ಷಣ ಹೇಗೆ ಹೇಗೆಲ್ಲ ನಡೆಯಬೇಕು ಎಂಬುದನ್ನು ಮನದಟ್ಟು ಮಾಡಿಕೊಡುತ್ತದೆ.[46] ಬರೀ ಪುಸ್ತಕದ ಹುಳುವಾದರೆ ಪ್ರಯೋಜನವಿಲ್ಲ. ಜೊತೆಗೆ ಸಾಮಾನ್ಯ ಜ್ಞಾನ, ಸುಂದರ ಬದುಕಿನ ಪರಿಜ್ಞಾನದ ಪ್ರೀತಿ ಇರಬೇಕು. ಸಾಮಾನ್ಯ ಜ್ಞಾನವಿಲ್ಲದಿದ್ದರೆ, ವಿದ್ಯಾವಂತನಾದರೂ ಬುದ್ಧಿಇಲ್ಲದವನೇ ಆಗುತ್ತಾನೆ. ಆಂಗ್ಲ ಭಾಷೆಯಲ್ಲಿ **"Intelligent no doubt but lack Common sense"** ಎಂದೂ ಹೇಳುತ್ತಾರೆ.

ಮಾನವ ಇಂದು ವೈಜ್ಞಾನಿಕವಾಗಿ ಪ್ರಗತಿ ಹೊಂದಿದ್ದಾನೆ. ಆದರೆ ಸುಖ, ಶಾಂತಿಗಳಿಲ್ಲದೆ, ಹಲವಾರು ಸಮಸ್ಯೆಗಳಿಗೀಡಾಗಿದ್ದಾನೆ. ಡಾ.ರಾಧಾಕೃಷ್ಣನ್ ಇವರು ಹೇಳಿರುವ ಈ ಒಂದು ಉಕ್ತಿಯನ್ನು ಸ್ಮರಿಸಿಕೊಳ್ಳಬಹುದು. **"ಮಾನವ ಹಕ್ಕಿಯಂತೆ ಹಾರಾಡುವುದನ್ನು, ಮೀನಿನಂತೆ ಈಜುವುದನ್ನು ಕಲಿತ. ಆದರೆ ಮಾನವನಾಗಿ ಬಾಳುವುದನ್ನು ಮಾತ್ರ ಕಲಿಯಲಿಲ್ಲ."** ಅಂದರೆ ಮಾನವನಾಗಿ ಬಾಳಲು ಇರಬೇಕಾದ ಜೀವನ ಮೌಲ್ಯಗಳನ್ನು, ದೈನಂದಿನ ಬದುಕಿನ ಸಾಮಾನ್ಯ ಜ್ಞಾನವನ್ನು ಬೆಳೆಸಿಕೊಂಡಿಲ್ಲವೆಂದರ್ಥ.[47] ಸರಳವಾಗಿ ಹೇಳುವುದಾದರೆ, **"ಓದು ಒಕ್ಕಾಲು, ಬುದ್ಧಿ ಮುಕ್ಕಾಲು"**. ಒಕ್ಕಾಲಿದೆ ಆದರೆ ಮುಕ್ಕಾಲು ಇರಬೇಕಾದುದೇ ಇಲ್ಲ.

सहसा विदधीत न क्रियामविवेकः परमापदां पदम्।

वृणुते हि विमृश्यकारिणं गुणलुब्धाः स्वयमेव संपदः॥[48]

ಹಿಂದುಮುಂದು ಆಲೋಚಿಸದೆ ಯಾವುದೇ ಕೆಲಸಕ್ಕೆ ಕೈ ಹಾಕಬಾರದು, ಸರಿಯಾಗಿ ತಿಳಿಯದಿರುವಿಕೆಯು ದೊಡ್ಡ ಅಪಾಯವನ್ನುಂಟುಮಾಡುತ್ತದೆ. ಒಳ್ಳೆಯ ಗುಣಗಳನ್ನಪೇಕ್ಷಿಸುವ ಸಂಪತ್ತು ವಿಮರ್ಶೆಯಿಂದ ಕೆಲಸಮಾಡುವವನನ್ನು ತಾನಾಗಿ ಸೇರುತ್ತದೆ. ವಿಷ್ಣುಶರ್ಮರು ಬಹಳ ಚಮತ್ಕಾರದಿಂದ

---

46. **ಶಾಲೆಗಳಲ್ಲಿ ಮೌಲ್ಯಾಧಾರಿತ ಶಿಕ್ಷಣದ ಅಗತ್ಯ** – www.bangalorewavrs.com
47. **ಮೌಲ್ಯವರ್ಧಿತ ಶಿಕ್ಷಣ– ವಿಕಾಸ್ ಪೀಡಿಯಾ,** HTTPS://on.vikaspedia.in
48. **ಮಹಾಕವಿ ಭಾರವಿ ವಿರಚಿತ ಕಿರಾತಾರ್ಜುನೀಯಂ,** ಸ– 2, ಶ್ಲೋ–30.

ಮಾನವನ ಸದ್ಗುಣಗಳು ಜೊತೆ ಜೊತೆಯಲ್ಲಿ ಒಬ್ಬ ರಾಜನ ಗುಣಲಕ್ಷಣಗಳನ್ನು ಬಹಳ ಸರಳವಾಗಿ ಅರಸುಕುಮಾರರಿಗೆ ತಿಳಿಸುತ್ತಾರೆ.

गुणेषु रागो व्यसनेष्वनादरो रतिः सुभृत्येषु च यस्य भूपतेः ।

चिरं स भुङ्क्ते चलचामरांशुकां सितातपत्राभरणां नृपश्रियम् ॥[49]

ಅಂದರೆ ಯಾವ ರಾಜನಿಗೆ ಸದ್ಗುಣಗಳಲ್ಲಿ ಪ್ರೀತಿಯೂ, ಕೆಟ್ಟ ಹವ್ಯಾಸಗಳಲ್ಲಿ ಅನಾದರವೂ, ಒಳ್ಳೆಯ ಸೇವಕರಲ್ಲಿ ಸಂತೋಷವೂ ಇರುವುದೋ ಅಂಥಹವನು ಚಂಚಲವಾದ ಚಾಮರ ಮತ್ತು ವಸ್ತ್ರಗಳಿಂದ ಕೂಡಿದುದೂ, ಬೆಳ್ಗೊಡೆಯ ಆಭರಣವನ್ನು ಹೊಂದಿದುದೂ ಆದ ರಾಜ್ಯಲಕ್ಷ್ಮಿಯನ್ನು ಬಹುಕಾಲ ಅನುಭವಿಸುತ್ತಾನೆ. ಹೀಗೆ ಒಂದು ವಿಚಾರದಿಂದ ಮತ್ತೊಂದಕ್ಕೆ ಬಹಳ ಒಳ್ಳೆಯ ಸಂಬಂಧವನ್ನು ಕಲ್ಪಿಸಿ, ರಾಜನಂದನರಿಗೆ ಮನದಟ್ಟಾಗುವಂತೆ ರಾಜನೀತಿ ಶಿಕ್ಷಣವನ್ನು, ಬದುಕಿನ ನೀತಿಶಿಕ್ಷಣವನ್ನು ಅನುಗ್ರಹಿಸಿರುತ್ತಾರೆ.



49. **ಸುಧಾಕರ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಂ, ಪ್ರ..ತಂ. ಶ್ಲೋ–251, ಪು–611,(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

## 7–3. ಮೌಢ್ಯ ಮತ್ತು ಅದರ ಪರಿಣಾಮ

ಮನೋವಿಜ್ಞಾನದಲ್ಲಿ ಮೌಢ್ಯ ಎಂದರೆ **"ದಡ್ಡತನ"**, **"ತಿಳಿಗೇಡಿತನ"** ಎಂಬ ಅರ್ಥವಿದೆ. ಸಾಧಾರಣ ಭಾಷೆಯಲ್ಲಿ ಮೌಢ್ಯ, ಮೂಢ, ಎಂದರೆ **"ತಿಳುವಳಿಕೆ ಇಲ್ಲದವ, ವಿವೇಚನೆಯಿಲ್ಲದೆ ನಂಬುವವ"** ಎಂದೆಲ್ಲ ಅರ್ಥ ಮಾಡಿಕೊಳ್ಳಲಾಗುತ್ತದೆ. ವೈಜ್ಞಾನಿಕ ಚಿಂತನೆಯಿಂದ ಅನೇಕ ಮೌಢ್ಯಗಳು, ಮೌಢ್ಯಾಚರಣೆಗಳು ಇತ್ತೀಚಿನ ದಿನಗಳಲ್ಲಿ ಕಡಿಮೆಯಾಗಿವೆ ಎಂದು ಹೇಳಬಹುದು. ಹಳ್ಳಿಗಾಡಿನ ಜನರಲ್ಲಿ ಮನೆಮಾಡಿದ್ದ ಮೂಢ ನಂಬಿಕೆಗಳು– ಉದಾಹರಣೆಗೆ ರಾಜಾಸ್ಥಾನದ ಸತಿಪದ್ಧತಿ, ಚಂದ್ರಗುತ್ತಿಯ ಬೆತ್ತಲೆ ಸೇವೆ, ಮಂಗಳೂರಿನ ಅಜಲು ಪದ್ಧತಿ ಮುಂತಾದವು ಹಳ್ಳಿಗಾಡಿನ ಜನರಲ್ಲಿ ವೈಜ್ಞಾನಿಕ ಚಿಂತನೆಯನ್ನು ಮೂಡಿಸಲು ಸರ್ಕಾರದ ಸತತ ಪ್ರಯತ್ನದಿಂದ ನಿರ್ಮೂಲವಾಗಿವೆ. ಆದರೆ ಜಾಗತಿಕ ಮಟ್ಟದಲ್ಲಿ ಹುಲಿಯ ಅವಯವಗಳನ್ನು ಸೇವಿಸಿದರೆ ಪುರುಷತ್ವ ವೃದ್ಧಿಯಾಗುವುದು, ಘೇಂಡಾಮೃಗದ ಕೊಂಬು ಔಷಧೀಯ ಗುಣಗಳನ್ನು ಹೊಂದಿದೆ ಎಂದು ಬಹಳ ದೊಡ್ಡ ಮೌಢ್ಯ ಹರಿದಾಡುತ್ತಿದೆ. ಈ ಮೌಢ್ಯ ಕೇವಲ ಬಡತನದಲ್ಲಿರುವ ಹಳ್ಳಿ ಜನರಲ್ಲಿ ಮಾತ್ರ ಇರುವುದಲ್ಲ, ವೈಭವೋಪೇತ ಮಹಲುಗಳಲ್ಲಿ ವಾಸಿಸುವ, ಹೆಲಿಕಾಪ್ಟರ್‌ನಲ್ಲೇ ಓಡಾಡುವ ಶ್ರೀಮಂತರಲ್ಲೂ ತುಂಬಿಕೊಂಡಿರುವುದು. ಇದರ ಪರಿಣಾಮ ಹುಲಿ ಮತ್ತು ಘೇಂಡಾಮೃಗದ ಸಂತತಿ ಅಳಿವಿನಂಚಿನಲ್ಲಿದೆ. ಇನ್ನೂ ಸರಳವಾಗಿ ಹೇಳಬೇಕೆಂದರೆ ಟಿ.ವಿ.ಗಳಲ್ಲಿ ಪ್ರದರ್ಶಿಸುವ ಆಕರ್ಷಕ ಜಾಹೀರಾತುಗಳಿಗೆ ಮನಸೋಲದವರು ಎಷ್ಟಿಲ್ಲ! ಆದರೆ ಇವುಗಳಲ್ಲಿರುವ ರಾಸಾಯನಿಕ ವಸ್ತುಗಳು ಚರ್ಮವನ್ನು, ತಲೆಕೂದಲನ್ನು, ಹಲ್ಲುಗಳನ್ನು, ಕಣ್ಣುಗಳನ್ನು ಹಾಳುಮಾಡುವ ಸಾಧ್ಯತೆಗಳಿವೆಯೆಂಬುದನ್ನು ತಿಳಿಸುವ ವೈಜ್ಞಾನಿಕ ಜ್ಞಾನ ಇಂದು ಬೇಕಾಗಿದೆ. ಕಣ್ಣಿಗೆ ಆಕರ್ಷಕವಾಗಿದ್ದು, ಮನೋಜ್ಞವಾಗಿದೆ ಎಂದುಬಿಟ್ಟರೆ ಸಾಕು, ಕೂಡಲೇ ಹಿಂದು ಮುಂದು ಆಲೋಚಿಸದೆ ಶರಣಾಗಿಬಿಡುವುದು. ಇದೂ ಮೌಢ್ಯವೇ ಆಗಿರುತ್ತದೆ.

ಒಂದು ಕ್ರಮಬದ್ಧವಾದ ಚಿಂತನೆ ಇಲ್ಲದಿರುವುದೇ ಮೂಢತ್ವಕ್ಕೆ ಕಾರಣ. ಮೋಹಮುದ್ಗರದಲ್ಲಿ ಆದಿಶಂಕರರು ಎಷ್ಟು ಸರಳವಾಗಿ ಮೂಢತ್ವ ಕುರಿತು ಹೇಳಿದ್ದಾರೆ–

मूढ जहीहि धनागमतृष्णां कुरु सद्बुद्धिं मनसि वितृष्णाम् ।

यल्लभसे निजकर्मोपात्तं वित्तं तेन विनोदय चित्तम् ॥[50]

ಅಂದರೆ ಮೂಢನೇ, ಹಣವು ಬರಬೇಕೆಂದು ಹಾತುವರಿಯುವುದನ್ನು ಬಿಡು; ವೈರಾಗ್ಯವೆಂಬ ಉತ್ತಮವಾದ ಬುದ್ಧಿಯನ್ನು ಮನಸ್ಸಿನಲ್ಲಿ ರೂಢಿಮಾಡಿಕೊ; ನಿನ್ನ ಕರ್ಮಕ್ಕನುಗುಣವಾಗಿ ಎಷ್ಟು ಹಣ

---

೫೦. **ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು,** ಅನುವಾದಕರು, ಮೋಹಮುದ್ಗರ, 1–ದ್ವಾದಶಮಂಜರಿ, ಶ್ಲೋ–1,(1992) ಆಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೇನರಸೀಪುರ–573211

ದೊರೆತರೆ ಅಷ್ಟರಿಂದಲೇ ಮನಸ್ಸಿಗೆ ಸಂತೋಷವನ್ನುಂಟುಮಾಡಿಕೊ.

ಇನ್ನು ಮೌಢ್ಯವನ್ನು **"ತಿಳಗೇಡಿತನ"** ಅನ್ನಲಾಗುತ್ತದೆ–ಅಂದರೆ ತಿಳಿದಿದ್ದೂ, ತಿಳಿಯದವನಂತೆ ವರ್ತಿಸುವುದು. ಇದು ಆಲಸ್ಯದಿಂದಲೋ, ಉದಾಸೀನತೆಯಿಂದಲೋ, ಯಾವುದೋ ಜಿಗುಪ್ಸೆಯಿಂದಲೋ ಬರುವ ಮೌಢ್ಯ. ಮಹಾ ಪ್ರತಿಭೆಯ ವ್ಯಕ್ತಿಗಳಲ್ಲಿ ವಿಚಿತ್ರ ವರ್ತನೆಯ ಸ್ವಭಾವ ಕಂಡುಬರುವುದೆಂದು **American Psychologist,"HOLLINGWORTH"–** ಎಂಬಾಕೆ ಸಂಶೋಧನೆ ನಡೆಸಿ ಘೋಷಿಸಿದ್ದಾರೆ. ಇದಕ್ಕೆ ಅನೇಕ ಕಾರಣಗಳಿವೆ. ಏಕಾಂತ ವಾಸ, ಜನಸಾಮಾನ್ಯರೊಡನೆ ಸಂಪರ್ಕ ಕಡಿಮೆ, ಪ್ರೌಢವೂ ಪಾರಿಭಾಷಿಕವೂ ಆದ ಪದಗಳ ಬಳಕೆ, ತಮ್ಮ ಉತ್ತಮ ಪ್ರತಿಭೆಯನ್ನು ಅರಿಯಲಾರದ ಒಡನಾಡಿಗಳೊಡನೆ ಅಸಮಾಧಾನ ಏನೆಲ್ಲ ವ್ಯತಿರಿಕ್ತ ವರ್ತನೆಗಳು ಇಂತಹವರಲ್ಲಿ ಕಂಡುಬರುತ್ತದೆ. ಅಂಥಹವರಲ್ಲಿ ಒಂದು ರೀತಿಯ ಜಿಗುಪ್ಸೆ ಬಂದು ಕೆಲವರು ಎಲ್ಲ ವಿಚಾರಗಳಲ್ಲೂ ಉದಾಸೀನತೆ ಬೆಳೆಸಿಕೊಂಡು ಹಲವು ವೈಚಿತ್ರ್ಯವನ್ನು ಕಾಣಿಸುತ್ತಾರೆ. ಇವರು ವಿಚಾರಗಳನ್ನು ತಿಳಿದಿದ್ದರೂ, ತಿಳಿಗೇಡಿತನ ಇರುವವರಂತೆ ಕಂಡುಬರುತ್ತಾರೆ. ಇವರಿಗೆ ಸೂಕ್ತವಾದ, ಅವರ ಸಾಮರ್ಥ್ಯಗಳಿಗೆ ಒಪ್ಪುವ ಶಿಕ್ಷಣವೂ ದೊರಕುವುದಿಲ್ಲ. ಸಾಮಾನ್ಯವಾಗಿ ಸಾರ್ವಜನಿಕ ಶಿಕ್ಷಣ ಸಂಸ್ಥೆಗಳು ಸಾಧಾರಣ ಮಟ್ಟದ ಬುದ್ಧಿಶಕ್ತಿಯವರಿಗೆಂದು ವ್ಯವಸ್ಥೆಗೊಂಡಿವೆ. ಅವುಗಳಲ್ಲಿನ ಕಾರ್ಯಕ್ರಮ, ಅಂಥವರಿಗೆ ಮಾತ್ರ ಯೋಗ್ಯವಾಗಿರುತ್ತದೆ. ಕೆಲವು ಸಂದರ್ಭದಲ್ಲಿ ಈ ಮಕ್ಕಳು ಸ್ವಲ್ಪ ದುರ್ಬಲ ಬುದ್ಧಿಶಕ್ತಿಯವರು, ಮಂದಸ್ವಭಾವದವರು, ನಡೆನುಡಿಗಳಲ್ಲಿ ಚುರುಕಿಲ್ಲದವರು. ಇಂಥಹವರಿಗೆ ಗುರುಗಳು ವೈಯಕ್ತಿಕ–ಗಮನ ನೀಡಬೇಕು.[51]

अतीत्य बन्धून् अवलङ्घ्य मित्राण्याचार्यमागच्छति शिष्यदोषः।

बालं ह्यपत्यं गुरुवे प्रदातुः नैवापराधोऽस्ति पितुर्न मातुः ॥[52]

ಅಂದರೆ ತಾಯಿತಂದೆಗಳು ಚಿಕ್ಕಂದಿನಲ್ಲಿಯೇ ತಮ್ಮ ಮಕ್ಕಳನ್ನು ಗುರುಗಳಿಗರ್ಪಿಸುತ್ತಾರೆ. ಆದುದರಿಂದ ಶಿಷ್ಯನು ಮಾಡಿದ ತಪ್ಪುಗಳಿಗೆ ಆಚಾರ್ಯನೇ ಹೊಣೆಯಾಗುತ್ತಾನೆ. ನೆಂಟರೂ, ಮಿತ್ರರೂ ಅವನ ದೋಷಗಳಿಗೆ ಭಾಗಿಯಾಗುವುದಿಲ್ಲ. ತಂದೆತಾಯಿಗಳದೂ ತಪ್ಪಿಲ್ಲ. ಇಲ್ಲಿ ಗುರುಗಳ ಹೊಣೆಗಾರಿಕೆ ಎಷ್ಟಿರುತ್ತದೆಂಬುದನ್ನು ಹೀಗೆ ಹೇಳಲಾಗಿದೆ.

---

51. **ವೀರಪ್ಪ. ಎನ್.ಎಸ್**. ಶಿಕ್ಷಣದಲ್ಲಿ ಮನೋವಿಜ್ಞಾನ, ಅ –16, ಪು–426–429.(1962) ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4
52. **ಸುಭಾಷಿತಮಂಜರೀ,** ಸದ್ಗುಣ–ದುರ್ಗುಣ, ಶ್ಲೋ–16, ಪು–130 ಪಂಚರಾತ್ರ, 1–19.(2001)ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18

ಮನೋವಿಜ್ಞಾನಿಗಳು **"ಮಹಾ ಪ್ರತಿಭೆಯೂ ಒಂದು ವೈಪರೀತ್ಯ"** ಎಂದು ಪರಿಗಣಿಸಿದ್ದಾರೆ. ಅವರಲ್ಲಿ ಕೆಲವು ವಿಲಕ್ಷಣ ಗುಣಗಳು ಕಾಣುತ್ತವೆ. ಅವರುಗಳು ಸಾಮಾಜಿಕ ಜೀವನದ ಸುಖದುಃಖಗಳಿಂದ ಹೊರತಾಗಿ, ಒಂಟಿತನ, ಅಶಾಂತಿಯನ್ನು ಮನಸ್ಸಿನಲ್ಲಿ ಹೆಚ್ಚು ಮಾಡಿಕೊಂಡು ಕೋಪತಾಪಗಳಿಗೂ, ವೈಯಕ್ತಿಕ ಆಸೆ ಆಕಾಂಕ್ಷೆಗಳಿಗೂ ತುತ್ತಾಗಬಹುದು. ಅಂಥಾ ಪ್ರತಿಭಾ ಜೀವನಕ್ಕಿಂತ ಸನ್ನಿವೇಶಕ್ಕೆ ಹೊಂದಿಕೊಂಡು ಹೋಗಬಲ್ಲ ಸಾಧಾರಣ ಜೀವನವೇ ಸರಿ ಎನ್ನಿಸಬಹುದು. ಆದ್ದರಿಂದ ಹಲವರು **"ಅತಿ ಪ್ರತಿಭಾವಂತನ ಜೀವನ ಅತಿ ದಡ್ಡನ ಜೀವನದಂತೆ ಅಷ್ಟು ಆದರಣೀಯವೆನಿಸಲಾರದು"** ಎಂದು ಹೇಳುತ್ತಾರೆ.[53]

ಈ ಸಂದರ್ಭದಲ್ಲಿ ಹಿತೋಪದೇಶದಲ್ಲಿ ಬರುವ ಒಂದು ಮಾತನ್ನು ಸ್ಮರಿಸಬಹುದು:-

सुमहान्त्यपि शास्त्राणि धारयन्तो बहुश्रुताः।

छेत्तारः संशयानां च क्लिश्यंते लोभमोहिताः ॥[54]

ಕಠಿಣತಮವಾದ ಶಾಸ್ತ್ರಗಳ ಜ್ಞಾನವನ್ನು ಹೊಂದಿರುವವರೂ, ಬಹಳ ವಿಚಾರಗಳನ್ನು ಕೇಳಿ ತಿಳಿದುಕೊಂಡವರೂ, ಇತರರ ಸಂಶಯಗಳನ್ನು ಹೋಗಲಾಡಿಸುವವರೂ ಆದವರೂ ಸಹ ಲೋಭದ ಮೋಹಕ್ಕೊಳಗಾಗಿ ಕಷ್ಟಪಡುತ್ತಾರೆ.



53. **ವೀರಪ್ಪ. ಎನ್. ಎಸ್,** ಶೈಕ್ಷಣಿಕ ಮನೋವಿಜ್ಞಾನ, ಅ - 16, ಪು-434-436. 1962. ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4
54. **ಸುಭಾಷಿತಮಂಜರೀ,** ಸದ್ಗುಣ-ದುರ್ಗುಣ- ಶ್ಲೋ-331, ಪು-203(2001) ಹಿತೋಪದೇಶ, ಮಿತ್ರಲಾಭ-70.ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18

## 7-4. पञ्चतन्त्रस्य-चतुर्थं तन्त्रम्-"लब्धप्रणाशम्"-

### ಕಥೆಗಳ ವಿಶ್ಲೇಷಣೆ

ವಿಷ್ಣುಶರ್ಮ ವಿರಚಿತ ಪಂಚತಂತ್ರದ ನಾಲ್ಕನೆಯ ತಂತ್ರವಾದ "ಲಬ್ಧಪ್ರಣಾಶ"ದ ಪ್ರಾರಂಭಿಕ ನುಡಿಯಲ್ಲಿ

समुत्पन्नेषु कार्य्येषु बुद्धिर्यस्य न हीयते ।

स एव दुर्गं तरति जलस्थो वानरो यथा ॥[55]

"ಮಾಡಬೇಕಾದ ಕೆಲಸಗಳಲ್ಲಿ ಯಾರ ಬುದ್ಧಿಯು ಕುಂಠಿತವಾಗುವುದಿಲ್ಲವೋ ಅವನು ನೀರಿನಲ್ಲಿದ್ದ ಮಂಗವು ಪಾರಾದಂತೆ ಕಷ್ಟದಿಂದ ಪಾರಾಗುತ್ತಾನೆ" ಎಂದಿದೆ.

ಲಬ್ಧಪ್ರಣಾಶದ ಕಥೆ ಹೀಗಿದೆ- ಒಂದು ಸಮುದ್ರದ ತೀರದಲ್ಲಿ ಸದಾ ಫಲಗಳಿಂದ ತುಂಬಿರುವ ಜಂಬೂವೃಕ್ಷವಿತ್ತು. ಅಲ್ಲಿ ರಕ್ತಮುಖ ಎಂಬ ಮಂಗವು ವಾಸಿಸುತ್ತಿತ್ತು. ಒಮ್ಮೆ ಸಮುದ್ರದಿಂದ ಹೊರಬಂದ ಕರಾಲಮುಖ ಎಂಬ ಮೊಸಳೆಯು ಆ ಮರದ ಕೆಳಗಿರುವ ಮೃದುವಾದ ಮರಳ ಮೇಲೆ ಬಂದು ಕುಳಿತುಕೊಂಡಿತು. ಅಲ್ಲಿಂದ ಕಥೆ ಮುಂದುವರಿದಿದೆ.

ಈ ತಂತ್ರದಲ್ಲಿ **ಮಂಗ ಹಾಗೂ ಮೊಸಳೆಯ ಸೂತ್ರ ಕಥೆ**ಯಲ್ಲಿ- ಪಡೆದುಕೊಂಡದ್ದನ್ನು ಮೂರ್ಖತನದಿಂದ ಕಳೆದುಕೊಳ್ಳುವುದರ ಕುರಿತು ವಿವರಣೆ ಇರುತ್ತದೆ. ಈ ಸೂತ್ರದಲ್ಲಿ 11 ಉಪಕಥೆಗಳಿದ್ದು ಒಂದೊಂದು ದೃಷ್ಟಾಂತವೂ ಒಂದೊಂದು ಉತ್ತಮ ಬದುಕಿನ ನೀತಿಯನ್ನು ಬೋಧಿಸುತ್ತದೆ. ಜೊತೆ ಜೊತೆಯಲ್ಲಿ ರಾಜಕುಮಾರರಿಗೆ ವಿಶೇಷ ಜಾಗೃತಿಯನ್ನು ಮೂಡಿಸುತ್ತಾ, ಸುಂದರ ವ್ಯಕ್ತಿತ್ವ ನಿರ್ಮಾಣಕ್ಕೆ ಪ್ರೇರೆಪಿಸುತ್ತವೆ.

ಮೋಸಹೋಗುವವರಿದ್ದರೆ ಮೋಸ ಮಾಡುವವರಿರುತ್ತಾರೆ. ಇನ್ನೇನು ಬಯಸಿದುದು ನಮ್ಮ ಕೈಸೇರಿತು ಎನ್ನುವಷ್ಟರಲ್ಲಿ ಏನೋ ಒಂದು ಅಡ್ಡಿಯೋ, ದುಡುಕೋ ಅದನ್ನು ಕೆಡಿಸಿಬಿಡುತ್ತದೆ. **"ಕೆಟ್ಟಮೇಲೆ ಬುದ್ಧಿ ಬಂದರೆ ಏನು ಪ್ರಯೋಜನ?"** ಸಿಕ್ಕಿದ ಅವಕಾಶಗಳನ್ನು ಎಷ್ಟೋ ಬಾರಿ ಉಪಯೋಗಿಸಿಕೊಳ್ಳದೆ ಕೈಚೆಲ್ಲಿಬಿಡುತ್ತೇವೆ. ಸಮಸ್ಯೆಯಲ್ಲಿ ಸಿಕ್ಕುಹಾಕಿಕೊಂಡಾಗ ಅದರಿಂದ ಪಾರಾಗಲು ನಡೆಸಬೇಕಾದ ಕಾರ್ಯತಂತ್ರಗಳು ಒಳ್ಳೆಯ ರೀತಿಯಲ್ಲಿದ್ದರೂ, ಕೆಟ್ಟದ್ದನ್ನು ಹಾರೈಸಿ ದುರಂತಕ್ಕೀಡಾಗುವ ಬಗೆಗಳು; ಮೀರಿ ಬದುಕಿದರೆ ಆಗುವ ತೊಂದರೆಗಳು ಮತ್ತು ಅದರ ಪರಿಹಾರ ಮುಂತಾದ ಅನೇಕ ಸುಖಜೀವನದ

೫೫. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ-1, ಪು-617, (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಸೂತ್ರಗಳನ್ನು, ಸರಳಸುಂದರ ಕಥೆಗಳ ಮೂಲಕ ಸ್ಪಷ್ಟವಾಗಿ, ಅರ್ಥಪೂರ್ಣವಾಗಿ ಕೇಳುಗರಿಗೆ ಅಥವಾ ಓದುಗರಿಗೆ ಪಂಚತಂತ್ರದಲ್ಲಿ ಬೋಧಿಸಲಾಗಿದೆ.[56]

ಲಬ್ಧಪ್ರಣಾಶ ಸೂತ್ರ ಕಥೆಯಲ್ಲಿನ ಮೊದಲನೆಯ ಉಪಕಥೆ– **ಗಂಗದತ್ತ ಮತ್ತು ಪ್ರಿಯದರ್ಶನ ಸರ್ಪದ ಕಥೆ**ಯಲ್ಲಿ ಪ್ರಾರಂಭಿಕ ಒಂದು ಉಕ್ತಿ ಇದೆ

आपदि येनापकृतं येन च हसितं दशासु विषमासु ।

अपकृत्य तयोरुभयोः पुनरपि जातं नरं मन्ये ॥[57]

ಯಾರು ಆಪತ್ತಿನಲ್ಲಿ ಅಪಕಾರವನ್ನು ಮಾಡುವರೋ ಮತ್ತು ಯಾರು ವಿಷಮ ಪರಿಸ್ಥಿತಿಯಲ್ಲಿ ಅಪಹಾಸ್ಯವನ್ನು ಮಾಡುವರೋ ಅವರಿಬ್ಬರಿಗೂ ಅಪಕಾರವನ್ನು ಮಾಡಿದರೆ ಮನುಷ್ಯನಿಗೆ ಹೊಸ ಜನ್ಮ ಬಂದಂತೆ ಅಂದರೆ ಅಂತಹವರ ಮೇಲೆ ಸೇಡುತೀರಿಸಿಕೊಳ್ಳಬೇಕೆಂದು ಅರ್ಥ. ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುವ ಹಾಗೆ ಕ್ರೂರ ವೈರಿಯ ಸಂಹಾರವನ್ನು ಕ್ರೂರಿಯಿಂದಲೇ ಮಾಡಬೇಕು. ದಾಯಾದಿಗಳನ್ನು ನಿರ್ಮೂಲಗೊಳಸಲು ಸರ್ಪವನ್ನು ಕರೆತಂದ ಕಪ್ಪೆ ಕಥೆಯ ಮೂಲಕ **"ಸೇಡುತೀರಿಸಿಕೊಳ್ಳಲು ಎಂಥಹವರನ್ನು ಆಶ್ರಯಿಸಬೇಕು"** ಎಂಬೆಲ್ಲ ತಿಳುವಳಕೆಯನ್ನು. ಬಹಳ ಸೊಗಸಾಗಿ ನಿರೂಪಣೆ ಮಾಡಲಾಗಿದೆ. ದುಡುಕುನಿರ್ಣಯದಿಂದ ಮುಂದೊದಗಬಹುದಾದ ಅನಾಹುತವನ್ನು ಯೋಚಿಸದಿದ್ದರೆ ಅದರ ಪರಿಣಾಮವೇನಾಗುವುದು ಎಂಬ ಬಗ್ಗೆ ಜಾಗೃತಿಯನ್ನು ಮೂಡಿಸಲಾಗಿದೆ. ಕಾಲವು ಕಳೆದಂತೆ ಎಲ್ಲಾ ಕಪ್ಪೆಗಳನ್ನೆಲ್ಲಾ ಸರ್ಪವು ತಿಂದುಬಿಟ್ಟಿತು. ಕೇವಲ ಗಂಗದತ್ತ ಕಪ್ಪೆ ಮಾತ್ರ ಉಳಯಿತು. ಆಗ ಪ್ರಿಯದರ್ಶನ ಸರ್ಪವು ಹೇಳುತ್ತದೆ **"ಎಲೈ ಗಂಗದತ್ತನೇ, ನಾನು ಹಸಿದಿದ್ದೇನೆ. ಎಲ್ಲಾ ಕಪ್ಪೆಗಳೂ ಮುಗಿದುಹೋದವು. ನೀನು ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದಿದ್ದೀಯಾ. ಆದ್ದರಿಂದ ನನಗೆ ಏನಾದರೂ ತಿನ್ನಲು ಕೊಡು"** ಎಂದು. ಇಲ್ಲಿನ ನೀತಿಯೆಂದರೆ ಹಸಿದವನು ಯಾವ ಪಾಪವನ್ನು ತಾನೆ ಮಾಡುವುದಿಲ್ಲ? ದರಿದ್ರರಾದ ಮನುಷ್ಯರು ಕರುಣೆಯಿಲ್ಲದವರಾಗಿರುತ್ತಾರೆ ಭದ್ರೆ! ಪ್ರಿಯದರ್ಶನನಿಗೆ ಹೇಳು, ಗಂಗದತ್ತನು ಮತ್ತೆ ಬಾವಿಗೆ ಬರುವವನಲ್ಲ ಎಂದು. ಹೀಗೆ ಕಪ್ಪೆಯು ಹೇಳ ಹಲ್ಲಿಯನ್ನು ವಾಪಸ್ಸು ಕಳುಹಿಸುತ್ತದೆ.[58]

---

56. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಚತುರ್ಥ ತಂ, ಪು,-176-177 (2015)..ವರ್ನಿಲ, ನಂ39/2-11, ಕಲ್ಯಾಣಿ ಗಾರ್ಡನ್, ಬನಶಂಕರಿ, 1ನೇ ಹಂತ, ಬೆಂಗಳೂರು-560050
57. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ-17, ಪು-632,(1993).ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001
58. **ಭರತ ಬಿ. ರಾವ್**. ಪಂಚತಂತ್ರ, ಪಂಡಿತ ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಚ.ತಂ, ಪು – 224-229.(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.,44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು-560005.

आगतश्च गतश्चैव दृष्ट्वा सिंहपराक्रमम् ।

अकर्णहृदयो मूर्कस्तेन मृत्युवशंगतः ॥[59]

ಕೊನೆಯಲ್ಲಿ ಮಂಗನು ಹೇಳುತ್ತದೆ "ಮೂಢ ನಾನೇನು ಲಂಬಕರ್ಣನಂತೆ ಮೂರ್ಖನೇ? ಪ್ರತ್ಯಕ್ಷವಾಗಿ ಅಪಾಯವನ್ನು ನೋಡಿ ಮತ್ತೆ ಅಲ್ಲಿಗೇ ಹೋಗಿ ಮರಣವನ್ನು ಹೊಂದುವೆನೆ? ಮೊದಲು ಬಂದ ಸಿಂಹದ ಪರಾಕ್ರಮವನ್ನು ನೋಡಿ ಹೋದ ಹೃದಯ ಹಾಗೂ ಕಿವಿಗಳಿಲ್ಲದ ಮೂರ್ಖ, ಮತ್ತೆ ಹಿಂದಿರುಗಿ ಬಂದನು. ಅದನ್ನು ಕೇಳಿದ ಮೊಸಳೆಯು ಯಾರವನು ಲಂಬಕರ್ಣ? ಹೇಗೆ ಅಪಾಯವನ್ನು ಕಂಡೂ ಸಾವನ್ನಪ್ಪಿದ ? ಎಂಬುದನ್ನು ವಿವರವಾಗಿ ಹೇಳೆಂದು ಕೇಳಿತು.

ಮುಂದೆ **"ಸಿಂಹ ಮತ್ತು ಲಂಬಕರ್ಣ ಕಥೆ"**ಯನ್ನು ಮೊಸಳೆಗೆ ಮಂಗವು ಹೇಳುತ್ತಾ, ಯಾರನ್ನು ನಂಬಬೇಕು, ಹೊಗಳಿಕೆಯ ಹೊನ್ನಶೂಲ ಹಾಗೂ ಕಾಮಾತುರರಿಗೆ ಬುದ್ಧಿಯಾದರೂ ಎಲ್ಲಿಯದು? ಈ ಕಥೆಯಲ್ಲಿ ಸಿಂಹ ವನರಾಜನಾದರೇನು ನರಿಯು ಹೇಳಿದ ಕಿವಿ ಎದೆ ಇಲ್ಲದ ಕತ್ತೆ ಎಂಬುದನ್ನು ಒಪ್ಪಿಕೊಂಡ ಹಾಗೆ, ನಾನೂ(ಸಿಂಹ) ಎದೆಯನ್ನು ಮರದ ಮೇಲೆ ಇಟ್ಟಿದ್ದೇನೆ ಎಂದಾಗ ನೀನು ಒಪ್ಪಿಕೊಂಡೆ. ಹಾಗೆಯೇ ಎರಡೆರಡು ಬಾರಿ ನರಿಯ ಮಾತನ್ನು ಕೇಳಿ ಕತ್ತೆ ತನ್ನ ಮೃತ್ಯುವನ್ನು ತಾನೇ ಬರಮಾಡಿಕೊಂಡಿತು. ಒಂದು ಬಾರಿ ನಿನ್ನ ಮಾತಿಗೆ ಮರುಳಾದೆ ಎರಡನೆಯ ಬಾರಿಯೂ. ಹಾಗೆಯೇ ಮಾಡಿದೆನಾದರೆ ಆ ಕತ್ತೆಗೂ ನನಗೂ ಏನು ವ್ಯತ್ಯಾಸ ಇದ್ದಂತಾಯಿತು? ಹೋಗು, ಹೋಗು, ನಿನ್ನ ಹೆಂಡತಿಗೆ ಬೇಕಾದರೆ ನಿನ್ನ ಎದೆಯನ್ನೇ ಕೊಡು. ನನ್ನ ಸ್ನೇಹ ನಿನಗಿನ್ನು ಇಲ್ಲ" ಎಂದ ಮೇಲೆ ಇಂದಿನಿಂದ ನಿನಗೆ ಪಕ್ವವಾದ ನೇರಲೆ ಹಣ್ಣು ಕೂಡಾ ಸಿಗದು ಎಂದು ಹೇಳಿ ಮಂಗವು ಮರದಲ್ಲಿ ಮರೆಯಾಯಿತು. ಹೀಗೆ ಕಥೆಯನ್ನು ಹೇಳಿ ಮುಗಿಸಿದ ವಿಷ್ಣುಶರ್ಮರು ರಾಜಕುಮಾರರಿಗೆ ಸೂಕ್ತ ರಾಜನೀತಿಯನ್ನು ಬೋಧಿಸಿದರು. ಅದೇನೆಂದರೆ, "ರಾಜಕುಮಾರರೇ ಕಾರ್ಯಸಾಧನೆಗೆಂದು ಹೊರಟವರು ಕೆಲಸ ಆಗುವ ತನಕ ಬಾಯಿ ಮುಚ್ಚಿಕೊಂಡಿರಬೇಕು. ಅದನ್ನು ಬಿಟ್ಟು ಮಧ್ಯದಲ್ಲೇ ತನ್ನ ಬಗ್ಗೆ ಹೆಗ್ಗಳಿಕೆಯ, ಡಂಬಾಚಾರದ ಮಾತನ್ನಾಡಿದರೆ ಮಾಡಬೇಕಾಗಿರುವ ಕೆಲಸವನ್ನು ಕೆಡೆಸಿಕೊಂಡಂತೆಯೇ. 'ಮೌನಂ ಸರ್ವತ್ರ ಸಾಧನಂ.' ಆದ್ದರಿಂದ ನೃಪನೀತಿಶಾಸ್ತ್ರ ವಿಶಾರದನು ಯಾರನ್ನೂ ಪೂರ್ಣವಾಗಿ ನಂಬಬಾರದು. ಆದರೆ ನಂಬಿದಂತೆ ನಟಿಸಬೇಕು. ಹಾಗೆ ನಂಬಿದಾಗ ಅಪಾಯಕ್ಕೆ ಸಿಲುಕಿ-ಕೊಂಡರೆ ಮನಸ್ಸನ್ನು ಸ್ಥಿಮಿತದಲ್ಲಿ ಇರಿಸಿಕೊಂಡು ಅಪಾಯದಿಂದ ಪಾರಾಗುವ ಕುರಿತು ಚಿಂತಿಸಬೇಕು. ಶತ್ರುವನ್ನು ವಂಚಿಸಬೇಕು ಆಗಲೇ ನೃಪನಾದವನು ಗೆಲ್ಲುತ್ತಾನೆ." ಈ ವಿಚಾರವನ್ನು ರಾಜಕುಮಾರರೇ ನೀವೂ

59. **ಸುಧಾಕರ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಂ, ಚ..ತಂ.ಶ್ಲೋ-33, ಪು-645,(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಚಿಂತಿಸಿ ಅದರಂತೆ ನಡೆಯಲು ಸಾಧ್ಯವೇ ಎಂಬುದನ್ನು ಯೋಚಿಸಿರಿ ಎಂದು ಸೂಚಿಸಿದರು. ವಿಷ್ಣುಶರ್ಮರು ಪ್ರತಿ ಕಥೆಯ ಅಂತ್ಯದಲ್ಲೂ ಅಭಿಪ್ರಾಯ ಪ್ರಚೋದಕ ಪ್ರಶ್ನೆಗಳನ್ನು ಕೇಳುತ್ತಾ, ಅವರುಗಳ ಕಲಿಕೆಯನ್ನು ಅರ್ಥಪೂರ್ಣವಾಗುವಂತೆ ಪ್ರೋತ್ಸಾಹ ನೀಡುತ್ತಿದ್ದರು.[60] ಇದು ಬಹಳ ಉತ್ತಮ ಬೋಧನಾ ಕ್ರಮವಾಗಿದ್ದು, ಇದರಲ್ಲಿ ಕಲಿಕೆಯ ನಿರಂತರ ಹಾಗೂ ಸಮಗ್ರ ಮೌಲ್ಯಮಾಪನ ಕಂಡುಬರುತ್ತದೆ. ಮುಂದೆ ಮುಂದೆ ಇನ್ನೂ ವ್ಯವಸ್ಥಿತವಾಗಿ ವ್ಯಕ್ತಿನಿರ್ಮಾಣ ಕಾರ್ಯವನ್ನು ಕೈಗೊಂಡಿರುತ್ತಾರೆ.

ಮರುದಿನ ಎಂದಿನಂತೆ ರಾಜಕುಮಾರರು ಮತ್ತಷ್ಟು ಕಥೆ ಕೇಳಿ ತಮ್ಮನ್ನು ತಾವು ಬೆಳೆಸಿಕೊಳ್ಳಲು ಸಿದ್ಧರಾಗಿ ಕುಳಿತಿರುತ್ತಾರೆ. ಕಲಿಯುವವರಲ್ಲಿ ಈ ಸಿದ್ಧತೆ ಬಹಳ ಮುಖ್ಯ. ಇದನ್ನು ಪ್ರೇರೇಪಿಸುವವರು ಗುರುಗಳೆ. ಇಲ್ಲಿ ಒಬ್ಬ ಪ್ರತಿಭಾವಂತ ಶಿಕ್ಷಕರ ಕಲಿಸಿಕೊಡುವ ಬದ್ಧತೆ ವ್ಯಕ್ತವಾಗುತ್ತದೆ. ಒಬ್ಬ ಬೋಧಕನು ತನ್ನ ಶಿಷ್ಯರ ಸರ್ವತೋಮುಖ ಬೆಳವಣಿಗೆಗೆ, ಸುಂದರ ವ್ಯಕ್ತಿತ್ವ ನಿರ್ಮಾಣಕ್ಕೆ ಎಂತಹ ಪ್ರಾಮಾಣಿಕ ಪ್ರಯತ್ನ ನಡೆಸಬಹುದು ಎಂಬುದಕ್ಕೆ ವಿಷ್ಣುಶರ್ಮರು ಮಾದರಿಯಾಗಿದ್ದಾರೆ.

ಮುಂದುವರಿದು, ಗುರುಗಳು ಹೇಳುತ್ತಾರೆ– "ರಾಜಕುಮಾರರೇ, ತಮ್ಮ ಪುರುಷ ಧರ್ಮವನ್ನು ಅಭಿಮಾನಾಸ್ಪದವಾಗಿ ಪ್ರದರ್ಶಿಸುವವರು ನೂರಾರು ಮಂದಿ. ಆದರೆ ಅವರಲ್ಲಿ ಕೆಲವರು ಮಾತ್ರ ಹೆಣ್ಣಿಗಾಗಿ ಏನನ್ನೂಮಾಡಲು ಹೇಸದೆ ಅಪಕೀರ್ತಿಭಾಜನರಾಗುತ್ತಾರೆ. ಅವರಲ್ಲಿ ನೆನ್ನೆ ಹೇಳಿದ ಕರಾಳಮುಖನೂ ಒಬ್ಬ. ಹಾಗೆಯೇ ಪತಿವ್ರತೆಯರಾದ ಸ್ತ್ರೀಯರ ನಡುವೆ ಕೆಲವು ಹೆಂಗಸರು ಲಂಪಟರಾಗಿ ಸ್ತ್ರೀಕುಲಕ್ಕೇ ಅಪವಾದ ತರುವವರಾಗಿರುತ್ತಾರೆ ಎಷ್ಟೋ ಮಂದಿ ಕೆಟ್ಟ ಪುರುಷರಂತೆ. ಅಂತಹವರ ಬಗ್ಗೆ ಎಲ್ಲರೂ ಎಚ್ಚರಿಕೆಯಿಂದ ಇರಬೇಕಾದದ್ದು ಮುಖ್ಯ." ಎಂದು ಜಾಗೃತಿಯನ್ನು ಮೂಡಿಸಿ, ಮುಂದಿನ ಕಥೆ ಹೇಳಲೇ? ಎಂದು ಅವರ ಕುತೂಹಲ ಹಾಗೂ ಆಸಕ್ತಿಯನ್ನು ಪ್ರೇರೇಪಿಸಿ ಬಹಳ ವೈಜ್ಞಾನಿಕವಾಗಿ ಮುಂದಕ್ಕೆ ಸಾಗುತ್ತಾರೆ.[61] ಇದು ವಿಷ್ಣುಶರ್ಮರಿಗೆ ವರವಾಗಿ ಬಂದಿದ್ದ ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಗೆ ನಿದರ್ಶನವಾಗಿದೆ.

ಸ್ವಾರ್ಥವನ್ನು ಬಿಟ್ಟು ಯಾವ ಅತಿ ಮೂಢನಾದ ಕಪಟಿಯು ಸತ್ಯವನ್ನು ನುಡಿಯುವನೋ, ಅವನು ಮತ್ತೊಬ್ಬ ಯುಧಿಷ್ಠಿರನಂತೆ ಖಂಡಿತವಾಗಿಯೂ ಸ್ವಾರ್ಥವನ್ನು ನಷ್ಟ ಮಾಡಿಕೊಳ್ಳುತ್ತಾನೆ. ಎಂದು ಮಂಗವು ಹೇಳಿದಾಗ ಮೊಸಳೆಯು ಅದು ಹೇಗೆಂದು ಕೇಳುತ್ತದೆ. ಆಗ ಮಂಗವು **"ಯುಧಿಷ್ಠಿರ ಕುಂಬಾರನ ಕಥೆಯನ್ನು ಹೇಳಿದನು. ಸತ್ಯ ಹೇಳಿ ರಾಜನಿಂದ ದೇಶಭ್ರಷ್ಟನಾದ ಕುಂಬಾರ ಯುಧಿಷ್ಠಿರನ ಕಥೆಯಲ್ಲಿ ಕಂಡು ಬರುವ ನೀತಿಯೆಂದರೆ "ಸುಳ್ಳು ಹೇಳಲೂ ಸಮಯ, ಸಂದರ್ಭದ ಆಯ್ಕೆ ಮುಖ್ಯ."** ರಾಜಪುರುಷರ ಜೊತೆಗೆ

---

60. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಚತುರ್ಥ ತಂ, ಪು.–185–188,(2015). ವರ್ಣಿಲ, ನಂ39/2–11, ಕಲ್ಯಾಣಿ ಗಾರ್ಡನ್, ಬನಶಂಕರಿ, 1ನೇ ಹಂತ, ಬೆಂಗಳೂರು–560050
61. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಚತುರ್ಥ ತಂ,ಪು.–188,(2015).ವರ್ಣಿಲ, ನಂ39/2–11,ಕಲ್ಯಾಣಿ ಗಾರ್ಡನ್, ಬನಶಂಕರಿ,1ನೇ ಹಂತ,ಬೆಂಗಳೂರು–560050

ಬಂದ ಕುಂಬಾರನಿಂದ ಮೋಸಹೋದ ರಾಜನು ಕುಂಬಾರನನ್ನು ಕುತ್ತಿಗೆ ಹಿಡಿದು ಹೊರಗೆ ದೂಡಿರಿ ಎಂದು ರಾಜಭಟರಿಗೆ ಆಜ್ಞೆ ಮಾಡಿಬಿಟ್ಟನು. ಕುಂಬಾರನು ಕೈಮುಗಿದು ಹಾಗೆ ಮಾಡಬೇಡಿರೆಂದು ರಾಜನಲ್ಲಿ ಬೇಡಿಕೊಂಡನು. ನಾನೂ ಯುದ್ಧದಲ್ಲಿ ಹೋರಾಡಬಲ್ಲೆ. ಯುದ್ಧದಲ್ಲಿ ನನ್ನ ಕುಶಲತೆಯನ್ನು ನೋಡಿ ಎಂದು ದುಂಬಾಲು ಬೀಳುತ್ತಾನೆ. ಆಗ ರಾಜನು ವ್ಯಂಗ್ಯವಾಡಿ " ನೀನು ಸಕಲಗುಣ ಸಂಪನ್ನನು ಆದರೂ ಹೊರಡು, ಹೀಗೊಂದು ಉಕ್ತಿಯಿದೆ–

शूरोऽसि कृतविद्योऽसि दर्शनीयोऽसि पुत्रक ।

यस्मिन् कुले त्वमुत्पन्नो गजस्तत्र न हन्यते ॥[62]

**"ಮಗನೇ ನೀನು ಶೂರನು, ವಿದ್ಯೆಯನ್ನು ಕಲಿತವನು ಮತ್ತು ಸುಂದರನಾಗಿರುವೆ. ನಿನ್ನ ಶೌರ್ಯವನ್ನು ಮಡಿಕೆಯ ಮೇಲೆ ತೋರಿಸು. ಅದಕ್ಕೆ ತಕ್ಕದ್ದು ನಿನ್ನ ಕುಲ, ಬಲ. ಆದರೆ ನೀನು ಯಾವ ಕುಲದಲ್ಲಿ ಹುಟ್ಟಿರುವೆಯೋ, ಅಲ್ಲಿ ಆನೆಯನ್ನು ಕೊಲ್ಲಲಾಗುತ್ತದೆಯೇ ಎಂದು ನರಿಯನ್ನು ಸಿಂಹಿಣಿಯು ಕೇಳದಂತೆ ನಾನು ಈಗ ಕೇಳಬೇಕಾಗಿದೆ."** ಎಂದನು ರಾಜನು. ಕುಲಾಲನಿಗೀಗ ಕುತೂಹಲ. ಅದೇನೆಂದು ಕೇಳಲು **ಸಿಂಹ– ನರಿಯ ಮರಿಯ ಕಥೆ**ಯನ್ನು ರಾಜನು ಹೇಳಿದನು.

ಸಿಂಹಿಣಿ ಸಾಕಿದರೂ ಸಿಂಹವಾಗಿರದ ನರಿಮರಿ, ಅಂದರೆ, ಹುಟ್ಟು ಗುಣ ಸತ್ತರೂ ಹೋಗದು. ಸಿಂಹಿಣಿಗೆ ಅದರ ಪತಿ ಸಿಂಹವು ಬೇಟೆಗೆ ಹೋಗಿದ್ದಾಗ ಸಿಕ್ಕಿದ ಒಂದು ನರಿಮರಿಯನ್ನು ಅದಕ್ಕೆ ನೋವಾಗದಂತೆ ಕಚ್ಚಿ ಹಿಡಿದು ತಂದು ಕೊಟ್ಟಿತು. ಅದು ಸಿಂಹಿಣಿಯೇ ಆಗಿದ್ದರೂ ಎಳೆಯ ನರಿಯ ಮರಿಯನ್ನು ತಿನ್ನಲು ಅದರ ಮಾತೃವಾತ್ಸಲ್ಯ ಬಿಡಲಿಲ್ಲ. ಅದು ತನ್ನ ಪತಿಗೆ ಒಂದು ನೀತಿಯನ್ನು ಹೇಳಿತು. **"ತನ್ನ ಜೀವ ಹೋಗುತ್ತದೆನ್ನುವ ಸಂದರ್ಭದಲ್ಲೂ ಸ್ತ್ರೀಯನ್ನು, ಜ್ಞಾನಿಯನ್ನು, ಯತಿ, ಧರ್ಮದರ್ಶಿ, ಶಿಶುಗಳನ್ನು ಕೊಲ್ಲಬಾರದು. ಆದ್ದರಿಂದ ಒಂದು ದಿನ ಆಹಾರವಿಲ್ಲದಿದ್ದರೆ ನಾವೇನೂ ಸಾಯುವುದಿಲ್ಲ. ಹೀಗಾಗಿ ಇದನ್ನು ನನ್ನ ಮೂರನೆಯ ಮರಿಯೆಂದೇ ಸಲಹುತ್ತೇನೆ."** ಎಂದು ಹೇಳಿ ಇತರಮರಿಗಳೊಂದಿಗೆ ತನ್ನ ಎದೆ ಹಾಲನ್ನು ಉಣಿಸಿತು. ಮೂರೂ ಮರಿಗಳು ಜಾತಿಭೇದವಿಲ್ಲದೆ ಒಂದಾಗಿ ಆಡಿಕೊಳ್ಳುತ್ತಿದ್ದವು. ಹೀಗಿರುವಾಗ ಒಂದು ದಿನ ಒಂದು ಕಾಡಾನೆಯು ಮರಿಗಳ ಕಡೆಗೆ ಬಂತು. ಜಾತಿವೈರವು ಸಿಂಹದ ಮರಿಯನ್ನೂ ಬಿಟ್ಟಿರಲಿಲ್ಲ. ಅದು ಆನೆಯನ್ನು ನೋಡಿ ಕೋಪಗೊಂಡು ಅದರ ಮೇಲೆ ಹಾರಲು ಯತ್ನಿಸಿತು. ಇದನ್ನು ನೋಡಿದ ನರಿಮರಿಯು **"ಇದು ಮದ್ದಾನೆ, ನಮ್ಮ ಕುಲಶತ್ರು, ಅದರ ಸಮೀಪಕ್ಕೆ ಹೋಗಬೇಡಿ, ಹಿಂದಕ್ಕೆ ಬನ್ನಿ ಎಂದು ತಡೆದು ಓಡಿಹೋಯಿತು. ಆಗ ಪಾಪ, ಆ ಎರಡೂ ಮರಿಗಳು**

62. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ–39, ಪು–656,(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

**ಇನ್ನೊಂದರ ಮಾತುನ್ನು ಕೇಳಿ ಉತ್ಸಾಹ ಕಳೆದುಕೊಂಡವು. ಇದು ಸಹಜವಾದದ್ದು."** ರಣದಲ್ಲಿ ಸೇನಾನಾಯಕನ ಉತ್ಸಾಹದ ಮಾತುಗಳಿಗೆ ಸೈನಿಕರು ಪ್ರೇರಣೆಗೊಳ್ಳುತ್ತಾರೆ. ಒಬ್ಬನ ಉತ್ಸಾಹ ಭಂಗವಾದರೆ ಇಡೀ ಸೈನ್ಯವು ಉತ್ಸಾಹವನ್ನು ಕಳೆದುಕೊಳ್ಳುತ್ತದೆ. ಆದ್ದರಿಂದಲೇ ಭೂಪತಿಗಳು ಮಹಾಬಲರಾದ, ಶೂರ- ವೀರರಾದ, ಉತ್ಸಾಹಿಗಳಾದ ಯೋಧರನ್ನು ಬಯಸುತ್ತಾರೆ ಮತ್ತು ಅಂಜಿಕೆ ಉಳ್ಳವರನ್ನು ತ್ಯಜಿಸುತ್ತಾರೆ.[63]

ಮನೆಗೆ ಬಂದ ಸಿಂಹದ ಮರಿಗಳು ಸಹೋದರನ ಹೇಡಿತನವನ್ನು ತಂದೆತಾಯಿಗಳೊಂದಿಗೆ ಹೇಳಿ ಅಪಹಾಸ್ಯ ಮಾಡಿದವು. ಆಗ ನರಿಮರಿಯೇನು ಕಡಿಮೆಯಿಲ್ಲದೆ ಸಿಟ್ಟಿನಿಂದ ಸಿಂಹಸುತರನ್ನು ಕಠಿಣವಾಗಿ ನಿಂದಿಸಿ ನುಡಿಯಿತು. ಆಗ ಬಹಳ ಎಚ್ಚರಿಕೆಯಿಂದ ಸಿಂಹಿಣಿಯು ಶೃಗಾಲದ ಮರಿಯನ್ನು ಏಕಾಂತ-ಕ್ಕೆ ಕರೆದು ಅದು ಬದುಕಲಿ ಎಂಬ ಇಚ್ಛೆಯಿಂದ ಸಿಂಹಿಣಿಯು ತನ್ನಲ್ಲೇ ನಕ್ಕು ಬುದ್ಧಿ ಹೇಳಿ, **"ಇನ್ನೂ ಬಾಲಕರಾದ ನನ್ನ ಮಕ್ಕಳಿಗೆ ನೀನು ನರಿಜಾತಿಗೆ ಸೇರಿದವನೆಂದು ತಿಳಿಯುವ ಮೊದಲೇ ಬೇಗ ಹೋಗಿ ನಿನ್ನ ಸ್ವಜಾತಿಯವರನ್ನು ಸೇರಿಕೋ. ಇಲ್ಲದಿದ್ದರೆ ನನ್ನ ಮಕ್ಕಳಿಂದಲೇ ಸಾವನ್ನಪ್ಪುವೆ."** ಎಂದಿತು. ಈ ಮಾತುಗಳನ್ನು ಕೇಳಿ ಭಯದಿಂದ ವ್ಯಾಕುಲಗೊಂಡ ಅದು ಮೆಲ್ಲಮೆಲ್ಲನೆ ನಡೆಯುತ್ತಾ ಹೋಗಿ ಸ್ವಜಾತಿಯವರೊಡನೆ ಸೇರಿಕೊಂಡಿತು. .ಕುಲಾಲನು ಮಹಾಭಾರತದ ಯುಧಿಷ್ಠಿರನಂತೆ ಸತ್ಯವನ್ನೇ ತನ್ನ ಬಗ್ಗೆ ಹೇಳಿಕೊಳ್ಳದಿದ್ದರೆ ಯುದ್ಧದಲ್ಲಿ ಭಾಗವಹಿಸುವ ಅವಕಾಶ ದೊರಕುತ್ತಿತ್ತು. ಹೀಗಾಗಿ ಕೆಲಸದ ನಡುವೆ ನೀನು ಬಡಾಯಿ ಕೊಚ್ಚಿ-ಕೊಂಡು ನನ್ನನ್ನು ಬದುಕಿಸಿದೆ. **"ಎಲೈ ಮಕರನೇ, ಹೆಂಗಸಿಗಾಗಿ ನೀನು ಇದನ್ನೆಲ್ಲಾ ಮಾಡಿದ್ದಲ್ಲವೇ? ಎಂದಿಗೂ ಅವಿಚಾರಿಯಾದ ಹೆಂಡತಿಯ ಬಗ್ಗೆ ವಿಶ್ವಾಸ ಇಡಬಾರದು. ಇದಕ್ಕೂ ಒಂದು ನಿದರ್ಶನ ಇದೆ"** ಎಂದು ಹೇಳಿತು. ಏನದು ನಿದರ್ಶನ? ಎಂದು ಕೇಳಿದ ಮೊಸಳೆಗೆ ಕಪಿ ಹೇಳಿತೊಂದು ಹೊಸಕಥೆ. ಹೀಗೊಂದು ಕಥೆಯಿದೆ. ಅದರ ಮೊದಲು ಹೀಗೊಂದು ಉಕ್ತಿಯಿದೆ:-

यदर्थं स्वकुलं त्यक्तं जीवितार्द्धञ्च हारितम् ।

सा मां त्यजति निःस्नेहा कः स्त्रीणां विश्वसेन्नरः ॥[64]

"ಯಾವಳಿಗಾಗಿ ತನ್ನ ಕುಲವನ್ನು ಬಿಟ್ಟೆನೋ, ಅರ್ಧ ಜೀವನವನ್ನು ಕಳೆದುಕೊಂಡೆನೋ, ಸ್ನೇಹವಿಮುಖಳಾದ ಅವಳೇ ನನ್ನನ್ನು ತ್ಯಜಿಸುತ್ತಾಳೆ. ಹೀಗಿದ್ದಾಗ ಯಾರುತಾನೇ ಹೆಂಗಸನ್ನು ನಂಬಲು

63. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಚತುರ್ಥ ತಂ, ಪು, -189-190,(2015). ವರ್ಣಿಲ, ನಂ39/2-11, ಕಲ್ಯಾಣಿ ಗಾರ್ಡನ್, ಬನಶಂಕರಿ, 1ನೇ ಹಂತ, ಬೆಂಗಳೂರು-560050

64. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ-45, ಪು-661,(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಸಾಧ್ಯ? ಎಂದು **"ಬ್ರಾಹ್ಮಣ, ಬ್ರಾಹ್ಮಣಿ, ಮತ್ತು ಹೆಳವನ ಕಥೆ"**ಯನ್ನು ಹೇಳಿತು. ಅಂದರೆ ಇದರ ಸಾರಾಂಶ– ಅರ್ಧ ಆಯುಷ್ಯವನ್ನು ಗಳಿಸಿ ಬದುಕಿದರೂ ಕುಂಟನನ್ನು ಕಾಮಿಸಿದ ಕೃತಘ್ನಳಾದ ಹೆಂಡತಿ–ಹೆಂಡತಿಯೂ ಕೃತಘ್ನಳಾದರೆ ಇನ್ನೇನು ಗತಿ?

ಕಥೆ ಮುಗಿಸಿದ ಮಂಗವು ಮುಂದುವರೆಸುತ್ತಾ, ಈ ವಿಷಯದಲ್ಲಿ ಬೇರೊಂದು ಕಥೆಯೂ ಇದೆ.

न किं दद्यान्न किं कुर्यात् स्त्रीभिरभ्यर्थितो नरः? ।

अनश्वा यत्र ह्रेषन्ते शिरः पर्वणि मुण्डितम् ॥[65]

ಅಂದರೆ, ಹೆಂಗಸರು ಆಗ್ರಹಿಸಿದರೆ ಮನುಷ್ಯನು ಏನನ್ನು ತಾನೆ ಕೊಡುವುದಿಲ್ಲ ಮತ್ತು ಏನನ್ನು ತಾನೆ ಮಾಡುವುದಿಲ್ಲ? ಕುದುರೆಯಿಲ್ಲದವರೂ ಕೆನೆಯುತ್ತಾರೆ ಮತ್ತು ಪರ್ವದ ದಿನವೂ ಕೇಶಮಂಡನ ಮಾಡಿಕೊಳ್ಳುತ್ತಾರೆ." ಎಂದು ಮೊಸಳೆಗೆ ಕುತೂಹಲವುಂಟುಮಾಡುತ್ತಾ **"ನಂದ–ವರರುಚಿ" ಕಥೆ**ಯನ್ನು ಹೇಳಿತು. ಮುಂದೆ ಮಂಗ ಮೊಸಳೆಯನ್ನು ಕುರಿತು "ನೀನೂ ಕೂಡ ನಂದ ಹಾಗೂ ವರರುಚಿಯಂತೆ ಸ್ತ್ರೀವಶನಾಗಿರುವೆ. ಹಾಗಾಗಿ ಅವಳು ಹೇಳಿದಳೆಂದು ನನ್ನನ್ನು ಕೊಲ್ಲಲು ಉಪಾಯ ಮಾಡಿದೆ. ಆದರೆ ನಿನ್ನ ಮಾತಿನ ದೋಷದಿಂದಲೇ ನಿನ್ನ ರಹಸ್ಯ ಹೊರಬಿತ್ತು. ಅಥವಾ ಈ ನುಡಿಗಳು ಯೋಗ್ಯವಾಗಿವೆ – ಗಿಳಿ ಮತ್ತು ಸಾರಿಕಾ ಪಕ್ಷಿಗಳು ತಮ್ಮವಾಗ್ದೋಷದಿಂದಲೇ ಬಂಧಿಸಲ್ಪಡುತ್ತವೆ; ಬಕವು ಮೌನವಾಗಿರುವುದರಿಂದ ಯಾರೂ ಅದನ್ನು ಹಿಡಿಯುವುದಿಲ್ಲ; ಮೌನವು ಸಕಲಾರ್ಥ ಸಾಧಕವು;

सुगुप्तं रक्ष्यमाणोऽपि दर्शयन् दारुणं वपुः ।

व्याघ्रचर्मप्रतिच्छन्नो वाक्कृते रासभो हतः ॥[66]

ಹುಲಿಯ ಚರ್ಮವನ್ನು ಹೊದ್ದುಕೊಂಡು ಭಯಂಕರವಾಗಿ ಕಾಣುತ್ತಾ ಚೆನ್ನಾಗಿ ರಕ್ಷಿಸಲ್ಪಟ್ಟ ಕತ್ತೆಯು ಮಾತನಾಡುವುದರಿಂದ ಕೊಲ್ಲಲ್ಪಟ್ಟಿತು;[67]

ಮೊಸಳೆಯು ಕುತೂಹಲದಿಂದ ಅದು ಹೇಗೆಂದು ಕೇಳಲು ಮಂಗ **"ವಾಚಾಳ ಕತ್ತೆಯ ಕಥೆ"**ಯನ್ನು ಹೇಳಿತು. ಈ ಕಥೆಯಲ್ಲಿ ಕಂಡು ಬರುವ ನೀತಿಯೆಂದರೆ, ಹುಲಿಯ ಚರ್ಮ ಹೊದಿಸಿಕೊಂಡರೂ ಕತ್ತೆ

---

65. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ– 46, ಪು. – 666, (1993.) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
66. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ–49, ಪು– 670, (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
67. **ಭರತ ಬಿ. ರಾವ್ ಪಂಚತಂತ್ರ,** ಪಂಡಿತ ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಚ.ತಂ, ಪು – 241–242 (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ, 44/1, ಕೆ.ಆರ್. ರಸ್ತೆ, ಬಸವನಗುಡಿ ಬೆಂಗಳೂರು–560005.

ಕತ್ತೆಯೇ! ಬಾಯಿಬಿಟ್ಟರೆ ಬಣ್ಣಗೇಡು ಎಂಬಂತೆ. ಮತ್ತೊಂದು ಕತ್ತೆ ಅರಚಿದ್ದನ್ನು ಕೇಳಿ, ತಡೆದುಕೊಳ್ಳಲಾಗದೆ ಹುಲಿಚರ್ಮ ಹೊದ್ದಿದ್ದ ಕತ್ತೆ ಕೂಗತೊಡಗಿತು. ಆಗ ಗದ್ದೆ ಕಾಯುವವರು ಇದರ ನಿಜವಾದ ಬಣ್ಣ ತಿಳಿದು, ಇದು ನಮ್ಮನ್ನು ಮೋಸಗೊಳಿಸಿತೆಂದು ತಿಳಿದು ಆ ಕತ್ತೆಯನ್ನು ಬಡಿದು ಸಾಯಿಸಿಬಿಟ್ಟರಂತೆ. ಕತ್ತೆಯು ಮೌನವಾಗಿರುತ್ತಿರೆ ಇನ್ನಷ್ಟು ಕಾಲ ಸುಖವಾಗಿರುತ್ತಿತ್ತು. ವಾಚಾಳಿಗಳು ತಮ್ಮ ದುಡುಕಿನ ಮಾತಿನಿಂದಲೇ ಸೋಲುತ್ತಾರೆ. ಮಾತನಾಡುತ್ತವೆ ಎಂಬುದರಿಂದಲೇ ಗಿಳಿ ವೈನಗಳನ್ನು ಬಂಧಿಸುತ್ತಾರೆ. **"ಮೌನಂ ಸರ್ವತ್ರ ಸಾಧನಂ."**

ವಿಷ್ಣುಶರ್ಮರು ಕಥೆಯನ್ನು ಇಂದಿಗೆ ಇಷ್ಟು ಸಾಕು ಎಂದು ಎದ್ದಿದ್ದರು. ರಾಜಕುಮಾರರೂ ಅವರ ಜೊತೆಯಲ್ಲೇ ಎದ್ದು"ಗುರುಗಳೇ, ಕಪಿಗೆ ಎಷ್ಟೊಂದು ಕಥೆ ಗೊತ್ತಿದೆಯಲ್ಲ! ಅದು ಬುದ್ಧಿವಂತನೂ ಹೌದು. ಇಲ್ಲವಾದರೆ ಅದು ಕಥೆಹೇಳಲು ಎಲ್ಲಿರುತ್ತಿತ್ತು? ಹೆಣ್ಣು ಮೊಸಳೆಯ ಹೊಟ್ಟೆಯಲ್ಲಿ. ಅಷ್ಟೇ ಅಲ್ಲದೆ ಅದಕ್ಕೆ ಎಷ್ಟೊಂದು ನೀತಿ ತಿಳಿದಿದೆ. ಅದರಲ್ಲೂ ರಾಜನಿಗೆ ಸಂಬಂಧಿಸಿದಂತೆ. ಎಂದು ಶಿಷ್ಯರೊಬ್ಬೊಬ್ಬರೂ ಒಂದೊಂದು ಮಾತನಾಡುತ್ತ ಗುರುಗಳನ್ನು ಹಿಂಬಾಲಿಸಿದರು. ಈಗೀಗ ರಾಜಕುಮಾರರಿಗೆ ಕಥೆಗಿಂತಲೂ, ಅದು ಬೋಧಿಸುವ ರಾಜನೀತಿ ಕಡೆಗೆ ಒಲವು ಹೆಚ್ಚುತ್ತಿರುವುದನ್ನು ಗಮನಿಸುತ್ತಿದ್ದ ವಿಷ್ಣುಶರ್ಮರಿಗೆ ಸಂತೋಷವಾಯಿತು. ಕಥೆಯ ಮೂಲಕವೇ. ತಿಳಿಸಬೇಕಾದುದನ್ನು ಹೇಳಿದರೆ ಅದು ಮನಸ್ಸಿಗೆ ನಾಟುತ್ತದೆ ಎಂಬುದು ಅವರಿಗೆ ದೃಢವಾಯಿತು. ಆರು ತಿಂಗಳು ಕಾಲಾವಕಾಶ ಬೇಡ. ಅದಕ್ಕೂ ಮೊದಲು ಪಾಂಡಿತ್ಯಪೂರ್ಣರಾದ ಇವರನ್ನು ರಾಜನಿಗೆ ಒಪ್ಪಿಸಿ ತಮ್ಮ ಕರ್ತವ್ಯ ಮುಗಿಸಿದ ಧನ್ಯತಾ ಭಾವವನ್ನು ಹೊಂದಬೇಕೆಂದು ವಿಷ್ಣುಶರ್ಮರು ಬಯಸಿದ್ದರು. ಇದು ಒಬ್ಬ ಆದರ್ಶ ಶಿಕ್ಷಕನಲ್ಲಿರಬೇಕಾದ ಶೈಕ್ಷಣಿಕ ಮನೋವಿಜ್ಞಾನದ ಜ್ಞಾನ, ಕರ್ತವ್ಯ ಪ್ರಜ್ಞೆ ಹಾಗೂ ಸಾಧಿಸಬಲ್ಲೆನೆಂಬ ದೃಢ ಸಂಕಲ್ಪ.

ಇನ್ನೊಂದು ಕಥೆ– **"ರೈತನ ಹೆಂಡತಿ, ನರಿ ಮತ್ತು ವಂಚಕನ ಕಥೆ**ಯನ್ನು ಮೊಸಳೆಯು ಹೇಳಿದ್ದು. ಈ ಕಥೆಯಲ್ಲಿನ ಪರಿಸ್ಥಿತಿ ಗಂಡನೂ ಇಲ್ಲದೆ–ಮಿಂಡನೂ ಇಲ್ಲದೆ ಬೆತ್ತಲೆಯಾದ ಒಕ್ಕಲುಗಿತ್ತಿಯ ದಡ್ಡತನ. ಹೊಸ ಸೀರೆ ಸಿಗುತ್ತದೆಂದು ಉಟ್ಟ ಸೀರೆಯನ್ನು ಸುಟ್ಟರೆ–ಬೆಂಕಿಯಿಂದ ಬಾಣಲೆಗೆ ಬಿದ್ದಹಾಗೆ–ಇದ್ದುದನ್ನು ಬಿಟ್ಟು ಮತ್ತೊಂದನ್ನು ಹಾರೈಸಿದರೆ ಆಗುವ ಪರಿಣಾಮ ಎರಡೂ ಇಲ್ಲದಂತಾಗುವುದು. ಈ ಒಂದು ಬದುಕಿನ ನೀತಿಯನ್ನು ತಿಳಿಸುತ್ತಾ, ಕಳ್ಳನಿಂದ ಮೋಸಗೊಂಡು ಒಕ್ಕಲುಗಿತ್ತಿಯು ಮೈ, ಕೈ, ಕಾಲುಗಳನ್ನು ಮುದ್ದೆಮಾಡಿಕೊಂಡು ಮರಳ ದಿನ್ನೆಯಲ್ಲಿ ಕುಳಿತಿದ್ದಳು. ಆಗ ಒಂದು ಹೆಣ್ಣು ನರಿ ಬಾಯಲ್ಲಿ ಮಾಂಸದ ತುಂಡೊಂದನ್ನು ಹಿಡಿದುಕೊಂಡು ಬಂದಿತು. ನದಿ ತೀರದಲ್ಲಿ ದೊಡ್ಡ ಮೀನೊಂದು ನೀರಿನಿಂದ ಹೊರಬಿದ್ದು ದಡದಲ್ಲಿ ಕುಳಿತಿತ್ತು. ಅದನ್ನು ನೋಡಿ ಮಾಂಸದ ತುಂಡನ್ನು ಬಿಟ್ಟು ಅದು ಮೀನಿನ ಕಡೆಗೆ ಓಡಿತು. ಆ ಹೊತ್ತಿಗೆ

ಹದ್ದೊಂದು ಹಾರಿಬಂದು ಬಿದ್ದಿದ್ದ ಮಾಂಸದ ತುಂಡನ್ನು ಕಚ್ಚಿಕೊಂಡು ಹೋಯಿತು. ಇತ್ತ ದಡಕ್ಕೆ ಬಿದ್ದಿದ್ದ ಮೀನು ಎರಡು ಮೂರು ಬಾರಿ ಕುಣಿಕುಣಿದು ನೀರನ್ನು ಸೇರಿ ಬದುಕಿಕೊಂಡಿತು. ಯಾವುದೂ ದಕ್ಕದಿರಲು ಹೆಣ್ಣು ನರಿಯು ಹತಾಶವಾಗಿ ನೋಡುತ್ತಿದ್ದುದನ್ನು ಕಂಡು ಮುದುಡಿ ಕುಳಿತುಕೊಂಡಿದ್ದ ಆಕೆ ಕೇಳಿದಳು. ಎಲ್ಲಾ ಕಳೆದುಕೊಂಡೆಯಲ್ಲಾ ಮತ್ತೆ ನೋಡುತ್ತಿರುವುದು ಏನನ್ನು?[68] ಆಗ ಆ ನರಿಯು ಪತಿಯನ್ನು, ಧನವನ್ನು ಮತ್ತು ಪ್ರಿಯನನ್ನು ಕಳೆದುಕೊಂಡ ಅವಳನ್ನು ನೋಡಿ ಅಪಹಾಸ್ಯ ಮಾಡುತ್ತಾ ಹೀಗೆ ಹೇಳಿತು –

यादृशं मम पाण्डित्यं तादृशं द्विगुणं तव ।

नाभूज्जारो न भर्त्ता च  किं निरीक्षसि  नग्निके ॥[69]

"ನನ್ನಲ್ಲಿರುವ ಬುದ್ಧಿಗಿಂತ ಎರಡರಷ್ಟು ಬುದ್ಧಿ ನಿನ್ನಲ್ಲಿದೆ. ನಿನ್ನ ಪ್ರಿಯನೂ ಉಳಿಯಲಿಲ್ಲ, ನಿನ್ನ ಗಂಡನೂ ಉಳಿಯಲಿಲ್ಲ. ಎಲೈ ನಗ್ನಳೇ, ಏನನ್ನು ನೋಡುತ್ತಿರುವೆ?  ಹೀಗೆ ಮೊಸಳೆಯು ಕಥೆಯನ್ನು ಮುಗಿಸಲು ಮತ್ತೊಂದು ನೀರಿನಲ್ಲಿರುವ ಪ್ರಾಣಿಯು ಬಂದು ಹೇಳಿತು. "ನಿನ್ನ ಮನೆಯನ್ನು ಬೇರೊಂದು ದೊಡ್ಡ ಮೊಸಳೆಯು ಆಕ್ರಮಿಸಿಕೊಂಡಿತು.

ಇದನ್ನು ಕೇಳಿ ದುಃಖಗೊಂಡ ಮನಸ್ಸಿನಿಂದ ಆ ದೊಡ್ಡ ಮೊಸಳೆಯನ್ನು ಮನೆಯಿಂದ ಹೊರದೂಡುವ ಉಪಾಯವನ್ನು ಚಿಂತಿಸುತ್ತಾ ಹೇಳಿತು." ಅಯ್ಯೋ ನನ್ನ ದುರ್ವಿಧಿಯೇ, ಏನು ಹೇಳಲಿ ನನ್ನ ಪರಿಸ್ಥಿತಿಯನ್ನು? ಗೆಳೆಯ ವೈರಿಯಾದ ಹೆಂಡತಿ ಸತ್ತುಹೋದಳು, ನನ್ನ ಮನೆಯನ್ನು ಬೇರೊಬ್ಬರು ಆಕ್ರಮಿಸಿಕೊಂಡರು. ಇನ್ನೇನನ್ನು ಕಾಣಲುಂಟೋ? ಎಂದು ಗೋಳಾಡಿತು.

ಗಾಯವಾದ ಕಡೆಯೇ ಮತ್ತೆ ಮತ್ತೆ ಏಟು ಬೀಳುತ್ತದೆ; ಆಹಾರವು ಇಲ್ಲದಿದ್ದಾಗ ಜಠರಾಗ್ನಿಯು ಚೆನ್ನಾಗಿ ಉರಿಯುತ್ತದೆ; ತೊಂದರೆಗಳಿದ್ದಾಗ ವೈರಿಗಳು ಹುಟ್ಟಿಕೊಳ್ಳುತ್ತಾರೆ; ವಿಧಿಯು ಪ್ರತಿಕೂಲವಾಗಿದ್ದ ಸಂದರ್ಭದಲ್ಲಿ ಮನುಷ್ಯರಿಗೆ ಹೇಗೆಲ್ಲ ಆಗುತ್ತದೆ. ಆದ್ದರಿಂದ ಏನು ಮಾಡುವುದು? ಮೊಸಳೆಯೊಂದಿಗೆ ಹೋರಾಡುವುದೇ? ಅಥವಾ ಸಾಮೋಪಾಯದಿಂದ ಮಾತನಾಡಿ ಹೊರಹಾಕುವುದೇ? ಅಥವಾ ಭೇದ ಇಲ್ಲವೇ ದಾನ ಮಾರ್ಗಗಳನ್ನು ಅನುಸರಿಸುವುದೇ? ಅಥವಾ ಈ ವಾನರಮಿತ್ರನನ್ನೇ ಕೇಳುವುದೇ? ತನ್ನ ಹಿತೈಷಿಗಳು ಹಾಗೂ ಗುರುವನ್ನು ಕೇಳಿ ಕೆಲಸ ಮಾಡುವುದರಿಂದ, ಆ ಕೆಲಸದಲ್ಲಿ ಎಂದಿಗೂ ವಿಘ್ನಗಳುಂಟಾಗುವುದಿಲ್ಲ ಎಂದು ತಿಳಿದವರು ಹೇಳುತ್ತಾರೆ ಎಂದೆಲ್ಲ ಯೋಚಿಸಿತು.[70]

---

68. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ, ಚತುರ್ಥತಂ, ಪು,–197–199, (2015). ವರ್ನಿಲ, ನಂ39/2–11, ಕಲ್ಯಾಣಿ ಗಾರ್ಡನ್, ಬನಶಂಕರಿ, 1ನೇ ಹಂತ, ಬೆಂಗಳೂರು–560050
69. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ–59, ಪು – 678,( 1993).ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
70. **ಭರತ ಬಿ ರಾವ್ ಪಂಚತಂತ್ರ,** ಪಂಡಿತ ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ,

ಹೀಗೆ ಯೋಚಿಸಿ ಮತ್ತೆ ಜಂಬೂವೃಕ್ಷದಲ್ಲಿರುವ ಮರ್ಕಟನ ಸಲಹೆಯನ್ನು ಕೋರಿಕೊಂಡಿತು. ಆ ಮರ್ಕಟಕ್ಕೆ ವಿಶ್ವಾಸ ದ್ರೋಹಿ ಮೊಸಳೆಯ ಬಗ್ಗೆ ಕನಿಕರ ಮೂಡಲೇ ಇಲ್ಲ. ಆದ್ದರಿಂದಲೇ ಅದು ಹೀಗೆ ಹೇಳಿತು. "ಹೆಂಡತಿಯ ಮಾತಿನಂತೆ ನನ್ನನ್ನು ಕೊಲ್ಲಲು ಬಗೆದವನು ನೀನಲ್ಲವೇ? ಹೆಂಡತಿಯು ಲೋಕದಲ್ಲಿ ಎಲ್ಲಕ್ಕಿಂತ ಹೆಚ್ಚು ಪ್ರೀತಿಪಾತ್ರಳು ನಿಜ. ಆದರೂ ಅವಳ ಮಾತನ್ನು ಕೇಳಿ ಕೆಟ್ಟದ್ದನ್ನು ಮಾಡುವುದೇ? ನಿನ್ನ ಮೌಢ್ಯದಿಂದ ನಿನಗೆ ನೀನೇ ಕೇಡನ್ನು ತಂದುಕೊಂಡೆ. ಸಜ್ಜನರ ಮಾತನ್ನು ದರ್ಪದಿಂದ ಉಲ್ಲಂಘಿಸುವವರು ಅದೇ ದರ್ಪದಿಂದ ಮನೆಯನ್ನು ಆಕ್ರಮಿಸಿಕೊಂಡವರೊಡನೆ ಯುದ್ಧಮಾಡಿ ಓಡಿಸಬೇಕು. ಸಾಮವನ್ನು ನಮಗಿಂತ ಶ್ರೇಷ್ಠನಾದವನಲ್ಲಿ; ಭೇದೋಪಾಯವನ್ನು ಶೂರನಾದವನಲ್ಲಿ; ನೀಚನಲ್ಲಿ ದಾನವನ್ನು; ಸಮಬಲದಲ್ಲಿ ದಂಡವನ್ನು ಉಪಯೋಗಿಸಿ ಗೆಲ್ಲಬೇಕೆಂದು ಬಲ್ಲವರು ಹೇಳುತ್ತಾರೆ.

सतां वचनमादिष्टं मदेन न करोति यः ।

स विनाशमवाप्नोति घण्टोष्ट्र इव सत्वरम् ॥[71]

ಸಜ್ಜನರು ಹೇಳಿದ ಮಾತನ್ನು ಅಹಂಕಾರದಿಂದ ಯಾರು ಕೇಳುವುದಿಲ್ಲವೋ ಅವರು ಶೀಘ್ರದಲ್ಲೇ ಘಂಟಾಧಾರಿಯಾದ ಒಂಟೆಯಂತೆ ನಾಶಹೊಂದುತ್ತಾರೆಂದು ಮಂಗವು ಮುಂದಿನ ಕಥೆಗೆ ಪೀಠಿಕೆ ಹಾಕಿತು.

**"ಕೊರಳಿಗೆ ಗಂಟೆಯನ್ನು ಕಟ್ಟಿಕೊಂಡು ಜಂಬದಿಂದಾಗಿ ಹತನಾದ ಒಂಟೆ ಘಂಟೋಷ್ಟ್ರ"** ಈ ಕಥೆಯಲ್ಲಿ ಒಬ್ಬ ಬಡಗಿಯು ಬಹಳ ಪ್ರೀತಿಯಿಂದ ಒಂದು ಒಂಟೆಯನ್ನು ಸಾಕಿ, ಅದರ ಕುತ್ತಿಗೆಗೆ ಘಂಟೆಯೊಂದನ್ನು ಕಟ್ಟಿದ್ದನು. ನಿತ್ಯವೂ ಒಂಟೆಯ ಹಾಲನ್ನು ಕರೆದು ತನ್ನ ಪರಿವಾರವನ್ನು ಸಾಕುತ್ತಿದ್ದನು. ಕೆಲವೇ ವರ್ಷಗಳಲ್ಲಿ ಅವನ ಬಳಿ ಅನೇಕ ಒಂಟೆಗಳು ಹಾಗೂ ಒಂಟೆಯ ಮರಿಗಳಾದವು. ದೊಡ್ಡ ಒಂಟೆಯ ಗುಂಪನ್ನೇ ಮಾಡಿ ಅದರ ರಕ್ಷಣೆಗಾಗಿ ಕಾವಲುಗಾರನನ್ನು ನೇಮಿಸಿದನು ಅವನು ಮೊದಲು ಸಾಕಿದ ಒಂಟೆಯು ಗರ್ವದಿಂದ ನಿಧಾನವಾಗಿ ಬಂದು ಇತರರನ್ನು ಸೇರುತ್ತಿತ್ತು. ಒಂಟೆಯ ಮರಿಗಳೆಲ್ಲವೂ ಮೇಯಲು ನಗರದ ಉಪವನಕ್ಕೆ ಹೋಗುತ್ತಿದ್ದವು. ಮಂದಮತಿಯಾದ ಈ ಗರ್ವದ ಒಂಟೆಯು ಗುಂಪಿನಿಂದ ಹಿಂದೆ ಬಿದ್ದು, ಘಂಟಾಶಬ್ದವನ್ನು ಮಾಡುತ್ತಾ ಬರುತ್ತದೆ. ಯಾವುದಾದರೂ ಕ್ರೂರ ಪ್ರಾಣಿಯ ಬಾಯಿಗೆ ಸಿಕ್ಕಿದರೆ ಖಂಡಿತವಾಗಿಯೂ ಸಾವನ್ನಪ್ಪುತ್ತದೆ" ಎಂದು ಯೋಚಿಸಿ ಒಮ್ಮೆ ಉಳಿದ ಒಂಟೆಗಳು ಎಚ್ಚರಿಕೆಯನ್ನು ಸೂಚಿಸಿದ್ದವು. ಆದರೆ ಆ ಮದೋನ್ಮತ್ತನಾದ ಒಂಟೆಯು ಸಜ್ಜನರ ನುಡಿಯನ್ನೆಲ್ಲಿ ಕೇಳುತ್ತದೆ? ಒಂದು ದಿನ ಎಂದಿನಂತೆ ಸೋಮಾರಿಯಾಗಿ ತೀರಾ ಹಿಂದೆ ಬರುತ್ತಿದ್ದ

ಚ.ತಂ,ಪು –246–247,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.,44/1, ಕೆ.ಆರ್.ರಸ್ತೆ, ಬಸವನಗುಡಿ, ಬೆಂಗಳೂರು–560005

71. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ–65, ಪು.–685, (1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಗಂಟೆಯ ಒಂಟೆಯನ್ನು ಸಿಂಹವೊಂದು ಕೊಂದುಬಿಟ್ಟಿತು. ಆದ್ದರಿಂದ ಸಜ್ಜನರ ಮಾತನ್ನು ಕೇಳಬೇಕೆಂದು ಬಲ್ಲವರು ಹೇಳುವುದು ಎಂದು ಮಂಗವು ಕಥೆಯನ್ನು ಮುಗಿಸಿತು.[72]

ಆಗ ಮೊಸಳೆಯು "ಅಯ್ಯಾ, ವಾನರನೇ, ಲೋಕದ ಹಿತವನ್ನು ಬಯಸುವವರು ಉಪದೇಶವನ್ನು ಎಲ್ಲರಿಗೂ ನೀಡುತ್ತಾರೆ. ಅಂಥಹವರಿಗೆ ಇಹಪರಗಳಲ್ಲಿ ಎಂದೂ ಕೇಡು ಒದಗದು. ಹೀಗಾಗಿ ಕೃತಘ್ನನಾದರೂ ನನಗೆ ಉಪದೇಶ ಮಾಡಿ ಪುಣ್ಯಾತ್ಮನಾಗು." ಎಂದಿತು. ಅದನ್ನು ಕೇಳಿದ ಮಂಗವು ಹೀಗೆ ಹೇಳಿತು– "ಭದ್ರ, ಹಾಗಾದರೆ ನಿನ್ನ ಮನೆಗೆ ಹೋಗಿ ಆ ಮೊಸಳೆಯೊಂದಿಗೆ ಯುದ್ಧ ಮಾಡು. ಸತ್ತರೆ ವೀರಸ್ವರ್ಗವನ್ನು ಪಡೆಯುವೆ. ಉಳಿದರೆ ಮನೆ ಮತ್ತು ಯಶಸ್ಸನ್ನು ಪಡೆಯುವೆ. ಯುದ್ಧವನ್ನು ಮಾಡುವುದರಿಂದ ನಿನಗೆ ಎರಡೂ ಉತ್ತಮವಾದ ಪರಿಣಾಮಗಳೇ ಆಗುವುದು. ಈ ಶ್ಲೋಕವು ಚತುರೋಪಾಯಗಳನ್ನು ಹೇಳುತ್ತದೆ. ಕೇಳು.

उत्तमं प्रणिपातेन शूरं भेदेन योजयेत् ।

नीचमल्पप्रदानेन समशक्तिं पराक्रमैः ॥[73]

ಉತ್ತಮವಾದವನನ್ನು ಸಾಮೋಪಾಯದಿಂದ, ಶೂರನನ್ನು ಭೇದೋಪಾಯದಿಂದ, ನೀಚನನ್ನು ಸ್ವಲ್ಪ ದಾನಾದಿಗಳನ್ನು ಕೊಡುವುದರಿಂದ ಹಾಗೂ ಸಮಬಲನನ್ನು ಪರಾಕ್ರಮದಿಂದ ಜಯಿಸಬೇಕು.

ಮೊಸಳೆಯು ಅದೇನೆಂದು ಕೇಳಲು ಮಂಗವು, "**ನರಿ, ಸಿಂಹ, ಹುಲಿ ಮತ್ತು ಚಿರತೆಯ ಕಥೆ**ಯನ್ನು ಹೇಳಿತು. ಈ ಕಥೆಯಲ್ಲಿ ಸತ್ತ ಆನೆಯನ್ನು ತಿನ್ನಲಾಗದೆ ಸಿಂಹ, ಹುಲಿ ಮತ್ತು ಚಿರತೆಯನ್ನು ವಂಚಿಸಿದ ಮಹಾಚತುರ ನರಿಯ ವರ್ತನೆಯ ಚಿತ್ರಣ ಕಂಡುಬರುತ್ತದೆ. ಈ ಕಥೆಯ ನೀತಿ ಊಟದ ಹೊತ್ತಿನಲ್ಲಿ ನೆಮ್ಮದಿ ಇರಬೇಕು. ಅದು ಹಂಗಿನದ್ದೂ ಆಗಿರಬಾರದು. ಚತುರೋಪಾಯಗಳಲ್ಲಿ ಯಾವುದನ್ನು ಯಾವ ಹೊತ್ತಿನಲ್ಲಿ ಉಪಯೋಗಿಸಬೇಕು ಎಂಬುದನ್ನು ಅರಿತಿರಬೇಕು. ಇದು ಬದುಕಿನ ನೀತಿ, ಬದುಕುವ ರೀತಿಯೂ ಹೌದು." ಕಥೆಯನ್ನು ಮುಗಿಸಿ ಉಪದೇಶವನ್ನು ಮುಂದುವರೆಸುತ್ತಾ ಮಂಗವು ಮೊಸಳೆಗೆ ಹೇಳುತ್ತದೆ. "ನೀನೂ ಕೂಡ ನಿನ್ನ ಜಾತಿಗೇ ಸೇರಿದ ನಿನ್ನ ಶತ್ರುವನ್ನು ಯುದ್ಧದಲ್ಲಿ ಸೋಲಿಸಿ, ಅವನು ಓಡಿಹೋಗುವಂತೆ ಮಾಡು. ಇಲ್ಲದಿದ್ದರೆ ಅಲ್ಲಿ ಸ್ಥಿರವಾಗಿ ನೆಲಸಿದ ಅವನಿಂದ ನಿನ್ನ ನಾಶವಾಗುತ್ತದೆ. ಏಕೆಂದರೆ, ಹೀಗೊಂದು ಉಕ್ತಿಯಿದೆ– "ಗೋವುಗಳಲ್ಲಿ ಸಂಪತ್ತು, ಬ್ರಾಹ್ಮಣನಲ್ಲಿ ತಪಸ್ಸು ಸ್ತ್ರೀಯರಲ್ಲಿ ಚಾಪಲ್ಯ, ಸ್ವಜಾತಿಯಲ್ಲಿ ವೈರವೆಂಬುದು ಸಹಜ.

---

72. **ಭರತ ಬಿ. ರಾವ್ ಪಂಚತಂತ್ರ,** ಪಂಡಿತ ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಚ.ತಂ.ಪು – 248–249,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560005

73. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ–70, ಪು – 691,(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ವಿದೇಶವು ಸಂಪದ್ಭರಿತವಾಗಿದೆ. ವಿವಿಧ ರೀತಿಯ ಆಹಾರಗಳು ಲಭ್ಯವಿವೆ. ನಗರದ ಸ್ತ್ರೀಯರು ಉದಾಸೀನರು. ನಗರಗಳಲ್ಲಿ ಬಯಸಿದ್ದೆಲ್ಲಾ ಸಿಗುವುದು. ಇದರಿಂದಾಗಿ ಅಲ್ಲಿನ ಹೆಂಗೆಳೆಯರಿಗೆ ಮುಂಜಾಗರೂಕತೆ ಕಡಿಮೆ. ಅಂತೆಯೇ ಅಲ್ಲಿನ ಪ್ರಾಣಿಗಳೂ ಸಹ ಹೊಸಬರನ್ನು ತಿರಸ್ಕರಿಸುತ್ತವೆ. ಮತ್ತೊಂದು ವಿದೇಶದ ದೋಷವೇನೆಂದರೆ ಅಲ್ಲಿ ಸ್ವಜಾತಿಯವರೇ ವಿರುದ್ಧವಾದುದನ್ನು ಮಾಡುತ್ತಾರೆ.[74]

सुभिक्षाणि विचित्राणि शिथिलाः पौरयोषितः ।

ऐको दोषो विदेशस्य स्वजातिर्यद् विरुध्यते ॥[75]

ವಿದೇಶವು ಸಂಪದ್ಭರಿತವಾಗಿದೆ, ವಿವಿಧ ರೀತಿಯ ಆಹಾರಗಳು ಲಭ್ಯವಿದೆ. ನಗರದ ಸ್ತ್ರೀಯರು ಉದಾಸೀನರು. ಆದರೆ ವಿದೇಶದ ಒಂದು ದೋಷವೆಂದರೆ, ಅಲ್ಲಿ ಸ್ವಜಾತಿಯವರೇ ವಿರುದ್ಧವಾದುದನ್ನು ಮಾಡುತ್ತಾರೆ.

ಪುನಃ ಮೊಸಳೆಯು ಅದೇನೆಂದು ಕೇಳಲು ಇದಕ್ಕೂ ಒಂದು ಕಥೆ ಹೇಳುತ್ತೇನೆ ಕೇಳು ಎಂದು **"ವಿದೇಶಕ್ಕೆ ಹೋದ ನಾಯಿಯ ಕಥೆ"**ಯನ್ನು ಮಂಗ ಪ್ರಾರಂಭಿಸಿತು. ಈ ಕಥೆಯಲ್ಲಿ ವಿದೇಶಕ್ಕೆ ಹೋಗಿ ಭ್ರಮನಿರಸನದಿಂದ ಸ್ವಂತ ಊರಿಗೆ ಹಿಂದಿರುಗಿದ ನಾಯಿಯ ವಿಚಾರವಿದ್ದು, ಇದರ ನೀತಿಯೆಂದರೆ ಸ್ವದೇಶೇ ನಿಧನಂ ಶ್ರೇಯಃ.

ಆಹಾರ ಮತ್ತು ಜಲಕ್ಷಾಮವು ಬಹಳವಾಗಿ ಕಾಡಲು ಜನರು ಬೇರೆ ದೇಶಕ್ಕೆ ಗುಳೇ ಹೋಗತೊಡಗಿದರು. ಅವರೊಂದಿಗೆ ಅವರ ಹಿಂಬಾಲಕ ಜೀವಿಗಳು. ಅದರಲ್ಲಿ ಚಿತ್ರಾಂಗ ಎಂಬ ನಾಯಿಯೂ ಒಂದು. ಅಲ್ಲಿ ಒಂದು ನಗರದಲ್ಲಿ ಒಬ್ಬಳು ಜಾಗ್ರತೆ ಇಲ್ಲದ ಮನೆಯೊಡತಿಯಿರುವ ಮನೆಯನ್ನು ಹೊಕ್ಕು ಈ ನಾಯಿಯು ಬಗೆಬಗೆಯ ಆಹಾರವನ್ನು ತಿಂದು ತೃಪ್ತಿಗೊಂಡಿತು. ಆದರೆ ಆ ನಾಯಿಯು ಮನೆಯಿಂದ ಹೊರಬರುವಾಗ ಅಲ್ಲಿದ್ದ ಮದದಿಂದ ಕೂಡಿದ ಇತರ ನಾಯಿಗಳು ಚಿತ್ರಾಂಗ ನಾಯಿಯನ್ನು ಸುತ್ತುವರಿದು ದೇಹದೆಲ್ಲೆಡೆ ಕಚ್ಚುತ್ತಿದ್ದವು. ಆಗ ಚಿತ್ರಾಂಗನು **"ಅಯ್ಯೋ ಸ್ವದೇಶವೇ ಮೇಲು. ಅಲ್ಲಿ ಬರವಿದ್ದರೂ ಸುಖವಿತ್ತು. ಜಗಳಕ್ಕೆ ಯಾರೂ ಬರುತ್ತಿರಲಿಲ್ಲ. ಆದುದರಿಂದ ನನ್ನೂರೇ ಮೇಲು"** ಎಂದು ಊರಿಗೆ ಮರಳಿತು.[76] **"ಇದ್ದ ಕಡೆ ಇರಲಿಲ್ಲ, ಬಿದ್ದಗೋಡೆ ಹಾಕಲಿಲ್ಲ"**

---

74. **ಭರತ ಬಿ. ರಾವ್ ಪಂಚತಂತ್ರ,** ಪಂಡಿತ ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಚ.ತಂ,ಪು –250–252,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ, 44/1, ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560005
75. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ–78, ಪು–699(1993)ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
76. **ಭರತ ಬಿ ರಾವ್ ಪಂಚತಂತ್ರ,** ಪಂಡಿತ ವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಸಂಪೂರ್ಣ ಕನ್ನಡಾನುವಾದ, ಚ.ತಂ,ಪು –252–253,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1,ಕೆ.ಆರ್. ರಸ್ತೆ, ಬಸವನಗುಡಿ, ಬೆಂಗಳೂರು–560005

ಎಂಬ ನಾಣ್ಣುಡಿಯಂತೆ.

ಮಂಗ ಮುಂದುವರಿಸಿ, ಮೊಸಳೆಗೆ ಹೇಳಿತು. **"ಇನ್ನೆಲ್ಲೋ ಹೊಸ ಮನೆಯನ್ನು. ಅರಸುವುದಕ್ಕಿಂತ ಇದ್ದ ಮನೆಯನ್ನು ರಕ್ಷಿಸಿಕೊಳ್ಳುವುದು ವಿಹಿತ, ಹೋಗು ನಿನ್ನ ವೈರಿ ಮಕರದೊಡನೆ ಹೋರಾಡು. ನಿನ್ನೆಲೆಗೆ ನೀನೇ ಅರಸನಾಗಿ ದೀರ್ಘಕಾಲ ಸುಖದಿಂದ ಬಾಳು"** ಎಂದಿತು ವಾನರ. ಸೂಕ್ತ ಸಲಹೆ ಸಿಕ್ಕಿತೆಂದು ಮಕರ ಅಲ್ಲಿಂದ ಹೊರಟುಹೋಯಿತು ಹೀಗೊಂದು ಉಕ್ತಿಯಿದೆ, ಬಹಳ ಯೋಗ್ಯವಾಗಿದೆ:–

अकृत्वा पौरुषं या श्रीः किं तथाऽपि सुभोग्यया ।

जरद्गवः समश्नाति दैवादुपगतं तृणम् ॥[77]

ಅಂದರೆ, **"ಪುರುಷ ಪ್ರಯತ್ನವಿಲ್ಲದೇ ಸಿಕ್ಕ ಸಂಪತ್ತಿನ ಭೋಗದಿಂದೇನು ಪ್ರಯೋಜನ? ಮುದಿ ಎತ್ತು ಕೂಡ ಭಗವಂತನು ಕರುಣಿಸಿದ ಹುಲ್ಲನ್ನು ತಿನ್ನುವುದಿಲ್ಲವೇ?"**

ಈ ರೀತಿಯಾಗಿ ನಾಲ್ಕನೆಯತಂತ್ರವಾದ – ಲಬ್ಧಪ್ರಣಾಶ – ದೊರೆತುದದರ ನಾಶ ಎಂಬುದರ ಸೂತ್ರ ಕಥೆಯ 11 ಉಪಕಥೆಗಳಲ್ಲಿ ಅತ್ಯಂತ ಮಹತ್ವಪೂರ್ಣವಾದ ರಾಜನೀತಿಯನ್ನು ಉತ್ತಮ ಬದುಕಿಗೆ ಬೇಕಾದ ಜಾಗೃತಿಯನ್ನು; ಉದಾಸೀನ, ದುಡುಕಿನ ಕಾರ್ಯದಿಂದ ಉಂಟಾಗುವ ಪರಿಣಾಮ; ಸಜ್ಜನರ ಸಲಹೆಯನ್ನು ಪಾಲಿಸುವುದರ ಮಹತ್ವವನ್ನು; ಇದ್ದದ್ದನ್ನು ಬಿಟ್ಟು ಮತ್ತೊಂದನ್ನು ಹಾರೈಸಿದರೆ ಅದರಿಂದಾಗುವ ಪರಿಣಾಮ; ವಾಚಾಳಿಗಳಿಗೆ ದುಡುಕಿನಿಂದ ಸೋಲು; ಹುಟ್ಟುಗುಣ ಸತ್ತರೂ ಹೋಗದು; ಸುಳ್ಳುಹೇಳಲೂ ಸಮಯ, ಸಂದರ್ಭದ ಆಯ್ಕೆ; ಸೇಡುತೀರಿಸಿಕೊಳ್ಳಲು ಎಂಥಹವರನ್ನು ಆಶ್ರಯಿಸಬೇಕು ಇತ್ಯಾದಿ ಉತ್ತಮ ಬದುಕಿಗೆ ಬೇಕಾದ ನೀತಿಬೋಧೆಗಳು ಬಹಳ ಯೋಜನಾಬದ್ಧವಾಗಿ, ಸರಳವಾಗಿ ವಿಷ್ಣುಶರ್ಮರು ಪಂಚತಂತ್ರದ ಮೂಲಕ ಶಿಕ್ಷಣ ಒದಗಿಸಿದ್ದಾರೆ. ಅತ್ಯಂತ ಪರಿಣಾಮಕಾರಿಯಾಗಿ, ಶೈಕ್ಷಣಿಕ ಮನೋವಿಜ್ಞಾನದ ಹಿನ್ನೆಲೆಯಲ್ಲಿ ಕಥಾಮಾಧ್ಯಮದ ಮೂಲಕ ಒಂದೆಡೆ ರಾಜನೀತಿ ಶಿಕ್ಷಣ ಮತ್ತೊಂದೆಡೆ ಬದುಕಿನ ನೀತಿ, ಇನ್ನೊಂದೆಡೆ ಸಾಮಾನ್ಯ ಜ್ಞಾನ, ವ್ಯಕ್ತಿತ್ವ ನಿರ್ಮಾಣ ಕೌಶಲ್ಯ ಎಲ್ಲವೂ ಒಂದೆಡೆ ಲಭ್ಯ. ಇದೇ ಪಂಚತಂತ್ರದ ವೈಶಿಷ್ಟ್ಯತೆ.

ಹೇಗೆ ಭಗವದ್ಗೀತೆಯಲ್ಲಿ ಕೃಷ್ಣ ಪರಮಾತ್ಮನು ಅರ್ಜುನನಿಗೆ ಒಳ್ಳೆಯ ಆತ್ಮಸ್ಥೈರ್ಯ ತುಂಬಿ, ಕರ್ತವ್ಯ ಹಾಗೂ ಜವಾಬ್ದಾರಿಯನ್ನು ಹುರಿದುಂಬಿಸಿ, ಜಾಗೃತಿಯನ್ನು ಮೂಡಿಸಿ, ಧೈರ್ಯದಿಂದ ಮುನ್ನುಗ್ಗಿ ಕಾರ್ಯಸಾಧನೆ ಮಾಡುವಂತೆ ಪ್ರೇರೇಪಿಸಿದ್ದಾನೆಯೋ, ಅದೇ ರೀತಿಯಲ್ಲಿ ವಿಷ್ಣುಶರ್ಮರು ರಾಜಕುಮಾರರನ್ನು

77. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಚ.ತಂ.ಶ್ಲೋ–80, ಪು –701,(1993).ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಪಂಚತಂತ್ರ ನೀತಿಕಥೆಗಳ ನಿರೂಪಣೆ ಮೂಲಕ ಹುರಿದುಂಬಿಸಿ ರಾಜನೀತಿ ನೈಪುಣ್ಯತೆಯನ್ನೂ, ಬದುಕಿನ ನೀತಿ ಶಿಕ್ಷಣವನ್ನೂ ಬಹಳ ಅಚ್ಚುಕಟ್ಟಾಗಿ ಒದಗಿಸಿದ್ದಾರೆ.

क्लैब्यं मा स्म गमः पार्थ नैतत्वय्युपपद्यते ।

क्षुद्रं हृदयदौर्बल्यं त्यक्त्वोत्तिष्ठ परन्तप ॥[78]

ಅಂದರೆ ಶ್ರೀ ಕೃಷ್ಣ ಹೇಳುತ್ತಾನೆ – ಹೇ ಪಾರ್ಥ! ಹೇಡಿಯಾಗಬೇಡ. ಇದು ನಿನಗೆ ತರವಲ್ಲ. ನಿನ್ನ ಹೃದಯದ ದೌರ್ಬಲ್ಯವನ್ನು ಕೊಡವಿ ಹಾಕಿಯುದ್ಧಕ್ಕೆ ಸಿದ್ಧನಾಗು, ಏಳು ಓ ವೀರನೇ! ಸಿದ್ಧನಾಗು.

ಅಂದರೆ ಕ್ಷುದ್ರವಾದ ಹೃದಯ ದೌರ್ಬಲ್ಯವನ್ನು ಕಿತ್ತೊಗೆದು ಮೇಲೆದ್ದು ನಿಲ್ಲು, ವೈರಿಗಳನ್ನು ಹಣಿಯುವವನೆ ! ಎಂದು ಉತ್ತೇಜಿಸುತ್ತಾನೆ. **"ಪರಂತಪ"** ಎಂಬ ಸಂಬೋಧನೆ ಅರ್ಜುನನ ಶೌರ್ಯವನ್ನು ಜಾಗೃತಗೊಳಿಸುವ ಶ್ರೀಕೃಷ್ಣನ ಹೂಟ ಯಶಸ್ಸು ಪಡೆಯುತ್ತದೆ. ಯಾವುದೇ ವ್ಯಕ್ತಿಯಲ್ಲಿ ಇರುವ ಅಧೈರ್ಯವನ್ನು ಹೋಗಲಾಡಿಸಿ, ಆಗುತ್ತದೋ ಇಲ್ಲವೋ ಎಂಬ ಹೊಯ್ದಾಟ ಅಥವಾ ಆತಂಕವನ್ನು ಹೋಗಲಾಡಿಸಿ, ಖಂಡಿತಾ ನೀನು ಪರೀಕ್ಷೆಯಲ್ಲಿ, ಸಂದರ್ಶನದಲ್ಲಿ ಗೆಲುವನ್ನು ಸಾಧಿಸುತ್ತೀಯ ಎಂದು ಅವನಲ್ಲಿಯ ಶಕ್ತಿಯನ್ನು ಅವಗತ ಮಾಡಿಕೊಟ್ಟು, ಆತ್ಮವಿಶ್ವಾಸವನ್ನು ಹೆಚ್ಚಿಸಿದರೆ ಆತ ಸಫಲನಾಗುತ್ತಾನೆ. ಕಾರ್ಯದಲ್ಲಿ ಯಶಸ್ಸು ಸಾಧಿಸುತ್ತಾನೆ.[79] ಹೀಗೆಯೇ ಶಿಷ್ಯರಲ್ಲಿ ಹುದುಗಿದ ಶಕ್ತಿಯನ್ನು ಗುರುಗಳು–ಶಿಕ್ಷಕರು ಹುರಿದುಂಬಿಸಿ ಆತ್ಮಸ್ಥೈರ್ಯ ತುಂಬುವ ಕೆಲಸ ಮಾಡಬೇಕಾಗಿದೆ. ಅದಕ್ಕೆ ಮೌಲ್ಯಾಧಾರಿತ ಶಿಕ್ಷಣ ಮಾತ್ರ ಮೂಲ ಆಶಯವನ್ನು ಪೂರೈಸಬಲ್ಲುದು. ಇದೇ ರೀತಿಯಲ್ಲಿ ಪಂಡಿತ ವಿಷ್ಣುಶರ್ಮರು ಪಂಚತಂತ್ರ ರೂಪಿಸಿ, ರಾಜಕುಮಾರರಿಗೆ ಒಳ್ಳೆಯ ಆತ್ಮಸ್ಥೈರ್ಯವನ್ನೂ, ಜೀವನದ ಪ್ರೀತಿಯನ್ನೂ, ಮಾತಾಪಿತೃಗಳ ಅಪೇಕ್ಷಣೀಯ ವಿಚಾರಧಾರೆಗೆ ಗೌರವವನ್ನೂ, ರಾಜನೀತಿಕೌಶಲ್ಯ ಬೆಳೆಸಿಕೊಳ್ಳಲು ಆಸಕ್ತಿಯನ್ನೂ ಪ್ರೇರೇಪಿಸಿ, ಸಾರ್ಥಕ ಬದುಕಿನ ಪಾಠವನ್ನು ಒದಗಿಸಿಕೊಟ್ಟಿರುತ್ತಾರೆ. ಇವರ ಬೋಧನಾ ಕ್ರಮ ಸರಳ, ಸ್ಫೂರ್ತಿದಾಯಕ ಹಾಗೂ ನೀತಿ ಶಾಸ್ತ್ರೋಕ್ತವಾಗಿದ್ದು, ಮಂದರಲ್ಲಿ ಮಂದನೂ ಕೂಡ ವಿಚಾರಗಳನ್ನು ಮನದಟ್ಟುಮಾಡಿಕೊಳ್ಳುವಂತೆ ಮನೋವೈಜ್ಞಾನಿಕ, ಶೈಕ್ಷಣಿಕ ಹಿನ್ನೆಲೆಯಲ್ಲಿ ಬೋಧಿಸಿದ್ದಾರೆ.



78. **ಭಗವದ್ಗೀತೆ,** ಅ–2, ಶ್ಲೋ–3

79. **ಶಾಲೆಗಳಲ್ಲಿ ಮೌಲ್ಯಾಧಾರಿತ ಶಿಕ್ಷಣ,** www.bangalorewaves.com

## ಅಧ್ಯಾಯ– ೮. ಶೈಕ್ಷಣಿಕ ಮಾರ್ಗದರ್ಶನ ಮತ್ತು ಸಲಹೆ.

## (EDUCATIONAL GUIDANCE and COUNSELLING)

ಅಧ್ಯಾಯ ೮–1. ಮಾರ್ಗದರ್ಶನ – ಅರ್ಥ–ವ್ಯಾಖ್ಯೆ –

ವಿಧಗಳು– ಶೈಕ್ಷಣಿಕ – ವೃತ್ತಿ – ವೈಯಕ್ತಿಕ.

ಅಧ್ಯಾಯ ೮–೨. ಸಲಹೆ–ಸಮಾಲೋಚನೆ – ಅರ್ಥ–ವ್ಯಾಖ್ಯೆ–

ಅದರ ವಿಧಗಳು ಮತ್ತು ಬಳಕೆ.

ಅಧ್ಯಾಯ ೮–೩. ಸಾಮಾನ್ಯ ಜ್ಞಾನದ ಕೊರತೆ – ಪರಿಣಾಮ –

ಪರೀಕ್ಷಿಸದೆ ಕೆಲಸಮಾಡುವುದು – ಪರಿಣಾಮ.

पञ्चतन्त्रस्य – पञ्चमं तन्त्रम् – अपरीक्षितकारकम्

ಕಥೆಗಳ ವಿಶ್ಲೇಷಣೆ.

# ಅಧ್ಯಾಯ–8

# ಮಾರ್ಗದರ್ಶನ ಮತ್ತು ಸಲಹೆ

(GUIDANCE and COUNSELLING)

## 8–1. –ಅರ್ಥ–ವ್ಯಾಖ್ಯೆ–ವಿಧಗಳು–ಶೈಕ್ಷಣಿಕ–ವೃತ್ತಿ–ವೈಯಕ್ತಿಕ

नृदेहमाद्यं सुलभं सुदुर्लभं प्लवं सुकल्पं गुरुकर्णधारम् ।

यदानुकूलेन नभस्वतेरितं पुमान् भवाब्धिं न तरेत् स आत्महा ॥[1]

ಮನುಷ್ಯದೇಹ ಹೊಂದುವುದು ಬಹಳ ಕಷ್ಟ.ಪೂರ್ವದ ಸುಕೃತವಿದ್ದರೆ ಮಾತ್ರ ಇದು ಲಭ್ಯವಾಗುತ್ತದೆ. ಅದೇ ಒಂದು ಒಳ್ಳೆಯ ದೋಣಿ. ಅದಕ್ಕೆ ಸಮರ್ಥ ಗುರುವೇ ಅಂಬಿಗ. ಅನುಕೂಲವಾದ ಗಾಳಿಯಿಂದ ಸೂಕ್ತ ಮಾರ್ಗದರ್ಶನದಲ್ಲಿ ಗಾಳಿಯಿಂದ ನಡೆಸಲ್ಪಡುತ್ತಿರುವಾಗ ಮನುಷ್ಯನು ಸಂಸಾರಸಾಗರವನ್ನು ದಾಟದೇ ಇದ್ದಲ್ಲಿ, ಅವನು ಸ್ವಯಂ ಕೊಲೆಮಾಡಿಕೊಂಡಂತೆ.

ಶಿಕ್ಷಣದ ಅಳಿವು–ಉಳಿವು ಉಪಾಧ್ಯಾಯರ ಮಾರ್ಗದರ್ಶನದ ಮೇಲೆ ಅವಲಂಬಿತವಾಗಿದೆ ಎಂದು ಕೆಲವು ಶೈಕ್ಷಣಿಕ ಮನೋವಿಜ್ಞಾನಿಗಳು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಮಾರ್ಗದರ್ಶನವನ್ನು ಶಿಕ್ಷಣದ ಅರ್ಥಶಾಸ್ತ್ರ ಎಂದು ಹೇಳಿರುತ್ತಾರೆ. ಮಾರ್ಗದರ್ಶನ ವ್ಯಕ್ತಿಗಳಲ್ಲಿ ಅಡಗಿರುವ ಸಾಮರ್ಥ್ಯಗಳನ್ನು ಗಣನೆಗೆ ತೆಗೆದುಕೊಂಡು ಅವುಗಳನ್ನು ಪ್ರೋತ್ಸಾಹಿಸುತ್ತದೆ. ಅರ್ಥಶಾಸ್ತ್ರವು ವ್ಯಕ್ತಿಯ ಸಂಪನ್ಮೂಲಗಳು ವ್ಯಕ್ತಿಯ ಸುಧಾರಣೆಗೆಂದು ಹೇಳುವಂತೆ ಮಾರ್ಗದರ್ಶನವೂ ಸಹ ವ್ಯಕ್ತಿಯಲ್ಲಿ ಅಡಗಿರುವ ಶಕ್ತಿ, ವ್ಯಕ್ತಿಯ ಹಿತ ಅಥವಾ ಸುಧಾರಣೆಗೆಂದು ಹೇಳುತ್ತದೆ. ಅನೇಕ ತಜ್ಞರು ಮಾರ್ಗದರ್ಶನದ ಬಗ್ಗೆ ವ್ಯಾಖ್ಯಾನಿಸುತ್ತಾ ಒಟ್ಟಾರೆ ಹೀಗೆ ಹೇಳಿರುತ್ತಾರೆ – "ಮಾರ್ಗದರ್ಶನ ವ್ಯಕ್ತಿಗೆ ತನ್ನ ಭವಿಷ್ಯದ ಹಿತಕ್ಕೆ ಕೊಡುವ ಸಹಾಯವೆಂದೂ, ತನ್ನ ಮತ್ತು ಸಮಾಜದ ಹಿತಕ್ಕೆ ಹೊಂದಿಕೊಂಡು,ವ್ಯಕ್ತಿಯು ತನ್ನ ಶಕ್ತಿಗಳನ್ನು ಕಂಡುಕೊಂಡು, ಉತ್ತಮ ರೀತಿಯಲ್ಲಿ ಉಪಯೋಗ ಪಡೆದುಕೊಂಡು ಸಂತೋಷದಿಂದ ಜೀವನ ನಡೆಸಿ ಜನ್ಮ ಸಾರ್ಥಕ ಪಡಿಸಿಕೊಳ್ಳುವಂತೆ ತಿಳಿಸುವ ವಿಧಾನವೇ ಮಾರ್ಗದರ್ಶನ ಎಂದು ಹೇಳಬಹುದು." ಮಾರ್ಗದರ್ಶನ ಎಂದರೆ ಬರೀ ಬೋಧನೆಯಲ್ಲ. ಇದು ಶೈಕ್ಷಣಿಕ ಕಾರ್ಯಕ್ರಮದ ಒಂದು ಅವಿಭಾಜ್ಯ ಅಂಗ. ವ್ಯಕ್ತಿ ತನ್ನ ಸಾಮರ್ಥ್ಯಕ್ಕನುಗುಣವಾದ ಜೀವನದ ಗುರಿಯನ್ನು ನಿರ್ಧರಿಸಿಕೊಂಡು, ಅದನ್ನು ಯಶಸ್ವಿಯಾಗಿ ಸೂಕ್ತ ಕಾರ್ಯವಿಧಾನಗಳೊಂದಿಗೆ ತಲುಪಲು

---

1. **ಸುಭಾಷಿತಮಂಜರೀ,** ಸಂಸಾರ–ಶ್ಲೋ–39,ಪು–23,ಭಾಗವತ, 11–20 17.ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು–18, (2001)

ನೀಡುವ ವ್ಯವಸ್ಥಿತವಾದ ಸಹಾಯವೇ ಮಾರ್ಗದರ್ಶನ.

अनिच्छंतोऽपि विनयं विद्याभ्यासेन बालकाः ।

भेषजेनेव नैरुज्यं प्रापणीयाः प्रयत्नतः ॥[2]

ಔಷಧವನ್ನು ಕೊಟ್ಟು ರೋಗವನ್ನು ಪರಿಹರಿಸುವಂತೆ, ಬಾಲಕರು ಇಚ್ಛಿಸದಿದ್ದರೂ ಅವರಿಗೆ ಪ್ರಯತ್ನಪೂರ್ವಕವಾಗಿ ವಿದ್ಯಾಭ್ಯಾಸವನ್ನು ಮಾಡಿಸಿ ನಯನೀತಿಗಳನ್ನು ಕಲಿಸಿಕೊಡಬೇಕು. ಅಂದರೆ ಅವರನ್ನು ಪ್ರೇರೇಪಿಸಿ ಸುಂದರ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಸೂಕ್ತ ಮಾರ್ಗದರ್ಶನ ಕೊಡಬೇಕು ಎಂದು ಈ ಸುಭಾಷಿತ ಹೇಳುತ್ತದೆ.

ಶಿಕ್ಷಣ ತಜ್ಞರು ಹಾಗೂ ಮನೋವಿಜ್ಞಾನಿಗಳು **"ಮಾರ್ಗದರ್ಶನ"**ಕ್ಕೆ ತಮ್ಮದೇ ಆದ ರೀತಿಯಲ್ಲಿ ಮತ್ತೆ ಕೆಲವು ವ್ಯಾಖ್ಯಾನಗಳನ್ನು ಒದಗಿಸಿದ್ದಾರೆ. ಇವುಗಳಲ್ಲಿ ಬಹಳ ವಿವರವಾದ ವ್ಯಾಖ್ಯೆಯೊಂದನ್ನು ಸುಪ್ರಸಿದ್ಧ ಮನೋವಿಜ್ಞಾನಿಗಳಾದ **CROW** ಮತ್ತು **CROW** ರವರು ನೀಡಿರುವುದನ್ನು ಗಮನಿಸಿದರೆ– **"ಮಾರ್ಗದರ್ಶನ"** ಎಂದರೆ ನಿರ್ದೇಶನವಲ್ಲ ಇದು ಒಬ್ಬರ ಅಭಿಪ್ರಾಯಗಳನ್ನು ಇನ್ನೊಬ್ಬರ ಮೇಲೆ ಬಲವಂತವಾಗಿ ಹೇರುವುದಲ್ಲ. ಇದು ಇನ್ನೊಬ್ಬ ವ್ಯಕ್ತಿಯ ಪರವಾಗಿ ನಿರ್ಧಾರ ಕೈಗೊಳ್ಳುವುದಲ್ಲ. ಇದು ಇನ್ನೊಬ್ಬರ ಜೀವನದ ಹೊರೆಯನ್ನು ಹೊರುವುದೂ ಅಲ್ಲ. ಬದಲಾಗಿ ತನ್ನ ಜೀವನವನ್ನು ತಾನೇ ನಿರ್ದೇಶಿಸಿಕೊಳ್ಳುವಂತೆ, ತನ್ನದೇ ಆದ ದೃಷ್ಟಿಕೋನ ಬೆಳೆಸಿಕೊಳ್ಳಲು, ತನ್ನ ನಿರ್ಧಾರಗಳನ್ನು ತಾನೇ ಕೈಗೊಳ್ಳುವಂತೆ, ತನ್ನ ಹೊರೆಯನ್ನು ತಾನೇ ಹೊರುವಂತೆ ಮಾಡಲು, ಯಾವುದೇ ವಯಸ್ಸಿನ ಒಬ್ಬ ವ್ಯಕ್ತಿಗೆ ಸಮರ್ಥ ಸಲಹೆ ನೀಡುವ ವ್ಯಕ್ತಿ ಒದಗಿಸುವ ಸಹಾಯವೇ ಮಾರ್ಗದರ್ಶನ."[3]

ಮಾರ್ಗದರ್ಶನವು ಒಬ್ಬ ವ್ಯಕ್ತಿಗೆ ಜೀವನದ ಗುರಿಯನ್ನು ರೂಪಿಸಿಕೊಳ್ಳಲು, ಹೊಂದಾಣಿಕೆ ಮಾಡಿಕೊಳ್ಳಲು, ಗುರಿಸಾಧನೆಯ ಮಾರ್ಗದಲ್ಲಿ ಎದುರಾಗುವ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಮತ್ತೊಬ್ಬ ವ್ಯಕ್ತಿ ನೀಡುವ ವೈಯುಕ್ತಿಕ ಸಹಾಯವಾಗಿದೆ ಎಂದು **JAMES JONES- an African-American Social Psychologist and Cultural diversity scholar** ರವರು ಸರಳವಾಗಿ ಅರ್ಥಪೂರ್ಣವಾಗಿ ಹೇಳಿದ್ದಾರೆ.

---

2. **ಸುಭಾಷಿತಮಂಜರೀ**–ಸಂಸಾರ–ಶ್ಲೋ–3,ಪು–14, ಹರಿಹರ ಸುಭಾಷಿತ,2–39.(2001) ಕ.ಸಾ.ಪ.ಚಾಮರಾಜಪೇಟೆ,ಬೆಂಗಳೂರು–18
3. **ವಾಮದೇವಪ್ಪ ಎಚ್.ವಿ,** ಶೈಕ್ಷಣಿಕ ಮನೋವಿಜ್ಞಾನ, ಅ–9, ಪು –344–345,2005.ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

ಮಾರ್ಗದರ್ಶನವೆಂದರೆ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ವೈಯಕ್ತಿಕ ಸಂತೋಷ ಮತ್ತು ಸಾಮಾಜಿಕ ಉಪಯುಕ್ತತೆಗಾಗಿ ತನ್ನ ಸ್ವಂತ ಪ್ರಯತ್ನಗಳ ಮೂಲಕ ತನ್ನ ಸಾಮರ್ಥ್ಯಗಳನ್ನು ಕಂಡುಕೊಳ್ಳಲು ಮತ್ತು ಅವುಗಳನ್ನು ಬೆಳೆಸಿಕೊಳ್ಳುವಂತೆ ಮಾಡಲು ಸಹಾಯ ಮಾಡುವ ಪ್ರಕ್ರಿಯೆಯಾಗಿದೆ.

ಸಾಮಾನ್ಯವಾಗಿ ಮಾರ್ಗದರ್ಶನ ಮತ್ತು ಸಲಹೆ ಎಂದೊಡನೆಯೇ ಇದು ಕೇವಲ ಮಾನಸಿಕ ಸಮಸ್ಯೆಗಳುಳ್ಳ, ಕಲಿಕೆಯಲ್ಲಿ ಹಿಂದುಳಿದಿರುವ, ದಿವ್ಯಾಂಗರಿಗೆ ಮಾತ್ರ ಅವಶ್ಯಕವಾಗಿರುವುದು ಎಂದು ಬಹಳ ಸಡಿಲವಾಗಿ ಹೇಳುವುದುಂಟು. ಇದು ಹೇಗೆಂದರೆ ನಿಮಾನ್ಸ್‌ನಲ್ಲಿ ಚಿಕಿತ್ಸೆ ಪಡೆದುಕೊಳ್ಳುವವರನ್ನೆಲ್ಲಾ ಒಂದು ರೀತಿಯಲ್ಲಿ ಅನುಮಾನಿಸಿದಂತೆ. ಇಂಥಹ ಯೋಚನೆ ಸರಿಯಲ್ಲ. ಒಂದಲ್ಲೊಂದು ಸಂದರ್ಭದಲ್ಲಿ ಎಲ್ಲ ಕ್ಷೇತ್ರಗಳಲ್ಲೂ, ಎಲ್ಲ ವಿಚಾರಗಳಿಗೂ ಸೂಕ್ತ ಮಾರ್ಗದರ್ಶನ ಮತ್ತು ಸಲಹೆ ಬೇಕೇಬೇಕು. ಪ್ರಸ್ತುತ ಇಲ್ಲಿ ಶಿಕ್ಷಣ ಮತ್ತು ವ್ಯಕ್ತಿತ್ವ ಬೆಳವಣಿಗೆ ವಿಚಾರದಲ್ಲಿ ವಿಶ್ಲೇಷಣೆ ಮಾಡುತ್ತಿರುವ ಸಂದರ್ಭದಲ್ಲಿ– **"Guidance and counselling is a process which helps the students to know their skills, interests, personality that will help them in further career selection. Guidance is a process in which a person is able to know his ability, interest and capacity that will help in the encounter of problem s faced by him."**[4]

ಇನ್ನು ಮಾರ್ಗದರ್ಶನದಲ್ಲಿ ಪ್ರಮುಖವಾಗಿ ಮೂರು ವಿಧಗಳಿವೆ. ಅವುಗಳೇ:–[5]

1. **ಶೈಕ್ಷಣಿಕ ಮಾರ್ಗದರ್ಶನ** : ಶೈಕ್ಷಣಿಕ ಮಾರ್ಗದರ್ಶನವು ಒಂದು ಪ್ರಕ್ರಿಯೆ. ಇದು ಒಬ್ಬ ವ್ಯಕ್ತಿ ತನಗೆ ತಾನೇ ಉತ್ತಮ ವಾತಾವರಣವನ್ನು ಕಲ್ಪಿಸಿಕೊಳ್ಳಲು ಸಹಾಯ ಮಾಡುತ್ತದೆ. ವ್ಯಕ್ತಿಗೆ ತನ್ನ ಶೈಕ್ಷಣಿಕ ಕಾರ್ಯಕ್ರಮವನ್ನು ಬುದ್ಧಿವಂತಿಕೆಯಿಂದ ಯೋಜಿಸಲು ಪ್ರೇರೇಪಿಸುತ್ತದೆ. ಆ ಕಾರ್ಯವನ್ನು ತನಗೆ ಮತ್ತು ಸಮಾಜಕ್ಕೆ ಸೂಕ್ತವಾಗುವಂತೆ ಯಶಸ್ವಿಯಾಗಿ ಕಾರ್ಯರೂಪಕ್ಕೆ ತರಲು ಸಹಾಯಕವಾಗುತ್ತದೆ ಎಂದು **RICHARD E.MAYER- (a distinguished professor of psychology at the University of California)** ಎಂಬ ಶಿಕ್ಷಣ ತಜ್ಞರು ಬಹಳ ಅಚ್ಚುಕಟ್ಟಾಗಿ ವ್ಯಾಖ್ಯಾನಿಸಿದ್ದಾರೆ.

2. **ವೃತ್ತಿ ಮಾರ್ಗದರ್ಶನ** : ವೃತ್ತಿಮಾರ್ಗದರ್ಶನ ಎಂದರೆ ವ್ಯಕ್ತಿಯು ಒಂದು ಕಾರ್ಯಕ್ಷೇತ್ರದಲ್ಲಿ ತನ್ನ ಪಾತ್ರವನ್ನು ಮತ್ತು ತನ್ನ ಬಗ್ಗೆ ಒಂದು ಸಮಗ್ರವಾದ ಮತ್ತು ಸಮರ್ಪಕವಾದ ವ್ಯಕ್ತಿ ಚಿತ್ರಣವನ್ನು ಒಪ್ಪಿಕೊಳ್ಳಲು

---

4. **Neeru Sood,** Guidance and counselling in Education, D.D.E.Tripura University, (2016) Vikas Publishing House pvt.Ltd.E-28, Sector-8, Noida-201301
5. **ವಾಮದೇವಪ್ಪ ಎಚ್.ವಿ,** ಶೈಕ್ಷಣಿಕ ಮನೋವಿಜ್ಞಾನ, ಅ – 9, ಪು – 348–355,(2005). ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

ಮತ್ತು ಅದರಲ್ಲಿ ಅಭಿವೃದ್ಧಿ ಕಾಣಲು ಮತ್ತು ಸಹಜವಾಗಿ ಈ ಕಲ್ಪನೆಯನ್ನು ಪರೀಕ್ಷಿಸಿ, ಅವನಿಗೆ ಸಂತೃಪ್ತಿ ಮತ್ತು ಸಮಾಜಕ್ಕೆ ಉಪಯುಕ್ತವಾಗಿ ಇರುವಂತೆ ಸಹಾಯ ನೀಡುವ ಪ್ರಕ್ರಿಯೆಯಾಗಿರುತ್ತದೆ ಎಂದು **DONALD EDWIN SUPER-(American Psychologist was a member of the National Career Development Association.)** ರವರು ಅಭಿಪ್ರಾಯಿಸಿದ್ದಾರೆ.

೩. **ವೈಯುಕ್ತಿಕ ಮಾರ್ಗದರ್ಶನ** : ವಿದ್ಯಾರ್ಥಿಗಳು ಶೈಕ್ಷಣಿಕ ಮತ್ತು ವೃತ್ತಿಸಮಸ್ಯೆಗಳಲ್ಲದೆ ಇನ್ನೂ ಹಲವಾರು ಇತರೆ ಸಮಸ್ಯೆಗಳನ್ನು ಎದುರಿಸುತ್ತಿರುತ್ತಾರೆ. ಅದು ತಮ್ಮ ಪೋಷಕರು ಹಾಗೂ ಕುಟುಂಬದ ಬಗ್ಗೆ, ಶಿಕ್ಷಕರ ಬಗ್ಗೆ, ತಮ್ಮಲ್ಲಿ ಅತೃಪ್ತಿ ಅಥವಾ ನಿರಾಸೆಯನ್ನುಂಟುಮಾಡುವಂತಹ ಅನುಭವಗಳ ನೆನಪು, ಅಭದ್ರತೆಯ ವಾತಾವರಣ, ಪೋಷಕರ ನಿರೀಕ್ಷೆಗಳಿಗೆ ಅನುಗುಣವಾಗಿ ಬಾಳಲು ಸಾಧ್ಯವಾಗದಿರುವುದು, ಒಡಹುಟ್ಟಿದವರ ಅಸೂಯೆ, ಹಿರಿಯರ ಒತ್ತಡ, ಪ್ರೀತಿ ವಿಶ್ವಾಸದ ಕೊರತೆ ಇಂಥಹ ಹಲವಾರು ಸಮಸ್ಯೆಗಳು ಮಕ್ಕಳ ಮಾನಸಿಕ ಸಮತೋಲನವನ್ನು ಹಾಳುಮಾಡಿ ಬಿಡುವುದು. ಇದರಿಂದ ಅವರ ಶೈಕ್ಷಣಿಕ ಸಾಮರ್ಥ್ಯವೂ ಕಡಿಮೆಯಾಗುವುದು. ಸ್ವೇಚ್ಛಾಪ್ರವೃತ್ತಿ ಬೆಳೆಯುವುದು. ಕೀಳರಿಮೆ, ಉದ್ಧಟತನ, ಸಹವಾಸ ದೋಷ ಇಂತಹ ಅನೇಕ ಸಮಸ್ಯೆಗಳು ಎದುರಾಗಬಹುದು. ಅಮರಶಕ್ತಿ ರಾಜನ ಪುತ್ರರಿಗೆ ಇದೇ ಸಮಸ್ಯೆ ಮತ್ತು ಇದೇ ಪರಿಸ್ಥಿತಿಯನ್ನು ನಾವು ಗಮನಿಸಬಹುದು.

गीर्भिर्गुरूणां परुषाक्षराभिः तिरस्कृता यान्ति नरा महत्वं ।

अलब्धशाणोत्कषणा नराणां न जातु मौलौ मणयो वसन्ति ॥[6]

ಬಹಳ ಶಿಷ್ಟಾಚಾರದಿಂದ ಕೂಡಿದ ಗುರುಗಳು ಸಿಗಬೇಕು. ಗುರುಗಳ ನಿಷ್ಠುರ ನುಡಿಗಳಿಂದ ಬಯ್ಯಲ್ಪಟ್ಟ ಜನರು ಮಹತ್ವವನ್ನೇ ಪಡೆಯುತ್ತಾರೆ. ಸಾಣೆಯಲ್ಲಿ ತೀಡಲ್ಪಡದ ರತ್ನಗಳು ಜನರ ಶಿರಸ್ಸಿನಲ್ಲಿ ಎಂದಿಗೂ ನೆಲೆಸಲಾರವು. ಇವುಗಳನ್ನು ಧೈರ್ಯ ಮತ್ತು ಆತ್ಮವಿಶ್ವಾಸದಿಂದ ಎದುರಿಸಬೇಕಾದರೆ, ಅದಕ್ಕೆ ಸೂಕ್ತ ಮಾರ್ಗದರ್ಶನ ನೀಡುವ ಸಮರ್ಥ ಗುರುಗಳು ಬೇಕು. ರಾಜಕುಮಾರರ ಅದೃಷ್ಟವೋ ಅಥವಾ ಅಮರಶಕ್ತಿ ರಾಜನ ಅದೃಷ್ಟವೋ, ಸಕಲಶಾಸ್ತ್ರ ಪಾರಂಗತರೂ, ವಿದ್ಯಾರ್ಥಿಗಳು ಮೆಚ್ಚಿದ ಪ್ರತಿಭಾನ್ವಿತ ಗುರುಗಳೂ ಆದ ವಿಷ್ಣುಶರ್ಮರು ದೊರಕಿಬಿಟ್ಟರು.

ವೈಯಕ್ತಿಕ ಮಾರ್ಗದರ್ಶನದ ಉದ್ದೇಶ ವ್ಯಕ್ತಿಯನ್ನು ಸಮಾಜದಲ್ಲಿ ಉತ್ತಮ ಹೊಂದಾಣಿಕೆಯಿಂದ

---

6. **ಸುಭಾಷಿತ ಮಂಜರೀ,** ಭಕ್ತಿ-ಶ್ಲೋ-21, ಪು-344,(ರಸ ಗಂಗಾಧರ).(2001) ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು-18

ಬಾಳಲು ಅಗತ್ಯವಾದ ಗುಣಗಳನ್ನು ಬೆಳೆಸಿಕೊಳ್ಳಲು ನೆರವು ನೀಡುವುದೇ ಆಗಿರುತ್ತದೆ. ವ್ಯಕ್ತಿಗೆ ತನ್ನ ವೈಯಕ್ತಿಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಸಹಾಯ ಮಾಡುವುದಕ್ಕೆ ವೈಯುಕ್ತಿಕ ಮಾರ್ಗದರ್ಶನ ಎಂದು ಹೇಳಬಹುದು. ಈ ಒಂದು ವೈಯಕ್ತಿಕ ಮಾರ್ಗದರ್ಶನವನ್ನು ಅತ್ಯಂತ ವ್ಯವಸ್ಥಿತವಾಗಿ ಪಂಚತಂತ್ರದ ಮೂಲಕ ವಿಷ್ಣುಶರ್ಮರು ರಾಜಕುಮಾರರಿಗೆ ಅಪೇಕ್ಷಿತವಾದ ರಾಜನೀತಿ ಶಿಕ್ಷಣವನ್ನೂ, ಬದುಕಿನ ನೀತಿ ಶಿಕ್ಷಣವನ್ನೂ ಹಾಗೂ ಸಾಮಾನ್ಯ ಜ್ಞಾನದಿಂದ ಕೂಡಿದ ವಿಶೇಷ ಜಾಗೃತಿಯನ್ನೂ ಮೂಡಿಸುವ ಪರಿಣಾಮಕಾರಿ ಮಾರ್ಗದರ್ಶನವನ್ನು ಕೇವಲ ಆರು ತಿಂಗಳುಗಳಲ್ಲೇ ನೀಡಿರುವುದು ಒಂದು ವಿಶಿಷ್ಟ ಸಾಧನೆಯಾಗಿದೆ. ರಾಜಕುಮಾರರಿಗೆ ಪಂಚತಂತ್ರ ಕಥಾಗುಚ್ಛಗಳಲ್ಲಿ ಒಂದು ವಿಚಾರಗೋಷ್ಟಿಯಂತೆ, ವಿಚಾರಗಳನ್ನು ಮನದಟ್ಟು ಮಾಡುತ್ತಾ, ಸಾಕಷ್ಟು ಚಿಂತನ–ಮಂಥನಗಳೊಂದಿಗೆ ಅವರ ಆಸಕ್ತಿಯನ್ನು ಪ್ರಚೋದಿಸಿ, ಶಿಕ್ಷಣದ ಜೊತೆಗೆ ರಾಜನೀತಿಕೌಶಲ್ಯವನ್ನು ಸ್ವಯಂ ಪ್ರೇರಿತರಾಗಿ ಬೆಳೆಸಿಕೊಳ್ಳಲು, ಉತ್ತಮ ಬದುಕಿನ ರೀತಿನೀತಿಗಳನ್ನು ಕಲಿತುಕೊಳ್ಳಲು ವಿಷ್ಣುಶರ್ಮರು ಉತ್ತಮ ಸನ್ನಿವೇಶಗಳನ್ನು ಒದಗಿಸಿ ಪ್ರೋತ್ಸಾಹಿಸಿ, ಒಳ್ಳೆಯ ಮಾರ್ಗದರ್ಶನ ನೀಡಿದ್ದಾರೆ. ಒಂದು ಸುಭಾಷಿತ ವಿದ್ಯೆ–ಶಿಕ್ಷಣದ ಮಹತ್ವವನ್ನು ಕುರಿತು ಹೀಗೆ ಸೂಚಿಸುತ್ತದೆ :–

सुन्दरोऽपि सुशीलोऽपि कुलीनोऽपि महाधनः ।

शोभते न विना विद्यां विद्या सर्वस्य भूषणम् ॥[7]

ಸುಂದರವಾದರೂ, ಒಳ್ಳೆಯ ನಡತೆಯವನಾದರೂ, ಸದ್ವಂಶದಲ್ಲಿ ಹುಟ್ಟಿದವನಾದರೂ ವಿದ್ಯೆ ಇಲ್ಲದೆ ಮನುಷ್ಯ ಶೋಭಿಸುವುದಿಲ್ಲ. ಎಲ್ಲಕ್ಕೂ ವಿದ್ಯೆಯೇ ಭೂಷಣ **"Thus, Guidance and Counselling have come to play a significant role in the field of education. The need of guidance and counselling are essential at educational and vocational levels for students so that they can choose the right courses and carriers. It can be stated in simple terms to assist and help individuals adjust to their personal, emotional, educational and occupational environment. The process of counselling and guidance helps an individual find solution to a problem and also helps in the overall development of an individual."**[8]

7. **ಸುಭಾಷಿತಮಂಜರೀ,** ಸಾಮಾನ್ಯ ನೀತಿ–ಶ್ಲೋ–596, ಪು–512, (2001) ಸುಭಾಷಿತಭಾಂಡಾಗಾರಂ. ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು–18

8. **Neeru Sood,** Guidance and counselling in Education,D.D.E.Tripura University, (2016)Vikas Publishing House pvt.Ltd.E-28, Sector-8, Noida-201301

## 8-2. ಸಲಹೆ-ಸಮಾಲೋಚನೆ-COUNSELLING

### ಅರ್ಥ - ವ್ಯಾಖ್ಯೆ - ಅದರ ವಿಧಗಳು ಮತ್ತು ಬಳಕೆ

ಕೆಲವೊಮ್ಮೆ ನಮ್ಮ ಅಂತರಾತ್ಮದಿಂದಲೋ, ಇತರ ವ್ಯಕ್ತಿ ಅಥವಾ ವಸ್ತುಗಳಿಂದಲೋ ಧ್ವನಿತವಾಗುವ ಭಾವಗಳು ನಮ್ಮ ಆಲೋಚನೆ ಮತ್ತು ವರ್ತನೆಗಳನ್ನು ರೂಪಿಸುತ್ತೇವೆ. ತಾರ್ಕಿಕವಲ್ಲದಿದ್ದರೂ, ಸಕಾರಣವಲ್ಲದಿದ್ದರೂ ಹಾದು ಬರುವ ಅಂಥ ಭಾವ ಪ್ರವಾಹವನ್ನು ನಾವು ಎರಡನೇ ಮಾತಿಲ್ಲದೆ ಒಪ್ಪಿಬಿಡುತ್ತೇವೆ. ನಮ್ಮದೇ ಎಂದು ಭಾವಿಸುತ್ತೇವೆ. ಇದನ್ನೇ ಸಲಹೆ ಅಥವಾ ಭಾವಸೂಚನೆ ಎನ್ನಬಹುದು. ಬಲವಂತದ ಒಪ್ಪಿಗೆ ಸಲಹೆಯಲ್ಲ. ಸಲಹೆ ಪಡೆಯುವವರಲ್ಲಿ ಶರಣುಭಾವವೂ ಕೊಡುವವರಲ್ಲಿ ಸಹಾನುಭೂತಿಯೂ ಇದ್ದರೆ, ಸಲಹೆ ಫಲಕಾರಿಯಾಗುತ್ತದೆ.[9] ಇನ್ನೂ ಸರಳವಾಗಿ ಸಲಹೆಯನ್ನು ಅರ್ಥೈಸಿದಾಗ "ಸಲಹೆ ಎನ್ನುವುದು ಎರಡು ವ್ಯಕ್ತಿಗಳ ನಡುವೆ ಅಂದರೆ ಒಬ್ಬ ಸಮಸ್ಯೆ ಹೊಂದಿರುವ ವ್ಯಕ್ತಿ ಮತ್ತು ಇನ್ನೊಬ್ಬ ತರಬೇತಿ ಹಾಗೂ ಅನುಭವ ಹೊಂದಿರುವ ವೃತ್ತಿಪರ ವ್ಯಕ್ತಿ. ಈ ಇಬ್ಬರ ನಡುವೆ ಏರ್ಪಡುವ ಸಂಬಂಧವೇ ಪ್ರತಿಕ್ರಿಯೆಯಾಗಿರುತ್ತದೆ. ಅಂದರೆ, ಇಲ್ಲಿ ಸಲಹೆ ನೀಡುವ ಪರಿಣಿತ ವ್ಯಕ್ತಿ, ವಿದ್ಯಾರ್ಥಿಯು ತನ್ನ ಸಮಸ್ಯೆಗಳಿಗೆ ತಾನೇ ಪರಿಹಾರಗಳನ್ನು ಕಂಡುಕೊಳ್ಳುವಂತೆ ಉತ್ತಮ ಸಲಹೆಯ ಮೂಲಕ ಪ್ರೇರೇಪಿಸುತ್ತಾನೆ ಹಾಗೂ ಜಾಗೃತಿಯನ್ನು ಮೂಡಿಸುತ್ತಾನೆ. ಸಲಹೆ ನೀಡುವ ವ್ಯಕ್ತಿ ಹಾಗೂ ಸಲಹೆ ಪಡೆಯುವ ವ್ಯಕ್ತಿಗಳಲ್ಲಿ ಪರಸ್ಪರ ಗೌರವ, ನಂಬಿಕೆ ವಿಶ್ವಾಸ, ಸ್ನೇಹ ಮತ್ತು ಸಹಕಾರ ಮನೋಭಾವನೆ ಇರಬೇಕಾಗುತ್ತದೆ. ಇದೆಲ್ಲ ಲಕ್ಷಣಗಳನ್ನೂ ವಿಷ್ಣುಶರ್ಮರು-ಗುರುಗಳು ಮತ್ತು ರಾಜಪುತ್ರರು-ಶಿಷ್ಯರು ಇವರಲ್ಲಿ ಕಾಣಬಹುದು.

ವಿವಿಧ ಶಿಕ್ಷಣ ತಜ್ಞರು ಮತ್ತು ಮನೋವಿಜ್ಞಾನಿಗಳು "ಸಲಹೆ"ಗೆ ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಾನ ನೀಡಿರುತ್ತಾರೆ. ಕೆಲವು ಮುಖ್ಯವಾದವುಗಳೆಂದರೆ:-[10]

**1. According to GILBERT C. WREN (1962) "Counselling is a dynamic and purposeful relationship between two people who approach a mutually defined problem with mutual consideration for each other to the end that the younger or less mature, or more troubled of the two is aided to a self determined resolution of his problem.**

---

9. **ವೀರಪ್ಪ ಎನ್. ಎಸ್.,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-7-ಪು-112, (1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4

10. **Neeru Sood,** Guidance and counselling in Education, D.D.E.Tripura University, (2016) Vikas Publishing House pvt.Ltd.E-28, Sector-8,Noida-201301

**2. According to ARBUCKLE,"Counselling is helping a person to come to see who he really is, what he had and does not have, what he can do easily,what he can do with difficulty and what he can not do at all. It is a close sharing of a human relationship with one who has for him a high regard; one who can offer him unconditional acceptance, but one who has no guarantees, no answers."**

**3. According to authors(Fundamentals of Counselling) SHERTZER and STONE -"Counselling is a process which facilitates meaningful understanding of self and environment and result in the establishment and or clarification of goals and values for future behaviour."**

**4. EDWIN C. LEWIS, the author of" The Psychology of Counselling, defines "Counselling is a process by which a troubled person (client) is helped to tell and behave in a more personally satisfying manner through interaction with an uninvolved person (Counsellor) who provides information and reaction which stimulate the client to develop behavior which enable him to deal more effectively with himself and his environment."**[11]

ಹೀಗೆ ಮೇಲೆ ತಿಳಿಸಿರುವ ಎಲ್ಲಾ ವ್ಯಾಖ್ಯಾನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ "ಸಲಹೆ" ಎಂಬುದು-ವಿಚಾರವನ್ನು ತಿಳಿಸುವ, ಬುದ್ಧಿಹೇಳುವ, ಸಮಾಲೋಚಿಸುವ ಒಂದು ಪ್ರಕ್ರಿಯೆಯಾಗಿರುತ್ತದೆ. ಸಲಹೆ ಅಥವಾ ಸಮಾಲೋಚನೆಯು ಒಬ್ಬ ವ್ಯಕ್ತಿಯ ತಾನೇ ಅರ್ಥಮಾಡಿಕೊಂಡು, ತಾನೇ ಒಪ್ಪಿಕೊಂಡು ಒಂದು ಒಳ್ಳೆಯ ವರ್ತನೆಯನ್ನು ಹೊಂದಿ ಉತ್ತಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವಂತೆ ಪ್ರೇರೇಪಿಸುತ್ತದೆ.

**R.L.MILLER (Prof.& Chair-Texas. A & M University, KingsVille) and J.C.DUNSMORE - Prof. of Psychological Health & Learning Sciences University, Houston.** ಇವರ ಪ್ರಕಾರ ವಿದ್ಯಾರ್ಥಿ ಸಲಹೆಯ ಪ್ರಮುಖ ಅಂಶವೆಂದರೆ, ವಿದ್ಯಾರ್ಥಿ

---

11. **Guidence and counselling Slide share - https://www.slideshare.net.**

ತನಗೆ ತಾನೇ ಸಹಾಯ ಮಾಡಿಕೊಳ್ಳುವಂತೆ ಅವನಿಗೆ ಸಹಾಯ ಮಾಡುವುದಾಗಿದೆ.

**The characteristics of Counselling can be summarized as follows:[12]**

**1. Counselling is a mutual relationship between two people.**

**2. It involves discussion.**

**3. Counselling is a face to face relationship.**

**4. It has a professional aspect to it.**

**Important Areas of Counselling:**

**1. EDUCATION "Students during their school and college years may face several problems related to education, learning and teaching. Such problems are addressed by Educational Counsellors. who are experts and experienced in this specific area"**

**2. PERSONAL:-Many people face several problems in their life which bring about changes in their attitude and are often considered a hindrance in leading a normal life. Personal counselling looks into the personal problems of an individual and enables an individual to overcome this problem.**

**3. SOCIAL: Social problems may be faced by individuals wherein they are unable to maintain social relationships and fail to adjust to the society and its ways and norms. Social counselling is provided to such people so that they can develop the skills of social acceptance, tolerance towards others and are able to lead a life in tandem with the society.**

**4. VOCATIONAL: Most people face problems in deciding about the right career option and are unable to adjust to their work area, the people around**

---

12. Principales of Guidance and counselling academia - edu. - https://www.academia.edu

**and also the work environment. Such people are unable to work productively. Vocational counselling is made available to such people so that they can make the right career choices and are able to adjust to their work environment so that they are able to work productively.**

ಸಲಹೆ ಅಥವಾ ಸಮಾಲೋಚನೆಯು ಕೆಲವು ವಿಧಗಳನ್ನು ಹೊಂದಿದೆ-[13]

1. **ನಿರ್ದೇಶಿತ ಸಲಹೆ (Directive Counselling)**

ಈ ವಿಧಾನದ ಪ್ರತಿಪಾದಕರು **E.G.WILLIAMSON-(served as a president of NASPA and APGA-a teacher, counsellor, scholarly researcher and an administrator.)**

ನಿರ್ದೇಶಿತ ಸಲಹೆಯಲ್ಲಿ-ಸಲಹೆಗಾರನೇ ಕೇಂದ್ರ ಬಿಂದುವಾಗಿರುತ್ತಾನೆ. ಇವನು ಸಲಹೆ ಪಡೆಯುವ ವ್ಯಕ್ತಿಗೆ ಅಥವಾ ವಿದ್ಯಾರ್ಥಿಗೆ ತನ್ನ ಸಮಸ್ಯೆಗಳಿಗೆ ಪರಿಹಾರ ಕಾಣಲು ಏನೆಲ್ಲ ಅವಶ್ಯಕ ಕ್ರಮಗಳನ್ನು ಕೈಗೊಳ್ಳಬೇಕೆಂಬುದನ್ನು ಕುರಿತು ನಿರ್ದೇಶನ ಮತ್ತು ಸಲಹೆ ನೀಡುತ್ತಾನೆ. ಸಲಹೆಗಾರನು ವೃತ್ತಿಪರನಾಗಿದ್ದು ಅನುಭವ ಹಾಗೂ ಒಳ್ಳೆಯ ವಿಷಯಜ್ಞಾನ ಹೊಂದಿದವನಾಗಿರಬೇಕು. ಆಗ ಮಾತ್ರ ಇವನು ಸಲಹೆ ಪಡೆಯುವವನ ಸಮಸ್ಯೆಯನ್ನು ಗುರುತಿಸಿ, ಅರ್ಥೈಸಿ, ವಿವರಿಸಿ, ಆಲೋಚನೆಯನ್ನು ಸರಿಯಾಗಿ ನಿರ್ದೇಶಿಸಿ ಮನವೊಲಿಸಿ ಸೂಕ್ತ ಪರಿಹಾರವನ್ನು ಒದಗಿಸಬಲ್ಲನು.

2. **ಅನಿರ್ದೇಶಿತ ಸಲಹೆ (Non-directive Counselling)**

ಇದರ ಪ್ರತಿಪಾದಕರು **CARL ROGERS,an American Psychologist.** ಈ ಮಾದರಿಯ ಸಲಹೆಯಲ್ಲಿ ಸಲಹೆ ಪಡೆಯುವವನೇ ಕೇಂದ್ರ ಬಿಂದುವಾಗಿರುತ್ತಾನೆ. ಇವನು ಸಲಹಾ ಪ್ರಕ್ರಿಯೆಯಲ್ಲಿ ಕ್ರಿಯಾತ್ಮಕವಾಗಿ ಪಾಲ್ಗೊಳ್ಳುತ್ತಾನೆ. ಸಲಹೆಗಾರನ ಸಹಾಯದೊಂದಿಗೆ ತನ್ನ ಸಮಸ್ಯೆಯ ಒಳನೋಟವನ್ನು ಪಡೆಯುತ್ತಾನೆ. ಯಾವ ಕ್ರಮ ಕೈಗೊಳ್ಳಬೇಕೆಂದು ತಾನೇ ಸೂಕ್ತ ನಿರ್ಧಾರ ತೆಗೆದುಕೊಳ್ಳುವನು. ಈ ಸಲಹೆಯಲ್ಲಿ ಸ್ವಸಹಾಯ, ಸ್ವಯಂ ಅರಿವು ಮತ್ತು ಸ್ವಯಂ ಕ್ರಿಯೆಯನ್ನು ಪ್ರೇರೇಪಿಸಿ ಪ್ರೋತ್ಸಾಹಿಸಲಾಗುತ್ತದೆ.

---

13. **ವಾಮದೇವಪ್ಪ ಎಚ್.ವಿ,** ಶೈಕ್ಷಣಿಕ ಮನೋವಿಜ್ಞಾನ, ಅ - 9, ಪು - 361-364, 2005. ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ-577005

**೩. ಸಮ್ಮಿಶ್ರ ಸಲಹೆ (Electic Counselling)**

ಈ ಮಾದರಿಯ ಪ್ರತಿಪಾದಕರು **F. C. THORNE - Author, Editor, Honoree)** ಇದರಲ್ಲಿ ಮೇಲಿನ ಎರಡೂ ಮಾದರಿಗಳಲ್ಲಿನ ಉತ್ತಮ ಅಂಶಗಳನ್ನು ಆರಿಸಿಕೊಂಡು ಸಲಹೆಯನ್ನು ಪರಿಣಾಮಕಾರಿಯಾಗಿಸುವುದೇ ಸಮ್ಮಿಶ್ರ ಸಲಹೆಯ ಮುಖ್ಯ ಉದ್ದೇಶ. ಈ ವಿಧಾನದಲ್ಲಿ ಸಲಹೆಗಾರ ಮೊದಲು ಸಲಹೆ ಪಡೆಯುವವನೊಂದಿಗೆ ಉತ್ತಮ ಬಾಂಧವ್ಯ ಬೆಳೆಸಿಕೊಂಡು, ನಂತರ ಅವನಿಂದ ಸಮಸ್ಯೆ ಬಗ್ಗೆ ಪೂರ್ಣ ಮಾಹಿತಿ ಪಡೆದುಕೊಂಡು, ಅದನ್ನು ಚೆನ್ನಾಗಿ ವಿಶ್ಲೇಷಿಸಿ ಸಮಸ್ಯೆಗೆ ಕಾರಣಗಳನ್ನು ಗುರುತು ಮಾಡಿಕೊಳ್ಳುತ್ತಾನೆ. ಸಲಹೆ ಪಡೆಯುವವನಿಗೆ ಅವಶ್ಯಕವಾದ ಶೈಕ್ಷಣಿಕ, ಔದ್ಯೋಗಿಕ ಮಾಹಿತಿಯನ್ನು ಒದಗಿಸಲಾಗುವುದು. ಇದರ ಆಧಾರದ ಮೇಲೆ ಸನ್ನಿವೇಶವನ್ನು ಗ್ರಹಿಸಿ ತನ್ನ ಮನೋಧೋರಣೆಗಳನ್ನು ಸರಿಪಡಿಸಿಕೊಳ್ಳುತ್ತಾನೆ. ನಂತರ ಸೂಕ್ತ ತಂತ್ರವನ್ನು ಬಳಸಿಕೊಂಡು ಸೂಕ್ತ ನಿರ್ಧಾರ ಕೈಗೊಂಡು ಸಮಸ್ಯೆಯನ್ನು ಪರಿಹರಿಸಿಕೊಳ್ಳುತ್ತಾನೆ.

ಪ್ರಸ್ತುತ ಪ್ರಬಂಧದಲ್ಲಿ "ಮಾರ್ಗದರ್ಶನ ಹಾಗೂ ಸಮಾಲೋಚನೆ ಅಥವಾ ಸಲಹೆ" ಪರಿಕಲ್ಪನೆಯಲ್ಲಿ "ಶೈಕ್ಷಣಿಕ ಮಾರ್ಗದರ್ಶನ ಹಾಗೂ ಸಲಹೆ" **(GUIDANCE and COUNSELLING IN EDUCATION)** ಭಾಗವನ್ನು ಮಾತ್ರ ಪರಿಗಣಿಸಲಾಗಿದೆ. **"Students during their school and college years may face several problems related to education, learning and teaching.Such problems are addressed by Educational Counsellors.who are experts and experienced in this specific area"**[14] ವಿದ್ಯಾರ್ಥಿಯ ಸರ್ವತೋಮುಖ ಬೆಳವಣಿಗೆ ಮತ್ತು ವಿಕಾಸ ಕಾರ್ಯಕ್ಕೆ, ವರ್ತನೆಯ ಪರಿವರ್ತನೆಗೆ ಪಂಚತಂತ್ರದಲ್ಲಿ ಕಂಡುಬರುವ ವಿಷ್ಣುಶರ್ಮರು ಒಬ್ಬ ಮೇಧಾವಿ ಶಿಕ್ಷಕರಾಗಿ, ಸ್ನೇಹಿತರಾಗಿ, ಮಾರ್ಗದರ್ಶಕರಾಗಿ, ತತ್ವಜ್ಞಾನಿಯಾಗಿ ಏನೆಲ್ಲ ಸಲಹೆ ಹಾಗೂ ಸಹಕಾರವನ್ನು ಒದಗಿಸಿ, ಅರಸುಪುತ್ರರಲ್ಲಿ ಒಂದು ಒಳ್ಳೆಯ ವ್ಯಕ್ತಿತ್ವ ನಿರ್ಮಾಣ ಕಾರ್ಯವನ್ನು ಕೈಗೊಂಡಿದ್ದಾರೋ ಆ ಬಗ್ಗೆ ವಿಶ್ಲೇಷಿಸಲಾಗಿದೆ.

ಪಂಚತಂತ್ರದ ಕಥಾಮುಖದಲ್ಲಿ ಸೂಚಿಸಿರುವಂತೆ ಮಹಿಲಾರೋಪ್ಯದ ಅಮರಶಕ್ತಿರಾಜನ ಮೂವರು ಪುತ್ರರು ಶಾಸ್ತ್ರಜ್ಞಾನವನ್ನು ಅರಿಯದ ಅವಿವೇಕಿಗಳಾಗಿದ್ದರು. ಸ್ವೇಚ್ಛೆಯಾಗಿ ಕಾಲಹರಣ ಮಾಡಿಕೊಂಡಿದ್ದರು.

---

14. Guidance and counselling britannica. https://syntal.com>formidable (PDF)

ಗೊತ್ತುಗುರಿ ಇಲ್ಲದೆ, ಸರಿಯಾದ ನಿರ್ಧಾರ ಕೈಗೊಳ್ಳಲಾಗದೆ ನಿಶ್ಪ್ರಯೋಜಕರಾಗಿದ್ದರು. ಜೊತೆಗೆ ಮಂದಮತಿಗಳಾಗಿದ್ದರು. ಸಕಲಶಾಸ್ತ್ರಪಾರಂಗತರಾದ ವಿಷ್ಣುಶರ್ಮರು ಇಂಥಹವರನ್ನು ಪರಿವರ್ತಿಸಲು ಧೃಡಸಂಕಲ್ಪ ಮಾಡಿ, ಅವರ ಸಮಸ್ಯೆ ಏನೆಂಬುದನ್ನು ಸೂಕ್ಷ್ಮವಾಗಿ ಅರ್ಥೈಸಿಕೊಂಡು, ತಂದೆಯಾಗಿ ರಾಜನು ಅನುಭವಿಸುತ್ತಿದ್ದ ಕೊರಗನ್ನೂ ಸಹಾನುಭೂತಿಯಿಂದ ಪರಿಶೀಲಿಸಿ, ರಾಜನಂದನರನ್ನು ಸರಿದಾರಿಗೆ ತಂದು, ಸುಶಿಕ್ಷಿತರಾಗಿ, ರಾಜನೀತಿಬಲ್ಲವರಾಗಿ, ತಮ್ಮ ಜವಾಬ್ದಾರಿ ಹಾಗೂ ಬದುಕಿನ ನೀತಿಯನ್ನು ಕಂಡುಕೊಂಡವರಾಗಿ ಒಳ್ಳೆಯ ವ್ಯಕ್ತಿತ್ವ ನಿರ್ಮಾಣ ಮಾಡಿಕೊಳ್ಳುವಂತೆ ಶಿಕ್ಷಣ, ಮಾರ್ಗದರ್ಶನ ಹಾಗೂ ಸಲಹೆಗಳನ್ನು ನೀಡುವುದರೊಂದಿಗೆ ಅವರ ಸಮಸ್ಯೆಯನ್ನು ಅವರೇ ಅರ್ಥಮಾಡಿಕೊಳ್ಳಲು ಬಹಳ ಚಮತ್ಕಾರದಿಂದ ಅನುವುಮಾಡಿಕೊಟ್ಟಿದ್ದಾರೆ. ಇಲ್ಲಿ ಇವರೇ ಶಿಕ್ಷಕರಾಗಿ, ಸಲಹೆಗಾರು ಹಾಗೂ ಮಾರ್ಗದರ್ಶಕರಾಗಿ ಈ ಅರಸು ಪುತ್ರರ ಸಮಸ್ಯೆಗಳನ್ನು ಗುರುತಿಸಿ, ಅವರಿಗೆ ಕಲಿಕೆಯಲ್ಲಿ ಆಸಕ್ತಿಯನ್ನು ವಿಶ್ವಾಸದಿಂದ ಪ್ರೇರೇಪಿಸಿ, ತಮ್ಮ ಜವಾಬ್ದಾರಿಯನ್ನು ತಾವೇ ಅರ್ಥಮಾಡಿಕೊಂಡು ಸೂಕ್ತ ಪರಿಹಾರಕ್ಕಾಗಿ ತಾವೇ ಅರಿತು, ಸೂಕ್ತ ನಿರ್ಧಾರವನ್ನು ಕೈಗೊಳ್ಳುವಂತೆ ಪ್ರೇರೇಪಿಸಿ ಪ್ರೋತ್ಸಾಹಿಸಿದ್ದಾರೆ.

ಸಲಹೆ ಸಮಸ್ಯೆಯನ್ನು ಪರಿಹರಿಸುವುದಿಲ್ಲ. ಆದರೆ ಸಮಸ್ಯಾ ಪರಿಹಾರದಲ್ಲಿ ಸಹಾಯ ಮಾಡುತ್ತದೆ. ಸಲಹೆಯನ್ನು ನೀಡುವುದರಲ್ಲಿ ಮುಖ್ಯ ಉದ್ದೇಶಗಳನ್ನು ಸಂಕ್ಷಿಪ್ತವಾಗಿ ಹೇಳುವುದಾದರೆ:–[15]

1. ವಿದ್ಯಾರ್ಥಿಗೆ ತನ್ನ ಸಮಸ್ಯೆಗಳನ್ನು ಅರ್ಥೈಸಿಕೊಳ್ಳಲು ಮಹತ್ವದ ಅಂಶಗಳನ್ನು ಕುರಿತು ಉತ್ತಮ ಮಾಹಿತಿಯನ್ನು ಒದಗಿಸುವುದು.
2. ವಿದ್ಯಾರ್ಥಿ ಮತ್ತು ಶಿಷ್ಯರ ಮಧ್ಯೆ ಪರಸ್ಪರ ಅರ್ಥಮಾಡಿಕೊಳ್ಳುವ ಭಾವನೆಯನ್ನು ಸ್ಥಾಪಿಸುವುದು.
3. ವಿದ್ಯಾರ್ಥಿಯು ತನ್ನ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಸೂಕ್ತ ಯೋಜನೆ ರೂಪಿಸಿಕೊಳ್ಳಲು ನೆರವಾಗುವುದು.
4. ವಿದ್ಯಾರ್ಥಿಯು ತನ್ನ ಸಾಮರ್ಥ್ಯಗಳು, ಅಭಿರುಚಿಗಳು, ಆಸಕ್ತಿಗಳು ಮತ್ತು ಅವಕಾಶಗಳನ್ನು ಅರ್ಥಮಾಡಿಕೊಳ್ಳಲು ನೆರವಾಗುವುದು.
5. ವಿದ್ಯಾರ್ಥಿಯಲ್ಲಿ ವಿಶೇಷ ಸಾಮರ್ಥ್ಯಗಳು ಹಾಗೂ ಸಕಾರಾತ್ಮಕ ಮನೋಧೋರಣೆಗಳನ್ನು ಬೆಳೆಸಿ ಪ್ರೋತ್ಸಾಹಿಸುವುದು.
6. ಶೈಕ್ಷಣಿಕ ಮತ್ತು ವೃತ್ತಿ ಆಯ್ಕೆಗಳಿಗೆ ಸೂಕ್ತ ಯೋಜನೆಯನ್ನು ರೂಪಿಸಿಕೊಳ್ಳಲು ಸಹಕರಿಸುವುದು..

15. **ವಾಮದೇವಪ್ಪ ಎಚ್.ವಿ,** ಶೈಕ್ಷಣಿಕ ಮನೋವಿಜ್ಞಾನ, ಅ – 9, ಪು – 348–355,(2005). ಶ್ರೇಯಸ್ ಪಬ್ಲಿಕೇಷನ್ಸ್, ತರಳಬಾಳು ಬಡಾವಣೆ, ದಾವಣಗೆರೆ–577005

## ೮-೩. ಸಾಮಾನ್ಯ ಜ್ಞಾನದ ಕೊರತೆ-ಪರಿಣಾಮ-ಪರೀಕ್ಷಿಸದೆ ಕೆಲಸ ಮಾಡುವುದರ - ಪರಿಣಾಮ - पञ्चतन्त्रस्य-पञ्चमं-तन्त्रम्-"अपरीक्षितकारकम्"

### ಕಥೆಗಳ ವಿಶ್ಲೇಷಣೆ

ಹಿಂದಿನ ಅಧ್ಯಾಯದಲ್ಲಿ ನಾಲ್ಕನೆಯ ತಂತ್ರ ಲಬ್ಧಪ್ರಣಾಶದ ಅಂತ್ಯದಲ್ಲಿ ರಾಜಕುಮಾರರನ್ನು ಕುರಿತು ವಿಷ್ಣುಶರ್ಮರು ಹೀಗೆ ಕೇಳುತ್ತಾರೆ- "ರಾಜಕುಮಾರರೇ, ಕೇಳಿದಿರಾ? ಪೂರ್ವಾರ್ಜಿತವಾಗಿ ಬಂದ ಸಂಪತ್ತು ಎಷ್ಟಿದ್ದರೇನು? ಅದು ಮುದಿದನವು ವಿಧಿಯಿಂದ ದೊರೆತ ಹುಲ್ಲನ್ನು ಮೆಂದು ಸುಖಪಟ್ಟಂತೆ, ಆಮೇಲೆ? ತಿಳಿದಿಲ್ಲ. ಅದರ ಬದಲಿಗೆ ಪೌರುಷದಿಂದ ಪಡೆದ ಧನವಿದ್ದರೆ, ಅದರಿಂದ ಸುಖಿಸುವುದು ಎಷ್ಟು ಹಿತಕರ! ಅದನ್ನು ಅನುಭವಿಸಿಯೇ ತಿಳಿಯಬೇಕು. ರಾಜಕುಮಾರರೇ ಇದು ಮುಂದೆ ನಿಮ್ಮ ಅನುಭವಕ್ಕೇ ಬರುತ್ತದೆ. ಎಂದು ತಿಳಿಸುತ್ತಾರೆ.[16] ಇಲ್ಲಿ ವಿಷ್ಣುಶರ್ಮರು ರಾಜಕುಮಾರರ ವ್ಯಕ್ತಿತ್ವ ನಿರ್ಮಾಣ ಕಾರ್ಯದಲ್ಲಿ, ಒಬ್ಬ ಸಹೃದಯಿ ಮಿತ್ರ, ಮಾರ್ಗದರ್ಶಕ ಹಾಗೂ ತ್ತತ್ವಜ್ಞಾನಿಯಾಗಿ ಕಂಡುಬರುತ್ತಾರೆ. ಇಂದಿಗೂ ಬೋಧನೆಯಲ್ಲಿ ಆಸಕ್ತಿಯುಳ್ಳ ಬೋಧಕರುಗಳಿಗೆ ಹಾಗೂ ವ್ಯಕ್ತಿ ವಿಕಸನ ತರಬೇತಿ ನೀಡಬಯಸುವ ಮಾರ್ಗದರ್ಶಕರುಗಳಿಗೆ ಮಾದರಿಯಾಗಿದ್ದಾರೆ. ಪಂಚತಂತ್ರವು ಒಂದು ಅಮೂಲ್ಯ ನೀತಿಶಿಕ್ಷಣ ಸಂಹಿತೆ ಹಾಗೂ ವ್ಯಕ್ತಿತ್ವ ವಿಕಸನ ಕೈಪಿಡಿ ಆಗಿರುತ್ತದೆ. ಹೀಗೆಯೇ ಮುಂದೆ ಸಾಗುತ್ತಾ, ವಿಷ್ಣುಶರ್ಮರು ಪಂಚತಂತ್ರದ ಐದನೆಯ ಹಾಗೂ ಕೊನೆಯ ತಂತ್ರವಾದ **"ಅಪರೀಕ್ಷಿತಕಾರಕ"-** ಅಂದರೆ ಪರೀಕ್ಷಿಸದೆ ಕೆಲಸ ಮಾಡುವುದು ಎಂಬುದರ ಬಗ್ಗೆ ಅನೇಕ ವಿಚಾರಗಳನ್ನೂ, ಅದಕ್ಕೆ ಸಮಂಜಸವಾದ ದೃಷ್ಟಾಂತಗಳನ್ನೂ ಒದಗಿಸಿಕೊಡುತ್ತಾ, ರಾಜಕುಮಾರರಲ್ಲಿ ಒಂದು ರೀತಿಯ ಪ್ರೌಢ ಚಿಂತನೆಗಳನ್ನು ಬೆಳೆಸುತ್ತಾ ಬರುತ್ತಾರೆ. ಅಪರೀಕ್ಷಿತಕಾರಕದ ಮೊದಲ ನುಡಿಯೇ ಅತ್ಯಂತ ಸ್ಪಷ್ಟವಾಗಿ, ಸಂಕ್ಷಿಪ್ತವಾಗಿ ಈ ತಂತ್ರದ ಅರ್ಥ, ಉದ್ದೇಶ ಹಾಗೂ ಮಾರ್ಗದರ್ಶನವನ್ನು ತಿಳಿಸುತ್ತದೆ.:-

कुदृष्टं कुपरिज्ञातं कुश्रुतं कुपरीक्षितम् ।

तन्नरेण न कर्त्तव्यं नापितेनात्र यत्कृतम् ॥[17]

"ಸರಿಯಾಗಿ ನೋಡದ, ಸರಿಯಾಗಿ ತಿಳಿಯದ, ಸರಿಯಾಗಿ ಕೇಳದ ಮತ್ತು ಸರಿಯಾಗಿ ಪರಿಶೀಲಿಸದ ಕಾರ್ಯವನ್ನು ಕ್ಷೌರಿಕನು ಹೇಗೆ ಮಾಡಿದನೋ ಹಾಗೆ ಮನುಷ್ಯನು ಮಾಡಬಾರದು." ಎಂಬ ವಿಶೇಷ ಜಾಗೃತಿಯನ್ನು ರಾಜಕುಮಾರರಿಗೆ ಮನದಟ್ಟು ಮಾಡಿದ್ದಾರೆ.

---

16. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ-ಲಬ್ಧಪ್ರಣಾಶ, ಪು-203 (2015)ವರ್ಣಿಲ, 39/2-11, ಕಲ್ಯಾಣಿ ಗಾರ್ಡನ್, ಬನಶಂಕರಿ 1ನೇ ಹಂತ, ಬೆಂಗಳೂರು-560050
17. **ಸುಧಾಕರ್ ಮಾಲವೀಯ,** ಸಂಪಾ-ಅನು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ,ಅಪರೀಕ್ಷಿತಕಾರಕ-ಶ್ಲೋ-1, ಪು-703,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ವಿಶಾಲ ವೃಕ್ಷದ ಕೆಳಗೆ ಸಮತಟ್ಟಾದ ಸ್ಥಳದಲ್ಲಿ ಮರದ ಪಕ್ಕದಲ್ಲಿನ ಕಲ್ಲಿನ ಸಣ್ಣ ದಿಬ್ಬದ ಮೇಲೆ ವಿಷ್ಣುಶರ್ಮರು ಕುಳಿತಿದ್ದರು. ರಾಜಕುಮಾರರು ತಮ್ಮತಮ್ಮಲ್ಲೇ ಚರ್ಚೆ ನಡೆಸಿಕೊಂಡು ಬರುತ್ತಿದ್ದರು. ಆದ್ದರಿಂದ ಅವರ ಆಗಮನ ಸ್ವಲ್ಪ ವಿಳಂಬವಾಗಿತ್ತು. ಗುರುಗಳನ್ನು ದೂರದಿಂದಲೇ ಗಮನಿಸಿದ ರಾಜಕುಮಾರರು ಬೇಗ ಬೇಗ ಹೆಜ್ಜೆ ಹಾಕಿದರು. ನಂತರ ಹೇಳುತ್ತಾರೆ "ಗುರುಗಳೇ ಈ ದಿನ ನಮ್ಮ ನಮ್ಮಲ್ಲೇ ಚರ್ಚೆನಡೆದಿತ್ತು. ಸಿಂಹವು ಸಂಜೀವಕನನ್ನು ಕೊಂದದ್ದು ಸರಿಯೇ? – ತಪ್ಪೇ? ದಮನಕನಂತಹ ಮಂತ್ರಿಯನ್ನು ನಂಬಬೇಕೇ? ಬೇಡವೇ? ಎಂದು ನಾವುಗಳು ಒಮ್ಮತದ ತೀರ್ಮಾನಕ್ಕೆ ಬರಲಾಗಲಿಲ್ಲ" ಎಂದರು. ಅದಕ್ಕೆ ಗುರುಗಳು ಹೇಳುತ್ತಾರೆ– "ಈ ವಿಷಯದಲ್ಲಿ ಹೀಗೆ ಸರಿಯಾಗಿ ಆಲೋಚಿಸುವುದರಿಂದಲೇ, ನಾವು ದೊಡ್ಡವರಾದಂತೆ, ಯಾವುದು ಸತ್ಯ–ಸೂಕ್ತ ಎಂಬುದು ತಿಳಿಯುತ್ತದೆ. ಅದು ಹಾಗಿರಲಿ, ಇವತ್ತಿನಿಂದ ಬೇರೆ ರೀತಿಯ ಕಥೆಯನ್ನು ನಿಮಗೆ ಹೇಳಬೇಕೆಂದಿದ್ದೇನೆ" ಎಂದರು.

दानाय लक्ष्मीः सुकृताय विद्या चिन्ता परब्रह्मविनिश्चयाय ।

परोपकाराय वचांसि यस्य वन्द्यस्त्रिलोकीतिलकः स एव ॥[18]

ಯಾರ ಹಣವು ದಾನಮಾಡುವುದಕ್ಕಾಗಿ, ವಿದ್ಯೆಯು ಒಳ್ಳೆ ಒಳ್ಳೆಯ ಕೆಲಸಗಳನ್ನು ಮಾಡುವುದಕ್ಕಾಗಿ, ಚಿಂತನೆಯ ಪರಬ್ರಹ್ಮವನ್ನು ತಿಳಿಯುವುದಕ್ಕಾಗಿ, ಮಾತು ಪರರ ಉಪಕಾರಕ್ಕಾಗಿ ಇರುತ್ತವೆಯೋ ಅವನೊಬ್ಬನೇ ಮೂರು ಲೋಕಗಳಿಗೂ ಶ್ರೇಷ್ಠ. ಎಂದು ಒಂದು ಸುಭಾಷಿತ ಹೇಳುತ್ತದೆ. ಇಂಥಹವನು ಒಬ್ಬ ನಾಯಕನಿದ್ದಂತೆ.

ಮುಂದುವರೆಸುತ್ತಾ, "ಪ್ರತಿಯೊಬ್ಬರಿಗೂ ತಾನು ನಾಯಕನಾಗಬೇಕು, ಇತರರನ್ನು ಆಳಬೇಕು ಎಂಬ ಮಹತ್ವಾಕಾಂಕ್ಷೆಯಿರುತ್ತದೆ. ಇನ್ನು ತಂದೆಯ ಪದವಿ ತನಗೇ ಅಲ್ಲದೆ ಬೇರೊಬ್ಬರಿಗೆ ಹೋಗಬಾರದೆಂಬ ಸ್ವಾರ್ಥ ಮೋಹವೂ ಇರುತ್ತದೆ. ಇದು ಸಹಜವೇ. ಆದರೆ ಆ ಸ್ಥಾನವನ್ನಲಂಕರಿಸಲು ಬೇಕಾದ ಯೋಗ್ಯತೆಯಿರಬೇಕಲ್ಲಾ! ಒಂದು ವೇಳೆ ಅಂಥಹ ಯೋಗ್ಯತೆ ಇಲ್ಲದಿದ್ದರೆ, ಅದನ್ನು ಸಂಪಾದಿಸಿಕೊಳ್ಳಬೇಕು. ಇತರರನ್ನು ನೋಡಿಯೋ, ಕೇಳಿಯೋ ಅದನ್ನು ಗಳಿಸಿಕೊಳ್ಳಬೇಕು. ಹೀಗಾಗಿ ಸಂಪತ್ತನ್ನು, ಶ್ರೇಯಸ್ಸನ್ನು ಗಳಿಸಿಕೊಳ್ಳಬೇಕೆಂಬುವವನು ದುಡುಕು ಸ್ವಭಾವವನ್ನು ಮೊದಲು ಬಿಡಬೇಕು. ಎಲ್ಲವನ್ನೂ ಚೆನ್ನಾಗಿ ವೀಕ್ಷಿಸಬೇಕು, ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು. ಮತ್ತೆ ಪರೀಕ್ಷಿಸಬೇಕು. ಅಂತಹ ಪರೀಕ್ಷಾ ತಂತ್ರದಿಂದ ವ್ಯಕ್ತಿಯು ಗೆಲ್ಲುತ್ತಾನೆ.

---

18. **ಸುಭಾಷಿತಮಂಜರೀ** –ಸದ್ಗುಣ–ದುರ್ಗುಣ–ಶ್ಲೋ–131, ಪು–157, (2001) ಸುಭಾಷಿತರತ್ನಭಾಂಡಾಗಾರ. ಕ.ಸಾ.ಪ. ಬೆಂಗಳೂರು–18.

ಅವನು ಸೋಲುವುದು ಯಾವಾಗ ಎಂದರೆ ವಿನಾಕಾರಣ ಕೋಪಗೊಳ್ಳುವುದರಿಂದ. ಅದರಿಂದ ತಾನೂ ಕೆಡುವುದಲ್ಲದೆ, ತನ್ನ ಜೊತೆಯಲ್ಲಿ ಇದ್ದವರನ್ನೂ ಕೆಡಿಸುತ್ತಾನೆ. ಇದಕ್ಕೆ ಸಂಬಂಧಿಸಿದಂತೆ ಒಂದು ಒಳ್ಳೆಯ ಕಥೆಯಿದೆ. ಹಾಗೆಯೇ ಇದಕ್ಕೆ ಸೇರಿಕೊಂಡಂತಹ ಬೇರೆ ಬೇರೆ ಉಪಕಥೆಗಳಿವೆ.[19] ಅವನ್ನೇ ಈಗ ಹೇಳುತ್ತೇನೆ ಕೇಳಿರಿ. ಇದು ಶೈಕ್ಷಣಿಕ ಮನೋವಿಜ್ಞಾನದಲ್ಲಿ ಸೂಚಿಸಿರುವ ಕ್ರಮವಾಗಿದೆ. ಯಾವುದೇ ಒಂದು ಪಾಠ ಬೋಧನೆಯ ಪೂರ್ವದಲ್ಲಿ ಒಂದು ಪೂರ್ವಭಾವಿ ಪರಿಚಯಾತ್ಮಕ ಪೀಠಿಕೆಯನ್ನು ಮೌಖಿಕವಾಗಿ ಹಾಕುವುದು. ಇದರ ಮೂಲ ಉದ್ದೇಶ ಮುಂದೆ ತಿಳಿಯಬೇಕಾಗಿರುವ ವಿಚಾರದ ಪರಿಚಯ, ಆ ವಿಚಾರವನ್ನು ತಿಳಿಯಲು ಕುತೂಹಲ ಮತ್ತು ಆಸಕ್ತಿಯನ್ನು ಅಭಿಪ್ರೇರಣೆ ಮಾಡುವುದಾಗಿದೆ. ವಿಷ್ಣುಶರ್ಮರು ಪ್ರತಿಯೊಂದು ಕಥೆಯನ್ನು ಹೇಳುವಾಗಲೂ ಈ ಕ್ರಮವನ್ನು ಬಹಳ ಕರಾರುವಾಕ್ಕಾಗಿ ಅನುಸರಿಸಿ, ರಾಜಕುಮಾರರ ಕಲಿಕಾ ಆಸಕ್ತಿಯನ್ನು ಹಿಡಿದಿಟ್ಟುಕೊಂಡಿದ್ದಾರೆ.

"ಅಪರೀಕ್ಷಿತಕಾರಕ"ದಲ್ಲಿ ಬರುವ ಸೂತ್ರಕಥೆಯೊಂದಿಗೆ ಹೆಣೆದುಕೊಂಡಿರುವ ಹದಿನಾಲ್ಕು ಉಪಕಥೆಗಳ ಮೂಲಕ "ಸರಿಯಾಗಿ ವಿಚಾರಮಾಡದೆ ಕೈಗೊಂಡ ಕಾರ್ಯಗಳಿಂದ ಆಗುವ ಅನಾಹುತಗಳನ್ನು ಬಹಳ ಅರ್ಥಪೂರ್ಣ ದೃಷ್ಟಾಂತಗಳೊಂದಿಗೆ ರಾಜಕುಮಾರರಿಗೆ ಮನದಟ್ಟು ಮಾಡಲಾಗಿದೆ. ಅದೇ ರೀತಿಯಲ್ಲಿ ಸಾಮಾನ್ಯ ಜ್ಞಾನದ ಕೊರತೆಯಿಂದ ಸರಿಯಾಗಿ ತಿಳಿಯದೆ, ವಿನಾಕಾರಣ ಕೋಪ, ದುಡುಕು ಮತ್ತು ಅಪರೀಕ್ಷಿತ ಕಾರಣಗಳಿಂದ ಎಂಥಹ ವಿಪರ್ಯಾಸಗಳಿಗೆ ಮನುಷ್ಯನು ಒಳಗಾಗುತ್ತಾನೆ ಎಂಬುದನ್ನು ಅರ್ಥಪೂರ್ಣವಾಗಿ ವಿವರಿಸಲಾಗಿದೆ.

ದಕ್ಷಿಣ ದೇಶದಲ್ಲಿರುವ ಪಾಟಲೀಪುತ್ರ ನಗರದಲ್ಲಿ ವಾಸಿಸುತ್ತಿದ್ದ ವ್ಯಾಪಾರಿ ಶ್ರೇಷ್ಠಿ ಮಣಿಭದ್ರನು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳ ನಿಮಿತ್ತವಾಗಿ ಕೆಲಸಗಳನ್ನು ಮಾಡುತ್ತಿದ್ದನು. ಆದರೂ ವಿಧಿಯಾಟದಿಂದ ಧನವನ್ನೆಲ್ಲಾ ಕಳೆದುಕೊಂಡನು. ಇದರಿಂದ ಬಹಳ ದುಃಖ ಹಾಗೂ ಅಪಮಾನಕ್ಕೆ ಗುರಿಯಾದನು. ತನ್ನ ದುರಾದೃಷ್ಟಕ್ಕೆ ಬಹಳವಾಗಿ ಚಿಂತಿಸಿ, ಕೊರಗಿ, ಕೊರಗಿ ಜಿಗುಪ್ಸೆ ಹೊಂದಿ, ಈ ವ್ಯರ್ಥ ಜೀವನದಿಂದ ಏನೂ ಪ್ರಯೋಜನವಿಲ್ಲವೆಂದು ತೀರ್ಮಾನಿಸಿ ಉಪವಾಸದಿಂದ ಪ್ರಾಣ ತ್ಯಜಿಸಲು ನಿಶ್ಚಯಿಸಿ ಮಲಗಿದನು ಮತ್ತು ಹೀಗೆ ಚಿಂತಿಸಿದನು.

---

19. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ-ಅಪರೀಕ್ಷಿತಕಾರಕಂ, ಪು-204-205, (2015) ವರ್ಣಿಲ, 39/2-11,ಕಲ್ಯಾಣಿ ಗಾರ್ಡನ್, ಬನಶಂಕರಿ 1ನೇ ಹಂತ, ಬೆಂಗಳೂರು-560050

शीलं शौचं क्षान्तिर्दाक्षिण्यं मधुरता कुले जन्म ।

न विराजन्ति हि सर्वे वित्तविहीनस्य पुरुषस्य ॥[20]

ಅಂದರೆ, ಈ ಬಡತನಕ್ಕೆ ಧಿಕ್ಕಾರವಿರಲಿ ಉತ್ತಮ ಚರಿತ್ರೆ, ಪವಿತ್ರತೆ, ಸಹನೆ, ಸೌಜನ್ಯ, ಮಧುರನುಡಿ ಇವೆಲ್ಲವೂ ಹಣವಿಲ್ಲದವನಲ್ಲಿ ಶೋಭಿಸುವುದಿಲ್ಲ. ಪುರುಷನು ಧನರಹಿತನಾದಾಗ ಆತನ ಗೌರವ, ದರ್ಪ, ಕೌಶಲ, ಭ್ರಾಂತಿ ಮತ್ತು ಸದ್ಬುದ್ಧಿ ಎಲ್ಲವೂ ಒಮ್ಮೆಲೇ ನಾಶವಾಗಿಬಿಡುತ್ತವೆ. ವಸಂತ ಋತುವಿನಲ್ಲಿ ಗಾಳಿಯ ಚಲನೆಯಿಂದ ಹೇಗೆ ಶಿಶಿರ ಋತುವಿನ ಶೋಭೆಯು ಕ್ರಮೇಣ ನಾಶವಾಗುತ್ತದೋ ಅದೇ ರೀತಿಯಲ್ಲಿ ಬುದ್ಧಿವಂತನ ಬುದ್ಧಿಯೂ ಕೂಡ ದಾರಿದ್ರ್ಯ ಬಂದಾಗ ಕುಟುಂಬ ಪೋಷಣೆಯ ಚಿಂತೆಯಿಂದ ಪ್ರತಿದಿನವೂ ಕ್ಷೀಣಿಸುತ್ತದೆ.

विकलमिह पूर्वसुकृतं विद्यावन्तोऽपि कुलसमुद्भूताः ।

यस्य यदा विभवः स्यात् तस्य तदा दासतां यान्ति ॥[21]

ಈ ಲೋಕದಲ್ಲಿ ಪೂರ್ವಜನ್ಮದ ಪುಣ್ಯಫಲಗಳು ವ್ಯರ್ಥ, ಏಕೆಂದರೆ ವಿದ್ಯಾವಂತರು ಹಾಗೂ ಉತ್ತಮಕುಲದಲ್ಲಿ ಜನ್ಮ ಪಡೆದವರು ಕೂಡ, ಯಾರಲ್ಲಿ ಹಣವಿದೆಯೋ ಅವರ ದಾಸರಾಗುತ್ತಾರೆ. ಹೀಗೆ ಯೋಚಿಸಿ ಮಣಿಭದ್ರನು ಮತ್ತೆ ಚಿಂತಿಸಿ, ಉಪವಾಸದೊಂದಿಗೆ ಪ್ರಾಣ ತ್ಯಜಿಸುವುದಾಗಿ ನಿಶ್ಚಯಿಸಿ ಮಲಗಿದನು. ಆಗ ಅವನಿಗೆ ಕನಸಿನಲ್ಲಿ ಪದ್ಮನಿಧಿಯು ಜೈನ ಸಂನ್ಯಾಸಿಯ ವೇಷದಲ್ಲಿ ದರ್ಶನ ಲಾಭವನ್ನು ಕೊಟ್ಟು–" ಎಲೈ ಶ್ರೇಷ್ಠಿ ವೈರಾಗ್ಯವನ್ನು ಹೊಂದಬೇಡ, ನಾನು ನಿನ್ನ ಪೂರ್ವಜರು ಸಂಪಾದಿಸಿದ ಪದ್ಮವೆಂಬ ನಿಧಿ. ನಾನು ಈ ವೇಷದಲ್ಲಿಯೇ ಬೆಳಗ್ಗೆ ನಿನ್ನ ಮನೆಗೆ ಬರುವೆನು. ಆಗ ನೀನು ದೊಣ್ಣೆಯಿಂದ ನನ್ನ ತಲೆಗೆ ಹೊಡೆದರೆ ನಾನು ಚಿನ್ನಮಯವಾಗಿ ಅಕ್ಷಯನಿಧಿ ಆಗುವೆನು. ಇದು ನಿಜವೋ, ಸುಳ್ಳೋ, ಏನೂ ತಿಳಿಯದ ಶ್ರೇಷ್ಠಿಯು ಸ್ವಪ್ನದಲ್ಲಿ ಹೇಳಿದಂತೆ ಮಾಡಿಬಿಡೋಣ ಎಂದು ಯೋಚಿಸುತ್ತಿರುವ ಸಂದರ್ಭದಲ್ಲಿ ಒಬ್ಬ ಜೈನ ಸಂನ್ಯಾಸಿಯೂ ಕೂಡ ಬಂದೇ ಬಿಟ್ಟನು. ಈ ಮಧ್ಯೆ ಶ್ರೇಷ್ಠಿಯ ಹೆಂಡತಿಯ ಕಾಲುಗಳಿಗೆ ಮದರಂಗಿಯನ್ನು ಹಚ್ಚಲು ಕರೆದಿದ್ದ ಕ್ಷೌರಿಕನೂ ಬಂದನು. ಜೈನ ಸಂನ್ಯಾಸಿಯನ್ನು ನೋಡಿದ ಮಣಿಭದ್ರನು ಸಂತೋಷದಿಂದ ಮರದ ಕೋಲಿನಿಂದ ಅವನ ತಲೆಗೆ ಹೊಡೆಯಲಾಗಿ, ನಿರೀಕ್ಷಿಸಿದ್ದು ನಿಜವಾಗಿ ಶ್ರೇಷ್ಠಿಗೆ ಚಿನ್ನವು ಅಕ್ಷಯವಾಗಿ ದೊರಕಿತು. ಇದನ್ನು ನೋಡಿದ್ದ ಕ್ಷೌರಿಕನಿಗೆ ಶ್ರೇಷ್ಠಿಯು ಉಪಚರಿಸಿ, ಸ್ವಲ್ಪ ಧನವನ್ನೂ, ವಸ್ತ್ರವನ್ನೂ ಕೊಟ್ಟು, ನಡೆದ ವೃತ್ತಾಂತವನ್ನು ಯಾರಿಗೂ ಹೇಳದಂತೆ ತಾಕೀತು ಮಾಡಿದನು.

---

20. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ–ಶ್ಲೋ–2, ಪು–704, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
21. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ–ಶ್ಲೋ–9, ಪು–707, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಆದರೆ ದುರಾಸೆಯಿಂದ ಕೂಡಿದ ಕ್ಷೌರಿಕನು ಸುಮ್ಮನಿರುತ್ತಾನೆಯೇ !! ಬಹಳವಾಗಿ ಯೋಚಿಸಿ ತಾನೂ ಅದನ್ನೇ ಮಾಡಿದರೆ? ಅದರಲ್ಲೂ ಜೈನ ದಿಗಂಬರರನ್ನು ಆಹ್ವಾನಿಸಿ ಕೋಲಿನಿಂದ ತಲೆಗೆ ಹೊಡೆದರೆ ಅವರೆಲ್ಲರೂ ಸುವರ್ಣಮಯರಾದಾಗ ತಾನೂ ಅಪಾರ ಚಿನ್ನವನ್ನು ಪಡೆಯುವೆನೆಂದು, ಅವರನ್ನೆಲ್ಲಾ ಭೋಜನಕ್ಕೆ ತನ್ನ ಮನೆಗೆ ಆಹ್ವಾನಿಸಿದನು. ಅವನ ಪ್ರಾರ್ಥನೆಗೆ ಮರುಳಾಗಿ ಜೈನ ಮುನಿಗಳು ಸಂತೋಷದಿಂದ ಕ್ಷೌರಿಕನ ಮನೆಗೆ ಹೊರಟರು. ಕ್ಷೌರಿಕನು ಅವರನ್ನು ಮನೆಯೊಳಕ್ಕೆ ಕರೆದೊಯ್ದು ಬಾಗಿಲನ್ನು ಗಟ್ಟಿಯಾಗಿ ಹಾಕಿ, ಕಗ್ಗಲೀ ಮರದ ದೊಣ್ಣೆಯಿಂದ ಅವರ ತಲೆಗೆ ಹೊಡೆದನು. ಪಾಪ, ಅವರಲ್ಲಿ ಕೆಲವರು ಸತ್ತೇ ಹೋದರು. ಮತ್ತೆ ಕೆಲವರ ತಲೆ ತುಂಡಾಯಿತು. ಅವರು ಅರಚಿಕೊಂಡರು. ಅವರ ಆಕ್ರಂದನವನ್ನು ಕೇಳಿದೊಡನೆ ನಗರರಕ್ಷಕನು ಭಟರನ್ನು ಕಳುಹಿಸಿ, ಪತ್ತೆಮಾಡಿ ಕ್ಷೌರಿಕನನ್ನು ಬಂಧಿಸಿ ಬದುಕುಳಿದ. ಸಂನ್ಯಾಸಿಗಳೊಂದಿಗೆ ನ್ಯಾಯಾಲಯಕ್ಕೆ ಹಾಜರುಪಡಿಸಿದನು. ನ್ಯಾಯಾಧೀಶರು ಮಣಿಭದ್ರನನ್ನು ಕರೆಸಿ, ಅವನ ಮನೆಯಲ್ಲಿ ನಡೆದ ಘಟನೆಯ ವೃತ್ತಾಂತವನ್ನು ಸ್ಪಷಪಡಿಸಿಕೊಂಡರು. ಕ್ಷೌರಿಕನನ್ನು "ಸರಿಯಾಗಿ ವಿಚಾರಿಸದೇ ಕೆಲಸ ಮಾಡಿದ ದುಷ್ಟಾತ್ಮ" ಎಂದು ತೀರ್ಮಾನಿಸಿ ಶೂಲಕ್ಕೇರಿಸಲು ಆದೇಶಿಸಿದರು.[22] ಪುನಃ ಅವರು ನುಡಿಯುತ್ತಾರೆ.

अपरीक्ष्य न कर्त्तव्यं कर्त्तव्यं सुपरीक्षितम् ।

पश्चाद्भवति सन्तापो ब्राह्मण्यां नकुलार्थतः ॥[23]

"ಸರಿಯಾಗಿ ನೋಡದ, ಸರಿಯಾಗಿ ತಿಳಿಯದ, ಸರಿಯಾಗಿ ಕೇಳದ ಮತ್ತು ಸರಿಯಾಗಿ ಪರಿಶೀಲಿಸದ ಕೆಲಸವನ್ನು ಕ್ಷೌರಿಕನು ಹೇಗೆ ಮಾಡಿದನೋ ಹಾಗೆ ಮನುಷ್ಯನು ಮಾಡಬಾರದು. ಸರಿಯಾಗಿ ಪರೀಕ್ಷಿಸಿಯೇ ಕೆಲಸವನ್ನು ಮಾಡಬೇಕು. ಇಲ್ಲದಿದ್ದರೆ ಅನಂತರ ಮುಂಗುಸಿಯಿಂದ ಬ್ರಾಹ್ಮಣಿಗೆ ವ್ಯಥೆಯುಂಟಾದಂತೆ ಆಗುತ್ತದೆ."

ಮಣಿಭದ್ರನು ಅದೇನು ಕಥೆ ? ಎಂದು ಕೇಳಿದಾಗ ಆ ಧರ್ಮಾಧಿಕಾರಿಗಳು **ಬ್ರಾಹ್ಮಣಿ-ಮುಂಗುಸಿಯ ಕಥೆ**ಯನ್ನು ಹೇಳಿದರು. ಇದರ ನೀತಿಯೆಂದರೆ "ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕು ಅಥವಾ ಕಣ್ಣಾರೆ ಕಂಡರೂ ಪರಾಂಬರಿಸಿ ನೋಡು." ಈ ರೀತಿ ಮಾಡದೆ ಬ್ರಾಹ್ಮಣಿಯು ತನ್ನ ಪುತ್ರ (ಮುಂಗುಸಿಯನ್ನು)ನನ್ನು ಕೊಂದು ಶೋಕದಿಂದ ಎದೆ ಬಡಿದುಕೊಳ್ಳಲಾರಂಭಿಸಿದಳು. ಮುಂಗುಸಿಯನ್ನು ಕೊಂದು ಮನೆಗೆ ಬಂದಾಗ ಅವಳ ಮಗನು ಮಲಗಿದ್ದಂತೆಯೇ ಅಲ್ಲಿಯೇ ಮಲಗಿದ್ದನು. ಸಮೀಪದಲ್ಲಿ ಕೃಷ್ಣಸರ್ಪವೊಂದು ತುಂಡಾಗಿ

---

22. **ಭರತ ಬಿ ರಾವ್,** ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತಂ-5, ಪು-255-259, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ,44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು-560004

23. **ಸುಧಾಕರ್ ಮಾಲವೀಯ,** ಸಂಪಾ-ಅನು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ,ಅಪರೀಕ್ಷಿತಕಾರಕ-ಶ್ಲೋ-18, ಪು-717, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಬಿದ್ದಿರುವುದನ್ನು ಕಂಡಳು. ಆಗ ಅವಳಿಗೆ ನಿಜಾಂಶ ಅರಿವಾಯಿತು. ಬ್ರಾಹ್ಮಣಿಯು ಬಹಳ ದುಃಖದಿಂದ ತನ್ನ ದುಡುಕುತನಕ್ಕೆ ಪಶ್ಚಾತ್ತಾಪ ಪಟ್ಟುಕೊಂಡಳು. ಸರಿಯಾಗಿ ತಿಳಿಯದೆ, ಸರಿಯಾಗಿ ನೋಡದೆ ಹಾಗೂ ಸರಿಯಾಗಿ ಪರೀಕ್ಷಿಸದೆ ಮಾಡಿದ ಕೆಲಸ ಎಂಥಹ ಪರಿಸ್ಥಿತಿಯನ್ನುಂಟುಮಾಡಿತೆಂದು ಪ್ರಲಾಪಿಸುತ್ತಾ ಬ್ರಾಹ್ಮಣನಿಗೆ ಹೀಗೆ ಹೇಳುತ್ತಾಳೆ :-

अतिलोभो न कर्तव्यो लोभं नैव परित्यजेत् ।

अतिलोभाभिभूतस्य चक्रं भ्रमति मस्तके ॥[24]

"ಅತಿ ಲೋಭವನ್ನು ಮಾಡಬಾರದು. ಆದರೆ ಲೋಭವನ್ನು ಬಿಡಲೂಬಾರದು. ಅತಿಲೋಭದಿಂದ ಕೂಡಿದವನ ತಲೆಯಲ್ಲಿ ಚಕ್ರವು ತಿರುಗುತ್ತದೆ." ಬ್ರಾಹ್ಮಣನು ಹಾಗೆಂದರೇನು? ಎನ್ನಲು ಅವಳು **ಲೋಭದಿಂದ ಕೂಡಿದ ಚಕ್ರಧರನ ಕಥೆ**ಯನ್ನು ಹೇಳಿದಳು. ಮನುಷ್ಯನಿಗೆ ಧನದ ಸೌಕರ್ಯವಿಲ್ಲದಿದ್ದರೆ ಅವನು ಎಲ್ಲ ರೀತಿಯಿಂದಲೂ ಉಪೇಕ್ಷೆಗೊಳಗಾಗುತ್ತಾನೆ. ಈ ಕಾರಣದಿಂದ ಹೇಗಾದರೂ ಮಾಡಿ ಹಣ ಸಂಪಾದನೆ ಮಾಡಬೇಕೆಂದು ಒಂದು ನಗರದಲ್ಲಿ ನಾಲ್ವರು ಬ್ರಾಹ್ಮಣ ಪುತ್ರರು ಪರಸ್ಪರ ಗೆಳೆತನದಿಂದ ಕೂಡಿ ವಾಸಿಸುತ್ತಿದ್ದವರು; ಬಹಳ ದಾರಿದ್ರ್ಯ ಹಾಗೂ ಬಡತನಕ್ಕೆ ಸೋತಿದ್ದವರು ಒಂದು ಸಮಾಲೋಚನೆ ನಡೆಸಿದರು. ಅವರು ತಮ್ಮ ತೀರ್ಮಾನದಂತೆ ಮಿತ್ರಬಾಂಧವರು ಇರುವ ತಮ್ಮ ದೇಶ, ಊರು ಹಾಗೂ ಮನೆಯನ್ನು ಬಿಟ್ಟುಹೊರಟರು. ಉತ್ತಮ ಸ್ವಭಾವ, ಪಾವಿತ್ರ್ಯತೆ, ಕ್ಷಮಾ, ಸರಳತೆ, ದಯೆ, ಉತ್ತಮ ಕುಲದಲ್ಲಿ ಜನ್ಮ ಮುಂತಾದ ಎಲ್ಲ ಗುಣಗಳಿದ್ದರೂ, ದರಿದ್ರ, ಅಂದರೆ ವಿತ್ತವಿಹೀನನಾದ ಪುರುಷನು ಶೋಭೆಯನ್ನು ಪಡೆಯಲು ಅಸಮರ್ಥನಾಗುತ್ತಾ ಶೂರನೂ, ಮಧುರ ಮಾತುಗಾರನೂ, ಶಬ್ದಾರ್ಥಶಾಸ್ತ್ರ ಪ್ರವೀಣನೂ ಆಗಿದ್ದು ಧನಹೀನನಾಗಿದ್ದರೆ, ಆತನಿಗೆ ಯಶಸ್ಸೆಂಬುದು ಇಲ್ಲದಿರುವಾಗ ನಮಗಾದರೂ ಎಲ್ಲಿ ಮಾನ್ಯತೆ ಇದೆ? ಎಂದು ಆಲೋಚಿಸಿದರು. ಅದಕ್ಕಾಗಿ ಹಣವನ್ನು ಹೇಗಾದರೂ ಗಳಿಸಿಕೊಂಡು ಬರಬೇಕೆಂದು ದೂರ ಪ್ರಯಾಣ ಕೈಗೊಂಡರು. ಹೀಗೊಂದು ಉಕ್ತಿಯಿದೆ:-

सत्यं परित्यजति मुञ्चति बन्धुवर्गं शीघ्रं विहाय जननीमपि जन्मभूमिम् ।

संत्यज्य गच्छति विदेशमभीष्टलोकं चिन्ताकुलीकृतमतिः पुरुषोऽत्र लोके ॥[25]

24. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ-ಶ್ಲೋ-22, ಪು-721, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

25. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ-ಶ್ಲೋ-27, ಪು-724- 725, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಯಾರ ಮನಸ್ಸು ಚಿಂತೆಯಿಂದ ವ್ಯಾಕುಲಗೊಂಡಿದೆಯೋ ಅವನು ಸತ್ಯವನ್ನು ತ್ಯಜಿಸುತ್ತಾನೆ. ಬಂಧುವರ್ಗವನ್ನು ಬಿಡುತ್ತಾನೆ. ಜನನಿ ಹಾಗೂ ಜನ್ಮಭೂಮಿಯನ್ನು ಹಾಗೂ ಪ್ರಿಯವಾದ ಸ್ಥಾನವನ್ನು ತ್ಯಜಿಸಿ ವಿದೇಶಕ್ಕೆ ತೆರಳುತ್ತಾನೆ. ಹೀಗೆ ಬ್ರಾಹ್ಮಣ ಪುತ್ರ ಗೆಳೆಯರು ಅವಂತೀನಗರವನ್ನು ಮೊದಲು ತಲುಪಿದರು. ಅಲ್ಲಿ ಶಿಪ್ರಾ ನದಿಯಲ್ಲಿ ಸ್ನಾನ ಮಾಡಿ ಮಹಾಕಾಲನಿಗೆ ನಮಿಸಿ ಹೋಗುತ್ತಿದ್ದಾಗ ಭೈರವಾನಂದ ಎಂಬ ಯೋಗಿಯ ದರ್ಶನವಾಗುತ್ತದೆ. ಉಭಯಕುಶಲೋಪರಿ ವಿಚಾರದೊಂದಿಗೆ ಪರಿಚಯ ಆಗುತ್ತದೆ. ಭೈರವಾನಂದರಿಗೆ ಅದ್ಭುತವಾದ ಶಕ್ತಿಯಿದೆ ಎಂದು ತಿಳಿಯುತ್ತದೆ. ಇದು ಒಳ್ಳೆಯದೇ ಆಯಿತೆಂದು ಆ ಬ್ರಾಹ್ಮಣ ಪುತ್ರರು ತಮ್ಮ ಪರಿಸ್ಥಿತಿಯನ್ನು ಮುಕ್ತವಾಗಿ ಅವರ ಮುಂದೆ ನಿವೇದಿಸಿಕೊಂಡು ಧನ ಸಿದ್ಧಿಗಾಗಿ ಏನಾದರೊಂದು ಉಪಾಯ ತಿಳಿಸಬೇಕೆಂದು ಪ್ರಾರ್ಥನೆ ಸಲ್ಲಿಸಿದರು. ಭೈರವಾನಂದರು ಅವರಿಗೆ ಅತಿಲಾಭಕರವಾದ ನಾಲ್ಕು ಸಿದ್ಧಬತ್ತಿಗಳನ್ನು ಮಾಡಿ ಅವರಿಗೆ ಕೊಟ್ಟು. ಏನು ಮಾಡಬೇಕೆಂದು ಸೂಚಿಸಿದರು. "ಹಿಮಾಲಯದ ಕಡೆ ಹೋಗಿರಿ.ಅಲ್ಲಿ ಯಾವ ಪ್ರದೇಶದಲ್ಲಿ ಬತ್ತಿಗಳು ಬೀಳುವುದೋ ಅಲ್ಲಿ ನಿಶ್ಚಯವಾಗಿಯೂ ನಿಧಿಯನ್ನು ಪಡೆಯುವಿರಿ. ಆ ಜಾಗವನ್ನು ಅಗೆದು ನಿಧಿಯನ್ನು ಪಡೆದು ಹಿಂದಿರುಗಿ ಬನ್ನಿ." ಅದರಂತೆ ಅವರು ಹೋಗುತ್ತಿದ್ದಾಗ ಒಬ್ಬನ ಕೈಯಲ್ಲಿದ್ದ ಬತ್ತಿಯು ಬಿದ್ದಿತು. ನಂತರ ಅವನು ಅಗೆದು ನೋಡಿದಾಗ ಭೂಮಿಯು ತಾಮ್ರಮಯವಾಗಿತ್ತು. ಅಲ್ಲಿಗೆ ಮೊದಲನೆಯವನು ತಾಮ್ರವನ್ನು ತೆಗೆದುಕೊಂಡು ಹಿಂದಿರುಗಿದನು. ಇನ್ನು ಉಳಿದ ಮೂವರು ಮುಂದೆ ಸಾಗಿದರು. ಮತ್ತೊಬ್ಬನ ಕೈಯಲ್ಲಿದ್ದ ಬತ್ತಿಯು ಬಿದ್ದಿತು. ಅವನು ಭೂಮಿಯನ್ನು ಅಗೆದು ನೋಡಿದಾಗ ಬೆಳ್ಳಿಮಯ ಆಗಿತ್ತು. ಉಳಿದಿಬ್ಬರು ಹಿಂದೆ ಭೂಮಿ ತಾಮ್ರಮಯ ಆಗಿತ್ತು, ಅನಂತರ ಬೆಳ್ಳಿಯಿಂದ ಕೂಡಿತ್ತು, ಮುಂದೆ ಖಂಡಿತವಾಗಿಯೂ ಚಿನ್ನಮಯವಾಗಿರಬಹುದೆಂದು ಊಹಿಸುತ್ತಾ, ಮುನ್ನಡೆದರು.ಹಾಗೆ ಮುಂದೆ ಸಾಗುತ್ತಿದ್ದಾಗ ಇನ್ನೊಬ್ಬನ ಬತ್ತಿಯು ಬಿದ್ದಿತು. ಅವನು ಭೂಮಿಯನ್ನು ಅಗೆದು ನೋಡಿದಾಗ ಚಿನ್ನಮಯವಾಗಿತ್ತು. ಅವನು ಖುಷಿಯಾಗಿ ಚಿನ್ನವನ್ನು ತೆಗೆದುಕೊಂಡು ಹಿಂದಿರುಗಿದನು. ಕೊನೆಯಲ್ಲಿ ಉಳಿದವನೊಬ್ಬನು "ಹಿಂದಿನವರೆಲ್ಲಾ ಮೂಢರೆಂದು ಹೇಳಿ ಮೊದಲು ತಾಮ್ರ, ನಂತರ ಬೆಳ್ಳಿ, ಅದರನಂತರ ಚಿನ್ನ, ಇನ್ನು ಮುಂದೆ ನನಗೆ ದೊರಕುವುದು ರತ್ನಗಳೇ." ಎಂದುಕೊಂಡು ಮುಂದೆಹೋಗುತ್ತಾ, ಭಾರವಾಗಿರುವ ಚಿನ್ನದಿಂದೇನುಪ್ರಯೋಜನ? ಎನ್ನುತ್ತಾ ಸಾಗಿದನು. ಅವನು ಏಕಾಂಗಿಯಾಗಿ ಹೋಗುತ್ತಾ, ಸೂರ್ಯನತಾಪದಿಂದ ಬಾಯಾರಿ ಬಳಲಿದವನಾಗಿ ಸಿದ್ಧಿಮಾರ್ಗವನ್ನು ಬಿಟ್ಟು ಅಲ್ಲಲ್ಲಿ ಅಲೆಯತೊಡಗಿದನು.

ಒಂದು ಮಾತಿದೆ:- प्रयत्ने समके केचिदेव स्युः फलभागिनः ।

क्षीरोदमथनाद्देवैरमृतं प्रापि नासुरैः ॥[26]

---

26. **ಸುಭಾಷಿತಮಂಜರೀ,** ಶ್ಲೋ-537,ಪು-498,ಸುಭಾಷಿತರತ್ನಭಾಂಡಾಗಾರ.(2001) ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18.

ಅಂದರೆ ಸಮಸಮವಾಗಿಯೇ ಪ್ರಯತ್ನಮಾಡಿದರೂ ಕೆಲವರಿಗೆ ಮಾತ್ರ ಫಲ ಲಭಿಸುತ್ತದೆ. ಕ್ಷೀರಸಮುದ್ರವನ್ನು ಕಡೆದಾಗ ದೇವತೆಗಳಿಗೇ ಅಮೃತ ದೊರೆಯಿತು. ರಾಕ್ಷಸರಿಗೆ ದೊರಕಲೇ ಇಲ್ಲ. ಅದು ಅವರವರ ಲಭ್ಯವೇ ಹೊರತು ದುರಾಸೆಯಂತಲ್ಲ.

ಆ ಸಂದರ್ಭದಲ್ಲಿ ಒಂದು ಸ್ಥಳದಲ್ಲಿ ಮೈಯೆಲ್ಲಾ ರಕ್ತಸಿಕ್ತನಾದ, ತಲೆಯಲ್ಲಿ ತಿರುಗುತ್ತಿರುವ ಚಕ್ರವನ್ನು ಹೊತ್ತಿರುವ ಮನುಷ್ಯನನ್ನು ನೋಡಿದನು." ಎಲೈ ಯಾರು ನೀನು? ಇದೇನು ತಿರುಗುತ್ತಿರುವ ಚಕ್ರವು ನಿನ್ನ ತಲೆಯ ಮೇಲೆ? ಇಲ್ಲೆಲ್ಲಾದರೂ ನೀರು ಸಿಗುವುದೇ? ಎಂದು ವಿಚಾರಿಸುವಷ್ಟರಲ್ಲಿ ಆ ವ್ಯಕ್ತಿಯ ತಲೆಯಮೇಲಿದ್ದ ಚಕ್ರವು ಬ್ರಾಹ್ಮಣನ ತಲೆಗೆ ಬಂದು ಸೇರಿತು. ಅದೂ ಬಹಳ ಭಾರ ಹಾಗೂ ತಲೆಯಿಂದ ಯಾವಾಗ ಇಳಿಯುವುದೋ ಎನ್ನುವಷ್ಟು ನೋವನ್ನುಂಟುಮಾಡಿತು. ಇದರ ಬಿಡುಗಡೆ ಹೇಗೆಂದು ವಿಚಾರಿಸಲಾಗಿ, ಮತ್ತೊಬ್ಬ ಯಾರಾದರೂ ಸಿದ್ಧಿಬತ್ತಿಯನ್ನು ಹಿಡಿದುಕೊಂಡು ಬಂದು ಮಾತನಾಡಿಸಿದರೆ, ಆ ಚಕ್ರವು ಅವನ ತಲೆಗೆ ಹೋಗಿ ಸೇರುತ್ತದೆಂದು ಹಿಂದಿನ ವೃತ್ತಾಂತವೆಲ್ಲಾ ತಿಳಿಯಿತು.[27]

ಈ ಕಥೆಯಲ್ಲಿನ ನೀತಿಯೆಂದರೆ, "ವಿದ್ಯಾವಂತನಾದರೂ, ಕುಲೀನನಾದರೂ ಇವನು ಅಂದರೆ ಕೊನೆಯವನು ಬುದ್ಧಿಯಿಲ್ಲದವನು." ಒಂದು ಉಕ್ತಿ ಹೀಗಿದೆ:-

वरं बुद्धिर्न सा विद्या विद्याया बुद्धिरुत्तमा ।

बुद्धिहीना विनश्यन्ति यथा ते सिंहकारकाः ॥[28]

ಬುದ್ಧಿಯೇ ಶ್ರೇಷ್ಠ, ವಿದ್ಯೆಯಲ್ಲ. ವಿದ್ಯೆಗಿಂತ ಬುದ್ಧಿಯೇ ಉತ್ತಮ. ಸಿಂಹಕ್ಕೆ ಜೀವವನ್ನು ಕೊಟ್ಟವರಂತೆ ಬುದ್ಧಿಹೀನರು ನಾಶವಾಗುತ್ತಾರೆ. ಇದನ್ನು ಕೇಳಿ ಚಕ್ರಧರನು ಅದು ಹೇಗೆಂದೆನಲು ಸುವರ್ಣ ಸಿದ್ಧಿಯು **"ಸಿಂಹವನ್ನು ಜೀವಂತಗೊಳಿಸಿದ ಮೂರ್ಖ ಬ್ರಾಹ್ಮಣರ ಕಥೆ"**ಯನ್ನು ಹೇಳುತ್ತಾನೆ. ಈ ಒಂದು ಕಥೆಯಲ್ಲಿ ಶಾಸ್ತ್ರಗಳಲ್ಲಿ ಕುಶಲರಾಗಿದ್ದರೂ, ಲೋಕವ್ಯವಹಾರವನ್ನು ತಿಳಿಯದ ಮೂರ್ಖ ಪಂಡಿತರು ಹೇಗೆ ಅಪಹಾಸ್ಯಕ್ಕೊಳಗಾಗುತ್ತಾರೆ ಎಂಬ ಉತ್ತಮ ನಿದರ್ಶನವನ್ನು ನಿರೂಪಿಸಲಾಗಿದೆ. ವಿದ್ಯೆಯ ಪರೀಕ್ಷೆಯನ್ನು ಮಾಡಲು ಹೋಗಿ, ಮೂವರು ಮೂರ್ಖ ಬ್ರಾಹ್ಮಣರೂ ಯಾವುದೋ ಒಂದು ಸತ್ತ ಪ್ರಾಣಿಯ ಮೂಳೆಗಳನ್ನು ನೋಡಿ, ಅದಕ್ಕೆ ಜೀವ ತುಂಬಿಸುವುದೆಂದು ಯೋಚಿಸಿ, ಒಬ್ಬೊಬ್ಬರು ಒಂದೊಂದು ಕೆಲಸ – ಒಬ್ಬನು ಉತ್ಸಾಹದಿಂದ ಮೂಳೆಯನ್ನು ಜೋಡಿಸಿದನು; ಮತ್ತೊಬ್ಬನು ಚರ್ಮ, ರಕ್ತ ಮಾಂಸಗಳನ್ನು ತುಂಬಿಸಿದನು;

---

27. **ಭರತ ಬಿ ರಾವ್,** ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ,(2018) ಪು-261-265, ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ,44/1, ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು-560004
28. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ-ಶ್ಲೋ-36, ಪು-734, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಮೂರನೆಯವನು ಅದಕ್ಕೆ ಪ್ರಾಣ ಕೊಡಲು ಸಿದ್ಧನಾದನು. ಅಷ್ಟರಲ್ಲಿ ಒಬ್ಬನು ಅಂದರೆ ಸುಬುದ್ಧಿಯು ಹೇಳುತ್ತಾನೆ-" ತಡೆಯಿರಿ. ನೀವೆಲ್ಲರೂ ಸಿಂಹವನ್ನು ಜೀವಂತಗೊಳಿಸುತ್ತಿದ್ದೀರಿ. ಅದು ಎಲ್ಲರನ್ನೂ ಕೊಂದುಬಿಡುತ್ತದೆ. ಆಗ ಮೂರನೆಯವನು ಹೇಳುತ್ತಾನೆ – ಮೂರ್ಖನಾದ ನಿನಗೆ ಧಿಕ್ಕಾರ ! ನಾನು ನನ್ನ ವಿದ್ಯೆಯನ್ನು ವ್ಯರ್ಥ ಮಾಡುವುದಿಲ್ಲ. ಆಗ ಸುಬುದ್ಧಿ ಹೀಗೆಂದು "ಒಂದು ಕ್ಷಣ ತಡೆ, ನಾನು ಮರವನ್ನು ಹತ್ತುತ್ತೇನೆ ಎಂದು ಏರಿಬಿಟ್ಟನು. ಆನಂತರ ಸಿಂಹಕ್ಕೆ ಜೀವವನ್ನು ಕೊಟ್ಟದ್ದಾಯಿತು. ಸಿಂಹವು ಎದ್ದದ್ದೂ ಆಯಿತು, ಮೂವರು ಬ್ರಾಹ್ಮಣರನ್ನು ಕೊಂದದ್ದೂ ಆಯಿತು. ಸುಬುದ್ಧಿಯು ಇಳಿದು ಮನೆಗೆ ಹೊರಟನು.[29]

ಕಥೆಯನ್ನು ಮುಗಿಸಿದ ಸುವರ್ಣಸಿದ್ಧಿಯು ಹೀಗೆ ಹೇಳುತ್ತಾ, ಸ್ಪಷ್ಟೀಕರಣ ಕೊಡುತ್ತಾನೆ.

अपि शास्त्रेषु कुशला लोकाचारविवर्जिताः ।

सर्वे ते हास्यतां यान्ति यथा ते मूर्खपण्डिताः ॥[30]

ಆದ್ದರಿಂದಲೇ ನಾನು ಬುದ್ಧಿಯೇ ಶ್ರೇಷ್ಠ, ವಿದ್ಯೆಯಲ್ಲ ಎಂದು ಹೇಳಿದ್ದು. ಅಲ್ಲದೆ ಶಾಸ್ತ್ರಗಳಲ್ಲಿ ಕುಶಲರಾದ ಆದರೆ ಲೋಕವ್ಯವಹಾರವನ್ನು ತಿಳಿಯದ ಮೂರ್ಖಪಂಡಿತರಂತೆ ಅಪಹಾಸ್ಯಕ್ಕೊಳಗಾಗುತ್ತಾರೆ. ಎಂದನು ಮುಂದೆ ಚಕ್ರಧರನು ಅದೇನೆಂದು ಕೇಳಲು ಸುವರ್ಣಸಿದ್ಧಿಯು ಇದಕ್ಕೆ ಲಗತ್ತಾದ ಮತ್ತೊಂದು ಕಥೆಯನ್ನು ಹೇಳುತ್ತಾನೆ. ಅದೇ **ನಾಲ್ಕು ಮೂರ್ಖಪಂಡಿತರ ಕಥೆ**. ಲೋಕವ್ಯವಹಾರ ಮತ್ತು ಸಾಮಾನ್ಯಜ್ಞಾನ ಇಲ್ಲದೆ, ಶಾಸ್ತ್ರದಲ್ಲಿ ಎಷ್ಟೇ ಪಾಂಡಿತ್ಯ ಪಡೆದಿದ್ದರೂ, ಎಷ್ಟೇ ವಿದ್ಯಾವಂತನಾಗಿದ್ದರೂ, ಕುಲೀನನಾದರೂ ಬುದ್ಧಿಯಿಲ್ಲದೆ ಮೂರ್ಖರಾಗಿ ಅಪಹಾಸ್ಯಕ್ಕೆ ಒಳಗಾಗುತ್ತಾರೆ. ಎಂಬ ವಿಚಾರವನ್ನು ಬಹಳ ಸ್ವಾರಸ್ಯಕರವಾಗಿ ನಾಲ್ಕು ಮೂರ್ಖ ಪಂಡಿತರು ಹಸಿವಿನಿಂದ ಬಳಲಿ ಅಪಹಾಸ್ಯಕ್ಕೆ ಗುರಿಯಾಗಿ ತಮ್ಮ ದೇಶಕ್ಕೆ ಹಿಂದಿರುಗಿದ ಬಗ್ಗೆ ತಿಳಿಸುತ್ತಾ, ರಾಜಕುಮಾರರಲ್ಲಿ ವಿಶೇಷ ಜಾಗೃತಿಯನ್ನು ಮೂಡಿಸಿರುವುದು ಐದನೇ ತಂತ್ರದ ಮೂಲ ಉದ್ದೇಶವಾಗಿದೆ.

ಶೈಕ್ಷಣಿಕ ಮನೋವಿಜ್ಞಾನದ ಉದ್ದೇಶವೂ ಸಹ ಶಿಕ್ಷಣದಲ್ಲಿ ಕೇವಲ ಪಠ್ಯಕ್ರಮದಲ್ಲಿರುವಷ್ಟನ್ನೇ ಬೋಧನೆ ಮಾಡಿ ವಿದ್ಯಾವಂತರನ್ನಾಗಿ ಮಾಡಿದರೆ ಸಾಲದು. "ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ ಅಂದರೆ ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ, ಭಾವನಾತ್ಮಕವಾಗಿ ಮತ್ತು ನೈತಿಕವಾಗಿ ಸಮರ್ಥರನ್ನಾಗಿಸುವುದೇ ಶಿಕ್ಷಣ" ಎಂದಿದ್ದಾರೆ ಮಹಾತ್ಮಾ ಗಾಂಧೀಜಿಯವರು." ಜೀವನದಲ್ಲಿ ನಡೆಯುವ

29. **ಭರತ ಬಿ ರಾವ್,** ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತಂ-5, ಪು-265-266, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ,44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು-560004

30. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ-ಶ್ಲೋ-39, ಪು-738, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಎಲ್ಲಾ ಘಟನೆಗಳ ಪುನರ್ ಪರಿಶೀಲನೆಯೇ ಶಿಕ್ಷಣ ಎಂದಿದ್ದಾರೆ ಜಾನ್ ಡ್ಯೂಯಿ. ಅದರಂತೆಯೇ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಪರಿಸರ ಹಾಗೂ ಅನುವಂಶೀಯತೆಯ ಲಕ್ಷಣಗಳನ್ನು ಸನ್ನಿವೇಶಗಳ ಅವಶ್ಯಕತೆಗೆ ತಕ್ಕಂತೆ ಹೇಗೆ ವಿದ್ಯಾ – ಬುದ್ಧಿಯ ಪರಿಪಕ್ವತೆಯನ್ನು ಪಡೆಯಲು ಉಪಯೋಗಿಸಿಕೊಳ್ಳಬಹುದು ಎಂಬೆಲ್ಲ ಸಾಮಾನ್ಯ ಜ್ಞಾನವನ್ನು ಒದಗಿಸುವುದೂ ಶಿಕ್ಷಣದ ಜವಾಬ್ದಾರಿಯಾಗಿರುತ್ತದೆ. ಪಂಚತಂತ್ರದಲ್ಲಿ ವಿಷ್ಣುಶರ್ಮರು ಇದೆಲ್ಲವನ್ನೂ ಅತ್ಯಂತ ವ್ಯವಸ್ಥಿತವಾಗಿ ವಿವಿಧ ಸಣ್ಣ ಸಣ್ಣ ಕಥೆಗಳ ಮೂಲಕ ಮಹತ್ವಪೂರ್ಣ ವಿಚಾರಗಳನ್ನು ರಾಜಕುಮಾರರಿಗೆ ತಿಳಿಸುತ್ತಾ, ಅವರ ಸರ್ವತೋಮುಖ ಬೆಳವಣಿಗೆಗೆ ಬಹಳ ಚೆನ್ನಾಗಿ ಪ್ರೋತ್ಸಾಹಿಸಿದ್ದಾರೆ.

ಕಲಿವನ್ನು ಪರಿಣಾಮಗೊಳಿಸತಕ್ಕ ಅಂಶಗಳನ್ನು ಶಿಕ್ಷಣ ಮನೋವಿಜ್ಞಾನವು ಸ್ಪಷ್ಟಪಡಿಸುತ್ತಾ, ಯಾವುದನ್ನೇ ಕಲಿಯುತ್ತಿರಲಿ, ಕಲಿವು ಕೇವಲ ಅದೊಂದೇ ಕ್ಷೇತ್ರಕ್ಕಲ್ಲ. ಇಡೀ ಜೀವನಕ್ಕೆ ಎಂಬ ಭಾವನೆಯನ್ನು ಮಕ್ಕಳಲ್ಲಿ ಬೆಳೆಸಬೇಕು. ಅಂದರೆ ಮಾಡುವ ಪಾಠದ ವೈಶಾಲ್ಯ – ವ್ಯಾಪ್ತಿ, ಅರ್ಥ, ಉದ್ದೇಶಗಳನ್ನು ಸೂಚಿಸಬೇಕು. ಜೀವನದ ಅವಶ್ಯಕತೆಗಳ ಹಿನ್ನೆಲೆಯಲ್ಲಿ ಆ ವಿಷಯಗಳನ್ನು ಪರಿಶೀಲಿಸಬೇಕು. ಜ್ಞಾನವನ್ನು ಜೀವನದ ಬೆಳಕಿನಲ್ಲಿ ಬೋಧಿಸಬೇಕು ಎಂದು ಸೂಚಿಸುತ್ತದೆ.[31] ಪಂಚತಂತ್ರದ ಕಥೆಗಳಲ್ಲಿ ಈ ಹಿನ್ನೆಲೆಯಲ್ಲಿಯೇ ರಾಜಕುಮಾರರಿಗೆ ನೀತಿಶಾಸ್ತ್ರ, ರಾಜನೀತಿ ಶಿಕ್ಷಣ, ನಾಯಕತ್ವದ ಲಕ್ಷಣಗಳು, ದುರಾಸೆಯೆಂಬ ದುರ್ಗುಣದ ಪರಿಣಾಮ, ಯೋಚಿಸದೆ ಕೆಲಸಮಾಡುವುದು, ಬುದ್ಧಿಶಕ್ತಿಯ ಪ್ರಾಮುಖ್ಯತೆ, ಹೇಳುವ ವಿಷಯ ಕಲಿಯುವವರಿಗೆ ಅರ್ಥಪೂರ್ಣವಾಗಿರಬೇಕು, ಕಲಿಯುವ ಪ್ರಮಾಣ ತಕ್ಕಷ್ಟಿರಬೇಕು, ಕಲಿವನ್ನು ಔಚಿತ್ಯವನ್ನರಿತು ಅಗತ್ಯವಾದಷ್ಟು ಕಾಲಕ್ಕೆ ಹರಡಿಕೊಳ್ಳುವುದು, ಇತ್ಯಾದಿ ಅನೇಕ ಶೈಕ್ಷಣಿಕ ಮನೋವಿಜ್ಞಾನ ಕ್ರಮಗಳನ್ನು ಪಂಚತಂತ್ರದಲ್ಲಿ ಕಾಣಬಹುದು. ಒಬ್ಬ ಪ್ರತಿಭಾವಂತ ಬೋಧಕ, ಸಕಲಶಾಸ್ತ್ರಪಾರಂಗತರೂ ಆದಂತಹವರಿಗೆ ಮನೋವೈಜ್ಞಾನಿಕ ಕ್ರಮಗಳು ದೈವದತ್ತವಾಗಿಯೇ ಉಪದೇಶಿಸಲ್ಪಟ್ಟಿರುತ್ತದೆ ಎಂಬುದಕ್ಕೆ ವಿಷ್ಣುಶರ್ಮರೇ ಸಾಕ್ಷಿಯಾಗಿದ್ದಾರೆ. ಹಾಗೆಯೇ ಅವರು ರಚಿಸಿದ "ವ್ಯಕ್ತಿತ್ವ ವಿಕಸನ ಮಾರ್ಗದರ್ಶೀ ಕೈಪಿಡಿ" ಎಂಬುದಕ್ಕೆ ಪಂಚತಂತ್ರವೇ ನಿದರ್ಶನವಾಗಿದೆ.

ನಾಲ್ಕು ಮೂರ್ಖ ಪಂಡಿತರ ಕಥೆಯನ್ನು ಸುವರ್ಣ ಸಿದ್ಧಿಯು ಮುಗಿಸಿದ ನಂತರದಲ್ಲಿ ಚಕ್ರಧರನು ತನ್ನ ದುರವಸ್ಥೆಯ ಕಾರಣವನ್ನು ಹೇಳುತ್ತಾ ದೈವಕೃಪೆಯ ಬಗ್ಗೆ ಅದ್ಭುತವಾದ ಬೋಧನೆಯನ್ನು ಹೀಗೆ ಹೇಳಿದ್ದಾನೆ. "ನನ್ನ ದುರವಸ್ಥೆಗೆ ಸರಿಯಾದ ಕಾರಣವೆಂದರೆ ದೈವವು ಪ್ರತಿಕೂಲವಾಗಿದ್ದಲ್ಲಿ ಅತಿ ಬುದ್ಧಿವಂತರೂ ನಾಶವಾಗಿ ಹೋಗುವರು. ದೈವವು ಅನುಕೂಲವಾಗಿದ್ದಲ್ಲಿ ಮಂದಬುದ್ಧಿಯವರೂ ಕೂಡ ಅಲ್ಲೇ ಯಾವಾಗಲೂ

31. **ವೀರಪ್ಪ. ಎನ್.ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ–12, ಪು – 241, 1962. ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು–4

ಆನಂದದಿಂದಿರುವರು. ರಕ್ಷಣೆಯಿಲ್ಲದವನು ದೈವರಕ್ಷಣೆಯಿದ್ದರೆ ಬದುಕುತ್ತಾನೆ. ಉತ್ತಮ ರಕ್ಷಣೆಯಿದ್ದವನು ದೈವಕೃಪೆಯಿಲ್ಲದಿದ್ದರೆ ನಾಶವಾಗುತ್ತಾನೆ. ಕಾಡಿನಲ್ಲಿ ಬಿಟ್ಟ ಅನಾಥನು ದೈವಕೃಪೆಯಿಂದ ಬದುಕುತ್ತಾನೆ. ದೈವಕೃಪೆಯಿಲ್ಲದಿದ್ದಾಗ ಎಷ್ಟೇ ಪ್ರಯತ್ನಪಟ್ಟರೂ, ಮನೆಯಲ್ಲಿದ್ದರೂ ಕೂಡ ನಾಶವಾಗುತ್ತಾನೆ. ಒಂದು ಕಥೆಯಲ್ಲಿ ಹೀಗೊಂದು ಉಕ್ತಿಯಿದೆ:-

शतबुद्धिः शिरस्थोऽयं लम्भते च सहस्त्रधीः ।

एकबुद्धिरह भद्रे! क्रीडामि विमले जले ॥[32]

"ಭದ್ರೆ, ಶತಬುದ್ಧಿಯು ತಲೆಯಮೇಲಿದ್ದಾನೆ. ಸಹಸ್ರಬುದ್ಧಿಯು ನೇತಾಡುತ್ತಿದ್ದಾನೆ. ಏಕಬುದ್ಧಿಯಾದ ನಾನು ಶುದ್ಧ ನೀರಿನಲ್ಲಿ ಆಡುತ್ತಿದ್ದೇನೆ. ಇದೇನು ಒಗಟಿನಂತೆ ಇದೆಯಲ್ಲಾ ಹೇಗೆ? ಎಂದು ಸುವರ್ಣ ಸಿದ್ಧಿಯು ಕುತೂಹಲದಿಂದ ಕೇಳುತ್ತಾನೆ. ಆಗ ಚಕ್ರಧರನು **ಮೀನು ಮತ್ತು ಕಪ್ಪೆಯ ಕಥೆ**ಯನ್ನು ಹೇಳುತ್ತಾನೆ.

ಒಂದು ಸರೋವರದಲ್ಲಿ ವಾಸವಾಗಿದ್ದ ಶತಬುದ್ಧಿ, ಸಹಸ್ರಬುದ್ಧಿ ಎಂಬ ಎರಡು ಮೀನುಗಳು ಏಕಬುದ್ಧಿ ಎಂಬ ಕಪ್ಪೆಯೊಡನೆ ಸ್ನೇಹ ಬೆಳೆಸಿಕೊಂಡಿದ್ದವು. ಸರೋವರದ ತೀರದಲ್ಲಿ ಸ್ವಲ್ಪ ಕಾಲ ಸುಭಾಷಿತ ಗೋಷ್ಠಿಯನ್ನನುಭವಿಸಿ ಪುನಃ ಸರೋವರಕ್ಕೆ ಹಿಂದಿರುಗುತ್ತಿದ್ದವು. ಒಮ್ಮೆ ಗೋಷ್ಠಿಯನ್ನು ನಡೆಸುತ್ತಿದ್ದಾಗ ಮೀನುಗಾರರು ಅಲ್ಲಿಗೆ ಬಂದು ಸರೋವರವನ್ನು ನೋಡಿ ಪರಸ್ಪರ ಸಮಾಲೋಚನೆ ಮಾಡಿಕೊಂಡು, ಈ ಸರೋವರದಲ್ಲಿ ಅನೇಕ ಮೀನುಗಳಿವೆ. ನಾಳೆ ಬಂದು ವಿಚಾರ ಮಾಡೋಣ ಎಂದು ಹೇಳುತ್ತಾ ತಮ್ಮ ಮನೆಗೆ ನಡೆದರು. ನಂತರ ಮೀನುಗಳಿಗೆ ಈ ವಿಚಾರ ತಿಳಿದು ಬಹಳ ಆತಂಕ ಹಾಗೂ ದುಃಖ ಉಂಟಾಗಿ ಪರಸ್ಪರ ಮಾತನಾಡಿಕೊಂಡವು. ಈ ಸಮಯದಲ್ಲಿ ಕಪ್ಪೆ ಹೇಳಿತು." ಎಲೈ ಶತಬುದ್ಧಿ, ಸಹಸ್ರಬುದ್ಧಿ ಮೀನುಗಾರರ ಮಾತನ್ನು ಕೇಳಿದಿರಲ್ಲಾ? ಈಗ ಏನು ಮಾಡುವುದು? ಇಲ್ಲೇ ನೆಲೆ ನಿಲ್ಲುವುದೋ ಅಥವಾ ಪಲಾಯನ ಮಾಡುವುದೋ ಯಾವುದು ಸರಿ? ತಿಳಿಸಿರಿ ಎಂದು ಸಲಹೆ ಕೋರಿತು.

ಸಹಸ್ರಬುದ್ಧಿಯು ನಕ್ಕು, ಹೆದರಬೇಡ. ಅವರು ಬಂದೇ ಬರುತ್ತಾರೆ ಎಂದು ಅನಿಸುತ್ತಿಲ್ಲ. ಇಷ್ಟರ ಮೇಲೆ ಬಂದರೂ ನನ್ನ ಬುದ್ಧಿ ಬಲದಿಂದ ನಿಮ್ಮನ್ನು ರಕ್ಷಿಸಿಕೊಳ್ಳುವೆನೆಂದಿತು. ಶತಬುದ್ಧಿಯು ಸಹಸ್ರಬುದ್ಧಿ ಹೇಳಿದ್ದು ಸರಿಯೆಂದು ಒಪ್ಪಿ ತಾನೂ ಸಹ ಹೀಗೊಂದು ಉಕ್ತಿಯಿದೆ ಎಂದು ಹೇಳಿತು.

---

32. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ,ಅಪರೀಕ್ಷಿತಕಾರಕ-ಶ್ಲೋ-49, ಪು-748, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

बुद्धेर्बुद्धिमतां लोके नास्त्यगम्यं हि किञ्चन ।

बुद्ध्या यतो हता नन्दाश्चाणक्येनासिपाणयः ॥[33]

ಅಂದರೆ," ಬುದ್ಧಿವಂತರ ಬುದ್ಧಿಗೆ ಸಾಧ್ಯವಾಗದ್ದು ಈ ಲೋಕದಲ್ಲಿ ಏನೂ ಇಲ್ಲ. ಖಡ್ಗಧಾರಿಗಳಾದ ನಂದರನ್ನು ಚಾಣಕ್ಯ ತನ್ನ ಬುದ್ಧಿಶಕ್ತಿಯಿಂದ ಸೋಲಿಸಲಿಲ್ಲವೇ? ಎಲ್ಲಿಗೆ ಸೂರ್ಯನ ಬೆಳಕು ತಲುಪಲಾರದೋ, ಎಲ್ಲಿಗೆ ಗಾಳಿ ತಲುಪಲಾರದೋ ಅಲ್ಲಿಗೂ ಬುದ್ಧಿವಂತರ ಬುದ್ಧಿಯು ವೇಗವಾಗಿ ತಲುಪಬಲ್ಲದು. ಆದ್ದರಿಂದ ಕೇವಲ ಮೀನುಗಾರರ ಮಾತಿನಿಂದ ಪಿತೃಪರಂಪರೆಯಿಂದ ಪ್ರಾಪ್ತವಾದ ಈ ಸ್ಥಳವನ್ನು ಬಿಡುವುದು ಸರಿಯಲ್ಲ. ಮನುಷ್ಯನಿಗೆ ಅನುಕೂಲವಿಲ್ಲದ ಜನ್ಮಸ್ಥಾನದಲ್ಲಿ ಎಂತಹ ಸುಖವು ಪ್ರಾಪ್ತವಾಗುವುದೋ ಅಂತಹ ಸುಖ ಸ್ವರ್ಗದಲ್ಲಿ ದಿವ್ಯಾಂಗನೆಯ ಸ್ಪರ್ಶದಿಂದಲೂ ಸಿಗಲಾರದು. ಆದ್ದರಿಂದ ಎಲ್ಲಿಗೂ ಹೋಗುವುದು ಬೇಡ. ನನ್ನ ಬುದ್ಧಿ ಪ್ರಭಾವದಿಂದ ನಿನ್ನನ್ನು ರಕ್ಷಿಸುವೆನು. ಕಪ್ಪೆಯು ಇದಕ್ಕೆ ಒಪ್ಪದೆ ಹೇಳಿತು "ನನ್ನ ಬುದ್ಧಿ ಪಲಾಯನ ಮಾಡುವುದೊಂದನ್ನೇ ಸೂಚಿಸುತ್ತಿದೆ, ಹೆಂಡತಿಯೊಂದಿಗೆ ಬೇರೆ ಸರೋವರಕ್ಕೆ ಹೋಗುತ್ತೇನೆ" ಎಂದು ಆ ರಾತ್ರಿಯೇ ಹೊರಟುಬಿಟ್ಟಿತು. ಮೀನುಗಾರರು ಬೆಳಗ್ಗೆ ಸರೋವರದ ಹತ್ತಿರ ಬಂದು ಸಣ್ಣ, ಮಧ್ಯಮ ಹಾಗೂ ದೊಡ್ಡ ಮೀನು, ಆಮೆ, ಕಪ್ಪೆ, ಏಡಿ ಮುಂತಾದ ಜಲಚರ ಪ್ರಾಣಿಗಳನ್ನು ಹಿಡಿದೇಬಿಟ್ಟರು. ಶತಬುದ್ಧಿ, ಸಹಸ್ರಬುದ್ಧಿ ಮೀನುಗಳು ತಮ್ಮ ಹೆಂಡತಿಯರೊಡನೆ ಅನೇಕ ವಿಧದಲ್ಲಿ ಈಜಿನಿಂದ ಚಮತ್ಕಾರ ಮಾಡಿ ರಕ್ಷಿಸಿಕೊಂಡರೂ, ಕೊನೆಗೂ ಮೀನುಗಾರರ ಬಲೆಗೆ ಸಿಕ್ಕಿ ಸತ್ತುಹೋದವು. ಮೀನುಗಾರರು ಸಂತೋಷದಿಂದ ಮನೆಕಡೆಗೆ ಹೊರಟರು. ಭಾರವಿರುವ ಶತಬುದ್ಧಿ ಮೀನನ್ನು ಒಬ್ಬ ತಲೆಗೆ ಏರಿಸಿಕೊಂಡನು. ಸಹಸ್ರಬುದ್ಧಿ ಮೀನನ್ನು ನೇತಾಡಿಸಿಕೊಂಡು ಹೊರಟನು. ಸರೋವರದ(ಕಪ್ಪೆ ಹೋಗಿ ಸೇರಿದ್ದ) ಹತ್ತಿರ ನಡೆದುಕೊಂಡು ಹೋಗುತ್ತಿದ್ದಾಗ ಅವರನ್ನು ನೋಡಿದ ಕಪ್ಪೆಯು ತನ್ನ ಹೆಂಡತಿಗೆ ಹೀಗೆ ಹೇಳಿತು. "ಪ್ರಿಯೆ, ನೋಡು, ನೋಡು ಶತಬುದ್ಧಿಯು ತಲೆಯಮೇಲಿದ್ದಾನೆ, ಸಹಸ್ರಬುದ್ಧಿಯು ನೇತಾಡುತ್ತಿದ್ದಾನೆ, ಏಕಬುದ್ಧಿಯಾದ ನಾನು ಶುದ್ಧ ನೀರಿನಲ್ಲಿ ಆಡುತ್ತಿದ್ದೇನೆ" ಎಂದು. ಚಕ್ರಧರನು ಇದರೊಂದಿಗೆ ಕಥೆಯನ್ನು ಮುಗಿಸಿದನು. ಬುದ್ಧಿಯೇ ವಿದ್ಯೆಗಿಂತ ಶ್ರೇಷ್ಠ ಎಂದು ಈಗಾಗಲೇ ಹೇಳಿದ್ದರ ಬಗ್ಗೆ ನನ್ನ ಅಭಿಪ್ರಾಯ ಹೀಗಿದೆ-" ಕೇವಲ ಬುದ್ಧಿಯಿಂದ ಕಾರ್ಯಸಾಧನವಾಗುತ್ತದೆಂದು ಹೇಳಲಾಗುವುದಿಲ್ಲ ಎಂದು ಮುಂದುವರಿಸಿದನು.[34]

---

33 **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ-ಶ್ಲೋ-46, ಪು-746, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

34 **ಭರತ ಬಿ. ರಾವ್, ಪಂಚತಂತ್ರ,** ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತಂ-5, ಪು-270-272, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು-560004

ಇದನ್ನು ಕೇಳಿದ ಸುವರ್ಣಸಿದ್ಧಿಯು– "ಹೌದು ಹಾಗಿದ್ದರೂ ಕೂಡ ಮಿತ್ರ ಹೇಳಿದ್ದನ್ನು ಪಾಲಿಸದೇ ಇರಬಾರದು. ಆದರೇನು ಮಾಡುವುದು? ನಾನು ತಡೆದರೂ ಲೋಭದಿಂದ, ವಿದ್ಯೆಯ ಅಹಂಕಾರದಿಂದ ನೀನು ನಿಲ್ಲಲಿಲ್ಲ." ಇದರ ಬಗ್ಗೆ ಹೀಗೊಂದು ಉಕ್ತಿಯಿದೆ:–

साधु मातुल! गीतेन मया प्रोक्तोऽपि न स्थितः ।

अपूर्वोऽयं मणिर्बद्धः सम्प्राप्तं गीतलक्षणम् ॥[35]

"ಆಗಲಿ ಮಾಮ, ನಾನು ಹಾಡಬೇಡ ಎಂದರೂ ಕೇಳಲಿಲ್ಲ. ಈಗ ನಿನ್ನ ಹಾಡಿನ ಪುರಸ್ಕಾರವಾಗಿ ಈ ಅಪೂರ್ವವಾದ ಮಣಿಯು ನಿನ್ನ ಕುತ್ತಿಗೆಗೆ ಕಟ್ಟಲ್ಪಟ್ಟಿದೆ" ಎಂದು ಹೇಳುತ್ತಾ, ಮುಂದೆ ಚಕ್ರಧರನಿಗೆ **ಹಾಡುವ ಕತ್ತೆ ಹಾಗೂ ನರಿಯ ಕಥೆ**ಯನ್ನು ಹೇಳಿದನು. ಈ ಸ್ವಾರಸ್ಯಕರ ಕಥೆಯಲ್ಲಿ ಉದ್ಧತ ಎಂಬ ಕತ್ತೆಯು ತನ್ನ ದಷ್ಟಗಿರುವ ದೇಹದ ಸಹಾಯದಿಂದ ಸೌತೇಕಾಯಿ ಹೊಲದ ಬೇಲಿಯನ್ನು ಮುರಿದು ಒಳಗೆ ನುಗ್ಗಿ ಸ್ನೇಹಿತನಾದ ನರಿಯೊಂದಿಗೆ ಬೇಕಾದಷ್ಟು ಸೌತೆಕಾಯಿಗಳನ್ನು ತಿಂದು ಮುಂಜಾನೆಯ ಹೊತ್ತಿಗೆ ಸ್ವಸ್ಥಾನಕ್ಕೆ ವಾಪಸ್ಸಾಗುತ್ತಿತ್ತು. ಒಮ್ಮೆ ಮದೋನ್ಮತ್ತನಾಗಿ ಆ ಕತ್ತೆಯು ನರಿಗೆ ಹೇಳುತ್ತಾ, "ರಾತ್ರಿ ನಿರ್ಮಲವಾಗಿದೆ. ನಾನು ಹಾಡಬೇಕೆಂದಿದ್ದೇನೆ. ನಾನು ಹಾಡುವ ರಾಗವನ್ನು ನೀನು ಪತ್ತೆಮಾಡಿ ಹೇಳು" ಎಂದಿತು. ಅದಕ್ಕೆ ನರಿಯು ಬಹಳಷ್ಟು ನೀತಿಬೋಧೆಯನ್ನು ಹೇಳಿ ಕತ್ತೆಗೆ ಹಾಡುವುದು ಬೇಡ, ಹಾಡಿ ಸುಮ್ಮನೆ ಅನರ್ಥಕ್ಕೆ ದಾರಿಮಾಡಿಕೊಳ್ಳಬೇಡ ಎಂದು ಎಚ್ಚರಿಸಿತು. ಕ್ಷೇತ್ರಪಾಲಕರು ಬಂದರೆ ಸಾಯಿಸಿಬಿಡುವರು ಎಂದಿತು.

सकृत्कन्दुकपातेन पतत्यार्यः पतन्नपि ।

तथा पतति मूर्खस्तु मृतपिण्डपतनं यथा ॥[36]

ಮಹಾಪುರುಷನು ಒಂದು ವೇಳೆ ಅಕಸ್ಮಾತ್ ಬಿದ್ದರೂ ಚೆಂಡಿನಂತೆ ಬೀಳುತ್ತಾನೆ. ಮತ್ತೆ ಚೇತರಿಸಿಕೊಂಡು ಮೊದಲಿಗಿಂತ ಉನ್ನತ ರೀತಿಯಲ್ಲಿ ನಡೆಯುತ್ತಾನೆ. ಆದರೆ ಮೂರ್ಖನು ಮಣ್ಣಿನ ಮುದ್ದೆಯು ಬೀಳುವಂತೆ ಮತ್ತೇಳದಂತೆ ಬೀಳುತ್ತಾನೆ. (ಕತ್ತೆಯ ಕಥೆಯೂ ಇದೇ ಆಯಿತು.)

---

35. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ–ಶ್ಲೋ–50, ಪು–749, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

36. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂಪಂಚತಂತ್ರಂ, ದ್ವಿ.ತಂ.,ಶ್ಲೋ––165,ಪು–412, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಅದಕ್ಕೆ ಪ್ರತಿಯಾಗಿ ಕತ್ತೆಯು ವೇದದ ಸಾರಭೂತವಾದ ಸಂಗೀತ ಶಾಸ್ತ್ರದಲ್ಲಿ 185 ಗೀತೆಗಳ ಅಂಗಗಳನ್ನು ಹಿಂದೆ ಭರತಮುನಿಯೇ ತಿಳಿಸಿದ್ದಾನೆ. ಲೋಕದಲ್ಲಿ ಸಂಗೀತಕ್ಕಿಂತ ಪ್ರಿಯವಾದುದು ದೇವರಿಗೆ ಯಾವುದೂ ಇಲ್ಲ. ರಾವಣನು ತಪಸ್ಸಿನಿಂದ ಒಣಗಿದ ತನ್ನ ಕಂಠದ ನೀರಸ ಧ್ವನಿಯಿಂದ ಶಂಕರನನ್ನು ಪ್ರಸನ್ನಗೊಳಿಸಿದನು. ಆದ್ದರಿಂದ ನಾನು ಹಾಡೇ ಹಾಡುತ್ತೇನೆ. ಇಷ್ಟೇ ಅಲ್ಲದೆ ನರಿಗೆ ಯಾವುದೇ ಸಂಗೀತ ಜ್ಞಾನವಿಲ್ಲವೆಂದೂ, ಅದರ ಬೆಲೆಯೇನೆಂಬುದು ಗೊತ್ತೇ ಇಲ್ಲವೆಂದೂ ಮೂದಲಿಸಿತು. ನಂತರ ಗೀತೆಯ ಭೇದಗಳನ್ನು ವಿವರಿಸಿತು.[37] ಇಲ್ಲೊಂದು ವಿಶೇಷ ತಂತ್ರಗಾರಿಕೆಯನ್ನು ಉಪಯೋಗಿಸಿ, ವಿಷ್ಣುಶರ್ಮರು ಸಂಗೀತ ಶಿಕ್ಷಣವನ್ನೂ ಪರಿಚಯಿಸಿದ್ದಾರೆ. ಅದರಲ್ಲೂ ಗರ್ದಭಕಂಠದ ಪ್ರಾಣಿಯು ಸಂಗೀತವನ್ನು ಹೇಳಲು ಬಯಸುವುದು, ಸಂಗೀತಶಾಸ್ತ್ರದ ವಿವರಗಳನ್ನು ತಿಳಿಸುವುದು ಒಂದು ವಿಶೇಷತೆ. ಇದು ಅರಸುಕುಮಾರರಿಗೆ ಒಂದು ಹೊಸ ವಿಷಯದ ಬಗ್ಗೆ ಆಸಕ್ತಿಯನ್ನು ಪ್ರೇರೇಪಿಸಲು ಹಾಗೂ ಮನರಂಜನಾತ್ಮಕವಾಗಿ ವಿಚಾರವನ್ನು ತಿಳಿದುಕೊಳ್ಳಲು ಅನುವು ಮಾಡಿಕೊಟ್ಟಿದ್ದಾರೆ. ಈ ಸಂದರ್ಭದಲ್ಲಿ ಒಂದು ಶ್ಲೋಕವು ಹೀಗೆ ಹೇಳುವುದನ್ನು ಸ್ಮರಿಸಿಕೊಳ್ಳಬಹುದು.

उष्ट्राणां च विवाहेषु गीतं गायन्ति गर्दभाः ।

परस्परं प्रशंसन्ति अहो रूपमहो ध्वनिः ॥[38]

ಅಂದರೆ ಒಂಟೆಗಳ ಮದುವೆಗಳಲ್ಲಿ ಕತ್ತೆಗಳು ಸಂಗೀತ ಹಾಡುತ್ತವೆ. ಪರಸ್ಪರ ಹೀಗೆ ಹೊಗಳಿಕೊಳ್ಳುತ್ತವೆ. "ಆಹಾ ಏನು ರೂಪ ! ಆಹಾ ಎಷ್ಟು ಇಂಪಾದ ಧ್ವನಿ !!!"

ಹೀಗೆ ಹಾಡುವ ಕತ್ತೆ ಹಾಗೂ ನರಿಯ ಕಥೆಯ ತಂತ್ರಗಾರಿಕೆ ಬಹಳ ಸೊಗಸಾಗಿದೆ. ಇದು ಪ್ರತಿಭಾವಂತ ಶಿಕ್ಷಕರ ಬೋಧನಾ ಕೌಶಲ್ಯವಾಗಿದೆ. ಇದು ಇತ್ತೀಚಿನ ಹೊಸ ಶಿಕ್ಷಣ ನೀತಿ 2020ರಲ್ಲಿ ಕಂಡುಬರುವ **"Holistic and Multidisciplinary education"** ಸಮಗ್ರ ಹಾಗೂ ಬಹುವಿಷಯಗಳ ಅಥವಾ ವಿವಿಧ ಕೌಶಲ್ಯಗಳ ಕಲಿಕಾ ನೀತಿಗೆ ಹತ್ತಿರವಾಗಿದೆ.

---

37. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ,ಅಪರೀಕ್ಷಿತಕಾರಕ– ಪು–749–754, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
38. **ಸುಭಾಷಿತಮಂಜರೀ,** ಸಾಮಾನ್ಯ ನೀತಿ– ಶ್ಲೋ–86,ಪು–390,ಸಮಯೋಚಿತರಪದ್ಯಮಾಲಿಕಾ.(2001) ಕ.ಸಾ.ಪ.ಚಾಮರಾಜಪೇಟೆ, ಬೆಂಗಳೂರು–18

सप्त स्वरास्त्रयो ग्रामा मूर्च्छनाश्चैकविंशतिः ।

तालास्त्वेकोनपञ्चाशत् तिस्रो मात्रा लयास्त्रयः ॥

स्थानत्रयं यतीनाञ्च षडास्यानि रसा नव ।

रागाः षड्त्रिंशतिर्भावाश्चत्वारिंशत् ततः स्मृताः ॥

पञ्चशीत्यधिकं ह्येतद्गीताङ्गानां शतं स्मृतम् ।

स्वयमेव पुरा प्रोक्तं भरतेन श्रुतेः परम् ॥

नान्यद्गीतात् प्रियं लोके देवानामपि दृश्यते ।

शुष्कस्नायुस्वराह्लादात् त्र्यक्षं जग्राह रावणः ॥[39]

ಸಂಗೀತಶಾಸ್ತ್ರದಲ್ಲಿ:-

**ಸ್ವರಗಳು-** 7 - ನಿಷಾದ, ಋಷಭ, ಗಾಂಧಾರ, ಷಡ್ಜ, ಮಧ್ಯಮ, ದೈವತ ಮತ್ತು ಪಂಚಮ.

**ಗ್ರಾಮಗಳು-** 3 - ಷಡ್ಜ, ಮಧ್ಯಮ, ನಿಷಾದ.

**ಮೂರ್ಚ್ಛನೆಗಳು-** 21 - ಸ್ವರಗಳ ಆರೋಹಣ, ಅವರೋಹಣ, ಕ್ರಮಭೇದ.

**ತಾಳಗಳು-** 49 - ಮಾತ್ರೆಗಳು - 3, ಲಯಗಳು - 3 ಸ್ಥಾನಗಳು - 3 - ಉದಾತ್ತ, ಸ್ವರಿತ.

**ಯತಿಗಳು-** 5 - ವಿರಾಮಸ್ಥಾನಗಳು. ಆಸ್ಯಗಳು-6-ಮುಖಗಳು

**ರಸಗಳು-** 9 - ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ ಮತ್ತು ಶಾಂತ.

**ರಾಗಗಳು-** 36- ಭಾವಗಳು - 40.

ಹೀಗೆ ವೇದದ ಸಾರಭೂತವಾದ ಸಂಗೀತಶಾಸ್ತ್ರದಲ್ಲಿ 185 ಗೀತೆಗಳ ಅಂಗಗಳನ್ನು ಭರತಮುನಿ ತಿಳಿಸಿದ್ದಾರೆ. ಸಂಗೀತವು ಲೋಕಪ್ರಿಯ. ದೇವಾನುದೇವತೆಗಳೂ ಸಹ ಸಂಗೀತಕ್ಕೆ ಮನಸೋತಿದ್ದಾರೆ.

---

39. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ- ಶ್ಲೋ-53ರಿಂದ 56, ಪು-752,753,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಅದಕ್ಕೇ ಹೇಳುವುದು ಸಂಗೀತಕ್ಕೆ ಮನಸೋಲದವರುಂಟೆ !! ರಾವಣನು ತಪಸ್ಸಿನಿಂದ ತನ್ನ ಕಂಠದಿಂದ ಹೊರಹೊಮ್ಮಿದ ನೀರಸ ಧ್ವನಿಯಿಂದಲೇ ಈಶ್ವರನನ್ನು ಪ್ರಸನ್ನಗೊಳಿಸಿದನು. ಹೀಗಿರುವಾಗ ನನ್ನನ್ನು ಏನೂ ಅರಿಯದವನೆಂದು ತಡೆಯೊಡ್ಡುತ್ತಿರುವೆಯಾ ಅಳಿಯನೇ ಎಂದು ಗರ್ವದಿಂದ ಗರ್ದಭ ಹೇಳಿದನು.

ಕೊನೆಗೆ ನರಿಯು ಒಪ್ಪಿಕೊಂಡು "ದ್ವಾರದಲ್ಲಿ ನಿಂತು ದ್ವಾರಪಾಲಕರು ಬರುತ್ತಾರೋ ಕಾಯುತ್ತೇನೆ ಎಂದು ಹೇಳಿ ಕತ್ತೆಯನ್ನು ಅದರ ಮನಬಂದಂತೆ ಹಾಡಲು ಹೇಳಿತು. ಕತ್ತೆಯು ಹಾಡನ್ನು ಪ್ರಾರಂಭಿಸಿತು. ಅದರ ಕರ್ಕಶ ರಾಗದ ಅರಚುವಿಕೆಯನ್ನು ಕೇಳಿದ ಕ್ಷೇತ್ರ ಪಾಲಕರು ಕೋಪದಿಂದ ಬಂದು ಕತ್ತೆಯನ್ನು ನೆಲಕ್ಕೆ ಬೀಳುವಂತೆ ದೊಣ್ಣೆಯಿಂದ ಹೊಡೆದದ್ದೂ ಅಲ್ಲದೆ ಅದರ ಕೊರಳಿಗೆ ಒರಳನ್ನು ಕಟ್ಟಿ ಮತ್ತೆ ಮಲಗಿದರು. ಹೀಗೊಂದು ನುಡಿಯಿದೆ:– "ನಾಯಿಗೆ, ಕುದುರೆಗೆ ಮತ್ತು ವಿಶೇಷವಾಗಿ ಕತ್ತೆಗೆ ಹೊಡೆತದಿಂದ ಉಂಟಾದ ನೋವು ಹೆಚ್ಚು ಕಾಲ ಬಾಧಿಸುವುದಿಲ್ಲ" ಎಂದು. ಕತ್ತೆಯು ಆ ಒರಳಿನ ಸಹಿತ ಬೇಲಿಯನ್ನು ದಾಟಿಕೊಂಡು ಓಡಲಾರಂಭಿಸಿತು. ಆಗ ನರಿಯು ಅದನ್ನು ನೋಡಿ ನಗುತ್ತಾ ಹೀಗೆ ಹೇಳಿತು." ಆಗಲಿ ಮಾಮ, ನಾನು ಹಾಡಬೇಡಿ ಎಂದರೂ ಕೇಳಲಿಲ್ಲ. ಈಗ ನಿನ್ನ ಹಾಡಿನ ಪುರಸ್ಕಾರವಾಗಿ ಈ ಅಪೂರ್ವವಾದ ಮಣಿಯು ನಿನ್ನ ಕುತ್ತಿಗೆಗೆ ಕಟ್ಟಲ್ಪಟ್ಟಿದೆ. ಸುವರ್ಣಸಿದ್ಧಿಯು ಕಥೆಯನ್ನು ಮುಗಿಸುತ್ತಾ ಒಂದು ಉಕ್ತಿಯನ್ನು ಹೇಳುತ್ತಾನೆ.[40]

यस्य नास्ति स्वयं प्रज्ञा मित्रोक्तं न करोति यः ।

स एव निधनं याति यथा मन्थरकौलिकः ॥[41]

"ಯಾರಲ್ಲಿ ಸ್ವಂತ ಬುದ್ಧಿ ಇಲ್ಲವೋ ಮತ್ತು ಯಾರು ಮಿತ್ರನು ಹೇಳಿದ್ದನ್ನು ಕೇಳಬೇಕು, ಇಲ್ಲದಿದ್ದರೆ ಖಂಡಿತಾ ಅವನು ಮಂಥರಕ ನೇಕಾರನಂತೆ ಸತ್ತು ಹೋಗುತ್ತಾನೆ" ಎಂದು ಹೇಳಿ **"ಮಂಥರಕ ನೇಕಾರನ ಕಥೆ"**ಯನ್ನು ಹೇಳುತ್ತಾನೆ.

ಈ ಕಥೆಯು ಒಂದು ಒಳ್ಳೆಯ ತಿಳುವಳಿಕೆಯನ್ನು ನೀಡುತ್ತದೆ. ಯಾವಾಗಲೂ ಯಾವುದೇ ಕೆಲಸ ಮಾಡಲು ಸ್ವಂತ ಬುದ್ಧಿಯಿರಬೇಕು. ಒಂದು ವೇಳೆ ಅದರ ಕೊರತೆಯಿದ್ದಲ್ಲಿ. ಮಿತ್ರನು ಹೇಳಿದ್ದನ್ನು ಕೇಳಬೇಕು ಇಲ್ಲದಿದ್ದರೆ ಖಂಡಿತಾ ಅವನು ನಾಶವಾಗುತ್ತಾನೆ. ವಿದುರನೀತಿಯಲ್ಲೂ ಇದೇ ರೀತಿಯ ಒಂದು ಬೋಧೆ ಕಂಡುಬರುತ್ತದೆ–

40. **ಭರತ ಬಿ ರಾವ್,** ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತಂ–5, ಪು–273., (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1, ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು–560004

41. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ– 58, ಪು–755, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

"ತಿಳಿದು ನಾಲ್ವರೊಳೊರೆದ ಕಾರ್ಯವ

ನುಳಿವುದಿಬ್ಬರರೊಳು ಮ

ತ್ತುಳಿವುದೊಬ್ಬನನೊಬ್ಬನಿಂ ನಿಶ್ಚಯಿಸಿ ಬಳಿಕವನ

ಕಳೆದು ತಾನೇ ತನ್ನೊಳಗೆ ಬಗೆ

ಗೊಳೆ ವಿಚಾರಿಸಿ ಮಾಳ್ಪ ಕಾರ್ಯಕೆ

ಹಳಿವು ಹೊರುವುದೆ ರಾಯ ಚಿತ್ತೈಸೆಂದನಾ ವಿದುರ"[42]

ಅಂದರೆ, ಮಹಾರಾಜ, ಒಂದು ತೀರ್ಮಾನವನ್ನು ಕೈಗೊಳ್ಳಬೇಕಾದಾಗ, ಬಲ್ಲ ನಾಲ್ವರಿಗೆ ಅದನ್ನು ತಿಳಿಸಿ ಪರ್ಯಾಲೋಚನೆ ಮಾಡಬೇಕು. ಅನಂತರ ಅವರಲ್ಲಿ ಇಬ್ಬರನ್ನು ಬಿಟ್ಟು ಇನ್ನಿಬ್ಬರೊಡನೆ ವಿಚಾರ ಮಾಡಬೇಕು. ಆಮೇಲೆ ಅವರಲ್ಲೊಬ್ಬನನ್ನು ಕರೆದು ಒಬ್ಬನೊಡನೆಯೇ ಮಂತ್ರಾಲೋಚನೆಯನ್ನು ನಡೆಸಬೇಕು. ತರುವಾಯ ತಾನೊಬ್ಬನೇ ಚಿಂತಿಸಿ ತೀರ್ಮಾನವನ್ನು ಕೈಗೊಂಡಲ್ಲಿ ಅದಕ್ಕೆ ಎಂದಿಗೂ ಚ್ಯುತಿ ಇಲ್ಲ.

ಇಲ್ಲಿ ಮಂಥರಕ ಎಂಬ ನೇಕಾರನು ಒಮ್ಮೆ ವಸ್ತ್ರಗಳ ನೇಯ್ಗೆ ಕಾರ್ಯ ಮಾಡುತ್ತಿದ್ದಾಗ ಮರದ ಸಲಕರಣೆಗಳೆಲ್ಲಾ ತುಂಡಾದವು. ಪುನಃ ಹೊಸ ಸಲಕರಣೆಗಳನ್ನು ಸಿದ್ಧಪಡಿಸಿಕೊಳ್ಳಲು ಕೊಡಲಿಯನ್ನು ತೆಗೆದುಕೊಂಡು ಕಟ್ಟಿಗೆಗಾಗಿ ಕಾಡಿಗೆ ಹೋದನು. ಅಲ್ಲಿ ಒಂದು ದೊಡ್ಡ ವೃಕ್ಷವನ್ನು ನೋಡಿದನು. ಅದರ ಮೇಲೆ ಕೊಡಲಿಯನ್ನು ಬೀಸಿದನು. ಆ ವೃಕ್ಷದಲ್ಲಿ ಒಂದು ದೇವತೆಯು ಆಶ್ರಯ ಪಡೆದಿತ್ತು. "ಸಮುದ್ರದ ಅಲೆಗಳ ಹಾಗೂ ತಣ್ಣನೆ ಗಾಳಿಯ ಸ್ಪರ್ಶದ ಮಹಾಸುಖವನ್ನು ಇಲ್ಲಿ ನಾನು ಅನುಭವಿಸಿ ತೃಪ್ತನಾಗಿರುವುದರಿಂದ ಈ ವೃಕ್ಷವನ್ನು ಖಂಡಿತವಾಗಿಯೂ ರಕ್ಷಿಸಬೇಕು" ಎಂದು ಹೇಳಿತು. ಆದರೂ ನೇಕಾರನು "ಆ ಮರವನ್ನು ಕಡಿಯಲೇ ಬೇಕು, ಇಲ್ಲದಿದ್ದರೆ ಮರದ ಸಾಮಗ್ರಿಗಳಿಲ್ಲದೆ ಕೆಲಸ ನಿಂತು ಹೋಗಿ, ನನ್ನ ಕುಟುಂಬವೇ ಹಸಿವಿನಿಂದ ಬಳಲಬೇಕಾಗುತ್ತದೆ. ನನ್ನ ಉದ್ಯೋಗ ಹಾಗೂ ಸಂಪಾದನೆಗೆ ಇದೇ ಆಧಾರವೆಂದನು. ಆಗ ದೇವತೆಯು ಅವನ ಮಾತಿಗೆ ಸಂತೋಷಪಟ್ಟು," ನೀನು ಏನಾದರೂ ಇಷ್ಟವಾದುದನ್ನು ಪ್ರಾರ್ಥಿಸಿಕೊಂಡರೆ ಅದನ್ನು ಅನುಗ್ರಹಿಸುವುದಾಗಿ" ಹೇಳಿತು. ಹಾಗೂ ಮರವನ್ನು ಮಾತ್ರ ಕಡಿಯಬೇಡ, ಉಳಿಸು ಎಂದಿತು.

ನೇಕಾರನು ಮನೆಗೆ ಹೋಗಿ ಹೆಂಡತಿ, ಮಿತ್ರರನ್ನು ಕೇಳಿ ಬರುವೆನು. ನಂತರ ನೀನು ಅನುಗ್ರಹಿಸು ಎಂದು ದೇವತೆಯನ್ನು ಪ್ರಾರ್ಥಿಸಿದನು. ಅನಂತರ ಅವನು ಮನೆಯ ಕಡೆಗೆ ಹೊರಟಾಗ ತನ್ನ ಗ್ರಾಮದಲ್ಲಿ ಮಿತ್ರ ಕ್ಷೌರಿಕನನ್ನು ಕಂಡನು. ನಡೆದ ವಿಚಾರವನ್ನೆಲ್ಲಾ ಅವನಿಗೆ ತಿಳಿಸಿ ಏನನ್ನು ಪ್ರಾರ್ಥಿಸಿಕೊಳ್ಳಲಿ ಎಂದು

---

42. **ರಂಗನಾಥ ಶರ್ಮಾ ಎನ್,** ವಿದುರನೀತಿ (ಕುಮಾರವ್ಯಾಸನ ಕರ್ನಾಟ ಭಾರತ ಕಥಾಮಂಜರಿ), ಶ್ಲೋ – 32, ಪು – 14–15(2007), ಕ.ಸಾ.ಪ, ಬೆಂಗಳೂರು.

ಅವನ ಸಲಹೆಯನ್ನು ಕೇಳಿದನು. ಕ್ಷೌರಿಕನು "ಭದ್ರ, ಹಾಗಿದ್ದರೆ ರಾಜ್ಯವನ್ನು ಕೇಳು. ನೀನು ರಾಜನಾಗು, ನಾನು ಮಂತ್ರಿಯಾಗುವೆ. ಇಬ್ಬರೂ ಇಹಪರದಲ್ಲೂ ಸುಖವನ್ನು ಅನುಭವಿಸೋಣ"ಎಂದನು. ನೇಕಾರನು ನಂತರದಲ್ಲಿ ತನ್ನ ಹೆಂಡತಿಯ ಸಲಹೆಯನ್ನು ಕೇಳುತ್ತಾನೆ. ಹೆಂಡತಿ ಹೀಗೆ ಹೇಳುತ್ತಾಳೆ– "ಆರ್ಯಪುತ್ರ, ಕ್ಷೌರಿಕನಿಗೆಲ್ಲಿಯ ಬುದ್ಧಿ? ಅವನ ಮಾತನ್ನು ನಡೆಸಬಾರದು. ಹೊಗಳುವವರೊಂದಿಗೆ, ಸ್ತುತಿಪಾಠಕರೊಂದಿಗೆ, ನೀಚ ಕ್ಷೌರಿಕರೊಂದಿಗೆ, ಬಾಲಕರೊಂದಿಗೆ ಅಥವಾ ಹಸಿದವರೊಂದಿಗೆ ಬುದ್ಧಿವಂತನು ಮಂತ್ರಾಲೋಚನೆ ಮಾಡಬಾರದೆಂದು ಹೇಳಿದ್ದಾರೆ. ಅಲ್ಲದೆ ರಾಜ್ಯವನ್ನು ನಡೆಸುವುದು ಸುಲಭದ ಕೆಲಸವಲ್ಲ. ಬಹಳ ಕಷ್ಟ. ಸಂಧಿ, ಯುದ್ಧ, ಆಸನ, ಆಶ್ರಯ, ದ್ವೈದೀಭಾವ ಮುಂತಾದವು ಎಂದೂ ಮನುಷ್ಯನಿಗೆ ಸುಖ ಕೊಡಲಾರವು. ರಾಮನ ವನವಾಸ, ಬಲಿಯ ಬಂಧನ, ಪಾಂಡುಸುತರ ವನವಾಸ, ಯದುಗಳ ಪರಸ್ಪರ ಯುದ್ಧದಿಂದ ಮರಣ, ನಳರಾಜನ ರಾಜ್ಯ ನಿರ್ಗಮನ, ವಸಿಷ್ಠ ಶಾಪದಿಂದ ಸೌದಸನಿಂದ ರಾಕ್ಷಸ ಯೋನಿಯ ಪ್ರವೇಶ, ಕಾರ್ತವೀರ್ಯಾರ್ಜುನನ ವಧೆ, ರಾವಣನ ನಾಶ ಇವೆಲ್ಲವೂ ರಾಜ್ಯಕ್ಕಾಗಿಯೇ ಆದದ್ದು. ಇದನ್ನೆಲ್ಲಾ ಅರಿತು ಬುದ್ಧಿವಂತನಾದವನು ರಾಜ್ಯವನ್ನು ಇಚ್ಛಿಸಬಾರದು. ಈಗ ನೀನು ನಿತ್ಯವೂ ಮಾಡುತ್ತಿರುವ ಒಂದು ವಸ್ತ್ರದಿಂದ ನಮ್ಮ ಕುಟುಂಬದ ನಿರ್ವಹಣೆ ಆಗುತ್ತಿದೆ. ಈಗ ನಿನಗಾಗಿ ಮತ್ತೆರಡು ಭುಜಗಳನ್ನೂ, ಇನ್ನೊಂದು ತಲೆಯನ್ನೂ ಪ್ರಾರ್ಥಿಸಿಕೋ. ಆಗ ಎರಡು ವಸ್ತ್ರಗಳನ್ನು ಮಾಡಬಹುದು. ಇದರಿಂದ ಸಮೃದ್ಧಿಯಾಗಿ, ಗೌರವದಿಂದ ಕಾಲಕಳೆಯಬಹುದು. ಇಹಪರ ಲೋಕಗಳಲ್ಲಿಯೂ ಸುಖವು ಪ್ರಾಪ್ತವಾಗುವುದು.

ಇಲ್ಲೊಂದು ತಿಳುವಳಿಕೆ ಮಾತಿದೆ:–

उपदेशो हि मूर्खाणां प्रकोपाय न शान्तये ।

पयःपानं भुजङ्गानां केवलं विषवर्धनम् ॥[43]

ಮೂರ್ಖರಿಗೆ ಉಪದೇಶ ಮಾಡುವುದು ಅವರನ್ನು ರೇಗಿಸಲು ಕಾರಣವಾಗುತ್ತದೆಯೇ ಹೊರತು ಸಮಾಧಾನಪಡಿಸುವುದಕ್ಕಲ್ಲ. ಸರ್ಪಗಳಿಗೆ ಹಾಲನ್ನು ಕುಡಿಸುವುದು, ಕೇವಲ ಅವುಗಳ ವಿಷವನ್ನು ವೃದ್ಧಿಸಲು, ಎಂಬುದಾಗಿ. ನೇಕಾರನು ಪತಿವ್ರತಾ ಶಿರೋಮಣಿಯಾದ ತನ್ನ ಹೆಂಡತಿಯ ಮಾತನ್ನು ಒಪ್ಪಿದನು. ಹಾಗೆಯೇ ಅವನು ದೇವತೆಯನ್ನು ಪ್ರಾರ್ಥಿಸಿಕೊಂಡನು. ಕೂಡಲೇ ಎರಡು ತಲೆಗಳು ಮತ್ತು ನಾಲ್ಕು ಭುಜಗಳನ್ನು ಆ ದೇವತೆಯು ಅನುಗ್ರಹಿಸಿದಳು. ನೇಕಾರನು ಬಹಳ ಸಂತೋಷದಿಂದ ಮನೆಗೆ ಬಂದಾಗ, ಇವನನ್ನು ನೋಡಿದ ಜನರು, ವಿಚಿತ್ರ ಅವತಾರದ ಇವನೊಬ್ಬ ರಾಕ್ಷಸನೆಂದು ಭಾವಿಸಿ ಕೋಲು ಕಲ್ಲುಗಳಿಂದ ಹೊಡೆದು

---

43. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಪ್ರ.ತಂ.ಶ್ಲೋ–420, ಪು–273, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಸಾಯಿಸಿಯೇ ಬಿಟ್ಟರು. ಅದಕ್ಕೇ ಹೇಳುವುದು– ಅದೇನೇ ಇದ್ದರೂ ಸಲಹೆಗಳನ್ನು ನಾನಾ ಕಡೆಯಿಂದ ಪಡೆದುಕೊಳ್ಳುವುದು ತಪ್ಪಲ್ಲ. ಆದರೆ ತೀರ್ಮಾನ ತೆಗೆದುಕೊಳ್ಳುವಾಗ ಪೂರ್ವಾಪರ ಚೆನ್ನಾಗಿ ಆಲೋಚಿಸಿ, ವಿಶ್ಲೇಷಿಸಿ, ವಿವೇಚಿಸಿದ ನಂತರವೇ. ಅಂತಿಮವಾಗಿ ಸ್ವಂತ ಬುದ್ಧಿಯಿಂದ ನಿರ್ವಹಿಸಬೇಕು. ಇಲ್ಲವಾದರೆ ನೇಕಾರನ ಪರಿಸ್ಥಿತಿಯೇ ಎಲ್ಲರಿಗೂ. ಸ್ವಂತ ಅರಿವೂ ಇಲ್ಲ, ಮಿತ್ರನ ಸಲಹೆಯನ್ನೂ ಪಾಲಿಸದೆ ಮಂಥಾರಕ ಸತ್ತ. ಚಕ್ರಧರನು ಇದನ್ನು ಕೇಳಿ, ಹೌದು ಅದು ಸತ್ಯವೆಂದು ಹೇಳಿ ಎಲ್ಲಾ ಜನರೂ ನಂಬಿಕೆಗೆ ಅನರ್ಹವಾದ ಆಶಾ ಪಿಶಾಚಿಯ ಸುಳಿಗೆ ಸಿಲುಕಿ ಅಪಹಾಸ್ಯಕ್ಕೊಳಗಾಗುತ್ತಾರೆ ಎಂದನು.[44]

"ಯಾರೋ ಈ ಮಾತನ್ನು ಸರಿಯಾಗಿ ಹೇಳಿದ್ದಾರೆ" ಎಂದು ಮುಂದುವರಿಸಿ–

अनागतवतीं चिन्तामसम्भाव्यां करोति यः ।

स एव पाण्डुरः शेते सोमशर्मपिता यथा ॥[45]

"ಬಂದಿಲ್ಲದ ಮತ್ತು ಸಂಭವವಿಲ್ಲದ ಚಿಂತೆಯನ್ನು ಯಾರು ಮಾಡುತ್ತಾನೋ, ಅವನು ಬಿಳಿಯ ಬಣ್ಣದವನಾಗಿ ಸೋಮಶರ್ಮನ ತಂದೆಯಂತೆ ನಿದ್ರಿಸುತ್ತಾನೆ." ಸುವರ್ಣ ಸಿದ್ಧಿಯು ಇದೇನೆಂದು ಕೇಳಲು ಚಕ್ರಧರನು **ಸೋಮಶರ್ಮನ ತಂದೆಯ ಕಥೆ**ಯನ್ನು ಹೇಳುತ್ತಾನೆ.

ಒಂದು ನಗರದಲ್ಲಿ ಸ್ವಭಾವಕೃಪಣ ಎಂಬ ಬ್ರಾಹ್ಮಣ ವಾಸಿಸುತ್ತಿದ್ದನು. ಅವನು ಭಿಕ್ಷಾಟನೆ ಮಾಡಿ ಪಡೆದ, ತಿಂದು ಉಳಿದ ಹುರಿಹಿಟ್ಟಿನಿಂದ ಒಂದು ಮಡಕೆಯನ್ನು ತುಂಬಿಸಿದನು. ಆ ಮಡಕೆಯನ್ನು ನಾಗರ ಕೋಲಿಗೆ ಸಿಕ್ಕಿಸಿ ಅದರ ಕೆಳಗೆ ಮಂಚ ಹಾಕಿ ಸತತವಾಗಿ ಅದನ್ನೇ ನೋಡುತ್ತ, ರಾತ್ರಿ ಮಲಗಿ ಚಿಂತಿಸಿದನು. ತಿರುಕನ ಕನಸಿನಂತೆ, ಮಡಕೆ ತುಂಬಾ ಹುರಿದಹಿಟ್ಟು ತುಂಬಿದೆ. ದುರ್ಭಿಕ್ಷದ ಸಮಯದಲ್ಲಿ ಇದರಿಂದ ನೂರು ರೂಪಾಯಿ ಸಂಪಾದಿಸಬಹುದು, ಆ ಹಣದಿಂದ ಎರಡು ಆಡನ್ನು ಖರೀದಿಸಬಹುದು, ಆರು ತಿಂಗಳಿಗೆ ಮರಿಹಾಕುವುದರಿಂದ ಆಡುಗಳ ಹಿಂಡೇ ಆಗುವುದು, ಅವುಗಳನ್ನು ಮಾರಿ ಗೋವುಗಳನ್ನು ಕೊಳ್ಳಬಹುದು, ಗೋವುಗಳಿಂದ ಎಮ್ಮೆಗಳು, ಎಮ್ಮೆಗಳಿಂದ ಕುದುರೆಗಳು, ಕುದುರೆಗಳು ಮರಿಮಾಡಿ ಅನೇಕ ಕುದುರೆಗಳಾಗುವುವು, ಅವುಗಳನ್ನು ಮಾರಿ ತುಂಬಾ ಚಿನ್ನ ಕೊಳ್ಳಬಹುದು, ಅದರಿಂದ ಪರಸ್ಪರ ಮುಖಮಾಡಿರುವ ನಾಲ್ಕು ಮನೆಗಳುಳ್ಳ ಭವನವನ್ನು ಖರೀದಿಸುವೆನು. ಆಗ ಒಬ್ಬ ಬ್ರಾಹ್ಮಣನು ನನ್ನ ಮನೆಗೆ ಬಂದು ವಯಸ್ಸಿಗೆ ಬಂದಿರುವ ರೂಪವತಿಯಾದ ಕನ್ಯೆಯನ್ನು ಕೊಡುವನು. ನಂತರ ನನಗೊಬ್ಬ ಮಗ

---

44. **ಭರತ ಬಿ ರಾವ್,** ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ,ತಂ-5, ಪು–274–276, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು–560004

45. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ– 68, ಪು–764, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಹುಟ್ಟುವನು. ಅವನಿಗೆ ಸೋಮಶರ್ಮನೆಂದು ಹೆಸರಿಡುವೆನು. ಅವನು ಅಂಬೆಗಾಲಟ್ಟು ನಡೆಯುತ್ತಾ ಇರುವಾಗ ನಾನು ಅಶ್ವಶಾಲೆಯ ಹಿಂದೆ ಕುಳಿತು ಓದುತ್ತಿರುವೆನು. ಸೋಮಶರ್ಮನು ಕುದುರೆಯ ಗೊರಸಿನ ಹತ್ತಿರದಿಂದ ನನ್ನ ಬಳಿಗೆ ಬರುವನು, ನಾನು ಹೆಂಡತಿಗೆ ಕೋಪದಿಂದ "ಬಾಲಕನನ್ನು ಹಿಡಿದುಕೋ" ಎಂದು ಗದರಿಸುವೆನು, ಮನೆಕೆಲಸದ ಒತ್ತಡದಲ್ಲಿ ಅವಳಿಗೆ ಕೇಳಿಸದೆ, ನಾನು ಎದ್ದು ಅವಳಿಗೆ ಕಾಲಿನಿಂದ ಒದೆಯುವೆನು–ಹಾಗೆ ಕನಸು ಕಾಣುತ್ತಿದ್ದ ಅವನು ತನ್ನ ಕಾಲಿನಿಂದ ಒದ್ದಾಗ, ಮಡಕೆ ಒಡೆದು ತುಂಡಾಗಿ ಹಿಟ್ಟೆಲ್ಲಾ ಅವನ ಮೇಲೆ ಸುರಿದು ಮೈಯೆಲ್ಲಾ ಬಿಳಿಯಾಯಿತು.[46] ಇದೊಂದು ರೀತಿಯಲ್ಲಿ ಬಂದಿಲ್ಲದ ಹಾಗೂ ಸಂಭವವಿಲ್ಲದ ಚಿಂತೆಯಲ್ಲಿನ ಭ್ರಮೆ.

ಈ ಪುಟ್ಟ ಕಥೆಯಲ್ಲಿ ಇಲ್ಲದ ಚಿಂತೆಯನ್ನು ಮಾಡಿ, ಒಂದು ರೀತಿಯ ಹಗಲುಗನಸನ್ನು ಕಂಡು ಸಂಭವವಿಲ್ಲದ ಕಲ್ಪನೆಯನ್ನು ವ್ಯರ್ಥವಾಗಿ ಮಾಡುತ್ತಾನೋ ಅವನು ಏನನ್ನೂ ಸಾಧಿಸಲಾರ ಎಂಬ ಒಳ್ಳೆಯ ನೀತಿ ಇದೆ. ಸುವರ್ಣಸಿದ್ಧಿಹೇಳುತ್ತಾನೆ "ಲೋಭದಿಂದ ಮೋಸಗೊಂಡ ಎಲ್ಲರೂ ದುಃಖಕ್ಕೊಳಗಾಗುತ್ತಾರೆ." ಹೀಗೊಂದು ಉಕ್ತಿಯಿದೆ:–

यो लौल्यात् कुरुते कर्म नैवोदर्कमवेक्षते ।

विडम्बनामवाप्नोति स यथा चन्द्रभूपतिः ॥[47]

ಮುಂದಾಲೋಚನೆಯಿಲ್ಲದೆ, ವಿವೇಚನೆಯೂ ಇಲ್ಲದೆ ಚಂಚಲತೆಯಿಂದ ಯಾರು ಕೆಲಸ ಮಾಡುವರೋ, ಅವರು ಆಪತ್ತಿಗೆ ಗುರಿಯಾಗುವರು. ಎಂದು ಸುವರ್ಣಸಿದ್ಧಿಯು **ಮಂಗನಿಂದ ತೊಂದರೆಗೊಳಗಾದ ಚಂದ್ರಭೂಪತಿಯ ಕಥೆ**ಯನ್ನು ಹೇಳಿದನು. ಈ ಕಥೆಯಲ್ಲಿ ಚಂದ್ರ ಎಂಬ ರಾಜನು ಒಂದು ನಗರದಲ್ಲಿ ವಾಸವಾಗಿದ್ದನು. ಅವನ ಪುತ್ರರು ಮಂಗಗಳ ಗುಂಪಿನೊಂದಿಗೆ ಆಟವಾಡಿಕೊಂಡು ಅವುಗಳ ಗುಂಪಿಗೆ ನಿತ್ಯವೂ ರುಚಿರುಚಿಯಾದ ಭಕ್ಷ್ಯ ಭೋಜ್ಯಗಳನ್ನು ಕೊಟ್ಟು ಬೆಳೆಸುತ್ತಿದ್ದರು. ಈ ವಾನರರ ಒಡೆಯನು ಶುಕ್ರಾಚಾರ್ಯ, ಬೃಹಸ್ಪತಿ ಹಾಗೂ ಚಾಣಕ್ಯರ ನೀತಿಶಾಸ್ತ್ರವನ್ನು ಬಲ್ಲವನಾಗಿದ್ದು ಅದರಂತೆ ತಾನೂ ಪಾಲಿಸುತ್ತಾ ಇತರರಿಗೂ ಅದನ್ನೇ ಪಾಲಿಸುವಂತೆ ಕಲಿಸುತ್ತಿದ್ದನು. ರಾಜಗೃಹದ ರಾಜಕುಮಾರರ ವಾಹನವಾಗಿ ಟಗರುಗಳ ಗುಂಪನ್ನು ಸಾಕಿದ್ದರು. ಅದರಲ್ಲೊಂದು ಟಗರು ಜಿಹ್ವಾಚಾಪಲ್ಯದಿಂದ ಆಗಾಗ್ಗೆ ಅಡಿಗೆಮನೆಯನ್ನು ಪ್ರವೇಶಿಸಿ ಕಂಡದ್ದನ್ನೆಲ್ಲಾ ತಿನ್ನುತ್ತಿತ್ತು. ಅದಕ್ಕೆ ಅಡಿಗೆಯವರು ಕಟ್ಟಿಗೆ, ಮಣ್ಣಿನಪಾತ್ರೆ,

---

46. **ಭರತ ಬಿ ರಾವ್,** ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ,ತಂ–5, ಪು–2277–278,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು–560004
47. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ– 69, ಪು–766, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಕಂಚಿನ ಪಾತ್ರೆ ಹೀಗೆ ಸಿಕ್ಕಿದ್ದರಲ್ಲಿ ಹೊಡೆಯುತ್ತಿದ್ದರು. ಅದನ್ನು ವಾನರನು ನೋಡಿ ವಾನರನೊಡೆಯನು ಚಿಂತಿಸಿದನು. ಅಡಿಗೆಯವರ ಹಾಗೂ ಟಗರಿನ ಜಗಳ ವಾನರರ ನಾಶಕ್ಕೆ ಕಾರಣವಾಗುತ್ತದೆ. ಒಂದು ವೇಳೆ ಏನೂ ಸಿಗದೆ, ಉರಿಯುತ್ತಿರುವ ಕಟ್ಟಿಗೆಯಿಂದ ಹೊಡೆದರೆ ಆ ಟಗರು ಅಗ್ನಿಯಿಂದ ಸುಟ್ಟು ಹೋಗುತ್ತದೆ. ಉರಿಯುತ್ತಿರುವ ಅದು ಸಮೀಪದಲ್ಲಿರುವ ಅಶ್ವಶಾಲೆಯನ್ನು ಪ್ರವೇಶಿಸುತ್ತದೆ. ಆಗ ತುಂಬಾ ಹುಲ್ಲುತುಂಬಿರುವ ಅಶ್ವಶಾಲೆಯು ಹೊತ್ತಿ ಉರಿಯುತ್ತದೆ. ನಂತರ ಕುದುರೆಗಳು ಸುಟ್ಟು ಹೋಗುತ್ತವೆ ಅಶ್ವಶಾಸ್ತ್ರವನ್ನು ಬರೆದ ಶಾಲಿಹೋತ್ರನು ಹೀಗೆ ಹೇಳಿದ್ದಾನೆ.[48]

"ಕುದುರೆಯ ಅಗ್ನಿಯಿಂದ ಸುಟ್ಟ ದೋಷವು ಮಂಗದ ಕೊಬ್ಬಿನಿಂದ ಶಮನವಾಗುತ್ತದೆ. ಖಂಡಿತವಾಗಿಯೂ ಹೀಗೇ ಆಗುತ್ತದೆ." ಎಲ್ಲಾ ವಾನರರನ್ನೂ ಒಂದು ಸಭೆ ಕರೆದು ರಹಸ್ಯವಾಗಿ ಹೇಳಿದನು "ಎಲ್ಲಿ ಟಗರಿನೊಂದಿಗೆ ಅಡಿಗೆಯವರ ಜಗಳವಾಗುತ್ತದೆಯೋ ಅಲ್ಲಿ ಖಂಡಿತವಾಗಿಯೂ ವಾನರರ ನಾಶವಾಗುತ್ತದೆ; ಕಾರಣವಿಲ್ಲದೆ ಎಲ್ಲಿ ನಿತ್ಯವೂ ಜಗಳವಾಗುತ್ತದೋ ಅಂತಹ ಮನೆಯನ್ನು ಜೀವಿಸಲು ಬಯಸುವವನು ದೂರದಿಂದಲೇ ತ್ಯಜಿಸಿಬಿಡಬೇಕು; ಕಲಹಗಳಿಂದ ಭವನಗಳು ನಾಶವಾಗುತ್ತವೆ; ಕೆಟ್ಟ ಮಾತಿನಿಂದ ಮೈತ್ರಿಯು ನಾಶವಾಗುತ್ತದೆ; ಕೆಟ್ಟ ಕಾರ್ಯಗಳಿಂದ ಮನುಷ್ಯರ ಯಶಸ್ಸು ನಾಶವಾಗುತ್ತದೆ. ಆದ್ದರಿಂದ ನಮ್ಮೆಲ್ಲರ ನಾಶವಾಗುವ ಮೊದಲೇ ಈ ರಾಜಗೃಹವನ್ನು ಬಿಟ್ಟು ಕಾಡಿಗೆ ಹೋಗೋಣ." ವಾನರರೆಲ್ಲರೂ ಈ ನಂಬಲನರ್ಹವಾದ ಮಾತುಗಳನ್ನು ಕೇಳಿ ಅಹಂಕಾರದಿಂದ ನಕ್ಕು ಹೇಳಿದರು:– "ನಿನಗೆ ವಯಸ್ಸಾದ್ದರಿಂದ ಅರುಳು–ಮರುಳಾಗಿದೆ. ಅದಕ್ಕಾಗಿ ಹೀಗೆ ಮಾತನಾಡುತ್ತಿದ್ದೀಯೆ. ಬಾಯಿಯಲ್ಲಿ ಹಲ್ಲಿಲ್ಲದೆ, ನಿತ್ಯವೂ ಎಂಜಲು ಸುರಿಸುತ್ತಿರುವ ಬಾಲಕರಿಗೆ ಹಾಗೂ ವಿಶೇಷವಾಗಿ ವೃದ್ಧರಿಗೆ ಯಾವ ವಿಷಯದಲ್ಲೂ ಬುದ್ಧಿಯು ಕೆಲಸ ಮಾಡುವುದಿಲ್ಲ. ಸ್ವರ್ಗ ಸಮಾನವಾದ ವಿವಿಧ ಭೋಗಗಳಿರುವ, ರಾಜಕುಮಾರರು ತಮ್ಮ ಕೈಯಿಂದಲೇ ಅಮೃತಸದೃಶವಾದ ಭಕ್ಷ್ಯ ವಿಶೇಷಗಳನ್ನು ಕೊಡುತ್ತಿರುವ ಈ ರಾಜಗೃಹವನ್ನು ಬಿಟ್ಟು ಕಾಡಿನಲ್ಲಿ ಒಗರು, ಕಟು, ಕಾರ, ಕಹಿ, ಉಪ್ಪುಗಳಿಂದ ಕೂಡಿದ ಒರಟಾದ ಹಣ್ಣುಗಳನ್ನು ತಿನ್ನಲು ನಾವು ಬರುವುದಿಲ್ಲ."

ಇದನ್ನು ಕೇಳಿ ದುಃಖಗೊಂಡ ವಾನರರ ಮುಖಂಡನು– "ಅಯ್ಯೋ ಮೂರ್ಖರೇ, ನಿಮ್ಮ ಈ ರೀತಿಯ ಸುಖದ ಪರಿಣಾಮವನ್ನು ನೀವು ತಿಳಿದಿಲ್ಲ. ರಸವತ್ತಾದ ಆಹಾರವನ್ನು ತಿನ್ನುವ ಈ ಸುಖದ ಪರಿಣಾಮವು ಮುಂದೆ ವಿಷದಂತಿರುತ್ತದೆ. ನನ್ನ ಕುಲದ ನಾಶವನ್ನು ನಾನು ಸ್ವತಃ ನೋಡಲಾರೆನು. ಈಗಲೇ ನಾನು ಕಾಡಿಗೆ ನಡೆಯುವೆನು.

48. **ಭರತ ಬಿ ರಾವ್**, ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ,ತಂ–5, ಪು–278–282,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ.44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು–560004

मित्रं व्यसनसंप्राप्तं स्वस्थानं परपीडितम् ।

धन्यास्ते ये न पश्यन्ति देशभङ्गं कुलक्षयम् ॥[49]

ಮಿತ್ರರ ದುಃಖವನ್ನು, ಪರರ ಆಕ್ರಮಣಕ್ಕೆ ಒಳಗಾದ ಸ್ವಸ್ಥಾನವನ್ನು, ತಮ್ಮ ದೇಶ ಹಾಗೂ ಕುಲದ ನಾಶವನ್ನು ನೋಡದವರೇ ಧನ್ಯರು." ಹೀಗೆ ಹೇಳಿ, ವಾನರ ನಾಯಕನು ಕಾಡಿಗೆ ಹೊರಟೇಬಿಟ್ಟನು.[50]

ನಂತರದಲ್ಲಿ ಎಂದಿನಂತೆ ಟಗರು ಅಡಿಗೆಮನೆಗೆ ಪ್ರವೇಶ ಮಾಡಿತು. ಅಡಿಗೆಯವನು ಅದನ್ನು ಹೊಡೆಯಲು ಏನೂ ಸಿಕ್ಕದಿದ್ದಾಗ ಅರ್ದ ಉರಿದ ಕಟ್ಟಿಗೆಯೇ ಕೈಗೆ ಸಿಕ್ಕಿತು. ಅದರಿಂದಲೇ ಹೊಡೆದೂಬಿಟ್ಟನು. ಉರಿಯುತ್ತಿರುವ ದೇಹವುಳ್ಳ ಅದು ಶಬ್ದವನ್ನು ಮಾಡುತ್ತಾ, ಅಶ್ವಶಾಲೆಯನ್ನೇ ಹೊಕ್ಕಿತು. ಹುಲ್ಲಿರುವ ಅಲ್ಲಿನ ನೆಲದಲ್ಲಿ ಹೊರಳಾಡಿತು. ಬೆಂಕಿಯು ಹೊತ್ತಿಕೊಂಡಿತು. ಕೆಲವು ಕುದುರೆಗಳ ಕಣ್ಣುಗಳು ಸುಟ್ಟು ಸಿಡಿದು ಹೋದವು. ಇನ್ನು ಕೆಲವು ಕುದುರೆಗಳು ಹಗ್ಗವನ್ನು ಮುರಿದುಕೊಂಡು, ಅರ್ಧಸುಟ್ಟ ದೇಹದೊಂದಿಗೆ ಅಲ್ಲಲ್ಲಿ ಓಡಾಡುತ್ತಾ, ಕೆನೆಯುತ್ತಾ ಎಲ್ಲಾ ಜನಸಮೂಹವನ್ನು ಉದ್ವಿಗ್ನಗೊಳಿಸಿದವು. ಆನಂತರ ದುಃಖಗೊಂಡ ರಾಜನು ಅಶ್ವಚಿಕಿತ್ಸಕನನ್ನು ಕರೆಸಿ ಉಪಶಮನವನ್ನು ಕೇಳಿದನು.

कपीनां मेदसा दोषो वह्निदाहसमुद्भवः ।

अश्वानां नाशमभ्येति तमः सूर्योदये यथा ॥[51]

ಚಿಕಿತ್ಸಕನು ಶಾಸ್ತ್ರ ನೋಡಿ ಹೇಳಿದನು. ದೇವ, ಪೂಜ್ಯ ಶಾಲಿಹೋತ್ರನು ಹೀಗೆ ಹೇಳಿರುವನು "ಸೂರ್ಯೋದಯವು ಕತ್ತಲನ್ನು ಹೇಗೆ ನಾಶಮಾಡುತ್ತದೋ ಹಾಗೆ ಕಪಿಗಳ ಕೊಬ್ಬು ಕುದುರೆಗಳಲ್ಲಿ ಬೆಂಕಿಯಿಂದ ಸುಟ್ಟ ದೊಷವನ್ನು ಹೋಗಲಾಡಿಸುತ್ತದೆ. ಹಾಗಾಗಿ ಇವುಗಳು ಸುಟ್ಟ ದೋಷದಿಂದ ಸಾಯುವ ಮೊದಲೇ ಈ ಚಿಕಿತ್ಸೆಯನ್ನು ಬೇಗನೆ ಮಾಡಿಸಿ. ಆ ತಕ್ಷಣ ರಾಜನು ಎಲ್ಲಾ ಕಪಿಗಳನ್ನು ಕೊಲ್ಲಲು ಆಜ್ಞೆ ಮಾಡಿದನು. ಎಲ್ಲಾ ವಾನರರೂ ಕೊಲ್ಲಲ್ಪಟ್ಟರು. ವಾನರ ಮುಖಂಡನು ತನ್ನ ಮನೆಯವರು ಎಲ್ಲಾ ಬಂಧುಗಳ ನಾಶವನ್ನು ಕೇಳಿ ಬಹಳ ದುಃಖಗೊಂಡನು. ಊಟವನ್ನು ಬಿಟ್ಟು ಕಾಡಿನಲ್ಲಿ ಅಲೆಯುತ್ತಾ, ಹೀಗೆ ಯೋಚಿಸಿದನು. "ಈ ದುಷ್ಟ ರಾಜನ ಮೇಲೆ ನಾನು ಹೇಗೆ ಸೇಡನ್ನು ತೀರಿಸಿಕೊಳ್ಳಲಿ? ಯಾರು ಭಯದಿಂದ, ಅಥವಾ ಮತ್ತ್ಯಾವುದೋ ಪ್ರಯೋಜನ ಕಾರಣದಿಂದ ತನ್ನ ವಂಶದವರಿಗಾದ ಅವಮಾನವನ್ನು ಕ್ಷಮಿಸುವನೋ

49. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ- ಶ್ಲೋ-74, ಪು-771, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

50. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ-ಅಪರೀಕ್ಷಿತಕಾರಕಂ, ಪು-224-226, (2015) ವರ್ಣಿಲ, 39/2-11,ಕಲ್ಯಾಣಿ ಗಾರ್ಡನ್, ಬನಶಂಕರಿ 1ನೇ ಹಂತ, ಬೆಂಗಳೂರು-560050

51. **ಸುಧಾಕರ್ ಮಾಲವೀಯ,** ಸಂಪಾ-ಅನು,ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ,ಅಪರೀಕ್ಷಿತಕಾರಕ- ಶ್ಲೋ-75, ಪು-772, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಅವನನ್ನು ಪುರುಷಾಧಮನೆಂದು ತಿಳಿಯತಕ್ಕದ್ದು." ಹೀಗೆ ಬಾಯಾರಿಕೆಯಿಂದ ಅಲೆಯುತ್ತಿದ್ದ ಆ ವಾನರನು ಕಮಲದ ಸಮೂಹದಿಂದ ಶೋಭಿತವಾದ ಒಂದು ಸರೋವರವನ್ನು ತಲುಪಿದನು. ಅದನ್ನು ಸೂಕ್ಷ್ಮವಾಗಿ ನೋಡಿ, ಈ ಸರೋವರದಲ್ಲಿ ದುಷ್ಟ ಮೊಸಳೆಯೊಂದಿರಬಹುದೆಂದು ಅಂದಾಜು ಮಾಡಿದನು. ದೂರದಿಂದಲೇ ಕಮಲದ ನಾಳದಿಂದ ನೀರನ್ನು ಕುಡಿದನು. ಆಗ ಸರೋವರದ ಮಧ್ಯದಲ್ಲಿ ಕಂಠದಲ್ಲಿ ರತ್ನಮಾಲೆಯನ್ನು ಧರಿಸಿದ್ದ ರಾಕ್ಷಸನೊಬ್ಬ ಎದ್ದು ಬಂದು ಹೇಳಿದನು "ಈ ನೀರನ್ನು ಯಾರು ಪ್ರವೇಶಿಸುವರೋ ಅವರು ನನಗೆ ಭೋಜನವಿದ್ದಂತೆ. ನೀನು ದೂರದಿಂದಲೇ ನೀರನ್ನು ಕುಡಿದ ಅತಿಧೂರ್ತನು. ನಿನ್ನಂತಹವನನ್ನು ನಾನು ಈ ಹಿಂದೆ ನೋಡಿಯೇ ಇರಲಿಲ್ಲ. ನನಗೆ ಸಂತೋಷವಾಗಿದೆ. ನಿನಗೇನು ಬೇಕೋ ಕೇಳಿಕೋ ಎಂದನು.[52] ಅದಕ್ಕೆ ವಾನರನು ಬುದ್ಧಿವಂತಿಕೆಯಿಂದ ನೀನು ಎಷ್ಟು ತಿನ್ನಬಲ್ಲೆ? ರಾಕ್ಷಸನು ಇಂತೆಂದನು." ನೀರನ್ನು ಪ್ರವೇಶಿಸಿದ ನೂರು, ಸಾವಿರ, ಹತ್ತು ಸಾವಿರ ಮತ್ತು ಲಕ್ಷ ಜನರನ್ನೂ ತಿನ್ನಬಲ್ಲೆ. ಆದರೆ ನೀರಿನಿಂದ ಹೊರಗೆ ಒಂದು ನರಿಯೂ ನನ್ನನ್ನು ಹೆದರಿಸುತ್ತದೆ. ವಾನರನು "ಒಬ್ಬ ರಾಜನ ಜೊತೆ ನನ್ನ ಶತ್ರುತ್ವವಿದೆ. ನೀನು ನಿನ್ನ ರತ್ನಮಾಲೆಯನ್ನು ನನಗೆ ಕೊಟ್ಟರೆ ನನ್ನ ಮಾತಿನ ಮೋಡಿಯಿಂದ ಪರಿವಾರ ಸಮೇತವಾಗಿ ಆ ರಾಜನನ್ನು ಮೋಹಗೊಳಿಸಿ ಈ ಸರೋವರವನ್ನು ಪ್ರವೇಶಿಸುವಂತೆ ಮಾಡುವೆನು. ರಾಕ್ಷಸನು ನಂಬಿ ವಾನರನಿಗೆ ರತ್ನಮಾಲೆಯನ್ನು ಕೊಟ್ಟು, "ಮಿತ್ರ, ಉಚಿತವಾದುದನ್ನು ಮಾಡು" ಎಂದನು. ವಾನರನು ಕೊರಳಲ್ಲಿ ರತ್ನಮಾಲೆಯನ್ನು ಧರಿಸಿ ಮರಗಳಲ್ಲಿ ಮತ್ತು ಎತ್ತರವಾದ ಭವನದಲ್ಲಿ ಓಡಾಡುತ್ತಿದ್ದನು. ಇದನ್ನು ನೋಡಿದ ಜನರೆಲ್ಲಾ ಸೂರ್ಯನನ್ನೂ ನಾಚಿಸುವಂತಹ ಹೊಳಪಿನ ರತ್ನಮಾಲೆಯನ್ನು ಕಂಡು ಬೆರಗಾಗಿ ವಿಚಾರಿಸಿದರು. ಆಗ ವಾನರ ಹೇಳುತ್ತಾನೆ– "ಒಂದು ಅರಣ್ಯದಲ್ಲಿ ಕುಬೇರನು ನಿರ್ಮಿಸಿರುವ ಗೋಪ್ಯವಾದ ಒಂದು ಮಹಾಸರೋವರವಿದೆ. ಅದರಲ್ಲಿ ಯಾರು ರವಿವಾರದಂದು ಸೂರ್ಯನು ಅರ್ದ ಉದಯಿಸಿರುವಾಗ ಸ್ನಾನವನ್ನು ಮಾಡುವರೋ ಅವರು ಕುಬೇರನ ಕೃಪೆಗೊಳಗಾಗಿ ರತ್ನಮಾಲೆಯು ಶೋಭಿಸುತ್ತಿರುವ ಕಂಠವುಳ್ಳವರಾಗಿ ಹೊರಗೆ ಬರುವರು. ಇದು ರಾಜನಿಗೂ ತಿಳಿದು ವಾನರನನ್ನು ಆಸ್ಥಾನಕ್ಕೆ ಕರೆಸಿ ಅದರ ಸತ್ಯತೆಯ ಬಗ್ಗೆ ವಿಚಾರಿಸಿದನು. ಅದಕ್ಕೆ ವಾನರನು ರತ್ನಮಾಲೆಯನ್ನು ರಾಜನಿಗೆ ತೋರಿಸಿ, ವಿಚಾರವನ್ನು ಸ್ಪಷ್ಟಪಡಿಸಿದನು. ರಾಜನು ದುರಾಸೆಯಿಂದ ತಾನೇ ಪರಿವಾರಸಮೇತವಾಗಿ ಹೊರಡಲು ಸಿದ್ಧನಾದನು. ಈ ಸಂದರ್ಭದಲ್ಲಿ ಒಂದು ಉಕ್ತಿ ಹೀಗಿದೆ. "ಎಲೈ ತುಷ್ಣೇ, ದೇವೀ, ನಿನ್ನ ಮಹಿಮೆಗೆ ಒಳಗಾದ ಧನಿಕರು ಅಕಾರ್ಯಗಳಲ್ಲಿ ತೊಡಗುತ್ತಾರೆ ಮತ್ತು ಹೋಗಬಾರದ ಕಡೆ ಅಲೆಯುತ್ತಾರೆ,

---

52. **ಭರತ ಬಿ ರಾವ್**, ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ, ತಂ–5, ಪು–278–282, (2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ., 44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು–560004

इच्छति शती सहस्त्रं; सहस्त्री लक्षमीहते ।

लक्षाधिपस्तथा राज्यं, राज्यस्थः स्वर्गमीहते ॥[53]

ನೂರು ಉಳ್ಳವನು ಸಾವಿರವನ್ನು ಬಯಸುವನು, ಸಾವಿರವುಳ್ಳವನು ಲಕ್ಷವನ್ನು, ಲಕ್ಷಾಧಿಪತಿಯು ರಾಜ್ಯವನ್ನು, ರಾಜ್ಯಾಧಿಪತಿಯು ಸ್ವರ್ಗವನ್ನೂ ಬಯಸುವನು. ಮನುಷ್ಯನಿಗೆ ವಯಸ್ಸಾದಾಗ ಕೂದಲುಗಳು ಹಣ್ಣಾಗುತ್ತವೆ. ಹಲ್ಲುಗಳು ಉದುರುತ್ತವೆ ಮತ್ತು ದೃಷ್ಟಿಯು ಮಾಸುತ್ತದೆ ಆದರೆ ಲೋಭ ಮಾತ್ರ ಯೌವನಾವಸ್ಥೆಯಲ್ಲಿಯೇ ಇರುತ್ತದೆ." ಎಂದು.

ಸರೋವರವನ್ನು ತಲುಪಿ ಮುಂಜಾನೆಯ ಸಮಯದಲ್ಲಿ ವಾನರನು ರಾಜನಿಗೆ ಹೇಳುತ್ತಾನೆ. "ಸೂರ್ಯನು ಅರ್ಧ ಉದಯಿಸಿದಾಗ ಸಿದ್ಧಿಸಮಯದಲ್ಲಿ ನಿಮ್ಮನ್ನು ಬಿಟ್ಟು ಉಳಿದವರೆಲ್ಲ ಒಮ್ಮೆಗೇ ಪ್ರವೇಶಿಸಲಿ. ನಂತರ ನಿಮ್ಮನ್ನು ನಾನು ಹಿಂದೆ ನೋಡಿದ ಸ್ಥಳಕ್ಕೆ ಕರೆದೊಯ್ದು ರತ್ನಮಾಲೆಯನ್ನು ತೋರಿಸುತ್ತೇನೆ." ಎಂದು ಬಹಳ ಯೋಜಿತವಾಗಿ ತಿಳಿಸಿದನು. ಆಗ ಪರಿವಾರದವರೆಲ್ಲಾ ಮೊದಲು ಸರೋವರವನ್ನು ಪ್ರವೇಶಿಸಿದಾಗ ರಾಕ್ಷಸನಿಂದ ತಿನ್ನಲ್ಪಟ್ಟರು. ಬಹಳ ಹೊತ್ತಾದರೂ ಹೊರಗೆ ಬಾರದಿದ್ದಾಗ ರಾಜನು ವಾನರನನ್ನು ಇದೇನೆಂದು ವಿಚಾರಿಸಿದನು. ಆಗ ವಾನರನು ಬೇಗನೆ ಮರವನ್ನೇರಿ ಹೇಳುತ್ತಾನೆ "ಎಲೈ ದುಷ್ಟ ರಾಜನೇ, ನೀರಿನೊಳಗಿರುವ ರಾಕ್ಷಸನು ನಿನ್ನ ಪರಿವಾರದವರನ್ನೆಲ್ಲಾ ಭಕ್ಷಿಸಿಯಾಯಿತು. ನನ್ನ ಕುಲವನ್ನು ನಾಶಮಾಡಿದ್ದಕ್ಕೆ ಸೇಡನ್ನು ತೀರಿಸಿಕೊಂಡಿದ್ದೇನೆ. ನೀನು ಎಷ್ಟಾದರೂ ನನಗೆ ಸ್ವಾಮಿಯೆಂದು ನಿನ್ನನ್ನು ಸರೋವರಕ್ಕೆ ಕಳುಹಿಸಲಿಲ್ಲ. ಅಪಕಾರವನ್ನು ಮಾಡಿದವರಿಗೆ ಪ್ರತ್ಯುಪಕಾರವನ್ನು ಮಾಡಬೇಕು ಹಿಂಸೆಯನ್ನು ಮಾಡಿದವರಿಗೆ ಪ್ರತಿ ಹಿಂಸೆಯನ್ನು ಮಾಡಬೇಕು. ದುಷ್ಟನ ವಿಷಯದಲ್ಲಿ ದುಷ್ಟತನವನ್ನೇ ತೋರಬೇಕು. ಇದರಲ್ಲಿ ನಾನು ಯಾವ ದೋಷವನ್ನೂ ಕಾಣೆನು. ನೀನು ನನ್ನ ಕುಲವನ್ನು ನಾಶಮಾಡಿದೆ, ಹಾಗಾಗಿ ನಾನು ನಿನ್ನ ಕುಲವನ್ನು ನಾಶಮಾಡಿದೆ." ಸುವರ್ಣಸಿದ್ಧಿಯು ಕಥೆಯನ್ನು ಮುಂದುವರೆಸುತ್ತಾ, ಮನೆಗೆ ಹೊರಡಲು ಅನುಮತಿಯನ್ನು ಕೋರಿದನು. ಚಕ್ರಧರನು :-

यस्त्यक्त्वा सापदं मित्रं याति निष्ठुरतां सुहृत् ।

कृतघ्नस्तेन पापेन नरके यात्यसंशयम् ॥[54]

"ಭದ್ರ, ಆಪತ್ಕಾಲಕ್ಕಾಗಿಯೇ ಧನ ಹಾಗೂ ಸ್ನೇಹವನ್ನು ಸಂಗ್ರಹಿಸುವರು ನನ್ನನ್ನು ಈ ಪರಿಸ್ಥಿತಿಯಲ್ಲಿ

---

53. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ- ಶ್ಲೋ-78, ಪು-777, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

54. **ಸುಧಾಕರ್ ಮಾಲವೀಯ,** ಸಂಪಾ-ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ- ಶ್ಲೋ-82, ಪು-780, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಬಿಟ್ಟುಹೋದರೆ ಹೇಗೆ? ಎನ್ನುತ್ತಾನೆ. ಸುವರ್ಣ ಸಿದ್ಧಿಯು, "ನೀನು ಹೇಳುವುದು ಸತ್ಯ. ಆದರೆ ನಿನ್ನ ಮುಖದ ವಿಕಾರ ಹಾಗೂ ವೇದನೆಯನ್ನು ನೋಡಿದರೆ ಬೇಗ ಇಲ್ಲಿಂದ ಹೋಗಿಬಿಡಬೇಕು, ಇಲ್ಲದಿದ್ದರೆ ನನಗೂ ಏನಾದರೂ ಅನರ್ಥವಾದೀತು ಎಂಬ ಚಿಂತೆಯು ಉಂಟಾಗುತ್ತಿದೆ." ಹೀಗೊಂದು ಮಾತು ಕಥೆಯಲ್ಲಿ ಬರುತ್ತದೆ–

यादृशी वदनच्छाया दृश्यते तव वानर ।

विकालेन गृहीतोऽसि यः परैति स जीवति ॥[55]

"ಎಲೈ ವಾನರ ನಿನ್ನ ಮುಖದಲ್ಲಿ ಯಾವ ರೀತಿಯ  ಖಳೆಯು ತೋರುತ್ತಿದೆಯೋ ಅದರಿಂದ ನೀನು ವಿಕಾಲನ ವಶದಲ್ಲಿರುವೆ ಎಂದು ತಿಳಿಯುತ್ತದೆ. ಹೀಗಿದ್ದಾಗ ಓಡಿ ಹೋದವನು ಬದುಕುಳಿಯುತ್ತಾನೆ." ಚಕ್ರಧರನು ಅದು ಏನೆಂದು ಕೇಳಲು ಸುವರ್ಣಸಿದ್ಧಿಯು **"ವಿಕಾಲ ರಾಕ್ಷಸ–ವಾನರ ಕಥೆ"** ಹೇಳುತ್ತಾನೆ. ಈ ಕಥೆಯಲ್ಲಿ ಭ್ರಮೆ ಮತ್ತು ವಾಸ್ತವದ ಕುರಿತು ಸೊಗಸಾದ ಚಿತ್ರಣ ನಿರೂಪಿಸಲ್ಪಟ್ಟಿದೆ. ಮನುಷ್ಯರಿಗೆ ಶುಭಾಶುಭ ಫಲಗಳು ಭಾಗ್ಯದನುಸಾರ ಸಿಗುತ್ತವೆ. ಯಾರಿಗೆ ತ್ರಿಕೂಟಪರ್ವತವೇ ಕೋಟೆಯಾಗಿತ್ತೋ, ಸಮುದ್ರವೇ ದುರ್ಗದ ಸೀಮೆಯಾಗಿತ್ತೋ, ಯೋಧರಾದ ರಾಕ್ಷಸರಿದ್ದರೋ, ಕುಬೇರನಿಗಿಂತ ಅಧಿಕ ಸಂಪತ್ತಿತ್ತೋ, ಶುಕ್ರಾಚಾರ್ಯನಿಂದಲೇ ನೀತಿಶಾಸ್ತ್ರವು ಹೇಳಿಕೊಡಲ್ಪಟ್ಟಿತ್ತೋ, ಅಂಥಹ ರಾವಣನು ದೈವವಶದಿಂದ ನಾಶವಾದನು.

अन्धकः कुब्जकश्चैव त्रिस्तनी राजकन्यका ।

त्रयोप्यन्यायतः सिद्धाः सम्मुखे कर्मणि स्थिते ॥[56]

ಒಬ್ಬ ಕುರುಡ, ಒಬ್ಬ, ಕುಬ್ಜ ಹಾಗೂ ಒಬ್ಬಳು ಮೂರು ಸ್ಥನಗಳನ್ನುಳ್ಳ ರಾಜಕನ್ಯೆಯು ದೈವವು ಅನುಕೂಲವಾಗಿದ್ದಾಗ ಕೆಟ್ಟ ಕೆಲಸವನ್ನು ಮಾಡಿ ಕೂಡ ಸಫಲತೆಯನ್ನು ಪಡೆದರು. ಎಂದು ಚಕ್ರಧರನು ಒಂದು ಉಕ್ತಿಯನ್ನು ಹೇಳುತ್ತಾನೆ. ಸುವರ್ಣಸಿದ್ಧಿಯು ಅದೇನೆಂದು ಕೇಳಲು, **"ಒಬ್ಬ ಕುರುಡ ಒಬ್ಬ ಕುಬ್ಜ ಹಾಗೂ ಒಬ್ಬಳು ಮೂರು ಸ್ಥನಗಳುಳ್ಳ ರಾಜಕನ್ಯೆಯ ಕಥೆ"**ಯನ್ನು ಹೇಳುತ್ತಾನೆ.

ಇನ್ನೊಂದು ಪುಟ್ಟ ಕಥೆ **ರಾಕ್ಷಸನಿಂದ ಹಿಡಿಯಲ್ಪಟ್ಟ ಬ್ರಾಹ್ಮಣನ ಕಥೆ**ಯಲ್ಲಿ ಪ್ರಶ್ನಿಸುವುದು ಏಕೆ ಮುಖ್ಯ ಎಂಬ ಅಂಶವನ್ನು ರಾಜನಿಗೆ ದ್ವಾರಪಾಲಕರು ಹೇಳುತ್ತಾರೆ. ಇದರಲ್ಲಿ ಒಂದು ಜಾಗೃತಿ ಇದೆ. ಅದೇನೆಂದರೆ, ಪ್ರಶ್ನಿಸಿ ಅನುಮಾನವನ್ನು ಪರಿಹರಿಸಿಕೊಳ್ಳುವ, ಪರೀಕ್ಷಿಸಿ ಖಚಿತಪಡಿಸಿಕೊಳ್ಳುವ, ಆಮೂಲಾಗ್ರವಾಗಿ

55. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ–83, ಪು–781, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

56. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ–86, ಪು–786, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಕೇಳಿಸಿಕೊಂಡು ಅದರಂತೆ ನಡೆವ ಜನರು ಸೂರ್ಯೋದಯ ಕಾಲದಲ್ಲಿ ತಾವರೆ ಅರಳುವ ಹಾಗೆ ಮನಸ್ಸನ್ನು ವಿಕಾಸಗೊಳಿಸುತ್ತಾರೆ.

पृच्छकेन सदा भाव्यं पुरुषेण विजानता ।

राक्षसेन्द्रगृहीतोऽपि प्रश्नान्मुक्तो द्विजः पुरा ॥[57]

ಈ ಪ್ರಶ್ನಿಸುವ ಗುಣದಿಂದಲೇ ರಕ್ಕಸನ ಹಿಡಿತದಿಂದ ದ್ವಿಜನೊಬ್ಬ ಪಾರಾಗಿದ್ದನೆಂಬ ವಿಚಾರ. ಆದ್ದರಿಂದ ಬುದ್ಧಿವಂತನು ಸದಾ ಪ್ರಶ್ನೆಗಳನ್ನು ಕೇಳುತ್ತಿರಬೇಕು. ವಿವೇಕ ಇರುವ ಮನುಷ್ಯನು ತಾನು ಮಾಡಬೇಕೆಂದಿರುವ ಕೆಲಸದ ಬಗ್ಗೆ ಮೂರನೆಯವರೊಂದಿಗೆ ಪ್ರಶ್ನಿಸಬೇಕು, ಸಮಾಲೋಚನೆ ನಡೆಸಬೇಕು. ಇಂಥಹ ಸೂಕ್ತಿಗಳು, ಸುಭಾಷಿತಗಳು ನೀತಿಬೋಧೆಗಳು, ವ್ಯಕ್ತಿನಿರ್ಮಾಣ ಕೌಶಲ್ಯಗಳು ಪಂಚತಂತ್ರದಲ್ಲಿ ವ್ಯಾಪಕವಾಗಿ ಕಂಡುಬರುತ್ತವೆ.

ಚಕ್ರಧರನು ಈ ಕಥೆಯನ್ನು ಹೇಳಿ ಮುಗಿಸುವ ಸಂದರ್ಭದಲ್ಲಿ ಸುವರ್ಣ ಸಿದ್ಧಿಯು ಒಂದು ಬೋಧನೆ ಮಾಡುತ್ತಾನೆ. ಅದೇನೆಂದರೆ, ದೈವವು ಅನುಕೂಲವಾಗಿದ್ದರೆ ಎಲ್ಲವೂ ಕಲ್ಯಾಣವಾಗುತ್ತದೆ. ಆದರೂ ಸತ್ಪುರುಷರ ಮಾತುಗಳನ್ನು ಕೇಳಬೇಕು. ಅದಲ್ಲದೆ ದುರ್ವರ್ತನೆ ಮಾಡಿದವನು ನಾಶವಾಗುತ್ತಾನೆ. ಒಂದುಗೂಡಿ ಕೆಲಸ ಮಾಡದವರು–

एकोदराः पृथग्ग्रीवा अन्योऽन्यफलभक्षिणः ।

असंहता विनश्यन्ति, भारण्डा इव पक्षिणः ॥[58]

ಒಂದೇ ಹೊಟ್ಟೆ ಮತ್ತು ಎರಡು ಕುತ್ತಿಗೆಗಳಿದ್ದು ಭಿನ್ನವಾಗಿ ಆಹಾರ ತಿನ್ನುವ ಭೇರುಂಡ ಪಕ್ಷಿಯಂತೆ ನಾಶವಾಗುತ್ತಾರೆ. ಅವರವರ ಪ್ರಾರಬ್ಧಕ್ಕೆ ಅವರವರೇ ಹೊಣೆಗಾರರು. ಇನ್ನೊಬ್ಬರು ಅದಕ್ಕೆ ಭಾಗಿಗಳಾಗಲು ಸಾಧ್ಯವಿಲ್ಲ. ಚಕ್ರಧರನು ಅದೇನೆಂದು ಕೇಳಿದಾಗ ಸುವರ್ಣಸಿದ್ಧಿಯು **ಒಂದು ಹೊಟ್ಟೆ ಮತ್ತು ಎರಡು ಕುತ್ತಿಗೆಗಳುಳ್ಳ ಭೇರುಂಡದ ಕಥೆ** ಹೇಳಿದನು.

ಒಂದು ಸರೋವರದಲ್ಲಿ ಒಂದು ಹೊಟ್ಟೆ ಮತ್ತು ಎರಡು ಕುತ್ತಿಗೆಗಳುಳ್ಳ ಭೇರುಂಡ ಎಂಬ ಹೆಸರಿನ ಪಕ್ಷಿ ವಾಸಿಸುತ್ತಿತ್ತು. ಒಮ್ಮೆ ಅಮೃತಸದೃಶವಾದ ಹಣ್ಣೊಂದನ್ನು ಸಮುದ್ರ ತೀರದಲ್ಲಿ ಅಲೆಯುತ್ತಿದ್ದ ಅದಕ್ಕೆ ಅಲೆಗಳು ತಂದು ಹಾಕಿದವು. ವಿಧಿಯು ತನಗೆ ತಂದೊದಗಿಸಿದೆಯೆಂದು ಸಂತಸದಿಂದ ತಿಂದು

57. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ–88, ಪು–787, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

58. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ–94, ಪು–796, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಹಾಕಿತು. ಬಹಳ ರುಚಿಯಾಗಿದೆ ಎಂದು ಹೇಳಿದ್ದು ಕೇಳಿ ಎರಡನೆಯ ಮುಖವು ತಾನೂ ಸವಿಯುವೆನೆಂದು ಸ್ವಲ್ಪ ಕೇಳಿತು. ಆದರೆ ಮೊದಲನೇ ಮುಖ ತಮಗಿರುವುದು ಒಂದೇ ಹೊಟ್ಟೆಯೆಂದು, ಆದ್ದರಿಂದ ಒಂದೇ ತೃಪ್ತಿ ಯಾಗುವುದು. ಬೇರೆ ಬೇರೆ ತಿನ್ನಬೇಕಾಗಿಲ್ಲ ಎಂದು ಹೇಳಿ ಉಳಿದದ್ದನ್ನು ತನ್ನ ಪ್ರಿಯೆಗೆ ಕೊಟ್ಟಿತು. ಹೆಣ್ಣು ಪಕ್ಷಿ ಸಂತೋಷಗೊಂಡು ಆಲಿಂಗನ ಚುಂಬನ ಹಾಗೂ ಒಳ್ಳೆಯ ನುಡಿಗಳಿಂದ ಅದನ್ನು ಸಂತೋಷಗೊಳಿಸಿತು. ಎರಡನೆಯ ಮುಖಕ್ಕೆ ಬಹಳ ಉದ್ವೇಗ ಹಾಗೂ ದುಃಖವುಂಟಾಯಿತು. ಹಾಗೆಯೇ, ಒಮ್ಮೆ ಎರಡನೇ ಮುಖಕ್ಕೆ ಒಂದು ವಿಷಫಲವು ಸಿಕ್ಕಿತು. ಆಗ ಅದು ಎರಡನೆಯ ಮುಖಕ್ಕೆ ಹೇಳಿತು. "ಎಲೈ ನಿರ್ದಯಿ, ಪುರುಷಾಧಮ, ಪರರನ್ನು ಉಪೇಕ್ಷಿಸುವವನೇ, ನೀನು ನನಗೆ ಮಾಡಿರುವ ಅಪಮಾನಕ್ಕೆ ತಕ್ಕ ಶಾಸ್ತಿ ಮಾಡಲು ಈ ಹಣ್ಣನ್ನು ತಿನ್ನುವೆ, ಎಂದು ಹೇಳಿ ತಿಂದೇ ಬಿಟ್ಟಿತು. ಇನ್ನೇನು ಹೇಳುವುದು, ಇಬ್ಬರೂ ಸತ್ತರು.[59]

ಕಥೆಯನ್ನು ಮುಗಿಸಿದ ಬ್ರಾಹ್ಮಣಿಯು ಹೇಳಿದಳು– "ನೀನೂ ಕೂಡ ಅತಿಯಾದ ಲೋಭದಿಂದ ನಾನು ಹೇಳಿದ ಮಾತನ್ನು ಕೇಳಲಿಲ್ಲ. ಆದ್ದರಿಂದಲೇ ವಿಷಮ ಪರಿಸ್ಥಿತಿ ಉಂಟಾಯಿತು. ಆದ್ದರಿಂದ ಅತಿಲೋಭವನ್ನು ಮಾಡಬಾರದು. ಹೀಗೆ ಬ್ರಾಹ್ಮಣಿ ಮುಂಗುಸಿಯ ಕಥೆಯಲ್ಲಿ ದೇವಶರ್ಮನಿಗೆ ಅವನ ಹೆಂಡತಿಯು ಹೀಗೆ ಹೇಳಿದಾಗ ದೇವಶರ್ಮನು ಹೇಳುತ್ತಾನೆ– "ಯಾರ ಮನೆಯಲ್ಲಿ ತಿನ್ನಲು ಏನೂ ಇಲ್ಲದಿದ್ದಾಗ, ಜೀವನಾಧಾರಕ್ಕೆ ಭಿಕ್ಷಾಟನೆ ಮಾಡಿದರೆ ಅದು ಅತಿ ಲೋಭಕ್ಕೆ ಕಾರಣವಾಗದು. ಪರೀಕ್ಷಿಸದೆ ಕೆಲಸ ಕೈಗೊಂಡವಳು ನೀನೇ. ಬಹಳ ಸಮಯದಿಂದ ನಿನ್ನ ಪುತ್ರನಂತೆಯೇ ಸಾಕಿಸಲಹಿದ, ಸುಖದಿಂದ ಮಲಗಿದ್ದ ನಮ್ಮ ಮಗನನ್ನು ಕೃಷ್ಣಸರ್ಪದಿಂದ ಕಾಪಾಡಿದ ಮುಂಗುಸಿಯನ್ನು, ವಿಚಾರಿಸದೆಯೇ, ದುಡುಕಿ ಆತುರದಿಂದ ಕೊಂದು ಹಾಕಿರುವುದೇ ಅಪರೀಕ್ಷಿತಕಾರಕ. ಈ ಮಾತುಗಳಿಂದ ದೇವಶರ್ಮನ ಹೆಂಡತಿಗೆ ತನ್ನ ತಪ್ಪು ಅರಿವಾಗಿ, ಅಪರೀಕ್ಷಿತಕಾರಕ ದೋಷವನ್ನು ಅರ್ಥೈಸಿಕೊಂಡು, ಮುಂಗುಸಿಗಾಗಿ ಸಂತಾಪಿಸಿ ಅಪಾರ ದುಃಖ ಅನುಭವಿಸಿದಳು.

ಬಳಿಕ ಧರ್ಮಾಧಿಕಾರಿಗಳು ಮಣಿಭದ್ರನಿಗೆ ಮನೆಗೆ ಹೋಗಲು ತಿಳಿಸಿ ಉಪದೇಶ ಮಾಡಿದರು. "ನಿನ್ನ ಮನೆಗೆ ಹೋಗು. ಆದರೆ ಏಕಾಂಗಿಯಾಗಿ ಅಲ್ಲ. ಸ್ವಾದಿಷ್ಟವಾದುದನ್ನು ಒಬ್ಬನೇ ತಿನ್ನಬಾರದು. ಎಲ್ಲರೂ ಮಲಗಿರುವಾಗ ಒಬ್ಬನೇ ಎದ್ದಿರಬಾರದು. ಒಬ್ಬನೇ ಯಾತ್ರೆಯನ್ನು ಮಾಡಬಾರದು. ಒಂದು ವಿಚಾರದ ಬಗ್ಗೆ ಒಬ್ಬನೇ ಚಿಂತೆಮಾಡಬಾರದು.

---

59. **ಭರತ ಬಿ ರಾವ್,** ಪಂಚತಂತ್ರ, ಶ್ರೀವಿಷ್ಣುಶರ್ಮವಿರಚಿತ ಮೂಲ ಸಂಸ್ಕೃತ ಪಂಚತಂತ್ರದ ಕನ್ನಡಾನುವಾದ,ತಂ–5, ಪು–290–291,(2018) ಜ್ವಾಲಾಮುಖಿ ಮುದ್ರಣಾಲಯ ಪ್ರೈ.ಲಿ,44/1,ಕೆ.ಆರ್ ರಸ್ತೆ, ಬಸವನಗುಡಿ, ಬೆಂಗಳೂರು–560004

अपि कापुरुषो मार्गे द्वितीयः क्षेमकारकः ।

कर्कटेन द्वितीयेन जीवितं परिरक्षितम् ॥[60]

ಅಂಜುಬುರುಕನಾದರೂ ಮತ್ತೊಬ್ಬನನ್ನು ಜೊತೆಯಲ್ಲಿ ಕರೆದುಕೊಂಡು ಹೋಗುವುದು ದಾರಿಯಲ್ಲಿ ಸುಖಕರವಾಗಿ ಇರುತ್ತದೆ. ಏಡಿಯು ತನ್ನನ್ನು ಕರೆದುಕೊಂಡು ಹೋದ ಬ್ರಾಹ್ಮಣನ ಜೀವವನ್ನು ರಕ್ಷಿಸಿತು. ನಂತರದಲ್ಲಿ **ಬ್ರಾಹ್ಮಣ ಮತ್ತು ಏಡಿಯ ಕಥೆ**ಯನ್ನು ಹೇಳಿದರು.

ಈ ಕಥೆಯಲ್ಲಿನ ಉಕ್ತಿಗಳು ಬಹಳ ಯೋಗ್ಯವಾಗಿವೆ. ಚಂದ್ರನು ಕ್ಷೀಣಿಸುವಾಗ ಸೂರ್ಯನನ್ನು ಆಶ್ರಯಿಸುತ್ತಾನೆ. ಹಾಗೂ ವರ್ಧಿಸುವಾಗ ಸಮುದ್ರವನ್ನು ಉಕ್ಕಿಸುತ್ತಾನೆ. ಹಾಗೆಯೇ ಆಪತ್ತಿನಲ್ಲಿ ಸಹಾಯ ಮಾಡುವವರು ಬೇರೆ ಬೇರೆ ವೃದ್ಧಿಕಾಲದಲ್ಲಿ ಸಂಪತ್ತನ್ನು ಅನುಭವಿಸುವವರು ಬೇರೆ. ಮಂತ್ರ, ತೀರ್ಥ, ಬ್ರಾಹ್ಮಣ, ದೇವ, ಜ್ಯೋತಿಷಿ, ವೈದ್ಯ ಹಾಗೂ ಗುರು– ಇವರಲ್ಲಿ ಯಾರಿಗೆ ಯಾವ ಭಾವನೆ ಇರುತ್ತದೆಯೋ, ಅವರಿಗೆ ಆ ರೀತಿಯ ಸಿದ್ಧಿಯಾಗುತ್ತದೆ. ಬ್ರಹ್ಮದತ್ತನು ತನಗೆ ಸರ್ಪದಿಂದ ಬರಬಹುದಾದ ಸಾವಿನಿಂದ ಏಡಿಯು ರಕ್ಷಿಸಿತು. ಏಕೆಂದರೆ ಅವನ ತಾಯಿ ಸತ್ಯವನ್ನೇ ನುಡಿದು ಮನುಷ್ಯನು ಸಹಾಯಕ್ಕೆಂದು ಯಾರನ್ನಾದರೂ ಕರೆದುಕೊಂಡು ಹೋಗಬೇಕು ಎಂದು ಸಲಹೆಮಾಡಿ ಒಂದು ಏಡಿಯನ್ನು ಸಮೀಪದ ಕೊಳದಿಂದ ತಂದು ಕೊಟ್ಟಿದ್ದಳು. ಬ್ರಹ್ಮದತ್ತನು ತಾಯಿಯ ಮಾತಿನಲ್ಲಿ ಶ್ರದ್ಧೆಯಿರಿಸಿದ್ದರಿಂದ ಅದೇ ಏಡಿ ಇವನನ್ನು ಬದುಕಿಸಿತು. ಅದಕ್ಕೇ ಹೇಳುವುದು ಒಬ್ಬರಿಗಿಂತ ಇಬ್ಬರು ಲೇಸು. ಅದರಲ್ಲೂ ಪುರುಷನಿಗೆ ಪ್ರಯಾಣಕಾಲದಲ್ಲಿ ಯಾವುದಾದರೊಂದು ಸಹಾಯ ಬೇಕು. ಒಬ್ಬನೇ ಪ್ರಯಾಣ ಮಾಡಬಾರದು. ನಂತರ ಬ್ರಾಹ್ಮಣನು ತಾನು ಹೋಗಬೇಕಾದಲ್ಲಿಗೆ ಹೋದನು.

ಅಪರೀಕ್ಷಿತಕಾರಕದಲ್ಲಿ ಮತ್ತೊಂದು ಸುಂದರ ಹಾಗೂ ಸರಳವಾದ ಶ್ಲೋಕವು ಬಡತನದ ಬೇಗೆಯನ್ನು ಬಹಳ ಸೊಗಸಾಗಿ ತಿಳಿಸುತ್ತದೆ–

वरं वनं व्याघ्रगजादिसेवितं जलेन हीनं बहुकण्टकावृत्तम् ।

तृणानि शय्या परिधानवल्कलं न बन्धुमध्ये धनहीनजीवितम् ॥[61]

ಅಂದರೆ, ಹುಲಿ, ಆನೆ ಇವುಗಳಿಂದ ಕೂಡಿರುವುದೂ, ಜನರಿಲ್ಲದುದೂ, ಬಹಳ ಹೆಚ್ಚಾದ ಮುಳ್ಳುಗಳಿಂದ ತುಂಬಿರುವುದೂ, ಹುಲ್ಲೇ ಹಾಸುಗೆಯಾದುದೂ, ನಾರುಬಟ್ಟೆಯೇ ಉಡುಗೆಯಾದುದೂ ಆದ

---

60. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ–96, ಪು–801, (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001
61. **ಸುಧಾಕರ್ ಮಾಲವೀಯ,** ಸಂಪಾ–ಅನು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಅಪರೀಕ್ಷಿತಕಾರಕ– ಶ್ಲೋ–23, ಪು–722 (1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ–221001

ಕಾಡಾದರೂ ವಾಸಿ; ಬಂಧುಗಳ ಮಧ್ಯೆ ಹಣವಿಲ್ಲದ ಬಾಳು ಸಲ್ಲದು. ಇದು ಒಂದು ರೀತಿಯಲ್ಲಿ ಬದುಕಿನ ಶಿಕ್ಷಣವೇ ಹೌದು.

ಮಣಿಭದ್ರನು ಧರ್ಮಾಧಿಕಾರಿಗಳ ಉಪದೇಶವನ್ನು ಕೇಳಿ, ಅವರ ಅನುಮತಿಯನ್ನು ಪಡೆದು ಒಬ್ಬ ಸಹಾಯಕನೊಡನೆ ತನ್ನ ಮನೆಗೆ ಹೋಗಿ ಬಹಳ ಕಾಲ ರಾಜಭೋಗಗಳನ್ನು ಅನುಭವಿಸುತ್ತಾ ಸುಖವಾಗಿ ಕಾಲ ಕಳೆದನು ಎಂಬಲ್ಲಿಗೆ ವಿಷ್ಣುಶರ್ಮವಿರಚಿತ ಪಂಚತಂತ್ರದ ಐದನೆಯತಂತ್ರವಾದ ಅಪರೀಕ್ಷಿತಕಾರಕವು ಸುಸಂಪನ್ನವಾದುದು.

ವಿಷ್ಣುಶರ್ಮರು ರಾಜಕುಮಾರರನ್ನು ಕುರಿತು, "ಕೇಳಿದಿರಾ? ರಾಜನಾದವನು ಬಹಳ ಎಚ್ಚರಿಕೆಯಿಂದ ಇರಬೇಕು. ಹಾಗೆಯೇ ಬುದ್ಧಿವಂತಿಕೆಯೂ ಮುಖ್ಯ. ವಿವೇಚನೆಯಿಂದ ಮಂತ್ರಿಗಳ ಮಾತನ್ನು ಕೇಳಬೇಕು. ಕೊನೆಗೆ ತನ್ನ ವಿವೇಕದಿಂದ ವರ್ತಿಸಬೇಕು. ರಾಜಪದವಿ ಎಂದರೆ ಆಟದ ಸಿಂಹಾಸನವಲ್ಲ. ಪುರಾಣ, ವ್ಯಾಕರಣಶಾಸ್ತ್ರ, ಇತಿಹಾಸ ಇತ್ಯಾದಿಗಳನ್ನು ಕಲಿತರೆ ಮಾತ್ರ ಆಪತ್ತಿನಿಂದ ಪಾರಾಗಲು ಸಾಧ್ಯ. ರಾಜ್ಯವನ್ನು ಉಳಿಸಿಕೊಳ್ಳಬಹುದು. ಇರಲಿ. ಇದನ್ನೆಲ್ಲಾ ಚೆನ್ನಾಗಿ ಆಲೋಚಿಸಿರಿ. ನಾಳೆ ನಾನು ನಿಮ್ಮ ಉತ್ತರಕ್ಕಾಗಿ ಕಾಯುತ್ತಿರುತ್ತೇನೆ ಎಂದು ಎದ್ದರು. ಇಲ್ಲಿ ವಿಷ್ಣುಶರ್ಮರು ರಾಜಕುಮಾರರಿಗೆ ಇದುವರೆಗೆ ತಿಳಿದಿದ್ದರ ಬಗ್ಗೆ ಮೌಲ್ಯಮಾಪನ ಮಾಡಲು ರಾಜಕುಮಾರರಿಗೆ ಮನೆಗೆಲಸವನ್ನು ಕೊಟ್ಟರು.[62]

ಮರುದಿನ ವಿಷ್ಣುಶರ್ಮರು ತಮಗಾಗಿ ಕಾಯುತ್ತಿದ್ದ ರಾಜಕುಮಾರರನ್ನು ಉದ್ದೇಶಿಸಿ– "ರಾಜಕುಮಾರರೇ, ಈ ದಿನ ಮತ್ತೊಂದು ಹೊಸಕಥೆಯನ್ನು ಎಂದು ಇನ್ನೇನು ಹೇಳಲು ಉಪಕ್ರಮಿಸಿದಾಗ ಬಹುಶಕ್ತಿಯು ಅಷ್ಟರಲ್ಲೇ ಎದ್ದು ನಿಂತು, "ಪೂಜ್ಯರೇ ನಮಗೆ ಕಥೆಯಲ್ಲಿ ಆಸಕ್ತಿ ಇಲ್ಲವಾಗಿದೆ." ಎಂದನು. ವಿಷ್ಣುಶರ್ಮರು ಅದಕ್ಕೆ ಏಕೆ? ರಾಜಕುಮಾರರೇ, ಇದುವರೆಗೂ ಕುತೂಹಲದಿಂದ ಕಥೆಗಳನ್ನು ಒಂದರ ನಂತರ ಮತ್ತೊಂದು ಕೇಳುತ್ತಿದ್ದಿರಿ. ಈಗೇಕೆ ಬೇಡವಾಯಿತು? ಕೇಳಿ ಕೇಳಿ ಬೇಸರವಾಯಿತೇ? ಎಂದರು. ಅದಕ್ಕೆ ರಾಜಕುಮಾರರು "ಹಾಗಲ್ಲ ಗುರುಗಳೇ ನೀವು ನಿಮ್ಮೊಡನೆ ನಮ್ಮನ್ನು ಕರೆತಂದದ್ದು ರಾಜನೀತಿ ಕುಶಲರನ್ನಾಗಿ ಮಾಡಲು ಎಂಬ ವಿಚಾರ ನಮಗೆ ಚೆನ್ನಾಗಿ ಅರಿವಾಗಿದೆ. ನೀವು ಏನನ್ನು ಹೇಳದಿದ್ದರೂ ನಾವೇ ಸ್ವಪ್ರಯತ್ನದಿಂದ ಅರ್ಥಮಾಡಿಕೊಳ್ಳುವಷ್ಟರ ಮಟ್ಟಿಗೆ ವಿಚಾರಶೀಲರಾಗಿದ್ದೇವೆ. ನಮಗೀಗ ಜವಾಬ್ದಾರಿ ಏನೆಂಬುದು ಅರಿವಾಗಿದೆ ಗುರುಗಳೇ," ಎಂದನು ಅನಂತಶಕ್ತಿ.

---

62. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ–ಅಪರೀಕ್ಷಿತಕಾರಕಂ, ಪು–235, (2015) ವರ್ಣಿಲ, 39/2–11, ಕಲ್ಯಾಣಿ ಗಾರ್ಡನ್, ಬನಶಂಕರಿ 1ನೇ ಹಂತ, ಬೆಂಗಳೂರು–560050.

यद्वाञ्छति दिवा मर्त्यो वीक्षते वा करोति वा ।

तत्स्वप्नेऽपि तदभ्यासाद् ब्रूते वाथ करोति वा ॥[63]

ಹಗಲಿನಲ್ಲಿ ಮನುಷ್ಯನು ಏನನ್ನು ಇಚ್ಛಿಸುತ್ತಾನೋ, ನೋಡುತ್ತಾನೋ ಅಥವಾ ಮಾಡುತ್ತಾನೋ, ಅದನ್ನೇ ಅಭ್ಯಾಸ ಬಲದಿಂದ ಕನಸಿನಲ್ಲಿಯೂ ಹೇಳುತ್ತಾನೆ ಅಥವಾ ಮಾಡುತ್ತಾನೆ. ಅಂದರೆ ಶ್ರದ್ಧಾವಂತನಾಗಿದ್ದು, ಆಸಕ್ತಿಯಿಂದ ಕೇಳಿದ್ದರೆ ನೋಡಿದ್ದರೆ ಅಥವಾ ಮಾಡಿದ್ದರೆ, ಆ ವಿಚಾರಗಳು ಕನಸುಮನಸ್ಸಿನಲ್ಲಿಯೂ ಮೆಲುಕುಹಾಕುತ್ತಿರುತ್ತದೆ ಎಂದು ಅರ್ಥೈಸಿದರೆ ಸೂಕ್ತವಾಗಿರುತ್ತದೆ. ವಿಷ್ಣುಶರ್ಮರು ಅಷ್ಟರಮಟ್ಟಿಗೆ ಅರಸುಕುಮಾರರಿಗೆ ಪ್ರೇರಣೆಮಾಡಿದ್ದಾರೆ.

"ನಿಮ್ಮನ್ನು ಈ ಮಟ್ಟಕ್ಕೆ ತರಬೇಕೆಂಬ ಪ್ರಯತ್ನವನ್ನೇ ನಾನು ಕಥೆಗಳ ಮೂಲಕ ಮಾಡಿದ್ದು. ಕಥೆಯೆಂಬುದು ಒಂದು ನೆಪವಷ್ಟೆ" ಎಂದರು ವಿಷ್ಣುಶರ್ಮರು.

ಬಹುಶಕ್ತಿ ಬಹಳ ಸಂತಸದಿಂದ ಕೈಮುಗಿದು "ಗುರುಗಳೇ ನಿಮ್ಮ ಕಥೆಗಳಲ್ಲಿ ಬರುವ ಪಾತ್ರಗಳೆಲ್ಲವೂ ಪ್ರಾಣಿಪಶುಪಕ್ಷಿಗಳಾಗಿದ್ದರೂ, ಮನುಷ್ಯರ ಜೊತೆಯಲ್ಲಿ ಮನುಷ್ಯರಂತೆಯೇ ನೀತಿನಿಯಮ, ಕರ್ತವ್ಯಗಳನ್ನು ಪಾಲಿಸುವುದರ ವಿಶೇಷತೆಯು ನಮ್ಮಲ್ಲಿ ಒಂದು ರೀತಿಯಲ್ಲಿ ನಮ್ಮ ಬುದ್ಧಿಶಕ್ತಿ ಹಾಗೂ ಆಲೋಚನೆಯ ಪುನರುಜ್ಜೀವನವನ್ನೇ ಉಂಟುಮಾಡಿತು. ಅಂದರೆ ಪ್ರಾಣಿ, ಪಶುಪಕ್ಷಿಗಳೇ ಹಾಗಿರುವಾಗ ಬುದ್ಧಿಶಕ್ತಿಯಿರುವ ನಾವು ಹಾಗಿಲ್ಲದಿದ್ದರೆ, ಎಂಥಹ ನಿಷ್ಪ್ರಯೋಜಕ, ವ್ಯರ್ಥ ಜನ್ಮವಾದೀತು ಎಂಬ ಜಾಗೃತಿ ಮೂಡಿದೆ. ನೀವು ಅವುಗಳ ದೃಷ್ಟಾಂತಗಳನ್ನು ನಿದರ್ಶನವಾಗಿಟ್ಟುಕೊಂಡು ನಮ್ಮಂಥಹ ಉದ್ಧಟರಿಗೆ ರಾಜನೀತಿ ಕೌಶಲ್ಯವನ್ನು ಕಲಿಸಿಕೊಟ್ಟಿದ್ದೀರಿ" ಎಂದನು. ಮುಂದುವರೆಸಿ___ ಆಚಾರ್ಯರೇ, ಪ್ರಾರಂಭದಲ್ಲಿ **ನರಿ, ಎತ್ತು ಸಿಂಹಗಳ ಕಥೆ**ಯನ್ನು ಕೇಳುತ್ತಿದ್ದಾಗ ಏನೂ ಅನ್ನಿಸುತ್ತಿರಲಿಲ್ಲ. ಕಥೆಯನ್ನು ಆಲಿಸುತ್ತಿದ್ದೇವಷ್ಟೆ. ನಂತರದಲ್ಲಿ ಮುಂದಿನ ಕಥೆಗಳಲ್ಲಿ ಪ್ರಾಣಿಪಶುಪಕ್ಷಿಗಳಗೂ ಮನುಷ್ಯರಂತೆ ಮಾತನಾಡುವುದು, ಚಿಂತಿಸುವುದು, ಭಾವನೆಗಳನ್ನು ವ್ಯಕ್ತಪಡಿಸುವುದು, ಕಾರ್ಯ ನಿರ್ವಹಿಸುವುದು ಎಲ್ಲಾದರೂ ಉಂಟೇ ಅನ್ನಿಸುತ್ತಿತ್ತು. ಆನಂತರದಲ್ಲಿ ನಮ್ಮ ಆಲೋಚನೆ, ವಿವೇಚನೆ ಬೆಳೆದು, ನೀವು ಈ ಪ್ರಾಣಿಪಶುಪಕ್ಷಿಗಳನ್ನು ಪಾತ್ರಗಳಲ್ಲಿ ತಂದ ವಿಶೇಷತೆ ನಮ್ಮಲ್ಲಿ ಹೆಚ್ಚಿನ ಕುತೂಹಲ ಉಳಿಯಲಿ, ಆಸಕ್ತಿ ಉಂಟಾಗಲಿ ಎಂಬುದಕ್ಕೆ ಎಂದು ಅರ್ಥವಾಯಿತು. ಕೊನೆಕೊನೆಗೆ ಪಾತ್ರಗಳ ಬಗ್ಗೆ ಯೋಚಿಸುತ್ತಾ, ಪರಕಾಯಪ್ರವೇಶ ಮಾಡಿದಂತೆ ನಮ್ಮನ್ನೇ ನಾವು ಆ ಜಾಗಗಳಲ್ಲಿ

---

63. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ-ಶ್ಲೋ-144, ಪು-79,(1993).ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಇರಿಸಿಕೊಳ್ಳುತ್ತಾ, ನಮ್ಮ ಜವಾಬ್ದಾರಿ ಏನು? ಕರ್ತವ್ಯವೇನು? ಭವಿಷ್ಯದ ನಮ್ಮ ಗುರಿ ಏನು? ಇತ್ಯಾದಿ ಅನೇಕ ವಿಚಾರಗಳ ಅರಿವುಂಟಾಗತೊಡಗಿತು.[64]

ಶೈಕ್ಷಣಿಕ ಮನೋವಿಜ್ಞಾನದ ದೃಷ್ಟಿಯಿಂದ ವಿಶ್ಲೇಷಿಸಿ, ನೋಡಿದಾಗ, ಒಂದು ಬಹಳ ಮುಖ್ಯವಾದ ಅಂಶವಿದೆ. ಅದೇನೆಂದರೆ, ಬೋಧನಾಕ್ರಮದಲ್ಲಿ ಕೆಲವು ಸೂತ್ರಗಳು ಕಂಡುಬರುತ್ತವೆ. ಉದಾಹರಣೆಗೆ:- ಸರಳದಿಂದ ಸಂಕೀರ್ಣದೆಡೆಗೆ, ಸುಲಭ ವಿಚಾರಗಳಿಂದ ಕಠಿಣ ವಿಚಾರಗಳೆಡೆಗೆ, ತಿಳಿದಿರುವ ಅಥವಾ ಪರಿಚಯವಿರುವ ವಿಚಾರಗಳಿಂದ ತಿಳಿಯದಿರುವ ಅಥವಾ ಹೊಸದರೆಡೆಗೆ, ಬೋಧನೆಯ ಈ ಮಾರ್ಗಗಳು ಬಹಳ ಪರಿಣಾಮಕಾರಿಯಾದವುಗಳು. ಇದರಿಂದ ಮಕ್ಕಳು ಸುಲಭವಾಗಿ ಗ್ರಹಿಸುವರು, ಆಸಕ್ತಿಯನ್ನು ಹೆಚ್ಚಿಸಿಕೊಳ್ಳುವರು, ಸದಾ ಕ್ರಿಯಾತ್ಮಕವಾಗಿರುವರು. ಸೃಜನಶೀಲರಾಗುವರು. ಉದಾಹರಣೆಗೆ:-

न विना पार्थिवो भृत्यैर्न भृत्याःपार्थिवं विना ।

तेषां च व्यवहारोऽयं परस्परनिबन्धनः ॥[65]

ಪಂಚತಂತ್ರದ ಐದೂ ತಂತ್ರಗಳ ಮೂಲಕ ಅನೇಕತೆಗಳಲ್ಲಿ ಏಕತೆಯಿಂದ ಕೂಡಿರುವ ಕಥಾಗುಚ್ಛಗಳಲ್ಲಿ ಈ ರೀತಿಯ ಬೋಧನಾಸೂತ್ರಗಳನ್ನು ಕಾಣಬಹುದು. ದಿನನಿತ್ಯದ ಅನುಭವಗಳನ್ನು, ಬದುಕಿನ ಪಾಠಗಳನ್ನು ವಿವಿಧ ಉತ್ತಮ ಸನ್ನಿವೇಶದಲ್ಲಿ, ಸೂಕ್ತ ದೃಷ್ಟಾಂತಗಳನ್ನು ಸಂಯೋಜನೆ ಮಾಡಿ, ಈಗಾಗಲೇ ರಾಜಕುಮಾರರಿಗೆ ತಿಳಿದಿರುವ ವಿಚಾರಗಳನ್ನು ಪ್ರಸ್ತಾಪ ಮಾಡುತ್ತಾ, ಅದರ ಮೂಲಕ ಹೊಸವಿಚಾರಗಳ ಕಡೆಗೆ ಅವರ ಗಮನವನ್ನು ಸೆಳೆದು, ಕುತೂಹಲದಿಂದ ಅವರೇ ಇನ್ನೂ ಹೆಚ್ಚಿನ ತಿಳುವಳಿಕೆ ಬೆಳೆಸಿಕೊಳ್ಳಲು ವಿಷ್ಣುಶರ್ಮರು ಮಾರ್ಗದರ್ಶನ ನೀಡಿದ್ದಾರೆ. ಇದಕ್ಕೆ ನಿದರ್ಶನವೆಂದರೆ, ರಾಜಕುಮಾರರು ತಮ್ಮ ಗುರುಗಳ ಬಗ್ಗೆ ಹೇಳಿರುವ ಅಭಿಪ್ರಾಯವೇ." ವಿದ್ಯಾರ್ಥಿಗಳೇ ಅವರ ಅಧ್ಯಾಪಕರ ಬಗ್ಗೆ ತೀರ್ಮಾನ ಕೊಡುವ ನಿಜವಾದ ನ್ಯಾಯಾಧೀಶರು.(Students are the best judges of their Teachers)

ಅನಂತಶಕ್ತಿಯು ತನ್ನ ಅಭಿಪ್ರಾಯವನ್ನು ಹೀಗೆ ಹೇಳುತ್ತಾನೆ. "ಮನುಷ್ಯರಂತೆ ಇತರ ಜೀವಿಗಳಿಗೂ ಭಾವನೆಗಳಿವೆ, ಎಂಬುದನ್ನು ಅರ್ಥೈಸಿಕೊಂಡೆವು ಗುರುಗಳೆ. ರಾಜನು ಮನುಷ್ಯರಿಗೆ ಮಾತ್ರವಲ್ಲ. ತನ್ನ ನಾಡಿನ ಎಲ್ಲವಕ್ಕೂ ರಾಜನೇ ಆಗಿರುತ್ತಾನೆ. ಹೌದು. ಹೀಗಾಗಿ ಅವನ ನೀತಿ ಎಲ್ಲರನ್ನೂ ಸಮಾನವಾಗಿ

---

64. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ-ಅಪರೀಕ್ಷಿತಕಾರಕಂ, ಪು-235-236, (2015) ವರ್ಣಿಲ, 39/2-11, ಕಲ್ಯಾಣಿ ಗಾರ್ಡನ್, ಬನಶಂಕರಿ 1ನೇ ಹಂತ, ಬೆಂಗಳೂರು-560050

65. **ಸುಧಾಕರ್ ಮಾಲವೀಯ,** ಸಂಪಾದರು ಹಾಗೂ ವ್ಯಾಖ್ಯಾನಕಾರರು, ಶ್ರೀವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಮಿತ್ರಭೇದಃ-ಶ್ಲೋ-87, ಪು-49(1993). ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001

ಕಾಣುವಂತಿರಬೇಕು" ಎಂಬುದೂ ಅರ್ಥವಾಯಿತು. "ಆದ್ದರಿಂದ ಇವತ್ತಿನಿಂದ ನಮಗೆ ನೇರವಾಗಿ ರಾಜಶಾಸ್ತ್ರ, ಅರ್ಥಶಾಸ್ತ್ರ ಮತ್ತು ಸಮಾಜಶಾಸ್ತ್ರವನ್ನು ತಿಳಿಸಿ ಗುರುಗಳೆ." ನಾವು ತಿಳಿದುಕೊಳ್ಳಲು ಸಿದ್ಧರಿದ್ದೇವೆ ಎಂದು ಮೂವರೂ ಕೈಮುಗಿದು ನಮಸ್ಕರಿಸಿದರು. ವಿಷ್ಣುಶರ್ಮರಿಗೆ ಆನಂದ ಭಾಷ್ಪವೇ ಸುರಿದು ಶಿಷ್ಯರನ್ನು ಆಲಂಗಿಸಿಕೊಂಡರು. ಇದು ನಿಜಕ್ಕೂ ಒಬ್ಬರು ಪ್ರತಿಭಾವಂತ ಬೋಧಕರ ವೃತ್ತಿತೃಪ್ತಿ, ವೃತ್ತಿ ನೀತಿ, ವೃತ್ತಿ ಗೌರವ ಹಾಗೂ ಸಾರ್ಥಕತೆ. ಇದರ ಮುಂದೆ ರಾಷ್ಟ್ರಪ್ರಶಸ್ತಿಯೂ ಸಹ ಕಡಿಮೆಯೇ. ಶೈಕ್ಷಣಿಕ ಮನೋವಿಜ್ಞಾನದಲ್ಲಿ ಒಬ್ಬ ಉತ್ತಮ ಬೋಧಕನ ಲಕ್ಷಣಗಳನ್ನು ಹೇಳುವಾಗ:–

**Wiliam Aurthur Ward** ಎಂಬ **American Motivational Speaker** ಇವರು ಉಪಾಧ್ಯಾಯರ ಬಗೆಯನ್ನು ಹೇಳಿದ್ದಾರೆ: **The Mediocre teacher tells; The Good teacher explains; The Superior teacher demonstrates; The Great teacher inspires.**

ಒಬ್ಬ ಸಾಧಾರಣ ಉಪಾಧ್ಯಾಯನು ಹೇಳುತ್ತಾನೆ; ಒಬ್ಬ ಉತ್ತಮ ಉಪಾಧ್ಯಾಯನು ವಿವರಿಸುತ್ತಾನೆ; ಒಬ್ಬ ಶ್ರೇಷ್ಠ ಉಪಾಧ್ಯಾಯನು ಪ್ರದರ್ಶನ ನೀಡುತ್ತಾನೆ. ಒಬ್ಬ ಮಹಾನ್ ಉಪಾಧ್ಯಾಯನು ಸ್ಫೂರ್ತಿ ನೀಡುವನು ಅಥವಾ ಪ್ರೇರೇಪಿಸುವನು.

ನಾವು ಇದುವರೆಗೆ ವಿಷ್ಣುಶರ್ಮರು ಮಾಡಿರುವ ಬೋಧನಾ ವಿಧಾನ, ಶಿಷ್ಯರನ್ನು ಅತ್ಯಲ್ಪ ಕಾಲದಲ್ಲೇ, ವಿಶೇಷ ಅಭಿಪ್ರೇರಣೆ, ಆಸಕ್ತಿ ತುಂಬಿ, ಕಲಿಕೆಯಲ್ಲಿ ಪ್ರೀತಿಯನ್ನುಂಟುಮಾಡಿ, ರಾಜಕುಮಾರರು ಸ್ವತಃ ಅವರುಗಳೇ ಗುರುಗಳಿಂದ ಹೆಚ್ಚು ಹೆಚ್ಚು ವಿಚಾರಗಳನ್ನು ಕುತೂಹಲದಿಂದ ತಿಳಿಯಲು ಸ್ವತಂತ್ರವಾಗಿ ಕೇಳುವಂತೆ ತಯಾರು ಮಾಡಿರುವುದನ್ನು ವಿಶ್ಲೇಷಣೆ ಮಾಡಿದಾಗ ಇವರು ಒಬ್ಬ ಪ್ರತಿಭಾನ್ವಿತ ಮಹಾನ್ ಉಪಾಧ್ಯಾಯರ ಸಾಲಿಗೆ ಬರುತ್ತಾರೆ. ಜೊತೆಯಲ್ಲಿ ಇವರ ಬೋಧನಾ ಮಾಧ್ಯಮ ಬಹಳ ಪರಿಣಾಮಕಾರಿಯಾಗಿದ್ದು, ಒಂದು ರೀತಿಯಲ್ಲಿ ಶಿಷ್ಯರಿಗೆ ಮಾತುಕತೆ ಅಥವಾ ಸಮಾಲೋಚನೆ ಕ್ರಮದಲ್ಲಿರುತ್ತದೆ. ಆಂಗ್ಲ ಪ್ರಬಂಧದ ಪಿತಾಮಹ ಫ್ರಾನ್ಸಿಸ್ ಬೇಕನ್ ಹೇಳಿರುವಂತೆ:–

**"Reading maketh a full man; Conference a ready man; and writing an exact man", "It is good in discourse and speech conversation,to vary and intermingle speech of the present occasion with arguments, tales with reasons, asking of questions with telling opinions, jest with earnest."**[66]

---

66. Francies Bacon Essays, "Off Studies".

'ಓದು' ಒಬ್ಬ ಪೂರ್ಣ ಮನಷ್ಯನನ್ನಾಗಿ ಮಾಡುತ್ತದೆ: 'ಕಾನ್ಫರೆನ್ಸ್' ಅಂದರೆ, ಬೋಧನೆಯನ್ನು ಸಮಾಲೋಚನೆ ಅಥವಾ ಮಾತುಕತೆ ಮೂಲಕ ನಡೆಸಿದಾಗ, ಕಲಿಯುವವರನ್ನು ಸಿದ್ಧಮನುಷ್ಯನನ್ನಾಗಿ ಮಾಡುತ್ತದೆ: 'ಬರವಣಿಗೆ' ನಿಖರವಾದ ಮನುಷ್ಯನನ್ನಾಗಿ ಮಾಡುತ್ತದೆ. ಹೀಗೆ ರಾಜಕುಮಾರರನ್ನು ವಿಷ್ಣುಶರ್ಮರು ಪಂಚತಂತ್ರದಲ್ಲಿ ಪ್ರಾಣಿಪಶುಪಕ್ಷಿಗಳನ್ನು ವಿವಿಧಪಾತ್ರಗಳಲ್ಲಿ ಆರೋಪಿಸಿ, ಒಂದು ವಿಶೇಷ ತಂತ್ರಗಾರಿಕೆ ಬಳಸಿ ನೀತಿಶಿಕ್ಷಣ, ಜೊತೆಜೊತೆಯಲ್ಲಿ ವ್ಯವಸ್ಥಿತವಾಗಿ ರಾಜನೀತಿ ಶಿಕ್ಷಣವನ್ನು ಸೂಕ್ತ ಸನ್ನಿವೇಶದಲ್ಲಿ ಅಳವಡಿಸಿಕೊಂಡು, ಕಥೆ, ಉಪಕಥೆ, ಸೂಕ್ತಿಗಳು, ಸುಭಾಷಿತಗಳ ಮೂಲಕ ಮೂವರು ಮಂದಮತಿಗಳನ್ನೂ ತಾವೇ ಇನ್ನೂ ಹೆಚ್ಚಿನ ವಿಚಾರಗಳನ್ನು ತಿಳಯುವಷ್ಟರಮಟ್ಟಿಗೆ ಸಿದ್ಧಗೊಳಸಿದ್ದಾರೆ.

ವಿಷ್ಣುಶರ್ಮರು ಬಹಳ ಸಂತೊಷದಿಂದ ರಾಜಕುಮಾರರನ್ನು ಕುರಿತು, "ನಾನು ಈ ದಿನಕ್ಕಾಗಿ ಕಳೆದೆರಡು ತಿಂಗಳನಿಂದ ಕಾಯುತ್ತಿದ್ದೆ. ನಿಮ್ಮನಿಮ್ಮಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗಮನಿಸುತ್ತಿದ್ದೆ. ನಿಮ್ಮ ತಂದೆಯವರ ಮುಂದೆ ನಾನು ಮಾಡಿದ್ದ ಪ್ರತಿಜ್ಞೆಯಂತೆ, ಆರು ಮಾಸಗಳಲ್ಲಿ ನಿಮ್ಮಗಳನ್ನು ಸಕಲಶಾಸ್ತ್ರಾದಿ ಪಾರಂಗತರನ್ನಾಗಿ ಮಾಡುತ್ತೇನೆಂದು ನಂಬಿ, ನನ್ನ ಪ್ರಯತ್ನ ನಡೆಸಿದ್ದು ಫಲಕಾರಿಯಾಯಿತು. ನೀವುಗಳು ಹೇಳದ ಮಾತುಗಳೆಲ್ಲವೂ ಸತ್ಯವೇ. ನಾನು ನಿರೀಕ್ಷಿಸಿದ್ದೂ ಅದೇ. ಇಂದಿನಿಂದಲೇ ನಿಮ್ಮಿಷ್ಟದಂತೆ ನೇರವಾಗಿ ನ್ಯಾಯ, ಧರ್ಮ, ನೀತಿ ಮೊದಲಾದ ಶಾಸ್ತ್ರಗಳನ್ನು, ಕಥೆಗಳ ಮೂಲಕ ಪರಿಚಯಿಸುತ್ತೇನೆ " ಎಂದರು.[67]

ನಂತರ ಮೂರೇ ಮಾಸಗಳಲ್ಲಿ ರಾಜಕುಮಾರರನ್ನು ಪರಿಪೂರ್ಣ ರಾಜನೀತಿ ಕುಶಲರನ್ನಾಗಿ ಮಾಡಿ, ಹೇಳದ್ದ ಸಮಯಕ್ಕಿಂತ ಸ್ವಲ್ಪ ಮೊದಲೇ ಮಹಿಲಾರೋಪ್ಯನಗರಕ್ಕೆ ಕರೆದೊಯ್ದು ಅಮರಶಕ್ತಿ ರಾಜನಿಗೊಪ್ಪಿಸಿದರು. ವಿಷ್ಣುಶರ್ಮರ ಕೋರಿಕೆಯಂತೆ ತಂದೆಯೇ ಮಕ್ಕಳ ರಾಜನೀತಿ ಪರಿಜ್ಞಾನದ ಬಗ್ಗೆ ಪರೀಕ್ಷಿಸಲು, ಅವರು ನಿರರ್ಗಳವಾಗಿ ಕೇಳದ್ದಕ್ಕೆಲ್ಲಾ ಸಮರ್ಪಕ ಉತ್ತರಗಳನ್ನು ನೀಡಿದರು. ಅಮರಶಕ್ತಿ ರಾಜನ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ರಾಜನು ತುಂಬಿದ ಸಭೆಯಲ್ಲಿ ವಿಷ್ಣುಶರ್ಮರನ್ನು ಗೌರವಿಸಿ ಸುವರ್ಣಾಭಿಷೇಕವನ್ನು ಮಾಡಿದನು. ವಿಷ್ಣುಶರ್ಮರನ್ನು ಸುವರ್ಣ ನಾಣ್ಯಗಳನ್ನು ಸ್ವೀಕಾರಮಾಡಬೇಕಾಗಿ ರಾಜನು ಬಹಳವಾಗಿ ಕೋರಿಕೊಂಡನು. ಆದರೆ ವಿಷ್ಣುಶರ್ಮರು ಇದಕ್ಕೆ ಒಪ್ಪಲಿಲ್ಲ. ಆದರೆ ರಾಜನ ಒತ್ತಾಯಕ್ಕೆ, ಬೇಸರವನ್ನು ಉಂಟುಮಾಡಬಾರದೆಂದು ಒಂದೇ ಒಂದು ನಾಣ್ಯವನ್ನು ಮಾತ್ರ ಸ್ವೀಕರಿಸಿ ಹೀಗೆ ಹೇಳದರು." ರಾಜ, ಅಗತ್ಯಕ್ಕಿಂತ ಹೆಚ್ಚಿಗೆ ಯಾರೂ ಏನನ್ನೂ ಕೂಡಿಸಿಡಬಾರದೆಂದು ರಾಜಕುಮಾರರಿಗೆ ಬೋಧಿಸಿದ ನಾನೇ ದುರಾಸೆಯಿಂದ ಎಲ್ಲವನ್ನೂ ಸ್ವೀಕರಿಸಿದರೆ, ನುಡಿಗೂ, ನಡೆಗೂ ವ್ಯತ್ಯಾಸವಾಗುವುದು. ನಿಮ್ಮೆಲ್ಲರ

---

67. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ-ಅಪರೀಕ್ಷಿತಕಾರಕಂ, ಪು-235-236, (2015) ವರ್ನಿಲ, 39/2-11,ಕಲ್ಯಾಣಿ ಗಾರ್ಡನ್, ಬನಶಂಕರಿ 1ನೇ ಹಂತ, ಬೆಂಗಳೂರು-560050

ಪ್ರೀತಿ ಮತ್ತು ಗೌರವಕ್ಕೆ ಒಂದು ನಾಣ್ಯ ಮಾತ್ರ ಸ್ವೀಕರಿಸಿದ್ದೇನೆ."[68] ಇಲ್ಲಿ ವಿಷ್ಣುಶರ್ಮರ ವೃತ್ತಿ ಗೌರವ, ಘನತೆ ಎಷ್ಟಿತ್ತೆಂಬುದನ್ನು ನೋಡಬಹುದು. ಹೀಗೆ ಒಬ್ಬ ಆದರ್ಶ ಶಿಕ್ಷಕರಾಗಿ ಆ ಮೂರನೇ ಶತಮಾನದಲ್ಲೇ ಇಂದಿಗೂ ಯೋಚಿಸಬಹುದಾದಂಥಹ ನವನವೀನ ಚಿಂತನೆಗಳನ್ನು ಬೆಳೆಸಿಕೊಂಡಿದ್ದರು. ಬೋಧನಾ ವೃತ್ತಿಯಲ್ಲಿ ತೊಡಗಿಸಿಕೊಂಡಿರುವ ಪ್ರತಿಯೊಬ್ಬರಿಗೂ ಇವರ ವಿಚಾರಗಳು ಆದರ್ಶವಾಗಿರುತ್ತದೆ:-

यः पठति लिखति पश्यति परिपृच्छति पण्डितानुपाश्रयति ।

तस्य दिवाकरकिरणैर्नलिनीदलमिव विकास्यते बुद्धिः ॥[69]

ಯಾವನು ಓದಿ, ಬರೆದು, ನೋಡಿ, ಬಗೆಬಗೆಯಾಗಿ ಪ್ರಶ್ನೆಮಾಡಿ, ಪಂಡಿತರನ್ನು ಆಶ್ರಯಿಸುವನೋ ಅವನ ಬುದ್ಧಿಯು ಸೂರ್ಯಕಿರಣಗಳಿಂದ ತಾವರೆಯದಳ ಅರಳುವಂತೆ ವಿಕಾಸಗೊಳ್ಳುವುದು. ಹೀಗೆಯೇ ರಾಜಕುಮಾರರೂ ಸಹ ಗುರುಗಳ ಸಲಹೆ ಸೂಚನೆಗಳನ್ನು ಶಿರಸಾ ಪಾಲಿಸಿ, ಬಗೆಬಗೆಯ ಪ್ರಶ್ನೆಗಳನ್ನು ಕೇಳುತ್ತಾ, ವಿಚಾರಗಳನ್ನು ಚೆನ್ನಾಗಿ ಅರ್ಥೈಸಿಕೊಂಡು ಬಹಳ ಉತ್ತಮ ಕಲಿಕೆಯನ್ನು ರೂಢಿಸಿಕೊಂಡರು. ಗುರುಗಳ ಪ್ರೇರೇಪಣೆ ಹಾಗೂ ಅನುಗ್ರಹ ಅಷ್ಟೇ ಮುಖ್ಯವಾಗಿತ್ತು.

ಕೊನೆಯಲ್ಲಿ ವಿಷ್ಣುಶರ್ಮರು, ಕೊಟ್ಟ ಮಾತನ್ನು ಉಳಿಸಿಕೊಳ್ಳುವಂತೆ, ರಾಜಕುಮಾರರು ಶ್ರದ್ಧೆಯಿಂದ, ಸತತ ಪರಿಶ್ರಮದಿಂದ ತಮ್ಮ ವರ್ತನೆಯನ್ನು ಪರಿವರ್ತನೆ ಮಾಡಿಕೊಂಡು, ಉತ್ತಮ ವಿದ್ಯಾರ್ಥಿಗಳಾಗಿ ನಡೆದುಕೊಂಡದ್ದಕ್ಕೆ ಅಭಿನಂದಿಸಿ, ಆಶೀರ್ವದಿಸಿ ಸಭೆಯಿಂದ ನಿರ್ಗಮಿಸಿದರು. ಆಸ್ಥಾನದಲ್ಲಿದ್ದ ಸರ್ವರೂ ಎದ್ದು ನಿಂತು ಗೌರವದಿಂದ ಅವರನ್ನು ಬೀಳ್ಕೊಟ್ಟರು. ನಿಜಕ್ಕೂ ಗುರುಶಿಷ್ಯರ ಬಾಂಧವ್ಯ ಎಂದರೆ ಹೀಗಿರಬೇಕು. ಈ ಸಂದರ್ಭ ಎಷ್ಟು ಭಾವನಾತ್ಮಕವಾಗಿದೆ ಎಂದರೆ, ಆಳವಾಗಿ ಅಧ್ಯಯನ ಮಾಡುತ್ತಾ, ಕಥೆಯ ಕಲ್ಪನಾಲೋಕದಲ್ಲಿ ಕೇಂದ್ರೀಕೃತವಾದ ಮನಸ್ಸಿಗೆ ಒಂದು ಕ್ಷಣ ನಾವು ಅಲ್ಲೇ ಇದ್ದೇವೆಯೋ ಎಂದೆನ್ನಿಸಿ ವಿರಹವೇದನೆ ಉಂಟಾಗುತ್ತದೆ. ಪ್ರತಿಭಾನ್ವಿತ ಶಿಕ್ಷಕರ ವೃತ್ತಿಕೌಶಲ್ಯ, ವೃತ್ತಿಗೌರವ, ನಿಸ್ವಾರ್ಥ ಸೇವಾ ಮನೋಭಾವನೆ ಎಂಥಹ ಆದರ್ಶಪ್ರಾಯವಾಗಿದೆ !!



68. **ಉಪೇಂದ್ರ ಸೋಮಯಾಜಿ ಚಿತ್ರಪಾಡಿ,** ಬದುಕಿನ ಮಂತ್ರ ಪಂಚತಂತ್ರ-ಅಪರೀಕ್ಷಿತಕಾರಕಂ, ಪು-236,(2015) ವರ್ಣಿಲ, 39/2-11, ಕಲ್ಯಾಣಿ ಗಾರ್ಡನ್, ಬನಶಂಕರಿ 1ನೇ ಹಂತ, ಬೆಂಗಳೂರು-560050

69. **ಸುಭಾಷಿತಮಂಜರೀ,** ಶ್ಲೋ-559, ಪು-503, ಸುಭಾಷಿತರತ್ನಭಾಂಡಾಗಾರ.(2001)ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು-18

# ಉಪಸಂಹಾರ

**"ವಿಷ್ಣುಶರ್ಮರ ಪಂಚತಂತ್ರದಲ್ಲಿ ಶೈಕ್ಷಣಿಕ ಮನೋವಿಜ್ಞಾನ ಮತ್ತು ವ್ಯಕ್ತಿತ್ವ ನಿರ್ಮಾಣ ಕಲೆ"** ಎಂಬ ವಿಷಯದ ಬಗ್ಗೆ ಅಧ್ಯಯನಮಾಡಿ ವಿವಿಧ ಅಧ್ಯಾಯಗಳಲ್ಲಿ ವಿಷಯ ಮಂಡನೆ ಮಾಡಿದ ನಂತರದಲ್ಲಿ ಪ್ರತಿಪಾದನೆಯ ಸಾರವನ್ನು ಉಪಸಂಹಾರದಲ್ಲಿ ಒದಗಿಸುವುದು ಕ್ರಮವಾಗಿದೆ.

**ಪಂಚತಂತ್ರ** ಮತ್ತು **ಹಿತೋಪದೇಶ**ಗಳೆರಡೂ ತಿಳಿಗೇಡಿ ರಾಜಕುಮಾರರಿಗೆ ರಾಜನೀತಿಯಲ್ಲಿ ತರಬೇತಿ ನೀಡಲು ರಚಿತವಾದವು. ಆದ್ದರಿಂದ ಇವುಗಳಲ್ಲಿ ಅರಸನಿಗಿರಬೇಕಾದ ರಾಜಕಾರಣ ಕುಶಲತೆಯ ಮತ್ತು ಮುತ್ಸದ್ದಿತನದ ಚಿತ್ರವಿದೆ. ವಿಶ್ವವ್ಯಾಪಿ ಪ್ರಭಾವವನ್ನುಳ್ಳ ವಿಷ್ಣುಶರ್ಮರು ರಚಿಸಿದ ಸಂಸ್ಕೃತ ಪಂಚತಂತ್ರ ಕೃತಿಯು ವಿಶ್ವಸಾಹಿತ್ಯಕ್ಕೆ ಭಾರತೀಯ ಸಾಹಿತ್ಯ ಸಮರ್ಪಿಸಿದ ದೊಡ್ಡ ಕೊಡುಗೆ. ಇದರ ವಿಶ್ವಪರ್ಯಟನವು ನಿಜಕ್ಕೂ ರೋಮಾಂಚನಕಾರಿಯಾದುದು. ಜಗತ್ತಿನ ಅನೇಕ ಭಾಷೆಗಳಿಗೆ ಅನುವಾದಗೊಂಡಿರುವ ಕೃತಿಗಳಲ್ಲಿ ಬೈಬಲ್ ನಂತರದ ಸ್ಥಾನವನ್ನು ಪಂಚತಂತ್ರ ಪಡೆದಿದೆ. ಪಂಚತಂತ್ರ ಮೂರ್ಖನನ್ನೂ ವ್ಯವಹಾರ ಕುಶಲನನ್ನಾಗಿ ಮಾಡುವ ಸಂಸ್ಕೃತ ಭಾಷೆಯ ಕೊಡುಗೆ. ವಿಶಿಷ್ಟವಾದ ಐದು ತಂತ್ರಗಳು ರಾಜನ ಮತ್ತು ಸಾಮಾನ್ಯ ವ್ಯಕ್ತಿಯ ದೈನಂದಿನ ಜೀವನಕ್ಕಾಗಿ ಮಾರ್ಗದರ್ಶಕ ತತ್ವಗಳಾಗಿವೆ. ಇದರಲ್ಲಿ ಅರ್ಥಶಾಸ್ತ್ರದ ಐದು ತಂತ್ರಗಳನ್ನು ನಿರೂಪಿಸಿರುವುದರಿಂದ **"ಪಂಚತಂತ್ರ"** ಎಂದು ಹೆಸರಾಗಿದೆ. ಇದು ಗದ್ಯಾತ್ಮಕವಾಗಿಯೇ ರಚಿತವಾಗಿದ್ದರೂ ಮಧ್ಯೆ ಮಧ್ಯೆ ಬೋಧಪ್ರದವಾದ ಮನೋವೈಜ್ಞಾನಿಕ ಅನೇಕ ನೀತಿಪ್ರದ ಶ್ಲೋಕಗಳು ಸೇರಿಕೊಂಡಿವೆ. ಸುಮಾರು ಎರಡೂವರೆ ಮಿಲೇನಿಯಮ್ ವರ್ಷಗಳಿಂದಲೂ ಪಂಚತಂತ್ರ ಕಥೆಗಳು ಮಕ್ಕಳು ಹಾಗೂ ದೊಡ್ಡವರಿಗೆ ಸಮಾನವಾಗಿ ಪ್ರತಿಕಥೆಯ ಅಂತ್ಯದಲ್ಲೂ ಒಂದು ನೀತಿಯನ್ನು ಬೋಧಿಸುತ್ತವೆ. ಕೆಲವರು ಈ ಕಥೆಗಳನ್ನು ಋಗ್ವೇದದಷ್ಟು ಹಳೆಯದು ಎಂದು ಹೇಳುತ್ತಾರೆ.[1]

ಪ್ರಬಂಧದ ವಿಷಯಕ್ಕೆ ಸಂಬಂಧಿಸಿದಂತೆ, ಮನೋವಿಜ್ಞಾನದ ವ್ಯಾಪ್ತಿಯಲ್ಲಿ ಬರುವ ಅನ್ವಯಿಕ ಮನೋವಿಜ್ಞಾನದ ಒಂದು ಶಾಖೆಯಾಗಿರುವ ಶೈಕ್ಷಣಿಕ ಮನೋವಿಜ್ಞಾನದ ಪರಿಕಲ್ಪನೆಗಳನ್ನು ಅನ್ವಯಿಸಿ ವಿಶ್ಲೇಷಿಸಲಾಗಿದೆ.

ಇದರಲ್ಲಿ ಅಡಕವಾಗಿರುವ ಶೈಕ್ಷಣಿಕ ಮನೋವಿಜ್ಞಾನ ಅಂದರೆ ಬೆಳೆಯುವ ಎಳಸಾದ ಬುದ್ಧಿ ಕೇಂದ್ರಕ್ಕೆ ಧರ್ಮ, ನೀತಿ – ವ್ಯವಹಾರಗಳನ್ನು ಪರಸ್ಪರ ಬಾಧಕವಿಲ್ಲದಂತೆ ಕಥಾ ರೂಪವಾಗಿ ಭೋದಿಸುವ ಮೊದಲನೆಯ ಗ್ರಂಥವೆಂದರೆ ಪಂಚತಂತ್ರವೆ. ಇಲ್ಲಿನ ಪ್ರತಿಯೊಂದು ಕಥೆಯಲ್ಲೂ ಧರ್ಮವು ಆತ್ಮಸ್ಥಾನದಲ್ಲೂ,

1. सत्यकाम विद्यालंकार, अनुवादक,पंचतन्त्र, विष्णुशर्मा, भूमिका–P–05–06,राजपाल एण्ड सन्ज़,1590,मदरसा रोड,काश्मीरी गेट,–दिल्ली–110006

ನೀತಿಯು ಇಂದ್ರಿಯ ಸ್ಥಾನಗಳಲ್ಲೂ, ವ್ಯವಹಾರವು ಒಡಲಿನ ಸ್ಥಾನದಲ್ಲಿಯೂ ಇರುತ್ತದೆ. ನೀತಿಕಥೆಗಳಲ್ಲಿ ಮೃಗಪಕ್ಷಿಗಳು, ಕೆಲವೆಡೆ ಗಿಡಮರಗಳನ್ನು ನೀತಿವಿಜ್ಞಾನ ಭೋದಿಸಲು ಆರಿಸಿಕೊಂಡಿರುವುದರ ವಿಶೇಷತೆ ಏನೆಂದರೆ, ಇದು ಮಕ್ಕಳ ಬುದ್ಧಿಕೇಂದ್ರಕ್ಕೂ, ಹೃದಯಕ್ಕೂ, ಕೆಲವೆಡೆ ವಯಸ್ಕರ ಮನಸ್ಸಿಗೂ ಅತ್ಯಂತ ಪ್ರಿಯವೂ ಪರಿಣಾಮಕಾರಿಯೂ ಆಗಿರುವುದೆಂದರೆ ಯಾವ ಅತಿಶಯೋಕ್ತಿಯೇನಲ್ಲ. ಹೀಗಾಗಿ ಪ್ರಕೃತ ಒಬ್ಬ ಹಿರಿಯ ಅರ್ಥಶಾಸ್ತ್ರರಹಸ್ಯಜ್ಞರೂ, ಜೀವನವಿಜ್ಞಾನವನ್ನು ಚೆನ್ನಾಗಿಬಲ್ಲ ಪಂಡಿತಜ್ಞರೂ ಹಾಗೂ ಸಕಲಶಾಸ್ತ್ರಪರಿಣಿತರೂ ಆಗಿದ್ದ ವಿಷ್ಣುಶರ್ಮರು ಮೂಲಪುರುಷರ ಸ್ಮರಣೆಯೊಂದಿಗೆ ಪಂಚತಂತ್ರ ಗ್ರಂಥವನ್ನು ಹೊರತಂದಿರುವರು. ಇದರ ಫಲಶೃತಿಯಾಗಿ

अधीते यः इदं नित्यं नीतिशास्त्रं शृणोति च ।

न पराभवमाप्नोति शक्रादपि कदाचन ॥[2]

ಅದೇ ರೀತಿಯಲ್ಲಿ ಪಂಡಿತ ವಿಷ್ಣುಶರ್ಮರು ಮೂವರು ದಡ್ಡ ಶಿಖಾಮಣಿಗಳೆನ್ನಿಸಿಕೊಂಡಿದ್ದ ರಾಜಕುಮಾರರಿಗೆ ಒಳ್ಳೆಯ ಕಲಿಕಾ ಸನ್ನಿವೇಶ ಸೃಷ್ಟಿಸಿ, ಅವರ ಸ್ವಭಾವ ಮತ್ತು ಭಾವನೆಗಳನ್ನು ಅರಿತು, ಅವರ ಸರ್ವತೋಮುಖ ಬೆಳವಣಿಗೆಗೆ ಆಕರ್ಷಕ ನೀತಿಕಥೆಗಳನ್ನು ಭೋದಿಸುತ್ತಾ, ಭೌದ್ಧಿಕ ಪ್ರಗತಿಯತ್ತ ಮುನ್ನಡೆಸಿಕೊಂಡು, ಅವರನ್ನು ರಾಜನೀತಿ ನಿಪುಣರು ಹಾಗೂ ಬದುಕಿನ ವ್ಯವಹಾರ ಚತುರರೂ ಆಗುವಂತೆ ಉತ್ತಮ ಶಿಕ್ಷಣ ನೀಡಿದ್ದಾರೆ. ಈ ಸಾಧನೆ ನಿಜಕ್ಕೂ ಇಂದಿಗೂ ಶಿಕ್ಷಕ ವೃತ್ತಿಯಲ್ಲಿ ತೊಡಗಿಸಿ ಕೊಂಡಿರುವ ಪ್ರತಿಯೊಬ್ಬ ಶಿಕ್ಷಕನಿಗೂ ಹಾಗೂ ವ್ಯಕ್ತಿತ್ವ ವಿಕಸನ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುವ ಅನೇಕರಿಗೂ ಒಂದು ಮಾದರಿಯೂ, ಮಾರ್ಗದರ್ಶಕವೂ ಆಗಿದೆ. ಪಂಚತಂತ್ರಗಳನ್ನು ಸರಿಸುಮಾರು ಎರಡು ಸಾವಿರ ವರ್ಷಗಳ ಪೂರ್ವದಲ್ಲೇ ಬರೆಯಲಾಗಿದೆ. ಆದರೆ ಅದರಲ್ಲಿರುವ ಮೌಲಿಕ ಜ್ಞಾನದಿಂದ ಅದು ಇಂದಿಗೂ ಲೋಕಪ್ರಿಯ ಮತ್ತು ಮಾನವನ ಜೀವನದಲ್ಲಿ ಉನ್ನತ ಮೌಲ್ಯಗಳನ್ನು ಪರಿಚಯಿಸಲು ಪಂಚತಂತ್ರ ಒಂದು ಉತ್ತಮ ವಿಧಾನವಾಗಿದೆ. ಸಾಮಾನ್ಯ ಜನರೂ ಸಹ ಒಂದು ಉತ್ತಮವಾದ ಬದುಕಿನ ವ್ಯವಹಾರಗಳ ನೀತಿಶಿಕ್ಷಣವನ್ನು ಮನೋರಂಜಕವಾಗಿ, ಮನೋಜ್ಞವಾಗಿ ತಿಳಿದುಕೊಳ್ಳಲು ಅವಕಾಶವಿದೆ. ಹಾಗೆಯೇ ತಮ್ಮತಮ್ಮ ಮಕ್ಕಳಿಗೆ ಸರಳವಾಗಿ, ಆಕರ್ಷಕವಾಗಿ ಪ್ರೀತಿಯಿಂದ ಒಳ್ಳೆಯ ವ್ಯಕ್ತಿತ್ವ ವಿಕಸನಗೊಳ್ಳಲು ಮಾರ್ಗದರ್ಶನ ನೀಡಬಹುದು. ಪಂಚತಂತ್ರದಲ್ಲಿ ಒಟ್ಟು ಎಂಭತ್ತೇಳು ಕಥೆಗಳಿವೆ. ಪ್ರತಿಯೊಂದು ಕಥೆಯಲ್ಲಿ ಒಂದು ಬಹುಮೂಲ್ಯ ನೀತಿಯು ಅಡಗಿದೆ. ಈ ಕಥೆಗಳ ಮೂಲಕ ಮನೋವಿಜ್ಞಾನ, ವ್ಯವಹಾರಿಕ ಮತ್ತು ರಾಜನೀತಿ ಸಿದ್ಧಾಂತಗಳ ಪರಿಚಯ

---

2. सुधाकर मालवीय, सम्पादक एवं व्याख्याकार, श्री विष्णशर्मविरचितं पञ्चतन्त्रम्, कथामुखम्–श्लोक–10,पु–10, चौकाम्बा कृष्णदास अकादमी, K.37/118, Gopal Mandir Lane,PB No-1118,वाराणसी-221001 (INDIA)

ಆಗುತ್ತದೆ. ಸಂಸ್ಕೃತ ಸಾಹಿತ್ಯದಲ್ಲಿ ಪಂಚತಂತ್ರಗಳಿಗೆ ಪ್ರಮುಖ ಸ್ಥಾನ ಪ್ರಾಪ್ತವಾಗಿದೆ. ಇದು ಬಹಳ ಸೂಕ್ತವೂ, ಸಮಂಜಸವೂ ಆಗಿರುತ್ತದೆ.

ಪಂಚತಂತ್ರವನ್ನು ಒಂದು ವಿಶೇಷ ಅಧ್ಯಯನದ ಗ್ರಂಥವಾಗಿ ಪರಿಶೀಲಿಸಿದಾಗ, ಇದರಲ್ಲಿ ಪಂಚತಂತ್ರಗಳ ಕಥಾಸಂಗಮ ಬಹಳ ವ್ಯವಸ್ಥಿತವಾಗಿ ಸಂಯೋಜನೆ ಮಾಡಲಾಗಿದೆ. ಪ್ರತಿ ತಂತ್ರದಲ್ಲಿ ಒಂದು ಸೂತ್ರ ಕಥೆ, ಅದಕ್ಕೆ ಸೂಕ್ತವಾದ ಸಣ್ಣ ಸಣ್ಣ ಉಪಕಥೆಗಳು, ಪ್ರತೀ ಕಥೆಯ ಪ್ರಾರಂಭದಲ್ಲಿ ಒಂದು ಉಕ್ತಿ, ಉಕ್ತಿಯ ಅರ್ಥಪೂರ್ಣ ವಿವರಣೆಗಾಗಿ ಒಂದು ಒಳ್ಳೆಯ ಸನ್ನಿವೇಶ, ಅದಕ್ಕೆ ಸರಿಯಾದ ಪ್ರಸಂಗಗಳನ್ನು ನಿರೂಪಿಸುತ್ತಾ, ಸ್ವಾರಸ್ಯಕರವಾಗಿ ಮುಂದುವರೆದು ಅಂತ್ಯದಲ್ಲಿ ಮತ್ತೊಂದು ಉಕ್ತಿಯನ್ನು ವ್ಯಕ್ತಪಡಿಸುತ್ತಾ, ಕೊಂಡಿ ಕಳಚದಂತೆ ಮುಂದಿನ ಕಥೆಗೆ ಕೂತೂಹಲದಿಂದ ಮುನ್ನುಗ್ಗುವಂತೆ ಓದುಗರನ್ನು ಅಥವಾ ಕೇಳುಗರನ್ನು ಪ್ರೇರೇಪಿಸಿ  ಮಾರ್ಗಸೂಚನೆ ಮಾಡುತ್ತದೆ.

ಹೀಗೆ ಉಕ್ತಿಯಿಂದ ಪ್ರಸಂಗ-ಪ್ರಸಂಗದಿಂದ ನಿರೂಪಣೆ, ನಿರೂಪಣೆ ಮಧ್ಯೆ ಮಧ್ಯೆ ಸುಭಾಷಿತಗಳು, ನಾಣ್ಣುಡಿಗಳು, ಗಾದೆಗಳು, ನೀತಿಸೂಕ್ತಿಗಳು ಇತ್ಯಾದಿಗಳಿಂದ ಅಲಂಕೃತವಾಗಿದ್ದು ಕಥೆಯು ಅರ್ಥಪೂರ್ಣವಾಗಿ ಬೆಳೆದು ಅಂತ್ಯದಲ್ಲಿ ಮತ್ತೊಂದು ಉಕ್ತಿಯೊಂದಿಗೆ ಮುಕ್ತಾಯಗೊಳ್ಳುತ್ತದೆ. ಪಂಚತಂತ್ರದ ಮಿತ್ರಭೇದ ತಂತ್ರದಲ್ಲಿ ಮಿತ್ರದ್ರೋಹವನ್ನು ಕುರಿತು ಒಳ್ಳೆಯ ಎಚ್ಚರಿಕೆ ನೀಡಿರುವುದನ್ನು ಗಮನಿಸಬಹುದು:-

मित्रद्रोही कृतघ्नश्च यश्च विश्वासघातकः ।

ते नरा नरकं यान्ति यावच्चन्द्र दिवाकरौ ॥[3]

ಶೈಕ್ಷಣಿಕಮನೋವಿಜ್ಞಾನದಲ್ಲಿ, ಕಲಿಕೆ ಹಾಗೂ ಕಲಿಸುವ ವಿಚಾರದಲ್ಲಿ, ಸಮರ್ಪಕ ಬೋಧನಾ ವಿಧಾನಗಳನ್ನು ತಿಳಿಸುವಾಗ, ಪರಿಣಾಮಕಾರಿ ಕಲಿಕೆಯಾಗಬೇಕಾದರೆ ಮಕ್ಕಳನ್ನು ಕಲಿಕೆಗೆ ಮೊದಲು ಅಭಿಪ್ರೇರಿಸಬೇಕು ಮತ್ತು ಅವರ ಅವಧಾನವನ್ನು ಕಾಯ್ದುಕೊಳ್ಳಬೇಕು. ಅವರ ಸ್ಮೃತಿಶಕ್ತಿಯನ್ನು, ಆಲೋಚನಾ, ವಿವೇಚನಾ ಶಕ್ತಿಯನ್ನು ಹೆಚ್ಚಿಸುವ ಕ್ರಮಗಳನ್ನು ಕೈಗೊಳ್ಳಬೇಕು. ಕಲಿಯುತ್ತಿರುವ ಮಕ್ಕಳಮಟ್ಟಕ್ಕೆ ಸರಿಹೊಂದುವ ಬೋಧನಾಮಾಧ್ಯಮವನ್ನು ನಿಶ್ಚಯಿಸಿಕೊಳ್ಳಬೇಕು. ವಿದ್ಯಾರ್ಥಿಗಳ ಸರ್ವತೋಮುಖ ವಿಕಾಸವೇ ಶಿಕ್ಷಣದ ಪ್ರಮುಖ ಗುರಿಯಾಗಿರುವುದರಿಂದ, ಜ್ಞಾನಾತ್ಮಕವಿಕಾಸಕ್ಕೆ ಕೊಟ್ಟಷ್ಟೇ ಮಹತ್ವವನ್ನು ಸಂವೇಗಾತ್ಮಕ ಹಾಗೂ ಸಾಮಾಜಿಕ ವಿಕಾಸಕ್ಕೆ ನೀಡಬೇಕಾಗುತ್ತದೆ. ವ್ಯಕ್ತಿಯ ಅಗತ್ಯತೆಗಳು, ಪ್ರೇರಕಗಳು ಮತ್ತು ಬಯಕೆಗಳನ್ನು ತಿಳಿಯಬೇಕಾಗುತ್ತದೆ. ವಿದ್ಯಾರ್ಥಿಗಳ ಅಗತ್ಯತೆಗಳು ಹಾಗೂ ಉದ್ದೇಶಗಳನ್ನು

3. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಪ್ರ.ತಂ- ಶ್ಲೋ-454,ಪು-299,ಶ್ಲೋ-9,ಪು-7,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ಗಮನದಲ್ಲಿ ಇಟ್ಟುಕೊಂಡು ಪಠ್ಯಕ್ರಮವನ್ನು ಶಿಕ್ಷಣತಜ್ಞರು ಅಥವಾ ಶಿಕ್ಷಕರು ರೂಪಿಸಿಕೊಳ್ಳಬೇಕು. ವಿದ್ಯಾರ್ಥಿಗಳ ಸಾಮರ್ಥ್ಯಕ್ಕನುಗುಣವಾಗಿ ಅಗತ್ಯಜ್ಞಾನ ಹಾಗೂ, ಅವರಲ್ಲಿ ಸಾಮಾಜಿಕ ಹಾಗೂ ಭಾವನಾತ್ಮಕ ವಿಕಾಸವನ್ನು ಉತ್ತೇಜಿಸಲು ಮಾರ್ಗದರ್ಶನ ಹಾಗೂ ಸಲಹಾ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕು. ನಂತರದಲ್ಲಿ ಉತ್ತಮ ವ್ಯಕ್ತಿತ್ವನಿರ್ಮಾಣಕ್ಕೆ ಅಗತ್ಯವಾದ ಬುನಾದಿಯನ್ನು ಹಾಕಿಕೊಟ್ಟು, ಅವನನ್ನು ಉತ್ತಮ ಪ್ರಜೆಯೋ ಅಥವಾ ಪ್ರಜಾಪಾಲಕನೋ ಅವನ ಸಾಮರ್ಥ್ಯಕ್ಕೆ ತಕ್ಕಂತೆ ಜನ್ಮಸಾರ್ಥಕತೆಯತ್ತ ತಲುಪಿಸಬೇಕು.[4]

अनन्तपारं किल शब्दशास्त्रं स्वल्पं तथाऽऽयुर्बहवश्च विघ्नाः।

सारं ततो ग्रहमपास्य फल्गु हंसैर्यथा क्षीरमिवाम्बुमध्यात् ॥[5]

ಅಂದರೆ ಈ ಜೀವನವು ಶಾಶ್ವತವಲ್ಲ ಮತ್ತು ಶಾಸ್ತ್ರಗಳನ್ನೆಲ್ಲಾ ದೀರ್ಘ ಕಾಲದಿಂದ ಅಭ್ಯಾಸ ಮಾಡಬೇಕು. ಆದ್ದರಿಂದ ಶಾಸ್ತ್ರವನ್ನು ಸಂಕ್ಷೇಪದಲ್ಲಿ ಇವರಿಗೆ ಬೋಧಿಸಲು ಬಹಳ ವಿಚಾರಮಾಡಿ ಬೋಧಿಸುವ ಪ್ರತಿಭಾವಂತ ಗುರುಗಳು ಬೇಕು. ವ್ಯಾಕರಣ ಇತ್ಯಾದಿ ಶಾಸ್ತ್ರಗಳಿಗೆ ಕೊನೆಯೆಂಬುದಿಲ್ಲ. ಅಲ್ಲದೇ ಇರುವ ಕಡಿಮೆ ಆಯಸ್ಸಿನಲ್ಲಿ ವಿಘ್ನಗಳು ನೂರೆಂಟು. ಆದ್ದರಿಂದ ಹಂಸಗಳು ಹಾಲನ್ನು ನೀರಿನಿಂದ ಬೇರ್ಪಡಿಸಿ ಹೇಗೆ ಕುಡಿಯುತ್ತವೆಯೋ ಹಾಗೆ ಶಾಸ್ತ್ರಗಳಲ್ಲಿ ಸತ್ವವಿಲ್ಲದ್ದನ್ನು ಬದಿಗಿಟ್ಟು, ಕೇವಲ ಸಾರಭರಿತವಾದುದನ್ನು ಮಾತ್ರ ಕಲಿತುಕೊಳ್ಳಬೇಕು. ಹೀಗೆ ಚಮತ್ಕಾರದಿಂದ ಬೋಧಿಸಲು ವಿಷ್ಣುಶರ್ಮರೇ ಸರಿಯೆಂದು ಸುಮತಿ ಎಂಬ ಸಚಿವರು ರಾಜನಿಗೆ ಸಲಹೆ ಮಾಡಿದ್ದರು.

ಸಕಲಶಾಸ್ತ್ರಪಾರಂಗತರಾದ ವಿಷ್ಣುಶರ್ಮರು ಅಮರಶಕ್ತಿ ರಾಜನ ಮೂವರು ಮೂರ್ಖಪುತ್ರರನ್ನು ಗಮನಿಸಿ, ಅವರ ಕೌಟುಂಬಿಕ ಹಿನ್ನೆಲೆ, ಅವರು ಹೇಗೆ ಮೂರ್ಖ, ಆಲಸಿ ಹಾಗೂ ಉದ್ಧಟರಾಗಿದ್ದಾರೆ? ಅವರ ವರ್ತನೆಯಲ್ಲಿ ಪರಿವರ್ತನೆ ತರಲು ಸಾಧ್ಯವಾಗುತ್ತದೆಯೇ? ಸಾಧ್ಯವಾಗುವುದಾದರೆ ಯಾವ ರೀತಿಯ ಶಿಕ್ಷಣ ಬೋಧನೆ, ಪಠ್ಯಕ್ರಮ? ಈ ಎಲ್ಲವನ್ನೂ ಕೂಲಂಕಶವಾಗಿ ಪರಿಶೀಲಿಸಿ, ಕೇವಲ ಆರು ತಿಂಗಳುಗಳಲ್ಲಿ ನೀತಿಶಾಸ್ತ್ರ ಕುಶಲರನ್ನೂ, ವಿದ್ಯಾಬುಧ್ಧಿಸಂಪನ್ನರನ್ನೂ ಮಾಡಬಲ್ಲೆನು ಎಂಬ ಧೃಢಸಂಕಲ್ಪದಿಂದ, ಚಾಣಕ್ಯನು ಹೇಗೆ ಆಯುಧಪಾಣಿಗಳಾಗಿದ್ದರೂ ನವನಂದರನ್ನು ತನ್ನ ಬುದ್ಧಿಶಕ್ತಿಯಿಂದ ಸಂಹರಿಸುವ ಪ್ರತಿಜ್ಞೆ ಮಾಡಿದನೋ, ಅದೇರೀತಿ ಪ್ರತಿಜ್ಞೆ ಮಾಡಿ, **"ಇದಕ್ಕೆ ತಪ್ಪಿದರೆ ದೇವಲೋಕಕ್ಕೆ ಕಳುಹಿಸಬಹುದು"** ಎಂದು ರಾಜನಿಗೆ ಹೇಳಿದರು. ಇಲ್ಲಿ ಶೈಕ್ಷಣಿಕ ಮನೋವಿಜ್ಞಾನದ ಕ್ರಮದಲ್ಲಿ ಹೇಗೆ ವೀಕ್ಷಣೆ**(Observation)**,

---

4. **ವೀರಪ್ಪ. ಎನ್. ಎಸ್,** ಶಿಕ್ಷಣದಲ್ಲಿ ಮನೋವಿಜ್ಞಾನ, ಅ-12,ಪು-243-245, (1962) ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-4
5. **ಸುಧಾಕರ್ ಮಾಲವೀಯ,** ಸಂಪಾದಕರು ಹಾಗೂ ವ್ಯಾಖ್ಯಾನಕಾರರು, ಶ್ರೀ ವಿಷ್ಣುಶರ್ಮವಿರಚಿತಂ ಪಂಚತಂತ್ರಂ, ಕಥಾಮುಖಂ- ಶ್ಲೋ-9,ಪು-7,(1993) ಚೌಕಾಂಬಾ ಕೃಷ್ಣದಾಸ್ ಅಕಾಡೆಮಿ, ವಾರಣಾಸಿ-221001.

ವ್ಯಕ್ತಿ ಅಧ್ಯಯನ **(Case Study)** ಮಾಡುತ್ತಾರೆಯೋ, ಹಾಗೆಯೇ ಮೇಧಾವಿ ವಿಷ್ಣುಶರ್ಮರು ಮೊದಲು ನೈದಾನಿಕಹಂತದಲ್ಲಿ ರಾಜಕುಮಾರರ ಎಲ್ಲ ಪೂರ್ವಾಪರ ಸ್ಥಿತಿಗಳನ್ನು ಕೂಲಂಕಶವಾಗಿ ಸಂಗ್ರಹಿಸಿ, ವಿಶ್ಲೇಷಿಸಿ, ನಂತರದಲ್ಲಿ ಒಂದು ನಿರ್ಧಾರಕ್ಕೆ ಬಂದು, ಪರಿಹಾರ ಅಥವಾ ಸುಧಾರಣೆ ಹಂತದಲ್ಲಿ ವ್ಯಕ್ತಿಯಲ್ಲಿ ಅಪೇಕ್ಷಿತ ಬದಲಾವಣೆಗಳನ್ನು ತರಲು ಸೂಕ್ತ ಯೋಜನೆ ಸಿದ್ಧಪಡಿಸಿ, ಅಗತ್ಯವಾದ ಮೂಲ ಕೌಶಲಗಳನ್ನು ಬೆಳೆಸಿ, ಪರಿಹಾರವನ್ನು ಒದಗಿಸಿದ್ದಾರೆ.

ಅದೇರೀತಿ ರಾಜಕುಮಾರರನ್ನು ವಿಶ್ವಾಸಕ್ಕೆ ತೆಗೆದುಕೊಂಡು, ಅಂದರೆ ಶೈಕ್ಷಣಿಕ ಮನೋವಿಜ್ಞಾನದಲ್ಲಿ ಹೇಳುವಂತೆ **"ಬೋಧಿಸುವ ಮೊದಲು ವಿದ್ಯಾರ್ಥಿಗಳೊಡನೆ ಉತ್ತಮ ಬಾಂಧವ್ಯ ಅಥವಾ ಸಹೃದಯ ಸಂಬಂಧ (Rapport) ಬೆಳೆಸಿಕೊಳ್ಳಬೇಕು."** ಅವರಲ್ಲಿ ವಿಶೇಷ ಆಸಕ್ತಿಯನ್ನು ಪ್ರೇರೇಪಿಸಿ, ಬೋಧನಾ ಮಾಧ್ಯಮವನ್ನು ಕಥಾನಿರೂಪಣೆಯೇ ಸೂಕ್ತವಾದ ವಿಧಾನವೆಂದು ನಿರ್ಧರಿಸಿ ರಾಜನೀತಿ ಶಿಕ್ಷಣ, ನೀತಿಶಾಸ್ತ್ರ ಹಾಗೂ ಸುಂದರ ಬದುಕಿನ ಕಲೆ ಇವುಗಳೇ ಇವರ ಉಜ್ವಲ ಭವಿಷ್ಯಕ್ಕೆ ಅಪೇಕ್ಷಣೀಯ ಹಾಗೂ ಅಮರಶಕ್ತಿ ರಾಜನಿಗೆ ಅಮಿತಾನಂದಕರ ಎಂದು ಯೋಚಿಸಿ, ಸೂಕ್ತ ಪಠ್ಯಕ್ರಮ ರೂಪಿಸಿದ ವಿಷ್ಣುಶರ್ಮರ ವಿದ್ಯಾಚಮತ್ಕಾರ, ವ್ಯಕ್ತಿತ್ವ ನಿರ್ಮಾಣ ಕೌಶಲ್ಯ ಹಾಗೂ ನೀತಿಶಾಸ್ತ್ರ ಪಾಂಡಿತ್ಯ ಅತ್ಯದ್ಭುತವಾದದ್ದು. ಅವರ ಪಂಚತಂತ್ರ ಕೃತಿರತ್ನ ಅಷ್ಟೇ ಅಮೂಲ್ಯವಾದದ್ದು. ಈ ಗ್ರಂಥವು ನೀತಿಶಾಸ್ತ್ರ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಸಾಮಾನ್ಯ ಜ್ಞಾನ, ಇನ್ನೂ ಅನೇಕ ವಿಚಾರಗಳನ್ನು ಹೊಂದಿರುವ ಕಲ್ಪವೃಕ್ಷವಾಗಿದೆ. ಗಂಭೀರವಾಗಿ ಅಧ್ಯಯನ ಮಾಡಿದರೆ ಚಿಕ್ಕವರಿಂದ ಹಿಡಿದು ದೊಡ್ಡವರವರೆಗೂ ಸುವ್ಯವಸ್ಥಿತ ಕಥಾಗುಚ್ಛಗಳಲ್ಲಿ ಉತ್ತಮ ಶೈಕ್ಷಣಿಕ ಮಾರ್ಗದರ್ಶನವಿದೆ. ಆದರೆ ಮುತ್ತಿನ ಚಿಪ್ಪನ್ನಾಯುವ ಕುಶಲಕರ್ಮಿಯ ಚಾಣಾಕ್ಷತೆ ಇರಬೇಕು. ಇದು ಬದುಕನ್ನು ಹಸನುಗೊಳಿಸುವ, ವ್ಯಕ್ತಿತ್ವ ವಿಕಸನಕ್ಕೆ ನೆರವಾಗುವ ಎಲ್ಲ ವಿಚಾರಗಳೂ ಈ ವಿಶಿಷ್ಟ ಗ್ರಂಥದಲ್ಲಿದ್ದು ಬದುಕಿನ ಜ್ಞಾನಕೋಶವಾಗಿದೆ.

ಪಂಚತಂತ್ರ ನೀತಿಕಥೆಗಳು ಪ್ರಸ್ತಾವನೆಯಲ್ಲಿ ಮೂರು ಪದಗಳು ನಮಗೆ ಒಂದು ವಿಶೇಷ ಸುಳಿವನ್ನು ನೀಡುತ್ತವೆ. बुद्धिप्रबोधनम् – ಅಂದರೆ ಬೌದ್ಧಿಕ ಜಾಗೃತಿ – ಪ್ರಬುದ್ಧ – ಬೌದ್ಧಿಕ ಸಂಪೂರ್ಣ ಜಾಗೃತಿಯೊಂದಿಗೆ ಆಳವಾದ ಮತ್ತು ವ್ಯಾಪಕ ತಿಳುವಳಿಕೆಯನ್ನು ಪ್ರ–ಎಂಬ ಪೂರ್ವಪ್ರತ್ಯಯ ದಿಂದ ಸೂಚಿಸಿ ಮತ್ತು अवबोधनार्थम् – ಅಂದರೆ ಬೌದ್ಧಿಕ ಜಾಗೃತಿ ಉದ್ದೇಶದಿಂದ बुद्धि– ಬುದ್ಧಿ ಕೇವಲ ಬುದ್ಧಿಯನ್ನು ಅಷ್ಟೇ ಸೂಚಿಸುವುದಲ್ಲದೆ ಗ್ರಹಣಶಕ್ತಿಯನ್ನೂ ಸೇರಿಸಿ ಸಂಪೂರ್ಣ ಬೌದ್ಧಿಕ ಕ್ರಿಯೆಯನ್ನೇ ಸೂಚಿಸುತ್ತದೆ. ಈ ಮೂರೂ ಅಂಶಗಳು ಒಂದೇ ಗುರಿಯನ್ನು ಹೊಂದಿರುತ್ತವೆ. ಅದೇನೆಂದರೆ ಮನಸ್ಸು ಅಥವಾ ಬುದ್ಧಿಶಕ್ತಿಯ ಜಾಗೃತಿ ಮತ್ತು ಗ್ರಹಣಶಕ್ತಿ.[6]

---

6. **Chandra Rajan,** VISNU SARMA-The Pancatantra, Intro-p- xxxi, 1993, Penguin Random House India pvt.Ltd,7thFloor, Infinity Tower C, DLF Cyber City,Gurgaon-122002, Haryana, India.

ಪಂಚತಂತ್ರದಲ್ಲಿ ವಿಷ್ಣುಶರ್ಮರ ಉದ್ದೇಶವು– ರಾಜ್ಯಾಡಳಿತ ಕ್ರಮ ಮತ್ತು ಜ್ಞಾನದ ಸಂಯೋಜಿತ ಶಾಖೆಗಳು ಮತ್ತು ಕಲಿಕೆಯನ್ನು ಔಪಚಾರಿಕ ಶಿಕ್ಷಣದಲ್ಲಿ ಒದಗಿಸುವುದಾಗಿರಲಿಲ್ಲ. ಬಹುಶಃ ಸಾಂಪ್ರದಾಯಿಕ ಪದ್ಧತಿಯಲ್ಲಿ ಕಲಿಕೆಯು ಹುರುಳರಿಯದಂತೆ ವ್ಯಾಖ್ಯಾನಗಳ ಮೂಲಕ ಹಾಗೂ ನಿಯಮಬದ್ಧ ಉದಾಹರಣೆಗಳು ಒಂದು ಭಾಗವಾಗಿದ್ದು– ಸತತ ಅಭ್ಯಾಸ, ಪುನರುಚ್ಚಾರ ಮಾಡಿಮಾಡಿ ಬಾಯಿಪಾಠ ಮಾಡುವುದು, ಅರ್ಥೈಸಿಕೊಂಡು ಕಲಿಯುವುದಕ್ಕೆ ವಿರುದ್ಧವಾದುದು. ಪೀಠಿಕಾ ಭಾಗದಲ್ಲಿ ಅಮರಶಕ್ತಿ ರಾಜನ ಮಂತ್ರಿಗಳು ಹೇಳಿರುವಂತೆ, ಶಾಸ್ತ್ರೋಕ್ತವಾಗಿ ವ್ಯಾಕರಣ, ನೀತಿಶಾಸ್ತ್ರ, ತರ್ಕ ಮುಂತಾದವುಗಳನ್ನು ಕಲಿಯಬೇಕಾದರೆ ಕಡೇಪಕ್ಷ ಹನ್ನೆರಡು ವರ್ಷಗಳಾದರೂ ಬೇಕಾಗುತ್ತದೆ. ಆ ಪ್ರಯತ್ನವನ್ನೂ ಮಾಡಿ ಅನೇಕ ವಿದ್ವಾಂಸರುಗಳನ್ನು ವಿಚಾರಿಸಲಾಗಿ, ಅನೇಕರು ಬಂದು ಸಾಧ್ಯವಾಗದೆ ಹಿಂದಿರುಗಿದ್ದೂ ಇದೆ. ರಾಜಕುಮಾರರು ಅಕ್ಷರಜ್ಞಾನವಿಲ್ಲದ ಅಜ್ಞಾನಿಗಳಾಗಿಯೇ ಉಳಿದಿದ್ದರು. ಅಮರಶಕ್ತಿ ರಾಜನ ವೇದನೆಯೆಂದರೆ:–

उद्धरत्युत्तमो वंशं, मध्यमः समुपेक्षते ।

अधमस्तु कुले जातः नाशयत्यखिलं कुलम् ॥[7]

"ಮನೆಯಲ್ಲಿ ಜನಿಸಿದ ಉತ್ತಮನಾದ ಮಗನು ವಂಶವನ್ನೇ ಉದ್ಧರಿಸುತ್ತಾನೆ. ಮಧ್ಯಮನಾದವನು ಮನೆಯ ಮುನ್ನಡೆಯನ್ನು ಅರಕ್ಷಿಸುತ್ತಾನೆ. ಅಧಮನಾದವನು ಹುಟ್ಟಿದನೆಂದರೆ ತಾನು ಹಾಳಾಗುವುದಲ್ಲದೆ ವಂಶವನ್ನೇ ಹಾಳುಮಾಡುತ್ತಾನೆ."

ರೇಖೆಗಳ–ನಡುವೆ ಓದುವುದು ಅಂದರೆ ವಿಚಾರಗಳನ್ನು ಪೂರ್ಣವಾಗಿ ಅರ್ಥೈಸಿಕೊಂಡು ಕಲಿಯುವವರಿಗೊಂದು ಉತ್ತಮ ಸಲಹೆ. ಕಥೆಹೇಳುವ ಸಂಪ್ರದಾಯದಲ್ಲಿ ನಿರೂಪಣೆಯ ಪ್ರತಿ ವಿವರಗಳನ್ನೂ ಉಚ್ಚರಿಸಲು ಆಗುವುದಿಲ್ಲ. ಇದಕ್ಕೆ ಕಾರಣವೇನೆಂದರೆ ಕಥಾನಿರೂಪಕರಿಗೆ ಭಾಷೆ, ಆಂಗಿಕ ಭಾಷೆಯೇ ಬೇರೆ ಇರುತ್ತದೆ. ಒಬ್ಬ ಪ್ರತಿಭಾನ್ವಿತ ಕಥಾನಿರೂಪಕನು ಇದನ್ನು ಸಂದರ್ಭೋಚಿತವಾಗಿ, ಉತ್ತಮವಾಗಿ ಬಳಸಿಕೊಳ್ಳಬಲ್ಲನು. ಉದಾಹರಣೆಗೆ:– ಅಂಗಸನ್ನೆ ಅಥವಾ ಇಂಗಿತಸೂಚನೆ, ನಿಲುವು, ಮುಖಭಾವ, ಧ್ವನಿಯಸ್ವರ, ಒಂದು ತುಟಿಯ ತಿರುವು, ಹುಬ್ಬುಗಳ ಕಮಾನು, ಏರಿಳಿತ, ಕಣ್ಣುಗಳ ವಿಸ್ತಾರ ಅಥವಾ ಕಿರಿದಾಗುವಿಕೆ, ಒಂದು ಚಿಕ್ಕುವುದು, ತಿರಸ್ಕಾರದ ಮುಗುಳ್ನಗೆ ಅಥವಾ ಒಂದು ಸಣ್ಣ ನಗು ಇತ್ಯಾದಿಗಳು ಸಂಪುಟಗಳಷ್ಟು ತಿಳುವಳಿಕೆಯನ್ನೇ ನೀಡುತ್ತವೆ. ಅದೇ ಕಥೆಗಾರನಿಗೆ (ಬರಹಗಾರ) ಈ ಭಾಷೆಯಿರುವುದಿಲ್ಲ. ಅವನಿಗೆ ನಿಗದಿತ ಪದಗಳು ಮಾತ್ರ. ಆಗಾಗ್ಗೆ ಅಥವಾ ಸುಮಾರು ಅವನು ಬಳಸುವ ಸೂತ್ರಾನುಸಾರಿಯಾದ

---

7. **ಭಟ್ ವಿ.ಎನ್.**, ಜ್ಞಾನದೀಪ, ಅ–24,ಪು–46,47, ಸೂಕ್ತಿಮಾಲಾ,(1997)ವಿಶ್ವನಾಥ ಪ್ರಕಾಶನ, ಜ್ಞಾನದೀಪ, ಸಹ್ಯಾದ್ರಿ ನಗರ(ವಿನೋಬಾ ನಗರ ಬಡಾವಣೆ, ಶಿವಮೊಗ್ಗ–577201.

ಪದವಿನ್ಯಾಸಗಳು ಎಂದರೆ– **"ನಂತರ ಅವ ಹೀಗೆ ಹೇಳಿದ," "ಅವರು ಉತ್ತರಿಸಿದರು," "ಅವಳು ಕೇಳಿದಳು"** ಇತ್ಯಾದಿ. ಆಂಗಿಕ ಭಾಷೆಯಿಲ್ಲದಾಗ ಕೆಲವೊಮ್ಮೆ ಸ್ಪಷ್ಟತೆಯಿರುವುದಿಲ್ಲ. ದ್ವಂದ್ವಾರ್ಥತೆ ಉಂಟಾಗುತ್ತದೆ. ಹೀಗೆ ಕಥಾನಿರೂಪಕನ ಭಾಷೆಯು ಕಲಿಕೆಯನ್ನು ಅರ್ಥಪೂರ್ಣ ಆಗಿಸುವಲ್ಲಿ ಹೆಚ್ಚಿನ ನೆರವಾಗುತ್ತದೆಂಬುದು ಸುಸ್ಪಷ್ಟ. ಕಥೆಗಾರನು ಒದಗಿಸುವ ಸಂದರ್ಭಗಳು ಕೆಲವೊಮ್ಮೆ ಸೂಕ್ಷ್ಮಾತಿಸೂಕ್ಷ್ಮಗಳನ್ನು ಸೂಚಿಸಬಲ್ಲವು ಅಥವಾ ಸೂಚಿಸಲಾರವು ಕೂಡ. ಆದರೆ ಆಂಗಿಕಭಾಷೆ ಎಂಥಹ ವ್ಯಕ್ತಿಗೂ ಸಂಪೂರ್ಣ ತಿಳುವಳಿಕೆಯನ್ನು ನೀಡಬಲ್ಲುದು.[8]

ಬಹುಶಃ ಈ ಒಂದು ಕಾರಣದಿಂದಲೇ ಕಥಾನಿರೂಪಣಾ ಮಾಧ್ಯಮವೇ ರಾಜಕುಮಾರರಿಗೆ ಸೂಕ್ತ ಶಿಕ್ಷಣ ನೀಡಲು ಸರಿಯಾದ ಕ್ರಮವೆಂದು ವಿಷ್ಣುಶರ್ಮರು ತೀರ್ಮಾನ ಮಾಡಿದ್ದರು. ರಾಜಕುಮಾರರು– ಇವರ ವಿಚಾರವಾಗಿ ನಮಗೆ ಒಂದು ಸ್ಪಷ್ಟತೆಯಿರಬೇಕು. ಅದೇನೆಂದರೆ ಅವರು ವಾಸ್ತವವಾಗಿ ಕಲಿಯಲಾರದ ಹಂತ ತಲುಪಿದ ದಡ್ಡರಾಗಿರಲಿಲ್ಲ. ಅವರು ಅನಕ್ಷರಸ್ಥರು ಮತ್ತು ಆಲಸಿಗಳು, ದುಃಸಹವಾಸದಿಂದ ಉದ್ಧಟರಾಗಿದ್ದರಷ್ಟೆ. ಪ್ರಸಿದ್ಧ ಮನೋವಿಜ್ಞಾನಿಗಳಾದ ಲೂಯಿ. ಎಂ. ಟರ್ಮನ್ ಮುಂತಾದವರು ತಿಳಿಸಿರುವಂತೆ ಬುದ್ಧಿಶಕ್ತಿಯ ಸಂಖ್ಯಾ ಪ್ರಮಾಣದ ಪಟ್ಟಿಯ ಕೊನೆಯ ಸಾಲಿನ 20 ಕ್ಕಿಂತ ಕಡಿಮೆ ಐ.ಕ್ಯು. ಉಳ್ಳ**(Idiots)**ಮದ್ದುಗಳೇನಾಗಿರಲಿಲ್ಲ. ಅವರ ತಂದೆಯವರೇ ಹೇಳಿರುವಂತೆ ಅವರು ಯೋಗ್ಯವಾದ ತೀರ್ಪಿನ ಕೊರತೆಯಿಂದ ಬಳಲುತ್ತಿದ್ದರು. ಕಾರಣ ಕಲಿಕಾ ಹಿಂಜರಿಕೆ, ಅನಾಸಕ್ತಿ. ಇವರ ಬುದ್ಧಿಶಕ್ತಿಯನ್ನು ಹೇಗೆ ಜಾಗೃತಗೊಳಿಸುವುದೆಂಬ ಒಂದು ದೊಡ್ಡ ಸಮಸ್ಯೆಯಿಂದ ನೊಂದು, ತನ್ನ ಸಚಿವಸಂಪುಟದ ಮುಂದೆ ವಿಚಾರವನ್ನು ತಿಳಿಸಿ, ಯಾವುದಾದರೊಂದು ಮಾರ್ಗದಲ್ಲಿ ನನ್ನಕುಮಾರರ ಬುದ್ಧಿಶಕ್ತಿಯನ್ನು ಜಾಗೃತಗೊಳಿಸಿ, ರಾಜ್ಯದ ಹಿತದೃಷ್ಟಿಯಿಂದ ಉಜ್ವಲ ಭವಿಷ್ಯವನ್ನು ರೂಪಿಸಿಕೊಳ್ಳಲು ಸೂಕ್ತ ಶಿಕ್ಷಣ ವ್ಯವಸ್ಥೆಗಾಗಿ ಸಲಹೆ ಮತ್ತು ಸಹಾಯವನ್ನು ಕೋರಿದನು.

ಪಂಚತಂತ್ರದ ಮುನ್ನುಡಿಯಲ್ಲಿ ಸೂಚಿಸಿರುವಂತೆ, ಸಕಲಶಾಸ್ತ್ರಪಾರಂಗತರೂ, ಪ್ರತಿಭಾನ್ವಿತ ಜನಪ್ರಿಯ ಶಿಕ್ಷಕರೂ ಆಗಿದ್ದ ವಿಷ್ಣುಶರ್ಮರು ಆಯ್ಕೆಯಾಗಿದ್ದು, ಅಷ್ಟೇ ಧೃಡಸಂಕಲ್ಪ ಹಾಗೂ ಆತ್ಮವಿಶ್ವಾಸದಿಂದ ರಾಜಕುಮಾರರ ಬುದ್ಧಿಶಕ್ತಿಯನ್ನು ಜಾಗೃತಗೊಳಿಸಿ, ಅವರಿಗೆ ಸೂಕ್ತವಾದ ರಾಜನೀತಿ ಶಿಕ್ಷಣ ನೀಡಿ ಮುಂದಿನ ಶ್ರೇಷ್ಠ ಜವಾಬ್ದಾರಿ ವಹಿಸಿಕೊಂಡು ತಂದೆಯಂತೆಯೇ ದಕ್ಷದೊರೆಗಳಾಗುವಂತೆ ಶಿಕ್ಷಣ ನೀಡುವುದಾಗಿ ಪ್ರತಿಜ್ಞೆ ಮಾಡಿದರು.[9]

---

8. **Chandra Rajan,** VISNU SARMA-The Pancatantra, Intro-p- xxxi-xxxii, 1993,Penguin Random House India pvt.Ltd,7thFloor, Infinity Tower C,DLF Cyber City,Gurgaon-122002, Haryana, India.
9. **Chandramani.D** L, PANCHATANTRA, Introduction-P-01-02,Rupa Publications India Pvt.Ltd 1991,7/16, Ansari Road, Daryaganj,New Delhi-110002

ಪಂಚತಂತ್ರದ ಭೂಮಿಕೆಯಲ್ಲಿ ಅಮರಶಕ್ತಿ ರಾಜನನ್ನು ಕುರಿತು ಒಂದು ಸ್ಪಷ್ಟ ಚಿತ್ರಣವಿದೆ. ರಾಜ ಅಮರಶಕ್ತಿ ದಾನದಲ್ಲಿ ಕಲ್ಪವೃಕ್ಷಕ್ಕೆ ಸಮಾನಾದ, ದೊಡ್ಡ ದೊಡ್ಡ ರಾಜರ ಕಿರೀಟದಲ್ಲಿರುವ ರತ್ನಗಳ ಕಿರಣದಿಂದ ಪಾದಪೂಜೆಯನ್ನು ಪಡೆಯುತ್ತಿದ್ದ ಸಕಲಕಲಾಪಾರಂಗತ. ಸಂಕ್ಷಿಪ್ತವಾಗಿ ಹೇಳುವುದಾದರೆ, ಬಹುಮುಖ ಪ್ರತಿಭೆಯುಳ್ಳ ಆದರ್ಶ ಆಡಳಿತಗಾರ. ಇಲ್ಲಿಂದಲೇ ಒಬ್ಬ ಆದರ್ಶ ರಾಜನ ಲಕ್ಷಣಗಳೇನೆಂಬುದನ್ನು ಗುರುತಿಸಬಹುದು.

ವಿಷ್ಣುಶರ್ಮರ ಶಿಕ್ಷಣ ಶಾಸ್ತ್ರ ಅಥವಾ ಶಿಕ್ಷಣ ನೀಡುವ ಕಲೆ ವಿಭಿನ್ನ ಹಾಗೂ ನವನವೀನ. ಅವರ ಗುರಿಯೇನೆಂದರೆ, ರಾಜಕುವರರಿಗೆ ನೀಡುವ ಶಿಕ್ಷಣ–ಹೇಗೆ ಆಲೋಚಿಸಬೇಕು? ಎಂಬುದು; ಏನು ಯೋಚಿಸಬೇಕು? ಎಂಬುದಲ್ಲ. ಕೇವಲ ಪುಸ್ತಕ ಕಲಿಕೆಯು ಮನುಷ್ಯರನ್ನು ಮೂರ್ಖರನ್ನಾಗಿಸುವುದು. ಯಾವ ಮನುಷ್ಯನು ತನ್ನ ಜ್ಞಾನವನ್ನು ಬಳಸಿಕೊಂಡು ಕ್ರಿಯಾಶೀಲನಾಗುತ್ತಾನೋ ಅವನು ಬುದ್ಧಿವಂತನಾಗುವನು.

ಸಂಕ್ಷಿಪ್ತವಾಗಿ ಹೇಳುವುದಾದರೆ, ಇವರ ಶಿಕ್ಷಣ ಪದ್ಧತಿ ಮೊದಲು ಬುದ್ಧಿಶಕ್ತಿಯ ಜಾಗೃತಿ, ನಂತರ ಅವರಿಗೆ ಸೂಕ್ತವಾದ ಸಾಮಾನ್ಯಜ್ಞಾನ, ರಾಜನೀತಿ ಶಿಕ್ಷಣ ಹಾಗೂ ಸಾಮಾಜಿಕ ಬದುಕಿನ ನೀತಿ. ವಿಷ್ಣುಶರ್ಮರು ತಮ್ಮ ಗಂಭೀರ ಭರವಸೆಯನ್ನು ಆಧರಿಸಿ, ರಾಜಕುಮಾರರಿಗೆ ಶಿಕ್ಷಣ ನೀಡುವ ಕಾರ್ಯವನ್ನು ಈಡೇರಿಸಲು ಒಂದು ನವೀನ ಶಿಕ್ಷಣ ವಿಧಾನವನ್ನು ರೂಪಿಸುತ್ತಾರೆ. ಜೀವನ ಮತ್ತು ಅದರ ವೈವಿಧ್ಯಮಯ ಅನುಭವಗಳೇ ಅವರು ರೂಪಿಸಿರುವ ಪಂಚತಂತ್ರ ಪಠ್ಯಪುಸ್ತಕ. ನಿಜಜೀವನದ ಸಂದರ್ಭಗಳು ಮತ್ತು ಸಮಸ್ಯೆಗಳನ್ನು ಸರಳ ಕಥೆಗಳ ಸೋಗಿನಲ್ಲಿ ಪ್ರಸ್ತುತಪಡಿಸಿ, ವಿದ್ಯಾರ್ಥಿಗಳ ಆಸಕ್ತಿಯನ್ನು ಹಿಡಿದಿಟ್ಟು, ಆಲೋಚನೆಯೆಡೆಗೆ ಪ್ರೇರೇಪಿಸುತ್ತಿದ್ದರು. ವಿಷ್ಣುಶರ್ಮರ ಭಾವನೆಯೇನಿತ್ತೆಂದರೆ, ಒಮ್ಮೆ ರಾಜಕುಮಾರರಿಗೆ, ಜಾಗೃತಿಮೂಡಿಸಿ, ಚೆನ್ನಾಗಿ ಆಲೋಚಿಸುವ ಮತ್ತು ಮನಸ್ಸನ್ನು ರಚನಾತ್ಮಕವಾಗಿ ಬಳಸಿಕೊಳ್ಳುವ ತರಬೇತಿ ನೀಡಿದರೆ, ಜ್ಞಾನಸಂಪಾದನಾ ಆಸಕ್ತಿಯನ್ನು ಅಭಿವೃದ್ಧಿಪಡಿಸಿಕೊಳ್ಳುವಲ್ಲಿ ಬದ್ಧರಾಗುತ್ತಾರೆಂಬುದು.

ಇನ್ನೊಂದು ವಿಚಾರವೆಂದರೆ, ಪಂಚತಂತ್ರವು ಹಲವಾರು ವೈವಿಧ್ಯಮಯ ಪಾತ್ರಗಳನ್ನು ತನ್ನ ಕಥೆಗಳಲ್ಲಿ ನಿಯೋಜಿಸಿಕೊಂಡಿದೆ. ಮೇಲುವರ್ಗದಿಂದ ಕೆಳವರ್ಗದ ವರೆಗೆ; ಮಾನವಜಗತ್ತಿನ ಹಳ್ಳಿ ಮತ್ತು ಪಟ್ಟಣ; ಅದರೊಳಗೇ ಒಂದು ಮಹತ್ವಾಕಾಂಕ್ಷೆಯ ಹೊಸ ಪ್ರಪಂಚ. ಅಂದರೆ ಪ್ರಕೃತಿಯ ಜಗತ್ತು; ತನ್ನದೇ ಆದ ಕ್ರಮಾನುಗತದೊಂದಿಗೆ ಹೆಚ್ಚಿನ ಮತ್ತು ಕಡಿಮೆಯ; ಬಲವಾದ–ದುರ್ಬಲವಾದ; ಪರಭಕ್ಷಕ– ಬೇಟೆಯ ಎಲ್ಲವನ್ನೂ ಅಳವಡಿಸಿಕೊಂಡಿದೆ. ಪಂಚತಂತ್ರವು ಎರಡು ಪ್ರಪಂಚಗಳನ್ನು ಪ್ರಸ್ತುತಪಡಿಸುತ್ತದೆ. ಒಂದು ಮತ್ತೊಂದನ್ನು

ಪ್ರತಿಬಿಂಬಿಸುತ್ತದೆ. ನಮ್ಮನ್ನು ನಾವು ಹೇಗಿದ್ದೇವೋ ಹಾಗೆ ಸಹಜವಾಗಿ ನೋಡಿಕೊಳ್ಳಲು ಆಗುವುದಿಲ್ಲ. ಕನ್ನಡಿಯ ಪ್ರತಿಬಿಂಬದಲ್ಲೋ, ಮುಖಸ್ತುತಿಯಿಂದಲೋ ಅಥವಾ ಇನ್ನೊಂದು-ಹೀಗೆ ಕಂಡುಕೊಳ್ಳಬಹುದು. ಸ್ವಲ್ಪ ಹಿಂದೆ ಸರಿದುನಿಂತು ನಮ್ಮನ್ನು ಮತ್ತು ವರ್ತನೆಯನ್ನು ನೋಡಿಕೊಳ್ಳಬಹುದು. ನಮ್ಮ ದಿನನಿತ್ಯದ ಜೀವನದ ಚಲನವಲನಗಳಲ್ಲಿ ವಿಪರೀತವಾಗಿ ತೊಡಗಿಸಿಕೊಂಡಿರುವುದರಿಂದ ಘಟನೆಗಳು ಮತ್ತು ಸಂದರ್ಭಗಳ ಮಾದರಿ ಹಾಗೂ ಅರ್ಥವನ್ನು ಮತ್ತೊಬ್ಬರು ನಮ್ಮೆದುರು ಪ್ರಸ್ತುತಪಡಿಸುವವರೆಗೂ ಕಂಡುಕೊಳ್ಳಲು ಆಗುವುದಿಲ್ಲ. ಮತ್ತೊಂದೆಡೆಯಲ್ಲಿ ಯಾರೋ ಅಂತಹ ಘಟನೆ ಮತ್ತು ಸಂದರ್ಭಗಳನ್ನು ಎದುರಿಸುತ್ತಿರುವ ಚಿತ್ರವನ್ನು ನಮ್ಮ ಕಣ್ಣಮುಂದೆ ತಂದಾಗ ಮಾತ್ರ ನಾವು ಬಹಳ ಉತ್ತಮವಾಗಿ ಅರ್ಥೈಸಿಕೊಳ್ಳಬಹುದು. ಇದನ್ನೇ ಪಂಚತಂತ್ರ ನೀತಿಕಥೆಗಳಲ್ಲಿ ಬಹಳ ಪರಿಣಾಮಕಾರಿಯಾಗಿ ಮೇಧಾವಿ ವಿಷ್ಣುಶರ್ಮರು ನಿರ್ವಹಿಸಿರುತ್ತಾರೆ. ಹೀಗೆ ಪಂಚತಂತ್ರವು ಉಭಯ ದೃಷ್ಟಿಕೋನವನ್ನು ಹೊಂದಿದೆ. ಮಾನವ-ಮಾನವೇತರ-ಎರಡು ಪ್ರಪಂಚಗಳನ್ನು ಸಿದ್ಧಪಡಿಸಿ, ಸಂಭಾಷಣೆ ಹಾಗೂ ವ್ಯಾಖ್ಯಾನಗಳನ್ನು ಪರಸ್ಪರ ನಡೆಸಿಕೊಂಡು ನಿತ್ಯಜೀವನದ ಘಟನೆಗಳು ಹಾಗೂ ಸಂದರ್ಭಗಳನ್ನು ಅತ್ಯಂತ ಆಸಕ್ತಿಯಿಂದ ಗ್ರಹಿಸಿಕೊಳ್ಳಲು ಅವಕಾಶ ಕಲ್ಪಿಸಿರುವುದೇ ಪಂಚತಂತ್ರ ಪಠ್ಯವಿಧಾನದ ವಿಶಿಷ್ಟತೆಯಾಗಿದೆ. ಈ ಎರಡೂ ವಿಷಯಗಳಲ್ಲಿ- ಪಂಚತಂತ್ರವು ಭಾರತೀಯ ಮಹಾಕಾವ್ಯದಂತಿದ್ದು ಬಲವಾದ ಮತ್ತು ನಿಕಟವಾದ ಗುಣಸಾಮ್ಯವನ್ನು ಹೊಂದಿದೆ.[10]

ವಿಷ್ಣುಶರ್ಮರ ಪಂಚತಂತ್ರವು ಅನೇಕ ಹಂತಗಳಲ್ಲಿ ಸಾಮಾಜಿಕ ಬದುಕನ್ನು ಪ್ರತಿನಿಧಿಸುತ್ತದೆ. ಅದರಲ್ಲೂ ಹೆಚ್ಚು ಸ್ವಯಂ ಪ್ರಜ್ಞೆಯಿಂದ ಈ ಕಾರ್ಯವನ್ನು ನಡೆಸಿ ಸಮಾಜಕ್ಕೆ ಕನ್ನಡಿ ಹಿಡಿದಿದೆ. ಕಥೆಗಳು ಒಂದೆಡೆಯಲ್ಲಿ ಸರಳ, ಶುದ್ಧ ಹಾಗೂ ಮನೋರಂಜಕವಷ್ಟೇ ಅಲ್ಲ, ಉತ್ತಮ ನೀತಿಬೋಧಕವೂ ಆಗಿರುತ್ತದೆ. ಆತ್ಮೋನ್ನತಿ ಅಥವಾ ಶಿಕ್ಷಣವು ಪಂಚತಂತ್ರದ ಮುಖ್ಯಗುರಿಯಾಗಿದ್ದು, ಬುದ್ಧಿವಂತಿಕೆಯಿಂದ ಮತ್ತು ಚೆನ್ನಾಗಿ ಬದುಕುವ ಕಲೆಯನ್ನು ನೀತಿಬದ್ಧವಾಗಿ ಪ್ರೇರೇಪಿಸುವುದು ಮತ್ತೊಂದೆಡೆಯಲ್ಲಿನ ಮುಖ್ಯ ಗುರಿಯಾಗಿದೆ.

ಪಂಚತಂತ್ರವನ್ನು ಮೂಲತಃ ವಿನ್ಯಾಸಗೊಳಿಸಿರುವುದು ದೊರೆಗಳ ಉಪಯೋಗಕ್ಕಾಗಿ- ರಾಜಕುಮಾರರಿಗೆ ಕನ್ನಡಿಯಂತೆ ಹಾಗೂ ಸರ್ಕಾರ ನಡೆಸುವ ಕಲೆಯಲ್ಲಿ ನ್ಯಾಯಯುತ ಆಡಳಿತಗಾರರಿಗೆ ಹಾಗೂ ಅವರ ಖಾಸಗಿ ಜೀವನ ಮತ್ತು ಸಂಬಂಧಗಳ ನಡವಳಿಕೆಯಲ್ಲಿ ಒಂದು ಮಾದರಿ ಕೈಪಿಡಿಯಾಗಿದೆ. ಮತ್ತೊಂದು ವಿಶೇಷವೆಂದರೆ, ಪಂಚತಂತ್ರದಲ್ಲಿ ನೀತಿಭೋಧೆ ಅಳವಡಿಸಿರುವುದು-ನೀತಿ ಶಿಕ್ಷಣ ಅಥವಾ ಬೋಧನೆ ಎಲ್ಲ ಜನರಿಗೂ ಅತ್ಯಾವಶ್ಯಕ. ನೀತಿಯು ಎಲ್ಲ ಹಂತಗಳಿಗೂ ಅನ್ವಯಿಸುತ್ತದೆ. ರಾಜ, ರೈತ,

10. **Chandra Rajan**, VISNU SARMA-The Pancatantra, Intro-p- xxxv-xxxvi, 1993, Penguin Random House India pvt.Ltd,7thFloor, Infinity Tower C, DLF Cyber City, Gurgaon-122002, Haryana, India.

ಪ್ರಜೆ, ಸರ್ಕಾರದ ಆಡಳಿತಯಂತ್ರ, ವೃತ್ತಿನಿರತರು, ಒಟ್ಟಾರೆ ಸಕಲಕರ್ಮಿಗಳು ಎಲ್ಲರಿಗೂ ನೀತಿಶಿಕ್ಷಣ ಬೇಕು. ಸಾಮಾನ್ಯ ಜನರು ಮಾಮೂಲು ಜೀವನೋಪಾಯ ನಡೆಸುವಲ್ಲಿಯೂ ಅವರ ಸರಿತಪ್ಪುಗಳ ಬಗ್ಗೆ ಅರಿವು ಇರಬೇಕಾಗುತ್ತದೆ ಹೀಗಾಗಿ ಪಂಚತಂತ್ರವು ಸಣ್ಣವರಿಂದ ದೊಡ್ಡವರವರೆಗೂ, ಯಾರು, ಯಾರು, ಯಾವ, ಯಾವ ದೃಷ್ಟಿ ಹಾಗೂ ಮನೋವೃತ್ತಿಯಿಂದ ಗಮನಿಸುತ್ತಾರೋ ಹಾಗೆ ಅವರಿಗೆ ಫಲಪ್ರದವಾಗುತ್ತದೆ. ಹೀಗಾಗಿ ಪಂಚತಂತ್ರವು ಒಂದು ಬಹುಮುಖ ಪ್ರತಿಭೆಯಿಂದ ಕೂಡಿರುವ ನೀತಿಶಾಸ್ತ್ರ ಗ್ರಂಥವಾಗಿದೆ.

ಪಂಚತಂತ್ರವು, ಅದರ ವಿಮರ್ಶೆಯಲ್ಲಿ ಜನರ ನಡವಳಿಕೆಗಳು ಮತ್ತು ಉದ್ದೇಶಗಳು, ವರ್ತಕರು, ಸಂನ್ಯಾಸಿಗಳು, ವಿದ್ವಾಂಸರು, ನ್ಯಾಯಾಧೀಶರು, ವಿಲಾಸ ಜೀವನದ ಪತಿ ಮತ್ತು ವಂಚಕ ಪತ್ನಿ, ಹೊಟ್ಟೆಬಾಕ ಅಥವಾ ಅಸಮರ್ಥ ಬ್ರಾಹ್ಮಣ ಮತ್ತು ಕ್ರೂರ ಬೇಟೆಗಾರ, ದುಡುಕು ಮತ್ತು ನಿರ್ಲಜ್ಜ, ಅನಾದರದ ಹಾಗೂ ಲೆಕ್ಕಾಚಾರದ ಮುಂತಾದ ಪ್ರತಿಯೊಬ್ಬನಿಗೂ ವಿಮರ್ಶೆಯ ನ್ಯಾಯಯುತ ಪಾಲು ಲಭ್ಯವಾಗುತ್ತದೆ. ಹೀಗೆ ಪಂಚತಂತ್ರದಲ್ಲಿ ಎಲ್ಲ ಶ್ರೇಣಿಯ ಮಾನವ ಚಟುವಟಿಕೆಗಳಿಗೆ ಒಂದು ಒಳ್ಳೆಯ ಶಿಕ್ಷಣ ಹಾಗೂ ನೈತಿಕ ಬೋಧನೆ ಅತ್ಯಂತ ಆಕರ್ಷಕವಾಗಿ ದೊರಕುತ್ತದೆ. ಉತ್ತಮ ವ್ಯಕ್ತಿತ್ವನಿರ್ಮಾಣಕ್ಕೆ ಪರಿಣಾಮಕಾರಿ ಮಾರ್ಗದರ್ಶನವೂ ಲಭ್ಯವಾಗುತ್ತದೆ. ಮೂರ್ಖರು ಮತ್ತು ನೀತಿ–ನಿಯಮ ಇಲ್ಲದವರು, ಅತಿಯಾದ ನಂಬಿಕೆಯುಳ್ಳವರು ಮತ್ತು ಪಿತೂರಿ ನಡೆಸುವವರನ್ನು ಸೂಕ್ಷ್ಮವಾಗಿ ಹಾಗೂ ಸಮಾನವಾಗಿ ಪಂಚತಂತ್ರ ಕಥೆಗಳಲ್ಲಿ ದಂಡಿಸಲಾಗಿದೆ ಹಾಗೂ ವರ್ತನೆಯನ್ನು ಖಂಡಿಸಲಾಗಿದೆ. ಆಡಂಬರದ ಮತ್ತು ವಾಚಾಳಿಗಳಿಗೆ ಅಪಹಾಸ್ಯಕ್ಕೆ ಗುರಿಯಾಗುವ ನಿದರ್ಶನಗಳಿವೆ. ಅಂದರೆ ಪಂಚತಂತ್ರದಲ್ಲಿ ಒಂದು ರೀತಿ ತಿದ್ದುವ ಅಥವಾ ಸರಿಪಡಿಸುವ ವಿಮರ್ಶೆಯನ್ನು ಕಾಣಬಹುದು.[11]

ಪಂಚತಂತ್ರ ಕಥೆಗಳ ಎಚ್ಚರಗೊಂಡ ಉದ್ದೇಶವೇ ಬೇರೆ ಏನೋ !! ಆದರೆ ಯುವರಾಜಕುಮಾರರೇ ಅಲ್ಲದೆ ಇತರರಿಗೂ ನೀತಿ ಬೋಧಿಸುವುದೇ ಆಗಿರುತ್ತದೆ. ಅಂದಿನಿಂದ ನೀತಿ ಅಥವಾ ಪ್ರಾಯೋಗಿಕ ಬುದ್ಧಿವಂತಿಕೆ ಯುವಮನಸ್ಸುಗಳಿಂದ ಹಿಡಿದು ಹಿರಿಮನಸ್ಸುಗಳವರೆಗೂ ಜಾಗೃತಗೊಳಿಸಿ ತರಬೇತಿ ನೀಡುವ ಉತ್ತಮ ಮಾಧ್ಯಮವನ್ನಾಗಿ ಆಚರಿಸಲಾಗುತ್ತಿದೆ. ನೈಸರ್ಗಿಕ ಜಗತ್ತು ಸ್ಥಳಾಂತರಿಸಲಾಗಿರುವ ಮಾನವ ಸಮಾಜವಾಗಿದೆ. ಉದಾಹರಣೆಗೆ ಪಂಚತಂತ್ರದ ಮೊದಲನೆಯ ತಂತ್ರದ ಸೂತ್ರಕಥೆಯಲ್ಲಿ ಬರುವ ನರಿಯು ಹೆಬ್ಬಯಕೆಯ, ಕಲ್ಲೆದೆಯ, ಅವಕಾಶವಾದಿ ರಾಜಕಾರಣಿಯಂತೆ ಏನು ಸಿಗುವುದೆಂದು ಕಾಯುತ್ತಾ ಇರುವ ಲಕ್ಷಣಗಳನ್ನು ಕಾಣಬಹುದು. ಅನೇಕ ಸಣ್ಣ, ಮಧ್ಯಮ ಹಾಗೂ ದೊಡ್ಡ ಮೀನುಗಳನ್ನು ತಿಂದ ಬಕವೊಂದು

11. **Chandra Rajan,** VISNU SARMA-The Pancatantra, Intro-p- xxviii-xxix,1993, Penguin Random House India pvt.Ltd,7thFloor, Infinity Tower C, DLF Cyber City, Gurgaon-122002, Haryana, India.

ಅತಿಯಾಸೆಯಿಂದ ಏಡಿಯಿಂದ ಸಾವನ್ನಪ್ಪಿದ ಸಂದರ್ಭ; ಕತ್ತೆಯೊಂದು ದೊಡ್ಡ ಸಂಗೀತ ಶಾಸ್ತ್ರಜ್ಞನೆಂದು ಚಂದ್ರನ ಬೆಳಕಿನಲ್ಲಿ ಹಾಡಲು ಬಯಸಿದ ಆಡಂಬರದ ದೃಶ್ಯ; ಅದರಲ್ಲೂ ಸಂಗೀತಶಾಸ್ತ್ರಜ್ಞ –ಒಬ್ಬ ದೊಡ್ಡ ವಿದ್ವಾಂಸ ತಿಳಿದಿರುವ ರಾಗಗಳೆಲ್ಲ ತನಗೂ ಗೊತ್ತೆಂದು ಬೀಗುತ್ತಾ, ಮೂಲತಃ ತನಗೆ ಉತ್ತಮ ಧ್ವನಿ ಇಲ್ಲವೆಂಬ ಕನಿಷ್ಠ ಜ್ಞಾನವೂ ಇಲ್ಲದ್ದು **"ಹಾಡುವ ಕತ್ತೆ ಹಾಗೂ ನರಿಯ ಕಥೆ"**ಯಲ್ಲಿ ಬರುವ ಪ್ರಸಂಗ; **"ಗುಬ್ಬಚ್ಚಿ ದಂಪತಿ ಹಾಗೂ ಆನೆಯ ಕಥೆ"**ಯಲ್ಲಿ ಬರುವ ಸಂದರ್ಭ ಇತ್ಯಾದಿಗಳು ಒಂದು ರೀತಿಯಲ್ಲಿ ಮಾನವ ಲಕ್ಷಣಗಳೇ ಹೌದು.[12]

ವಿಷ್ಣುಶರ್ಮ ವಿರಚಿತ ಪಂಚತಂತ್ರ ನೀತಿಕಥೆಗಳು ಓದುಗರಿಗೆ ಅಥವಾ ಕೇಳುಗರಿಗೆ ಅರೆಕ್ಷಣವೂ ಅನ್ಯಥಾ ಯೋಚಿಸಲು ಅವಕಾಶವಿಲ್ಲದಂತೆ ಸಂಪೂರ್ಣ ಮಾನವನಿಗೆ ಸಂಬಂಧಿಸಿದ್ದೇ ಆಗಿರುತ್ತದೆ; ಮಾನವ, ಸಮಾಜ ಮತ್ತು ರಾಜನೀತಿ ಶಿಕ್ಷಣ ಕುರಿತದ್ದು; ಮಾನವ ಸದ್ಗುಣಗಳು, ದುರ್ಗುಣಗಳು ಮತ್ತು ದೋಷಗಳು ಕುರಿತದ್ದು. ಅದು ಮನುಷ್ಯನಲ್ಲಿನ ಉದಾತ್ತತೆ ಮತ್ತು ಮೂಲತತ್ವವನ್ನು ಯಾವ ಎತ್ತರಕ್ಕೂ ತೆಗೆದುಕೊಂಡು ಹೋಗಬಹುದು ಮತ್ತು ಬೀಳುವ ಆಳಕ್ಕೂ ತೆಗೆದುಕೊಂಡು ಹೋಗಬಹುದು ಎಂಬುದರ ಬಗ್ಗೆ ಗಮನ ಸೆಳೆಯುತ್ತವೆ.[13]

ಪಂಚತಂತ್ರದಲ್ಲಿ ಕಂಡುಬರುವ ಪಾತ್ರಗಳಿಗೆ ಒಂದು ವಿಶಿಷ್ಟ ವೈವಿಧ್ಯಮಯ ಅನ್ವರ್ಥ ನಾಮಧೇಯವನ್ನು ಕೊಟ್ಟಿರುವುದನ್ನು ಗಮನಿಸಬಹುದು. ಉದಾಹರಣೆಗೆ:– ವೇಗವಾಗಿ ಹಾರುವ ಕಾಗೆ **"ಲಘುಪತನಕ"**, ಬುದ್ಧಿವಂತ ಕಾಗೆ **"ಸುಬುದ್ಧಿ"**, ಸಾವಕಾಶವಾಗಿ ಸರಿದಾಡುವ ಆಮೆ **"ಮಂಥರ"**, ಕೀಳುಬುದ್ಧಿತ ಮೋಸಗಾರ ನರಿ **"ಕ್ಷುದ್ರ ಬುದ್ಧಿ"**, ಕರಟಕ ದಮನಕ ನರಿಗಳು ಇಂದಿಗೂ ಅದು ನರಿ ಬುದ್ಧಿಗೆ ಲೋಕಪ್ರಸಿದ್ಧವಾದ ನಾಣ್ಣುಡಿಯಾಗಿಬಿಟ್ಟಿದೆ. ಮೊಸಳೆಗೆ **"ಕರಾಲಮುಖ"** ಇತ್ಯಾದಿ.

**JOHANNES HERTEL-(German Indologist)** ಇವರು ಪಂಚತಂತ್ರ ಪಠ್ಯದ ಮೂಲವಸ್ತು ಅಧ್ಯಯನ ಹಾಗೂ ಸಂಪಾದನೆಯನ್ನು ಹಲವಾರು ವರ್ಷಗಳಿಂದ ನಡೆಸಿದ ಸಂದರ್ಭದಲ್ಲಿ ಅವರ **`Das Panchatantra'** (1914) ಮುನ್ನುಡಿಯಲ್ಲಿ ಹೀಗೆ ಬರೆದಿರುತ್ತಾರೆ. 'ಈ ಪುಸ್ತಕವು ಐತಿಹಾಸಿಕ ಸಾಧನೆಯನ್ನು ಸೂಚಿಸುತ್ತಾ ಸಮಸಾಟಿಯಿಲ್ಲದ ವಿಜಯೋತ್ಸವದ ಪ್ರಗತಿಯನ್ನು ಜನ್ಮಭೂಮಿಯಲ್ಲಿ ಸಾಧಿಸಿರುವುದಲ್ಲದೆ, ಜಗತ್ತಿನ ಸುಸಂಸ್ಕೃತ ಭಾಗಗಳಲ್ಲೆಲ್ಲಾ ಸುಮಾರು ಹದಿನೈದು ನೂರು ವರ್ಷಗಳಿಂದ ಯುವ ಮತ್ತು ಹಿರಿಯ,

12. सुधाकर मालवीय, सम्पादक एवं व्याक्याकार, श्री विष्णशर्मविरचितं पन्चतन्त्रम्, भूमिका– पु–13–24,चौकाम्बा कृष्णदास अकादमी, K.37/118, Gopal Mandir Lane,PB No-1118,वारणासी–221001 (INDIA)
13. **Chandra Rajan,** VISNU SARMA-The Pancatantra, Intro-p- xxxix,1993, Penguin Random House India pvt.Ltd,7thFloor, Infinity Tower C,DLF Cyber City,Gurgaon-122002, Haryana, India.

ವಿದ್ಯಾವಂತ ಮತ್ತು ಅಶಿಕ್ಷಿತ, ಶ್ರೀಮಂತ ಮತ್ತು ಬಡವ, ಮೇಲು–ಕೀಳೆನ್ನದೆ ಇಂದಿಗೂ ಇನ್ನೂ ಅವರೆಲ್ಲರನ್ನೂ ಸಂತೋಷಪಡಿಸುತ್ತಿದೆ. ಎಂಥಹ ದೊಡ್ಡ ಅಡೆತಡೆಗಳು– ಭಾಷೆ ಅಥವಾ ಪದ್ಧತಿಗಳು ಅಥವಾ ಧರ್ಮದ ಬಗ್ಗೆ ಇರುವಂತಹವು ಕೂಡ ಇದರ ವಿಜಯೋತ್ಸವ ಪ್ರಗತಿಯನ್ನು ತಡೆಯಲು ಸಮರ್ಥವಾಗುವುದಿಲ್ಲ.'[13] ಈ ಕೃತಿಯ ಅಸಾಮಾನ್ಯ ಐತಿಹ್ಯ ನಿರೂಪಕ ಜನಪ್ರಿಯತೆಗೆ ಇದು ಯುಕ್ತವಾದ ಹಾಗೂ ನಿಖರವಾದ ಮೌಲ್ಯಮಾಪನವು.

ಪಂಚತಂತ್ರ ಅಧ್ಯಯನದ ಬಗ್ಗೆ ನಾನು ಆಯ್ಕೆ ಮಾಡಿಕೊಂಡಿರುವ ವಿಷಯವಸ್ತುವಿನ ವೈಶಾಲ್ಯತೆಯ ದೃಷ್ಟಿಯಿಂದ ಈ ಸಂಶೋಧನೆ ಇಲ್ಲಿಗೇ ಮುಗಿಯಿತು ಎನ್ನುವಂತಿಲ್ಲ. ಪಂಚತಂತ್ರ ನೀತಿಕಥೆಗಳೆಂದರೆ ಮಕ್ಕಳ ಮನೋರಂಜನೆಗಾಗಿ ಎಂಬ ಒಂದು ಸಾಮಾನ್ಯ ಅಭಿಪ್ರಾಯವಿದೆ. ಆದರೆ, ಇದು ಇಷ್ಟೊಂದು ವಿಶ್ವವ್ಯಾಪಿ ಜನಪ್ರಿಯತೆಯನ್ನು ಪಡೆದಿರಬೇಕಾದರೆ ಅಂಥಹ ಮಹತ್ವಪೂರ್ಣ ವಿಚಾರವಸ್ತು ಏನಿರಬಹುದು!! ಎಂಬ ಕುತೂಹಲದ ಪರಿಣಾಮವೇ ಈ ಸಂಶೋಧನಾ ಮಹಾಪ್ರಬಂಧ. ಇದೊಂದು ಸಣ್ಣ ಹೆಜ್ಜೆಯಾಗಿದ್ದು, ಮುಂದಿನ ಸಂಶೋಧನೆಗಳಗೆ ಅವಕಾಶ ಮಾಡಿಕೊಟ್ಟಿದೆ. ಸಮಯದ ಹಾಗೂ ಸಂಶೋಧನಾ ಪರಿಮಿತಿಯನ್ವಯ ಪ್ರಸ್ತುತ ಮಹಾಪ್ರಬಂಧಕ್ಕೆ ಉಪಸಂಹಾರ ಸಮರ್ಪಿಸಿ, ಇಲ್ಲಿಗೆ ಸುಸಂಪನ್ನಗೊಳಸಲಾಗಿದೆ.



# ಪರಾಮರ್ಶನ ಗ್ರಂಥಗಳು:


संस्कृत ग्रन्थाः–

1. बाणभट्टा,"कादम्बरी", संस्कृत बुक डिपो, बनारस,(1968)

2. भागवत, "गीता प्रेस्, गोरखपुर (2005)

3. बालशास्त्री, सं., श्रीगुरुप्रसाद शास्त्री, सं. टी., श्रीसीतारामशास्त्री हिं.टी., "श्री विष्णशर्मविरचितम् पञ्चतन्त्रम्" (अभिनवराजलक्ष्मी संस्कृत – हिन्दी टीका सहित), चौकाम्बा सुरभारती प्रकाशन, (2018) के. 37/117, गोपालमन्दिर लेन, पो. बा. नं. 1129, वारणासी–221001 (भारत).

4. चक्रवर्ती जि. एन., संस्कृत–कन्नड निघण्टु, (2013) गीता बुक हौस, के. आर. सर्कल, मैसूर–570001.

5. द्विवेदी प्रभुनाथ, ले.चौबे सुरेशचन्द्र,
स.ले, संस्कृत शोध–प्रविधि,
(**SANSKRIT RESEARCH METHODOLOGY)** (2017),
शारदा संस्कृत संस्थान, सी.27/59,
जगतगंज, वारणासी–221002.

6. गैरोला वाचस्पति, "कौटिलीय अर्थशास्त्रं"(संस्कृत एवं हिन्दि अनुवाद), चौकम्बा विद्याभवन, इः 27/3–9, चौक(बेंक् आफ् बरोडा के पीछे)
पोस्ट् बाक्स् नं : 1069, वारणासि – 221001

7. कोण्डिन्यायः शिवराज आचार्य, “मनुस्मृतिः", चौकाम्बा विद्याभवन,वारणासि. (2007)

8. Kale M.R., Edt: "पञ्चतन्त्रम्"
V.S., Mothilal Banarasidas Publication, Delhi. 1995.

